॥ ಶ್ರೀಃ ॥

# ಲಘುಸಿದ್ಧಾಂತ ಕೌಮುದೀ
## ಕನ್ನಡ ವ್ಯಾಖ್ಯಾನ
# ಪಾಣಿನೀಯ ಪ್ರವೇಶಿಕಾ

ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟ
ಅಲಂಕಾರಶಾಸ್ತ್ರ ಪ್ರಾಧ್ಯಾಪಕ
ಶ್ರೀಮನ್ಮಹಾರಾಜ ಸಂಸ್ಕೃತ ಮಹಾಪಾಠಶಾಲಾ
ಮೈಸೂರು

ಬೆಲೆ: ೧೩—೨೫

# ನಿವೇದನಮ್

ಸದ್ಬುದ್ಧಿ ಪ್ರಬೋಧಕರಾದ ಶ್ರೀ ಗುರುವರ ಬ್ರ. ಶ್ರೀ. ಕೆ. ಶ್ರೀನಿವಾಸ ಉಪಾಧ್ಯಾಯರನ್ನೂ ಬ್ರ. ಶ್ರೀ. ನೇರೂರು ಕೃಷ್ಣಾಚಾರ್ಯರನ್ನೂ ಮನಸಾ, ಶಿರಸಾ ವಂದಿಸಿ ನಾಲ್ಕು ಮಾತುಗಳನ್ನು ಬರೆಯಲು ಬಯಸುತ್ತೇನೆ.

ನಮ್ಮ ಭಾರತದ ಸಕಲ ಭಾಷೆಗಳಿಗೂ ಸಂಸ್ಕೃತವೇ ಮೂಲಭೂತವಾದುದೆಂದು ಸಕಲರಿಗೂ ತಿಳಿದ ವಿಷಯ. ದಕ್ಷಿಣದ ಭಾಷೆಗಳ ವಿಷಯದಲ್ಲಿ ಇದು ವಿವಾದಾಸ್ಪದವಾದರೂ ಗಂಗಾಯಮುನೆಯರ ಸಂಗಮದಂತೆ ಅನಾದಿಯಿಂದಲೂ ನಮ್ಮ ಮಾತೃಭಾಷೆಗಳಲ್ಲಿ ಸಂಸ್ಕೃತ ಪದಗಳು ಸಂಮಿಶ್ರಿತವಾಗಿ ಭೇದಕ್ಕೆ ಅವಕಾಶವಿಲ್ಲದಂತೆ ಹಾಸುಹೊಕ್ಕಾಗಿ ಬೆರೆತು ಒಂದಾಗಿ ತೋರುತ್ತಿವೆ. ನಮ್ಮ ಕನ್ನಡಭಾಷೆಯು ಸಂಸ್ಕೃತಸಂಮಿಶ್ರಣದಿಂದ ಎಷ್ಟು ಉಜ್ವಲವಾಗಿದೆಯೆಂಬುದು ಪಂಪ, ಜಗನ್ನಾಥ, ಕುಮಾರವ್ಯಾಸ ಮುಂತಾದ ಉತ್ತಮ ಕವಿಗಳ ಸರಸ ಕಾವ್ಯಗಳ ಪರಿಶೀಲನೆಯಿಂದ ಅಭಿವ್ಯಕ್ತವಾಗುತ್ತದೆ. ಸಂಸ್ಕೃತ ವ್ಯಾಕರಣ ನಿಯಮಗಳನ್ನಳವಡಿಸಿಕೊಂಡೇ ನಮ್ಮ ದೇಶೀಯ ಭಾಷಾವ್ಯಾಕರಣಗಳು ರಚಿತವಾಗಿವೆ ಎಂದು ವಿಮರ್ಶಕರಿಗೆ ತಿಳಿದ ವಿಷಯವೇ. ಭಟ್ಟಾಕಳಂಕನ ಶಬ್ದಾನುಶಾಸನವೆಂಬ ಕನ್ನಡ ವ್ಯಾಕರಣ ಗ್ರಂಥವು ಸಂಸ್ಕೃತಭಾಷೆಯಲ್ಲೇ ಬರೆಯಲ್ಪಟ್ಟಿರುವುದರಿಂದ ಆಗ ಸಂಸ್ಕೃತ ಕನ್ನಡಗಳ ಬಾಂಧವ್ಯ ಎಷ್ಟರಮಟ್ಟಿಗೆ ಇತ್ತೆಂಬುದು ವ್ಯಕ್ತವಾಗುತ್ತದೆ. ಸಂಸ್ಕೃತಭಾಷೆಯು ವ್ಯಾಕರಣನಿಯಮದಿಂದ ಸುಬದ್ಧವಾದುದರಿಂದಲೇ ಇಂದಿಗೂ ಯಾವ ಭಾಷೆಗಳ ಆಘಾತಕ್ಕೂ ಒಳಗಾಗದೆ ಅಚ್ಚಳಿಯದೆ ಕಂಗೊಳಿಸುತ್ತಿದೆ.

ಪದಗಳ ಪ್ರಕೃತಿಪ್ರತ್ಯಯಾದಿಗಳನ್ನು ನಿರ್ವಚನಮಾಡುವ ಶಾಸ್ತ್ರಕ್ಕೆ ವ್ಯಾಕರಣಶಾಸ್ತ್ರವೆಂದು ಹೆಸರು. ಬ್ರಾಹ್ಮಣ ವಾಕ್ಯಗಳಲ್ಲಿ ವಚನ, ವಿಭಕ್ತಿ ಮುಂತಾದ ಪದಗಳು ವ್ಯವಹೃತವಾಗಿರುವುದರಿಂದ ವೇದಕಾಲದಲ್ಲಿಯೇ ಇದು ಪ್ರಸಿದ್ಧವಾಗಿತ್ತೆಂದು ತಿಳಿಯುತ್ತದೆ. "ಎಲ್ಲಾ ಪದಗಳೂ ಧಾತುವಿನಿಂದಲೇ (ಕ್ರಿಯಾಪದ) ಆಗಿವೆಯೆಂಬ ಶಾಕಟಾಯನರ ಮಾತನ್ನು ಯಾಸ್ಕರು ಉದಾಹರಿಸಿರುತ್ತಾರೆ. ಇದರಿಂದ ಪವಿತ್ರವಾದ ಈ ವ್ಯಾಕರಣವು ಯಾಸ್ಕರ ನಿರುಕ್ತಕ್ಕಿಂತ ಪೂರ್ವದಲ್ಲಿಯೇ ನಾನಾ ಋಷಿಗಳಿಂದ ವಿಸ್ತರಗೊಳಿಸಲ್ಪಟ್ಟಿರುವುದೆಂದು ತಿಳಿಯುತ್ತದೆ. ಶೌನಕರ ಪ್ರಾತಿಶಾಖ್ಯ ಗ್ರಂಥದಲ್ಲಿರುವ ಪ್ರತ್ಯಯಗಳ ಕೃತ್ತದ್ಧಿತ ವಿಭಾಗದಿಂದ ನಿರುಕ್ತಾದಿಗಳಿಗಿಂತಲೂ ಈ ಸಂಜ್ಞೆಗಳು ಪ್ರಾಚೀನವೆನ್ನಬೇಕು. ರಾಮಾಯಣದಲ್ಲಿ ನವ ವ್ಯಾಕರಣಗಳೂ ಪ್ರಸಕ್ತವಾದುದರಿಂದ ಪಾಣಿನಿಯ ವ್ಯಾಕರಣವು ರಾಮಾಯಣಕ್ಕಿಂತ ಪ್ರಾಚೀನವಾದುದೆಂದು ಹೇಳಬಹುದು. ಮಹಾಭಾಷ್ಯದಲ್ಲಿ ಆಪಿಶಲ, ಕಾಶಕೃತ್ಸ್ನ ಮುಂತಾದವರ ನಾಮ ನಿರ್ದಿಷ್ಟವಾದುದರಿಂದ ಆ ಕಾಲದಲ್ಲಿ ನವವ್ಯಾಕರಣಗಳೂ ಉಪಲಬ್ಧವಾಗುತ್ತಿತ್ತೆಂದು ತಿಳಿಯುತ್ತದೆ. ಆದರೆ ಅವೆಲ್ಲವೂ ವೈದಿಕ ಶಬ್ದಗಳನ್ನು

ನಿರ್ವಚನಮಾಡಿರುವುದರಿಂದ, ಕೇವಲ ಕೆಲವು ಲೌಕಿಕ ಶಬ್ದಗಳ ವ್ಯುತ್ಪತ್ತಿಯನ್ನು ತಿಳಿಸಿರುವುದರಿಂದಲೂ ಪಾಣಿನಿಋಷಿಯು ಈ ಎರಡೂ ಶಬ್ದಗಳ ನಿರ್ವಚನವನ್ನು ವಿಸ್ತಾರ ತೋರಿಸಿರುವುದರಿಂದಲೂ ಇವರ ವ್ಯಾಕರಣಕ್ಕೆ ಸರ್ವಶ್ರೇಷ್ಠತೆ ಪ್ರಾಪ್ತವಾಗಿದೆ. ಇದರಿಂದಲೇ ಉಭಯ ಶಬ್ದಜ್ಞಾನವುಂಟಾಗುತ್ತಿರುವಾಗ ಜನರ ಉಪೇಕ್ಷೆಯಿಂದಲೇ ಇತರ ವ್ಯಾಕರಣಗಳು ನಷ್ಟವಾಗಿರಬಹುದು. ಪಾಣಿನಿಋಷಿಯ ಸೂತ್ರವಿನ್ಯಾಸಕ್ರಮವು ಅಸದೃಶವಾದುದೆಂದು ಶ್ರೀ ಶಂಕರಾಚಾರ್ಯ ಮುಂತಾದ ವಿಭೂತಿಪುರುಷರೇ ಶ್ಲಾಘಿಸಿರುತ್ತಿರುವಾಗ ಈಗಿನ ಪಾಶ್ಚಾತ್ಯವಿಮರ್ಶಕರು ಹೊಗಳುವುದು ವಿಶೇಷವೇನಲ್ಲ. ಈ ವ್ಯಾಕರಣ ಸಿದ್ಧಾಂತವನ್ನು ವ್ಯಾಡಿಯೆಂಬುವನು ಲಕ್ಷ ಶ್ಲೋಕಗಳಿಂದ ವಿವರಿಸಿರುವನೆಂಬು ಕಥಾಸರಿತ್ಸಾಗರದಿಂದ ತಿಳಿಯುತ್ತದೆ. ಪಾಣಿನಿಋಷಿಯ ಮುಂದೆ ವ್ಯಾಖ್ಯಾಗ್ರಂಥಗಳ ಪ್ರಾಬಲ್ಯವು ಹೆಚ್ಚಾಯಿತು. ವರರುಚಿಯವರು (ಕಾತ್ಯಾಯನ) ಈ ಸೂತ್ರಗಳಿಗೆ ವಾರ್ತಿಕಗಳನ್ನು ರಚಿಸಿರುತ್ತಾರೆ. ಇವರು ಸಮಕಾಲಿಕರೆಂದು ಕಥಾಸರಿತ್ಸಾಗರದಿಂದ ತಿಳಿದುಬಂದರೂ ವಿಮರ್ಶಕರು ಇದನ್ನು ಅಂಗೀಕರಿಸುವುದಿಲ್ಲ. ಸುಮಾರು ಕ್ರಿಸ್ತಪೂರ್ವ ೬ನೇ ಶತಮಾನ, ಅಥವಾ ೪ನೇ ಶತಮಾನ ಪಾಣಿನಿಯ ಕಾಲವೆಂದೂ, ಅವರ ಅಭಿಪ್ರಾಯ. ಕ್ರಿಸ್ತಪೂರ್ವ ೩ನೇ ಶತಮಾನವರರುಚಿಯ ಕಾಲವೆಂದೂ ಅವರ ಅಭಿಪ್ರಾಯ. ಕ್ರಿಸ್ತಪೂರ್ವ ೨ನೇ ಶತಮಾನದಲ್ಲಿ ಪತಂಜಲಿ ಮಹರ್ಷಿಯವರು ಇವುಗಳಿಗೆ ಮಹಾಭಾಷ್ಯವನ್ನು ರಚಿಸಿದರು. ಈ ಸೂತ್ರಗಳಿಗೆ ಅನೇಕರು ವಾರ್ತಿಕಗಳನ್ನು ಬರೆದಿರುತ್ತಾರೆಂದು ಅವರ ಭಾಷ್ಯಪರಿಶೀಲನೆಯಿಂದ ತಿಳಿಯುತ್ತದೆ. ಭಾಷೆಯು ಬದಲಾವಣೆಹೊಂದುತ್ತಿದ್ದುದರಿಂದಲೂ, ಉತ್ತರೋತ್ತರ ಈ ಋಷಿಗಳು ಶಬ್ದ ವ್ಯತ್ಯಾಸವನ್ನು ತೋರಿಸಿರುವುದರಿಂದಲೂ ಈ ಮುನಿತ್ರಯರ ಕಾಲದಲ್ಲಿ ಅಂತರವಿರಲೇಬೇಕು. ಪಾಣಿನಿಗಿಂತ ವರರುಚಿಯವರು ಅರ್ವಾಚೀನರೆಂದೂ ದಾಕ್ಷಿಣಾತ್ಯರೆಂದು ಮಹಾಭಾಷ್ಯ ಪರಿಶೀಲನೆಯಿಂದಲೇ ವ್ಯಕ್ತವಾಗುತ್ತದೆ. ಮಹಾಭಾಷ್ಯದಿಂದ ವ್ಯಾಕರಣದ ನಿಷ್ಕೃಷ್ಟ ಜ್ಞಾನವುಂಟಾಗುವುದಲ್ಲದೆ ಲೌಕಿಕ ನ್ಯಾಯಗಳೂ, ವ್ಯವಹಾರಗಳೂ ವಿಷಯಪ್ರದರ್ಶನ ಶೈಲಿ ಮುಂತಾದವುಗಳೂ ತಿಳಿಯುತ್ತವೆ. ಸರ್ವಶಾಸ್ತ್ರಗ್ರಾಹ್ಯವಾದುದರಿಂದ ಇದಕ್ಕೆ ಮಹತ್ವ ಬಂದಿದೆ. ಇದರಿಂದಲೇ "ಮಹಾಭಾಷ್ಯಂ ವಾ ಪಠನೀಯಮ್, ಮಹಾರಾಜ್ಯಂ ವಾ ಪಾಲನೀಯಮ್" ಎಂಬ ನಾಣ್ಣುಡಿ ಪ್ರಚುರವಾಗಿದೆ. ಈ ಮಹಾಭಾಷ್ಯಕ್ಕೆ ಕೈಯಟರು ಪ್ರದೀಪವೆಂಬ ವ್ಯಾಖ್ಯಾನವನ್ನು ಬರೆದು ಭಾಷ್ಯಾಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಈ ಪ್ರದೀಪಕ್ಕೆ ನಾಗೇಶಭಟ್ಟರು ಉದ್ಯೋತವೆಂಬ ವ್ಯಾಖ್ಯಾನವನ್ನು ಬರೆದು ಭಾಷ್ಯಸಿದ್ಧಾಂತವನ್ನು ಇನ್ನೂ ಸುಲಭವಾಗಿ ತಿಳಿಯುವಂತೆ ಮಾಡಿರುತ್ತಾರೆ. ಈ ಮಧ್ಯೆ ಭರ್ತೃಹರಿ ಎಂಬ ವೈಯಾಕರಣನು ಸೂತ್ರಭಾಷ್ಯಾಭಿಪ್ರಾಯಗಳಿಂದ ವೈಯಾಕರಣಸಿದ್ಧಾಂತವನ್ನು ವಾಕ್ಯಪದೀಯವೆಂಬ ಗ್ರಂಥದಲ್ಲಿ ವಿವರಿಸಿ ಭಾಷ್ಯೋಪಕ್ಷಿಪ್ತವಾದ ವೈಯಾಕರಣರ ಸ್ಫೋಟವಾದವನ್ನು ಪ್ರಪ್ರಥಮವಾಗಿ ವ್ಯಕ್ತಪಡಿಸಿದನು.

ಸ್ಫೋಟಸಿದ್ಧಾಂತವೆಂಬ ಗ್ರಂಥವನ್ನು ಆಮೇಲೆ ಮಂಡನ ಮಿಶ್ರರು ಬರೆದಿರುತ್ತಾರೆ. ವಾಮನ, ಜಯಾದಿತ್ಯರು ಸೇರಿ ಸೂತ್ರಗಳಿಗೆ ಕಾಶಿಕಾ ಎಂಬ ವೃತ್ತಿಗ್ರಂಥವನ್ನು ಬರೆದಿರುತ್ತಾರೆ. ಇದಕ್ಕೆ ಪದಮಂಜರಿಯೆಂಬ ಭಾಷ್ಯಾಶಯಗಳನ್ನೇ ವ್ಯಕ್ತಪಡಿಸುವ ವಿಸ್ತಾರವಾದ ವ್ಯಾಖ್ಯಾನ ಗ್ರಂಥವನ್ನು ಹರದತ್ತನು ರಚಿಸಿರುತ್ತಾರೆ.

ಹೀಗೆ ಅನೇಕ ವೈಯಾಕರಣರು ವೃತ್ತಿವ್ಯಾಖ್ಯಾನ ಗ್ರಂಥಗಳನ್ನು ಬರೆದರೂ ಅವೆಲ್ಲವೂ ಸೂತ್ರ ಕ್ರಮವನ್ನೇ ಅನುಸರಿಸಿರುವುದರಿಂದ ಆದರಂತೆ ಶಬ್ದ ಪ್ರಕ್ರಿಯೆ ತಿಳಿಯುವುದು ಕ್ಲಿಷ್ಟವಾದುದರಿಂದ ಧರ್ಮಕೀರ್ತಿಯೆಂಬ ಜೈನ ವೈಯಾಕರಣನು ಸುಲಭವಾದ ಬೇರೆ ರೀತಿಯನ್ನವಲಂಬಿಸಿ ವೃತ್ತಿಗ್ರಂಥವನ್ನು ಬರೆದನು. ಆ ಕ್ರಮವನ್ನೇ ಅನೇಕ ವೈಯಾಕರಣರು ಅನುಸರಿಸುತ್ತಾ ಬಂದುದರಿಂದ ಶ್ರೀಭಟ್ಟೋಜಿ ದೀಕ್ಷಿತರೂ ಆ ಕ್ರಮದಿಂದಲೇ ಸಿದ್ಧಾಂತ ಕೌಮುದಿಯೆಂಬ ಗ್ರಂಥವನ್ನು ಬರೆದು ಲೋಕೋಪಕಾರ ಮಾಡಿರುತ್ತಾರೆ. ಇವರು ಸೂತ್ರ ಕ್ರಮವನ್ನು ಅನುಸರಿಸಿಯೂ (ಶಬ್ದ ಕೌಸ್ತುಭ) ಬೃಹದ್ವ್ಯಾಖ್ಯಾನ ಮಾಡಿರುವುದಲ್ಲದೆ ವೈಯಾಕರಣ ಸಿದ್ಧಾಂತವನ್ನು ತಿಳಿಸುವ ಸ್ವತಂತ್ರ ಗ್ರಂಥಗಳನ್ನು ರಚಿಸಿರುತ್ತಾರೆ. ಇವರ ಗ್ರಂಥಗಳಿಗೆ ಭಾಷ್ಯದಂತೆ ನಾಗೇಶಭಟ್ಟರು ವಿಸ್ತಾರವಾಗಿ ವ್ಯಾಖ್ಯಾನ ಮಾಡಿದುದಲ್ಲದ ಮಂಜೂಷಾ ಎಂಬ ಗ್ರಂಥದಲ್ಲಿ ವೈಯಾಕರಣರ ಎಲ್ಲಾ ಸಿದ್ಧಾಂತಗಳನ್ನು ಪರಮತಖಂಡನಪೂರ್ವಕ ವಾಗಿಯೂ ಪ್ರತಿಪಾದಿಸಿರುತ್ತಾರೆ. ಅನೇಕ ಶಾಸ್ತ್ರಗ್ರಂಥಗಳನ್ನೂ ಬರೆದಿರುವುದರಿಂದ ಇವರ ಪಾಂಡಿತ್ಯಪ್ರಕರ್ಷವು ಅಗಾಧವಾಗಿದೆ. ಹೀಗೆ ಇನ್ನೂ ಅನೇಕ ವೈಯಾಕರಣರು ವ್ಯಾಕರಣಸಿದ್ಧಾಂತ ಪ್ರತಿಪಾದಕ ಗ್ರಂಥಗಳನ್ನೂ ವ್ಯಾಖ್ಯಾನ ಗ್ರಂಥಗಳನ್ನೂ ರಚಿಸಿ ವ್ಯಾಕರಣಶಾಸ್ತ್ರವನ್ನು ಅಪಾರ ಅನಂತವನ್ನಾಗಿ ಮಾಡಿರುತ್ತಾರೆ.

ಆದರೆ ಸಂಸ್ಕೃತ ಭಾಷಾಜ್ಞಾನವನ್ನು ಅಪೇಕ್ಷಿಸುವ ಬಾಲಕರಿಗೆ ಇವೆಲ್ಲವೂ ಮೊದಲು ಕ್ಲಿಷ್ಟವಾಗಿರುವುದರಿಂದ, ಬಾಲಕರ ಉಪಯೋಗಕ್ಕಾಗಿ ಭಟ್ಟೋಜಿ ದೀಕ್ಷಿತರ ಶಿಷ್ಯರಾದ ಶ್ರೀ ವರದರಾಜರು ಹದಿನೇಳನೆಯ ಶತಮಾನದಲ್ಲಿ ಲಘು ಸಿದ್ಧಾಂತ ಕೌಮುದಿಯೆಂಬ ಗ್ರಂಥವನ್ನು ಬರೆದಿರುತ್ತಾರೆ. ಇವರು ಪಾಣಿನಿ ಸೂತ್ರಗಳಲ್ಲಿ ಅತ್ಯುಪಯುಕ್ತವಾದವುಗಳನ್ನೇ ಆರಿಸಿಕೊಂಡು ಅವುಗಳಿಗೆ ಸರಳ ಸಂಸ್ಕೃತ ಭಾಷೆಯಲ್ಲಿ ವೃತ್ತಿ ಮತ್ತು ಉದಾಹರಣೆಗಳನ್ನು ಬರೆದು ಬಾಲಕರಿಗೆ ಸುಲಭವಾಗಿ ತಿಳಿಯುವಂತೆ ಮಾಡಿರುತ್ತಾರೆ. ಈ ಗ್ರಂಥವು ಸೂತ್ರವೃತ್ತಿ ಕ್ರಮಗಳಲ್ಲಿ ಸಿದ್ಧಾಂತ ಕೌಮುದಿಯ ಕ್ರಮವನ್ನು ಅನುಸರಿಸಿದರೂ ಪ್ರಕರಣ ನಿವೇಶಕ್ರಮದಲ್ಲಿ ಸ್ವಾತಂತ್ರ್ಯವನ್ನು ಪಡೆದಿದೆ. ಅವಾಂತರ ಪ್ರಕರಣಗಳನೇಕವಿದ್ದರೂ ಮುಖ್ಯವಾಗಿ ಎಂಟನ್ನು ಪರಿಗಣಿಸಬಹುದು. ಇವುಗಳಲ್ಲಿ ಉತ್ತರೋತ್ತರಗಳಿಗೆ ಪೂರ್ವಪೂರ್ವಗಳ ಸಾಪೇಕ್ಷವಿರುವುದರಿಂದ ಇಲ್ಲಿನ ಕ್ರಮವು ಸಮಂಜಸವಾಗಿದೆ. ಸಂಜ್ಞಾಪ್ರಕರಣವು ಎಲ್ಲಾ ಪ್ರಕರಣಗಳಿಗೂ ಬೇಕಾದುದರಿಂದ ಮೊದಲು ಹೇಳಿದೆ. ಸಂಧಿಗಳು ಸುಬಂತಾದಿಗಳಲ್ಲಿ ಅಪೇಕ್ಷಿತವಾದುದರಿಂದ ಎರಡನೆಯದಾಗಿ ಹೇಳಿದೆ. ನಾಮಪದದ ಮೇಲೂ

ತಿಙ್ ಪ್ರತ್ಯಯಗಳನ್ನು ಹೇಳುವುದರಿಂದ ತಿಙನ್ತಕ್ಕಿಂತ ಮೊದಲು ಸುಬನ್ತ ವಿವೃತ ವಾಗಿದೆ. ಧಾತುಗಳ ಮೇಲೆ ಕೃತ್‌ಪ್ರತ್ಯಯ ವಿಧಾನಮಾಡುವುದರಿಂದ ತಿಙನ್ತವಾದ ಮೇಲೆ ಕೃದಂತಪ್ರಕರಣ ಹೇಳಿದೆ. ಕೃದಂತ, ನಾಮಗಳ ಮೇಲೆ ತದ್ಧಿತ ಪ್ರತ್ಯಯಗಳನ್ನು ವಿಧಾನಮಾಡುವುದರಿಂದ ತದ್ಧಿತ ಪ್ರಕರಣವನ್ನು ಆಮೇಲೆ ಹೇಳಿರುತ್ತಾನೆ. ಕೃದಂತ ತದ್ಧಿತಾಂತ ಪದಗಳಿಂದ ಸಮಾಸ ಮಾಡುವುದರಿಂದ ಸಮಾಸ ಪ್ರಕರಣ ತದ್ಧಿತವಾದ ಮೇಲೆ ಹೇಳಿದೆ. ಸ್ತ್ರೀ ಪ್ರತ್ಯಯಗಳನ್ನು ಸಮಾಸದ ಮೇಲೂ ಹೇಳುವುದರಿಂದ ಕೊನೆಗೆ ಅವುಗಳನ್ನು ವಿವರಿಸಿರುತ್ತಾರೆ. ವ್ಯಾಕರಣದ ಆಳವಾದ ಜ್ಞಾನಕ್ಕೆ ಸಿದ್ಧಾಂತ ಕೌಮುದ್ಯಾದಿ ಗ್ರಂಥಗಳನ್ನು ವ್ಯಾಸಂಗ ಮಾಡಬೇಕಾದರೂ ಸಂಸ್ಕೃತ ಭಾಷಾಜ್ಞಾನಕ್ಕೆ ಈ ಲಘುಸಿದ್ಧಾಂತ ಕೌಮುದೀ ಗ್ರಂಥದ ಅಧ್ಯಯನ ಪರ್ಯಾಪ್ತವಾಗಿದೆ.

ಈ ಗ್ರಂಥವು ಭಾರತದ ಪ್ರಮುಖ ಭಾಷೆಗಳಾದ ಹಿಂದೀ, ಬಂಗಾಳಿ, ಆಂಧ್ರ ಮುಂತಾದ ಭಾಷೆಗಳಲ್ಲಿ ಭಾಷಾಂತರಿತವಾಗಿ ಆಯಾಯ ಪ್ರಾಂತದ ಜನರಿಗೆ ಸಂಸ್ಕೃತವನ್ನು ಕಲಿಯಲು ಬಹು ಸಹಾಯವಾಗಿದೆ. ಪ್ರಕೃತ ಕನ್ನಡ ಬಂಧುಗಳೆಲ್ಲರಿಗೂ ಸಂಸ್ಕೃತ ಭಾಷಾ ಜ್ಞಾನವು ಸುಲಭವಾಗಿ ಉಂಟಾಗಲು ಸಹಾಯವಾಗಲೆಂಬ ಮಹೋದ್ದೇಶದಿಂದ ನಾನು ಈ ಗ್ರಂಥಕ್ಕೆ ಕನ್ನಡದಲ್ಲಿ ಸರಳ ವ್ಯಾಖ್ಯಾನವನ್ನು ಬರೆಯುವ ಸಾಹಸಮಾಡಿರುತ್ತೇನೆ. ಉಭಯ ಭಾಷಾಭಿಮಾನಿಗಳು ಆದರದಿಂದ ಸ್ವೀಕರಿಸುವರೆಂದೂ, ಈ ಗ್ರಂಥದ ಅಧ್ಯಯನದಿಂದ ಎಲ್ಲರೂ ಸಂಸ್ಕೃತ ಭಾಷಾಜ್ಞಾನವನ್ನು ಅನಾಯಾಸವಾಗಿ ಹೊಂದುವರೆಂಬ ಭರವಸೆಯಿಂದಲೂ, ವಿಶಾಲಕರ್ಣಾಟಕದ ಸರ್ವೋದಯದ ಸುಸಮಯದಲ್ಲಿ ಕನ್ನಡ ಬಾಂಧವರ ಮುಂದೆ ಇದನ್ನು ಇಟ್ಟಿರುತ್ತೇನೆ. ಇಂಥದೊಂದು ವ್ಯಾಕರಣ ಗ್ರಂಥವು ಕನ್ನಡದಲ್ಲಿ ರಚಿತವಾಗುವುದು ಇದೇ ಮೊದಲೆಂದು ತೋರುತ್ತದೆ. "ಗಚ್ಛತಃ ಸ್ಖಲನಂ ಭವತ್ಯೇವ" ಎಂಬ ಸೂಕ್ತಿಯಂತೆ ಅಲ್ಪಜ್ಞನಾದ ನನ್ನ ಈ ವ್ಯಾಖ್ಯಾನದಲ್ಲಿ ಲೋಪದೋಷಗಳು ಸಂಭವಿಸಿರಬಹುದು, ಸಹೃದಯರು ಅವುಗಳನ್ನು ತಿದ್ದಿಕೊಳುವುದಲ್ಲದೆ ಕೃಪೆಯಿಟ್ಟು ತೋರಿಸಿಕೊಟ್ಟಲ್ಲಿ ಮುಂದಿನ ಮುದ್ರಣದಲ್ಲಿ ಅವುಗಳನ್ನು ಸರಿಪಡಿಸಿಕೊಳ್ಳಲು ಉಪಕಾರವಾಗುತ್ತದೆ.

"ಸದಸಿ ಕಥನಂ ಚಾಪ್ಯುಪಕೃತೇಃ" ಎಂಬ ಸೂಕ್ತಿಯಂತೆ ಮೊದಲಿನಿಂದಲೂ ನನಗೆ ಈ ಗ್ರಂಥವನ್ನು ಬರೆಯಲು ಪ್ರೋತ್ಸಾಹವನ್ನಿತ್ತು ಈಗ ಪ್ರಕಾಶಪಡಿಸಲೂ ಉದಾರ ಸಹಾಯವನ್ನು ಮಾಡಿರುವ ಮಹಾರಾಜಕಾಲೇಜಿನ ಫಿಲಾಸಫಿ ಉಪಪ್ರಾಧ್ಯಾಪಕ ಶ್ರೀ. ಪಿ. ಮಲ್ಲಲಿಂಗಪ್ಪ ಎಂ. ಏ. ಮತ್ತು ಮಹಾರಾಣೀ ಕಾಲೇಜಿನ ಹಿಂದೀ ಅಧ್ಯಾಪಕರಾದ ಪಿ. ದೇವೇಗೌಡ, ಎಂ. ಏ. ಇವರಿಬ್ಬರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಅಲ್ಪವೇ. ಇವರಿಗೂ, ಇನ್ನೂ ನಾನಾರೀತಿಯಿಂದ ಸಹಾಯವನ್ನು ಒದಗಿಸಿರುವ ನನ್ನ ಮಿತ್ರವೃಂದಕ್ಕೂ ಚಿರಋಣಿಯಾಗಿರುತ್ತೇನೆ. ವ್ಯಾಕರಣ

ಶಬ್ದಗಳು ಕ್ಲಿಷ್ಟವಾದರೂ ತಾಳ್ಮೆಯಿಂದ ಸರಿಯಾಗಿ ನೋಡಿ ಅಂದವಾಗಿ ಮುದ್ರಿಸಿ ಕೊಟ್ಟ ಶ್ರೀ ವಿನಾಯಕ ಪ್ರೆಸ್ಸಿನ ಮಾಲೀಕರಾದ ಶ್ರೀ ಕೆ. ವೆಂಕಟಸುಬ್ಬಯ್ಯನವರಿಗೂ, ಉಷಾಪ್ರೆಸ್ಸಿನ ಮಾಲೀಕರಾದ ಆರ್. ಎನ್. ಹಬ್ಬುರವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಕನ್ನಡಮಾತೆಯ ಅಡಿದಾವರೆಗಳಲ್ಲಿ ಸಮರ್ಪಿಸಿರುವ ಈ ಗ್ರಂಥವನ್ನು ಕನ್ನಡ ಬಂಧುಗಳೆಲ್ಲರೂ ಆದರಿಸಿ ಪರಿಶೀಲಿಸಿ ಇದರಿಂದ ಸಂಸ್ಕೃತಭಾಷಾಜ್ಞಾನವನ್ನು ಪಡೆದು ಸುಸಂಸ್ಕೃತರಾಗಿ ನವೋದಿತಕರ್ಣಾಟಕವನ್ನು ಉಜ್ವಲಗೊಳಿಸಲು ಸಮರ್ಥರಾಗಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ಶ್ರೀಮನ್ಮಹಾರಾಜ ಸಂಸ್ಕೃತ ಮಹಾಪಾಠಶಾಲಾ
ಮೈಸೂರು
ತಾ|| 1-11-56

ಸಜ್ಜನ ವಿಧೇಯ,
ಜಿ. ವಿಷ್ಣುಮೂರ್ತಿಭಟ್ಟ.

---

## ದ್ವಿತೀಯಮುದ್ರಣ

ಗ್ರಂಥದ ದ್ವಿತೀಯ ಮುದ್ರಣವೆಂದರೆ ಗ್ರಂಥಕರ್ತೃವಿಗೆ ಹರ್ಷದಾಯಕವಾದುದೇ. ಇದರಿಂದ ಇದು ಜನಪ್ರಿಯವಾಗಿದೆಯೆಂದು ನಿಶ್ಚಯಿಸಬಹುದು. ಹಿಂದಿನ ಮುದ್ರಣದಲ್ಲಿ ಮರೀಚಿಕೆಯಲ್ಲಿ ನೀರಿನ ಆಸೆಯಂತೆ ಕೆಲವು ರೀತಿಯ ಸಹಾಯ ಪಡೆಯಲು ಕಾಂಪ್ಲಿಮೆಂಟರಿ ಕಾಪಿಯನ್ನು ಕೊಟ್ಟುದೇ ಅಧಿಕವಾಯಿತು. ಇದರಿಂದ ಪಾರಮಾರ್ಥ್ಯಕ್ಕೆ ಬೆಲೆ ಸಿಗುವುದು ದುರ್ಲಭವೆಂದೂ ವ್ಯಕ್ತವಾಯಿತು. 'ಕರ್ಮಣ್ಯೇವಾಧಿಕಾರಃ' ಎಂಬಂತೆ ಕರ್ತವ್ಯ ನನ್ನದು. ದ್ವಿತೀಯಮುದ್ರಣದಲ್ಲಿ ಅನೇಕ ವಿದ್ವಾಂಸರು ಕೊಟ್ಟಿರುವ ಸದಭಿಪ್ರಾಯಗಳನ್ನು ಸೇರಿಸಿಲ್ಲ. ನಮ್ಮವರು ಎಂದೂ ನಮ್ಮವರೇ. ಹಿಂದಿನ ಮುದ್ರಣದಲ್ಲಿ ತೋರಿದ ಅನೇಕಮುದ್ರಣ ದೋಷಗಳನ್ನು ಇಲ್ಲಿ ತಿದ್ದಲಾಗಿದೆ. ಆದರೂ ಪ್ರಮಾದದಿಂದ ಕೆಲವು ತಪ್ಪುಗಳು ಬಲಾತ್ಕರಿಸಿ ಬಂದಿವೆ. ಇದುಸಾಮಾನ್ಯವೆಂದು ಪಾಠಕರು ತಿದ್ದಿ ಓದಿಕೊಳ್ಳಬೇಕೆಂದೂ ನಿವೇದಿಸುತ್ತೇನೆ. ಈ ಗ್ರಂಥ ಮುದ್ರಣಕ್ಕೆ ತತ್ಕಾಲದಲ್ಲಿ ದ್ರವ್ಯಸಹಾಯಮಾಡಿದ ನನ್ನ ಅನೇಕ ಮಿತ್ರರ ಮಹೋಪಕಾರವನ್ನು ಮರೆಯುವಂತಿಲ್ಲ. ಅವರು ತಮ್ಮ ಹೆಸರನ್ನು ಪ್ರಕಟಿಸಬಾರದೆಂದುದರಿಂದ ಇಲ್ಲಿ ಪ್ರಕಾಶಪಡಿಸಿಲ್ಲ. ಅವರ ನೆರವಿಲ್ಲದಿದ್ದಲ್ಲಿ ಮುದ್ರಣವೇ ಅಸಾಧ್ಯವಾಗುತ್ತಿತ್ತು. ೨-೩ನೇ ಭಾಗಗಳೂ ಹೀಗೆಯೇ ಸುಗಮವಾಗಿ ಬರುತ್ತವೆಯೆಂದು ಆಶಿಸಿದ್ದೇನೆ. ಪ್ರಾರಂಭದಿಂದಲೂ ನನ್ನ ಗ್ರಂಥಪ್ರಕಾಶನಕ್ಕೆ ಪ್ರೋತ್ಸಾಹವೀಯುತ್ತಾ ಸಕಲವಿಧದಿಂದ ಸಹಾಯಮಾಡುತ್ತಾ ಬಂದಿರುವ ಶ್ರೀ ಪಾ. ದೇವೇಗೌಡ ಎಂ.ಎ., ಅವರಿಗೂ ಮಿತ್ರವರ್ಯ ವಿದ್ವಾನ್ ಕೆ. ಲಕ್ಷ್ಮೀನೃಸಿಂಹಶಾಸ್ತ್ರಿಗಳಿಗೂ ಚಿರಋಣಿ

ತಿಙ್ ಪ್ರತ್ಯಯಗಳನ್ನು ಹೇಳುವುದರಿಂದ ತಿಙನ್ತಕ್ಕಿಂತ ಮೊದಲು ಸುಬನ್ತ ವಿವೃತವಾಗಿದೆ. ಧಾತುಗಳ ಮೇಲೆ ಕೃತ್‌ಪ್ರತ್ಯಯ ವಿಧಾನಮಾಡುವುದರಿಂದ ತಿಙನ್ತವಾದ ಮೇಲೆ ಕೃದಂತಪ್ರಕರಣ ಹೇಳಿದೆ. ಕೃದಂತ, ನಾಮಗಳ ಮೇಲೆ ತದ್ಧಿತ ಪ್ರತ್ಯಯಗಳನ್ನು ವಿಧಾನಮಾಡುವುದರಿಂದ ತದ್ಧಿತ ಪ್ರಕರಣವನ್ನು ಆಮೇಲೆ ಹೇಳಿರುತ್ತಾನೆ. ಕೃದಂತ ತದ್ಧಿತಾಂತ ಪದಗಳಿಂದ ಸಮಾಸ ಮಾಡುವುದರಿಂದ ಸಮಾಸ ಪ್ರಕರಣ ತದ್ಧಿತವಾದ ಮೇಲೆ ಹೇಳಿದೆ. ಸ್ತ್ರೀ ಪ್ರತ್ಯಯಗಳನ್ನು ಸಮಾಸದ ಮೇಲೂ ಹೇಳುವುದರಿಂದ ಕೊನೆಗೆ ಅವುಗಳನ್ನು ವಿವರಿಸಿರುತ್ತಾರೆ. ವ್ಯಾಕರಣದ ಆಳವಾದ ಜ್ಞಾನಕ್ಕೆ ಸಿದ್ಧಾಂತ ಕೌಮುದ್ಯಾದಿ ಗ್ರಂಥಗಳನ್ನು ವ್ಯಾಸಂಗ ಮಾಡಬೇಕಾದರೂ ಸಂಸ್ಕೃತ ಭಾಷಾಜ್ಞಾನಕ್ಕೆ ಈ ಲಘುಸಿದ್ಧಾಂತ ಕೌಮುದೀ ಗ್ರಂಥದ ಅಧ್ಯಯನ ಪರ್ಯಾಪ್ತವಾಗಿದೆ.

ಈ ಗ್ರಂಥವು ಭಾರತದ ಪ್ರಮುಖ ಭಾಷೆಗಳಾದ ಹಿಂದೀ, ಬಂಗಾಳಿ, ಆಂಧ್ರ, ಮುಂತಾದ ಭಾಷೆಗಳಲ್ಲಿ ಭಾಷಾಂತರಿತವಾಗಿ ಆಯಾಯ ಪ್ರಾಂತದ ಜನರಿಗೆ ಸಂಸ್ಕೃತವನ್ನು ಕಲಿಯಲು ಬಹು ಸಹಾಯವಾಗಿದೆ. ಪ್ರಕೃತ ಕನ್ನಡ ಬಂಧುಗಳೆಲ್ಲರಿಗೂ ಸಂಸ್ಕೃತ ಭಾಷಾ ಜ್ಞಾನವು ಸುಲಭವಾಗಿ ಉಂಟಾಗಲು ಸಹಾಯವಾಗಲೆಂಬ ಮಹೋದ್ದೇಶದಿಂದ ನಾನು ಈ ಗ್ರಂಥಕ್ಕೆ ಕನ್ನಡದಲ್ಲಿ ಸರಳ ವ್ಯಾಖ್ಯಾನವನ್ನು ಬರೆಯುವ ಸಾಹಸಮಾಡಿರುತ್ತೇನೆ. ಉಭಯ ಭಾಷಾಭಿಮಾನಿಗಳು ಆದರದಿಂದ ಸ್ವೀಕರಿಸುವರೆಂದೂ, ಈ ಗ್ರಂಥದ ಅಧ್ಯಯನದಿಂದ ಎಲ್ಲರೂ ಸಂಸ್ಕೃತ ಭಾಷಾಜ್ಞಾನವನ್ನು ಅನಾಯಾಸವಾಗಿ ಹೊಂದುವರೆಂಬ ಭರವಸೆಯಿಂದಲೂ. ವಿಶಾಲಕರ್ಣಾಟಕದ ಸರ್ವೋದಯದ ಸುಸಮಯದಲ್ಲಿ ಕನ್ನಡ ಬಾಂಧವರ ಮುಂದೆ ಇದನ್ನು ಇಟ್ಟಿರುತ್ತೇನೆ. ಇಂಥದೊಂದು ವ್ಯಾಕರಣ ಗ್ರಂಥವು ಕನ್ನಡದಲ್ಲಿ ರಚಿತವಾಗುವುದು ಇದೇ ಮೊದಲೆಂದು ತೋರುತ್ತದೆ. "ಗಚ್ಛತಃ ಸ್ಖಲನಂ ಭವತ್ಯೇವ" ಎಂಬ ಸೂಕ್ತಿಯಂತೆ ಅಲ್ಪಜ್ಞನಾದ ನನ್ನ ಈ ವ್ಯಾಖ್ಯಾನದಲ್ಲಿ ಲೋಪದೋಷಗಳು ಸಂಭವಿಸಿರಬಹುದು, ಸಹೃದಯರು ಅವುಗಳನ್ನು ತಿದ್ದಿಕೊಳುವುದಲ್ಲದೆ ಕೃಪೆಯಿಟ್ಟು ತೋರಿಸಿಕೊಟ್ಟಲ್ಲಿ ಮುಂದಿನ ಮುದ್ರಣದಲ್ಲಿ ಅವುಗಳನ್ನು ಸರಿಪಡಿಸಿಕೊಳ್ಳಲು ಉಪಕಾರವಾಗುತ್ತದೆ.

"ಸದಸಿ ಕಥನಂ ಚಾಪ್ಯುಪಕೃತೇಃ" ಎಂಬ ಸೂಕ್ತಿಯಂತೆ ಮೊದಲಿನಿಂದಲೂ ನನಗೆ ಈ ಗ್ರಂಥವನ್ನು ಬರೆಯಲು ಪ್ರೋತ್ಸಾಹವನ್ನಿತ್ತು ಈಗ ಪ್ರಕಾಶಪಡಿಸಲೂ ಉದಾರ ಸಹಾಯವನ್ನು ಮಾಡಿರುವ ಮಹಾರಾಜಕಾಲೇಜಿನ ಫಿಲಾಸಫಿ ಉಪಪ್ರಾಧ್ಯಾಪಕ ಶ್ರೀ. ವಿ. ಮುದ್ದಲಿಂಗಣ್ಣ ಎಂ. ಎ. ಮತ್ತು ಮಹಾರಾಣೀಕಾಲೇಜಿನ ಹಿಂದೀ ಅಧ್ಯಾಪಕರಾದ ಮ. ದೇವೇಗೌಡ, ಎಂ. ಎ. ಇವರಿಬ್ಬರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಅಲ್ಪವೇ. ಇವರಿಗೂ, ಇನ್ನೂ ನಾನಾರೀತಿಯಿಂದ ಸಹಾಯವನ್ನು ಒದಗಿಸಿರುವ ನನ್ನ ಮಿತ್ರವೃಂದಕ್ಕೂ ಚಿರಋಣಿಯಾಗಿರುತ್ತೇನೆ. ವ್ಯಾಕರಣ

ಶಬ್ದಗಳು ಕ್ಲಿಷ್ಟವಾದರೂ ತಾಳ್ಮೆಯಿಂದ ಸರಿಯಾಗಿ ನೋಡಿ ಅಂದವಾಗಿ ಮುದ್ರಿಸಿ ಕೊಟ್ಟ ಶ್ರೀ ವಿನಾಯಕ ಪ್ರೆಸ್ಸಿನ ಮಾಲೀಕರಾದ ಶ್ರೀ ಕೆ. ವೆಂಕಟಸುಬ್ಬಯ್ಯನವರಿಗೂ, ಉಷಾಪ್ರೆಸ್ಸಿನ ಮಾಲೀಕರಾದ ಆರ್. ಎನ್. ಹಬ್ಬುರವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಕನ್ನಡಮಾತೆಯ ಅಡಿದಾವರೆಗಳಲ್ಲಿ ಸಮರ್ಪಿಸಿರುವ ಈ ಗ್ರಂಥವನ್ನು ಕನ್ನಡ ಬಂಧುಗಳೆಲ್ಲರೂ ಆದರಿಸಿ ಪರಿಶೀಲಿಸಿ ಇದರಿಂದ ಸಂಸ್ಕೃತಭಾಷಾಜ್ಞಾನವನ್ನು ಪಡೆದು ಸುಸಂಸ್ಕೃತರಾಗಿ ನವೋದಿತಕರ್ಣಾಟಕವನ್ನು ಉಜ್ವಲಗೊಳಿಸಲು ಸಮರ್ಥರಾಗಲೆಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ಶ್ರೀಮನ್ಮಹಾರಾಜ ಸಂಸ್ಕೃತ ಮಹಾಪಾಠಶಾಲಾ
ಮೈಸೂರು — ಸಜ್ಜನ ವಿಧೇಯ,
ತಾ|| 1-11-56 — ಜಿ. ವಿಷ್ಣುಮೂರ್ತಿಭಟ್ಟ.

---

## ದ್ವಿತೀಯಮುದ್ರಣ

ಗ್ರಂಥದ ದ್ವಿತೀಯ ಮುದ್ರಣವೆಂದರೆ ಗ್ರಂಥಕರ್ತೃವಿಗೆ ಹರ್ಷದಾಯಕವಾದುದೇ. ಇದರಿಂದ ಇದು ಜನಪ್ರಿಯವಾಗಿದೆಯೆಂದು ನಿಶ್ಚಯಿಸಬಹುದು. ಹಿಂದಿನ ಮುದ್ರಣದಲ್ಲಿ ಮರೀಚಿಕೆಯಲ್ಲಿ ನೀರಿನ ಆಸೆಯಂತೆ ಕೆಲವು ರೀತಿಯ ಸಹಾಯ ಪಡೆಯಲು ಕಾಂಪ್ಲಿಮೆಂಟರಿ ಕಾಪಿಯನ್ನು ಕೊಟ್ಟುದೇ ಅಧಿಕವಾಯಿತು. ಇದರಿಂದ ಪಾರಮಾರ್ಥ್ಯಕ್ಕೆ ಬೆಲೆ ಸಿಗುವುದು ದುರ್ಲಭವೆಂದೂ ವ್ಯಕ್ತವಾಯಿತು. 'ಕರ್ಮಣ್ಯೇವಾಧಿಕಾರಃ' ಎಂಬಂತೆ ಕರ್ತವ್ಯ ನನ್ನದು. ದ್ವಿತೀಯಮುದ್ರಣದಲ್ಲಿ ಅನೇಕ ವಿದ್ವಾಂಸರು ಕೊಟ್ಟಿರುವ ಸದಭಿಪ್ರಾಯಗಳನ್ನು ಸೇರಿಸಿಲ್ಲ. ನಮ್ಮವರು ಎಂದೂ ನಮ್ಮವರೇ. ಹಿಂದಿನ ಮುದ್ರಣದಲ್ಲಿ ತೋರಿದ ಅನೇಕಮುದ್ರಣ ದೋಷಗಳನ್ನು ಇಲ್ಲಿ ತಿದ್ದಲಾಗಿದೆ. ಆದರೂ ಪ್ರಮಾದದಿಂದ ಕೆಲವು ತಪ್ಪುಗಳು ಬಲಾತ್ಕರಿಸಿ ಬಂದಿವೆ. ಇದು ಸಾಮಾನ್ಯವೆಂದು ಪಾಠಕರು ತಿದ್ದಿ ಓದಿಕೊಳ್ಳಬೇಕೆಂದೂ ನಿವೇದಿಸುತ್ತೇನೆ. ಈ ಗ್ರಂಥ ಮುದ್ರಣಕ್ಕೆ ತತ್ಕಾಲದಲ್ಲಿ ದ್ರವ್ಯಸಹಾಯಮಾಡಿದ ನನ್ನ ಅನೇಕ ಮಿತ್ರರ ಮಹೋಪಕಾರವನ್ನು ಮರೆಯುವಂತಿಲ್ಲ. ಅವರು ತಮ್ಮ ಹೆಸರನ್ನು ಪ್ರಕಟಿಸಬಾರದೆಂದುದರಿಂದ ಇಲ್ಲಿ ಪ್ರಕಾಶಪಡಿಸಿಲ್ಲ. ಅವರ ನೆರವಿಲ್ಲದಿದ್ದಲ್ಲಿ ಮುದ್ರಣವೇ ಅಸಾಧ್ಯವಾಗುತ್ತಿತ್ತು. ೨-೩ನೇ ಭಾಗಗಳೂ ಹೀಗೆಯೇ ಸುಗಮವಾಗಿ ಬರುತ್ತವೆಯೆಂದು ಆಶಿಸಿದ್ದೇನೆ. ಪ್ರಾರಂಭದಿಂದಲೂ ನನ್ನ ಗ್ರಂಥಪ್ರಕಾಶನಕ್ಕೆ ಪ್ರೋತ್ಸಾಹವೀಯುತ್ತಾ ಸಕಲವಿಧದಿಂದ ಸಹಾಯಮಾಡುತ್ತಾ ಬಂದಿರುವ ಶ್ರೀ ಮಾ. ದೇವೇಗೌಡ ಎಂ.ಎ., ಅವರಿಗೂ ಮಿತ್ರವರ್ಯ ವಿದ್ವಾನ್ ಕೆ. ಲಕ್ಷ್ಮೀನೃಸಿಂಹಶಾಸ್ತ್ರಿಗಳಿಗೂ ಚಿರಋಣಿ

ಯಾಗಿರುವೆನಲ್ಲದೆ ಅವರ ಈ ಉದಾರಭಾವದಿಂದ ಪ್ರೀತನಾದ ಪರಮಾತ್ಮನು ಅವರಿಗೆ ಉತ್ತರೋತ್ತರ ಶ್ರೇಯಸ್ಸನ್ನು ಕೊಡಲೆಂದು ಪ್ರಾರ್ಥಿಸುತ್ತೇನೆ.

ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ ಮಾಲೀಕರಾದ ಶ್ರೀ ಮಹಾದೇವಯ್ಯನವರಿಗೆ ಕೃತಜ್ಞನಾಗಿರುತ್ತೇನೆ. ಈ ಗ್ರಂಥವು ಹಿಂದಿನಂತೆ ಜನಪ್ರಿಯವಾಗಿ ಕರ್ನಾಟಕದಲ್ಲಿ ಸರ್ವತೋಮುಖವಾಗಿ ಪ್ರಕಾಶಿಸಲೆಂದು ಹಾರೈಸುತ್ತೇನೆ.

ಸಜ್ಜನವಿಧೇಯ

೩-೪-೧೯೬೪ ಜಿ. ವಿಷ್ಣುಮೂರ್ತಿಭಟ್ಟ.



ಪ್ರಥಮಮುದ್ರಣದಲ್ಲಿ ದೇವರಾಜಬಹದ್ದೂರ್ ಧರ್ಮದತ್ತಿಯಿಂದ ಈ ಗ್ರಂಥದ ಮೊದಲನೆಯ ಭಾಗಕ್ಕೆ ಎರಡನೆಯ ಬಹುಮಾನವು, ೨-೩ನೆಯ ಭಾಗಗಳಿಗೆ ಪ್ರಥಮ ಬಹುಮಾನವೂ ಬಂದಿದೆ.

ಕ್ರಿಶ್ಚಿಯನ್ ಸೊಸಾಯಟಿ ಮದ್ರಾಸ್‌ನಿಂದ ೨೫೦ ರೂ. ಮತ್ತು ಮೈಸೂರು ಯೂನಿವರ್ಸಿಟಿಯಿಂದ ೮೦೦ ರೂ. ಸಹಾಯ ಧನ ದೊರೆತಿದೆ.

ಸಾಹಿತ್ಯ ಅಕಾಡಮಿ ಡೆಲ್ಲಿಯಿಂದ (೫೦ ಪುಸ್ತಕ ಪಡೆದು) ೧ ಸಾವಿರ ರೂ. ಸಹಾಯ ಧನ ಬಂದಿರುತ್ತದೆ.

ಎಲ್ಲಾ ಶಾಲಾ ಕಾಲೇಜುಗಳ ಲೈಬ್ರೆರಿಗೆ ತೆಗೆದುಕೊಳ್ಳಬಹುದೆಂದು ಮೈಸೂರು ಸರ್ಕಾರದ ವಿದ್ಯಾಭ್ಯಾಸ ಇಲಾಖೆಯ ಡೈರೆಕ್ಟರಿಂದ ಆರ್ಡರ್ ಬಂದಿರುತ್ತದೆ.

---

## ವಿಷಯಾನುಕ್ರಮಣಿಕೆ (ಪೂರ್ವಾರ್ಧ)





॥ ಶ್ರೀ ಗಣೇಶಾಯ ನಮಃ ॥

# ॥ ಪಾಣಿನೀಯಪ್ರವೇಶಿಕಾ ॥

---

## ಲಘುಸಿದ್ಧಾಂತ ಕೌಮುದೀ

### ಕನ್ನಡ ವ್ಯಾಖ್ಯಾನ

---

ಮಂಗಳಾದಿಯಾಗಿಯೂ ಮಂಗಳಾಂತವಾಗಿಯೂ ಇರುವ ಗ್ರಂಥಗಳು ಬೇಗ ಪ್ರಖ್ಯಾತಗಳಾಗುತ್ತವೆಂಬ ಭಾಷ್ಯಕಾರರ ಸೂಕ್ತಿಯನ್ನನುಸರಿಸಿ ಗ್ರಂಥಕಾರನು ಮಂಗಳವನ್ನು ಮಾಡಿ ಮುಂದೆ ಈ ಗ್ರಂಥವನ್ನು ಓದುವವರೂ ಮಂಗಳವನ್ನು ಮೊದಲು ಆಚರಿಸಿ ಓದಿದರೆ ಸಂಪೂರ್ಣ ವ್ಯಾಕರಣವಿಷಯವನ್ನು ತಿಳಿಯಲು ಸಮರ್ಥರಾಗುವರೆಂದು ತಾನು ಮಾಡಿದ ಮಂಗಳವನ್ನು ಗ್ರಂಥದ ಆದಿಯಲ್ಲಿ ಬರೆದಿರುತ್ತಾನೆ.

ಲಘುಸಿದ್ಧಾಂತ ಕೌಮುದೀ

ನತ್ವಾ ಸರಸ್ವತೀಂ ದೇವೀಂ ಶುದ್ಧಾಂ ಗುಣ್ಯಾಂ ಕರೋಮ್ಯಹಮ್ ।
ಪಾಣಿನೀಯಪ್ರವೇಶಾಯ ಲಘುಸಿದ್ಧಾಂತಕೌಮುದೀಮ್ ॥

'ದೋಷರಹಿತಳೂ, ಪ್ರಶಸ್ತಗುಣಯುಕ್ತಳೂ, ಪ್ರಕಾಶಮಾನಳೂ ಆದ ಸರಸ್ವತಿಯನ್ನು ನಮಸ್ಕರಿಸಿ ನಾನು (ವರದರಾಜನು) (ಬಾಲಕರಿಗೆ) ಪಾಣಿನೀಯ ವ್ಯಾಕರಣಶಾಸ್ತ್ರದಲ್ಲಿ ಪ್ರವೇಶಿಸಲು (ತಿಳಿಯಲು) ಲಘುಸಿದ್ಧಾಂತ ಕೌಮುದೀ ಎಂಬ ಗ್ರಂಥವನ್ನು ಮಾಡುತ್ತೇನೆ.

ಮಂಗಳವೆಂದರೆ ಇಷ್ಟದೇವತೆಯನ್ನು ವಿಘ್ನಪರಿಹಾರಕ್ಕಾಗಿ ಪ್ರಾರ್ಥಿಸುವುದು. ಹೀಗೆ ಪ್ರಾರ್ಥಿಸುತ್ತಾ ಅಲ್ಲಿ ಗ್ರಂಥದ ವಿಷಯಾದಿಗಳನ್ನು ನಿರ್ದೇಶಿಸುವುದೂ ಪದ್ಧತಿಯಾಗಿದೆ. ಇಲ್ಲಿ ವಿದ್ಯಾಧಿದೇವತೆಯಾದ ಸರಸ್ವತಿಯ ಧ್ಯಾನವೇ ಮಾಡಲ್ಪಟ್ಟಿದೆ. ಗ್ರಂಥದ ವಿಷಯಾದಿಗಳನ್ನು ಮೊದಲು ಹೇಳದಿದ್ದರೆ ಬೇಗನೆ ಶಿಷ್ಯರಿಗೆ ಅವರಲ್ಲಿ ಪ್ರವೃತ್ತಿಯುಂಟಾಗುವುದಿಲ್ಲ. ಅದಕ್ಕೋಸ್ಕರ ವಿಷಯ, ಪ್ರಯೋಜನ, ಅಧಿಕಾರಿ, ಸಂಬಂಧ, ಈ ನಾಲ್ಕನ್ನು ಮೊದಲು ಹೇಳುತ್ತಾರೆ. ಇದಕ್ಕೆ ಅನುಬಂಧಚತುಷ್ಟಯವೆಂದು ಹೆಸರು ಮಂಗಳಶ್ಲೋಕದಲ್ಲಿ ಇವೂ ನಿರ್ದಿಷ್ಟವಾಗಿವೆ. ಪಾಣಿನೀಯ

ವ್ಯಾಕರಣ ಸಿದ್ಧಾಂತಗಳನ್ನು ಸಂಕ್ಷೇಪವಾಗಿ ಪ್ರತಿಪಾದಿಸುವುದು ವಿಷಯ. ಅದರಲ್ಲಿ ಪ್ರವೇಶ ಅಂದರೆ ಅದರ ಜ್ಞಾನವೇ ಪ್ರಯೋಜನ. ಇದನ್ನು ತಿಳಿಯಬೇಕೆಂದು ಬಯಸುವ ಬಾಲಕರೇ ಅಧಿಕಾರಿಗಳು. ಬಾಲರೆಂದರೆ ಇಲ್ಲಿ ಚಿಕ್ಕವರು ಮಾತ್ರವೆಂದಲ್ಲ. ಶಾಸ್ತ್ರಾಂತರಜ್ಞಾನವುಳ್ಳವರಾದರೂ ತಿಳಿಯದ ವ್ಯಾಕರಣ ಸಿದ್ಧಾಂತವುಳ್ಳವರು, ಎಂದರ್ಥ. ಪ್ರತಿಪಾದ್ಯ ಪ್ರತಿಪಾದಕ ಮುಂತಾದ ಸಂಬಂಧಗಳನ್ನು ಊಹಿಸಿಕೊಳ್ಳಬೇಕು. ಹೀಗೆ ನಾಲ್ಕೂ ನಿರ್ದಿಷ್ಟವಾದರೆ ಎಲ್ಲರೂ ಬೇಗನೆ ಆದರಿಸುತ್ತಾರೆ. ಮಂಗಳ ಮಾಡಿ ವಿಷಯಾದಿಗಳನ್ನು ನಿರ್ದೇಶಿಸಿ ಮೊದಲು ಸಾಮಾನ್ಯ ಉಪಯುಕ್ತವಾಗುವ ಸಂಜ್ಞೆಗಳನ್ನು ತಿಳಿಸಲು ಸಂಜ್ಞಾಪ್ರಕರಣವನ್ನು ಆರಂಭಿಸುತ್ತಾನೆ.

## ಅಥ ಸಂಜ್ಞಾ ಪ್ರಕರಣಮ್

**ಅ ಇ ಉ ಣ್ ೧ ॥ ಋ ಌ ಕ್ ೨ ॥ ಏ ಓ ಙ್ ೩ ॥ ಐ ಔ ಚ್ ೪ ॥ ಹ ಯ ವ ರ ಟ್ ೫ ॥ ಲ ಣ್ ೬ ॥ ಞ ಮ ಙ ಣ ನ ಮ್ ೭ ॥ ಝ ಭ ಞ್ ೮ ॥ ಘ ಢ ಧ ಷ್ ೯ ॥ ಜ ಬ ಗ ಡ ದ ಶ್ ೧೦ ॥ ಖ ಫ ಛ ಠ ಥ ಚ ಟ ತ ವ್ ೧೧ ॥ ಕ ಪ ಯ್ ೧೨ ॥ ಶ ಷ ಸ ರ್ ೧೩ ॥ ಹ ಲ್ ೧೪ ॥ ಇತಿ ಮಾಹೇಶ್ವರಾಣಿ ಸೂತ್ರಾಣಿ ॥**

ಇವು ಹದಿನಾಲ್ಕು ಮಾಹೇಶ್ವರನಿಂದ ಬಂದ ಸೂತ್ರಗಳು. ವ್ಯಾಕರಣಶಾಸ್ತ್ರವೆಂದರೆ ಪದಸಂಸ್ಕಾರವನ್ನು ತಿಳಿಸುವ ಶಾಸ್ತ್ರ. ವರ್ಣವಿಲ್ಲದೇ ಪದವಾಗುವುದಿಲ್ಲ. ಆದುದರಿಂದ ಸಂಸ್ಕೃತ ವ್ಯಾಕರಣದಲ್ಲಿ ವ್ಯವಹೃತವಾದ ವರ್ಣಗಳು ಇಷ್ಟೇ ಎಂದು ತಿಳಿಸಲು ಮೊದಲು ಅಕ್ಷರಗಳನ್ನು ನಿರ್ದೇಶಿಸುತ್ತಾನೆ. ಇವು ಪಾಣಿನಿಗೆ ಶಿವನ ವರಪ್ರಸಾದದಿಂದ ಲಬ್ಧವಾದುವೆಂದು "**ನೃತ್ತಾವಸಾನೇ ನಟರಾಜರಾಜೋ ನನಾದ ಢಕ್ಕಾಂ ನವಪಂಚವಾರಂ । ಉದ್ಧರ್ತುಕಾಮಃ ಸನಕಾದಿಸಿದ್ಧಾನೇತದ್ವಿಮರ್ಶೇ ಶಿವಸೂತ್ರಜಾಲಮ್ ॥** ಎಂದು ನಂದಿಕೇಶ್ವರಕಾರಿಕೆಯಲ್ಲಿ ವಿವೃತವಾಗಿದೆ. ತಾಂಡವ ನೃತ್ಯ ಕಾಲದಲ್ಲಿ ಪರಶಿವನು ಲೋಕಕಲ್ಯಾಣಕಾಗಿ ಡಮರು ಧ್ವನಿಯ ನೆಪದಿಂದ ಇವುಗಳನ್ನು ಉಪದೇಶಿಸಿದನೆಂದರ್ಥ. ಆದ್ದರಿಂದಲೇ ಇದಕ್ಕೆ ಅಕ್ಷರ ಸಮಾಮ್ನಾಯ (ವೇದ)ವೆಂದು ಹೆಸರು ಬಂದಿದೆ. ಎಲ್ಲರಿಂದಲೂ ಮೊದಲು ಗ್ರಹಿಸಲು ಯೋಗ್ಯವಾದವುಗಳು. ಇಲ್ಲಿ ನಲವತ್ತೆರಡು ಅಕ್ಷರಗಳು ಇವೆ. ಕೆಲವು ಪದಗಳ ರೂಪಸಿದ್ಧಿಗಾಗಿ ಹಕಾರವು ಎರಡು ಬಾರಿ ನಿರ್ದಿಷ್ಟವಾಗಿದೆ. ವ್ಯಾಕರಣಶಾಸ್ತ್ರಕ್ಕೆ ಇವು ಶಿರಸ್ಸಿನಂತಿದ್ದರೂ ಇವುಗಳಿಗೆ ಯಾವು

ದೊಂದೂ ಅರ್ಥವಿಲ್ಲದಿರುವುದರಿಂದ ಇವುಗಳನ್ನು ಮೊದಲು ಇಲ್ಲಿ ಏಕೆ ಹೇಳಿದುದು ಎಂಬ ಶಂಕೆ ಬಂದರೆ ಅದಕ್ಕೆ ಸಮಾಧಾನ ಹೇಳುತ್ತಾನೆ.

|| ಅಣಾದಿ ಸಂಜ್ಞಾರ್ಥಾನಿ ||

ಅಣ್ ಆದಿಃ ಯೇಷಾಂ ತಾಃ ಅಣಾದಯಃ। ಅಣಾದಯಶ್ಚ ತಾಃ ಸಂಜ್ಞಾಶ್ಚ ಅಣಾದಿಸಂಜ್ಞಾಃ। ಅಣಾದಿಸಂಜ್ಞಾಃ ಅರ್ಥಃ (ಪ್ರಯೋಜನಂ) ಯೇಷಾಂ ತಾನಿ ಅಣಾದಿ ಸಂಜ್ಞಾರ್ಥಾನಿ || ಇದು ವಿಗ್ರಹವಾಕ್ಯ. ಸಮಾಸದ ಅರ್ಥವನ್ನು ತಿಳಿಸುವ ವಾಕ್ಯಕ್ಕೆ ವಿಗ್ರಹವೆಂದು ಹೆಸರು. ಅಣ್ ಮುಂತಾದ ಸಂಜ್ಞೆಗಳೇ ಪ್ರಯೋಜನವಾಗಿ ಇರುವವುಗಳು ಈ ಸೂತ್ರಗಳು. ಇವುಗಳಿಂದ ಮಾಡಿದ ಅಣ್ ಅಕ್ ಮುಂತಾದ ಸಂಜ್ಞೆಗಳು ವ್ಯಾಕರಣದಲ್ಲಿ ಮುಖ್ಯವಾಗಿ ವ್ಯವಹರಿಸಲ್ಪಡುತ್ತವೆ. ಈ ಸಂಜ್ಞೆಗಳಿಗೆ ಈ ಸೂತ್ರಗಳು ಕಾರಣವಾಗಿರುವುದರಿಂದ ಪ್ರಯೋಜನವುಳ್ಳವುಗಳಾದುವು. ಆದುದರಿಂದ ಮೊದಲು ಹೇಳಿದೆ.

ಅಣ್ ಅಕ್ ಮುಂತಾದ ಸಂಜ್ಞೆಗಳನ್ನು ಮಾಡುವುದು ಹೇಗೆಂಬುದನ್ನು ವಿವರಿಸುತ್ತಾನೆ.

|| ಏಷಾಮಂತ್ಯಾ ಇತಃ ||

ಅಂತೇ ಭವಃ ಅಂತ್ಯಃ। ಕೊನೆಯಲ್ಲಿರುವುದು ಎಂದರ್ಥ. ಈ ಹದಿನಾಲ್ಕು ಸೂತ್ರಗಳ ಕೊನೆಯಲ್ಲಿರುವ ವರ್ಣಗಳಿಗೆ ಇತ್ ಎಂಬ ಸಂಜ್ಞೆ ಬರುತ್ತದೆ. ಈ ಇತ್ತಿನಿಂದ ಮುಂದೆ ಅಣ್ ಅಚ್ ಮುಂತಾದ ಸಂಜ್ಞೆಗಳನ್ನು ಮಾಡುವ ಕ್ರಮವನ್ನು ಸೂತ್ರದಿಂದ ಹೇಳುತ್ತಾನೆ.

ಹಕಾರಾದಿಷ್ವಕಾರ ಉಚ್ಚಾರಣಾರ್ಥಃ। ಲಣ್ ಮಧ್ಯೇತ್ವಿತ್ಸಂಜ್ಞಕಃ ||

ಹಯವರಟ್ ಮುಂತಾದ ಸೂತ್ರಗಳಲ್ಲಿ ವ್ಯಂಜನಗಳು ನಿರ್ದಿಷ್ಟವಾಗಿವೆ. ವ್ಯಂಜನವು ಅರ್ಧ ಮಾತ್ರೆಯ ಸ್ವರೂಪದಿಂದಿದೆ. ಹಕಾರಾದಿಗಳಲ್ಲಿರುವ ಅಕಾರವು ಸುಖೋಚ್ಚಾರಣೆಗೋಸ್ಕರ ಹೇಳಿದೆ. ಇಲ್ಲವಾದರೆ ಹ್ ಯ್ ವ್ ರ್ ಎಂದು ಕಷ್ಟದಿಂದ ಉಚ್ಚರಿಸಬೇಕಾಗುತ್ತದೆ. ಲಣ್ ಸೂತ್ರದಲ್ಲಿ ಮಾತ್ರ ಲಕಾರದ ಮೇಲಿರುವ ಅಕಾರವು ಇತ್ ಸಂಜ್ಞೆಯನ್ನು ಹೊಂದುತ್ತದೆ. 'ಉರಣ್‌ರಪರಃ' ಎಂಬ ಸೂತ್ರದಲ್ಲಿ ರ ಎಂಬ ಒಂದು ವಿಶೇಷ ಸಂಜ್ಞೆಯನ್ನು ಮಾಡಬೇಕಾದುದರಿಂದ ಇದೊಂದಕ್ಕೆ ಮಾತ್ರ ಇತ್ ಸಂಜ್ಞೆಯನ್ನು ಹೇಳಿದೆ. ಹೀಗೆ ಹೇಳಿದ ವಾಕ್ಯಗಳ ಅರ್ಥಗಳು ಪಾಣಿನೀಯ ಸೂತ್ರದಿಂದಲೇ ಬಂದುವೆಂದು ಪ್ರಮಾಣಕ್ಕೋಸ್ಕರ ಆ ಅರ್ಥಗಳನ್ನು ಕೊಡುವ ಸೂತ್ರಗಳನ್ನು ಹೇಳುತ್ತಾನೆ.

(ಅಂತ್ಯಕ್ಕೆ ಇತ್ ಸಂಜ್ಞೆ ಹೇಳುವ ಸೂತ್ರ)

## ೧. ಹಲನ್ತ್ಯಮ್ ॥ ೧-೩-೩ ॥

### ॥ ಉಪದೇಶೇ ಅಂತ್ಯಂ ಹಲ್ ಇತ್ ಸ್ಯಾತ್ ॥

ಹಲ್ ಅಂತ್ಯಂ ಎಂದು ಎರಡುಪದಗಳಿರುವ ಸೂತ್ರ. "ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಂ । ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋವಿದುಃ" ಎಂಬುದಾಗಿ ಕಡಿಮೆ ಅಕ್ಷರವುಳ್ಳದ್ದಾಗಿಯೂ, ಸಂದೇಹಾಸ್ಪದವಾಗದೆಯೂ, ಸಾರವತ್ತಾದ ಅರ್ಥೋಪೇತವಾಗಿಯೂ, ನಾನಾ ರೀತಿಯಿಂದ ವ್ಯಾಖ್ಯಾನ ಮಾಡಲು ಬರುವಂತೆಯೂ, ವಿಶೇಷ, ಸಾಮಾನ್ಯದೋಷ ವರ್ಜಿತವಾಗಿಯೂ ಇರುವುದೇ ಸೂತ್ರಸ್ವರೂಪವು. ಪಾಣಿನೀಯ ಸೂತ್ರಗಳು ಈ ಸಕಲಾಂಶಗಳನ್ನೂ ಒಳಗೊಂಡಿವೆ. ಸೂತ್ರಗಳಲ್ಲಿ ಆರು ರೀತಿ ಇದೆ.

1 2 3 4 5
"ಸಂಜ್ಞಾ ಚ ಪರಿಭಾಷಾ ಚ ವಿಧಿರ್ನಿಯಮ ಏವ ಚ । ಅತಿದೇಶೋಽಧಿ-
6
ಕಾರಶ್ಚ ಷಡ್ವಿಧಂ ಸೂತ್ರಲಕ್ಷಣಂ" ॥ ಸಂಜ್ಞಾಸೂತ್ರ, ಪರಿಭಾಷಾಸೂತ್ರ, ವಿಧಿಸೂತ್ರ, ನಿಯಮಸೂತ್ರ, ಅತಿದೇಶಸೂತ್ರ, ಅಧಿಕಾರಸೂತ್ರವೆಂದು ವಿಭಾಗಿಸಿರುತ್ತಾರೆ. ಇವರ ಸ್ವರೂಪವನ್ನು ಆಗಾಗ ಬಂದಲ್ಲಿ ವಿವರಿಸುತ್ತೇವೆ. ಪ್ರಕೃತಸೂತ್ರವು ಸಂಜ್ಞೆಯನ್ನು ಹೇಳುವುದಾದುದರಿಂದ ಸಂಜ್ಞಾಸೂತ್ರವೆನಿಸುತ್ತದೆ. ಸೂತ್ರದ ಅರ್ಥವನ್ನು ವಿವರಿಸುವ ವಾಕ್ಯಕ್ಕೆ ವೃತ್ತಿಯೆಂದು ಹೆಸರು. ವಾಕ್ಯಾರ್ಥಪೂರ್ತಿಯಾಗಲು ಈ ಸೂತ್ರದಲ್ಲಿ ಪದಗಳಿಲ್ಲವಾದರೆ ಹಿಂದಿನ ಸೂತ್ರಗಳಿಂದ ಬೇಕಾದ ಪದಗಳನ್ನು ತೆಗೆದುಕೊಳ್ಳಬೇಕು. ಇದಕ್ಕೆ ಅನುವೃತ್ತಿಯೆನ್ನುತ್ತಾರೆ. ಮುಂದಿನ ಸೂತ್ರದಿಂದ ತೆಗೆದುಕೊಳ್ಳುವುದಾದರೆ ಅಪಕರ್ಷವೆನ್ನುತ್ತಾರೆ. ಯಾವ ವಿಭಕ್ತ್ಯಂತವಾಗಿ ತೆಗೆದುಕೊಳ್ಳುತ್ತೇವೋ ಅದೇರೀತಿ ಪ್ರಕೃತ ಇರಬೇಕೆಂಬ ನಿಯಮವಿಲ್ಲ. ಬೇಕಾದ ಹಾಗೆ ವಿಪರಿಣಾಮ ಮಾಡಿಕೊಳ್ಳಬಹುದು. ಪ್ರಕೃತ ಉಪದೇಶೇಽಜನುನಾಸಿಕ ಇತ್ ಎಂಬ ಸೂತ್ರದಿಂದ ಉಪದೇಶೇ, ಇತ್ ಎಂಬ ಎರಡುಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ:—** ಉಪದೇಶದಲ್ಲಿ ಕೊನೆಯಲ್ಲಿರುವ ಹಲ್ (ವ್ಯಂಜನ) ವರ್ಣಗಳು ಇತ್ ಆಗುತ್ತವೆ. ಅವುಗಳಿಗೆ ಇತ್ ಎಂಬ ಒಂದು ಸಂಜ್ಞೆ ಬರುತ್ತದೆ. ಒಂದು ವಾಕ್ಯಜ್ಞಾನವಾಗಬೇಕಾದರೆ ಮೊದಲು ಅದರಲ್ಲಿ ಸೇರಿರುವ ಪದಗಳ ಜ್ಞಾನವಾಗಬೇಕು. ಇಲ್ಲಿ ಉಪದೇಶವೆಂದರೇನು ಎಂಬ ಜಿಜ್ಞಾಸೆ ಬರುತ್ತದೆ. ಆದುದರಿಂದ ಉಪದೇಶಸ್ವರೂಪವನ್ನು ಹೇಳುತ್ತಾನೆ.

### ಉಪದೇಶ ಆದ್ಯೋಚ್ಚಾರಣಮ್

ಉಪದೇಶವೆಂದರೆ ಆದಿಯ ಉಚ್ಚಾರಣೆ. ಉಪದೇಶವೆಂಬಲ್ಲಿ ಉಪ ಎಂಬ ಉಪಸರ್ಗವೂ ಘಞಂತವಾದ ದಿಶ ಧಾತುವೂ ಇದೆ. ಉಪಸರ್ಗಕ್ಕೆ ಆದಿಯೆಂತಲೂ

ಧಾತುವಿಗೆ ಉಚ್ಚಾರಣೆಯೆಂತಲೂ ಅರ್ಥವಾಗುತ್ತದೆ. ವ್ಯಾಕರಣಶಾಸ್ತ್ರವನ್ನು ರಚಿಸಿದ ಆಚಾರ್ಯರ ಉಚ್ಚಾರಣೆಯೇ ಮೊದಲನೆಯ ಉಚ್ಚಾರಣೆಯಾಗುತ್ತದೆ. ಎಲ್ಲದಕ್ಕೂ ಮೊದಲು ಉಚರಿಸಲ್ಪಟ್ಟ ವರ್ಣಸಮಾಮ್ನಾಯವೂ ಉಪದೇಶವಾಗುತ್ತದೆ. ಇದನ್ನೇ ಪ್ರಾಚೀನರು ಕಾರಿಕೆಯಿಂದ ವಿವರಿಸಿರುತ್ತಾರೆ.

1 2 3 4 5 6

" ಧಾತು ಸೂತ್ರ ಗಣೋಣಾದಿ ವಾಕ್ಯಲಿಂಗಾನುಶಾಸನಮ್ ||

7 8 9

ಆಗಮಪ್ರತ್ಯಯಾದೇಶಾ ಉಪದೇಶಾಃ ಪ್ರಕೀರ್ತಿತಾಃ "

ಕ್ರಿಯಾವಾಚಕ, ಸೂತ್ರ, ಗಣ, ಶಾಕಟಾಯನಪ್ರಣೀತ ಉಣಾದಿಸೂತ್ರ, ವಾರ್ತಿಕ, ಲಿಂಗಾನುಶಾಸನ, ಆಗಮ, ಪ್ರತ್ಯಯ, ಆದೇಶ, ಇವುಗಳಿಗೆ ಉಪದೇಶವೆಂದು ಹೆಸರು. ಇವೆಲ್ಲವೂ ಮೊದಲು ಉಚ್ಚರಿಸಲ್ಪಟ್ಟವೆ. ಪ್ರಕೃತ ಹದಿನಾಲ್ಕು ಮಾಹೇಶ್ವರಸೂತ್ರಗಳ ಅಂತ್ಯದಲ್ಲಿರುವ ವರ್ಣಗಳಿಗೆ ಇತ್ ಸಂಜ್ಞೆ ಬರುತ್ತದೆ. ಸೂತ್ರದಲ್ಲಿಲ್ಲದೇ ಇರುವ ಪದಗಳನ್ನು ಸೇರಿಸಿ ಸೂತ್ರಾರ್ಥವನ್ನು ಹೇಳಿದದು ಹೇಗೆ? ಎಂಬುದಕ್ಕೆ ಸಮಾಧಾನವನ್ನು ಹೇಳುತ್ತಾನೆ.

**ಸೂತ್ರೇಷ್ವದೃಷ್ಟಂ ಪದಂ ಸೂತ್ರಾಂತರಾದನುವರ್ತನೀಯಂ ಸರ್ವತ್ರ ||**

ಸೂತ್ರದಲ್ಲಿಲ್ಲದ ಪದವು ಎಲ್ಲೆಡೆಗಳಲ್ಲಿಯೂ ಬೇರೆ ಸೂತ್ರದಿಂದ ಅನುವರ್ತಿಸಲ್ಪಡಬೇಕು. ಬೇಕಾದ ಅರ್ಥವನ್ನು ಹೇಳಲು ಆಯಾಯ ಹಿಂದಿನ ಯಾ ಮುಂದಿನ ಸೂತ್ರಗಳಿಂದ ಪದಗಳನ್ನು ತೆಗೆದುಕೊಳ್ಳಬೇಕು. ಈ ವಿಷಯ ಹಿಂದೆ ವಿವೃತವಾಗಿದೆ. ಇತ್ ಸಂಜ್ಞೆಯುಳ್ಳ ವರ್ಣಗಳಿಗೆ ಲೋಪವನ್ನು ಹೇಳುತ್ತಾನೆ. ಆಗ ಲೋಪವೆಂದರೇನು ಎಂಬುದನ್ನು ತಿಳಿಸಲು ಸಂಜ್ಞಾ ಸೂತ್ರವನ್ನು ಮೊದಲು ಹೇಳುತ್ತಾನೆ.

(ಲೋಪಸಂಜ್ಞಾ ವಿಧಾಯಕ ಸೂತ್ರ)

## ೧. ಅದರ್ಶನಂ ಲೋಪಃ ||೧|೧|೬೦||

**ಪ್ರಸಕ್ತಸ್ಯಾದರ್ಶನಂ ಲೋಪಸಂಜ್ಞಂ ಸ್ಯಾತ್ ||**

**ಅದರ್ಶನಂ, ಲೋಪಃ** | ಎರಡು ಪದವುಳ್ಳ ಸೂತ್ರ. ಅದರ್ಶನವೆಂದರೆ ತೋರದಿರುವುದು ಎಂಬರ್ಥವಾಗುತ್ತದೆ. ಶಬ್ದಶಾಸ್ತ್ರದಲ್ಲಿ ಇದು ಕೂಡದಿರುವುದರಿಂದ ದರ್ಶನವೆಂದರೆ ಶಬ್ದವಿಷಯಕ ಶ್ರವಣವೆಂದು ಇಲ್ಲಿ ಹೇಳಬೇಕು. **ದರ್ಶನಸ್ಯಾಭಾವಃ ಅದರ್ಶನಂ** | 'ಸ್ಥಾನೇಽಂತರತಮಃ,' ಎಂಬ ಸೂತ್ರದಿಂದ ಸ್ಥಾನೇ ಎಂಬ ಪದವು ಅನುವೃತ್ತವಾಗುತ್ತದೆ. ಸ್ಥಾನವೆಂದರೆ ಉಚ್ಚಾರಣ ಪ್ರಸಕ್ತಿ. ಆಗ

ಸೂತ್ರಾರ್ಥ:— ಶಾಸ್ತ್ರದಿಂದ ಯಾವುದಾದರೂ ಶಬ್ದಕ್ಕಾಗಲೀ ವರ್ಣಕ್ಕಾಗಲೀ ಶ್ರವಣ ಪ್ರಸಕ್ತಿ ಬಂದಾಗ ಶ್ರವಣವಾಗದಿರುವುದಕ್ಕೆ ಲೋಪವೆಂದು ಹೆಸರು. ಉಚ್ಚಾರಣೆಮಾಡದಿರುವುದೆಂದು ಅರ್ಥ. ಈ ಲೋಪ ಸಂಜ್ಞೆಗೆ ಪ್ರಯೋಜನವನ್ನು ಹೇಳುತ್ತಾನೆ.

ವಿಧಾಯಕ

(ಇತ್‌ಗೆ ಲೋಪ ಹೇಳುವ ಸೂತ್ರ)

## ೩. ತಸ್ಯ ಲೋಪಃ ॥ ೧-೩-೯ ॥

॥ ತಸ್ಯೇತೋ ಲೋಪಃ ಸ್ಯಾತ್ ॥

ಎರಡು ಪದಗಳುಳ್ಳ ಸೂತ್ರ. ಇದರ ಹಿಂದಿನ ಎಂಟು ಸೂತ್ರಗಳಲ್ಲಿ ಇತ್ ಸಂಜ್ಞೆಯನ್ನು ಹೇಳುತ್ತಾ ಬಂದಿರುವುದರಿಂದ ಇಲ್ಲಿ ತಚ್ಛಬ್ದವು ಹಿಂದಿನದನ್ನು ಪರಾಮರ್ಶಿಸುವುದರಿಂದ ಆ ಇತ್ ಸಂಜ್ಞೆಯುಳ್ಳದ್ದಕ್ಕೆ ಲೋಪ ಬರುತ್ತದೆ ಎಂದು ಸೂತ್ರಾರ್ಥವಾಗುತ್ತದೆ. ಇವುಗಳಿಗೆ ಕಾರ್ಯದಲ್ಲಿ ಉಚ್ಚಾರಣೆ ಇಲ್ಲವೆಂದರ್ಥ. ಪ್ರಕೃತ ಹದಿನಾಲ್ಕು ಸೂತ್ರಗಳ ಅಂತ್ಯ ವರ್ಣಗಳಿಗೆ ಇತ್ ಸಂಜ್ಞೆ ಇರುವುದರಿಂದ ಅವುಗಳಿಗೆ ಲೋಪ ಬರುತ್ತದೆ. ಹಾಗಾದರೆ ಅವುಗಳ ಉಚ್ಚಾರಣೆಗೆ ಪ್ರಯೋಜನ ವೇನು? ಅಂದರೆ ಅವುಗಳಿಗೆ ಪ್ರಯೋಜನವನ್ನು ತೋರಿಸುತ್ತಾನೆ.

॥ ಣಾದಯೋಽಣಾದ್ಯರ್ಥಾಃ ॥

॥ ಅಣಾದಿಃ ಅರ್ಥಃ (ಪ್ರಯೋಜನಂ) ಯೇಷಾಂ ತೇ ಅಣಾದ್ಯರ್ಥಾಃ ॥ ಕೊನೆಯಲ್ಲಿರುವ ಣ್ ಕ್ ಮುಂತಾದವುಗಳು ಅಣ್ ಅಕ್ ಎಂಬಿವೇಮುಂತಾದ ಸಂಜ್ಞೆಗಳನ್ನುಂಟುಮಾಡುವುದರಿಂದ ಪ್ರಯೋಜನವುಳ್ಳವುಗಳು. ಇವುಗಳಿಂದ ಕೆಲವು ಸಂಜ್ಞೆಗಳಾಗುವುದರಿಂದ ವೈಯರ್ಥ್ಯವಿಲ್ಲ. ಈ ಸಂಜ್ಞೆಗಳನ್ನು ಮಾಡುವ ರೀತಿ ಹೇಗೆಂಬುದನ್ನು ಮುಂದಿನ ಸೂತ್ರದಿಂದ ವಿವರಿಸುತ್ತಾನೆ.

(ಪ್ರತ್ಯಾಹಾರವನ್ನು ಹೇಳುವ ಸೂತ್ರ)

## ೪. ಆದಿರಂತ್ಯೇನ ಸಹೇತಾ ॥ ೧-೧-೭೧ ॥

॥ ಅಂತ್ಯೇನೇತಾ ಸಹಿತ ಆದಿರ್ಮಧ್ಯಗಾನಾಂ ಸ್ವಸ್ಯ ಚ ಸಂಜ್ಞಾ ಸ್ಯಾತ್ ॥

ಆದಿಃ, ಅಂತ್ಯೇನ, ಸಹ, ಇತಾ ಎಂದು ನಾಲ್ಕುಪದಗಳುಳ್ಳ ಸೂತ್ರ. 'ಸ್ವಂ ರೂಪಂ ಶಬ್ದಸ್ಯಾಽಶಬ್ದಸಂಜ್ಞಾ', ಎಂಬ ಸೂತ್ರದಿಂದ ಸ್ವಂ ಎಂಬ ಪದವು ಅನುವೃತ್ತವಾಗಿ ಪರಿಣತವಾಗುತ್ತದೆ. ಸ್ವಸ್ಯ ಎಂದಾಗುತ್ತದೆ. ಆದಿಯೆಂದರೆ ತನಗೆ ಪೂರ್ವದಲ್ಲಿಲ್ಲದೆ ಪರದಲ್ಲಿರುವುದು. ಅಂತ್ಯವೆಂದರೆ ತನಗೆ ಪರದಲ್ಲಿ ಇಲ್ಲದೆ ಪೂರ್ವ

ದಲ್ಲಿರುವುದು. ಆದಿ ಅಂತವೆನ್ನುವ ವರ್ಣಗಳ ಪೂರ್ವಾಪರಗಳನ್ನು ತೆಗೆದುಕೊಳ್ಳಬೇಕು. ಆದಿ ಅಂತ್ಯವೆಂದಮೇಲೆ ಮಧ್ಯವೆಂಬುದು ಆಕ್ಷೇಪದಿಂದಲೇ ಲಬ್ಧವಾಗುತ್ತದೆ. ಸೂತ್ರಾರ್ಥ :—ಅಂತ್ಯವಾದ ಇತ್ ವರ್ಣದಿಂದ ಕೂಡಿಕೊಂಡು ಹೇಳಿದ ಆದಿ ವರ್ಣವು ತನಗೂ ಮಧ್ಯದಲ್ಲಿರುವ ವರ್ಣಗಳಿಗೂ ಸಂಜ್ಞೆಯಾಗುತ್ತದೆ. ಇಲ್ಲಿ ಸ್ವಸ್ಯ ಎಂಬುದು ಪ್ರಧಾನವಾದ ಆದಿ ಎಂಬಲ್ಲಿ ಮಾತ್ರ ಅನ್ವಯ ಹೊಂದುತ್ತದೆ. ಇತಾ ಎಂದು ತೃತೀಯಾಂತವಾಗಿ ಹೇಳಿದುದರಿಂದ ಅದು ಅಪ್ರಧಾನ. ಆದುದರಿಂದ ಸ್ವ ಅಂದರೆ ಇತ್ ಆಗುವುದಿಲ್ಲ. ಹೀಗೆ ಸಂಜ್ಞೆಮಾಡುವುದನ್ನು ಹೇಳಿ ಅದರಿಂದಾದ ಪ್ರಯೋಜನವನ್ನು ಹೇಳುತ್ತಾನೆ.

**ಯಥಾ ಅಣಿತಿ ಅ ಇ ಉ ವರ್ಣಾನಾಂ ಸಂಜ್ಞಾ ।**
**ಏವಮಚ್ ಹಲ್ ಅಲ್ ಇತ್ಯಾದಯಃ ॥**

ವರ್ಣ ಸಮಾಮ್ನಾಯದಲ್ಲಿ ಅ ಇ ಉಣ್ ಎಂದು ಮೊದಲನೇ ಸೂತ್ರ. ಇಲ್ಲಿ ಅಂತ್ಯವಾದ ಇತ್ ಣಕಾರ. ಇದರೊಡನೆ ಹೇಳಿದ ಆದಿಯೆಂದರೆ ಅಕಾರ. ಆಗ ಅಣ್ ಎಂದಾಗುತ್ತದೆ. ಅದು ತನಗೂ ಮಧ್ಯದಲ್ಲಿರುವುದಕ್ಕೂ ಸಂಜ್ಞೆಯಾಗುತ್ತದೆ ಎಂದುದರಿಂದ ಅ ಇ ಉ ಈ ಮೂರು ವರ್ಣಗಳಿಗೆ ಸಂಜ್ಞೆಯಾಗುತ್ತದೆ. ಹಾಗೇ ಅಚ್ ಎಂದರೆ ಒಂಭತ್ತು ವರ್ಣಗಳಿಗೂ ಹಲ್ ಎಂದರೆ ಮೂವತ್ತಮೂರು ವರ್ಣಗಳಿಗೂ ಅಲ್ ಎಂದರೆ ಕೊನೆಯ ಲಕಾರದಿಂದ ಹೇಳುವುದರಿಂದ ಎಲ್ಲಾ ವರ್ಣಗಳಿಗೂ ಸಂಜ್ಞೆಯಾಗುತ್ತದೆ. ಹೀಗೆ 'ಆದಿರಂತ್ಯೇನ ಸಹೇತಾ' ಸೂತ್ರದಿಂದ ಮಾಡಿದ ಸಂಜ್ಞೆಗಳಿಗೆ **ಪ್ರತ್ಯಾಹಾರಗಳೆಂದು** ಹೆಸರು. '**ಪ್ರತ್ಯಾಹ್ರಿಯಂತೇ ವರ್ಣಾಃ ಯತ್ರ**' ಎಂಬ ವ್ಯುತ್ಪತ್ತಿಯಿಂದ ಅನೇಕ ವರ್ಣಗಳನ್ನು ಸಂಕ್ಷೇಪದಿಂದ ಹೇಳುವುದೆಂದರ್ಥ. ಅ ಇ ಉ ಎಂದು ಹೇಳಲು ಅಣ್ ಎಂದರೆ ಲಘುವಾಗಿ ಹೇಳಿದಂತಾಗುತ್ತದೆ. ಹೀಗೆ ಪ್ರತ್ಯಾಹಾರಗಳನ್ನು ಅನೇಕ ಮಾಡಬಹುದಾದರೂ ವ್ಯಾಕರಣ ಶಾಸ್ತ್ರದಲ್ಲಿ ಬಳಕೆಯಲ್ಲಿರುವವುಗಳು ನಲವತ್ತೆರಡು ಮಾತ್ರ. ಣಕಾರದಿಂದ ಒಂದು ಅಣ್ ಎಂದಾಗುತ್ತದೆ. ಅಕ್ ಇಕ್ ಉಕ್ ಎಂದು ಕಕಾರದಿಂದ ಮೂರು, ಏಙ್ ಎಂದು ಙಕಾರದಿಂದ ಒಂದು ಮಾತ್ರ. ಚಕಾರದಿಂದ ಅಚ್ ಇಚ್ ಏಚ್ ಐಚ್, ಎಂದು ನಾಲ್ಕು. ಟಕಾರದಿಂದ ಅಟ್ ಒಂದೇ ಆಗುತ್ತದೆ. ಪರಣಕಾರದಿಂದ ಅಣ್ ಇಣ್ ಯಣ್, ಎಂದು ಮೂರು. ಮಕಾರದಿಂದ ನಾಲ್ಕು ಅಮ್, ಯಮ್, ಞಮ್ ಙಮ್, ಞಕಾರದಿಂದ ಒಂದು ಯಞ್. ಷಕಾರದಿಂದ ಎರಡು. ಝಷ್, ಭಷ್. ಶಕಾರದಿಂದ ಆರು. ಅಶ್, ಹಶ್, ವಶ್, ಝಶ್, ಜಶ್, ಬಶ್. ವಕಾರದಿಂದ ಒಂದು ಛವ್. ಯಕಾರದಿಂದ ಐದು. ಯಯ್, ಮಯ್, ಝಯ್, ಖಯ್, ಚಯ್, ರೇಫದಿಂದ ಐದು. ಯರ್, ಝರ್, ಖರ್, ಚರ್, ಶರ್. ಲಕಾರದಿಂದ ಆರು ಅಲ್, ಹಲ್, ವಲ್, ರಲ್,

ಝಲ್, ಹಲ್. ಹೀಗೆ ನಲವತ್ತೆರಡು ಪ್ರತ್ಯಾಹಾರಗಳು ಮಾತ್ರ ಉಪಯೋಗವನ್ನು ಹೊಂದುತ್ತವೆ. ಅಚ್ ಎಂದರೆ ಸ್ವರದ ಒಂಭತ್ತು ವರ್ಣಗಳಿಗೂ ಹಲ್ ಎಂದರೆ ವ್ಯಂಜನ ಮೂವತ್ತಮೂರು ವರ್ಣಗಳಿಗೂ ಸಂಜ್ಞೆಯಾಗುತ್ತದೆ. ಈಗ ಸ್ವರಗಳ ವಿಭಾಗವನ್ನು ಸೂತ್ರದಿಂದ ವಿವರಿಸುತ್ತಾನೆ.

(ಹ್ರಸ್ವ, ದೀರ್ಘ ಪ್ಲುತ ಸಂಜ್ಞಾ ವಿಧಾಯಕ ಸೂತ್ರ)

## ೫. ಊಕಾಲೋಽಜ್ಝ್ರಸ್ವದೀರ್ಘಪ್ಲುತಃ ॥೧-೨-೨೭॥

ಉಶ್ಚ ಊಶ್ಚ ಊ೩ಶ್ಚ ವಃ । ವಾಂ ಕಾಲ ಇವ ಕಾಲೋ ಯಸ್ಯ ಸೋಽಚ್ ಕ್ರಮಾತ್ ಹ್ರಸ್ವ ದೀರ್ಘ ಪ್ಲುತಸಂಜ್ಞಃ ಸ್ಯಾತ್ ॥

ಊಕಾಲಃ, ಅಚ್, ಹ್ರಸ್ವದೀರ್ಘಪ್ಲುತಃ, ಎಂದು ಮೂರು ಪದಗಳುಳ್ಳ ಸೂತ್ರ. ಊಕಾಲವೆಂಬುವಕ್ಕೆ ವಃ ಕಾಲ ಇವ ಕಾಲೋ, ಯಸ್ಯ ಸಃ ಊಕಾಲಃ ಎಂದು ವಿಗ್ರಹವಾಕ್ಯ. ವೃತ್ತಿಯಲ್ಲಿ ಬರೆದದು ಫಲಿತಾರ್ಥ ಮಾತ್ರ. ವಿಗ್ರಹವಲ್ಲ. ವಃ ಎಂದರೆ ಉಕಾರದ ಬಹುವಚನ. ಅದನ್ನು ಸಡೆಸಿದರೆ ಉಃ ಊ ವಃ ಎಂದಾಗುತ್ತದೆ. ಹ್ರಸ್ವಶ್ಚ ದೀರ್ಘಶ್ಚ ಪ್ಲುತಶ್ಚ ಹ್ರಸ್ವದೀರ್ಘಪ್ಲುತಃ ಇಲ್ಲಿ ಎರಡು ರೀತಿ ಸಮಾಸ ಮಾಡಿದರೂ ಈ ರೂಪವಾಗುವುದಿಲ್ಲ. ಇತರೇತರ ಯೋಗದ್ವಂದ್ವ ಸಮಾಸದಲ್ಲಿ ಏಕವಚನತಪ್ಪಾಗುತ್ತದೆ. ಸಮಾಹಾರ ದ್ವಂದ್ವದಲ್ಲಿ ಏಕವಚನ ಬರುವುದಾದರೂ ನಪುಂಸಕವಾಗಬೇಕಾಗುತ್ತದೆ. ಇಂಥಾ ಸಂದರ್ಭಗಳಲ್ಲಿ ಆರ್ಷ ಪ್ರಯೋಗವೆಂದು ಒಂದೇ ಸಮಾಧಾನವಲ್ಲದೆ ಬೇರೆ ಉತ್ತರವಿಲ್ಲ. ಇಲ್ಲಿ ಉ ಊ ಊ೩ ಎಂದು ಕೋಳಿಯ ಕೂಗಿನ ಅನುಕರಣೆಯೆಂದು ತಿಳಿಯಬೇಕು. ಇಲ್ಲವಾದರೆ ಉಕಾರಕ್ಕೆ ಸಾಮ್ಯ ಸಮಂಜಸವಾಗುವುದಿಲ್ಲ. ಆದುದರಿಂದ ಒಂದು ಮಾತ್ರೆಯುಳ್ಳ ಎರಡು ಮಾತ್ರೆಯುಳ್ಳ, ಮೂರು ಮಾತ್ರೆಯುಳ್ಳ ಕೋಳಿಕೂಗಿನ ಅನುಕರಣೆ ಸಮಂಜಸವಾಗಿದೆ. ಆಗ ಒಂದು ಮಾತ್ರೆಯುಳ್ಳ ಉ ಎಂಬ ಕೂಗಿನ ಅನುಕರಣೆಯನ್ನು ಉಚ್ಚರಿಸಲು ಎಷ್ಟು ಸಮಯ ಬೇಕಾಗುತ್ತದೆಯೋ ಅಷ್ಟು ಸಮಯದಿಂದ ಉಚ್ಚರಿಸುವ ಸ್ವರಕ್ಕೆ ಹ್ರಸ್ವವೆಂದೂ, ಹೀಗೆಯೇ ಎರಡು ಮಾತ್ರೆಯುಳ್ಳ ಊ ಎಂಬುದಕ್ಕೆ ಬೇಕಾಗುವ ಸಮಯದಷ್ಟು ಸಮಯವುಳ್ಳದ್ದಕ್ಕೆ ದೀರ್ಘವೆಂದೂ, ಮೂರು ಮಾತ್ರೆಯುಚ್ಚಾರಣೆಯಷ್ಟು ಸಮಯವುಳ್ಳದಕ್ಕೆ ಪ್ಲುತವೆಂದೂ ಸಂಜ್ಞೆ ಬರುತ್ತದೆ ಎಂದು ಸೂತ್ರಾರ್ಥವಾಗುತ್ತದೆ ಒಂದು ಮಾತ್ರೆಯುಳ್ಳದ್ದಕ್ಕೆ ಹ್ರಸ್ವವೆಂದೂ, ಎರಡು ಮಾತ್ರೆಯುಳ್ಳದಕ್ಕೆ ದೀರ್ಘವೆಂದೂ, ಮೂರು ಮಾತ್ರೆಯುಳ್ಳದ್ದಕ್ಕೆ ಪ್ಲುತವೆಂದೂ ಸ್ವರಗಳನ್ನು ಮೂರು ವಿಧಗಳಾಗಿ ವಿಂಗಡಿಸಿದಂತಾಗುತ್ತದೆ. ವ್ಯಂಜನಗಳಿಗೆ ಅರ್ಧಮಾತ್ರಾ ಕಾಲವಿರುವುದರಿಂದ ಅವುಗಳಿಗೆ ಈ ವಿಭಾಗವಿಲ್ಲ.

ಈ ಹ್ರಸ್ವ, ದೀರ್ಘ, ಪ್ಲುತಗಳು ತಿರುಗಿ ಒಂದೊಂದೂ ಪ್ರತ್ಯೇಕ ಮೂರು ವಿಧವಾಗುತ್ತದೆ ಎಂದು ಹೇಳುತ್ತಾನೆ.

**ಸ ಪ್ರತ್ಯೇಕಮುದಾತ್ತಾದಿ ಭೇದೇನ ತ್ರಿಧಾ ॥**

ಹೀಗೆ ಹ್ರಸ್ವಾದಿಸಂಜ್ಞೆಯನ್ನು ಹೊಂದಿದ ಸ್ವರವು ಪ್ರತ್ಯೇಕವಾಗಿ ಒಂದೊಂದು ಉದಾತ್ತ ಅನುದಾತ್ತ, ಸ್ವರಿತ, ವೆಂಬ ಭೇದದಿಂದ ಮೂರುವಿಧವಾಗುತ್ತದೆ. ಆಗ ಒಂದೊಂದೂ ಒಂಭತ್ತುವಿಧಗಳಾಗುತ್ತವೆ. ಉದಾತ್ತಾದಿಸ್ವರೂಪವನ್ನು ಹೇಳುತ್ತಾನೆ.

(ಉದಾತ್ತಸಂಜ್ಞೆ ಹೇಳುವ ಸೂತ್ರ)

## ೬. ಉಚ್ಚೈರುದಾತ್ತಃ ॥ ೧-೨-೨೯ ॥

**ಉಚ್ಚೈಃ ಉದಾತ್ತಃ** ॥ ಎರಡುಪದವುಳ್ಳ ಸೂತ್ರ. ವರ್ಣಗಳ ವಿವರಣ ಪ್ರಕರಣವಾದುದರಿಂದ ಇಲ್ಲಿ **ಉಚ್ಚೈಃ** ಅಂದರೆ ವರ್ಣೋತ್ಪತ್ತಿಸ್ಥಾನಗಳ ಮೇಲ್ಭಾಗವೆಂದರ್ಥವಾಗುತ್ತದೆ. ತಾಲುವೇ ಮೊದಲಾದ ಸ್ಥಾನಗಳ ಮೇಲ್ಭಾಗದಲ್ಲಿ ಉಚ್ಚರಿಸಲ್ಪಟ್ಟ ಸ್ವರಗಳಿಗೆ ಉದಾತ್ತವೆಂದು ಹೆಸರು.

(ಅನುದಾತ್ತಸಂಜ್ಞೆ ಹೇಳುವ ಸೂತ್ರ.)

## ೭. ನೀಚೈರನುದಾತ್ತಃ ॥ ೧-೨-೩೦ ॥

**ನೀಚೈಃ ಅನುದಾತ್ತಃ** ॥ ಎರಡು ಪದಗಳುಳ್ಳ ಸೂತ್ರ. ಹಿಂದಿನಂತೆಯೇ ನೀಚೈಃ ಎಂದರೆ ಕೆಳಭಾಗವೆಂದರ್ಥ. ತಾಲ್ವಾದಿಸ್ಥಾನಗಳ ಕೆಳಭಾಗದಲ್ಲಿ ಉಚ್ಚರಿಸಲ್ಪಡುವ ಸ್ವರಗಳಿಗೆ ಅನುದಾತ್ತವೆಂದು ಹೆಸರು.

(ಸ್ವರಿತಸಂಜ್ಞೆ ಹೇಳುವ ಸೂತ್ರ)

## ೮. ಸಮಾಹಾರಃ ಸ್ವರಿತಃ ॥ ೧-೨-೩೧ ॥

ಎರಡು ಪದವುಳ್ಳ ಸೂತ್ರ. ಹಿಂದಿನ ಎರಡು ಸೂತ್ರಗಳಿಂದ ಉದಾತ್ತ ಅನುದಾತ್ತವೆಂಬ ಎರಡು ಪದಗಳು ಅನುವೃತ್ತವಾಗುತ್ತವೆ. ಇಲ್ಲಿ ಅರ್ಥಸಾಮಂಜಸ್ಯಕ್ಕೋಸ್ಕರ ಅವುಗಳ ಧರ್ಮವನ್ನು ತೆಗೆದುಕೊಳ್ಳಬೇಕು. ಯಾವ ಸ್ವರದಲ್ಲಿ ಉದಾತ್ತತ್ವ ಅನುದಾತ್ತತ್ವ ರೂಪಗಳಾದ ವರ್ಣ ಧರ್ಮಗಳು ಸಂಮಿಶ್ರಣವನ್ನು ಹೊಂದುತ್ತವೆಯೋ ಆ ಸ್ವರವು ಸ್ವರಿತವಾಗುತ್ತದೆ. ಅರ್ಧಭಾಗ ಉದಾತ್ತಧರ್ಮದಿಂದಲೂ ಉಳಿದ ಅರ್ಧಭಾಗ ಅನುದಾತ್ತ ಧರ್ಮದಿಂದಲೂ ಕೂಡಿರುವುದೇ

ಸ್ವರಿತಲಕ್ಷಣ. ಸ್ವರ ನಿಯಮ ಲೋಕದಲ್ಲಿಲ್ಲವಾದುದರಿಂದ ವೈದಿಕಶಬ್ದಗಳೇ ಉದಾಹರಣೆಯಾಗುತ್ತವೆ. ಇವು ಸಿದ್ಧಾಂತಕೌಮುದಿಯಲ್ಲಿ ವಿವೃತವಾಗಿವೆ. ಹೀಗೆ ಒಂಭತ್ತು ವಿಧಗಳಾದ ಮೇಲೆ ಪುನಃ ಪ್ರತ್ಯೇಕ ಎರಡು ಭೇದಗಳನ್ನು ಹೇಳುತ್ತಾನೆ.

**ಸ ನವವಿಧೋಽಪಿ ಪ್ರತ್ಯೇಕಮನುನಾಸಿಕಾನನುನಾಸಿಕತ್ವಾಭ್ಯಾಂ ದ್ವಿಧಾ॥**

ಹೀಗೆ ಉದಾತ್ತಾದಿ ಭೇದವನ್ನು ಹೊಂದಿ ಒಂದೊಂದು ಸ್ವರವು ಒಂಭತ್ತು ವಿಧವಾದರೂ ತಿರುಗಿ ಒಂದೊಂದು ಪ್ರತ್ಯೇಕವಾಗಿ ಅನುನಾಸಿಕತ್ವ, ಅನನುನಾಸಿಕತ್ವ ಧರ್ಮಗಳಿಂದ ಎರಡು ವಿಧವಾಗುತ್ತದೆ. ಆಗ ಒಂದು ಸ್ವರವು ಹದಿನೆಂಟು ವಿಧವಾಗುತ್ತದೆ. ಅನುನಾಸಿಕವೆಂದರೇನು ಎಂಬುದನ್ನು ಸೂತ್ರದಿಂದ ವಿವರಿಸುತ್ತಾನೆ.

(ಅನುನಾಸಿಕ ಸಂಜ್ಞೆ ಹೇಳುವ ಸೂತ್ರ)

**೯. ಮುಖನಾಸಿಕಾವಚನೋಽನುನಾಸಿಕಃ ॥೧-೧-೮॥**

**ಮುಖಸಹಿತನಾಸಿಕಯೋಚ್ಚಾರ್ಯಮಾಣೋ ವರ್ಣೋಽನುನಾಸಿಕಸಂಜ್ಞಃ ಸ್ಯಾತ್ ।**

**ಮುಖನಾಸಿಕಾವಚನಃ, ಅನುನಾಸಿಕಃ** ॥ ಎರಡು ಪದಗಳುಳ್ಳ ಸೂತ್ರ. ಮುಖಸಹಿತಾ ನಾಸಿಕಾ, ಮುಖನಾಸಿಕಾ. (ಮಧ್ಯಮಪದಲೋಪಸಮಾಸ. ಹೀಗೆ ಮಾಡದೆ ದ್ವಂದ್ವ ಮಾಡಿದರೆ ಹ್ರಸ್ವ ಬರಬೇಕಾಗುತ್ತದೆ.) **ಉಚ್ಯತೇ (ಉಚ್ಚಾರ್ಯತೇ) ಇತಿ ವಚನಃ** (ವಚ್ ಧಾತುವಿಗೆ ಕರ್ಮಣಿಯಲ್ಲಿ ಲ್ಯುಟ್ ಪ್ರತ್ಯಯ. ಲ್ಯುಟಿಗೆ ಅನಾದೇಶ) **ಮುಖನಾಸಿಕಯಾ ವಚನಃ ಮುಖನಾಸಿಕಾ ವಚನಃ** । ಇಲ್ಲಿ ಮುಖವೆಂದರೆ ವರ್ಣೋತ್ಪತ್ತಿ ಸ್ಥಾನಗಳು ಎಂದರ್ಥ. ಆಗ ಸೂತ್ರಾರ್ಥ ವರ್ಣೋತ್ಪತ್ತಿ ಸ್ಥಾನಗಳಿಂದ ಕೂಡಿಕೊಂಡ ಮೂಗಿನಿಂದ ಉಚ್ಚರಿಸಲ್ಪಡುವ ವರ್ಣಕ್ಕೆ ಅನುನಾಸಿಕವೆಂಬ ಸಂಜ್ಞೆ ಬರುತ್ತದೆ. ಹೀಗೆ ಅನುನಾಸಿಕ ಅನನುನಾಸಿಕವೆಂದು ವಿಂಗಡಿಸಿದ ಮೇಲೆ ಎಲ್ಲಾ ಸ್ವರಗಳು ಹದಿನೆಂಟು ವಿಧಗಳಾಗಬೇಕಾಗುತ್ತದೆ ಆದರೆ ಒಂಭತ್ತು ಸ್ವರಗಳಿಗೆ ಹದಿನೆಂಟು ಭೇದಗಳಿಲ್ಲ. ಆದುದರಿಂದ ಯಾವಯಾವ ಸ್ವರಕ್ಕೆ ಎಷ್ಟು ಭೇದಗಳಾಗುತ್ತವೆ ಎಂಬುವನ್ನು ಸ್ಪಷ್ಟಪಡಿಸುತ್ತಾನೆ.

**ತದಿತ್ಥಮ್— ಅ ಇ ಉ ಋ ಏಷಾಂ ವರ್ಣಾನಾಂ ಪ್ರತ್ಯೇಕಮಷ್ಟಾದಶ ಭೇದಾಃ । ಌವರ್ಣಸ್ಯ ದ್ವಾದಶ, ತಸ್ಯ ದೀರ್ಘಾಭಾವಾತ್ । ಏಚಾಮಪಿ ದ್ವಾದಶ, ತೇಷಾಂ ಹ್ರಸ್ವಾಭಾವಾತ್ ।**

ಇದುವರೆಗೆ ಹೇಳಿದ ಸ್ವರಭೇದಗಳು ಹೀಗೆ ವ್ಯವಸ್ಥಿತವಾಗಿವೆ. ಅ ಇ ಉ ಋ, ಈ ನಾಲ್ಕುವರ್ಣಗಳಿಗೆ ಮಾತ್ರ ಪ್ರತ್ಯೇಕವಾಗಿ ಹದಿನೆಂಟು ಭೇದಗಳಾಗುತ್ತವೆ.

ಅ ಎಂಬುದೊಂದು ಮೊದಲು ಹ್ರಸ್ವ ದೀರ್ಘ, ಪ್ಲುತವೆಂದೂ ಮೂರುವಿಧವಾಗಿ ಅದು ಒಂದೊಂದೂ ಉದಾತ್ತ, ಅನುದಾತ್ತ, ಸ್ವರಿತವೆಂದು ಮೂರು ರೀತಿಯಾಗುವುದರಿಂದ ಒಂಭತ್ತಾಗಿಯೂ, ಈ ಒಂಭತ್ತು ಒಂದೊಂದೂ ಅನುನಾಸಿಕ, ಅನನುನಾಸಿಕವೆಂದು ಎರಡುವಿಧವಾಗುವುದರಿಂದ ಹದಿನೆಂಟುತರವಾಯಿತು. ಹೀಗೆ ಉಳಿದ ಮೂರೂ ಆಗುತ್ತವೆ. ಌಕಾರಕ್ಕಾದರೋ ಹನ್ನೆರಡುಪ್ರಕಾರ ಮಾತ್ರ. ಅದಕ್ಕೆ ದೀರ್ಘವಿಲ್ಲ. ಇದಕ್ಕೆ **ಹೋತೣಕಾರವೆಂಬ** ಭಾಷ್ಯದ ಉದಾಹರಣೆಯೇ ಪ್ರಮಾಣ. **ಹೋತೃ**+ಌಕಾರವೆಂದಿರುವಾಗ ಸವರ್ಣದೀರ್ಘಸಂಧಿಯಾಗುತ್ತದೆ. ಇದಕ್ಕೆ ದೀರ್ಘವಿದ್ದಿದ್ದರೆ ೠಕಾರವನ್ನೇಕೆ ಹೇಳಬೇಕು. ಆದುದರಿಂದ ಌಕಾರಕ್ಕೆ ದೀರ್ಘವಿಲ್ಲವೆಂದು ತಿಳಿಯಬೇಕು. ಆಗ ಹ್ರಸ್ವದ ಆರುಭೇದಗಳೂ ಪ್ಲುತದ ಆರು ಭೇದಗಳೂ ಸೇರಿ ಹನ್ನೆರಡು ಮಾತ್ರವಾಗುತ್ತವೆ. ಹೀಗೆ ಏಚ್ ಅಂದರೆ ಏ ಓ ಐ ಔ ಇವುಗಳಿಗೂ ಪ್ರತ್ಯೇಕವಾಗಿ ಹನ್ನೆರಡೇ ಭೇದಗಳು. ಇವುಗಳಿಗೆ ಹ್ರಸ್ವವಿಲ್ಲದಿರುವುದೇ ಕಾರಣ. ಆಗ ಅವರ ಆರು ಭೇದಗಳು ಕಡಿಮೆಯಾಗುತ್ತವೆ. ಮಾಹೇಶ್ವರ ಸೂತ್ರದಲ್ಲಿ ದೀರ್ಘವಾಗಿ ಉಚ್ಚರಿಸಿರುವುದೇ ಹ್ರಸ್ವವಿಲ್ಲವೆಂದು ಸೂಚಿಸುತ್ತದೆ.

ಮುಂದೆ ಕಾರ್ಯವಿಧಾಯಕ ಸೂತ್ರಗಳಲ್ಲಿ ಅಕಾರಾದಿಗಳು ನಿರ್ದಿಷ್ಟವಾದರೆ ಅವುಗಳಭೇದಗಳಿಗೂ ಗ್ರಹಣವಿದೆಯೆಂದು ಹೇಳುತ್ತಾನೆ. ಅದು ಹೇಗೆ? ಯಾವುದು ನಿರ್ದಿಷ್ಟವಾಗಿದೆಯೋ ಅದಕ್ಕೆ ಮಾತ್ರ ಕಾರ್ಯಹೇಳುವುದು ಸಹಜ. ಅದಕ್ಕೋಸ್ಕರ ಅ ಎಂದರೆ ಅದು ತನ್ನ ಹದಿನೆಂಟು ಭೇದಗಳನ್ನೂ ತೆಗೆದುಕೊಳ್ಳುತ್ತದೆಂದು ತಿಳಿಸಲು **ಅಣುದಿತ್ಸವರ್ಣಸ್ಯ ಚಾಪ್ರತ್ಯಯಃ** ಎಂಬ ಸೂತ್ರವನ್ನು ಹೇಳುತ್ತಾನೆ. ಅಲ್ಲಿ ಸವರ್ಣ ಪದದ ಜ್ಞಾನಬೇಕಾದುದರಿಂದ ಮೊದಲು ಸವರ್ಣವನ್ನು ತಿಳಿಸುವ ಸೂತ್ರವನ್ನು ವಿವರಿಸುತ್ತಾನೆ.

(ಸವರ್ಣಸಂಜ್ಞೆ ಹೇಳುವಸೂತ್ರ)

## ೧೦. ತುಲ್ಯಾಸ್ಯಪ್ರಯತ್ನಂ ಸವರ್ಣಮ್ ॥ ೧-೧-೯ ॥

**ತಾಲ್ವಾದಿಸ್ಥಾನಮಾಭ್ಯಂತರಪ್ರಯತ್ನಶ್ಚೇತ್ಯೇತದ್ದ್ವಯಂ ಯಸ್ಯಯೇನ ತುಲ್ಯಂ ತನ್ಮಿಥಃ ಸವರ್ಣಸಂಜ್ಞಂ ಸ್ಯಾತ್ ॥**

**ತುಲ್ಯಾಸ್ಯಪ್ರಯತ್ನಂ, ಸವರ್ಣಂ** ॥ ದ್ವಿಪದಸೂತ್ರ. **ಅಸ್ಯಂತಿ (ಉಚ್ಚಾರಯಂತಿ) ವರ್ಣಾನ್ ಅನೇನ ಇತಿ ಆಸ್ಯಂ** । ಯಾವುದರಿಂದ ಉಚ್ಚರಿಸಲ್ಪಡುತ್ತವೆಯೋ, (ಇದರಿಂದ ವರ್ಣಗಳನ್ನು ಉಚ್ಚರಿಸುತ್ತಾರೆ.) ಅದು ಆಸ್ಯ, **ಆಸ್ಯೇ ಭವಂ ಆಸ್ಯಂ** । ಮುಖದಲ್ಲಿರುವ ವರ್ಣೋತ್ಪತ್ತಿಸ್ಥಾನಗಳಾದ ತಾಲ್ವಾದಿಗಳು. **ಪ್ರಕೃಷ್ಟೋ ಯತ್ನಃ ಪ್ರಯತ್ನಃ** । ಆಭ್ಯಂತರಪ್ರಯತ್ನವೇ ಉತ್ಕೃಷ್ಟವಾದ

ಯತ್ನ. ಆಸ್ಯಂ ಚ ಪ್ರಯತ್ನಶ್ಚ ಆಸ್ಯ ಪ್ರಯತ್ನೌ । ತುಲ್ಯೌ ಆಸ್ಯ ಪ್ರಯತ್ನೌ ಯಸ್ಯ ತತ್ ತುಲ್ಯಾಸ್ಯಪ್ರಯತ್ನಮ್ ॥ ಸಮಾನವಾದ ತಾಲ್ವಾದಿಸ್ಥಾನವೂ ಆಭ್ಯಂತರ ಪ್ರಯತ್ನವೂ ಈ ಎರಡು ಯಾವುದಕ್ಕೆ ಯಾವುದರೊಡನೆ ಸಾಮ್ಯವಿದೆಯೋ ಅವುಗಳು ಪರಸ್ಪರ ಸವರ್ಣಸಂಜ್ಞೆಯನ್ನು ಹೊಂದುತ್ತವೆ. ಯಾವ ವರ್ಣಗಳಿಗೆ ಒಂದೇ ಸ್ಥಾನವೂ ಒಂದೇ ಪ್ರಯತ್ನವಿರುತ್ತದೆಯೋ ಅವುಗಳು ಪರಸ್ಪರ ಸವರ್ಣಗಳಾಗುತ್ತವೆ. ಪ್ರಕೃತಅಕಾರದ ಹದಿನೆಂಟು ಭೇದಗಳಿಗೆ ಒಂದೇ ಕಂಠಸ್ಥಾನವೂ ವಿವೃತವೆಂಬ ಆಭ್ಯಂತರಪ್ರಯತ್ನವೂ ಇರುವುದರಿಂದ ಅಕಾರದ ಸವರ್ಣ ಹದಿನೆಂಟೂ ಆಗುತ್ತವೆ. ಹೀಗೆ ಹೇಳಿದರೆ ಋಕಾರ ಮತ್ತು ಌಕಾರಗಳಿಗೆ ಬೇರೆ ಬೇರೆ ಸ್ಥಾನಗಳನ್ನು ಮುಂದೆ ಹೇಳುವುದರಿಂದ ಅವುಗಳಿಗೆ ಸವರ್ಣಸಂಜ್ಞೆ ಬಾರದೇ ಹೋಗಬೇಕಾಗುತ್ತದೆ. ಅವುಗಳ ಸವರ್ಣದಿಂದ ಕಾರ್ಯವಾಗಬೇಕು. ಅದಕ್ಕೋಸ್ಕರ ವಾರ್ತಿಕಕಾರರು ಸೂತ್ರ ರಚಿಸಿರುವುದನ್ನು ಹೇಳುತ್ತಾನೆ.

**( ವಾ ೧) ಋಌವರ್ಣಯೋರ್ಮಿಥಃ ಸಾವರ್ಣ್ಯಂ ವಾಚ್ಯಮ್ ॥**

ಇದಕ್ಕೆ ವಾರ್ತಿಕಸೂತ್ರವೆಂದು ಹೆಸರು. " **ಉಕ್ತಾನುಕ್ತದುರುಕ್ತಚಿಂತನಾತ್ಮಕಂ ವಾಕ್ಯಂ ವಾರ್ತಿಕಂ** " ಎಂದು ವಾರ್ತಿಕಲಕ್ಷಣ. ಪಾಣಿನಿಯು ಹೇಳಿದ ಸೂತ್ರದಲ್ಲಿ ಸಾಮಂಜಸ್ಯ ಹೇಳದೇ ಇರುವ ಅಂಶ, ಅಧಿಕವಾಗಿರುವ ಅಂಶ, ಇವುಗಳನ್ನು ವಿಚಾರಮಾಡುವ ವಾಕ್ಯಕ್ಕೆ ವಾರ್ತಿಕವೆಂದು ಹೆಸರು. ' **ತುಲ್ಯಾಸ್ಯಪ್ರಯತ್ನಂ ಸವರ್ಣಂ** ' ಎಂಬಲ್ಲಿ ಹೇಳಿದ ಸವರ್ಣಸಂಜ್ಞೆಯು ಸಾಕಾಗಲಿಲ್ಲ. ಆದುದರಿಂದ ಅಧಿಕವಾಗಿ ಸವರ್ಣಸಂಜ್ಞೆಯು ಇಲ್ಲಿ ಹೇಳಿದೆ. ಋಌಕಾರಗಳಿಗೆ ಭಿನ್ನಸ್ಥಾನವಾದರೂ ಪರಸ್ಪರ ಸವರ್ಣಸಂಜ್ಞೆಯನ್ನು ಹೇಳಬೇಕೆಂದು ವಾರ್ತಿಕದ ಅರ್ಥ. ಆಗ ಋ ಎಂದರೆ ತನ್ನ ಹದಿನೆಂಟಕ್ಕಲ್ಲದೆ ಌಕಾರದ ಹನ್ನೆರಡಕ್ಕೂ ಸವರ್ಣವಾಗುತ್ತದೆ.

ಸಮಾನವಾದ ಸ್ಥಾನವೂ ಸಮಾನವಾದ ಆಭ್ಯಂತರ ಪ್ರಯತ್ನವೂ ಎಂದು ಸೂತ್ರದಲ್ಲಿ ಹೇಳಿದೆ. ಸ್ಥಾನಪ್ರಯತ್ನಗಳನ್ನು ತಿಳಿಯುವುದು ಹೇಗೆ? ಅದಕ್ಕೋಸ್ಕರ ಪಾಣಿನಿಯ ಶಿಕ್ಷಾವಚನವನ್ನು ಸಂಗ್ರಹವಾಗಿ ಹೇಳಲು ಆರಂಭಿಸುತ್ತಾನೆ—

**ಅಕುಹವಿಸರ್ಜನೀಯಾನಾಂ ಕಂಠಃ । ಇಚುಯಶಾನಾಂ ತಾಲು । ಋಟುರಷಾಣಾಂ ಮೂರ್ಧಾ । ಌತುಲಸಾನಾಂ ದಂತಾಃ । ಉಪೂಪಧ್ಮಾನೀಯಾನಾಮೋಷ್ಠೌ । ಞಮಙಣನಾನಾಂ ನಾಸಿಕಾ ಚ । ಏದೈತೋಃ ಕಂಠತಾಲು । ಓದೌತೋಃ ಕಂಠೋಷ್ಠಮ್ । ವಕಾರಸ್ಯ ದಂತೋಷ್ಠಮ್ । ಜಿಹ್ವಾಮೂಲೀಯಸ್ಯ ಜಿಹ್ವಾಮೂಲಮ್ । ನಾಸಿಕಾ ಅನುಸ್ವಾರಸ್ಯ ॥**

ಇದು ವರ್ಣೋತ್ಪತ್ತಿಸ್ಥಾನಕೋಷ್ಟಕ. ಅ ಅಂದರೆ ಲೋಕಪ್ರಸಿದ್ಧಿಯಿಂದ ಅದರ ಹದಿನೆಂಟು ಭೇದಗಳನ್ನೂ ಕು ಅಂದರೆ ಕವರ್ಗವನ್ನೂ ತೆಗೆದುಕೊಳ್ಳಬೇಕು. ಅಕಾರದ ಹದಿನೆಂಟು ಭೇದಗಳಿಗೂ, ಕವರ್ಗಕ್ಕೂ ಹಕಾರ ಮತ್ತು ವಿಸರ್ಗಕ್ಕೆ ಕಂಠಸ್ಥಾನ. ಇಕಾರದ ಹದಿನೆಂಟು ಭೇದಗಳಿಗೂ ಚವರ್ಗಕ್ಕೂ ಯಕಾರ ಶಕಾರಗಳಿಗೂ ತಾಲುಸ್ಥಾನ (ಹಲ್ಲಿನ ಮೇಲ್ಭಾಗ). ಋಕಾರದ ಹದಿನೆಂಟು ಪ್ರಕಾರಗಳಿಗೂ ಟವರ್ಗಕ್ಕೂ ರೇಫಷಕಾರಗಳಿಗೂ ಮೂರ್ಧಾಸ್ಥಾನ (ತಾಲುವಿನ ಮೇಲ್ಭಾಗ). ಌಕಾರದ ಹನ್ನೆರಡು ಭೇದಗಳಿಗೂ ತವರ್ಗಕ್ಕೂ ಲಸಗಳಿಗೂ ದಂತಸ್ಥಾನ. ಉಕಾರದ ಹದಿನೆಂಟು ಭೇದಗಳಿಗೂ ಪವರ್ಗಕ್ಕೂ ಉಪಧ್ಮಾನೀಯಕ್ಕೂ (ಈ ಸಂಜ್ಞೆಯನ್ನು ಮುಂದೆ ವಿವರಿಸುತ್ತಾನೆ- ೲಪ ೲಪ ಇದರ ಸ್ವರೂಪ) ಓಷ್ಠಸ್ಥಾನ (ತುಟಿ). ಇನ್ನು ಎರಡೆರಡು ಸ್ಥಾನವುಳ್ಳ ವರ್ಣಗಳನ್ನು ಹೇಳುತ್ತಾನೆ. ಞಮಙಣನ ಈ ಐದು ವರ್ಣಗಳಿಗೆ ಹಿಂದೆ ಹೇಳಿದ ಆಯಾಯ ಸ್ಥಾನಗಳಲ್ಲದೆ ನಾಸಿಕಸ್ಥಾನವೂ ಹೆಚ್ಚಾಗಿದೆ. ಏಕಾರ ಐಕಾರಗಳಿಗೆ ಕಂಠ ಮತ್ತು ತಾಲುಸ್ಥಾನ. ಓಔಗಳಿಗೆ ಕಂಠ ಮತ್ತು ಓಷ್ಠಸ್ಥಾನಗಳು. ವಕಾರಕ್ಕೆ ದಂತ ಮತ್ತು ಓಷ್ಠಸ್ಥಾನ. ಜಿಹ್ವಾಮೂಲೀಯಕ್ಕೆ (ಇದನ್ನೂ ಮುಂದೆ ವಿವರಿಸುತ್ತಾನೆ. ೱಕ ೱಖವೆಂದು ಇದರ ಸ್ವರೂಪ.) ನಾಲಿಗೆಯ ಬುಡ. ಅನುಸ್ವಾರಕ್ಕೆ ನಾಸಿಕಸ್ಥಾನ. ಹೀಗೆ ಇವುಗಳು ವರ್ಣಗಳು ಹುಟ್ಟುವ ಸ್ಥಾನಗಳು. ಇನ್ನು ಪ್ರಯತ್ನಗಳನ್ನು ವಿವರಿಸುತ್ತಾನೆ.

ಯತ್ನೋ ದ್ವಿಧಾ— ಆಭ್ಯಂತರೋ ಬಾಹ್ಯಶ್ಚ । ಆದ್ಯಃ ಪಂಚಧಾ-
ಸ್ಪೃಷ್ಟ + ಈಷತ್ಸ್ಪೃಷ್ಟ + ಇಷದ್ವಿವೃತ + ವಿವೃತ + ಸಂವೃತ-
ಭೇದಾತ್ ತತ್ರ ಸ್ಪೃಷ್ಟಂ ಪ್ರಯತನಂ ಸ್ಪರ್ಶಾನಾಮ್ ।
ಈಷತ್ಸ್ಪೃಷ್ಟಮಂತಃಸ್ಥಾನಾಮ್ । ಈಷದ್ವಿವೃತಮೂಷ್ಮಣಾಮ್ ।
ವಿವೃತಂ ಸ್ವರಾಣಾಮ್ । ಹ್ರಸ್ವಸ್ಯಾವರ್ಣಸ್ಯ ಪ್ರಯೋಗೇ
ಸಂವೃತಮ್ । ಪ್ರಕ್ರಿಯಾದಶಾಯಾಂ ತು ವಿವೃತಮೇವ ॥

ಹಿಂದೆ ಪ್ರಕೃಷ್ಟಯತ್ನ ಆಭ್ಯಂತರವೆಂದುದರಿಂದ ಬೇರೆ ಯತ್ನವಿದೆ ಎಂದು ಹೇಳಿದಂತಾಗುತ್ತದೆ. ಆದುದರಿಂದ ಯತ್ನವಿಭಾಗವನ್ನು ಹೇಳುತ್ತಾನೆ. ಮೊದಲು ಆಭ್ಯಂತರ, ಬಾಹ್ಯವೆಂದು ಯತ್ನವು ಎರಡು ವಿಧ. ಮೊದಲನೆಯ ಆಭ್ಯಂತರ ಪ್ರಯತ್ನವು ಸ್ಪೃಷ್ಟ, ಈಷತ್ ಸ್ಪೃಷ್ಟ, ಈಷದ್ವಿವೃತ, ವಿವೃತಸಂವೃತವೆಂದು ಐದು ವಿಧವಾಗಿದೆ. ಈ ಐದರಲ್ಲಿ ಸ್ಪರ್ಶಾಕ್ಷರಗಳಿಗೆ (ಇಲ್ಲಿ ಹೇಳುವ ಸಂಜ್ಞೆಗಳನ್ನು ಮುಂದೆ ವಿವರಿಸುತ್ತಾನೆ.) ಸ್ಪೃಷ್ಟಪ್ರಯತ್ನ. ಅಂತಃಸ್ಥವರ್ಣಗಳಿಗೆ ಈಷತ್ ಸ್ಪೃಷ್ಟಪ್ರಯತ್ನ. ಊಷ್ಮವರ್ಣಗಳಿಗೆ ಈಷದ್ವಿವೃತಪ್ರಯತ್ನ. ಸ್ವರಗಳಿಗೆ ವಿವೃತ ಪ್ರಯತ್ನ. ಹ್ರಸ್ವಾಕಾರಕ್ಕೆ ಮಾತ್ರ ಪ್ರಯೋಗಕಾಲದಲ್ಲಿ ಸಂವೃತಪ್ರಯತ್ನ.

ಪ್ರಕ್ರಿಯಾಕಾಲದಲ್ಲಿ (ಕಾರ್ಯಮಾಡುವಾಗ) ಹಿಂದೆ ಹೇಳಿದ ವಿವೃತಪ್ರಯತ್ನವೇ. ಬಾಹ್ಯಪ್ರಯತ್ನದ ಭೇದಗಳನ್ನು ಹೇಳುತ್ತಾನೆ.

**ಬಾಹ್ಯ ಪ್ರಯತ್ನಸ್ತ್ವೇಕಾದಶಧಾ—ವಿವಾರಃ ಸಂವಾರಃ ಶ್ವಾಸಃ ನಾದೋ ಘೋಷೋಽಘೋಷೋಽಲ್ಪಪ್ರಾಣೋ ಮಹಾಪ್ರಾಣ ಉದಾತ್ತೋಽನುದಾತ್ತಃ ಸ್ವರಿತಶ್ಚೇತಿ ॥ ಖರೋ ವಿವಾರಾಃ ಶ್ವಾಸಾ ಅಘೋಷಾಶ್ಚ । ಹಶಃ ಸಂವಾರಾ ನಾದಾ ಘೋಷಾಶ್ಚ । ವರ್ಗಾಣಾಂ ಪ್ರಥಮತೃತೀಯಪಂಚಮಾ ಯಣಶ್ಚಾಲ್ಪಪ್ರಾಣಾಃ । ವರ್ಗಾಣಾಂ ದ್ವಿತೀಯಚತುರ್ಥೌ ಶಲಶ್ಚ ಮಹಾಪ್ರಾಣಾಃ ॥**

ಬಾಹ್ಯಪ್ರಯತ್ನವು ಹನ್ನೊಂದು ವಿಧವಾಗಿದೆ. ವಿವಾರ, ಸಂವಾರ, ಶ್ವಾಸ, ನಾದ, ಘೋಷ, ಅಘೋಷ, ಅಲ್ಪಪ್ರಾಣ, ಮಹಾಪ್ರಾಣ, ಉದಾತ್ತ, ಅನುದಾತ್ತ ಸ್ವರಿತವೆಂದು ಅವುಗಳ ಹೆಸರು. ಖರ್ ವರ್ಣಗಳಿಗೆ (ಖ, ಫ, ಛ, ಠ, ಥ, ಚ, ಟ, ತ, ಕಪ, ಶ, ಷ, ಸ,) ವಿವಾರ, ಶ್ವಾಸ, ಅಘೋಷವೆಂದು ಮೂರು ಪ್ರಯತ್ನಗಳು. ಹಶ್ ವರ್ಣಗಳಿಗೆ (ಹ, ಯ, ವ, ರ, ಲ, ಞ, ಮ, ಙ, ಣ, ನ, ಝ, ಭ, ಘ, ಢ, ಧ, ಜ, ಬ, ಗ, ಡ, ದ) ಸಂವಾರ, ನಾದ, ಘೋಷವೆಂದು ಮೂರು ಪ್ರಯತ್ನಗಳು. ವರ್ಗದ ಒಂದನೆಯ, ಮೂರನೆಯ, ಐದನೆಯ ವರ್ಣಗಳೂ ಯಣ್ (ಯ, ವ, ರ, ಲ,) ವರ್ಣಗಳೂ ಅಲ್ಪಪ್ರಾಣಪ್ರಯತ್ನವುಳ್ಳವುಗಳು. ವರ್ಗದ ಎರಡನೆಯ ಮತ್ತು ನಾಲ್ಕನೆಯ ವರ್ಣಗಳಿಗೂ, ಶಲ್ ವರ್ಣಗಳಿಗೂ (ಶ, ಷ, ಸ, ಹ) ಮಹಾಪ್ರಾಣ ಪ್ರಯತ್ನವು. ಸ್ವರಗಳಿಗೆ ಉದಾತ್ತ ಅನುದಾತ್ತ ಸ್ವರಿತ ಪ್ರಯತ್ನಗಳು ಹಿಂದೆಯೇ ಹೇಳಿವೆ. ಇದು ಬಾಹ್ಯ ಪ್ರಯತ್ನ ವಿವೇಕ. ಆಯಾಯ ಯತ್ನಗಳನ್ನು ಹೇಳುವಾಗ ಹೇಳಿದ ಸಂಜ್ಞೆಗಳ ಸ್ವರೂಪವನ್ನು ವಿವರಿಸುತ್ತಾನೆ.

**ಕಾದಯೋ ಮಾವಸಾನಾಃ ಸ್ಪರ್ಶಾಃ । ಯಣೋಽನ್ತಸ್ಥಾಃ । ಶಲ ಊಷ್ಮಾಣಃ । ಅಚಃ ಸ್ವರಾಃ । ᳵಕ ᳵಖ ಇತಿ ಕಖಾಭ್ಯಾಂ ಪ್ರಾಗರ್ಧವಿಸರ್ಗಸದೃಶೋ ಜಿಹ್ವಾಮೂಲೀಯಃ । ᳶಪ ᳶಫ ಇತಿ ಪಫಾಭ್ಯಾಂ ಪ್ರಾಗರ್ಧವಿಸರ್ಗಸದೃಶ ಉಪಧ್ಮಾನೀಯಃ । ಅಂ ಅಃ ಇತ್ಯಚಃ ಪರವಾನುಸ್ವಾರವಿಸರ್ಗೌ ॥**

ಕಕಾರದಿಂದ ಆರಂಭಿಸಿ ಮಕಾರದವರೆಗಿರುವ (ವರ್ಗೀಯಾಕ್ಷರಗಳು) ವರ್ಣಗಳಿಗೆ '**ಸ್ಪರ್ಶ**'ವೆಂದು ಹೆಸರು. ಯವರಲ ಈ ನಾಲ್ಕು ವರ್ಣಗಳಿಗೆ '**ಅಂತಸ್ಥ**'ವೆಂದು ಹೆಸರು. ಶಷಸಹ ಈ ನಾಲ್ಕು ವರ್ಣಗಳಿಗೆ '**ಊಷ್ಮ**'ವೆಂದು ಹೆಸರು. ಅಚ್ (9) ವರ್ಣಗಳಿಗೆ ಸ್ವರವೆಂದು ಹೆಸರು. ಕ ಮತ್ತು ಖ ವರ್ಣಗಳ ಹಿಂದೆ

ಅರ್ಧ ವಿಸರ್ಗದಂತಿರುವ ವರ್ಣಕ್ಕೆ 'ಜಿಹ್ವಾಮೂಲೀಯ'ವೆಂದು ಹೆಸರು. ಪಫಗಳ ಹಿಂದೆ ಅರ್ಧ ವಿಸರ್ಗದಂತಿರುವ ವರ್ಣಗಳಿಗೆ 'ಉಪಧ್ಮಾನೀಯ'ವೆಂದು ಹೆಸರು. ಅಕಾರಾದಿಗಳ ಪರದಲ್ಲಿರುವ (ಸ್ವರದ) ಬಿಂದುವಿಗೆ 'ಅನುಸ್ವಾರ'ವೆಂದೂ ಎರಡು ಚಿಕ್ಕ ಬಿಂದುಗಳಿಗೆ 'ವಿಸರ್ಗ'ವೆಂದೂ ಹೆಸರು. ಹೀಗೆ ಸ್ಥಾನ ಪ್ರಯತ್ನವಿವೇಕವು ಶಿಕ್ಷಾದಲ್ಲಿ ಹೇಳಿದಂತೆ ವಿವರಿಸಿದೆ. ಇಲ್ಲಿ ಸವರ್ಣಸಂಜ್ಞೆಗೆ ಬಾಹ್ಯಪ್ರಯತ್ನದ ಅಪೇಕ್ಷೆ ಇಲ್ಲವಾದರೂ ಮುಂದೆ ಸಂಧಿಪ್ರಕರಣದಲ್ಲಿ ಅತ್ಯಂತ ಸಾಮ್ಯವಿಚಾರ ಮಾಡುತ್ತಾನೆ. ಆಗ ಈ ಬಾಹ್ಯಪ್ರಯತ್ನದ ಅಪೇಕ್ಷೆ ಬೇಕಾಗುತ್ತದೆ. ಆದುದರಿಂದ ಯತ್ನವಿಭಾಗ ಮಾಡುವಾಗ ಕ್ರಮಪ್ರಾಪ್ತವಾದುದರಿಂದಲೂ ವಿವರಿಸಿರುತ್ತಾನೆ. ಈಗ 'ತುಲ್ಯಾಸ್ಯಪ್ರಯತ್ನಂ ಸವರ್ಣಂ' ಎಂಬುದರಿಂದ ಒಂದು ವರ್ಣಕ್ಕೆ ಎಷ್ಟು ಸುವರ್ಣವಿದೆ ಎಂದು ಗೊತ್ತಾಗುತ್ತದೆ. ಆದರೆ ಕಾರ್ಯ ವಿಧಾಯಕಸೂತ್ರದಲ್ಲಿ ಅಕಾರಾದಿಗಳು ಉಪಾತ್ತವಾದರೆ ಅವುಗಳ ಸವರ್ಣಗಳನ್ನೂ ತೆಗೆದುಕೊಳ್ಳಬೇಕೆಂಬುದು ತಿಳಿಯುವುದಿಲ್ಲ. ಅದಕ್ಕೋಸ್ಕರ ಸವರ್ಣಗಳನ್ನೂ ತೆಗೆದುಕೊಳ್ಳಬೇಕೆಂದು ಬೋಧಿಸುವ ಸೂತ್ರವನ್ನು ಹೇಳುತ್ತಾನೆ.

(ಸವರ್ಣಗ್ರಾಹಕಸೂತ್ರ)

## ೧೧. ಅಣುದಿತ್ಸವರ್ಣಸ್ಯ ಚಾಪ್ರತ್ಯಯಃ ॥೧-೧-೬೯॥

ಪ್ರತೀಯತೇ ವಿಧೀಯತ ಇತಿ ಪ್ರತ್ಯಯಃ। ಅವಿಧೀಯಮಾನೋಽಣುದಿಚ್ಚ ಸವರ್ಣಸ್ಯ ಸಂಜ್ಞಾ ಸ್ಯಾತ್। ಅತ್ರೈವಾಣ್ ಪರೇಣ ಣಕಾರೇಣ। ಕುಚುಟುತುಪು ಏತೇ ಉದಿತಃ।

ಅಣ್, ಉದಿತ್, ಸವರ್ಣಸ್ಯ, ಚ, ಅಪ್ರತ್ಯಯಃ। ಐದು ಪದಗಳುಳ್ಳ ಸೂತ್ರ. ಉತ್ ಇತ್ ಯಸ್ಯ ಸಃ ಉದಿತ್. ಪ್ರತೀಯತೇ ಇತಿ ಪ್ರತ್ಯಯಃ ॥ ಪ್ರತೀಯತೆ ಎಂದರೆ ತೋರುವುದು ಎಂದರ್ಥವಾಗುತ್ತದೆ. ಹಾಗೆ ಪ್ರತ್ಯಯವೆಂದರೆ ಅಣಾದಿಗಳಾಗುತ್ತವೆ. ಈ ರೀತಿ ಅರ್ಥಗಳನ್ನು ಹೋಗಲಾಡಿಸಲು ಪ್ರತೀಯತೇ ಎಂಬುದಕ್ಕೆ ವಿಧೀಯತೇ ಎಂದು ಅರ್ಥ ವಿವರಿಸುತ್ತಾನೆ. ವಿಧಿಸಲ್ಪಡುವುದು ಎಂದು ಅರ್ಥ ನ ಪ್ರತ್ಯಯಃ ವಿಧಿಸಲ್ಪಡದೇ ಇರುವುದು. ಉದಿತ್ತೆಂದರೆ ವರ್ಗೀಯಾಕ್ಷರಗಳೆಂದು ಮುಂದೆ ವಿವರಿಸುತ್ತಾನೆ. ಆಗ ಸೂತ್ರಾರ್ಥ. ವಿಧಿಸಲ್ಪಡದೇ ಇರುವ ಅಣ್ ಅಕ್ಷರಗಳೂ (ಸ್ವರ 9 ಯವರಲಗಳೂ) ಉದಿತ್ ವರ್ಣಗಳೂ ತಮ್ಮ ಸವರ್ಣಗಳಿಗೆ ಸಂಜ್ಞೆಯಾಗುತ್ತವೆ. ಮುಂದೆ "ಇಕೋ ಯಣ್ ಅಚಿ" ಸೂತ್ರದಿಂದ ಯಣ್ ಕಾರ್ಯ ಹೇಳುತ್ತಾನೆ. ಅಲ್ಲಿ ಇಕ್ ಎಂದರೆ ಇ ಉ ಋ ಌ ನಾಲ್ಕು ಆಗುತ್ತವೆ. ಈ ಸೂತ್ರವಿಲ್ಲವಾದರೆ ಆ ನಾಲ್ಕು ಮಾತ್ರ ಗೃಹೀತವಾಗುತ್ತಿತ್ತು. ವರ್ಣಸಮಾಮ್ನಾಯದಲ್ಲಿ ಆ ನಾಲ್ಕು ಮಾತ್ರ ಹೇಳಲ್ಪಟ್ಟಿವೆ. ಈಗ ಈ ಸೂತ್ರವು ತನ್ನ

ಸವರ್ಣಕ್ಕೂ ಸಂಜ್ಞೆಯಾಗುತ್ತದೆ ಎಂದುದರಿಂದ ಇ ಎಂದರೆ ಅದರ ಹದಿನೆಂಟು ಭೇದಗಳನ್ನೂ ತೆಗೆದುಕೊಳ್ಳಬೇಕು. ಹಾಗೆ ಮುಂದಿನ ವರ್ಣಗಳೂ ತಮ್ಮ ಭೇದಗಳನ್ನು ತೆಗೆದುಕೊಳ್ಳುತ್ತವೆ. ಅಲ್ಲಿ ಇಕ್ ಎಂಬುದು ಉದ್ದೇಶ್ಯವಾದುದರಿಂದ ವಿಧಿಸಲ್ಪಡುವುದಿಲ್ಲ. ಯಣ್ ವಿಧಿಸಲ್ಪಡುವುದರಿಂದ ವರ್ಣ ಸಮಾಮ್ನಾಯದಲ್ಲಿ (ಅನನುನಾಸಿಕ) ಯ ವ ರ ಲ ನಾಲ್ಕು ವರ್ಣಗಳು ಮಾತ್ರ ಗೃಹೀತವಾಗುತ್ತವೆ. ಹೀಗೆಯೇ 'ತ್ಯದಾದೀನಾಮಃ' ಎಂಬಲ್ಲಿ ಅ ಎಂದು ವಿಧಿಸುವುದರಿಂದ ಅಲ್ಲಿ ಅ ಮಾತ್ರ ಬರುತ್ತದೆ. ಇದು ಅಪ್ರತ್ಯಯ ಎಂಬುದರಿಂದ ತಿಳಿಯುತ್ತದೆ. ಹೀಗೆ ಕಾರ್ಯ ವಿಧಾಯಕ ಸೂತ್ರದಲ್ಲಿ ಒಂದು ವರ್ಣ ಹೇಳಿದರೆ ಅದರ ಎಲ್ಲಾ ಭೇದಗಳನ್ನು ತೆಗೆದುಕೊಳ್ಳಬೇಕೆಂದು ಈ ಸೂತ್ರ ತಿಳಿಸುತ್ತದೆ. ಇಲ್ಲಿ ಅಣ್ ಎಂದು ಹೇಳಿದೆ. ವರ್ಣ ಸಮಾಮ್ನಾಯದಲ್ಲಿ ಣ ಕಾರ ಎರಡು ಕಡೆ ಉಚ್ಚಾರಿತವಾಗಿದೆ. ಆಗ ಅಣ್ ಎಂದರೆ ಪೂರ್ವಣಕಾರವಾದರೂ ಆಗಬಹುದು. ಪರಣಕಾರವಾದರೂ ಆಗಬಹುದು. ಹೀಗೆ ಸಂಶಯ ಬಂದರೆ ಅದಕ್ಕೆ ಸಮಾಧಾನವನ್ನು "ಅತ್ರೈವಾಣ್" —ಎಂಬ ವಾಕ್ಯದಿಂದ ಹೇಳುತ್ತಾನೆ. ಇದೊಂದು ಸೂತ್ರದಲ್ಲಿ ಮಾತ್ರ ಅಣ್ ಎಂದರೆ ಪರಣಕಾರದಿಂದ ಮಾಡಿದ (ಲಣ್ ಣಕಾರ) ಪ್ರತ್ಯಾಹಾರ ತೆಗೆದುಕೊಳ್ಳಬೇಕು. ಇನ್ನು ಬೇರೆಕಡೆ ಎಲ್ಲಿಯಾದರೂ ಅಣ್ ಎಂದರೆ ಪೂರ್ವಣಕಾರದಿಂದಲೇ (ಅ ಇ ಉಣ್) ಹೇಳಬೇಕು. ಇದನ್ನು ತಿಳಿಸಲು ಪ್ರಾಚೀನರು ಒಂದು ಶ್ಲೋಕವನ್ನು ಹೇಳುತ್ತಾರೆ. 'ಪೂರ್ವೇಣೈವಾಣ್ ಗ್ರಹಾಃ ಸರ್ವೇ ಪರೇಣೈವೇಣ್‌ಗ್ರಹಾಮತಾಃ ॥ ಋತೇಣುದಿತ್ಸವರ್ಣಸ್ಯೇತ್ಯೇತದೇಕಂ ಪರೇಣ ತು ॥" ಎಲ್ಲಾ ಕಡೆಗಳಲ್ಲಿಯೂ ಅಣ್ ಎಂದರೆ ಪೂರ್ವಣಕಾರದಿಂದಲೇ ಹೇಳಬೇಕು. ಇಣ್ ಎಂದರೆ ಯಾವಾಗಲೂ ಪರಣಕಾರದಿಂದಲೇ ಹೇಳಿದೆ ಎಂದು ತಿಳಿಯಬೇಕು. 'ಅಣುದಿತ್ ಸವರ್ಣಸ್ಯ ಚಾಪ್ರತ್ಯಯಃ' ಎಂಬಲ್ಲಿ ಮಾತ್ರ ಈ ನಿಯಮವಿಲ್ಲ. ಇಲ್ಲಿ ಮಾತ್ರ ಅಣ್ ಎಂದರೆ ಪರಣಕಾರವೇ ಹೇಳಿದೆ ಎಂದು ತಿಳಿಯಬೇಕು. ಈಗ ಅಣ್ ಎಂದರೆ ನಿಶ್ಚಿತವಾಯಿತು. ಉದಿತ್ ಎಂದರೆ ಏನು ಎಂಬ ಶಂಕೆ ಬಂದರೆ ಅದಕ್ಕೆ ಸಮಾಧಾನ ಹೇಳುತ್ತಾನೆ. ಸ್ಥಾನ ವಿವೇಚನ ಮಾಡುವಾಗ ಕು, ಚು, ಟು, ತು, ಪು, ಎಂದು ಹೇಳಿದೆ. ಆಯಾಯಾ ವರ್ಗಗಳು ಈ ಸಂಜ್ಞೆಗಳಿಂದ ಬೋಧಿತವಾಗಿವೆ. ಕು, ಎಂದರೆ ಕವರ್ಗ. ಹೀಗೆ ಚು ಮುಂತಾದುವನ್ನು ತಿಳಿಯಬೇಕು. ಈಗ ಸೂತ್ರಜ್ಞಾನದಿಂದುಂಟಾದ ಫಲಿತಾರ್ಥವನ್ನು ವಿವರಿಸುತ್ತಾನೆ.

ತದೇವಮ್—ಅ ಇತ್ಯಷ್ಟಾದಶಾನಾಂ ಸಂಜ್ಞಾ । ತಥೇಕಾರೋಕಾರೌ ॥ ಋಕಾರಸ್ತ್ರಿಂಶತಃ । ಏವಂ ಲೃಕಾರೋಪಿ । ಏಚೋ ದ್ವಾದಶಾನಾಮ್ । ಅನುನಾಸಿಕಾನನುನಾಸಿಕಭೇದೇನ ಯವಲಾ ದ್ವಿಧಾ ; ತೇನಾನನುನಾಸಿಕಾಸ್ತೇ ದ್ವಯೋರ್ದ್ವಯೋಸ್ಸಂಜ್ಞಾ ॥

"ಅಣುದಿತ್ ಸವರ್ಣಸ್ಯ ಚಾಪ್ರತ್ಯಯಃ" ಎಂಬ ಸೂತ್ರದಿಂದುಂಟಾದ ಅರ್ಥ ಹೀಗಿದೆ. ಅ ಎಂದು ಅಕಾರ ಎಲ್ಲಿಯಾದರೂ ಕಾರ್ಯಕ್ಕೋಸ್ಕರ ಉಪಾತ್ತವಾದರೆ ಅದರ ಹದಿನೆಂಟು ಭೇದಗಳನ್ನು ತೆಗೆದುಕೊಳ್ಳಬೇಕು. ಹಾಗೆಯೇ ಇಕಾರ ಉಕಾರಗಳು. (ಇವೆರಡೂ ತಮ್ಮ ತಮ್ಮ ಹದಿನೆಂಟು ಭೇದಗಳನ್ನು ತೆಗೆದುಕೊಳ್ಳುತ್ತವೆ.) ಋಕಾರವು ಮೂವತ್ತಕ್ಕೆ ಸಂಜ್ಞೆಯಾಗುತ್ತದೆ. ಋಕಾರ, ಌಕಾರಗಳಿಗೆ ಸಾವರ್ಣ್ಯ ಹೇಳಿದುದರಿಂದ ಌಕಾರದ ಹನ್ನೆರಡೂ ಸೇರಿ ಮೂವತ್ತು ಎಂದು ತಿಳಿಯಬೇಕು. ಹೀಗೆಯೇ ಌಕಾರವೂ ಕೂಡಾ ಌಕಾರದ ಹನ್ನೆರಡು ಭೇದಗಳು ಋಕಾರದ ಹದಿನೆಂಟು ಭೇದಗಳು ಹೀಗೆ ಮೂವತ್ತಕ್ಕೆ ಸಂಜ್ಞೆಯಾಗುತ್ತದೆ. ಏ ಓ ಐ ಔ ಗಳು ತಮ್ಮ ತಮ್ಮ ಹನ್ನೆರಡು ಭೇದಗಳಿಗೆ ಸಂಜ್ಞೆಯಾಗುತ್ತವೆ. (ಅವುಗಳಿಗೆ ಹ್ರಸ್ವವಿಲ್ಲದಿರುವುದರಿಂದ ಹನ್ನೆರಡು ಭೇದಗಳು ಮಾತ್ರವೆಂದು ಹೇಳಿದೆ.) ಅಣ್ ಎಂದರೆ ಪರಣಕಾರ ತೆಗೆದುಕೊಳ್ಳಬೇಕೆಂದುದರಿಂದ ಅಣಿನಲ್ಲಿ ಹಯವರಲವರ್ಣಗಳೂ ಸೇರಿರುತ್ತವೆ. ಅವುಗಳಿಗೆ ಬೇರೆ ಭೇದವಿಲ್ಲದಿರುವುದರಿಂದ ಸವರ್ಣಗ್ರಾಹಕಗಳು ಹೇಗಾಗುತ್ತವೆ? ಎಂಬ ಶಂಕೆಗೆ ಸಮಾಧಾನ ಹೇಳುತ್ತಾನೆ. ಹ ರ ವೆಂಬವುಗಳು ಮಧ್ಯ ಇದ್ದರೂ ವ್ಯರ್ಥವೇ. ಯವಲಗಳು ಮಾತ್ರ ಅನನುನಾಸಿಕ ಅನುನಾಸಿಕವೆಂದು ಎರಡು ಪ್ರಕಾರವಾದುದರಿಂದ ಅನನುನಾಸಿಕ ಯವಲಗಳು ಎಲ್ಲಿಯಾದರೂ ಉಪಾತ್ತಗಳಾದರೆ ಅವುಗಳು ತಮ್ಮ ತಮ್ಮ ಎರಡು ಭೇದಗಳನ್ನೂ ಬೋಧಿಸುತ್ತವೆ. ಹೀಗೆ ವರ್ಣವಿಭಾಗವನ್ನೂ, ಸ್ಥಾನಗಳನ್ನೂ ಸವರ್ಣ ಸಂಜ್ಞೆಯನ್ನೂ, ಸವರ್ಣಗ್ರಾಹಕವನ್ನೂ ತಿಳಿಸಿ ಅತ್ಯುಪಯುಕ್ತವಾದ ಸಂಧಿ ಪ್ರಕರಣದಲ್ಲಿ ಬರುವ ಕೆಲವು ಸಂಜ್ಞೆಗಳನ್ನು ಹೇಳುತ್ತಾನೆ.

(ಸಂಹಿತಾಸಂಜ್ಞೆ ಹೇಳುವ ಸೂತ್ರ)

## ೧೨. ಪರಃ ಸಂನಿಕರ್ಷಃ ಸಂಹಿತಾ ॥ ೧-೪-೧೦೯ ॥

**ವರ್ಣಾನಾಮತಿಶಯಿತಃ ಸಂನಿಧಿಃ ಸಂಹಿತಾಸಂಜ್ಞಃ ಸ್ಯಾತ್ ॥**

ಮೂರು ಪದವುಳ್ಳ ಸೂತ್ರ. ಪರಃ ಎಂದರೆ ಅತಿಶಯದಿಂದ ಕೂಡಿರುವುದು. ಸಂನಿಕರ್ಷವೆಂದರೆ ಸಾಮೀಪ್ಯ. ಅರ್ಧ ಮಾತ್ರಾಕಾಲಕ್ಕಿಂತಲೂ ಹೆಚ್ಚಿನ ಕಾಲ ವ್ಯವಧಾನವಿಲ್ಲದಿರುವುದು. ವರ್ಣಪ್ರಕರಣವಾದುದರಿಂದ ವರ್ಣಗಳಿಗೆ ಎಂದು ಲಬ್ಧವಾಗುತ್ತದೆ. ಆಗ ಸೂತ್ರಾರ್ಥ. ವರ್ಣಗಳಿಗೆ ಅತ್ಯಂತ ಸಾಮೀಪ್ಯವೇನಿದೆಯೋ ಅದಕ್ಕೆ ಸಂಹಿತಾ ಎಂಬ ಸಂಜ್ಞೆ ಬರುತ್ತದೆ. ಒಂದು ವರ್ಣ ಹೇಳಿ ಒಂದು ನಿಮಿಷವಾದಮೇಲೆ ಇನ್ನೊಂದು ವರ್ಣ ಹೇಳುವುದಾದರೆ ಆಗ ಅಲ್ಲಿ ಸಂಹಿತಾ ಬರುವುದಿಲ್ಲ.

(ಸಂಯೋಗಸಂಜ್ಞೆ ಹೇಳುವ ಸೂತ್ರ)

## ೧೩. ಹಲೋಽನನ್ತರಾಃ ಸಂಯೋಗಃ ॥ ೧-೧-೭ ॥

**ಅಜ್ಭಿ ರನ್ಯವಹಿತಾ ಹಲಃ ಸಂಯೋಗಸಂಜ್ಞಾಃ ಸ್ಯುಃ ॥**

ಹಲಃ, ಅನಂತರಾಃ, ಸಂಯೋಗಃ ॥ ಮೂರುಪದವುಳ್ಳ ಸೂತ್ರ. "ಅಂತರ ಮವಕಾಶಾವಧಿ ಪರಿಧಾನಾಂತರ್ಧಿಭೇದತಾದರ್ಥ್ಯೇ" ಎಂದು ಅಮರವಿರುವುದರಿಂದ ಅಂತರವೆಂದರೆ ಇಲ್ಲಿ ವ್ಯವಧಾನವೆಂದರ್ಥ. ಅವಿದ್ಯಮಾನಂ ಅಂತರಂ (ವ್ಯವಧಾನಂ) ಯೇಷಾಂ ತೇ ಅನಂತರಾಃ । ವಿಜಾತೀಯ ವರ್ಣಗಳಿಂದ ವ್ಯವಧಾನವಿಲ್ಲದಿರುವವುಗಳು. ಹಲಿಗೆ (ವ್ಯಂಜನಕ್ಕೆ) ವಿಜಾತೀಯವಾದವುಗಳು ಸ್ವರಗಳು. ಈಗ ಸೂತ್ರಾರ್ಥ. ಮಧ್ಯದಲ್ಲಿ ಅಚ್ (ಸ್ವರ) ಗಳಿಂದ ವ್ಯವಧಾನವಿಲ್ಲದಿರುವ ಹಲ್ ವರ್ಣಗಳಿಗೆ ಸಂಯೋಗವೆಂಬ ಸಂಜ್ಞೆ ಬರುತ್ತದೆ. ಇಲ್ಲಿ ವರ್ಣಗಳ ಸಮುದಾಯಕ್ಕೆ ಸಂಜ್ಞೆ ಹೇಳಬೇಕು. "ಸಂಯುಜ್ಯಂತೇ ಅಸ್ಮಿನ್ ಸಮುದಾಯೇ ವರ್ಣಾಃ ಇತಿ" ಸಂಯೋಗಃ । ಹೀಗೆ ಅನ್ವರ್ಥ ಸಂಜ್ಞೆಯಾದುದರಿಂದ ಪ್ರತ್ಯೇಕವರ್ಣಗಳಿಗೆ ಇಲ್ಲ. ಸುಧ್ + ಯ್ + ಉಪಾಸ್ಯಃ. ಇಲ್ಲಿ ಧ + ಯ್‌ಗಳಿಗೆ ಸಂಯೋಗ ಸಂಜ್ಞಾ.

(ಪದಸಂಜ್ಞೆ ಹೇಳುವಸೂತ್ರ)

## ೪೧. ಸುಪ್ತಿಙನ್ತಂ ಪದಮ್ ॥ ೧-೪-೧೪ ॥

**ಸುಬಂತಂ ತಿಙಂತಂ ಚ ಪದಸಂಜ್ಞಂ ಸ್ಯಾತ್ ॥**

ಸುಪ್ತಿಙಂತಂ, ಪದಂ ॥ ಎರಡುಪದಗಳುಳ್ಳ ಸೂತ್ರ. ಸುಪ್ ಚ ತಿಙ್ ಚ ಸುಪ್ತಿಙೌ । ಸುಪ್ತಿಙೌ ಅಂತೇ ಯಸ್ಯ ತತ್ ಸುಪ್ತಿಙಂತಂ ॥ "ಸೌಜಸ್... ಪ್" ಎಂದು ಮುಂದೆ ನಾಮವಿಭಕ್ತಿಗಳನ್ನು ಹೇಳುತ್ತಾನೆ. ಅಲ್ಲಿ ಹೇಳುವ ಇಪ್ಪತ್ತೊಂದು ಪ್ರತ್ಯಯಗಳಿಗೆ ಸುಪ್ ಎಂದು ಹೆಸರು. "ತಿಪ್‌ತಸ್... ಙ್" ಎಂದು ಹದಿನೆಂಟು ಪ್ರತ್ಯಯಗಳನ್ನು ಕ್ರಿಯಾಪದದ ಮೇಲೆ ವಿಧಿಸುತ್ತಾನೆ. ಆ ಹದಿನೆಂಟಕ್ಕೆ ತಿಙ್ ಎಂದು ಹೆಸರು. ಇವು ಕೊನೆಯಲ್ಲಿರುವವುಗಳು ಸುಪ್ತಿಙಂತಗಳು. "ದ್ವಂದ್ವಾಂತೇ ಶ್ರೂಯಮಾಣಂ ಪದಂ ಪ್ರತ್ಯೇಕಮಭಿ ಸಂಬಧ್ಯತೇ" ಎಂಬ ನ್ಯಾಯದಿಂದ ದ್ವಂದ್ವ ಸಮಾಸ ಮಾಡಿ ಅದರಮೇಲೆ ಯಾವುದಾದರೂ ಪದ ಹೇಳುವುದಾದರೆ ಆ ಪದವು ಆ ದ್ವಂದ್ವದಲ್ಲಿರುವ ಎಲ್ಲಾ ಪದಗಳ ಕೊನೆಯಲ್ಲಿಯೂ ಬರುತ್ತದೆ ಎಂದುದರಿಂದ ಇಲ್ಲಿ ಸುಪ್ ತಿಙ್‌ಗಳಿಗೆ ದ್ವಂದ್ವಮಾಡಿ ಕೊನೆಯಲ್ಲಿ ಅಂತವೆಂದು ಹೇಳಿರುವುದರಿಂದ ಸುಬಂತ, ತಿಙಂತವೆಂದಾಗುತ್ತದೆ. ಸೂತ್ರಾರ್ಥ— ಸುಪ್‌ಕೊನೆಯಲ್ಲಿರುವ ಶಬ್ದಕ್ಕೂ

ತಿಙಾ ಕೊನೆಯಲ್ಲಿರುವ ಶಬ್ದಕ್ಕೂ ಪದವೆಂಬ ಸಂಜ್ಞೆ ಬರುತ್ತದೆ. ಈ ಸುಪ್ ತಿಙ್ ಪ್ರತ್ಯಯಗಳಿಗೆ ವಿಭಕ್ತಿಪ್ರತ್ಯಯಗಳೆಂದು ಮುಂದೆ ಸಂಜ್ಞೆ ಹೇಳುತ್ತಾನೆ. ವಿಭಕ್ತ್ಯಂತ ವಾದ ಶಬ್ದಕ್ಕೆ ಪದವೆಂದು ಹೆಸರು. ರಾಮಃ ಇದು ಸುಬಂತವಾದುದರಿಂದ ಪದ. ಭವತಿ ಇದು ತಿಙಂತವಾದುದರಿಂದ ಪದವಾಗುತ್ತದೆ.

ಇತಿ ಸಂಜ್ಞಾಪ್ರಕರಣಮ್

ಈ ರೀತಿ ಕೆಲವು ಮುಖ್ಯವಾದ ಸಂಜ್ಞೆಗಳನ್ನು ಬೋಧಿಸಿರುವುದರಿಂದ ಇದಕ್ಕೆ ಸಂಜ್ಞಾ ಪ್ರಕರಣವೆಂದು ಹೆಸರು. ಇತಿ ಎಂಬುದು ಸಮಾಪ್ತಿಯನ್ನು ಸೂಚಿಸುತ್ತದೆ. ಹೀಗೆ ಸಂಜ್ಞಾಪ್ರಕರಣವು ಮುಗಿಯಿತು.

---

# ಅಥಾಚ್ ಸಂಧಿಃ

## (ಯಣ್ ಸಂಧಿಃ)

ಸ್ವರಗಳಿಗೆ ಬರುವ ಸಂಧಿಗಳನ್ನು ವಿವರಿಸುತ್ತಾನೆ. ಮೊದಲು ಯಣ್ (ಯ ವ ರ ಲ) ಎಂಬುದನ್ನು ವಿಧಿಸುವುದರಿಂದ ಯಣ್ ಸಂಧಿ. ಇಲ್ಲಿ ಅನೇಕ ಸಂಧಿಗಳನ್ನು ಹೇಳುವುದರಿಂದ ಯಾವುದನ್ನು ವಿಧಿಸುತ್ತಾನೋ ಅದೇ ಹೆಸರಿನ ಸಂಧಿಯನ್ನು ಹೇಳಬೇಕು.

(ಯಣ್ ಸಂಧಿ ಹೇಳುವ ಸೂತ್ರ)

## ೧೫. ಇಕೋ ಯಣಚಿ ॥ ೬-೧-೭೭ ॥

**ಇಕಃ ಸ್ಥಾನೇ ಯಣ್ ಸ್ಯಾದಚಿ ಸಂಹಿತಾಯಾಂ ವಿಷಯೇ॥ ಸುಧೀ+ ಉಪಾಸ್ಯಃ ಇತಿ ಸ್ಥಿತೇ ॥**

ಇಕಃ ಯಣ್, ಅಚಿ । ತ್ರಿಪದ ಸೂತ್ರ. ಇಕಃ ಎಂಬುದು ಷಷ್ಠೀ. ಅಚಿ ಎಂಬುದು ಸಪ್ತಮೀ. "ಷಷ್ಠೀ ಸ್ಥಾನೇಯೋಗಾ" ಎಂಬ ಪರಿಭಾಷೆಯಿಂದ ಸ್ಥಾನೇ ಎಂದು ಲಬ್ಧವಾಗುತ್ತದೆ. "ಸಂಹಿತಾಯಾಮ್" ಎಂದು ಅಧಿಕಾರ. ಅಧಿಕಾರ ವೆಂದರೆ ಉತ್ತರದಲ್ಲಿ ಸಂಬಂಧ. ತನ್ನ ಸ್ಥಳದಲ್ಲಿ ಕಾರ್ಯ ಹೇಳದೆ ಉತ್ತರ ಸೂತ್ರ ದಲ್ಲಿ ತಾನು ಹೋಗಿ ತಾನೂ ಸೇರಿ ಒಂದು ವಾಕ್ಯಾರ್ಥವನ್ನುಂಟುಮಾಡುತ್ತದೆ.

"ಸಂಹಿತಾಯಾಂ" ಎಂಬುದು ವಾಕ್ಯಾರ್ಥವನ್ನು ಹೇಳುವುದಿಲ್ಲ. ಮುಂದೆ ಹೇಳುವ ಕಾರ್ಯಗಳೆಲ್ಲವೂ ಸಂಹಿತೆಯಲ್ಲಿ ಬರುತ್ತವೆ ಎಂಬರ್ಥವನ್ನು ತಿಳಿಸುತ್ತದೆ. ಅತಿಶಯವಾದ ವರ್ಣಗಳ ಸಾಮೀಪ್ಯಕ್ಕೆ ಸಂಹಿತಾ ಎಂದು ಹಿಂದೆ ಹೇಳಿದೆ. **ಸೂತ್ರಾರ್ಥ:-** ಅತಿಶಯವಾದ ವರ್ಣ ಸಾಮೀಪ್ಯವಿರುವಾಗ ಇಕ್ಕಿನ ಸ್ಥಾನಕ್ಕೆ ಅಚ್ ವರ್ಣ ಪರದಲ್ಲಿರುವಾಗ ಯಣ್ ಆದೇಶ ಬರುತ್ತದೆ. ಸುಧೀ + ಉಪಾಸ್ಯಃ ಎಂಬುದು ಸೂತ್ರಕ್ಕೆ ಲಕ್ಷ್ಯ. ಇಲ್ಲಿ ಸುಧೀ ಎಂಬಲ್ಲಿ ಉ ಈ ಎರಡೂ ಇವೆ. ಇವು ಇಕ್ ವರ್ಣಗಳು. ಇವುಗಳಿಗೆ ಉ ಅ ಆ ಹೀಗೆ ಮೂರು ಅಚ್ ಪರದಲ್ಲಿವೆ. ಇಲ್ಲಿ ಇವೆರಡೂ ವಿಧಿಸಲ್ಪಡದಿರುವುದರಿಂದ ಅವುಗಳ ಎಲ್ಲಾ ಬೇದಗಳನ್ನೂ ತೆಗೆದುಕೊಳ್ಳಬೇಕು. ಆದರೂ ಸಕಾರದ ಮೇಲಿರುವ ಉಕಾರಕ್ಕೂ ಅಚ್ ಪರದಲ್ಲಿರುವುದರಿಂದ ಯಣ್ ಬರಲಿ ಶಂಕೆ ಬರುತ್ತದೆ. ಪರವೆಂದರೆ ಹೇಗಿದ್ದರೂ ಸಾಕೆಂಬ ಅರ್ಥವಾಗುವುದರಿಂದ ಅವ್ಯವಹಿತ ಪರವಲ್ಲಿಯೇ ಇರಬೇಕು ಎಂಬ ನಿಯಮವನ್ನು ತಿಳಿಸುವ ಸೂತ್ರವನ್ನು ಹೇಳುತ್ತಾನೆ.

(ಪೂರ್ವಕ್ಕೆ ಕಾರ್ಯನಿಯಮಿಸುವ ಸೂತ್ರ)

## ೧೬. ತಸ್ಮಿನ್ನಿತಿ ನಿರ್ದಿಷ್ಟೇ ಪೂರ್ವಸ್ಯ ॥ ೧-೧-೬೬ ॥

**ಸಪ್ತಮೀನಿರ್ದೇಶೇನ ವಿಧೀಯಮಾನಂ ಕಾರ್ಯಂ ವರ್ಣಾಂತರೇಣಾವ್ಯವಹಿತಸ್ಯ ಪೂರ್ವಸ್ಯ ಬೋಧ್ಯಮ್ ॥**

ಇದಕ್ಕೆ ಪರಿಭಾಷಾ ಸೂತ್ರವೆಂದು ಹೆಸರು. "ಅನಿಯಮೇ ನಿಯಮಕಾರಿತ್ವಂ" ಎಂದು ಪರಿಭಾಷೆಯ ಲಕ್ಷಣ. ನಿಯಮವಿಲ್ಲದ ಕಡೆಯಲ್ಲಿ ನಿಯಮವನ್ನು ತಿಳಿಸುವ ಸೂತ್ರ. ಇಕೋ ಯಣಚಿ ಎಂಬಲ್ಲಿ ನಿಯಮವಿಲ್ಲದೆ ವ್ಯವಹಿತ ಪರವಾದರೂ ಬರುತ್ತದೆ ಎಂದಾಗ ಈ ಸೂತ್ರವು ನಿಯಮವನ್ನು ಮಾಡುತ್ತದೆ. ತಸ್ಮಿನ್, ಇತಿ, ನಿರ್ದಿಷ್ಟೇ, ಪೂರ್ವಸ್ಯ ಎಂದು ನಾಲ್ಕುಪದಗಳುಳ್ಳ ಸೂತ್ರ. ತಸ್ಮಿನ್ ಎಂದರೆ ಸಕಲಕಾರ್ಯವಿಧಾನ ಮಾಡುವ ಸೂತ್ರದಲ್ಲಿರುವ ಸಪ್ತಮ್ಯಂತಕ್ಕೆ ಅನುಕರಣ. ಸಪ್ತಮ್ಯಂತಪದದಿಂದ ತೋರುವ ಅರ್ಥ. "ಇಕೋಯಣಚ" ಎಂಬಲ್ಲಿ ಅಚ್ ಎಂಬುದರಿಂದ ಬೋಧಿತವಾದ ಅ ಇ ಮುಂತಾದುವುಗಳು. ನಿರ್ದಿಷ್ಟೇ ಎಂಬಲ್ಲಿ ನಿರ್ ಎಂಬ ಉಪಸರ್ಗದ ಪರದಲ್ಲಿರುವ ದಿಶ್ ಧಾತುವಿಗೆ ಕ್ತ ಪ್ರತ್ಯಯ ಬಂದಿದೆ. ನಿರ್ ಎಂಬುದು ನೈರಂತರ್ಯವನ್ನೂ ದಿಶ್ ಧಾತುವು ಉಚ್ಚಾರಣಾರ್ಥವನ್ನೂ ಹೇಳುತ್ತದೆ. ಆಗ **ಸೂತ್ರಾರ್ಥ.** ಸಪ್ತಮ್ಯಂತ ಪದವನ್ನು ಉಚ್ಚರಿಸಿ ವಿಧಿಸಲ್ಪಡುವ ಕಾರ್ಯವು ಆ ಸಪ್ತಮ್ಯಂತಾರ್ಥದ ಅವ್ಯವಹಿತ ಪೂರ್ವದಲ್ಲಿರುವುದಕ್ಕೆ ಬರುತ್ತದೆ ಎಂದು ತಿಳಿಯಬೇಕು. ವ್ಯವಧಾನವು ಇಲ್ಲಿ ವರ್ಣದಿಂದ. ಸಪ್ತಮ್ಯಂತಕ್ಕೂ ಕಾರ್ಯವನ್ನು ಹೊಂದುವ ಸ್ಥಾನಿಗೂ ಮಧ್ಯದಲ್ಲಿ ಯಾದ ವರ್ಣದ ವ್ಯವಧಾನವೂ ಇಲ್ಲದಿರುವಾಗ

ಬರುತ್ತದೆ. ಹೀಗೆ ಮುಂದೆಯೂ ಎಲ್ಲಿಯಾದರೂ ಸಪ್ತಮ್ಯಂತವನ್ನು ಹೇಳಿ ಕಾರ್ಯ ವಿಧಾನಮಾಡಿದರೆ ಅದರ ಅವ್ಯವಹಿತ ಪೂರ್ವಕ್ಕೇ ಕಾರ್ಯ ಬರುತ್ತದೆ ಎಂದು ಈ ಪರಿಭಾಷೆಯನ್ನು ಅಲ್ಲಿ ಹೇಳಿ ತಿಳಿದುಕೊಳ್ಳಬೇಕು. ಹೀಗೆ ಹೇಳಿದ ಮೇಲೆ ಈ ಸಪ್ತಮ್ಯಂತಾರ್ಥವು ಸ್ಥಾನಿಯ ಅವ್ಯವಹಿತ ಪರದಲ್ಲಿರಬೇಕೆಂದು ಅರ್ಥಾತ್ ಸಿದ್ಧವಾಗುತ್ತದೆ. ಆದುದರಿಂದ ಮುಂದೆ ಸಪ್ತಮ್ಯಂತ್ಯವಿರುವ ಸೂತ್ರಾರ್ಥವನ್ನು ಬರೆಯುವಾಗ ಪರೇ ಎಂದೇ ಹೇಳುತ್ತಾ ಹೋಗುತ್ತಾನೆ. ಇಲ್ಲಿಯೂ ಕೂಡ ಅಚ್ಚಿನ ಅವ್ಯವಹಿತ ಪೂರ್ವದಲ್ಲಿರುವ ಇಕ್ಕಿಗೆ ಯಣ್ ಬರುತ್ತದೆ ಎಂದುದರಿಂದ ಅಚ್ ಪರದಲ್ಲಿರುವಾಗ ಇಕ್ಕಿಗೆ ಯಣ್ ಎಂದು ಅರ್ಥವಾಗುತ್ತದೆ. ಇದು ಪರಿಭಾಷೆಯಿಂದ ಬಂದ ಫಲಿತಾರ್ಥ. ಶಾಸ್ತ್ರೀಯವಾಗಿ ಹೇಳುವುದಾದರೆ ಅಚ್‌ಅವ್ಯವಹಿತಪೂರ್ವವೃತ್ತಿಯಾದ ಇಕ್ಕಿನ ಸ್ಥಾನದಲ್ಲಿ ಯಣ್ ಆದೇಶ ಬರುತ್ತದೆ ಎಂದೇ ಹೇಳಬೇಕು. ಈಗ ಉಕಾರದ ಪೂರ್ವದಲ್ಲಿರುವ (ಧಕಾರದ ಪರದಲ್ಲಿರುವ) ಈ ರೂಪವಾದ ಇಕ್ಕಿಗೇ ಯಣ್ ಬರುತ್ತದೆ ಎಂದು ನಿಶ್ಚಿತವಾದ ಅರ್ಥವಾಗುತ್ತದೆ. ಯಣ್ ಎಂಬಲ್ಲಿ ಯ ವ ರ ಲ ಎಂದು ನಾಲ್ಕು ವರ್ಣಗಳಿವೆ. ಅದರಲ್ಲಿ ಸ್ಥಾನ ಸಾಮ್ಯವಿರುವುದರಿಂದ ಈಕಾರಕ್ಕೆ ಯಕಾರವೇ ಬರುತ್ತದೆ. "ಇಚುಯಶಾನಾಂ ತಾಲು" ಎಂದು ಹೇಳಿರುವುದರಿಂದ ಎರಡು ವರ್ಣಗಳಿಗೂ ತಾಲುಸ್ಥಾನದಿಂದ ಸಾಮ್ಯವಿದೆ. ಸ್ಥಾನಸಾಮ್ಯವಿರುವ ಯಕಾರವೇ ಬರಬೇಕೆಂಬ ನಿಯಮವು ಹೇಗೆ ಲಬ್ಧವಾಗುತ್ತದೆ? ಎಂದರೆ ಅದನ್ನು ನಿಯಮಿಸುವ ಪರಿಭಾಷೆಯನ್ನು ಹೇಳುತ್ತಾನೆ.

ಸದೃಶ ಆದೇಶ ಹೇಳುವ ಸೂತ್ರ

## ೧೭. ಸ್ಥಾನೇಽನ್ತರತಮಃ ॥ ೧-೧-೫೦ ॥

**ಪ್ರಸಂಗೇ ಸತಿ ಸದೃಶತಮಃ ಆದೇಶಃ ಸ್ಯಾತ್ । ಸುಧ್ ಯ್ + ಉಪಾಸ್ಯ ಇತಿ ಜಾತೇ ॥**

ಸ್ಥಾನೇ, ಅಂತರತಮಃ । ದ್ವಿಪದ ಸೂತ್ರ. ಹಿಂದಿನಂತೆ ನಿಯಮ ಮಾಡುವುದರಿಂದ ಇದು ಪರಿಭಾಷಾಸೂತ್ರ. ಸ್ಥಾನವೆಂದರೆ ಪ್ರಸಂಗ. ಪ್ರಸಂಗವೆಂದರೆ ಉಚ್ಚಾರಣ ಪ್ರಸಕ್ತಿ. "ಅತಿಶಯಿತಃ ಅಂತರಃ ಅಂತರತಮಃ" । ಅಂತರವೆಂದರೆ ಸದೃಶವೆಂದರ್ಥ. ಸೂತ್ರಾರ್ಥ. ಒಂದು ಸ್ಥಾನಿಗೆ ಉಚ್ಚಾರಣಾಪ್ರಸಕ್ತಿ ಇದ್ದು ಅದಕ್ಕೆ ಅನೇಕ ಆದೇಶಗಳು ಪ್ರಾಪ್ತವಾದರೆ ಅತ್ಯಂತ ಸದೃಶವಾದ ಆದೇಶವೇ ಬರುತ್ತದೆ. ತಾಲುಸ್ಥಾನ ಸಾಮ್ಯದಿಂದ ಈ ಕಾರಕ್ಕೆ ಯಕಾರವೇ ಅತ್ಯಂತಸದೃಶವಾದುದರಿಂದ ಯಕಾರವೇ ಬರುತ್ತದೆ. ಆಗ ಸುಧ್ ಯ್ + ಉಪಾಸ್ಯ ಎಂದು ರೂಪವಾಗುತ್ತದೆ. ಸ್ಥಾನ, ಅರ್ಥ, ಗುಣ, ಪ್ರಮಾಣ, ಈ ನಾಲ್ಕರಿಂದ ಸ್ಥಾನಿಯ,

ಸಾಮ್ಯವನ್ನು ನೋಡಬೇಕೆಂದು ಭಾಷ್ಯಕಾರರು ಹೇಳಿರುತ್ತಾರೆ. ಅನೇಕ ರೀತಿಯಿಂದ ಸಾಮ್ಯ ಬರುವುದಾದರೆ ಅಲ್ಲಿ ಸ್ಥಾನ ಸಾಮ್ಯದಿಂದ ಬರುವುದನ್ನೇ ಹೇಳಬೇಕು. ಗುಣವೆಂದರೆ ಬಾಹ್ಯಪ್ರಯತ್ನ. ಪ್ರಮಾಣವೆಂದರೆ ಮಾತ್ರಾಸಾದೃಶ್ಯ. ಇಲ್ಲಿ ಸ್ಥಾನಸಾಮ್ಯವೊಂದೇ ಪ್ರಸಕ್ತವಾದುದರಿಂದ ವಿವಾದಕ್ಕೆ ಅವಕಾಶವಿಲ್ಲ. ಅರ್ಥವಿಗಳಿಗೆ ಉದಾಹರಣೆಗಳನ್ನು ಅಲ್ಲಲ್ಲಿ ಪ್ರಸಕ್ತಿ ಬಂದಾಗ ವಿವರಿಸುತ್ತೇವೆ. ಸುಧ್ ಯ್ + ಉಪಾಸ್ಯಃ ಎಂಬಲ್ಲಿ ಆದೇಶಯಕಾರ ಪರವಾದಾಗ ಧಕಾರಕ್ಕೆ ದ್ವಿತ್ವವನ್ನು ಹೇಳುತ್ತಾನೆ.

(ಯರಿಗೆ ದ್ವಿತ್ವ ಹೇಳುವ ಸೂತ್ರ)

## ೧೮. ಅನಚಿ ಚ ॥ ೮-೪-೪೭ ॥

ಅಚಃ ಪರಸ್ಯ ಯರೋ ದ್ವೇ ವಾ ಸ್ತೋ ನ ತ್ವಚಿ ॥ ಇತಿ ಧಕಾರಸ್ಯ
ದ್ವಿತ್ವೇನ ಸುಧ್ ಧ್ ಯ್ + ಉಪಾಸ್ಯ ಇತಿ ಜಾತೇ ॥

ಅನಚಿ, ಚ॥ ದ್ವಿಪದ ಸೂತ್ರ. "ಯರೋಽನುನಾಸಿಕೇಽನುನಾಸಿಕೋ ವಾ" ಎಂಬ ಸೂತ್ರದಿಂದ ಷಷ್ಠ್ಯಂತವಾದ ಯರಃ ವಾ ಎಂಬ ಪದಗಳೂ, "ಅಚೋರಹಾಭ್ಯಾಂ ದ್ವೇ" ಎಂಬ ಸೂತ್ರದಿಂದ ಅಚಃ ಎಂಬ ಪಂಚಮ್ಯಂತ ಪದವೂ ದ್ವೇ ಎಂಬುದೂ ಅನುವೃತ್ತವಾಗುತ್ತವೆ. ನ ಅಚ್, ಅನಚ್, ತಸ್ಮಿನ್ ಅನಚಿ. ಅಚ್ ಪರದಲ್ಲಿ ಇಲ್ಲದೇ ಇರುವಾಗ ಎಂದು ಪ್ರತಿಷೇಧಾರ್ಥವನ್ನು ಹೇಳಬೇಕು. ನಞ್ ನಿಂದ ಸಮಾಸವಾದಾಗ ಸಾಮಾನ್ಯವಾಗಿ ಅದಲ್ಲದೆ ಅದರಂತಿರುವುದು ಎಂದರ್ಥವಾಗುತ್ತದೆ. ಅಬ್ರಾಹ್ಮಣಃ ಎಂದರೆ ಬ್ರಾಹ್ಮಣನಲ್ಲದ ಮನುಷ್ಯನೆಂದರ್ಥ. ಇದಕ್ಕೆ ಪರ್ಯುದಾಸವೆಂದು ಹೆಸರು. ನಞ್‌ನಲ್ಲಿ ಎರಡು ವಿಧ. ಪರ್ಯುದಾಸಾರ್ಥಕವಾದ ನಞ್ ಪ್ರತಿಷೇಧಾರ್ಥಕವಾದ ನಞ್. ಪ್ರತಿಷೇಧವೆಂದರೆ ಅಭಾವ. ಇಲ್ಲಿ ಪರ್ಯುದಾಸಾರ್ಥವನ್ನು ಸ್ವೀಕರಿಸಿದರೆ ಅಚ್ ಅಲ್ಲದೆ ಅಚಿನಂತಿರುವ ಹಲ್ ಪರದಲ್ಲಿ ಇರಲೇಬೇಕು ಎಂದರ್ಥವಾಗುವುದರಿಂದ ರಾಮಾತ್ ಎಂಬಲ್ಲಿ ತಕಾರಕ್ಕೆ ಪರದಲ್ಲಿ ಏನೂ ಇಲ್ಲವಾದುದರಿಂದ ದ್ವಿತ್ವ ಬಾರದೇ ಹೋಗಬೇಕಾಗುತ್ತದೆ. ಅಚ್ ಇಲ್ಲದಿರುವಾಗ ಎಂದು ಪ್ರತಿಷೇಧಾರ್ಥವನ್ನು ಸ್ವೀಕರಿಸಿದರೆ ಎಲ್ಲಿಯೂ ದೋಷ ಬರುವುದಿಲ್ಲ. ರಾಮಾತ್ ಎಂಬಲ್ಲಿ ತಕಾರದ ಪರದಲ್ಲಿ ಯಾವುದೂ ಇಲ್ಲ. ಆದುದರಿಂದ ದ್ವಿತ್ವ ಬರುತ್ತದೆ. ಪ್ರಕೃತ ಯರಃ ಎಂಬುದು ಷಷ್ಠ್ಯಂತವಾದುದರಿಂದ ಯರ್ ವರ್ಣಗಳಿಗೆ (ಸ್ಥಾನದಲ್ಲಿ) ಎಂದರ್ಥವಾಗುತ್ತದೆ. ಅಚಃ ಎಂಬುದು ಪಂಚಮ್ಯಂತವಾದುದರಿಂದ "ತಸ್ಮಾದಿತ್ಯುತ್ತರಸ್ಯ" ಎಂಬ ಪರಿಭಾಷೆಯಿಂದ ಅಚ್ಚಿನ ಅವ್ಯವಹಿತ ಪರಕ್ಕೆ ಎಂದರ್ಥವಾಗುತ್ತದೆ. ಈ ಪರಿಭಾಷೆಯು "ತಸ್ಮಿನ್ನಿತಿನಿರ್ದಿಷ್ಟೇ ಪೂರ್ವಸ್ಯ" ಎಂಬ ಪರಿಭಾಷೆಗೆ ವಿರುದ್ಧವಾದ ಅರ್ಥವನ್ನು ಹೇಳುತ್ತದೆ. ಮುಂದೆ ಇದನ್ನು

ವಿವರಿಸುತ್ತಾನೆ. ಈ ಎರಡು ಪರಿಭಾಷೆಗಳೂ ಹೆಚ್ಚಾಗಿ ಸೂತ್ರಗಳಲ್ಲಿ ಬರುವುದರಿಂದ ಅವುಗಳ ನಿರ್ಣಯವನ್ನು ಹೀಗೆ ತಿಳಿಯಬೇಕು. ಪಂಚಮ್ಯಂತವು ಸೂತ್ರದಲ್ಲಿ ಉಪಾತ್ತವಾದರೆ ಅದರ ಅವ್ಯವಹಿತಪರಕ್ಕೆ ಕಾರ್ಯವೂ, ಸಪ್ತಮ್ಯಂತ ಉಪಾತ್ತವಾದರೆ ಅದರ ಅವ್ಯಹಿತಪೂರ್ವಕ್ಕೆ ಕಾರ್ಯವೂ ಬರುತ್ತದೆ. ಎರಡೂ ಒಂದಕಡೆ ಬಂದರೆ ಪಂಚಮ್ಯಂತಕ್ಕೇ ಪ್ರಾಬಲ್ಯವಿರುವುದರಿಂದ ಪರಕ್ಕೇ ಕಾರ್ಯ ಬರುತ್ತದೆಂದೂ ಸಪ್ತಮ್ಯಂತವು ಷಷ್ಠ್ಯಂತವಾಗಿ ವಿಪರಿಣಾಮಗೊಳ್ಳುವುದೆಂದೂ ತಿಳಿಯಬೇಕು. ಈಗ **ಸೂತ್ರಾರ್ಥ**–ಅಚ್ಚಿನ ಅವ್ಯವಹಿತ ಪರದಲ್ಲಿರುವ ಯರ್ ವರ್ಣಗಳಿಗೆ (ಯವರಟ್+ಶಷಸರ್) ಅಚ್ ಪರದಲ್ಲಿಲ್ಲದಿರುವಾಗ ದ್ವಿತ್ವ ಬರುತ್ತದೆ. ಪ್ರಕೃತ ಅಚ್ ಎಂದರೆ ಸಕಾರದ ಮೇಲಿರುವ ಉಕಾರ. ಅದರ ಪರದಲ್ಲಿರುವ ಯರ್ ವರ್ಣ ಧಕಾರ. ಇದಕ್ಕೆ ಯಕಾರಪರದಲ್ಲಿದ್ದರೂ ಅಚ್ ಪರದಲ್ಲಿ ಇಲ್ಲದಿರುವುದರಿಂದ ದ್ವಿತ್ವ. ಹೀಗೆ ಧಕಾರಕ್ಕೆ ದ್ವಿತ್ವಬಂದು ಸುಧ್ ಧ್ ಯ್+ಉಪಾಸ್ಯಃ ಎಂದು ರೂಪವಾದಾಗ ಪೂರ್ವದ ಧಕಾರಕ್ಕೆ ದಕಾರಾದೇಶವನ್ನು ವಿಧಿಸುತ್ತಾನೆ.

(ಜಶ್ತ್ವವಿಧಾಯಕ ಸೂತ್ರ)

## ೧೯. ಝಲಾಂ ಜಶ್ ಝಶಿ ॥ ೮-೪-೫೩ ॥

**ಸ್ಪಷ್ಟಮ್ । ಇತಿ ಪೂರ್ವಧಕಾರಸ್ಯ ದಕಾರಃ**

ತ್ರಿಪದಸೂತ್ರ. ಅನುವೃತ್ತ್ಯಾದಿಗಳಿಲ್ಲದಿರುದರಿಂದ ಸೂತ್ರಾರ್ಥವು ಸುಲಭವಾಗಿ ತಿಳಿಯುವುದರಿಂದ ವೃತ್ತಿಯಲ್ಲಿ ಸ್ಪಷ್ಟಂ ಎಂದು ಹೇಳಿದ. ಝಶಿ ಎಂಬುದು ಸಪ್ತಮಿಯಾದುದರಿಂದ "ತಸ್ಮಿನ್ನಿತಿನಿರ್ದಿಷ್ಟೇ" ಎಂಬ ಪರಿಭಾಷೆಯಿಂದ ಅವ್ಯವಹಿತ ಪೂರ್ವಕ್ಕೆ ಕಾರ್ಯವೆಂದು ತಿಳಿಯುತ್ತದೆ. **ಸೂತ್ರಾರ್ಥ**—ಝಲ್ ವರ್ಣಗಳಿಗೆ ಝಶ್ ವರ್ಣಗಳು ಅವ್ಯಹಿತ ಪರದಲ್ಲಿರುವಾಗ ಜಶ್ ವರ್ಣಗಳು ಆದೇಶವಾಗಿ ಬರುತ್ತವೆ. ಇಲ್ಲಿ ಝಲ್, ಪೂರ್ವಧಕಾರ. ಅದಕ್ಕೆ ಝಶ್ ಅಂದರೆ ಧಕಾರ ಪರದಲ್ಲಿರುವುದರಿಂದ ಜಶ್ ವರ್ಣ ಆದೇಶ. ಧಕಾರಕ್ಕೆ ಸ್ಥಾನಸಾಮ್ಯದಿಂದ ಜಶಿನಲ್ಲಿ ದಕಾರವೇ ಬರುತ್ತದೆ. ಆಗ ಸುದ್ ಧ್ ಯ್+ಉಪಾಸ್ಯಃ ಎಂದು ರೂಪವಾಗುತ್ತದೆ. ಹೀಗಿರುವಾಗ ಇಲ್ಲಿ ಧಕಾರದ ಪರದಲ್ಲಿರುವ ಯಾಕಾರಕ್ಕೆ ಲೋಪವನ್ನು ಆಶಂಕಿಸಿ ಲೋಪವನ್ನು ವಿಧಿಸುವ ಸೂತ್ರವನ್ನು ಹೇಳುತ್ತಾನೆ.

(ಸಂಯೋಗಾಂತಕ್ಕೆ ಲೋಪಹೇಳುವ ಸೂತ್ರ)

## ೨೦. ಸಂಯೋಗಾಂತಸ್ಯ ಲೋಪಃ ॥ ೮-೨-೨೩ ॥

**ಸಂಯೋಗಾಂತಂ ಯತ್ಪದಂ ತದಂತಸ್ಯ ಲೋಪಃ ಸ್ಯಾತ್ ॥**

ಸಂಯೋಗಾಂತಸ್ಯ, ಲೋಪಃ ॥ ದ್ವಿಪದ ಸೂತ್ರ. ಪದಸ್ಯ ಎಂಬ ಅಧಿಕಾರದಲ್ಲಿ ಹೇಳಿರುವುದರಿಂದ "ಪದಸ್ಯ" ಎಂದು ಅನುವೃತ್ತವಾಗುತ್ತದೆ. "ಸಂಯೋಗಃ ಅಂತಃ ಯಸ್ಯ ತತ್, ಸಂಯೋಗಾಂತಮ್, ತಸ್ಯ ಸಂಯೋಗಾಂತಸ್ಯ" । ಸೂತ್ರಾರ್ಥ-ಸಂಯೋಗವೇ ಅಂತವಾಗಿರುವ ಯಾವ ಪದವಿದೆಯೋ ಆದರ ಅಂತಕ್ಕೆ ಲೋಪವಾಗುತ್ತದೆ. ಇಲ್ಲಿ ಸಂಯೋಗವೇ ಅಂತವಾದ ಪದಕ್ಕೆ ಲೋಪ ಬರುತ್ತದೆ ಎಂದು ಅರ್ಥವಾದರೂ ಮುಂದೆ ಹೇಳುವ ಪರಿಭಾಷೆಯ ಅರ್ಥವನ್ನು ಮನಸ್ಸಿನಲ್ಲಿಟ್ಟೇ ಸೂತ್ರಾರ್ಥವನ್ನು ಹೇಳಿರುತ್ತಾನೆ. ಸಂಯೋಗವೇ ಅಂತವಾದ ಪದವೆಂದರೆ ಸುದ್ಧ್ಯ್ ಎಂಬ ಪದ. ಅದರ ಅಂತ ಯಕಾರ. ಆದಕ್ಕೆ ಈ ಸೂತ್ರವು ಲೋಪವನ್ನು ಹೇಳುತ್ತದೆ.

ಸಂಯೋಗವೇ ಅಂತವಾದ ಪದದ ಅಂತ್ಯಕ್ಕೆ ಲೋಪವೆಂದು ಸೂತ್ರಾರ್ಥ ಹೇಳಿದೆ. ಅಂತಕ್ಕೆ ಎಂದು ಹೇಳುವ ಪದವು ಸೂತ್ರದಲ್ಲಿ ಇಲ್ಲ. ಅನುವೃತ್ತಿಯಿಂದಲೂ ಲಬ್ಧವಾಗುವುದಿಲ್ಲ. ಆದುದರಿಂದ ಪದದ ಅಂತ್ಯಕ್ಕೆ ಲೋಪವೆಂದು ಹೇಗೆ ಹೇಳಿದೆ? ಅಂದರೆ ಪರಿಭಾಷೆಯಿಂದ ಆ ಅರ್ಥವು ಲಬ್ಧವಾಗಿದೆ ಎಂದು ಆ ಪರಿಭಾಷೆಯನ್ನು ಹೇಳುತ್ತಾನೆ.

(ಅಂತ್ಯಕ್ಕೆ ಕಾರ್ಯನಿಯಮಿಸುವ ಸೂತ್ರ)

## ೨೧. ಅಲೋಽನ್ತ್ಯಸ್ಯ ॥ ೧-೧-೫೨ ॥

### ಷಷ್ಠೀನಿರ್ದಿಷ್ಟೋಽನ್ತ್ಯಸ್ಯ ಅಲಃ ಆದೇಶಃ ಸ್ಯಾತ್ ॥

ಅಲಃ, ಅಂತ್ಯಸ್ಯ ॥ ದ್ವಿಪದ ಸೂತ್ರ. "ಷಷ್ಠೀಸ್ಥಾನೇಯೋಗಾ" ಎಂಬುದರಿಂದ ಷಷ್ಠೀ, ಸ್ಥಾನೇ, ಎಂಬುವು ಅನುವೃತ್ತವಾಗುತ್ತವೆ ಷಷ್ಠೀ ಎಂಬ ಪ್ರಥಮಾಂತವು ತೃತೀಯಾಂತವಾಗಿ ವಿಪರಿಣತವಾಗುತ್ತದೆ. ನಿರ್ದಿಷ್ಟಸ್ಯ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಸ್ಥಾನೇ ಎಂಬಲ್ಲಿಯೂ ವಿಧೀಯಮಾನಃ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಅಲಃ ಎಂಬುದು ಷಷ್ಠ್ಯಂತಪದ. **ಸೂತ್ರಾರ್ಥ.** ಷಷ್ಠ್ಯಂತವಾದರೊಂದರ ಸ್ಥಾನಕ್ಕೆ ವಿಧಿಸಲ್ಪಟ್ಟ ಆದೇಶವು ಷಷ್ಠೀನಿರ್ದಿಷ್ಟವಾದುದರ ಅಂತ್ಯವಾದ ಅಲ್ ವರ್ಣಕ್ಕೆ ಬರುತ್ತದೆ. ಪ್ರಕೃತ ಸಂಯೋಗಾಂತವಾದ ಪದದ ಸ್ಥಾನದಲ್ಲಿ ಲೋಪರೂಪ ಆದೇಶವು ವಿಧಿಸಲ್ಪಟ್ಟಿದೆ. ಈ ಲೋಪಾದೇಶವು ಷಷ್ಠೀನಿರ್ದಿಷ್ಟವಾದ ಸಂಯೋಗಾಂತವಾದ ಅಂತ್ಯವಾದ ಅಲ್ ಎಂದರೆ ಯಕಾರಕ್ಕೆ ಬರುತ್ತದೆ ಎಂದು ಸಿದ್ಧಿತವಾಗುತ್ತದೆ.

ಇತಿ ಯಲೋಪೇ ಪ್ರಾಪ್ತೇ

ಹೀಗೆ ಪಾಣಿನಿಯ ಸೂತ್ರದ ಪ್ರಕಾರವಾಗಿ ಸುದ್ ಧ್ ಯ್ + ಉಪಾಸ್ಯ ಎಂಬಲ್ಲಿ ಯಕಾರಕ್ಕೆ ಲೋಪಪ್ರಾಪ್ತವಾದರೆ ವಾರ್ತಿಕದಿಂದ ಅದಕ್ಕೆ ನಿಷೇಧವನ್ನು ಹೇಳುತ್ತಾನೆ.

**ವಾ || (ಯಣಃ ಪ್ರತಿಷೇಧೋ ವಾಚ್ಯಃ) ಸುದ್ಧ್ಯುಪಾಸ್ಯಃ ||**

ಸಂಯೋಗಾಂತಪದದ ಅಂತ್ಯಕ್ಕೆ ಲೋಪ ಬರುವುದಾದರೆ ಯಣ್ ವರ್ಣಗಳಿಗೆ ನಿಷೇಧವು ಹೇಳಲ್ಪಡಬೇಕು. ಸಂಯೋಗಾಂತವು ಯವರಲವರ್ಣಗಳಾದರೆ ಲೋಪ ಬರುವುದಿಲ್ಲವೆಂದರ್ಥ. ಪ್ರಕೃತ ಸಂಯೋಗದ ಅಂತ್ಯವು ಯಕಾರ (ಯಣ್) ವಾದುದರಿಂದ ಲೋಪ ಬರುವುದಿಲ್ಲ. ವರ್ಣಗಳನ್ನು ಒಟ್ಟಿಗೆ ಸೇರಿಸಿದರೆ ಸುದ್ಧ್ಯುಪಾಸ್ಯಃ ಎಂಬ ರೂಪವಾಗುತ್ತದೆ. ಪಂಡಿತರಿಂದ ಸೇವಿಸಲ್ಪಡುವವನು ಎಂದು ಅರ್ಥ.

ಇಕ್ ಎಂಬಲ್ಲಿ ಇಕಾರಕ್ಕೆ ಉದಾಹರಣೆಯನ್ನು ತೋರಿಸಿ ಉಳಿವ ಉ, ಋ, ಌ ವರ್ಣಗಳಿಗೆ ಬಂದ ಯಣ್ ಸಂಧಿಯನ್ನು ತೋರಿಸುತ್ತಾನೆ.

**ಮದ್ಧ್ವರಿಃ | ಧಾತ್ರಂಶಃ | ಲಾಕೃತಿಃ |**

ಮಧು + ಅರಿಃ ಎಂದಿರುವಾಗ 'ಇಕೋ ಯಣಚಿ' ಎಂಬ ಸೂತ್ರದಿಂದ ಉಕಾರ ರೂಪವಾದ ಇಕ್ಕಿಗೆ ಅಕಾರರೂಪ ಅಚ್‌ಪರವಾದುದರಿಂದ ಉಕಾರಕ್ಕೆ ಓಷ್ಠ ಸ್ಥಾನ ಸಾಮ್ಯವುಳ್ಳ ವಕಾರದೇಶ ಬರುತ್ತದೆ. ಮಧ್ ವ್ + ಅರಿಃ ಎಂದಾದಮೇಲೆ 'ಅನಚಿಚ' ಎಂಬ ಸೂತ್ರದಿಂದ ಅಚ್ಚಿನ ಪರದಲ್ಲಿರುವ ಧಕಾರಕ್ಕೆ ದ್ವಿತ್ವ ಬಂದರೆ ಮಧ್ ಧ್ ವ್ + ಅರಿಃ ಎಂದಾಗುತ್ತದೆ. ಆಗ 'ಝಲಾಂಜಶ್ ಝಶಿ' ಎಂಬುದರಿಂದ ಪೂರ್ವಧಕಾರಕ್ಕೆ ಜಶ್ತ್ವದಿಂದ ದಕಾರಾದೇಶ. ಹಿಂದಿನಂತೆ 'ಸಂಯೋಗಾಂತಸ್ಯ ಲೋಪಃ' ಸೂತ್ರದಿಂದ ವಕಾರಕ್ಕೆ ಲೋಪ ಪ್ರಾಪ್ತವಾದರೆ ಯಣ್ ಆದುದರಿಂದ 'ಯಣಃ ಪ್ರತಿಷೇಧೋ ವಾಚ್ಯಃ' ಎಂಬ ವಾರ್ತಿಕದಿಂದ ನಿಷೇಧ. ಮದ್ ಧ್ ವ್ + ಅರಿಃ ಎಂದಿರುವಾಗ ಸೇರಿಸಿದರೆ ಮದ್ಧ್ವರಿಃ ಎಂದಾಗುತ್ತದೆ. ಮಧು ಎಂಬ ರಾಕ್ಷಸನನ್ನು ಸಂಹರಿಸಿದ ವಿಷ್ಣುವೆಂದರ್ಥ. ಧಾತೃ + ಅಂಶಃ ಎಂದಿರುವಾಗ ಋಕಾರಕ್ಕೆ ಹಿಂದಿನಂತೆ ಯಣ್ ಬಂದರೆ ಧಾತ್ ರ್ + ಅಂಶಃ ಎಂದಾದಮೇಲೆ 'ಅನಚಿಚ' ಸೂತ್ರದಿಂದ ದ್ವಿತ್ವ ಬಂದರೆ ಧಾತ್ ತ್ ರ್ + ಅಂಶಃ ಎಂದಾಗುತ್ತದೆ. ಇಲ್ಲಿ ಝಲ್ ವರ್ಣಕ್ಕೆ ಝಶ್ ವರ್ಣಪರದಲ್ಲಿಲ್ಲದಿರುವುದರಿಂದ ಜಶ್ತ್ವ ಬರುವುದಿಲ್ಲ. ಹಿಂದಿನಂತೆ ರೇಫ ಯಣ್ಣಾದುದರಿಂದ ಲೋಪ ನಿಷೇಧ. ಧಾತ್ರಂಶಃ ಎಂದು ರೂಪವಾಗುತ್ತದೆ. ಬ್ರಹ್ಮನ ಭಾಗವೆಂದರ್ಥ- ಌ + ಆಕೃತಿಃ ಎಂದಿರುವಾಗ ಯಣ್ ಬಂದರೆ ಲ್ + ಆಕೃತಿಃ ಎಂದಾಗುತ್ತದೆ. ಇಲ್ಲಿ ದ್ವಿತ್ವಾದಿಗಳಿಗೆ ನಿಮಿತ್ತವಿಲ್ಲವಾದುದರಿಂದ ಯಾವುದೂ ಬರುವುದಿಲ್ಲ. ಸೇರಿಸಿದರೆ ಲಾಕೃತಿಃ ಎಂದಾಗುತ್ತದೆ. ಌಕಾರದಂತೆ ಆಕಾರವುಳ್ಳದ್ದು ಲಾಕೃತಿಃ ಎಂದೆನಿಸುತ್ತದೆ. ಇಲ್ಲಿ

ಎಂಬುದು ಯಕಾರದ ಸಪ್ತಮೀ ಏಕವಚನರೂಪ. ಅದು ಪ್ರತ್ಯಯೇ ಎಂಬುದಕ್ಕೆ ವಿಶೇಷಣ. ಯಾವುದಾದರೊಂದನ್ನು ಇನ್ನೊಂದು ಶಬ್ದಕ್ಕೆ ವಿಶೇಷಣ ಮಾಡಿ ಕಾರ್ಯ ಹೇಳುವುದಾದರೆ ಅಲ್ಲಿ ಆ ವಿಶೇಷಣವೇ ಅಂತವಾಗಿರುವುದಕ್ಕೆ ಕಾರ್ಯ ಬರುತ್ತದೆ ಎಂದು ತಿಳಿಯಬೇಕು. "ಯೇನವಿಧಿಸ್ತದಂತಸ್ಯ" ಎಂಬ ಪರಿಭಾಷೆಯಿಂದ ಈ ಅರ್ಥವು ಲಬ್ಧವಾಗುತ್ತದೆ. ಹಾಗೆಯೇ ಇಲ್ಲಿ ಹೇಳುವುದಾದರೆ ಯಕಾರಾಂತ ಪ್ರತ್ಯಯ ಪರವಾದಾಗ ಎಂಬ ಅರ್ಥವಾಗುತ್ತಿತ್ತು. ಅದರೆ ಪರಿಭಾಷೆಗೆ ಅಪವಾದವಾಗಿ "ಯಸ್ಮಿನ್ವಿಧಿಸ್ತದಾದಾವಲ್ಗ್ರಹಣೇ" ಎಂಬ ಪರಿಭಾಷೆಯು ಉಕ್ತವಾಗಿದೆ. ಸಪ್ತಮ್ಯಂತವಾಗಿ ಒಂದು ವರ್ಣವು ಹೇಳಲ್ಪಟ್ಟು, ಅದು ಸಪ್ತಮ್ಯಂತವಾದ ಇನ್ನೊಂದು ಶಬ್ದಕ್ಕೆ ವಿಶೇಷಣ ಮಾಡಲ್ಪಟ್ಟರೆ (ತದಂತಕ್ಕೆ ಅಪವಾದವಾಗಿ) ಆ ವರ್ಣವೇ ಆದಿಯಲ್ಲಿರುವ ವಿಶೇಷ್ಯವೆಂದು ಪರಿಭಾಷೆಯು ತಿಳಿಸುತ್ತದೆ. ಪ್ರಕೃತ ಯಿ ಎಂಬುದು ಸಪ್ತಮ್ಯಂತವಾದ ವರ್ಣವಾಗಿ ಪ್ರತ್ಯಯೇ ಎಂಬುದಕ್ಕೆ ವಿಶೇಷಣವಾದುದರಿಂದ ಯಕಾರವೇ ಆದಿಯಾಗಿರುವ ಪ್ರತ್ಯಯ ಪರವಾದಾಗ ಎಂಬ ಅರ್ಥವಾಗುತ್ತದೆ. ವ್ ಅಂತ್ಯೇ ಯಸ್ಯ ಸಃ ವಾಂತಃ। ವಕಾರವೇ ಅಂತವಾದ ಆದೇಶವೆಂದರೆ ಹಿಂದೆ ಹೇಳಿದ ಆವ್ ಅವ್ ಆಗುತ್ತವೆ. ಅವು ಯಾವುದರ ಸ್ಥಾನಕ್ಕೆ ಬರುತ್ತವೆ ಎಂದು ಆಕಾಂಕ್ಷಾ ಬಂದರೆ ಅರ್ಥಾತ್ ಓಕಾರ ಔಕಾರಗಳಿಗೇ ಎಂದು ಸಿದ್ಧವಾಗುತ್ತದೆ. ಹಿಂದೆ ಅವುಗಳೇ ಸ್ಥಾನಿಗಳೆಂದು ಹೇಳಿದೆ. **ಸೂತ್ರಾರ್ಥ.** ಯಕಾರವೇ ಆದಿಯಲ್ಲಿರುವ ಪ್ರತ್ಯಯ ಪರವಾದಾಗ ಓಕಾರ ಔಕಾರಗಳಿಗೆ (ಕ್ರಮವಾಗಿ) ಅವ್ ಆವ್ ಆದೇಶಗಳು ಬರುತ್ತವೆ. ಗವ್ಯಮ್ । ಓಕಾರಕ್ಕೆ ಉದಾಹರಣೆ. ಗೋವಿನ ವಿಕಾರ ಎಂಬರ್ಥದಲ್ಲಿ ಯತ್ ಪ್ರತ್ಯಯ ಬಂದು ಗೋ + ಯ ಎಂದಿರುವಾಗ ಯಕಾರಾದಿ ಪ್ರತ್ಯಯ ಪರವಾದುದರಿಂದ ಓಕಾರಕ್ಕೆ ಅವಾದೇಶ ಬಂದರೆ ಗ್ + ಅವ್ + ಯ, ಗವ್ಯ ಎಂದಾಗುತ್ತದೆ. ಸಾಮಾನ್ಯಾರ್ಥದಲ್ಲಿ ನಪುಂಸಕಲಿಂಗ ಹೇಳಿದೆ. ಔಕಾರಕ್ಕೆ ನಾವ್ಯಂ ಎಂಬುದು ಉದಾಹರಣೆ. ನಾವಾ ತಾರ್ಯಂ । ದೋಣಿಯಿಂದ ದಾಟಿಸಲ್ಪಡುವುದು. "ನೌವಯೋಧರ್ಮ........" ಎಂಬ ಸೂತ್ರದಿಂದ ಯತ್ ಪ್ರತ್ಯಯ. ನೌ + ಯ ಎಂದಿರುವಾಗ ಔಕಾರಕ್ಕೆ ಆವಾದೇಶ ಬಂದರೆ ನ್ + ಆವ್ + ಯ, ನಾವ್ಯ. ಹಿಂದಿನಂತೆ ಸಾಮಾನ್ಯಾರ್ಥದಲ್ಲಿ ನಪುಂಸಕ ನಿರ್ದೇಶ. ನಾವ್ಯಮ್.

(ಯಕಾರಾದಿ ಪದ ಪರವಾದಾಗ ಅವಾದೇಶ ವಿಧಿಸುವ ವಾರ್ತಿಕ)

**ವಾ ॥ (ಅಧ್ವ ಪರಿಮಾಣೇ ಚ ॥)**

**॥ ಗವ್ಯೂತಿಃ ॥**

ಅಧ್ವಪರಿಮಾಣೇ, ಚ । ದ್ವಿಪದ ವಾರ್ತಿಕ. 'ಗೋರ್ಯೂತೌ ಛಂದಸ್ಯುಪಸಂಖ್ಯಾನಮ್' ಎಂದು ಇದರ ಹಿಂದಿನ ವಾರ್ತಿಕ. ಅಲ್ಲಿಂದ ಗೋಃ, ಯೂತೌ, ಎಂಬೂ, 'ಉಪಸಂಖ್ಯಾನಂ' ಎಂಬುದೂ ಅನುವೃತ್ತವಾಗುತ್ತವೆ. ಉಪಸಂಖ್ಯಾನ

ವೆಂದರೆ ಹೆಚ್ಚಿಗೆ ಹೇಳುವುದು. ಪಾಣಿನಿಯು ಹೇಳಿರುವುದು ಸಾಕಾಗದಿರುವುದರಿಂದ ಇದನ್ನೂ ಸೇರಿಸಿ ಹೆಚ್ಚಿಗೆ ಹೇಳಬೇಕು ಎಂದರ್ಥ. ಅಧ್ವಪರಿಮಾಣವೆಂದರೆ: ಮಾರ್ಗದ ಪರಿಮಾಣ ವಿಶೇಷ. ವಾರ್ತಿಕಾರ್ಥ. ಗೋಶಬ್ದಕ್ಕೆ ಯೂತಿ ಎಂಬ ಶಬ್ದ ಪರವಾದಾಗ ಮಾರ್ಗಪರಿಮಾಣವಿಶೇಷರೂಪ ಅರ್ಥ ತೋರುವಾಗ ಓಕಾರಕ್ಕೆ ಅವಾದೇಶವನ್ನು ಹೇಳಬೇಕು. ಗವ್ಯೂತಿಃ. ಉದಾಹರಣೆ. ಹಸುವು ಕೂಗಿದರೆ ಎಲ್ಲಿಯವರೆಗೆ ಕೇಳುವುದೋ ಅಷ್ಟು ಉದ್ದವಾದ ಮಾರ್ಗ. 'ಗವ್ಯೂತಿಃ ಸ್ತ್ರೀ. ಕ್ರೋಶಯುಗವ್' ಎಂದು ಅಮರ. ಎರಡುಮೈಲು ಮಾರ್ಗ. ಗೋ+ಯೂತಿಃ ಎಂದಿರುವಾಗ ಓಕಾರಕ್ಕೆ ಅವಾದೇಶ. ಗ್+ಅವ್+ಯೂತಿಃ=ಗವ್ಯೂತಿಃ. ಯಕಾರಾದಿ ಪ್ರತ್ಯಯವಾಗದಿರುವುದರಿಂದ ಹಿಂದಿನ ಸೂತ್ರದಿಂದ ಬರುವುದಿಲ್ಲ. ಯೂತಿ ಎಂಬುದು ಯಕಾರಾದಿಪದ. ಅದುದರಿಂದ ವಾರ್ತಿಕಕಾರರು ಹೆಚ್ಚಾಗಿ ಹೇಳಿರುತ್ತಾರೆ.

(ಗುಣಸಂಜ್ಞೆಯನ್ನು ವಿಧಿಸುವ ಸೂತ್ರ)

## ೧೫. ಅದೇಙ್ ಗುಣಃ ॥ ೧-೧-೨ ॥

**ಅತ್ ಏಙ್ ಚ ಗುಣಸಂಜ್ಞಃ ಸ್ಯಾತ್ ॥**

ಅದೇಙ್, ಗುಣಃ। ದ್ವಿಪದ ಸೂತ್ರ. ಅಚ್ಚ (ತ್+ಚ) ಏಙ್ ಚ ತಯೋಃ ಸಮಾಹಾರಃ ಅದೇಙ್. ಸಂಜ್ಞಾಧಿಕಾರದಲ್ಲಿ ಹೇಳಿರುವುದರಿಂದ ಸಂಜ್ಞಾ ಎಂಬುದು ಲಬ್ಧವಾಗುತ್ತದೆ. ಅತ್ ಎಂದರೆ ಹ್ರಸ್ವಾಕಾರ. ಅತ್ ಎಂದಾಗ ಬೇರೆ ಭೇದಗಳನ್ನು ತೆಗೆದುಕೊಳ್ಳಬಾರದೆಂದು ಮುಂದಿನ ಸೂತ್ರವು ಹೇಳುತ್ತದೆ. ಏಙ್ ಪ್ರತ್ಯಾಹಾರ (ಏಕಾರ ಓಕಾರ) **ಸೂತ್ರಾರ್ಥ.** ಹ್ರಸ್ವಾಕಾರ ಏಕಾರ ಓಕಾರಗಳಿಗೆ ಗುಣ ಎಂಬ ಸಂಜ್ಞೆ ಬರುತ್ತದೆ. ಮುಂದೆ ಎಲ್ಲಿಯಾದರೂ ಗುಣ ಎಂದು ಹೇಳಿದರೆ ಈ ಮೂರು ವರ್ಣಗಳು ಬರುತ್ತವೆಂದು ತಿಳಿಯಬೇಕು. ಇದು ಸಂಜ್ಞೆಯನ್ನು ಹೇಳುವ ಸೂತ್ರ. ಅತ್ ಎಂದರೆ 'ಅಣ್ ಉದಿತ್ಸವರ್ಣಸ್ಯಚಾಪ್ರತ್ಯಯಃ' ಎಂಬ ಸೂತ್ರದಿಂದ ಅಕಾರದ ಹದಿನೆಂಟು ಭೇಧಗಳೂ ಏಕೆ ಬರುವುದಿಲ್ಲ ಕೇವಲ ಹ್ರಸ್ವಾಕಾರವೆಂದು ಸೂತ್ರದಲ್ಲಿ ಹೇಳಿದುದು ಹೇಗೆ? ಅಂದರೆ ಅದನ್ನು ತಿಳಿಸುತ್ತಾನೆ.

(ಸ್ವರಗಳ ಭೇದ ಸಂಕೋಚವನ್ನು ತಿಳಿಸುವ ಸೂತ್ರ)

## ೧೬. ತಪರಸ್ತತ್ಕಾಲಸ್ಯ ॥ ೧-೧-೭೦ ॥

**ತಃ ಪರೋ ಯಸ್ಮಾತ್ಸ ಚ ತಾತ್ಪರಶ್ಚೋಚ್ಚಾರ್ಯಮಾಣಸಮ-ಕಾಲಸ್ಯೈವ ಸಂಜ್ಞಾ ಸ್ಯಾತ್ ॥**

ಅಕಾರಕ್ಕೆ ಕಂಠಸ್ಥಾನ ಋಕಾರಕ್ಕೆ ಮೂರ್ಧಸ್ಥಾನ. ಕಂಠ ಮೂರ್ಧಸ್ಥಾನವುಳ್ಳದ್ದು ಗುಣದಲ್ಲಿ ಯಾವುದೂ ಇಲ್ಲ. ಹೀಗೆಯೇ ಌಕಾರಕ್ಕೆ ದಂತಸ್ಥಾನವಾದುದರಿಂದ ಕಂಠ ದಂತ ಸ್ಥಾನಿಕವಾದ ಗುಣವಿಲ್ಲ. ಸ್ವಲ್ಪ ಸಾಮ್ಯವಿರುವ ಗುಣ ಬರುತ್ತದೆ ಎಂದರೆ ಮೂರೂ ಕಂಠಸ್ಥಾನ ಸಾಮ್ಯದಿಂದ ಬರಬೇಕಾಗುತ್ತದೆ. ಅದಕ್ಕೋಸ್ಕರ ಋಕಾರ ಌಕಾರ ಸ್ಥಾನಕ್ಕೆ ಬರುವ ನಿಶ್ಚಿತವಾದ ಆದೇಶವನ್ನು ತಿಳಿಸಲು ಮೊದಲು ಅಚ್ಚಿಗೆ ಅನುನಾಸಿಕ ಭಾವವನ್ನು ಹೇಳಿ ಅದಕ್ಕೆ ಇತ್ ಸಂಜ್ಞೆ ಹೇಳುತ್ತಾನೆ.

(ಸ್ವರಕ್ಕೆ ಅನುನಾಸಿಕ ಸಂಜ್ಞೆಯನ್ನು ವಿಧಿಸುವ ಸೂತ್ರ)

## ೨೮. ಉಪದೇಶೇಽಜನುನಾಸಿಕ ಇತ್ ॥೧-೩-೧॥

ಉಪದೇಶೇಽಜನುನಾಸಿಕೋಽಜಿತ್ಸಂಜ್ಞಃ ಸ್ಯಾತ್ ।

ಉಪದೇಶೇ, ಅಚ್, ಅನುನಾಸಿಕಃ, ಇತ್ । ನಾಲ್ಕು ಪದಗಳುಳ್ಳ ಸೂತ್ರ. ಉಪದೇಶವೆಂದರೆ ಮೊದಲನ ಉಚ್ಚಾರಣೆ. ಧಾತು ಸೂತ್ರಾದಿಗಳೆಂದು ಹಿಂದೆ ಹೇಳಿದೆ. ಉಪದೇಶದಲ್ಲಿರುವ ಅನುನಾಸಿಕವಾದ ಅಜ್ವರ್ಣವು ಇತ್ಸಂಜ್ಞೆಯನ್ನು ಹೊಂದುತ್ತದೆ.

ಸೂತ್ರಾದಿಗಳಲ್ಲಿ ಇದು ಅನುನಾಸಿಕ, ಇದು ಅನನುನಾಸಿಕವೆಂದು ತಿಳಿಯುವುದು ಹೇಗೆ? ಸೂತ್ರಾದಿಗಳನ್ನು ಉಚ್ಚರಿಸಿದವರು ಪಾಣಿನಿ ಮುಂತಾದವರು ಈಗ ಇಲ್ಲ. ಇದ್ದಿದ್ದರೆ ಅವರ ಉಚ್ಚಾರಣೆಯಿಂದ ತಿಳಿಯಬಹುದು. ಆದುದರಿಂದ ಅನುನಾಸಿಕವನ್ನು ತಿಳಿಯುವ ರೀತಿಯನ್ನು ಹೇಳುತ್ತಾನೆ.

**ಪ್ರತಿಜ್ಞಾನುನಾಸಿಕ್ಯಾಃ ಪಾಣಿನೀಯಾಃ। ಲಣ್ ಸೂತ್ರಸ್ಥಾವರ್ಣೇನ ಸಹೋಚ್ಚಾರ್ಯಮಾಣೋ ರೇಫೋ ರಲಯೋಃ ಸಂಜ್ಞಾ ॥**

ಪ್ರತಿಜ್ಞಾಯತೇ ಇತಿ ಪ್ರತಿಜ್ಞಾ । ತಿಳಿಯಲ್ಪಡುವುದು. ಅನುನಾಸಿಕಸ್ಯ ಭಾವಃ ಆನುನಾಸಿಕ್ಯಂ । ಅನುನಾಸಿಕದ ಭಾವ. ಪ್ರತಿಜ್ಞಾ ಆನುನಾಸಿಕ್ಯಂ ಯೇಷಾಂ ತೇ ಪ್ರತಿಜ್ಞಾನುನಾಸಿಕ್ಯಾಃ । ತಿಳಿಯಲ್ಪಡುವ ಅನುನಾಸಿಕದ ಭಾವವುಳ್ಳವರು. ಪಾಣಿನಿನಾ ಪ್ರೋಕ್ತಂ ಪಾಣಿನೀಯಮ್ । ತದಧೀಯತೇ ವಿದಂತಿ ವಾ ಪಾಣಿನೀಯಾಃ ॥ ಪಾಣಿನಿಯಿಂದ ಹೇಳಲ್ಪಟ್ಟದನ್ನು ತಿಳಿಯುವವರು ಅಥವಾ ಓದುವವರು ಪಾಣಿನೀಯರು. ಪಾಣಿನಿಯ ಶಿಷ್ಯರೇ ತಿಳಿಯಲ್ಪಡುವ ಅನುನಾಸಿಕ ಭಾವವುಳ್ಳವರು. ಪಾಣಿನಿಯಿಂದ ಶಿಷ್ಯ ಪರಂಪರೆಯಿಂದ ಈ ಅನುನಾಸಿಕ ಭಾವವು ಉಪದೇಶಿಸಲ್ಪಡುವುದರಿಂದ ನಮ್ಮ ಗುರುಗಳಿಂದ ತಿಳಿದುಕೊಳ್ಳಬೇಕು. ಪ್ರಕೃತ ಅನು.

ಉಪದಿಷ್ಟವಾಗಿದೆ. ಆದುದರಿಂದ ಅದಕ್ಕೆ ಇತ್ ಸಂಜ್ಞಾ ಬರುತ್ತದೆ. ಈಗ ಇತ್ತಾದ ಅಕಾರದೊಡನೆ "ಹಯವರಟ್" ಎಂಬಲ್ಲಿರುವ ರ ಎಂಬುದನ್ನು ಸೇರಿಸಿದರೆ ರ ಎಂದಾಗುತ್ತದೆ. "ಆದಿರಂತ್ಯೇನ ಸಹೇತಾ" ಎಂಬುದರಿಂದ ರ ಎಂಬುದು ಈಗ ಪ್ರತ್ಯಾಹಾರವಾದುದರಿಂದ ರ ಲ ಈ ಎರಡು ವರ್ಣಗಳಿಗೆ ಸಂಜ್ಞೆಯಾಗುತ್ತದೆ. ಲಣ್ ಸೂತ್ರದಲ್ಲಿರುವ ಅಕಾರದೊಡನೆ ಉಚ್ಚರಿಸಲ್ಪಡುವ ರ ಎಂಬುದು ರ ಲ ಎರಡು ವರ್ಣಗಳಿಗೆ ಸಂಜ್ಞೆಯಾಗುತ್ತದೆ ಎಂದು ವಾಕ್ಯದ ಅರ್ಥ. ಹೀಗೆ ರ ಪ್ರತ್ಯಾಹಾರ ಸಿದ್ಧವಾದಮೇಲೆ ಅದರಿಂದಾಗುವ ಪ್ರಯೋಜನವನ್ನು ಹೇಳುತ್ತಾನೆ.

(ಋ ಌ ವರ್ಣಗಳಿಗೆ ಬರುವ ಸ್ವರನಿಯಮವನ್ನು ವಿಧಿಸುವ ಸೂತ್ರ)

## ೨೯. ಉರಣ್ ರಪರಃ ।।೧-೧-೫೧।।

**ಋ ಇತಿ ತ್ರಿಂಶತಃ ಸಂಜ್ಞೇತ್ಯುಕ್ತಮ್। ತತ್ಸ್ಥಾನೇ ಯೋಽಣ್ ಸ ರಪರಃ ಸನ್ನೇವ ಪ್ರವರ್ತತೇ। ಕೃಷ್ಣರ್ದ್ಧಿಃ। ತವಲ್ಕಾರಃ॥**

ಉಃ, ಅಣ್, ರಪರಃ ತ್ರಿಪದ ಸೂತ್ರ. ಉಃ ಎಂಬುದು ಋಕಾರದ ಷಷ್ಠೀ. "ಋ ಌ ವರ್ಣಯೋಃ ಮಿಥಃ ಸಾವರ್ಣ್ಯಂ ವಾಚ್ಯಮ್" ಎಂದುದರಿಂದ ಋಕಾರವೆಂದರೆ ಅದರ ಮೂವತ್ತು ಭೇದಗಳನ್ನು ತೆಗೆದುಕೊಳ್ಳಬೇಕು. "ಷಷ್ಠೀ ಸ್ಥಾನೇಯೋಗಾ" ಎಂಬ ಸೂತ್ರದಿಂದ ಸ್ಥಾನೇ ಎಂಬುದು ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಋಕಾರದ ಸ್ಥಾನದಲ್ಲಿ ಯಾವ ಅಣ್ ಬರುತ್ತದೆಯೋ ಅದು ರಪರವಾಗಿಯೇ ಬರುತ್ತದೆ. ರ ಎಂದರೆ ಪ್ರತ್ಯಾಹಾರವಾದುದರಿಂದ ರ ಲ ವೆಂದಾಗುತ್ತದೆ. ರಃ ಪರೋ ಯಸ್ಮಾತ್ ಸಃ ರಪರಃ। ರಶಿರಸ್ಕವಾಗಿಯೂ ಲಶಿರಸ್ಕವಾಗಿಯೂ ಬರುತ್ತದೆ. ಇಲ್ಲಿ ಅಣ್ ಎಂದರೆ ಪೂರ್ವಣಕಾರದಿಂದ ಮಾಡಿದ ಪ್ರತ್ಯಾಹಾರ. ಅ ಇ ಉ ಮಾತ್ರ ಬರುತ್ತದೆ ಎಂದಾದುದರಿಂದ ಐ ಔ ಏ ಓ ಮುಂತಾದುವು ಬರುವುದಿಲ್ಲ. ಋಕಾರ ಌಕಾರ ಸ್ಥಾನಗಳಿಗೆ ಬರುವುದಾದರೆ ಅಣ್ ಮಾತ್ರ. ಅದೂ ರಪರವಾಗಿ ಬರುವುದು ಎಂದು ನಿಯಮ ಮಾಡುತ್ತದೆ. ಇಲ್ಲಿ ಸ್ಥಾನಸಾಮ್ಯದಿಂದ ಋಕಾರ ಸ್ಥಾನಕ್ಕೆ ಗುಣವಾದ ಅಕಾರವು ರಪರವಾಗಿ (ಅರ್) ಯೂ ಌಕಾರ ಸ್ಥಾನಕ್ಕೆ ಗುಣವಾದ ಅಕಾರವು ಲಪರವಾಗಿಯೂ (ಅಲ್) ಬರುತ್ತದೆ ಎಂದು ತಿಳಿಯಬೇಕು. ಪ್ರಕೃತ ಕೃಷ್ಣ + ಋದ್ಧಿಃ ಎಂದಿರುವಾಗ ಅಕಾರಕ್ಕೆ ಅಚ್ಚಾದ ಋಕಾರ ಪರವಾದುದರಿಂದ ಅಕಾರ ಮತ್ತು ಋಕಾರಕ್ಕೆ ಅಕಾರ ರೂಪಗುಣವು ಬರುತ್ತದೆ. ಬರುವಾಗ ಈ ನಿಯಮದಿಂದ ರ ಪರವಾಗಿಯೇ ಬರುವುದರಿಂದ ಅರ್ ಆದೇಶ. ಕೃಷ್ಣ್ + ಅರ್ ದ್ಧಿಃ = ಕೃಷ್ಣರ್ದ್ಧಿಃ ಎಂದು ರೂಪವಾಗುತ್ತದೆ. ಹಾಗೆಯೇ ತವ + ಌಕಾರಃ ಎಂದಿರುವಾಗ ಅ ಮತ್ತು ಌಕಾರ ಸ್ಥಾನದಲ್ಲಿ ಲಪರವಾಗಿ ಬಂದರೆ ಅಲ್ ಆದೇಶ ಬರುತ್ತದೆ. ತವ್ + ಅಲ್ + ಕಾರಃ = ತವಲ್ಕಾರಃ

(ಪದಾಂತ ಯಕಾರವಕಾರ ಲೋಪವಿಧಾಯಕ ಸೂತ್ರ)

## ೩೦. ಲೋಪಃ ಶಾಕಲ್ಯಸ್ಯ ॥೮-೩-೧೯॥

**ಅವರ್ಣಪೂರ್ವಯೋಃ ಪದಾಂತಯೋರ್ಯವಯೋರ್ಲೋಪೋ ವಾಽಶಿ ಪರೇ ॥**

ಲೋಪಃ, ಶಾಕಲ್ಯಸ್ಯ ॥ ದ್ವಿಪದ ಸೂತ್ರ. " ಭೋಭಗೋ ಅಘೋ............ ಯೋಽಶಿ " ಎಂಬಸೂತ್ರದಿಂದ "ಅಪೂರ್ವಸ್ಯ", "ಅಶಿ", ಎಂಬ ಪದಗಳೂ "ವ್ಯೋರ್ಲಘುಪ್ರಯತ್ನತರಃ ಶಾಕಟಾಯನಸ್ಯ" ಎಂಬುದರಿಂದ "ವ್ಯೋಃ" ಎಂಬುದೂ ಅನುವೃತ್ತವಾಗುತ್ತವೆ. ಅಪೂರ್ವಸ್ಯ ಎಂಬುದು "ವ್ಯೋಃ" ಎಂಬುದಕ್ಕೆ ವಿಶೇಷಣ. ದ್ವಿವಚನಕ್ಕೆ ವಿಶೇಷಣವಾದುದರಿಂದ ಅದನ್ನೂ ದ್ವಿವಚನಾಂತವಾಗಿ ವಿಪರಿಣಾಮ ಮಾಡಿಕೊಳ್ಳಬೇಕು. ವ್ ಚ ಯ್ ಚ ವ್ಯೌ. ತಯೋಃ ವ್ಯೋಃ । ಅಃ ಪೂರ್ವಃ ಯಾಭ್ಯಾಂ ಅಪುರ್ವೌ । ತಯೋಃ ಅಪೂರ್ವಯೋಃ । ಅಕಾರವೇ ಪೂರ್ವದಲ್ಲಿರುವ ಯಕಾರವಕಾರಗಳಿಗೆ ಎಂದರ್ಥ. "ಪದಸ್ಯ" ಎಂಬುದು ಅಧಿಕಾರ. ಅದಕ್ಕೆ ವ್ಯೋಃ ಎಂಬುದು ವಿಶೇಷಣ. ವಿಶೇಷಣ ಮಾಡಿದಾಗ ಅದೇ ಅಂತ್ಯವಾಗಿ ಉಳ್ಳದ್ದು ಎಂಬರ್ಥವಾಗುತ್ತದೆ. ಅವರ್ಣಪೂರ್ವವಾದ ಯಕಾರಾಂತ ವಕಾರಾಂತಪದಕ್ಕೆ ಶಾಕಲ್ಯರ ಮತದಲ್ಲಿ ಲೋಪವೆಂದರ್ಥ. " ಅಲೋಽಂತ್ಯಸ್ಯ" ಪರಿಭಾಷೆಯಿಂದ ಅದರ ಅಂತ್ಯಕ್ಕೆ ಲೋಪ. ಈ ಪರಿಭಾಷೆಯಿಂದ ಲಬ್ಧವಾದ ಅರ್ಥವನ್ನು ಸೇರಿಸಿ ವೃತ್ತಿಯಲ್ಲಿ ಹೇಳಿದೆ. **ಸೂತ್ರಾರ್ಥ.** ಅಕಾರವೇ ಪೂರ್ವದಲ್ಲಿರುವ ಪದದ ಕೊನೆಯಲ್ಲಿರುವ ಯಕಾರ ವಕಾರಗಳಿಗೆ ಅಶ್ ಪರದಲ್ಲಿರುವಾಗ ವಿಕಲ್ಪವಾಗಿ ಲೋಪಬರುತ್ತದೆ. ಇಲ್ಲಿ ಶಾಕಲ್ಯರ ಮತದಲ್ಲಿ ಲೋಪವೆಂದುದರಿಂದ ಇತರರ ಮತದಲ್ಲಿ ಲೋಪವಿಲ್ಲವೆಂದು ತಿಳಿಯುತ್ತದೆ. ಆದುದರಿಂದ ವಾ ಅಂದರೆ ವಿಕಲ್ಪವೆಂದು ಹೇಳಿದೆ. ಹರೇ+ಇಹ ಎಂದಿರುವಾಗ " ಏಚೋಽಯವಾಯಾವಃ" ಸೂತ್ರದಿಂದ (ಇ) ಅಚ್ ಪರವಾದುದರಿಂದ ಏಕಾರಕ್ಕೆ ಅಯಾದೇಶ. ಹರಯ್+ಇಹ ಎಂದು ರೂಪವಾದಾಗ ಈ ಸೂತ್ರಕ್ಕೆ ಲಕ್ಷ್ಯ. ಇಲ್ಲಿ ಯಕಾರ ಪದಾಂತದಲ್ಲಿ ಇದೆ. ಅದರ ಪೂರ್ವದಲ್ಲಿ ಅಕಾರವಿದೆ ಪರದಲ್ಲಿ ಅಶ್ (ಇ) ಇದೆ. ಆದುದರಿಂದ ಶಾಕಲ್ಯರ ಮತದಿಂದ ಯಕಾರಕ್ಕೆ ಲೋಪ ಬಂದರೆ ಹರ+ಇಹ ಎಂದು ರೂಪವಾಗುತ್ತದೆ. ಬಾರದಿದ್ದರೆ ಹರಯಿಹ ಎಂದಾಗುತ್ತದೆ ಹಾಗೆಯೇ ವಿಷ್ಣೋ+ಇಹ ಎಂದಿರುವಾಗ ಹಿಂದಿನಂತೆ ಓಕಾರಕ್ಕೆ ಅವ್ ಆದೇಶ ಬಂದರೆ ವಿಷ್ಣವ್+ಇಹ ಎಂದಿರುವಾಗ ವಕಾರಲೋಪಕ್ಕೆ ಉದಾಹರಣೆ. ಅಪೂರ್ವವಾದ ಪದಾಂತವಾದ ವಕಾರವಿದ್ದು ಅದಕ್ಕೆ ಅಶ್ ಪರವಾದುದರಿಂದ ಲೋಪ ಬಂದರೆ ವಿಷ್ಣ+ಇಹ ಎಂದೂ ಬಾರದಿದ್ದರೆ ವಿಷ್ಣವಿಹ ಎಂದೂ ರೂಪವಾಗುತ್ತದೆ. ಸೂತ್ರದಲ್ಲಿ ವ್ಯೋಃ ಎಂದು ವಕಾರಯಕಾರ ಕ್ರಮವಾಗಿ ಹೇಳಿದರೂ ವೃತ್ತಿಯಲ್ಲಿಯೂ ಉದಾಹರಣೆಯಲ್ಲಿಯೂ ಯಕಾರವಕಾರವೆಂದು ಹೇಳಿದೆ. ವರ್ಣಸಮಾಮ್ನಾಯ

ದಲ್ಲಿ ಯುವ ಎಂದಿರುವುದರಿಂದ ಈ ರೀತಿ ವ್ಯತ್ಯಾಸ ಮಾಡಿದೆ.

ಹರ + ಏಹಿ ಎಂದಿರುವಾಗ ಏಕಾರಕ್ಕೆ ಅಯಾದೇಶ ಬಂದು ಶಾಕಲ್ಯರ ಮತದ ಪ್ರಕಾರ ಯಕಾರಕ್ಕೆ ಲೋಪ ಬಂದಮೇಲೆ ಹರ + ಏಹಿ ಎಂದಾದಾಗ "ಓಮಾಙೋಶ್ಚ" ಎಂಬ ಸೂತ್ರದಿಂದ ಪರರೂಪ ಸಂಧಿಯು ಬರಬೇಕಾಗುತ್ತದೆ. ಏಹಿ ಎಂಬಲ್ಲಿ ಆ + ಇಹಿ ಏಹಿ ಎಂದಾಗಿದೆ. ಅಲ್ಲಿ ಆ ಎಂಬುದು ಆಙಿನ ಆಕಾರ. ಈಗ ಅದು ಪರವಾದುದರಿಂದ ಆ ಮತ್ತು ಏ ಸ್ಥಾನದಲ್ಲಿ ಏ ರೂಪವಾದ ಪರ ರೂಪವು ಒಂದೇ ಆದೇಶವಾಗಿ ಬರಬೇಕಾಗುತ್ತದೆ. ಹಾಗೆಯೇ ವಿಷ್ಣೋ + ಇಹ ಎಂಬಲ್ಲಿ ಓಕಾರಕ್ಕೆ ಅವಾದೇಶ ಮಾಡಿದ ಮೇಲೆ ಈ ಸೂತ್ರದಿಂದ ವಕಾರಕ್ಕೆ ಲೋಪ ಮಾಡಿದಾಗ ವಿಷ್ಣ + ಇಹ ಎಂದಾದಾಗ ಅಕಾರಕ್ಕೆ ಇಕಾರ ಪರವಾದುದರಿಂದ "ಆದ್ಗುಣಃ" ಎಂಬುದರಿಂದ ಗುಣವು ಏಕಾದೇಶವಾಗಿ ಬರಬೇಕಾಗುತ್ತದೆ. ಅದನ್ನು ತಪ್ಪಿಸಲು ಉಪಾಯವನ್ನು ಹೇಳಲು ಅಸಿದ್ಧವನ್ನು ಬೋಧಿಸುವ ಸೂತ್ರವನ್ನು ಹೇಳುತ್ತಾನೆ.

(ಒಂದು ಸೂತ್ರಕ್ಕೆ ಇನ್ನೊಂದು ಸೂತ್ರವು ಅಸಿದ್ಧವಾಗುವುದನ್ನು ಹೇಳುವ ಸೂತ್ರ.)

## ೩೧. ಪೂರ್ವತ್ರಾಸಿದ್ಧಮ್ ॥ ೮-೨-೧ ॥

**ಸಪಾದಸಪ್ತಾಧ್ಯಾಯೀಂ ಪ್ರತಿ ತ್ರಿಪಾದ್ಯಸಿದ್ಧಾ, ತ್ರಿಪಾದ್ಯಾಮಪಿ ಪೂರ್ವಂ ಪ್ರತಿ ಪರಂ ಶಾಸ್ತ್ರಮಸಿದ್ಧಮ್ ॥ ಹರ ಇಹ, ಹರಯಿಹ । ವಿಷ್ಣ ಇಹ, ವಿಷ್ಣವಿಹ ॥**

ಪೂರ್ವತ್ರ, ಅಸಿದ್ಧಮ್ ॥ ದ್ವಿಪದ ಸೂತ್ರ. ಇದು ಅಧಿಕಾರ ಸೂತ್ರ. ಆದುದರಿಂದ ಮುಂದಿನ ಸೂತ್ರಗಳಲ್ಲಿ ಇದು ಹೋಗಿ ಏಕವಾಕ್ಯದಿಂದ ವ್ಯವಸ್ಥೆಯನ್ನು ಸೂಚಿಸುತ್ತದೆ. ಪಾಣಿನಿಯ ಎಂಟು ಅಧ್ಯಾಯಗಳಲ್ಲಿ ಎರಡುಭಾಗಗಳನ್ನು ಮಾಡಿ ಕೊಳ್ಳಬೇಕು. ಈ ಸೂತ್ರವು ಎಂಟನೇ ಅಧ್ಯಾಯದ ಎರಡನೇ ಪಾದದ ಮೊದಲಿನ ಸೂತ್ರವಾದುದರಿಂದ ಇದರ ಮುಂದಿರುವ ಸೂತ್ರಗಳು ಒಂದು ಗುಂಪೂ ಹಿಂದಿರುವ ಸೂತ್ರಗಳು ಒಂದು ಗುಂಪೂ ಎಂದು ತಿಳಿಯಬೇಕು. ಆಗ ಏಳು ಅಧ್ಯಾಯ ಮತ್ತು ಎಂಟನೇ ಅಧ್ಯಾಯದ ಮೊದಲಿನ ಪಾದ ಒಂದು ಗುಂಪು. ಇದಕ್ಕೇ ಸಪಾದ ಸಪ್ತಾಧ್ಯಾಯಿಯೆಂದು ಹೆಸರು. ಎಂಟನೇ ಅಧ್ಯಾಯ ಮೂರು ಪಾದದಲ್ಲಿ ಹೇಳಿದ ಸೂತ್ರಗಳು ಒಂದು ಗುಂಪು. ಇವುಗಳಿಗೆ ತ್ರಿಪಾದಿಯೆಂದು ಹೆಸರು. ಇಲ್ಲಿ ಎರಡು ವಾಕ್ಯಮಾಡಿಕೊಂಡು ಅರ್ಥ ಹೇಳಬೇಕು. ಪೂರ್ವತ್ರ ಅಂದರೆ ಇದರ ಹಿಂದನವು ಗಳನ್ನು ಕುರಿತು ಮುಂದಿನವುಗಳು ಅಸಿದ್ಧವಾಗುತ್ತವೆ. ಇದ್ದರೂ ಇಲ್ಲದಂತೆ ಆಗುತ್ತವೆ. ಅಂದರೆ ಸಪಾದ ಸಪ್ತಾಧ್ಯಾಯಿಯನ್ನು ಕುರಿತು ತ್ರಿಪಾದಿ ಅಸಿದ್ಧವಾಗುತ್ತದೆ. ತ್ರಿಪಾದಿಯಿಂದ ಮಾಡಿದ ಕಾರ್ಯವು ಸಪಾದ ಸಪ್ತಾಧ್ಯಾಯಿಗೆ ಗೊತ್ತಿರುವುದಿಲ್ಲ

ವೆಂದು ತಾತ್ಪರ್ಯ. ಇದು ಮೊದಲನೇ ವಾಕ್ಯದ ಅರ್ಥ. ಈ ಸೂತ್ರವು ಮುಂದೆ ತ್ರಿಪಾದಿಯಲ್ಲಿ ಒಂದೊಂದು ಸೂತ್ರವಲ್ಲಿಯೂ ಹೋಗುವುದರಿಂದ ಅಲ್ಲಿಯೂ ಪೂರ್ವವನ್ನು ಕುರಿತು ಪರವು ಅಸಿದ್ಧ. ಪರ ಸೂತ್ರದಿಂದ ಕಾರ್ಯಮಾಡಿದರೂ ಪೂರ್ವದ ಸೂತ್ರಕ್ಕೆ ಗೊತ್ತಿರುವುದಿಲ್ಲವೆಂದರ್ಥ. ಪ್ರಕೃತ ಹರಯ್ ಇಹ, ವಿಷ್ಣವ್ ಇಹ, ಎಂಬಲ್ಲಿ "ಲೋಪಃ ಶಾಕಲ್ಯಸ್ಯ" ಎಂಬ ಸೂತ್ರದಿಂದ ಯಕಾರ ವಕಾರಗಳಿಗೆ ಲೋಪ ಮಾಡಿದೆಯಷ್ಟೆ. ಈ ಸೂತ್ರವು ತ್ರಿಪಾದಿಯಲ್ಲಿರುವುದರಿಂದ ಸಪಾದ ಸಪ್ತಾಧ್ಯಾಯಿಗೆ ಇದು ಇದೆಯೆಂದು ಗೊತ್ತಿರುವುದಿಲ್ಲ. ಪರರೂಪವಿಧಾಯಕ ಸೂತ್ರವೂ (ಓಮಾಙೋಶ್ಚ) ಗುಣವಿಧಾಯಕ ಸೂತ್ರವೂ (ಆದ್ಗುಣಃ) ಸಪಾದ ಸಪ್ತಾಧ್ಯಾಯಿಯಲ್ಲಿವೆ. ಲೋಪವಾದುದು ಗೊತ್ತಿಲ್ಲವೆಂದಮೇಲೆ ಅವುಗಳು ಅಲ್ಲಿ ಯಕಾರವಕಾರ ಇದೆಯೆಂದೇ ತಿಳಿದಿರುತ್ತವೆ. ಆಗ ಅಕಾರಕ್ಕೆ ಅಜ್, ಅಕಾರಕ್ಕೆ ಅಚ್ ಪರವಾಗಿಲ್ಲವಾದುದರಿಂದ ಹಲ್ ಪರವಾದುದರಿಂದ ಪರರೂಪ, ಗುಣಸಂಧಿಗಳು ಬರುವುದಿಲ್ಲ. ಹಾಗೆಯೇ ಇರುತ್ತವೆ. ಆದುದರಿಂದ ಲೋಪವಿರುವ ಒಂದು ರೂಪ, ಲೋಪವಿಲ್ಲದ ಒಂದು ರೂಪ ಹೀಗೆ ಎರಡೇ ರೂಪಗಳಾಗುತ್ತವೆ. ಅದನ್ನೇ ಹರ ಇಹ ಇತ್ಯಾದಿಗಳಿಂದ ತೋರಿಸುತ್ತಾನೆ. ಅಕಾರಕ್ಕೆ ಏಚ್ ಪರವಾದರೆ ಗುಣಸಂಧಿಗೆ ಅಪವಾದವಾಗಿ ವೃದ್ಧಿಸಂಧಿಯನ್ನು ಹೇಳಲು ವೃದ್ಧಿ ಸಂಜ್ಞೆಯನ್ನು ಹೇಳುತ್ತಾನೆ.

(ವೃದ್ಧಿಸಂಜ್ಞಾ ವಿಧಾಯಕ ಸೂತ್ರ)

## ೩೨. ವೃದ್ಧಿರಾದೈಚ್ ॥ ೧-೧-೧ ॥

**ಆದೈಚ್ಚ ವೃದ್ಧಿಸಂಜ್ಞಃ ಸ್ಯಾತ್ ॥**

ವೃದ್ಧಿಃ ಆದೈಚ್ ॥ ದ್ವಿಪದ ಸೂತ್ರ. ಆಚ್ಚ ಐಚ್ಚ ತಯೋಃ ಸಮಾಹಾರಃ ಆದೈಚ್. ಇಲ್ಲಿ ಆತ್ ಎಂಬುದೂ ಐಚ್ ಎಂಬುದೂ ತಪರ. ಆತ್ ಪಂಚಮೀ ಏಕವಚನವಲ್ಲ. ತಪರವಾದುದರಿಂದ "ತಪರಸ್ತತ್ಕಾಲಸ್ಯ" ಎಂಬ ಸೂತ್ರದಿಂದ ದೀರ್ಘವನ್ನು ಮಾತ್ರ ತೆಗೆದುಕೊಳ್ಳಬೇಕು. ಅವುಗಳ ಭೇದಗಳನ್ನು ತೆಗೆದುಕೊಳ್ಳಬಾರದು. ಆತ್ ಎಂಬುದು ತಕಾರವೇ ಪರವಾಗಿ ಉಳ್ಳದ್ದು. ಐಚ್ ಎಂಬುದು (ತ್ + ಐಚ್) ತಕಾರದ ಪರದದಲ್ಲಿರುವುದು. **ಸೂತ್ರಾರ್ಥ.** ದೀರ್ಘವಾದ ಆಕಾರವೂ ಐ, ಔ ಗಳೂ ವೃದ್ಧಿ ಸಂಜ್ಞೆಯನ್ನು ಹೊಂದುತ್ತವೆ. ಇನ್ನು ಎಲ್ಲಿಯಾದರೂ ವೃದ್ಧಿ ಬರುತ್ತದೆ ಎಂದರೆ ಆ ಐ, ಔ ಗಳಲ್ಲಿ ಯಾವುದಾದರೂ ಬರುತ್ತದೆ ಎಂದು ತಿಳಿಯಬೇಕು. ಸಂಜ್ಞೆ ಹೇಳಿದುದಕ್ಕೆ ಪ್ರಯೋಜನ ಹೇಳುತ್ತಾನೆ.

(ವೃದ್ಧಿ ಸಂಧಿಯನ್ನು ಹೇಳುವ ಸೂತ್ರ)

## ೩೩. ವೃದ್ಧಿರೇಚಿ ॥ ೬-೧-೮೮ ॥

**ಅದೇಚಿ ಪರೇ ವೃದ್ಧಿರೇಕಾದೇಶಃ ಸ್ಯಾತ್ ॥ ಗುಣಾಪವಾದಃ ।**

**ಕೃಷ್ಣೈಕತ್ವಮ್ । ಗಂಗೌಘಃ । ದೇವೈಶ್ವರ್ಯಮ್ । ಕೃಷ್ಣೌತ್ಕಂಠ್ಯಮ್ ॥**

ವೃದ್ಧಿಃ, ಏಚಿ ॥ ದ್ವಿಪದಸೂತ್ರ. "ಆದ್ಗುಣಃ" ಎಂಬುದರಿಂದ ಆತ್ ಎಂಬ ಪಂಚಮ್ಯಂತ ಪದವು ಅನುವೃತ್ತವಾಗುತ್ತದೆ. ಏಚ್ ಪ್ರತ್ಯಾಹಾರ. ಸಪ್ತಮ್ಯಂತವಾದುದರಿಂದ ಪರದಲ್ಲಿರಬೇಕು ಎಂದು ಅರ್ಥವಾಗುತ್ತದೆ. "ಏಕಃ ಪೂರ್ವಪರಯೋಃ" ಎಂಬ ಅಧಿಕಾರವಿರುವುದರಿಂದ ವೃದ್ಧಿಯು ಪೂರ್ವ ಪರಗಳೆರಡರ ಸ್ಥಾನದಲ್ಲಿ ಬರುತ್ತದೆ. ಸೂತ್ರಾರ್ಥ. ಅಕಾರಕ್ಕೆ ಏಚ್ ಪರವಾದಾಗ ಪೂರ್ವ ಪರಗಳ ಸ್ಥಾನದಲ್ಲಿ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಈ ಸೂತ್ರವು ಗುಣಕ್ಕೆ ಅಪವಾದ. "ಯೇನನಾಪ್ರಾಪ್ತೇ ಯೋ ವಿಧಿರಾರಭ್ಯತೇ ಸ ತಸ್ಯಾಪವಾದಃ" ಎಂದು ಅಪವಾದದ ಲಕ್ಷಣ. ಒಂದು ಸೂತ್ರವು ಅವಶ್ಯ ಬರುತ್ತಿರುವಾಗ ಅಲ್ಲಿಯೇ ಇನ್ನೊಂದನ್ನು ಹೇಳುವುದಾದರೆ ಹಾಗೆ ಹೇಳುವ ಸೂತ್ರವು ಹಿಂದಿನ ಸೂತ್ರಕ್ಕೆ ಅಪವಾದ. ಪ್ರಕೃತ ಅಕಾರಕ್ಕೆ ಏಚ್ ಪರವಾದಾಗ ಏಚೂ ಅಚ್ಚಾದುದರಿಂದ ಗುಣಬರಬೇಕು. ಅಚ್ ಸಾಮಾನ್ಯ, ಏಚ್ ವಿಶೇಷ. ಹೀಗೆ ಗುಣವು ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ವೃದ್ಧಿಯು ಹೇಳಿದೆ. ವೃದ್ಧಿಯು ನಿರವಕಾಶವಾದುದರಿಂದ ಅಪವಾದ. ಗುಣವಾದರೋ ಏಚ್ ನಿಮಿತ್ತವನ್ನು ಬಿಟ್ಟರೆ ಇ ಉ ಋ, ಲೃ ಪರವಾದಾಗ ಬರುತ್ತದೆ. ಆದುದರಿಂದ ಅದು ಸಾಮಾನ್ಯಸೂತ್ರ. ಆಗ ಸಾಮಾನ್ಯವನ್ನು ಬಾಧಿಸಿ ವಿಶೇಷವೇ ಬರುತ್ತದೆ. ಕೃಷ್ಣ + ಏಕತ್ವಮ್ ಎಂದಿರುವಾಗ ಅಕಾರಕ್ಕೆ ಏಕಾರ ಪರವಾದುದರಿಂದ ಅ ಮತ್ತು ಏ ಸ್ಥಾನದಲ್ಲಿ ವೃದ್ಧಿ ಆದೇಶ, ಅಕಾರಕ್ಕೆ ಕಂಠಸ್ಥಾನ. ಏಕಾರಕ್ಕೆ ಕಂಠತಾಲು ಸ್ಥಾನ. ಆಗ ವೃದ್ಧಿಯಲ್ಲಿ ಕಂಠತಾಲುಸ್ಥಾನವುಳ್ಳ ಐಕಾರಾದೇಶ, ಕೃಷ್ಣ್ + ಐ + ಕತ್ವಂ = ಕೃಷ್ಣೈಕತ್ವಮ್. ಗಂಗಾ + ಓಘಃ ಎಂದಿರುವಾಗ ಆಕಾರಕ್ಕೆ ಏಚಿನ ಓ ಪರವಾದುದರಿಂದ ಆಕಾರಕ್ಕೂ ಓಕಾರಕ್ಕೂ ಕಂಠೋಷ್ಠಸ್ಥಾನವುಳ್ಳ ಔಕಾರರೂಪ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಗಂಗ್ + ಔ + ಘಃ = ಗಂಗೌಘಃ. ದೇವ + ಐಶ್ವರ್ಯಮ್ ಎಂದಿರುವಾಗ ಅಕಾರಕ್ಕೆ ಐಕಾರರೂಪ ಏಚ್ ಪರವಾದುದರಿಂದ ಅಕಾರ ಐಕಾರ ಸ್ಥಾನದಲ್ಲಿ ಕಂಠತಾಲು ಸ್ಥಾನವುಳ್ಳ ಐಕಾರರೂಪ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ದೇವ್ + ಐ + ಶ್ವರ್ಯಂ = ದೇವೈಶ್ವರ್ಯಮ್. ಕೃಷ್ಣ + ಔತ್ಕಣ್ಠ್ಯಮ್ ಎಂದಿರುವಾಗ ಅಕಾರಕ್ಕೆ ಔಗಳ ಸ್ಥಾನದಲ್ಲಿ ಕಂಠೋಷ್ಠಸ್ಥಾನ ಸಾಮ್ಯವುಳ್ಳ ಔಕಾರ ರೂಪವೃದ್ಧಿ, ಕೃಷ್ಣ್ + ಔ + ತ್ಕಣ್ಠ್ಯಂ = ಕೃಷ್ಣೌತ್ಕಣ್ಠ್ಯಮ್. ಏಚಿನಲ್ಲಿ ನಾಲ್ಕು ವರ್ಣಗಳಿರುವುದರಿಂದ ನಾಲ್ಕು ಉದಾಹರಣೆಗಳನ್ನು ತೋರಿಸಿರುತ್ತಾನೆ.

ಈಗ ಕೆಲವು ಸಂಧಿಗಳಿಗೆ ಅಪವಾದವಾಗಿ ವೃದ್ಧಿಸಂಧಿಯನ್ನೇ ಹೇಳುತ್ತಾನೆ

(ವೃದ್ಧಿಸಂಧಿಯನ್ನು ಹೇಳುವ ವಿಶೇಷಸೂತ್ರ)

## ೩೪. ಏತ್ಯೇಧತ್ಯೂಠ್ಸು ॥ ೬-೧-೮೯ ॥

ಅವರ್ಣಾದೇಜಾದ್ಯೋರೇತ್ಯೇಧತ್ಯೋರೂಠಿ ಚ ಪರೇ ವೃದ್ಧಿರೇಕಾದೇಶಃ ಸ್ಯಾತ್ । ಉಪೈತಿ । ಉಪೈಧತೇ । ಪ್ರಷ್ಠೌಹಃ । ಏಜಾದ್ಯೋಃ ಕಿಮ್ ? ಉಪೇತಃ । ಮಾ ಭವಾನ್ ಪ್ರೇದಿಧತ್ ॥

ಒಂದೇ ಪದವುಳ್ಳ ಸೂತ್ರ. ಏತಿಶ್ಚ ಏಧತಿಶ್ಚ ಊಠ್ ಚ ಏತ್ಯೇಧತ್ಯೂಠಃ, ತೇಷು ಏತ್ಯೇಧತ್ಯೂಠ್ಸು ಇಲ್ಲಿ ಏತಿ ಏಧತಿ ಎಂಬದು ಇಣ್ ಧಾತು, ಮತ್ತು ಏಧಧಾತು ಎಂದು ತಿಳಿಯಬೇಕು. "ಇಕ್ಶ್ತಿಪೌ ಧಾತುನಿರ್ದೇಶೇ" ಧಾತುವನ್ನು ಎಲ್ಲಿಯಾದರೂ ನಿರ್ದೇಶಮಾಡುವುದಾದರೆ ಇಕ್ ಪ್ರತ್ಯಯ (ಇ) ಹಚ್ಚಿಯಾಗಲೀ ಶ್ತಿಪ್ (ತಿಉಳಿಕೆ) ಪ್ರತ್ಯಯಸೇರಿಸಿಯಾಗಲೀ ಹೇಳಬೇಕೆಂದಿರುವುದರಿಂದ ಇಲ್ಲಿ ಇಣ್ (ಇ) ಧಾತುವಿಗೂ ಏಧಧಾತುವಿಗೂ ಶ್ತಿಪ್ ಸೇರಿಸಿ ಹೇಳಿದೆ. "ವೃದ್ಧಿರೇಚಿ" ಸೂತ್ರದಿಂದ ಏಚಿ ಎಂಬುದು ಅನುವೃತ್ತವಾಗುತ್ತದೆ. ಅದು ಏತಿಏಧತಿಗೆ ವಿಶೇಷಣ. ಸಪ್ತಮ್ಯಂತವಾಗಿ ವರ್ಣವಾದುದರಿಂದ ವಿಶೇಷಣಮಾಡಿದಾಗ ಏಚೇ ಆದಿಯಾಗಿರುವ ಎಂಬ ಅರ್ಥಬರುತ್ತದೆ. ಊಠಿನಲ್ಲಿ ಸಂಭವಿಸದಿರುವುದರಿಂದ ವಿಶೇಷಣವಿಲ್ಲ. "ಅದ್ಗುಣಃ" ಎಂಬುದರಿಂದ ಆತ್ ಎಂಬ ಪಂಚಮ್ಯಂತಪದವು ಅನುವೃತ್ತವಾಗುತ್ತದೆ. "ಏಕಃ ಪೂರ್ವಪರಯೋಃ" ಎಂಬ ಅಧಿಕಾರವಿದೆ. ಸೂತ್ರಾರ್ಥ— ಅಕಾರಕ್ಕೆ ಏಜಾದಿಯಾದ ಇಣ್ ಧಾತುವೂ ಏದಧಾತುವೂ ಊಠಾದೇಶವೂ ಪರವಾದಾಗ ಪೂರ್ವಪರಗಳ ಸ್ಥಾನದಲ್ಲಿ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಉಪೈತಿ (ಹತ್ತಿರಕ್ಕೆ ಬರುತ್ತಾನೆ). ಇದು ಏಜಾದಿಯಾದ ಇಣ್ ಧಾತು ಪರವಾದಾಗ. ಉದಾಹರಣೆ: ಉಪ+ಏತಿ ಎಂದಿರುವಾಗ ಅಕಾರಕ್ಕೆ ಏಜಾದಿಯಾದ ಇಣ್ ಧಾತುಪರವಾದುದರಿಂದ ಅಕಾರ ಎಕಾರಗಳಿಗೆ ಹಿಂದಿನಂತೆ ಸ್ಥಾನಸಾಮ್ಯದಿಂದ ಕಂಠತಾಲು ಸ್ಥಾನವುಳ್ಳ ಐಕಾರವೃದ್ಧಿಯು ಏಕಾದೇಶವಾಗಿ ಬರುತ್ತದೆ ಉಪ್+ಐ+ತಿ=ಉಪೈತಿ. ಉಪ+ಏಧತೇ ಎಂದಿರುವಾಗ ಅಕಾರಕ್ಕೆ ಏಜಾದಿಯಾದ ಏಧ ಧಾತುವು ಪರವಾದುದರಿಂದ ಅ ಮತ್ತು ಏ ಸ್ಥಾನದಲ್ಲಿ ಐಕಾರಾದೇಶ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಉಪ್+ಐ+ಧತೇ=ಉಪೈಧತೇ. ಪ್ರಷ್ಠ+ಊಹಃ ಎಂಬಲ್ಲಿ ಊಹಃ ಎಂಬಲ್ಲಿರುವ ಊಕಾರವು ಊಠಿನ ಊಕಾರ— ಪ್ರಷ್ಠಂ ವಹತಿ ಇತಿ ಪ್ರಷ್ಠವಾಟ್. ಪಳಗಿಸುವಾಗ ಕತ್ತಿನ ಮೇಲೆ ಇಡಲ್ಪಟ್ಟ ಮರವನ್ನು ಹೊತ್ತಿರುವ ಎತ್ತು. ವಹ=ಪ್ರಾಪಣೇ ವಹ ಧಾತುವಿಗೆ ಣ್ವಿ ಪ್ರತ್ಯಯ ಮಾಡಿ "ವಾಹ ಊಠ್" ಎಂಬುದರಿಂದ ಸಂಪ್ರಸಾರಣ ಊಠ್ ಮಾಡಿದರೆ ಊಹಃ (ಊಹ್+ಶಸ್) ಎಂದಾಗುತ್ತದೆ. ಅಕಾರಕ್ಕೆ ಊಠ್ ಪರವಾದುದರಿಂದ ಅಕಾರಕ್ಕೂ ಊಕಾರಕ್ಕೂ ಕಂಠೋಷ್ಠಸ್ಥಾನ ಸಾಮ್ಯವಿರುವ ಔಕಾರ ವೃದ್ಧಿಯು ಏಕಾದೇಶ

ವಾಗಿ ಬರುತ್ತದೆ. ಪ್ರಷ್ಠ್ + ಊ + ಹಃ = ಪ್ರಷ್ಠೌಹಃ. ಇನ್ನು ಮುಂದೆ ದಳಕೃತ್ಯವನ್ನು ತೋರಿಸುತ್ತಾನೆ. ಸೂತ್ರದಲ್ಲಿ ಒಂದೊಂದು ಪದಕ್ಕೂ ಪ್ರಯೋಜನವೇನು? ಎಂದು ವಿಚಾರಮಾಡುವುದೇ ದಳಕೃತ್ಯವೆಂದೆನಿಸುತ್ತದೆ. ಪ್ರಕೃತ ಏಜಾದಿಯಾದ ಇಣ್ ಧಾತುವೂ ಏಧ ಧಾತುವೂ ಪರವಾಗಿರಬೇಕೆಂದು ಹೇಳಿದೆ. ಲಕ್ಷ್ಯದಲ್ಲಿ ಏತಿ ಏಧತೇ ಎಂದು ಏಜಾದಿಯಾಗಿಯೇ ಇದೆ. ಪುನಃ ಏಕೆ ಏಜಾದಿಯೆಂದು ಹೇಳಬೇಕು? ವ್ಯರ್ಥವಲ್ಲವೇ ಅಂದರೆ ಉಪೇತಃ ಎಂಬಲ್ಲಿ ಪ್ರಯೋಜನ ಹೇಳುತ್ತಾನೆ. ಇಣ್ ಧಾತುವು ಎಲ್ಲಾ ಲಕಾರದಲ್ಲಿಯೂ ಎಲ್ಲಾ ವಚನದಲ್ಲಿಯೂ ಏಜಾದಿಯಾಗಿರುವುದಿಲ್ಲ. ಮೊದಲಿನ ಲಟ್ ಲಕಾರದಲ್ಲಿಯೇ ಏತಿ, ಇತಃ ಯಂತಿ । ಏಷಿ, ಇಥಃ ಇಥ । ಏಮಿ, ಇವಃ, ಇಮಃ ಎಂದು ರೂಪವಾಗುತ್ತದೆ. ಕೇವಲ ಏಕವಚನಗಳಲ್ಲಿ ಮಾತ್ರ ಏಕಾರಾದಿಯಾಗಿರುತ್ತದೆ. ಸೂತ್ರದಲ್ಲಿ ಕೇವಲ ಇಣ್ ಧಾತು ಪರವಾದಾಗ ವೃದ್ಧಿ ಎಂದು ಹೇಳಿದ್ದರೆ ಉಪ + ಇತಃ ಎಂಬಲ್ಲಿಯೂ ಇಣ್ ಧಾತು ಪರವಾದುದರಿಂದ ವೃದ್ಧಿ ಬರಬೇಕಾಗುತ್ತದೆ. ಅದು ಇಷ್ಟವಲ್ಲ. ಆದುದರಿಂದ ಏಜಾದಿ ವಿಶೇಷಣವನ್ನು ಕೊಟ್ಟಿರುವುದು. ಪ್ರಕೃತ ಏಜಾದಿಯಾಗದಿರುವುದರಿಂದ ವೃದ್ಧಿ ಬರುವುದಿಲ್ಲ. "ಆದ್ಗುಣಃ" ಎಂಬುದರಿಂದ ಗುಣವು ಏಕಾದೇಶವಾಗಿ ಬಂದರೆ ಉಪೇತಃ ಎಂದಾಗುತ್ತದೆ. ಮಾ ಭವಾನ್ ಪ್ರ + ಇದಿಧತ್. (ತಾವು ವೃದ್ಧಿಯನ್ನು ಮಾಡಿಸಬೇಡಿ). ಇದು ಏಜಾದಿಯಾಗದ ಏಧಧಾತುವಿಗೆ ಉದಾಹರಣೆ. ಏಧ ಧಾತುವು ಎಲ್ಲಾ ಲಕಾರಗಳಲ್ಲಿ ಏಜಾದಿಯಾದರೂ ಕೆಲವುಕಡೆ ಆಗುವುದಿಲ್ಲ. ಪ್ರಕೃತ ಇದಿಧತ್ ಎಂದು ಣಿಚ್ಚಿನಲ್ಲಿ ರೂಪವಾಗಿದೆ. ಏಧಧಾತುವಿಗೆ ಣಿಚ್‌ಪ್ರತ್ಯಯಬಂದು ಆದರ ಮೇಲೆ ಲುಙ್ ಲಕಾರ ಬಂದು ಪ್ರಥಮಪುರುಷ ಏಕವಚನದಲ್ಲಿ ಇದಿಧತ್ ಎಂದಾಗುತ್ತದೆ. ಲುಙನಲ್ಲಿ ಆಡಾಗಮ ಬಂದು ವೃದ್ಧಿಬಂದು ಐದಿಧತ್ ಎಂದೇ ಆಗಬೇಕಾದುದು. ಆದರೆ ಮಾ ಎಂಬುದರ ಯೋಗವಿರುವಾಗ ಆಡಾಗಮ ಬರುವುದಿಲ್ಲವೆಂದು ಮುಂದೆ ಹೇಳುತ್ತಾನೆ. ಆದುದರಿಂದ ಇದಿಧತ್ ಎಂದೇ ರೂಪವಾಗುತ್ತದೆ. ಸೂತ್ರದಲ್ಲಿ ಕೇವಲ ಏಧಧಾತು ಪರವಾದಾಗ ವೃದ್ಧಿಹೇಳಿದ್ದರೆ ಪ್ರ + ಇದಿಧತ್ ಎಂಬಲ್ಲಿಯೂ ವೃದ್ಧಿಬರಬೇಕಾಗುತ್ತದೆ. ಏಜಾದಿಏಧಧಾತುವೆಂದುದರಿಂದ ಇಲ್ಲಿ ವೃದ್ಧಿಬರುವುದಿಲ್ಲ. ಹಿಂದಿನಂತೆ ಗುಣ. ಏಜಾದಿವಿಶೇಷಣಕ್ಕೆ ಹೀಗೆ ಪ್ರಯೋಜನವಿರುವುದರಿಂದ ಅದು ಸಾರ್ಥಕವಾಗಿದೆ. ಇಲ್ಲಿ ಹೇಳಿದ ವೃದ್ಧಿಯು ಪರರೂಪಸಂಧಿಗೂ ಗುಣಸಂಧಿಗೂ ಅಪವಾದವಾಗಿದೆ. ಉಪ + ಏತಿ, ಉಪ + ಏಧತೇ ಎಂಬಲ್ಲಿ "ಏಙಿ ಪರರೂಪಮ್" ಎಂಬುದರಿಂದ ಪರರೂಪವೂ ಪ್ರಷ್ಠ + ಊಹಃ ಎಂಬಲ್ಲಿ "ಆದ್ಗುಣಃ" ಎಂಬುದರಿಂದ ಗುಣವೂ ಪ್ರಾಪ್ತವಾದರೆ ಅವುಗಳಿಗೆ ಅಪವಾದವಾಗಿ ವೃದ್ಧಿಯನ್ನು ಹೇಳಿರುತ್ತಾನೆ.

(ವಿಶೇಷವೃದ್ಧಿಯನ್ನು ವಿಧಿಸುವ ವಾರ್ತಿಕ)

ವಾ॥ ಅಕ್ಷಾದೂಹಿನ್ಯಾಮುಪಸಂಖ್ಯಾನಮ್ ॥

ಅಕ್ಷೌಹಿಣೀ ಸೇನಾ ॥

ಅಕ್ಷಾತ್. ಊಹಿನ್ಯಾಂ. ಉಪಸಂಖ್ಯಾನಮ್ ॥ ತ್ರಿಪದವಾರ್ತಿಕ. ಅಕ್ಷ ಶಬ್ದಕ್ಕೆ ಊಹಿನೀ ಶಬ್ದ ಪರವಾದಾಗ ವೃದ್ಧಿಯು ಬರುತ್ತದೆ ಎಂದು ಇನ್ನೂ ಅಧಿಕವಾಗಿ ಹೇಳಬೇಕು. ಇಲ್ಲಿಯೂ ಗುಣವು ಪ್ರಾಪ್ತವಾದರೆ ಅಪವಾದವಾಗಿ ವೃದ್ಧಿಯನ್ನು ಹೇಳುತ್ತಾನೆ. ಅಕ್ಷೌಹಿಣೀ ಎಂಬುದು ಉದಾಹರಣೆ. ಸೇನಾ ಅರ್ಥ ವಿವರಣೆ. 21840 ರಥವೂ 21870 ಆನೆಗಳೂ, 65610 ಕುದುರೆಗಳೂ, 109350 ಕಾಲ್ಬಾಳುಗಳೂ ಇರುವ ಸೇನೆಗೆ ಅಕ್ಷೌಹಿಣೀ ಎಂದು ಭಾರತದಲ್ಲಿ ವಿವೃತವಾಗಿದೆ. ಅಕ್ಷ+ಊಹಿನೀ ಎಂದಿರುವಾಗ ಅಕಾರಕ್ಕೂ ಊಕಾರಕ್ಕೂ ವೃದ್ಧಿ ಔಕಾರವು ಏಕಾದೇಶವಾಗಿ ಬಂದರೆ ಅಕ್ಷೌಹಿಣೀ ಎಂದು ರೂಪವಾಗುತ್ತದೆ.

(ವಿಶೇಷ ವೃದ್ಧಿಯನ್ನು ವಿಧಿಸುವ ವಾರ್ತಿಕ)

॥ ವಾ॥ ಪ್ರಾದೂಹೋಢೋಢ್ಯೇಷೈಷ್ಯೇಷು ॥

ಪ್ರಾತ್, ಊಹೋಢೋಢ್ಯೇಷೈಷ್ಯೇಷು ॥ ದ್ವಿಪದವಾರ್ತಿಕ. ಪ್ರ ಎಂಬ ಉಪಸರ್ಗದ ಪರದಲ್ಲಿ ಊಹ, ಊಢ, ಊಢಿ, ಏಷ, ಏಷ್ಯ, ಇಷ್ಟು ಶಬ್ದಗಳು ಪರವಾದರೆ ಪೂರ್ವಪರ ಸ್ಥಾನಗಳಲ್ಲಿ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಈ ವಾರ್ತಿಕವೂ ಗುಣಪರರೂಪಗಳಿಗೆ ಬಾಧಕವಾಗಿದೆ. ಪ್ರ+ಊಹಃ ಎಂದಿರುವಾಗ ಊಕಾರಕ್ಕೆ ವೃದ್ಧಿ ಏಕಾದೇಶವಾಗಿ ಬಂದರೆ ಪ್ರೌಹಃ ಎಂದಾಗುತ್ತದೆ. (ಅತಿಶಯ ತರ್ಕವುಳ್ಳವನು) ಪ್ರ+ಊಢಃ ಎಂದಿರುವಾಗ ಹಿಂದಿನಂತೇ ವೃದ್ಧಿಬಂದರೆ ಪ್ರೌಢಃ ಎಂದಾಗುತ್ತದೆ. (ಪುಷ್ಟನಾದವನು) ಹಾಗೆಯೇ ಪ್ರ+ಊಢಿಃ. (ಅತಿಶಯವಾದ ವೃದ್ಧಿ) ಪ್ರ+ಏಷಃ ಎಂದಿರುವಾಗ ಅ+ಏ ಇವುಗಳಿಗೆ ವೃದ್ಧಿ ಐಕಾರ ಬಂದರೆ ಪ್ರೈಷಃ. (ಕಳುಹಿಸುವಿಕೆ) ಹಾಗೆಯೇ ಪ್ರ+ಏಷ್ಯಃ ಎಂಬಲ್ಲಿ ವೃದ್ಧಿ ಐಕಾರ ಬಂದರೆ ಪ್ರೈಷ್ಯಃ (ಸೇವಕನು). ಮೂರು (ಮೊದಲು) ಕಡೆಯಲ್ಲಿ ಗುಣವೂ ಕೊನೆಯ ಎರಡರಲ್ಲಿ ಪರರೂಪವೂ ಪ್ರಾಪ್ತವಾದರೆ ಅಪವಾದವಾಗಿ ವೃದ್ಧಿ ಹೇಳಿರುತ್ತಾನೆ.

(ತೃತೀಯಾಸಮಾಸದಲ್ಲಿ ವೃದ್ಧಿವಿಧಾಯಕವಾರ್ತಿಕ)

ವಾ॥ ಋತೇ ಚ ತೃತೀಯಾ ಸಮಾಸೇ ॥

ಸುಖೇನ ಋತಃ ಸುಖಾರ್ತಃ । ತೃತೀಯೇತಿ ಕಿಮ್ ? ಪರಮರ್ತಃ । ತ್ರಿಪದ-ವಾರ್ತಿಕ. ತೃತೀಯಾಸಮಾಸದಲ್ಲಿ ಅಕಾರದದೆಸೆಯಿಂದ ಋತವೆಂಬ ಶಬ್ದ ಪರವಾದಾಗ ಪೂರ್ವಪರ ಅಚ್‌ಗಳ (ಅ+ಋ) ಸ್ಥಾನದಲ್ಲಿ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಇದೂ ಗುಣಕ್ಕೆ ಅಪವಾದ. ಸುಖೇನ ಋತಃ ಎಂಬುದು ತೃತೀಯಾಸಮಾಸದ ವಿಗ್ರಹ. ಸುಖ+ಋತಃ ಎಂದಿರುವಾಗ ಅಕಾರ ಋಕಾರಕ್ಕೆ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಸುಖ್+ಆರ್+ತಃ=ಸುಖಾರ್ತಃ !

ತೃತೀಯಾಸಮಾಸದಲ್ಲಿ ಎಂದುದೇಕೆ? ತೃತೀಯಾಸಮಾಸದಲ್ಲಿ ಎಂದು ಹೇಳದಿದ್ದರೆ ಋತಶಬ್ದ ಪರವಾದಾಗ ಎಲ್ಲಾ ಕಡೆಯಲ್ಲಿಯೂ ಬರಬೇಕಾಗುತ್ತದೆ. ಪರಮಶ್ಚಾಸೌ ಋತಶ್ಚ ಪರಮರ್ತಃ । ಇದು ಕರ್ಮಧಾರಯಸಮಾಸ. ಆದುದರಿಂದ ಪರಮ+ ಋತಃ ಎಂಬಲ್ಲಿ ವೃದ್ಧಿ ಬರುವುದಿಲ್ಲ. "ಅದ್ಗುಣಃ" ಎಂಬುದರಿಂದ ಗುಣಬಂದರೆ (ಅರ್) ಪರಮರ್ತಃ ಎಂದಾಗುತ್ತದೆ.

ವಾ॥ ಪ್ರವತ್ಸತರಕಂಬಲವಸನಾರ್ಣದಶಾನಾಮೃಣೇ ॥
**ಪ್ರಾರ್ಣಮ್ । ವತ್ಸತರಾರ್ಣಮ್ ಇತ್ಯಾದಿ.**

ದ್ವಿಪದ ವಾರ್ತಿಕ. ಪ್ರವತ್ಸತರಕಂಬಲವಸನಾರ್ಣದಶಾನಾಂ ಎಂಬಲ್ಲಿ ಪಂಚಮ್ಯರ್ಥದಲ್ಲಿ ಷಷ್ಠೀಬಂದಿದೆ. ಪ್ರ, ವತ್ಸತರ, ಕಂಬಲ, ವಸನ, ಋಣ, ದಶ; ಈ ಶಬ್ದಗಳ ಪರದಲ್ಲಿ ಋಣಶಬ್ದ ಬಂದರೆ ಪೂರ್ವಪರ ಅಚ್‌ಗಳಸ್ಥಾನದಲ್ಲಿ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಇದೂ ಗುಣಕ್ಕೆ ಅಪವಾದ. ಪ್ರ+ಋಣಂ ಎಂದಿರುವಾಗ ಹಿಂದಿನಂತೆ ವೃದ್ಧಿ. (ಆರ್): ಪ್ರಾರ್ಣಮ್. ಅಧಿಕಸಾಲ. ವತ್ಸತರ+ ಋಣಂ=ವತ್ಸತರಾರ್ಣಮ್. ಕರುವಿಗೋಸ್ಕರ ಮಾಡಿದ ಸಾಲ. ಕಂಬಲ+ಋಣಂ= ಕಂಬಲಾರ್ಣಮ್. ಕಂಬಳಿಗೋಸ್ಕರಸಾಲ. ವಸನ+ಋಣಂ=ವಸನಾರ್ಣಮ್. ವಸ್ತ್ರಕ್ಕೋಸ್ಕರಸಾಲ. ಋಣ+ಋಣಂ=ಋಣಾರ್ಣಮ್. ಒಂದುಸಾಲತೀರಿಸಲು ಮಾಡಿದ ಇನ್ನೊಂದುಸಾಲ ದಶ+ಋಣ=ದಶಾರ್ಣಃ ಒಂದುದೇಶ. ದಶಾರ್ಣಾ ಎಂದು ಒಂದು ನದಿಯೂ ಇದೆ.

(ಉಪಸರ್ಗ ಸಂಜ್ಞಾವಿಧಾಯಕ ಸೂತ್ರ)

## ೩೫. ಉಪಸರ್ಗಾಃ ಕ್ರಿಯಾಯೋಗೇ ॥ ೧-೪-೫೯

**ಪ್ರಾದಯಃ ಕ್ರಿಯಾಯೋಗೇ ಉಪಸರ್ಗಸಂಜ್ಞಾಃ ಸ್ಯುಃ । ಪ್ರ(1) ಪರಾ(2) ಅಪ(3) ಸಮ್(4) ಅನು(5) ಅವ(6) ನಿಸ್(7) ನಿರ್(8) ದುಸ್(9) ದುರ್(10) ವಿ(11) ಆಙ್(12) ನಿ(13) ಅಧಿ(14) ಅಪಿ(15) ಅತಿ(16) ಸು(17) ಉತ್(18) ಅಭಿ(19) ಪ್ರತಿ(20) ಪರಿ(21) ಉಪ(22) ಏತೇ ಪ್ರಾದಯಃ ॥**

ದ್ವಿಪದ ಸೂತ್ರ. ಪ್ರಾದಯಃ ಎಂಬ ಹಿಂದಿನ ಸೂತ್ರವು ಅನುವೃತ್ತವಾಗುತ್ತದೆ. ಪ್ರಾದಿಗಳು ಕ್ರಿಯಾಸಂಬಂಧವಿರುವಾಗ ಉಪಸರ್ಗವೆಂಬಸಂಜ್ಞೆಯನ್ನು ಹೊಂದುತ್ತವೆ. ಪ್ರಮುಂತಾದುವುಗಳು ಕ್ರಿಯೆಯೊಡನೆ ಅನ್ವಯಹೊಂದುವಾಗ ಮಾತ್ರ ಅವುಗಳಿಗೆ ಉಪಸರ್ಗಸಂಜ್ಞೆ. ಪ್ರಮುಂತಾದವುಗಳು ಇಪ್ಪತ್ತೆರಡು. ಮುಂದೆ ವಿಶೇಷವೃದ್ಧಿ ವಿಧಾನ ಮಾಡಲು ಈ ಉಪಸರ್ಗಸಂಜ್ಞೆಯನ್ನು ಹೇಳಿರುತ್ತಾನೆ.

(ಧಾತುಸಂಜ್ಞಾವಿಧಾಯಕ ಸೂತ್ರ)

## ೩೬. ಭೂವಾದಯೋ ಧಾತವಃ ॥ ೧-೩-೧ ॥

**ಕ್ರಿಯಾವಾಚಿನೋ ಭ್ವಾದಯೋ ಧಾತುಸಂಜ್ಞಾಃ ಸ್ಯುಃ ॥**

ಭೂವಾದಯಃ ಧಾತವಃ ॥ ದ್ವಿಪದ ಸೂತ್ರ. ಭೂಶ್ಚ ವಾಶ್ಚ ಭೂವೌ । ಆದಿಶ್ಚ ಆದಿಶ್ಚ ಆದೀ। ಭೂವೌ ಆದೀ ಯೇಷಾಂ ತೇ ಭೂವಾದಯಃ। ಆದಿಶ್ಚ ಆದಿಶ್ಚ ಎಂಬಲ್ಲಿ ಒಂದು ಆದಿಶಬ್ದ ಮೊದಲಾದವು ಎಂಬರ್ಥವನ್ನೂ ಎರಡನೇ ಆದಿ ಶಬ್ದವು ಸಾದೃಶ್ಯ ಎಂಬರ್ಥವನ್ನೂ ಕೊಡುತ್ತದೆ. ಭೂ ಎಂಬಲ್ಲಿ ಮೊದಲನೆಯದಕ್ಕೂ ವಾ ಎಂಬಲ್ಲಿ ಎರಡನೆಯದಕ್ಕೂ ಅನ್ವಯ. ಭೂ ಮೊದಲಾದವುಗಳು ವಾಸದೃಶಗಳು ಎಂದರ್ಥವಾಗುತ್ತದೆ. ಕ್ರಿಯಾ ಹೇಳುವುದರಲ್ಲಿ ವಾಸಾದೃಶ್ಯ. ಆಗ ವಾಸದೃಶವೆಂದರೆ ಕ್ರಿಯಾವಾಚಕವೆಂದರ್ಥವಾಗುತ್ತದೆ. **ಸೂತ್ರಾರ್ಥ.** ಕ್ರಿಯಾವಾಚಕಗಳಾದ ಭೂ ಮುಂತಾದವುಗಳು ಧಾತು ಎಂಬ ಸಂಜ್ಞೆಯನ್ನು ಹೊಂದುತ್ತವೆ ವಾ ಎಂಬುದು ಎರಡು ರೀತಿಯಾಗಿದೆ. ಒಂದು ವಾ=ಗತಿಗಂಧನಯೋಃ ಎಂಬ ಧಾತು. ಇನ್ನೊಂದು ವಿಕಲ್ಪಾರ್ಥಕವಾದ ಅವ್ಯಯ. ಇಲ್ಲಿ ಭೂ ಎಂಬುವರೊಡನೆ ಹೇಳಿದುದರಿಂದ ವಿಕಲ್ಪಾರ್ಥಕ ಅವ್ಯಯವನ್ನು ತೆಗೆದುಕೊಳ್ಳಬಾರದು. ಹಾಗೆಯೇ ಭೂ ಎಂಬುದೂ ಎರಡು ರೀತಿಯಾಗಿದೆ. ಒಂದು ಭೂಮಿವಾಚಕ ಭೂ ಶಬ್ದ. ಇನ್ನೊಂದು ಭೂ=ಸತ್ತಾಯಾಂ ಎಂದು ಕ್ರಿಯಾವಾಚಿ ಭೂ ಶಬ್ದ. ಇಲ್ಲಿ ಕ್ರಿಯಾವಾಚಕ ವಾ ಎಂಬುದರೊಡನೆ ಹೇಳಿದುದರಿಂದ ಕ್ರಿಯಾವಾಚಕ ಭೂ ಎಂಬುದನ್ನೇ ತೆಗೆದುಕೊಳ್ಳಬೇಕು. ಭೂ ಮುಂತಾದವುಗಳು ಧಾತು ಪಾಠದಲ್ಲಿ ಪಠಿತವಾಗಿವೆ. ಪರಸ್ಪರ ಸಾಹಚರ್ಯದಿಂದ ಕ್ರಿಯಾವಾಚಕಗಳೆಂದು ಲಬ್ಧವಾಗಿದೆ.

(ಧಾತೂಪಸರ್ಗಗಳಲ್ಲಿ ವೃದ್ಧಿ ವಿಧಾಯಕ ಸೂತ್ರ)

## ೩೭. ಉಪಸರ್ಗಾದೃತಿ ಧಾತೌ ॥ ೬-೧-೯೧ ॥

**ಅವರ್ಣಾಂತಾದುಪಸರ್ಗಾದೃಕಾರಾದೌ ಧಾತೌ ಪರೇ ವೃದ್ಧಿರೇಕಾದೇಶಃಸ್ಯಾತ್ ॥ ಪ್ರಾರ್ಚ್ಛತಿ ॥**

ಉಪಸರ್ಗಾತ್, ಋತಿ, ಧಾತೌ ॥ ತ್ರಿಪದ ಸೂತ್ರ. "ಆದ್ಗುಣಃ" ಎಂಬುದರಿಂದ "ಆತ್" ಎಂಬುದು ಅನುವೃತ್ತವಾಗುತ್ತದೆ. ಅದು ಉಪಸರ್ಗಾತ್ ಎಂಬುದಕ್ಕೆ ವಿಶೇಷಣ. "ಯೇನ ವಿಧಿಸ್ತದಂತಸ್ಯ" ಎಂಬ ಪರಿಭಾಷೆಯಿಂದ ವಿಶೇಷಣವಾದುದರಿಂದ ಅಕಾರವೇ ಅಂತವಾಗಿರುವುದು ಎಂಬರ್ಥವಾಗುತ್ತದೆ. ಋತಿ ಎಂಬುದು ಧಾತುವಿಗೆ ವಿಶೇಷಣ. ಋತಿ ಎಂಬುದು ಸಪ್ತಮ್ಯಂತವಾಗಿ ವರ್ಣವಾದುದರಿಂದ "ಯಸ್ಮಿನ್ವಿಧಿಸ್ತದಾದಾವಲ್ಗ್ರಹಣೇ" ಎಂಬ ಪರಿಭಾಷೆಯಿಂದ ಅದೇ ಆದಿಯಾಗಿರು

ವುದು ಎಂಬರ್ಥವಾಗುತ್ತದೆ. ಧಾತೌ ಎಂಬುದೂ ಸಪ್ತಮೀ ಆದುದರಿಂದ ಋಕಾರಾದಿಯಾದ ಧಾತುವು ಪರವಾದಾಗ ಎಂದರ್ಥ. "ವೃದ್ಧಿರೇಚಿ" ಸೂತ್ರದಿಂದ ವೃದ್ಧಿಃ ಎಂಬುದು ಅನುವೃತ್ತವಾಗುತ್ತದೆ. "ಏಕಃ ಪೂರ್ವಪರಯೋಃ" ಎಂಬುದು ಅಧಿಕಾರ. **ಸೂತ್ರಾರ್ಥ.** ಅಕಾರಾಂತವಾದ ಉಪಸರ್ಗದ ಪರದಲ್ಲಿ ಋಕಾರಾದಿಯಾದ ಧಾತುವಿದ್ದರೆ ಪೂರ್ವಪರ ಅಚ್‌ಗಳ ಸ್ಥಾನದಲ್ಲಿ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಇದೂ ಗುಣಕ್ಕೆ ಅಪವಾದ. ಪ್ರ+ಋಚ್ಛತಿ. ಪ್ರ ಎಂಬುದು ಅವರ್ಣಾಂತವಾದ ಉಪಸರ್ಗ. ಋಚ್ಛತಿ ಎಂಬುದು ಋಕಾರಾದಿಯಾದ ಧಾತು. ಆದುದರಿಂದ ಅಕಾರ ಋಕಾರ ಸ್ಥಾನದಲ್ಲಿ ವೃದ್ಧಿಯು ಬರುತ್ತದೆ. ಋಕಾರದ ಸ್ಥಾನದಲ್ಲಿ ಬರುವುವುದರಿಂದ ಹಿಂದಿನಂತೆ ಆ ಎಂಬುದು ರಪರವಾಗಿ ಬರುತ್ತದೆ. ಪ್ರ್+ಆರ್+ಚ್ಛತಿ=ಪ್ರಾರ್ಚ್ಛತಿ. ಚನ್ನಾಗಿ ಹೋಗುತ್ತಾನೆ.

(ಪರರೂಪಸಂಧಿವಿಧಾಯಕ ಸೂತ್ರ)

## ೪೮. ಏಙಿ ಪರರೂಪಮ್ ॥ ೬-೧-೯೪ ॥

**ಆದುಪಸರ್ಗಾದೇಙಾದೌ ಧಾತೌ ಪರರೂಪಮೇಕಾದೇಶಃ ಸ್ಯಾತ್ ಪ್ರೇಜತೇ । ಉಪೋಷತಿ ॥**

ದ್ವಿಪದ ಸೂತ್ರ । "ಉಪಸರ್ಗಾದೃತಿಧಾತೌ" ಎಂಬ ಸೂತ್ರದಿಂದ ಉಪಸರ್ಗಾತ್, ಧಾತೌ ಎಂಬುದು ಅನುವೃತ್ತವಾಗುತ್ತದೆ. "ಆದ್ಗುಣಃ" ಎಂಬುದರಿಂದ ಆತ್ ಎಂಬುದು ಅನುವೃತ್ತವಾಗಿ ಉಪಸರ್ಗಕ್ಕೆ ವಿಶೇಷಣವಾದುದರಿಂದ ಆಕಾರಾಂತವಾದ ಉಪಸರ್ಗವೆಂದಾಗುತ್ತದೆ. ಏಙಿ ಎಂಬುದು ಧಾತೌ ಎಂಬ ಸಪ್ತಮ್ಯಂತಕ್ಕೆ ವಿಶೇಷಣವಾಗುವುದರಿಂದ "ಯಸ್ಮಿನ್ವಿಧಿಸ್ತದಾದಾವಲ್ಗ್ರಹಣೇ" ಎಂಬ ಪರಿಭಾಷೆಯಿಂದ ಏಙಾದಿಯಾದ ಧಾತುಪರವಾದಾಗ ಎಂದರ್ಥವಾಗುತ್ತದೆ. "ಏಕಃಪೂರ್ವಪರಯೋಃ" ಎಂಬುದು ಅಧಿಕಾರ. **ಸೂತ್ರಾರ್ಥ.** ಅವರ್ಣಾಂತವಾದ ಉಪಸರ್ಗಕ್ಕೆ ಏಙ್ (ಏ ಓ) ಅದಿಯಾದ ಧಾತುವು ಪರವಾದಾಗ ಪೂರ್ವಪರಗಳ ಸ್ಥಾನದಲ್ಲಿ ಪರರೂಪವು ಏಕಾದೇಶವಾಗಿ ಬರುತ್ತದೆ. ಪ್ರ+ಏಜತೇ. ಏಜೃ=ದೀಪ್ತೌ. ಧಾತು. ಪ್ರ ಎಂಬುದು ಅವರ್ಣಾಂತವಾದ ಉಪಸರ್ಗ. ಏಜತೇ ಎಂಬುದು ಏಜಾದಿಯಾದ ಧಾತು. ಅಕಾರಕ್ಕೂ ಏಕಾರಕ್ಕೂ ಒಟ್ಟಿಗೆ ಪರದರೂಪವಾದ ಏಕಾರವು ಆದೇಶವಾಗಿ ಬರುತ್ತದೆ. ಪ್ರ್+ಏ+ಜತೆ=ಪ್ರೇಜತೇ ॥ ಹೆಚ್ಚಾಗಿ ಪ್ರಕಾಶಿಸುತ್ತಾನೆ ಎಂದರ್ಥ. ಉಪ+ಓಷತಿ. ಉಷ ದಾಹೇ ಧಾತು. ಲಟಿನಲ್ಲಿ ಓಷತಿ ಎಂದು ರೂಪವಾಗುತ್ತದೆ ಆಕಾರ ಓಕಾರಕ್ಕೆ ಪರರೂಪವಾದ ಓಕಾರ ಒಂದೇ ಆದೇಶ ಬರುತ್ತದೆ. ಉಪ್+ಓ+ಷತಿ=ಉಪೋಷತಿ. ಇಲ್ಲಿ ಎರಡು ಕಡೆಯುಲ್ಲಿಯೂ ವೃದ್ಧಿಯು ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಪರರೂಪವನ್ನು ಹೇಳಿರುತ್ತಾನೆ.

(ಟಿ ಸಂಜ್ಞಾ ವಿಧಾಯಕ ಸೂತ್ರ)

**೩೯. ಅಚೋಽನ್ತ್ಯಾದಿ ಟಿ ॥ ೧-೧-೬೪ ॥**

**ಅಚಾಂ ಮಧ್ಯೇ ಯೋಽನ್ತ್ಯಃ ಸ ಆದಿರ್ಯಸ್ಯ ತಟ್ಟಿಸಂಜ್ಞಂ ಸ್ಯಾತ್ ।**

ಅಚಃ, ಅಂತ್ಯಾದಿ, ಟಿ। ತ್ರಿಪದ ಸೂತ್ರ. ಅಚಃ ಎಂಬುದು ನಿರ್ಧಾರಣಾರ್ಥದಲ್ಲಿ ಷಷ್ಠೀ. ಅಚ್‌ಗಳ ಮಧ್ಯೆ ಅಥವಾ ಪೈಕಿ ಎಂದರ್ಥ. ಜಾತ್ಯೈಕವಚನ. ಏಕವಚನವಿದ್ದರೂ ಬಹುವಚನಾರ್ಥವನ್ನು ಹೇಳಬೇಕು. ಅಂತೇ ಭವಃ ಅಂತ್ಯಃ । ಅಂತ್ಯಃ ಆದಿಃ ಯಸ್ಯ ತತ್ ಅಂತ್ಯಾದಿ. **ಸೂತ್ರಾರ್ಥ.** ಅಚ್‌ಗಳ ಮಧ್ಯದಲ್ಲಿ ಯಾವುದು ಅಂತ್ಯವೋ ಅದೇ ಆದಿಯಾಗಿರುವ ಸಮುದಾಯಕ್ಕೆ ಟಿ ಎಂಬ ಸಂಜ್ಞೆ ಬರುತ್ತದೆ. ಅಜ ಎಂಬಲ್ಲಿ ಎರಡು ಅಚ್‌ಗಳು ಇದ್ದರೆ ಅಂತ್ಯವಾದ ಅಚ್ ಜಕಾರದ ಮೇಲಿರುವ ಅಕಾರ. ಅದೇ ಆದಿಯಾಗಿರುವ ಸಮುದಾಯವೆಂದರೆ ಇಲ್ಲಿ ಬೇರೆ ಮುಂದೆ ಇಲ್ಲದಿರುವುದರಿಂದ ಅದೇ ಟಿ ಯಾಗುತ್ತದೆ. ಮನಸ್ ಎಂಬಲ್ಲಿ ಕೊನೆಯ ಅಚ್ ನಕಾರದ ಮೇಲಿರುವ ಅಕಾರ. ಅದೇ ಆದಿಯಾಗಿರುವ ಸಮುದಾಯವೆಂದರೆ ಅಸ್. ಆದುದರಿಂದ ಅಲ್ಲಿ ಅಸ್ ಟಿ ಯಾಗುತ್ತದೆ. ಅಜಂತ ಶಬ್ದದಲ್ಲಿ ಕೊನೆಯ ಅಚ್ ಮತ್ತು ಹಲ್ ಸೇರಿ ಟಿ ಯಾಗುತ್ತದೆಯೆಂದೂ ತಿಳಿಯಬೇಕು. ಈ ಟಿ ಸಂಜ್ಞೆಗೆ ಪ್ರಯೋಜನವನ್ನು ಹೇಳುತ್ತಾನೆ.

(ಪರರೂಪವಿಧಾಯಕ ವಾರ್ತಿಕ)

**ವಾ॥ ಶಕನ್ಧ್ವಾದಿಷು ಪರರೂಪಂ ವಾಚ್ಯಂ ॥**

**ತಚ್ಚ ಟೇಃ । ಶಕಂಧುಃ । ಕರ್ಕಂಧುಃ । ಮನೀಷಾ । ಆಕೃತಿಗಣೋಽಯಮ್ । ಮಾರ್ತಂಡಃ ॥**

ತ್ರಿಪದ ವಾರ್ತಿಕ. ಶಕಂಧು ಶಬ್ದವೇ ಆದಿಯಾಗಿರುವುದು ಒಂದು ಗಣ. ಶಂಕಧು ಮುಂತಾದ ಶಬ್ದಗಳ ವಿಷಯದಲ್ಲಿ ಆಯಾಯ ರೂಪಗಳು ಸಿದ್ಧವಾಗಲು ಅಲ್ಲಿ ಪೂರ್ವಪರಗಳ ಸ್ಥಾನದಲ್ಲಿ ಪರರೂಪವನ್ನು ಹೇಳಬೇಕು. ಯಾವ ಪೂರ್ವಪರಗಳು ಎಂದು ಆಕಾಂಕ್ಷೆ ಬಂದರೆ ತಚ್ಚ ಟೇಃ ಎಂದಿರುತ್ತಾನೆ. ಆ ಪರರೂಪವು ಪೂರ್ವ ಶಬ್ದದ ಟಿಗೂ ಪರ ಶಬ್ದದ ಆದಿ ಅಚ್ಚಿಗೂ ಬರುತ್ತದೆ. ಆಗ ಶಕ ಮುಂತಾದವುಗಳ ಟಿಗೆ ಅಂಧು ಮುಂತಾದವುಗಳ ಅಚ್ಚಿಗೂ ಸೇರಿ ಪರರೂಪವು ಏಕಾದೇಶವಾಗಿ ಬರುತ್ತದೆ ಎಂದು ನಿಶ್ಚಿತವಾದ ಅರ್ಥ ಸಿಗುತ್ತದೆ. ಶಕಾನಾಂ ಅಂಧುಃ ಶಂಕುಧುಃ. ಶಕದೇಶದವರ ಬಾವಿ. ಶಕ+ಅಂಧುಃ ಎಂದಿರುವಾಗ ಶಕ ಎಂಬಲ್ಲಿ ಟಿ ಎಂದರೆ ಕೊನೆಯ ಆಕಾರ ಅದಕ್ಕೂ ಅಂಧು ಎಂಬಲ್ಲಿರುವ ಅಕಾರಕ್ಕೂ ಪರದ ರೂಪವಾದ ಅಕಾರವೇ ಏಕಾದೇಶವಾಗಿ ಬಂದರೆ ಶಂಕಧುಃ ಎಂದಾಗುತ್ತದೆ. ಇಲ್ಲಿ ಸವರ್ಣದೀರ್ಘ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಪರರೂಪವನ್ನು ಹೇಳಿರು

ತ್ತಾರೆ. ಹೀಗೆಯೇ ಕರ್ಕ+ಅಂಧುಃ ಎಂದಿರುವಾಗ ಪರರೂಪ ಬಂದರೆ ಕರ್ಕಂಧುಃ ಎಂದಾಗುತ್ತದೆ. ಮನಸ್+ಈಷಾ ಎಂದಿರುವಾಗ ಟಿ ಅಸ್. ಇದಕ್ಕೂ ಈ ಕಾರಕ್ಕೂ ಪರದ ಈಕಾರವು ಏಕಾದೇಶವಾಗಿ ಬಂದರೆ ಮನ್+ಈ+ಷಾ, ಮನೀಷಾ ಎಂದಾಗುತ್ತವೆ. ಶಂಕಂಧು ಮುಂತಾದುವುಗಳನ್ನು ಇಷ್ಟೇ ಎಂದು ನಿರ್ಧರಿಸಲು ಆಗುವುದಿಲ್ಲ. ಆದುದರಿಂದ ಕೆಲವನ್ನು ನಿರ್ದೇಶಿಸಿ ಇದರಂತೇ ಇತರ ಸಂಧಿ ಬರುವಲ್ಲಿ ಪರರೂಪವನ್ನು ಹೇಳಿದ್ದರೆ ಆ ಶಬ್ದಗಳನ್ನೆಲ್ಲಾ ಈ ಗಣದಲ್ಲಿ ಸೇರಿದವುಗಳೆಂದು ತಿಳಿಯಬೇಕು. ಆಕೃತ್ಯಾ ಗಣ್ಯತೇ ಇತಿ ಆಕೃತಿಗಣಃ । ಸ್ವರೂಪದಿಂದ ತಿಳಿಯಲ್ಪಡುವವುಗಳು. ಯಾವ ಶಬ್ದದಲ್ಲಿ ಪರರೂಪವು ತೋರುತ್ತದೆಯೋ ಅದನ್ನು ವಿಧಿಸುವ ಸೂತ್ರವೂ ಇರುವುದಿಲ್ಲವೋ ಅಂಥವುಗಳು ಈ ಗಣದಲ್ಲಿ ಸೇರಿವೆ ಎಂದು ತಿಳಿಯಬೇಕು. ಇನ್ನು ಮುಂದೆ ಆಕೃತಿಗಣವೆಂದರೆ ಹೀಗೆ ತಿಳಿಯಬೇಕು. ಪ್ರಕೃತ ಮಾರ್ತಂಡ ಎಂಬ ಶಬ್ದವು ಶಕಂಧ್ವಾದಿಗಣದಲ್ಲಿ ಪಠಿತವಾಗಿಲ್ಲ. ಆದರೆ ಅಲ್ಲಿ ಮಾರ್ತ+ಅಂಡಃ ಎಂದಿರುವಾಗ ಪರರೂಪವು ಬಂದಿದೆ. ಇದು ಬೇರೆ ಯಾವ ಸೂತ್ರದಿಂದಲೂ ಸಿದ್ಧವಾಗುವುದಿಲ್ಲ. ಆದುದರಿಂದ ಶಕಂಧ್ವಾದಿ ಗಣದಲ್ಲಿ ಸೇರಿರುತ್ತದೆ ಎಂದು ಊಹಿಸಬೇಕು. ಮಾರ್ತಾಂಡಃ ಎಂದು ತಿಳಿಯದೆ ದೀರ್ಘ ಹೇಳುತ್ತಾರೆ ಇದು ತಪ್ಪು. ಮಾರ್ತಂಡನೆಂದರೆ ಸೂರ್ಯ.

(ಪರರೂಪವಿಧಾಯಕ ಸೂತ್ರ)

## ೪೦. ಓಮಾಙೋಶ್ಚ ॥ ೬-೧-೯೫ ॥

**ಓಮಿ ಆಙಿ ಚಾತ್ಪರೇ ಪರರೂಪಮೇಕಾದೇಶಃ ಸ್ಯಾತ್ । ಶಿವಾಯೋಂ ನಮಃ । ಶಿವ ಏಹಿ ॥**

ಓಮಾಙೋಃ ಚ ॥ ದ್ವಿಪದ ಸೂತ್ರ. "ಏಙಿ ಪರರೂಪಂ" ಎಂಬುದರಿಂದ "ಪರರೂಪಂ" "ಆತ್ ಗುಣಃ" ಎಂಬುದರಿಂದ "ಆತ್" "ಏಕಃ ಪೂರ್ವಪರಯೋಃ" ಎಂಬುದರಿಂದ "ಪೂರ್ವಪರಯೋಃ" ಪದಗಳು ಅನುವೃತ್ತವಾಗುತ್ತವೆ. ಓಮ್ ಚ ಆಙ್ ಚ ಓಮಾಙೌ, ತಯೋಃ ಓಮಾಙೋಃ । ಸಪ್ತಮೀ ದ್ವಿವಚನ. ಅಕಾರಕ್ಕೆ ಓಮ್ ಮತ್ತು ಆಙ್ ಪರವಾದಾಗ ಪೂರ್ವಪರಸ್ಥಾನಗಳಲ್ಲಿ ಪರರೂಪವು ಏಕಾದೇಶವಾಗಿ ಬರುತ್ತದೆ. ಇದು ಕ್ರಮವಾಗಿ ವೃದ್ಧಿ ಸವರ್ಣದೀರ್ಘ ಸಂಧಿಗಳಿಗೆ ಅಪವಾದ. ಶಿವಾಯ+ಓಂ ನಮಃ ಎಂದಿರುವಾಗ ಅಕಾರವೆಂದರೆ ಯಕಾರದ ಮೇಲಿರುವ ಅಕಾರ. ಅದಕ್ಕೆ ಓಂ ಪರವಾದುದರಿಂದ ಅ ಮತ್ತು ಓಂ ಎಂಬುದಕ್ಕೆ ಓಂ ಎಂಬುದು ಏಕಾದೇಶವಾಗಿ ಬರುತ್ತದೆ. ಶಿವಾಯ್+ಓಂ+ನಮಃ ಶಿವಾಯೋಂ ನಮಃ ಎಂದಾಗುತ್ತದೆ. ಶಿವ+ಏಹಿ ಎಂದಿರುವಾಗ ಆಙ್ ಪರವಾದುದರಿಂದ ಪರರೂಪ ಹೇಳಬೇಕು. ಆದರೆ ಏಹಿ ಎಂದು ಇಲ್ಲಿ ತೋರುತ್ತದೆ. ಆದುದರಿಂದ ಏಹಿ

ಹೇಗಾಯಿತೆಂದು ಮೊದಲು ತಿಳಿಯಬೇಕು. ಆಙ್ ಎಂದರೆ ಉಪಸರ್ಗ. ಅಲ್ಲಿ ಙಕಾರ "ಹಲಂತ್ಯಂ" ಎಂಬುದರಿಂದ ಇತ್ ಸಂಜ್ಞೆಯನ್ನು ಹೊಂದುವುದರಿಂದ "ತಸ್ಯ ಲೋಪಃ" ಎಂಬುದರಿಂದ ಅದು ಲೋಪವಾಗುತ್ತದೆ. ಇಹಿ ಎಂಬುದು ಇಣ್ ಧಾತುವಿನ ಲೋಟ್ ಮಧ್ಯಮ ಪುರುಷ ಏಕವಚನದ ರೂಪ. ಆ+ಇಹಿ ಎಂದಿರುವಾಗ "ಆದ್ಗುಣಃ" ಎಂಬುದರಿಂದ ಗುಣ ಬಂದರೆ ಏಹಿ ಎಂದು ರೂಪವಾಗುತ್ತದೆ. ಇಲ್ಲಿ ಏ ಎಂಬುದು ಆಙ್‌ನ ಸ್ಥಾನಕ್ಕೂ ಇ ಎಂಬುದರ ಸ್ಥಾನಕ್ಕೂ ಬಂದಿದೆ. ಆದರೂ ಆಙ ಎಂಬುದು ತೋರುವುದಿಲ್ಲವಷ್ಟೆ. ಹೀಗಿರುವಾಗ ಪರರೂಪ ಬರುವುದು ಹೇಗೆ? ಅಂದರೆ ಏಕಾದೇಶವು ಎರಡರ ಧರ್ಮವನ್ನೂ ಹೊಂದುತ್ತದೆ ಎಂದು ಮುಂದಿನ ಸೂತ್ರದಿಂದ ತಿಳಿಸುತ್ತಾನೆ.

(ಅಂತಾದಿವದ್ಭಾವವಿಧಾಯಕ ಸೂತ್ರ)

## ೪೧. ಅಂತಾದಿವಚ್ಚ ॥ ೬-೧-೮೫ ॥

**ಯೋಽಯಮೇಕಾದೇಶಃ ಸಃ ಪೂರ್ವಸ್ಯಾಂತವತ್ಪರಸ್ಯಾದಿವತ್ ॥ಶಿವೇಹಿ॥**

ಅಂತಾದಿವತ್, ಚ ॥ ದ್ವಿಪದ ಸೂತ್ರ. "ಏಕಃ ಪೂರ್ವಪರಯೋಃ" ಎಂಬ ಸೂತ್ರವು ಅಧಿಕೃತವಾಗುತ್ತದೆ. ಯಥಾಸಂಖ್ಯಪರಿಭಾಷೆಯಿಂದ ಕ್ರಮವಾಗಿ ಅನ್ವಯ. ದ್ವಂದ್ವದ ಮೇಲೆ ವತ್ ಪ್ರತ್ಯಯ ಹೇಳಿರುವುದರಿಂದ ಪ್ರತ್ಯೇಕಾನ್ವಯ ಮಾಡಬೇಕು. ಅಂತವತ್ ಎಂದಾಗುತ್ತದೆ. **ಸೂತ್ರಾರ್ಥ.** ಪೂರ್ವಪರ ಸ್ಥಾನದಲ್ಲಿ ಬಂದಿರುವ ಏಕಾದೇಶವು ಪೂರ್ವದ ಅಂತದಂತೆಯೂ ಪರದ ಆದಿಯಂತೆಯೂ ಆಗುತ್ತದೆ. ಎರಡು ವರ್ಣಗಳ ಸ್ಥಾನದಲ್ಲಿ ಇದು ಬಂದಿದ್ದರೂ ಪ್ರಥಮವರ್ಣ ಅಂತದಲ್ಲಿರುವಾಗ ಯಾವ ಕಾರ್ಯ ಬರುತಿತ್ತೋ ಅದೂ ಬರುತ್ತದೆ. ಹಾಗೆ ದ್ವಿತೀಯ ವರ್ಣ ಕೂಡಿರುವಾಗ ಅದು ಆದಿಯಾಗಿದ್ದರೆ ಯಾವ ಕಾರ್ಯ ಬರುತ್ತಿತ್ತೋ ಆ ಕಾರ್ಯವೂ ಬರುತ್ತದೆ. ಒಂದೇ ಸಮಯದಲ್ಲಿ ಎರಡೂ ಬರುವುದಿಲ್ಲ. ಪ್ರಕೃತ ಶಿವ+ಆ+ಇಹಿ ಎಂದಿರುವಾಗ ಅಕಾರಾಕಾರಗಳಿಗೆ ಸವರ್ಣದೀರ್ಘವೂ ಆಕಾರ ಇಕಾರಕ್ಕೆ ಗುಣವೂ ಪ್ರಾಪ್ತವಾದರೆ ಆ+ಇಹಿ ಎಂಬುದು ಧಾತು ಉಪಸರ್ಗ ಕಾರ್ಯವಾದುದರಿಂದ ಅದನ್ನು ಮೊದಲು ಮಾಡಬೇಕೆಂದು ನಿಯಮವಿರುವುದರಿಂದ ಮೊದಲು ಗುಣ ಬರುತ್ತದೆ. ಶಿವ+ಏಹಿ ಎಂದಿರುವಾಗ ಇಲ್ಲಿ ಏ ಎಂಬುದು ಆ+ಇ ಸ್ಥಾನಗಳಲ್ಲಿ ಬಂದಿದೆ. ಅಲ್ಲಿ ನಮಗೆ ಆಙ್ ಪರವಾಗಿರಬೇಕಾದುದರಿಂದ ಈ ಸೂತ್ರದಿಂದ ಪೂರ್ವಾಂತವದ್ಭಾವ ಮಾಡಿದರೆ ಏ ಇದ್ದರೂ ಆ ಇದ್ದಂತೇ ಆಗುತ್ತದೆ. ಆಗ "ಓಮಾಙೋಶ್ಚ" ಎಂಬುದರಿಂದ ಪರರೂಪ. ಶಿವೇಹಿ ಎಂದಾಗುತ್ತದೆ. ಎಲೈ ಶಿವನೇ ಬಾ ಎಂದರ್ಥ.

(ಸವರ್ಣದೀರ್ಘಸಂಧಿ ವಿಧಾಯಕ ಸೂತ್ರ)

## ೪೨. ಅಕಃ ಸವರ್ಣೇ ದೀರ್ಘಃ ॥ ೬-೧-೧೦೧ ॥

**ಅಕಃ ಸವರ್ಣೇಽಚಿ ಪರೇ ಪೂರ್ವಪರಯೋರ್ದೀರ್ಘಃ ಏಕಾದೇಶಃ ಸ್ಯಾತ್ । ದೈತ್ಯಾರಿಃ ॥ ಶ್ರೀಶಃ । ವಿಷ್ಣೂದಯಃ । ಹೋತೄಕಾರಃ॥**

ಅಕಃ, ಸವರ್ಣೇ, ದೀರ್ಘಃ । ತ್ರಿಪದ ಸೂತ್ರ. "ಇಕೋ ಯಣಚಿ" ಎಂಬುದರಿಂದ "ಅಚಿ" ಎಂಬುದು ಅನುವೃತ್ತವಾಗುತ್ತದೆ. "ಏಕಃ ಪೂರ್ವಪರಯೋಃ" ಅಧಿಕಾರ. ಅಕಃ ಎಂಬುದು ಪಂಚಮೀ. **ಸೂತ್ರಾರ್ಥ**:–ಅಕ್ಕಿಗೆ ಸವರ್ಣವಾದ ಅಚ್ ಪರವಾದಾಗ ಪೂರ್ವಪರಗಳ ಸ್ಥಾನದಲ್ಲಿ ದೀರ್ಘವು ಏಕಾದೇಶವಾಗಿ ಬರುತ್ತದೆ ದೈತ್ಯ+ಅರಿ ಎಂದಿರುವಾಗ ಅಕಾರಕ್ಕೆ ಸವರ್ಣವಾದ ಅಕಾರ ಪರವಾದುದರಿಂದ ಎರಡು ಅಕಾರಗಳ ಸ್ಥಾನದಲ್ಲಿ ಒಂದೇ ದೀರ್ಘ (ಆ) ವು ಆದೇಶವಾಗಿ ಬಂದರೆ ದೈತ್ಯಾರಿಃ ಎಂದಾಗುತ್ತದೆ. ರಾಕ್ಷಸರ ಶತ್ರು. ಶ್ರೀ+ಈಶಃ ಎಂದಿರುವಾಗ ಈ ಈಗಳಿಗೆ ಒಂದೇ ದೀರ್ಘ. ಈಕಾರಾದೇಶ, ಶ್ರೀಶಃ. ಲಕ್ಷ್ಮೀಪತಿ. ವಿಷ್ಣು+ಉದಯ ಎಂದಿರುವಾಗ ಉಉ ಗಳಿಗೆ ದೀರ್ಘ ಊಕಾರಾದೇಶ: ವಿಷ್ಣೂದಯಃ ವಿಷ್ಣುವಿನ ಅಭಿವೃದ್ಧಿ. ಹೋತೃ+ಋಕಾರಃ ಎಂದಿರುವಾಗ ಋ ಋಕಾರಗಳಿಗೆ ದೀರ್ಘ ೠಕಾರ ಏಕಾದೇಶ. ಹೋತೄಕಾರಃ. ಋಕಾರಕ್ಕೆ ಌಕಾರ ಪರವಾದಾಗಲೂ ದೀರ್ಘ ಬರುವುದಾದರೆ ದೀರ್ಘವಾದ ೠಕಾರವೇ ಬರುತ್ತದೆ. ಌಕಾರಕ್ಕೆ ದೀರ್ಘವಿಲ್ಲ.

(ಪೂರ್ವರೂಪ ವಿಧಾಯಕ ಸಂಧಿ)

## ೪೩. ಏಙಃ ಪದಾನ್ತಾದತಿ ॥ ೬-೧-೧೦೯ ॥

**ಪದಾಂತಾದೇಙೋಽತಿ ಪರೇ ಪೂರ್ವರೂಪಮೇಕಾದೇಶಃ ಸ್ಯಾತ್ । ಹರೇಽವ । ವಿಷ್ಣೋಽವ ॥**

ಏಙಃ ಪದಾಂತಾತ್ ಅತಿ । ತ್ರಿಪದ ಸೂತ್ರ. "ಅಮಿಪೂರ್ವಃ" ಎಂಬುದರಿಂದ ಪೂರ್ವಃ ಎಂಬ ಪದವು ಅನುವೃತ್ತವಾಗುತ್ತದೆ. "ಏಕಃ ಪೂರ್ವಪರಯೋಃ" ಅಧಿಕಾರ. ಪದಾಂತಾತ್ ಎಂಬುದು ಏಙಿನಲ್ಲಿ ಅನ್ವಯಿಸುತ್ತದೆ. **ಸೂತ್ರಾರ್ಥ**—ಪದಾಂತವಾದ ಏಙಿಗೆ ಹ್ರಸ್ವ ಅಕಾರವು ಪರವಾದಾಗ ಪೂರ್ವಪರಗಳ ಸ್ಥಾನದಲ್ಲಿ ಪೂರ್ವರೂಪವು ಏಕಾದೇಶವಾಗಿ ಬರುತ್ತದೆ. ಅತಿ ಎಂಬುದು ತಪರ ಮಾಡಿ ಸಪ್ತಮಿಯಲ್ಲಿ ಹೇಳಿದೆ. ಆದುದರಿಂದ ಹ್ರಸ್ವ ಅಕಾರ ಮಾತ್ರ ತೆಗೆದುಕೊಳ್ಳಬೇಕು. ಹರೇ+ಏ+ವ=ಹರೇಽವ ಎಂದಾಗುತ್ತದೆ. ವಿಷ್ಣೋ+ಅವ ಎಂದಿರುವಾಗ ಏಙಿನ ಓಕಾರ ಪದಾಂತವಾದುದರಿಂದ ಅದಕ್ಕೆ ಹ್ರಸ್ವ ಅಕಾರ ಪರವಾದುದರಿಂದ ಪೂರ್ವರೂಪ ಓಕಾರ ಬಂದರೆ ವಿಷ್ಣೋಽವ ಎಂದಾಗುತ್ತದೆ. ಇಲ್ಲಿ ಕ್ರಮವಾಗಿ

ಯಾಂತಾದೇಶವಾಂತಾದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಪೂರ್ವರೂಪ ವನ್ನು ಹೇಳಿರುತ್ತಾನೆ. ಹೀಗೆ ಅಚ್ ಸಂಧಿಯನ್ನು ಹೇಳಿ ಇನ್ನುಮುಂದೆ ಪ್ರಕೃತಿ ಭಾವ ಸಂಧಿಯನ್ನು ಹೇಳುತ್ತಾನೆ. ಪ್ರಕೃತಿಭಾವವೆಂದರೆ ಸಂಧಿಯಾಗದೆ ಇದ್ದುದು ಇದ್ದಂತೇ ಇರುವುದು. ಇದೂ ಸ್ವರಕ್ಕೆ ಬರುವುದರಿಂದ ಅಚ್ ಸಂಧಿಯ ವಿಭಾಗ ವಾಗುತ್ತದೆ.

(ಗೋ ಎಂಬಲ್ಲಿ ಪ್ರಕೃತಿಭಾವ ವಿಧಾಯಕ ಸೂತ್ರ)

## ೪೪. ಸರ್ವತ್ರ ವಿಭಾಷಾ ಗೋಃ ॥ ೬-೧-೧೨೨ ॥

**ಲೋಕೇ ವೇದೇ ಚೈಜಂತಸ್ಯ ಗೋರತಿ ವಾ ಪ್ರಕೃತಿಭಾವಃ ಪದಾಂತೇ । ಗೋಅಗ್ರಮ್., ಗೋಽಗ್ರಮ್ । ಏಜಂತಸ್ಯ ಕಿಮ್? ಚಿತ್ರಗ್ವಗ್ರಮ್ । ಪದಾಂತೇ ಕಿಮ್? ಗೋಃ ॥**

ಸರ್ವತ್ರ, ವಿಭಾಷಾ, ಗೋಃ । ತ್ರಿಪದ ಸೂತ್ರ. "ಏಙಃಪದಾಂತಾದತಿ" ಸೂತ್ರದಿಂದ "ಪದಾಂತಾತ್" "ಅತಿ" ಎಂಬುದೂ, "ಪ್ರಕೃತ್ಯಾಂತಃ ಪಾದಮವ್ಯಪರೇ" ಎಂಬುದರಿಂದ "ಪ್ರಕೃತ್ಯಾ" ಎಂತಲೂ ಅನುವೃತ್ತವಾಗುತ್ತದೆ. ಪ್ರಕೃತ್ಯಾ ಭವತಿ. ಸ್ವರೂಪದಿಂದ ಅಂದರೆ ನಿರ್ವಿಕಾರ ಸ್ವರೂಪದಿಂದ ಇರುವುದು. ಯಾವ ಸಂಧಿಯೂ ಬರದೆ ಇದ್ದಂತೆಯೇ ಇರುವುದು ಎಂದರ್ಥ. ಹಿಂದಿನ ಸೂತ್ರದಲ್ಲಿ ವೇದಕ್ಕೆ ಸಂಬಂಧಪಟ್ಟ ಕಾರ್ಯ ಹೇಳಿರುವುದರಿಂದ ಇಲ್ಲಿಯೂ ವೇದಲ್ಲಿ ಮಾತ್ರ ಎಂಬರ್ಥವನ್ನು ಹೋಗಲಾಡಿಸಲು ಸರ್ವತ್ರ ಎಂದಿರುತ್ತಾನೆ. ಸರ್ವತ್ರ ಎಂದರೆ ಲೋಕದಲ್ಲಿಯೂ ವೇದದಲ್ಲಿಯೂ ಎಂದರ್ಥ. ಅತಿ ಎಂಬುದು ಸಪ್ತಮೀ. ಏಙಃ ಎಂಬುದು ಗೋ ಶಬ್ದಕ್ಕೆ ವಿಶೇಷಣವಾದುದರಿಂದ "ಯೇನ ವಿಧಿಸ್ತದಂತಸ್ಯ" ಎಂಬ ಪರಿಭಾಷೆಯಿಂದ ತದಂತಲಾಭ. **ಸೂತ್ರಾರ್ಥ.** ಲೋಕದಲ್ಲಿಯೂ ವೇದದಲ್ಲಿಯೂ ಏಙಂತವಾದ ಗೋ ಶಬ್ದಕ್ಕೆ ಹ್ರಸ್ವಾಕಾರಪರವಾದಾಗ ವಿಕಲ್ಪವಾಗಿ (ವಿಭಾಷಾ) ಪ್ರಕೃತಿಭಾವ ಬರುತ್ತದೆ. ಈ ಪ್ರಕೃತಿಭಾವವು ಪದಾಂತವಿಷಯದಲ್ಲಿ ಮಾತ್ರ. ಪದದ ಕೊನೆಯಾಗದಿರುವಾಗ ಬರುವುದಿಲ್ಲ. ಇಲ್ಲಿ ವಿಕಲ್ಪ ಎಂಬರ್ಥವನ್ನು ಸೂಚಿಸಲು ವಾ, ವಿಭಾಷಾ, ಅನ್ಯತರಸ್ಯಾಮ್, ಬಹುಲಮ್ ಎಂಬಿವೇ ಮುಂತಾದ ಶಬ್ದಗಳನ್ನು ಪ್ರಯೋಗಿಸುತ್ತಾನೆ. ಇವು ಪರ್ಯಾಯ ಶಬ್ದಗಳು. ವಾ ಎಂದು ಸುಲಭವಾಗಿ ಹೇಳಬಹುದಲ್ಲವೇ ಎಂದು ಇಲ್ಲ ಶಂಕೆಬರುತ್ತದ. ಆದರೆ ಪರ್ಯಾಯ ಶಬ್ದಗಳಲ್ಲಿ ಲಾಘವ ಗೌರವ ವಿಚಾರವಿಲ್ಲವೆಂದು ಪರಿಭಾಷೆಯಲ್ಲಿ ಹೇಳಿದೆ. ಆದುದರಿಂದ ಸೂತ್ರಕಾರನು ಅಲ್ಲಲ್ಲಿ ಇಷ್ಟಬಂದಂತೆ ವಿಕಲ್ಪಾರ್ಥಕ ಶಬ್ದಗಳನ್ನು ಹೇಳುತ್ತಾನೆ. ಗೋ+ ಅಗ್ರಮ್. ಎಂದಿರುವಾಗ ಗೋ ಎಂಬುದು ಏಙಂತವಾದ ಗೋ ಶಬ್ದ. ಇದು ಪದವಾದುದರಿಂದ ಓಕಾರವು ಪದಾಂತವಾಗಿದೆ. ಇದಕ್ಕೆ ಅ ಎಂಬ ಹ್ರಸ್ವ ಅಕಾರವು

ಪರವಾದುದರಿಂದ ಪ್ರಕೃತಿಭಾವ ವಿಕಲ್ಪವಾಗಿ ಬರುತ್ತದೆ. ಆಗ ಗೋ ಅಗ್ರಮ್ ಎಂದೇ ಆಗುತ್ತದೆ. ಪೂರ್ವರೂಪ, ಅವಾದೇಶಗಳು ಇಲ್ಲಿ ಬರುತ್ತಿದ್ದವು. ಪ್ರಕೃತಿಭಾವ ಹೇಳಿದುದರಿಂದ ಅವು ಬರುವುದಿಲ್ಲ. ಅದು ವಿಕಲ್ಪವಾದುದರಿಂದ ಪ್ರಕೃತಿಭಾವ ಬಾರದಿರುವಾಗ "ಏಙಃಪದಾಂತಾದತಿ" ಎಂಬುದರಿಂದ ಪೂರ್ವರೂಪ ಸಂಧಿಯು ಬಂದರೆ ಗೋಽಗ್ರಮ್ ಎಂಬ ರೂಪವೂ ಆಗುತ್ತದೆ. ಈಗ ಸೂತ್ರದಲ್ಲಿರುವ ಪದಗಳ ಸಾರ್ಥಕ್ಯವನ್ನು ಹೇಳುತ್ತಾನೆ. ಏಙಂತಸ್ಯ ಕಿಮ್? ಪದಾಂತದಲ್ಲಿಗೋಶಬ್ದಕ್ಕೆ ಅಕಾರಪರವಾದಾಗ ಪ್ರಕೃತಿಭಾವ ಎಂದರೆ ಸಾಲದೆ? ಗೋಶಬ್ದವು ಏಙಂತವೇ ಆಗಿದೆ. ಹೀಗಿರುವಾಗ ತಿರುಗಿ ಏಙಂತವಾದ ಗೋಶಬ್ದಕ್ಕೆ ಎಂಬುದು ಏಕೆ? ಅಂದರೆ ಚಿತ್ರಗ್ವಗ್ರಮ್ ಎಂಬಲ್ಲಿಯೂ ಹೀಗೆ ಹೇಳಿದರೆ ಪ್ರಕೃತಿಭಾವ ಬರಬೇಕಾಗುತ್ತದೆ. "ಏಕದೇಶ ವಿಕೃತಮನನ್ಯವತ್" ಒಂದುಕಡೆ ವಿಕಾರಬಂದರೆ ಅದು ಬೇರೆಯಾಗುವುದಿಲ್ಲ ಎಂಬರ್ಥವನ್ನು ಹೇಳುವ ಒಂದು ಪರಿಭಾಷೆ ಇದೆ. ನಾಯಿಯ ಬಾಲ ಕತ್ತರಿಸಿಹೋದರೆ ಅದು ನಾಯಿ ಆಗದಿರುವುದಿಲ್ಲ. ನಾಯಿಯೆಂದೇ ಕರೆಯುತ್ತಾರೆ ಅದರಂತೆ ಚಿತ್ರಗು+ಅಗ್ರಮ್ ಎಂಬಲ್ಲಿ ಗೋಶಬ್ದಕ್ಕೆ ಹ್ರಸ್ವ ಬಂದು ಗು ಎಂದಾಗಿದೆ. ಚಿತ್ರಾಃ ಗಾವಃ ಯಸ್ಯ ಸಃ (ನಾನಾಬಣ್ಣದ ಹಸುವುಳ್ಳವನು) ಚಿತ್ರಗುಃ ಇದು ಬಹುವ್ರೀಹಿ ಸಮಾಸ. ಸಮಾಸವಾದಮೇಲೆ ಗೋಶಬ್ದಕ್ಕೆ ಹ್ರಸ್ವ ಬಂದು ಉಕಾರಬಂದಿದೆ. ಆದುದರಿಂದ ಇದು ಗೋಶಬ್ದವೇ. ಸೂತ್ರದಲ್ಲಿ ಏಙಂತವಾದ ಗೋಶಬ್ದವೆಂದು ಹೇಳದಿದ್ದರೆ ಇಲ್ಲಿಯೂ ಪ್ರಕೃತಿಭಾವ ಬಂದು ಯಣ್ ಸಂಧಿ ಬಾರದೇ ಹೋಗಬೇಕಾಗುತ್ತದೆ. ಏಙಂತವೆಂದುದರಿಂದ ಇಲ್ಲಿ ಗೋಶಬ್ದವಿದ್ದರೂ ಏಙಂತವಾಗದಿರುವುದರಿಂದ ಪ್ರಕೃತಿಭಾವವಿಲ್ಲ. "ಇಕೋ ಯಣಚಿ" ಸೂತ್ರದಿಂದ ಯಣ್ (ವ್) ಬಂದು ಚಿತ್ರಗ್ವಗ್ರಮ್ ಎಂದಾಗಿದೆ. ಪದಾಂತದಲ್ಲಿ ಎಂದು ಹೇಳಿದುದು ಏಕೆ? ಗೋಃ ಎಂಬಲ್ಲಿ ಪ್ರಕೃತಿಭಾವ ತಪ್ಪಿಸಲು ಹಾಗೆ ಹೇಳಿರುತ್ತಾನೆ. ಆ ಪದವಿಲ್ಲದಿದ್ದರೆ ಏಙಂತವಾದ ಗೋಶಬ್ದಕ್ಕೆ ಹ್ರಸ್ವಾಕಾರಪರವಾದಾಗ ಪ್ರಕೃತಿಭಾವ ಎಂದರ್ಥವಾಗುತ್ತದೆ. ಆಗ ಗೋಶಬ್ದಕ್ಕೆ ಷಷ್ಠೀ ಏಕವಚನ ಅಸ್ ಪ್ರತ್ಯಯ ಬಂದಾಗ ಗೋ+ಅಸ್ ಎಂಬಲ್ಲಿಯೂ ಪ್ರಕೃತಿಭಾವ ಬರಬೇಕಾಗುತ್ತದೆ. ಪದಾಂತದಲ್ಲಿ ಎಂದರೆ ಇಲ್ಲಿ ಪದಾಂತವಾಗದಿರುವುದರಿಂದ ಬರುವುದಿಲ್ಲ. ಪದವೆಂದರೆ ಸುಬಂತವಾಗಿರಬೇಕು. ಇಲ್ಲಿ ಸುಪ್ಪೇ (ಅಸ್) ಪರವಾದುದರಿಂದ ಗೋಶಬ್ದ ಕೇವಲ ಪ್ರಾತಿಪದಿಕವಾಗುತ್ತದೆ. ಅಸ್ ಸೇರಿದಮೇಲೆ ಅದು ಪದವಾಗುತ್ತದೆ. ಆಗ ಅಂತ ಸಿಗಬಹುದು. ಆದುದರಿಂದ ಗೋ+ಅಸ್ ಎಂಬಲ್ಲಿ ಪೂರ್ವರೂಪಬಂದು ಸಕಾರಕ್ಕೆ ಮುಂದೆ ಹೇಳುವ ರೇಫವಿಸರ್ಗಗಳು ಬಂದು ಗೋಃ ಎಂದಾಗುತ್ತದೆ.

(ಸರ್ವಾದೇಶವನ್ನು ವಿಧಿಸುವ ಪರಿಭಾಷಾಸೂತ್ರ)

**೪೫ ಅನೇಕಾಲ್ ಶಿತ್ಸರ್ವಸ್ಯ ॥ ೧-೧-೫೫ ॥**

ಇತಿ ಪ್ರಾಪ್ತೇ ॥

ಅನೇಕಾಲ್‌ಶಿತ್ ಸರ್ವಸ್ಯ । ದ್ವಿಪದಸೂತ್ರ. ನ ಏಕಃ ಅನೇಕಃ, ಅನೇಕಃ ಅಲ್ ಯಸ್ಯ ಸಃ ಅನೇಕಾಲ್, ಶಕಾರಃ ಇತ್ ಯಸ್ಯ ಸಃ ಶಿತ್, ಅನೇಕಾಲ್ ಚ ಶಿಚ್ಚ ತಯೋಃ ಸಮಾಹಾರಃ ಅನೇಕಾಲ್‌ಶಿತ್. ಅನೇಕ ವರ್ಣವುಳ್ಳ ಆದೇಶವೂ ಶಕಾರ ಇತ್ತಾದ ಆದೇಶವೂ ಷಷ್ಠೀನಿರ್ದಿಷ್ಟವಾದ ಸ್ಥಾನಿಗೆ ಸರ್ವಾದೇಶವಾಗಿ ಬರುತ್ತದೆ. ಅನುವೃತ್ತ್ಯಾದಿಗಳು ಇಲ್ಲದಿರುವುದರಿಂದ ವೃತ್ತಿ ಬರೆಯಲಿಲ್ಲ. "ಅಲೋಂತ್ಯಸ್ಯ" ಎಂಬ ಪರಿಭಾಷೆಯಿಂದ ಆದೇಶಸಾಮಾನ್ಯವೂ ಸ್ಥಾನಿಯ ಅಂತ್ಯಕ್ಕೆ ಪ್ರಾಪ್ತವಾದರೆ ಈ ಎರಡು ಆದೇಶಗಳು ಸರ್ವಕ್ಕೂ ಬರುತ್ತವೆ ಎಂದುದರಿಂದ ಅಂತ್ಯಾದೇಶಕ್ಕೆ ಅಪವಾದ. "ಅಸ್ತೇರ್ಭೂಃ" ಅಸ್ ಧಾತುವಿಗೆ ಭೂ ಆದೇಶ ಬರುತ್ತದೆ. ಇಲ್ಲಿ ಭೂ ಎಂಬ ಆದೇಶ ಅನೇಕಾಲಾದುದರಿಂದ ಸಂಪೂರ್ಣ ಅಸ್ ಹೋಗಿ ಅದರ ಸ್ಥಾನಕ್ಕೆ ಬರುತ್ತದೆ. ಹೀಗೆ ಅನೇಕಾಲಾದ ಆದೇಶವು ಸರ್ವಾದೇಶವಾಗಿ ಪ್ರಾಪ್ತವಾದರೆ ಅದಕ್ಕೂ ಅಪವಾದವನ್ನು ಹೇಳುತ್ತಾನೆ.

(ಅಂತಾದೇಶವನ್ನು ನಿಯಮಮಾಡುವ ಪರಿಭಾಷಾಸೂತ್ರ)

## ಙಿಚ್ಚ ॥ ೧-೧-೫೩ ॥

ಙಿದನೇಕಾಲಪ್ಯಂತ್ಯಸ್ಯೈವ ಸ್ಯಾತ್ ॥

ಙಿತ್, ಚ, । ದ್ವಿಪದ ಸೂತ್ರ. ಙಕಾರಃ ಇತ್ ಯಸ್ಯ ಸಃ ಙಿತ್. "ಅಲೋಂತ್ಯಸ್ಯ" ಎಂಬುದು ಅನುವೃತ್ತವಾಗುತ್ತದೆ. ಙಿತ್ತಾದ ಆದೇಶವು ಸ್ಥಾನಿಯ ಅಂತ್ಯ ವರ್ಣಕ್ಕೇ ಬರುತ್ತದೆ. ಅಲೋಂತ್ಯಸ್ಯ" ಎಂಬ ಸೂತ್ರದಿಂದಲೇ ಅಂತ್ಯಕ್ಕೆ ಬರುತ್ತದೆ ಎಂದು ಹೇಳಿದ ಮೇಲೆ ಪುನಃ ಈ ಸೂತ್ರವೇಕೆ ? ಎಂದು ಆಶಂಕೆ ಬರುತ್ತದೆ. ಆಗ ಇದೂ ಅಪವಾದ ಸೂತ್ರವೆನ್ನಬೇಕು. "ಅಲೋಂತ್ಯಸ್ಯ" ಎಂಬುದರಿಂದ ಸಾಮಾನ್ಯವಾಗಿ ಆದೇಶವು ಅಂತ್ಯಕ್ಕೆ ಪ್ರಾಪ್ತವಾದಾಗ ಅದಕ್ಕೆ ಅಪವಾದವಾಗಿ ಅನೇಕಾಲಾದ ಮತ್ತು ಶಿತ್ತಾದ ಆದೇಶವು ಸರ್ವಕ್ಕೂ ಬರುತ್ತದೆ ಎಂದು "ಅನೇಕಾಲ್‌ಶಿತ್‌ಸರ್ವಸ್ಯ" ಎಂಬ ಸೂತ್ರ ಹೇಳಿದರೆ ಅದಕ್ಕೆ ಅಪವಾದವಾಗಿ ಅನೇಕಾಲಾದರೂ ಅದು ಙಕಾರ ಇತ್ ಉಳ್ಳದ್ದಾದರೆ ಅಂತ್ಯಕ್ಕೇ ಬರುತ್ತದೆ ಎಂದು "ಙಿಚ್ಚ" ಎಂಬ ಸೂತ್ರವು ಆರಂಭವಾಗಿದೆ. ಆದುದರಿಂದ ಇದು ಸರ್ವಾದೇಶಕ್ಕೆ ಅಪವಾದ. "ಙಿಚ್ಚ" ಎಂಬುದಕ್ಕೆ ಪ್ರಕೃತೋಪಯೋಗವನ್ನು ಹೇಳುತ್ತಾನೆ.

(ಗೋ ಶಬ್ದಕ್ಕೆ ಅವಙ್ ಆದೇಶ ವಿಧಾಯಕ ಸೂತ್ರ)

## ೪೭. ಅವಙ್ ಸ್ಫೋಟಾಯನಸ್ಯ ॥ ೬-೧-೧೨೩ ॥

ಪದಾಂತೇ ಏಙಂತಸ್ಯ ಗೋರವಙ್ ವಾಽಚಿ । ಗವಾಗ್ರಮ್, ಗೋಽಗ್ರಮ್ । ಪದಾಂತೇ ಕಿಮ್ ? ಗವಿ ॥

ಅವಙ್, ಸ್ಫೋಟಾಯನಸ್ಯ । ದ್ವಿಪದಸೂತ್ರ. ಇಲ್ಲಿ ಹಿಂದಿನಿಂದ ಅತಿ ಎಂಬುದು ಅನುವೃತ್ತವಾಗುವುದಿಲ್ಲ. "ಇಕೋ ಯಣಚಿ" ಸೂತ್ರದಿಂದ ಅಚಿ ಎಂಬುದೂ ಹಿಂದಿನ ಸೂತ್ರದಿಂದ "ಗೋಃ" ಎಂದೂ "ಪದಾಂತೇ" ಎಂದೂ ಅನುವೃತ್ತವಾಗುತ್ತವೆ. ಸ್ಫೋಟಾಯನಸ್ಯ ಎಂದುದರಿಂದ ಸ್ಫೋಟಾಯನಾಚಾರ್ಯರ ಮತದಲ್ಲಿ ಮಾತ್ರ ಈ ಕಾರ್ಯವೆಂದೂ ಇತರರ ಮತದಲ್ಲಿ ಬರುವುದಿಲ್ಲವೆಂದೂ ಆಗುವುದರಿಂದ ವಿಕಲ್ಪವೆಂದು ಗೊತ್ತಾಗುತ್ತದೆ. ಸೂತ್ರಾರ್ಥ. ಪಧಾಂತದಲ್ಲಿ ಏಜಂತವಾದ ಗೋಶಬ್ದಕ್ಕೆ ಅಚ್ ಪರವಾದಾಗ ಅವಙ್ ಎಂಬ ಆದೇಶವು ವಿಕಲ್ಪವಾಗಿ ಬರುತ್ತದೆ. ಗೋ+ಅಗ್ರಮ್ ಎಂದಿರುವಾಗ ಏಜಂತವಾದ (ಓ) ಗೋ ಶಬ್ದಕ್ಕೆ ಅಚ್ (ಅ) ಪರವಾದುದರಿಂದ ಅವಙ್ ಆದೇಶಬರುತ್ತದೆ. ಅವಙ್ ಎಂಬಲ್ಲಿ "ಹಲಂತ್ಯಮ್" ಸೂತ್ರದಿಂದ ಙಕಾರವು ಇತ್ತಾಗುವುದರಿಂದ ಅದು ಙಿತ್ತಾಯಿತು. "ಙಿಚ್ಚ" ಎಂಬ ಪರಿಭಾಷೆಯಿಂದ ಅಂತ್ಯಕ್ಕೆ ಬರುತ್ತದೆ. ಗೋ ಎಂಬಲ್ಲಿ ಅಂತ್ಯ ಓಕಾರ. ಅದಕ್ಕೆ ಅವ ಎಂಬ ಆದೇಶ ಬಂದರೆ ಗ್+ಅವ+ಅಗ್ರಮ್=ಗವಾಗ್ರಮ್. ಎಂದಾಗುತ್ತದೆ. ಪಾಣಿನಿಯರ ಮತದಲ್ಲಿ ಈ ಆದೇಶವಿಲ್ಲದಿರುವುದರಿಂದ "ಏಙಃ ಪದಾಂತಾದತಿ" ಸೂತ್ರದಿಂದ ಪೂರ್ವರೂಪ ಸಂಧಿ ಬಂದರೆ ಗೋಽಗ್ರಮ್ ಎಂದಾಗುತ್ತದೆ. ಇಲ್ಲಿಯೂ ಪದ ಪ್ರಯೋಜನವನ್ನು ವಿಚಾರಿಸುತ್ತಾನೆ. ಪದಾಂತೇ ಕಿಮ್? ಇಲ್ಲಿ ಪದಾಂತದಲ್ಲಿ ಎಂದು ಹೇಳಿದುದು ಏಕೆ? ಸಾಮಾನ್ಯ ಗೋ ಶಬ್ದವೆಂದರೆ ಸಾಲದೇ? ಅಂದರೆ ಹಾಗೆ ಹೇಳದೇ ಹೋದರೆ ಗವಿ ಎಂಬಲ್ಲಿಯೂ ಅವಙಾದೇಶ ಬಂದು ಆ ರೂಪ ಆಗದೇ ಹೋಗಬೇಕಾಗುತ್ತದೆ. ಗೋ ಶಬ್ದಕ್ಕೆ ಸಪ್ತಮೀ ಏಕವಚನದಲ್ಲಿ ಙಿ ಪ್ರತ್ಯಯ ಬರುತ್ತದೆ. ಅಲ್ಲಿ ಙಕಾರ ಇತ್ತಾಗುವುದರಿಂದ ಉಳಿಯುವುದು ಇಕಾರ. ಇದು ಸೇರಿದ ಮೇಲೆ ಸುಬಂತವಾಗುವುದರಿಂದ ಗೋ ಶಬ್ದವು ಪರವಾಗಿ ಓಕಾರ ಪದಾಂತವಾಗುವುದು. ಇ ಪರವಾದಾಗ ಗೋ+ಇ ಎಂದಿರುವಾಗ ಗೋಶಬ್ದ ಪದವಾಗುವುದಿಲ್ಲ. ಆದುದರಿಂದ ಅಚ್ ಪರವಾದರೂ ಓಕಾರಕ್ಕೆ ಅವಙಾದೇಶ ಬರುವುದಿಲ್ಲ. ಏಚಿಗೆ ಅಚ್ ಪರವಾದುದರಿಂದ "ಏಚೋಽಯವಾಯಾವಃ" ಎಂಬುದರಿಂದ ಅವ್ ಆದೇಶ ಬಂದರೆ ಗ್+ಅವ್+ಇ=ಗವಿ ಎಂದಾಗುತ್ತದೆ.

(ಅವಙಾದೇಶ ವಿಧಾಯಕ ಸೂತ್ರ)

## ೪೮ ಇಂದ್ರೇ ಚ ॥ ೬-೧-೧೨೪ ॥

## ಗೋರವಙ್ ಸ್ಯಾದಿಂದ್ರೇ । ಗವೇಂದ್ರಃ ॥

ಇಂದ್ರೇ ಚ । ದ್ವಿಪದಸೂತ್ರ. "ಸರ್ವತ್ರ ವಿಭಾಷಾ ಗೋಃ" ಎಂಬುದರಿಂದ "ಗೋಃ". "ಅವಙ್ಸ್ಫೋಟಾಯನಸ್ಯ" ಎಂಬುದರಿಂದ "ಅವಙ್" ಅನುವೃತ್ತವಾಗುತ್ತವೆ. ಸೂತ್ರಾರ್ಥಃ-ಗೋಶಬ್ದಕ್ಕೆ ಇಂದ್ರಶಬ್ದ ಪರದಲ್ಲಿರುವಾಗ ಅವಙ್ ಆದೇಶ ಬರುತ್ತದೆ. ಹಿಂದಿನಂತೆ, ಙಿತ್ತಾದುದರಿಂದ ಅಂತಾದೇಶವಾಗಿಬಂದರೆ

ಗೋ+ಇಂದ್ರಃ. ಗ್+ಅವ+ಇಂದ್ರಃ, ಗವ+ಇಂದ್ರಃ ಎಂದಾದಾಗ ಅಕಾರಕ್ಕೆ ಅಚ್ ಪರವಾದುದರಿಂದ "ಆದ್ಗುಣಃ" ಎಂಬುದರಿಂದ ಅಕಾರ ಇಕಾರಗಳಿಗೆ ಗುಣವು ಬಂದರೆ ಗವೇಂದ್ರಃ ಎಂದಾಗುತ್ತದೆ.

(ಪ್ಲುತಸಂಜ್ಞಾವಿಧಾಯಕ ಸೂತ್ರ)

## ೪೯. ದೂರಾದ್ಧೂತೇ ಚ ॥ ೮-೨-೮೪ ॥

**ದೂರಾತ್ಸಂಬೋಧನೇ ವಾಕ್ಯಸ್ಯ ಟೇಃ ಪ್ಲುತೋ ವಾ ॥**

ದೂರಾತ್ ಹೂತೇ ಚ । ತ್ರಿಪದಸೂತ್ರ. "ವಾಕ್ಯಸ್ಯ ಟೇಃ ಪ್ಲುತಃ ಉದಾತ್ತಃ" ಎಂಬುದು ಅಧಿಕಾರಸೂತ್ರ. ಅದನ್ನು ಇಲ್ಲಿ ಸೇರಿಸಿ ವಾಕ್ಯಾರ್ಥವನ್ನು ಹೇಳಬೇಕು. ವಾಕ್ಯದ ಟಿಗೆ (ಅಂತ್ಯ) ಪ್ಲುತವು ಉದಾತ್ತ ಸ್ವರವಿಶಿಷ್ಟವಾಗಿ ಬರುತ್ತದೆ ಎಂದು ಅದರರ್ಥ. ವಾಕ್ಯ ಯಾವರೀತಿಯೆಂದು ಈ ಸೂತ್ರ ಹೇಳುತ್ತದೆ. ಹೂತವೆಂದರೆ ಆಹ್ವಾನ. ಭಾವಾರ್ಥದಲ್ಲಿ ಕ್ತಪ್ರತ್ಯಯ. ಪ್ರಯತ್ನದಿಂದ ಉಚ್ಚರಿಸಿದುದನ್ನು ಹೇಳದಿರುವುದರಿಂದ ಎಲ್ಲಿ ಅಧಿಕಪ್ರಯತ್ನದಿಂದ ಉಚ್ಚರಿಸಬೇಕಾಗುತ್ತದೋ ಅದು ದೂರ. ಅಲ್ಲಿ ಆಹ್ವಾನದಿಂದ ಸಂಬೋಧನೆಯು ವಿವಕ್ಷಿತವಾಗಿದೆ. **ಸೂತ್ರಾರ್ಥ:**— ದೂರದಿಂದ ಸಂಬೋಧಿಸುವಾಗ ಪ್ರಯೋಗಿಸುವ ವಾಕ್ಯದ ಟಿಗೆ ಪ್ಲುತ ಬರುತ್ತದೆ, ಟಿಯೆಂದರೆ ಅಂತ್ಯದ ಸ್ವರ ಅಥವಾ ಅದೇ ಆದಿಯಾಗಿರುವ ವ್ಯಂಜನ. ಮೂರು ಮಾತ್ರೆಯುಳ್ಳ ವರ್ಣಕ್ಕೆ ಪ್ಲುತವೆಂದು ಹೆಸರು. ಆಗಚ್ಛ ಕೃಷ್ಣ ಕೃಷ್ಣನೇ ಬಾಯೆಂದು ಇದು ದೂರದಿಂದ ಕರೆಯುವ ವಾಕ್ಯ. ಇಲ್ಲಿ ಟಿ ಕೊನೆಯ ಅಕಾರ. ಅದಕ್ಕೆ ಪ್ಲುತ ಬಂದರೆ ಆಗಚ್ಛ ಕೃಷ್ಣ ೩ ಎಂದಾಗುತ್ತದೆ. ಹೀಗೆ ಪ್ಲುತವನ್ನು ಹೇಳಿ ಅದಕೆ ಪ್ರಯೋಜನವನ್ನು ಹೇಳುತ್ತಾನೆ.

(ಪ್ಲುತಪ್ರಗೃಹ್ಯಗಳಿಗೆ ಪ್ರಕೃತಿಭಾವವನ್ನು ವಿಧಿಸುವ ಸೂತ್ರ)

## ೫೦. ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್ ॥ ೬-೧-೧೨೫ ॥

**ಏತೇಽಚಿ ಪ್ರಕೃತ್ಯಾ ಸ್ಯುಃ । ಆಗಚ್ಛ ಕೃಷ್ಣ ೩ ಅತ್ರ ಗೌಶ್ಚರತಿ ॥**

ಪ್ಲುತಪ್ರಗೃಹ್ಯಾಃ ಅಚಿ ನಿತ್ಯಮ್ । ತ್ರಿಪದಸೂತ್ರ. ಪ್ಲುತಾಶ್ಚ ಪ್ರಗೃಹ್ಯಾಶ್ಚ ಪ್ಲುತಪ್ರಗೃಹ್ಯಾಃ । ಪ್ರಗೃಹ್ಯವೆಂದರೆ ಒಂದು ಸಂಜ್ಞೆ. ಅದನ್ನು ಮುಂದೆ ಹೇಳುತ್ತಾನೆ. "ಪ್ರಕೃತ್ಯಾಂತಃ ಪಾದಮವ್ಯಪರೆ" ಎಂಬುದರಿಂದ "ಪ್ರಕೃತ್ಯಾ" ಎಂದು ಅನುವೃತ್ತವಾಗುತ್ತದೆ. ಅಚಿ ಎಂಬುದು ಸಪ್ತಮಿಯಾದುದರಿಂದ ಅಚ್ (ವ್ಯವಧಾನವಿಲ್ಲದ) ಪರವಾದಾಗ ಎಂದರ್ಥ. **ಸೂತ್ರಾರ್ಥ.**—ಪ್ಲುತಗಳೂ ಪ್ರಗೃಹ್ಯಗಳೂ ಅಚ್ ಪರವಾದಾಗ ಪ್ರಕೃತಿಭಾವದಿಂದ ಇರುತ್ತವೆ. ಯಾವಸಂಧಿಯೂ ಬರುವುದಿಲ್ಲವೆಂದು ತಾತ್ಪರ್ಯ. ಪ್ರಕೃತ ಹಿಂದಿನ ಸೂತ್ರದಲ್ಲಿ ವಾಕ್ಯದ ಟಿಗೆ ಪ್ಲುತಹೇಳಿದೆ.

ಆ ಪ್ಲುತಕ್ಕೆ ಅಚ್ ಪರವಾದರೆ ಸಂಧಿಬರುವುದಿಲ್ಲ. ಹಾಗೆಯೇ ಇರುತ್ತದೆ. ಆಗಚ್ಛ ಕೃಷ್ಣ ೩ ಅತ್ರಗೌಶ್ಚರತಿ. ಕೃಷ್ಣನು ಹಸುಗಳನ್ನು ಹುಡುಕುತ್ತಿದ್ದರೆ ಅವನನ್ನು ಸಂಬೋಧಿಸಿ ಕರೆಯುವ ವಾಕ್ಯ. ಕೃಷ್ಣನೇ ಬಾ ಇಲ್ಲಿ ಹಸು ಮೇಯುತ್ತದೆ ಎಂದರ್ಥ. ಕಷ್ಣ ೩ ಎಂಬಲ್ಲಿ ಪ್ಲುತವಿದೆ. ಅದಕ್ಕೆ ಅಚ್ಚಿನ ಅಕಾರಪರವಾದುದರಿಂದ ಸವರ್ಣ ದೀರ್ಘ ಸಂಧಿಪ್ರಾಪ್ತವಾಗುತ್ತಿತ್ತು. ಆದರೆ ಈ ಸೂತ್ರದಿಂದ ಪ್ರಕೃತಿಭಾವ ಹೇಳಿರುದರಿಂದ ಸಂಧಿಯಾಗದೆ ಹಾಗೇ ಇರುತ್ತದೆ. ಸೂತ್ರದಲ್ಲಿ ಪ್ರಗೃಹ್ಯವೆಂಬ ಪದಕ್ಕೆ ಅರ್ಥವಾಗದಿರುವುದರಿಂದ ಅದನ್ನು ವಿವರಿಸುತ್ತಾನೆ.

(ಪ್ರಗೃಹ್ಯ ಸಂಜ್ಞಾವಿಧಾಯಕ ಸೂತ್ರ)

## ೫೧. ಈದೂದೇದ್ದ್ವಿವಚನಂ ಪ್ರಗೃಹ್ಯಮ್ ॥ ೧-೧-೧೧ ॥

ಈದೂದೇದಂತಂ ದ್ವಿವಚನಂ ಪ್ರಗೃಹ್ಯಂ ಸ್ಯಾತ್ ಹರೀ ಏತೌ ।
ವಿಷ್ಣೂ ಇಮೌ ॥ ಗಂಗೇ ಅಮೂ ॥

ಈದೂದೇತ್ ದ್ವಿವಚನಂ ಪ್ರಗೃಹ್ಯಮ್ । ತ್ರಿಪದಸೂತ್ರ. ಇತ್ ಚ, ಊತ್ ಚ, ಏತ್ ಚ ತೇಷಾಂ ಸಮಾಹಾರಃ ಈದೂದೇತ್. ಇದು ದ್ವಿವಚನಕ್ಕೆ ವಿಶೇಷಣವಾದುದರಿಂದ "ಯೇನವಿಧಿಸ್ತದಂತಸ್ಯ" ಪರಿಭಾಷೆಯಿಂದ ಇದೇ ಅಂತವಾದ ದ್ವಿವಚನವೆಂದಾಗುತ್ತದೆ. ಈತ್ ಊತ್ ಏತ್ ಎಂದು ತಪರಮಾಡಿರುವುದರಿಂದ "ತಪರಸ್ತತ್ಕಾಲಸ್ಯ" ಪರಿಭಾಷೆಯಿಂದ ದೀರ್ಘವನ್ನು ಮಾತ್ರ ತೆಗೆದುಕೊಳ್ಳಬೇಕು. ಸೂತ್ರಾರ್ಥ:–ಈಕಾರಾಂತವಾದ ಊಕಾರಾಂತವಾದ, ಏಕಾರಾಂತವಾದ ದ್ವಿವಚನವು ಪ್ರಗೃಹ್ಯವೆಂಬ ಸಂಜ್ಞೆಯನ್ನು ಹೊಂದುತ್ತದೆ ಹರೀ, ಶಂಭೂ, ಗಂಗೇ, ಮುಂತಾದ ದ್ವಿವಚನ ಶಬ್ದಗಳಿಗೆ ಈ ಸಂಜ್ಞೆ ಬರುವುದರಿಂದ ಇವುಗಳಿಗೆ ಅಚ್ ಪರವಾದರೆ ಹಿಂದಿನ ಸೂತ್ರದಿಂದ ಪ್ರಕೃತಿಭಾವ ಹೇಳಿದುದರಿಂದ ಯಾವಸಂಧಿಯೂ ಬರುವುದಿಲ್ಲ. ಹರೀ + ಏತೌ ಎಂದಿರುವಾಗ "ಇಕೋ ಯಣಚಿ" ಎಂಬುದರಿಂದ ಯಣ್ ಸಂಧಿ ಪ್ರಾಪ್ತವಾದರೆ ಪ್ರಕೃತಿಭಾವ. ಹರೀ ಏತೌ ಎಂದೇ ಇರುತ್ತದೆ. ಹಾಗೇ ವಿಷ್ಣೂ ಇಮೌ ಎಂಬಲ್ಲಿಯೂ ಯಣ್ಣಿಗೆ ಅಪವಾದವಾಗಿ ಪ್ರಕೃತಿಭಾವ. ಗಂಗೇ + ಅಮೂ (ಗಂಗಾಶಬ್ದ ಸ್ತ್ರೀಲಿಂಗ ದ್ವಿವಚನ) ಇಲ್ಲಿ "ಏಙಃ ಪದಾಂತಾದತಿ" ಎಂಬುದರಿಂದ ಪೂರ್ವರೂಪಸಂಧಿ ಪ್ರಾಪ್ತವಾದರೆ ಪ್ರಕೃತಿಭಾವ ಬರುತ್ತದೆ.

(ಅದಸ್ ಶಬ್ದದಲ್ಲಿ ಪ್ರಗೃಹ್ಯಸಂಜ್ಞಾವಿಧಾಯಕಸೂತ್ರ)

## ೫೨. ಅದಸೋಮಾತ್ ॥ ೧-೧-೧೨ ॥

ಅಸ್ಮಾತ್ಪರಾವೀದೂತೌ ಪ್ರಗೃಹ್ಯೌ ಸ್ತಃ । ಅಮೀ ಈಶಾಃ । ರಾಮ-
ಕೃಷ್ಣಾವಮೂ ಆಸಾತೇ । ಮಾತ್ ಕಿಮ್? ಅಮುಕೇಽತ್ರ ॥

ಅದಸೋ ಮಾತ್ । ದ್ವಿಪದ ಸೂತ್ರ. ಹಿಂದಿನ ಸೂತ್ರದಿಂದ "ಪ್ರಗೃಹ್ಯಮ್" ಪದವು ಅನುವೃತ್ತವಾಗುತ್ತದೆ. ಅದಸಃ ಎಂಬಲ್ಲಿ ಅವಯವಾರ್ಥದಲ್ಲಿ ಷಷ್ಠೀ ಬಂದಿದೆ. ಅದಸ್ ಶಬ್ದದ ಅವಯವವಾದ ಮಕಾರವೆಂದರ್ಥ. ಅದಶ್ಶಬ್ದದ ಮಕಾರದ ಪರದಲ್ಲಿ ಏಕಾರಸಂಭವಿಸದಿರುವುದರಿಂದ ಈತ್ ಊತ್ ಮಾತ್ರ ಅನುವೃತ್ತವಾಗುತ್ತವೆ. ಇವೂ ಬಹುವಚನದಲ್ಲಿ ಸಂಭವಿಸುವುದರಿಂದ ದ್ವಿವಚನಮ್ ಎಂಬುದೂ ಅನುವೃತ್ತವಾಗುವುದಿಲ್ಲ. ಸೂತ್ರಾರ್ಥ :— ಅದಶ್ಶಬ್ದಾವಯವವಾದ ಮಕಾರದ ಪರದಲ್ಲಿರುವ ಈಕಾರ ಊಕಾರಗಳು ಪ್ರಗೃಹ್ಯಸಂಜ್ಞೆಯನ್ನು ಹೊಂದುತ್ತವೆ. ಪ್ರಗೃಹ್ಯಸಂಜ್ಞಾ ಬಂದಾಗ ಅದಕ್ಕೆ ಅಚ್‌ಪರವಾದರೆ "ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್" ಸೂತ್ರದಿಂದ ಪ್ರಕೃತಿಭಾವ. ಅಮೀ + ಈಶಾಃ ಅಮೀ ಎಂಬುದು ಅದಶ್ಶಬ್ದದ ಬಹುವಚನಾಂತರೂಪ. ಮಕಾರದ ಪರದಲ್ಲಿ ಈಕಾರಬಂದುದರಿಂದ ಅದು ಪ್ರಗೃಹ್ಯವಾಗುತ್ತದೆ. ಅದಕ್ಕೆ ಅಪವಾದವಾಗಿ ಪ್ರಕೃತಿಭಾವ ಹೇಳಿರುವುದರಿಂದ ಹಾಗೇ ಇರುತ್ತದೆ. ರಾಮಕೃಷ್ಣೌ + ಅಮೂ + ಆಸಾತೇ. ಇಲ್ಲಿ ಔಕಾರಕ್ಕೆ ಅಚ್ ಪರವಾದುದರಿಂದ "ಏಚೋಽಯವಾಯಾವಃ" ಎಂಬುದರಿಂದ ಆವಾದೇಶ. ರಾವ ಕೃಷ್ಣಾವಮೂ + ಆಸಾತೇ, ಎಂದಿರುವಾಗ ಅದಶ್ಶಬ್ದದ ಮಕಾರದ ಪರದಲ್ಲಿ ಊಕಾರ ಬಂದುದರಿಂದ ಅದು ಪ್ರಗೃಹ್ಯವಾಗುತ್ತದೆ. ಅದಕ್ಕೆ ಆಪರವಾದುದರಿಂದ ಯಣ್ ಪ್ರಾಪ್ತವಾದರೆ ಅದನ್ನು ಬಾಧಿಸಿ ಪ್ರಕೃತಿಭಾವ. ಅಮೂ ಎಂಬ ರೂಪವು ಸ್ತ್ರೀಲಿಂಗ ಪುಲ್ಲಿಂಗವೆರಡರ ದ್ವಿವಚನವೂ ಆಗುತ್ತದೆ. ಆದರೆ ಇಲ್ಲಿ ಪುಲ್ಲಿಂಗದರೂಪಮಾತ್ರ ಉದಾಹರಣೆಗೆ ಯೋಗ್ಯವೆಂದು ತಳಿಸಲು ರಾಮಕೃಷ್ಣೌ ಎಂಬ ವಿಶೇಷ್ಯವನ್ನು ತೋರಿಸಿರುತ್ತಾನೆ. ಸ್ತ್ರೀಲಿಂಗದಲ್ಲಿ ಅಮೂ ಎಂಬ ರೂಪವನ್ನು ಮಾಡುವ ಮೊದಲೇ ಪ್ರಕ್ರಿಯಾವಸ್ಥೆಯಲ್ಲಿಯೇ ಪ್ರಗೃಹ್ಯಸಂಜ್ಞೆಬರುವುದರಿಂದ ಹೇಳಬೇಕಾಗಿಲ್ಲ. ಈಗ ಸೂತ್ರಸ್ಥ ಪದಪ್ರಯೋಜನವನ್ನು ವಿವರಿಸುತ್ತಾನೆ. "ಮಾತ್ಕಿಮ್" ಮಕಾರದ ಪರವಾಗಿರುವವುಗಳು ಎಂದು ಹೇಳಿದುದು ಏಕೆ? ಅಮುಕೇಽತ್ರ ಇಲ್ಲಿಯೂ ಪ್ರಕೃತಿಭಾವ ಬರಬೇಕಾಗುತ್ತದೆ. ಸೂತ್ರದಲ್ಲಿ ಮಾತ್ ಪದವಿಲ್ಲದೇ ಹೋದರೆ ಅದಸ್ ಶಬ್ದದ ಈದೂದೇತ್‌ಗಳಿಗೆ ಪ್ರಗೃಹಸಂಜ್ಞೆ ಎಂದರ್ಥವಾಗುವುದರಿಂದ ಅಮುಕೇಽತ್ರ, ಎಂಬಲ್ಲಿಯೂ ಸಂಧಿಯಾಗದೇ ಹೋಗಬೇಕಾಗುತ್ತದೆ. ಮಾತ್ ಇದ್ದರೆ ಮಕಾರದ ಪರದಲ್ಲಿ ಏಕಾರ ಸಂಭವಿಸದಿರುವುದರಿಂದ ಏಕಾರಕ್ಕೆ ಅನುವೃತ್ತಿಯಿಲ್ಲ. ಈಗ ಮಕಾರವಿಲ್ಲವಾದರೆ ಮೂರೂ ಅನುವೃತ್ತವಾಗುತ್ತವೆ. ಅದಸ್‌ಶಬ್ದಕ್ಕೆ ಸ್ವಾರ್ಥದಲ್ಲಿ ಅಕಚ್ ಪ್ರತ್ಯಯವನ್ನು ಮುಂದೆ ಹೇಳುತ್ತಾನೆ. ಅಕಚ್‌ಸಹಿತವಾದ ಅದಸ್‌ಶಬ್ದದ ಬಹುವಚನದಲ್ಲಿ ಅಮುಕೇ ಎಂಬ ರೂಪವಾಗುತ್ತದೆ. ಅಮುಕೇ + ಅತ್ರ ಎಂದಿರುವಾಗ ಪೂರ್ವರೂಪಸಂಧಿಬಾರದೇ ಪ್ರಕೃತಿಭಾವವೇ ಬರಬೇಕಾಗುತ್ತದೆ. ಆದುದರಿಂದ ಮಕಾರದ ಪರವಾದವುಗಳು ಎಂದು ಹೇಳಿದೆ. ಹೀಗೆ ಹೇಳಿದರೆ ಸಂಭವವಿಲ್ಲದಿರುವುದರಿಂದ ಏಕಾರವು ಅನುವೃತ್ತವಾಗುವುದಿಲ್ಲ. ಅಗ ಅಮುಕೇಽತ್ರ ಎಂಬಲ್ಲಿ ಪ್ರಕೃತಿಭಾವ

ಬಾರದೇ? "ಏಙಃ ಪದಾಂತಾದತಿ" ಎಂಬುದರಿಂದ ಪೂರ್ವರೂಪಸಂಧಿ, ಹೀಗೆ ಮಾತ್ ಎಂಬುದಕ್ಕೆ ಸಾಫಲ್ಯವಿರುವುದರಿಂದ ಹೇಳಲೇಬೇಕು.

(ನಿಪಾತಸಂಜ್ಞಾವಿಧಾಯಕ ಸೂತ್ರ)

## ೫೩. ಚಾದಯೋಽಸತ್ತ್ವೇ ॥ ೧-೪-೫೭ ॥

### ಅದ್ರವ್ಯಾರ್ಥಾಶ್ಚಾದಯೋ ನಿಪಾತಾಃ ಸ್ಯುಃ ॥

ಚಾದಯಃ ಅಸತ್ತ್ವೇ । ದ್ವಿಪದಸೂತ್ರ. "ಪ್ರಾಗ್ರೀಶ್ವರಾನ್ನಿಪಾತಾಃ ಎಂಬುದು ಅಧಿಕಾರ. ಇಲ್ಲಿ ನಿಪಾತಾಃ ಎಂದು ಅಧಿಕೃತವಾಗುತ್ತದೆ. ಸತ್ತ್ವವೆಂದರೆ ದ್ರವ್ಯ (ಪದಾರ್ಥ.) ಲಿಂಗಸಂಖ್ಯೆಯನ್ನು ಹೊಂದಲು ಯೋಗ್ಯವಾದುದು. "ದ್ರವ್ಯಾಸುವ್ಯವಸಾಯೇಷು ಸತ್ತ್ವಮ್" ಎಂದು ಅಮರ. ನ ಸತ್ತ್ವಂ, ಅಸತ್ತ್ವಂ. ದ್ರವ್ಯವಲ್ಲದಿರುವುದು ಚ ಆದಿಃ ಯೇಷಾಂ ತೇ ಚಾದಯಃ। ಮುಂತಾದವುಗಳು. ಇವುಗಳನ್ನು ಗಣಪಾಠದಲ್ಲಿ ವಿವರಿಸುತ್ತಾನೆ. ಸೂತ್ರಾರ್ಥ. ದ್ರವ್ಯವೆಂಬರ್ಥವನ್ನು ಕೊಡದಿರುವ ಚ ಮುಂತಾದವುಗಳು ನಿಪಾತವೆಂಬ ಸಂಜ್ಞೆಯನ್ನು ಹೊಂದುತ್ತವೆ. ಪಶುವೆಂಬ ಶಬ್ದವು ಚಾದಿಯಲ್ಲಿ ಪಠಿತವಾಗಿದೆ. ಇದು ಛಾಗಃ ಪಶುಃ (ಆಡು ಪಶುಜಾತಿ) ಎಂಬಲ್ಲಿ ದ್ರವ್ಯವಾಚಿಯಾಗುವುದರಿಂದ ನಿಪಾತಸಂಜ್ಞೆಯನ್ನು ಹೊಂದುವುದಿಲ್ಲ. ಪುಷ್ಟಂ ಪಶು ಮನ್ಯತೇ (ಚನ್ನಾಗಿ ಬೆಳೆದದ್ದನ್ನಾಗಿ ತಿಳಿಯುತ್ತಾನೆ) ಎಂಬಲ್ಲಿ ಪಶುವೆಂದರೆ ಚೆನ್ನಾಗಿ ಎಂದರ್ಥ. ಇಲ್ಲಿ ದ್ರವ್ಯಾರ್ಥಕವಾಗದಿರುವುದರಿಂದ ನಿಪಾತಸಂಜ್ಞೆ ಬರುತ್ತದೆ.

(ಪ್ರಾದಿಗಳಿಗೆ ನಿಪಾತಸಂಜ್ಞೆಯನ್ನು ಹೇಳುವ ಸೂತ್ರ)

## ೫೪. ಪ್ರಾದಯಃ ॥ ೧-೪-೫೮ ॥

### ಏತೇಽಪಿ ತಥಾ ॥

ಏಕಪದಸೂತ್ರ. "ಅಸತ್ತ್ವೇ" ಎಂಬುದು ಹಿಂದಿನಸೂತ್ರದಿಂದ ಅನುವೃತ್ತವಾಗುತ್ತದೆ. ನಿಪಾತಾಃ ಅಧಿಕಾರ. ಸುಲಭವಾದ ಅರ್ಥವಿರುವುದರಿಂದ ಇವೂ ಹಾಗೆಯೇ ಎಂದು ಅರ್ಥ ಬರೆಯುತ್ತಾನೆ. ದ್ರವ್ಯವೆಂಬ ಅರ್ಥವನ್ನು ಕೊಡದ ಪ್ರಮುಂತಾದವುಗಳೂ ನಿಪಾತಸಂಜ್ಞೆಯನ್ನು ಹೊಂದುತ್ತವೆ. ಪ್ರಮುಂತಾದವುಗಳು "ಉಪಸರ್ಗಾಃ ಕ್ರಿಯಾಯೋಗೇ" ಸೂತ್ರದಲ್ಲಿ ವಿವೃತವಾಗಿವೆ (೨೨). ನಿಪಾತಸಂಜ್ಞೆ ಹೇಳಿದುದಕ್ಕೆ ಪ್ರಯೋಜನವನ್ನು ಹೇಳುತ್ತಾನೆ.

(ನಿಪಾತಗಳಿಗೆ ಪ್ರಗೃಹ್ಯಸಂಜ್ಞೆ ಹೇಳುವ ಸೂತ್ರ)

## ೫೫. ನಿಪಾತ ಏಕಾಜನಾಙ್ । ೧-೧-೧೪ ।

ಏಕೋಽಜ್ ನಿಪಾತ ಆಙ್ವರ್ಜಃ ಪ್ರಗೃಹ್ಯಃ ಸ್ಯಾತ್ । ಇ ಇಂದ್ರಃ । ಉ ಉಮೇಶಃ । ವಾಕ್ಯಸ್ಮರಣಯೋರಙಿತ್ ; ಆ ಏವಂನು ಮನ್ಯಸೇ । ಆ ಏವಂಕಿಲ ತತ್ । ಅನ್ಯತ್ರ ಙಿತ್ ; ಆ (ಈಷತ್) ಉಷ್ಣಮ್ ಓಷ್ಣಮ್ ॥

ನಿಪಾತಃ ಏಕಾಜ್ ಅನಾಙ್ । ತ್ರಿಪದಸೂತ್ರ. 'ಇದೂದೇತ್' ಸೂತ್ರದಿಂದ ಪ್ರಗೃಹ್ಯಂ ಎಂಬುದು ಅನುವೃತ್ತವಾಗಿ ಇಲ್ಲಿ ಪುಲ್ಲಿಂಗವಾಗಿ ವಿಪರಿಣತವಾಗುತ್ತದೆ. ಏಕಶ್ಚಾಸೌ ಅಚ್ ಚ ಏಕಾಚ್ ಕರ್ಮಧಾರಯಸಮಾಸ, ಒಂದಾದಸ್ವರವೆಂದರ್ಥ. ನ ಆಙ್ ಅನಾಙ್. ಆಙ್ ಅಲ್ಲದಿರುವುದು. ಸೂತ್ರಾರ್ಥ.–ಆಙ್ ಎಂಬುದನ್ನು ಬಿಟ್ಟು ಒಂದೇ ಅಚ್ (ಸ್ವರ) ರೂಪವಾದ ನಿಪಾತವು ಪ್ರಗೃಹ್ಯಸಂಜ್ಞೆಯನ್ನು ಹೊಂದುತ್ತವೆ. ಇದಕ್ಕೆ ಇಂದ್ರಃ ಎಂಬಲ್ಲಿ ಪ್ರಯೋಜನ ಹೇಳುತ್ತಾನೆ. ಅಚ್‌ಪರವಾದಾಗ ಸಂಧಿ ಬರುವುದಿಲ್ಲ. ಇ ಉ ಮುಂತಾದ ಒಂದೊಂದೇ ಅಚ್‌ಗಳೂ ನಿಪಾತಗಳ ಮಧ್ಯೆ ಪಠಿತವಾಗಿವೆ. ಅವುಗಳಿಗೆಲ್ಲಾ ಅರ್ಥವೂ ಹೇಳಿದೆ. ವಿಸ್ಮಯಾರ್ಥದಲ್ಲಿ ಇ. ವಿತರ್ಕಾರ್ಥದಲ್ಲಿ ಉ ಇಲ್ಲಿ ಹೇಳಿದೆ. ಇ ಎಂಬುದಕ್ಕೆ ಪ್ರಗೃಹ್ಯಸಂಜ್ಞೆಯಿರುವುದರಿಂದ, ಇಪರವಾದಾಗ ಸವರ್ಣದೀರ್ಘವನ್ನು ಬಾಧಿಸಿ ಪ್ರಕೃತಿಭಾವವೇ ಬರುತ್ತದೆ. ಉ ಉಮೇಶವೆಂಬಲ್ಲಿಯೂ ಸವರ್ಣದೀರ್ಘಕ್ಕೆ ಅಪವಾದವಾಗಿ ಪ್ರಕೃತಿಭಾವ. ಆಙ್ ಚಾದಿಯಲ್ಲಿ ಹೇಳಿದೆ. ಅಲ್ಲಿ ಙಕಾರವು "ಹಲಂತ್ಯಂ" ಸೂತ್ರದಿಂದ ಇತ್ತಾಗಿ "ತಸ್ಯ ಲೋಪಃ" ಎಂಬುದರಿಂದ ಅದಕ್ಕೆ ಲೋಪವಾದರೆ ಆ ಮಾತ್ರ ಉಳಿಯುತ್ತದೆ. ಚಾದಿಗಳ ಮಧ್ಯೆ ಆ ಎಂಬುದೇ ಙಕಾರವಿಲ್ಲದೇ ಹೇಳಿದೆ. ಪ್ರಯೋಗಕಾಲದಲ್ಲಿ ಎರಡೂ ಆ ರೂಪದಲ್ಲಿಯೇ ಇರುತ್ತವೆ. ಆಗ ಆಙಿಗೆಮಾತ್ರ ಪ್ರಗೃಹ್ಯವಿಲ್ಲ. ಆ ಎಂಬುದಕ್ಕೆ ಪ್ರಗೃಹ್ಯಸಂಜ್ಞೆ ಇದೆಯೆಂದು ತಿಳಿಯುವುದು ಹೇಗೆ? ಅದಕ್ಕೋಸ್ಕರ ಅವುಗಳಿಗೆ ಭೇದವನ್ನು ಹೇಳಲು ಅರ್ಥವನ್ನು ಹೇಳುತ್ತಾನೆ 'ವಾಕ್ಯಸ್ಮರಣಯೋಃ ಅಙಿತ್' ವಾಕ್ಯ, ಸ್ಮರಣ ಈ ಎರಡು ಅರ್ಥಗಳಲ್ಲಿ ಙಕಾರವಿಲ್ಲದ ಆಕಾರ, ಚಾದಿಪಠಿತವಾದ ಆಕಾರ. ಆಙಲ್ಲ. ಪ್ರಕ್ರಾಂತವಾದ ವಾಕ್ಯಕ್ಕೆ ಬೇರೆ ಅರ್ಥಕಲ್ಪಿಸುವುದೇ ವಾಕ್ಯ. ಒಂದು ವಿಷಯಸ್ಮರಿಸುವುದು ಸ್ಮರಣೆ. ಈ ಎರಡು ಅರ್ಥವನ್ನು ತಿಳಿಯಪಡಿಸುವ ಆ ಎಂಬುದು ಙಿತ್ತಾಗದಿರುವುದರಿಂದ ನಿಷೇಧವಿಲ್ಲ. ಏಕಾಚಾದುದರಿಂದ ಪ್ರಗೃಹ್ಯಸಂಜ್ಞಾ ಬಂದೇ ಬರುತ್ತದೆ. ಆಗ ಸಂಧಿಯಿಲ್ಲ. ಆ ಏವಂನು ಮನ್ಯಸೇ । ವಾಕ್ಯವನ್ನು ತಿಳಿಸುವಲ್ಲಿ ಇದು ಉದಾಹರಣೆ. ನೀನು ಹೀಗೆ ತಿಳಿಯುತ್ತೀ. ಆ+ಏ ಎಂಬಲ್ಲಿ "ವೃದ್ಧಿರೇಚಿ" ಸೂತ್ರದಿಂದ ವೃದ್ಧಿ ಪ್ರಾಪ್ತವಾದರೆ ಅದನ್ನು ಬಾಧಿಸಿ ಪ್ರಕೃತಿಭಾವ. ಆ ಏವಂ ಕಿಲ ತತ್. ಇದು ಸ್ಮರಣೆಗೆ ಉದಾಹರಣೆ. ಒಂದು ವಸ್ತುವನ್ನು ನೋಡಿ ಅದರಂತಿರುವ ಹಿಂದೆ ನೋಡಿದುದನ್ನು ಸ್ಮರಿಸುವಾಗ ಹೇಳುವಮಾತು. ಇದರಂತೆಯೇ ಇದು ಇತ್ತು ಎಂದರ್ಥ. ಇಲ್ಲಿಯೂ ಆಙಿಲ್ಲವಾದುದರಿಂದ ನಿಷೇಧವಿಲ್ಲ. ಪ್ರಗೃಹ್ಯ ಸಂಜ್ಞಾನಿಮಿತ್ತವಾಗಿ ಪ್ರಕೃತಿಭಾವ. ಅನ್ಯತ್ರಙಿತ್. ಬೇರೆಕಡೆ

ಯಲ್ಲಿ ಉಪಯೋಗಿಸುವ ಆಕಾರವೆಲ್ಲಾ ಜಾತ್ತೆಂದೇ ತಿಳಿಯಬೇಕು. ಹಿಂದೆ ಹೇಳಿದ ಎರಡರ್ಥಗಳನ್ನು ಬಿಟ್ಟು ಇನ್ನುಯಾವ ಅರ್ಥದಲ್ಲಿ ಬಂದರೂ ಅದು ಆಜ್ ಎಂದೇ ತಿಳಿಯಬೇಕು. ಆಗ ಅಲ್ಲಿ ಅನಾಜ್ ಎಂದು ನಿಷೇಧವಾಡಿರುವುದರಿಂದ ಪ್ರಗೃಹ್ಯ ಸಂಜ್ಞಾ ಬರುವುದಿಲ್ಲ. ಆ (ಈಷತ್) ಉಷ್ಣಮ್. ಇಲ್ಲಿ ಆ ಎಂಬುದು ಸ್ವಲ್ಪ ಎಂಬ ರ್ಥದಲ್ಲಿ ಇದೆ. ಆದುದರಿಂದ ಜಾತ್. ಆ ಈಷತ್ ಎಂಬುದು ಅರ್ಥನಿರ್ದೇಶ. ಆ+ಉಷ್ಣಮ್ (ಸ್ವಲ್ಪ ಬಿಸಿ) ಎಂದಿರುವಾಗ ಪ್ರಗೃಹ್ಯಸಂಜ್ಞೆಯಿಲ್ಲದಿರುವುದರಿಂದ "ಅದ್ಗುಣಃ" ಎಂಬುದರಿಂದ ಗುಣ ಬಂದರೆ ಓಷ್ಣಮ್ ಎಂದಾಗುತ್ತದೆ. ಆ ಮತ್ತು ಆಜ್‌ಗಳ ವಿವೇಕವನ್ನು ತಿಳಿಯಲು ಭಾಷ್ಯದಲ್ಲಿ ಒಂದುಶ್ಲೋಕವು ಹೇಳಿದೆ "ಈಷ ದರ್ಥೇ ಕ್ರಿಯಾಯೋಗೇ ಮರ್ಯಾದಾಭಿವಿಧೌ ಚ ಯಃ । ಏತಮಾತಂಙಿತಂ ವಿದ್ಯಾತ್ ವಾಕ್ಯಸ್ಮರಣಯೋರಙಿತ್ ॥ ಸ್ವಲ್ಪವೆಂಬರ್ಥದಲ್ಲಿಯೂ ಕ್ರಿಯಾಸಂಬಂಧ ವಿರುವಾಗಲೂ ಎರಡುವಿಧವಾದ ಅವಧಿ (ಅದನ್ನು ಬಿಟ್ಟು, ಅದನ್ನು ಸೇರಿ) ಎಂಬ ಅರ್ಥದಲ್ಲಿಯೂ ಇರುವ ಆ ಎಂಬುದು ಙಿತ್ತಾದ ಆಕಾರ. ಆಜ್ ವಾಕ್ಯ, ಸ್ಮರಣ ಈ ಎರಡರ್ಥದಲ್ಲಿರುವ ಆಕಾರ ಙಿತ್ತಲ್ಲ. ಕೇವಲಾಕಾರ.

(ಓದಂತನಿಪಾತಕ್ಕೆ ಪ್ರಗೃಹ್ಯಸಂಜ್ಞಾ ವಿಧಾಯಕ)

## ೫೬. ಓತ್ ॥ ೧-೧-೧೫ ॥

**ಓದಂತೋ ನಿಪಾತಃ ಪ್ರಗೃಹ್ಯಃ ಸ್ಯಾತ್ ॥ ಅಹೋ ಈಶಾಃ ॥**

ಏಕಪದಸೂತ್ರ. ನಿಪಾತಃ ಎಂಬುದು ಹಿಂದಿನಸೂತ್ರದಿಂದ ಅನುವೃತ್ತವಾಗುತ್ತದೆ. ಹಿಂದಿನಂತೇ ಪ್ರಗೃಹ್ಯಂ ಎಂಬುದು ಅನುವೃತ್ತವಾಗಿ ಪುಲ್ಲಿಂಗವಾಗಿ ವಿಪರಿಣತ ವಾಗುತ್ತದೆ. ಓತ್ ಎಂಬುದು ನಿಪಾತಕ್ಕೆ ವಿಶೇಷಣ. "ಯೇನವಿಧಿಸ್ತದಂತಸ್ಯ" ಪರಿಭಾಷೆಯಿಂದ ತದಂತಲಾಭ. **ಸೂತ್ರಾರ್ಥ:—**ಓಕಾರಾಂತವಾದ ನಿಪಾತವು ಪ್ರಗೃಹ್ಯ ಸಂಜ್ಞೆಯನ್ನು ಹೊಂದುತ್ತದೆ. ಅಹೋ ಇಶಾಃ ಉದಾಹರಣೆ. ಅಹೋ ಎಂಬುದು ಚಾದಿಮಧ್ಯದಲ್ಲಿ ಪಠಿತವಾಗಿದೆ. ಇದು ಓಕಾರಾಂತವಾದುದರಿಂದ ಪ್ರಗೃಹ್ಯಸಂಜ್ಞೆಯನ್ನು ಹೊಂದುತ್ತದೆ. ಅದಕ್ಕೆ ಈಶಾಃ ಎಂಬುದು ಪರವಾದಾಗ ಸಂಧಿ ಬರುವುದಿಲ್ಲ. "ಏಚೋಽಯವಾಯಾವಃ" ಎಂಬುದರಿಂದ ಅವಾದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಪ್ರಕೃತಿಭಾವ.

(ಓಕಾರಕ್ಕೆ ವಿಕಲ್ಪವಾಗಿ ಪ್ರಗೃಹ್ಯಸಂಜ್ಞಾವಿಧಾಯಕ ಸೂತ್ರ)

## ೫೭. ಸಂಬುದ್ಧೌ ಶಾಕಲ್ಯಸ್ಯೇತಾವನಾರ್ಷೇ ॥೧-೧-೧೬॥

**ಸಂಬುದ್ಧಿನಿಮಿತ್ತಕ ಓಕಾರೋ ವಾ ಪ್ರಗೃಹ್ಯೋಽವೈದಿಕೇ ಇತೌ ಪರೇ । ವಿಷ್ಣೋ ಇತಿ, ವಿಷ್ಣ ಇತಿ, ವಿಷ್ಣವಿತಿ ॥**

ಸಂಬುದ್ಧೌ, ಶಾಕಲ್ಯಸ್ಯ, ಇತೌ, ಅನಾರ್ಷೇ। ನಾಲ್ಕುಪದವುಳ್ಳ ಸೂತ್ರ- ಸಂಬುದ್ಧೌ ಎಂಬಲ್ಲಿ ನಿಮಿತ್ತಾರ್ಥದಲ್ಲಿ ಸಪ್ತಮೀ ಬಂದಿದೆ. "ಓತ್" ಸೂತ್ರ ಅನುವೃತ್ತವಾಗುತ್ತದೆ. ನಿಮಿತ್ತಕ್ಕೆ ಅಲ್ಲಿ ಅನ್ವಯ. ಸಂಬುದ್ಧಿನಿಮಿತ್ತಕವಾದ ಓಕಾರ ಎಂದರ್ಥ. ಸಂಬುದ್ಧಿಯಲ್ಲಿ ಕಾರ್ಯರೂಪವಾಗಿ ಬಂದಿರುವ ಓಕಾರ- ಶಾಕಲ್ಯವೆಂಬುದು ಋಷಿಯ ಹೆಸರು. ಶಾಕಲ್ಯರ ಮತದಲ್ಲಿ ಈ ಕಾರ್ಯ ಬರುವುದರಿಂದ ಪಾಣಿನಿಯಮತದಲ್ಲಿ ಇಲ್ಲ. ಆಗ ವಿಕಲ್ಪವೆಂದಾಗುತ್ತದೆ. ಋಷಿಯೆಂದರೆ ವೇದ. ಋಷೌಭವಃ ಆರ್ಷಃ, ನ ಆರ್ಷಃ ಅನಾರ್ಷಃ. ವೇದದಲ್ಲಿ ಉಪಯುಕ್ತವಾಗದಿರುವ ಎಂದರ್ಥ. ಇತಿ ಎಂಬುದು ಅವ್ಯಯವಾದರೂ ಇಲ್ಲಿ ಶಬ್ದಪರವಾದುದರಿಂದ ಸಪ್ತಮೀ ಬಂದಿದೆ. ಸೂತ್ರಾರ್ಥ. ವೇದದಲ್ಲಿ ಪ್ರಯೋಗಿಸದ ಇತಿಶಬ್ದ ಪರವಾದಾಗ (ಲೋಕದಲ್ಲಿ ಉಪಯೋಗಿಸುವ ಇತಿ ಶಬ್ದ) ಸಂಬುದ್ಧಿಯಲ್ಲಿ ಬಂದಿರುವ (ಸಂಬುದ್ಧಿನಿಮಿತ್ತಕ) ಓಕಾರವು ವಿಕಲ್ಪವಾಗಿ ಪ್ರಗೃಹ್ಯಸಂಜ್ಞೆಯನ್ನು ಹೊಂದುತ್ತದೆ. ಉದಾಹರಣೆ. ವಿಷ್ಣೋ ಇತಿ. ವಿಷ್ಣು ಶಬ್ದ. ಸಂಬುದ್ಧಿಯಲ್ಲಿ "ಹ್ರಸ್ವಸ್ಯ ಗುಣಃ" ಎಂಬುದರಿಂದ ಗುಣ. (ಓ) ವಿಷ್ಣೋ ಎಂದಾಗುತ್ತದೆ ಇಲ್ಲಿ ಸಂಬುದ್ಧಿನಿಮಿತ್ತಕವಾದ ಓಕಾರವಾಗಿದೆ. ಇದಕ್ಕೆ ಲೋಕದಲ್ಲಿ ಪ್ರಯೋಗಿಸುವ ಇತಿ ಶಬ್ದಪರವಾಗಿದೆ. ಆದುದರಿಂದ ಪ್ರಗೃಹ್ಯಸಂಜ್ಞೆ ಶಾಕಲ್ಯರಮತದಲ್ಲಿ ಬಂದರೆ ಪ್ರಕೃತಿಭಾವ. ಇತರರ ಮತದಲ್ಲಿ ಇಲ್ಲವಾದುದರಿಂದ ಸಂಧಿಯಾಗುತ್ತದೆ. ಓಕಾರಕ್ಕೆ ಅಚ್‌ಪರವಾದುದರಿಂದ "ಏಚೋಯವಾಯಾವಃ" ಎಂಬುದರಿಂದ ಅವಾದೇಶ. ವಿಷ್ಣವ್+ಇತಿ ಎಂದಾಗುತ್ತದೆ. ಅಲ್ಲಿ ಅಕಾರಪೂರ್ವವಾಗಿರುವ ವಕಾರಕ್ಕೆ ಅಶ್ (ಇ) ಪರವಾದುದರಿಂದ "ಲೋಪಃ ಶಾಕಲ್ಯಸ್ಯ" ಎಂಬುದರಿಂದ ಶಾಕಲ್ಯರಮತದಲ್ಲಿ ವಕಾರಕ್ಕೆ ಲೋಪ ಬಂದರೆ ವಿಷ್ಣ+ಇತಿ ಎಂದಾಗುತ್ತದೆ. ಈ ಲೋಪವಾದದ್ದು "ಪೂರ್ವತ್ರಾಸಿದ್ಧಮ್" ಸೂತ್ರದಿಂದ ಹೇಳಿದಂತೆ "ಆದ್ಗುಣಃ" ಸೂತ್ರಕ್ಕೆ ಗೊತ್ತಿಲ್ಲವಾದ್ದರಿಂದ ಅದು ವಕಾರವಿದೆಯೆಂದು ತಿಳಿದುದರಿಂದ ಗುಣ ಬರುವುದಿಲ್ಲ. ಹೀಗೆ ಪ್ರಕೃತಿಭಾವ, ಅವಾದೇಶ, ವಕಾರಲೋಪ ಈ ಮೂರುಕಾರ್ಯಗಳಿಂದ ಮೂರು ರೂಪವಾಗುತ್ತವೆ.

(ಉಞಿಗೆ ವಕಾರಾದೇಶ ವಿಧಾಯಕ ಸೂತ್ರ)

## ೫೮. ಮಯಉಞೋ ವೋ ವಾ ॥ ೮-೩-೩೩ ॥

**ಮಯಃ ಪರಸ್ಯ ಉಞೋ ವೋ ವಾಽಚಿ । ಕಿಮ್ವುಕ್ತಮ್ । ಕಿಮು ಉಕ್ತಮ್ ॥**

ಮಯಃ, ಉಞಃ ವಃ, ವಾ, । ನಾಲ್ಕುಪದವುಳ್ಳ ಸೂತ್ರ. "ಙಮೋ ಹ್ರಸ್ವಾದಚಿ ಙಮುಣ್ನಿತ್ಯಮ್" ಎಂಬುದರಿಂದ "ಅಚಿ" ಅನುವೃತ್ತವಾಗುತ್ತದೆ. ಮಯಃ ಪ್ರತ್ಯಾಹಾರ. ಪಂಚಮೀ "ತಸ್ಮಾದಿತ್ಯುತ್ತರಸ್ಯ" ಪರಿಭಾಷೆಯಿಂದ ಮಯಿನ

ಅವ್ಯವಹಿತ ಪರಕ್ಕೆ ಕಾರ್ಯವೆಂದು ತಿಳಿಯುತ್ತದೆ. ಉಞ್ ನಲ್ಲಿ ಞಕಾರ "ಹಲಂತ್ಯಂ" ಸೂತ್ರದಿಂದ ಇತ್ ಸಂಜ್ಞೆಯನ್ನು ಹೊಂದಿ ಲೋಪವಾಗುತ್ತದೆ. **ಸೂತ್ರಾರ್ಥ.** ಮಯಿನ ಪರದಲ್ಲಿರುವ ಉಞ್‌ಗೆ ಅಚ್ ಪರವಾದಾಗ ವಿಕಲ್ಪವಾಗಿ ವಕಾರಾದೇಶ ಬರುತ್ತದೆ. ಉಞ್ ಏಕಾಚಾದನಿಪಾತವಾದುದರಿಂದ ಪ್ರಗೃಹ್ಯಸಂಜ್ಞಾ ಬಂದು ಪ್ರಕೃತಿಭಾವ ಪ್ರಾಪ್ತವಾದರೆ ಇಲ್ಲಿ ವಕಾರ ವಿಕಲ್ಪವಾಗಿ ಹೇಳಿರುತ್ತಾನೆ. ಕಿಮ್ವುಕ್ತಮ್. ಕಿಮ್+ಉ+ಉಕ್ತಮ್ ಎಂದಿರುವಾಗ ಮಯ್, ಕಿಮ್ ಎಂಬಲ್ಲಿರುವ ಮಕಾರ. ಅದರ ಪರದಲ್ಲಿ ಉಞ್ ಬಂದು ಅದಕ್ಕೆ ಉ ರೂಪವಾದ ಅಚ್ ಪರವಾದುದರಿಂದ ವಕಾರಾದೇಶ ಬಂದರೆ ಕಿಮ್ + ವ್ + ಉಕ್ತಮ್ ಎಂದಾಗುತ್ತದೆ. ವಿಕಲ್ಪವಾದುದರಿಂದ ವಕಾರಾದೇಶ ಬಾರದಿದ್ದರೆ ಕಿಮ್ + ಉ + ಉಕ್ತಮ್ ಎಂದಿರುವಾಗ ಉ ಎಂಬುದು ಏಕಾಚಾದ ನಿಪಾತವಾದುದರಿಂದ "ನಿಪಾತ ಏಕಾಜನಾಙ್" ಸೂತ್ರದಿಂದ ಪ್ರಗೃಹ್ಯಸಂಜ್ಞಾ ಬಂದರೆ "ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್" ಸೂತ್ರದಿಂದ ಪ್ರಕೃತಿ ಭಾವ. ಕಿಮು ಉಕ್ತಮ್. ಕಿಮ್ + ವ್ + ಉಕ್ತಮ್ ಎಂದಿರುವಾಗ ಮಕಾರಕ್ಕೆ ವಕಾರರೂಪ ಹಲ್ ಪರವಾದುದರಿಂದ "ಮೋಽನುಸ್ವಾರಃ" ಸೂತ್ರದಿಂದ ಮಕಾರಕ್ಕೆ ಅನುಸ್ವಾರ ಪ್ರಾಪ್ತವಾದರೆ ವಕಾರಾದೇಶವು "ಪೂರ್ವತ್ರಾಸಿದ್ಧಮ್" ಸೂತ್ರದಿಂದ ಅಸಿದ್ಧವಾಗುವುದರಿಂದ ಉಕಾರ ಪರದಲ್ಲಿದ್ದಂತೇ ಆಗುವುದರಿಂದ ಮಕಾರಕ್ಕೆ ಅನುಸ್ವಾರ ಬರುವುದಿಲ್ಲ.

(ಇಕ್ಕಿಗೆ ಹ್ರಸ್ವ ವಿಧಾಯಕ ಸೂತ್ರ)

## ೫೯. ಇಕೋಽಸವರ್ಣೇ ಶಾಕಲ್ಯಸ್ಯ ಹ್ರಸ್ವಶ್ಚ ॥೬-೧-೧೨೭॥

ಪದಾಂತಾ ಇಕೋ ಹ್ರಸ್ವಾ ವಾ ಸ್ಯುರಸವರ್ಣೇಽಚಿ । ಹ್ರಸ್ವವಿಧಿಸಾಮರ್ಥ್ಯಾನ್ನಸ್ವರ ಸಂಧಿಃ । ಚಕ್ರಿ ಅತ್ರ. ಚಕ್ರ್ಯತ್ರ । ಪದಾಂತಾ ಇತಿ ಕಿಮ್? ಗೌರ್ಯೌ॥

ಇಕಃ, ಅಸವರ್ಣೇ, ಶಾಕಲ್ಯಸ್ಯ, ಹ್ರಸ್ವಃ ಚ ಐದು ಪದಗಳುಳ್ಳ ಸೂತ್ರ. "ಏಙಃ ಪದಾಂತಾದತಿ" ಸೂತ್ರದಿಂದ "ಪದಾಂತಾತ್" "ಇಕೋಯಣಚಿ" ಸೂತ್ರದಿಂದ "ಅಚಿ" ಎಂಬುದೂ ಅನುವೃತ್ತವಾಗುತ್ತದೆ. ಇಕಃ ಎಂಬುದು ಷಷ್ಠೀ. ಅದಕ್ಕೆ ವಿಶೇಷಣವಾದುದರಿಂದ ಪದಾಂತಾತ್ ಎಂಬುದು ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಅಸವರ್ಣೇ ಪದವು ಅಚಿನಲ್ಲಿ ಅನ್ವಯಿಸುತ್ತದೆ. ಇಲ್ಲಿ ಚಕಾರವಿರುವುದರಿಂದ ಎರಡು ವಾಕ್ಯವಾಗುತ್ತದೆ. **ಸೂತ್ರಾರ್ಥ.** ಅಸವರ್ಣವಾದ ಅಚ್ ಪರವಾದಾಗ ಪದಾಂತವಾದ ಇಕ್ಕಿಗೆ ಶಾಕಲ್ಯರ ಮತದಲ್ಲಿ (ವಿಕಲ್ಪವಾಗಿ) ಹ್ರಸ್ವವು ಬರುತ್ತದೆ. "ಪ್ರಕೃತ್ಯಾಂತಃ"........ಸೂತ್ರದಿಂದ ಪ್ರಕೃತ್ಯಾ ಎಂಬುದು ಅನುವೃತ್ತವಾಗುವುದರಿಂದ ಬಂದಿರುವ ಹ್ರಸ್ವವು ವಿಕಲ್ಪವಾಗಿ ಪ್ರಕೃತಿಭಾವವನ್ನು ಹೊಂದು.

ತ್ತದೆ ಎಂದು ಎರಡನೇ ವಾಕ್ಯಾರ್ಥ. ವೃತ್ತಿಕಾರನು ಎರಡು ವಾಕ್ಯಾರ್ಥವನ್ನು ಬರೆದಿಲ್ಲ. ಆ ಅರ್ಥ ಬರುವಂತೆ ಬೇರೆ ರೀತಿ ಹೇಳಿರುತ್ತಾನೆ. ' ಹ್ರಸ್ವವಿಧಿ ಸಾಮ ರ್ಥ್ಯಾನ್ನ ಸ್ವರ ಸಂಧಿಃ. ಇಲ್ಲಿ ಹ್ರಸ್ವವಿಧಾನ ಮಾಡಿರುವುದರಿಂದಲೇ ಯಾವ ಸ್ವರ ಸಂಧಿಯೂ ಬರುವುದಿಲ್ಲ. ಇಕ್ಕಿಗೆ ಹ್ರಸ್ವ ಮಾಡಿದಮೇಲೂ ಯಣಾದಿಗಳು ಬರುವು ದಾದರೆ ಮೊದಲೇ ದೀರ್ಘಕ್ಕೇ ಮಾಡಬಹುದಿತ್ತು. ಇಕಾರಕ್ಕಾಗಲೀ ಈಕಾರ ಕ್ಕಾಗಲೀ ಯಣ್ ಬಂದರೆ ರೂಪ ವ್ಯತ್ಯಾಸವೇನೂ ಆಗುವುದಿಲ್ಲ. ಆದುದರಿಂದ ದೀರ್ಘಕ್ಕೆ ಹ್ರಸ್ವ ವಿಧಾನ ಮಾಡಿರುವುದು ಸಫಲವಾಗಬೇಕಾದರೆ ಅಲ್ಲಿ ಯಾವ ಸ್ವರಸಂಧಿಯೂ ಬರಬಾರದು. ಇದರಿಂದ ಪ್ರಕೃತಿಭಾವವೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಇಲ್ಲಿ ಚಕಾರದಿಂದ ವಾಕ್ಯದ್ವಯ ಕಲ್ಪನೆ ಆವಶ್ಯಕವಿಲ್ಲವೆಂದು ಭಾಷ್ಯ ಕಾರರು ಹೇಳಿರುತ್ತಾರೆ. ಚಕಾರ ಹೇಳಿದ ಸೂತ್ರಕಾರರಿಗೆ ವಾಕ್ಯದ್ವಯಕಲ್ಪನೆ ಯಲ್ಲಿ ತಾತ್ಪರ್ಯವಿದೆ. ಅರ್ಥಾತ್ ಪ್ರಕೃತಿಭಾವ ತಿಳಿಯುವುದರಿಂದ ವಾಕ್ಯದ್ವಯ ಬೇಡವೆಂದು ಭಾಷ್ಯಕಾರರ ಅಭಿಪ್ರಾಯ. ಉದಾ :-- ಚಕ್ರೀ+ಅತ್ರ ಇಲ್ಲಿ ಚಕ್ರೀ ಎಂಬಲ್ಲಿ ಪದಾಂತವಾದ ಇಕ್ ಈಕಾರ. ಅದಕ್ಕೆ ಸವರ್ಣವಲ್ಲದ ಅಚ್ (ಅಕಾರ) ಪರದಲ್ಲಿದೆ. ಶಾಕಲ್ಯರ ಮತದಂತೆ ಈಕಾರಕ್ಕೆ ಹ್ರಸ್ವ ಬಂದರೆ ಅದು ಸಫಲವಾಗಲು ಪ್ರಕೃತಿಭಾವ ಹೇಳಿರುವುದರಿಂದ ಚಕ್ರಿ+ಅತ್ರ ಎಂದೇ ಇರುತ್ತದೆ. ಯಣ್ ಸಂಧಿ ಬರುವುದಿಲ್ಲ. ಪಾಣಿನಿ ಮತದಲ್ಲಿ ಹ್ರಸ್ವವಿಲ್ಲವಾದುದರಿಂದ ಚಕ್ರೀ+ಅತ್ರ ಎಂಬಲ್ಲಿ “ ಇಕೋ ಯಣಚಿ ” ಸೂತ್ರದಿಂದ ಯಣಾದೇಶ. ಪದಾಂತಾಃ ಇತಿ ಕಿಮ್ ? ಪದಾಂತ ಇಕ್ ಹೇಳಿದುದು ಏಕೆ? ಪದಾಂತತ್ವ ವಿಶೇಷಣವಿಲ್ಲವಾದರೆ ಸಾಮಾನ್ಯವಾದ ಇಕ್ಕಿಗೆ ಅಸವರ್ಣ ಅಚ್ ಪರವಾದಾಗ ಹ್ರಸ್ವವಿಕಲ್ಪ ಎಂದರ್ಥವಾಗುವುದು. ಆಗ ಗೌರೀ ಶಬ್ದಕ್ಕೆ ದ್ವಿವಚನ ಪ್ರತ್ಯಯಪರವಾದಾಗ ಅಲ್ಲಿಯೂ (ಗೌರೀ+ಔ) ಬರಬೇ ಕಾಗುತ್ತದೆ. ಪದಾಂತವಾದ ಇಕ್ ಎಂದು ಹೇಳಿದರೆ ಗೌರೀ+ಔ ಎಂಬಲ್ಲಿರುವ ಈಕಾರವು ಪ್ರಾತಿಪದಿಕಾಂತವಾಗುವುದಲ್ಲದೆ ಪದಾಂತವಾಗುವುದಿಲ್ಲ. ಔ ಸೇರಿದ ಮೇಲೆ ಅದು ಪದವಾಗುತ್ತದೆ. ಸುಬಂತತಿಙಂತವಾದುದು ಪದ. ಅಲ್ಲಿ ಯಣ್ ಸಂಧಿ ಬಂದು ಗೌರ್ಯೌ ಎಂದಾಗುತ್ತದೆ. ಇಲ್ಲಿ ಯಣ್ ಬಂದಾಗ ಆ ಯಕಾರಕ್ಕೆ ವಿಕಲ್ಪ ವಾಗಿ ದ್ವಿತ್ವವನ್ನು ಮುಂದಿನ ಸೂತ್ರದಲ್ಲಿ ಹೇಳುತ್ತಾನೆ.

(ಯರ್ ವರ್ಣಗಳಿಗೆ ದ್ವಿತ್ವವಿಧಾಯಕಸೂತ್ರ)

## ೬೦. ಅಚೋ ರಹಾಭ್ಯಾಂ ದ್ವೇ ॥ ೮-೪-೪೬ ॥

**ಅಚಃ ಪರಾಭ್ಯಾಂ ರೇಫಹಕಾರಾಭ್ಯಾಂ ಪರಸ್ಯ ಯರೋ ದ್ವೇ ವಾಸ್ತಃ ಗೌರ್ಯ್ಯೌ ॥**

ಅಚಃ, ರಹಾಭ್ಯಾಂ, ದ್ವೇ । ತ್ರಿಪದಸೂತ್ರ- ‘‘ ಯರೋಽನುನಾಸಿಕೇ ಅನು ನಾಸಿಕೋ ವಾ ” ಸೂತ್ರದಿಂದ ಯರಃ, ವಾ, ಅನುವೃತ್ತವಾಗುತ್ತವೆ. ಅಚಃ

ರಹಾಭ್ಯಾಂ, ಎರಡೂ ಪಂಚಮೀ "ತಸ್ಮಾದಿತ್ಯುತ್ತರಸ್ಯ" ಪರಿಭಾಷೆಯಿಂದ ಪರಕ್ಕೆ ಕಾರ್ಯವೆಂದು ತಿಳಿಯಬೇಕು. ಯರಃ ಷಷ್ಠೀ. ರಶ್ಚ ಹಶ್ಚ ರಹೌ, ತಾಭ್ಯಾಂ ರಹಾಭ್ಯಾಮ್ । ಸೂತ್ರಾರ್ಥ. ಅಚ್ಚಿನ ಪರದಲ್ಲಿರುವ ರೇಫಹಕಾರಗಳ ಪರದಲ್ಲಿರುವ ಯರ್ ವರ್ಣಗಳಿಗೆ ವಿಕಲ್ಪವಾಗಿ ದ್ವಿತ್ವ ಬರುತ್ತದೆ. ಗೌರ್ + ಯ್ + ಔ. ಇಲ್ಲಿ ಅಚ್ ಗಕಾರದ ಮೇಲಿರುವ ಓಕಾರ. ಅದರ ಪರದಲ್ಲಿ ರೇಫವಿದೆ. ಅದರ ಪರದಲ್ಲಿ ಯರ್ ವರ್ಣ ಯಕಾರವಿದೆ. ಅದಕ್ಕೆ ದ್ವಿತ್ವಬಂದರೆ ಗೌರ್ + ಯ್ + ಔ = ಗೌರ್ಯ್ಯೌ. ಬಾರದಿದ್ದರೆ ಗೌರ್ಯೌ. ಹೀಗೆ ಎರಡುರೂಪವಾಗುತ್ತವೆ.

(ಸಮಾಸದಲ್ಲಿ ಹ್ರಸ್ವನಿಷೇಧವಿಧಿಸುವ ವಾರ್ತಿಕ)

**ವಾ॥ ನ ಸಮಾಸೇ ॥**

**ವಾಪ್ಯಶ್ವಃ ॥**

ದ್ವಿಪದವಾರ್ತಿಕ. ಸಮಾಸದಲ್ಲಿ ಶಾಕಲ್ಯರು ಹೇಳಿರುವ ಹ್ರಸ್ವ ಬರುವುದಿಲ್ಲ. **ಉದಾ**-ವಾಪ್ಯಾಂ ಅಶ್ವಃ ವಾಪ್ಯಶ್ವಃ । ಸಪ್ತಮೀ ತತ್ಪುರುಷಸಮಾಸ. ಸಮಾಸದಲ್ಲಿ ಸುಪ್ ಲೋಪವಾದಾಗ ವಾಪೀ + ಅಶ್ವ ಎಂದಿರುವಾಗ ಶಾಕಲ್ಯರಮತದಂತೆ ಪದಾಂತವಾದ ಈಕಾರವಾದುದರಿಂದ ಹ್ರಸ್ವಪ್ರಾಪ್ತವಾದರೆ ವಾರ್ತಿಕದಿಂದ ನಿಷೇಧ. ಯಣ್ ಸಂಧಿ ಬಂದಿದೆ. ಭಾವಿಯಲ್ಲಿರುವ ಕುದುರೆ ಎಂದರ್ಥ.

(ಅಕ್ಕಿಗೆ ಹ್ರಸ್ವವಿಧಾಯಕ ಸೂತ್ರ)

## ೬೧. ಋತ್ಯಕಃ ॥ ೬-೧-೧೨೮ ॥

**ಪದಾಂತಾ ಅಕಃ ಋತಿಪರೇ ಪ್ರಾಗ್ವದ್ವಾ । ಬ್ರಹ್ಮ + ಋಷಿಃ ।**
**ಬ್ರಹ್ಮರ್ಷಿಃ ॥**

ಋತಿ, ಅಕಃ । ದ್ವಿಪದ ಸೂತ್ರ. "ಏಙಃಪದಾಂತಾದತಿ" ಸೂತ್ರದಿಂದ ಪದಾಂತಾತ್ ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಹಿಂದಿನ ಸೂತ್ರದಿಂದ ಶಾಕಲ್ಯಸ್ಯ, ಹ್ರಸ್ವಃ ಎಂಬುದು ಅನುವೃತ್ತವಾಗುತ್ತದೆ, ಋತಿ ಸಪ್ತಮೀ. "ತಸ್ಮಿನ್ನಿತಿನಿರ್ದಿಷ್ಟೇ ಪೂರ್ವಸ್ಯ" ಪರಿಭಾಷೆಯಿಂದ ಋಕಾರದ ಅವ್ಯವಹಿತಪೂರ್ವಕ್ಕೆ ಕಾರ್ಯವೆಂದು ತಿಳಿಯುವುದರಿಂದ ಋಕಾರ ಪರವಾದಾಗ ಎಂದರ್ಥವಾಗುತ್ತದೆ. **ಸೂತ್ರಾರ್ಥ**—ಪದಾಂತವಾದ ಅಕ್ಕಿಗೆ ಋಕಾರಪರವಾದಾಗ ಶಾಕಲ್ಯರ ಮತದಲ್ಲಿ ಪ್ರಸ್ವ ಬರುತ್ತದೆ. ಇದನ್ನೇ "ಪ್ರಾಗ್ವದ್ವಾ" (ಹಿಂದಿನಂತೇ) ಎಂದು ವೃತ್ತಿಯಲ್ಲಿ ಹೇಳಿರುತ್ತಾನೆ. ವೃತ್ತಿಯಲ್ಲಿ ಪ್ರಥಮಾಂತವಾಗಿ ಹೇಳಿರುವುದರಿಂದ ಋಕಾರವಾದಾಗ ಪದಾಂತವಾದ ಇಕ್ ವರ್ಣಗಳು ವಿಕಲ್ಪವಾಗಿ ಹ್ರಸ್ವವಾಗುತ್ತವೆ ಎಂದರ್ಥವಾಗುತ್ತದೆ. ಉದಾ. ಬ್ರಹ್ಮಾ + ಋಷಿಃ ಇಲ್ಲಿ ಆಕಾರ ಪದಾಂತವಾದ ಅಕ್ ಇದಕ್ಕೆ ಋಕಾರ ಪರವಾದುದರಿಂದ ಹ್ರಸ್ವ ಬಂದರೆ ಬ್ರಹ್ಮಋಷಿಃ.

ಎಂದಾಗುತ್ತದೆ. ಹಿಂದಿನಂತೆ ಹ್ರಸ್ವಸಾಫಲ್ಯಕ್ಕೋಸ್ಕರ ಬೇರೆ ಸಂಧಿಗಳು ಬರುವುದಿಲ್ಲ. ಹ್ರಸ್ವಬಾರದಿದ್ದರೆ ಅಕಾರಕ್ಕೆ ಅಚ್ ಪರವಾದುದರಿಂದ "ಆದ್ಗುಣಃ" ಸೂತ್ರದಿಂದ ಗುಣ. ಋಕಾರದ ಸ್ಥಾನಕ್ಕೆ ಬರುವುದಾದುದರಿಂದ "ಉರಣ್ ರಪರಃ" ಎಂಬುದರಿಂದ ರಪರವಾಗಿ (ಅರ್) ಬಂದರೆ ಬ್ರಹ್ಮರ್ಷಿಃ ಎಂದಾಗುತ್ತದೆ. ಪದಾಂತಾಃ ಕಿಮ್? ಇಲ್ಲಿಯೂ ಪದಾಂತವಾದ ಅಕ್ ಎಂದುದು ಏಕೆ? ಹಾಗೆ ಹೇಳದೇ ಹೋದರೆ ಆರ್ಚ್ಛತ್ ಎಂಬಲ್ಲಿಯೂ ಹ್ರಸ್ವವಿಕಲ್ಪ ಬರಬೇಕಾಗುತ್ತದೆ. ಆ + ಋಚ್ಛತ್. ಋಚ್ಛ ಧಾತುವಿಗೆ ಲಙ್ ಮಾಡಿದಾಗ ಅಜಾದಿಯಾದುದರಿಂದ ಆಡಾಗಮ ಬರುತ್ತದೆ. ಆಗ ಆ ಎಂಬುದು ಋಚ್ಛ್ ಧಾತುವಿನ ಅವಯವ—ಪದಾಂತವಲ್ಲ. ಸಾಮಾನ್ಯ ಅಕ್ಕಿಗೆ ಹ್ರಸ್ವವೆಂದುದರಿಂದ ಇಲ್ಲಿಯೂ ಬರಬೇಕಾಗುತ್ತದೆ. ಪದಾಂತತ್ವವಿಶೇಷಣ ಹೇಳಿದರೆ ಪ್ರಕೃತ ಆ ಎಂದುದು ಪದಾಂತವಾದ ಆಕಾರವಾಗದಿರುವುದರಿಂದ ಹ್ರಸ್ವವಿಲ್ಲ. "ಆಟಶ್ಚ" ಸೂತ್ರದಿಂದ ವೃದ್ಧಿ. ಹಿಂದಿನಂತೇ ರಪರವಾಗಿ (ಆರ್) ಬಂದರೆ ಆರ್ಚ್ಛತ್ ರೂಪವಾಗುತ್ತದೆ. ಇಲ್ಲಿ ಹೇಳಿದ ಹ್ರಸ್ವವಿಕಲ್ಪವು ಸಮಾಸದಲ್ಲಿಯೂ ಬರುತ್ತದೆ. ಸಪ್ತಋಷೀಣಾಮ್ । ಸಪ್ತರ್ಷೀಣಾಮ್ ॥ ಹೀಗೆ ಸಾಮಾನ್ಯವಾಗಿ ಸ್ವರಕ್ಕೆ ಬರುವ ಸಂಧಿಯು ವಿವೃತವಾಗಿದೆ. ಮುಂದಿನ ಪ್ರಕರಣದಲ್ಲಿ ವ್ಯಂಜನಗಳಿಗೆ (ಹಲ್) ಬರುವ ಸಂಧಿಗಳನ್ನು ಹೇಳುತ್ತಾನೆ.

---

## ಅಥ ಹಲ್ಸಂಧಿಃ

(ಶ್ಚುತ್ವಸಂಧಿ ಹೇಳುವ ಸೂತ್ರ)

### ೬೨. ಸ್ತೋಃ ಶ್ಚುನಾ ಶ್ಚುಃ ॥ ೮-೪-೪೦ ॥

**ಸಕಾರತವರ್ಗಯೋಃ ಶಕಾರಚವರ್ಗಾಭ್ಯಾಂ ಯೋಗೇ ಶಕಾರಚವರ್ಗೌ ಸ್ತಃ । ರಾಮಶ್ಶೇತೇ । ರಾಮಶ್ಚಿನೋತಿ । ಸಚ್ಚಿತ್ । ಶಾರ್ಙ್ಗಿಞ್ಜಯ ॥**

ತ್ರಿಪದಸೂತ್ರ. ಸ್ ಚ ತುಶ್ಚ ತಯೋಃ ಸಮಾಹಾರಃ ಸ್ತುಃ. ಸಮಾಹಾರದಲ್ಲಿ ನಪುಂಸಕವಾಗಬೇಕೆಂಬ ನಿಯಮವಿದ್ದರೂ ಇಲ್ಲಿ ಆರ್ಷವಾದುದರಿಂದ ಪುಲ್ಲಿಂಗ ಬಂದಿದೆ. ಆರ್ಷವೆಂದರೆ ಋಷಿ ಹೇಳಿದುದು. ನಾವು ಹಾಗೆ ಹೇಳುವುದು ತಪ್ಪು. ಇತರೇತರ ದ್ವಂದ್ವಮಾಡಿದರೆ ಪುಲ್ಲಿಂಗ ಸಾಧುವಾದರೂ ದ್ವಿವಚನ ಬರಬೇಕಾಗುತ್ತದೆ. ಹಾಗೆ ದ್ವಿವಚನ ಮಾಡದಿರುವುದು ಆರ್ಷವೆನ್ನಬೇಕು. ಹೀಗೆ ಮುಂದಿನ ಎರಡು ಶಬ್ದಗಳಲ್ಲಿಯೂ ತಿಳಿಯಬೇಕು. ಸ್ತೋಃ ಷಷ್ಠೀ. ಶ್ ಚ ಚುಶ್ಚ ಶ್ಚುಃ ತೇನ ಶ್ಚುನಾ, ತೃತೀಯಾ. ಶ್ಚುಃ ಪ್ರಥಮಾಂತ. ತು. ಚು ಇವು ಉದಿತ್ತಾದುದರಿಂದ ವರ್ಗವನ್ನು ತೆಗೆದುಕೊಳ್ಳಬೇಕು. ಇಲ್ಲಿ ಸಕಾರ ತವರ್ಗ ಸ್ಥಾನಿ. ಶಕಾರ ಚವರ್ಗ ನಿಮಿತ್ತ. ಶಕಾರ

ಚವರ್ಗ ಆದೇಶ. ಶ್ಚುನಾ ಎಂಬುದು ಸಹಾರ್ಥದಲ್ಲಿ ತೃತೀಯಾ. **ಸೂತ್ರಾರ್ಥ.** ಸಕಾರ ತವರ್ಗಗಳಿಗೆ ಶಕಾರ ಚವರ್ಗಗಳ ಸಂಬಂಧವಿರುವಾಗ ಶಕಾರ ಚವರ್ಗಗಳು ಆದೇಶವಾಗಿ ಬರುತ್ತವೆ. ಇಲ್ಲಿ ಸ್ಥಾನಿ, ಆದೇಶ, ನಿಮಿತ್ತಗಳು ಸಂಖ್ಯೆಯಲ್ಲಿ ಸಾಮ್ಯವನ್ನು ಹೊಂದಿರುವುದರಿಂದ "ಯಥಾಸಂಖ್ಯಮನುದೇಶಃ ಸಮಾನಾಮ್" ಎಂಬುದರಿಂದ ಮೊದಲನೇದಕ್ಕೆ ಮೊದಲನೇದು ಎರಡನೇದಕ್ಕೆ ಎರಡನೇದು ಇತ್ಯಾದಿ ನಿಯಮ ಬರಬೇಕಾಗುತ್ತದೆ. ಆದರೆ ಮುಂದಿನ ನಿಷೇಧಾದಿ ಸೂತ್ರಗಳನ್ನು ಪರ್ಯಾಲೋಚಿಸಿ ಇಲ್ಲಿ ಎರಡಕ್ಕೆ ಮಾತ್ರ ನಿಯಮವೆಂದು ತಿಳಿಯಬೇಕು. ಸ್ಥಾನಿ ಆದೇಶಗಳಿಗೆ ಮಾತ್ರ ಯಥಾಸಂಖ್ಯ ನಿಯಮ. ಸ್ಥಾನಿ ನಿಮಿತ್ತಗಳಿಗೆ ಯಥಾಸಂಖ್ಯ ನಿಯಮವಿಲ್ಲ. ಸಕಾರಕ್ಕೆ ಶಕಾರದ ಯೋಗವೆಂದು ನಿಯಮವಿಲ್ಲ. ಶಕಾರ ಚವರ್ಗದಲ್ಲಿ ಯಾವುದಾದರೊಂದರ ಸಂಬಂಧವಿದ್ದರೆ ಸಾಕು. ಯೋಗವೆಂದುದರಿಂದ ಪೂರ್ವಾಪರನಿಯಮವೂ ಇಲ್ಲ. ಸಕಾರ ತವರ್ಗ ಪೂರ್ವದಲ್ಲಿದ್ದು ಪರದಲ್ಲಿ ಶಕಾರಚವರ್ಗ ಯೋಗವಿದ್ದರೂ ಬರುತ್ತದೆ. ಶಕಾರ ಚವರ್ಗ ಪೂರ್ವದಲ್ಲಿದ್ದು ಪರದಲ್ಲಿ ಸಕಾರತವರ್ಗವಿದ್ದರೂ ಆದೇಶ ಬರುವಾಗ ಮಾತ್ರ ಯಥಾಸಂಖ್ಯ ನಿಯಮ. ಸಕಾರಕ್ಕೆ ಶಕಾರವೂ ತವರ್ಗಕ್ಕೆ ಕ್ರಮವಾಗಿ ಚವರ್ಗವೂ ಬರುತ್ತದೆ. ರಾಮಸ್ + ಶೇತೇ, (ರಾಮನು ಮಲಗುತ್ತಾನೆ.) ಇಲ್ಲಿ ಸಕಾರಕ್ಕೆ ಶಕಾರದ ಸಂಬಂಧವಿರುವುದರಿಂದ ಸಕಾರಕ್ಕೆ ಶಕಾರ ಬಂದರೆ ರಾಮಶ್ + ಶೇತೇ = ರಾಮಶ್ಶೇತೇ. ರಾಮಸ್ + ಚಿನೋತಿ. ನಿಮಿತ್ತದಲ್ಲಿ ನಿಯಮವಿಲ್ಲವೆಂದುದರಿಂದ ಸಕಾರಕ್ಕೆ ಚಕಾರದ ಯೋಗವಿರುವುದರಿಂದ ಸಕಾರಕ್ಕೆ ಶಕಾರಾದೇಶ. ರಾಮಶ್ಚಿನೋತಿ, (ರಾಮನು ಆರಿಸುತ್ತಾನೆ) ಸತ್ + ಚಿತ್, ತಕಾರಕ್ಕೆ ಚಕಾರದ ಸಂಬಂಧವಿರುವುದರಿಂದ ತಕಾರಕ್ಕೆ ಚಕಾರಾದೇಶ. ಸಚ್ಚಿತ್ (ಸದ್ರೂಪಿಯಾದ) ಶಾರ್ಙ್ಗಿನ್ + ಜಯ, ನಕಾರಕ್ಕೆ ಞಕಾರಾದೇಶ ಶಾರ್ಙ್ಗಿಞ್ಜಯ, (ವಿಷ್ಣುವೇ ಜಯಶೀಲನಾಗು).

(ಶ್ಚುತ್ವನಿಷೇಧ ವಿಧಾಯಕ ಸೂತ್ರ)

## ೬೪. ಶಾತ್ ॥ ೮-೪-೪೪ ॥

**ಶಾತ್ಪರಸ್ಯ ತವರ್ಗಸ್ಯ ಶ್ಚುತ್ವಮ್ ನ ಸ್ಯಾತ್ । ವಿಶ್ನಃ ಪ್ರಶ್ನಃ ॥**

ಏಕಪದ ಸೂತ್ರ, ಶಾತ್ ಶಕಾರದ ಪಂಚಮೀರೂಪ. "ನಪದಾಂತಾಟ್ಟೋರನಾಮ್" ಸೂತ್ರದಿಂದ ನ ಪದವೂ "ಸ್ತೋಃಶ್ಚುನಾಶ್ಚುಃ" ಸೂತ್ರದಿಂದ "ತೋಃ" "ಶ್ಚುಃ" ಪದಗಳೂ ಅನುವೃತ್ತವಾಗುತ್ತವೆ. ಶಾತ್‌ಪಂಚಮೀ ಆದುದರಿಂದ "ತಸ್ಮಾದಿತ್ಯುತ್ತರಸ್ಯ" ಪರಿಭಾಷೆಯಿಂದ ಪರಕ್ಕೆ ಎಂದು ಲಬ್ಧವಾಗುತ್ತದೆ. **ಸೂತ್ರಾರ್ಥ.** ಶಕಾರದ ಪರದಲ್ಲಿರುವ ತವರ್ಗಕ್ಕೆ ಶ್ಚುತ್ವವು ಬರುವುದಿಲ್ಲ. ಸ್ಥಾನಿನಿಮಿತ್ತಗಳಿಗೆ ಯಥಾಸಂಖ್ಯ ನಿಯಮವಿರುವುದಾದರೆ ಈ ನಿಷೇಧವು ಕೂಡುತ್ತಿರಲಿಲ್ಲ. ಇದರಿಂದಲೇ ಕೇವಲ ಸ್ಥಾನಿಆದೇಶಗಳಿಗೆ ಯಥಾಸಂಖ್ಯನಿಯಮವೆಂದು ಹಿಂದೆ ಹೇಳಿರುವುದು.

ವಿಶ್ನಃ. ವಿಶ್ + ನಃ ವಿಚ್ಛಧಾತುವಿಗೆ ನಙ್ ಪ್ರತ್ಯಯ. "ಛ್ವೋಃ ಶೂಡನುನಾಸಿಕೇ ಚ" ಸೂತ್ರದಿಂದ ಛಕಾರಕ್ಕೆ ಶಕಾರಾದೇಶ. ಶಕಾರದ ಪರದಲ್ಲಿ ತವರ್ಗದ ನಕಾರ ಬಂದುದರಿಂದ ಶ್ಚುತ್ವ ನಿಷೇಧ ಬಂದರೆ ಹಾಗೇ ಇರುತ್ತದೆ. ವಿಶ್ನಃ. ಹೀಗೆಯೇ ಪ್ರಚ್ಛಧಾತುವಿಗೂ ನಙ್‌ಪ್ರತ್ಯಯ ಬಂದಾಗ ಛಕಾರಕ್ಕೆ ಶಕಾರಾದೇಶ. ಪ್ರಶ್ + ನಃ ಎಂದಿರುವಾಗ ಹಿಂದಿನಂತೇ ನಿಷೇಧ ಬಂದರೆ ಪ್ರಶ್ನಃ ಎಂದಾಗುತ್ತದೆ.

(ಷ್ಟುತ್ವಸಂಧಿವಿಧಾಯಕಸೂತ್ರ)

## ೬೪. ಷ್ಟುನಾ ಷ್ಟುಃ ॥ ೮-೪-೪೧॥

**ಸ್ತೋಃ ಷ್ಟುನಾ ಯೋಗೇ ಷ್ಟುಃ ಸ್ಯಾತ್ । ರಾಮಷ್ಷಷ್ಠಃ ॥ ರಾಮಷ್ಟೀಕತೇ । ಪೇಷ್ಟಾ । ತಟ್ಟೀಕಾ । ಚಕ್ರಿಣ್ಢೌಕಸೇ ॥**

ದ್ವಿಪದಸೂತ್ರ ಹಿಂದಿನ ಸೂತ್ರದಿಂದ "ಸ್ತೋಃ" ಅನುವೃತ್ತವಾಗುತ್ತದೆ. ಷ್ ಚ ಟುಶ್ಚ ಷ್ಟುಃ. ಹಿಂದಿನಂತೇ ಅರ್ಥವಿಕವಚನ. ಸೂತ್ರಾರ್ಥ. ಸಕಾರತವರ್ಗಗಳಿಗೆ ಷಕಾರಟವರ್ಗಗಳ ಸಂಬಂಧವಿರುವಾಗ ಷಕಾರಟವರ್ಗಗಳು ಆದೇಶವಾಗಿ ಬರುತ್ತವೆ. ಇಲ್ಲಿಯೂ ಸ್ಥಾನಿಆದೇಶಗಳಿಗೆ ಮಾತ್ರ ಯಥಾಸಂಖ್ಯನಿಯಮ. ಸ್ಥಾನಿ ನಿಮಿತ್ತಗಳಿಗೆ ಯಥಾಸಂಖ್ಯನಿಯಮವಿಲ್ಲ. ರಾಮಸ್ + ಷಷ್ಠಃ. ಇಲ್ಲಿ ಸಕಾರಕ್ಕೆ ಷಕಾರದ ಸಂಬಧವಿರುವುದರಿಂದ ಸಕಾರಕ್ಕೆ (ನಿಯಮದಿಂದ) ಷಕಾರಾದೇಶ. ರಾಮಷ್ಷಷ್ಠಃ (ರಾಮನು ಆರನೆಯವನು.) ರಾಮಸ್ + ಟೀಕತೇ. ಸಕಾರಕ್ಕೆ ಟಕಾರದ ಯೋಗವಿರುವುದರಿಂದ ಸಕಾರಕ್ಕೆ ಷಕಾರಾದೇಶ. ರಾಮಷ್ಟೀಕತೇ (ರಾಮನು ಹೋಗುತ್ತಾನೆ.) ಸ್ಥಾನಿನಿಮಿತ್ತಗಳಿಗೆ ಯಥಾಸಂಖ್ಯವಿಲ್ಲದಿರುವುದರಿಂದ ಈ ಉದಾಹರಣೆ ಸಮಂಜಸವಾಗಿದೆ. ಪೇಷ್ + ತಾ (ಪುಡಿಮಾಡುವವನು.) ಪಿಷ್ಲೃ ಸಂಚೂರ್ಣನೇ ಧಾತು. ತೃಚ್‌ಪ್ರತ್ಯಯ. ತಕಾರಕ್ಕೆ ಷಕಾರಸಂಬಂಧವಿರುವುದರಿಂದ ಟಕಾರಾದೇಶ. ಪೂರ್ವಪರನಿಯಮವಿಲ್ಲವೆಂದುದರಿಂದ ತಕಾರಪರದಲ್ಲಿದ್ದರೂ ಬರುತ್ತದೆ. ತತ್ + ಟೀಕಾ. ತಕಾರಕ್ಕೆ ಟಕಾರಸಂಬಂಧವಿರುವುದರಿಂದ ಅದಕ್ಕೆ ಟಕಾರಾದೇಶ. ತಟ್ಟೀಕಾ. (ಅದರ ವ್ಯಾಖ್ಯಾನ). ಚಕ್ರಿನ್ + ಢೌಕಸೇ. ನಕಾರಕ್ಕೆ ಟವರ್ಗದ ಢಕಾರಸಂಬಂಧವಿರುವುದರಿಂದ ಣಕಾರಾದೇಶ. ಚಕ್ರಿಣ್ ಢೌಕಸೇ (ವಿಷ್ಣುವೇ ಹೋಗುತ್ತೀ),

(ಷ್ಟುತ್ವನಿಷೇಧಸೂತ್ರ)

## ೬೫. ನ ಪದಾಂತಾಟ್ಟೋರನಾಮ್ ॥ ೮-೪-೪೨ ॥

**ಪದಾಂತಾಟ್ಟವರ್ಗಾತ್ಪರಸ್ಯ ಅನಾಮಃ ಸ್ತೋಃ ಷ್ಟುರ್ನ ಸ್ಯಾತ್ । ಷಟ್‌ಸಂತಃ । ಷಟ್‌ತೇ । ಪದಾಂತಾತ್ಕಿಮ್ ಈಟ್ಟೇ । ಟೋಃ ಕಿಂ ಸರ್ಪಿಷ್ಟಮಮ್ ॥**

ನ, ಪದಾಂತಾತ್, ಟೋಃ, ಅನಾಮ್ ॥ ನಾಲ್ಕು ಪದಗಳುಳ್ಳ ಸೂತ್ರ. "ಸ್ತೋಃ ಷ್ಟುಃ" ಎಂಬುದು ಅನುವೃತ್ತವಾಗುತ್ತದೆ. ಅನಾಮ್ ಎಂಬುದು ಸ್ತೋಃ ಎಂಬುದಕ್ಕೆ ವಿಶೇಷಣ. ಅದು ಲುಪ್ತಷಷ್ಠೀಕಪದ. ಅಂದರೆ ಅದರಮೇಲಿನ ಷಷ್ಠೀವಿಭಕ್ತಿಯನ್ನು ಲೋಪಮಾಡಿ ಪಾಣಿನಿಯು ಹೇಳಿರುತ್ತಾನೆ, ಟೋಃ ಪಂಚಮಿ. ಪರಕ್ಕೆ ಕಾರ್ಯವೆಂದು ಲಬ್ಧವಾಗುತ್ತದೆ. ಸೂತ್ರಾರ್ಥ- ಪದಾಂತವಾದ ಟವರ್ಗದ ಪರದಲ್ಲಿ ನಾಮ್ ಪ್ರತ್ಯಯದ ನಕಾರವನ್ನು ಬಿಟ್ಟು ಉಳಿದ ಸಕಾರತವರ್ಗಗಳಿಗೆ ಷ್ಟುತ್ವ ಬರುವುದಿಲ್ಲ. ನಾಮ್ ಷಷ್ಠೀಬಹುವಚನಪ್ರತ್ಯಯ. ಅಲ್ಲಿನ ನಕಾರಕ್ಕೆ ಷ್ಟುತ್ವ ನಿಷೇಧವಿಲ್ಲ. ಷಟ್‌ಸಂತಃ (ಆರುಜನ ಸಜ್ಜನರು). ಇಲ್ಲಿ ಟಕಾರ ಪದಾಂತವಾಗಿದ್ದು ಅದರ ಪರದಲ್ಲಿ ಸಕಾರ ಬಂದುದರಿಂದ ಷ್ಟುತ್ವ ಬರುವುದಿಲ್ಲ. ಬಂದಿದ್ದರೆ ಷಂತಃ ಎಂದಾಗುತ್ತಿತ್ತು. ಷಟ್ + ತೇ ಎಂದಿರುವಾಗಲೂ ಟಕಾರವು ಪದಾಂತವಾಗಿ ಅದರ ಪರದಲ್ಲಿ ತಕಾರ ಬಂದುದರಿಂದ ಟಕಾರಾದೇಶ ಬರುವುದಿಲ್ಲ. ಪದಾಂತಾತ್ ಕಿಮ್ ? ದಳಕೃತ್ಯ (ಪದಪ್ರಯೋಜನ) ವನ್ನು ಹೇಳುತ್ತಾನೆ. ಇಲ್ಲಿ ಪದಾಂತವಾದ ಟವರ್ಗವೆಂದುದೇಕೆ? ಟವರ್ಗದ ಪರದಲ್ಲಿರುವ ಸ್ತುವಿಗೆ ಷ್ಟುತ್ವವಿಲ್ಲವೆಂದರೆ ಸಾಲದೇ ? ಅಂದರೆ ಈಟ್ಟೇ ಇಲ್ಲಿಯೂ ನಿಷೇಧ ಬರಬೇಕಾಗುತ್ತದೆ. ಈಡ ಸ್ತುತೌ ಧಾತು. ಲಟ್ಟಿನಲ್ಲಿ ತೇ ಪ್ರತ್ಯಯ ಬಂದಾಗ ಈಡ್ + ತೇ ಎಂದಾಗುತ್ತದೆ. ಇಲ್ಲಿ ನಿಷೇಧವನ್ನು ತಪ್ಪಿಸುವುದಕ್ಕೋಸ್ಕರ ಪದಾಂತವಾಗಬೇಕು ಎಂದಿರುತ್ತಾನೆ. ಪ್ರಕೃತ ತೇ ಸೇರಿದ ಮೇಲೆ ಪದವಾಗುತ್ತದೆ. ಮಧ್ಯದ ಈಡ್ ಎಂಬುದಕ್ಕೆ ಪದಸಂಜ್ಞೆ ಇಲ್ಲದಿರುವುದರಿಂದ ಪದಾಂತವಾದ ಡಕಾರವಾಗುವುದಿಲ್ಲ. ಆದುದರಿಂದ ಷ್ಟುತ್ವ ಬಂದು ಈಡ್ + ಟೇ ಆಗಿ " ಖರಿ ಚ " ಎಂಬ ಸೂತ್ರದಿಂದ ಟಕಾರಾದೇಶ ಬಂದು ಈಟ್ಟೇ ಎಂದು ರೂಪವಾಗುತ್ತದೆ. (ಸ್ತುತಿಸುತ್ತಾನೆ). ಟೋಃ ಕಿಮ್ ? ನಿಮಿತ್ತ, ಷಕಾರಟವರ್ಗವೆಂದು ಹಿಂದಿನ ಸೂತ್ರದಲ್ಲಿ ಹೇಳಿದೆ. ಇಲ್ಲಿ ಕೇವಲ ಟವರ್ಗ ಮಾತ್ರ ತೆಗೆದುಕೊಂಡುದುದೇಕೆ ? ಅಂದರೆ ಸರ್ಪಿಷ್ಟಮಮ್ । ಸರ್ಪಿಷ್ + ತಮಮ್ ಎಂದಿರುವಾಗ ಷ್ಟುತ್ವ ಬಂದು (ತಕಾರಟಕಾರ) ಸರ್ಪಿಷ್ + ಟಮಮ್ = ಸರ್ಪಿಷ್ಟಮಮ್ ಎಂದಾಗಿದೆ. ಷಕಾರವನ್ನೂ ಹೇಳುವುದಾದರೆ ಇಲ್ಲಿ ಪದಾಂತವಾದ ಷಕಾರದ ಪರದಲ್ಲಿ ಸ್ತುವಿನ ತಕಾರವಿರುವುದರಿಂದ ನಿಷೇಧ ಬಂದು ಇಷ್ಟವಾದ ರೂಪವಾಗದೇ ಹೋಗಬೇಕಾಗುತ್ತದೆ. ಅದಕ್ಕೋಸ್ಕರ ಷಕಾರವನ್ನು ಬಿಟ್ಟು ಕೇವಲ ಟವರ್ಗ ಮಾತ್ರ ಹೇಳಿರುತ್ತಾನೆ.

(ಷ್ಟುತ್ವನಿಷೇಧಕ್ಕೆ ಪ್ರತಿಪ್ರಸವ ಹೇಳುವ ವಾರ್ತಿಕ)

ವಾ॥ ಅನಾಮ್ನವತಿ ನಗರೀಣಾಮಿತಿ ವಾಚ್ಯಮ್ ॥

ಷಣ್ಣಾಮ್ । ಷಣ್ಣವತಿಃ । ಷಣ್ಣಗರ್ಯಃ ॥

ಅನಾಮ್ನವತಿನಗರೀಣಾಂ, ಇತಿ, ವಾಚ್ಯಮ್ ॥ ತ್ರಿಪದ ವಾರ್ತಿಕ. ಸೂತ್ರದಲ್ಲಿ

ಹೇಳಿದುದು ಸಾಕಾಗಲಿಲ್ಲವೆಂದು ವಾರ್ತಿಕ ಆರಬ್ಧವಾಗಿದೆ. ನಾಮಿನ ನಕಾರವನ್ನು ಬಿಟ್ಟು ಉಳಿದ ನಕಾರ ತವರ್ಗಗಳಿಗೆ ಷ್ಟುತ್ವವಿಲ್ಲವೆಂದು ಸೂತ್ರದಲ್ಲಿ ಹೇಳಿದೆಯಷ್ಟೆ. ಹಾಗೆಯೇ ನವತಿ ಶಬ್ದದ ನಕಾರಕ್ಕೂ, ನಗರೀ ಶಬ್ದದ ನಕಾರಕ್ಕೂ ಷ್ಟುತ್ವ ನಿಷೇಧವಿಲ್ಲವೆನ್ನಬೇಕು ಎಂದು ವಾರ್ತಿಕಕಾರರ ಮತ. ಉತ್ತರೋತ್ತರ ಮುನಿಗಳಿಗೆ ಪ್ರಾಶಸ್ತ್ಯವಿರುವುದರಿಂದ ಇದೇ ಸಿದ್ಧಾಂತ. ಷಡ್+ನಾಮ್. ಷಷ್ ಶಬ್ದಕ್ಕೆ ಷಷ್ಠೀ ಬಹುವಚನ ನಾಮ್ ಪ್ರತ್ಯಯ ಮಾಡಿದಾಗ ಷಕಾರಕ್ಕೆ ಜಶ್ತ್ವ ಬಂದು ಈ ರೂಪವಾಗಿದೆ. ಇಲ್ಲಿ "ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಷಡ್ ಎಂಬುದಕ್ಕೆ ಪದಸಂಜ್ಞಾ ಇರುವುದರಿಂದ ಡಕಾರ ಪದಾಂತವಾಗುತ್ತದೆ. ಆ ಪರದ ನಕಾರಕ್ಕೆ ಷ್ಟುತ್ವನಿಷೇಧ ಪ್ರಾಪ್ತವಾದರೆ ಅದಕ್ಕೆ ನಿಷೇಧ. ಷ್ಟುತ್ವ ಬಂದರೆ ಷಡ್+ಣಾಮ್. "ಪ್ರತ್ಯಯೇ ಭಾಷಾಯಾಂ ನಿತ್ಯಂ" ಎಂಬ ವಾರ್ತಿಕದಿಂದ ಡಕಾರಕ್ಕೆ ಣಕಾರಾದೇಶ, ಷಣ್ಣಾಮ್, (ಆರರ) ಷಡ್+ನವತಿಃ ಇಲ್ಲಿಯೂ ನಿಷೇಧವಿಲ್ಲದಿರುವುದರಿಂದ ಷ್ಟುತ್ವ ಬಂದರೆ ಷಡ್+ಣವತಿಃ "ಯರೋಽನುನಾಸಿಕೇಽನುನಾಸಿಕೋ ವಾ" ಎಂಬುದರಿಂದ ಪೂರ್ವದ ಡಕಾರಕ್ಕೆ ಅನುನಾಸಿಕ ಣಕಾರಾದೇಶ. ಷಣ್ಣವತಿಃ. (ತೊಂಭತ್ತಾರು) ಷಡ್+ನಗರ್ಯಃ, ಹಿಂದಿನಂತೆ ನಕಾರಕ್ಕೆ ಷ್ಟುತ್ವ, ಡಕಾರಕ್ಕೆ ಅನುನಾಸಿಕ ಣಕಾರ. ಷಣ್ಣಗರ್ಯಃ (ಆರು ಪಟ್ಟಣಗಳು)

(ಷ್ಟುತ್ವನಿಷೇಧ ಸೂತ್ರ)

### ೬೬. ತೋಃ ಷಿ ॥ ೮-೪-೪೩ ॥

**ನ ಷ್ಟುತ್ವಮ್ । ಸನ್ಷಷ್ಠಃ ॥**

ದ್ವಿಪದ ಸೂತ್ರ. ತೋಃ ಷಷ್ಠೀ, ಷಿ ಸಪ್ತಮೀ, "ತಸ್ಮಿನ್ನಿತಿನಿರ್ದಿಷ್ಟೇ ಪೂರ್ವಸ್ಯ" ಪರಿಭಾಷೆಯಿಂದ ಷಕಾರ ಪರವಾದಾಗ ಕಾರ್ಯ ಎಂದರ್ಥವಾಗುತ್ತದೆ. ಸೂತ್ರಾರ್ಥ. ತವರ್ಗಕ್ಕೆ ಷಕಾರ ಪರವಾದಾಗ ಷ್ಟುತ್ವನಿಷೇಧ ಬರುತ್ತದೆ. ಸನ್+ಷಷ್ಠಃ ಉದಾಹರಣೆ. ತವರ್ಗದ ನಕಾರಕ್ಕೆ ಷಕಾರ ಪರವಾಗಿರುವುದರಿಂದ ನಕಾರಕ್ಕೆ ಣಕಾರ ಬರುವುದಿಲ್ಲ. ಈ ಎಲ್ಲಾ ನಿಷೇಧಗಳಿಂದ ಸ್ಥಾನಿ ನಿಮಿತ್ತಗಳಿಗೆ ಯಥಾಸಂಖ್ಯ ನಿಯಮವಿಲ್ಲವೆಂದು ಸ್ಪಷ್ಟವಾಗುತ್ತದೆ.

(ಜಶ್ತ್ವಸಂಧಿ ವಿಧಾಯಕ ಸೂತ್ರ)

### ೬೭. ಝಲಾಂ ಜಶೋಽನ್ತೇ ॥ ೮-೨-೩೯ ॥

**ಪದಾಂತೇ ಝಲಾಂ ಜಶಃ ಸ್ಯುಃ । ವಾಗೀಶಃ ॥**

ಝಲಾಂ, ಜಶಃ, ಅಂತೇ । ತ್ರಿಪದ ಸೂತ್ರ. ಝಲ್, ಜಶ್, ಪ್ರತ್ಯಾಹಾರ. ಝಲಾಂ ಷಷ್ಠೀ. ಜಶಃ ಪ್ರಥಮಾ ಬಹುವಚನ. "ಪದಸ್ಯ" ಅಧಿಕಾರ ಸೂತ್ರ.

ಇಲ್ಲಿ ಅದಕ್ಕೆ ಅಂತೇ ಎಂಬಲ್ಲಿ ಅನ್ವಯ. ಸೂತ್ರಾರ್ಥ. ಪದಾಂತದಲ್ಲಿರುವ ಝಲ್ ವರ್ಣಗಳಿಗೆ ಜಶ್ ವರ್ಣಗಳು ಬರುತ್ತವೆ. ವಾಕ್ + ಈಶಃ ಎಂದಿರುವಾಗ ಕಕಾರ ಪದದ ಕೊನೆಯಲ್ಲಿ ಬಂದಿದೆ. " ಸುಪ್ತಿಙಂತಂ ಪದಮ್ " ಸೂತ್ರದಿಂದ ವಾಕ್ ಎಂಬುದು ಪದ. ಇದಕ್ಕೆ ಜಸ್ತ್ವ ಬರಬೇಕು " ಸ್ಥಾನೇಽಂತರತಮಃ" ಸೂತ್ರದಿಂದ ಕವರ್ಗದಲ್ಲಿರುವ ಗಕಾರರೂಪ ಜಸ್ತ್ವವು (ಕಂಠಸಾಮ್ಯ) ಬಂದರೆ ವಾಗೀಶಃ ಎಂದಾಗುತ್ತದೆ.

(ಅನುನಾಸಿಕ ಸಂಧಿ)

## ೩೮. ಯರೋಽನುನಾಸಿಕೇಽನುನಾಸಿಕೋ ವಾ ॥೮-೪-೪೫॥

**ಯರಃ ಪದಾಂತಸ್ಯಾನುನಾಸಿಕೇ ಪರೇಽನುನಾಸಿಕೋ ವಾ ಸ್ಯಾತ್ ॥**
**ಏತನ್ಮುರಾರಿಃ, ಏತದ್ ಮುರಾರಿಃ ॥**

ಯರಃ, ಅನುನಾಸಿಕೇ, ಅನುನಾಸಿಕಃ ವಾ । ನಾಲ್ಕುಪದಗಳುಳ್ಳ ಸೂತ್ರ. ಯರಃ ಷಷ್ಠೀ. ಅನುನಾಸಿಕೇ ಸಪ್ತಮೀ ಅದುದರಿಂದ ಪರದಲ್ಲಿರುವಾಗ ಎಂದು ಫಲಿತವಾಗುತ್ತದೆ. " ನಪದಾಂತಾಟ್ಟೋರನಾಮ್ " ಸೂತ್ರದಿಂದ "ಪದಾಂತಾತ್" ಎಂಬುದು ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಯರಃ ಎಂಬಲ್ಲಿ ಅದಕ್ಕೆ ಅನ್ವಯ. ಸೂತ್ರಾರ್ಥ. ಪದಾಂತವಾದ ಯರ್ ವರ್ಣಗಳಿಗೆ ಅನುನಾಸಿಕ ವರ್ಣ ಪರವಾದಾಗ ಅನುನಾಸಿಕವು ವಿಕಲ್ಪವಾಗಿ ಭರುತ್ತದೆ. ಅನುನಾಸಿಕ ವರ್ಣ " ಮುಖನಾಸಿಕಾವಚನೋಽನುನಾಸಿಕಃ " ಎಂಬಲ್ಲಿ ವಿವೃತವಾಗಿದೆ. ಪ್ರಕೃತ ಞ, ಮ, ಙ, ಣ, ನ ಅನುನಾಸಿಕ ವರ್ಣಗಳು. ಏತದ್ + ಮುರಾರಿಃ ಎಂಬಲ್ಲಿ ದಕಾರ ಪದಾಂತವಾದ ಯರ್, ಅದಕ್ಕೆ ಮಕಾರರೂಪ ಅನುನಾಸಿಕವು ಪರವಾಗಿದೆ. ಆದುದರಿಂದ ದಕಾರಕ್ಕೆ ದಂತಸ್ಥಾನಸಾಮ್ಯದಿಂದ ನಕಾರರೂಪ ಅನುನಾಸಿಕವರ್ಣ ಬಂದರೆ ಏತನ್‌ಮುರಾರಿಃ, ವಿಕಲ್ಪವೆಂದುದರಿಂದ ಬಾರದಿದ್ದರೆ ಏತದ್ + ಮುರಾರಿಃ ಎಂದಾಗುತ್ತದೆ.

(ನಿತ್ಯಾನುನಾಸಿಕ ವಿಧಾಯಕ ವಾರ್ತಿಕ)

**ವಾ॥ ಪ್ರತ್ಯಯೇ ಭಾಷಾಯಾಂ ನಿತ್ಯಮ್ ॥**
**ತನ್ಮಾತ್ರಮ್ । ಚಿನ್ಮಯಮ್ ॥**

ತ್ರಿಪದ ವಾರ್ತಿಕ. ಭಾಷಾಯಾಂ ಎಂದರೆ ಲೋಕದಲ್ಲಿ ಎಂದರ್ಥ. ವಾರ್ತಿಕಾರ್ಥ-ಪದಾಂತವಾದ ಯರ್ ವರ್ಣಗಳಿಗೆ ಅನುನಾಸಿಕಾದಿಯಾದ ಪ್ರತ್ಯಯ ಪರವಾದಾಗ ಲೌಕಿಕ ಪ್ರಯೋಗದಲ್ಲಿ ಸಿತ್ಯವಾಗಿ ಅನುನಾಸಿಕ ಬರುತ್ತದೆ. ತನ್ಮಾತ್ರಮ್ ತಚ್ಛಬ್ದಕ್ಕೆ ಪ್ರಮಾಣಾರ್ಥದಲ್ಲ ಮಾತ್ರಚ್ ಪ್ರತ್ಯಯ. ತದ್ + ಮಾತ್ರಮ್ ಎಂದಿರುವಾಗ ದಕಾರಕ್ಕೆ (ಯರ್) ಪ್ರತ್ಯಯದ ಮಕಾರ ಪರವಾದುದರಿಂದ ದಂತಸ್ಥಾನ

ಸಾಮ್ಯದಿಂದ ನಕಾರಾದೇಶ. ತನ್ಮಾತ್ರಮ್ (ಅಷ್ಟುಪ್ರಮಾಣವುಳ್ಳದ್ದು). ಚಿದ್+ಮಯಮ್ ಎಂದಿರುವಾಗ ಮಯಟ್ ಪ್ರತ್ಯಯ ಸಂಬಂಧಿಮಕಾರ ಪರವಾದುದ ರಿಂದ ದಕಾರಕ್ಕೆ ನಕಾರರೂಪ ಅನುನಾಸಿಕಾದೇಶ. ಚಿನ್ಮಯಮ್, ಚೈತನ್ಯಸ್ವರೂಪ ವೆಂದರ್ಥ.

(ತವರ್ಗಕ್ಕೆ ಪರಸವರ್ಣವಿಧಾಯಕಸೂತ್ರ)

## ೬೯. ತೋರ್ಲಿ ॥ ೮-೪ ೬೦ ॥

**ತವರ್ಗಸ್ಯ ಲಕಾರೇ ಪರೇ ಪರಸವರ್ಣಃ । ತಲ್ಲಯಃ । ವಿದ್ವಾಁಲ್ಲಿಖತಿ । ನಸ್ಯಾನುನಾಸಿಕೋ ಲಃ ॥**

ತೋಃ ಲಿ । ದ್ವಿಪದಸೂತ್ರ. "ಅನುಸ್ವಾರಸ್ಯ ಯಯಿ ಪರಸವರ್ಣಃ" ಸೂತ್ರ ದಿಂದ "ಪರಸವರ್ಣಃ" ಪದವು ಅನುವೃತ್ತವಾಗುತ್ತದೆ. ತು ಎಂಬುದರ ಷಷ್ಠೀ ತೋಃ ಆಗಿದೆ. ಉದಿತ್ತಾದುದರಿಂದ ವರ್ಗಗ್ರಹಣ. ಲಿ ಸಪ್ತಮಿಯಾದುದರಿಂದ ಲಕಾರಪರವಾದಾಗ ಎಂದು ಫಲಿತಾರ್ಥ. **ಸೂತ್ರಾರ್ಥ.** ತವರ್ಗಕ್ಕೆ ಲಕಾರಪರ ದಲ್ಲಿರುವಾಗ ಪರಸವರ್ಣ ಬರುತ್ತದೆ. ತತ್+ಲಯಃ. ತಕಾರಕ್ಕೆ ಲಕಾರಪರ ವಾದುದರಿಂದ ತಕಾರಕ್ಕೆ ಪರದ ಲಕಾರದಸವರ್ಣ ಲಕಾರವೇ ಬಂದರೆ ತಲ್+ಲಯ. ತಲ್ಲಯಃ ಎಂದಾಗುತ್ತದೆ. ವಿದ್ವಾನ್+ಲಿಖತಿ. ಇಲ್ಲಿ ತವರ್ಗದ ನಕಾರಕ್ಕೆ ಲಕಾರ ಬರಬೇಕು. ನಕಾರ ಅನುನಾಸಿಕವಾದುದರಿಂದ ಲಕಾರದಲ್ಲಿಯೂ ಅನುನಾಸಿಕ ಭೇದವಿರುವುದರಿಂದ ಅನುನಾಸಿಕವಾದ ಲಕಾರವೇ ಬರುತ್ತದೆ. ಅದನ್ನೇ "ನಸ್ಯಾ-ಲಃ" ಎಂದು ಹೇಳಿರುತ್ತಾನೆ. ವಿದ್ವಾಁಲ್ಲಿಖತಿ ॥

(ಪೂರ್ವಸವರ್ಣವಿಧಾಯಕಸೂತ್ರ)

## ೭೦. ಉದಃ ಸ್ಥಾಸ್ತಮ್ಭೋಃ ಪೂರ್ವಸ್ಯ ॥ ೮-೪-೬೧ ॥

**ಉದಃ ಪರಯೋಃ ಸ್ಥಾಸ್ತಂಭೋಃ ಪೂರ್ವಸವರ್ಣಃ ।**

ಉದಃ, ಸ್ಥಾಸ್ತಂಭೋಃ, ಪೂರ್ವಸ್ಯ । ತ್ರಿಪದಸೂತ್ರ. ಹಿಂದಿನಿಂದ ಅನು ವೃತ್ತವಾದ ಪರಸವರ್ಣ ಎಂಬಲ್ಲಿ ಸವರ್ಣಕ್ಕೆ ಮಾತ್ರ ಅನುವೃತ್ತಿ. "ಸ್ವರಿತೇನಾಧಿ ಕಾರಃ" ಎಂಬ ಸೂತ್ರದಿಂದ ಸ್ವರಿತದಿಂದ ಕೂಡಿದುದಕ್ಕೆ ಮಾತ್ರ ಅನುವೃತ್ತಿ ಎಂದು ಹೇಳಿದೆ. ಪ್ರಕೃತ ಪರಸವರ್ಣವೆಂದು ಒಂದೇಸಮಾಸಪದವಾದರೂ ಸವರ್ಣ ಎಂಬಲ್ಲಿ ಮಾತ್ರ ಸ್ವರಿತವಿರುವುದರಿಂದ ಅಷ್ಟಕ್ಕೆ ಮಾತ್ರ ಅನುವೃತ್ತಿ. ಉದಃ ಎಂಬುದು ಪಂಚಮೀ. ಮುಂದೆ ಹೇಳುವ ಪರಿಭಾಷೆಯಿಂದ ಅವ್ಯವಹಿತಪರಕ್ಕೆ ಎಂದರ್ಥವಾಗುತ್ತದೆ. ಸ್ಥಾ ಸ್ತಂಭು ಎರಡು ಧಾತುಗಳು. **ಸೂತ್ರಾರ್ಥ.** ಉತ್ ಎಂಬ ಉಪಸರ್ಗದ ಪರದಲ್ಲಿರುವ ಸ್ಥಾ ಮತ್ತು ಸ್ತಂಭುಧಾತುಗಳಿಗೆ ಪೂರ್ವದ ಸವರ್ಣವು ಆದೇಶವಾಗಿ ಬರುತ್ತದೆ. ಇಲ್ಲಿ ಉದಿನ ಅವ್ಯವಹಿತಪರವಾದ ಎಂಬ

ಅರ್ಥವು ಹೇಗೆ ಸಿಕ್ಕುತ್ತದೆ? ಪೂರ್ವದಲ್ಲಿರುವ ಎಂಬರ್ಥವೂ ಆಗಬಹುದಲ್ಲವೇ ಅಂದರೆ ನಿಯಾಮಕವಾದ ಪರಿಭಾಷೆಯನ್ನು ಹೇಳುತ್ತಾನೆ.

(ಪಂಚಮಿಯಿಂದ ಪರಕ್ಕೆ ಕಾರ್ಯನಿಯಮ ಹೇಳುವ ಪರಿಭಾಷಾಸೂತ್ರ)

## ೭೧. ತಸ್ಮಾದಿತ್ಯುತ್ತರಸ್ಯ ॥ ೧-೧-೬೭ ॥

**ಪಂಚಮೀನಿರ್ದೇಶೇನ ಕ್ರಿಯಮಾಣಂ ಕಾರ್ಯಂ ವರ್ಣಾಂತರೇಣಾವ್ಯವಹಿತಸ್ಯ ಪರಸ್ಯ ಜ್ಞೇಯಮ್ ॥**

ತಸ್ಮಾತ್, ಇತಿ, ಉತ್ತರಸ್ಯ । ತ್ರಿಪದಸೂತ್ರ. ತಸ್ಮಾತ್ ಎಂಬುದು ಸಕಲ ಕಾರ್ಯವಿಧಾಯಕ ಸೂತ್ರಗಳಲ್ಲಿರುವ ಪಂಚಮ್ಯಂತ್ಯದ ಅನುಕರಣ. ಇತಿ ಎಂದ ಮೇಲೆ ತೋರುತ್ತಿರುವಾಗ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. "ತಸ್ಮಿನ್ನಿತಿ-ನಿರ್ದಿಷ್ಟೇ ಪೂರ್ವಸ್ಯ" ಸೂತ್ರದಿಂದ "ನಿರ್ದಿಷ್ಟೇ" ಅನುವೃತ್ತವಾಗುತ್ತದೆ. ಪಂಚಮ್ಯಂತಾರ್ಥವು ತೋರಿ ಅವ್ಯವಹಿತವಾಗಿ ಉಚ್ಚರಿತವಾದಾಗ ಅದರ ಪರಕ್ಕೆ ಕಾರ್ಯ ಬರುತ್ತದೆ. **ಸೂತ್ರಾರ್ಥ.** ಪಂಚಮಿಯನ್ನು ಉಚ್ಚರಿಸಿ ಅದನ್ನು ಆಶ್ರಯಿಸಿ ಮಾಡುವ ಕಾರ್ಯವು ಪಂಚಮ್ಯಂತಕ್ಕಿಂತ ವರ್ಣಾಂತರವ್ಯವಧಾನವಿಲ್ಲದಿರುವ (ಅವ್ಯವಹಿತಪರವಾದ) ಪರಕ್ಕೇ ಬರುತ್ತದೆ. ಇದು ಪರಕ್ಕೇ ಬರುತ್ತದೆ ಎಂದು ನಿಯಮಮಾಡುವುದರಿಂದ ಪರಿಭಾಷಾಸೂತ್ರ. ಪ್ರಕೃತ ಉದಃ ಪಂಚಮೀಯಾದುದರಿಂದ ಉದಿನ ಅವ್ಯವಹಿತಪರದಲ್ಲಿರುವ ಸ್ಥಾಸ್ತಂಭುಗಳಿಗೆ ಕಾರ್ಯವೆಂದು ತಿಳಿಯುತ್ತದೆ. ಎಲ್ಲಿಯಾದರೂ ಹೀಗೆಯೇ ಪಂಚಮ್ಯಂತವನ್ನು ಹೇಳಿ ಕಾರ್ಯ ಹೇಳಿದರೆ ಅವ್ಯವಹಿತಪರಕ್ಕೆ ಕಾರ್ಯವೆಂದೂ, ಸಪ್ತಮ್ಯಂತ್ಯವನ್ನು ಹೇಳಿ ಕಾರ್ಯ ವಿಧಿಸಿದರೆ ಆ ಕಾರ್ಯವು ಸಪ್ತಮ್ಯಂತ್ಯದ ಅವ್ಯವಹಿತಪೂರ್ವಕ್ಕೆಂದೂ ತಿಳಿಯಬೇಕು. ಆ ಪಂಚಮ್ಯಂತಾರ್ಥವು ಪೂರ್ವದಲ್ಲಿರಬೇಕೆಂದೂ ಸಪ್ತಮ್ಯಂತಾರ್ಥವು ಪರದಲ್ಲಿರಬೇಕೆಂದೂ ಫಲಿತವಾಗುತ್ತದೆ. ಆದುದರಿಂದಲೇ ಪಂಚಮ್ಯಂತಸ್ಥಳದಲ್ಲಿ ಪರಸ್ಯ (ಪರಕ್ಕೆ) ಎಂತಲೂ ಸಪ್ತಮ್ಯಂತಸ್ಥಳದಲ್ಲಿ ಪರೇ (ಪರದಲ್ಲಿರುವಾಗ) ಎಂತಲೂ ವೃತ್ತಿ ಬರೆಯುತ್ತಾನೆ. ಪ್ರಕೃತ ಉದಿನ ಪರದಲ್ಲಿರುವ ಸ್ಥಾಸ್ತಂಭುಗಳಿಗೆ ಪೂರ್ವಸವರ್ಣವೆಂದರೆ ಷಷ್ಠಿಯಾದುದರಿಂದ "ಅಲೋಂತ್ಯಸ್ಯ" ಪರಿಭಾಷೆಯಿಂದ ಅವುಗಳ ಅಂತ್ಯಕ್ಕೆ ಪರಸವರ್ಣವೆಂದು ಅರ್ಥವಾಗಬೇಕಾಗುತ್ತದೆ. ಆದರೆ ಸಕಾರಕ್ಕೆ ಬರಬೇಕು. ಅದಕ್ಕೋಸ್ಕರ "ಅಲೋಂತ್ಯಸ್ಯ" ಪರಿಭಾಷೆಗೆ ಅಪವಾದವಾಗಿ ಆದಿಗೆ ಆದೇಶ ನಿಯಮಮಾಡುವ ಪರಿಭಾಷೆಯನ್ನು ಹೇಳುತ್ತಾನೆ.

(ಆದಿಗೆ ಕಾರ್ಯ ನಿಯಮಮಾಡುವ ಸೂತ್ರ)

## ೭೨. ಆದೇಃ ಪರಸ್ಯ ॥ ೧-೧-೫೪ ॥

**ಪರಸ್ಯ ಯದ್ವಿಹಿತಂ ತತ್ತಸ್ಯಾದೇರ್ಬೋಧ್ಯಮ್ । ಇತಿ ಸಸ್ಯ ಥಃ ॥**

ದ್ವಿಪದಸೂತ್ರ. ವಿಹಿತಂ ಎಂಬುದು ಅಧ್ಯಾಹಾರ. **ಸೂತ್ರಾರ್ಥ.** ಪರಕ್ಕೆ ಯಾವ ಕಾರ್ಯವು ವಿಹಿತವಾಗಿದೆಯೋ ಅದು ಪರದ ಆದಿಗೆ ಬರುತ್ತದೆ ಎಂದು ತಿಳಿಯಬೇಕು. ಇದು "ಆಲೋಂತ್ಯಸ್ಯ" ಸೂತ್ರಕ್ಕೆ ಅಪವಾದ. ಪ್ರಕೃತ ಉದಿನ ಪರವಾದ ಸ್ಥಾಸ್ತಂಭುಗಳಿಗೆ ಪರಸವರ್ಣರೂಪ ಕಾರ್ಯವಿಧಾನ ಮಾಡಿರುವುದರಿಂದ ಸ್ಥಾಸ್ತಂಭುಗಳ ಆದಿಯಾದ ಸಕಾರಕ್ಕೆ ಬರುತ್ತದೆ ಎಂದು ತಿಳಿಯಬೇಕು. ಸಕಾರಕ್ಕೆ ಪೂರ್ವದ ದಕಾರದ ಸವರ್ಣ ಹೇಳಬೇಕು. ದಕಾರದ ಸವರ್ಣ ಐದು.(ತವರ್ಗ)ತವರ್ಗದಲ್ಲಿ ಸಕಾರಸದೃಶವಾದ ವರ್ಣ ಯಾವುದು? ಸ್ಥಾನಸಾಮ್ಯ ಐದು ವರ್ಣಗಳಿಗೂ ಇದೆ. ಆಭ್ಯಂತರಪ್ರಯತ್ನ ತೆಗೆದುಕೊಂಡರೆ ಯಾವುದೂ ಸಮವಾಗುವುದಿಲ್ಲ. ಆದುದರಿಂದ ಬಾಹ್ಯಪ್ರಯತ್ನದಿಂದ ಇಲ್ಲಿ ಸಾಮ್ಯ ಹೇಳಬೇಕು. ಸಕಾರಕ್ಕೆ ಮಹಾಪ್ರಾಣ, ವಿವಾರ, ಶ್ವಾಸ, ಅಘೋಷಪ್ರಯತ್ನಗಳಿವೆ. ತವರ್ಗದಲ್ಲಿ ಈ ನಾಲ್ಕು ಪ್ರಯತ್ನವುಳ್ಳದ್ದು ಥಕಾರಮಾತ್ರವಾಗುವುದರಿಂದ ಸಕಾರಸ್ಥಾನದಲ್ಲಿ ಥಕಾರ ಬರುತ್ತದೆ. ಇದನ್ನೇ "ಇತಿ ಸಸ್ಯ ಥಃ" ಎಂದಿದ್ದಾನೆ. ಉದ್+ಸ್‌ಥಾನಂ. ಉದಿನ ಪರದಲ್ಲಿ ಸ್ಥಾಧಾತು ಬಂದಿದೆ. ಸ್ಥಾಧಾತುವಿಗೆ ಲ್ಯುಟ್‌ಪ್ರತ್ಯಯಮಾಡಿದಾಗ ಸ್ಥಾನಂ ಎಂತಾಗುತ್ತದೆ. ಸಕಾರಕ್ಕೆ ಥಕಾರಾದೇಶ ಬಂದರೆ ಉದ್+ಥ್‌ಥಾನಂ ಎಂದು ರೂಪವಾದಾಗ ಆದೇಶ ಥಕಾರಕ್ಕೆ ವಿಕಲ್ಪಲೋಪವನ್ನು ಹೇಳುತ್ತಾನೆ.

(ಝರ್ ವರ್ಣಗಳಿಗೆ ವಿಕಲ್ಪಲೋಪವಿಧಾಯಕಸೂತ್ರ)

## ೭೩. ಝರೋ ಝರಿ ಸವರ್ಣೇ ॥ ೮-೪-೬೫ ॥

**ಹಲಃ ಪರಸ್ಯ ಝರೋ ವಾಲೋಪಃ ಸವರ್ಣೇ ಝರಿ ॥**

ತ್ರಿಪದ ಸೂತ್ರ. "ಝಯೋ ಹೋಽನ್ಯತರಸ್ಯಾಮ್" ಸೂತ್ರದಿಂದ "ಅನ್ಯತರಸ್ಯಾಮ್ (ವಿಕಲ್ಪ) "ಹಲೋಯಮಾಂ ಯಮಿ ಲೋಪಃ" ಸೂತ್ರದಿಂದ "ಹಲಃ" "ಲೋಪಃ" ಎಂತಲೂ ಅನುವೃತ್ತವಾಗುತ್ತವೆ. ಹಲಃ ಪಂಚಮಿಯಾದುದರಿಂದ "ತಸ್ಮಾದಿತ್ಯುತ್ತರಸ್ಯ" ಸೂತ್ರದಿಂದ ಪರಸ್ಯ ಎಂದು ಲಬ್ಧವಾಗುತ್ತದೆ. **ಸೂತ್ರಾರ್ಥ.** ಹಲಿನಪರದಲ್ಲಿರುವ ಝರ್ ವರ್ಣಗಳಿಗೆ ಸವರ್ಣವಾದ ಝರ್‌ವರ್ಣಪರವಾದಾಗ ವಿಕಲ್ಪವಾಗಿ ಲೋಪವಾಗುತ್ತದೆ. ಉದ್+ಥ್+ಥಾನಂ ಎಂದಿರುವಾಗ ಹಲ್ ದಕಾರ. ಅದರ ಪರದಲ್ಲಿರುವ ಝರ್‌ವರ್ಣ ಮೊದಲಿನ ಥಕಾರ. ಆದಕ್ಕೆ ಸವರ್ಣವಾದ ಝರ್ ವರ್ಣವೆಂದರೆ ಥಕಾರ ಪರವಾದುದರಿಂದ ಮೊದಲಿನ ಥಕಾರಕ್ಕೆ ಲೋಪ ಬಂದರೆ ಉದ್+ಥಾನಮ್ ಎಂದಾಗುತ್ತದೆ. ಆಗ ದಕಾರಕ್ಕೆ ತಕಾರಾದೇಶ ವಿಧಾಯಕ ಸೂತ್ರವನ್ನು ಹೇಳುತ್ತಾನೆ.

(ಚರ್ತ್ವವಿಧಾಯಕ ಸೂತ್ರ)

## ೭೪. ಖರಿ ಚ ॥ ೮-೪-೫೫ ॥

**ಖರಿ ಝುಲಾಂ ಚರಃ ಸ್ಯುಃ । ಇತ್ಯುದೋ ದಸ್ಯ ತಃ । ಉತ್ಥಾನಮ್ । ಉತ್ತ್ಥಾನಮ್ ॥**

ಖರಿ, ಚ । ದ್ವಿಪದ ಸೂತ್ರ. "ಝಲಾಂ ಜಶ್ ಝಶಿ" ಸೂತ್ರದಿಂದ "ಝಲಾಂ" "ಅಭ್ಯಾಸೇ ಚರ್ಚ" ಸೂತ್ರದಿಂದ "ಚರ್" ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ.** ಖರ್ ಪರವಾದಾಗ ಝಲ್ ವರ್ಣಗಳಿಗೆ ಚರ್ ವರ್ಣಗಳು ಆದೇಶವಾಗಿ ಬರುತ್ತವೆ. ಪ್ರಕೃತ ಉದ್+ಥಾನಮ್ ಎಂಬಲ್ಲಿ ಝಲ್ ಉದಿನ ದಕಾರ ಅವಕ್ಕೆ ಥಕಾರರೂಪ ಖರ್ ಪರವಾದುದರಿಂದ ದಕಾರಕ್ಕೆ ಚರ್ ಬರಬೇಕು. ಚರ್ ವರ್ಣಗಳಲ್ಲಿ ಸ್ಥಾನ ಸಾಮ್ಯದಿಂದ ತಕಾರವೇ ಬರುವುದರಿಂದ ಉತ್+ಥಾನಮ್= ಉತ್ಥಾನಮ್ ಎಂದಾಗುತ್ತದೆ. ಥಕಾರಕ್ಕೆ ಲೋಪ ಬಾರದಿದ್ದಾಗ ದಕಾರಕ್ಕೆ ಈ ಸೂತ್ರದಿಂದ ತಕಾರಾದೇಶ ಬಂದರೆ ಉತ್‌ಥ್‌ಥಾನಮ್ ಎಂದೇ ರೂಪಹೇಳಬೇಕು. ಉದಿಗೆ ಸ್ತಂಭು ಪರವಾದಾಗ ಪೂರ್ವ ಸವರ್ಣಕ್ಕೆ ಉದಾಹರಣೆ. ಉತ್ತಂಭನಮ್ ಉದ್+ಸ್ತಂಭನಂ ಎಂದಿರುವಾಗ ಸಕಾರಕ್ಕೆ ಹಿಂದಿನಂತೆ ಬಾಹ್ಯಪ್ರಯತ್ನ ಸಾಮ್ಯದಿಂದ ಥಕಾರಾದೇಶ. ಉದ್+ಥ್+ತಂಭನಂ ಎಂದಿರುವಾಗ "ಝರೋ ಝರಿ ಸವರ್ಣೇ" ಸೂತ್ರದಿಂದ ತಕಾರರೂಪ ಸವರ್ಣ ಪರವಾದುದರಿಂದ ವಿಕಲ್ಪವಾಗಿ ಥಕಾರಲೋಪ. ದಕಾರಕ್ಕೆ "ಖರಿ ಚ" ಸೂತ್ರದಿಂದ ತಕಾರಾದೇಶ, ಉತ್+ತಂಭನಮ್=ಉತ್ತಂಭನಮ್. ಥಕಾರಕ್ಕೆ ಲೋಪಬಾರದಿದ್ದರೆ ಉತ್+ಥ್+ತಂಭನಂ=ಉತ್ಥ್ತಂಭನಂ ಎಂದು ಎರಡು ರೂಪಗಳಾಗುತ್ತವೆ.

(ಹಕಾರಕ್ಕೆ ಪೂರ್ವಸವರ್ಣವಿಧಾಯಕಸೂತ್ರ)

## ೭೫. ಝಯೋ ಹೋಽನ್ಯತರಸ್ಯಾಮ್ ॥ ೮-೪-೬೨ ॥

**ಝಯಃ ಪರಸ್ಯ ಹಸ್ಯ ವಾ ಪೂರ್ವಸವರ್ಣಃ । ನಾದಸ್ಯ ಘೋಷಸ್ಯ ಸಂವಾರಸ್ಯ ಮಹಾಪ್ರಾಣಸ್ಯ ತಾದೃಶೋ ವರ್ಗಚತುರ್ಥಃ । ವಾಗ್ಘರಿಃ । ವಾಗ್ಹರಿಃ ॥**

ಝಯಃ, ಹಃ, ಅನ್ಯತರಸ್ಯಾಮ್ ॥ ತ್ರಿಪದಸೂತ್ರ. "ಉದಃಸ್ಥಾಸ್ತಂಭೋಃ ಪೂರ್ವಸ್ಯ" ಸೂತ್ರದಿಂದ "ಪೂರ್ವಸ್ಯ" "ಅನುಸ್ವಾರಸ್ಯಯಯಿ" ಸೂತ್ರದಿಂದ "ಸವರ್ಣಃ" ಎಂತಲೂ ಅನುವೃತ್ತವಾಗುತ್ತವೆ. ಅನ್ಯತರಸ್ಯಾಮ್ ವಿಕಲ್ಪಾರ್ಥಕ ಅವ್ಯಯ. ಪರ್ಯಾಯಶಬ್ದಗಳಲ್ಲಿ ಲಾಘವಗೌರವಚರ್ಚೆಯಿಲ್ಲವೆಂದುದರಿಂದ ವಾ ಬದಲಾಗಿ "ಅನ್ಯತರಸ್ಯಾಮ್" ಎಂದು ಹೇಳಿರುತ್ತಾನೆ. ಝಯಃ ಪಂಚಮೀ. ಹಃ ಹಕಾರವೆಂದರ್ಥ. **ಸೂತ್ರಾರ್ಥ.** ಝಯ್‌ವರ್ಣದ ಪರದಲ್ಲಿರುವ ಹಕಾರಕ್ಕೆ ವಿಕಲ್ಪವಾಗಿ ಪೂರ್ವಸವರ್ಣವು ಆದೇಶವಾಗಿ ಬರುತ್ತದೆ. ವಾಕ್+ಹರಿಃ. ಜಸ್ತ್ವದಿಂದ ಕಕಾರಕ್ಕೆ ಗಕಾರಾದೇಶ. ವಾಗ್+ಹರಿಃ ಎಂದಿರುವಾಗ ಈ ಸೂತ್ರಕ್ಕೆ ಲಕ್ಷ್ಯ.

ಝಯ್ ಗಕಾರ. ಅದರ ಪರದಲ್ಲಿ ಹಕಾರ ಬಂದುದರಿಂದ ಅದಕ್ಕೆ ಪೂರ್ವಸವರ್ಣ. ಇಲ್ಲಿ ಹಕಾರಕ್ಕೆ ಕಂಠಸ್ಥಾನವಾದುದರಿಂದ ಪೂರ್ವದ ಸವರ್ಣ ಬರುವುದಾದರೆ ಕವರ್ಗ ವೈದೂ ಬರಬೇಕಾಗುತ್ತದೆ. ಆದುದರಿಂದ ಹಿಂದಿನಂತೆ ಬಾಹ್ಯಪ್ರಯತ್ನದಿಂದ ಆಂತರತಮ್ಯವನ್ನು ಹೇಳಬೇಕೆಂದು "ನಾದಸ್ಯ ಘೋಷಸ್ಯ......." ಎಂದು ಹೇಳು ತ್ತಾನೆ. ಹಕಾರಕ್ಕೆ ಮಹಾಪ್ರಾಣ, ನಾದ, ಘೋಷ, ಸಂವಾರ, ಪ್ರಯತ್ನಗಳು ಇರು ವುದರಿಂದ ಕವರ್ಗದಲ್ಲಿ ಈ ನಾಲ್ಕು ಪ್ರಯತ್ನವುಳ್ಳ ವರ್ಣವು ಘಕಾರ ಮಾತ್ರವಾಗು ತ್ತದೆ, (ಹಶಃ ಸಂವಾರಾ ನಾದಾ ಘೋಷಾಶ್ಚ) ಆಗ ಘಕಾರವು ಬಂದರೆ ವಾಗ್+ ಘರಿಃ ವಾಗ್ಘರಿಃ ಎಂದಾಗುತ್ತದೆ. ಪೂರ್ವಸವರ್ಣ ವಿಕಲ್ಪವಾದುದರಿಂದ ಬಾರದಿದ್ದರೆ ವಾಗ್ಹರಿಃ ಎಂದೇ ಇರುತ್ತದೆ.

(ಶಕಾರಕ್ಕೆ ಛತ್ವವಿಧಾಯಕಸೂತ್ರ)

### ೭೬. ಶಶ್ಛೋಽಟಿ ॥ ೮-೪-೬೩ ॥

**ಝಯಃ ಪರಸ್ಯ ಶಸ್ಯ ಛೋ ವಾಽಟಿ । ತದ್ ಶಿವ ಇತ್ಯತ್ರ ದಸ್ಯ ಶ್ಚುತ್ವೇನ ಜಕಾರೇ ಕೃತೇ ಖರಿ ಚೇತಿ ಜಕಾರಸ್ಯ ಚಕಾರಃ । ತಚ್ಛಿವಃ । ತಚ್ ಶಿವಃ ॥**

ಶಃ, ಛಃ, ಅಟಿ । ತ್ರಿಪದಸೂತ್ರ. ಹಿಂದಿನ ಸೂತ್ರದಿಂದ "ಝಯಃ" "ಅನ್ಯತರಸ್ಯಾಮ್" ಪದಗಳು ಅನುವೃತ್ತವಾಗುತ್ತವೆ. ಶಃ ಷಷ್ಠೀ. (ಶ್ ಶೌ ಶಃ) ಛಃ ಪ್ರಥಮಾಂತ. ಸೂತ್ರಾರ್ಥ. ಝಯಿನಪರದಲ್ಲಿರುವ ಶಕಾರಕ್ಕೆ ಅಟ್‌ಪರ ವಾದಾಗ ಛಕಾರವು ವಿಕಲ್ಪವಾಗಿ ಬರುತ್ತದೆ. ತದ್+ಶಿವಃ ಎಂಬಲ್ಲಿ ದಕಾರಕ್ಕೆ ಶ್ಚುತ್ವದಿಂದ ಜಕಾರವಮಾಡಿದಮೇಲೆ "ಖರಿಚ" ಸೂತ್ರದಿಂದ ಜಕಾರಕ್ಕೆ ಚಕಾರಾ ದೇಶ. ತಚ್+ಶಿವಃ ಎಂಬಲ್ಲಿ ಛತ್ವವನ್ನು ಹೇಳಬೇಕಾದರೆ ಅದಕ್ಕಿಂತ ಮೊದಲು ಬರುವ ಕಾರ್ಯವನ್ನು ಹೇಳಬೇಕು. ದಕಾರಕ್ಕೆ ಶಕಾರದ ಯೋಗವಿರುವುದರಿಂದ "ಸ್ತೋಃ ಶ್ಚುನಾ ಶ್ಚುಃ" ಎಂಬುದರಿಂದ ಶ್ಚುತ್ವ ಬಂದರೆ ದಕಾರಕ್ಕೆ ಜಕಾರಾದೇಶ. ತಜ್+ಶಿವಃ ಎಂದಿರುವಾಗ "ಖರಿಚ" ಸೂತ್ರದಿಂದ ಜಕಾರಕ್ಕೆ ಚಕಾರಾದೇಶ ತಚ್+ಶಿವಃ ಎಂದಾಗುತ್ತದೆ. ಅವೆರಡು ಕಾರ್ಯಗಳು ಪೂರ್ವಸೂತ್ರಗಳಿಂದ ವಿಹಿತವಾದುದರಿಂದ ಮೊದಲು ಹೇಳಬೇಕು ತ್ರಿಪಾದಿಯಲ್ಲಿ ಪೂರ್ವಸೂತ್ರಗಳಿಗೇ ಪ್ರಾಧಾನ್ಯವಿರುತ್ತದೆಂದು "ಪೂರ್ವತ್ರಾಸಿದ್ಧಮ್" ಎಂಬುದರಿಂದ ತಿಳಿಯುತ್ತದೆ. ಈಗ ಝಯ್ ಚಕಾರ. ಅದರ ಪರದಲ್ಲಿ ಶಕಾರ ಬಂದಿದೆ. ಅದಕ್ಕೆ ಇಕಾರರೂಪ ಅಚ್ ಪರವಾಗಿದೆ. (ತಚ್+ಶ್+ಇವ) ಆದುದರಿಂದ ಶಕಾರಕ್ಕೆ ಛಕಾರಾದೇಶ. ತಚ್+ಛಿವಃ=ತಚ್ಛಿವಃ । ಛಕಾರಾದೇಶ ವಿಕಲ್ಪವಾದುದರಿಂದ ಅದು ಬಾರದಿದ್ದರೆ ತಚ್‌ಶಿವಃ ಎಂದೇ ಇರುತ್ತದೆ. (ತಸ್ಯಶಿವಃ=ಅವನ ಶಿವನು).

(ಛತ್ವನಿಯಾಮಕವಾರ್ತಿಕ)

**ವಾ॥ ಛತ್ವಮಮೀತಿ ವಾಚ್ಯಮ್ ॥**

**ತಚ್ಛ್ಲೋಕೇನ ॥**

ಛತ್ವಂ, ಅಮಿ, ಇತಿ, ವಾಚ್ಯಮ್ ॥ ಚತುಷ್ಪದವಾರ್ತಿಕ. ಝಯಿನ ಪರವಾದ ಶಕಾರಕ್ಕೆ ಅಟ್ ಪರವಾದಾಗ ಛತ್ವವೆಂದು ಸೂತ್ರದಲ್ಲಿ ಹೇಳಿದೆ. ವಾರ್ತಿಕಕಾರರು ಅದು ಸಾಲದೆಂದು ಶಕಾರಕ್ಕೆ ಅಮ್ ಪರವಾದಾಗ ಛತ್ವಬರುತ್ತದೆಂದು ನಿಯಮಮಾಡಿರುತ್ತಾರೆ. ತಚ್ಛ್ಲೋಕೇನ. ತದ್+ಶ್ಲೋಕೇನ ಎಂದಿರುವಾಗ ಹಿಂದೆ ಹೇಳಿದಂತೆ ಮೊದಲು ದಕಾರಕ್ಕೆ ಶ್ಚುತ್ವದಿಂದ ಜಕಾರಾದೇಶ. ಅದಕ್ಕೆ "ಖರಿಚ" ಸೂತ್ರದಿಂದ ಚಕಾರಾದೇಶ. ತಚ್+ಶ್ಲೋಕೇನ; ಎಂದಿರುವಾಗ ಇಲ್ಲಿ ಶಕಾರಕ್ಕೆ (ಶ್+ಲೋಕೇನ) ಲಕಾರ ಪರವಾಗಿದೆ. ಸೂತ್ರಕಾರರ ಮತದಂತೆ ಲಕಾರ ಅಟಿನಲ್ಲಿ ಸೇರದಿರುವುದರಿಂದ ಶಕಾರಕ್ಕೆ ಛತ್ವ ಪ್ರಾಪ್ತವಾಗುವುದಿಲ್ಲ. ಈಗ ಅಮ್ ಎಂಬುದರಿಂದ ಲಕಾರ ಅಮಿನಲ್ಲಿ ಸೇರುವುದರಿಂದ ಶಕಾರಕ್ಕೆ ಛತ್ವಬಂದರೆ ತಚ್ ಛ್ಲೋಕೇನ=ತಚ್ಛ್ಲೋಕೇನ ಎಂದಾಗುತ್ತದೆ. (ಆ ಶ್ಲೋಕದಿಂದ). ಅಮಿನ ಮುಂದಿನ ವರ್ಣ ಶಕಾರಕ್ಕೆ ಪರವಾದರೆ ಛತ್ವವಿಲ್ಲ. ವಾಕ್+ಶ್ಚ್ಯೋತತಿ. ಇಲ್ಲಿ. ಚಕಾರ ಪರವಾಗಿದೆ. ಇದು ಅಮಿನಲ್ಲಿ ಸೇರಿಲ್ಲ. ಆದ್ದರಿಂದ ಛತ್ವವಿಲ್ಲ.

(ಅನುಸ್ವಾರ ವಿಧಾಯಕ ಸೂತ್ರ)

## ೭೭. ಮೋಽನುಸ್ವಾರಃ ॥ ೮-೩-೨೩ ॥

**ಮಾಂತಸ್ಯ ಪದಸ್ಯ ಅನುಸ್ವಾರೋ ಹಲಿ ॥ ಹರಿಂ ವನ್ದೇ ॥**

ಮಃ ಅನುಸ್ವಾರಃ ॥ ದ್ವಿಪದ ಸೂತ್ರ. ಮಃ ಷಷ್ಠೀ. "ಪದಸ್ಯ" ಅಧಿಕಾರ ಸೂತ್ರ. "ಪದಸ್ಯ" ಎಂಬುದಕ್ಕೆ ಮ ಎಂಬುದು ವಿಶೇಷಣ. "ಯೇನ ವಿಧಿಸ್ತದಂತಸ್ಯ" ಪರಿಭಾಷೆಯಿಂದ ತದಂತಲಾಭ, "ಹಲಿಸರ್ವೇಷಾಮ್" ಸೂತ್ರದಿಂದ "ಹಲಿ" ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಮಕಾರಾಂತವಾದ ಪದಕ್ಕೆ ಹಲ್ ಪರವಾದಾಗ ಅನುಸ್ವಾರ ಬರುತ್ತದೆ. ಪದಕ್ಕೆ ಎಂದು ಷಷ್ಠ್ಯಂತವಾಗಿ ಹೇಳಿದುದರಿಂದ "ಅಲೋಂತ್ಯಸ್ಯ" ಪರಿಭಾಷೆಯಿಂದ ಪದದ ಅಂತ್ಯಕ್ಕೆ ಎಂದರ್ಥವಾಗುತ್ತದೆ. ಅಂತ್ಯವಾದದು ಮಕಾರವೇ ಆದುದರಿಂದ ಪದದ ಕೊನೆಯ ಮಕಾರಕ್ಕೆ ಅನುಸ್ವಾರವೆಂದು ಫಲಿತಾರ್ಥ. ಹರಿಮ್+ವಂದೇ ಎಂದಿರುವಾಗ ಮಕಾರ ಪದದ ಕೊನೆಯಲ್ಲಿದೆ. ಇದಕ್ಕೆ ವಕಾರರೂಪ ಹಲ್ ಪರವಾದುದರಿಂದ ಅನುಸ್ವಾರ. ಹರಿಂ ವಂದೇ, (ವಿಷ್ಣುವನ್ನು ನಮಸ್ಕರಿಸುತ್ತೇನೆ.)

(ಅಪದಾಂತದಲ್ಲಿ ಅನುಸ್ವಾರವಿಧಾಯಕಸೂತ್ರ)

## ೭೮. ನಶ್ಚಾಪದಾಂತಸ್ಯ ಝಲಿ ॥ ೮-೩-೨೪ ॥

**ನಸ್ಯ ಮಸ್ಯ/ಚಾಪದಾಂತಸ್ಯ ಝಲ್ಯನುಸ್ವಾರಃ । ಯಶಾಂಸಿ । ಆಕ್ರಂಸ್ಯತೇ । ಝಲಿ ಕಿಮ್ ? ಮನ್ಯತೇ ॥**

ನಃ, ಚ, ಅಪದಾಂತಸ್ಯ, ಝಲಿ ॥ ನಾಲ್ಕು ಪದಗಳುಳ್ಳ ಸೂತ್ರ. ಚಕಾರದಿಂದ ಪೂರ್ವಸೂತ್ರದ ಮಃ ಎಂಬುದೂ ಸಂಬದ್ಧವಾಗುತ್ತದೆ. ಮಃ ನಃ ಎರಡೂ ಷಷ್ಠೀ. **ಸೂತ್ರಾರ್ಥ.** ಅಪದಾಂತವಾದ (ಪದದ ಕೊನೆಯಲ್ಲಿ ಇಲ್ಲದಿರುವ) ನಕಾರ ಮಕಾರಗಳಿಗೆ ಝಲ್ ವರ್ಣಪರವಾದಾಗ ಅನುಸ್ವಾರ ಆದೇಶ ಬರುತ್ತದೆ. ಯಶಾಂಸಿ. ಯಶಸ್ ಶಬ್ದಕ್ಕೆ ಜಸ್‌ಪ್ರತ್ಯಯ ಪರವಾದಾಗ ನುಮಾಗಮ. ದೀರ್ಘ. ಯಶಾನ್ + ಸಿ. ಎಂದಿರುವಾಗ ನಕಾರ ಪದಮಧ್ಯದಲ್ಲಿರುವುದರಿಂದ ಅನುಸ್ವಾರಾದೇಶ. ಯಶಾಂಸಿ. ಆಕ್ರಂಸ್ಯತೇ. ಆಙ್ ಉಪಸರ್ಗ. ಕ್ರಮುಧಾತು. ಲೃಟ್ಟನಲ್ಲಿ ಆಕ್ರಮ್ + ಸ್ಯತೇ. ಎಂದಿರುವಾಗ ಪದಮಧ್ಯವಾದ ಮಕಾರಕ್ಕೆ ಅನುಸ್ವಾರ. ಪದದ ಕೊನೆಯಲ್ಲಿ ಇಲ್ಲದಿರುವುದರಿಂದ ಹಿಂದಿನ ಸೂತ್ರದಿಂದ ಬರುವುದಿಲ್ಲ. ಆಕ್ರಂಸ್ಯತೇ. ಝಲಿಕಿಮ್ ? ಸೂತ್ರದಲ್ಲಿ ಝಲ್ ಪರವಾದಾಗ ಅನುಸ್ವಾರವೆಂದಿರುತ್ತಾನೆ. ಅದು ಏಕೆ? ಅಪದಾಂತವಾದ ನಕರಮಕಾರಗಳಿಗೆ ಅನುಸ್ವಾರವೆಂದರೆ ದೋಷವೇನು ? ಮನ್ಯತೇ. ಹಾಗೆ ಹೇಳಿದರೆ ಇಲ್ಲಿಯೂ ನಕಾರಕ್ಕೆ ಅನುಸ್ವಾರ ಬರಬೇಕಾಗುತ್ತದೆ. ಝಲಿಯೆಂದು ನಿಮಿತ್ತ ಹೇಳಿದುದರಿಂದ ಇಲ್ಲಿ ಅಪದಾಂತವಾದರೂ (ಮನ್ + ಯತೇ), ಯಕಾರ ಪರವಾದುದರಿಂದ ಬರುವುದಿಲ್ಲ.

(ಅನುಸ್ವಾರಕ್ಕೆ ಪರಸವರ್ಣವಿಧಾಯಕಸೂತ್ರ)

## ೭೯. ಅನುಸ್ವಾರಸ್ಯ ಯಯಿ ಪರಸವರ್ಣಃ ॥ ೮–೪–೫೮ ॥

**ಸ್ಪಷ್ಟಮ್ । ಶಾನ್ತಃ ॥**

ತ್ರಿಪದಸೂತ್ರ. ಯಯಿ ಸಪ್ತಮೀ. ಅನುವೃತ್ತ್ಯಾದಿಕ್ಲೇಶವಿಲ್ಲದಿದ್ದುದರಿಂದ ವೃತ್ತಿಯಲ್ಲಿ ಸ್ಪಷ್ಟಮ್ ಎಂದಿರುತ್ತಾನೆ. **ಸೂತ್ರಾರ್ಥ.** ಅನುಸ್ವಾರಕ್ಕೆ ಯಯ್ ವರ್ಣಪರವಾದರೆ ಪರಸವರ್ಣ ಆದೇಶವಾಗಿ ಬರುತ್ತದೆ. ಶಾನ್ತಃ. ಶಮ್ ಧಾತುವಿಗೆ ಕ್ತ ಪ್ರತ್ಯಯ ಪರವಾದಾಗ ದೀರ್ಘ. ಶಾಮ್ + ತ ಎಂದಿರುವಾಗ ಹಿಂದಿನ ಸೂತ್ರದಿಂದ ಮಕಾರಕ್ಕೆ ಅನುಸ್ವಾರ. ಅದಕ್ಕೆ ಯಯ್‌ನಲ್ಲಿ ಸೇರಿದ ತಕಾರ ಪರವಾದುದರಿಂದ ತಕಾರದ ಸವರ್ಣ ಬರುತ್ತದೆ. ಅನುಸ್ವಾರಕ್ಕೆ ನಾಸಿಕಾಸ್ಥಾನವಾದುದರಿಂದ "ಸ್ಥಾನೇಽಂತರತಮಃ" ಪರಿಭಾಷೆಯಿಂದ ನಾಸಿಕಸ್ಥಾನಸಾಮ್ಯವಿರುವ ತಕಾರದ ಸವರ್ಣವಾದ ನಕಾರ ಬಂದರೆ ಶಾನ್‌ತಃ = ಶಾನ್ತಃ ಎಂದಾಗುತ್ತದೆ.

(ವಿಕಲ್ಪಪರಸವರ್ಣವಿಧಾಯಕ ಸೂತ್ರ)

## ೮೦. ವಾ ಪದಾನ್ತಸ್ಯ ॥ ೮–೪–೫೯ ॥

**ತ್ವಙ್ಕರೋಷಿ । ತ್ವಂ ಕರೋಷಿ ॥**

ನಾ, ಪದಾಂತಸ್ಯ || ದ್ವಿಪದ ಸೂತ್ರ. ಹಿಂದಿನ ಸೂತ್ರವು ಅನುವೃತ್ತವಾಗು. ತ್ತದೆ. ಪದಾಂತಸ್ಯ ಎಂಬುದಕ್ಕೆ ಅನುಸ್ವಾರಸ್ಯ ಎಂಬಲ್ಲಿ ಅನ್ವಯ. **ಸೂತ್ರಾರ್ಥ.** ಪದಾಂತವಾದ ಅನುಸ್ವಾರಕ್ಕೆ ಯಯ್ ಪರವಾದಾಗ ವಿಕಲ್ಪವಾಗಿ ಪರಸವರ್ಣ. ತ್ವಮ್ + ಕರೋಷಿ ಎಂದಾಗ "ಮೋಽನುಸ್ವಾರಃ" ಸೂತ್ರದಿಂದ ಮೊದಲು ಮಕಾರಕ್ಕೆ (ಪದಾಂತವಾದುದರಿಂದ) ಅನುಸ್ವಾರ. ಆದಕ್ಕೆ ಕಕಾರರೂಪ ಯಯ್ ಪರವಾದುದರಿಂದ ಪರಸವರ್ಣ ಬಂದರೆ ಙಕಾರ (ಅನುನಾಸಿಕ) ಬರುತ್ತದೆ. ತ್ವಙ್ಕ ರೋಷಿ. ಬಾರದಿದ್ದರೆ ಅನುಸ್ವಾರವೇ ಇರುತ್ತದೆ. ತ್ವಂಕರೋಷಿ.

(ಮಕಾರಕ್ಕೆ ಮಕಾರ ವಿಧಾಯಕ ಸೂತ್ರ)

## ೮೧. ಮೋ ರಾಜಿ ಸಮಃ ಕ್ವೌ || ೮-೩-೨೫ ||

**ಕ್ವಿಬಂತೇ ರಾಜತೌ ಪರೇ ಸಮೋ ಮಸ್ಯ ಮ ಏವ ಸ್ಯಾತ್ ಸಮ್ರಾಟ್ ||**

ನಾಲ್ಕು ಪದಗಳುಳ್ಳ ಸೂತ್ರ. ರಾಜಿ ಎಂಬುದು ಇಗಂತದಿಂದ ನಿರ್ದಿಷ್ಟವಾದ ಧಾತು. ಕ್ವಿ ಪ್ರತ್ಯಯ. ಅದು ಧಾತುವಿಗೆ ವಿಶೇಷಣ. **ಸೂತ್ರಾರ್ಥ.** ಕ್ವಿ ಬಂತವಾದ ರಾಜಧಾತುವು ಪರದಲ್ಲಿರುವಾಗ ಸಮಿನ ಮಕಾರಕ್ಕೆ ಮಕಾರವೇ ಬರುತ್ತದೆ. ಅನುಸ್ವಾರ ಬರುವುದಿಲ್ಲವೆಂದರ್ಥ. ಸಮ್ + ರಾಟ್. "ಮೋಽನುಸ್ವಾರಃ" ಸೂತ್ರದಿಂದ ಮಕಾರಕ್ಕೆ ಅನುಸ್ವಾರ ಪ್ರಾಪ್ತವಾದರೆ ಮಕಾರ ಹೇಳಿದುದರಿಂದ ಹಾಗೇ ಇರುತ್ತದೆ ಸಮ್ರಾಟ್ (ಚಕ್ರವರ್ತಿ).

## ೮೨. ಹೇ ಮಪರೇ ವಾ || ೮-೩-೨೬ ||

**ಮಪರೇ ಹಕಾರೇ ಪರೇ ಮಸ್ಯ ಮೋ ವಾ || ಕಿಮ್ ಹ್ಮಲಯತಿ, ಕಿಂ ಹ್ಮಲಯತಿ ||**

ತ್ರಿಪದ ಸೂತ್ರ. । "ಮೋಽನುಸ್ವಾರ" ಸೂತ್ರದಿಂದ "ಮಃ" ಎಂಬ ಷಷ್ಠ್ಯಂತಪದವೂ, "ಮೋರಾಜಿಸಮಃ ಕ್ವೌ" ಸೂತ್ರದಿಂದ "ಮಃ" ಎಂಬ ಪ್ರಥಮಾಂತವೂ ಅನುವೃತ್ತವಾಗುತ್ತದೆ. ಮಃ ಪರೋ ಯಸ್ಮಾತ್ ಸಃ ಮಪರಃ. ಮಕಾರವೇ ಪರವಾಗಿರುವುದು. ಹೇ ಸಪ್ತಮೀ. **ಸೂತ್ರಾರ್ಥ.** ಮಕಾರ ಪರವಾದ ಹಕಾರವು ಪರದಲ್ಲಿರುವಾಗ ಮಕಾರಕ್ಕೆ ಮಕಾರವು ವಿಕಲ್ಪವಾಗಿ ಬರುತ್ತದೆ. "ಮೋಽನುಸ್ವಾರಃ" ಸೂತ್ರಕ್ಕೆ ಅಪವಾದ. ಮಕಾರವೇ ಇರುವಾಗ ತಿರುಗಿ ಮಕಾರ ವಿಧಾನ ಮಾಡಿರುವುದು ಮಕಾರಕ್ಕೆ ಬೇರೆ ಯಾವ ಆದೇಶವೂ ಬರುವುದಿಲ್ಲವೆಂದು ಸೂಚಿಸಲು ಹೇಳಿದೆ. ಕಿಮ್ + ಹ್ಮಲಯತಿ (ಏನನ್ನು ಅಲ್ಲಾಡಿಸುತ್ತಾನೆ?) ಇಲ್ಲಿ ಮಕಾರಕ್ಕೆ ಹಕಾರ ಪರವಾಗಿದೆ. ಇದು ವಿಕಲ್ಪವಾದುದರಿಂದ ಅನುಸ್ವಾರ ಬಂದರೆ ಕಿಂ ಹ್ಮಲಯತಿ ಎಂದಾಗುತ್ತದೆ.

(ಯವಲ ವಿಧಾಯಕ ವಾರ್ತಿಕ)

**ವಾ॥ ಯವಲಪರೇ ಯವಲಾ ವಾ ॥**

ತ್ರಿಪದವಾರ್ತಿಕ. ಹಿಂದಿನ ಸೂತ್ರ ಅನುವೃತ್ತವಾಗುತ್ತದೆ. ಮಕಾರಕ್ಕೆ ಯ, ವ, ಲ ಪರವಾಗಿರುವ ಹಕಾರಪರವಾದರೆ ಯವಲಗಳು ವಿಕಲ್ಪವಾಗಿ ಕ್ರಮವಾಗಿ ಬರುತ್ತವೆ. ಇದು ಅನುಸ್ವಾರಕ್ಕೆ ಅಪವಾದವಾಗಿ ಹೇಳಿದೆ. ಕಿಮ್+ಹ್ಯಃ. ಇಲ್ಲಿ ಮಕಾರಕ್ಕೆ ಯಕಾರಪರವಾದ ಹಕಾರಪರವಾದುದರಿಂದ ಯಕಾರಾದೇಶ. ಮಕಾರದ ಸ್ಥಾನಕ್ಕೆ ಬರುವುದರಿಂದ ಅನುನಾಸಿಕ ಯಕಾರವೇ ಬರುತ್ತದೆ. ಕಿಯ್ँ ಹ್ಯಃ. ಇಲ್ಲಿ (ನಿನ್ನೆ ಏನು?) ಯಕಾರ ಬಾರದಿದ್ದರೆ ಅನುಸ್ವಾರ. ಕಿಂ ಹ್ಯಃ। ಕಿಮ್+ಹ್ವಲಯತಿ. ಇಲ್ಲಿ ವಕಾರಪರವಾದುದರಿಂದ ಮಕಾರಕ್ಕೆ ಹಿಂದಿನಂತೆ ಅನುನಾಸಿಕವಾದ ವಕಾರ. ಕಿವ್ँ ಹ್ವಲಯತಿ, ವಿಕಲ್ಪವಾದುದರಿಂದ ಕಿಂ ಹ್ವಲಯತಿ, ಕಿಮ್+ಹ್ಲಾದಯತಿ. ಇಲ್ಲಿ ಲಕಾರಪರವಾದ ಹಕಾರಪರವಾದುದರಿಂದ ಮಕಾರಕ್ಕೆ ವಿಕಲ್ಪವಾಗಿ ಅನುನಾಸಿಕವಾದ ಲಕಾರಾದೇಶ. ಕಿಲ್ँ ಹ್ಲಾದಯತಿ, ಅನುಸ್ವಾರ ಬಂದರೆ ಕಿಂಹ್ಲಾದಯತಿ (ಏನು ಸುಖಗೊಳಿಸುತ್ತಾನೆ?)

(ಮಕಾರಕ್ಕೆ ನಕಾರ ವಿಧಾಯಕ ಸೂತ್ರ)

## ೮೩. ನಪರೇ ನಃ ॥ ೮-೩-೨೭ ॥

**ನಪರೇ ಹಕಾರೇ ಮಸ್ಯ ನೋವಾ ॥ ಕಿನ್ ಹ್ನುತೇ ; ಕಿಂ ಹ್ನುತೇ ॥**

ದ್ವಿಪದಸೂತ್ರ. ಹಿಂದಿನ ಸೂತ್ರದಿಂದ "ಹೇ" ಪದವೂ "ಮೋಽನುಸ್ವಾರ" ಸೂತ್ರದಿಂದ "ಮಃ" ಪದವೂ ಅನುವೃತ್ತವಾಗುತ್ತದೆ. ನಃ ಪರೋ ಯಸ್ಮಾತ್ ಸಃ ನಪರಃ ತಸ್ಮಿನ್ ನಪರೇ. "ಹೇಮಪರೇ ವಾ" ಸೂತ್ರದಿಂದ ವಾ ಅನುವೃತ್ತಿ. **ಸೂತ್ರಾರ್ಥ.** ನಕಾರವೇ ಪರವಾಗಿರುವ ಹಕಾರ ಪರದಲ್ಲಿರುವಾಗ ಮಕಾರಕ್ಕೆ ನಕಾರವು ವಿಕಲ್ಪವಾಗಿ ಬರುತ್ತದೆ. ಕಿಮ್+ಹ್ನುತೇ. ಹ್ನು ಎಂಬಲ್ಲಿ ನಕಾರಪರವಾದ ಹಕಾರವಿದೆ(ಹ್+ನು)ಆದುದರಿಂದ ಮಕಾರಕ್ಕೆ ನಕಾರಾದೇಶ. ಕಿನ್ ಹ್ನುತೇ॥ ಅದು ಬಾರದಿದ್ದರೆ "ಮೋಽನುಸ್ವಾರಃ" ಸೂತ್ರದಿಂದ ಮಕಾರಕ್ಕೆ ಅನುಸ್ವಾರ. ಕಿಂ ಹ್ನುತೇ ॥ ಏನನ್ನು ತೆಗೆಯುತ್ತಾನೆ ಎಂದರ್ಥ.

ಮುಂದೆ ಟಕಾರ ಇತ್ತಾದ ಕಕಾರ ಇತ್ತಾದ ವರ್ಣವನ್ನು ವಿಧಿಸುತ್ತಾನೆ. ಅವು ಸ್ಥಾನಿಯನ್ನು ತೆಗೆದುಹಾಕಿ ಬರುವುದಿಲ್ಲ. ಅವಯವಗಳಂತೆ ಬರುವುದರಿಂದ ಅವುಗಳಿಗೆ ಆಗಮವೆಂದು ಹೆಸರು. ಬರುವುದಾದರೆ ಅವು ಆದ್ಯವಯವವಾಗಿಯೇ ಅಂತಾವಯವವಾಗಿಯೇ ಎಂಬ ನಿಯಮವನ್ನು ತಿಳಿಸಲು ಸೂತ್ರವನ್ನು ಹೇಳುತ್ತಾನೆ.

(ಆದ್ಯಂತಾವಯವ ವಿಧಾಯಕ ಸೂತ್ರ)

## ೮೪. ಆದ್ಯಂತೌ ಟಕಿತೌ ॥ ೧-೧-೪೬ ॥

**ಟಿತ್‌ಕಿತೌ ಯಸ್ಯೋಕ್ತೌ ತಸ್ಯ ಕ್ರಮಾದಾದ್ಯಂತಾವಯವೌ ಸ್ತಃ ॥**

ದ್ವಿಪದ ಸೂತ್ರ. ಆದಿಶ್ಚ ಅಂತಶ್ಚ, ಆದ್ಯಂತೌ । ಟಶ್ಚ ಕ್ ಚ ಟಕೌ । ಟಕೌ ಇತೌ ಯಯೋಸ್ತೌ ಟಕಿತೌ । ಟಕಾರದ ಮೇಲಿರುವ ಅಕಾರವು ಉಚ್ಚಾರಣಾರ್ಥಕ ವಾಗಿದೆ. ಟಕೌ ಎಂಬುದು ದ್ವಂದ್ವಸಮಾಸ. ದ್ವಂದ್ವಸಮಾಸದ ಕೊನೆಯಲ್ಲಿರುವ ಪದವು ಪ್ರತ್ಯೇಕಸಂಬಂಧವನ್ನು ಹೊಂದುತ್ತದೆ ಎಂಬ ನ್ಯಾಯವು ಹಿಂದೆ ವಿವೃತ ವಾಗಿದೆ. ಪ್ರಕೃತ ಇತ್ ಎರಡರಲ್ಲಿಯೂ ಅನ್ವಿತವಾದರೆ ಟಿತ್ ಕಿತ್ ಎಂದಾಗುತ್ತದೆ. ಟಕಾರ ಇತ್ತಾಗಿರುವುದು, ಕಕಾರ ಇತ್ತಾಗಿರುವುದು. "ಯಾವುದಕ್ಕೆ ವಿಹಿತ ವಾಗಿವೆಯೋ ಅವುಗಳ" ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. **ಸೂತ್ರಾರ್ಥ.** ಟಿತ್ ಕಿತ್ ಯಾವುದಕ್ಕೆ ವಿಹಿತವಾಗಿವೆಯೋ ಅವುಗಳು ಅದಕ್ಕೆ ಕ್ರಮವಾಗಿ ಆದ್ಯವಯವವಾಗಿಯೂ ಅಂತಾವಯವವಾಗಿಯೂ ಬರುತ್ತವೆ. ಟಿತ್ತಾದುದು ಆದ್ಯವಯವವಾಗಿ, ಕಿತ್ತಾದುದು ಅಂತಾವಯವವಾಗಿ ಬರುತ್ತದೆ. ಹೀಗೆ ಮಿತ್ರನಂತೆ ಹತ್ತಿರ ಬಂದು ಸೇರುವುದರಿಂದ ಇವು ಆಗಮಗಳು, ಸ್ಥಾನಿಯನ್ನು ತೆಗೆದುಬರುವುದ ರಿಂದ ಶತ್ರುವಿನಂತೆ ಆದೇಶಗಳು. ಈ ಟಿತ್‌ಕಿತ್‌ಗಳಿಗೆ ಪ್ರಯೋಜನವನ್ನು ಹೇಳುತ್ತಾನೆ.

(ಕುಕ್ ಟುಕ್ ಆಗಮವಿಧಾಯಕಸೂತ್ರ)

## ೮೫. ಙ್ಣೋಃ ಕುಕ್‌ಟುಕ್ ಶರಿ ॥ ೮-೩-೨೮ ॥

ವಾ ಸ್ತಃ ॥

ಙ್ಣೋಃ ಕುಕ್‌ಟುಕ್, ಶರಿ ॥ ತ್ರಿಪದಸೂತ್ರ. ಕುಕ್ ಚ ಟುಕ್ ಚ ತಯೋಃ ಸಮಾಹಾರಃ, ಕುಕ್‌ಟುಕ್. ಸಮಾಹಾರದ್ವಂದ್ವದಲ್ಲಿ ಏಕವಚನ, ನಪುಂಸಕಲಿಂಗ ಬರುತ್ತದೆ. ಙ್ ಚ ಣ್ ಚ ಙ್ಣೌ, ತಯೋಃ ಙ್ಣೋಃ. "ಹೇಮಪರೇ ವಾ" ಸೂತ್ರ ದಿಂದ ವಾ ಅನುವೃತ್ತಿ. ಶರಿ ಸಪ್ತಮೀ. **ಸೂತ್ರಾರ್ಥ.** ಙಕಾರಣಕಾರಗಳಿಗೆ ಶರ್ ಪರವಾದಾಗ ವಿಕಲ್ಪವಾಗಿ ಕುಕ್ ಟುಕ್ ಆಗಮಗಳು ಬರುತ್ತವೆ. ಯಥಾಸಂಖ್ಯ ವಿರುವುದರಿಂದ ಙಕಾರಕ್ಕೆ ಕುಕ್ ಣಕಾರಕ್ಕೆ ಟುಕ್. ಇವು ಕಿತ್ತಾದುದರಿಂದ ಹಿಂದೆ ಹೇಳಿದ ಸೂತ್ರದ ನಿಯಮದಿಂದ ಅಂತಾವಯವವಾಗಿ ಬರುತ್ತವೆ. ಅರ್ಥವು ಸ್ಪಷ್ಟವಾದುದರಿಂದ "ವಾಸ್ತಃ" (ವಿಕಲ್ಪವಾಗಿ ಬರುತ್ತದೆ) ಎಂದು ಸೂತ್ರದಲ್ಲಿ ಹೇಳದೆ. ಪ್ರಾಙ್+ಷಷ್ಠಃ. ಇಲ್ಲಿ ಙಕಾರಕ್ಕೆ ಶರಿನ ಷಕಾರಪರವಾದುದರಿಂದ ಕುಕ್ ಆಗಮ. ಙಕಾರದ ಅಂತ್ಯಕ್ಕೆ ಬಂದರೆ ಪ್ರಾಙ್‌ಕ್+ಷಷ್ಠಃ ಕಕಾರಷಕಾರಸಂಬಂಧ ವಿರುವಾಗ ಕ್ಷ ಆಗುತ್ತದ. ಪ್ರಾಙ್ಕ್ಷಷ್ಠಃ ॥ ಇಲ್ಲಿ ಕಕಾರಕ್ಕೆ ಖಕಾರ ಹೇಳುವ ವಾರ್ತಿಕವನ್ನು ಹೇಳುತ್ತಾನೆ.

(ದ್ವಿತೀಯಾಕ್ಷರವಿಧಾಯಕವಾರ್ತಿಕ)

**ವಾ॥ ಚಯೋ ದ್ವಿತೀಯಾಃ ಶರಿ ಪೌಷ್ಕರಸಾದೇರಿತಿ ವಾಚ್ಯಮ್ ॥**

**ಪ್ರಾಙ್ ಖ್ ಷಷ್ಠಃ, ಪ್ರಾಙ್ಕ್ಷಷ್ಠಃ ಪ್ರಾಙ್ ಷಷ್ಠಃ । ಸುಗಣ್ ಠ್ ಷಷ್ಠಃ, ಸುಗಣ್ಟ್ ಷಷ್ಠಃ । ಸುಗಣ್ ಷಷ್ಠಃ ॥**

ಆರು ಪದವುಳ್ಳ ವಾರ್ತಿಕ. ಪುಷ್ಕರಸದಃ ಅಪತ್ಯಂ ಪುಮಾನ್, ಪೌಷ್ಕರಸಾದಿಃ ಬಾಹ್ವಾದಿಗಣಪಠಿತವಾದುದರಿಂದ ಅಪತ್ಯಾರ್ಥದಲ್ಲಿ ಇಞ್ಪ್ರತ್ಯಯ. ಇವರೂ ಒಬ್ಬರು ವೈಯಾಕರಣರು. ಇವರ ಮತದಲ್ಲಿ ಚಯ್‌ಪ್ರತ್ಯಾಹಾರಘಟಕ ವರ್ಣಗಳಿಗೆ ಶರ್‌ವರ್ಣ ಪರವಾದಾಗ ಅವುಗಳಿಗೆ ವರ್ಗದ ದ್ವಿತೀಯ ವರ್ಣಗಳು ಆದೇಶವಾಗಿ ಬರುತ್ತವೆ. ಹಿಂದೆ ಕುಕ್ ಆಗಮ ಬಂದಾಗ ಪ್ರಾಙ್ ಕ್+ಷಷ್ಠಃ ರೂಪವಾಗಿದೆ. ಅಲ್ಲಿ ಪೌಷ್ಕರಸಾದಿ ಆಚಾರ್ಯರ ಮತದಂತೆ ದ್ವಿತೀಯವರ್ಣ ಬಂದರೆ ಪ್ರಾಙ್ ಖ್‌ಷಷ್ಠಃ ಎಂದಾಗುತ್ತದೆ. ಸುಗಣ್+ಷಷ್ಠಃ ಎಂದಿರುವಾಗ ಹಿಂದಿನ ಸೂತ್ರದಿಂದ ಟುಕ್ ಆಗಮ ಬಂದರೆ ಸುಗಣ್+ಷಷ್ಠಃ ಎಂದಾಗ ಪೌಷ್ಕರಸಾದಿ ಆಚಾರ್ಯರ ಮತದಂತೆ ದ್ವಿತೀಯಾಕ್ಷರ ಆದೇಶವಾಗಿ ಬಂದರೆ ಸುಗಣ್ ಠ್ ಷಷ್ಠಃ ಆಗುತ್ತದೆ. ಕುಕ್ ಟುಕ್ ಆಗಮಗಳೂ ವಿಕಲ್ಪವಾದುದರಿಂದ ಪ್ರಾಙ್‌ಷಷ್ಠಃ ಎಂದೂ ಆಗುತ್ತದೆ.

(ಧುಡಾಗಮ ವಿಧಾಯಕ ಸೂತ್ರ)

## ೮೬. ಡಃ ಸಿ ಧುಟ್ ॥ ೮-೩-೨೯ ॥

**ಡಾತ್ಪರಸ್ಯ ಸಸ್ಯ ಧುಡ್ವಾ । ಷಟ್ತ್ಸಂತಃ, ಷಟ್‌ಸಂತಃ ॥**

ತ್ರಿಪದ ಸೂತ್ರ. "ಹೇ ಮಪರೇವಾ" ಸೂತ್ರದಿಂದ ವಾ ಅನುವೃತ್ತಿ. ಡಃ ಪಂಚಮೀ. ಸಿ ಸಪ್ತಮೀ. ಡಃ ಪಂಚಮಿಯಾದುದರಿಂದ "ತಸ್ಮಾದಿತ್ಯುತ್ತರಸ್ಯ" ಪರಿಭಾಷೆಯಿಂದ ಡಕಾರದ ಅವ್ಯವಹಿತ ಪೂರ್ವಕ್ಕೆ ಕಾರ್ಯವೆಂದೂ ಸಿ ಸಪ್ತಮಿಯಾದುದರಿಂದ "ತಸ್ಮಿನ್ನಿತಿ ನಿರ್ದಿಷ್ಟೇ" ಪರಿಭಾಷೆಯಿಂದ ಸಕಾರದ ಅವ್ಯವಹಿತ ಪೂರ್ವಕ್ಕೆ ಕಾರ್ಯವೆಂದೂ ಬೋಧಿತವಾಗುತ್ತದೆ. ಎರಡಕ್ಕೂ ಕಾರ್ಯ ಬರುವುದಿಲ್ಲ. ಆಗ "ಉಭಯನಿರ್ದೇಶೇ ಪಂಚಮೀ ನಿರ್ದೇಶೋ ಬಲೀಯಾನ್" ಸಪ್ತಮೀ ಪಂಚಮೀ ಎರಡೂ ಒಂದೆಡೆ ಹೇಳಿದಾಗ ಪಂಚಮೀ ನಿರ್ದೇಶಕ್ಕೆ ಪ್ರಾಬಲ್ಯವೆಂದರ್ಥ ಕೊಡುವ ಪರಿಭಾಷೆಯಿಂದ ಪಂಚಮಿಗೆ ಪ್ರಾಬಲ್ಯ. ಸಿ ಎಂಬ ಸಪ್ತಮಿಗೆ ಪ್ರಾಬಲ್ಯವಿಲ್ಲದಿರುವುದರಿಂದ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. **ಸೂತ್ರಾರ್ಥ.** ಡಕಾರದ ಅವ್ಯವಹಿತ ಪರದಲ್ಲಿರುವ ಸಕಾರಕ್ಕೆ ವಿಕಲ್ಪವಾಗಿ ಧುಟ್ ಆಗಮ ಬರುತ್ತದೆ. ಧುಟನಲ್ಲಿ ಉಕಾರ ಉಚ್ಚಾರಣೆಗೋಸ್ಕರವಿದೆ. ಟಕಾರ "ಹಲಂತ್ಯಮ್" ಸೂತ್ರದಿಂದ ಇತ್ ಸಂಜ್ಞೆಯನ್ನು ಹೊಂದಿ ಲೋಪವಾಗುತ್ತದೆ. ಉಳಿಯುವುದು ಧ್ ಮಾತ್ರ.

ಉದಾ— ಷಡ್ + ಸಂತಃ ಎಂದಿರುವಾಗ ಡಕಾರಕ್ಕೆ ಸಕಾರಪರವಾಗಿದೆ. ಷಷ್ ಶಬ್ದ. ಪದಾಂತದಲ್ಲಿ ಜಶ್ತ್ವ ಬರುವುದರಿಂದ ಷಕಾರಕ್ಕೆ ಡಕಾರಾದೇಶ. ಸಕಾರಕ್ಕೆ ಧುಡಾಗಮ. ಇದು ಟಿತ್ತಾದುದರಿಂದ "ಆದ್ಯಂತೌ ಟಕಿತೌ" ಸೂತ್ರದಿಂದ ಆದ್ಯವಯವವಾಗಿ ಬರುತ್ತದೆ. ಷಡ್ + ಧ್ ಸಂತಃ. ಇಲ್ಲಿ ಧಕಾರಕ್ಕೆ ಸಕಾರರೂಪ ಖರ್ ವರ್ಣಪರವಾದುದರಿಂದ "ಖರಿ ಚ" ಸೂತ್ರದಿಂದ ಚರ್ತ್ವ ಬಂದರೆ ಷಡ್ + ತ್ ಸಂತಃ. ಪುನಃ ಡಕಾರಕ್ಕೆ ತಕಾರರೂಪ ಖರ್ ಪರವಾದುದರಿಂದ ಚರ್ತ್ವ ಬಂದರೆ ಷಟ್ ತ್ ಸಂತಃ, ಧುಡಾಗಮ ವಿಕಲ್ಪವಾದುದರಿಂದ ಬಾರದಿದ್ದರೆ ಷಡ್ + ಸಂತಃ ಎಂದಿರುವಾಗ ಚರ್ತ್ವ ಬಂದರೆ ಷಟ್ ಸಂತಃ ಎಂದಾಗುತ್ತದೆ.

(ಧುಡ್ವಿಧಾಯಕಸೂತ್ರ)

## ೮೭. ನಶ್ಚ ॥ ೮-೩-೩೦ ॥

**ನಾಂತಾತ್ಪರಸ್ಯ ಸಸ್ಯ ಧುಡ್ವಾ ॥ ಸನ್ತ್ಸಃ, ಸನ್ಸಃ ॥**

ನಃ ಚ ॥ ದ್ವಿಪದಸೂತ್ರ. ಹಿಂದಿನ ಸೂತ್ರದಿಂದ "ಸಿ", "ಧುಟ್", "ಹೇಮುಪರೇ ವಾ" ಸೂತ್ರದಿಂದ "ವಾ" ಅನುವೃತ್ತವಾಗುತ್ತವೆ. "ಪದಸ್ಯ" ಅಧಿಕಾರ ಅದು ಇಲ್ಲಿ ಪಂಚಮ್ಯಂತ್ಯವಾಗಿ ವಿಪರಿಣತವಾಗುತ್ತದೆ. ಅದಕ್ಕೆ ನಃ ಎಂಬ ಪಂಚಮ್ಯಂತ್ಯವು ವಿಶೇಷಣ. "ಯೇನವಿಧಿಸ್ತದಂತಸ್ಯ" ಪರಿಭಾಷೆಯಿಂದ ತದಂತಲಾಭ. **ಸೂತ್ರಾರ್ಥ.** ನಕಾರಾಂತ ಪದದ ಪರದಲ್ಲಿರುವ ಸಕಾರಕ್ಕೆ ವಿಕಲ್ಪವಾಗಿ ಧುಡಾಗಮ ಬರುತ್ತದೆ. ಟಿತ್ತಾದುದರಿಂದ ಸಕಾರದ ಆದ್ಯವಯವವಾಗಿ ಬರುತ್ತದೆ. ಸನ್ + ಸಃ. ಇಲ್ಲಿ ಪದಾಂತವಾದ ನಕಾರದ ಪರದಲ್ಲಿ ಸಕಾರವಿರುವುದರಿಂದ ಸಕಾರಕ್ಕೆ ಧುಟ್ ಆಗಮ. ಸನ್ + ಧ್ ಸಃ. ಹಿಂದಿನಂತೆ ಧಕಾರಕ್ಕೆ "ಖರಿ ಚ" ಸೂತ್ರದಿಂದ ಚರ್ತ್ವ ಬಂದರೆ ಸನ್ ತ್ ಸಃ ರೂಪವಾಗುತ್ತದೆ. ಧುಟಾಗಮ ವಿಕಲ್ಪವಾದುದರಿಂದ ಬಾರದಿದ್ದರೆ ಹಾಗೇ ಇರುತ್ತದೆ ಸನ್ ಸಃ. ಇರುವ ಅವನು ಎಂದರ್ಥ.

(ತುಗಾಗಮವಿಧಾಯಕಸೂತ್ರ)

## ೮೮. ಶಿ ತುಕ್ ॥ ೮-೩-೩೧ ॥

**ಪದಾಂತಸ್ಯ ನಸ್ಯ ಶೇ ಪರೇ ತುಗ್ವಾ । ಸಞ್ಛಂಭುಃ, ಸಞ್ಚ್ ಛಂಭುಃ । ಸಞ್ಚ್ ಶಂಭುಃ । ಸಞ್ ಶಂಭುಃ ॥**

ದ್ವಿಪದಸೂತ್ರ. ಹಿಂದಿನ ಸೂತ್ರದಿಂದ "ನಃ" ಅನುವೃತ್ತವಾಗಿ ಇಲ್ಲಿ ಷಷ್ಠ್ಯಂತವಾಗಿ ಪರಿಣತವಾಗುತ್ತದೆ. ಅದು ಹಿಂದಿನಂತೆ ಅಧಿಕೃತವಾದ "ಪದಸ್ಯ" ಎಂಬುವದಕ್ಕೆ ವಿಶೇಷಣವಾದುದರಿಂದ ತದಂತಲಾಭ. "ವಾ" ಎಂಬುದಕ್ಕೂ ಅನುವೃತ್ತಿಯಿದೆ. **ಸೂತ್ರಾರ್ಥ.** ಪದಾಂತವಾದ ನಕಾರಕ್ಕೆ ಶಕಾರ ಪರವಾದಾಗ ತುಕ್ ಆಗಮ

ವಿಕಲ್ಪವಾಗಿ ಬರುತ್ತದೆ. ನಾಂತಪದಕ್ಕೆ ತುಕಾಗಮ ಎಂದು ಮೊದಲು ಲಬ್ಧವಾದರೂ "ಅಲೋಂತ್ಯಸ್ಯ" ಪರಿಭಾಷೆಯಿಂದ ಪದಾಂತವಾದ ನಕಾರಕ್ಕೆ ತುಕೆಂದು ತಿಳಿಯುತ್ತದೆ. ಸನ್+ಶಂಭುಃ. ಇಲ್ಲಿ ನಕಾರ ಪದಾಂತವಾಗಿದೆ. ಇದಕ್ಕೆ ಶಕಾರಪರವಾದುದರಿಂದ ತುಕ್ ಆಗಮ. ತುಕ್ಕಿನಲ್ಲಿ ಕಕಾರ "ಹಲಂತ್ಯಮ್" ಸೂತ್ರದಿಂದ ಇತ್ತಾಗುತ್ತದೆ. ಉಕಾರ ಉಚ್ಚಾರಣಾರ್ಥವಾದುದರಿಂದ ತ್ ಉಳಿಯುತ್ತದೆ. ಕಿತ್ತಾದುದರಿಂದ "ಆದ್ಯಂತೌ ಟಕಿತೌ" ಸೂತ್ರದಿಂದ ಅಂತಾವಯವವಾಗಿ ಬರುತ್ತದೆ. ಸನ್ ತ್+ಶಂಭುಃ. ತಕಾರಕ್ಕೆ ಶಕಾರದ ಯೋಗವಿರುವುದರಿಂದ "ಸ್ತೋಃ ಶ್ಚುನಾಶ್ಚುಃ" ಸೂತ್ರದಿಂದ ತಕಾರಕ್ಕೆ ಚಕಾರಾದೇಶ. ಈ ಚಕಾರವನ್ನು ನಿಮಿತ್ತೀಕರಿಸಿ ಅದರ ಸಂಬಂಧದಿಂದ ನಕಾರಕ್ಕೆ ಞಕಾರಾದೇಶ. ಸಞ್ ಚ್+ಶಂಭುಃ. ಇಲ್ಲಿ ಚಕಾರ ಝಯ್ ಪ್ರತ್ಯಾಹಾರದಲ್ಲಿ ಸೇರುವುದರಿಂದ ಅದರ ಪರದಲ್ಲಿ ಶಕಾರವಿರುವುದರಿಂದ ಅದಕ್ಕೆ ಆಕಾರರೂಪ ಅಟ್ ಪರವಾದುದರಿಂದ "ಶಶ್ಛೋಽಟಿ" ಸೂತ್ರದಿಂದ ಶಕಾರಕ್ಕೆ ಛಕಾರಾದೇಶ. ಸಞ್ ಚ+ಛಂಭುಃ. ಇಲ್ಲಿ ಞಕಾರರೂಪ ಹಲಿನ ಪರದಲ್ಲಿ ಚಕಾರರೂಪ ಝರ್ ಬಂದು ಅದಕ್ಕೆ ಸವರ್ಣವಾದ ಛಕಾರರೂಪ ಝರ್ ವರ್ಣವಿರುವುದರಿಂದ "ಝರೋ ಝರಿಸವರ್ಣೇ" ಸೂತ್ರದಿಂದ ಚಕಾರಕ್ಕೆ ವಿಕಲ್ಪವಾಗಿ ಲೋಪ. ಸಞ್ಛಂಭುಃ. ಇದು ವಿಕಲ್ಪವಾದುದರಿಂದ ಬಾರದಿದ್ದರೆ ಸಞ್ಚ್ಛಂಭುಃ. "ಶಶ್ಛೋಽಟಿ" ಸೂತ್ರದಿಂದ ಶಕಾರಕ್ಕೆ ಛತ್ವವೂ ವಿಕಲ್ಪವಾದುದರಿಂದ ಅದೂ ಬಾರದಿದ್ದರೆ ಸಞ್ಚ್ಶಂಭುಃ. "ಶಿ ತುಕ್" ಸೂತ್ರದಿಂದ ತುಗಾಗಮವೂ ವಿಕಲ್ಪವಾದುದರಿಂದ ಅದು ಬಾರದಿದ್ದರೆ ನಕಾರಕ್ಕೆ ಶ್ಚುತ್ವಮಾತ್ರ ಬರುವುದರಿಂದ ಸಞ್ ಶಂಭುಃ ರೂಪವಾಗುತ್ತದೆ. ತುಕ್ ಛತ್ವ, ಚಲೋಪರೂಪ ಮೂರು ಕಾರ್ಯಗಳೂ ವಿಕಲ್ಪವಾದುದರಿಂದ ನಾಲ್ಕು ರೂಪಗಳಾಗುತ್ತವೆ. ಇದನ್ನೇ ಸಿದ್ಧಾಂತಕೌಮುದಿಯಲ್ಲಿ ಶ್ಲೋಕರೂಪವಾಗಿ ಹೇಳಿರುತ್ತಾನೆ. ಞಛೌ ಞಚಛಾ ಞಚಶಾ ಞಶಾವಿತಿ ಚತುಷ್ಟಯಂ ॥ ರೂಪಾಣಾಮಿಹ ತುಕ್ಛತ್ವಚಲೋಪಾನಾಂ ವಿಕಲ್ಪನಾತ್ ॥ ಮೂರು ಕಾರ್ಯಗಳೂ ಬಂದರೆ ಞಛ ವರ್ಣಗಳೂ "ಝರೋಝರಿ ಸವರ್ಣೇ" ಬಾರದಿದ್ದರೆ ಮೂರು ಞಚಛವರ್ಣಗಳೂ, "ಶಶ್ಛೋಽಟಿ" ಬಾರದಿದ್ದರೆ ಞಚಶವರ್ಣಗಳೂ, ತುಕಾಗಮ ಬಾರದಿದ್ದರೆ ಞಶವರ್ಣಗಳು ಇರುತ್ತವೆ.

(ಙಮುಟಾಗಮವಿಧಾಯಕ ಸೂತ್ರ)

## ೮೯. ಙಮೋ ಹ್ರಸ್ವಾದಚಿ ಙಮುಣ್ ನಿತ್ಯಮ್

॥ ೮-೩-೩೨ ॥

**ಹ್ರಸ್ವಾತ್ಪರೋ ಯೋ ಙಮ್ ತದಂತಂ ಯತ್ಪದಂ ತಸ್ಮಾತ್ಪರಸ್ಯಾಚೋ ಙಮುಟ್ । ಪ್ರತ್ಯಙ್ಙಾತ್ಮಾ । ಸುಗಣ್ಣೀಶಃ । ಸನ್ನಚ್ಯುತಃ ॥**

ಙಮಃ, ಹ್ರಸ್ವಾತ್, ಅಚಿ, ಙಮುಟ್, ನಿತ್ಯಮ್ । ಐದು ಪದಗಳುಳ್ಳ ಸೂತ್ರ.

ಙಮ್ ಪ್ರತ್ಯಾಹಾರ (ಙಣನ). ಇದು ಪಂಚಮೀ. "ಪದಸ್ಯ" ಅಧಿಕಾರ. ಇಲ್ಲಿ ಅದು ಪಂಚಮ್ಯಂತವಾಗಿ ವಿಪರಿಣತವಾದುದರಿಂದ ಪದಾತ್ ಎಂದಾಗುತ್ತದೆ. ಙಮಃ ಎಂಬುದು ಅದಕ್ಕೆ ವಿಶೇಷಣ. "ಯೇನವಿಧಿಸ್ತದಂತಸ್ಯ" ಪರಿಭಾಷೆಯಿಂದ ತದಂತ ಲಾಭ. ಹ್ರಸ್ವಾತ್, ಪದಾತ್ ಎರಡೂ ಪಂಚಮಿಯಾದುದರಿಂದ "ತಸ್ಮಾದಿತಿ" ಪರಿಭಾಷೆಯಿಂದ ಪರಕ್ಕೆ ಕಾರ್ಯವೆಂದು ತಿಳಿಯಬೇಕು. ಅಚಿ ಎಂದು ಸಪ್ತಮಿ ಯಿದ್ದರೂ ಹಿಂದಿನಂತೆ ಪಂಚಮ್ಯಂತಕ್ಕೆ ಪ್ರಾಬಲ್ಯವಿರುವುದರಿಂದ ಸಪ್ತಮ್ಯಂತವು ಷಷ್ಠ್ಯಂತವಾಗಿ ಪರಿಣತವಾಗುತ್ತದೆ. **ಸೂತ್ರಾರ್ಥ.** ಹ್ರಸ್ವದ ಪರದಲ್ಲಿ ಯಾವ ಙಮ್ (ಙ, ಣ, ನ) ಇದೆಯೋ ಅದೇ ಅಂತವಾದ ಪದದ ಪರದಲ್ಲಿರುವ ಅಚಿಗೆ ಙಮುಟ್ ಆಗಮ ಬರುತ್ತದೆ. ಙಮುಟ್ ಟಿತ್ತಾಗಿದೆ. ಙಮ್ ಪ್ರತ್ಯಾಹಾರದಮೇಲೆ ಟಿತ್ ಮಾಡಿದುದರಿಂದ ಪ್ರತ್ಯೇಕದಲ್ಲಿ ಅನ್ವಯಮಾಡಿಕೊಳ್ಳಬೇಕು. "ಆದ್ಯಂತೌ ಟಕಿತೌ" ಸೂತ್ರದಿಂದ ಆದ್ಯವಯವವಾಗಿ ಬರುತ್ತದೆ. ನಿಮಿತ್ತ ಆಗಮಗಳಿಗೆ ಯಥಾಸಂಖ್ಯವಿರುವುದರಿಂದ ಙಕಾರದ ಪರದ ಅಚಿಗೆ ಙಕಾರ; ಣಕಾರದ ಪರದ ಅಚಿಗೆ ಣಕಾರ, ನಕಾರಪರದ ಅಚಿಗೆ ನಕಾರವೆಂದು ತಿಳಿಯಬೇಕು. "ಹೇಮಪರೇ ವಾ" ಸೂತ್ರದಿಂದ ವಾ ಎಂಬುದಕ್ಕೆ ಅನುವೃತ್ತಿಯಿಲ್ಲವೆಂದು ಸೂಚಿಸಲು ನಿತ್ಯಂ ಎಂದಿರುತ್ತಾನೆ. ಪ್ರತ್ಯಙ್+ಆತ್ಮಾ ಇಲ್ಲಿ ಙಕಾರ ಪದದ ಕೊನೆಯಲ್ಲಿದೆ. ಅದು ತ್ಯದಲ್ಲಿರುವ ಅಕಾರದ ಪರದಲ್ಲಿರುವುದರಿಂದ ಹ್ರಸ್ವದ ಪರದಲ್ಲಿದೆ. ಇದರ ಪರದಲ್ಲಿ ಆಯೆಂಬ ಅಚ್ ಇದೆ. ಇದಕ್ಕೆ ಙಕಾರವು ಆದ್ಯವಯವವಾಗಿ ಬಂದರೆ ಪ್ರತ್ಯಙ್+ಙ್ ಆತ್ಮಾ=ಪ್ರತ್ಯಙ್ಙಾತ್ಮಾ ಎಂದಾಗುತ್ತದೆ. ಸುಗಣ್+ಈಶಃ. ಇಲ್ಲಿ ಉಕಾರರೂಪ ಹ್ರಸ್ವದ ಪರದಲ್ಲಿ ಣಕಾರರೂಪ ಙಮ್ ಇದೆ. ಇದರ ಪರದಲ್ಲಿರುವ ಈಕಾರರೂಪ ಅಚಿಗೆ ಣಕಾರವು ಆದ್ಯವಯವವಾಗಿ ಬಂದರೆ ಸುಗಣ್ಣೀಶಃ ಎಂದಾಗುತ್ತದೆ. ಸನ್+ ಅಚ್ಯುತಃ. ಅಕಾರರೂಪ ಹ್ರಸ್ವದ ಪರವಾಗಿ ನಕಾರವು ಪದಾಂತವಾಗಿದೆ. ಅದರ ಪರದಲ್ಲಿರುವ ಅಕಾರರೂಪ ಅಚ್ಚಿಗೆ ನಕಾರವು ಆದ್ಯವಯವವಾಗಿ ಬಂದರೆ ಸನ್+ ನ್‌ಅಚ್ಯುತಃ ಸನ್ನಚ್ಯುತಃ ಎಂದಾಗುತ್ತದೆ.

(ರುತ್ವವಿಧಾಯಕ ಸೂತ್ರ)

## ೯೦. ಸಮಃ ಸುಟಿ ॥ ೮-೩-೫ ॥

**ಸಮೋ ರುಃ ಸುಟಿ ॥**

ದ್ವಿಪದ ಸೂತ್ರ. ಸಮಃ ಷಷ್ಠೀ. "ಮತುವಸೋ ರು ಸಂಬುದ್ಧೌ" ಸೂತ್ರದಿಂದ "ರುಃ" ಅನುವೃತ್ತವಾಗುತ್ತದೆ. ಸುಟಿ ಸಪ್ತಮಿಯಾದುದರಿಂದ "ತಸ್ಮಿನ್ನಿತಿ"– ಪರಿಭಾಷೆಯಿಂದ ಸುಟಿನ ಅವ್ಯವಹಿತ ಪೂರ್ವಕ್ಕೆ ಕಾರ್ಯವೆಂದು ತಿಳಿಯಬೇಕು. **ಸೂತ್ರಾರ್ಥ.** ಸುಟ್ ಪರದಲ್ಲಿರುವಾಗ ಸಮಿಗೆ ರು ಆದೇಶ ಬರುತ್ತದೆ. ಷಷ್ಠ್ಯಂತಕ್ಕೆ ಆದೇಶ ಹೇಳಿದುದರಿಂದ "ಅಲೋಂತ್ಯಸ್ಯ" ಪರಿಭಾಷೆಯಿಂದ ಸಮಿನ

ಅಂತ್ಯಕ್ಕೆ ರುತ್ವ. ಮಕಾರಕ್ಕೆ ರುತ್ವವೆಂದಾಯಿತು. ಸಮ್ + ಸ್ಕರ್ತಾ. ಸಮ್ ಉಪಸರ್ಗ. ಇದು ಪೂರ್ವದಲ್ಲಿರುವಾಗ ಕೃಞ್ ಧಾತುವಿಗೆ ತೃಚ್ ಪ್ರತ್ಯಯ. ತೃಚ್ ಪರವಾದಾಗ ಧಾತುವಿನ ಋಕಾರಕ್ಕೆ ಗುಣ. ಕರ್ತಾ ಎಂದು ರೂಪವಾಗುತ್ತದೆ. "ಸಂಪರಿಭ್ಯಾಂ ಕರೋತೌ ಭೂಷಣೇ" ಎಂಬ ಸೂತ್ರದಿಂದ ಅಲಂಕರಿಸುವುದು ಎಂಬರ್ಥದಲ್ಲಿ ಸಮಿನ (ಮತ್ತು ಪರಿ ಎಂಬುದರ) ಪರದಲ್ಲಿರುವ ಕೃಞ್ ಧಾತುವಿಗೆ ಸುಟಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಸಮ್ + ಸ್ ಕರ್ತಾ ಇಲ್ಲಿ ಸಮಿನ ಪರದಲ್ಲಿ ಸುಟ್ (ಸಕಾರ) ಬಂದುದರಿಂದ ಸಮಿನ ಮಕಾರಕ್ಕೆ ರುತ್ವ. ರುವಿನಲ್ಲಿ ಉಕಾರ ಉಚ್ಚಾರಣಾರ್ಥವಾಗಿ ಹೇಳಿದೆ. ಸರ್ ಸ್ಕರ್ತಾ ಎಂದಾಗುತ್ತದೆ.

(ಅನುನಾಸಿಕ ವಿಧಾಯಕ ಸೂತ್ರ)

## ೯೧. ಅತ್ರಾನುನಾಸಿಕಃ ಪೂರ್ವಸ್ಯ ತು ವಾ ॥ ೮-೩-೨ ॥

### ಅತ್ರ ರುಪ್ರಕರಣೇ ರೋಃ ಪೂರ್ವಸ್ಯಾನುನಾಸಿಕೋ ವಾ ॥

ಅತ್ರ, ಅನುನಾಸಿಕಃ, ಪೂರ್ವಸ್ಯ, ತು, ವಾ ॥ ಐದು ಪದಗಳುಳ್ಳ ಸೂತ್ರ. "ಮತುವಸೋರುಃ ಸಂಬುದ್ಧೌ" ಎಂದು ಹಿಂದಿನ ಸೂತ್ರ. ಆಮೇಲೆ ಈ ಸೂತ್ರ ಹೇಳಿದುದರಿಂದ ಅತ್ರ ಅಂದರೆ (ಇಲ್ಲಿ) ಈ ರುಪ್ರಕರಣದಲ್ಲಿ ಎಂದರ್ಥ ಲಬ್ಧವಾಗುತ್ತದೆ. ಅಷ್ಟಾಧ್ಯಾಯಿಯಲ್ಲಿ ರುತ್ವವನ್ನು ಹೇಳುವ ಸೂತ್ರಗಳು ಎರಡು. ಒಂದು ಹಿಂದೆ ಹೇಳಿದ ಸೂತ್ರ. ಇನ್ನೊಂದು "ಸಸಜುಷೋರುಃ" ಎಂಬುದು. ಅದು ಎರಡನೇ ಪಾದದಲ್ಲಿ ಇದೆ. ಪೂರ್ವಸ್ಯ ಎಂಬುದು ಸಾಪೇಕ್ಷಿತವಾದುದರಿಂದ ಪ್ರಕರಣದಿಂದ ಲಬ್ಧವಾದ ರುವಿನ ಪೂರ್ವಕ್ಕೆ ಎಂದು ತಿಳಿಯುತ್ತದೆ. ತು ಸ್ಪಷ್ಟಾರ್ಥಕ. **ಸೂತ್ರಾರ್ಥ.** ಈ ಮೂರನೇ ಪಾದದಲ್ಲಿ ಹೇಳಿರುವ ರುಪ್ರಕರಣದಲ್ಲಿ ರುವಿನ ಪೂರ್ವಕ್ಕೆ ಅನುನಾಸಿಕವು ವಿಕಲ್ಪವಾಗಿ ಬರುತ್ತದೆ. ಸರ್ + ಸ್ಕರ್ತಾ ಎಂದಿರುವಾಗ ರೇಫದ ಪೂರ್ವದಲ್ಲಿರುವ ಅಕಾರವು ಅನುನಾಸಿಕವಾಗುತ್ತದೆ. ಸँರ್ + ಸ್ಕರ್ತಾ ಅನುನಾಸಿಕ ಬಾರದಿರುವಾಗ ಅನುಸ್ವಾರವನ್ನು ಹೇಳುತ್ತಾನೆ.

(ಅನುಸ್ವಾರಾಗಮವಿಧಾಯಕಸೂತ್ರ)

## ೯೨. ಅನುನಾಸಿಕಾತ್ಪರೋಽನುಸ್ವಾರಃ ॥ ೮-೩-೪ ॥

### ಅನುನಾಸಿಕಂ ವಿಹಾಯ ರೋಃ ಪೂರ್ವಸ್ಮಾತ್ಪರೋಽನುಸ್ವಾರಾಗಮಃ ॥

ಅನುನಾಸಿಕಾತ್, ಪರಃ, ಅನುಸ್ವಾರಃ ॥ ತ್ರಿಪದಸೂತ್ರ. ಅನುನಾಸಿಕಾತ್ ಎಂಬಲ್ಲಿ ಲ್ಯಬಂತಪದ ಲುಪ್ತವಾಗಿರುವಾಗ ಬಂದ ಪಂಚಮೀ. "ಪ್ರಾಸಾದಾತ್ ವೀಕ್ಷತೇ" ಅಂದರೆ ಪ್ರಾಸಾದಮಾರುಹ್ಯ ವೀಕ್ಷತೇ ಎಂದು ತಿಳಿಯಬೇಕು. ಆರುಹ್ಯ (ಹತ್ತಿ) ಎಂಬುದು ಲೋಪಹೊಂದಿದೆ. ಆಗ ಪಂಚಮೀ ಬರುತ್ತದೆ. ಹಾಗೇ ಇಲ್ಲಿ

ಪಂಚಮೀ ಬಂದಿದೆ. ಅನುನಾಸಿಕವನ್ನು ಮಾಡದಿರುವಾಗ (ಬಿಟ್ಟು) ಎಂದರ್ಥ. ಹಿಂದಿನ ಸೂತ್ರದಿಂದ "ಪೂರ್ವಸ್ಯ" ಎಂಬುದು ಅನುವೃತ್ತವಾಗಿ ಇಲ್ಲಿ ಪಂಚಮ್ಯಂತವಾಗಿ ವಿಪರಿಣತವಾಗುತ್ತದೆ. ಪರಃ ಎಂಬಲ್ಲಿ ಅನ್ವಯ. ರುವಿನ ಪೂರ್ವದ ಪರವಾಗಿ ಎಂದರ್ಥವಾಗುತ್ತದೆ. ಇದರಿಂದ ಅನುಸ್ವಾರವು ಮಧ್ಯೆ ಬರುವುದರಿಂದ ಆಗಮವಾಗುತ್ತದೆ. ಸೂತ್ರಾರ್ಥ. ಅನುನಾಸಿಕ ಬಾರದಿರುವಾಗ ರುವಿನ ಪೂರ್ವಾಕ್ಷರದ ಪರವಾಗಿ ಅನುಸ್ವಾರವು ಆಗಮವಾಗಿ ಬರುತ್ತದೆ. ಸಂರ್ + ಸ್ಕರ್ತಾ ಎಂದಾಗುತ್ತದೆ. ಈಗ ರುವಿನ ರೇಫಕ್ಕೆ ವಿಸರ್ಗವನ್ನು ವಿಧಿಸುತ್ತಾನೆ.

(ವಿಸರ್ಗವಿಧಾಯಕಸೂತ್ರ)

## ೯೩. ಖರವಸಾನಯೋರ್ವಿಸರ್ಜನೀಯಃ ॥ ೮-೩-೧೫ ॥

**ಖರಿ ಅವಸಾನೇ ಚ ಪದಾಂತಸ್ಯ ರೇಫಸ್ಯ ವಿಸರ್ಗಃ ॥**

ಖರವಸಾನಯೋಃ, ವಿಸರ್ಜನೀಯಃ ॥ ದ್ವಿಪದಸೂತ್ರ. "ರೋ ರಿ" ಸೂತ್ರದಿಂದ "ರಃ" ಎಂಬ ಷಷ್ಠ್ಯಂತಪದವು ಅನುವೃತ್ತವಾಗುತ್ತದೆ. "ಪದಸ್ಯ" ಅಧಿಕಾರ. ಅದಕ್ಕೆ ರಃ ಎಂಬುದು ವಿಶೇಷಣವಾದುದರಿಂದ ರೇಫವೇ ಅಂತವಾದ ಪದಕ್ಕೆ ಎಂದರ್ಥವಾಗುತ್ತದೆ. ಇದೂ ಷಷ್ಠಿಯಾದುದರಿಂದ "ಅಲೋಂತ್ಯಸ್ಯ" ಎಂಬುದರಿಂದ ಪದದ ಅಂತ್ಯಕ್ಕೆ ಕಾರ್ಯವೆಂದು ತಿಳಿಯುತ್ತದೆ. ಅಂತ್ಯವಾದುದು ರೇಫವೇ. ಖರವಸಾನಯೋಃ ಸಪ್ತಮೀ ದ್ವಿವಚನ. ಇದು ನಿಮಿತ್ತ. ಖರ್ ಚ ಅವಸಾನಂ ಚ ಖರವಸಾನೇ, ತಯೋಃ, ಖರವಸಾನಯೋಃ. ಸಪ್ತಮಿಯಾದುದರಿಂದ ಅವ್ಯವಹಿತ ಪೂರ್ವಕ್ಕೆ ಕಾರ್ಯ. ಸೂತ್ರಾರ್ಥ. ಖರ್, ಅವಸಾನವೂ ಪರದಲ್ಲಿರುವಾಗ ಪದದ ಕೊನೆಯಲ್ಲಿರುವ ರೇಫಕ್ಕೆ ವಿಸರ್ಗ ಬರುತ್ತದೆ. "ವಿರಾಮೋಽವಸಾನಮ್" ಎಂದು ಮುಂದೆ ವರ್ಣಗಳಿಲ್ಲದಿರುವುದೇ ಅವಸಾನವೆಂದು ತಿಳಿಯಬೇಕು. ಪ್ರಕೃತ ಸರ್ ಎಂಬಲ್ಲಿ ರೇಫವು ಪದದ ಕೊನೆಯಲ್ಲಿ ಇದೆ. ಇದಕ್ಕೆ ಖರಿನಲ್ಲಿ ಸೇರಿದ ಸಕಾರವು ಪರದಲ್ಲಿದೆ. ಆಗ ಸँಃ+ಸ್ಕರ್ತಾ. ಸಂಃ+ಸ್ಕರ್ತಾ ಎಂದಾಗುತ್ತದೆ. ಈಗ ವಿಸರ್ಗಕ್ಕೆ ಸಕಾರವನ್ನು ವಾರ್ತಿಕದಿಂದ ಹೇಳುತ್ತಾನೆ.

(ವಿಸರ್ಗಕ್ಕೆ ಸಕಾರವಿಧಾಯಕವಾರ್ತಿಕ)

**ವಾ॥ ಸಂಪುಂಕಾನಾಂ ಸೋ ವಕ್ತವ್ಯಃ ॥**

**ಸँಸ್ಸ್ಕರ್ತಾ । ಸಂಸ್ಸ್ಕರ್ತಾ ॥**

ತ್ರಿಪದವಾರ್ತಿಕ. ಸಮ್ ಚ ಪುಮ್ ಚ ಕಾನ್ ಚ ಸಂಪುಂಕಾನಃ, ತೇಷಾಂ ಸಂಪುಂಕಾನಾಂ. ಸಮ್, ಪುಮ್, ಕಾನ್ ಇವುಗಳ ವಿಸರ್ಗಕ್ಕೆ ಸಕಾರವನ್ನು ಹೇಳಬೇಕು ಎಂದರ್ಥ. ಪ್ರಕೃತ ಸಮಿನ ವಿಸರ್ಗವಿರುವುದರಿಂದ ಅದಕ್ಕೆ ಸಕಾರಾದೇಶ

ಆಗ ಎರಡು ರೂಪಗಳಾಗುತ್ತವೆ. ಅನುನಾಸಿಕದ ರೂಪ ಸಁಸ್ಕೃತರ್ತಾ. ಅನುಸ್ವಾರದ ರೂಪ ಸಂಸ್ಸ್ಕರ್ತಾ. ಇಲ್ಲಿ ದ್ವಿತ್ವಾದಿಗಳಿಂದ ಹಲವು ರೂಪಗಳಾದರೂ ಬಾಲರಿಗೆ ದುರ್ಬೋಧವೆಂದು ಹೇಳಲಿಲ್ಲ.

(ಪುಮಿಗೆ ರುತ್ವವಿಧಾಯಕಸೂತ್ರ)

## ೯೪. ಪುಮಃ ಖಯ್ಯಮ್ಪರೇ ॥ ೮-೩-೬ ॥

**ಅಮ್ಪರೇ ಖಯಿ ಪುಮೋ ರುಃ । ಪುँಸ್ಕೋಕಿಲಃ । ಪುಂಸ್ಕೋಕಿಲಃ ॥**

ಪುಮಃ, ಖಯಿ, ಅಮ್ಪರೇ ॥ ತ್ರಿಪದಸೂತ್ರ. ರುಃ ಎಂಬುದು ಅನುವೃತ್ತವಾಗುತ್ತದೆ. ಅಮ್ ಪರೋ ಯಸ್ಮಾತ್ ಸಃ ಅಮ್ಪರಃ. ಅಮ್ ಪ್ರತ್ಯಾಹಾರ. ಇದು ಪರವಾಗಿರುವುದು ಎಂದರ್ಥ. ಖಯ್‌ಗೆ ಇದು ವಿಶೇಷಣ. ಸಪ್ತಮಿಯಾದುದರಿಂದ ಅಮ್ ಪರವಾಗಿರುವ ಖಯ್ ಪರವಾದಾಗ ಪೂರ್ವಕ್ಕೆ ಕಾರ್ಯ. ಪುಮಃ ಷಷ್ಠೀ. ಸೂತ್ರಾರ್ಥ. ಅಮ್ ಪರವಾಗಿರುವ ಖಯ್ ಪರವಾಗಿರುವಾಗ ಪುಮಿಗೆ ರು ಆದೇಶವಾಗಿ ಬರುತ್ತದೆ. ಷಷ್ಠಿಯಾದುದರಿಂದ "ಅಲೋಽನ್ತ್ಯಸ್ಯ" ಪರಿಭಾಷೆಯಿಂದ ಪುಮಿನ ಅಂತ್ಯವಾದ ಮಕಾರಕ್ಕೆ ರುತ್ವ. ಪುಮ್+ಕೋಕಿಲಃ ಎಂದಿರುವಾಗ ಖಯ್ ಕಕಾರ (ಕೋ) ಇದಕ್ಕೆ ಓ ರೂಪವಾದ (ಕ್+ಓ) ಅಮ್ ಪರವಾಗಿದೆ. ಅಮ್ ಪರವಾದ ಖಯ್ ಪರವಾದುದರಿಂದ ಪುಮಿನ ಮಕಾರಕ್ಕೆ ರುತ್ವ ಬಂದರೆ ಪುರ್+ಕೋಕಿಲಃ ಎಂದಾಗುತ್ತದೆ. ಇಲ್ಲಿ ಹಿಂದಿನಂತೇ ರುತ್ವ ಪ್ರಕರಣದಲ್ಲಿ ಹೇಳಿದ ಅನುನಾಸಿಕ, ಅನುಸ್ವಾರಗಳು ಬಂದರೆ ಪುँರ್+ಕೋಕಿಲಃ, ಪುಂರ್+ಕೋಕಿಲಃ ಎಂದು ಎರಡು ರೂಪಗಳಾಗುತ್ತವೆ. ಆಗ "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ರೇಫಕ್ಕೆ ವಿಸರ್ಗ. "ಸಂಪುಂಕಾನಾಂ ಸೋ ವಕ್ತವ್ಯಃ" ವಾರ್ತಿಕದಿಂದ (ಪುಮ್ ಸೇರಿರುವುದರಿಂದ) ಬಂದಿರುವ ವಿಸರ್ಗಕ್ಕೆ ಸಕಾರಾದೇಶ. ಪುँಸ್ಕೋಕಿಲಃ, ಪುಂಸ್ಕೋಕಿಲಃ ಎಂದಾಗುತ್ತದೆ. ಗಂಡು ಕೋಗಿಲೆ ಎಂದರ್ಥ.

(ನಾಂತಪದಕ್ಕೆ ರುತ್ವವಿಧಾಯಕ ಸೂತ್ರ)

## ೯೫. ನಶ್ಛವ್ಯಪ್ರಶಾನ್ ॥ ೮-೩-೭ ॥

**ಅಮ್ಪರೇ ಛವಿ ನಾಂತಸ್ಯ ಪದಸ್ಯ ರುಃ, ನ ತು ಪ್ರಶಾನ್ ಶಬ್ದಸ್ಯ ॥**

ನಃ, ಛವಿ, ಅಪ್ರಶಾನ್ ॥ ತ್ರಿಪದಸೂತ್ರ. ಹಿಂದಿನ ಸೂತ್ರದಿಂದ "ಅಮ್ಪರೇ" ಅನುವೃತ್ತವಾಗುತ್ತದೆ. ಛವಿ ಎಂಬಲ್ಲಿ ಅನ್ವಯ. ಪದಸ್ಯ ಅಧಿಕಾರ. "ನಃ" ಷಷ್ಠ್ಯಂತವು ಅದಕ್ಕೆ ವಿಶೇಷಣವಾದುದರಿಂದ ನಾಂತವಾದ ಪದಕ್ಕೆ ಎಂದು ಲಬ್ಧವಾಗುತ್ತದೆ "ರುಃ" ಅನುವೃತ್ತವಾಗುತ್ತದೆ. ಸೂತ್ರಾರ್ಥ. ಅಮ್ ಪರವಾದ ಛವ್ (ಪ್ರತ್ಯಾಹಾರ) ಪರವಾದಾಗ ನಕಾರಾಂತವಾದ ಪದಕ್ಕೆ ರುತ್ವ ಬರುತ್ತದೆ.

("ಅಲೋಂತ್ಯಸ್ಯ" ಪರಿಭಾಷೆಯಿಂದ ಪದದ ಕೊನೆಯ ನಕಾರಕ್ಕೆ ರುತ್ವವೆಂದು ತಿಳಿಯಬೇಕು.) ಪ್ರಶಾನ್ ಶಬ್ದಕ್ಕೆ ಈ ರುತ್ವವಿಲ್ಲ. ಪ್ರಶಾನ್ ಎಂಬಲ್ಲಿ ನಕಾರ ಕೊನೆಯಲ್ಲಿದ್ದರೂ ಅದಕ್ಕೆ ಅಮ್ಪರ ಛವ್ ಪರವಾದರೂ ರುತ್ವವಿಲ್ಲ. ಚಕ್ರಿನ್ + ತ್ರಾಯಸ್ವ ಇಲ್ಲಿ ಪದಾಂತವಾದ ನಕಾರವಿದೆ. ಅದಕ್ಕೆ ತಕಾರರೂಪ ಛವ್ ಪರದಲ್ಲಿದೆ. ಅದಕ್ಕೆ ರೇಫರೂಪ (ತ್ + ರ್ + ಅ) ಅಮ್ ಪರವಾದುದರಿಂದ ಅಮ್ ಪರವಾದ ಛವ್ ಆಯಿತು. ಆಗ ನಕಾರಕ್ಕೆ ರುತ್ವಬಂದರೆ ಚಕ್ರಿರ್ + ತ್ರಾಯಸ್ವ ಎಂದಾಗುತ್ತದೆ. "ಅತ್ರಾನುನಾಸಿಕಃ ಪೂರ್ವಸ್ಯ ತು ವಾ" ಸೂತ್ರದಿಂದ ಅನುನಾಸಿಕವೂ "ಅನುನಾಸಿಕಾತ್ಪರೋನುಸ್ವಾರಃ" ಸೂತ್ರದಿಂದ ಅನುಸ್ವಾರವೂ ಬಂದರೆ ಚಕ್ರಿರ್ + ತ್ರಾಯಸ್ವ, ಚಕ್ರಿಂರ್ + ತ್ರಾಯಸ್ವ ಎಂದಿರುವಾಗ "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ಆ ರೇಫಗಳಿಗೆ ವಿಸರ್ಗಬಂದಾಗ ಅವುಗಳಿಗೆ ಸಕಾರ ಹೇಳಲು ಬೇರೆ ಸೂತ್ರವನ್ನು ಹೇಳುತ್ತಾನೆ. ಹಿಂದೆ ವಾರ್ತಿಕದಲ್ಲಿ ಸಮ್, ಪುಮ್, ಕಾನ್ ಮೂರು ಶಬ್ದಗಳಲ್ಲಿ ಮಾತ್ರ ಸತ್ವ ಹೇಳಿದುದರಿಂದ ಅದರಿಂದ ಬರುವುದಿಲ್ಲ.

(ವಿಸರ್ಗಕ್ಕೆ ಸತ್ವವಿಧಾಯಕ ಸೂತ್ರ)

## ೯೬. ವಿಸರ್ಜನೀಯಸ್ಯ ಸಃ ॥ ೮-೩-೩೪ ॥

**ಖರಿ ॥ ಚಕ್ರಿಸ್ತ್ರಾಯಸ್ವ, ಚಕ್ರಿಂಸ್ತ್ರಾಯಸ್ವ । ಅಪ್ರಶಾನ್ ಕಿಮ್? ಪ್ರಶಾನ್ ತನೋತಿ । ಪದಸ್ಯೇತಿ ಕಿಮ್? ಹಂತಿ ॥**

ದ್ವಿಪದ ಸೂತ್ರ. ಅನುವೃತ್ತಿಯನ್ನು ಮಾತ್ರ ವೃತ್ತಿಯಲ್ಲಿ ಹೇಳಿದೆ. "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ "ಖರಿ" ಅನುವೃತ್ತವಾಗುತ್ತದೆ. ಸಮಾಸದಲ್ಲಿ ಏಕದೇಶಕ್ಕೆ ಅನ್ವಯವಿಲ್ಲವಾದರೂ ಒಂದುಕಡೆಮಾತ್ರ ಸ್ವರಿತಹೇಳಿದರೆ ಆಗ ಅದಕ್ಕೆ ಅನುವೃತ್ತಿ ಇದೆಯೆಂದು ತಿಳಿಯಬೇಕು. ಇಲ್ಲಿ ಖರಿ ಎಂಬಲ್ಲಿ ಮಾತ್ರ ಸ್ವರಿತತ್ವವಿರುವುದರಿಂದ ಅದಕ್ಕೆ ಮಾತ್ರ ಅನುವೃತ್ತಿ. **ಸೂತ್ರಾರ್ಥ.** ಖರ್ ಪರವಾದಾಗ ವಿಸರ್ಗಕ್ಕೆ ಸಕಾರಬರುತ್ತದೆ. ಪ್ರಕೃತ ವಿಸರ್ಗಕ್ಕೆ ತಕಾರರೂಪ ಖರ್ ಪರವಾದುದರಿಂದ ಸಕಾರ ಬಂದರೆ ಚಕ್ರಿಸ್ ತ್ರಾಯಸ್ವ, ಚಕ್ರಿಂಸ್ ತ್ರಾಯಸ್ವ ಎಂದು ಎರಡು ರೂಪಗಳಾಗುತ್ತವೆ. ಪ್ರಶಾನ್ ಶಬ್ದಕ್ಕೆ ರುತ್ವವಿಲ್ಲವೇಕೆ? ಪ್ರಶಾನ್ + ತನೋತಿ ನಿಷೇಧ ಹೇಳದಿದ್ದರೆ ಇಲ್ಲಿಯೂ ಪದಾಂತನಕಾರಕ್ಕೆ ಅಕಾರರೂಪ ಅಮ್ ಪರವಾದ ತಕಾರರೂಪ ಛವ್ ಪರವಾದುದರಿಂದ ರುತ್ವ ಬರಬೇಕಾಗುತ್ತದೆ, ಅದು ಇಷ್ಟವಲ್ಲ. ಆದುದರಿಂದ ನಿಷೇಧಹೇಳಿದೆ. ಪದಸ್ಯ ಕಿಮ್? ಪದಾಂತವಾದ ನಕಾರವೆಂದುದು ಏಕೆ? ಹನ್ತಿ. ಹನ್ ಧಾತುವಿಗೆ ಲಟಿನಲ್ಲಿ ತಿಪ್ ಪ್ರತ್ಯಯಬಂದಾಗ ಹನ್ + ತಿ ಎಂದಿರುವಾಗ ನಕಾರಕ್ಕೆ ಛವ್ ಪರವಾದುದರಿಂದ ರುತ್ವಬರಬೇಕಾಗುತ್ತದೆ. ಪದಾಂತವೆಂದುದರಿಂದ ಇಲ್ಲಿ ನಕಾರವು (ಪದಾಂತವಾಗದೆ) ಪದಮಧ್ಯದಲ್ಲಿರುವುದರಿಂದ ರುತ್ವ ಬರುವುದಿಲ್ಲ.

ಗ್ಗಕ್ಷ್ಗ್ಗಪೌಚ” ಸೂತ್ರದಿಂದ ಕಕಾರಪರವಾದುದರಿಂದ ಜಿಹ್ವಾಮೂಲೀಯ ಪ್ರಾಪ್ತ ವಾದರೆ ಅದಕ್ಕೆ ಅಪವಾದವಾಗಿ “ಸಂಪುಂಕಾನಾಂ ಸೋ ವಕ್ತವ್ಯಃ” ವಾರ್ತಿಕದಿಂದ ಸಕಾರಾದೇಶ. ಕಾಸ್‌ಕಾನ್, ಕಾಂಸ್ಕಾನ್, ಎಂದು ಎರಡು ರೂಪಗಳಾಗುತ್ತವೆ.

(ಹ್ರಸ್ವಕ್ಕೆ ತುಗಾಗಮವಿಧಾಯಕಸೂತ್ರ)

## ೧೦೧. ಛೇ ಚ ॥ ೬-೧-೭ ॥

**ಹ್ರಸ್ವಸ್ಯ ಛೇ ತುಕ್ । ಶಿವಚ್ಛಾಯಾ ॥**

ದ್ವಿಪದ ಸೂತ್ರ. ಛೇ ಛಕಾರದ ಸಪ್ತಮೀ. “ಹ್ರಸ್ವಸ್ಯ ಪಿತಿ ಕೃತಿ ತುಕ್” ಸೂತ್ರದಿಂದ “ಹ್ರಸ್ವಸ್ಯ” “ತುಕ್” ಅನುವೃತ್ತವಾಗುತ್ತವೆ. **ಸೂತ್ರಾರ್ಥ.** ಹ್ರಸ್ವಕ್ಕೆ ಛಕಾರಪರವಾದಾಗ ತುಗಾಗಮ ಬರುತ್ತದೆ. ಶಿವಸ್ಯ ಛಾಯಾ, ಶಿವಚ್ಛಾಯಾ. ಶಿವ+ಛಾಯಾ ಎಂದಿರುವಾಗ ವಕಾರದ ಮೇಲಿರುವ ಅಕಾರ ಹ್ರಸ್ವ. ಅದಕ್ಕೆ ಛಕಾರ ಪರವಾಗಿದೆ. ತುಕ್ ಕಿತ್ತಾದುದರಿಂದ “ಆದ್ಯಂತೌ ಟಕಿತೌ” ಸೂತ್ರದಿಂದ ಹ್ರಸ್ವದ ಅಂತಾವಯವವಾಗಿ ಬರುತ್ತದೆ. ಅಲ್ಲಿ ಉಕಾರ ಉಚ್ಚಾರಣಾರ್ಥ, ತ್ ಉಳಿಯುತ್ತದೆ. ಶಿವತ್+ಛಾಯಾ ಎಂದಾದಾಗ ತಕಾರಕ್ಕೆ ಛಕಾರದ ಯೋಗವಿರುವುದರಿಂದ “ಸ್ತೋಃ ಶ್ಚುನಾಶ್ಚುಃ” ಸೂತ್ರದಿಂದ ತಕಾರಕ್ಕೆ ಚಕಾರಾದೇಶ. ಶಿವಚ್ಛಾಯಾ. ಶಿವನಕಾಂತಿ.

(ವಿಕಲ್ಪ ತುಗಾಗಮವಿಧಾಯಕ ಸೂತ್ರ)

## ೧೦೨. ಪದಾಂತಾದ್ವಾ ॥ ೬-೧-೭೬ ॥

**ದೀರ್ಘಾತ್ ಪದಾಂತಾಚ್ಛೇ ತುಗ್ ವಾ । ಲಕ್ಷ್ಮೀಚ್ಛಾಯಾ, ಲಕ್ಷ್ಮೀಛಾಯಾ ॥**

ಪದಾಂತಾತ್, ವಾ ॥ ದ್ವಿಪದ ಸೂತ್ರ. “ದೀರ್ಘಾತ್” ಎಂಬ ಸೂತ್ರವೂ “ಹಸ್ವಸ್ಯ ಪಿತಿ ಕೃತಿ ತುಕ್” ಸೂತ್ರದಿಂದ “ತುಕ್” “ಛೇಚ” ಸೂತ್ರದಿಂದ “ಛೇ” ಪದಗಳೂ ಅನುವೃತ್ತವಾಗುತ್ತವೆ. ದೀರ್ಘಾತ್ ಎಂಬುದಕ್ಕೆ ಪದಾಂತಾತ್ ಎಂಬಲ್ಲಿ ಅನ್ವಯ. **ಸೂತ್ರಾರ್ಥ.** ಪದದ ಕೊನೆಯಲ್ಲಿರುವ ದೀರ್ಘಕ್ಕೆ ಛಕಾರ ಪರವಾದಾಗ ತುಗಾಗಮ ವಿಕಲ್ಪವಾಗಿ ಬರುತ್ತದೆ. ದೀರ್ಘಾತ್ ಪಂಚಮಿಯಾದುದರಿಂದ ಅದರ ಪರವಾದ ಛಕಾರಕ್ಕೆ ತುಗಾಗಮವೇದರ್ಥವಾಗಬೇಕಿತ್ತು. ಆದರೆ ಜ್ಞಾಪಕದಿಂದ ದೀರ್ಘಕ್ಕೆ ತುಗೆಂದು ನಿರ್ಣೀತವಾಗಿದೆ. ಲಕ್ಷ್ಮ್ಯಾಃ ಛಾಯಾ, ಲಕ್ಷ್ಮೀಛಾಯಾ. ಇಲ್ಲಿ ಪದಾಂತವಾದ ದೀರ್ಘ ಈಕಾರ, ಅದಕ್ಕೆ ಛಕಾರ ಪರವಾದುದರಿಂದ ತುಗಾಗಮ ಬಂದರೆ (ಹಿಂದಿನಂತೆ ಅಂತಾವಯವ) ಲಕ್ಷ್ಮೀತ್ ಛಾಯಾ. ಆಗ ಶ್ಚುತ್ವದಿಂದ

ತಕಾರಕ್ಕೆ ಚಕಾರಾದೇಶ. ಲಕ್ಷ್ಮೀಚ್ಛಾಯಾ. ತುಗಾಗಮ ಬಾರದಿದ್ದರೆ ಲಕ್ಷ್ಮೀ ಛಾಯಾ ಎಂದೇ ಇರುತ್ತದೆ.

|| ಇತಿ ಹಲ್ ಸಂಧಿಃ ||

ಈ ರೀತಿಯಾಗಿ ಹಲ್ (ವ್ಯಂಜನ) ಗಳಿಗೆ ಬರುವ ಸಂಧಿಯು ಸಂಕ್ಷೇಪವಾಗಿ ವಿವೃತವಾಗಿದೆ.

ಇನ್ನು ಮುಂದೆ ವಿಸರ್ಗಕ್ಕೆ ಬರುವ ಸಂಧಿಗಳನ್ನು ವಿವರಿಸುತ್ತಾನೆ.

# ಅಥ ವಿಸರ್ಗಸಂಧಿಃ

(ವಿಸರ್ಗಕ್ಕೆ ಸಕಾರಹೇಳುವ ಸೂತ್ರ)

## ೧೦೪. ವಿಸರ್ಜನೀಯಸ್ಯ ಸಃ || ೮-೩-೩೪ ||

ಖರಿ || ವಿಷ್ಣುಸ್ತ್ರಾತಾ ||

ಇದು ಹಿಂದೆ ವಿವೃತವಾಗಿದೆ. (96 ಸೂ.) ವಿಸರ್ಗಕ್ಕೆ ಬರುವ ಆದೇಶಗಳನ್ನು ಹೇಳುವ ಪ್ರಕರಣವಾದುದರಿಂದ ತಿರುಗಿ ಹೇಳಿದೆ. "ವಿಸರ್ಜನೀಯಸ್ಯ" (ವಿಸರ್ಗಕ್ಕೆ) ಎಂಬ ಪದಕ್ಕೆ ಮುಂದೆ ಅನುವೃತ್ತಿ ಎಂದು ತಿಳಿಸಲೂ ಹೇಳಿದೆ. ವಿಷ್ಣು ಶಬ್ದಕ್ಕೆ ಪ್ರಥಮಾವಿಭಕ್ತಿ ಏಕವಚನದಲ್ಲಿ ಸುಪ್ರತ್ಯಯ. ಉಕಾರಉಚ್ಚಾರಣಾರ್ಥವಾದುದರಿಂದ ಸ್ ಉಳಿಯುತ್ತದೆ. ವಿಷ್ಣುಸ್ + ತ್ರಾತಾ "ಸಸಜುಷೋರುಃ" ಸೂತ್ರದಿಂದ ಪದಾಂತವಾದ ಸಕಾರಕ್ಕೆ ರುತ್ವ. ಅದಕ್ಕೆ "ಖರವಸಾನಯೋಃ ವಿಸರ್ಜನೀಯಃ" ಸೂತ್ರದಿಂದ ವಿಸರ್ಗ. ವಿಷ್ಣುಃ ತ್ರಾತಾ. ಇಲ್ಲಿ ತಕಾರರೂಪ ಖರ್ ಪರವಾದುದರಿಂದ ವಿಸರ್ಗಕ್ಕೆ ಸಕಾರಾದೇಶ. ವಿಷ್ಣುಸ್ತ್ರಾತಾ. ವಿಷ್ಣುವು ರಕ್ಷಕನು.

(ವಿಸರ್ಗಕ್ಕೆ ವಿಸರ್ಗವಿಧಾಯಕಸೂತ್ರ)

## ೧೦೫. ವಾ ಶರಿ || ೮-೩-೩೬ ||

ಶರಿ ವಿಸರ್ಗಸ್ಯ ವಿಸರ್ಗೋ ವಾ || ಹರಿಃ ಶೇತೇ, ಹರಿಶ್ಶೇತೇ ||

ದ್ವಿಪದಸೂತ್ರ. "ಶರ್ಪರೇ ವಿಸರ್ಜನೀಯಃ" ಹಿಂದಿನಸೂತ್ರ. ಇದರಿಂದ "ವಿಸರ್ಜನೀಯಃ" ಎಂಬುದಕ್ಕೆ ಅನುವೃತ್ತಿ. "ವಿಸರ್ಜನೀಯಸ್ಯ" ಎಂದು ಪ್ರಕರಣದಿಂದ ಲಬ್ಧವಾಗುತ್ತದೆ. ಶರಿ ಸಪ್ತಮೀ. **ಸೂತ್ರಾರ್ಥ.** ವಿಸರ್ಗಕ್ಕೆ ವಿಸರ್ಗ ವಿಧಾನಮಾಡಿದುದರಿಂದ ಸಕಾರಾದಿಗಳು ಬರುವುದಿಲ್ಲವೆಂದು ತಿಳಿಯುತ್ತದೆ. ಹರಿಸ್ + ಶೇತೇ. ಇಲ್ಲಿ ಹಿಂದಿನಂತೆ ಪದಾಂತಸಕಾರಕ್ಕೆ ರುತ್ವ. ಖರ್ ಪರವಾದುದರಿಂದ ಅದಕ್ಕೆ ವಿಸರ್ಗ. ಹರಿಃ + ಶೇತೇ. ಇಲ್ಲಿ ವಿಸರ್ಗಕ್ಕೆ ಶರಿನ ಶಕಾರಪರವಾದುದ

ರಿಂದ ವಿಕಲ್ಪವಾಗಿ ವಿಸರ್ಗವೇ ಉಳಿಯುತ್ತದೆ. ಬಾರದಿದ್ದರೆ "ವಿಸರ್ಜನೀಯಸ್ಯ ಸಃ" ಎಂಬುದರಿಂದ ಸಕಾರಾದೇಶ. ಹರಿಸ್+ಶೇತೇ. ಸಕಾರಕ್ಕೆ ಶಕಾರದ ಯೋಗವಿರುವುದರಿಂದ "ಸ್ತೋಃಶ್ಚುನಾ ಶ್ಚುಃ" ಸೂತ್ರದಿಂದ ಶಕಾರಾದೇಶ. ಹರಿಶ್+ಶೇತೇ=ಹರಿಶ್ಶೇತೇ. ಎರಡುರೂಪಗಳಾಗುತ್ತವೆ.

(ಸಕಾರಕ್ಕೆ ರುತ್ವವಿಧಾಯಕಸೂತ್ರ)

## ೧೦೫. ಸಸಜುಷೋರುಃ ॥ ೮-೨-೬೬ ॥

### ಪದಾಂತಸ್ಯ ಸಸ್ಯ ಸಜುಷಶ್ಚ ರುಃ ಸ್ಯಾತ್ ॥

ಸಸಜುಷೋಃ ರುಃ ॥ ದ್ವಿಪದಸೂತ್ರ. ಸಶ್ಚ ಸಜೂಶ್ಚ ಸಸಜುಷೌ, ತಯೋಃ ಸಸಜುಷೋಃ. ಸಕಾರಕ್ಕೂ ಸಜುಷ್ ಶಬ್ದಕ್ಕೂ ಎಂದರ್ಥ. "ಪದಸ್ಯ" ಅಧಿಕಾರ. ಅದಕ್ಕೆ "ಸಸಜುಷೋಃ" ವಿಶೇಷಣ. "ಯೇನವಿಧಿಸ್ತದಂತಸ್ಯ" ಪರಿಭಾಷೆಯಿಂದ ಸಕಾರಾಂತವಾದ ಪದಕ್ಕೂ ಸಜುಷ್ ಅಂತವಾದ ಪದಕ್ಕೂ ಎಂದರ್ಥ. "ಅಲೋಂತ್ಯಸ್ಯ" ಸೂತ್ರದಿಂದ ಪದದ ಅಂತ್ಯ ಸಕಾರಕ್ಕೂ ಸಜುಷಿನ ಅಂತ್ಯಷಕಾರಕ್ಕೂ ಎಂದು ಫಲಿತವಾಗುತ್ತದೆ. ರುವಿನಲ್ಲಿ ಉಕಾರ "ಉಪದೇಶೇಜನುನಾಸಿಕ ಇತ್" ಎಂಬುದರಿಂದ ಇತ್ ಸಂಜ್ಞೆಯನ್ನು ಹೊಂದಿ "ತಸ್ಯ ಲೋಪಃ" ಸೂತ್ರದಿಂದ ಲೋಪವಾಗುತ್ತದೆ. ಸೂತ್ರಾರ್ಥ. ಪದಾಂತವಾದ ಸಕಾರಕ್ಕೂ ಸಜುಷ್‌ಶಬ್ದಕ್ಕೂ (ಷಕಾರಕ್ಕೆ) ರುತ್ವ ಬರುತ್ತದೆ. ಶಿವಶಬ್ದದ ಮೇಲೆ ಪ್ರಥಮಾಏಕವಚನ ಸುಪ್ರತ್ಯಯ. ಶಿವಸ್ ಇಲ್ಲಿ ಪದದ ಕೊನೆಯಲ್ಲಿ ಸಕಾರಬಂದುದರಿಂದ ಇದಕ್ಕೆ ರುತ್ವ. ಶಿವರ್. ಇದಕ್ಕೆ ಅರ್ಚ್ಯಃ ಎಂಬ ಪದ ಮುಂದೆ ಇರುವಾಗ (ಶಿವರ್+ಅರ್ಚ್ಯಃ) ಕಾರ್ಯಾಂತರವನ್ನು ಹೇಳುತ್ತಾನೆ.

(ರುವಿಗೆ ಉಕಾರವಿಧಾಯಕಸೂತ್ರ)

## ೧೦೬. ಅತೋ ರೋರಪ್ಲುತಾದಪ್ಲುತೇ ॥ ೬-೧-೧೧೩ ॥

### ಅಪ್ಲುತಾದತಃ ಪರಸ್ಯ ರೋರುಃ ಸ್ಯಾದಪ್ಲುತೇಽತಿ ॥ ಶಿವೋಽರ್ಚ್ಯಃ ॥

ಅತಃ, ರೋಃ, ಅಪ್ಲುತಾತ್, ಅಪ್ಲುತೇ ॥ ನಾಲ್ಕುಪದಗಳುಳ್ಳ ಸೂತ್ರ. ಅತಃ ಪಂಚಮೀ, ತಪರಮಾಡಿದುದರಿಂದ ಹ್ರಸ್ವಾಕಾರ ಮಾತ್ರ ತೆಗೆದುಕೊಳ್ಳಬೇಕು. ಅಪ್ಲುತಾತ್ ಅದಕ್ಕೆ ವಿಶೇಷಣ. ಪ್ಲುತವಲ್ಲದ ಹ್ರಸ್ವಾಕಾರ. ಹ್ರಸ್ವಾಕಾರವೆಂದುದರಿಂದಲೇ ದೀರ್ಘಪ್ಲುತವ್ಯಾವೃತ್ತಿಯಾದರೂ ಲಕ್ಷ್ಯವಿಶೇಷದಲ್ಲಿ ಈ ಕಾರ್ಯ ತಪ್ಪಿಸಲು ಹೇಳಿರುತ್ತಾನೆ. ರೋಃ ಷಷ್ಠೀ. "ಋತಉತ್" ಸೂತ್ರದಿಂದ "ಉತ್" ಅನುವೃತ್ತವಾಗುತ್ತದೆ. ತಪರಮಾಡಿರುವುದರಿಂದ ಹ್ರಸ್ವಉಕಾರವೆಂದರ್ಥ. "ಏಙಃ ಪದಾಂತಾದತಿ" ಸೂತ್ರದಿಂದ "ಅತಿ" ಎಂಬ ಸಪ್ತಮ್ಯಂತಕ್ಕೆ ಅನುವೃತ್ತಿ. ಅಪ್ಲುತೇ

ಎಂಬುದು ಅದಕ್ಕೆ ವಿಶೇಷಣ. **ಸೂತ್ರಾರ್ಥ.** ಅಪ್ಲುತವಾದ ಹ್ರಸ್ವಅಕಾರದ ಪರದಲ್ಲಿರುವ ರುವಿಗೆ ಅಪ್ಲುತವಾದ ಹ್ರಸ್ವ ಅಕಾರವು ಪರವಾದಾಗ ಉಕಾರಾದೇಶ ಬರುತ್ತದೆ. ಶಿವರ್+ಅರ್ಚ್ಯಃ. ಇಲ್ಲಿ ವಕಾರದಮೇಲೆ ಹ್ರಸ್ವ ಅಕಾರವಿದೆ. ಅದರ ಪರದಲ್ಲಿ ರು ಬಂದಿದೆ. ಅದಕ್ಕೆ ಹ್ರಸ್ವ ಅಕಾರ (ಅರ್ಚ್ಯಃ) ಪರದಲ್ಲಿದೆ. ಆದುದರಿಂದ ಉತ್ವ ಬಂದರೆ ಶಿವಉ+ಅರ್ಚ್ಯ. ಇಲ್ಲಿ ಅಕಾರಕ್ಕೆ ಉಕಾರಪರವಾದುದರಿಂದ "ಆದ್ಗುಣಃ" ಸೂತ್ರದಿಂದ ಅಕಾರೋಕಾರಗಳಿಗೆ ಓಕಾರರೂಪ ಗುಣವು ಏಕಾದೇಶವಾಗಿ ಬರುತ್ತದೆ. ಶಿವೋ+ಅರ್ಚ್ಯಃ. ಇಲ್ಲಿ ಪದದ ಅಂತ್ಯದಲ್ಲಿರುವ ಏಙಿಗೆ (ಓ) ಹ್ರಸ್ವಾಕಾರಪರವಾದುದರಿಂದ "ಏಙಃ ಪದಾಂತಾದತಿ" ಸೂತ್ರದಿಂದ ಪೂರ್ವರೂಪವು ಓಕಾರಅಕಾರಗಳಿಗೆ ಏಕಾದೇಶವಾಗಿ ಬಂದರೆ "ಶಿವೋಽರ್ಚ್ಯಃ" ಎಂದಾಗುತ್ತದೆ. ಶಿವನು ಪೂಜ್ಯನು.

(ಉತ್ವವಿಧಾಯಕಸೂತ್ರ)

## ೧೦೭. ಹಶಿ ಚ ॥ ೬-೧-೧೧೪ ॥

**ತಥಾ ॥ ಶಿವೋ ವಂದ್ಯಃ ॥**

ದ್ವಿಪದ ಸೂತ್ರ. ಹಿಂದಿನ ಸೂತ್ರದಿಂದ "ಅತಃ, ರೋಃ ಅಪ್ಲುತಾತ್" ಈ ಮೂರುಪದಗಳು ಅನುವೃತ್ತವಾಗುತ್ತವೆ. "ಋತಉತ್" ಸೂತ್ರದಿಂದ "ಉತ್" ಎಂಬುದಕ್ಕೆ ಅನುವೃತ್ತಿ. ಇಲ್ಲಿ ನಿಮಿತ್ತಮಾತ್ರ ಬೇರೆ ಹೇಳಿದೆ. **ಸೂತ್ರಾರ್ಥ.** ಪ್ಲುತವಲ್ಲದ ಹ್ರಸ್ವಾಕಾರದ ಪರದಲ್ಲಿರುವ ರುವಿಗೆ ಹಶ್ (ಪ್ರತ್ಯಾಹಾರ) ಪರದಲ್ಲಿರುವಾಗ ಉಕಾರಾದೇಶ ಬರುತ್ತದೆ. ಶಿವಸ್+ವಂದ್ಯಃ ಎಂದಿರುವಾಗ ಹಿಂದಿನಂತೆ ಸಕಾರಕ್ಕೆ ಪದಾಂತದಲ್ಲಿರುವುದರಿಂದ "ಸಸಜುಷೋರುಃ" ಸೂತ್ರದಿಂದ ರುತ್ವ. ಶಿವರ್+ವಂದ್ಯಃ ಎಂದಿರುವಾಗ ಅಪ್ಲುತವಾದ ಅಕಾರದಲ್ಲಿರುವ ರುವಿಗೆ ವಕಾರರೂಪ ಹಶ್ ಪರವಾದುದರಿಂದ ಉಕಾರಾದೇಶ ಬಂದರೆ ಶಿವಉ+ವಂದ್ಯಃ ಎಂದಾಗುತ್ತದೆ. ಆಗ ಹಿಂದಿನಂತೆ "ಆದ್ಗುಣಃ" ಸೂತ್ರದಿಂದ ಗುಣ ಬಂದರೆ ಶಿವೋ ವಂದ್ಯಃ ಎಂದು ರೂಪವಾಗುತ್ತದೆ. ಇಲ್ಲಿ ರುವಿಗೆ ಉತ್ವವೆಂದುದರಿಂದ "ಸಸಜುಷೋರುಃ" ಸೂತ್ರದಿಂದ ಬಂದ ರುವಿಗೆ ಮಾತ್ರ ಉತ್ವವೆಂದು ತಿಳಿಯಬೇಕು. ಸ್ವಾಭಾವಿಕವಾಗಿರುವ ರೇಫಕ್ಕೆ ಪ್ರಾತರ್+ಗಚ್ಛ ಎಂಬಿವೇ ಮುಂತಾದ ಸ್ಥಳಗಳಲ್ಲಿ ಉತ್ವಬರುವುದಿಲ್ಲ. ಇದು ಮುಂದೆ ಸ್ಪಷ್ಟವಾಗುತ್ತದೆ.

(ರುವಿಗೆ ಯಕಾರಹೇಳುವಸೂತ್ರ)

## ೧೦೮. ಭೋ ಭಗೋ ಅಘೋ ಅಪೂರ್ವಸ್ಯ ಯೋಽಶಿ ॥ ೮-೩-೧೭ ॥

ಏತತ್ಪೂರ್ವಸ್ಯ ರೋರ್ಯಾದೇಶೋಽಶಿ । ದೇವಾ ಇಹ, ದೇವಾ-

**ಯಿಹ । ಭೋಸ್, ಭಗೋಸ್ ಅಘೋಸ್ ಇತಿ ಸಾಂತಾ ನಿಪಾತಾಃ । ತೇಷಾಂ ರೋರ್ಯತ್ವೇ ಕೃತೇ ॥**

ಭೋ ಭಗೋ ಅಘೋ ಅಪೂರ್ವಸ್ಯ, ಯಃ, ಅಶಿ ॥ ತ್ರಿಪದಸೂತ್ರ. ಭೋಸ್ ಚ ಭಗೋಸ್ ಚ ಅಘೋಸ್ ಚ ಅಶ್ಚ, ಭೋಭಗೋ ಅಘೋ ಅಃ, ಏತೇ ಪೂರ್ವೇ ಯಸ್ಮಾತ್ ಸಃ ಭೋಭಗೋ ಅಘೋ ಅಪೂರ್ವಃ, ತಸ್ಯ. ಭೋ....ಪೂರ್ವಸ್ಯ. ದ್ವಂದ್ವದ ಮೇಲೆ ಪೂರ್ವಶಬ್ದ ಹೇಳಿರುವುದರಿಂದ ಪ್ರತ್ಯೇಕಾನ್ವಯ ಮಾಡಿದರೆ ಭೋ ಪೂರ್ವವಾದ ಭಗೋ ಪೂರ್ವವಾದ, ಅಘೋ ಪೂರ್ವವಾದ ಅವರ್ಣ ಪೂರ್ವವಾದ ಎಂದರ್ಥವಾಗುತ್ತದೆ. ಇವುಗಳಿಗೆ ರುವಿನಲ್ಲಿ ಅನ್ವಯ. ಅವರ್ಣವೆಂದುದರಿಂದ "ಅಣುದಿತ್ಸವರ್ಣಸ್ಯ ಚಾಪ್ರತ್ಯಯಃ" ಸೂತ್ರದಿಂದ ಅಕಾರದ ಹದಿನೆಂಟು ಭೇದಕ್ಕೂ ಗ್ರಹಣವಿದೆ. **ಸೂತ್ರಾರ್ಥ.** ಭೋ ಪೂರ್ವವಾದ ಭಗೋ ಪೂರ್ವವಾದ, ಅಘೋ ಪೂರ್ವವಾದ ಅವರ್ಣ ಪೂರ್ವವಾದ ರುವಿಗೆ ಅಶ್ ಪರವಾದಾಗ ಯಕಾರಾದೇಶ ಬರುತ್ತದೆ. ಅಪೂರ್ವಕ್ಕೆ ಮೊದಲು ಉದಾಹರಣೆ ಹೇಳುತ್ತಾನೆ. ದೇವ ಶಬ್ದಕ್ಕೆ ಪ್ರಥಮಾ ಬಹುವಚನದಲ್ಲಿ ಜಸ್ ಪ್ರತ್ಯಯ. ದೇವಾಸ್ ಎಂದಿರುವಾಗ "ಸಸಜು ಷೋರುಃ" ಸೂತ್ರದಿಂದ ರುತ್ವ. ದೇವಾರ್ + ಇಹ ಎಂದಿರುವಾಗ ರುವಿಗೆ ಅಶಿನಲ್ಲಿ ಸೇರಿದ ಇಕಾರ ಪರವಾಗಿದೆ. ರುವಿನ ಪೂರ್ವದಲ್ಲಿ ಆಕಾರವಿದೆ. ಆದುದರಿಂದ ಅದಕ್ಕೆ ಯತ್ವ ಬಂದರೆ ದೇವಾಯ್ + ಇಹ ಎಂದಾಗುತ್ತದೆ ಅಕಾರ ಪೂರ್ವವಾದ ಯಕಾರಕ್ಕೆ ಇಕಾರರೂಪ ಅಶ್ ಪರವಾದುದರಿಂದ "ಲೋಪಃ ಶಾಕಲ್ಯಸ್ಯ" ಸೂತ್ರದಿಂದ ವಿಕಲ್ಪವಾಗಿ ಯಕಾರಕ್ಕೆ ಲೋಪ. ದೇವಾ ಇಹ. ಲೋಪ ಬಾರದಿದ್ದರೆ ದೇವಾಯಿಹ ಎಂದಾಗುತ್ತದೆ. ಭೋಸ್, ಭಗೋಸ್, ಅಘೋಸ್, ಈ ಮೂರೂ ಸಕಾರಾಂತ ವಾದ ನಿಪಾತಗಳು. ಇವುಗಳಲ್ಲಿ ಪದಾಂತದಲ್ಲಿ "ಸಸಜುಷೋರುಃ" ಸೂತ್ರದಿಂದ ರುತ್ವ ಮಾಡಿದರೆ ಭೋರ್, ಭಗೋರ್, ಅಘೋರ್, ಎಂದಾಗುತ್ತದೆ. ಇವುಗಳಿಗೆ ದೇವಾಃ ಎಂಬ ಪದವು ಪರವಾದಾಗ ಪ್ರಕೃತ ಸೂತ್ರದಿಂದ ಯತ್ವಮಾಡಿದರೆ ಭೋಯ್ ದೇವಾಃ, ಭಗೋಯ್ + ದೇವಾಃ, ಅಘೋಯ್ + ದೇವಾಃ ಎಂದು ರೂಪವಾದಾಗ ಆ ಯಕಾರಕ್ಕೆ ಮುಂದಿನ ಸೂತ್ರದಿಂದ ಲೋಪ ಹೇಳುತ್ತಾನೆ.

(ಯಕಾರಕ್ಕೆ ಲೋಪ ಹೇಳುವ ಸೂತ್ರ)

## ೧೮೯. ಹಲಿ ಸರ್ವೇಷಾಮ್ ॥ ೮-೩-೨೨ ॥

**ಭೋ ಭಗೋ ಅಘೋ ಅಪೂರ್ವಸ್ಯ ಯಸ್ಯ ಲೋಪಃ ಸ್ಯಾದ್ಧಲಿ ॥ ಭೋ ದೇವಾಃ । ಭಗೋ ನಮಸ್ತೇ । ಅಘೋ ಯಾಹಿ ॥**

ಹಲಿ, ಸರ್ವೇಷಾಮ್ ॥ ದ್ವಿಪದ ಸೂತ್ರ. ಹಿಂದಿನ ಸೂತ್ರದಿಂದ ಭೋ ಭಗೋ ಅಘೋ ಅಪೂರ್ವಸ್ಯ ಎಂಬುದು ಅನುವೃತ್ತವಾಗುತ್ತದೆ. "ವ್ಯೋರ್ಲಘು ಪ್ರಯತ್ನತರಃ ಶಾಕಟಾಯನಸ್ಯ" ಸೂತ್ರದಿಂದ "ಯಸ್ಯ" ಎಂಬುದಕ್ಕೆ ಮಾತ್ರ

ಅನುವೃತ್ತಿ. ವಕಾರಕ್ಕೆ ಸಂಬಂಧವಿಲ್ಲವಾದುದರಿಂದ ಅನುವೃತ್ತಿ ಇಲ್ಲ. "ಲೋಪಃ ಶಾಕಲ್ಯಸ್ಯ" ಸೂತ್ರದಿಂದ "ಲೋಪಃ" ಎಂಬುದಕ್ಕೆ ಅನುವೃತ್ತಿ. ಹಿಂದೆ ಆಯಾಯ ಋಷಿಗಳ ಮತದಲ್ಲಿ ಕೆಲವು ಕಾರ್ಯಗಳನ್ನು ಹೇಳಿರುವುದರಿಂದ ಇಲ್ಲಿ ಎಲ್ಲರ ಮತದಿಂದಲೂ ಲೋಪವೆಂದು ತಿಳಿಸಲು "ಸರ್ವೇಷಾಂ" ಎಂದಿರುತ್ತಾನೆ. **ಸೂತ್ರಾರ್ಥ**. ಭೋ, ಭಗೋ, ಅಘೋ, ಅಪೂರ್ವವಾದ ಯಕಾರಕ್ಕೆ ಹಲ್ (ವ್ಯಂಜನ) ಪರವಾದಾಗ ಎಲ್ಲರ ಮತದಲ್ಲಿಯೂ ಲೋಪಬರುತ್ತದೆ. ಪ್ರಕೃತ ಭೋಯ್ + ದೇವಾಃ ಎಂದಿರುವಾಗ ಭೋಪೂರ್ವವಾಗಿರುವ ಯಕಾರಕ್ಕೆ ದಕಾರರೂಪ ಹಲ್ ಪರವಾದುದರಿಂದ ಲೋಪ ಬಂದರೆ ಭೋ ದೇವಾಃ ಎಂದಾಗುತ್ತದೆ. ಹೀಗೆಯೇ ಭಗೋ ನಮಸ್ತೇ, ಅಘೋ ಯಾಹಿ ಎಂಬಲ್ಲಿಯೂ ಯಕಾರಲೋಪ ಬಂದಿದೆ.

(ರೇಫಾದೇಶವಿಧಾಯಕ ಸೂತ್ರ)

## ೧೧೦. ರೋಽಸುಪಿ ॥ ೮-೨-೬೯ ॥

**ಅಹ್ನೋ ರೇಫಾದೇಶೋ ನ ತು ಸುಪಿ । ಅಹರಹಃ । ಅಹರ್ಗಣಃ ॥**

ರಃ, ಅಸುಪಿ ॥ ದ್ವಿಪದಸೂತ್ರ. "ಅಹನ್" ಎಂಬ ಸೂತ್ರವು ಅನುವೃತ್ತವಾಗುತ್ತದೆ. ಅದು ಷಷ್ಠ್ಯಂತಪದ. ಸೂತ್ರದಲ್ಲಿ ಷಷ್ಠಿಲುಪ್ತವಾಗಿದೆ. ನ ಸುಪ್, ಅಸುಪ್, ತಸ್ಮಿನ್. ಅಸುಪಿ. ಸುಪ್ ನಾಮವಿಭಕ್ತಿ. ಇದು ಪರದಲ್ಲಿರಬಾರದು ಎಂದರ್ಥ. **ಸೂತ್ರಾರ್ಥ**. ಅಹನ್ ಶಬ್ದಕ್ಕೆ ಸುಪ್ ಪರದಲ್ಲಿ ಇಲ್ಲದಿರುವಾಗ ರೇಫಾದೇಶ ಬರುತ್ತದೆ. ಷಷ್ಠ್ಯಂತಕ್ಕೆ ಆದೇಶವಿಧಾನ ಮಾಡಿದುದರಿಂದ "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯವಾದ ನಕಾರಕ್ಕೆ ರೇಫಾದೇಶ. ಅಹನ್ + ಅಹನ್ ಎಂದಿರುವಾಗ ಅಹನ್ ಶಬ್ದಕ್ಕೆ ಸುಪ್ ಪರದಲ್ಲಿಲ್ಲದಿರುವುದರಿಂದ ಈ ಸೂತ್ರದಿಂದ ರೇಫಾದೇಶ. ಅಹರ್ + ಅಹನ್ ಎಂದಾಗುತ್ತದೆ. ಕೊನೆಯ ನಕಾರಕ್ಕೆ "ಅಹನ್" ಸೂತ್ರದಿಂದ ರುತ್ವ. ಅದಕ್ಕೆ ಅವಸಾನದಲ್ಲಿ ವಿಸರ್ಗ. ಅಹರಹಃ ಎಂದಾಗುತ್ತದೆ. ಈ ಸೂತ್ರದಿಂದ ರೇಫ ಹೇಳದಿದ್ದಲ್ಲಿ ಪೂರ್ವದ ನಕಾರಕ್ಕೂ "ಅಹನ್" ಸೂತ್ರದಿಂದ ರುತ್ವ ಬರಬೇಕಾಗುತ್ತದೆ. ರುತ್ವಕ್ಕೂ ರೇಫಾದೇಶಕ್ಕೂ ಕಾರ್ಯದಲ್ಲಿ ಭೇದವಿದೆ. ರುವಿನಲ್ಲಿ ಉಕಾರ ಇತ್ ಆಗಿದೆ. ರುತ್ವ ಬಂದಿದ್ದರೆ ಅಪೂರ್ವವಾದುದರಿಂದ "ಭೋ ಭಗೋ....ಶಿ" ಸೂತ್ರದಿಂದ ಉತ್ವ ಬರುತ್ತದೆ. ಕೇವಲ ರೇಫ ಹೇಳಿದರೆ ಈ ಉತ್ವ ಬರುವುದಿಲ್ಲ. ಅಲ್ಲಿ ಉಕಾರಾನುಬಂಧವಿಲ್ಲ. ಅಹ್ನಾಂ ಗಣಃ ಅಹರ್ಗಣಃ. ಇಲ್ಲಿಯೂ ಅಹನ್ + ಗಣಃ ಎಂದಿರುವಾಗ ಸುಪ್ ಪರದಲ್ಲಿಲ್ಲದಿದ್ದುದರಿಂದ ನಕಾರಕ್ಕೆ ರೇಫಾದೇಶ. ರು ಅಲ್ಲದಿರುವುದರಿಂದ "ಹಶಿ ಚ" ಸೂತ್ರದಿಂದ ಉತ್ವ ಬರುವುದಿಲ್ಲ.

(ರೇಫಲೋಪವಿಧಾಯಕಸೂತ್ರ)

## ೧೧೧. ರೋ ರಿ ॥ ೮-೩-೧೪ ॥

॥ ರೇಫಸ್ಯ ರೇಫೇ ಪರೇ ಲೋಪಃ ॥

ರಃ, ರಿ, || ದ್ವಿಪದಸೂತ್ರ. "ಢೋ ಢೇ ಲೋಪಃ" ಸೂತ್ರದಿಂದ "ಲೋಪಃ" ಪದಕ್ಕೆ ಅನುವೃತ್ತಿ. ರಃ ಷಷ್ಠೀ. ರಿ ಸಪ್ತಮೀ. ಸೂತ್ರಾರ್ಥ. ರೇಫಕ್ಕೆ ರೇಫ ಪರವಾದರೆ ಲೋಪ ಬರುತ್ತದೆ. ಪುನರ್ + ರಮತೇ ಎಂದಿರುವಾಗ ರೇಫಕ್ಕೆ ರೇಫ ಪರವಾದುದರಿಂದ ಲೋಪ. ಪುನ ರಮತೇ. ಇಲ್ಲಿ ಲೋಪವಾದಾಗ ಪೂರ್ವಕ್ಕೆ ದೀರ್ಘವನ್ನು ಮುಂದಿನ ಸೂತ್ರದಿಂದ ಹೇಳುತ್ತಾನೆ.

## ೧೧೨. ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ

|| ೬-೩-೧೧೧ ||

**ಢರೇಫಯೋರ್ಲೋಪನಿಮಿತ್ತಯೋಃ ಪೂರ್ವಸ್ಯಾಣೋ ದೀರ್ಘಃ। ಪುನಾ ರಮತೇ। ಹರೀ ರಮ್ಯಃ। ಶಂಭೂ ರಾಜತೇ। ಅಣಃ ಕಿಮ್? ತೃಢಃ, ವೃಢಃ। ಮನಸ್ ರಥ ಇತ್ಯತ್ರ ರುತ್ವೇ ಕೃತೇ ಹಶಿಚೇತ್ಯುತ್ವೇ ರೋರೀತಿ ಲೋಪೇ ಚ ಪ್ರಾಪ್ತೇ ||**

ಢ್ರಲೋಪೇ, ಪೂರ್ವಸ್ಯ, ದೀರ್ಘಃ, ಅಣಃ, || ನಾಲ್ಕು ಪದಗಳುಳ್ಳ ಸೂತ್ರ. ಢ್ ಚ ರೇಫಶ್ಚ ಢ್ರೌ, ತೌ ಲೋಪಯತೀತಿ ಢ್ರಲೋಪಃ। ಢಕಾರವನ್ನೂ ರೇಫವನ್ನೂ ಲೋಪಮಾಡುವುದು ಯಾವುದೋ ಅದು ಢ್ರಲೋಪವೆನಿಸುತ್ತದೆ. ಢಲೋಪ, ರೇಫ ಲೋಪನಿಮಿತ್ತವೆಂದು ಫಲಿತವಾಗುತ್ತದೆ. "ಢೋ ಢೇ ಲೋಪಃ" ಎಂಬಲ್ಲಿ ಢಕಾರಕ್ಕೆ ಢಕಾರಪರವಾದಾಗ ಲೋಪಹೇಳುತ್ತಾನೆ. ಆಗ ಢಲೋಪ ನಿಮಿತ್ತ ಢಕಾರವೇ, ಹಾಗೇ ರೇಫಲೋಪನಿಮಿತ್ತ ರೇಫವೇ ಆಗುತ್ತದೆ. **ಸೂತ್ರಾರ್ಥ.** ಢಮತ್ತು ರೇಫಗಳ ಲೋಪಕ್ಕೆ ನಿಮಿತ್ತವಾದದ್ದು (ಢಕಾರ, ರೇಫ) ಪರದಲ್ಲಿರುವಾಗ ಪೂರ್ವದಲ್ಲಿರುವ ಅಣಿಗೆ ದೀರ್ಘ ಬರುತ್ತದೆ. ಪ್ರಕೃತ ಪುನ+ರಮತೇ ಎಂಬಲ್ಲಿ ರೇಫವನ್ನು ಲೋಪಮಾಡಿದ ರೇಫವು ಪರದಲ್ಲಿರುವುದರಿಂದ ಪೂರ್ವದ ಅಣ್ ಎಂದರೆ ನಕಾರೋತ್ತರಾಕಾರ, ಅದಕ್ಕೆ ದೀರ್ಘ ಬಂದರೆ ಪುನಾರಮತೇ ಎಂದಾಗುತ್ತದೆ. ಅಣಿನಲ್ಲಿ ಅ ಇ ಉ ಸೇರಿರುವುದರಿಂದ ಇಕಾರಕ್ಕೆ ಉದಾಹರಣೆ ಹೇಳುತ್ತಾನೆ. ಹರೀ ರಮ್ಯಃ. ಹರಿಸ್ + ರಮ್ಯಃ ಎಂದಿರುವಾಗ "ಸಸಜುಷೋರುಃ" ಸೂತ್ರದಿಂದ ರುತ್ವ. ಹರಿರ್ + ರಮ್ಯಃ. ಇಲ್ಲಿ ರೇಫಕ್ಕೆ ರೇಫ ಪರವಾದುದರಿಂದ "ರೋರಿ" ಸೂತ್ರದಿಂದ ಪೂರ್ವದ ರೇಫಕ್ಕೆ ಲೋಪ. ರೇಫಲೋಪಮಾಡಿದ ರೇಫವು ಪರವಾದುದರಿಂದ ಪ್ರಕೃತಸೂತ್ರದಿಂದ ಅಣ್ ಆದ ಇಕಾರಕ್ಕೆ ದೀರ್ಘ. ಹರೀ ರಮ್ಯಃ ಎಂದಾಗುತ್ತದೆ. ಉಕಾರಕ್ಕೆ ಉದಾಹರಣೆ. ಶಂಭುಸ್ + ರಾಜತೇ ಎಂದಿರುವಾಗ ಸಕಾರಕ್ಕೆ ರುತ್ವ, ಅದಕ್ಕೆ ಲೋಪ. ಪ್ರಕೃತಸೂತ್ರದಿಂದ ಅಣ್ ಆದ ಉಕಾರಕ್ಕೆ ದೀರ್ಘ. ಶಂಭೂ ರಾಜತೇ. ಅಣಃ ಕಿಮ್? ಸೂತ್ರದಲ್ಲಿ ಢಲೋಫ ರೇಫ ಲೇಪಮಾಡಿರುವ ವರ್ಣಪರವಾದಾಗ ಪೂರ್ವಕ್ಕೆ ದೀರ್ಘವೆಂದರೆ ದೋಷವೇನು. ಪೂರ್ವದ ಅಣ್ ಮಾತ್ರಕ್ಕೆ ದೀರ್ಘವೆಂದುದೇಕೆ? ಅಂದರೆ, ವೃಢಃತೃಢಃ. ಇಲ್ಲಿಯೂ ಋಕಾರಕ್ಕೆ ದೀರ್ಘಬರ

ಬೇಕಾಗುತ್ತದೆ. ತೃಹೂ ಹಿಂಸಾಯಾಂ, ಧಾತು. ಇದಕ್ಕೆ ಕ್ತಪ್ರತ್ಯಯ ಪರವಾದಾಗ ತೃಹ್+ತ ಎಂದಿರುವಾಗ "ಹೋಢಃ" ಸೂತ್ರದಿಂದ ಹಕಾರಕ್ಕೆ ಢಕಾರಾದೇಶ. ತೃಢ್+ತ. ಝಷ್‌ವರ್ಣದ ಪರದಲ್ಲಿ ತಕಾರವಿರುವುದರಿಂದ "ಝಷಸ್ತಥೋರ್ಧೋಽಧಃ" ಸೂತ್ರದಿಂದ ತಕಾರಕ್ಕೆ ಧಕಾರಾದೇಶ. ತೃಢ್+ಧ ಎಂದಿರುವಾಗ "ಷ್ಟುನಾ ಷ್ಟುಃ" ಸೂತ್ರದಿಂದ ಧಕಾರಕ್ಕೆ ಷ್ಟುತ್ವದಿಂದ ಢಕಾರಾದೇಶ. ತೃಢ್+ಢ "ಢೋಢೇ ಲೋಪಃ" ಸೂತ್ರದಿಂದ ಪೂರ್ವದ ಢಕಾರಕ್ಕೆ ಲೋಪ. ಇಲ್ಲಿ ಢಲೋಪ ಮಾಡಿದ ಢಕಾರ ಪರವಾದುದರಿಂದ ಅಣಃ ಎಂದು ಹೇಳದಿದ್ದರೆ ಋಕಾರಕ್ಕೂ ದೀರ್ಘ ಬರಬೇಕಾಗುತ್ತದೆ. ಅಣ್ ಹೇಳಿದ್ದರಿಂದ ಋಕಾರ ಅಣಿನಲ್ಲಿ ಸೇರುವುದಿಲ್ಲವಾದುದರಿಂದ ದೀರ್ಘವಿಲ್ಲ. ತೃಢಃ ಎಂದೇ ಇರುತ್ತದೆ. ಹಾಗೆಯೇ ವೃಹೂ ಉದ್ಯಮನೇ ಧಾತು. ಇದಕ್ಕೆ ಕ್ತ ಪರವಾದಾಗ ಹಿಂದಿನಂತೆ ಢತ್ವ, ಧತ್ವ, ಷ್ಟುತ್ವ, ಢಲೋಪಗಳು ಬಂದರೆ ವೃಢಃ ಎಂದಾಗುತ್ತದೆ. ಅಣಿಗೆ ದೀರ್ಘವೆಂದುದರಿಂದ ಇಲ್ಲಿಯೂ ದೀರ್ಘವಿಲ್ಲ. ಮನಸ್+ರಥಃ ಎಂದಿರುವಾಗ "ಸಸಜುಷೋರುಃ" ಸೂತ್ರದಿಂದ ಸಕಾರಕ್ಕೆ ರುತ್ವ. ಮನರ್+ರಥಃ ಇಲ್ಲಿ ಅಕಾರದ ಪರದಲ್ಲಿ ರು ಇದ್ದು ಅದಕ್ಕೆ ಹಶ್ ರೂಪವಾದ ರೇಫ ಪರವಾದುದರಿಂದ "ಹಶಿ ಚ" ಸೂತ್ರದಿಂದ ರುವಿಗೆ ಉತ್ವವು ಪ್ರಾಪ್ತವಾಗುತ್ತದೆ. ಹಾಗೆಯೇ ರೇಫಪರವಾದುದರಿಂದ "ರೋರಿ" ಸೂತ್ರದಿಂದ ಪೂರ್ವದ ರೇಫಕ್ಕೆ ಲೋಪವೂ ಪ್ರಾಪ್ತವಾಗುತ್ತದೆ. ಈ ಎರಡು ಸೂತ್ರಗಳೂ ಒಂದೇ ಲಕ್ಷ್ಯದಲ್ಲಿ ಬರುತ್ತವೆ. ಎರಡೂ ಸಮಬಲವುಳ್ಳವುಗಳು. ಆವಾಗ ಯಾವ ಸೂತ್ರದಿಂದ ಇಲ್ಲಿ ಕಾರ್ಯಮಾಡಬೇಕು ಎಂದು ವಿವಾದ ಪ್ರಾಪ್ತವಾದರೆ ನಿಯಾಮಕ ಸೂತ್ರ ಹೇಳುತ್ತಾನೆ.

(ಎರಡು ಸೂತ್ರಗಳು ಒಂದು ಲಕ್ಷ್ಯದಲ್ಲಿ ಪ್ರಾಪ್ತವಾದಾಗ ಪರಸೂತ್ರ ನಿಯಮ ಮಾಡುವ ಸೂತ್ರ)

## ೧೧೩. ವಿಪ್ರತಿಷೇಧೇ ಪರಂ ಕಾರ್ಯಮ್ ॥ ೧-೪-೨ ॥

**ತುಲ್ಯಬಲವಿರೋಧೇ ಪರಂ ಕಾರ್ಯಂ ಸ್ಯಾತ್ । ಇತಿ ಲೋಪೇ ಪ್ರಾಪ್ತೇ ॥ ಪೂರ್ವತ್ರಾಸಿದ್ಧಮಿತಿ ರೋರೀತ್ಯಸ್ಯ ಅಸಿದ್ಧತ್ವಾದುತ್ವಮೇವ । ಮನೋರಥಃ ॥**

ತ್ರಿಪದ ಸೂತ್ರ. ವಿಪ್ರತಿಷೇಧವೆಂದರೆ ಪರಸ್ಪರ ವಿರೋಧವೆಂದರ್ಥ. ವಿರೋಧವು ಸಾಮಾನ್ಯ ಸಮಾನ ಬಲವುಳ್ಳವರಿಗೇ ಇರುತ್ತದೆ. ಇಲ್ಲಿ ಸಮಾನ ಬಲವುಳ್ಳವುಗಳು ಎಂದರೆ ಎರಡು ಶಾಸ್ತ್ರಗಳೂ ಬೇರೆಬೇರೆ ಲಕ್ಷ್ಯಗಳಲ್ಲಿ ಅವಕಾಶವನ್ನು ಹೊಂದಿ ಚರಿತಾರ್ಥಗಳಾಗಿ (ಸಾಫಲ್ಯ ಹೊಂದಿ) ಒಂದು ಲಕ್ಷ್ಯದಲ್ಲಿ ಏಕಕಾಲದಲ್ಲಿ ಪ್ರವರ್ತಿಸುತ್ತವೆ. ಸೂತ್ರಾರ್ಥ. ತುಲ್ಯ ಬಲವಿರುವಾಗ ಪರಸೂತ್ರದಿಂದ ಹೇಳಿದ ಕಾರ್ಯವೇ ಬರುತ್ತದೆ. ಪರಶಾಸ್ತ್ರವೇ ಪ್ರಬಲವಾಗುವುದರಿಂದ ಅದರಿಂದ ವಿಹಿತವಾದ ಕಾರ್ಯಕ್ಕೇ

ಪ್ರಾಧಾನ್ಯವಿರುತ್ತದೆ. ಪ್ರಕೃತ "ರೋ ರಿ" ಸೂತ್ರವು ಹರೀರಮ್ಯ ಇತ್ಯಾದಿ ಸ್ಥಳಗಳಲ್ಲಿ ಚರಿತಾರ್ಥವಾಗಿ ಇಲ್ಲಿ ಬಂದಿದೆ. "ಹಶಿ ಚ" ಸೂತ್ರವೂ ದೇವೋ ವಂದ್ಯ ಇತ್ಯಾದಿ ಸ್ಥಳಗಳಲ್ಲಿ ಸಾಫಲ್ಯ ಹೊಂದಿ ಇಲ್ಲಿ ಬಂದಿದೆ. ಇವುಗಳಲ್ಲಿ ಪರಸೂತ್ರ "ರೋ ರಿ" ಆಗುತ್ತದೆ. ಅದು ಎಂಟನೇ ಅಧ್ಯಾಯದ ಸೂತ್ರ. "ಹಶಿ ಚ" ಆರನೇ ಅಧ್ಯಾಯದ ಸೂತ್ರ. ಆದುದರಿಂದ "ರೋರಿ" ಸೂತ್ರದಿಂದ ರೇಫ ಲೋಪವೇ ಪ್ರಾಪ್ತವಾಗಿ ಮನರಥ ಎಂದಾಗಬೇಕಾಗುತ್ತದೆ. ಆದರೆ ಈ "ರೋ ರಿ" ಸೂತ್ರವು ಎಂಟನೇ ಅಧ್ಯಾಯದ ತ್ರಿಪಾದಿಯಲ್ಲಿ ಇದೆ. ಆಗ ಈ ಸೂತ್ರದಿಂದ ಲೋಪ ಮಾಡಿದರೂ ಲೋಪಬಂದಿರುವುದು "ಹಶಿ ಚ" ಸೂತ್ರಕ್ಕೆ ಗೊತ್ತಿರುವುದಿಲ್ಲ. "ಪೂರ್ವತ್ರಾಸಿದ್ಧಮ್" ಸೂತ್ರದಿಂದ ಈ ಅರ್ಥವು ತಿಳಿಯುತ್ತದೆ. ಸಪಾದ ಸಪ್ತಾಧ್ಯಾಯಿಯನ್ನು ಕುರಿತು ತ್ರಿಪಾದಿಯು ಅಸಿದ್ಧವಾಗುತ್ತದೆ. ತ್ರಿಪಾದಿ ಇದೆ ಯೆಂಬ ಜ್ಞಾನವೇ ಅವುಗಳಿಗೆ ಇಲ್ಲದಿರುವುದರಿಂದ "ಹಶಿಚ" ಸೂತ್ರವು ಇಲ್ಲಿ ರೇಫ ಇದೆಯೆಂದೇ ತಿಳಿದಿರುತ್ತದೆ. ಆದುದರಿಂದ ಅದಕ್ಕೆ ಉತ್ವ ಬಂದರೆ ಮನ ಉ + ರಥಃ ಎಂದಿರುವಾಗ "ಆದ್ಗುಣಃ" ಸೂತ್ರದಿಂದ ಅಕಾರಉಕಾರಗಳಿಗೆ ಓಕಾರ ಗುಣ ಬಂದರೆ ಮನೋರಥಃ ಎಂದಾಗುತ್ತದೆ.

(ಸುಲೋಪ ವಿಧಾಯಕ ಸೂತ್ರ)

## ೧೧೪. ಏತತ್ತದೋಃ ಸುಲೋಪೋಽಕೋರನಞ್ ಸಮಾಸೇ ಹಲಿ ॥ ೬-೧-೧೩೨ ॥

ಅಕಕಾರಯೋರೇತತ್ತದೋರ್ಯಃ ಸುಸ್ತಸ್ಯ ಲೋಪೋ ಹಲಿ ನ ತು ನಞ್ ಸಮಾಸೇ । ಏಷ ವಿಷ್ಣುಃ । ಸ ಶಂಭುಃ । ಅಕೋಃ ಕಿಮ್ ? ಏಷಕೋ ರುದ್ರಃ । ಅನಞಸಮಾಸೇ ಕಿಮ್ ? ಅಸಃ ಶಿವಃ । ಹಲಿಕಿಮ್ ? ಏಷೋಽತ್ರ ॥

ಏತತ್ತದೋಃ, ಸು, ಲೋಪಃ, ಅಕೋಃ, ಅನಞ್ ಸಮಾಸೇ, ಹಲಿ ॥ ಆರು ಪದಗಳುಳ್ಳಸೂತ್ರ. ಸು ಎಂಬುದು ಲುಪ್ತಷಷ್ಠೀಕ. ಸುವಿಭಕ್ತಿಗೆ ಎಂದರ್ಥ. ಏತಚ್ಚ ತಚ್ಚ ಏತತ್ತದೌ ತಯೋಃ ಏತತ್ತದೋಃ. ಸು ಎಂಬುದಕ್ಕೆ ಏತತ್ತದೋಃ ಎಂಬಲ್ಲಿ ಅನ್ವಯ. ಅವಿದ್ಯಮಾನಃ ಕಕಾರಃ ಯಯೋಸ್ತೌ ಅಕೌ, ತಯೋಃ ಅಕೋಃ, ನ ನಞ್ ಸಮಾಸಃ ಅನಞ್ ಸಮಾಸಃ, ತಸ್ಮಿನ್ ಅನಞ್ ಸಮಾಸೇ. **ಸೂತ್ರಾರ್ಥ.** ಕಕಾರವಿಲ್ಲದಿರುವ ಏತದ್ ತದ್ ಶಬ್ದಗಳ ಸುವಿಭಕ್ತಿಗೆ ಹಲ್ ಪರವಾದಾಗ ಲೋಪ ಬರುತ್ತದೆ. ನಞ್ ಸಮಾಸದಲ್ಲಿ ಈ ಲೋಪವಿಲ್ಲ. ಉದಾ- ಏಷ ವಿಷ್ಣುಃ. ಏತದ್ ಶಬ್ದಕ್ಕೆ ಪ್ರಥಮಾಏಕವಚನದಲ್ಲಿ ಸುಪ್ರತ್ಯಯ. "ತ್ಯದಾದೀನಾಮಃ" ಸೂತ್ರದಿಂದ ದಕಾರಕ್ಕೆ ಅಕಾರಾದೇಶ. "ತದೋಃ ಸಃ ಸಾವನಂತ್ಯಯೋಃ" ಸೂತ್ರದಿಂದ ತಕಾರಕ್ಕೆ ಸತ್ವ. "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷಕಾರಾದೇಶ.

ಏಷಸ್+ವಿಷ್ಣುಃ ಎಂದಿರುವಾಗ ಏತಚ್ಛಬ್ದ ಸಂಬಂಧಿ ಸುವಿಗೆ ವಕಾರರೂಪ ಹಲ್ ಪರವಾದುದರಿಂದ ಲೋಪ. ಏಷ ವಿಷ್ಣುಃ ಎಂದಾಗುತ್ತದೆ. ತಚ್ಛಬ್ದಕ್ಕೆ ಪ್ರಥಮಾವಿಭಕ್ತಿಯಲ್ಲಿ ಸುಮಾಡಿದಾಗ ಹಿಂದಿನಂತೆ ದಕಾರಕ್ಕೆ ಅತ್ವ. ತಕಾರಕ್ಕೆ ಸತ್ವ. ಸಸ್+ಶಂಭುಃ ಎಂದಿರುವಾಗ ಸುವಿಗೆ ಲೋಪಬಂದರೆ ಸ ಶಂಭುಃ ಎಂದಾಗುತ್ತದೆ."ಅಕೋಃಕಿಮ್ ?" ವಿಳಕೃತ್ಯವನ್ನು ಹೇಳುತ್ತಾನೆ. ಕಕಾರರಹಿತವಾದ ಏತತ್ತಚ್ಛಬ್ದ ಪೆಂದುದೇಕೆ? ಕೇವಲ ಏತತ್ತಚ್ಛಬ್ದಗಳಿಗೆ ಎಂದಿದ್ದರೆ " ಏಷಕೋಽರುದ್ರಃ " ಇಲ್ಲಿಯೂ ಲೋಪ ಬರಬೇಕಾಗಿತ್ತು. ಏತದ್ ಶಬ್ದ ಸರ್ವನಾಮಸಂಜ್ಞೆಯನ್ನು ಹೊಂದಿರುವುದರಿಂದ " ಅವ್ಯಯಸರ್ವನಾಮ್ನಾಮಕಚ್ ಪ್ರಾಕ್ ಟೇಃ " ಎಂಬುದರಿಂದ ಟಿಯ ಮೊದಲು ಅಕಚ್ ಆಗಮಬರುತ್ತದೆ. ಏತದ್ ಶಬ್ದದಲ್ಲಿ ಟಿ ಅದ್. ಇದರ ಹಿಂದೆ ಅಕಚ್ (ಅಕ್) ಬಂದರೆ ಏತಕದ್ ಆಗುತ್ತದೆ. ಮಧ್ಯದಲ್ಲಿ ವಿಕಾರಬಂದರೂ ಅದು ಏತಚ್ಛಬ್ದವೆಂದೇ ಹೇಳಿಸಿಕೊಳ್ಳುತ್ತದೆ. ಅಲ್ಲಿ ಹಿಂದಿನಂತೆ ಕಾರ್ಯಬಂದು ಏಷಕಸ್+ರುದ್ರಃ ಎಂದಿರುವಾಗ ಸುಲೋಪವನ್ನು ಬಾರದಂತೆ ಮಾಡಲು ಕಕಾರರಹಿತವಾದ ಏತತ್ತಚ್ಛಬ್ದಗಳೆಂದು ಹೇಳಿದೆ. ಸಕಾರಕ್ಕೆ " ಸಸಜುಷೋರುಃ " ಸೂತ್ರದಿಂದ ರುತ್ವ. ಅದಕ್ಕೆ ಹಶ್ ಪರವಾದುದರಿಂದ " ಹಶಿ ಚ " ಎಂಬುದರಿಂದ ಉತ್ವ. ಏಷಕ+ಉ+ರುದ್ರಃ ಗುಣ ಬಂದರೆ ಏಷಕೋಽರುದ್ರಃ ಎಂದಾಗುತ್ತದೆ. ಅನಞ್ಸಮಾಸೇಕಿಮ್ ? ನಞ್ ಸಮಾಸದಲ್ಲಿ ಬರುವುದಿಲ್ಲವೆಂದು ಹೇಳಿದುದು ಏಕೆ? ಅಸಃ ಶಿವಃ ಇಲ್ಲಿ ಸುಲೋಪ ಬಾರದಿರಲು ಹೇಳಿರುತ್ತಾನೆ. ನ ಸಃ ಅಸಃ. ಇದು ನಞ್ ಸಮಾಸ. ಅಸಸ್+ಶಿವಃ ಎಂದಿರುವಾಗ ಸುಲೋಪ ಬರುವುದಿಲ್ಲ. ರುತ್ವ, ವಿಸರ್ಗಗಳು ಬಂದರೆ ಅಸಃ ಶಿವಃ ಎಂದಾಗುತ್ತದೆ. ಹಲಿಕಿಮ್ ? ಹಲ್ ಪರದಲ್ಲಿರುವಾಗ ಮಾತ್ರ ಲೋಪವೆಂಬುದೇಕೆ? ಅಚ್‌ಪರವಾದರೆ ಬರುವುದಿಲ್ಲ. ಏಷಸ್+ಅತ್ರ. ಇಲ್ಲಿ ಅಚ್ ಪರವಾಗಿದೆ. ಆದುದರಿಂದ ಸುವಿಗೆ ಲೋಪವಿಲ್ಲ. ಸಕಾರಕ್ಕೆ ರುತ್ವಬಂದರೆ ಏಷರ್+ಅತ್ರ. ಅಕಾರಪೂರ್ವವಾದ ರುವಿಗೆ ಅಕಾರಪರವಾದುದರಿಂದ " ಅತೋರೋ.... ತೇ " ಸೂತ್ರದಿಂದ ಉತ್ವ. ಅಕಾರ ಉಕಾರಗಳಿಗೆ ಗುಣ. ಓಕಾರಕ್ಕೆ ಅಕಾರಪರವಾದುದರಿಂದ " ಏಙಃ ಪದಾಂತಾದತಿ " ಸೂತ್ರದಿಂದ ಪೂರ್ವರೂಪಾದೇಶ. ಏಷೋಽತ್ರ ಎಂದಾಗುತ್ತದೆ.

(ತಚ್ಛಬ್ದದ ಸುಲೋಪವಿಧಾಯಕ ಸೂತ್ರ) ಪಾದ-

## ೧೧೫. ಸೋಽಚಿ ಲೋಪೇ ಚೇತ್ಪಾದಪೂರಣಮ್ ।

೬-೧-೧೩೪ ॥

ಸ ಇತ್ಯಸ್ಯ ಸೋರ್ಲೋಪಃ ಸ್ಯಾದಚಿ ಪಾದಶ್ಚೇಲ್ಲೋಪೇ ಸತ್ಯೇವ ಪೂರ್ಯೇತ। ಸೇಮಾಮವಿಡ್ಢಿ ಪ್ರಭೃತಿಮ್। ಸೈಷ ದಾಶರಥೀ ರಾಮಃ ॥

ಸಃ ಅಚಿ, ಲೋಪೇ ಚೇತ್, ಪಾದಪೂರಣಮ್ । ತ್ರಿಪದ ಸೂತ್ರ. ಸಃ ಎಂಬುದು ಪ್ರಥಮಾಏಕವಚನಾಂತಸ್ಯ ಪ ಇದರ ಮೇಲೆ ಷಷ್ಠಿ ಬಂದು ಲೋಪ ವಾಗಿದೆ. ಲುಪ್ತ ಷಷ್ಠೀಕ ಪದ. ಸುಲೋಪಃ ಎಂದು ಹಿಂದಿನ ಸೂತ್ರದಿಂದ ಅನುವೃತ್ತಿ. ಅಚ್ ನಿಮಿತ್ತ. ಸೂತ್ರಾರ್ಥ. ತಚ್ಛಬ್ದದ ಸು ವಿಭಕ್ತಿಗೆ ಅಚ್ ಪರವಾದಾಗ ಲೋಪಬರುತ್ತದೆ. ಲೋಪ ಮಾಡಿದರೇ (ಶ್ಲೋಕಾದಿಗಳ) ಪಾದಪೂರ್ತಿಯಾಗುತ್ತಿ ಎಂದಿರುವಾಗ ಮಾತ್ರ ಲೋಪ. ಹಾಗಿಲ್ಲವಾದರೆ ಲೋಪ ಬರುವುದಿಲ್ಲ. "ಸೇಮಾಮವಿಡ್ಢಿಪ್ರಭೃತಿಮ್" ಇದು ವೇದದ ಋಕ್ಕಿನ ಒಂದು ಪಾದ. ಸಸ್ + ಇಮಾಮವಿಡ್ಢಿಪ್ರಭೃತಿಮ್ ಎಂದಿರುವಾಗ ಸುವಿಗೆ ಲೋಪಮಾಡಿದರೆ ಪಾದ ಸರಿಯಾಗುತ್ತದೆ. ಆದುದರಿಂದ ಲೋಪ. ಸ + ಇಮಾ ಎಂದಿರುವಾಗ ಗುಣ. ಲೋಪಬಾರದಿದ್ದರೆ ಸುವಿಗೆ ರುತ್ವಬಂದು ಅದಕ್ಕೆ ಯತ್ವ ಲೋಪಬಂದು "ಸ ಇಮಾ....ತಿಮ್" ಎಂದು ರೂಪವಾಗಬೇಕಾಗುತ್ತದೆ. ಆಗ ಒಂದು ವರ್ಣ ಹೆಚ್ಚಾಗುತ್ತದೆ. ಆದುದರಿಂದ ಲೋಪ ಮಾಡಲೇಬೇಕು. ಲೋಕದಲ್ಲಿಯೂ ಈ ಲೋಪವಿದೆಯೆಂದು ತೋರಿಸಲು ಶ್ಲೋಕಪಾದವನ್ನು ಉದಾಹರಣೆಯಾಗಿ ತೋರಿಸುತ್ತಾನೆ. "ಸೈಷ ದಾಶರಥೀ ರಾಮಃ" ಸಸ್ + ಏಷ ದಾಶರಥೀ ರಾಮಃ ಎಂದಿರುವಾಗ ಸುಲೋಪ ಬಂದರೆ ವೃದ್ಧಿಸಂಧಿ. ಸೈಷ ಎಂದಾಗುತ್ತದೆ. ಇಲ್ಲಿ ಲೋಪ ಬಂದರೇ ವೃದ್ಧಿ ಬಂದು ಒಂದಕ್ಷರ ಕಡಿಮೆಯಾಗಿ ಛಂದಸ್ಸಿಗೆ ಅನುಕೂಲವಾಗುತ್ತದೆ. ಲೋಪಬಾರದಿದ್ದರೆ ರುತ್ವ ಯತ್ವ, ಯಲೋಪ ಬಂದು ಸ ಏಷ ಎಂದಾಗುವುದರಿಂದ ಒಂದಕ್ಷರ ಹೆಚ್ಚಾಗಿ ಛಂದೋಭಂಗವಾಗುತ್ತದೆ. ಆದುದರಿಂದ ಲೋಪಮಾಡಿದೆ.

|| ಇತಿ ವಿಸರ್ಗಸಂಧಿಃ ||

—: ಶ್ರೀ :—

ಈ ರೀತಿ ಪಂಚಸಂಧಿಗಳು ಸಂಕ್ಷೇಪದಿಂದ ವಿವೃತವಾಗಿವೆ. ಪಂಚಸಂಧಿಗಳು. ಅಚ್‌ಸಂಧಿ (ಸ್ವರಗಳಿಗೆ ಹೇಳಿರುವ ಸಂಧಿ) ಹಲ್‌ಸಂಧಿ. (ವ್ಯಂಜನಗಳಿಗೆ ವಿಹಿತವಾದ ಸಂಧಿ) ವಿಸರ್ಗಸಂಧಿ. (ವಿಸರ್ಗಕ್ಕೆ ಹೇಳಿರುವ ಕಾರ್ಯ) ಪ್ರಕೃತಿಭಾವಸಂಧಿ. ಸ್ವಾದಿಸಂಧಿ. (ಸುವಿಭಕ್ತಿ ಹೇಳಿದ ಸಂಧಿ) ಹೀಗೆ ವಿಭಾಗವನ್ನು ತಿಳಿಯಬೇಕು.

|| ಪಾಣಿನಯೇ ನಮಃ ||

# ಅಥ ಅಜಂತಪುಲ್ಲಿಂಗಪ್ರಕರಣಮ್

ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗವೆಂದು ಸಂಸ್ಕೃತದಲ್ಲಿ ಮೂರುಲಿಂಗಗಳಿವೆ. ಈ ಶಬ್ದಗಳನ್ನು ಮೊದಲು ಎರಡು ವಿಭಾಗವಾಗಿ ವಿಂಗಡಿಸಿರುತ್ತಾನೆ. ಅಜಂತಶಬ್ದ, ಹಲಂತಶಬ್ದ. ಲಿಂಗವಿಭಾಗದೊಡನೆ ಹೇಳಿದರೆ ಆರು ರೀತಿಯಾಗುತ್ತದೆ. ಮೊದಲು ಅಜಂತಪುಲ್ಲಿಂಗ ಶಬ್ದಸ್ವರೂಪವನ್ನು ಹೇಳುತ್ತಾನೆ.

(ಪ್ರಾತಿಪದಿಕಸಂಜ್ಞಾವಿಧಾಯಕಸೂತ್ರ)

## ೧೧೬. ಅರ್ಥವದಧಾತುರಪ್ರತ್ಯಯಃ ಪ್ರಾತಿಪದಿಕಮ್ ॥ ೧-೨-೪೫ ॥

**ಧಾತುಂ ಪ್ರತ್ಯಯಂ ಪ್ರತ್ಯಯಾಂತಂ ಚ ವರ್ಜಯಿತ್ವಾ ಅರ್ಥವಚ್ಛಬ್ದಸ್ವರೂಪಂ ಪ್ರಾತಿಪದಿಕಸಂಜ್ಞಂಸ್ಯಾತ್ ॥**

ಅರ್ಥವತ್, ಅಧಾತುಃ, ಅಪ್ರತ್ಯಯಃ, ಪ್ರಾತಿಪದಿಕಮ್ ॥ ನಾಲ್ಕು ಪದಗಳುಳ್ಳ ಸೂತ್ರ. ಅರ್ಥಃ ಅಸ್ಯ ಅಸ್ತಿ ಇತಿ ಅರ್ಥವತ್. "ಶಬ್ದಸ್ವರೂಪಂ" ಎಂದು ವಿಶೇಷ್ಯವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ನ ಧಾತುಃ ಅಧಾತುಃ ಕ್ರಿಯಾವಾಚಕವಲ್ಲದಿರುವುದು. ನ ಪ್ರತ್ಯಯಃ ಅಪ್ರತ್ಯಯಃ ಪ್ರತ್ಯಯವಲ್ಲದಿರುವುದು. ಅಪ್ರತ್ಯಯಃ ಎಂಬುದು ಆವೃತ್ತವಾಗುತ್ತದೆ. ಒಂದು ಪ್ರತ್ಯಯ ಪದದಿಂದ ಪ್ರತ್ಯಯಾಂತವೆಂದಿಟ್ಟುಕೊಂಡು ಪ್ರತ್ಯಯಾಂತವಲ್ಲದಿರುವುದು, ಎಂದರ್ಥವಾಗುತ್ತದೆ. **ಸೂತ್ರಾರ್ಥ.** ಧಾತುವನ್ನೂ, ಪ್ರತ್ಯಯವನ್ನೂ, ಪ್ರತ್ಯಯಾಂತವನ್ನೂ ಬಿಟ್ಟು ಉಳಿದ ಅರ್ಥವುಳ್ಳ ಶಬ್ದಸ್ವರೂಪವು ಪ್ರಾತಿಪದಿಕಸಂಜ್ಞೆಯನ್ನು ಹೊಂದುತ್ತದೆ. ಪ್ರಾತಿಪದಿಕವೆಂದರೆ ನಾಮಪದ. ಅರ್ಥವುಳ್ಳ ಶಬ್ದಗಳೆಲ್ಲಾ ಪ್ರಾತಿಪದಿಕವೆಂದರೆ ಕ್ರಿಯಾಪದಕ್ಕೂ ಅರ್ಥವಿರುವುದರಿಂದ ಅಧಾತುಃ ಎಂದು ಅದನ್ನು ನಿಷೇಧಿಸಿರುತ್ತಾನೆ. ಹಾಗೇ ಪ್ರತ್ಯಯಗಳಿಗೂ, (ಅಣ್, ಠಕ್) ಪ್ರತ್ಯಯಾಂತಗಳಿಗೂ (ರಾಮಃ, ಹರಿಂ ಮುಂತಾದವುಗಳು) ಅರ್ಥವಿರುವುದರಿಂದ ಅವುಗಳನ್ನೂ "ಅಪ್ರತ್ಯಯಃ" ಎಂದು ನಿಷೇಧಿಸಿರುತ್ತಾನೆ. ಪ್ರತ್ಯಯಸೇರಿಸದೇ ಇರುವ ಮೂಲಸ್ವರೂಪವೇನಿದೆಯೋ ಅದು ಇದಕ್ಕೆ ಉದಾಹರಣೆ. ರಾಮ, ಗೋ, ಲಿಹ್ ಇವೇ ಮುಂತಾದವುಗಳು ಅರ್ಥವನ್ನು ಕೊಡುವುದರಿಂದ ಇವು ಪ್ರಾತಿಪದಿಕಗಳು. ಈ ಶಬ್ದಗಳನ್ನೂ ವಿಭಾಜಿಸಿದರೆ ಪ್ರಕೃತಿಪ್ರತ್ಯಯಸಿಗುವುದಾದರೆ ಇವು ಪ್ರತ್ಯಯಾಂತಗಳಾಗುತ್ತವೆ. ಆಗ ಮುಂದಿನಸೂತ್ರದಿಂದ ಸಂಜ್ಞೆಯನ್ನು ಹೇಳಬೇಕು. ಹಾಗೆ ವಿಭಾಜಿಸಲುಬಾರದ ಅವ್ಯುತ್ಪನ್ನಶಬ್ದಗಳು ಡಿತ್ಥಮುಂತಾದವುಗಳು ಈ ಸೂತ್ರಕ್ಕೆ ಉದಾಹರಣೆಗಳಾಗುತ್ತವೆ. ಸುಬ್ ವಿಭಕ್ತಿಗಳನ್ನು (ನಾಮದ ಪ್ರತ್ಯಯ) ಪ್ರಾತಿಪದಿಕದ ಮೇಲೆ ವಿಧಿಸುವುದರಿಂದ ಮೊದಲು ಪ್ರಾತಿಪದಿಕಸಂಜ್ಞೆಯನ್ನು ಹೇಳಿರುತ್ತಾನೆ.

(ಪ್ರತ್ಯಯಾಂತ ಸಮಾಸಗಳಿಗೆ ಪ್ರಾತಿಪದಿಕಸಂಜ್ಞಾ ವಿಧಾಯಕಸೂತ್ರ)

## ೧೧೭. ಕೃತ್ತದ್ಧಿತ ಸಮಾಸಾಶ್ಚ ॥ ೧-೨-೪೬ ॥

**ಕೃತ್ತದ್ಧಿತಾಂತೌ ಸಮಾಸಾಶ್ಚ ತಥಾ ಸ್ಯುಃ ॥**

ಕೃತ್ತದ್ಧಿತಸಮಾಸಾಃ, ಚ ॥ ದ್ವಿಪದಸೂತ್ರ. ಕೃಚ್ಚ ತದ್ಧಿತಶ್ಚ ಸಮಾಸಶ್ಚ ಕೃತ್ತದ್ಧಿತಸಮಾಸಾಃ. ಹಿಂದಿನ ಸೂತ್ರದಿಂದ "ಪ್ರಾತಿಪದಿಕಂ" ಪದವು ಅನುವೃತ್ತವಾಗುತ್ತದೆ. ಕೃತ್ ಧಾತುವಿನಮೇಲೆ ವಿಹಿತವಾಗುವ ಪ್ರತ್ಯಯ. ತದ್ಧಿತ ನಾಮದ ಮೇಲೆ ವಿಹಿತವಾದ ಪ್ರತ್ಯಯ. ಪ್ರತ್ಯಯ ತೆಗೆದುಕೊಂಡಾಗ ತದಂತವನ್ನು ತೆಗೆದುಕೊಳ್ಳಬೇಕು. **ಸೂತ್ರಾರ್ಥ.** ಕೃದಂತವಾದ ಶಬ್ದಗಳೂ ತದ್ಧಿತಾಂತವಾದ ಶಬ್ದಗಳೂ ಸಮಾಸವೂ ಪ್ರಾತಿಪದಿಕ ಸಂಜ್ಞೆಯನ್ನು ಹೊಂದುತ್ತವೆ. ಇಲ್ಲಿ ಕೃದಂತ ತದ್ಧಿತಾಂತಗಳು ಪ್ರತ್ಯಯಾಂತಗಳಾದುದರಿಂದ ಹಿಂದಿನ ಸೂತ್ರದಿಂದ ಬಾರದಿರುವುದರಿಂದ ಪುನಃ ಹೇಳಿರುತ್ತಾನೆ. ಸಮಾಸಕ್ಕೆ ಹಿಂದಿನ ಸೂತ್ರದಿಂದಲೇ ಪ್ರಾಪ್ತವಾಗುತ್ತದೆ. ರಾಜಪುರುಷ ಇದು ಸಮಾಸ ಪದ. ಇದು ಪ್ರತ್ಯಯಾಂತವಲ್ಲ. ಅರ್ಥವುಳ್ಳ ಶಬ್ದವಾದುದರಿಂದ ಪುನಃ ಇಲ್ಲಿ ಹೇಳಿದುದ ಏಕೆ? ಅಂದರೆ ನಿಯಮಕ್ಕೋಸ್ಕರ ಹೇಳಿರುತ್ತಾನೆ. "ಸಿದ್ಧೇಸತಿ ಆರಭ್ಯಮಾಣೋ ವಿಧಿಃ ನಿಯಮಾಯ" ಒಂದು ಸೂತ್ರದಿಂದ ಕಾರ್ಯಾದಿಗಳು ಸಿದ್ಧಿಸುವಾಗ ಪುನಃ ಇನ್ನೊಂದು ಸೂತ್ರದಿಂದ ಆ ಕಾರ್ಯವನ್ನೇ ಹೇಳಿದರೆ ಅಲ್ಲಿ ನಿಯಮವಿದೆ ಎಂದು ತಿಳಿಯುತ್ತೆ. ಇಲ್ಲಿ ಸಮಾಸ ಗ್ರಹಣದಿಂದ ಒಂದು ನಿಯಮ ತಿಳಿಯುತ್ತದೆ. ಹಿಂದಿನ ಸೂತ್ರದಿಂದ ವಾಕ್ಯಕ್ಕೂ ಪ್ರಾತಿಪಾದಿಕಸಂಜ್ಞೆ ಬರಬಹುದು ಎಂದು ತಿಳಿಯುತ್ತದೆ. ವಾಕ್ಯವು ಪ್ರತ್ಯಯಾಂತವಲ್ಲ ಧಾತುವಲ್ಲ. ಸಾಮಾನ್ಯವಾಗಿ ಪದಸಮುದಾಯಗಳಿಗೆ ಪ್ರಾತಿಪದಿಕ ಸಂಜ್ಞೆ ಬರುವುದಾದರೆ ಸಮಾಸಕ್ಕೆ ಮಾತ್ರ. ಇತರ ವಾಕ್ಯಗಳಿಗೆ ಬರುವುದಿಲ್ಲವೆಂಬ ನಿಯಮವು ಇದರಿಂದ ತಿಳಿಯುತ್ತದೆ. ರಾಮ, ಕುಂಭಕಾರ ಮುಂತಾದವುಗಳು ಕೃದಂತಗಳು. ಔಪಗವ ದಾಶರಥಿ ಮುಂತಾದವುಗಳು ತದ್ಧಿತಾಂತಗಳು. ಅಕ್ಷಶೌಂಡ, ರಾಜಪುರುಷ, ಚಿತ್ರಗು ಮುಂತಾದವುಗಳು ಸಮಾಸಗಳು. ಇವುಗಳಿಗೆ ಪ್ರಾತಿಪದಿಕವೆಂಬ ಸಂಜ್ಞೆ ಈ ಸೂತ್ರದಿಂದ ಬರುತ್ತದೆ. ಇವು ನಾಮವಾಗುತ್ತವೆ. ಈಗ ಸಾಮಾನ್ಯ ನಾಮಪದಗಳನ್ನು ಸಂಸ್ಕೃತದಲ್ಲಿ ನಾಲ್ಕು ರೀತಿಯಾಗಿ ವಿಭಾಗಿಸಬಹುದು. 1) ಪ್ರಕೃತಿಪ್ರತ್ಯಯ ವಿಂಗಡಿಸಲು ಬಾರದ ನಾಮಪದ. ಇದಕ್ಕೆ ಅವ್ಯುತ್ಪನ್ನಪ್ರಾತಿಪದಿಕವೆಂದು ಹೆಸರು. ಅವ್ಯಯವೂ ಅವಯವಾರ್ಥವಿಲ್ಲದ ಹೆಸರೂ ಈ ಗುಂಪಿಗೆ ಸೇರುತ್ತವೆ. 2) ಕೃದಂತನಾಮ. 3) ತದ್ಧಿತಾಂತನಾಮ. 4) ಸಮಾಸ. ಇವುಗಳ ಸ್ವರೂಪವನ್ನು ಹಿಂದೆ ಹೇಳಿದೆ. ಹೀಗೆ ಪ್ರಾತಿಪದಿಕಸಂಜ್ಞೆಯನ್ನು ಹೇಳಿ ಮುಂದೆ ಅವುಗಳ ಮೇಲೆ ಬರುವ ವಿಭಕ್ತಿ ಪ್ರತ್ಯಯಗಳನ್ನು ಹೇಳುತ್ತಾನೆ. ಇದಕ್ಕೆ ಬೇಕಾಗುವ ಕೆಲವು ಅಧಿಕಾರ ಸೂತ್ರಗಳನ್ನು ಈಗಹೇಳುತ್ತಾನೆ.

(ಪ್ರತ್ಯಯಸಂಜ್ಞಾ ಹೇಳುವ ಅಧಿಕಾರ ಸೂತ್ರ)

## ೧೧೮. ಪ್ರತ್ಯಯಃ ॥ ೩-೧-೧ ॥

**ಆ ಪಂಚಮಸಮಾಪ್ತೇರಧಿಕಾರೋऽಯಮ್ ॥**

ಇದು ಒಂದು ಪದವುಳ್ಳ ಅಧಿಕಾರಸೂತ್ರ. ಇಲ್ಲಿ ಏನೂ ಕಾರ್ಯವಿಧಾನ ಮಾಡುವುದಿಲ್ಲ. ಇದು ಮೂರನೇ ಅಧ್ಯಾಯದ ಒಂದನೇಪಾದದ ಒಂದನೇ ಸೂತ್ರ. ಎಲ್ಲಿಯವರೆಗೆ ಇದರ ವ್ಯಾಪ್ತಿಯೆಂದು ವೃತ್ತಿಯಲ್ಲಿ ಹೇಳಿರುತ್ತಾನೆ. ಐದನೇ ಅಧ್ಯಾಯ ಮುಗಿಯುವವರೆಗೆ ಈ ಸೂತ್ರವು ಹೋಗಿ ಮುಂದಿನ ಸೂತ್ರದಲ್ಲಿದ್ದು ಇಲ್ಲಿ ಹೇಳುವುದು ಪ್ರತ್ಯಯ ಎಂದು ತಿಳಿಸುತ್ತದೆ. ಆದುದರಿಂದ ಮೂರನೇ ಅಧ್ಯಾಯ ದಿಂದ ಐದನೇ ಅಧ್ಯಾಯ ಮುಗಿಯುವವರೆಗೆ ಹೇಳುವುದೆಲ್ಲಾ ಪ್ರತ್ಯಯವೆಂದು ತಿಳಿಯಬೇಕು. "ಅರ್ಥಪ್ರತ್ಯಾಯಕತ್ವಂ ಪ್ರತ್ಯಯತ್ವಂ." ಯಾವುದಾದರೊಂದು ಅರ್ಥವನ್ನು ಹೇಳುವುದು ಪ್ರತ್ಯಯವೆಂದರ್ಥ. ಸ್ವಾರ್ಥಸ್ಥಳದಲ್ಲಿ ಪ್ರಕೃತಿಯ ಅರ್ಥ ವನ್ನೇ ಹೇಳುವುದಾದುದರಿಂದ ಸ್ವಾರ್ಥಿಕಪ್ರತ್ಯಯಗಳೂ ಅನ್ವರ್ಥವನ್ನು ಹೊಂದು ತ್ತವೆ. ಪ್ರತ್ಯಯಗಳು ಎಲ್ಲಿ ಬರುತ್ತವೆ? ಎಂಬುದನ್ನು ಮುಂದಿನ ಸೂತ್ರದಿಂದ ತಿಳಿಸುತ್ತಾನೆ.

(ಪ್ರತ್ಯಯಗಳು ಪರವಾಗಿ ಬರುತ್ತವೆಯೆಂದು ಹೇಳುವ ಸೂತ್ರ)

## ೧೧೯. ಪರಶ್ಚ ॥ ೩-೧-೨ ॥

**ಅಯಮಪಿ ತಥಾ ॥**

ಪರಃ ಚ ॥ ದ್ವಿಪದಸೂತ್ರ. ಇದೂ ಹಿಂದಿನಂತೆ ಅಧಿಕಾರಸೂತ್ರ. ಇದರ ವ್ಯಾಪ್ತಿಯೂ ಐದನೇ ಅಧ್ಯಾಯ ಪೂರ್ತಿ ಇದೆಯೆಂದು, "ಇದೂ ಹಾಗೆಯೇ" ಎಂದು ವೃತ್ತಿಯಲ್ಲಿ ಹೇಳಿರುತ್ತಾನೆ. ಮುಂದೆ ಹೇಳುವ ಪ್ರತ್ಯಯಗಳು ಪ್ರಕೃತಿಯ ಪರಕ್ಕೆ ಬರುತ್ತವೆಯೆಂದು ಪ್ರತಿ ಸೂತ್ರದಲ್ಲಿಯೂ ಹೋಗಿ ತಿಳಿಸುತ್ತದೆ.

(ಪ್ರತ್ಯಯದ ಪ್ರಕೃತಿ ವಿಶೇಷವನ್ನು ಹೇಳುವ ಸೂತ್ರ)

## ೧೨೦. ಙ್ಯಾಪ್ಪ್ರಾತಿಪದಿಕಾತ್ ॥ ೪-೧-೧ ॥

**ಙ್ಯಾಬಂತಾತ್, ಆಬಂತಾತ್, ಪ್ರಾತಿಪದಿಕಾತ್ ಇತ್ಯಾಪಂಚಮ ಸಮಾಪ್ತೇರಧಿಕಾರಃ ॥**

ಏಕಪದಸೂತ್ರ. ಙೀ ಚ, ಆಪ್ ಚ, ಪ್ರಾತಿಪದಿಕಂ ಚ ತೇಷಾಂ ಸಮಾಹಾರಃ ಙ್ಯಾಪ್ಪ್ರಾತಿಪದಿಕಮ್. ತಸ್ಮಾತ್ ಙ್ಯಾಪ್ಪ್ರಾತಿಪದಿಕಾತ್. ಇದೂ ಅಧಿಕಾರ ಸೂತ್ರ. ಇಲ್ಲಿ ಮೂರುಪದಗಳಿವೆ. ಙೀ, ಆಪ್, ಪ್ರಾತಿಪದಿಕ. ಪ್ರಾತಿಪದಿಕ ವೆಂದರೆ ಅರ್ಥವುಳ್ಳ ಶಬ್ದಸ್ವರೂಪವೆಂದು ಹಿಂದೆ ಹೇಳಿದೆ. ಇನ್ನುಳಿದವು ಸ್ತ್ರೀಲಿಂಗ

ಬೋಧಕ ಪ್ರತ್ಯಯಗಳು. ಙೀ ಎಂಬುದು ಙೀಪ್, ಙೀಷ್, ಙೀನ್, ಈ ಮೂರನ್ನೂ ತಿಳಿಸುವ ಸಾಮಾನ್ಯ ಪ್ರತ್ಯಯ. "ಹಲಂತ್ಯಮ್" ಎಂದು ಈ ಮೂರರ ಕೊನೆಗೆ ಇತ್ ಹೇಳಿ ಲೋಪಮಾಡಿದರೆ ಉಳಿಯುವುದು ಙೀ. ಆದುದರಿಂದ ಙೀ ಎಂಬುದರಿಂದ ಮೂರನ್ನು ತೆಗೆದುಕೊಳ್ಳಬೇಕು. ಆಪ್ ಎಂಬುದೂ ಟಾಪ್, ಡಾಪ್, ಚಾಪ್ ಎಂದು ಮೂರನ್ನೂ ಬೋಧಿಸುತ್ತದೆ. ಇಲ್ಲಿ ಆದಿಯ ವರ್ಣ ಲೋಪವಾದರೆ ಉಳಿಯುವುದು ಆಪ್ ಆಗ ಙ್ಯಂತ, ಆಬಂತವೆಂದರೆ ಈ ಆರು ಪ್ರತ್ಯಯಾಂತ ಶಬ್ದಗಳನ್ನು ತೆಗೆದುಕೊಳ್ಳಬೇಕು. ಪ್ರತ್ಯಯವಾದುದರಿಂದ ತದಂತ ಗ್ರಹಣ. ಇದು ನಾಲ್ಕನೇ ಅಧ್ಯಾಯದ ಮೊದಲನೆಯ ಸೂತ್ರ. ಇನ್ನು ಮುಂದೆ ಹೇಳುವ ಪ್ರತ್ಯಯಗಳು ಙ್ಯಂತದ ಮೇಲೂ, ಆಬಂತದಮೇಲೂ, ಪ್ರಾತಿಪದಿಕದ ಮೇಲೂ ಬರುತ್ತವೆ ಎಂದು ಈ ಅಧಿಕಾರಸೂತ್ರ ಬೋಧಿಸುತ್ತದೆ. ಙೀ, ಆಪ್ ಪ್ರತ್ಯಯಗಳಾದುದರಿಂದ ಬೇರೆ ಹೇಳಿರುತ್ತಾನೆ. ಈ ಮೂರು ಸೂತ್ರಗಳ ಅರ್ಥವನ್ನು ಸೇರಿಸಿ ಮುಂದಿನ ಸೂತ್ರಾರ್ಥವನ್ನು ಹೇಳಬೇಕು. ವಿಭಕ್ತಿಪ್ರತ್ಯಯಗಳನ್ನು ಹೇಳುವ ಸೂತ್ರವು ಇದರ ಮುಂದಿನ ಸೂತ್ರವಾದುದರಿಂದ ಅಲ್ಲಿ ಈ ಮೂರು ಸೂತ್ರಗಳೂ ಹೋಗಿ ತಮ್ಮ ಅರ್ಥವನ್ನು ಸೇರಿಸಿ ಒಂದರ್ಥವನ್ನುಂಟುಮಾಡುತ್ತವೆ. ಉತ್ತರಸೂತ್ರದೊಡನೆ ಐಕ್ಯಾರ್ಥವನ್ನು ಹುಟ್ಟಿಸುವುದೇ ಅಧಿಕಾರಸೂತ್ರದ ಲಕ್ಷಣವೆಂದು ಹಿಂದೆ ಹೇಳಿದೆ, ಹೀಗೆ ಅಧಿಕಾರಸೂತ್ರಗಳನ್ನು ಹೇಳಿ ಈಗ ವಿಭಕ್ತಿಪ್ರತ್ಯಯವನ್ನು ಹೇಳುತ್ತಾನೆ.

(ನಾಮವಿಭಕ್ತಿಪ್ರತ್ಯಯ ಹೇಳುವ ಸೂತ್ರ)

**೧೨೧. ಸ್ವೌಜಸಮೌಟ್ಛಷ್ಟಾಭ್ಯಾಮ್‌ಭಿಸ್ಙೇಭ್ಯಾಮ್‌ಭ್ಯಸ್ಙಸಿಭ್ಯಾಮ್ ಭ್ಯಸ್ಙಸೋಸಾಮ್ಙ್ಯೋಸ್ಸುಪ್ ॥ ೪-೧-೨ ॥**

ಸು ಔ ಜಸ್ ಇತಿ ಪ್ರಥಮಾ ॥ ಅಮ್ ಔಟ್ ಶಸ್ ಇತಿ ದ್ವಿತೀಯಾ ॥ ಟಾ ಭ್ಯಾಮ್ ಭಿಸ್ ಇತಿ ತೃತೀಯಾ । ಙೇ ಭ್ಯಾಮ್ ಭ್ಯಸ್ ಇತಿ ಚತುರ್ಥೀ । ಙಸಿ ಭ್ಯಾಮ್ ಭ್ಯಸ್ ಇತಿ ಪಂಚಮೀ । ಙಸ್ ಓಸ್ ಆಮ್ ಇತಿ ಷಷ್ಠೀ ॥ ಙಿ ಓಸ್ ಸುಪ್ ಇತಿ ಸಪ್ತಮೀ ॥

ಒಂದು ಪದವುಳ್ಳ ಸೂತ್ರ. ಸುಚ, ಔಚ, ಜಸ್ ಚ, ಅಮ್ ಚ, ಔಟ್ ಚ, ಶಸ್ ಚ, ಟಾಚ, ಭ್ಯಾಮ್ ಚ, ಭಿಸ್ ಚ, ಙೇಚ, ಭ್ಯಾಮ್ ಚ, ಭ್ಯಸ್ ಚ, ಙಸಿ ಚ, ಭ್ಯಾಮ್ ಚ, ಭ್ಯಸ್ ಚ, ಙಸ್ ಚ, ಓಸ್ ಚ, ಆಮ್ ಚ, ಙಿ ಚ, ಓಸ್ ಚ, ಸುಪ್ ಚ, ತೇಷಾಂ ಸಮಾಹಾರಃ । ಸ್ವೌಜಸ— ಸುಪ್ ॥ ಇಲ್ಲಿ ಇಪ್ಪತ್ತೊಂದು ಪ್ರತ್ಯಯಗಳನ್ನು ಹೇಳಿರುತ್ತಾನೆ. ಇವು ವಿಭಕ್ತಿಪ್ರತ್ಯಯಗಳು. ಸಂಸ್ಕೃತದಲ್ಲಿ ಏಳು

ವಿಭಕ್ತಿಗಳಿವೆ. 1) ಪ್ರಥಮಾ (ಉ) 2) ದ್ವಿತೀಯಾ, (ಅನ್ನು), 3) ತೃತೀಯಾ (ಇಂದ) 4) ಚತುರ್ಥಿ (ಓಸ್ಕರ ಗೆ ಕ್ಕೆ) 5) ಪಂಚಮೀ (ದೆಸೆಯಿಂದ) 6) ಷಷ್ಠೀ (ಅ ಗೆ) 7) ಸಪ್ತಮೀ (ಅಲ್ಲಿ) ಎಂದು ಇವುಗಳ ಹೆಸರು. ಈ ಪ್ರಥಮಾ ಮುಂತಾದ ಹೆಸರುಗಳು ಹಿಂದಿನ ವೈಯಾಕರಣರಿಂದ ಪರಂಪರೆಯಾಗಿ ಬಂದಿವೆ ಸಂಸ್ಕೃತದಲ್ಲಿ ಏಕವಚನ, ದ್ವಿವಚನ, ಬಹುವಚನವೆಂದು ಮೂರು ವಚನಗಳಿವೆ. ಆಗ ಒಂದೊಂದು ವಿಭಕ್ತಿಗೂ ಮೂರು ಮೂರು ವಚನಗಳೆಂದು ತಿಳಿಯಬೇಕು. ಈ ಪ್ರತ್ಯಯಗಳನ್ನು ಹಚ್ಚುವುದರಿಂದ ಒಂದೊಂದು ನಾಮಪದವೂ 21 ರೂಪವನ್ನು ಹೊಂದುತ್ತದೆ. ಉದ್ದೇಶಿಸಿ ಕಾರ್ಯ ವಿಧಿಸುವಾಗ ಸಂಬೋಧನೆಯು ಬರುತ್ತದೆ. ಇದಕ್ಕೆ ಸಂಬೋಧನ ಪ್ರಥಮಾ ಎಂದು ಹೆಸರು. ಇವುಗಳ ವಿವೇಕವನ್ನು ಪ್ರತ್ಯೇಕ ಸೂತ್ರದಿಂದ ಮುಂದೆ ವಿವರಿಸುತ್ತಾನೆ. ಈ ಸೂತ್ರದ ವೃತ್ತಿಯಲ್ಲಿ ಆ ಏಳು ವಿಭಕ್ತಿಯನ್ನು ಬಿಡಿಸಿ ತೋರಿಸಿರುತ್ತಾನೆ: ಸು, ಔ, ಜಸ್ ಈ ಮೂರು ಪ್ರಥಮಾವಿಭಕ್ತಿಯ ಪ್ರತ್ಯಯಗಳು. ಅಮ್, ಔಟ್, ಶಸ್, ದ್ವಿತೀಯಾವಿಭಕ್ತಿ. ಟಾ, ಭ್ಯಾಮ್, ಭಿಸ್, ತೃತೀಯಾವಿಭಕ್ತಿ. ಙೇ, ಭ್ಯಾಮ್, ಭ್ಯಸ್, ಚತುರ್ಥೀವಿಭಕ್ತಿ. ಙಸಿ, ಭ್ಯಾಮ್, ಭ್ಯಸ್, ಪಂಚಮೀವಿಭಕ್ತಿ. ಙಸ್, ಓಸ್, ಆಮ್ ಷಷ್ಠೀವಿಭಕ್ತಿ. ಙಿ ಓಸ್, ಸುಪ್, ಸಪ್ತಮೀವಿಭಕ್ತಿ. ಈ ಏಳು ವಿಭಕ್ತಿಗಳಿಗೆ ಹಿಂದೆ ಅರ್ಥವನ್ನು ಕುಂಡಲಿಯಲ್ಲಿ ಹೇಳಿದೆ. ಇಲ್ಲಿ ಮೊದಲನೆಯ ಸು ತೆಗೆದುಕೊಂಡು ಕೊನೆಯ ಪ್ ಸೇರಿಸಿ ಹೇಳಿದರೆ ಸುಪ್ ಎಂದಾಗುತ್ತದೆ ಆಗ 21 ಪ್ರತ್ಯಯಗಳಿಗೂ ಸಂಜ್ಞೆಯಾಗುತ್ತವೆ, ಸುಪ್ ಪ್ರತ್ಯಾಹಾರ. ಸುಪ್ ವಿಭಕ್ತಿಯೆಂದರೆ ಈ 21 ಪ್ರತ್ಯಯಗಳೆಂದರ್ಥವಾಗುತ್ತದೆ. ಇಲ್ಲಿ ಹಿಂದೆ ಹೇಳಿದ ಮೂರು ಅಧಿಕಾರ ಸೂತ್ರಗಳು ಬರುವುದರಿಂದ ಆಗುವ ಸೂತ್ರಾರ್ಥ. ಸು ಮುಂತಾದ 21, ಪ್ರತ್ಯಯ ಸಂಜ್ಞೆಯನ್ನು ಹೊಂದಿ ಙ್ಯಂತದ ಮೇಲೂ ಆಬಂತದ ಮೇಲೂ ಪ್ರಾತಿಪದಕದ ಮೇಲೂ (ಪರವಾಗಿ) ಬರುತ್ತವೆ. ಪ್ರಕೃತ ರಾಮ ಎಂಬುದು ಪ್ರಾತಿಪದಿಕ. ರಮ್ (ಕ್ರೀಡಾಯಾಂ) ಧಾತುವಿನ ಮೇಲೆ ಘಞ್ (ಅ ಉಳಿಕೆ) ಪ್ರತ್ಯಯ ಬಂದು ರಾಮ ಎಂದಾಗಿದೆ. ಇದು ಕೃದಂತ ಪ್ರಾತಿಪದಿಕ. ಇದರ ಪರಕ್ಕೆ ಸು ಮುಂತಾದ 21 ಪ್ರತ್ಯಯಗಳು ಬರುತ್ತವೆ. "ಖಲೇಕಪೋತನ್ಯಾಯ"ದಿಂದ ಅಂದರೆ ಕಣದಲ್ಲಿ ಅಕ್ಕಿಯ ಕಾಳನ್ನು ಹರವಿದಾಗ ಎಲ್ಲಾ ಪಾರಿವಾಳಗಳೂ ಏಕಕಾಲದಲ್ಲಿ ಎರಗುವಂತೆ ರಾಮವೆಂಬ ಒಂದು ಪ್ರಾತಿಪದಿಕದ ಮೇಲೆ ಏಕಕಾಲದಲ್ಲಿ ಈ 21 ಪ್ರತ್ಯಯಗಳೂ ಪ್ರಾಪ್ತವಾಗುತ್ತವೆ. ಹಾಗೆ ಬಂದರೆ ಅರ್ಥಸಮಂಜಸವಾಗಲೀ ರೂಪ ಸಿದ್ಧಿಯಾಗಲೀ ಆಗುವುದಿಲ್ಲ. ಅದಕ್ಕೋಸ್ಕರ ಅವುಗಳನ್ನು ವಿಂಗಡಿಸುತ್ತಾನೆ.

(ವಚನವಿಧಾಯಕ ಸೂತ್ರ)

೧೨೨. ಸುಪಃ ॥ ೧-೪-೧೦೩ ॥

**ಸುಪಸ್ತ್ರೀಣಿ ತ್ರೀಣಿ ವಚನಾನ್ಯೇಕಶ ಏಕವಚನದ್ವಿವಚನ ಬಹು ವಚನಸಂಜ್ಞಾನಿ ಸ್ಯುಃ ॥**

ಏಕಪದಸೂತ್ರ. ಸುಪ್ ಪ್ರತ್ಯಾಹಾರ. ಹಿಂದೆ ಹೇಳಿದ 21 ಪ್ರತ್ಯಯಗಳೂ ಇದರಿಂದ ಬೋಧಿತವಾಗುತ್ತವೆ. ಸುಪಃ ಎಂಬುದು ಷಷ್ಠೀಏಕವಚನ. "ತಾನ್ಯೇಕವಚನದ್ವಿವಚನ ಬಹುವಚನಾನ್ಯೇಕಶಃ" ಸೂತ್ರದಿಂದ ಏಕವಚನದ್ವಿವಚನಬಹುವಚನಾನಿ, ಏಕಶಃ ಎಂದು ಎರಡುಪದಗಳು ಅನುವೃತ್ತವಾಗುತ್ತವೆ. ಏಕಶಃ ಅಂದರೆ ಒಂದೊಂದೂ ಎಂದರ್ಥ. "ತಿಙಸ್ತ್ರೀಣಿ ತ್ರೀಣಿ" ಸೂತ್ರದಿಂದ ತ್ರೀಣಿ ತ್ರೀಣಿ ಅನುವೃತ್ತವಾಗುತ್ತವೆ. ಇದಕ್ಕೆ ಸುಪಃ ಎಂಬುದರೊಡನೆ ಅನ್ವಯ. **ಸೂತ್ರಾರ್ಥ.** ಸುಪಿನ ಮೂರು ಮೂರುವಚನಗಳೂ ಕ್ರಮವಾಗಿ ಒಂದೊಂದೂ ಏಕವಚನ, ದ್ವಿವಚನ, ಬಹುವಚನವೆಂಬ ಸಂಜ್ಞೆಯನ್ನು ಹೊಂದುತ್ತವೆ. ಸುಪ್ ಅಂದರೆ 21 ವಿಭಕ್ತಿಪ್ರತ್ಯಯ. ಇದರಲ್ಲಿ ಮೂರು ಮೂರು ಅವಯವವುಳ್ಳ 7 ವಿಭಕ್ತಿಗಳಿವೆಯೆಂದು ಹಿಂದೆ ಹೇಳಿದೆ. ಆ ಮೂರು ಮೂರರಲ್ಲಿ ಒಂದೊಂದಕ್ಕೆ ಸೂತ್ರದಿಂದ ಸಂಜ್ಞೆ ಹೇಳುತ್ತಾನೆ. ಉದಾಹರಣೆಗಾಗಿ ಪ್ರಥಮಾದಲ್ಲಿ ಸು, ಔ, ಜಸ್ ಎಂದು ಮೂರು ಅವಯವಗಳು ಇವೆಯಷ್ಟೆ. ಅಲ್ಲಿ ಸು ಏಕವಚನ, ಔ ದ್ವಿವಚನ ಜಸ್ ಬಹುವಚನವಾಗುತ್ತವೆ. ಹೀಗೆ ದ್ವಿತೀಯಾದಿಗಳಲ್ಲೂ ಊಹಿಸಿಕೊಳ್ಳಬೇಕು. ಪ್ರಕೃತ ರಾಮನು ಎಂಬರ್ಥವಿವಕ್ಷೆಮಾಡಿದಾಗ ಪ್ರಥಮಾವಿಭಕ್ತಿಯ ಮೂರು ಪ್ರತ್ಯಯಗಳು ಬರುತ್ತವೆ. ಆಗ ಹದಿನೆಂಟು ಪ್ರತ್ಯಯಗಳನ್ನು ವ್ಯಾವೃತ್ತಿ ಪಡಿಸಿದಂತಾಗುತ್ತದೆ. ಸು, ಔ ಜಸ್‌ಗಳೂ ಕೂಡಾ ಏಕಕಾಲದಲ್ಲಿ ಪ್ರಾಪ್ತವಾದರೆ ಎರಡನ್ನು ವ್ಯಾವೃತ್ತಿಪಡಿಸಬೇಕು. ಆದಕ್ಕೋಸ್ಕರ ಈ ಪ್ರತ್ಯಯಗಳು ಯಾವ ಅರ್ಥದಲ್ಲಿ ಬರುತ್ತವೆಂದು ಮುಂದೆ ಹೇಳುತ್ತಾನೆ.

(ದ್ವಿವಚನ ಬಹುವಚನ ಪ್ರತ್ಯಯಾರ್ಥ ಹೇಳುವ ಸೂತ್ರ)

## ೧೨೩. ದ್ವ್ಯೇಕಯೋರ್ದ್ವಿವಚನೈಕವಚನೇ ॥ ೧-೪-೨೨ ॥

**ದ್ವಿತ್ವೈಕತ್ವಯೋರೇತೇ ಸ್ತಃ ॥**

ದ್ವ್ಯೇಕಯೋಃ, ದ್ವಿವಚನೈಕವಚನೇ । ದ್ವಿಪದಸೂತ್ರ. ಇಲ್ಲಿ ದ್ವಿ. ಏಕ ಸೇರಿದರೆ ಮೂರಾಗುವುದರಿಂದ ಬಹುವಚನ ಬರಬೇಕಾಗುತ್ತದೆ. ಆದರೆ ದ್ವಿ ಎಂಬುದರಿಂದ ದ್ವಿತ್ವವನ್ನೂ ಏಕ ಪದದಿಂದ ಏಕತ್ವ ಸಂಖ್ಯೆಯನ್ನೂ ತೆಗೆದುಕೊಳ್ಳಬೇಕು. ದ್ವಿತ್ವ, ಏಕತ್ವ, ಎರಡೇ ಆದುದರಿಂದ ದ್ವಿವಚನ ಸಂಗತವಾಗುತ್ತದೆ. **ಸೂತ್ರಾರ್ಥ.** ಪದಾರ್ಥದಲ್ಲಿ ದ್ವಿತ್ವಸಂಖ್ಯಾ ತೋರಿದರೆ ದ್ವಿವಚನ ಪ್ರತ್ಯಯವೂ ಏಕತ್ವಸಂಖ್ಯಾ ತೋರಿದರೆ ಏಕವಚನ ಪ್ರತ್ಯಯವೂ ಬರುತ್ತದೆ.

ಪ್ರಕೃತ ಒಬ್ಬ ರಾಮನು ಎಂಬರ್ಥವನ್ನು ವಿವಕ್ಷಾ ಮಾಡುವುದರಿಂದ ಪ್ರಥಮಾ ವಿಭಕ್ತಿಯ ಏಕವಚನವಾದ ಸು ಪ್ರತ್ಯಯ ಬರುತ್ತದೆ. ಆಗ ಉಳಿದ ಎರಡು ಪ್ರತ್ಯಯ

ಗಳು ವ್ಯಾವೃತ್ತವಾಗುತ್ತವೆ. ಸು ಎಂಬಲ್ಲಿ ಉಕಾರ "ಉಪದೇಶೇಜನುನಾಸಿಕಇತ್" ಸೂತ್ರದಿಂದ ಇತ್ತಾಗುತ್ತದೆ. "ತಸ್ಯ ಲೋಪಃ" ಎಂಬುದರಿಂದ ಅದಕ್ಕೆ ಲೋಪ. ಸ್ ಉಳಿಯುತ್ತದೆ. ರಾಮ+ಸ್ ಎಂದಿರುವಾಗ ಮುಂದಿನ ಕಾರ್ಯಕ್ಕೋಸ್ಕರ ಅವಸಾನ ಸಂಜ್ಞೆಯನ್ನು ಹೇಳುತ್ತಾನೆ.

(ಅವಸಾನಸಂಜ್ಞಾ ವಿಧಾಯಕ ಸೂತ್ರ)

## ೧೨೪. ವಿರಾಮೋಽವಸಾನಮ್ ॥ ೧-೪-೧೧೦ ॥

**ವರ್ಣಾನಾಮಭಾವೋಽವಸಾನಸಂಜ್ಞಃ ಸ್ಯಾತ್ ॥ ರುತ್ವ ವಿಸರ್ಗೌ ॥ ರಾಮಃ ॥**

ವಿರಾಮಃ ಅವಸಾನಮ್ ॥ ದ್ವಿಪದಸೂತ್ರ. ವಿರಮ್ಯತೇ ಅಸ್ಮಿನ್ ಇತಿ ವಿರಾಮಃ । ಯಾವ ವರ್ಣ ಉಚ್ಚರಿಸಿದೊಡನೇ ಮುಗಿಯುತ್ತದೋ ಮುಂದೆ ವರ್ಣಗಳು ಇರುವುದಿಲ್ಲವೋ ಅದು ವಿರಾಮ. ಆಗ ಕೊನೆಯ ವರ್ಣವೂ ವಿರಾಮವಾಗಬಹುದು, ಮುಂದಿನ ಶೂನ್ಯವೂ ವಿರಾಮವಾಗಬಹುದು. ವೃತ್ತಿಯಲ್ಲಿ ಎರಡನೇ ಅರ್ಥವನ್ನೇ ಇಟ್ಟುಕೊಂಡು ವಿವರಿಸುತ್ತಾನೆ. **ಸೂತ್ರಾರ್ಥ.** ಮುಂದೆ ಯಾವವರ್ಣಗಳೂ ಇಲ್ಲದಿರುವುದೇ ಅವಸಾನ ಸಂಜ್ಞೆಯನ್ನು ಹೊಂದುತ್ತದೆ. ಪ್ರಕೃತ ರಾಮಸ್ ಎಂಬಲ್ಲಿ ಸ್ ಅವಸಾನ. ಅಥವಾ ಸ್ ಎಂಬುದರ ಮುಂದಿನ ಶೂನ್ಯಕ್ಕೆ ಅವಸಾನ ಸಂಜ್ಞೆ ಬರುತ್ತದೆ. ರಾಮಸ್ ಎಂಬುದು ಸುಬಂತವಾದುದರಿಂದ ಪದ. ಪದದ ಅಂತ್ಯದಲ್ಲಿ ಸಕಾರವಿರುವುದರಿಂದ "ಸಸಜುಷೋರುಃ" ಸೂತ್ರದಿಂದ ಅದಕ್ಕೆ ರುತ್ವ. ರಾಮರ್ ಎಂದಾಗುತ್ತದೆ. ರ್ ಎಂಬುದಕ್ಕೆ ಅವಸಾನ ಪರವಾದುದರಿಂದ (ಏನೂ ಮುಂದೆ ಇಲ್ಲದಿರುವುದರಿಂದ) "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ವಿಸರ್ಗ. ರಾಮಃ ರಾಮನು. ಇಬ್ಬರು ರಾಮರು ಎಂದರ್ಥವಿವಕ್ಷಾಮಾಡಿದಾಗ ದ್ವಿವಚನವಾದ ಔ ಪ್ರತ್ಯಯ ಬರುತ್ತದೆ. ಆದರೆ ರಾಮ, ರಾಮ ಎಂದು ಎರಡು ಪ್ರಾತಿಪದಕವನ್ನು ಹೇಳಬೇಕಾಗುತ್ತದೆ. ಈ ಪ್ರಯೋಗವನ್ನು ನಿವಾರಣೆ ಮಾಡಲು ಏಕಶೇಷ ವಿಧಾಯಕಸೂತ್ರವನ್ನು ಹೇಳುತ್ತಾನೆ.

(ಏಕಶೇಷವನ್ನು ಹೇಳುವ ಸೂತ್ರ)

## ೧೨೫. ಸರೂಪಾಣಾಮೇಕಶೇಷ ಏಕವಿಭಕ್ತೌ ॥

**ಏಕವಿಭಕ್ತೌ ಯಾನಿ ಸರೂಪಾಣ್ಯೇವ ದೃಷ್ಟಾನಿ ತೇಷಾಮೇಕ ಏವ ಶಿಷ್ಯತೇ ॥**

ಸರೂಪಾಣಾಂ, ಏಕಶೇಷಃ, ಏಕವಿಭಕ್ತೌ ॥ ತ್ರಿಪದಸೂತ್ರ. ಸಮಾನಂ ರೂಪಂ ಯೇಷಾಂ ತಾನಿ ಸರೂಪಾಣಿ, ತೇಷಾಂ ಸರೂಪಾಣಾಮ್. ಶಿಷ್ಯತೇ ಇತಿ ಶೇಷಃ. ಏಕಶ್ಚಾಸೌ ಶೇಷಶ್ಚ ಏಕಶೇಷಃ. ಏಕಸ್ಯಾಂ ವಿಭಕ್ತೌ ಏಕವಿಭಕ್ತೌ.

"ವೃದ್ಧೋ ಯೂನಾ—" ಸೂತ್ರದಿಂದ "ಏವ" ಪದವು ಅನುವೃತ್ತವಾಗುತ್ತದೆ. ಒಂದು ವಿಭಕ್ತಿಪರದಲ್ಲಿರುವಾಗ ಸಮಾನವಾದ ರೂಪವುಳ್ಳವುಗಳೇ ಅನೇಕವಿದ್ದರೆ ಅವುಗಳಮಧ್ಯದಲ್ಲಿ ಒಂದೇರೂಪ ಉಳಿಯುತ್ತದೆ. ಉಳಿದವೆಲ್ಲವೂ ಲೋಪವಾಗುತ್ತವೆಂದು ಈ ಪದಗಳಿಂದ ತಿಳಿಯುತ್ತದೆ. **ಸೂತ್ರಾರ್ಥ.** ಒಂದು ವಿಭಕ್ತಿಪರವಾದಾಗ ಯಾವ ಅನೇಕರೂಪಗಳು ಸಮಾನ ಆನುಪೂರ್ವಿಯಿಂದಲೇ ಇರುತ್ತವೆಯೋ ಅವುಗಳಲ್ಲಿ ಒಂದೇ ಉಳಿಯುತ್ತದೆ. ಪ್ರಕೃತ ಔ ಎಂಬ ವಿಭಕ್ತಿಪರವಾದಾಗ ರಾಮ ರಾಮವೆಂಬ ಸಮಾನರೂಪವುಳ್ಳ ಎರಡು ಪದಗಳು ದೃಷ್ಟವಾಗಿವೆ. ಅವುಗಳಲ್ಲಿ ಒಂದೇ ರಾಮವೆಂಬ ರೂಪ ಉಳಿಯುತ್ತದೆ. ಈ ಉಳಿದಿರುವ ಶಬ್ದವು ಲೋಪವಾದುದರ ಅರ್ಥವನ್ನೂ ಹೇಳುತ್ತದೆ. "ಯಃ ಶಿಷ್ಯತೇ ಸ ಲುಪ್ಯಮಾನಾರ್ಥಾಭಿಧಾಯೀ" ಲೋಪವಾದುದರ ಅರ್ಥವನ್ನು ಉಳಿದದ್ದು ಹೇಳುತ್ತದೆಂದು ಆಕರದಲ್ಲಿ ಹೇಳಿದೆ, ಪ್ರಕೃತ ರಾಮವೆಂದು ಒಂದೇ ಪದ ಉಳಿದರೆ ರಾಮ+ಔ ಎಂದಾಗುತ್ತದೆ. ವಾಸ್ತವವಾಗಿ ಇಲ್ಲಿ ಅಕಾರಕ್ಕೆ ಏಚ್ ಪರವಾದುದರಿಂದ ವೃದ್ಧಿ ಬರಬೇಕು. ಆದರೆ ಕ್ರಮಪ್ರಾಪ್ತವಾಗುವ ಕೆಲವು ಕಾರ್ಯಗಳನ್ನು ಆಶಂಕಿಸುತ್ತಾನೆ.

(ಪೂರ್ವಸವರ್ಣದೀರ್ಘಹೇಳುವ ಸೂತ್ರ)

## ೧೨೬ ಪ್ರಥಮಯೋಃ ಪೂರ್ವಸವರ್ಣಃ ॥ ೬-೧-೧೦೨ ॥

**ಅಕಃ ಪ್ರಥಮಾದ್ವಿತೀಯಯೋರಚಿ ಪೂರ್ವಸವರ್ಣದೀರ್ಘ ಏಕಾದೇಶಃ ಸ್ಯಾತ್ ಇತಿ ಪ್ರಾಪ್ತೇ ॥**

ದ್ವಿಪದಸೂತ್ರ. "ಏಕಃ ಪೂರ್ವಪರಯೋಃ" ಅಧಿಕಾರ. "ಅಕಃ ಸವರ್ಣೇ" ಸೂತ್ರದಿಂದ "ಅಕಃ" "ಇಕೋಯಣಚಿ" ಸೂತ್ರದಿಂದ "ಅಚಿ" ಅನುವೃತ್ತವಾಗುತ್ತವೆ. ಇಲ್ಲಿ ಪ್ರಥಮಾಶಬ್ದವು ಪ್ರಥಮಾದ್ವಿತೀಯಾ ಎರಡು ವಿಭಕ್ತಿಯನ್ನೂ ಹೇಳುತ್ತದೆ. ಪ್ರಥಮಯೋಃ ಅವಯವಾರ್ಥದಲ್ಲಿ ಷಷ್ಠೀ. ಅಚಿನಲ್ಲಿ ಅನ್ವಯ. **ಸೂತ್ರಾರ್ಥ.** ಅಕ್ಕಿಗೆ (ಅ. ಇ ಉ. ಋ ಌ) ಪ್ರಥಮಾ, ದ್ವಿತೀಯಾ ವಿಭಕ್ತಿಯ ಅಚ್ ಪರವಾದಾಗ ಪೂರ್ವ ಪರಗಳ ಸ್ಥಾನಕ್ಕೆ ಪೂರ್ವಸವರ್ಣ ದೀರ್ಘವು ಏಕಾದೇಶವಾಗಿ ಬರುತ್ತದೆ. ಪೂರ್ವದ ಅಕ್ ವರ್ಣಕ್ಕೂ ಪರದ ಅಚ್ ವರ್ಣಕ್ಕೂ ಒಂದೇ ಆದ ಪೂರ್ವದ ಸವರ್ಣದೀರ್ಘ ಬರುತ್ತದೆ. ಪ್ರಕೃತ ರಾಮಔ ಎಂದಿರುವಾಗ ಅಕ್ ಮಕಾರದ ಮೇಲಿರುವ ಅಕಾರ. ಇದಕ್ಕೆ ಪ್ರಥಮಾವಿಭಕ್ತಿಯ ಅಚ್ಚಾದ ಔ ಪರವಾಗಿದೆ. ಆದುದರಿಂದ ಅಕಾರ ಔಕಾರಗಳಿಗೆ ಒಟ್ಟಿಗೆ ಪೂರ್ವದ ಸವರ್ಣವಾದ ದೀರ್ಘವೆಂದರೆ ಆಕಾರವು ಪ್ರಾಪ್ತವಾಗಬೇಕು. ಆದರೆ ಇದಕ್ಕೆ ಅಪವಾದ ಸೂತ್ರವನ್ನು ಹೇಳುತ್ತಾನೆ.

(ಪೂರ್ವಸವರ್ಣ ನಿಷೇಧ ಹೇಳುವ ಸೂತ್ರ)

## ೧೨೭. ನಾದಿಚಿ ॥ ೬-೧-೧೦೪ ॥

**ಆದಿಚಿ ನ ಪೂರ್ವಸವರ್ಣದೀರ್ಘಃ ॥ ವೃದ್ಧಿರೇಚಿ । ರಾಮೌ ॥**

ನ, ಅತ್, ಇಚಿ || ತ್ರಿಪದಸೂತ್ರ. 'ಪೂರ್ವಸವರ್ಣಃ,' 'ದೀರ್ಘಃ' ಹಿಂದಿನ ಸೂತ್ರದಿಂದ ಅನುವೃತ್ತವಾಗುತ್ತವೆ. ಅತ್ ಪಂಚಮೀ. **ಸೂತ್ರಾರ್ಥ.** ಅಕಾರಕ್ಕೆ ಇಚ್‌ಪರವಾದರೆ ಪೂರ್ವಸವರ್ಣದೀರ್ಘವು ಬರುವುದಿಲ್ಲ. ಇಚ್ ಪ್ರತ್ಯಾಹಾರ. ಅಕಾರ ಬಿಟ್ಟು ಉಳಿದ ಸ್ವರಗಳು. ಪ್ರಕೃತ ಅಕಾರಕ್ಕೆ ಔಕಾರರೂಪ ಇಚ್ ಪರವಾದುದರಿಂದ ಪೂರ್ವಸವರ್ಣದೀರ್ಘ ಬರುವುದಿಲ್ಲ. ಆಗ ಸಾಮಾನ್ಯಸೂತ್ರವಾದ 'ವೃದ್ಧಿರೇಚಿ' ಎಂಬ ಸೂತ್ರದಿಂದ ಅಕಾರಕ್ಕೆ ಏಚ್‌ಪರವಾದುದರಿಂದ ಔಕಾರರೂಪ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ರಾಮೌ. ಇಬ್ಬರು ರಾಮರು.

ಒಬ್ಬನು ಎಂದು ವಿವಕ್ಷಾಮಾಡಿದಾಗ ಏಕವಚನಪ್ರತ್ಯಯವಾದ ಸು ಬರುತ್ತದೆಂದೂ ಇಬ್ಬರು ಎಂದು ವಿವಕ್ಷಾಮಾಡಿದಾಗ ದ್ವಿವಚನ ಔ ಬರುತ್ತದೆಂದೂ ತಿಳಿಸಿದ್ದಾಯಿತು. ಈಗ ಮೂರು ರಾಮರು ಅಥವಾ ಬಹುರಾಮರು ಎಂದು ವಿವಕ್ಷಾಮಾಡಿದಾಗ ಬರುವ ಪ್ರತ್ಯಯವನ್ನು ಹೇಳುತ್ತಾನೆ.

(ಬಹುವಚನ ಪ್ರತ್ಯಯ ವಿಧಾಯಕ ಸೂತ್ರ)

## ೧೨೮. ಬಹುಷು ಬಹುವಚನಮ್ || ೧-೪-೨೧ ||

### ಬಹುತ್ವವಿವಕ್ಷಾಯಾಂ ಬಹುವಚನಂ ಸ್ಯಾತ್ ||

ದ್ವಿಪದಸೂತ್ರ. ಇಲ್ಲಿ ಬಹು ಎಂಬುದು ಬಹುತ್ವಸಂಖ್ಯಾ ವಾಚಕ. ಪದಾರ್ಥದಲ್ಲಿರುವ ಬಹುತ್ವಸಂಖ್ಯಾ ವಿವಕ್ಷೆ ಮಾಡಿದಾಗ ಬಹುವಚನ ಪ್ರತ್ಯಯ ಬರುತ್ತದೆ. ಬಹುತ್ವಸಂಖ್ಯಾ ಒಂದಾದುದರಿಂದ ಬಹುಷು ಎಂದು ಬಹುವಚನ ಹೇಳಿರುವುದು ಹೇಗೆ ಎಂಬ ಶಂಕೆ ಬರುತ್ತದೆ. ಬಹುತ್ವಸಂಖ್ಯೆಯುಳ್ಳ ದ್ರವ್ಯದಲ್ಲಿ ಅನೇಕ ಅವಯವಗಳಿವೆಯಷ್ಟೆ. ಆ ಅವಯವಗಳ ವಿವಕ್ಷೆಯಿಂದ ಬಹುಷು ಎಂದು ಬಹುವಚನ ಹೇಳಿದೆ. ಪ್ರಕೃತ ಬಹುರಾಮರು ಎಂದು ವಿವಕ್ಷೆಮಾಡಿದುದರಿಂದ ಪ್ರಥಮಾಬಹುವಚನವಾದ ಜಸ್ ಪ್ರತ್ಯಯ ಬರುತ್ತದೆ. ಹಿಂದಿನಂತೆ ಎಷ್ಟು ರಾಮರಿರುವರೋ ಅಷ್ಟುಸಲ ರಾಮಪ್ರಕೃತಿಯನ್ನು ಹೇಳಬೇಕಾದಾಗ "ಸರೂಪಾಣಾಮೇಕಶೇಷ ಏಕವಿಭಕ್ತೌ" ಎಂಬುದರಿಂದ ಒಂದೇ ರೂಪ ಉಳಿಯುತ್ತದೆ. ಹೀಗೆ ಮುಂದೆ ಪ್ರತಿಯೊಂದು ದ್ವಿವಚನ ಬಹುವಚನಗಳಲ್ಲಿಯೂ ಈ ಸೂತ್ರಕಾರ್ಯವನ್ನು ಮಾಡಿಕೊಳ್ಳಬೇಕು.

ಪ್ರಕೃತ ರಾಮ + ಜಸ್ ಎಂದಿರುವಾಗ ಪ್ರತ್ಯಯದಲ್ಲಿ ಉಳಿಯುವ ವರ್ಣನಿಷ್ಪತ್ತಿಗೋಸ್ಕರ ಲೋಪ ಹೇಳುವ ಸೂತ್ರವನ್ನು ನಿರ್ದೇಶಿಸುತ್ತಾನೆ.

(ಪ್ರತ್ಯಯದಲ್ಲಿ ಇತ್ತನ್ನು ಹೇಳುವ ಸೂತ್ರ)

## ೧೨೯. ಚುಟೂ || ೧-೩-೭ ||

### ಪ್ರತ್ಯಯಾದ್ಯೌ ಚುಟೂ ಇತೌ ಸ್ತಃ ||

ಏಕಪದಸೂತ್ರ. "ಉಪದೇಶೇಜನುನಾಸಿಕ ಇತ್" ಸೂತ್ರದಿಂದ "ಇತ್" "ಷಃಪ್ರತ್ಯಯಸ್ಯ" ಸೂತ್ರದಿಂದ "ಪ್ರತ್ಯಯಸ್ಯ" "ಆದಿರ್ಞಿಟುಡವಃ" ಸೂತ್ರದಿಂದ "ಆದಿಃ" ಅನುವೃತ್ತವಾಗುತ್ತವೆ. "ಆದಿಃ" ಎಂಬುದನ್ನು ದ್ವಿವಚನಾಂತವಾಗಿ ವಿಪರಿಣಾಮ ಮಾಡಿಕೊಳ್ಳಬೇಕು. ಚುಶ್ಚ ಟುಶ್ಚ ಚುಟೂ. ಉದಿತ್ತಾದುದರಿಂದ ಚವರ್ಗಟವರ್ಗಗಳೆಂದರ್ಥ. **ಸೂತ್ರಾರ್ಥ.** ಪ್ರತ್ಯಯದ ಆದಿಯಲ್ಲಿರುವ ಚವರ್ಗ ಟವರ್ಗಗಳು ಇತ್ ಸಂಜ್ಞೆಯನ್ನು ಹೊಂದುತ್ತವೆ. ಜಸ್ ಪ್ರತ್ಯಯದ ಆದಿಯಲ್ಲಿ ಜಕಾರವಿದೆ. ಚವರ್ಗವಾದುದರಿಂದ ಅದಕ್ಕೆ ಇತ್ ಸಂಜ್ಞೆ ಬಂದರೆ "ತಸ್ಯಲೋಪಃ" ಸೂತ್ರದಿಂದ ಕೊನೆಯ ಸಕಾರಕ್ಕೆ ಇತ್ ಸಂಜ್ಞಾ ಬಂದು ಲೋಪ ಪ್ರಾಪ್ತವಾದರೆ ಅದಕ್ಕೆ ಅಪವಾದವನ್ನು ಹೇಳುತ್ತಾನೆ. ಅಪವಾದ ಸೂತ್ರವು ವಿಭಕ್ತಿ ಎಂಬ ಪದದಿಂದ ಕೂಡಿರುವುದರಿಂದ ಮೊದಲು ವಿಭಕ್ತಿ ಸಂಜ್ಞೆಯನ್ನು ಹೇಳುತ್ತಾನೆ.

(ವಿಭಕ್ತಿ ಸಂಜ್ಞಾ ವಿಧಾಯಕ ಸೂತ್ರ)

## ೧೩೦. ವಿಭಕ್ತಿಶ್ಚ ॥ ೧-೪-೧೦೪ ॥

**ಸುಪ್ತಿಙೌ ವಿಭಕ್ತಿಸಂಜ್ಞೌ ಸ್ತಃ ॥**

ವಿಭಕ್ತಿಃ, ಚ, ॥ ದ್ವಿಪದಸೂತ್ರ. "ಸುಪಃ" "ತಿಙಸ್ತ್ರೀಣಿ"…. ಸೂತ್ರದಿಂದ "ತಿಙಃ" ಎಂದೂ ಅನುವೃತ್ತವಾಗುತ್ತವೆ. **ಸೂತ್ರಾರ್ಥ.** ಸುಪ್ ತಿಙ್ ಪ್ರತ್ಯಯಗಳು ವಿಭಕ್ತಿ ಸಂಜ್ಞೆಯನ್ನು ಹೊಂದುತ್ತವೆ. ಸುಪ್ ಅಂದರೆ ಹಿಂದೆ ಹೇಳಿದ 21 ಪ್ರತ್ಯಯ, ತಿಙ್ ಅಂದರೆ ಧಾತುವಿನ ಮೇಲೆ ಬರುವ 18 ಪ್ರತ್ಯಯಗಳು. ಇವೆರಡಕ್ಕೂ ವಿಭಕ್ತಿ ಎಂದು ಹೆಸರು. ಪ್ರಕೃತ ಜಸ್‌ಪ್ರತ್ಯಯ ಸುಪ್ ಆದುದರಿಂದ ಅದಕ್ಕೆ ವಿಭಕ್ತಿ ಸಂಜ್ಞೆ ಬರುತ್ತದೆ.

(ವಿಭಕ್ತಿಯಲ್ಲಿ ಇತ್‌ಸಂಜ್ಞಾ ನಿಷೇಧ ಹೇಳುವ ಸೂತ್ರ)

## ೧೩೧. ನ ವಿಭಕ್ತೌ ತುಸ್ಮಾಃ ॥ ೧-೩-೪ ॥

**ವಿಭಕ್ತಿಸ್ಥಾಸ್ತವರ್ಗಸಮಾ ನೇತಃ । ಇತಿ ಸಸ್ಯ ನೇತ್ವಮ್ ॥ ರಾಮಾಃ ॥**

ದ್ರಿಪದಸೂತ್ರ. ತುಶ್ಚ ಸ್‌ಚ ಮಶ್ಚ ತುಸ್ಮಾಃ । ತು ಯೆಂಬಲ್ಲಿ ಉದಿತ್ತಾದುದರಿಂದ ತವರ್ಗ ತೆಗೆದುಕೊಳ್ಳಬೇಕು. ಮಕಾರದಲ್ಲಿ ಅಕಾರ ಉಚ್ಚಾರಣಾರ್ಥ. "ಉಪದೇಶೇಽಜನುನಾಸಿಕ ಇತ್" ಸೂತ್ರದಿಂದ "ಇತ್" ಅನುವೃತ್ತವಾಗಿ ಬಹುವಚನಾಂತವಾಗಿ ವಿಪರಿಣತವಾಗುತ್ತದೆ. **ಸೂತ್ರಾರ್ಥ.** ವಿಭಕ್ತಿಯಲ್ಲಿರುವ ತವರ್ಗ ಸಕಾರಮಕಾರಗಳು ಇತ್ ಸಂಜ್ಞೆಯನ್ನು ಹೊಂದುವುದಿಲ್ಲ. ಪ್ರಕೃತ ಜಸ್ ವಿಭಕ್ತಿಯಲ್ಲಿ ಸಕಾರವಿರುವುದರಿಂದ ಅದಕ್ಕೆ ಇತ್‌ಸಂಜ್ಞೆಬರುವುದಿಲ್ಲ. ರಾಮ+ಅಸ್ ಎಂದಿರುವಾಗ ಅಕ್ಕಿಗೆ ಪ್ರಥಮಾವಿಭಕ್ತಿಯ ಅಚ್‌ಪರವಾದುದರಿಂದ "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣದೀರ್ಘ. ರಾಮಾಸ್ ಎಂದು

ರೂಪವಾದಾಗ ಪದಾಂತದಲ್ಲಿ ಸಕಾರವಿರುವುದರಿಂದ "ಸಸಜುಷೋರುಃ" ಸೂತ್ರ-ದಿಂದ ಅದಕ್ಕೆ ರುತ್ವ. ರಾಮರ್, ಅವಸಾನವಿರುವುದರಿಂದ ಅದಕ್ಕೆ ವಿಸರ್ಗ-ರಾಮಾಃ ರೂಪವಾಗುತ್ತದೆ. ಬಹುಜನರಾಮರು.

ರಾಮ + ಅಸ್ ಎಂದಿರುವಾಗ "ಅಕಃಸವರ್ಣೇದೀರ್ಘಃ" ಸೂತ್ರದಿಂದ ಸವರ್ಣದೀರ್ಘಸಂಧಿಮಾಡಿದರೂ ಪ್ರಕೃತರೂಪವಾಗುತ್ತದೆ. ಆದರೆ ಅದಕ್ಕೆ ಅಪವಾದವಾಗಿ "ಅತೋ ಗುಣೇ" ಎಂಬ ಸೂತ್ರವು ಪರರೂಪ ಏಕಾದೇಶವನ್ನು ಹೇಳುವುದರಿಂದ ಅದಕ್ಕೆ ಅಪವಾದವಾಗಿ ಹಿಂದೆ ಹೇಳಿದ ಪೂರ್ವಸವರ್ಣದೀರ್ಘಬಂದು ಇಷ್ಟ ರೂಪವಾಗಿದೆ.

(ಸಂಬೋಧನಾ ವಿಭಕ್ತಿ.)

ಸಂಬೋಧನಾ ತಿಳಿಸುವಾಗ ಪ್ರಾತಿಪದಿಕದ ಹಿಂದೆ ಹೇ ಎಂದು ಸೇರಿಸುವುದು ಪದ್ಧತಿಯಾಗಿದೆ. ಇದರಿಂದ ಸ್ಪಷ್ಟವಾಗಿ ಸಂಬೋಧನೆಯೆಂದು ತಿಳಿಯುತ್ತದೆ. ಇಲ್ಲಿ ಹಿಂದೆ ಹೇಳಿದ ಸು, ಔ, ಜಸ್ ಎಂದು ಮೂರು ಪ್ರತ್ಯಯಗಳು ಬರುತ್ತವೆ. ಅವುಗಳಲ್ಲಿ ಏಕವಚನಕ್ಕೆ ಕಾರ್ಯವಿಶೇಷಕ್ಕೋಸ್ಕರ ವಿಶೇಷಸಂಜ್ಞೆಯನ್ನು ಹೇಳುತ್ತಾನೆ.

(ಸಂಬುದ್ಧಿಸಂಜ್ಞಾವಿಧಾಯಕ ಸೂತ್ರ)

**೧೩೨. ಏಕವಚನಂ ಸಂಬುದ್ಧಿಃ ॥ ೨-೩-೪೯ ॥**

**ಸಂಬೋಧನೇ ಪ್ರಥಮಾಯಾ ಏಕವಚನಂ ಸಂಬುದ್ಧಿಸಂಜ್ಞಂ ಸ್ಯಾತ್ ॥**

ದ್ವಿಪದ ಸೂತ್ರ. "ಪ್ರಾತಿಪದಿಕಾರ್ಥ ಲಿಂಗ–" ಸೂತ್ರದಿಂದ ಅನುವೃತ್ತವಾದ ಪ್ರಥಮಾ ಎಂಬುದು ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. "ಸಂಬೋಧನೇ ಚ" ಸೂತ್ರದಿಂದ "ಸಂಬೋಧನೆ" ಪದವು ಅನುವೃತ್ತವಾಗುತ್ತದೆ. **ಸೂತ್ರಾರ್ಥ**-ಸಂಬೋಧನೆಯಲ್ಲಿರುವ ಪ್ರಥಮಾವಿಭಕ್ತಿಯ ಏಕವಚನವು ಸಂಬುದ್ಧಿಯೆಂಬ ಸಂಜ್ಞೆಯನ್ನು ಹೊಂದುತ್ತವೆ. ಹೇ ರಾಮಸ್ ಎಂದಿರುವಾಗ ಸ್ ವಿಭಕ್ತಿಯು ಸಂಬುದ್ಧಿಯಾಗುತ್ತದೆ. ಇಲ್ಲ ಕಾರ್ಯವಿಶೇಷವನ್ನು ಹೇಳಲು "ಅಂಗ" ಸಂಜ್ಞೆಯನ್ನು ಹೇಳುತ್ತಾನೆ.

(ಅಂಗಸಂಜ್ಞಾ ವಿಧಾಯಕ ಸೂತ್ರ)

**೧೩೩. ಯಸ್ಮಾತ್ಪ್ರತ್ಯಯವಿಧಿಸ್ತದಾದಿ ಪ್ರತ್ಯಯೇಽಙ್ಗಮ್ ॥ ೧-೪-೧೩ ॥**

**ಯಃ ಪ್ರತ್ಯಯೋ ಯಸ್ಮಾತ್ ಕ್ರಿಯತೇ ತದಾದಿ ಶಬ್ದರೂಪಂ ತಸ್ಮಿನ್ನಙ್ಗಂ ಸ್ಯಾತ್ ॥**

ಯಸ್ಮಾತ್, ಪ್ರತ್ಯಯವಿಧಿಃ, ತದಾದಿ, ಪ್ರತ್ಯಯೇ, ಅಂಗಮ್ ॥ ಪಂಚಪದ ಸೂತ್ರ. ಪ್ರತ್ಯಯಸ್ಯ ವಿಧಿಃ ಪ್ರತ್ಯಯವಿಧಿಃ, ತತ್ (ಪ್ರಕೃತಿರೂಪಂ) ಆದಿ ಯಸ್ಯ ತತ್ ತದಾದಿ. ಶಬ್ದಸ್ವರೂಪವೆಂದು ವಿಶೇಷ್ಯವು ಅಧ್ಯಾಹೃತವಾಗುತ್ತದೆ. **ಸೂತ್ರಾರ್ಥ.** ಯಾವ ಪ್ರತ್ಯಯವು ಯಾವ ಒಂದು ಪ್ರಕೃತಿವಿಶೇಷದ ಮೇಲೆ ವಿಹಿತ ವಾಗುವುದೋ ಆ ಪ್ರತ್ಯಯ ಪರದಲ್ಲಿರುವಾಗ ಆ ಪ್ರಕೃತಿಯೇ ಆದಿಯಾಗಿರುವ ಶಬ್ದ ಸ್ವರೂಪವು "ಅಂಗ" ಎಂಬ ಸಂಜ್ಞೆಯನ್ನು ಹೊಂದುತ್ತದೆ. ಭೂ ಧಾತುವಿಗೆ ತಿ ಪ್ರತ್ಯಯ ಹೇಳುತ್ತಾನೆ. ಭೂ+ತಿ ಯಂದಿರುವಾಗ ಮಧ್ಯೆ ಶಪ್ ವಿಕರಣಪ್ರತ್ಯಯ ಬರುತ್ತದೆ. ಶಪ್‌ಪ್ರತ್ಯಯದಲ್ಲಿ ಅ ಮಾತ್ರ ಉಳಿಯುತ್ತದೆ. ಭೂ+ಅ+ತಿಯಂದಿ ರುವಾಗ ಸೂತ್ರಾಂತರದಿಂದ ಊಕಾರಕ್ಕೆ ಗುಣ. (ಓ) ಅದಕ್ಕೆ ಅಚ್‌ಪರವಾದುದ ರಿಂದ ಅವಾದೇಶ. ಭವ+ತಿ. ಇಲ್ಲಿ ಪ್ರತ್ಯಯ ತಿಪ್. ಇದು ಭೂಯೆಂಬ ಪ್ರಕೃತಿ ವಿಶೇಷದ ಮೇಲೆ ವಿಹಿತವಾಗಿದೆ. ಆಗ ತಿಪರವಾಗಿರುವಾಗ ಭೂ ಎಂಬುದೇ ಆದಿ ಯಾಗಿರುವುದು ಭವ ಆಗುತ್ತದೆ. "ಭವ" ಎಂಬುದು ಅಂಗಸಂಜ್ಞೆಯನ್ನು ಹೊಂದು ತ್ತದೆ. ಪ್ರಕೃತ ರಾಮವೆಂಬ ಪ್ರಕೃತಿಯ ಮೇಲೆ ಸುಪ್ರತ್ಯಯ ಹೇಳಿದೆ. ಸುಪರ ವಾದಾಗ ರಾಮವೆಂಬುದೇ ಆದಿಯಾಗಿರುವ ಶಬ್ದವೆಂದರೆ ರಾಮವೇ. ಇಲ್ಲಿ ಅದನ್ನು ಬಿಟ್ಟು ಬೇರೆ ಇಲ್ಲವಾದುದರಿಂದ ಆದಿಯೂ ಅದೇ. ಆದಿಯಾಗಿರುವ ಶಬ್ದವೂ ಅದೇ. ಆದುದರಿಂದ ರಾಮವೆಂಬುದಕ್ಕೆ ಅಂಗಸಂಜ್ಞಾ ಬರುತ್ತದೆ. ಅಂಗಸಂಜ್ಞೆಗೆ ಉಪಯೋಗವನ್ನು ಮುಂದಿನ ಸೂತ್ರದಲ್ಲಿ ಹೇಳುತ್ತಾನೆ.

(ಸಂಬುದ್ಧಿಗೆ ಲೋಪಹೇಳುವ ಸೂತ್ರ)

## ೧೩೪. ಏಙ್ ಹ್ರಸ್ವಾತ್ಸಂಬುದ್ಧೇಃ ॥ ೬-೧-೬೯ ॥

**ಏಙನ್ತಾದ್ಧ್ರಸ್ವಾನ್ತಾಚ್ಚಾಙ್ಗಾದ್ಧಲ್ಲುಪ್ಯತೇಸಂಬುದ್ಧೇಶ್ಚೇತ್ ॥**

**ಹೇ ರಾಮ ಹೇ ರಾಮೌ ಹೇ ರಾಮಾಃ ॥**

ಏಙ್‌ಹ್ರಸ್ವಾತ್, ಸಂಬುದ್ಧೇಃ ॥ ದ್ವಿಪದಸೂತ್ರ. "ಲೋಪೋವ್ಯೋರ್ವಲಿ" ಸೂತ್ರದಿಂದ "ಲೋಪಃ" ಹಲ್‌ಙ್ಯಾಭ್ಯೋ....ಹಲ್" ಸೂತ್ರದಿಂದ "ಹಲ್" ಪದವೂ ಅನುವೃತ್ತವಾಗುತ್ತವೆ. ಹಲ್ ಎಂಬುದಕ್ಕೆ ಲೋಪಃ ಎಂಬಲ್ಲಿ ಅನ್ವಯ. ಲುಪ್ಯತೇ ಇತಿ ಲೋಪಃ ಲೋಪಹೊಂದುವುದು ಎಂದರ್ಥ. ಸಂಬುದ್ಧಿ ಸುಪ್ರತ್ಯಯ ಇದರಿಂದ ಅಂಗವು ಆಕ್ಷಿಪ್ತವಾಗುತ್ತದೆ. ಅಂಗಾಧಿಕಾರ ಆರನೇ ಅಧ್ಯಾಯದ ನಾಲ್ಕನೇ ಪಾದದಿಂದ ಆರಂಭವಾಗುತ್ತದೆ. ಆದುದರಿಂದ ಅದು ಇಲ್ಲಿ ಬರುವುದಿಲ್ಲ. ಆಕ್ಷಿಪ್ತ ವಾದ ಅಂಗಕ್ಕೆ ಏಙ್‌ಹ್ರಸ್ವಗಳು ವಿಶೇಷಣ, ವಿಶೇಷಣವಾದುದರಿಂದ ತದಂತ ಗ್ರಹಣ. ಏಙಂತವಾದ, ಹ್ರಸ್ವಾಂತವಾದ ಅಂಗವೆಂದಾಗುತ್ತದೆ. ಸಂಬುದ್ಧೇಃ ಅವಯವಷಷ್ಠೀ. ಹಲಿನಲ್ಲಿ ಅನ್ವಯ. **ಸೂತ್ರಾರ್ಥ.** ಏಙಂತವಾದ, ಹ್ರಸ್ವಾಂತ ವಾದ ಅಂಗದ ಪರದಲ್ಲಿರುವ ಹಲ್ (ವ್ಯಂಜನ) ಲೋಪಹೊಂದುತ್ತದ. ಅದು

ಸಂಬುದ್ಧಿಯ ಅವಯುವವಾಗಿದ್ದರೆ ಮಾತ್ರ ಲೋಪ. ಪ್ರಕೃತ ರಾಮವೆಂಬುದು ಹ್ರಸ್ವಾಂತವಾದ ಅಂಗ. ಅದರ ಪರದಲ್ಲಿ ಸಂಬುದ್ಧಿಯ ಅವಯುವವಾದ ಸ್ ಎಂಬ ಹಲ್ ಇದೆ. ಅದಕ್ಕೆ ಲೋಪಬಂದರೆ ಹೇ ರಾಮ ಎಂದು ರೂಪವಾಗುತ್ತದೆ. (ಎಲೋ ರಾಮನೆ.) ಹೇ ರಾಮ+ಔ ಎಂದು ದ್ವಿವಚನಪ್ರತ್ಯಯ ವಿವಕ್ಷಾಮಾಡಿದಾಗ ಹಿಂದಿನಂತೆ ಮೊದಲು ವೃದ್ಧಿ ಬಂದರೆ ಅದಕ್ಕೆ ಅಪವಾದವಾಗಿ "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣದೀರ್ಘಪ್ರಾಪ್ತವಾಗುತ್ತದೆ. ಅದಕ್ಕೆ ಅಪವಾದವಾಗಿ "ನಾದಿಚಿ" ಸೂತ್ರದಿಂದ ದೀರ್ಘಕ್ಕೆ ನಿಷೇಧ. ಆಮೇಲೆ ಹಿಂದೆ ಹೇಳಿದ "ವೃದ್ಧಿರೇಚಿ" ಸೂತ್ರದಿಂದ ವೃದ್ಧಿ. ಹೇರಾಮೌ ಎಂದಾಗುತ್ತದೆ. (ಎಲೋ ಇಬ್ಬರು ರಾಮರಿರಾ). ಹೇರಾಮ+ಜಸ್ ಎಂದಿರುವಾಗ ಬಹುವಚನದಲ್ಲಿ ಪ್ರಥಮಾಬಹುವಚನದಂತೇ ಕಾರ್ಯಗಳು ಬಂದರೆ ಹೇರಾಮಾಃ ಎಂದಾಗುತ್ತದೆ. (ಎಲೋ ಬಹುಜನರಾಮರಿರಾ)

|| ಅಥ ದ್ವಿತೀಯಾ ವಿಭಕ್ತಿಃ ||

ಅಮ್, ಔಟ್, ಶಸ್, ಈ ಮೂರು ದ್ವಿತೀಯಾವಿಭಕ್ತಿ. ನಾಮಪದಕ್ಕೆ "ಅನ್ನು" ಸೇರಿಸಿದರೆ ಕನ್ನಡದಲ್ಲಿ ದ್ವಿತೀಯಾರ್ಥವಾಗುತ್ತದೆ. ಏಕತ್ವವಿವಕ್ಷೆ ಮಾಡಿದಾಗ ಏಕವಚನ ಅಮ್ ಪ್ರತ್ಯಯ. ಮಕಾರ ಅಂತದಲ್ಲಿದ್ದರೂ ವಿಭಕ್ತಿ ಸಂಬಂಧವಾದುದರಿಂದ "ನ ವಿಭಕ್ತೌ ತುಸ್ಮಾಃ" ಎಂಬುದರಿಂದ ಇತ್‌ಸಂಜ್ಞೆಯನ್ನು ಹೊಂದುವುದಿಲ್ಲ. ರಾಮ+ಅಮ್ ಎಂದಿರುವಾಗ ಮೊದಲು ಅಕಾರಕೆ ಅಕಾರಪರವಾದುದರಿಂದ "ಅಕಃ ಸವರ್ಣೇದೀರ್ಘಃ" ಎಂಬುದರಿಂದ ಸವರ್ಣದೀರ್ಘ ಪ್ರಾಪ್ತವಾಗುತ್ತದೆ. ಅದಕ್ಕೆ ಬಾಧಕವಾಗಿ "ಅತೋಗುಣೇ" ಸೂತ್ರದಿಂದ ಪರರೂಪ ಬಂದರೆ ಅದಕ್ಕೆ ಅಪವಾದವಾಗಿ "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣದೀರ್ಘ ಪ್ರಾಪ್ತವಾದರೆ ಅದಕ್ಕೂ ಬಾಧಕವಾಗಿ ಪೂರ್ವರೂಪವನ್ನು ಹೇಳುತ್ತಾನೆ.

(ಪೂರ್ವರೂಪ ಹೇಳುವ ಸೂತ್ರ)

## ೧೩೫. ಅಮಿ ಪೂರ್ವಃ || ೬-೧-೧೦೭ ||

ಅಕೋಽಮ್ಯಚಿ ಪೂರ್ವರೂಪಮೇಕಾದೇಶಃ ಸ್ಯಾತ್ । ರಾಮಮ್ ರಾಮೌ ||

ಅಮಿ, ಪೂರ್ವಃ, || ದ್ವಿಪದ ಸೂತ್ರ. "ಅಕಃ ಸವರ್ಣೇ ದೀರ್ಘಃ" ಸೂತ್ರದಿಂದ "ಅಕಃ" "ಇಕೋ ಯಣಚಿ" ಸೂತ್ರದಿಂದ "ಅಚಿ" ಅನುವೃತ್ತವಾಗುತ್ತವೆ. "ಏಕಃ ಪೂರ್ವಪರಯೋಃ" ಅಧಿಕಾರ ಸೂತ್ರಕ್ಕೆ ಇದು ಒಳಪಟ್ಟಿದೆ. ಸೂತ್ರಾರ್ಥ—ಅಕ್ ವರ್ಣಗಳಿಗೆ ಅಮ್ ಸಂಬಂಧಿಯಾದ ಅಚ್ ಪರವಾದಾಗ ಪೂರ್ವಪರಸ್ಥಾನದಲ್ಲಿ ಪೂರ್ವದರೂಪವು ಏಕಾದೇಶವಾಗಿ ಬರುತ್ತದೆ. ಅಮ್ಯಚಿ

ಎಂದು ವೃತ್ತಿಯಲ್ಲಿದೆ. ಅಮ್ ಎಂಬಲ್ಲಿರುವ ಅಚ್ ಪರವಾದಾಗ ಎಂದರ್ಥ. ರಾಮ+ಅಮ್ ಇಲ್ಲಿ ಅಕ್ ಮಕಾರದ ಮೇಲಿರುವ ಅಕಾರ. ಇದಕ್ಕೆ ಅಮಿನ ಅಚ್ (ಅ) ಪರವಾಗಿದೆ. ಆಗ ಎರಡು ಅಕಾರಗಳಸ್ಥಾನದಲ್ಲಿ ಒಂದೇ ಪೂರ್ವದ ಅಕಾರವು ಏಕಾದೇಶವಾಗಿ ಬಂದರೆ ರಾಮಮ್ ಎಂದಾಗುತ್ತದೆ. ರಾಮನನ್ನು ಎಂದರ್ಥ. ದ್ವಿವಚನದಲ್ಲಿ ಔಟ್ ಪ್ರತ್ಯಯ. "ಹಲಂತ್ಯಮ್" ಸೂತ್ರದಿಂದ ಅಂತ್ಯದ ಟಕಾರಕ್ಕೆ ಇತ್ ಸಂಜ್ಞೆ ಬಂದರೆ "ತಸ್ಯ ಲೋಪಃ" ಸೂತ್ರದಿಂದ ಅದಕ್ಕೆ ಲೋಪ. ರಾಮ+ಔ ಎಂದಿರುವಾಗ ಪ್ರಥಮಾ ದ್ವಿವಚನದಂತೇ ಕಾರ್ಯ. ರಾಮೌ. (ಇಬ್ಬರು ರಾಮರನ್ನು) ದ್ವಿತೀಯಾದಲ್ಲಿ ಬಹುತ್ವವಿವಕ್ಷಾಮಾಡಿದಾಗ ಶಸ್ ಪ್ರತ್ಯಯ. ಸಕಾರ ಅಂತ್ಯವಾದರೂ ವಿಭಕ್ತಿಯ ಸಕಾರವಾದುದರಿಂದ "ನ ವಿಭಕ್ತೌ ತುಸ್ಮಾಃ" ಸೂತ್ರದಿಂದ ಇತ್ ಸಂಜ್ಞೆಯನ್ನು ಹೇಳಲು ಸೂತ್ರಾಂತರವನ್ನು ಹೇಳುತ್ತಾನೆ.

(ಪ್ರತ್ಯಯದಲ್ಲಿ ಇತ್ ಸಂಜ್ಞೆ ಹೇಳುವ ಸೂತ್ರ)

## ೧೩೬. ಲಶಕ್ವತದ್ಧಿತೇ ॥ ೧-೩-೮ ॥

**ತದ್ಧಿತವರ್ಜಪ್ರತ್ಯಯಾದ್ಯಾ ಲಶಕವರ್ಗಾ ಇತಃ ಸ್ಯುಃ ॥**

ಲಶಕು, ಅತದ್ಧಿತೇ ॥ ದ್ವಿಪದ ಸೂತ್ರ. ನ ತದ್ಧಿತಃ ಅತದ್ಧಿತಃ ತಸ್ಮಿನ್, ಅತದ್ಧಿತೇ. ಷಷ್ಠ್ಯರ್ಥದಲ್ಲಿ ಸಪ್ತಮೀ ಬಂದಿದೆ. ಲಶ್ಚ, ಶಶ್ಚ, ಕುಶ್ಚ ತೇಷಾಂ ಸಮಾಹಾರಃ ಲಶಕು. ಕು ಉದಿತ್ತಾದುದರಿಂದ ಕವರ್ಗವನ್ನು ತೆಗೆದುಕೊಳ್ಳಬೇಕು. ಆದಿರ್ಞಿಟುಡವಃ" ಸೂತ್ರದಿಂದ "ಆದಿಃ" "ಷಃ ಪ್ರತ್ಯಯಸ್ಯ" ಸೂತ್ರದಿಂದ "ಪ್ರತ್ಯಯಸ್ಯ". "ಉಪದೇಶೇಽಜನುನಾಸಿಕ ಇತ್" ಸೂತ್ರದಿಂದ "ಇತ್" ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ತದ್ಧಿತಪ್ರತ್ಯಯವನ್ನು ಬಿಟ್ಟು ಉಳಿದ ಪ್ರತ್ಯಯದ ಆದಿಯಲ್ಲಿರುವ ಲಕಾರಶಕಾರಕವರ್ಗಗಳು ಇತ್ ಸಂಜ್ಞೆಯನ್ನು ಹೊಂದುತ್ತವೆ. ಪ್ರಕೃತಶಸ್ ತದ್ಧಿತಭಿನ್ನಪ್ರತ್ಯಯ. ಅದರ ಆದಿಯಲ್ಲಿರುವ ಶಕಾರಕ್ಕೆ ಈ ಸೂತ್ರದಿಂದ ಇತ್ ಸಂಜ್ಞೆಬಂದರೆ "ತಸ್ಯ ಲೋಪಃ" ಸೂತ್ರದಿಂದ ಅದಕ್ಕೆ ಲೋಪ. ರಾಮ+ಅಸ್ ಎಂದಿರುವಾಗ ಹಿಂದೆ ಹೇಳಿದ "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣದೀರ್ಘ. ರಾಮಾಸ್ ಎಂದು ರೂಪವಾದಾಗ ಕೊನೆಯ ಸಕಾರಕ್ಕೆ ನಕಾರ ಹೇಳುತ್ತಾನೆ.

(ಶಸಿನ ಸಕಾರಕ್ಕೆ ನಕಾರ ಹೇಳುವ ಸೂತ್ರ)

## ೧೩೭. ತಸ್ಮಾಚ್ಛಸೋ ನಃ ಪುಂಸಿ ॥ ೬-೧-೧೦೩ ॥

**ಪೂರ್ವಸವರ್ಣದೀರ್ಘಾತ್ಪರೋ ಯಃ ಶಸಃ ಸಸ್ತಸ್ಯ ನಃ ಸ್ಯಾತ್ಪುಂಸಿ ॥**

ತಸ್ಮಾತ್, ಶಸಃ, ನಃ, ಪುಂಸಿ ॥ ನಾಲ್ಕುಪದವುಳ್ಳ ಸೂತ್ರ. ತಚ್ಛಬ್ದವು ಪೂರ್ವವನ್ನು ಪರಾಮರ್ಶಿಸುತ್ತದೆ. ಇದರ ಹಿಂದೆ ಪೂರ್ವಸವರ್ಣದೀರ್ಘವು ಹೇಳಿದೆ.

ಆಗ ತಸ್ಮಾತ್ ಎಂಬುದು ಪೂರ್ವಸವರ್ಣದೀರ್ಘವನ್ನು ಹೇಳುತ್ತವೆ. ಪೂರ್ವ ಸವರ್ಣದೀರ್ಘವು ಶಸಿನ ಅಕಾರಕ್ಕೆ ಬಂದುದರಿಂದ ಇಲ್ಲಿ ಶಸಃ ಎಂಬುದು ಅವಯವ ಷಷ್ಠೀ. ಸೂತ್ರಾರ್ಥ—ಪೂರ್ವಸವರ್ಣದೀರ್ಘದ ಪರದಲ್ಲಿರುವ ಯಾವ ಶಸಿನ ಅವಯವ ವಿದೆಯೋ (ಅರ್ಥಾತ್ ಅದು ಸಕಾರ) ಅದಕ್ಕೆ ಪುಲ್ಲಿಂಗದಲ್ಲಿ ನಕಾರಾದೇಶ ಬರುತ್ತದೆ. ರಾಮಾಸ್ ಎಂಬಲ್ಲಿ ಪೂರ್ವಸವರ್ಣದೀರ್ಘ ಬಂದಿದೆ. (ಆ) ಅದರ ಪರದಲ್ಲಿ ಶಸಿನ ಸಕಾರವಿದೆ. ಅದಕ್ಕೆ ನಕಾರಾದೇಶ ಬಂದರೆ ರಾಮಾನ್ ಎಂದಾಗು ತ್ತದೆ. ಇಲ್ಲಿ ನಕಾರಕ್ಕೆ ಣಕಾರವನ್ನು ಆಶಂಕಿಸಿ ನಿಷೇಧಹೇಳುತ್ತಾನೆ.

(ನಕಾರಕ್ಕೆ ಣಕಾರ ಹೇಳುವ ಸೂತ್ರ)

## ೧೩೮. ಅಟ್‌ಕುಪ್ವಾಙ್‌ನುಮ್‌ವ್ಯವಾಯೇಽಪಿ ||೮-೪-೨||

**ಅಟ್‌ಕವರ್ಗಪವರ್ಗ, ಆಙ್, ನುಮ್ ಏತೈರ್ವ್ಯಸ್ತೈರ್ಯಥಾ ಸಂಭವಂ ಮಿಲಿತೈಶ್ಚ ವ್ಯವಧಾನೇಽಪಿ ರಷಾಭ್ಯಾಂ ಪರಸ್ಯ ನಸ್ಯ ಣಃ ಸಮಾನಪದೇ ಇತಿ ಪ್ರಾಪ್ತೇ ||**

ಅಟ್‌ಕುಪ್ವಾಙ್‌ನುಮ್‌ವ್ಯವಾಯೇ, ಅಪಿ | ದ್ವಿಪದಸೂತ್ರ. ಅಟ್ ಚ, ಕುಶ್ಚ, ಪುಶ್ಚ, ಆಙ್ ಚ, ನುಮ್ ಚ, ಅಟ್‌ಕಪ್ವಾಙ್‌ನುಮಃ. ತೇಷಾಂ ವ್ಯವಾಯಃ ಅಟ್—ವಾಯಃ | ತಸ್ಮಿನ್. ಅಟ್ ಕುಪ್ವಾಙ್‌ನುಮ್‌ವ್ಯವಾಯೇ. " ರಷಾಭ್ಯಾಂ ನೋ ಣಃ ಸಮಾನಪದೇ " ಸೂತ್ರವು ಅನುವೃತ್ತವಾಗುತ್ತದೆ. ಅಲ್ಲಿ ನಃ ಷಷ್ಠೀ. ಣಃ ಪ್ರಥಮಾ. ರೇಫಷಕಾರದ ಅವ್ಯವಹಿತ ಪರದಲ್ಲಿರುವ ನಕಾರಕ್ಕೆ ಣಕಾರವು ಹೇಳಿದೆ. ಪ್ರಕೃತಸೂತ್ರದಲ್ಲಿ ಮಧ್ಯೆ ವ್ಯವಧಾನವಿದ್ದರೂ ಣತ್ವ ಹೇಳುತ್ತಾನೆ. ಅಟ್ ಪ್ರತ್ಯಾ ಹಾರ. ಕುಪು ಉದಿತ್ತಾದುದರಿಂದ ಕವರ್ಗ ಪವರ್ಗ ತೆಗೆದುಕೊಳ್ಳಬೇಕು. ಒಂದೊಂ ದರ ವ್ಯವಧಾನ ವಿರುವಾಗ ಎಂದರ್ಥಮಾಡಿದರೆ ರಾಮೇಣ ಎಂಬಲ್ಲಿ ಣತ್ವಬಾರದೇ ಹೋಗಬೇಕಾಗುತ್ತದೆ. ಎಲ್ಲದರ ವ್ಯವಧಾನವಿರುವಾಗ ಎಂದರೆ ಎಲ್ಲಿಯೂ ಉದಾ ಹರಣೆ ಸಿಗಲಾರದು. ಆದುದರಿಂದ (ಪ್ರತ್ಯೇಕ) ಬೇರೆಬೇರೆ ವ್ಯವಧಾನವಿರುವಾಗಲೂ ಅನೇಕ (ಯಥಾಸಂಭವ) ವ್ಯವಧಾನವಿರುವಾಗಲೂ ಕಾರ್ಯಹೇಳಬೇಕು. **ಸೂತ್ರಾರ್ಥ.** ಅಟ್, ಕವರ್ಗಪವರ್ಗಆಙ್‌ನುಮ್ ಇವುಗಳಿಂದ ಪ್ರತ್ಯೇಕವಾಗಲೀ, ಯಥಾಸಂಭವಕೂಡಿಯಾಗಲೀ ಮಧ್ಯೆ ವ್ಯವಧಾನವಿರುವಾಗ (ರೇಫಷಕಾರಕ್ಕೂ ನಕಾರಕ್ಕೂ ಮಧ್ಯೆ ಇರುವಾಗ,) ರೇಫಷಕಾರದ ಪರದಲ್ಲಿರುವ ನಕಾರಕ್ಕೆ ಣಕಾರಾ ದೇಶ ಬರುತ್ತದೆ. ಇವು ಒಂದೇ ಪದದಲ್ಲಿ ಇದ್ದರೆ ಮಾತ್ರ ಣತ್ವ. ನಕಾರಸ್ಥಾನಿ. ಣಕಾರ ಆದೇಶ. ರೇಫಷಕಾರಗಳು ನಿಮಿತ್ತ. ಸ್ಥಾನಿನಿಮಿತ್ತಗಳು ಅಖಂಡ ಒಂದು ಪದದಲ್ಲಿದ್ದರೆ ಮಾತ್ರ ಈಣತ್ವ. ಸ್ಥಾನಿ ಒಂದು ಪದದಲ್ಲಿ ನಿಮಿತ್ತ ಒಂದು ಪದದಲ್ಲಿದ್ದರೆ ಣತ್ವವಿಲ್ಲ. ರಾಮನಾಮ. ಇಲ್ಲಿ ರೇಫ (ನಿಮಿತ್ತ) ರಾಮ ಎಂಬ ಪದ ದಲ್ಲಿದೆ. ಸ್ಥಾನಿ (ನ) ನಾಮವೆಂಬ ಪದದಲ್ಲಿದೆ. ಭಿನ್ನಪದವಾದುದರಿಂದ ಣತ್ವವಿಲ್ಲ.

ಪ್ರಕೃತ ರಾಮಾನ್ ಎಂಬಲ್ಲಿ ರೇಫನಿಮಿತ್ತವಿದೆ. ರೇಫದಪರದಲ್ಲಿ ನಕಾರವಿದೆ ಇವುಗಳ ಮಧ್ಯದಲ್ಲಿ ಆಕಾರ ಮಕಾರ ಆಕಾರಗಳಿವೆ. ಆಕಾರಗಳು ಅಟ್‌ಪ್ರತ್ಯಾಹಾರ ದಲ್ಲಿಯೂ, ಮಕಾರವು ಪವರ್ಗದಲ್ಲಿಯೂ ಸೇರುತ್ತವೆ. ಇವೆರಡರ ವ್ಯವಧಾನ ವಿದ್ದರೂ ಣತ್ವಬರುತ್ತದೆಂದೆಂದುದರಿಂದ ನಕಾರಕ್ಕೆ ಣತ್ವವು ಈ ಸೂತ್ರದಿಂದ ಪ್ರಾಪ್ತ ವಾದರೆ ಅದಕ್ಕೆ ನಿಷೇಧ ಹೇಳುತ್ತಾನೆ.

(ಣತ್ವನಿಷೇಧ ಹೇಳುವ ಸೂತ್ರ)

## ೧೪೯. ಪದಾಂತಸ್ಯ ॥ ೮-೪-೩೭ ॥

### ನಸ್ಯ ಣೋ ನ ॥ ರಾಮಾನ್ ॥

ಏಕಪದಸೂತ್ರ. "ರಷಾಭ್ಯಾಂ ಣೋ ನಃ" ಅನುವೃತ್ತವಾಗುತ್ತದೆ. "ನಭಾಭೂ"....ಸೂತ್ರದಿಂದ "ನ" ಎಂತಲೂ ಅನುವೃತ್ತಿ. **ಸೂತ್ರಾರ್ಥ.** ರೇಫಷಕಾರದ ಪರದಲ್ಲಿರುವ ಪದದಕೊನೆಯ ನಕಾರಕ್ಕೆ ಣತ್ವ ಬರುವುದಿಲ್ಲ. ಪ್ರಕೃತ ರಾಮಾನ್ ಎಂಬಲ್ಲಿ ನಕಾರವು ರೇಫದ ಪರದಲ್ಲಿದ್ದು ಪದದ ಕೊನೆಯಲ್ಲಿ ಇದೆ. ಆದುದರಿಂದ ಣತ್ವಬರುವುದಿಲ್ಲ. ರಾಮಾನ್ ಎಂದೇ ಉಳಿಯುತ್ತದೆ. ಬಹುಜನ ರಾಮರನ್ನು ಎಂದರ್ಥ.

॥ ತೃತೀಯಾ ವಿಭಕ್ತಿ ॥

ಟಾ, ಭ್ಯಾಮ್, ಭಿಸ್, ಈ ಮೂರು ತೃತೀಯಾ ವಿಭಕ್ತಿ. ಇಂದ ಇದರ ಅರ್ಥ. ರಾಮಶಬ್ದದ ಮೇಲೆ ತೃತೀಯಾ ಏಕವಚನ ಮಾಡಿದಾಗ ಟಾ ವಿಭಕ್ತಿ ಬರುತ್ತದೆ. ಪ್ರಕೃತ ಅದಕ್ಕೆ ಬೇರೊಂದು ಆದೇಶ ಹೇಳುತ್ತಾನೆ.

(ಟಾದಿಗಳಿಗೆ ಇನಾದ್ಯಾದೇಶಗಳನ್ನು ಹೇಳುವ ಸೂತ್ರ)

## ೧೪೦. ಟಾಙಸಿ ಙಸಾಮಿನಾತ್ಸ್ಯಾಃ ॥ ೭-೧-೧೨ ॥

### ಅದಂತಾಟ್ಟಾದೀನಾಮಿನಾದಯಃ ಸ್ಯುಃ ॥ ಣತ್ವಂ । ರಾಮೇಣ ॥

ಟಾಙಸಿಙಸಾಂ, ಇನಾತ್ಸ್ಯಾಃ ॥ ದ್ವಿಪದಸೂತ್ರ. ಟಾ ಚ, ಙಸಿ ಚ, ಙಸ್ ಚ, ಟಾಙಸಿಙಸಃ, ತೇಷಾಂ, ಟಾಙಸಿಙಸಾಮ್. ಇನಶ್ಚ ಆತ್ ಚ, ಸ್ಯಶ್ಚ ಇನಾತ್ಸ್ಯಾಃ ॥ "ಅಂಗಸ್ಯ" ಅಧಿಕಾರ. ಇಲ್ಲಿ ಅದು ಪಂಚಮ್ಯಂತವಾಗಿ ವಿಪರಿಣತ ವಾಗುತ್ತದೆ. "ಅತೋಭಿಸ ಐಸ್" ಸೂತ್ರದಿಂದ "ಅತಃ" ಅನುವೃತ್ತವಾಗಿ ಅಂಗಕ್ಕೆ ವಿಶೇಷಣವಾಗುವುದರಿಂದ ತದಂತಗ್ರಹಣ. ಅತಃ ತಪರಮಾಡಿರುವುದರಿಂದ ಹ್ರಸ್ವಾಕಾರ ಮಾತ್ರ ತೆಗೆದುಕೊಳ್ಳಬೇಕು. **ಸೂತ್ರಾರ್ಥ.** ಹ್ರಸ್ವಾಕಾರಾಂತವಾದ ಅಂಗದ ಪರದಲ್ಲಿರುವ ಟಾ, ಙಸಿ, ಙಸ್, ಪ್ರತ್ಯಯಗಳಿಗೆ ಕ್ರಮವಾಗಿ ಇನ, ಆತ್, ಸ್ಯ ಆದೇಶಗಳು ಬರುತ್ತವೆ. ಯಾವ ಪ್ರತ್ಯಯವು ಯಾವ ಪ್ರಕೃತಿಯಮೇಲೆ ವಿಹಿತ

ವಾಗಿರುತ್ತದೋ ಅದೇ ಆದಿಯಾಗಿರುವ ಶಬ್ದರೂಪಕ್ಕೆ ಅಂಗವೆಂಬ ಸಂಜ್ಞೆಯೆಂದು ಹಿಂದೆ ಹೇಳಿದೆ. ಇಲ್ಲಿ ಟಾಪ್ರತ್ಯಯ ರಾಮಶಬ್ದದ ಮೇಲೆ ವಿಹಿತವಾದುದರಿಂದ ರಾಮವೆಂಬುದು ಅಂಗ. ಆರನೇಅಧ್ಯಾಯದ ನಾಲ್ಕನೇಪಾದದ ಒಂದನೇ ಸೂತ್ರ ದಿಂದ "ಅಂಗಸ್ಯ" ಎಂಬ ಅಧಿಕಾರಸೂತ್ರ ಆರಂಭವಾಗಿ ಏಳನೇ ಅಧ್ಯಾಯ ಮುಗಿಯುವವರೆಗೂ ವ್ಯಾಪ್ತಿಯನ್ನು ಹೊಂದುತ್ತದೆ. ಅಲ್ಲಿ ಹೇಳುವ ಕಾರ್ಯ ಗಳೆಲ್ಲವೂ ಅಂಗಕ್ಕೇ ಹೇಳುವುದು, ಪ್ರಕೃತ ಸೂತ್ರವು ಏಳನೇ ಅಧ್ಯಾಯದ ಸೂತ್ರ ವಾದುದರಿಂದ "ಅಂಗಸ್ಯ" ಎಂದುದು ಇಲ್ಲಿಯೂ ಅನುವೃತ್ತವಾಗುತ್ತದೆ. ಮೂರು ಪ್ರತ್ಯಯಗಳಿಗೆ ಮೂರು ಆದೇಶಗಳನ್ನು ಹೇಳಿರುವುದರಿಂದ "ಯಥಾಸಂಖ್ಯಮನು ದೇಶಃ ಸಮಾನಾಮ್" ಎಂಬ ಪರಿಭಾಷೆಯಿಂದ ಕ್ರಮವಾಗಿ ಎಂದು ತಿಳಿಯುತ್ತದೆ. ರಾಮಯೆಂಬುದು ಹ್ರಸ್ವಾಕಾರಾಂತವಾದ ಅಂಗ. ಇದರ ಪರದಲ್ಲಿ ಟಾ ಇರುವು ದರಿಂದ ಅದಕ್ಕೆ ಇನ ಆದೇಶ, ಇದು ಅನೇಕಾಲ್ ಆದುದರಿಂದ "ಅನೇಕಾಲ್ ಶಿತ್ ಸರ್ವಸ್ಯ" ಸೂತ್ರದಿಂದ ಟಾ ಸಂಪೂರ್ಣಕ್ಕೆ ಆದೇಶವಾಗಿ ಬರುತ್ತದೆ. ರಾಮ+ಇನ. ಅಕಾರಕ್ಕೆ ಅಚ್ ಪರವಾದುದರಿಂದ "ಆದ್ಗುಣಃ" ಸೂತ್ರದಿಂದ ಗುಣ. (ಅ+ಇ=ಏ) ರಾಮೇನ. ರೇಫದ ಪರದಲ್ಲಿ ನಕಾರ ಬಂದು ಅವುಗಳ ಮಧ್ಯದಲ್ಲಿ ಅಚ್ ಪವರ್ಗಗಳ ವ್ಯವಧಾನವಿರುವುದರಂದ "ಅಟ್‌ಕುಪ್ವಾಙ್ ನುಮ್ ವ್ಯವಾ ಯೇಽಪಿ" ಸೂತ್ರದಿಂದ ನಿಷೇಧವಿಲ್ಲ. ರಾಮನಿಂದ ಎಂದರ್ಥ.

ರಾಮಶಬ್ದದ ಮೇಲೆ ತೃತೀಯಾ ದ್ವಿವಚನ ವಿವಕ್ಷಾಮಾಡಿದಾಗ ಭ್ಯಾಮ್ ಪ್ರತ್ಯಯ. ಮಕಾರ ಹಲ್ ಆಗಿ ಕೊನೆಯಲ್ಲಿದ್ದರೂ "ಹಲಂತ್ಯಂ" ಸೂತ್ರದಿಂದ ಇತ್‌ಸಂಜ್ಞಾ ಬರುವುದಿಲ್ಲ. "ನ ವಿಭಕ್ತೌ ತುಸ್ಮಾಃ" ಎಂಬುದರಿಂದ ಮಕಾರಕ್ಕೆ ಇತ್ ಸಂಜ್ಞಾನಿಷೇಧಮಾಡಿರುತ್ತಾನೆ. ರಾಮ+ಭ್ಯಾಮ್ ಎಂದಿರುವಾಗ ಅಂಗಕ್ಕೆ ದೀರ್ಘ ಹೇಳುತ್ತಾನೆ.

(ಅಂಗಕ್ಕೆ ದೀರ್ಘವಿಧಾಯಕ ಸೂತ್ರ)

## ೧೪೧. ಸುಪಿ ಚ ॥ ೭-೩-೧೦೨ ॥

**ಯಞಾದೌ ಸುಪಿ ಅತೋಽಙ್ಗಸ್ಯ ದೀರ್ಘಃ । ರಾಮಾಭ್ಯಾಮ್ ॥**

ಸುಪಿ, ಚ, ದ್ವಿಪದ ಸೂತ್ರ. ಏಳನೇ ಅಧ್ಯಾಯದ ಸೂತ್ರವಾದುದರಿಂದ "ಅಂಗಸ್ಯ" ಎಂಬುದು ಅಧಿಕೃತವಾಗುತ್ತದೆ. "ಅತೋ ದೀರ್ಘೋಯಞಿ" ಸೂತ್ರ ಪೂರ್ತಿ ಅನುವೃತ್ತವಾಗುತ್ತದೆ. ಯಞ್ ಪ್ರತ್ಯಾಹಾರ. ಸುಪಿಯೆಂಬ ಸಪ್ತಮ್ಯಂತಕ್ಕೆ ವಿಶೇಷಣ. ವರ್ಣವನ್ನು ವಿಶೇಷಣಮಾಡಿರುವುದರಿಂದ "ಯಸ್ಮಿನ್ ವಿಧಿಸ್ತದಾದಾ ವಲ್ಗ್ರಹಣೇ" ಪರಿಭಾಷೆಯಿಂದ ಯಞ್ ಆದಿಯಾಗಿರುವ ಸುಪ್ ಎಂದರ್ಥವಾಗು ತ್ತದೆ. ಅದು ಸಪ್ತಮಿಯಾದುದರಿಂದ ಪರದಲ್ಲಿರುವಾಗ ಕಾರ್ಯವೆಂದು ತಿಳಿಯುತ್ತದೆ. ಅತಃ ಎಂಬುದು ಅಂಗಸ್ಯ ಎಂಬುದಕ್ಕೆ ವಿಶೇಷಣವಾದುದರಿಂದ ಹಿಂದಿನಂತೆ ಅದಂತ

ವಾದ ಅಂಗಕ್ಕೆ ಎಂದರ್ಥವಾಗುತ್ತದೆ. **ಸೂತ್ರಾರ್ಥ.** ಯಞ್ ಆದಿಯಲ್ಲಿರುವ ಸುಪ್ ಪರವಾದಾಗ ಹ್ರಸ್ವಾಕಾರಾಂತವಾದ ಅಂಗಕ್ಕೆ ದೀರ್ಘ ಬರುತ್ತದೆ. ಭ್ಯಾಮ್ ಸುಪ್. ಭಕಾರ ಯಞಿನಲ್ಲಿ ಸೇರಿದೆ. ಯಞಾದಿಯಾದ ಸುಪ್ = ಭ್ಯಾಮ್. ರಾಮ ಹ್ರಸ್ವಾಕಾರಾಂತವಾದ ಅಂಗ. ಅದಕ್ಕೆ ಭ್ಯಾಮ್ ಪರವಾದುದರಿಂದ ದೀರ್ಘ ಬಂದರೆ ರಾಮಾಭ್ಯಾಮ್ ಆಗುತ್ತದೆ. ಇಬ್ಬರುರಾಮರಿಂದ ಎಂದರ್ಥ.

ರಾಮಶಬ್ದದಮೇಲೆ ತೃತೀಯಾ ಬಹುವಚನ ವಿವಕ್ಷೆಮಾಡಿದಾಗ ಭಿಸ್ ಪ್ರತ್ಯಯ. ಇಲ್ಲಿಯೂ "ನ ವಿಭಕ್ತೌ ತುಸ್ಮಾಃ" ಸೂತ್ರದಿಂದ ಸಕಾರಕ್ಕೆ ಇತ್ ಸಂಜ್ಞಾನಿಷೇಧಮಾಡಿರುವುದರಿಂದ ಇತ್ ಸಂಜ್ಞಾಬಂದುಲೋಪವಾಗುವುದಿಲ್ಲ. ರಾಮ + ಭಿಸ್ ಎಂದಿರುವಾಗ ಪ್ರತ್ಯಯಕ್ಕೆ ಆದೇಶವನ್ನು ಹೇಳುತ್ತಾನೆ.

(ಭಿಸ್ ಪ್ರತ್ಯಯಕ್ಕೆ ಆದೇಶ ಹೇಳುವ ಸೂತ್ರ)

## ೧೪೨. ಅತೋ ಭಿಸ ಐಸ್ ॥ ೭-೧-೯ ॥

**ಅಕಾರಾಂತಾದಙ್ಗಾದ್ಭಿಸ ಐಸ್ ಸ್ಯಾತ್ ॥ ಅನೇಕಾಲ್ ಶಿತ್ ಸರ್ವಸ್ಯ ॥ ರಾಮೈಃ ॥**

ಅತಃ, ಭಿಸಃ, ಐಸ್ ॥ ತ್ರಿಪದಸೂತ್ರ. "ಅಂಗಸ್ಯ" ಅಧಿಕಾರ. ಇಲ್ಲಿ ಪಂಚಮ್ಯಂತವಾಗಿ ವಿಪರಿಣತವಾಗುತ್ತದೆ. "ಅತಃ" ಅದಕ್ಕೆ ವಿಶೇಷಣ. ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ.** ಹ್ರಸ್ವಾಕಾರಾಂತವಾದ ಅಂಗದಪರದಲ್ಲಿರುವ ಭಿಸ್ ಪ್ರತ್ಯಯಕ್ಕೆ ಐಸ್ ಆದೇಶ ಬರುತ್ತದೆ. ಭಿಸಿಗೆ ಐಸ್ ಎಂದರೆ ಷಷ್ಠೀನಿರ್ದಿಷ್ಟವಾದುದರಿಂದ "ಅಲೋಂತ್ಯಸ್ಯ" ಪರಿಭಾಷೆಯಿಂದ ಭಿಸಿನ ಅಂತ್ಯ ಸಕಾರಕ್ಕೆ ಪ್ರಾಪ್ತವಾದರೆ "ಅಲೋಂತ್ಯಸ್ಯ" ಸೂತ್ರಕ್ಕೆ ಅಪವಾದವಾದ ಸರ್ವಾದೇಶನಿಯಮ ಮಾಡುವ ಸೂತ್ರವನ್ನು ವೃತ್ತಿಯಲ್ಲಿ ಹೇಳಿರುತ್ತಾನೆ. "ಅನೇಕಾಲ್ ಶಿತ್ ಸರ್ವಸ್ಯ" ಎಂಬುದರಿಂದ ಐಸ್ ಅನೇಕಾಲ್ ಆದುದರಿಂದ ಭಿಸ್ ಸಂಪೂರ್ಣಕ್ಕೆ ಆದೇಶವಾಗಿ ಬರುತ್ತದೆ. ರಾಮ + ಐಸ್. ಇಲ್ಲಿ ಅಕಾರಕ್ಕೆ ಐಚ್ ಪರವಾದುದರಿಂದ "ವೃದ್ಧಿರೇಚಿ" ಸೂತ್ರದಿಂದ ವೃದ್ಧಿಯು ಏಕಾದೇಶವಾಗಿ ಬಂದರೆ "ರಾಮೈಸ್" ಆಗುತ್ತದೆ. ಪದದ ಕೊನೆಯಲ್ಲಿ ಸಕಾರವಿರುವುದರಿಂದ "ಸಸಜುಷೋರುಃ" ಸೂತ್ರದಿಂದ ರುತ್ವ. ಅವಸಾನವಿರುವುದರಿಂದ "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ರೇಫಕ್ಕೆ ವಿಸರ್ಗ. ರಾಮೈರ್, ರಾಮೈಃ. ಬಹುರಾಮರಿಂದ ಎಂದರ್ಥ.

॥ ಚತುರ್ಥೀವಿಭಕ್ತಿಃ ॥

ಙೇ, ಭ್ಯಾಮ್, ಭ್ಯಸ್, ಇವು ಚತುರ್ಥೀವಿಭಕ್ತಿ. ಗೆ ಅಥವಾ ಓಸ್ಕರ ಇದರ ಅರ್ಥ. ಕನ್ನಡದಲ್ಲಿ ಈಗ ಹೆಚ್ಚಾಗಿ ಬಳಕೆಯಲ್ಲಿಲ್ಲ. ಗೆ ಎಂದೇ ಉಪಯೋಗಿಸುತ್ತಾರೆ. ಷಷ್ಠಿಗೂ ಗೆ ಹೇಳುತ್ತಾರೆ. ರಾಮಶಬ್ದದಮೇಲೆ ಚತುರ್ಥೀ ಏಕವಚನ

ವಿವಕ್ಷಾ ಮಾಡಿದಾಗ ಙೇ ವಿಭಕ್ತಿ ಬರುತ್ತದೆ. ರಾಮ+ಙೇ ಎಂದಿರುವಾಗ ವಿಭಕ್ತಿಗೆ ಆದೇಶವನ್ನು ಹೇಳುತ್ತಾನೆ.

(ಙೇವಿಭಕ್ತಿಗೆ ಆದೇಶಹೇಳುವ ಸೂತ್ರ)

## ೧೪೩. ಙೇರ್ಯಃ ॥ ೭-೧-೧೩ ॥

**ಅತೋಽಙ್ಗಾತ್ಪರಸ್ಯ ಙೇರ್ಯಾದೇಶಃ ॥**

ಙೇಃ ಯಃ ॥ ದ್ವಿಪದಸೂತ್ರ. "ಅಂಗಸ್ಯ" ಅಧಿಕಾರ. ಇಲ್ಲಿ ಪಂಚಮ್ಯಂತ ಪರಿಣತಿ. "ಅತಃ" ಅನುವೃತ್ತವಾಗಿ ಅದಕ್ಕೆ ವಿಶೇಷಣ. ಙೇಃ ಎಂಬುದು ಚತುರ್ಥೀ ಏಕವಚನದ ಷಷ್ಠೀ. **ಸೂತ್ರಾರ್ಥ.** ಹ್ರಸ್ವಾಕಾರಾಂತವಾದ ಅಂಗದ ಪರದಲ್ಲಿರುವ ಙೇಗೆ ಯಾದೇಶ. ಚತುರ್ಥೀ ಏಕವಚನವಾದ ಙೇ ಯುಂಬುದಕ್ಕೆ "ಯ" ಎಂಬ ಆದೇಶವೆಂದರ್ಥ. ರಾಮ ಹ್ರಸ್ವಾಕಾರಾಂತವಾದ ಅಂಗ. ಪರದ ಙೇ ವಿಭಕ್ತಿಗೆ ಯಾದೇಶ ಬಂದರೆ ರಾಮಯ ಎಂದಾಗುತ್ತದೆ. ಇಲ್ಲಿ "ಸುಪಿ ಚ" ಸೂತ್ರದಿಂದ ದೀರ್ಘ ಬರಬೇಕು. ಯ ಎಂಬುದು ಯಞಾದಿಯಾದರೂ ಸುಪ್ ಅಲ್ಲ. ಅದು 21 ವಿಭಕ್ತಿಗಳಲ್ಲಿ ಪಠಿತವಾಗಿಲ್ಲ. ಇದರ ಸ್ಥಾನಿಯಾದ ಙೇ ಎಂಬುದು ಸುಪ್. ಅದು ಯಞಾದಿಯಲ್ಲ. ಆದುದರಿಂದ ದೀರ್ಘಕ್ಕೆ ಅವಕಾಶವಿಲ್ಲ. ರೂಪಸಿದ್ಧಿಯಾಗಬೇಕು. ಅದಕ್ಕೋಸ್ಕರ ಆದೇಶವು ಯಾವುದರ ಸ್ಥಾನಕ್ಕೆ ಬರುತ್ತದೆಯೋ ಆ ಸ್ಥಾನಿಯಭಾವವು ಆ ಆದೇಶಕ್ಕೆ ಬರುತ್ತದೆಂದು ಸೂತ್ರದಿಂದ ಸ್ಪಷ್ಟಗೊಳಿಸುತ್ತಾನೆ.

(ಆದೇಶಕ್ಕೆ ಸ್ಥಾನಿವದ್ಭಾವ ಹೇಳುವ ಸೂತ್ರ)

## ೧೪೪. ಸ್ಥಾನಿವದಾದೇಶೋಽನಲ್ವಿಧೌ ॥ ೧-೧-೫೬ ॥

**ಆದೇಶಃ ಸ್ಥಾನಿವತ್ಸ್ಯಾನ್ನತು ಸ್ಥಾನ್ಯಲಾಶ್ರಯವಿಧೌ ॥ ಇತಿ ಸ್ಥಾನಿವತ್ತ್ವಾತ್ಸುಪಿಚೇತಿ ದೀರ್ಘಃ ॥ ರಾಮಾಯ । ರಾಮಾಭ್ಯಾಮ್ ॥**

ಸ್ಥಾನಿವತ್, ಆದೇಶಃ, ಅನಲ್ವಿಧೌ ॥ ತ್ರಿಪದಸೂತ್ರ. ವಿಧೀಯತ ಇತಿ ವಿಧಿಃ. ಅಲಾಶ್ರಯಃ ವಿಧಿಃ ಅಲ್ವಿಧಿಃ, ನ ಅಲ್ವಿಧಿಃ ಅನಲ್ವಿಧಿಃ ತಸ್ಮಿನ್ ಅನಲ್ವಿಧೌ. ಯಾವುದರಸ್ಥಾನಕ್ಕೆ ಬೇರೊಂದು ವಿಹಿತವಾಗುತ್ತದೋ ಅದು ಸ್ಥಾನಿ. ಯಾವುದು ಬಂದುದರಿಂದ ಪ್ರಸಕ್ತವು ಹೋಗುವುದೋ ಅದು ಆದೇಶ. ಸ್ಥಾನಿನಾ ತುಲ್ಯಂ ಸ್ಥಾನಿವತ್. **ಸೂತ್ರಾರ್ಥ.** ಸ್ಥಾನಿಯ ಅಲನ್ನು (ಒಂದುವರ್ಣ) ಆಶ್ರಯಿಸಿ ಮಾಡುವ ಕಾರ್ಯವನ್ನು ಬಿಟ್ಟು ಉಳಿದ ಸ್ಥಳದಲ್ಲಿ ಆದೇಶವು ಸ್ಥಾನಿಯಂತೆ ಆಗುತ್ತದೆ ಸ್ಥಾನಿಯಲ್ಲಿರುವ ಧರ್ಮವು ಆದೇಶದಲ್ಲಿಯೂ ಪ್ರಸಕ್ತವಾಗುವುದೆಂದರ್ಥ. ಅಲ್ ಎಂದರೆ ವರ್ಣ. ಸ್ಥಾನಿಯು ವರ್ಣರೂಪವಾಗಿದ್ದು ಅದನ್ನು ಆಶ್ರಯಿಸಿ

ಕಾರ್ಯಮಾಡುವ ಸಂದರ್ಭದಲ್ಲಿ ಅಲ್ಲಿನ ಆದೇಶವು ಸ್ಥಾನಿಯ ಧರ್ಮವನ್ನು ಹೊಂದು ವುದಿಲ್ಲ, ದಿವ್ ಶಬ್ದದ ಮೇಲೆ ಸುವಿಭಕ್ತಿ ಸೇರಿಸಿದಾಗ "ದಿವ ಔತ್" ಸೂತ್ರದಿಂದ ವಕಾರಕ್ಕೆ ಔಕಾರ ಬಂದು ದಿ+ಔಸ್ ಎಂದಿರುವಾಗ ಯಣ್. ಸಕಾರಕ್ಕೆ ರುತ್ವ ವಿಸರ್ಗ. ದ್ಯೌಃ ಎಂದಾಗುತ್ತದೆ. ಹಲಂತದ ಪರದಲ್ಲಿರುವ ಸುವಿಗೆ "ಹಲ್ಙ್ಯಾಬ್ಭ್ಯಃ" ಸೂತ್ರದಿಂದ ಲೋಪಹೇಳಿದೆ. ಇಲ್ಲಿ ಆದೇಶವು ಸ್ಥಾನಿಯಂತಾಗುತ್ತದೆಯೆಂದು ಮಾತ್ರ ಹೇಳುವುದಾದರೆ ಔಕಾರಾದೇಶವು ವಕಾರದಲ್ಲಿರುವ ಹಲ್ತ್ವ ಧರ್ಮವನ್ನು ಹೊಂದುತ್ತದೆಯೆಂದು ಹೇಳಿದಂತಾಗುತ್ತದೆ. ಔಕಾರವಿದ್ದರೂ ಅದು ಹಲಿನಂತಾಗು ವುದರಿಂದ ಹಲಿನಪರದಲ್ಲಿರುವ ಸುವಿಗೆ ಲೋಪಬರಬೇಕಾಗುತ್ತದೆ. ಆದುದರಿಂದ ಅಲಾಶ್ರಯಕಾರ್ಯದಲ್ಲಿ ನಿಷೇಧ ಹೇಳಿರುತ್ತಾನೆ. ಇದು ಅಲಾಶ್ರಯಕಾರ್ಯ. ವಕಾರ ಒಂದು ವರ್ಣ. ಇದರಲ್ಲಿರುವ ಧರ್ಮವನ್ನು ಇಟ್ಟುಕೊಂಡು ಪರಕ್ಕೆ ಮಾಡುವ ಕಾರ್ಯವಾದುದರಿಂದ ಸ್ಥಾನಿವದ್ಭಾವ ಬರುವುದಿಲ್ಲ. ಹೀಗೆ ಎಲ್ಲಾ ಕಡೆಯಲ್ಲಿಯೂ ಒಂದು ವರ್ಣವನ್ನಾಶ್ರಯಿಸಿ ಕಾರ್ಯಮಾಡುವಲ್ಲಿ ನಿಷೇಧ. ಪ್ರಕೃತ ಅಲಾಶ್ರಯ ಕಾರ್ಯವಿಲ್ಲ. ಙೇ ವಿಭಕ್ತಿಗೆ ಯ ಆದೇಶಬಂದಿದೆ. ಯ ಆದೇಶಕ್ಕೆ ಸ್ಥಾನಿಯ ಧರ್ಮಸುಪ್ತ್ವಮಾತ್ರಬೇಕು. ಸುಪ್ತ್ವಧರ್ಮವು ವರ್ಣಧರ್ಮವಲ್ಲ. ಸಮುದಾಯಧರ್ಮ. ಙಕಾರಾದಿತ್ವಮುಂತಾದ ಧರ್ಮತರುವುದಾಗಿದ್ದರೆ ಅಲಾಶ್ರಯ ವಿಧಿಯಾಗುತ್ತಿತ್ತು. ಈ ಸೂತ್ರದಿಂದ ಸ್ಥಾನಿವದ್ಭಾವ ಬಂದರೆ ಯ ಯಂಬುದೂ ಸುಪ್ ಆಯಿತು. ಯಾವಾಗ ಸ್ಥಾನಿವದ್ಭಾವದಿಂದ ಸುಪ್ ಆಯಿತೋ ಆಗ ಯಞಾದಿಯಾದ ಸುಪ್‌ಪರವಾದುದರಿಂದ ಹಿಂದೆ ಹೇಳಿದ "ಸುಪಿ ಚ" (೧೪೧) ಸೂತ್ರದಿಂದ ಅದಂತವಾದ ಅಂಗಕ್ಕೆ (ರಾಮ) ದೀರ್ಘ. ರಾಮಾಯ. ರಾಮನಿ ಗೋಸ್ಕರವೆಂದರ್ಥ.

ರಾಮ ಶಬ್ದದಮೇಲೆ ಚತುರ್ಥೀದ್ವಿವಚನ ವಿಭಕ್ತಿ ವಿವಕ್ಷಾಮಾಡಿದಾಗ ಭ್ಯಾಮ್ ಪ್ರತ್ಯಯ. ಇದು ತೃತೀಯಾ, ಚತುರ್ಥೀ, ಪಂಚಮೀ ಮೂರರ ದ್ವಿವಚನಗಳಲ್ಲಿಯೂ ಒಂದೇ ರೂಪವುಳ್ಳದ್ದಾಗಿದೆ. ಆದುದರಿಂದ ತೃತೀಯಾ ದ್ವಿವ ಚನದಂತೇ ಪ್ರಕ್ರಿಯೆ. "ಸುಪಿ ಚ" ಸೂತ್ರದಿಂದ ಅಂಗಕ್ಕೆ ದೀರ್ಘ. ರಾಮಾ ಭ್ಯಾಮ್. ಇಬ್ಬರು ರಾಮರಿಗೋಸ್ಕರ. ರಾಮ ಶಬ್ದದಮೇಲೆ ಚತುರ್ಥೀ ಬಹು ವಚನಪ್ರತ್ಯಯ ವಿವಕ್ಷಾಮಾಡಿದರೆ ಭ್ಯಸ್‌ಪ್ರತ್ಯಯ. ಸಕಾರಕ್ಕೆ ವಿಭಕ್ತಿಯಲ್ಲಿರು ವುದರಿಂದ ಹಿಂದಿನಂತೆ ಇತ್‌ಸಂಜ್ಞೆಯಿಲ್ಲ. ರಾಮ+ಭ್ಯಸ್ ಎಂದಿರುವಾಗ ಯಞಾದಿಸುಪ್ ಪರವಾದುದರಿಂದ "ಸುಪಿ ಚ" ಸೂತ್ರದಿಂದ ದೀರ್ಘಪ್ರಾಪ್ತ ವಾದರೆ ಅದಕ್ಕೆ ಅಪವಾದವಾಗಿ ಏಕಾರವನ್ನು ವಿಧಿಸುತ್ತಾನೆ.

(ಬಹುವಚನದಲ್ಲಿ ಏಕಾರಹೇಳುವ ಸೂತ್ರ)

**೧೪೫. ಬಹುವಚನೇ ಝಲ್ಯೇತ್ ॥ ೭-೩-೧೦೩ ॥**

**ಝುಲಾದೌ ಬಹುವಚನೇ ಸುಪ್ಯತೋಽಙ್ಗಸ್ಯೈಕಾರಃ ॥**
**ರಾಮೇಭ್ಯಃ । ಸುಪಿ ಕಿಮ್ ? ಪಚಧ್ವಮ್ ॥**

ಬಹುವಚನೇ, ಝುಲಿ, ಏತ್ । ತ್ರಿಪದಸೂತ್ರ. "ಅಂಗಸ್ಯ" ಅಧಿಕಾರ. "ಅತೋ ಭಿಸ್ ಐಸ್" ಸೂತ್ರದಿಂದ ಅನುವೃತ್ತವಾದ "ಅತಃ" ಎಂಬುದು ಅದಕ್ಕೆ ವಿಶೇಷಣವಾದುದರಿಂದ ತದಂತಲಾಭ. "ಸುಪಿ ಚ" ಸೂತ್ರದಿಂದ "ಸುಪಿ" ಅನುವೃತ್ತವಾಗುತ್ತದೆ. ಝುಲಿಯೆಂಬ ಸಪ್ತಮ್ಯಂತವು ಸುಪಿಯೆಂಬ ಸಪ್ತಮ್ಯಂತಕ್ಕೆ ವಿಶೇಷಣ. ಝುಲ್ ವರ್ಣವಾದುದರಿಂದ "ಯಸ್ಮಿನ್ ವಿಧಿಸ್ತದಾದಾವಲ್ಗ್ರಹಣೇ" ಪರಿಭಾಷೆಯಿಂದ ಝುಲಾದಿಯಾದ ಸುಪ್ ಎಂದರ್ಥವಾಗುತ್ತದೆ. ಏತ್‌ಯೆಂದರೆ ಏಕಾರವೆಂದರ್ಥ. **ಸೂತ್ರಾರ್ಥ.** ಝುಲಾದಿಯಾದ ಬಹುವಚನ ಸುಪ್ ಪರವಾದಾಗ ಹ್ರಸ್ವಾಕಾರಾಂತವಾದ ಅಂಗಕ್ಕೆ ಏಕಾರವು ಆದೇಶವಾಗಿ ಬರುತ್ತದೆ. ಅಂಗಕ್ಕೆ ಎಂದು ಷಷ್ಠಿಗೆ ಕಾರ್ಯಹೇಳಿರುವುದರಿಂದ ಅಲೋಽಂತ್ಯಸ್ಯ ಪರಿಭಾಷೆಯಿಂದ ಅಂಗದ ಅಂತ್ಯಕ್ಕೆ ಎಂದರ್ಥವಾಗುಗುತ್ತದೆ. ಅಂತ್ಯ ಹ್ರಸ್ವಾಕಾರವೇ. ರಾಮ ಹ್ರಸ್ವಾಕಾರಾಂತವಾದ ಅಂಗ. ಝುಲ್ ಭಕಾರ. ಇದೇ ಆದಿಯಾಗಿರುವ ಬಹುವಚನ ಸುಪ್ ಭ್ಯಸ್. ಇದು ಪರವಾದುದರಿಂದ ಅಕಾರಕ್ಕೆ ಏತ್ವಬಂದರೆ ರಾಮೇಭ್ಯಸ್ ಎಂದಾಗುತ್ತದೆ. ಹಿಂದಿನಂತೆ ಸಕಾರಕ್ಕೆ ಪದಾಂತದಲ್ಲಿರುವುದರಿಂದ ರುತ್ವವಿಸರ್ಗ ಬಂದರೆ ರಾಮೇಭ್ಯಃ ಎಂದಾಗುತ್ತದೆ. ಬಹುರಾಮರಿಗೋಸ್ಕರ ಎಂದರ್ಥ. ಸೂತ್ರದಲ್ಲಿರುವ ಪ್ರತಿಯೊಂದು ಪದವೂ ಒಂದು ಪ್ರಯೋಜನ ತಿಳಿಸುತ್ತದೆ. ವ್ಯರ್ಥಪದವನ್ನು ಹೇಳುವುದೇ ಇಲ್ಲ. ಹೀಗೆ ಸೂತ್ರದಲ್ಲಿರುವ ಕೆಲವು ಪದಗಳು ವ್ಯರ್ಥವೆಂದು ಭಾಸವಾದರೆ ಆಗ ವ್ಯಾಖ್ಯಾನಕಾರರು ಅದರ ವಿಶಿಷ್ಟಪ್ರಯೋಜನವನ್ನು ಹೇಳುತ್ತಾರೆ. ಸೂತ್ರದಲ್ಲಿರುವ ಪದವು ವ್ಯರ್ಥವೆಂದು ಆಶಂಕಿಸಿ ಪ್ರಯೋಜನವನ್ನು ಹೇಳುವಲ್ಲಿ ದಳಕೃತ್ಯವೆಂದು ಹೆಸರು. ದಳವೆಂದರೆ ಸೂತ್ರದಲ್ಲಿರುವ ಪದ. ಅದರ ಕೃತ್ಯ ಎಂದರೆ ಪ್ರಯೋಜನ. ಅದನ್ನು ವಿವರಿಸುವುದು. ಪ್ರಕೃತ ಏತ್ವವನ್ನು ಹೇಳುವಾಗ ನಿಮಿತ್ತವು ಮೂರು ಅಂಶದಿಂದ ಕೂಡಿದೆ. ಝುಲಾದಿತ್ವ, ಬಹುವಚನತ್ವ, ಸುಪ್ತ್ವ. ಇಲ್ಲಿ ಸುಪ್ ಎಂದು ಏಕೆ ಹೇಳಬೇಕು? ಸುಪಿ ಕಿಮ್? ಎಂಬುದಕ್ಕೆ ಸೂತ್ರದಲ್ಲಿರುವ ಸುಪಿಯೆಂಬ ಪದಕ್ಕೆ ಪ್ರಯೋಜನವೇನು? ಎಂದರ್ಥ. ಝುಲಾದಿಯಾದ ಬಹುವಚನ ಪರವಾದಾಗ ಏತ್ವ ಎಂದರೂ ಪ್ರಕೃತ ಏತ್ವ ಬಂದೇ ಬರುತ್ತದೆ. ಹೀಗಿರುವಾಗ ಸುಪ್ ಎಂದುದೇಕೆ? ಎಂದರೆ "ಪಚಧ್ವಮ್" ಇಲ್ಲಿ ಪ್ರಯೋಜನವನ್ನು ಹೇಳುತ್ತಾನೆ. ಪಚಧಾತುವಿಗೆ ಲೋಟ್ ಮಧ್ಯಮ ಪುರುಷ ಬಹುವಚನದಲ್ಲಿ ಧ್ವಮ್ ಪ್ರತ್ಯಯ. ಸುಪ್ ಹೇಳದಿದ್ದರೆ ಇಲ್ಲಿಯೂ "ಪಚ" ಅದಂತವಾದ ಅಂಗ. ಇದಕ್ಕೆ ಝುಲಾದಿಯಾದ ಬಹುವಚನ ಧ್ವಮ್ ಪರವಾಗಿದೆ. ಆದುದರಿಂದ ಏತ್ವಬರಬೇಕಾಗುತ್ತದೆ. ಝುಲಾದಿಯಾದ ಬಹುವಚನ ಸುಪ್ ಎಂದರೆ ಇಲ್ಲಿ ಬರುವುದಿಲ್ಲ. ಇದು ತಿಙ್‌ಪ್ರತ್ಯಯ. ಸುಪಲ್ಲವಾದುದರಿಂದ ಏತ್ವಕ್ಕೆ

ಅವಕಾಶವಿಲ್ಲ. ಆದ್ದರಿಂದ ಸುಪ್ ಸಾರ್ಥಕವಾಗಿದೆ. ಹೀಗೆ ಪ್ರತಿಯೊಂದು ವಿಶೇಷಣವೂ ಸಾರ್ಥಕವಾಗಿದೆ.

॥ ಪಂಚಮೀ ವಿಭಕ್ತಿ. ॥

ಙಸಿ, ಭ್ಯಾಮ್, ಭ್ಯಸ್. ಈ ಮೂರು. ಪಂಚಮೀವಿಭಕ್ತಿ. ದೆಸೆಯಿಂದ ಇದರ ಅರ್ಥ. ರಾಮ ಶಬ್ದದ ಮೇಲೆ ಪಂಚಮೀಏಕವಚನ ವಿವಕ್ಷಾಮಾಡಿದಾಗ ಙಸಿಪ್ರತ್ಯಯ. ರಾಮ+ಙಸಿ ಎಂದಿರುವಾಗ ಹ್ರಸ್ವಾಕಾರಾಂತವಾದ ಅಂಗದಪರದಲ್ಲಿ ಙಸಿ ಬಂದುದರಿಂದ "ಟಾಙಸಿಙಸಾಮಿನಾತ್ಸ್ಯಾಃ" ಸೂತ್ರದಿಂದ ಙಸಿಪ್ರತ್ಯಯಕ್ಕೆ ಆತ್ ಆದೇಶ. ಅನೇಕಾಲಾದುದರಿಂದ ಸರ್ವಾದೇಶ. ರಾಮ+ಆತ್. "ಅಕಃ ಸವರ್ಣೇದೀರ್ಘಃ" ಸೂತ್ರದಿಂದ ಸವರ್ಣದೀರ್ಘ. ರಾಮಾತ್. (ತಕಾರ ಝಲ್) ಪದಾಂತದಲ್ಲಿ ಝಲ್‌ವರ್ಣವಿರುವುದರಿಂದ "ಝಲಾಂ ಜಶೋಽಂತೇ" ಸೂತ್ರದಿಂದ ತಕಾರಕ್ಕೆ ಜಸ್ತ್ವ. ಸ್ಥಾನಸಾಮ್ಯದಿಂದ ದಕಾರದೇಶ ರಾಮಾದ್. ಈಗ ದಕಾರವು ಕೊನೆಯಲ್ಲಿರುವುದರಿಂದ ಇದಕ್ಕೆ ವಿಕಲ್ಪವಾಗಿ ಚರ್ತ್ವವನ್ನು (ತ) ಹೇಳುತ್ತಾನೆ.

(ಝಲ್‌ವರ್ಣಗಳಿಗೆ ಚರ್ತ್ವಹೇಳುವ ಸೂತ್ರ)

## ೧೪೬. ವಾಽವಸಾನೇ ॥ ೮-೪-೫೬ ॥

**ಅವಸಾನೇ ಝಲಾಂ ಚರೋ ವಾ ॥ ರಾಮಾತ್, ರಾಮಾದ್ । ರಾಮಾಭ್ಯಾಂ । ರಾಮೇಭ್ಯಃ । ರಾಮಸ್ಯ ॥**

ವಾ. ಅವಸಾನೇ । ದ್ವಿಪದಸೂತ್ರ. "ಝಲಾಂ ಜಶ್ ಝಶಿ" ಸೂತ್ರದಿಂದ "ಝಲಾಂ" "ಅಭ್ಯಾಸೇ ಚರ್ಚ" ಸೂತ್ರದಿಂದ "ಚರ್" ಪದವೂ ಅನುವೃತ್ತವಾಗುತ್ತವೆ. ಸೂತ್ರಾರ್ಥ. ಅವಸಾನದಲ್ಲಿ ಝಲ್‌ವರ್ಣಗಳಿಗೆ ಚರ್ ವರ್ಣಗಳು ವಿಕಲ್ಪವಾಗಿ ಬರುತ್ತವೆ. "ವಿರಾಮೋಽವಸಾನಮ್" ಸೂತ್ರದಿಂದ ಅವಸಾನ ಸಂಜ್ಞಾಹೇಳಿದೆ. ಕೊನೆಯುವರ್ಣ ಅಥವಾ ಏನೂ ಇಲ್ಲದಿರುವುದು ಅವಸಾನ. ರಾಮಾದ್ ಎಂಬಲ್ಲಿ ಝಲ್‌ವರ್ಣ ದಕಾರ ಅವಸಾನವಾಗುತ್ತದೆ. ಆದುದರಿಂದ ಅದಕ್ಕೆ ವಿಕಲ್ಪವಾದ ಚರ್ ಬಂದರೆ (ಸ್ಥಾನಸಾಮ್ಯದಿಂದ ತಕಾರ) ರಾಮಾತ್ ಆಗುತ್ತದೆ. ರಾಮಾತ್, ರಾಮಾದ್ ಎರಡು ರೂಪಗಳು. ರಾಮನದೆಸೆಯಿಂದ. ರಾಮಶಬ್ದದಮೇಲೆ ಪಂಚಮೀ ದ್ವಿವಚನ ವಿವಕ್ಷಾಮಾಡಿದಾಗ ಭ್ಯಾಮ್ ಪ್ರತ್ಯಯ. ತೃತೀಯಾ ದ್ವಿವಚನದಂತೇ ಪ್ರಕ್ರಿಯೆ. ರಾಮ+ಭ್ಯಾಮ್=ರಾಮಾಭ್ಯಾಮ್. (ಇಬ್ಬರು ರಾಮರದೆಸೆಯಿಂದ) ರಾಮಶಬ್ದದಮೇಲೆ ಪಂಚಮೀಬಹುವಚನವಿವಕ್ಷಾ ಮಾಡಿದಾಗ ಭ್ಯಸ್ ಪ್ರತ್ಯಯ. ರಾಮ+ಭ್ಯಸ್. ಚತುರ್ಥೀ ಪಂಚಮೀಬಹುವಚನಗಳಲ್ಲಿ ಒಂದೇ ಪ್ರತ್ಯಯವಾಗುವ್ವದರಿಂದ ಒಂದೇರೂಪ. "ಬಹುವಚನೇಝಲ್ಯೇತ್" ಸೂತ್ರದಿಂದ ಅಕಾರಕ್ಕೆ ಏತ್ವ. ಸಕಾರಕ್ಕೆ ರುತ್ವ ವಿಸರ್ಗ. ರಾಮೇಭ್ಯಃ (ಬಹು ರಾಮರದೆಸೆಯಿಂದ).

|| ಷಷ್ಠೀವಿಭಕ್ತಿ ||

ಙಸ್, ಓಸ್, ಆಮ್ ಷಷ್ಠೀವಿಭಕ್ತಿ. ಅ ಅಥವಾ ಗೆ ಇದರ ಅರ್ಥ. ರಾಮಶಬ್ದದ ಮೇಲೆ ಷಷ್ಠೀಏಕವಚನ ವಿವಕ್ಷಾಮಾಡಿದಾಗ ಙಸ್ ಪ್ರತ್ಯಯ. ಹಿಂದೆಯೇ ಕಾರ್ಯ ವಿಹಿತವಾದುದರಿಂದ ರಾಮಸ್ಯ ಎಂದು ಸಿದ್ಧರೂಪವನ್ನು ಬರೆದಿರುತ್ತಾನೆ. ರಾಮ+ಙಸ್ ಎಂದಿರುವಾಗ ಹ್ರಸ್ವಾಕಾರಾಂತ ಅಂಗದ ಪರದಲ್ಲಿ ಙಸ್ ಬಂದುದರಿಂದ "ಟಾಙಸಿಙಸಾಮಿನಾತ್ಸ್ಯಾಃ" ಸೂತ್ರದಿಂದ ಅದಕ್ಕೆ ಸ್ಯ ಆದೇಶ. ರಾಮಸ್ಯ. ದೀರ್ಘಾದಿಗಳಿಗೆ ನಿಮಿತ್ತವಿಲ್ಲದಿರುವುದರಿಂದ ರಾಮಸ್ಯ ಎಂದೇ ಇರುತ್ತದೆ. ರಾಮನು ಎಂದರ್ಥ. ರಾಮಶಬ್ದದ ಮೇಲೆ ಷಷ್ಠೀ ದ್ವಿವಚನ ವಿವಕ್ಷಾ ಮಾಡಿದಾಗ ಓಸ್ ಪ್ರತ್ಯಯ. "ನವಿಭಕ್ತೌ ತುಸ್ಮಾಃ" ಸೂತ್ರದಿಂದ ಸಕಾರಕ್ಕೆ ಇತ್ ಸಂಜ್ಞಾ ನಿಷೇಧ. ರಾಮ+ಓಸ್ ಎಂದಿರುವಾಗ ಅಂಗಕ್ಕೆ ಕಾರ್ಯಹೇಳುತ್ತಾನೆ.

(ಅಂಗಕ್ಕೆ ಏಕಾರ ಹೇಳುವ ಸೂತ್ರ)

## ೧೪೭. ಓಸಿ ಚ || ೭-೩-೧೦೪ ||

ಅತೋಽಙ್ಗಸ್ಯೈಕಾರಃ || ರಾಮಯೋಃ ||

ದ್ವಿಪದಸೂತ್ರ. ಓಸಿ ಸಪ್ತಮೀ "ತಸ್ಮಿನ್ನಿತಿನಿರ್ದಿಷ್ಟೇಪೂರ್ವಸ್ಯ" ಪರಿಭಾಷೆಯಿಂದ ಓಸ್‌ಪರವಾದಾಗ ಪೂರ್ವಕ್ಕೆ ಕಾರ್ಯವೆಂದು ತಿಳಿಯಬೇಕು. "ಅತೋ ಭಿಸಐಸ್" ಸೂತ್ರದಿಂದ ಅನುವೃತ್ತವಾದ "ಅತಃ" ಎಂಬುದು ಅಧಿಕೃತವಾದ "ಅಂಗಸ್ಯ" ಎಂಬುದಕ್ಕೆ ವಿಶೇಷಣ. ಹ್ರಸ್ವಾಕಾರಾಂತವಾದ ಅಂಗವೆಂದಾಗುತ್ತದೆ. "ಬಹುವಚನೇ ಝಲ್ಯೇತ್" ಸೂತ್ರದಿಂದ ಏತ್ ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಹ್ರಸ್ವಾಕಾರಾಂತವಾದ ಅಂಗಕ್ಕೆ ಓಸ್ ಪರದಲ್ಲಿರುವಾಗ ಏಕಾರಾದೇಶ ಬರುತ್ತದೆ. ರಾಮ ಹ್ರಸ್ವಾಕಾರಾಂತವಾದ ಅಂಗಕ್ಕೆ ಏತ್ವವೆಂದುದರಿಂದ "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂಗದ ಅಂತ್ಯಅಕಾರಕ್ಕೆ ಏಕಾರಾದೇಶ. ರಾಮೇ+ಓಸ್. ಏಕಾರಕ್ಕೆ ಅಚ್‌ಪರವಾದುದರಿಂದ "ಏಚೋಽಯವಾಯಾವಃ" ಸೂತ್ರದಿಂದ ಅಯಾದೇಶ ರಾಮಯ್+ಓಸ್. ರಾಮಯೋಸ್. ಪದಾಂತಸಕಾರಕ್ಕೆ ರುತ್ವವಿಸರ್ಗ ರಾಮಯೋಃ. (ಇಬ್ಬರು ರಾಮರ.) ರಾಮಶಬ್ದದಮೇಲೆ ಷಷ್ಠೀ ಬಹುವಚನವಿವಕ್ಷಾ ಮಾಡಿದಾಗ ಆಮ್ ಪ್ರತ್ಯಯ. ಮಕಾರ ವಿಭಕ್ತಿಯಲ್ಲಿರುವುದರಿಂದ ಇತ್ತಾಗುವುದಿಲ್ಲ. ರಾಮ+ಆಮ್ ಎಂದಿರುವಾಗ "ಅಕಃ ಸವರ್ಣೇ ದೀರ್ಘಃ" ಎಂಬುದರಿಂದ ಸವರ್ಣದೀರ್ಘ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಕಾರ್ಯಾಂತರ ಹೇಳುತ್ತಾನೆ.

(ಆಮಿಗೆ ನುಡಾಗಮ ಹೇಳುವ ಸೂತ್ರ)

## ೧೪೮. ಹ್ರಸ್ವನದ್ಯಾಪೋ ನುಟ್ || ೭-೧-೫೪ ||

**ಹ್ರಸ್ವಾಂತಾನ್ನದ್ಯಂತಾದಾಬಂತಾಚ್ಚಾಙ್ಗಾತ್ಪರಸ್ಯಾಮೋ ನುಡಾಗಮಃ ॥**

ಹ್ರಸ್ವನದ್ಯಾಪಃ, ನುಟ್ ॥ ದ್ವಿಪದಸೂತ್ರ. ಹ್ರಸ್ವಶ್ಚ, ನದೀ ಚ, ಆಪ್ ಚ ತೇಷಾಂ ಸಮಾಹಾರಃ ಹ್ರಸ್ವನದ್ಯಾಪ್. ತಸ್ಮಾತ್. ಹ್ರಸ್ವನದ್ಯಾಪಃ. ಸ್ತ್ರೀಲಿಂಗದಲ್ಲಿ ಇಕಾರ ಉಕಾರಾಂತ ಶಬ್ದಗಳಿಗೆ ನದೀ ಸಂಜ್ಞೆ ಮುಂದೆ ಹೇಳುತ್ತಾನೆ. ಆಪ್. ಸ್ತ್ರೀಲಿಂಗವನ್ನು ಬೋಧಿಸುವ ಪ್ರತ್ಯಯ. "ಅಂಗಸ್ಯ" ಅಧಿಕಾರ. ಪಂಚಮ್ಯಂತವಾಗಿ ಇಲ್ಲಿ ವಿಪರಿಣತವಾಗುತ್ತದೆ. ಹ್ರಸ್ವಾದಿಗಳು ಅದಕ್ಕೆ ವಿಶೇಷಣ. "ಆಮಿ ಸರ್ವನಾಮ್ನಃ ಸುಟ್" ಸೂತ್ರದಿಂದ "ಆಮಿ" ಎಂಬುದು ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಪಂಚಮೀ ಸಪ್ತಮಿಗಳಲ್ಲಿ ಪಂಚಮಿಗೆ ಪ್ರಾಬಲ್ಯವೆಂದು ಹಿಂದೆ ಹೇಳಿದೆ. ನುಟ್ ಟಿತ್ತಾದುದರಿಂದ "ಆದ್ಯಂತೌ ಟಕಿತೌ" ಸೂತ್ರದಿಂದ ಆದ್ಯವಯವವಾಗಿ ಬರುವುದರಿಂದ ಆಗಮವೆನಿಸುತ್ತದೆ. **ಸೂತ್ರಾರ್ಥ.** ಹ್ರಸ್ವಾಂತವಾದ, ನದ್ಯಂತವಾದ ಆಬಂತವಾದ ಅಂಗದ ಪರದಲ್ಲಿರುವ ಆಮಿಗೆ ನುಡಾಗಮ ಬರುತ್ತದೆ. ರಾಮ+ಆಮ್ ಇಲ್ಲಿ ರಾಮ ಹ್ರಸ್ವಾಂತವಾದ ಅಂಗ. ಇದರ ಪರದಲ್ಲಿರುವ ಆಮಿಗೆ ನುಡಾಗಮ. ಟಿತ್ತಾದುದರಿಂದ ಆಮಿನ ಆದ್ಯವಯವವಾಗಿ ಬಂದರೆ ರಾಮ+ನ್ ಆಮ್ ಆಗುತ್ತದೆ. ನುಟಿನಲ್ಲಿ ಟಕಾರ "ಹಲಂತ್ಯಮ್" ಸೂತ್ರದಿಂದ ಇತ್ತಾಗಿ ಲೋಪ ಹೊಂದುತ್ತದೆ. ಉಕಾರ ಉಚ್ಚಾರಣಾರ್ಥ. ರಾಮ ನಾಮ್ ಎಂದಿರುವಾಗ ಅಂಗಕ್ಕೆ ದೀರ್ಘ ಹೇಳುತ್ತಾನೆ.

(ಅಂಗಕ್ಕೆ ದೀರ್ಘ ಹೇಳುವ ಸೂತ್ರ)

## ೧೪೯. ನಾಮಿ ॥ ೬-೪-೩ ॥

**ನಾಮಿ ಪರೇ-ಅಜಂತಾಙ್ಗಸ್ಯ ದೀರ್ಘಃ ॥ ರಾಮಾಣಾಮ್ ॥**
**ರಾಮೇ । ರಾಮಯೋಃ । ಸುಪಿ— ಏತ್ವೇ ಕೃತೇ ॥**

ಏಕಪದಸೂತ್ರ. ನಾಮ್ ಎಂಬುದರ ಸಪ್ತಮೀ ನಾಮಿ. "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ", ಸೂತ್ರದಿಂದ "ದೀರ್ಘಃ" ಅನುವೃತ್ತವಾಗುತ್ತದೆ. ಯಾವ ಸೂತ್ರದಲ್ಲಿಯಾದರೂ ದೀರ್ಘವಿಧಾನಮಾಡಿದರೆ ಸ್ಥಾನಿಹೇಳದಿದ್ದರೆ "ಅಚಃ" ಎಂಬ ಷಷ್ಠ್ಯಂತಪದವು ಸನ್ನಿಹಿತವಾಗುತ್ತದೆ. ಇಲ್ಲಿ ದೀರ್ಘ ಹೇಳುವುದರಿಂದ "ಅಚಃ" ಉಪಸ್ಥಿತವಾದರೆ ಅಂಗಕ್ಕೆ ವಿಶೇಷಣ. ಅಂಗಾಧಿಕಾರವಿರುವುದರಿಂದ "ಅಂಗಸ್ಯ" ಅಧಿಕೃತವಾಗುತ್ತದೆ. **ಸೂತ್ರಾರ್ಥ.** ನಾಮ್ ಪರದಲ್ಲಿರುವಾಗ ಅಜಂತವಾದ ಅಂಗಕ್ಕೆ ದೀರ್ಘ. ನಾಮ್ ಪರದಲ್ಲಿರುವ ರಾಮವೆಂಬುದು ಅಜಂತವಾದ ಅಂಗ. ದೀರ್ಘಬಂದರೆ ರಾಮಾನಾಮ್ ಆಗುತ್ತದೆ. ರೇಫನಕಾರಗಳ ಮಧ್ಯದಲ್ಲಿ ಅಟ್ ಪವರ್ಗ ವಿರುವುದರಿಂದ "ಅಟ್ ಕುಪ್ವಾಙ್ ನುಮ್ ವ್ಯವಾಯೇಽಪಿ" ಸೂತ್ರದಿಂದ ನಕಾರಕ್ಕೆ ಣತ್ವ. ರಾಮಾಣಾಮ್ (ಬಹುರಾಮರ).

(ಸಪ್ತಮೀ ವಿಭಕ್ತಿ)

ಙಿ, ಓಸ್, ಸುಪ್, ಈ ಮೂರು ಸಪ್ತಮೀ ವಿಭಕ್ತಿ. "ಅಲ್ಲಿ" ಸಪ್ತಮ್ಯರ್ಥ. ರಾಮ ಶಬ್ದದ ಮೇಲೆ ಸಪ್ತಮೀ ಏಕವಚನ ವಿವಕ್ಷಾಮಾಡಿದಾಗ ಙಿ ಪ್ರತ್ಯಯ. ಪ್ರತ್ಯಯದ ಆದಿಯಲ್ಲಿ ಙಕಾರವಿರುವುದರಿಂದ ಅದು ಕವರ್ಗವಾದುದರಿಂದ "ಲಶಕ್ವತದ್ಧಿತೇ" ಸೂತ್ರದಿಂದ ಇತ್‌ಸಂಜ್ಞೆ ಬಂದು "ತಸ್ಯಲೋಪಃ" ಸೂತ್ರದಿಂದ ಲೋಪಹೊಂದುತ್ತದೆ. ರಾಮ+ಇ ಎಂದಿರುವಾಗ ಅಕಾರಕ್ಕೆ ಅಚ್‌ಪರವಾದುದರಿಂದ "ಆದ್ಗುಣಃ" ಸೂತ್ರದಿಂದ ಗುಣ ಏಕಾದೇಶ.(ಅ+ಇ=ಏ) ರಾಮೇ. (ರಾಮನಲ್ಲಿ). ರಾಮಶಬ್ದದಮೇಲೆ ಸಪ್ತಮೀದ್ವಿವಚನ ವಿವಕ್ಷಾಮಾಡಿದಾಗ ಓಸ್ ಪ್ರತ್ಯಯ. ಷಷ್ಠೀದ್ವಿವಚನಕ್ಕೂ ಇದಕ್ಕೂ ಪ್ರತ್ಯಯ ಒಂದೇ ಆದುದರಿಂದ ಕಾರ್ಯವಿಶೇಷವಿಲ್ಲ. ರಾಮ+ಓಸ್ "ಓಸಿಚ" ಸೂತ್ರದಿಂದ ಅಂಗಕ್ಕೆ ಏಕಾರ. ಅದಕ್ಕೆ ಅಯಾದೇಶ. ಸಕಾರಕ್ಕೆ ರುತ್ವವಿಸರ್ಗ ರಾಮಯೋಃ. (ಇಬ್ಬರು ರಾಮರಲ್ಲಿ). ರಾಮಶಬ್ದದಮೇಲೆ ಸಪ್ತಮಿ ಬಹುವಚನ ವಿವಕ್ಷಾಮಾಡಿದಾಗ ಸುಪ್‌ಪ್ರತ್ಯಯ. ಇದು ಪ್ರತ್ಯಾಹಾರವಲ್ಲ. ಸುಪ್ ಹಿಂದೆ ೨೧ ವಿಭಕ್ತಿಯ ಸಂಜ್ಞೆಯೆಂದು ಹೇಳಿದ್ದರೂ ಇಲ್ಲಿ ಸುಪ್ ಎಂಬುದೇ ಆನುಪೂರ್ವಿ. "ಹಲಂತ್ಯಮ್" ಸೂತ್ರದಿಂದ ಪಕಾರಕ್ಕೆ ಇತ್‌ಸಂಜ್ಞಾಬರುವುದರಿಂದ ಅದು ಲೋಪವಾಗುತ್ತದೆ. ರಾಮ+ಸು ಎಂದಿರುವಾಗ ಸು ಎಂಬುದು ಝಲಾದಿಬಹುವಚನವಾದುದರಿಂದ "ಬಹುವಚನೇ ಝಲ್ಯೇತ್" ಸೂತ್ರದಿಂದ ಅಂಗಕ್ಕೆ ಏಕಾರಾದೇಶ. ಇದನ್ನೇ "ಏತ್ವೇಕೃತೇ"— ಎಂದು ವೃತ್ತಿಯಲ್ಲಿ ಹೇಳಿರುತ್ತಾನೆ. ಏತ್ವಮಾಡಿದರೆ ರಾಮೇಸು ಎಂದಾಗುತ್ತದೆ. ಆಗ ಕಾರ್ಯವಿಶೇಷವನ್ನು ಹೇಳುತ್ತಾನೆ.

(ಷತ್ವವಿಧಾಯಕಸೂತ್ರ)

## ೧೫೦. ಆದೇಶಪ್ರತ್ಯಯಯೋಃ ॥ ೮-೩-೫೯ ॥

**ಇಣ್ಕುಭ್ಯಾಂ ಪರಸ್ಯಾಪದಾಂತಸ್ಯಾದೇಶಸ್ಯ ಪ್ರತ್ಯಯಾವಯವಶ್ಚ ಯಃ ಸಃ ತಸ್ಯ ಮೂರ್ಧನ್ಯಾದೇಶಃ । ಈಷದ್ವಿವೃತಸ್ಯ ಸಸ್ಯ ತಾದೃಶ ಏವ ಷಃ । ರಾಮೇಷು । ಏವಂ ಕೃಷ್ಣಾದಯೋಽಪ್ಯದಂತಾಃ ॥**

ಏಕಪದಸೂತ್ರ. "ಇಣ್ಕೋಃ" ಅಧಿಕಾರ. ಇಣ್‌ಕವರ್ಗದ ಪರಕ್ಕೆ ಕಾರ್ಯವೆಂದು ತಿಳಿಸುತ್ತದೆ. "ಅಪದಾಂತಸ್ಯ ಮೂರ್ಧನ್ಯಃ" ಇದೂ ಅಧಿಕಾರ. ಇಣ್‌ಕವರ್ಗದ ಪರಕ್ಕೆ ಅಪದಾಂತವಲ್ಲಿ (ಪದದ ಕೊನೆಯನ್ನು ಬಿಟ್ಟು) ಮೂರ್ಧನ್ಯಾದೇಶ. ಎಂದು ತಿಳಿಸುತ್ತದೆ. ಮೂರ್ಧ್ನಿಭವಃ ಮೂರ್ಧನ್ಯಃ "ಋಟುರಷಾಣಾಂ ಮೂರ್ಧಾ" ಎಂದು ಹಿಂದೆ ಹೇಳಿದೆ. ಮೂರ್ಧದಲ್ಲಿ ಹುಟ್ಟಿದ ವರ್ಣ. ಪ್ರಕೃತದಲ್ಲಿ ಷಕಾರ. ಆದೇಶಶ್ಚ ಪ್ರತ್ಯಯಶ್ಚ ಆದೇಶಪ್ರತ್ಯಯೌ, ತಯೋಃ ಆದೇಶಪ್ರತ್ಯಯಯೋಃ. ಷಷ್ಠೀ ಆದೇಶದಲ್ಲಿ ಅಭೇದಾರ್ಥ, ಪ್ರತ್ಯಯದಲ್ಲಿ ಅವಯವಾರ್ಥ ತಿಳಿ-

ಸುತ್ತದೆ. “ಸಹೇಃ ಸಾಡಃ ಸಃ” ಸೂತ್ರದಿಂದ “ಸಃ” ಅನುವೃತ್ತವಾಗುತ್ತದೆ. (ಸಃ ಸೋಃ ಸಾಮ್) ಅದು ಷಷ್ಠೀಏಕವಚನ. ಸಕಾರಕ್ಕೆ ಎಂದರ್ಥ. ಸೂತ್ರಾರ್ಥ. ಇಣ್ ಕವರ್ಗದ ಪರದಲ್ಲಿರುವ ಪದಾಂತದಲ್ಲಿರುವ, ಆದೇಶವಾಗಿ ಬಂದ, ಅಥವಾ ಪ್ರತ್ಯಯದ ಅವಯವವಾದ ಸಕಾರಕ್ಕೆ ಮೂರ್ಧನ್ಯಾದೇಶ ಬರುತ್ತದೆ. ರಾಮೇಸು ಇಲ್ಲಿ ಸಕಾರಪ್ರತ್ಯಯದ ಅವಯವ. ಇದು ಪದಾಂತದಲ್ಲಿ ಇಲ್ಲ. ಪದಾಂತದಲ್ಲಿರುವುದು ಉಕಾರ. ಪ್ರತ್ಯಯಾವಯವವಾದ ಸಕಾರವು ಏಕಾರರೂಪವಾದ ಇಣ್ಣಿನ ಪರದಲ್ಲಿ ಇದೆ. ಇದಕ್ಕೆ ಮೂರ್ಧನ್ಯಾದೇಶ ಬರಬೇಕು. “ಈಷದ್ವಿವೃತಸ್ಯ” —ವಾಕ್ಯದಿಂದ ಸಕಾರಕ್ಕೆ ಬರಲು ಯೋಗ್ಯವಾದ ಮೂರ್ಧನ್ಯಾದೇಶ ಹೇಳುತ್ತಾನೆ. ಸಕಾರಕ್ಕೆ ಈಷದ್ವಿವೃತ ಅಭ್ಯಂತರಪ್ರಯತ್ನ. ಮೂರ್ಧನ್ಯಗಳಾದ ಋಕಾರ ಟವರ್ಗ ರೇಫ ಷಕಾರಗಳಲ್ಲಿ ಈಷದ್ವಿವೃತ ಪ್ರಯತ್ನವಿರುವುದು ಷಕಾರ. “ಈಷದ್ವಿವೃತಮೂಷ್ಮಣಾಮ್” ಎಂದು ಹಿಂದೆ ಹೇಳಿದೆ. ಹೀಗೆ ಷಕಾರಾದೇಶಬಂದರೆ ರಾಮೇಷು ಎಂದಾಗುತ್ತದೆ. ಬಹು ರಾಮರಲ್ಲಿ ಎಂದರ್ಥ. ರಾಮ ಶಬ್ದದಮೇಲೆ ಏಳು ವಿಭಕ್ತಿ ಪ್ರತ್ಯಯಗಳೂ ಹೇಳಿದಂತಾಯಿತು.

ಪ್ರಥಮಾ—ರಾಮಃ ರಾಮೌ ರಾಮಾಃ ॥ ಸಂಬೋಧನ ಪ್ರಥಮಾ—ಹೇ ರಾಮ ಹೇ ರಾಮೌ ಹೇ ರಾಮಾಃ ॥ ದ್ವಿತೀಯಾ—ರಾಮಂ ರಾಮೌ ರಾಮಾನ್ ॥ ತೃತೀಯಾ—ರಾಮೇಣ ರಾಮಾಭ್ಯಾಮ್ ರಾಮೈಃ ॥ ಚತುರ್ಥೀ—ರಾಮಾಯ ರಾಮಾಭ್ಯಾಮ್ ರಾಮೇಭ್ಯಃ ॥ ಪಂಚಮೀ—ರಾಮಾತ್ ರಾಮಾಭ್ಯಾಮ್ ರಾಮೇಭ್ಯಃ ॥ ಷಷ್ಠೀ—ರಾಮಸ್ಯ ರಾಮಯೋಃ ರಾಮಾಣಾಮ್ ॥ ಸಪ್ತಮೀ—ರಾಮೇ ರಾಮಯೋಃ ರಾಮೇಷು.

ಹೀಗೆ ಪುಲ್ಲಿಂಗದಲ್ಲಿ ಅಕಾರಾಂತಗಳಾದ ಕೃಷ್ಣ, ಗೋವಿಂದ, ಘಟ, ಪಾಕ ಮುಂತಾದ ಶಬ್ದಗಳ ಪ್ರಕ್ರಿಯೆಗಳನ್ನು ಊಹಿಸಿ ತಿಳಿದುಕೊಳ್ಳಬೇಕು.

---

ಸರ್ವ ಮುಂತಾದ ಕೆಲವು ಶಬ್ದಗಳಿಗೆ “ಸರ್ವನಾಮ” ಎಂಬ ಸಂಜ್ಞೆಯನ್ನು ಹೇಳುತ್ತಾನೆ. ಸರ್ವ ಮುಂತಾದವು ಹ್ರಸ್ವಾಕಾರಾಂತವಾದರೂ ಕೆಲವೆಡೆಗಳಲ್ಲಿ ರಾಮಶಬ್ದದಂತೆ ಪ್ರಕ್ರಿಯೆಯನ್ನು ಹೊಂದುವುದಿಲ್ಲ. ಸರ್ವನಾಮಕಾರ್ಯಗಳು ಸಾಮಾನ್ಯವಾಗಿ ಪ್ರಥಮಾ ಬಹುವಚನ, ಚತುರ್ಥೀ, ಪಂಚಮೀ, ಸಪ್ತಮೀ ಏಕವಚನ, ಷಷ್ಠೀ ಬಹುವಚನ, ಈ ವಿಭಕ್ತಿಗಳಲ್ಲಿ ವಿಶೇಷವಾಗಿ ಬರುತ್ತವೆ. “ಸರ್ವನಾಮ” ಎಂದು ಮಹಾಸಂಜ್ಞೆ ಮಾಡಿರುವುದರಿಂದ ಈ ಗಣದಲ್ಲಿ ಸೇರಿರುವ ಶಬ್ದಗಳೆಲ್ಲವೂ ಅನ್ವರ್ಥನಾಮ ಹೊಂದಿರುತ್ತವೆ. ಅನ್ವರ್ಥವಿಲ್ಲವಾದರೆ ಅರ್ಧಮಾತ್ರಾಲಾಘವಾಭಿಲಾಷಿವೈಯಾಕರಣಪಾಣಿನಿಯು ಬೇರೆಕಡೆಯಲ್ಲಿ ಮಾಡಿರುವ ಟಿ, ಘು ಮುಂತಾದುವುಗಳಂತೇ ಹ್ರಸ್ವವಾದ ಹೆಸರನ್ನಿಡುತ್ತಿದ್ದನು. ಸರ್ವೇಷಾಂ ನಾಮ ಸರ್ವನಾಮ. ಎಲ್ಲರಲ್ಲಿಯೂ ಬಳಸಲು ಯೋಗ್ಯವಾದವುಗಳು. ನೀನು ನಾನು

ಮುಂತಾದ ಸರ್ವನಾಮಪದಗಳು ಎಲ್ಲರಲ್ಲಿಯೂ ಹೇಳಲು ಅರ್ಹತೆಹೊಂದಿವೆ. ಮನುಷ್ಯ ಪಶುಪಕ್ಷ್ಯಾದಿಗಳೆಲ್ಲವೂ ತ್ವಂ, ಅಹಂ (ನೀನು, ನಾನು) ಎಂದು ವ್ಯವಹಾರ ಮಾಡುತ್ತವೆ. ಆದುದರಿಂದ ಇಂಥಾ ಶಬ್ದಗಳೇ ಈ ಗಣದಲ್ಲಿ ಸೇರಿರುತ್ತವೆ. ಸರ್ವನಾಮ ಕಾರ್ಯಕ್ಕೋಸ್ಕರ ಸರ್ವನಾಮಸಂಜ್ಞೆಯನ್ನು ಮೊದಲು ಹೇಳುತ್ತಾನೆ.

(ಸರ್ವನಾಮ ಸಂಜ್ಞಾ ಹೇಳುವ ಸೂತ್ರ)

## ೧೫೧. ಸರ್ವಾದೀನಿ ಸರ್ವನಾಮಾನಿ ॥ ೧-೧-೨೭ ॥

ಸರ್ವಾದೀನಿ ಶಬ್ದಸ್ವರೂಪಾಣಿ ಸರ್ವನಾಮಸಂಜ್ಞಾನಿ ಸ್ಯುಃ ॥ ಸರ್ವ, ವಿಶ್ವ, ಉಭ, ಉಭಯ, ಡತರ, ಡತಮ, ಅನ್ಯ, ಅನ್ಯತರ, ಇತರ ತ್ವತ್, ನೇಮ, ಸಮ. ಸಿಮ, । ಪೂರ್ವಪರಾವರ ದಕ್ಷಿಣೋತ್ತರಾಪರಾಧರಾಣಿ ವ್ಯವಸ್ಥಾಯಾಮಸಂಜ್ಞಾಯಾಮ್ । ಸ್ವಮಜ್ಞಾತಿಧನಾಖ್ಯಾಯಾಮ್ । ಅಂತರಂ ಬಹಿರ್ಯೋಗೋಪಸಂವ್ಯಾನಯೋಃ । ತ್ಯದ್, ತದ್, ಯದ್, ಏತದ್, ಇದಮ್, ಅದಸ್, ಏಕ, ದ್ವಿ, ಯುಷ್ಮದ್, ಅಸ್ಮದ್, ಭವತು, ಕಿಮ್ ॥

ದ್ವಿಪದಸೂತ್ರ. ಶಬ್ದಸ್ವರೂಪಾಣಿ ಎಂದು ವಿಶೇಷ್ಯವನ್ನು ಅಧ್ಯಾಹಾರಮಾಡಿಕೊಳ್ಳಬೇಕು. **ಸೂತ್ರಾರ್ಥ.** ಸರ್ವಮುಂತಾದ ಶಬ್ದಸ್ವರೂಪಗಳು "ಸರ್ವನಾಮ" ವೆಂಬ ಸಂಜ್ಞೆಯನ್ನು ಹೊಂದುತ್ತವೆ. ಸರ್ವಮುಂತಾದವುಗಳು ಯಾವುವೆಂದು ಪಾಣಿನಿಯೇ ಗಣಪಾಠದಲ್ಲಿ ಹೇಳಿರುತ್ತಾನೆ. ಸರ್ವಾದಿಗಳು ಮೂವತ್ತೈದು. ಈ ಮೂವತ್ತೈದನ್ನು ಹೇಳುವಾಗ ಮಧ್ಯೆ ಸೂತ್ರರೂಪವಾಗಿ ಹೇಳಿರುತ್ತಾನೆ. ಇವು ಗಣಾಂತರ್ಗತ (ಅಂತರ್ಗಣ) ಸೂತ್ರಗಳು. ಪೂರ್ವಮೊದಲಾದ ಏಳು ಶಬ್ದಗಳು ವ್ಯವಸ್ಥಾ ಮತ್ತು ಅಸಂಜ್ಞಾ ಅರ್ಥದಲ್ಲಿಮಾತ್ರ ಸರ್ವನಾಮಸಂಜ್ಞೆಯನ್ನು ಹೊಂದುತ್ತವೆ. ಇತರ ಅರ್ಥದಲ್ಲಿ ಸರ್ವನಾಮಸಂಜ್ಞೆಯಿಲ್ಲದುದರಿಂದ ಪೂರ್ವಾದಿಗಳು ರಾಮಶಬ್ದದಂತೆಯೇ ಆಗುತ್ತವೆ. (ಸ್ವಮ....ಯಾಮ್) ಎರಡನೇ ಸೂತ್ರದಲ್ಲಿ ಸ್ವ ಎಂಬ ಒಂದು ಶಬ್ದ ಹೇಳಿದೆ. ಇದು ಜ್ಞಾತಿಧನ ಎಂದು ಅರ್ಥಕೊಡದಿರುವಾಗ ಮಾತ್ರ ಸರ್ವನಾಮಸಂಜ್ಞೆಯನ್ನು ಹೊಂದುತ್ತದೆ. ಮೂರನೇ ಸೂತ್ರದಲ್ಲಿ ಹೇಳಿದ ಅಂತರವೆಂಬ ಒಂದು ಶಬ್ದವು ಬಹಿರ್ಯೋಗ, ಉಪಸಂವ್ಯಾನವೆಂಬ ಎರಡು ಅರ್ಥದಲ್ಲಿ ಮಾತ್ರ ಸರ್ವನಾಮಸಂಜ್ಞೆಯನ್ನು ಹೊಂದುತ್ತದೆ. ಆಪದಗಳ ಅರ್ಥಗಳು ಮುಂದೆ ಸೂತ್ರದಲ್ಲಿ ಗ್ರಂಥಕಾರನೇ ವಿವರಿಸುವುದರಿಂದ ಅಲ್ಲಿಯೇ ಅವುಗಳ ಅರ್ಥ ತಿಳಿಯುತ್ತದೆ. ಸರ್ವಾದಿಗಳ ಅರ್ಥ. ಸರ್ವ, ವಿಶ್ವ=ಎಲ್ಲಾ. ಉಭ=ಎರಡು(ಇಬ್ಬರು)ಉಭಯ + ಎರಡು ಅವಯವವಿರುವ, ಡತರ ಡತಮ ಇವೆರಡು ಪ್ರತ್ಯಯಗಳು. ನಿರ್ಧಾರಣ ಪ್ರಶ್ನೆಯಲ್ಲಿ ಬರುತ್ತವೆ. ಅನ್ಯ, ಅನ್ಯತರ, ಇತರ, ತ್ವತ್, ತ್ವ, ಈ ಐದು ಅನ್ಯಾರ್ಥಕ

ಗಳು. ನೇಮ=ಅರ್ಧ. ಸಮ=ಎಲ್ಲಾ. ಸಿಮ=ಎಲ್ಲಾ. ಪೂರ್ವ....ಅಧರ=(೭) ದಿಗ್ವಾಚಕಗಳು. ಸ್ವ=ತಾನು, ತನ್ನದು. ಅಂತರ=ಹೊರಗಿನ, ತ್ಯದ್, ತದ್= ಅವನು. (ಅದು) ಯದ್=ಯಾವ ಏತದ್, ಇದಮ್, ಅದಸ್,=ಇವನು. (ಇವಳು ಇದು) ಏಕ=ಒಂದು, ದ್ವಿ=ಎರಡು. ಯುಷ್ಮದ್=ನೀನು, ಅಸ್ಮದ್= ನಾನು. ಭವತ್=ತಾವು. ಕಿಮ್=ಏನು? ಇವುಗಳ ಅರ್ಥ ಮತ್ತು ವಿಶೇಷವನ್ನು ಮುಂದೆ ವಿವರವಾಗಿ ಹೇಳುತ್ತಾನೆ.

ಸರ್ವ ಶಬ್ದವು ಪ್ರಥಮಾ ವಿಭಕ್ತಿ ಏಕವಚನ, ದ್ವಿವಚನಗಳಲ್ಲಿ ರಾಮಶಬ ದಂತೆಯೇ ಪ್ರಕ್ರಿಯೆ ಹೊಂದುತ್ತದೆ. ಸರ್ವಃ, ಸರ್ವೌ. ಪ್ರಥಮಾ ಬಹುವಚನದಲ್ಲಿ ಜಸ್‌ಪ್ರತ್ಯಯ ಬಂದಾಗ ಕಾರ್ಯವಿಶೇಷವನ್ನು ಹೇಳುತ್ತಾನೆ.

(ಜಸ್‌ವಿಭಕ್ತಿಗೆ ಕಾರ್ಯಹೇಳುವ ಸೂತ್ರ)

## ೧೫೨. ಜಸಃ ಶೀ ॥ ೭-೧-೧೭ ॥

**ಅದಂತಾತ್ಸರ್ವನಾಮ್ನೋ ಜಸಃ ಶೀ ಸ್ಯಾತ್ । ಅನೇಕಾಲ್ತ್ವಾತ್ಸ ರ್ವಾದೇಶಃ ॥ ಸರ್ವೇ**

ದ್ವಿಪದಸೂತ್ರ. ಜಸಃ ಷಷ್ಠೀ. "ಅತೋಭಿಸ ಐಸ್" ಸೂತ್ರದಿಂದ "ಅತಃ" "ಸರ್ವನಾಮ್ನಃ ಸ್ಮೈ" ಸೂತ್ರದಿಂದ "ಸರ್ವನಾಮ್ನಃ" ಎಂಬ ಪದಗಳು ಅನುವೃತ್ತ ವಾಗುತ್ತವೆ. ಅತಃ ಸರ್ವನಾಮ್ನಃ ಎಂಬುದಕ್ಕೆ ವಿಶೇಷಣ ಅದು ಪಂಚಮಿಯಾದು ದರಿಂದ ಪರಕ್ಕೆ ಕಾರ್ಯವೆಂದು ತಿಳಿಯಬೇಕು. **ಸೂತ್ರಾರ್ಥ.** ಅದಂತವಾದ (ಹಸ್ವಾಕಾರ) ಸರ್ವನಾಮಶಬ್ದದ ಪರದಲ್ಲಿರುವ ಜಸ್‌ಪ್ರತ್ಯಯಕ್ಕೆ ಶೀ ಆದೇಶ ಬರುತ್ತದೆ. ಸರ್ವಶಬ್ದವು ಹ್ರಸ್ವಾಕಾರಾಂತವಾದ ಸರ್ವನಾಮಶಬ್ದ. ಇದರ ಪರದ ಜಸಿಗೆ ಶೀ ಆದೇಶ. ಶೀ ಎಂಬಲ್ಲಿ ಶಕಾರಕ್ಕೆ ಇತ್‌ಸಂಜ್ಞೆ ಹೇಳಬೇಕು. ಪ್ರತ್ಯಯದ ಆದಿಗೆ "ಲಶಕ್ವತದ್ಧಿತೇ" ಸೂತ್ರವು ಇತ್‌ಸಂಜ್ಞೆಯನ್ನು ಹೇಳುತ್ತದೆ. ಶೀ ಪ್ರತ್ಯಯ ವಾಗಬೇಕಾದರೆ ಜಸಿನ ಸ್ಥಾನಕ್ಕೆ ಬಂದಮೇಲೆ ಸ್ಥಾನಿವದ್ಭಾವ ಬಂದು ಆಗುತ್ತದೆ. ಜಸಿಗೆ ಬರುವುದಾದರೆ ಮೊದಲು ಪ್ರತ್ಯಯವಾಗದಿರುವುದರಿಂದ ಅದು ಅನೇಕಾಲಾ ಯಿತು. ಆಗ "ಅನೇಕಾಲ್‌ಶಿತ್ಸರ್ವಸ್ಯ" ಸೂತ್ರದಿಂದ ಅನೇಕಾಲಾದುದರಿಂದ ಸರ್ವಾದೇಶವಾಗಿ ಬರುತ್ತದೆ. ಇದನ್ನೇ "ಅನೇಕಾಲ್ತ್ವಾತ್ ಸರ್ವಾದೇಶಃ" ಎಂದು ಗ್ರಂಥಕಾರನು ಹೇಳುತ್ತಾನೆ. ಜಸಿನ ಸ್ಥಾನಕ್ಕೆ ಬಂದಮೇಲೆ ಸರ್ವ+ಶೀ ಆಗುತ್ತದೆ. ಇಲ್ಲಿ "ಸ್ಥಾನಿವದಾದೇಶೋಽನಲ್ವಿಧೌ" ಸೂತ್ರದಿಂದ ಆದೇಶವು ಸ್ಥಾನಿಯಧರ್ಮ ವನ್ನು ಹೊಂದುತ್ತದೆ ಎಂದುದರಿಂದ ಶೀ ಎಂಬುದಕ್ಕೆ ಪ್ರತ್ಯಯತ್ವ ಬರುತ್ತದೆ. ಆಗ ಪ್ರತ್ಯಯಾದಿಯಲ್ಲಿ ಶಕಾರವಿರುವುದರಿಂದ "ಲಶಕ್ವತದ್ಧಿತೇ" ಸೂತ್ರದಿಂದ ಅದಕ್ಕೆ ಇತ್‌ಸಂಜ್ಞೆ ಬಂದು "ತಸ್ಯಲೋಪಃ" ಸೂತ್ರದಿಂದ ಲೋಪವಾಗುತ್ತದೆ. ಸರ್ವ+ಈ ಎಂದಿರುವಾಗ "ಆದ್ಗುಣಃ" ಎಂಬುದರಿಂದ ಗುಣ ಬಂದರೆ ಸರ್ವೇ ಎಂದಾಗುತ್ತದೆ.

ಎಲ್ಲರು ಎಂದರ್ಥ. ಸಂಬೋಧನ ಪ್ರಥಮೆಯಲ್ಲಿ ಪ್ರಥಮಾದಂತೆಯೇ ಕಾರ್ಯಗಳು. ಹೇ ಸರ್ವ, ಹೇ ಸರ್ವೌ, ಹೇಸರ್ವೇ. ಏಕವಚನದಲ್ಲಿ ರಾಮಶಬ್ದದಂತೆ ಪ್ರಕ್ರಿಯೆ. ಸುಲೋಪ. ದ್ವಿತೀಯಾ ತೃತೀಯಾ ವಿಭಕ್ತಿಗಳಲ್ಲಿ ರಾಮಶಬ್ದದಂತೆ ಪ್ರಕ್ರಿಯೆ. ದ್ವಿ–ಸರ್ವಂ ಸರ್ವೌ, ಸರ್ವಾನ್. ತೃ–ಸರ್ವೇಣ, ಸರ್ವಾಭ್ಯಾಮ್, ಸರ್ವೈಃ. ಸರ್ವ ಶಬ್ದದಮೇಲೆ ಚತುರ್ಥೀ ಏಕವಚನದಲ್ಲಿ ಙೇ ಪ್ರತ್ಯಯ. ಸರ್ವ ಙೇ ಎಂದಿರುವಾಗ ಪ್ರತ್ಯಯಕ್ಕೆ ಆದೇಶ ಹೇಳುತ್ತಾನೆ.

(ಸ್ಮೈ ಆದೇಶ ಹೇಳುವ ಸೂತ್ರ)

## ೧೫೩. ಸರ್ವನಾಮ್ನಃ ಸ್ಮೈ ॥ ೭–೧–೧೪ ॥

**ಅತಃ ಸರ್ವನಾಮ್ನಃ "ಙೇ" ಇತ್ಯಸ್ಯ ಸ್ಮೈ ಸ್ಯಾತ್ ॥ ಸರ್ವಸ್ಮೈ ॥**

ದ್ವಿಪದಸೂತ್ರ. "ಅತೋ ಭಿಸ ಐಸ್" ಸೂತ್ರದಿಂದ "ಅತಃ" ಅನುವೃತ್ತವಾಗಿ "ಸರ್ವನಾಮ್ನಃ" ಎಂಬುದಕ್ಕೆ ವಿಶೇಷಣವಾಗುತ್ತದೆ. "ಙೇರ್ಯಃ" ಸೂತ್ರದಿಂದ "ಙೇಃ" ಅನುವೃತ್ತವಾಗುತ್ತದೆ. ಅದು ಷಷ್ಠೀ. **ಸೂತ್ರಾರ್ಥ.** ಹ್ರಸ್ವಾಕಾರಾಂತವಾದ ಸರ್ವನಾಮದ ಪರದಲ್ಲಿರುವ ಙೇ ವಿಭಕ್ತಿಗೆ ಸ್ಮೈ ಆದೇಶ ಬರುತ್ತದೆ. ಸರ್ವ ಹ್ರಸ್ವಾಕಾರಾಂತವಾದ ಸರ್ವನಾಮಶಬ್ದ, ಪರದ ಙೇ ಪ್ರತ್ಯಯಕ್ಕೆ ಸ್ಮೈ ಆದೇಶ, ಅನೇಕಾಲಾದುದರಿಂದ ಸರ್ವಾದೇಶ. ಸರ್ವಸ್ಮೈ. ಚತುರ್ಥೀ ದ್ವಿವಚನ ಬಹುವಚನಗಳಲ್ಲಿ ರಾಮಶಬ್ದದಂತೆ ಪ್ರಕ್ರಿಯೆ. ಸರ್ವಾಭ್ಯಾಮ್ ಸರ್ವೇಭ್ಯಃ। ಸರ್ವಶಬ್ದದ ಮೇಲೆ ಪಂಚಮೀಏಕವಚನ ವಿವಕ್ಷಾಮಾಡಿದಾಗ ಙಸಿಪ್ರತ್ಯಯ. ಸರ್ವ+ಙಸಿ ಎಂದಿರುವಾಗ ಪ್ರತ್ಯಯಕ್ಕೆ ಆದೇಶ ಹೇಳುತ್ತಾನೆ.

(ಸ್ಮಾತ್‌ಸ್ಮಿನ್ ಆದೇಶ ಹೇಳುವ ಸೂತ್ರ)

## ೧೫೪. ಙಸಿ ಙ್ಯೋಃ ಸ್ಮಾತ್‌ಸ್ಮಿನೌ ॥ ೭–೧–೧೫ ॥

**ಅತಃ ಸರ್ವನಾಮ್ನ ಏತಯೋರೇತೌ ಸ್ತಃ॥ಸರ್ವಸ್ಮಾತ್ ॥**

ಙಸಿಙ್ಯೋಃ, ಸ್ಮಾತ್‌ಸ್ಮಿನೌ ॥ ದ್ವಿಪದಸೂತ್ರ. ಹಿಂದಿನ ಸೂತ್ರದಿಂದ "ಸರ್ವನಾಮ್ನಃ" "ಅತೋ ಭಿಸ ಐಸ್" ಸೂತ್ರದಿಂದ "ಅತಃ" ಅನುವೃತ್ತಿ. ಅತಃ ಸರ್ವನಾಮಕ್ಕೆ ವಿಶೇಷಣ. ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ.** ಹ್ರಸ್ವಾಕಾರಾಂತವಾದ ಸರ್ವನಾಮದ ಪರದಲ್ಲಿರುವ ಪಂಚಮ್ಯೇಕವಚನ (ಙಸಿ) ಸಪ್ತಮ್ಯೇಕವಚನ (ಙಿ) ಪ್ರತ್ಯಯಗಳಿಗೆ ಕ್ರಮವಾಗಿ ಸ್ಮಾತ್ ಸ್ಮಿನ್ ಆದೇಶಗಳು ಬರುತ್ತವೆ. ಯಥಾಸಂಖ್ಯವಿರುವುದರಿಂದ ಕ್ರಮವು ಲಬ್ಧವಾಗುತ್ತದೆ. ಅದಂತವಾದ ಸರ್ವನಾಮವಾದ ಸರ್ವಶಬ್ದದ ಪರದಲ್ಲಿರುವ ಙಸಿಗೆ ಸ್ಮಾತ್ ಆದೇಶ ಬಂದರೆ ಸರ್ವಸ್ಮಾತ್ ಎಂದಾಗುತ್ತದೆ. ಅನೇಕಾಲಾದುದರಿಂದ ಸರ್ವಾದೇಶವಾಗಿ ಬಂದಿದೆ.

ಪಂಚಮೀ ದ್ವಿವಚನ ಬಹುವಚನ. ಷಷ್ಠೀ ಏಕವಚನ ದ್ವಿವಚನಗಳಲ್ಲಿ ರಾಮಶಬ್ದದಂತೆ ಪ್ರಕ್ರಿಯೆ. ಪಂಚಮೀ–ಸರ್ವಸ್ಮಾತ್, ಸರ್ವಾಭ್ಯಾಮ್, ಸರ್ವೇಭ್ಯಃ ॥ ಷಷ್ಠೀ–ಸರ್ವಸ್ಯ–ಸರ್ವಯೋಃ ॥ ಷಷ್ಠೀ ಬಹುವಚನದಲ್ಲಿ ಆಮ್ ಪ್ರತ್ಯಯ ಬಂದಾಗ ಕಾರ್ಯವಿಶೇಷ ಹೇಳುತ್ತಾನೆ.

(ಆಮಿಗೆ ಸುಡಾಗಮ ಹೇಳುವ ಸೂತ್ರ)

## ೧೫೫. ಆಮಿ ಸರ್ವನಾಮ್ನಃ ಸುಟ್ ॥ ೭-೧-೫೨ ॥

**ಅವರ್ಣಾಂತಾತ್ಪರಸ್ಯ ಸರ್ವನಾಮ್ನೋ ವಿಹಿತಸ್ಯಾಮಃ ಸುಡಾಗಮಃ । ಏತ್ವಷತ್ವೇ । ಸರ್ವೇಷಾಮ್ । ಸರ್ವಸ್ಮಿನ್ । ಶೇಷಂ ರಾಮವತ್ ಏವಂ ವಿಶ್ವಾದಯೋಽಪ್ಯದಂತಾಃ ॥**

ತ್ರಿಪದಸೂತ್ರ. "ಅಂಗಸ್ಯ" ಅಧಿಕಾರ. ಇಲ್ಲಿ ಪಂಚಮ್ಯಂತವಾಗಿ ವಿಪರಿಣತವಾಗುತ್ತದೆ. "ಆಜ್ಜಸೇರಸುಕ್" ಸೂತ್ರದಿಂದ ಅತ್ ಎಂಬ ಪಂಚಮ್ಯಂತಪದವು ಅನುವೃತ್ತವಾಗಿ ಅಂಗಕ್ಕೆ ವಿಶೇಷಣವಾಗುತ್ತದೆ. ತದಂತಲಾಭ. ಅವರ್ಣಾಂತವಾದ ಅಂಗದಪರದಲ್ಲಿರುವ ಎಂದರ್ಥ. ಇದು ಪಂಚಮೀ. ಆಮಿ ಸಪ್ತಮೀ. "ಉಭಯನಿರ್ದೇಶೇ ಪಂಚಮೀ ನಿರ್ದೇಶೋ ಬಲೀಯಾನ್" ಪರಿಭಾಷೆಯಿಂದ ಪಂಚಮ್ಯಂತಕ್ಕೆ ಪ್ರಾಬಲ್ಯವಿರುವುದರಿಂದ ಆಮಿ ಸಪ್ತಮ್ಯಂತವು ಷಷ್ಠ್ಯಂತವಾಗಿ ಪರಿಣತವಾಗುತ್ತದೆ. ಸರ್ವನಾಮ್ನಃ ಎಂಬಲ್ಲಿ ವಿಹಿತಸ್ಯ ಎಂದು ಅಧ್ಯಾಹಾರಮಾಡಕೊಳ್ಳಬೇಕು. ಸರ್ವನಾಮಕ್ಕೆ ವಿಹಿತವಾದ ಆಮಿಗೆ ಎಂದರ್ಥ. ವಿಹಿತವಾದ ಆಮ್ ಎಂದು ಹೇಳದಿದ್ದರೆ ಕೆಲವುಕಡೆ ದೋಷಬರುತ್ತದೆ. ಸುಟ್ ಟಿತ್ತಾದುದರಿಂದ "ಆದ್ಯಂತೌ ಟಕಿತೌ" ಸೂತ್ರದಿಂದ ಆದ್ಯವಯವವಾಗಿ ಬರುತ್ತದೆ. ಇದರಿಂದ ಆಗಮ ಎಂದು ತಿಳಿಯುತ್ತದೆ

**ಸೂತ್ರಾರ್ಥ.** ಅವರ್ಣಾಂತವಾದ ಅಂಗದಪರದಲ್ಲಿರುವ, ಸರ್ವನಾಮಶಬ್ದಕ್ಕೆ ವಿಹಿತವಾದ ಆಮಿಗೆ ಸುಡಾಗಮ ಬರುತ್ತದೆ. ಸರ್ವ+ಆಮ್ ಎಂಬಲ್ಲಿ ಸರ್ವ ಎಂಬುದು ಅವರ್ಣಾಂತವಾದ ಅಂಗ. ಆಮ್ ಸರ್ವವೆಂಬ ಸರ್ವನಾಮದ ಮೇಲೆ ವಿಹಿತವಾಗಿದೆ. ಆದುದರಿಂದ ಪರದ ಆಮಿಗೆ ಸುಡಾಗಮ. ಟಿತ್ತಾದುದರಿಂದ ಆಮಿನ ಆದ್ಯವಯವವಾಗಿ ಬರುತ್ತದೆ. (ಸುಟಿನಲ್ಲಿ ಸ್ ಮಾತ್ರ ಉಳಿಯುವುದು) ಸರ್ವ + ಸ್+ಆಮ್ । ಏತ್ವಷತ್ವೇ । ಮುಂದಿನ ಕಾರ್ಯವನ್ನು ಹೇಳುತ್ತಾನೆ. ಸರ್ವ+ಸಾಮ್ ಎಂದಿರುವಾಗ ಝಲಾದಿ ಬಹುವಚನ ಪರವಾದುದರಿಂದ "ಬಹುವಚನೇ ಝಲ್ಯೇತ್" ಸೂತ್ರದಿಂದ ಸರ್ವವೆಂಬ ಅಂಗದ ಅಕಾರಕ್ಕೆ ಏಕಾರಾದೇಶ. ಏತ್ವಬಂದಮೇಲೆ ಏಕಾರ ಇಣಿನಲ್ಲಿ ಸೇರುವುದರಿಂದ ಇಣಿನಪರದಲ್ಲಿ ಪ್ರತ್ಯಯಾವಯವವಾದ ಸಕಾರ ಇರುವುದರಿಂದ "ಆದೇಶ ಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷಕಾರಾದೇಶ. ಸರ್ವೇಷಾಮ್. ಎಲ್ಲರ ಎಂದರ್ಥ. ಸಪ್ತಮೀ ಏಕವಚನದಲ್ಲಿ ಙಿಪ್ರತ್ಯಯ. ಸರ್ವ+ಙಿ ಎಂದಿರುವಾಗ ಹಿಂದೆ ಹೇಳಿದ "ಙಸಿಙ್ಯೋಃ ಸ್ಮಾತ್ಸ್ಮಿನೌ" ಸೂತ್ರ

ದಿಂದ ಙೀಪ್ರತ್ಯಯಕ್ಕೆ ಸ್ಮಿನ್ ಆದೇಶ. ಅನೇಕಾಲಾದುದರಿಂದ ಸರ್ವಾದೇಶ. ಸರ್ವಸ್ಮಿನ್. ದ್ವಿವಚನ ಬಹುವಚನಗಳಲ್ಲಿ ರಾಮಶಬ್ದದಂತೇ ಪ್ರಕ್ರಿಯೆ. ಸರ್ವಯೋಃ, ಸರ್ವೇಷು. ಏವಮಿತಿ ॥ ಇದೇ ರೀತಿಯಾಗಿ ಮೂವತ್ತೈದು ಸರ್ವನಾಮಶಬ್ದಗಳಲ್ಲಿ ಅಕಾರಾಂತವಾದ ವಿಶ್ವ ಮುಂತಾದ ಶಬ್ದಗಳಿಗೆ ಸರ್ವಶಬ್ದದಂತೇ ರೂಪಹೊಂದಿಸಿಕೊಳ್ಳಬೇಕು. ವಿಶ್ವ, ಅನ್ಯ ಅನ್ಯತರ ಮುಂತಾದ ಅದಂತ ಸರ್ವನಾಮಗಳು ಸರ್ವಶಬ್ದದಲ್ಲಿ ಹೇಳಿದ ಕಾರ್ಯಗಳನ್ನೇ ಹೊಂದುತ್ತವೆ.

**ಉಭಶಬ್ದೋ ನಿತ್ಯಂ ದ್ವಿವಚನಾಂತಃ ॥ ಉಭೌ ೨ ॥ ಉಭಾಭ್ಯಾಮ್ ೩ ॥ ಉಭಯೋಃ ೨ ॥ ತಸ್ಯೇಹ ಪಾಠೋಽಕಜರ್ಥಃ ।**

ಉಭ ಎಂಬುದೂ ಸರ್ವನಾಮಶಬ್ದ. ಇದು ದ್ವಿತ್ವಸಂಖ್ಯಾದಿಂದಕೂಡಿದ ವಸ್ತುವನ್ನು ಹೇಳುವುದರಿಂದ ಯಾವಾಗಲೂ ದ್ವಿವಚನಾಂತವಾಗಿಯೇ ಇರುತ್ತದೆ. ಏಕತ್ವ ಬಹುತ್ವಸಂಖ್ಯಾ ಹೇಳುವುದಾಗಿದ್ದರೆ ಏಕವಚನ ಬಹುವಚನ ಬರುತ್ತಿತ್ತು. ಆದುದರಿಂದ ದ್ವಿವಚನಮಾತ್ರವಿದೆ. ಸರ್ವನಾಮಶಬ್ದಗಳಿಗೆ ದ್ವಿವಚನದಲ್ಲಿ ಕಾರ್ಯವಿಶೇಷವಿಲ್ಲ. ಅದು ಏಕವಚನ ಬಹುವಚನದಲ್ಲಿ ಮಾತ್ರವೆಂದು ಹಿಂದೆ ಹೇಳಿದೆ. ದ್ವಿವಚನದಲ್ಲಿ ರಾಮಶಬ್ದದಂತೆಯೇ ಕಾರ್ಯವಾಗುವುದರಿಂದ ಅದರಂತೆ ಆದ ಸಿದ್ಧರೂಪವನ್ನು ತೋರಿಸಿರುತ್ತಾನೆ ಪ್ರಥಮಾದ್ವಿತೀಯಾದ್ವಿವಚನದಲ್ಲಿ ಒಂದೇರೂಪ. ತೃ. ಚ. ಪಂ. ದ್ವಿವಚನಗಳಲ್ಲಿ ಉಭಾಭ್ಯಾಮ್ ಒಂದೇ ರೂಪ. ಷ. ಸ. ದ್ವಿವಚನಗಳಲ್ಲಿ ಉಭಯೋಃ ಒಂದೇರೂಪ. "ತಸ್ಯೇಹ—" ಹಾಗಾದರೆ ಈ ಉಭಶಬ್ದವನ್ನು ಸರ್ವನಾಮದಗಣದಲ್ಲಿ ಹೇಳಿದುದೇಕೆ? ಸರ್ವನಾಮಕಾರ್ಯ ಹೊಂದುವುದಾಗಿದ್ದರೆ ಅದರ ಮಧ್ಯೆ ಪಾಠಮಾಡಿರುವುದು ಸಾರ್ಥಕವಾಗುತ್ತಿತ್ತು. ಎಂದು ಆಶಂಕೆಬಂದರೆ ಅದಕ್ಕೆ ಸಮಾಧಾನ "ತಸ್ಯೇಹ—" ವಾಕ್ಯದಿಂದ ಹೇಳುತ್ತಾನೆ. (ಉಭಶಬ್ದ) ಅದರ ಪಾಠವು ಇಲ್ಲಿ ಅಕಚ್‌ಪ್ರತ್ಯಯಕ್ಕೋಸ್ಕರ. ಸರ್ವನಾಮ ಶಬ್ದಗಳಿಗೆ ಮಾತ್ರ ಮುಂದೆ ತದ್ಧಿತಪ್ರಕರಣದಲ್ಲಿ ಅಕಚ್‌ಪ್ರತ್ಯಯ ಹೇಳುತ್ತಾನೆ. ಇತರ ಶಬ್ದಗಳಿಗೆ ಕೇವಲ ಕಪ್ರತ್ಯಯ. ಉಭಶಬ್ದ ಈ ಗಣದಲ್ಲಿ ಪಠಿತವಾಗದಿದ್ದರೆ ಅದಕ್ಕೆ ಅಕಚ್ ಬರುತ್ತಿರಲಿಲ್ಲ. ಅಕಚ್ ಬರುವುದಕ್ಕೋಸ್ಕರ ಈ ಗಣದಲ್ಲಿ ಹೇಳಿರುತ್ತಾನೆ. "ಅವ್ಯಯಸರ್ವನಾಮ್ನಾಮಕಚ್ ಪ್ರಾಕ್ಟೇಃ" ಸೂತ್ರದಿಂದ ಸರ್ವನಾಮದ ಟಿಯ ಹಿಂದೆ ಅಕಚ್ ಬರುತ್ತದೆ. ಉಭ ಎಂಬಲ್ಲಿ ಟಿ ಕೊನೆಯ ಅಕಾರ. ಅದರ ಹಿಂದೆ ಅಕಚ್ ಬಂದರೆ (ಅಕಚ್ ಪ್ರತ್ಯಯದಲ್ಲಿ ಅಕ್ ಉಳಿಯುವುದು) ಉಭ್ + ಅಕ್ + ಅ ಉಭಕ ಎಂದಾಗುತ್ತದೆ. ಕಪ್ರತ್ಯಯಬಂದರೂ ಉಭಕ ಎಂದಾಗುತ್ತದೆ ಎಂದು ಶಂಕೆ ಬಂದರೂ ಕ ಬಂದರೆ ಅದರೊಡನೆ ಇನ್ನೊಂದು ಪ್ರತ್ಯಯ ಅಯಚ್ ಬರಬೇಕಾಗುತ್ತದೆ. ಆಗ ಉಭಯಕ ಎಂದಾಗುತ್ತದೆ ಹೀಗೆ ಅಕಚ್ ಪ್ರತ್ಯಯ ಬರುವುದಕ್ಕೋಸ್ಕರ ಸರ್ವಾದಿಗಣದಲ್ಲಿ ಉಭಶಬ್ದ ಪಾಠಮಾಡಿರುತ್ತಾನೆ.

ಉಭಯ ಶಬ್ದಸ್ಯ ದ್ವಿವಚನಂ ನಾಸ್ತಿ ॥ ಉಭಯಃ—ಉಭಯೇ ॥ ಉಭಯಮ್—ಉಭಯಾನ್ ॥ ಉಭಯೇನ—ಉಭಯೈಃ ॥ ಉಭಯಸ್ಮೈ—ಉಭಯೇಭ್ಯಃ ॥ ಉಭಯಸ್ಮಾತ್—ಉಭಯೇಭ್ಯಃ ॥ ಉಭಯಸ್ಯ-ಉಭಯೇಷಾಮ್ ॥ ಉಭಯಸ್ಮಿನ್-ಉಭಯೇಷು ॥

ಉಭಯಶಬ್ದದಲ್ಲಿ ವಿಶೇಷವನ್ನು ಹೇಳುತ್ತಾನೆ. ಉಭಯ=ಎರಡು ಅವಯವವುಳ್ಳದ್ದು, ಇದಕ್ಕೆ ದ್ವಿವಚನವಿಲ್ಲ. ದ್ವಿವಚನ ಪರದಲ್ಲಿ ಇಲ್ಲದೇ ಇರುವಾಗ ಉಭಶಬ್ದಕ್ಕೆ "ಉಭಯೋಽನ್ಯತ್ರ" ವಾರ್ತಿಕದಿಂದ ದ್ವಿವಚನಪರದಲ್ಲಿಲ್ಲದಿರುವಾಗ, ಅಯಚ್ ವಿಧಾನಮಾಡಿರುವುದರಿಂದ ಉಭಯಶಬ್ದಕ್ಕೆ ದ್ವಿವಚನವಿಲ್ಲವೆಂದು ತಿಳಿಯಬೇಕು. ಭಾಷ್ಯಕಾರರೂ "ಉಭಯೋಮಣಿಃ", "ಉಭಯೇದೇವಮನುಷ್ಯಾಃ" ಎಂದು ಎರಡು ವಚನಗಳಲ್ಲಿ ಮಾತ್ರ ಉದಾಹರಿಸಿರುತ್ತಾರೆ. ಇದು ಅಕಾರಾಂತವಾದುದರಿಂದ ಸರ್ವಶಬ್ದದಂತೇ ಕಾರ್ಯಹೊಂದಿದೆ ಎಂದು ಏಳುವಿಭಕ್ತಿಗಳಲ್ಲಿಯೂ ಸಿದ್ಧರೂಪವನ್ನು ತೋರಿಸಿರುತ್ತಾನೆ. ಪ್ರ. ಉಭಯಃ-ಉಭಯೇ । ದ್ವಿ. ಉಭಯಮ್-ಉಭಯಾನ್ । ತೃ. ಉಭಯೇನ-ಉಭಯೈಃ । ಚ. ಉಭಯಸ್ಮೈ-ಉಭಯೇಭ್ಯಃ । ಪ. ಉಭಯಸ್ಮಾತ್-ಉಭಯೇಭ್ಯಃ । ಷ. ಉಭಯಸ್ಯ-ಉಭಯೇಷಾಮ್ । ಸ. ಉಭಯಸ್ಮಿನ್-ಉಭಯೇಷು ॥ ಮುಂದಿನ ಶಬ್ದವಿಶೇಷವನ್ನು ಹೇಳುತ್ತಾನೆ.

ಡತರ ಡತಮೌ ಪ್ರತ್ಯಯೌ । "ಪ್ರತ್ಯಯಗ್ರಹಣೇ ತದಂತಗ್ರಹಣಮ್"ಇತಿ ತದಂತಾ ಗ್ರಾಹ್ಯಾಃ ॥

ಡತರ, ಡತಮ ಎಂದು ಎರಡು ಶಬ್ದಗಳು ಗಣದಲ್ಲಿ ಹೇಳಿವೆ. ಅವು ಪದವಲ್ಲ. ಪ್ರತ್ಯಯಗಳು. ನಿರ್ಧಾರಣ ಪ್ರಶ್ನೆಯಲ್ಲಿ ಮುಂದೆ ಹೇಳುತ್ತಾನೆ. "ಪ್ರತ್ಯಯಗ್ರಹಣೇ ತದಂತಗ್ರಹಣಮ್" ಇದು ಪರಿಭಾಷೆ. ಕೇವಲ ಪ್ರತ್ಯಯ ಕಾರ್ಯವನ್ನು ಹೊಂದುವುದಿಲ್ಲ. ಎಲ್ಲಿಯಾದರೂ ಕೇವಲ ಪ್ರತ್ಯಯ ಹೇಳಿದರೆ ಅಲ್ಲಿ ಆ ಪ್ರತ್ಯಯಾಂತ ಶಬ್ದಗಳನ್ನು ತೆಗೆದುಕೊಳ್ಳಬೇಕು. ಪ್ರಕೃತ ಪ್ರತ್ಯಯಗಳಾದುದರಿಂದ ಡತರ, ಡತಮ ಪ್ರತ್ಯಯಾಂತ ಶಬ್ದಗಳನ್ನು ತೆಗೆದುಕೊಳ್ಳಬೇಕು. ಕಿಮ್ ಶಬ್ದದಮೇಲೆ ಈ ಪ್ರತ್ಯಯಗಳು ಬಂದರೆ ಕತರ ಕತಮ ಎಂದಾಗುತ್ತದೆ. ಡತರ ಡತಮಗಳಲ್ಲಿ ಡಕಾರ ಪ್ರತ್ಯಯದ ಆದಿಯಲ್ಲಿರುವುದರಿಂದ "ಚುಟೂ" ಸೂತ್ರದಿಂದ ಇತ್ತಾಗುತ್ತದೆ. ಕಿಮ್+ಅತರ ಎಂದಿರುವಾಗ ಟಿಗೆ ಲೋಪ. ಕಿಮ್ ಶಬ್ದದಲ್ಲಿ ಟಿ ಇಮ್. ಕ್+ಅತರ=ಕತರ. ಹೀಗೆಯೇ ಡತಮ ಪ್ರತ್ಯಯಬಂದರೆ ಕತಮ ಎಂದಾಗುತ್ತದೆ. ಯದ್ ಶಬ್ದದಮೇಲೆ ಬಂದರೆ ಯತರ, ಯತಮ. ತದ್ ಶಬ್ದದಮೇಲೆ ಬಂದರೆ ತತರ, ತತಮ, ಏಕಶಬ್ದದ ಮೇಲೆ ಬಂದರೆ ಏಕತರ, ಏಕತಮ ಎಂದಾಗುತ್ತದೆ. ಇವಿಷ್ಟು ಶಬ್ದದಮೇಲೆ ಮಾತ್ರ ಇವೆರಡು ಪ್ರತ್ಯಯಗಳು ಬರುತ್ತವೆ. ಈ ಪ್ರತ್ಯಯಾಂತ

ಪಾದ ಶಬ್ದಗಳು ಅಕಾರಾಂತವಾಗಿರುವುದರಿಂದ ಸರ್ವಶಬ್ದದಂತೇ ರೂಪವನ್ನು ಹೊಂದುತ್ತವೆ.

**ನೇಮ ಇತ್ಯರ್ಧೇ । ಸಮಃ ಸರ್ವಪರ್ಯಾಯಃ, ತುಲ್ಯಪರ್ಯಾಯಸ್ತು ನ, ಯಥಾಸಂಖ್ಯಮನುದೇಶಃ ಸಮಾನಾಮಿತಿ ಜ್ಞಾಪಕಾತ್ ॥**

ಸರ್ವಾದಿಗಣದಲ್ಲಿರುವ ನೇಮ ಎಂಬ ಶಬ್ದವು ಅರ್ಧ ಎಂಬ ಅರ್ಥಕೊಡುತ್ತದೆ. ಇದೂ ಅದಂತವಾದುದರಿಂದ ಸರ್ವದಂತೇ ರೂಪವನ್ನು ಹೊಂದುತ್ತದೆ. ಕ್ಲಿಷ್ಟವಾಗಿರುವುದನ್ನೂ ಸಂದಿಗ್ಧವಾಗಿರುವುದನ್ನೂ ಮಾತ್ರ ವ್ಯಾಖ್ಯಾನಮಾಡುತ್ತಾನೆ. ಅನ್ಯಾದಿಗಳು ಸುಲಭವಾಗಿರುವುದಲ್ಲದೆ ಕನ್ನಡದಲ್ಲಿಯೂ ಪ್ರಸಿದ್ಧವಾಗಿವೆ. ಆದುದರಿಂದ ಅವುಗಳ ವಿಷಯವನ್ನು ಹೇಳಿಲ್ಲ. ಸಮ ಎಂಬ ಶಬ್ದಹೇಳಿದೆ. ಇದು ನಾನಾರ್ಥಕಶಬ್ದ. ಸರ್ವ, ಸಮಾನ ಮುಂತಾದ ಹಲವು ಅರ್ಥಗಳಲ್ಲಿ ಈ ಶಬ್ದಗಳನ್ನು ಪ್ರಯೋಗಿಸುತ್ತಾರೆ. ಇಲ್ಲಿ ಯಾವ ಅರ್ಥದಲ್ಲಿ ಸರ್ವನಾಮ ಸಂಜ್ಞೆಯೆಂದು ವಿವರಿಸುತ್ತಾನೆ. "ಸಮಃ ಸರ್ವ-ಯಃ ॥" ಸರ್ವವೆಂಬ ಅರ್ಥಕೊಡುವ ಸಮವೆಂಬುದು ಮಾತ್ರ ಸರ್ವನಾಮಸಂಜ್ಞೆಯನ್ನು ಹೊಂದುತ್ತದೆ. ತುಲ್ಯವೆಂಬ ಅರ್ಥಕೊಡುವ ಸಮಶಬ್ದಕ್ಕೆ ಇಲ್ಲಿ ಗ್ರಹಣವಿಲ್ಲ. ಈ ರೀತಿಯಾದ ಅರ್ಥವಿವೇಕವು ತಿಳಿದುದು ಹೇಗೆ? ಅಂದರೆ ಈ ವಿಷಯದಲ್ಲಿ ಸೂತ್ರವೇ ಪ್ರಮಾಣವೆಂದು ತೋರಿಸುತ್ತಾನೆ. "ಯಥಾಸಂಖ್ಯಮನುದೇಶಃ ಸಮಾನಾಮ್" ಸೂತ್ರದಲ್ಲಿ "ಸಮಾನಾಮ್" ಎಂಬ ಪದವಿದೆ. ಇದಕ್ಕೆ ಸದೃಶವೆಂದರ್ಥ. ಸಾದೃಶ್ಯಾರ್ಥದಲ್ಲಿಯೂ "ಸರ್ವನಾಮ" ಸಂಜ್ಞೆ ಇದ್ದಿದ್ದರೆ ಷಷ್ಠೀಬಹುವಚನದಲ್ಲಿ "ಸಮೇಷಾಂ" ಎಂದು ಹೇಳಬೇಕಿತ್ತು. ಆದರೆ ಪಾಣಿನಿ ಹಾಗೆಹೇಳಿಲ್ಲ. ಆದುದರಿಂದ ಸಾದೃಶ್ಯಾರ್ಥದಲ್ಲಿ ಸರ್ವನಾಮಸಂಜ್ಞೆಯಿಲ್ಲವೆಂದು ತಿಳಿಯುತ್ತದೆ. ಎಲ್ಲಾ ಎಂಬರ್ಥದಲ್ಲಿ ಮಾತ್ರ ಸರ್ವನಾಮಸಂಜ್ಞೆಯನ್ನು ಹೊಂದುತ್ತದೆ. ಸರ್ವಶಬ್ದದಂತೇ ಪ್ರಕ್ರಿಯೆ. ಪೂರ್ವಾದಿಶಬ್ದಗಳಲ್ಲಿ ವಿಶೇಷವನ್ನು ಹೇಳಲು ಸೂತ್ರವನ್ನು ಆರಂಭಿಸುತ್ತಾನೆ.

(ಪೂರ್ವಾದಿಶಬ್ದಗಳಿಗೆ ವಿಕಲ್ಪ ಸರ್ವನಾಮ ಸಂಜ್ಞೆಹೇಳುವಸೂತ್ರ)

## ೧೫೬. ಪೂರ್ವಪರಾವರದಕ್ಷಿಣೋತ್ತರಾಪರಾಧರಾಣಿ ವ್ಯವಸ್ಥಾಯಾಮಸಂಜ್ಞಾಯಾಮ್ ॥೧-೧-೩೪॥

**ಏತೇಷಾಂ ವ್ಯವಸ್ಥಾಯಾಮಸಂಜ್ಞಾಯಾಂ ಚ ಸರ್ವನಾಮಸಂಜ್ಞಾ ಗಣಸೂತ್ರಾತ್ಸರ್ವತ್ರ ಯಾ ಪ್ರಾಪ್ತಾ ಸಾ ಜಸಿ ವಾ ಸ್ಯಾತ್ । ಪೂರ್ವೇ, ಪೂರ್ವಾಃ । ಅಸಂಜ್ಞಾಯಾಂ ಕಿಮ್? ಉತ್ತರಾಃ ಕುರವಃ । ಸ್ವಾಭಿಧೇಯಾಪೇಕ್ಷಾವಧಿನಿಯಮೋ ವ್ಯವಸ್ಥಾ ।**

**ವ್ಯವಸ್ಥಾಯಾಂ ಕಿಮ್? ದಕ್ಷಿಣಾ ಗಾಥಕಾಃ, ಕುಶಲಾ ಇತ್ಯರ್ಥಃ ||**

ಪೂರ್ವಪರಾವರದಕ್ಷಿಣೋತ್ತರಾಪರಾಧರಾಣಿ, ವ್ಯವಸ್ಥಾಯಾಮ್, ಅಸಂಜ್ಞಾಯಾಮ್ | ತ್ರಿಪದ ಸೂತ್ರ. ಪೂರ್ವಂಚ, ಪರಂ ಚ, ಅವರಂ ಚ, ದಕ್ಷಿಣಂ ಚ, ಉತ್ತರಂ ಚ, ಅಪರಂ ಚ, ಅಧರಂ ಚ, ಪೂರ್ವಪ—ಧರಾಣಿ. "ಸರ್ವಾದೀನಿ ಸರ್ವನಾಮಾನಿ" ಸೂತ್ರದಿಂದ "ಸರ್ವನಾಮಾನಿ" ಪದವೂ ಮತ್ತು "ವಿಭಾಷಾ ಜಸಿ" ಎಂಬ ಸೂತ್ರವೂ ಅನುವೃತ್ತವಾಗುತ್ತವೆ. **ಸೂತ್ರಾರ್ಥ.** ಪೂರ್ವಾದಿ ಏಳು ಶಬ್ದಗಳಿಗೆ ವ್ಯವಸ್ಥಾ ಮತ್ತು ಅಸಂಜ್ಞಾ ಅರ್ಥದಲ್ಲಿ ಗಣಸೂತ್ರದಿಂದ ನಿತ್ಯವಾಗಿ ಸರ್ವನಾಮಸಂಜ್ಞೆ ಪ್ರಾಪ್ತವಾದರೆ ಆ ಸರ್ವನಾಮ ಸಂಜ್ಞೆಯು ಜಸಿನಲ್ಲಿ ವಿಕಲ್ಪವಾಗಿ ಬರುತ್ತದೆ. ನಿತ್ಯವಾಗಿ ಬಂದ ಸಂಜ್ಞೆಯು ಜಸ್ ಪ್ರತ್ಯಯದಲ್ಲಿ ಮಾತ್ರ ವಿಕಲ್ಪವೆಂದು ಈ ಸೂತ್ರ ಬೋಧಿಸುತ್ತದೆ. ಸರ್ವನಾಮ ಸಂಜ್ಞಾಬಂದರೆ "ಜಸಃ" ಸೂತ್ರದಿಂದ ಈತ್ವ ಬಂದು ಸರ್ವಶಬ್ದದಂತೆ ಪೂರ್ವೇ ಎಂದಾಗುತ್ತದೆ. ಸಂಜ್ಞಾಬಾರದಿದ್ದರೆ ರಾಮಶಬ್ದದಂತೆ ಪೂರ್ವಸವರ್ಣದೀರ್ಘ ಬಂದು ಪೂರ್ವಾಃ ಎಂದಾಗುತ್ತದೆ. ಉಳಿದ ವಿಭಕ್ತಿಗಳಲ್ಲಿ ವಿಕಲ್ಪವಿರುವುದರಿಂದ ಸರ್ವಶಬ್ದದಂತೇ ರೂಪಹೊಂದುತ್ತದೆ. "ಅಸಂಜ್ಞಾಯಾಂ" ಪದವನ್ನು ಹೇಳಿದುದು ಏಕೆ? ಅದಕ್ಕೆ ಪ್ರಯೋಜನವೇನು? ದಳಕೃತ್ಯವಿದು. ಸಂಜ್ಞಾತೋರದಿರುವಾಗ ಮಾತ್ರ ಸರ್ವನಾಮಸಂಜ್ಞೆ ಹೇಳಿರುತ್ತಾನೆ. ಸಂಜ್ಞೆತೋರುವುದಾದರೆ ಸರ್ವನಾಮಸಂಜ್ಞೆ ಬರುವುದಿಲ್ಲ. ಉತ್ತರಾಃ ಕುರವಃ. ಇಲ್ಲಿ ಉತ್ತರಾ ಎಂದರೆ ಉತ್ತರದೇಶದಲ್ಲಿರುವ ಕುರುಗಳು ಎಂದರ್ಥವಾಗುತ್ತೆ. ಕುರುಗಳಿಗೆ ಉತ್ತರವೆಂದು ಸಂಜ್ಞೆ. ಸಂಜ್ಞೆಯಾದುದರಿಂದ ಸರ್ವನಾಮಸಂಜ್ಞಾನಿಷೇಧ, ಉತ್ತರೇ ಎಂದಾಗುವುದಿಲ್ಲ. ರಾಮಶಬ್ದದಂತೆ ಪ್ರಕ್ರಿಯೆ. "ಸ್ವಾಭಿ....ಇತಿ ||" ವ್ಯವಸ್ಥಾಪದಾರ್ಥವನ್ನು ಹೇಳುತ್ತಾನೆ. ಸ್ವ=ತನ್ನ ಅಭಿಧೇಯ=ಅರ್ಥದಿಂದ ಅಪೇಕ್ಷ್ಯ=ಅಪೇಕ್ಷಿಸುವ ಅವಧಿನಿಯಮಃ=ಅವಧಿಯನಿಶ್ಚಯವು ವ್ಯವಸ್ಥಾ. ಪೂರ್ವ ಎಂದರೆ ಯಾವುದರ ಪೂರ್ವ ಎಂಬ ವಿವಕ್ಷಾಬರಬೇಕು. ಮೈಸೂರಿನಿಂದ ಪೂರ್ವವೆಂದರೆ ಶಾಂತಾಕಾಂಕ್ಷೆಯಾಗುತ್ತದೆ. ಹೀಗೆ ಇದ್ದರೆ ವ್ಯವಸ್ಥಾ ತೋರುವುದರಿಂದ ಅಲ್ಲಿ ಸರ್ವನಾಮಸಂಜ್ಞೆ. ವ್ಯವಸ್ಥಾಯಾಂಕಿಮ್? ವ್ಯವಸ್ಥಾತೋರುವಾಗ ಸರ್ವನಾಮಸಂಜ್ಞೆಯೆಂದುದೇಕೆ? ಅದು ತೋರದಿರುವಾಗ ಸರ್ವನಾಮಸಂಜ್ಞೆಯಿಲ್ಲ. ದಕ್ಷಿಣಾಗಾಥಕಾಃ ಕುಶಲಾ ಇತ್ಯರ್ಥಃ | ಇಲ್ಲಿ ದಕ್ಷಿಣ ಶಬ್ದವಿದೆ. ದಕ್ಷಿಣವೆಂದರೆ ಇಲ್ಲಿ ದಿಕ್ಕಾಗಲೀ ಕಾಲವಾಗಲೀ ತೋರುವುದಿಲ್ಲ. ಬುದ್ಧಿವಂತರು ಎಂದರ್ಥ. ಆಗ ಅವಧಿನಿಯಮವು ತೋರುವುದಿಲ್ಲ. ದಿಗ್ದೇಶಕಾಲರೂಪಾರ್ಥ ಪೂರ್ವಾದಿಪದದಿಂದ ತೋರಿದರೆ ಮಾತ್ರ ವ್ಯವಸ್ಥಾ ಇದೆಯೆಂದು ತಿಳಿಯಬೇಕು. ಈ ಮೂರರಕ್ಕಿಂತ ಬೇರೆ ಅರ್ಥದಲ್ಲಿ ವ್ಯವಸ್ಥಾ ಇಲ್ಲದಿರುವುದರಿಂದ ಸರ್ವನಾಮ

ಸಂಜ್ಞೆಯೂ ಬರುವುದಿಲ್ಲ. ಪೂರ್ವಾದಿಗಳಲ್ಲಿ ವಿಶೇಷ ಹೇಳಿ ಸ್ವಶಬ್ದದಲ್ಲಿ ವಿಶೇಷವನ್ನು ಹೇಳುತ್ತಾನೆ.

(ಸ್ವಶಬ್ದಕ್ಕೆ ವಿಕಲ್ಪಸರ್ವನಾಮಸಂಜ್ಞೆ ಹೇಳುವ ಸೂತ್ರ)

## ೧೩೭. ಸ್ವಮಜ್ಞಾತಿಧನಾಖ್ಯಾಯಾಮ್ ॥ ೧-೧-೩೫ ॥

**ಜ್ಞಾತಿಧನಾನ್ಯವಾಚಿನಃ ಸ್ವಶಬ್ದಸ್ಯ ಪ್ರಾಪ್ತಾ ಸಂಜ್ಞಾ ಜಸಿ ವಾ ॥ ಸ್ವೇ ಸ್ವಾಃ ॥ ಆತ್ಮೀಯಾಃ, ಆತ್ಮಾನ ಇತಿ ವಾ । ಜ್ಞಾತಿಧನವಾಚಿನಸ್ತು ಸ್ವಾಃ; ಜ್ಞಾತಯೋಽರ್ಥಾ ವಾ ॥**

ಸ್ವಂ, ಅಜ್ಞಾತಿಧನಾಖ್ಯಾಯಾಮ್ ॥ ದ್ವಿಪದಸೂತ್ರ. ಹಿಂದಿನಂತೇ ವಿಭಾಷಾ ಜಸಿ, "ಸರ್ವನಾಮಾನಿ." ಅನುವೃತ್ತವಾಗುತ್ತವೆ. **ಸೂತ್ರಾರ್ಥ.** ಜ್ಞಾತಿಧನವೆಂಬ ಅರ್ಥಕೊಡದಿರುವ ಸ್ವಶಬ್ದಕ್ಕೆ ಪ್ರಾಪ್ತವಾದ ಸರ್ವನಾಮಸಂಜ್ಞೆಯು ಜಸಿನಲ್ಲಿ ವಿಕಲ್ಪವಾಗಿ ಬರುತ್ತದೆ. ಜ್ಞಾತಿಧನ ಭಿನ್ನಾರ್ಥದಲ್ಲಿ ಗಣಸೂತ್ರದಿಂದ ನಿತ್ಯವಾಗಿ ಸಂಜ್ಞೆ ಬರುತ್ತಿದ್ದರೆ ಜಸಿನಲ್ಲಿ ಮಾತ್ರ ವಿಕಲ್ಪವಾಗಿ ಹೇಳುತ್ತಾನೆ. ಸ್ವ ಶಬ್ದಕ್ಕೆ "ಸ್ವೋಽಜ್ಞಾತಾವಾತ್ಮನಿ ಸ್ವಂ ತ್ರಿಷ್ವಾತ್ಮೀಯೇ ಸ್ವೋಽಸ್ತ್ರಿಯಾಂಧನೇ" ಎಂದು ಅಮರದಲ್ಲಿ ಹೇಳಿದಂತೆ ಜ್ಞಾತಿ (ಬಂಧು) ಆತ್ಮ, ಆತ್ಮೀಯ, ಧನ ಹೀಗೆ ನಾಲ್ಕು ಅರ್ಥಗಳು ಇವೆ. ಅವುಗಳಲ್ಲಿ ಜ್ಞಾತಿಧನಾರ್ಥದಲ್ಲಿ ಬರುವುದಿಲ್ಲ. ಆತ್ಮ, ಆತ್ಮೀಯ (ತಾನು, ತನ್ನದು) ಎರಡು ಅರ್ಥದಲ್ಲಿ ಮಾತ್ರ ಸರ್ವನಾಮಸಂಜ್ಞೆ ಗಣಸೂತ್ರದಲ್ಲಿ ಹೇಳಿದೆ. ಈ ಎರಡು ಅರ್ಥದಲ್ಲಿಯೇ ಜಸಿನಲ್ಲಿ ವಿಕಲ್ಪವೆಂದು ಈ ಸೂತ್ರದಲ್ಲಿ ಹೇಳಿದೆ. ಸರ್ವನಾಮಸಂಜ್ಞೆ ಬಂದರೆ ಜಸಿಗೆ ಶೀ ಆದೇಶ ಗುಣ ಬಂದು ಸ್ವೇ ಎಂದೂ ಬಾರದಿದ್ದರೆ ಸವರ್ಣದೀರ್ಘದಿಂದ ಸ್ವಾಃ ಎಂದೂ ಆಗುತ್ತದೆ. ತನ್ನದು, ಯಾ ತಾನು ಎಂದರ್ಥ. ಬಂಧು ಮತ್ತು ಧನ ಅರ್ಥವನ್ನು ಹೇಳುವುದಾದರೆ ಸರ್ವನಾಮ ಸಂಜ್ಞೆ ಇಲ್ಲದಿರುವುದರಿಂದ ಸ್ವಾಃ ಒಂದೇ ರೂಪವಾಗುತ್ತದೆ. ಹೀಗೆಯೇ ಅಂತರ ಶಬ್ದದಲ್ಲಿ ವಿಶೇಷವನ್ನು ಹೇಳುತ್ತಾನೆ.

(ಅಂತರಶಬ್ದಕ್ಕೆ ಸರ್ವನಾಮಸಂಜ್ಞೆ ವಿಕಲ್ಪ ಹೇಳುವ ಸೂತ್ರ)

## ೧೩೮. ಅಂತರಂ ಬಹಿರ್ಯೋಗೋಪಸಂವ್ಯಾನಯೋಃ ॥ ೧-೧-೩೬ ॥

**ಬಾಹ್ಯೇ ಪರಿಧಾನೀಯೇ ಚಾರ್ಥೇಽಂತರಶಬ್ದಸ್ಯ ಪ್ರಾಪ್ತಾ ಸಂಜ್ಞಾ ಜಸಿ ವಾ । ಅಂತರೇ ಅಂತರಾ ವಾ ಗೃಹಾಃ, ಬಾಹ್ಯಾ ಇತ್ಯರ್ಥಃ । ಅಂತರೇ, ಅಂತರಾವಾ ಶಾಟಕಾಃ; ಪರಿಧಾನೀಯಾ ಇತ್ಯರ್ಥಃ ॥**

ದ್ವಿಪದಸೂತ್ರ. ಹಿಂದಿನಂತೆ "ವಿಭಾಷಾ ಜಸಿ," "ಸರ್ವನಾಮಾನಿ" ಇವು ಅನುವೃತ್ತವಾಗುತ್ತವೆ. **ಸೂತ್ರಾರ್ಥ.** ಬಾಹ್ಯ, ಪರಿಧಾನೀಯ ಈ ಅರ್ಥದಲ್ಲಿ ಅಂತರಶಬ್ದಕ್ಕೆ ಗಣಸೂತ್ರದಿಂದ ಪ್ರಾಪ್ತವಾದ ಸರ್ವನಾಮಸಂಜ್ಞೆಯು ಜಸಿನಲ್ಲಿ ವಿಕಲ್ಪವಾಗಿ ಬರುತ್ತದೆ. ಸೂತ್ರದಲ್ಲಿರುವ ಬಹಿರ್ಯೋಗ, ಉಪಸಂವ್ಯಾನ ಪದಗಳಿಗೆ ಬಾಹ್ಯ, ಪರಿಧಾನೀಯ ಎಂದರ್ಥ. ಬಹಿಃ ಅಂದರೆ ಆವರಣವಿಲ್ಲದ ಹೊರಗಿನ ದೇಶ. ಅದರಯೋಗ ಅಂದರೆ ಸಂಬಂಧವುಳ್ಳದ್ದು. ಹೊರಗಿರುವುದು ಎಂದರ್ಥ. ಉಪ ಸಂವೀಯತೇ(=ಪರಿಧೀಯತೇ ಇತಿ ಉಪಸಂವ್ಯಾನಮ್. ಉಡುವವಸ್ತ್ರ. ಈ ಎರಡು ಅರ್ಥಗಳಲ್ಲಿ ಮಾತ್ರ ವಿಕಲ್ಪವಾಗಿ ಸರ್ವನಾಮಸಂಜ್ಞೆ. ಸರ್ವನಾಮ ಸಂಜ್ಞೆಬಂದರೆ ಅಂತರೇ, ಸರ್ವನಾಮಸಂಜ್ಞಾ ಬಾರದಿದ್ದರೆ ಅಂತರಾಃ ಎಂತಲೂ ಆಗುತ್ತದೆ. ಹೊರಗಿನ ಮನೆ, ಅಥವಾ ಉಡುವಬಟ್ಟೆ ಎಂದರ್ಥವಾಗುತ್ತದೆ. ಇವೆರಡರ್ಥವನ್ನು ಬಿಟ್ಟರೆ ಬೇರೆ ಅರ್ಥದಲ್ಲಿ ಸರ್ವನಾಮಸಂಜ್ಞೆಯೇ ಇಲ್ಲದಿರುವುದರಿಂದ ರಾಮಶಬ್ದ ದಂತೇ ರೂಪ. ಹೀಗೆ ಪೂರ್ವಾದಿ ಒಂಭತ್ತುಶಬ್ದಗಳಿಗೆ ಜಸಿನಲ್ಲಿ ವಿಕಲ್ಪಹೇಳಿ ಈಗ ಪಂಚಮೀ ಸಪ್ತಮೀ ಏಕವಚನಗಳಲ್ಲಿ ಸಂಜ್ಞಾವಿಕಲ್ಪವನ್ನು ಹೇಳುತ್ತಾನೆ.

(ಪೂರ್ವಾದಿ ೯ ಶಬ್ದಗಳಿಗೆ ವಿಕಲ್ಪಸರ್ವನಾಮ ಸಂಜ್ಞೆಹೇಳುವ ಸೂತ್ರ)

## ೧೫೯. ಪೂರ್ವಾದಿಭ್ಯೋ ನವಭ್ಯೋ ವಾ ॥ ೭-೧-೧೬ ॥

**ಏಭ್ಯೋ ಜಸಿಙ್ಯೋಃ ಸ್ಮಾತ್‌ಸ್ಮಿನೌ ವಾಸ್ತಃ। ಪೂರ್ವಸ್ಮಾತ್, ಪೂರ್ವಾತ್। ಪೂರ್ವಸ್ಮಿನ್ ಪೂರ್ವೇ। ಏವಂ ಪರಾದೀ ನಾಮ್। ಶೇಷಂ ಸರ್ವವತ್ ॥**

ಪೂರ್ವಾದಿಭ್ಯಃ, ನವಭ್ಯಃ, ವಾ ॥ ತ್ರಿಪದಸೂತ್ರ. "ಜಸಿಙ್ಯೋಃ ಸ್ಮಾತ್ ಸ್ಮಿನೌ" ಸೂತ್ರವೇ ಅನುವೃತ್ತವಾಗುತ್ತದೆ. ಪೂರ್ವಾದಿಭ್ಯಃ ಪಂಚಮೀ. ಪೂರ್ವಾದಿಗಳು ಈ ಮೂರು ಸೂತ್ರಗಳಲ್ಲಿ ಹೇಳಲ್ಪಟ್ಟವುಗಳು. (ಒಂಭತ್ತು) **ಸೂತ್ರಾರ್ಥ.** ಪೂರ್ವಾದಿ ಒಂಭತ್ತು ಶಬ್ದಗಳಿಗೆ ವಿಹಿತವಾದ ಜಸಿ, ಙೀ ಪ್ರತ್ಯಯಗಳಿಗೆ ಸ್ಮಾತ್, ಸ್ಮಿನ್ ಪ್ರತ್ಯಯಗಳು ವಿಕಲ್ಪವಾಗಿ ಬರುತ್ತವೆ. ವಿಕಲ್ಪ ಮೂರುರೀತಿಯಾಗಿದೆ. ನಿತ್ಯವಾಗಿ ಕಾರ್ಯ ಬರುತ್ತಿರುವಾಗ ಅದಕ್ಕೆ ವಿಕಲ್ಪಹೇಳಿದರೆ ಅದಕ್ಕೆ ಪ್ರಾಪ್ತವಿಭಾಷೆ ಯೆಂದು ಹೆಸರು. ಎಂದೂ ಬಾರದಿರುವುದಕ್ಕೆ ವಿಕಲ್ಪ ಹೇಳುವುದು ಅಪ್ರಾಪ್ತವಿಭಾಷೆ. ಒಂದು ಸೂತ್ರದಲ್ಲಿ ಕೆಲವಂಶದಲ್ಲಿ ಪ್ರಾಪ್ತವಾದುದಕ್ಕೂ ಕೆಲವಂಶದಲ್ಲಿ ಬಾರದಿರುವುದಕ್ಕೂ ವಿಕಲ್ಪಹೇಳಿದರೆ ಅದು ಪ್ರಾಪ್ತಾಪ್ರಾಪ್ತವಿಭಾಷೆ ಎನಿಸುತ್ತದೆ. ಇಲ್ಲಿ ಸರ್ವನಾಮಸಂಜ್ಞೆಯಿರುವುದರಿಂದ ಙಸಿಙಿಯಲ್ಲಿ ನಿತ್ಯವಾಗಿ ಸ್ಮಾತ್‌ಸ್ಮಿನ್ ಆದೇಶಬರುತ್ತಿದ್ದರೆ ಈ ಸೂತ್ರದಲ್ಲಿ ವಿಕಲ್ಪ ಹೇಳಿರುವುದರಿಂದ ಇದು ಪ್ರಾಪ್ತವಿಭಾಷೆ. ಪೂರ್ವಸ್ಮಾತ್, ಪೂರ್ವಾತ್, ಪೂರ್ವಸ್ಮಿನ್, ಪೂರ್ವೇ. ಆದೇಶ ಬಾರದಿದ್ದರೆ ರಾಮಶಬ್ದದಂತೆ ಒಂದು ರೂಪವಾಗಿ ಎರಡೆರಡುರೂಪಗಳಾಗುತ್ತವೆ. ಹೀಗೆಯೇ ಪರ

ಮುಂತಾದ ಎಂಟು ಶಬ್ದಗಳ ಈ ಎರಡು ವಿಭಕ್ತಿಗಳಲ್ಲಿ ಎರಡೆರಡುರೂಪಗಳನ್ನು ತಿಳಿಯಬೇಕು. ಉಳಿದ ವಿಭಕ್ತಿಗಳಲ್ಲಿ ಸರ್ವಶಬ್ದದಂತೆ ರೂಪವಾಗುತ್ತದೆ. ಜಸ್, ಙಸಿ, ಙಸ್, ಈ ಮೂರರಲ್ಲಿ ವಿಕಲ್ಪವಾದುದರಿಂದ ಎರಡುರೂಪ.

(ಪ್ರಥಮಾದಿಶಬ್ದಗಳಿಗೆ ವಿಕಲ್ಪಸಂಜ್ಞೆ ಹೇಳುವ ಸೂತ್ರ)

## ೧೬೦. ಪ್ರಥಮಚರಮತಯಾಲ್ಪಾರ್ಧಕತಿಪಯನೇಮಾಶ್ಚ ॥ ೧-೧-೩೩ ॥

**ಏತೇ ಜಸಿ ಉಕ್ತಸಂಜ್ಞಾ ವಾ ಸ್ಯುಃ । ಪ್ರಥಮೇ, ಪ್ರಥಮಾಃ ॥ ತಯಃ ಪ್ರತ್ಯಯಃ ॥ ದ್ವಿತಯೇ ದ್ವಿತಯಾಃ । ಶೇಷಂ ರಾಮವತ್ । ನೇಮೇ, ನೇಮಾಃ । ಶೇಷಂ ಸರ್ವವತ್ ॥**

ಪ್ರಥಮ....ನೇಮಾಃ, ಚ ॥ ದ್ವಿಪದಸೂತ್ರ. ಪ್ರಥಮಶ್ಚ, ಚರಮಶ್ಚ, ತಯಶ್ಚ, ಅಲ್ಪಶ್ಚ, ಅರ್ಧಂಚ ಕತಿಪಯಶ್ಚ ನೇಮಶ್ಚ, ಪ್ರಥಮ....ನೇಮಾಃ. ಇಲ್ಲಿ ಏಳು ಶಬ್ದಗಳಿವೆ. "ವಿಭಾಷಾ ಜಸಿ" "ಸರ್ವನಾಮಾನಿ" ಅನುವೃತ್ತವಾಗುತ್ತವೆ. **ಸೂತ್ರಾರ್ಥ.** ಪ್ರಥಮಾದಿಗಳು ಜಸಿನಲ್ಲಿ ವಿಕಲ್ಪವಾಗಿ ಸರ್ವನಾಮಸಂಜ್ಞೆಯನ್ನು ಹೊಂದುತ್ತವೆ. ಇದು ಪ್ರಾಪ್ತಾಪ್ರಾಪ್ತವಿಭಾಷೆ. ನೇಮವೆಂಬುದು ಸರ್ವಾದಿಗಣದಲ್ಲಿ ಪಠಿತವಾದುದರಿಂದ ಅದಕ್ಕೆ ನಿತ್ಯವಾಗಿ ಬಂದರೆ ಜಸಿನಲ್ಲಿ ವಿಕಲ್ಪವೆಂದುದರಿಂದ ಪ್ರಾಪ್ತ ವಿಭಾಷೆ. ಎರಡೂ ಸೇರಿರುವುದರಿಂದ ಪ್ರಾಪ್ತಾಪ್ರಾಪ್ತವಿಭಾಷೆಯಾಯಿತು. ಪ್ರಥಮಶಬ್ದಕ್ಕೆ ಸರ್ವನಾಮಸಂಜ್ಞಾ ಬಂದರೆ ಜಸಿಗೆ ಶೀಭಾವ, ಗುಣಬಂದು ಪ್ರಥಮೇ ಎಂದೂ, ಬಾರದಿದ್ದರೆ ಪೂರ್ವಸವರ್ಣದೀರ್ಘಬಂದು ಪ್ರಥಮಾಃ ಎಂದೂ ಆಗುತ್ತದೆ. ಹೀಗೆಯೇ ಚರಮಶಬ್ದ. ತಯ ಎಂಬುದು ಪ್ರತ್ಯಯ. "ಪ್ರತ್ಯಯಗ್ರಹಣೇ ತದಂತಗ್ರಹಣಮ್" ಪರಿಭಾಷೆಯಿಂದ ತದಂತವನ್ನು ತೆಗೆದುಕೊಳ್ಳಬೇಕು. ದ್ವಿತಯ. ಇದು ತಯಪ್ರತ್ಯಯಾಂತವಾದ ಶಬ್ದ. "ಸಂಖ್ಯಾಯಾ ಅವಯವೇ ತಯಪ್" ಎಂಬ ಸೂತ್ರದಿಂದ ಅವಯವವಾಚಕ ಸಂಖ್ಯಾವಾಚಕಶಬ್ದದ ಮೇಲೆ ತಯಪ್ ಪ್ರತ್ಯಯ ಮುಂದೆ ಹೇಳುತ್ತಾನೆ. ಎರಡು ಅವಯವ ಉಳದ್ದು ಒಂದು ಅವಯವಿ. ಸಂಜ್ಞಾ ಬಂದರೆ ದ್ವಿತಯೇ, ಇಲ್ಲವಾದರೆ ದ್ವಿತಯಾಃ ಎಂದಾಗುತ್ತದೆ. ಹೀಗೆಯೇ ಅಲ್ಪೇ ಅಲ್ಪಾಃ, ಅರ್ಧೇ ಅರ್ಧಾಃ, ಕತಿಪಯೇ ಕತಿಪಯಾಃ, ಎಂದು ಉಳಿದವುಗಳಿಗೂ ಜಸಿನಲ್ಲಿ ಎರಡೆರಡುರೂಪ. ಉಳಿದ ವಿಭಕ್ತಿಗಳಲ್ಲಿ ರಾಮಶಬ್ದದಂತೇ ರೂಪವಾಗುತ್ತದೆ. ನೇಮ ಶಬ್ದಕ್ಕೆ ಮಾತ್ರ ಜಸಿನಲ್ಲಿ ವಿಕಲ್ಪ. ಉಳಿದವಿಭಕ್ತಿಗಳಲ್ಲಿ ಸರ್ವಶಬ್ದದಂತೆ ರೂಪವನ್ನು ತಿಳಿಯಬೇಕು.

(ತೀಯಪ್ರತ್ಯಯಾಂತಕ್ಕೆ ವಿಕಲ್ಪಸಂಜ್ಞೆ ಹೇಳುವ ವಾರ್ತಿಕ)

**ವಾ॥ (ತೀಯಸ್ಯ ಙಿತ್ಸುವಾ)**

ದ್ವಿತೀಯಸ್ಮೈ, ದ್ವಿತೀಯಾಯೇತ್ಯಾದಿ ॥ ಏವಂ ತೃತೀಯಃ ॥

ತೀಯಸ್ಯ, ಙಿತ್ಸು, ವಾ ॥ ತ್ರಿಪದವಾರ್ತಿಕ. ತೀಯವೆಂಬುದು ಪೂರಣಾರ್ಥದಲ್ಲಿ ಬಂದ ಪ್ರತ್ಯಯ. ಪ್ರತ್ಯಯವಾದುದರಿಂದ ತದಂತಗ್ರಹಣ. ತೀಯಪ್ರತ್ಯಯಾಂತ ಶಬ್ದಕ್ಕೆ ಙಿತ್ತಾದ ಪ್ರತ್ಯಯಪರವಾದಾಗ ವಿಕಲ್ಪವಾಗಿ ಸರ್ವನಾಮ ಸಂಜ್ಞೆಯು ಬರುತ್ತದೆ. ಸುಪಿನಲ್ಲಿ ಙೇ, ಙಸಿ, ಙಸ್, ಙಿ, ಈ ನಾಲ್ಕು ಪ್ರತ್ಯಯಗಳು ಙಿತ್ತಾಗಿವೆ. ಇವು ಪರವಾದಾಗ ವಿಕಲ್ಪವಾಗಿ ಸಂಜ್ಞೆ. ದ್ವಿತೀಯವೆಂಬುದು ತೀಯಪ್ರತ್ಯಯಾಂತ ಶಬ್ದ. ಇದಕ್ಕೆ ಈ ನಾಲ್ಕು ಪ್ರತ್ಯಯಗಳು ಪರವಾದಾಗ ಸರ್ವನಾಮಸಂಜ್ಞೆ ಬಂದರೆ ಪ್ರತ್ಯಯಕ್ಕೆ ಸ್ಮೈ—ಸ್ಮಾತ್, ಸ್ಮಿನ್ ಆದೇಶಗಳು ಬರುತ್ತವೆ. ಬಾರದಿದ್ದರೆ ರಾಮಶಬ್ದದಂತೆ ರೂಪ. ದ್ವಿತೀಯಸ್ಮೈ–ದ್ವಿತೀಯಾಯ । ದ್ವಿತೀಯಸ್ಮಾತ್–ದ್ವಿತೀಯಾತ್ । ದ್ವಿತೀಯಸ್ಯ । ದ್ವಿತೀಯಸ್ಮಿನ್ ದ್ವಿತೀಯೇ ॥ ಷಷ್ಠೀ ಏಕವಚನದಲ್ಲಿ ಸರ್ವನಾಮ ಕಾರ್ಯವಿಲ್ಲವಾದುದರಿಂದ ಒಂದೇರೂಪ. ಹೀಗೆ ತೀಯಪ್ರತ್ಯಯಾಂತವಾದ ತೃತೀಯಶಬ್ದವೂ ರೂಪವನ್ನು ಹೊಂದುತ್ತದೆ. ಉಳಿದ ವಿಭಕ್ತಿಗಳಲ್ಲಿ ರಾಮಶಬ್ದದಂತೇ ರೂಪ. ಇದು ಅಪ್ರಾಪ್ತವಿಭಾಷೆ. ತೀಯಪ್ರತ್ಯಯಾಂತಕ್ಕೆ ಹಿಂದೆ ಯಾವುದರಿಂದಲೂ ಸರ್ವನಾಮಸಂಜ್ಞೆ ಬಂದಿಲ್ಲ. ಇಲ್ಲಿಯೇ ವಿಕಲ್ಪ ಹೇಳಿರುವುದರಿಂದ ಅಪ್ರಾಪ್ತವಿಭಾಷೆ.

ಅಕಾರಾಂತ ಸರ್ವನಾಮರೂಪಗಳನ್ನು ಇಲ್ಲಿಯವರೆಗೆ ಹೇಳಿ ಅಕಾರಾಂತದಲ್ಲಿ ವಿಶೇಷರೂಪ ಹೊಂದುವ ನಿರ್ಜರಶಬ್ದದ ರೂಪವನ್ನು ವಿವರಿಸುತ್ತಾನೆ. ನಿಷ್ಕ್ರಾಂತಃ ಜರಾಯಾ ನಿರ್ಜರಃ ಅಥವಾ ನಿರ್ಗತಾ ಜರಾ ಯಸ್ಮಾತ್ ನಿರ್ಜರಃ ಮುಪ್ಪಿನಿಂದ ಬಿಡಲ್ಪಟ್ಟವರು. ಸದಾಯೌವನದಲ್ಲಿರುವವರು. ದೇವತೆಗಳು. "ಅಮರಾ ನಿರ್ಜರಾ ದೇವಾಃ–" ಅಮರ. ಪ್ರಥಮಾ ಸುಪರವಾದಾಗ ರುತ್ವವಿಸರ್ಗ. ನಿರ್ಜರಃ ಎಂದಾಗುತ್ತದೆ. ದ್ವಿವಚನದಲ್ಲಿ ಔ ಪ್ರತ್ಯಯ. ನಿರ್ಜರ+ಔ ಎಂದಿರುವಾಗ

(ಜರಾಶಬ್ದಕ್ಕೆ ಜರಸ್ ಆದೇಶಹೇಳುವ ಸೂತ್ರ)

## ೧೬೧. ಜರಾಯಾ ಜರಸನ್ಯತರಸ್ಯಾಮ್ ॥ ೭-೨-೧೦೧ ॥

ಅಜಾದೌ ವಿಭಕ್ತೌ ॥ (ಪ) ಪದಾಂಗಾಧಿಕಾರೇ ತಸ್ಯ ಚ ತದಂತಸ್ಯ ಚ (ಪ) ನಿರ್ದಿಶ್ಯಮಾನಸ್ಯಾದೇಶಾ ಭವಂತಿ । (ಪ) ಏಕದೇಶವಿಕೃತಮನನ್ಯವತ್ । ಇತಿ ಜರಶಬ್ದಸ್ಯ ಜರಸ್ । ನಿರ್ಜರಸೌ । ನಿರ್ಜರಸ ಇತ್ಯಾದಿ । ಪಕ್ಷೇ ಹಲಾದೌ ಚ ರಾಮವತ್ ॥

ಜರಾಯಾಃ ಜರಸ್, ಅನ್ಯತರಸ್ಯಾಮ್ । ತ್ರಿಪದಸೂತ್ರ. "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ವಿಭಕ್ತೌ" "ಅಚಿರಋತಃ" ಸೂತ್ರದಿಂದ ಅಚಿ ಅನುವೃತ್ತವಾಗುತ್ತವೆ. ಅಚಿಎಂಬ ಸಪ್ತಮ್ಯಂತವು ವಿಭಕ್ತಿಗೆ ವಿಶೇಷಣ. "ಯಸ್ಮಿನ್

ವಿಧಿಸ್ತದಾದಾವಲ್ಗ್ರಹಣೇ" ಪರಿಭಾಷೆಯಿಂದ ಅಜಾದಿ ವಿಭಕ್ತಿ ಎಂದಾಗುತ್ತದೆ. ಇದೂ ಸಪ್ತಮಿಯಾದುದರಿಂದ ಪೂರ್ವಕ್ಕೆ ಕಾರ್ಯವೆಂದು ತಿಳಿಯುತ್ತದೆ. ಸೂತ್ರಾರ್ಥ. ಅಜಾದಿಯಾದ ವಿಭಕ್ತಿಪರವಾದಾಗ ಜರಾಶಬ್ದಕ್ಕೆ ವಿಕಲ್ಪವಾಗಿ ಜರ ಸಾದೇಶ ಬರುತ್ತದೆ. ಸೂತ್ರದಲ್ಲಿ ಜರಾಶಬ್ದಕ್ಕೆ ಜರಸ್ ಆದೇಶ ಹೇಳಿದೆ. ಇಲ್ಲಿ ನಿರ್ಜರಶಬ್ದವಿದೆ ಇದಕ್ಕೆ ಹೇಗೆ ಜರಸಾದೇಶಪ್ರಸಕ್ತಿ? ಅಂದರೆ ಇಲ್ಲಿ ಜರಸಾದೇಶ ಬರುವಂತೆ ಅರ್ಥಹೇಳುವ ಪರಿಭಾಷೆಯನ್ನು ಹೇಳುತ್ತಾನೆ. ಪದಾಂಗ....ಚ ॥ ಪದಾ ಧಿಕಾರದಲ್ಲಿಯೂ, ಅಂಗಾಧಿಕಾರದಲ್ಲಿಯೂ ಯಾವುದಕ್ಕೆ ಯಾವುದು ವಿಹಿತವಾಗಿ ಇದೆಯೋ ಅದು ಅದಕ್ಕೂ ಅದೇ ಅಂತದಲ್ಲಿರುವುದಕ್ಕೂ ಬರುತ್ತದೆ. ಎಂದು ಈ ಪರಿ ಭಾಷೆಯ ಅರ್ಥ. ಪ್ರಕೃತ ಜರಸಾದೇಶವು ಅಂಗಾಧಿಕಾರದಲ್ಲಿ ಹೇಳಿದೆ. ಆದುದ ರಿಂದ ಜರಾಶಬ್ದಕ್ಕೂ ಜರಾಶಬ್ದವೇ ಅಂತವಾಗಿರುವುದಕ್ಕೂ ಜರಸಾದೇಶವೆಂದು ಈ ಪರಿಭಾಷೆಯಿಂದ ನಿಶ್ಚಯವಾಗುತ್ತದೆ. ನಿರ್ಜರವೆಂಬಲ್ಲಿ ಜರಾಶಬ್ದವೇ ಅಂತವಾಗಿ ರುವುದರಿಂದ ಜರಸಾದೇಶ ಬರುತ್ತದೆ. ಜರಸ್ ಅನೇಕಾಲಾದುದರಿಂದ "ಅನೇಕಾ ಲ್‌ಶಿತ್ ಸರ್ವಸ್ಯ" ಸೂತ್ರದಿಂದ ಸರ್ವಕ್ಕೂ ಆದೇಶಪ್ರಾಪ್ತವಾದರೆ ಅದಕ್ಕೆ ಅಪ ವಾದವಾಗಿ ನಿರ್ದಿಷ್ಟವಾದುದಕ್ಕೇ ಬರುತ್ತದೆಂದು ನಿಯಮಿಸುವ ಪರಿಭಾಷೆಯನ್ನು ಹೇಳುತ್ತಾನೆ. "ನಿರ್ದಿಶ್ಯ....ತಿ" ॥ ಹಿಂದೆಹೇಳಿದ ಆದೇಶ ಬರುವುದಾದರೆ ಪ್ರತ್ಯಕ್ಷ ಸೂತ್ರದಲ್ಲಿ ನಿರ್ದಿಷ್ಟವಾದುದು ಯಾವುದೋ ಅದಕ್ಕೇ ಬರುತ್ತದೆ. ಪ್ರಕೃತ ಜರಾ ಶಬ್ದಾಂತಕ್ಕೆ ಆದೇಶಪರಿಭಾಷೆಯಿಂದ ಲಬ್ಧವಾದರೂ ಸೂತ್ರದಲ್ಲಿ ಕೇವಲ ಜರಾಶಬ್ದಕ್ಕೆ ಹೇಳಿದುದರಿಂದ ನಿರ್ಜರವೆಂಬಲ್ಲಿ ಜರ+ ಎಂಬುದಕ್ಕೆ ಮಾತ್ರ ಜರಸಾದೇಶ. ಪ್ರತ್ಯಕ್ಷ ವಾದ ಸ್ಥಾನಿ ಜರಾಶಬ್ದ. ಆನುಮಾನಿಕ ಸ್ಥಾನಿ ನಿರ್ಜರಶಬ್ದ. ಈ ಎರಡು ಪರಿಭಾಷೆ ಗಳಿಂದ ಜರಾಶಬ್ದಕ್ಕೆ ಆದೇಶ ಹೇಳಿದರೂ ಪ್ರಕೃತ ನಿರ್ಜರಶಬ್ದಕ್ಕೆ ಆದೇಶ ಬರುವು ದಿಲ್ಲ. ಏಕೆಂದರೆ ಜರಾ ಎಂಬ ದೀರ್ಘಾಂತಕ್ಕೆ ಆದೇಶ ಹೇಳಿರುವುದು. ಇಲ್ಲಿ ಜರ ಎಂದು ಹ್ರಸ್ವಾಂತವಿದೆ. ಆಗ ಹೇಗೆ ಬರುವುದು ಎಂದು ಶಂಕೆ ಬಂದರೆ ಅದಕ್ಕೆ ಸಮಾಧಾನರೂಪವಾಗಿ ಇನ್ನೊಂದು ಪರಿಭಾಷೆಯನ್ನು ಹೇಳುತ್ತಾನೆ. ಈ ಪರಿಭಾಷೆ ಗಳು ಸೂತ್ರದಿಂದ ಜ್ಞಾಪಿತವಾದವುಗಳು. "ಏಕದೇಶೇತಿ" ॥ ಏಕದೇಶದಲ್ಲಿ ವಿಕಾರ ವನ್ನು ಹೊಂದಿರುವುದು ಬೇರೆಯಾದುದಲ್ಲ. ಕತ್ತರಿಸಿಹೋದ ಬಾಲವುಳ್ಳ ನಾಯಿಯು ನಾಯಿಯೇ. ಕುದುರೆಯಲ್ಲ. ಎಂಬ ನ್ಯಾಯದಂತೆ ಒಂದು ಶಬ್ದದಲ್ಲಿ ಸ್ವಲ್ಪ ವಿಕಾರ ವುಂಟಾದರೂ ಅದು ಅದೇ ಶಬ್ದವೆನಿಸುತ್ತದೆ. ಅನ್ಯಶಬ್ದವಾಗುವುದಿಲ್ಲ. ನಿರ್ಜರ ವೆಂಬಲ್ಲಿ ಜರಾಶಬ್ದಕ್ಕೆ ಹ್ರಸ್ವಬಂದಿದೆ. ಈ ವಿಕಾರದಿಂದ ಅದು ಜರಾಶಬ್ದವೇ ವಿನಾ ಬೇರೆಯಾಗುವುದಿಲ್ಲ. ಆದುದರಿಂದ ಜರ ಎಂಬುದಕ್ಕೆ ಜರಸಾದೇಶ ಬಂದರೆ ನಿರ್ಜರ ಸ್+ಔ=ನಿರ್ಜರಸೌ. ಎಂದಾಗುತ್ತದೆ ಆದೇಶಬಾರದಿದ್ದರೆ ವೃದ್ಧಿ, ನಿರ್ಜರೌ. ಹೀಗೆ ಅಜಾದಿವಿಭಕ್ತಿಗಳಲ್ಲಿ ಮಾತ್ರ ಎರಡೆರಡುರೂಪ. ಜರಸ್ ಆದೇಶಬಂದರೆ ಹಲಂತವಾಗುತ್ತದೆ.

ಅಕಾರಾಂತ ಪುಲ್ಲಿಂಗ ನಿರ್ಜರ-ಶಬ್ದ.

ಪ್ರ—ನಿರ್ಜರಃ । ನಿರ್ಜರಸೌ ನಿರ್ಜರೌ । ನಿರ್ಜರಸಃ ನಿರ್ಜರಾಃ ॥ ದ್ವಿ—ನಿರ್ಜರಂ ನಿರ್ಜರಸಂ । ನಿರ್ಜರಸೌ ನಿರ್ಜರೌ । ನಿರ್ಜರಾನ್ ನಿರ್ಜರಸಃ ॥ ತೃ—ನಿರ್ಜರೇಣ ನಿರ್ಜರಸಾ । ನಿರ್ಜರಾಭ್ಯಾಮ್ । ನಿರ್ಜರೈಃ ॥ ಚ—ನಿರ್ಜರಾಯ ನಿರ್ಜರಸೇ । ನಿರ್ಜರಾಭ್ಯಾಮ್ । ನಿರ್ಜರೇಭ್ಯಃ ॥ ಪಂ—ನಿರ್ಜರಾತ್ ನಿರ್ಜರಸಃ । ನಿರ್ಜರಾಭ್ಯಾಮ್ । ನಿರ್ಜರೇಭ್ಯಃ ॥ ಷ—ನಿರ್ಜರಸ್ಯ ನಿರ್ಜರಸಃ । ನಿರ್ಜರಯೋಃ ನಿರ್ಜರಸೋಃ । ನಿರ್ಜರಾಣಾಮ್ ನಿರ್ಜರಸಾಮ್ ॥ ಸ—ನಿರ್ಜರೇ ನಿರ್ಜರಸಿ । ನಿರ್ಜರಯೋಃ ನಿರ್ಜರಸೋಃ । ನಿರ್ಜರೇಷು. ಹಲಾದಿ ವಿಭಕ್ತಿಗಳಲ್ಲಿ ರಾಮಶಬ್ದದಂತೇ ಒಂದೇ ರೂಪ. ಭಿಸಿನಲ್ಲಿ ನಿರ್ಜರೈಃ ಒಂದೇರೂಪ. ಹೀಗೆ ಅಕಾರಾಂತ ಪುಲ್ಲಿಂಗ ಶಬ್ದಗಳು ಮುಗಿದಿವೆ.

(ಆಕಾರಾಂತ ಶಬ್ದಗಳು. ವಿಶ್ವಪಾ ಶಬ್ದ)

ವಿಶ್ವಂ ಪಾತಿ, ವಿಶ್ವಾಪಾಃ, ಲೋಕವನ್ನು ರಕ್ಷಿಸುವವನು. ಪಾ ಧಾತುವಿಗೆ ಕ್ವಿಪ್ ಪ್ರತ್ಯಯ, ಕ್ವಿಪ್‌ನಲ್ಲಿ ಸರ್ವಲೋಪ. ವಿಶ್ವಾಪಾ ಆಕಾರಾಂತವಾಗುತ್ತದೆ. ಪ್ರಥಮಾ ಏಕವಚನದಲ್ಲಿ ಸು ಪ್ರತ್ಯಯ. ವಿಶ್ವಪಾ+ಸ್. ರುತ್ವವಿಸರ್ಗ. ವಿಶ್ವಪಾಃ. ದ್ವಿವಚನದಲ್ಲಿ ಔಪ್ರತ್ಯಯ. ವಿಶ್ವಪಾ+ಔ ಎಂದಿರುವಾಗ ಮೊದಲು "ವೃದ್ಧಿರೇಚಿ" ಸೂತ್ರದಿಂದ ವೃದ್ಧಿ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ "ಪ್ರಥಮಯೋಃಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣದೀರ್ಘ ಬರುತ್ತದೆ. ಇದಕ್ಕೆ "ನಾದಿಚಿ" ಸೂತ್ರವು ಅಪವಾದವಿದ್ದರೂ ಇಲ್ಲಿ ಬೇರೊಂದು ಸೂತ್ರದಿಂದ ನಿಷೇಧ ಹೇಳುತ್ತಾನೆ.

(ಪೂರ್ವಸವರ್ಣದೀರ್ಘ ನಿಷೇಧ ಹೇಳುವ ಸೂತ್ರ)

## ೧೬೨. ದೀರ್ಘಾಜ್ಜಸಿ ಚ ॥ ೬-೧-೧೦೫ ॥

**ದೀರ್ಘಾತ್ ಜಸಿ ಇಚಿ ಚ ಪರೇ ಪೂರ್ವಸವರ್ಣದೀರ್ಘೋ ನ ಸ್ಯಾತ್ । ವಿಶ್ವಪೌ । ವಿಶ್ವಪಾಃ । ಹೇ ವಿಶ್ವಪಾಃ । ವಿಶ್ವಪಾಮ್ । ವಿಶ್ವಪೌ ॥**

ದೀರ್ಘಾತ್, ಜಸಿ, ಚ ॥ ತ್ರಿಪದಸೂತ್ರ. "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ "ಪೂರ್ವಸವರ್ಣಃ," "ಅಕಃ ಸವರ್ಣೇದೀರ್ಘಃ" ಸೂತ್ರದಿಂದ ದೀರ್ಘಃ "ನಾದಿಚಿ" ಸೂತ್ರದಿಂದ "ನ" "ಇಚಿ" ಈ ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ.** ದೀರ್ಘದ ಪರದಲ್ಲಿ ಜಸ್ ಪ್ರತ್ಯಯವಾಗಲೀ "ಇಚ್" (ಪ್ರತ್ಯಹಾರ) ಆಗಲೀ ಇದ್ದರೆ ಪೂರ್ವಸವರ್ಣದೀರ್ಘಬರುವುದಿಲ್ಲ. ಪ್ರಕೃತ ದೀರ್ಘಕ್ಕೆ (ಪಾ) ಔಕಾರರೂಪ ಇಚ್ ಪರವಾದುದರಿಂದ ದೀರ್ಘನಿಷೇಧ. ಆಗ ಸಾಮಾನ್ಯಸೂತ್ರ (ವೃದ್ಧಿರೇಚಿ) ದಿಂದ ವೃದ್ಧಿಬಂದರೆ ವಿಶ್ವಪೌ ಎಂದಾಗುತ್ತದೆ.

"ನಾದಿಚಿ" ಸೂತ್ರಕ್ಕೂ ಇಲ್ಲಿ ಪ್ರವೃತ್ತಿ ಇದೆ. ಆದರೂ ದೀರ್ಘದ ಪರದಲ್ಲಿಯೆಂದು ವಿಶೇಷವಾಗಿ ಹೇಳಿರುವುದರಿಂದಲೂ ಪರಸೂತ್ರವಾದುದರಿಂದಲೂ "ದೀರ್ಘಾಜ್ಜಸಿಚ" ಎಂಬುದರಿಂದಲೇ ನಿಷೇಧಹೇಳಿದೆ. ವಿಶ್ವಪಾ ಶಬ್ದದಮೇಲೆ ಪ್ರ—ಬಹುವಚನದಲ್ಲಿ ಜಸ್ ಪ್ರತ್ಯಯ. ವಿಶ್ವಪಾ+ಅಸ್. "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರಕ್ಕೆ "ದೀರ್ಘಾಜ್ಜಸಿಚ". ಎಂಬುದು ಅಪವಾದವಿರುವುದರಿಂದ (ದೀರ್ಘಕ್ಕೆ ಜಸ್‌ಪರವಾದುದರಿಂದ) "ಅಕಃ ಸವರ್ಣೇ ದೀರ್ಘಃ" ಎಂಬುದರಿಂದ ದೀರ್ಘ. ವಿಶ್ವಪಾಸ್. "ಸಸಜುಷೋ ರುಃ," "ಖರವಸಾನಯೋರ್ವಿಸರ್ಜನೀಯಃ" ಸೂತ್ರಗಳಿಂದ ರುತ್ವ, ವಿಸರ್ಗ. ವಿಶ್ವಪಾಃ. ಸಂಬೋಧನಪ್ರಥಮಾದಲ್ಲಿ ಸುವಿಗೆ ರುತ್ವ ವಿಸರ್ಗ ಬಂದರೆ ಹೇ ವಿಶ್ವಪಾಃ. ದ್ವಿವಚನ ಬಹುವಚನಗಳಲ್ಲಿ ಪ್ರಥಮಾದಂತೆ ರೂಪ. ಹೇ ವಿಶ್ವಪೌ—ಹೇ ವಿಶ್ವಪಾಃ ‖ ವಿಶ್ವಪಾ ಶಬ್ದಕ್ಕೆ ದ್ವಿತೀಯಾ ಏಕವಚನದಲ್ಲಿ ಅಮ್‌ಪ್ರತ್ಯಯ. ವಿಶ್ವಪಾ+ಅಮ್ ಎಂದಿರುವಾಗ "ಪ್ರಥಮಯೋಃ ಪೂರ್ವಸವರ್ಣ" ಸೂತ್ರದಿಂದ ಪೂರ್ವಸವರ್ಣ ದೀರ್ಘ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ "ಅಮಿ ಪೂರ್ವಃ" ಸೂತ್ರದಿಂದ ಪೂರ್ವರೂಪ ಏಕಾದೇಶವಾಗಿ ಬಂದರೆ ವಿಶ್ವಪಾಮ್. ದೀರ್ಘವಿರುವುದರಿಂದ ಇಲ್ಲಿ ಯಾವ ಸೂತ್ರಬಂದರೂ ಒಂದೇ ರೂಪವಾದರೂ ನ್ಯಾಯದಿಂದ ಬರುವವುಗಳನ್ನೇ ಹೇಳಬೇಕು. ದ್ವಿವಚದಲ್ಲಿ ಪ್ರ—ದ್ವಿವಚನದಂತೇ ರೂಪ. ವಿಶ್ವಪೌ. ದ್ವಿತೀಯಾ ಬಹುವಚನದಲ್ಲಿ ಶಸ್‌ಪ್ರತ್ಯಯ. "ಲಶಕ್ವತದ್ಧಿತೇ" ಸೂತ್ರದಿಂದ ಶಕಾರಕ್ಕೆ ಇತ್ ಸಂಜ್ಞಾಬಂದು "ತಸ್ಯ ಲೋಪಃ" ಸೂತ್ರದಿಂದ ಲೋಪ. ವಿಶ್ವಪಾ+ಅಸ್ ಎಂದಿರುವಾಗ ಕಾರ್ಯವಿಶೇಷಕ್ಕೋಸ್ಕರ ಕೆಲವು ಸಂಜ್ಞೆಗಳನ್ನು ಹೇಳುತ್ತಾನೆ.

(ಸರ್ವನಾಮಸ್ಥಾನ ಸಂಜ್ಞೆ ಹೇಳುವ ಸೂತ್ರ)

## ೧೬೩. ಸುಡನಪುಂಸಕಸ್ಯ ‖ ೧-೧-೪೩ ‖

**ಸ್ವಾದಿಪಂಚವಚನಾನಿ ಸರ್ವನಾಮಸ್ಥಾನಸಂಜ್ಞಾನಿ ಸ್ಯುರಕ್ಲೀಬಸ್ಯ ‖**

ಸುಟ್, ಅನಪುಂಸಕಸ್ಯ ‖ ದ್ವಿಪದ ಸೂತ್ರ. "ಶಿ ಸರ್ವನಾಮಸ್ಥಾನಮ್" ಸೂತ್ರದಿಂದ "ಸರ್ವನಾಮಸ್ಥಾನಮ್" ಅನುವೃತ್ತವಾಗುತ್ತದೆ. "ಅನಪುಂಸಕಸ್ಯ" ಎಂಬುದಕ್ಕೆ ವೃತ್ತಿಯಲ್ಲಿ ಅಕ್ಲೀಬಸ್ಯ ಎಂದಿದೆ. ನಪುಂಸಕ ಪ್ರಾತಿಪದಿಕವನ್ನು ಬಿಟ್ಟು ಎಂದರ್ಥ. ಸುಟ್ ಪ್ರತ್ಯಹಾರ. ಸು, ಔ, ಜಸ್, ಅಮ್, ಔಟ್ ಈ ಐದಕ್ಕೆ ಸಂಜ್ಞಾ. **ಸೂತ್ರಾರ್ಥ.** ನಪುಂಸಕಭಿನ್ನ ಪ್ರಾತಿಪದಿಕದ ಮೇಲೆ ವಿಹಿತವಾದ ಸುಮುಂತಾದ ಐದು ಪ್ರತ್ಯಯಗಳಿಗೆ "ಸರ್ವನಾಮಸ್ಥಾನ" ಎಂಬ ಸಂಜ್ಞೆ ಬರುತ್ತದೆ. ಸರ್ವನಾಮ ಸಂಜ್ಞೆ ಸರ್ವಾದಿಶಬ್ದಗಳಿಗೆ. ಸರ್ವನಾಮಸ್ಥಾನ ಸಂಜ್ಞೆ ಸು ಮುಂತಾದ ಐದು ಪ್ರತ್ಯಯಗಳಿಗೆ ಎಂದು ವಿವೇಕ ತಿಳಿಯಬೇಕು.

(ಪದಸಂಜ್ಞಾವಿಧಾಯಕ ಸೂತ್ರ)

## ೧೬೪. ಸ್ವಾದಿಷ್ವಸರ್ವನಾಮಸ್ಥಾನೇ ॥ ೧-೪-೧೭ ॥

**ಕಪ್ ಪ್ರತ್ಯಯಾವಧಿಷು ಸ್ವಾದಿಷ್ವಸರ್ವನಾಮಸ್ಥಾನೇಷು ಪೂರ್ವಂ ಪದಂ ಸ್ಯಾತ್ ॥**

ಸ್ವಾದಿಷು, ಅಸರ್ವನಾಮಸ್ಥಾನೇ ॥ ದ್ವಿಪದಸೂತ್ರ. "ಸುಪ್ತಿಙಂತಂ ಪದಮ್" ಸೂತ್ರದಿಂದ "ಪದಂ" ಅನುವೃತ್ತವಾಗುತ್ತದೆ. ಸು ಆದಿಃ ಯೇಷಾಂ ತೇ ಸ್ವಾದಯಃ ತೇಷು ಸ್ವಾದಿಷು. ನ ಸರ್ವನಾಮಸ್ಥಾನಂ ಅಸರ್ವನಾಮಸ್ಥಾನಂ, ತಸ್ಮಿನ್ ಅಸರ್ವನಾಮಸ್ಥಾನೇ. ಬಹುವಚನಕ್ಕೆ ಬದಲಾಗಿ ಏಕವಚನವು ಆರ್ಷವಾಗಿ ಬಂದಿದೆ. **ಸೂತ್ರಾರ್ಥ.** ಕಪ್ ಎಂಬ ಪ್ರತ್ಯಯವೇ ಕೊನೆಯ ಅವಧಿಯಾಗಿರುವ ಸು ಪ್ರತ್ಯಯವೇ ಆದಿಯಾಗಿರುವ ಸರ್ವನಾಮಸ್ಥಾನಭಿನ್ನವಾದ ಪ್ರತ್ಯಯ ಪರದಲ್ಲಿರುವಾಗ ಪೂರ್ವಕ್ಕೆ "ಪದ" ಎಂಬ ಸಂಜ್ಞೆ ಬರುತ್ತದೆ. ಸು ಪ್ರತ್ಯಯ "ಸ್ವೌಜಸಮೌಟ್"....॥೪-೧-೨॥ ಸೂತ್ರದಲ್ಲಿ ಹೇಳಿದೆ. ಕಪ್ ಪ್ರತ್ಯಯ ಐದನೇ ಅಧ್ಯಾಯದ ಕೊನೆಯಲ್ಲಿ "ಉರಃ ಪ್ರಭೃತಿಭ್ಯಃ" ॥೫-೪-೧೫೧॥ ಎಂಬಲ್ಲಿ ಹೇಳುತ್ತಾನೆ. ಸುಮಾರು ನಾಲ್ಕು ಮತ್ತು ಐದನೆಯ ಅಧ್ಯಾಯಗಳಲ್ಲಿ ಹೇಳುವ ಪ್ರತ್ಯಯಗಳಾಗುತ್ತವೆ. ಸರ್ವನಾಮ ಸ್ಥಾನವಾಗಬಾರದೆಂದುದರಿಂದ ಸ್ವಾದಿ ಪಂಚವಚನಗಳನ್ನು ಬಿಡಬೇಕು. ಇದೂ ನಪುಂಸಕದಲ್ಲಿ ಬಿಡಬೇಕಾಗಿಲ್ಲ. ನಪುಂಸಕವನ್ನು ಬಿಟ್ಟು ಉಳಿದ ಸ್ವಾದಿ ಪಂಚಕಕ್ಕೆ ಸರ್ವನಾಮಸಂಜ್ಞೆ ಹೇಳಿದುದು. ಹೀಗೆ ಈ ಎರಡು ಅಧ್ಯಾಯಗಳಲ್ಲಿ ವಿಹಿತವಾದ ಪ್ರತ್ಯಯ ಪರವಾದಾಗ ಪೂರ್ವಕ್ಕೆ ಪದಸಂಜ್ಞೆ. ಸುಬಂತ ತಿಙಂತಗಳಿಗೆ "ಸುಪ್ತಿಙಂತಂ ಪದಮ್" ಸೂತ್ರದಿಂದ ಪದಸಂಜ್ಞೆ ಹೇಳಿರುತ್ತಾನೆ. ಅದು ಪ್ರತ್ಯಯಾಂತಕ್ಕೆ. ಇದು ಕೆಲವು ಪ್ರತ್ಯಯಪರವಾದಾಗ ಪ್ರಾತಿಪದಿಕಕ್ಕೆಂದು ಭೇದ ತಿಳಿದುಕೊಳ್ಳಬೇಕು.

(ಭಸಂಜ್ಞಾವಿಧಾಯಕ ಸೂತ್ರ)

## ೧೬೫. ಯಚಿ ಭಮ್ ॥ ೧-೪-೧೮ ॥

**ಯಾದಿಷು ಅಜಾದಿಷು ಚ ಕಪ್ ಪ್ರತ್ಯಯಾವಧಿಷು ಸ್ವಾದಿಷ್ವಸರ್ವನಾಮಸ್ಥಾನೇಷು ಪೂರ್ವಂ ಭಸಂಜ್ಞಂ ಸ್ಯಾತ್ ॥**

ದ್ವಿಪದ ಸೂತ್ರ ॥ ಯ್ ಚ, ಅಚ್ ಚ ತಯೋಃ ಸಮಾಹಾರಃ ಯಚ್, ತಸ್ಮಿನ್ ಯಚಿ. ಹಿಂದಿನ ಸೂತ್ರವೇ ಅನುವೃತ್ತವಾಗುತ್ತದೆ. ಯಚಿ ಸಪ್ತಮ್ಯಂತವು "ಸ್ವಾದಿಷು" ಎಂಬುದಕ್ಕೆ ವಿಶೇಷಣ. ಸಪ್ತಮ್ಯಂತ ಅಲ್ಗ್ರಹಣವಾದುದರಿಂದ "ಯಸ್ಮಿನ್ ವಿಧಿಸ್ತದಾದಾವಲ್ಗ್ರಹಣೇ" ಪರಿಭಾಷೆಯಿಂದ ತದಾದಿಲಾಭ. ಯಕಾರಾದಿಯಾದ, ಅಜಾದಿಯಾದ ಸ್ವಾದಿಪ್ರತ್ಯಯಗಳು ಎಂದರ್ಥ. **ಸೂತ್ರಾರ್ಥ.** ಕಪ್

ಪ್ರತ್ಯಯ ಕೊನೆಯ ಅವಧಿಯಾಗಿರುವ ಸುಪ್ರತ್ಯಯವೇ ಮೊದಲಾದ ಯಕಾರಾದಿ ಅಜಾದಿಪ್ರತ್ಯಯ ಪರವಾದಾಗ (ಸರ್ವನಾಮಸ್ಥಾನ ಭಿನ್ನವೂ ಆಗಿರಬೇಕು). ಪೂರ್ವಕ್ಕೆ "ಭ" ಎಂಬ ಸಂಜ್ಞೆ ಬರುತ್ತದೆ. ಹಿಂದೆ ಹೇಳಿದ ನಾಲ್ಕನೇ ಐದನೇ ಅಧ್ಯಾಯಗಳ ಪ್ರತ್ಯಯಗಳಲ್ಲಿ ಯಾವುದು ಯಕಾರಾದಿಯಾಗಿರುವುದೋ ಅಥವಾ ಅಜಾದಿಯಾಗಿರುವುದೋ ಅಲ್ಲಿ ಅದು ಪರವಾದಾಗ ಭಸಂಜ್ಞಾ. ಅದಕ್ಕಿಂತ ಬೇರೆ ಯಾದ ಪ್ರತ್ಯಯ ಪರವಾದಾಗ ಪೂರ್ವಕ್ಕೆ ಪದಸಂಜ್ಞೆಯೆಂದು ವ್ಯತ್ಯಾಸ ತಿಳಿಯ ಬೇಕು.

(ಭಪದಸಂಜ್ಞಾನಿಯಾಮಕ ಸೂತ್ರ)

## ೧೬೬. ಆ ಕಡಾರಾದೇಕಾ ಸಂಜ್ಞಾ ||೧-೪-೧||

**ಇತ ಊರ್ಧ್ವಂ "ಕಡಾರಾಃ ಕರ್ಮಧಾರಯೇ" ಇತ್ಯತಃ ಪ್ರಾಗೇ ಕಸ್ಯೈಕೈವ ಸಂಜ್ಞಾ ಜ್ಞೇಯಾ । ಯಾ ಪರಾಽನವಕಾಶಾ ಚ ||**

ಆ, ಕಡಾರಾತ್, ಏಕಾ, ಸಂಜ್ಞಾ || ನಾಲ್ಕುಪದವುಳ್ಳ ಸೂತ್ರ. ಆಙ್ ಎಂಬುದು ಇಲ್ಲಿ ಮರ್ಯಾದಾರ್ಥವನ್ನು ತಿಳಿಸುತ್ತದೆ. ಕಡಾರಾತ್=ಕಡಾರಪದ ಘಟಿತಸೂತ್ರದವರೆಗೆ. **ಸೂತ್ರಾರ್ಥ.** ಈ ಸೂತ್ರವನ್ನಾರಂಭಿಸಿ "ಕಡಾರಾಃ ಕರ್ಮ ಧಾರಯೇ" ಸೂತ್ರದವರೆಗೆ (ಮರ್ಯಾದಾ=ಅದನ್ನು ಬಿಟ್ಟು, ಅಭಿವಿಧಿ=ಅದನ್ನು ಸೇರಿಸಿ, ಹೇಳುವ ಅವಧಿ) ಒಂದಕ್ಕೆ ಒಂದೇ ಸಂಜ್ಞೆ ಬರುತ್ತದೆ. ಇದು ನಿಯಮ ಸೂತ್ರ. ವಿಶ್ವಪಾ+ಶಸ್ (ಅಸ್) ಎಂದಿರುವಾಗ ಸರ್ವನಾಮಸ್ಥಾನ ಸಂಜ್ಞೆಗೆ ಅವ ಕಾಶವಿಲ್ಲ. ಶಸ್ ಸ್ವಾದಿ, ಕಪ್ ಪ್ರತ್ಯಯಾಂತದ ಮಧ್ಯೆ ಸೇರಿರುವುದರಿಂದ ಪದ ಸಂಜ್ಞೆಯೂ ಬರಬಹುದು. ಅಜಾದಿಯಾದುದರಿಂದ ಭಸಂಜ್ಞೆಯೂ ಬರಬಹುದು, ಇಲ್ಲಿ ಪರಸ್ಪರ ವಿರೋಧವಿಲ್ಲವಾದುದರಿಂದ ಎರಡೂ ಬರಬಹುದು. ತುಲ್ಯಬಲ ವಿರೋಧವಿರುವಾಗ "ವಿಪ್ರತಿಷೇಧೇ ಪರಂ ಕಾರ್ಯಮ್" ಸೂತ್ರವು ನಿಯಮ ಮಾಡುತ್ತದೆ. ಇಲ್ಲಿ ಅಂತಹ ವಿರೋಧವಿಲ್ಲದಿರುವುದರಿಂದ ಎರಡು ಸಂಜ್ಞೆಗಳೂ ಬರುವಾಗ ಈ ಸೂತ್ರವು ನಿಯಮಮಾಡುತ್ತದೆ. ಒಂದೇ ಸಂಜ್ಞೆಯೆಂದಿದೆ. ಯಾವ ಸಂಜ್ಞೆ ಇಲ್ಲಿ ಹೇಳಬೇಕು? ಅಂದರೆ "ಯಾ ಪರಾ, ಅನವಕಾಶಾಚ" ಎಂದು ಉತ್ತರ ಹೇಳುತ್ತಾನೆ. ಯಾವುದು ಪರಸೂತ್ರವಾಗಿಯೂ ಅನವಕಾಶ ವಾಗಿಯೂ ಇರುವುದೋ ಅದೇ ಬರುತ್ತದೆ. ನಿರವಕಾಶ ಸೂತ್ರವೆಂದರೆ ಉತ್ಸರ್ಗಸೂತ್ರಬಾರದಿರುವಲ್ಲಿ ಬಾರದಿರುವುದು (ಚಾರಿತಾರ್ಥ್ಯ ಹೊಂದದಿರುವುದು). ಉತ್ಸರ್ಗವೆಂದರೆ ಸಾಮಾನ್ಯಸೂತ್ರ. "ಉತ್ಸೃಜ್ಯತೇ ಬಾಧಕಸದ್ಭಾವೇ ತ್ಯಜ್ಯತೇ" ಇತಿ ಉತ್ಸರ್ಗಃ. ಪ್ರತಿಬಂಧಕ ಇಲ್ಲದಿರುವಾಗ ಬರುವುದು. ಪ್ರಕೃತ ಭ ಸಂಜ್ಞೆಯೇ ಪರವಾಗಿಯೂ ನಿರವಕಾಶವಾಗಿಯೂ ಇದೆ. ಪದಸಂಜ್ಞೆ ಅಜಾದಿಯಕಾರಾದಿ ಪ್ರತ್ಯಯ ಇಲ್ಲದಿರುವಾಗ ಬರುತ್ತದೆ. ಆದುದರಿಂದ ಸಾವಕಾಶ. ಇದು ಸಾಮಾನ್ಯ

ಸೂತ್ರ. ಪದಸಂಜ್ಞೆ ಬಾರದಿದ್ದಲ್ಲಿ ಭ ಸಂಜ್ಞೆ ಬರುವುದಿಲ್ಲ. ಆದುದರಿಂದ ನಿರವಕಾಶ. ವಿಶ್ವಪಾ+ಅಸ್ ಎಂದಿರುವಾಗ ವಿಶ್ವಪಾ ಶಬ್ದಕ್ಕೆ ಭಸಂಜ್ಞಾ ಪ್ರಾಪ್ತವಾದರೆ ಮುಂದೆ ಕಾರ್ಯಹೇಳುತ್ತಾನೆ.

(ಅಕಾರಕ್ಕೆ ಲೋಪ ಹೇಳುವ ಸೂತ್ರ)

## ೧೬೭. ಆತೋ ಧಾತೋಃ ॥ ೬-೪-೧೪೦ ॥

**ಆಕಾರಾಂತೋ ಯೋ ಧಾತುಸ್ತದಂತಸ್ಯ ಭಸ್ಯಾಙ್ಗಸ್ಯ ಲೋಪಃ। ಅಲೋಂತ್ಯಸ್ಯ । ವಿಶ್ವಪಃ । ವಿಶ್ವಪಾ । ವಿಶ್ವಪಾಭ್ಯಾಮ್, ಇತ್ಯಾದಿ । ಏವಂ ಶಂಖಧ್ಮಾದಯಃ । ಧಾತೋಃ ಕಿಮ್ ? ಹಾಹಾನ್ ॥**

ಆತಃ, ಧಾತೋಃ॥ ದ್ವಿಪದಸೂತ್ರ. ಅಂಗಸ್ಯ, ಭಸ್ಯ ಎರಡು ಅಧಿಕಾರ ಇಲ್ಲಿವೆ. "ಆತಃ" ಧಾತುವಿಗೆ ವಿಶೇಷಣವಾದುದರಿಂದ ತದಂತಲಾಭ. ಧಾತೋಃ ಅಂಗಕ್ಕೆ ವಿಶೇಷಣವಾದುದರಿಂದ ತದಂತಲಾಭ. "ಅಲ್ಲೋಪೋಽನಃ" ಸೂತ್ರದಿಂದ "ಲೋಪಃ" ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಆಕಾರವೇ ಅಂತವಾದ ಧಾತುವೇ ಅಂತ್ಯದಲ್ಲಿರುವ ಭಸಂಜ್ಞಾವಿಶಿಷ್ಟವಾದ ಅಂಗಕ್ಕೆ ಲೋಪ ಬರುತ್ತದೆ. ಅಂಗಕ್ಕೆ ಲೋಪವೆಂದರೆ "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂಗದ ಅಂತ್ಯಕ್ಕೆ (ಆ) ಲೋಪವೆಂದು ತಿಳಿಯಬೇಕು. ಇದನ್ನು ತಿಳಿಸಲು "ಅಲೋಂತ್ಯಸ್ಯ" ಸೂತ್ರವನ್ನು ಬರೆದಿರುತ್ತಾನೆ. ವಿಶ್ವಾಪಾ+ಅಸ್ ಎಂಬಲ್ಲಿ ಪದಸಂಜ್ಞೆಯನ್ನು ನಿರವಕಾಶ ಮೂಲಕವಾಗಿ ಬಾಧಿಸಿ ಭಸಂಜ್ಞೆ ಬಂದಿದೆಯೆಂದು ಹಿಂದೆ ಹೇಳಿದೆ. ವಿಶ್ವಪಾ ಎಂಬುದು ಭವಸಂಜ್ಞೆಯುಳ್ಳ ಅಂಗ. ಇದು ಆಕಾರಾಂತವಾದ ಧಾತು "ಪಾ" ಎಂಬುದೇ ಅಂತವಾಗಿ ಉಳ್ಳದ್ದಾಗಿದೆ. ಆದುದರಿಂದ ಇದರ ಅಂತ್ಯ ಅಂದರೆ ಆಕಾರ. ಇದಕ್ಕೆ ಲೋಪ ಬಂದರೆ ವಿಶ್ವಪ್+ಅಸ್=ವಿಶ್ವಪಸ್. ಪದಾಂತ ಸಕಾರಕ್ಕೆ ರುತ್ವವಿಸರ್ಗ. ವಿಶ್ವಪಃ. ಬಹಳ ಲೋಕ ರಕ್ಷಕರನ್ನು ಎಂದರ್ಥ.

ಮುಂದೆ ಅಜಾದಿಪ್ರತ್ಯಯ ಪರವಾದಾಗ ಎಲ್ಲಾ ಕಡೆಗಳಲ್ಲಿಯೂ "ಆತೋ ಧಾತೋಃ" ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪ ಬರುತ್ತದೆ. ತೃತೀಯಾ ಏಕವಚನದಲ್ಲಿ ಟಾಪ್ರತ್ಯಯ. "ಚುಟೂ" ಸೂತ್ರದಿಂದ ಟಕಾರಕ್ಕೆ ಇತ್‌ಸಂಜ್ಞಾ ಬಂದು ಲೋಪ ಬಂದರೆ ಆಕಾರ ಉಳಿಯುತ್ತದೆ. ವಿಶ್ವಪಾ+ಆ ಎಂದಿರುವಾಗ ಹಿಂದಿನ ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪ. ವಿಶ್ವಪ್+ಆ=ವಿಶ್ವಪಾ. ಹಲಾದಿ ವಿಭಕ್ತಿಗಳಲ್ಲಿ ಭ ಸಂಜ್ಞಾ ಇರದಿರುವುದರಿಂದ ಧಾತುವಿನ ಆಕಾರಕ್ಕೆ ಲೋಪವಿಲ್ಲ. ಕೇವಲ ಪ್ರತ್ಯಯವನ್ನು ಸೇರಿಸಿದರೆ ರೂಪವಾಗುತ್ತದೆ. ವಿಶ್ವಪಾಭ್ಯಾಮ್ ಇತ್ಯಾದಿ. ಹೀಗೆಯೇ ಶಂಖಧ್ಮಾಮುಂತಾದ ಶಬ್ದಗಳನ್ನೂ ತಿಳಿಯಬೇಕು. ಶಂಖಂ ಧಮತಿ ಇತಿ ಶಂಖಧ್ಮಾ. ಶಂಖವನ್ನು ಊದುವವನು.

ಪ್ರ-ಶಂಖಧ್ಮಾಃ ॥ ಶಂಖಧ್ಮೌ-ಶಂಖಧ್ಮಾಃ ॥ ಸಂ. ಪ. ಹೇ ಶಂಖಧ್ಮಾಃ ಹೇ ಶಂಖಧ್ಮೌ-ಹೇ ಶಂಖಧ್ಮಾಃ ॥ ದ್ವಿ-ಶಂಖಧ್ಮಾಮ್ ಶಂಖಧ್ಮೌ ಶಂಖಧ್ಮಃ ॥ ತೃ-ಶಂಖಧ್ಮಾ ಶಂಖಧ್ಮಾಭ್ಯಾಮ್. ಶಂಖಧ್ಮಾಭಿಃ ॥ ಚ-ಶಂಖಧ್ಮೇ ಶಂಖಧ್ಮಾಭ್ಯಾಮ್. ಶಂಖಧ್ಮಾಭ್ಯಃ ॥ ಪಂ-ಶಂಖಧ್ಮಃ ಶಂಖಧ್ಮಾಭ್ಯಾಮ್. ಶಂಖಧ್ಮಾಭ್ಯಃ ॥ ಷ-ಶಂಖಧ್ಮಃ ಶಂಖಧ್ಮೋಃ ಶಂಖಧ್ಮಾಮ್. ॥ ಸ-ಶಂಖಧ್ಮಿ ಶಂಖಧ್ಮೋಃ ಶಂಖಧ್ಮಾಸು ॥.

ಸೂತ್ರದಲ್ಲಿರುವ ದಳದ ಪ್ರಯೋಜನವನ್ನು ತಿಳಿಸುತ್ತಾನೆ. ಧಾತೋಃ ಕಿಮ್? ಸೂತ್ರದಲ್ಲಿ ಆಕಾರಾಂತಧಾತುವೆಂದುದೇಕೆ? ಆಕಾರಾಂತಶಬ್ದವೇ ಅಂತವಾದ ಭ ಸಂಜ್ಞಾವಿಶಿಷ್ಟ ಅಂಗಕ್ಕೆ ಲೋಪವೆಂದರೂ ಪ್ರಕೃತ ಲೋಪ ಬಂದೇ ಬರುತ್ತದೆ. ಹೀಗಿರುವಾಗ ಧಾತುವಿಗೆ ಪ್ರಯೋಜನವೇನು? ಅಂದರೆ, ಹಾಹಾನ್, ಇಲ್ಲಿ ಲೋಪ ಬಾರದಿರುವುದೇ ಫಲ. ಹಾಹಾ ಇದೂ ಆಕಾರಾಂತಶಬ್ದ. (ದೇವಸಭೆಯಲ್ಲಿ ಗಾಯಕನಾದ ಗಂಧರ್ವ) ಆಕಾರಾಂತಧಾತುವೇ ಅಂತವಾದ ಶಬ್ದವಲ್ಲ. ಹಾಹಾ+ ಶಸ್ ಎಂದಿರುವಾಗ ಇಲ್ಲಿ ಆಕಾರಕ್ಕೆ ಲೋಪಬರುವುದಿಲ್ಲ. ಧಾತುವೆಂದು ಸೂತ್ರದಲ್ಲಿ ಹೇಳದಿದ್ದರೆ ಇಲ್ಲಿಯೂ ಲೋಪಬರಬೇಕಾಗುತ್ತದೆ, ಧಾತುವೆಂದುದರಿಂದ ಇಲ್ಲಿ ಲೋಪವಿಲ್ಲ. ಪೂರ್ವಸವರ್ಣದೀರ್ಘ. "ತಸ್ಮಾಚ್ಛಸೋ ನಃ ಪುಂಸಿ" ಸೂತ್ರದಿಂದ ಸಕಾರಕ್ಕೆ ನಕಾರದೇಶ. ಟಾ ಪರವಾದಾಗ ಸವರ್ಣದೀರ್ಘ. ಹಾಹಾ. ಙೇ ಪರವಾದಾಗ "ವೃದ್ಧಿರೇಚಿ" ಸೂತ್ರದಿಂದ ವೃದ್ಧಿ. ಹಾಹೈ. ಙಸಿ, ಙಸ್‌ಗಳಲ್ಲಿ ಸವರ್ಣದೀರ್ಘ, ಸಕಾರಕ್ಕೆ ರುತ್ವವಿಸರ್ಗ. ಹಾಹಾಃ, ಓಸ್‌ಗಳಲ್ಲಿ ವೃದ್ಧಿ ಸಕಾರಕ್ಕೆ ರುತ್ವವಿಸರ್ಗ. ಹಾಹೌ ॥ ಆಮಿನಲ್ಲಿ ಸವರ್ಣದೀರ್ಘ. ಹಾಹಾಮ್. ಙಿ ಪರವಾದಾಗ "ಆದ್ಗುಣಃ" ಸೂತ್ರದಿಂದ ಗುಣ. ಹಾಹೇ. ಹಲಾದಿವಿಭಕ್ತಿಗಳಲ್ಲಿ ಕೇವಲ ವಿಭಕ್ತಿಗಳನ್ನು ಸೇರಿಸುವುದು. ಹಾಹಾಭ್ಯಾಮ್ ಇತ್ಯಾದಿ.

ಪ್ರ-ಹಾಹಾಃ ಹಾಹೌ ಹಾಹಾಃ ॥ ಸಂಪ್ರ. ಹೇ ಹಾಹಾಃ ಹೇಹಾಹೌ ಹೇ ಹಾಹಾಃ ॥ ದ್ವಿ. ಹಾಹಾಮ್. ಹಾಹೌ ಹಾಹಾನ್ ॥ ತೃ. ಹಾಹಾ ಹಾಹಾಭ್ಯಾಮ್ ಹಾಹಾಭಿಃ ॥ ಚ. ಹಾಹೈ ಹಾಹಾಭ್ಯಾಮ್. ಹಾಹಾಭ್ಯಃ ॥ ಪಂ. ಹಾಹಾಃ ಹಾಹಾಭ್ಯಾಮ್. ಹಾಹಾಭ್ಯಃ ॥ ಷ. ಹಾಹಾಃ ಹಾಹೌಃ ಹಾಹಾಮ್. ॥ ಸ. ಹಾಹೇ ಹಾಹೌಃ ಹಾಹಾಸು. ॥

ಈ ರೀತಿ ಆಕಾರಾಂತ ಶಬ್ದಗಳ ವಿಶೇಷವನ್ನು ತಿಳಿಯಬೇಕು.



## ಇಕಾರಾಂತ

### ಹರಿ ಶಬ್ದ. ವಿಷ್ಣುವು.

ಹರಿಶಬ್ದದಮೇಲೆ ಪ್ರಥಮಾ ಏಕವಚನದಲ್ಲಿ ಸುಪ್ರತ್ಯಯ ಹರಿ+ಸ್ ಎಂದಿರುವಾಗ "ಸಸಜುಷೋರುಃ" "ಖರವಸಾನಯೋರ್ವಿಸರ್ಜನೀಯಃ" ಸೂತ್ರಗಳಿಂದ

ಪದಾಂತ ಸಕಾರಕ್ಕೆ ರುತ್ವವಿಸರ್ಗ. ಹರಿಃ. ದ್ವಿವಚನದಲ್ಲಿ ಔಪ್ರತ್ಯಯ. ಹರಿ+ಔ ಎಂದಿರುವಾಗ "ಇಕೋ ಯಣಚಿ" ಸೂತ್ರದಿಂದ ಯಣ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣ ದೀರ್ಘ. (ಇ+ಔ=ಈ) ಹರೀ. ಬಹುವಚನದಲ್ಲಿ ಜಸ್. ಹರಿ+ಜಸ್ ಎಂದಿರುವಾಗ "ಚುಟೂ" ಸೂತ್ರದಿಂದ ಜಕಾರಕ್ಕೆ ಇತ್‌ಸಂಜ್ಞೆ ಬಂದು ಲೋಪ. ಹರಿ+ಅಸ್. ಪೂರ್ವಸವರ್ಣದೀರ್ಘ ಬಂದರೆ ಅದಕ್ಕೆ ಬಾಧಕವಾಗಿ ಗುಣ ಹೇಳುತ್ತಾನೆ.

(ಅಂಗಕ್ಕೆ ಗುಣವಿಧಾಯಕ ಸೂತ್ರ)

## ೧೬೮. ಜಸಿ ಚ ॥ ೭-೩-೧೦೯ ॥

**ಹ್ರಸ್ವಾಂತಸ್ಯಾಂಗಸ್ಯ ಗುಣಃ। ಹರಯಃ ॥**

ದ್ವಿಪದಸೂತ್ರ ॥ "ಅಂಗಸ್ಯ" ಅಧಿಕಾರ. "ಹ್ರಸ್ವಸ್ಯ ಗುಣಃ" ಸೂತ್ರವು ಅನುವೃತ್ತವಾಗುತ್ತದೆ. "ಹ್ರಸ್ವಸ್ಯ" ಪದವು "ಅಂಗಸ್ಯ" ಎಂಬುದಕ್ಕೆ ವಿಶೇಷಣವಾದುದರಿಂದ ತದಂತಲಾಭ. ಜಸಿ ಸಪ್ತಮೀ. "ತಸ್ಮಿನ್ನಿತಿ"–ಪರಿಭಾಷೆಯಿಂದ ಪೂರ್ವಕ್ಕೆ ಕಾರ್ಯವೆಂದು ತಿಳಿಯಬೇಕು. **ಸೂತ್ರಾರ್ಥ.** ಹ್ರಸ್ವವೇ ಕೊನೆಯಲ್ಲಿರುವ ಅಂಗಕ್ಕೆ. ಜಸ್ ಪರದಲ್ಲಿರುವಾಗ ಗುಣ ಬರುತ್ತದೆ. ಹರಿಎಂಬುದು ಹ್ರಸ್ವಾಂತವಾದ ಅಂಗ. ಅದಕ್ಕೆ ಜಸ್ ಪರವಾಗಿದೆ. ಗುಣಬಂದರೆ ಸ್ಥಾನಸಾಮ್ಯದಿಂದ ಇಕಾರಕ್ಕೆ ಏಕಾರರೂಪ ಗುಣ. ಹರೇ+ಅಸ್ ಆಗುತ್ತದೆ. ಏಕಾರಕ್ಕೆ ಅಚ್ ಪರವಾದುದರಿಂದ "ಏಚೋ ಯವಾಯಾವಃ" ಸೂತ್ರದಿಂದ ಏಕಾರಕ್ಕೆ ಅಯ್ ಆದೇಶ. ಸಕಾರಕ್ಕೆ ರುತ್ವವಿಸರ್ಗ. ಹರಯ್+ಅಸ್=ಹರಯಃ ಎಂದಾಗುತ್ತದೆ. ಸಂಬೋಧನಾ ಏಕವಚನದಲ್ಲಿ (ಸಂಬುದ್ಧಿಯಲ್ಲಿ) ಸು ಬಂದಾಗ ಹೇ ಹರಿ+ಸ್ ಎಂದಿರುವಾಗ ಕಾರ್ಯವಿಶೇಷ ಹೇಳುತ್ತಾನೆ.

(ಸಂಬುದ್ಧಿಯಲ್ಲಿ ಗುಣಹೇಳುವ ಸೂತ್ರ)

## ೧೬೯. ಹ್ರಸ್ವಸ್ಯ ಗುಣಃ ॥ ೭-೩-೧೦೮ ॥

**ಹ್ರಸ್ವಸ್ಯ ಗುಣಃ ಸ್ಯಾತ್ ಸಂಬುದ್ಧೌ ॥ ಹೇ ಹರೇ। ಹರಿಮ್। ಹರೀ। ಹರೀನ್ ॥**

ದ್ವಿಪದಸೂತ್ರ. "ಅಂಗಸ್ಯ" ಅಧಿಕಾರ. "ಹ್ರಸ್ವಸ್ಯ" ಎಂಬುದು ಅದಕ್ಕೆ ವಿಶೇಷಣ. ತದಂತಲಾಭ. "ಸಂಬುದ್ಧೌ ಚ" ಸೂತ್ರವು ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಸಂಬುದ್ಧಿ ಪರದಲ್ಲಿರುವಾಗ ಹ್ರಸ್ವಾಂತವಾದ ಅಂಗಕ್ಕೆ ಗುಣ ಬರುತ್ತದೆ. ಪ್ರಕೃತ ಸು ಸಂಬುದ್ಧಿ. ಇದು ಪರವಾದಾಗ ಹ್ರಸ್ವಾಂತವಾದ ಅಂಗ ಹರಿ ಎಂಬುದು. ಅದಕ್ಕೆ ಗುಣ. (ಇಕಾರಕ್ಕೆ ಏಕಾರ) ಹರೇ+ಸ್ ಎಂದಿರುವಾಗ ಏಕಾರ

ದಪರದಲ್ಲಿ ಸಂಬುದ್ಧಿಯ ಸಕಾರವಿರುವುದರಿಂದ "ಏಙ್‌ಹ್ರಸ್ವಾತ್ ಸಂಬುದ್ಧೇಃ" ಸೂತ್ರದಿಂದ ಸಕಾರಕ್ಕೆ ಲೋಪ. ಹೇ ಹರೇ ಎಂದಾಗುತ್ತದೆ ದ್ವಿವಚನ ಬಹುವಚನ ಗಳಲ್ಲಿ ಹಿಂದಿನಂತೇ ರೂಪ. ಹೇ ಹರೀ, ಹೇ ಹರಯಃ || ಹರಿಶಬ್ದದಮೇಲೆ ದ್ವಿತೀಯಾ ಏಕವಚನದಲ್ಲಿ ಅಮ್ ಪ್ರತ್ಯಯ. ಹರಿ+ಅಮ್ ಎಂದಿರುವಾಗ "ಅಮಿ ಪೂರ್ವಃ" ಸೂತ್ರದಿಂದ ಪೂರ್ವರೂಪ ಏಕಾದೇಶ. ಹರಿಮ್. ದ್ವಿವಚನ ದಲ್ಲಿ ಔಟ್‌ಪ್ರತ್ಯಯ. ಹರಿ+ಔ ಪೂರ್ವಸವರ್ಣದೀರ್ಘ. ಹರೀ. ಬಹುವಚನದಲ್ಲಿ ಶಸ್‌ಪ್ರತ್ಯಯ. ಶಕಾರಕ್ಕೆ ಇತ್ ಸಂಜ್ಞಾಬಂದು ಲೋಪವಾದರೆ ಹರಿ+ಅಸ್ ಎಂದಿರುವಾಗ ಪೂರ್ವಸವರ್ಣದೀರ್ಘ. ಹರೀಸ್. ಪೂರ್ವಸವರ್ಣದೀರ್ಘದಪರದಲ್ಲಿ ಶಸಿನ ಸಕಾರ ಬಂದುದರಿಂದ "ತಸ್ಮಾಚ್ಛಸೋ ನಃ ಪುಂಸಿ" ಸೂತ್ರದಿಂದ ಸಕಾರಕ್ಕೆ ನಕಾರಾದೇಶ. ಹರೀನ್. ಹರಿಶಬ್ದಕ್ಕೆ ತೃತೀಯಾ ಏಕವಚನದಲ್ಲಿ ಟಾ ಪ್ರತ್ಯಯ. "ಚುಟೂ" ಸೂತ್ರದಿಂದ ಟಕಾರಕ್ಕೆ ಇತ್ ಸಂಜ್ಞಾ ಬಂದು ಲೋಪ. ಹರಿ+ಆ ಎಂದಿರುವಾಗ ಕಾರ್ಯವಿಶೇಷಕ್ಕೋಸ್ಕರ ಸಂಜ್ಞೆ ಹೇಳುತ್ತಾನೆ.

(ಘಿ ಸಂಜ್ಞೆ ಹೇಳುವ ಸೂತ್ರ)

## ೧೭೦. ಶೇಷೋ ಘ್ಯಸಖಿ || ೧-೪-೭ ||

**ಹ್ರಸ್ವೌ ಯೂವಿದುತೌ ತದಂತಂ ಸಖಿವರ್ಜಂ ಘಿಸಂಜ್ಞಮ್ ||ಶೇಷ ಇತಿ ಸ್ಪಷ್ಟಾರ್ಥಮ್ ||**

ಶೇಷಃ, ಘಿ, ಅಸಖಿ || ತ್ರಿಪದ ಸೂತ್ರ. "ಯೂಸ್ತ್ರ್ಯಾಖ್ಯೌನದೀ" ಸೂತ್ರ ದಿಂದ "ಯೂ," ಜಾತಿ ಹ್ರಸ್ವಶ್ಚ" ಸೂತ್ರದಿಂದ "ಹ್ರಸ್ವಃ" ಪದಗಳು ಅನುವೃತ್ತ ವಾಗುತ್ತವೆ. ಇಶ್ಚ ಉಶ್ಚಯೂ. ಇಕಾರಕ್ಕೆ ಯಣ್ ಬಂದಿದೆ. ಇಕಾರಉಕಾರಗಳು "ಹ್ರಸ್ವ" ಎಂಬುದಕ್ಕೆ ಪ್ರತ್ಯೇಕವಾಗಿ ಯೂ ಎಂಬಲ್ಲಿ ಅನ್ವಯ. ಉಕ್ತಾದನ್ಯಃ ಶೇಷಃ ಹಿಂದೆ ಹೇಳಿದುದನ್ನು ಬಿಟ್ಟು ಉಳಿದಿರುವುದು ಶೇಷ. ಇದಕ್ಕೂ ಯೂ ಎಂಬಲ್ಲಿ ಅನ್ವಯ. "ಶಬ್ದಸ್ವರೂಪಂ" ಎಂದು ಅಧ್ಯಾಹಾರಮಾಡಿಕೊಳ್ಳಬೇಕು. ಅದಕ್ಕೆ ಯೂ ವಿಶೇಷಣವಾದುದರಿಂದ ತದಂತಲಾಭ. ನ ಸಖಿ ಅಸಖಿ. ಸಖಿಶಬ್ದ ವನ್ನು ಬಿಟ್ಟು ಎಂದರ್ಥ. **ಸೂತ್ರಾರ್ಥ.** ನದೀಸಂಜ್ಞೆಯಿಲ್ಲದ (ಶೇಷ) ಹ್ರಸ್ವ ವಾದ ಇಕಾರ ಉಕಾರಗಳೇ ಅಂತವಾಗಿರುವ ಸಖಿಶಬ್ದಭಿನ್ನವಾದ ಶಬ್ದಸ್ವರೂಪವು ಘಿ ಸಂಜ್ಞೆಯನ್ನು ಹೊಂದುತ್ತದೆ. ಈ ಸೂತ್ರದ ಹಿಂದೆ ಸ್ತ್ರೀತ್ವವನ್ನು ಹೇಳುವ ಇಕಾರ ಉಕಾರಗಳಿಗೆ ನದೀಸಂಜ್ಞೆಯನ್ನು ಹೇಳಿರುತ್ತಾನೆ. ಆದುದರಿಂದ ಶೇಷ ವೆಂದರೆ ನದೀಸಂಜ್ಞೆ ಇಲ್ಲದವುಗಳು ಎಂದರ್ಥವಾಗುತ್ತದೆ. ಸಖಿಶಬ್ದವು ಇಕಾರಾಂತ ವಾದರೂ ಅದನ್ನು ವ್ಯಾವೃತ್ತಿಪಡಿಸಲು ಅಸಖಿಯೆಂದು ನಿಷೇಧಮಾಡಿರುತ್ತಾನೆ. ಪ್ರಕೃತ ಹರಿಶಬ್ದವು ಇಕಾರಾಂತವಾಗಿ ಹ್ರಸ್ವವಾಗಿದೆ. ನದೀಸಂಜ್ಞೆಯೂ ಇಲ್ಲ. ಆದುದರಿಂದ ಅದಕ್ಕೆ ಘಿಸಂಜ್ಞೆ ಬರುತ್ತದೆ. "ಶೇಷ ಇತಿ ಸ್ಪಷ್ಟಾರ್ಥಮ್"

ಸೂತ್ರದಲ್ಲಿ ಶೇಷವೆಂಬ ಪದವು ಸಿದ್ಧವಾದ ಅರ್ಥವನ್ನೇ ಹೇಳುವುದರಿಂದ ಸ್ಪಷ್ಟವಾಗಿ ತಿಳಿಯಲು ಹೇಳಿದೆ. ಶೇಷಪದದಿಂದ ನದೀಸಂಜ್ಞೆಯಿಲ್ಲದವುಗಳು ಎಂದರ್ಥವಾಗಿದೆ. ಮತಿಶಬ್ದವು ಇಕಾರಾಂತಸ್ತ್ರೀಲಿಂಗ. ಇದಕ್ಕೆ "ಙಿತಿ ಹ್ರಸ್ವಶ್ಚ" ಸೂತ್ರದಿಂದ ನದೀಸಂಜ್ಞೆ ಬರುತ್ತದೆ. ಶೇಷಪದವಿಲ್ಲವಾದರೆ ಇಲ್ಲಿಯೂ ಘಿ ಸಂಜ್ಞಾ ಬರಬೇಕಾಗುತ್ತದೆ ಎನ್ನಬೇಕು. ಆದರೆ ಇದಕ್ಕೋಸ್ಕರ ಶೇಷಪದಬೇಕಾಗಿಲ್ಲ. ನದೀ ಸಂಜ್ಞೆ ಘಿಸಂಜ್ಞೆ ಎರಡೂ ಪ್ರಾಪ್ತವಾದರೆ "ಆಕಡಾರಾದೇಕಾ ಸಂಜ್ಞಾ" ಸೂತ್ರವು ನಿಯಮ ಮಾಡುವುದರಿಂದ ಒಂದೇ ಸಂಜ್ಞೆಯು ಬರಬೇಕು. ಆಗ ಅನವಕಾಶ ನಿಮಿತ್ತವಾಗಿ ನದೀಸಂಜ್ಞೆಯೇ ಬರುತ್ತದೆ. ಹೀಗಿರುವಾಗ ಶೇಷಪದವೇಕೆ? ಅದಕ್ಕೋಸ್ಕರ ಸ್ಪಷ್ಟಾರ್ಥವೆಂದು ಹೇಳಿದೆ. ಪ್ರಕೃತ ಹರಿಬ್ದಕ್ಕೆ ಘಿಸಂಜ್ಞಾ ಬಂದರೆ ಕಾರ್ಯ ವಿಶೇಷವನ್ನು ಹೇಳುತ್ತಾನೆ.

(ಟಾಪ್ರತ್ಯಯಕ್ಕೆ ನಾ ಆದೇಶ ಹೇಳುವಸೂತ್ರ)

## ೧೭೧. ಆಙೋ ನಾಸ್ತ್ರಿಯಾಮ್ ॥ ೭-೩-೧೨೦ ॥

**ಘೇಃ ಪರಸ್ಯಾಙೋ ನಾ ಸ್ಯಾದಸ್ತ್ರಿಯಾಮ್ ॥ ಆಙಿತಿ ಟಾ ಸಂಜ್ಞಾ ॥ ಹರಿಣಾ, ಹರಿಭ್ಯಾಮ್, ಹರಿಭಿಃ ॥**

ಆಙಃ, ನಾ, ಅಸ್ತ್ರಿಯಾಮ್ । ತ್ರಿಪದಸೂತ್ರ, "ಅಚ್ಚ ಘೇಃ" ಸೂತ್ರದಿಂದ "ಘೇಃ" ಪದಕ್ಕೆ ಅನುವೃತ್ತಿ. ಅಂಗಸ್ಯ ಅಧಿಕಾರ. **ಸೂತ್ರಾರ್ಥ.** ಘಿ ಸಂಜ್ಞೆಯುಳ್ಳ ಅಂಗದ ಪರದಲ್ಲಿರುವ ಆಙ್ ಪ್ರತ್ಯಯಕ್ಕೆ (ಟಾ) ನಾ ಆದೇಶ ಬರುತ್ತದೆ. ಸ್ತ್ರೀಲಿಂಗದಲ್ಲಿ ಈ ಆದೇಶವಿಲ್ಲ. ಅಂಗಸ್ಯ ಎಂಬುದನ್ನು ಪಂಚಮ್ಯಂತವಾಗಿ ವಿಪರಿಣಾಮ ಮಾಡಿಕೊಂಡುದುದರಿಂದ ಪರಲಾಭ. ಆಙ್ ಎಂದರೆ ಏನು ಎಂದು ಶಂಕೆಬಂದರೆ ಅದಕ್ಕೆ ಸಮಾಧಾನ ಹೇಳುತ್ತಾನೆ. "ಆಙಿತಿ" ಟಾ ವಿಭಕ್ತಿಗೆ ಆಙ್ ಎಂದು ಪ್ರಾಚೀನಾಚಾರ್ಯರ ಸಂಜ್ಞೆ. ಘಿ ಸಂಜ್ಞೆಯುಳ್ಳ ಹರಿಶಬ್ದದ ಪರದಲ್ಲಿರುವ ಟಾ ಪ್ರತ್ಯಯಕ್ಕೆ ನಾದೇಶಬಂದರೆ ಹರಿನಾ ಎಂದಾಗುತ್ತದೆ. ರೇಫದ ಪರದಲ್ಲಿ ನಕಾರವಿದ್ದು ಮಧ್ಯದಲ್ಲಿ ಅಟ್ (ಇ) ವ್ಯವಧಾನವಿರುವುದರಿಂದ "ಅಟ್‌ಕುಪ್ವಾಙ್ ನುಮ್ ವ್ಯವಾಯೇಪಿ" ಸೂತ್ರದಿಂದ ನಕಾರಕ್ಕೆ ಣತ್ವ. ಹರಿಣಾ. ಹರಿಶಬ್ದಕ್ಕೆ ತೃತೀಯಾ ದ್ವಿವಚನದಲ್ಲಿ ಭ್ಯಾಮ್ ಪ್ರತ್ಯಯ. ಹಲಾದಿಯಲ್ಲಿ ಏನೂ ಕಾರ್ಯ ವಿಶೇಷವಿಲ್ಲದಿರುವುದರಿಂದ ಹಾಗೇ ಇರುತ್ತದೆ. ಹರಿಭ್ಯಾಮ್. ಹರಿ+ಭಿಸ್ ರುತ್ವವಿಸರ್ಗ, ಹರಿಭಿಃ ॥ ಚತುರ್ಥೀ ಏಕವಚನದಲ್ಲಿ ಙೇ ಪ್ರತ್ಯಯ. "ಲಶಕ್ವತದ್ಧಿತೇ" ಸೂತ್ರದಿಂದ ಙಕಾರಕ್ಕೆ ಇತ್ ಸಂಜ್ಞಾ ಬಂದು ಲೋಪ. ಹರಿ+ಏ ಎಂದಿರುವಾಗ ಅಂಗಕ್ಕೆ ಗುಣ ಹೇಳುತ್ತಾನೆ.

(ಘಿಸಂಜ್ಞೆಗೆ ಗುಣ ಹೇಳುವಸೂತ್ರ)

## ೧೭೨. ಘೇರ್ಙಿತಿ ॥ ೭-೩-೧೧೧ ॥

**ಘಿಸಂಜ್ಞಸ್ಯ ಙಿತಿ ಸುಪಿ ಗುಣಃ । ಹರಯೇ । ಹರಿಭ್ಯಾಮ್ । ಹರಿಭ್ಯಃ ॥**

ಘೇಃ ಙಿತಿ ॥ ದ್ವಿಪದಸೂತ್ರ. ಅಂಗಸ್ಯ ಅಧಿಕಾರ. "ಸುಪಿಚ" ಸೂತ್ರದಿಂದ "ಸುಪಿ" "ಹ್ರಸ್ವಸ್ಯ ಗುಣಃ" ಸೂತ್ರದಿಂದ "ಗುಣಃ" ಅನುವೃತ್ತವಾಗುತ್ತವೆ. ಙಿತಿ ಎಂಬುದಕ್ಕೆ ಸುಪಿ ಎಂಬಲ್ಲಿ, ಘೇಃ ಪದಕ್ಕೆ ಅಂಗಸ್ಯ ಎಂಬಲ್ಲಿ ಅನ್ವಯ. ಙ್ ಇತ್‌ಯಸ್ಯ ಙಿತ್ ತಸ್ಮಿನ್ ಙಿತಿ. ಙಕಾರ ಇತ್ತಾದ ಸುಪ್ ಎಂದರ್ಥ. **ಸೂತ್ರಾರ್ಥ.** ಙಕಾರ ಇತ್ತಾದ ಸುಪ್ ಪರವಾದಾಗ ಘಿ ಸಂಜ್ಞೆಯುಳ್ಳ ಅಂಗಕ್ಕೆ ಗುಣ. ಹರಿ+ಏ ಎಂದಿರುವಾಗ ಏ ಎಂಬುದು ಙಿತ್ತಾದ ಸುಪ್. ಇದು ಪರವಾದು ದರಿಂದ ಇಕಾರಕ್ಕೆ ಗುಣ ಬಂದರೆ ಏಕಾರ. ಹರೇ+ಏ ಏಚಿಗೆ ಅಚ್‌ಪರವಾದುದ ರಿಂದ "ಏಚೋಽಯವಾಯಾವಃ" ಸೂತ್ರದಿಂದ ಗುಣದ ಏಕಾರಕ್ಕೆ ಅಯಾದೇಶ. ಹರಯ್+ಏ=ಹರಯೇ. ಹಲಾದಿಯಲ್ಲಿ ಕೇವಲ ಪ್ರತ್ಯಯಸೇರಿಸುವುದು ಮಾತ್ರ ವೆಂದುದರಿಂದ ದ್ವಿವಚನಬಹುವಚನಗಳಲ್ಲಿ ಹರಿಭ್ಯಾಮ್, ಹರಿಭ್ಯಃ ಎಂದಾಗುತ್ತದೆ. ಪಂಚಮೀ ಏಕವಚನದಲ್ಲಿ ಙಸಿ ಪ್ರತ್ಯಯ. ಹರಿ+ಅಸ್ ಎಂದಿರುವಾಗ ಙಿತ್ತಾದ ಸುಪ್ (ಙ್)+ಅಸ್+(ಇ) ಪರವಾದುದರಿಂದ ಹಿಂದಿನ ಸೂತ್ರದಿಂದ ಘಿ ಸಂಜ್ಞೆಯುಳ್ಳ ಅಂಗಕ್ಕೆ ಗುಣ. ಹರೇ+ಅಸ್ ಎಂದಿರುವಾಗ ಪೂರ್ವರೂಪವನ್ನು ಹೇಳುತ್ತಾನೆ.

(ಙಸಿಙಸ್‌ಗಳಲ್ಲ ಪೂರ್ವರೂಪ ಹೇಳುವ ಸೂತ್ರ)

## ೧೭೩. ಙಸಿಙಸೋಶ್ಚ ॥ ೬-೧-೧೧೦ ॥

**ಏಙಃ ಙಸಿಙಸೋರತಿ ಪೂರ್ವರೂಪಮೇಕಾದೇಶಃ ॥ ಹರೇಃ ೨ ॥ ಹರ್ಯೋಃ ೨ । ಹರೀಣಾಮ್ ॥**

ಙಸಿಙಸೋಃ, ಚ ॥ ದ್ವಿಪದಸೂತ್ರ. "ಏಙಃ ಪದಾಂತಾದತಿ" ಸೂತ್ರದಿಂದ "ಏಙಃ" "ಅತಿ" "ಅಮಿಪೂರ್ವಃ" ಸೂತ್ರದಿಂದ "ಪೂರ್ವಃ" ಅನುವೃತ್ತ ವಾಗುತ್ತವೆ. "ಏಕಃ ಪೂರ್ವಪರಯೋಃ" ಅಧಿಕಾರ. ಅತಿ ಸಪ್ತಮೀ. **ಸೂತ್ರಾರ್ಥ.** ಏಙಿಗೆ (ಏ-ಓ) ಙಸಿ, ಙಸ್ ಪ್ರತ್ಯಯಗಳ ಅಕಾರಪರವಾದಾಗ ಪೂರ್ವಪರಗಳಿಗೆ (ಏ+ಅ) ಪೂರ್ವರೂಪವು ಏಕಾದೇಶವಾಗಿ ಬರುತ್ತದೆ. ಹರೇ+ಅಸ್. ಏಕಾರ ಅಕಾರಗಳಿಗೆ ಏಕಾರವೇ ಏಕಾದೇಶವಾಗಿ ಬಂದರೆ ಹರೇಸ್ ಆಗುತ್ತದೆ. ಪದಾಂತ ಸಕಾರಕ್ಕೆ ರುತ್ವ ವಿಸರ್ಗ. ಹರೇಃ. ಷಷ್ಠೀಏಕವಚನದಲ್ಲಿಯೂ ಹೀಗೆ ಗುಣ, ಪೂರ್ವರೂಪ. ರುತ್ವವಿಸರ್ಗ ಬರುವುದರಿಂದ ಹರೇಃ ಎಂದೇ ಆಗುತ್ತದೆಂದು ಸೂಚಿಸಲು ಎರಡು ಸಂಖ್ಯೆಯನ್ನು ಬರೆದಿರುತ್ತಾನೆ. ಪಂಚಮೀ ದ್ವಿವಚನ ಬಹು ವಚನಗಳಲ್ಲಿ ಹರಿಭ್ಯಾಮ್, ಹರಿಭ್ಯಃ ಎಂದಾಗುತ್ತದೆ. ಷಷ್ಠೀ ದ್ವಿವಚನ, ಸಪ್ತಮೀ ದ್ವಿವಚನಗಳಲ್ಲಿ ಓಸ್‌ಪ್ರತ್ಯಯ. ಹರಿ=ಓಸ್ ಎಂದಿರುವಾಗ ಇಕಾರಕ್ಕೆ ಅಚ್

ಪರವಾದುದರಿಂದ "ಇಕೋಯಣಚಿ" ಸೂತ್ರದಿಂದ ಯಣ್. ಹರ್ಯೋಸ್. ಸಕಾರಕ್ಕೆ ರುತ್ವ ವಿಸರ್ಗ. ಹರ್ಯೋಃ ೨. ಎಂದಾಗುತ್ತದೆ. ಷಷ್ಠೀ ಬಹುವಚನದಲ್ಲಿ ಆಮ್. ಹರಿ+ಆಮ್. ಹ್ರಸ್ವಾಂತಅಂಗವಾದುದರಿಂದ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಹ್ರಸ್ವದಪರವಾದ ಆಮಿಗೆ ನುಡಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬಂದರೆ ಹರಿ+ನ್+ಆಮ್. "ನಾಮಿ" ಸೂತ್ರದಿಂದ ಅಂಗಕ್ಕೆ ದೀರ್ಘ. "ಅಟ್‌ಕುಪ್ವಾಙ್"—ಸೂತ್ರದಿಂದ ನಕಾರಕ್ಕೆ ಣತ್ವ. ಹರೀಣಾಮ್. ಸಪ್ತಮೀ ಏಕವಚನದಲ್ಲಿ ಹರಿ+(ಙಿ) ಇ ಎಂದಿರುವಾಗ ಙಿ ವಿಭಕ್ತಿಗೆ ಔತ್ವ ಹೇಳುತ್ತಾನೆ.

(ಘಿಗೆ ಅಕಾರ ಙಿಗೆ ಔತ್ವ ಹೇಳುವ ಸೂತ್ರ)

## ೧೭೪. ಅಚ್ಚ ಘೇಃ ॥ ೭-೩-೧೧೯ ॥

**ಇದುದ್ಭ್ಯಾಮುತ್ತರಸ್ಯ ಙೇರೌತ್, ಘೇರಚ್ಚ । ಹರೌ ಹರಿಷು ॥ ಏವಂ ಕವ್ಯಾದಯಃ ॥**

ಅತ್, ಚ, ಘೇಃ ॥ ತ್ರಿಪದಸೂತ್ರ. "ಙೇರಾಮ್‌ನದ್ಯಾಮ್ನೀಭ್ಯಃ" ಸೂತ್ರದಿಂದ "ಙೇಃ" ಅನುವೃತ್ತಿ. "ಇದುದ್ಭ್ಯಾಮ್, ಔತ್," ಎರಡು ಸೂತ್ರಗಳೇ ಅನುವೃತ್ತವಾಗುತ್ತವೆ. "ಇದುದ್ಭ್ಯಾಮ್" ಪಂಚಮೀ. ಸೂತ್ರಾರ್ಥ. ಇಕಾರ ಉಕಾರಗಳ (ಇಕಾರೋಕಾರಾಂತ ಅಂಗ) ಪರದಲ್ಲಿರುವ ಙಿ ವಿಭಕ್ತಿಗೆ ಔತ್ವವೂ ಘಿಗೆ (ಇಕಾರೋಕಾರಗಳಿಗೆ) ಅಕಾರವೂ ಆದೇಶವಾಗಿ ಬರುತ್ತವೆ. ಹರಿ+ಇ ಎಂದಿರುವಾಗ ಇ ವಿಭಕ್ತಿಗೆ ಔಕಾರ, ಹಿಂದಿನ ಘಿ ಇಕಾರಕ್ಕೆ ಅಕಾರ ಬಂದರೆ ಹರ+ಔ ಎಂದಾದಾಗ ಅಕಾರಕ್ಕೆ ಏಚ್‌ಪರವಾದುದರಿಂದ "ವೃದ್ಧಿರೇಚಿ" ಸೂತ್ರದಿಂದ ವೃದ್ಧಿ. ಹರೌ ಎಂದಾಗುತ್ತದೆ. ದ್ವಿವಚನದಲ್ಲಿ ಹರ್ಯೋಃ ಎಂದು ಹಿಂದೆ ಹೇಳಿದೆ. ಬಹುವಚನದಲ್ಲಿ ಹರಿ+ಸು ಎಂದಿರುವಾಗ "ಆದೇಶಪ್ರತ್ಯಯಯೋಃ" ಸೂತ್ರದಿಂದ ಇಣ್ಣಿನ ಪರದಲ್ಲಿ ಪ್ರತ್ಯಯಸಕಾರವಿರುವುದರಿಂದ ಷತ್ವ ಹರಿಷು. ಹೀಗೆಯೇ ಕವಿಮುಂತಾದ ಇಕಾರಾಂತ ಶಬ್ದಗಳ ರೂಪವನ್ನು ತಿಳಿಯಬೇಕು.

ಇಕಾರಾಂತಪುಲ್ಲಿಂಗ ಸಖಿ ಶಬ್ದ. ಸ್ನೇಹಿತನು.

ಪ್ರಥಮಾ ಏಕವಚನದಲ್ಲಿ ಸಖಿ+ಸ್ ಎಂದಿರುವಾಗ ಅಂಗಕ್ಕೆ ಅನಙಾದೇಶ ಹೇಳುತ್ತಾನೆ.

(ಸಖಿಶಬ್ದಕ್ಕೆ ಅನಙ್ ವಿಧಾಯಕ ಸೂತ್ರ)

## ೧೭೫. ಅನಙ್ ಸೌ ॥ ೭-೧-೯೩ ॥

**ಸಖ್ಯುರಂಗಸ್ಯಾನಙ್ ಆದೇಶೋಽಸಂಬುದ್ಧೌ ಸೌ ॥**

ದ್ವಿಪದಸೂತ್ರ. "ಸಖ್ಯುರಸಂಬುದ್ಧೌ" ಸೂತ್ರವು ಅನುವೃತ್ತವಾಗುತ್ತದೆ. ಅಂಗಸ್ಯ ಅಧಿಕಾರ. ಸೌ ಪ್ರಥಮಾವಿಭಕ್ತಿ ಏಕವಚನದ ಸಪ್ತಮೀ. ಸೂತ್ರಾರ್ಥ.

ಸಖಿರೂಪವಾದ ಅಂಗಕ್ಕೆ ಸಂಬುದ್ಧಿಯಿಲ್ಲದ ಸು ಪರವಾದಾಗ ಅನಙ್ ಆದೇಶ ಬರುತ್ತದೆ. ಅನಙಿನಲ್ಲಿ ಙಕಾರ "ಹಲಂತ್ಯಮ್" ಸೂತ್ರದಿಂದ ಇತ್ ಆಗಿ ಲೋಪ ಹೊಂದುತ್ತದೆ. ನಕಾರದ ಮೇಲಿನ ಅಕಾರ ಉಚ್ಚಾರಣಾರ್ಥವಾಗಿ ಹೇಳಿದೆ. ಅನ್ ಉಳಿಯುತ್ತದೆ. ಅನೇಕಾಲಾದುದರಿಂದ ಸರ್ವಾದೇಶಪ್ರಾಪ್ತವಾದರೂ ಙಿತ್ತಾದುದರಿಂದ "ಙಿಚ್ಚ" ಸೂತ್ರದಿಂದ ಅಂತಾದೇಶವಾಗಿ ಬರುತ್ತದೆ. ಸಖಿ+ಸ್ ಎಂಬಲ್ಲಿ ಅಂತ್ಯ ಇಕಾರ. ಸಂಬುದ್ಧಿಯಿಲ್ಲದ ಸು ಪರವಾದುದರಿಂದ ಇಕಾರಕ್ಕೆ ಅನಙ್ ಬಂದರೆ ಸಖನ್+ಸ್ ಎಂದಾಗುತ್ತದೆ. ಇಲ್ಲಿ ಉಪಧೆಗೆ ಮುಂದೆ ದೀರ್ಘ ಹೇಳುತ್ತಾನೆ. ಆಗ ಉಪಧಾ ಎಂದರೇನು ಎಂದು ಜಿಜ್ಞಾಸೆ ಬರುವುದರಿಂದ ಮೊದಲು ಉಪಧಾಸಂಜ್ಞೆ ಹೇಳುತ್ತಾನೆ.

(ಉಪಧಾಸಂಜ್ಞೆ ಹೇಳುವ ಸೂತ್ರ)

## ೧೭೬. ಅಲೋಽನ್ತ್ಯಾತ್ಪೂರ್ವ ಉಪಧಾ ॥ ೧-೧-೬೫ ॥

**ಅಂತ್ಯಾದಲಃ ಪೂರ್ವೋ ವರ್ಣ ಉಪಧಾಸಂಜ್ಞಃ ॥**

ಅಲಃ, ಅಂತ್ಯಾತ್, ಪೂರ್ವಃ, ಉಪಧಾ ॥ ನಾಲ್ಕು ಪದವುಳ್ಳ ಸೂತ್ರ. ಅಲಃ ಪಂಚಮೀ. ಇದು ಪ್ರತ್ಯಾಹಾರ. ಸಕಲವರ್ಣಗಳು. ಇದರ ಪೂರ್ವವೂ ಅಂದರೆ ಸಾಜಾತ್ಯದಿಂದ ಅದೂ ವರ್ಣವೆಂದು ಇಟ್ಟುಕೊಳ್ಳಬೇಕು. **ಸೂತ್ರಾರ್ಥ.** ಅಂತ್ಯ ಅಲಿನ (ವರ್ಣದ) ಪೂರ್ವದಲ್ಲಿರುವ ವರ್ಣಕ್ಕೆ ಉಪಧಾ ಎಂಬ ಸಂಜ್ಞೆ ಬರುತ್ತದೆ. ಪಂಚಮಿಯಾದುದರಿಂದ ಪೂರ್ವವೆಂದರೆ ಅವ್ಯವಹಿತ ಪೂರ್ವವೆಂದು ತಿಳಿಯಬೇಕು. ಪ್ರಕೃತ ಸಖನ್+ಸ್ ಎಂಬಲ್ಲಿ ಅಂಗದ ಅಂತ್ಯವೆಂದರೆ ನಕಾರ. ಅದರ ಪೂರ್ವವರ್ಣ ಖಕಾರದ ಮೇಲಿರುವ ಅಕಾರ (ಸಖ್+ಅ+ನ್) ಇದು ಉಪಧೆಯಾಗುತ್ತದೆ. ಉಪಧಾಸಂಜ್ಞೆಗೆ ಪ್ರಯೋಜನವನ್ನು ಹೇಳುತ್ತಾನೆ.

(ನಾಂತಕ್ಕೆ ದೀರ್ಘವಿಧಾಯಕ ಸೂತ್ರ)

## ೧೭೭. ಸರ್ವನಾಮಸ್ಥಾನೇ ಚಾಸಂಬುದ್ಧೌ ॥ ೬-೪-೮ ॥

**ನಾಂತಸ್ಯೋಪಧಾಯಾ ದೀರ್ಘೋಽಸಂಬುದ್ಧೌ ಸರ್ವನಾಮಸ್ಥಾನೇ ॥**

ಸರ್ವನಾಮಸ್ಥಾನೇ, ಚ, ಅಸಂಬುದ್ಧೌ ॥ ತ್ರಿಪದಸೂತ್ರ. "ನೋಪಧಾಯಾಃ" ಸೂತ್ರವು ಅನುವೃತ್ತವಾಗುತ್ತದೆ. ಅಲ್ಲಿ "ನ" ಎಂಬುದು ಲುಪ್ತಷಷ್ಠೀಕ. ಅಧಿಕೃತವಾದ "ಅಂಗಸ್ಯ" ಎಂಬುದಕ್ಕೆ ಅದು ವಿಶೇಷಣ. ನಾಂತವಾದ ಅಂಗದ ಎಂದರ್ಥವಾಗುತ್ತದೆ. "ಢ್ರಲೋಪೇ" ಸೂತ್ರದಿಂದ "ದೀರ್ಘ"ಕ್ಕೆ ಅನುವೃತ್ತಿ. ಸರ್ವನಾಮಸ್ಥಾನೇ ಎಂಬಲ್ಲಿ "ಅಸಂಬುದ್ಧೌ" ಪದಕ್ಕೆ ಅನ್ವಯ. **ಸೂತ್ರಾರ್ಥ.** ಸಂಬುದ್ಧಿಯಿಲ್ಲದ ಸರ್ವನಾಮಸ್ಥಾನ ಪರವಾದಾಗ ನಕಾರಾಂತ

ವಾದ ಅಂಗದ ಉಪಧೆಗೆ ದೀರ್ಘ. ಸು ಮುಂತಾದ ಐದು ಪ್ರತ್ಯಯಗಳಿಗೆ ಸರ್ವ ನಾಮಸ್ಥಾನ ಸಂಜ್ಞೆ ಹೇಳಿದೆ. ಪ್ರಕೃತ ಸರ್ವನಾಮಸ್ಥಾನ ಪ್ರಥಮಾ ಸು. ಅದು ಪರವಾದ ನಕಾರಾಂತ ಅಂಗ ಸಖನ್. ಅದರ ಉಪಧೆ ಖಕಾರದ ಮೇಲಿರುವ ಅಕಾರ. ಅದಕ್ಕೆ ದೀರ್ಘ ಬಂದರೆ ಸಖಾನ್+ಸ್ ಎಂದಾಗುತ್ತದೆ. ಇಲ್ಲಿ ಸುವಿಗೆ ಲೋಪ ಹೇಳಲು ಪ್ರತ್ಯಯಕ್ಕೆ ಅಪೃಕ್ತ ಎಂಬ ಸಂಜ್ಞೆಯನ್ನು ಹೇಳುತ್ತಾನೆ.

(ಅಪೃಕ್ತಸಂಜ್ಞೆ ಹೇಳುವ ಸೂತ್ರ)

## ೧೭೮. ಅಪೃಕ್ತ ಏಕಾಲ್ ಪ್ರತ್ಯಯಃ ॥ ೧-೨-೪೧ ॥

**ಏಕಾಲ್ ಪ್ರತ್ಯಯೋ ಯಃ ಸೋಽಪೃಕ್ತಸಂಜ್ಞಃ ಸ್ಯಾತ್ ॥**

ತ್ರಿಪದಸೂತ್ರ. ಏಕಾಶ್ಚಾಸೌ ಅಲ್ ಚ ಏಕಾಲ್. ಕರ್ಮಧಾರಯಸಮಾಸ. **ಸೂತ್ರಾರ್ಥ.** ಒಂದೇ ಅಲ್ (ವರ್ಣ) ಇರುವ ಪ್ರತ್ಯಯವು "ಅಪೃಕ್ತ" ಸಂಜ್ಞೆಯನ್ನು ಹೊಂದುತ್ತದೆ. ಪ್ರಕೃತ ಸುವಿನಲ್ಲಿ ಸ್ ಮಾತ್ರ ಉಳಿದಿರುವುದರಿಂದ ಒಂದೇ ಅಲಾದುದರಿಂದ ಅದು ಅಪೃಕ್ತವಾಗುತ್ತದೆ. ಈಗ ಅಪೃಕ್ತಸಂಜ್ಞೆ ಹೊಂದಿದ ಸುವಿಗೆ ಲೋಪ ಹೇಳುತ್ತಾನೆ.

(ಸು, ತಿ, ಸಿಗೆ ಲೋಪ ಹೇಳುವ ಸೂತ್ರ)

## ೧೭೯. ಹಲ್‌ಙ್ಯಾಬ್ಭ್ಯೋ ದೀರ್ಘಾತ್ಸುತಿಸ್ಯಪೃಕ್ತಂ ಹಲ್ ॥ ೬-೧-೬೮ ॥

**ಹಲಂತಾತ್ಪರಂ ದೀರ್ಘೌ ಯೌ ಙ್ಯಾಪೌ ತದಂತಾಚ್ಚ ಪರಂ ಸುತಿಸೀತ್ಯೇತದಪೃಕ್ತಂ ಹಲ್ ಲುಪ್ಯತೇ ॥**

ಹಲ್ ಚ ಙೀಪ್ ಚ, ಆಪ್ ಚ, ಹಲ್‌ಙ್ಯಾಪಃ, ತೇಭ್ಯಃ ಹಲ್‌ಙ್ಯಾಭ್ಯಃ ಪಂಚಮೀ ಬಹುವಚನ. ಹಲ್ ಪ್ರತ್ಯಾಹಾರ. ಙೀಪ್, ಆಪ್ ಸ್ತ್ರೀಲಿಂಗ ಬೋಧಕಪ್ರತ್ಯಯ. ಸಮಾಸದಲ್ಲಿ ಏಕದೇಶವಾದರೂ ದೀರ್ಘಾತ್, ಪದವು ಙೀಪ್ ಆಪ್ ಈ ಎರಡರಲ್ಲಿ ಮಾತ್ರ ಅನ್ವಯಹೊಂದುತ್ತದೆ. ಹಲ್‌ನಲ್ಲಿ ಅಸಂಭವವಾದುದರಿಂದ ಅನ್ವಯವಿಲ್ಲ. ದೀರ್ಘಾತ್ ಏಕವಚನ ಕೂಡದಿದ್ದರೂ ಆರ್ಷಪ್ರಯೋಗವಾದುದರಿಂದ ಸಾಧು. ಮುಂದೆ ಸುತಿಸಿ ಪ್ರತ್ಯಯ ಹೇಳಿರುವುದರಿಂದ ಅದರಿಂದ ಪ್ರಕೃತಿಯು ಆಕ್ಷಿಪ್ತವಾಗುತ್ತದೆ. ಆಕ್ಷಿಪ್ತವಾದ ಪ್ರಕೃತಿಗೆ ಹಲ್‌ಙ್ಯಾಭ್ಯಃ ವಿಶೇಷಣ. ಹಲಂತದಪರದಲ್ಲಿರುವ, ದೀರ್ಘವಾದ ಙ್ಯಂತದಪರದಲ್ಲಿರುವ, ದೀರ್ಘವಾದ ಆಪಿನ ಪರದಲ್ಲಿರುವ ಎಂದರ್ಥವಾಗುತ್ತದೆ. ಸು ಚ, ತಿಚ, ಸಿಚ ತೇಷಾಂ ಸಮಾಹಾರಃ ಸುತಿಸಿ. ಅಪೃಕ್ತಮ್, ಹಲ್ ಇವೆರಡೂ ಸುತಿಸಿಯಲ್ಲಿ ಅನ್ವಯಹೊಂದುತ್ತವೆ. ಸುತಿಸಿಯಲ್ಲಿ ಉಕಾರ ಇಕಾರ ಇತ್ತಾಗುವುದರಿಂದ, ಸ್, ತ್, ಸ್ ಉಳಿಯುವುದ

ರಿಂದ ಅಪೃಕ್ತವಾದ ಹಲ್ ಆಗುತ್ತದೆ. "ಲೋಪೋವ್ಯೋರ್ವಲಿ" ಸೂತ್ರದಿಂದ ಲೋಪಃ ಅನುವೃತ್ತಿ. ಲುಪ್ಯತೇ ಇತಿ ಲೋಪಃ ಲೋಪಹೊಂದಲ್ಪಡುವುದು. ಲುಪ್ ಧಾತುವಿಗೆ ಕರ್ಮಣಿಯಲ್ಲಿ ಘಞ್ ಪ್ರತ್ಯಯ ಬಂದಿದೆ. **ಸೂತ್ರಾರ್ಥ.** ಹಲಂತದ ಪರದಲ್ಲಿರುವ, ದೀರ್ಘವಾದ ಙ್ಯಂತದಪರದಲ್ಲಿರುವ, ದೀರ್ಘವಾದ ಆಬಂತದಪರದಲ್ಲಿರುವ ಸು, ತಿ, ಸಿ, ರೂಪವಾದ ಅಪೃಕ್ತವಾದ ಹಲ್ ಲೋಪ ಹೊಂದುತ್ತದೆ. ಇಲ್ಲಿ ಙೀ ಅಂದರೆ ಙೀಪ್, ಙೀಷ್ ಙೀನ್. ಆಪ್ ಎಂದರೆ ಟಾಪ್, ಚಾಪ್, ಡಾಪ್ ಹೀಗೆ ಮೂರುಮೂರುಪ್ರತ್ಯಯಗಳನ್ನು ತೆಗೆದುಕೊಳ್ಳಬೇಕು. ಇವು ಸ್ತ್ರೀಪ್ರತ್ಯಯ ಪ್ರಕರಣದಲ್ಲಿ ವಿವೃತವಾಗುತ್ತವೆ. ತಿ ಸಿ ಧಾತು ಪ್ರತ್ಯಯಗಳನ್ನು ತಿಙಂತದಲ್ಲಿ ಹೇಳುತ್ತಾನೆ. ಪ್ರಕೃತ ಸಖಾನ್+ಸ್ ಎಂಬಲ್ಲಿ ಸ್ ಎಂಬುದು ಅಪೃಕ್ತವಾದ (ಸು) ಹಲ್. ಇದು ಸಖಾನ್ ಎಂಬ ಹಲಂತದಪರದಲ್ಲಿರುವುದರಿಂದ ಲೋಪಹೊಂದುತ್ತದೆ. ಙ್ಯಂತ, ಆಬಂತ ದೀರ್ಘವಾಗಿದ್ದರೂ ಸಮಾಸದಲ್ಲಿ ಹ್ರಸ್ವಬರುವುದರಿಂದ ಅಲ್ಲಿ ಲೋಪವ್ಯಾವೃತ್ತಿಪಡಿಸಲು ದೀರ್ಘವಾಗಿರಬೇಕೆಂದು ಪುನಃ ಹೇಳಿರುವುದು. ಹೀಗೆ ಪ್ರತಿಯೊಂದು ಪದಕ್ಕೂ ಪ್ರಯೋಜನವಿದೆ. ಸಖಾನ್ ಎಂದಿರುವಾಗ ನಕಾರಕ್ಕೆ ಲೋಪ ಹೇಳುತ್ತಾನೆ.

(ಪದಾಂತ ನಕಾರಕ್ಕೆ ಲೋಪ ಹೇಳುವ ಸೂತ್ರ)

## ೧೮೦. ನಲೋಪಃ ಪ್ರಾತಿಪದಿಕಾಂತಸ್ಯ ॥ ೮-೨-೭ ॥

**ಪ್ರಾತಿಪದಿಕಸಂಜ್ಞಕಂ ಯತ್ಪದಂ ತದಂತಸ್ಯ ನಸ್ಯ ಲೋಪಃ ॥ ಸಖಾ**

ನ, ಲೋಪಃ, ಪ್ರಾತಿಪದಿಕ, ಅಂತಸ್ಯ ॥ ನಾಲ್ಕು ಪದವುಳ್ಳ ಸೂತ್ರ. ನ, ಪ್ರಾತಿಪದಿಕ ಇವೆರಡೂ ಷಷ್ಠ್ಯಂತ ಪದಗಳು. ಷಷ್ಠಿಗೆ ಆರ್ಷಲೋಪ. ಅಂತಸ್ಯ ನಕಾರಕ್ಕೆ ವಿಶೇಷಣ. ಅಂತಶಬ್ದವು ಸಾಪೇಕ್ಷಿತವಾದುದರಿಂದ ಯಾವುದರ ಅಂತವೆಂದು ಆಕಾಂಕ್ಷಿತವಾಗುತ್ತದೆ. "ಪದಸ್ಯ" ಅಧಿಕಾರ. ಅಲ್ಲಿ ಅವಯವ ಷಷ್ಠಿಯಾದುದರಿಂದ ಪದದ ಅಂತ್ಯ ಅವಯುವವಾದ ನಕಾರಕ್ಕೆ ಎಂದರ್ಥವಾಗುತ್ತದೆ. ಯಾವ ರೀತಿ ಪದವೆಂದರೆ ಪ್ರಾತಿಪದಿಕವೆಂಬ ಲುಪ್ತಷಷ್ಠೀಕವು ಅಲ್ಲಿ ಅನ್ವಿತವಾಗುತ್ತದೆ. **ಸೂತ್ರಾರ್ಥ** ಪ್ರಾತಿಪದಿಕಸಂಜ್ಞೆಯಿರುವ ಪದದ ಅಂತಾವಯುವವಾದ ನಕಾರಕ್ಕೆ ಲೋಪ. ಸಖಾನ್ ಎಂಬುದು ಪ್ರಾತಿಪದಿಕ. ಇದು ಸುಬಂತವಾದುದರಿಂದ ಪದವೂ ಹೌದು. ಅಂತ್ಯದ ನಕಾರಕ್ಕೆ ಲೋಪ ಬಂದರೆ ಸಖಾ ಎಂದಾಗುತ್ತದೆ. ಮಿತ್ರನು. ದ್ವಿವಚನದಲ್ಲಿ ಸಖಿ+ಔ ಎಂದಿರುವಾಗ ಕಾರ್ಯ ವಿಶೇಷಕ್ಕೋಸ್ಕರ ಪ್ರತ್ಯಯಕ್ಕೆ ಣಿತ್ತಿನ ಭಾವವನ್ನು ಹೇಳುತ್ತಾನೆ.

(ಸರ್ವನಾಮಸ್ಥಾನಕ್ಕೆ ಣಿತ್ತ್ವ ಹೇಳುವ ಸೂತ್ರ)

## ೧೮೧. ಸಖ್ಯುರಸಂಬುದ್ಧೌ ॥ ೭-೧-೯೨ ॥ ॥ ೯೨ ॥

**ಸಖ್ಯುರಂಗಾತ್ ಪರಂ ಸಂಬುದ್ಧಿವರ್ಜಂ ಸರ್ವನಾಮಸ್ಥಾನಂ ಣಿದ್ವತ್ಸ್ಯಾತ್ ॥**

ಸಖ್ಯುಃ, ಅಸಂಬುದ್ಧೌ ॥ ದ್ವಿಪದಸೂತ್ರ. "ಅಂಗಸ್ಯ" ಅಧಿಕಾರ. ಸಖ್ಯುಃ ಪಂಚಮ್ಯಂತವಾದುದರಿಂದ ಅಂಗಾತ್ ಎಂದು ಪಂಚಮ್ಯಂತವಾಗಿ ವಿಪರಿಣಾಮ ಮಾಡಿಕೊಳ್ಳಬೇಕು. ನ ಸಂಬುದ್ಧೌ. ಅಸಂಬುದ್ಧೌ "ಇತೋಽತ್ಸರ್ವನಾಮಸ್ಥಾನೇ" ಸೂತ್ರದಿಂದ ಸರ್ವನಾಮಸ್ಥಾನೇ, "ಗೋತೋ ಣಿತ್" ಸೂತ್ರದಿಂದ "ಣಿತ್" ಅನುವೃತ್ತವಾಗುತ್ತದೆ. ಣಿತ್ ಪ್ರಥಮಾಂತವಾದುದರಿಂದ ಸರ್ವನಾಮಸ್ಥಾನೇ ಅಸಂಬುದ್ಧೌ ಇವೆರಡೂ ಪ್ರಥಮಾಂತವಾಗಿ ವಿಪರಿಣತವಾಗುತ್ತವೆ. **ಸೂತ್ರಾರ್ಥ.** ಸಖಿರೂಪ ಅಂಗದ ಪರದಲ್ಲಿರುವ ಸಂಬುದ್ಧಿವರ್ಜವಾದ ಸರ್ವನಾಮಸ್ಥಾನವು (ಸುಟ್) ಣಿತ್ತಿನಂತೆ ಆಗುತ್ತದೆ. ಇದು ಅತಿದೇಶಸೂತ್ರ. ಸರ್ವನಾಮಸ್ಥಾನವಾದ ಐದು ಪ್ರತ್ಯಯಗಳು ಎಂದೂ ಣಿತ್ತಲ್ಲ ಅಲ್ಲಿ ಣಕಾರವೇ ಇಲ್ಲ. ಹೀಗಿರುವಾಗ ಣಿತ್ ಆಗುತ್ತದೆಯೆಂದರೆ ಣಿತ್ತಿನಂತೆ ಆಗುತ್ತದೆ. ಣಿತ್ತಾದ ಪ್ರತ್ಯಯವಿದ್ದರೆ ಯಾವ ಕಾರ್ಯವಾಗುತ್ತಿತ್ತೋ ಆ ಕಾರ್ಯವು ಸರ್ವನಾಮಸ್ಥಾನವಿದ್ದರೂ ಆಗುತ್ತದೆ ಎಂದರ್ಥ. ಇದೇ ಕಾರ್ಯಾತಿದೇಶ. ಣಿತ್ತಾದರೆ ಬರುವ ಕಾರ್ಯವೇನು? ಎಂಬುದನ್ನು ಮುಂದೆ ಹೇಳುತ್ತಾನೆ.

(ಅಜಂತಾಂಗಕ್ಕೆ ವೃದ್ಧಿಹೇಳುವ ಸೂತ್ರ)

## ೧೮೨. ಅಚೋ ಞ್ಣಿತಿ ॥ ೭-೨-೧೧೫ ॥

**ಅಜಂತಾಂಗಸ್ಯ ವೃದ್ಧಿರ್ಞಿತಿ ಣಿತಿ ಚ ಪರೇ । ಸಖಾಯೌ । ಸಖಾಯಃ । ಹೇ ಸಖೇ । ಸಖಾಯಮ್ । ಸಖಾಯೌ । ಸಖೀನ್ । ಸಖ್ಯಾ । ಸಖ್ಯೇ ॥**

ಅಚಃ ಞ್ಣಿತಿ ॥ ದ್ವಿಪದಸೂತ್ರ. ಅಧಿಕೃತವಾದ "ಅಂಗಸ್ಯ" ಎಂಬುದಕ್ಕೆ "ಅಚಃ" ವಿಶೇಷಣ, ಅಜಂತವಾದ ಅಂಗಕ್ಕೆ ಎಂದರ್ಥವಾಗುತ್ತದೆ. ಞ್ ಚ, ಣ್ ಚ, ಞ್ಣೌ. ಞ್ಣೌ ಇತೌ ಯಸ್ಯ ತತ್ ಞ್ಣಿತ್. ತಸ್ಮಿನ್ ಞ್ಣಿತಿ. ದ್ವಂದ್ವದ ಕೊನೆಯಲ್ಲಿರುವ ಪದವು ದ್ವಂದ್ವಸಮಾಸದ ಪ್ರತ್ಯೇಕ ಪದದಲ್ಲಿಯೂ ಅನ್ವಯವಾಗುವುದರಿಂದ ಞಿತ್, ಣಿತ್ ಎಂದಾಗುತ್ತದೆ. ಸಪ್ತಮಿಯಾದುದರಿಂದ ಞಕಾರ, ಣಕಾರ, ಇತ್ತಾದ ಪ್ರತ್ಯಯಗಳು ಪರವಾದಾಗ ಎಂದರ್ಥವಾಗುತ್ತದೆ. **ಸೂತ್ರಾರ್ಥ.** ಅಜಂತವಾದ ಅಂಗಕ್ಕೆ ಞಿತ್, ಣಿತ್ ಆದ ಪ್ರತ್ಯಯ ಪರವಾದಾಗ ವೃದ್ಧಿ ಬರುತ್ತದೆ. ಪ್ರಕೃತ ಔ ಸರ್ವನಾಮಸ್ಥಾನ ಣಿತ್ತಿನಂತೆ ಆಗುತ್ತದೆ ಎಂದುದರಿಂದ ಅಜಂತವಾದ ಅಂಗ ಸಖಿ ಎಂಬುದಕ್ಕೆ ವೃದ್ಧಿ. ಸ್ಥಾನಸಾಮ್ಯದಿಂದ ಇಕಾರಕ್ಕೆ ಐಕಾರ ವೃದ್ಧಿ. ಸಖೈ+ಔ. "ಏಚೋಽಯವಾಯಾವಃ" ಸೂತ್ರದಿಂದ ಐಕಾರಕ್ಕೆ ಆಯಾದೇಶ. ಸಖ್+ಆಯ್+

ಔ. ಸಖಾಯಾ. ಸಖಿ+ಜಸ್ ಎಂದಿರುವಾಗ ಣಿದ್ವದ್ಭಾವವಿರುವುದರಿಂದ ಈ ಸೂತ್ರದಿಂದಲೇ ವೃದ್ಧಿ ಆಯಾದೇಶ. ಪದಾಂತ ಸಕಾರಕ್ಕೆ ರುತ್ವ ವಿಸರ್ಗ. ಸಖಾಯಃ ಸಂಬುದ್ಧಿಯಲ್ಲಿ ಹೇ ಸಖಿ+ಸ್ ಎಂದಿರುವಾಗ ಸಂಬುದ್ಧಿವರ್ಜ ಸರ್ವನಾಮ ಸ್ಥಾನಕ್ಕೆ ಣಿದ್ವದ್ಭಾವ ಹೇಳಿದುದರಿಂದ ಸುವಿಗೆ ಣಿದ್ವದ್ಭಾವವಿಲ್ಲ. "ಅನಙ್ ಸೌ" ಸೂತ್ರದಲ್ಲಿಯೂ ಸಂಬುದ್ಧಿಯಲ್ಲಿ ನಿಷೇಧಮಾಡಿರುವುದರಿಂದ ಅನಙಾದೇಶವೂ ಬರುವುದಿಲ್ಲ. "ಹ್ರಸ್ವಸ್ಯ ಗುಣಃ" ಸೂತ್ರದಿಂದ ಇಕಾರಕ್ಕೆ ಗುಣ. ಹೇ ಸಖೇ ಸ್. "ಏಙ್ಹ್ರಸ್ವಾತ್ಸಂಬುದ್ಧೇಃ" ಸೂತ್ರದಿಂದ ಸುವಿಗೆ ಲೋಪ. ಹೇ ಸಖೇ. ದ್ವಿವಚನ ಬಹುವಚನಗಳಲ್ಲಿ ಪ್ರಥಮಾದಂತೇರೂಪ. ಹೇ ಸಖಾಯೌ ಹೇ ಸಖಾಯಃ.

ದ್ವಿತೀಯಾ ಏಕವಚನದಲ್ಲಿ ಸಖಿ+ಅಮ್ ಎಂದಿರುವಾಗ ಅಮಿಗೆ ಸರ್ವನಾಮಸ್ಥಾನ ನಿಮಿತ್ತ ಣಿತ್ತ್ವವಿರುವುದರಿಂದ ವೃದ್ಧಿ. ಆಯಾದೇಶ. ಸಖಾಯಮ್ ದ್ವಿವಚನ, ಪ್ರಥಮಾದ್ವಿವಚನದಂತೇ ಆಗಿರುವುದರಿಂದ ಸಖಾಯೌ ಎಂದಾಗುತ್ತದೆ. ಶಸಿನಲ್ಲಿ ಸರ್ವನಾಮಸ್ಥಾನ ಸಂಜ್ಞೆಯಿಲ್ಲದಿರುವುದರಿಂದ ಣಿದ್ವದ್ಭಾವವೂ ಇಲ್ಲ. ಅದನ್ನು ನಿಮಿತ್ತೀಕರಿಸಿ ವೃದ್ಧಿಯೂ ಇಲ್ಲ. ಸಖಿ+ಅಸ್ ಎಂದಿರುವಾಗ "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣದೀರ್ಘ. ಸಖೀಸ್ ಎಂದಾಗ "ತಸ್ಮಾಚ್ಛಸೋಃ ನಃ ಪುಂಸಿ" ಸೂತ್ರದಿಂದ ಸಕಾರಕ್ಕೆ ನಕಾರಾದೇಶ ಸಖೀನ್. ||

ತೃತೀಯಾ ಏಕವಚನದಲ್ಲಿ ಸಖಿ+(ಟ್) ಆ ಎಂದಿರುವಾಗ ಸಖಿ ಶಬ್ದವರ್ಜ ಇಕಾರಾಂತಗಳಿಗೆ 'ಘಿ ಸಂಜ್ಞಾ ಹೇಳಿರುವುದರಿಂದ ಪ್ರತ್ಯಯಕ್ಕೆ ನಾ ಭಾವವಿಲ್ಲ. "ಇಕೋಯಣಚಿ" ಸೂತ್ರದಿಂದ ಯಣಾದೇಶ. ಸಖ್ಯಾ. ಹಲಾದಿ ಪ್ರತ್ಯಯಗಳಲ್ಲಿ ಕೇವಲ ಪ್ರತ್ಯಯಃ ಸೇರಿಸುವುದು. ಸಖಿಭ್ಯಾಮ್, ಸಖಿಭಿಃ || ಚತುರ್ಥೀ ಏಕವಚನದಲ್ಲಿ ಸಖಿ+(ಙ್) ಏ ಎಂದಿರುವಾಗ ಹಿಂದಿನಂತೆ ಯಣಾದೇಶ. ಸಖ್ಯೇ. ದ್ವಿಬಹುವಚನಗಳಲ್ಲಿ ಸಖಿಭ್ಯಾಮ್, ಸಖಿಭ್ಯಃ || ಪಂಚಮೀ ಏಕವಚನದಲ್ಲಿ ಸಖಿ+(ಙ್) ಅಸ್ (ಇ) ಎಂದಿರುವಾಗ ಹಿಂದಿನಂತೆ ಯಣಾದೇಶ, ಸಖ್ಯಸ್. ಇಲ್ಲಿ ಪ್ರತ್ಯಯದ ಅಕಾರಕ್ಕೆ ಉತ್ವ ಹೇಳುತ್ತಾನೆ.

(ಙಸಿ ಙಸ್‌ಗಳ ಅಕಾರಕ್ಕೆ ಉತ್ವ ಹೇಳುವ ಸೂತ್ರ)

## ೧೮೩. ಖ್ಯತ್ಯಾತ್ಪರಸ್ಯ || ೬-೧-೧೧೨ ||

### ಖಿ-ತಿ ಶಬ್ದಾಭ್ಯಾಂ ಖೀ-ತೀ ಶಬ್ದಾಭ್ಯಾಂ ಕೃತಯಣಾದೇಶಾಭ್ಯಾಂ ಪರಸ್ಯ ಙಸಿ ಙಸೋರತ ಉಃ । ಸಖ್ಯುಃ ||

ಖ್ಯತ್ಯಾತ್, ಪರಸ್ಯ || ದ್ವಿಪದಸೂತ್ರ. ಖಿ ಖೀ ಗಳಿಗೂ ತಿ ತೀ ಗಳಿಗೂ ಯಣಾದೇಶ ಮಾಡಿದರೆ ಖ್ಯ ತ್ಯ ಎಂದಾಗುತ್ತದೆ. ಇಲ್ಲಿ ಯ್ ಯಣ್ಣಾದರೂ ಅದರ ಮೇಲೆ ಅಕಾರವು ಉಚ್ಚಾರಣಾರ್ಥವಾಗಿ ಹೇಳಿದೆ, ಖ್ಯಶ್ಚ ತ್ಯಶ್ಚ ತಯೋಃ ಸಮಾ.

ಹಾರಃ ಖ್ಯಿತ್ಯಂ. ತಸ್ಮಾತ್ ಖ್ಯಿತ್ಯಾತ್. "ಏಙಃ ಪದಾಂತಾದತಿ" ಸೂತ್ರದಿಂದ "ಅತಿ" ಅನುವೃತ್ತವಾಗುತ್ತದೆ. ಪರಸ್ಯ ಎಂಬುದಕ್ಕೆ ಅದು ವಿಶೇಷಣವಾದುದರಿಂದ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. "ಙಸಿ ಙಸೋಶ್ಚ" ಸೂತ್ರದಿಂದ "ಙಸಿ ಙಸೋಃ" ಎಂಬುದಕ್ಕೆ ಅನುವೃತ್ತಿ. ಅಲ್ಲಿ ಅವಯವಾರ್ಥದಲ್ಲಿ ಷಷ್ಠೀ. ಙಸಿ ಙಸ್ ಗಳ ಅವಯವವಾದ ಹ್ರಸ್ವಾಕಾರಕ್ಕೆ ಎಂದರ್ಥ. "ಋತ ಉತ್" ಸೂತ್ರದಿಂದ "ಉ" ಅನುವೃತ್ತವಾಗುತ್ತದೆ. ಸೂತ್ರಾರ್ಥ. ಖಿತಿ ಶಬ್ದಗಳಿಗೆ ಖೀತೀ ಶಬ್ದಗಳಿಗೆ ಮಾಡಲ್ಪಟ್ಟ ಯಣಾದೇಶದ ಪರದಲ್ಲಿರುವ ಙಸಿ ಙಸ್ ಪ್ರತ್ಯಯಗಳ ಅಕಾರಕ್ಕೆ ಉಕಾರಾದೇಶ. ಪಂಚಮೀ ಏಕವಚನ, ಷಷ್ಠೀ ಏಕವಚನ ಪರವಾದಾಗ ಖಿ ತಿ, ಖೀ, ತೀ ಗಳಿಗೆ ಯಣ್ ಬಂದಿರಬೇಕು. ಆಗ ಆ ಯಣಿನ ಪರವಾದ ಪ್ರತ್ಯಯದ ಅಕಾರಕ್ಕೆ ಉತ್ವ. ಸಖ್ಯಸ್ ಎಂಬಲ್ಲಿ ಖಿ ಶಬ್ದಕ್ಕೆ ಯಣ್ ಬಂದಿದೆ. ಯಕಾರದ ಪರದಲ್ಲಿ ಙಸಿನ ಅಕಾರವಿರುವುದರಿಂದ ಅದಕ್ಕೆ ಉತ್ವ ಬಂದರೆ ಸಖ್ಯುಸ್ ಎಂದಾಗುತ್ತದೆ. ಸಕಾರಕ್ಕೆ ರುತ್ವ. ವಿಸರ್ಗ ಸಖ್ಯುಃ. ದ್ವಿ ಬಹುವಚನಗಳಲ್ಲಿ ಸಖಿಭ್ಯಾಮ್, ಸಖಿಭ್ಯಃ ||

ಷಷ್ಠೀ ಏಕವಚನದಲ್ಲಿ ಙಸ್ ಪ್ರತ್ಯಯ ಬರುವುದರಿಂದ ಪಂಚಮೀ ಏಕವಚನದಂತೇ ರೂಪ. ಸಖ್ಯುಃ. ದ್ವಿವಚನದಲ್ಲಿ ಓಸ್ ಪರವಾದಾಗ ಯಣಾದೇಶ. ಸಕಾರಕ್ಕೆ ರುತ್ವವಿಸರ್ಗ. ಸಖ್ಯೋಃ. ಬಹುವಚನದಲ್ಲಿ ಆಮ್, ಸಖಿ+ಆಮ್ ಎಂದಿರುವಾಗ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಡಾಗಮ ಸಖಿ+ನಾಮ್ "ನಾಮಿ" ಸೂತ್ರದಿಂದ ದೀರ್ಘ, ಸಖೀನಾಮ್, ಸಪ್ತಮೀ ಏಕವಚನದಲ್ಲಿ ಙಿ ಪ್ರತ್ಯಯ, ಸಖಿ+ಇ ಎಂದಿರುವಾಗ ಙಿಗೆ ಔತ್ವ ಹೇಳುತ್ತಾನೆ,

(ಸಪ್ತಮ್ಯೇಕವಚನಕ್ಕೆ ಔತ್ವ ಹೇಳುವ ಸೂತ್ರ)

## ೧೮೫. ಔತ್ || ೭-೩-೧೧೮ ||

**ಇತಃ ಪರಸ್ಯ ಙೇರೌತ್ | ಸಖ್ಯೌ || ಶೇಷಂ ಹರಿವತ್ ||**

ಏಕಪದಸೂತ್ರ. "ಙೇರಾಮ್ನದ್ಯಾಮ್ನೀಭ್ಯಃ" ಸೂತ್ರದಿಂದ "ಙೇಃ" ಅನುವೃತ್ತವಾಗುತ್ತದೆ. "ಇದುದ್ಭ್ಯಾಮ್" ಸೂತ್ರದ ಏಕದೇಶದಲ್ಲಿ ಸ್ವರಿತ ವಿಧಾನವಿರುವುದರಿಂದ ಇತಃ ಎಂದು ಮಾತ್ರ ಅನುವೃತ್ತವಾಗುತ್ತದೆ. ಅದು ಪಂಚಮಿಯಾದುದರಿಂದ ಪರಕ್ಕೆ ಎಂದು ತಿಳಿಯುತ್ತದೆ. ಸೂತ್ರಾರ್ಥ. ಇಕಾರದ ಪರದಲ್ಲಿರುವ ಙಿಗೆ (ಸಪ್ತಮ್ಯೇಕವಚನ) ಔತ್ ಆದೇಶ ಬರುತ್ತದೆ. ಸಖಿ+ಇ ಎಂದಿರುವಾಗ ಖಕಾರದ ಮೇಲಿರುವ ಇಕಾರದ ಪರದಲ್ಲಿ ಙಿ ಇರುವುದರಿಂದ ಅದಕ್ಕೆ ಔತ್ವ ಬಂದರೆ (ಔತ್—ತಕಾರಕ್ಕೆ "ಹಲಂತ್ಯಮ್" ಇತ್ ಸಂಜ್ಞಾ ಬಂದು ಲೋಪ) ಸಖಿ+ಔ ಎಂದಿರುವಾಗ "ಇಕೋಯಣಚಿ" ಸೂತ್ರದಿಂದ ಯಣಾದೇಶ. ಸಖ್ಯೌ. ದ್ವಿವಚನದಲ್ಲಿ ಸಖಿ+ಓಸ್ ಎಂದಿರುವಾಗ ಯಣಾದೇಶ. ಸಕಾರಕ್ಕೆ ರುತ್ವ ವಿಸರ್ಗ. ಸಖ್ಯೋಃ

ಬಹುವಚನದಲ್ಲಿ ಸು ಪರವಾದಾಗ ಇಣಿನ ಪರದಲ್ಲಿರುವುದರಿಂದ "ಆದೇಶಪ್ರತ್ಯಯಯೋಃ" ಸೂತ್ರದಿಂದ ಷತ್ವ. ಸಖಿಷು. ಸಖಿ ಶಬ್ದದಲ್ಲಿ ವಿಶೇಷಕಾರ್ಯ ಹೇಳದಿದ್ದಲ್ಲಿ ಹರಿ ಶಬ್ದದಂತೇ ರೂಪ.

—೦೦೦—

### ಇಕಾರಂತ ಪತಿ ಶಬ್ದ

ಪತಿಶಬ್ದಕ್ಕೆ ಪ್ರಥಮಾ ದ್ವಿತೀಯೆಯಲ್ಲಿ ಹರಿಶಬ್ದದಂತೇ ರೂಪ.

ಪ್ರಥಮಾ. ಪತಿಃ—ಪತೀ—ಪತಯಃ ॥ ಸಂ. ಪ್ರ—ಹೇ ಪತೇ—ಹೇಪತೀ—ಹೇಪತಯಃ । ದ್ವಿವಚನ. ಪತಿಂ—ಪತೀ—ಪತೀನ್ ॥ ತೃತೀಯಾ ಏಕವಚನದಲ್ಲಿ ಟಾ ಪ್ರತ್ಯಯ ಬಂದಾಗ "ಶೇಷೋಘ್ಯಸಖಿ" ಸೂತ್ರದಿಂದ ಘಿ ಸಂಜ್ಞಾ ಪ್ರಾಪ್ತವಾದರೆ ನಿಯಮ ಸೂತ್ರ ಹೇಳುತ್ತಾನೆ.

(ಘಿ ಸಂಜ್ಞಾ ನಿಯಮಕ ಸೂತ್ರ)

## ೧೮೫. ಪತಿಃ ಸಮಾಸ ಏವ ॥ ೧-೪-೮ ॥

**ಪತಿ ಶಬ್ದಃ ಸಮಾಸ ಏವ ಘಿಸಂಜ್ಞಃ ಸ್ಯಾತ್ ॥ ಪತ್ಯಾ । ಪತ್ಯೇ । ಪತ್ಯುಃ ೨ । ಪತ್ಯೌ ॥ ಶೇಷಂ ಹರಿವತ್ ।**

ಪತಿಃ, ಸಮಾಸೇ, ಏವ । ತ್ರಿಪದಸೂತ್ರ. "ಶೇಷೋಘ್ಯಸಖಿ" ಸೂತ್ರದಿಂದ "ಘಿ" ಪದವು ಅನುವೃತ್ತವಾಗುತ್ತದೆ. ಸೂತ್ರಾರ್ಥ. ಪತಿಶಬ್ದವು ಸಮಾಸದಲ್ಲಿ ಮಾತ್ರ ಘಿಸಂಜ್ಞೆ ಹೊಂದುತ್ತದೆ. ಕೇವಲ ಪತಿಶಬ್ದಕ್ಕೆ ಘಿಸಂಜ್ಞೆ ಬರುವುದಿಲ್ಲ. ಪ್ರಕೃತ ಘಿಸಂಜ್ಞೆ ಇಲ್ಲದಿರುವುದರಿಂದ ಟಾ ವಿಭಕ್ತಿಗೆ "ಆಙೋನಾಽಸ್ತ್ರಿಯಾಮ್" ಸೂತ್ರದಿಂದ ನಾಭಾವ ಬರುವುದಿಲ್ಲ. ಯಣಾದೇಶ. ಪತಿ+ಆ=ಪತ್ಯಾ. ಹಲಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಪತಿಭ್ಯಾಮ್—ಪತಿಭಿಃ ॥ ಚತುರ್ಥಿಯಲ್ಲಿಯೂ ಘಿಸಂಜ್ಞೆ ಇಲ್ಲದುದರಿಂದ "ಘೇರ್ಙಿತಿ" ಸೂತ್ರದಿಂದ ಗುಣವಿಲ್ಲ. ಯಣ್. ಪತ್ಯೇ—ಪತಿಭ್ಯಾಮ್—ಪತಿಭ್ಯಃ ॥ ಪಂಚಮಿಯಲ್ಲಿ ಪತಿ+ಅಸ್ ಎಂದಿರುವಾಗ ಯಣ್. ಪತ್ಯಸ್. ಇಲ್ಲಿ ತಿ ಶಬ್ದಕ್ಕೆ ಯಣಾದೇಶಬಂದು ಅದರ ಪರದಲ್ಲಿ ಙಸಿನ ಅಕಾರ ಬಂದುದರಿಂದ "ಖ್ಯತ್ಯಾತ್ಪರಸ್ಯ" ಸೂತ್ರದಿಂದ ಅಕಾರಕ್ಕೆ ಉಕಾರಾದೇಶ. ಸಕಾರಕ್ಕೆ ರುತ್ವವಿಸರ್ಗ. ಪತ್ಯುಃ—ಪತಿಭ್ಯಾಮ್—ಪತಿಭ್ಯಃ ॥ ಷಷ್ಠೀ, ಸಪ್ತಮಿಯಲ್ಲಿ ಸಖಿಶಬ್ದದಂತೇ ರೂಪ. ಷ—ಪತ್ಯುಃ—ಪತ್ಯೋಃ—ಪತೀನಾಮ್ । ಸ—ಪತ್ಯೌ—ಪತ್ಯೋಃ—ಪತಿಷು ॥

### ॥ ಸಮಾಸೇತು (ಭೂಪತಿನಾ) ಭೂಪತಯೇ ॥

ಸಮಾಸದಲ್ಲಿ ಘಿಸಂಜ್ಞಾ ಬರುತ್ತದೆಯೆಂದುದರಿಂದ, ಭೂಪತಿಯೆಂಬುದು ಸಮಾಸ, ಇದು ಘಿಸಂಜ್ಞೆ ಹೊಂದುವುದರಿಂದ ಹರಿಶಬ್ದದಂತೇ ರೂಪ ಹೊಂದುತ್ತದೆ.

ಭುವಃ ಪತಿಃ ಭೂಪತಿಃ— ಷಷ್ಠೀತತ್ಪುರುಷಸಮಾಸ. ಸಮಾಸದಲ್ಲಿಯಾದರೋ ಭೂಪತಯೇ ಎಂದು ಒಂದುರೂಪ ಮಾತ್ರ ತೋರಿಸಿರುತ್ತಾನೆ. ಇಲ್ಲಿ ಘಿಸಂಜ್ಞಾ ಕಾರ್ಯವನ್ನು ಮಾಡಿ ಹೇಳಿದೆ. ಭೂಪತಿನಾ ಎಂದು ಟಾವಿಭಕ್ತಿಯಲ್ಲಿಯೇ ಘಿಸಂಜ್ಞಾ ಕಾರ್ಯಹೇಳಿದ್ದರೆ ಸಮಂಜಸವಾಗುತ್ತಿತ್ತು. ಮೊದಲನೇಕಾರ್ಯವನ್ನು ಹೇಳಿ ಎರಡನೇದನ್ನು ಹೇಳಬೇಕು. ವೃತ್ತಿಯಲ್ಲಿ ಘಿಸಂಜ್ಞಾಕಾರ್ಯತೋರಿಸು ವುದೇ ಮುಖ್ಯವೆಂದು ಈ ನಿಯಮವನ್ನು ಬಿಟ್ಟಿದ್ದಾರೆ. ಹರಿಶಬ್ದದಂತೆಯೇ ಈ ಶಬ್ದರೂಪಗಳು ಆಗುತ್ತವೆ.

ಪ್ರಥಮಾ—ಭೂಪತಿಃ । ಭೂಪತೀ । ಭೂಪತಯಃ ॥ ಸಂ. ಪ್ರ—ಹೇ ಭೂಪತೇ । ಹೇ ಭೂಪತೀ । ಹೇ ಭೂಪತಯಃ ॥ ದ್ವಿ—ಭೂಪತಿಂ । ಭೂಪತೀ । ಭೂಪತೀನ್ ॥ ತೃ—ಭೂಪತಿನಾ । ಭೂಪತಿಭ್ಯಾಮ್ । ಭೂಪತಿಭಿಃ ॥ ಚ—ಭೂ ಪತಯೇ । ಭೂಪತಿಭ್ಯಾಮ್ । ಭೂಪತಿಭ್ಯಃ ॥ ಪಂ—ಭೂಪತೇಃ । ಭೂಪತಿಭ್ಯಾಮ್ ಭೂಪತಿಭ್ಯಃ ॥ ಷ—ಭೂಪತೇಃ । ಭೂಪತ್ಯೋಃ । ಭೂಪತೀನಾಮ್ ॥ ಸ— ಭೂಪತೌ । ಭೂಪತ್ಯೋಃ । ಭೂಪತಿಷು. ॥ ಹೀಗೆ ಪತಿಶಬ್ದವು ಸಮಾಸಾಂತದಲ್ಲಿರು ವಾಗ ರೂಪವನ್ನು ತಿಳಿಯಬೇಕು.

(ಇಕಾರಾಂತ ಕತಿಶಬ್ದ)

**ಕತಿ ಶಬ್ದೋ ನಿತ್ಯಂ ಬಹುವಚನಾಂತಃ**

ಕಿಮ್ ಶಬ್ದದಮೇಲೆ ಬಹುತ್ವಸಂಖ್ಯಾವಿಶಿಷ್ಟವಸ್ತುವಿಷಯಕಪ್ರಶ್ನೆಯಲ್ಲಿ ಡತಿ ಪ್ರತ್ಯಯವೆಂದು ಭಾಷ್ಯದಲ್ಲಿ ಹೇಳಿದೆ. ಡತಿಯಲ್ಲಿ ಡಕಾರ ಇತ್ (ಚುಟೂ) ಡಿತ್ತಾದುದರಿಂದ ಕಿಮಿನ ಟಿಗೆ (ಇಮ್) ಲೋಪ. ಕ್+ಅತಿ=ಕತಿ. ಬಹುತ್ವ ಹೇಳುವುದರಿಂದ ಇದು ನಿತ್ಯ ಬಹುವಚನಾಂತ. ಎಷ್ಟು ಎಂದರ್ಥ. ಕತಿ+ಜಸ್ ಎಂದಿರುವಾಗ ಪ್ರಕೃತಿಗೆ ಸಂಜ್ಞಾವಿಶೇಷವನ್ನು ಹೇಳುತ್ತಾನೆ.

(ಸಂಖ್ಯಾಸಂಜ್ಞೆ ಹೇಳುವ ಸೂತ್ರ)

## ೧೮೬. ಬಹುಗಣವತುಡತಿ ಸಂಖ್ಯಾ ॥ ೧-೧-೨೩ ॥

**ಏತೇ ಸಂಜ್ಞಾಃ ಸ್ಯುಃ ॥**

ದ್ವಿಪದ ಸೂತ್ರ. ಬಹುಶ್ಚ, ಗಣಶ್ಚ, ವತುಶ್ಚ, ಡತಿಶ್ಚ ತೇಷಾಂ ಸಮಾಹಾರಃ ಬಹುಗಣವತುಡತಿ. ವತು, ಡತಿ ಪ್ರತ್ಯಯಗಳಾದುದರಿಂದ "ಪ್ರತ್ಯಯಗ್ರಹಣೇ ತದಂತ ಗ್ರಹಣಮ್" ಪರಿಭಾಷೆಯಿಂದ ತದಂತವನ್ನು ತೆಗೆದುಕೊಳ್ಳಬೇಕು. **ಸೂತ್ರಾರ್ಥ.** ಬಹುಗಣ ಶಬ್ದಗಳೂ ವತು, ಡತಿ, ಪ್ರತ್ಯಯಾಂತ ಶಬ್ದಗಳೂ "ಸಂಖ್ಯಾ" ಎಂಬ ಸಂಜ್ಞೆಯನ್ನು ಹೊಂದುತ್ತವೆ. ಪ್ರಕೃತ ಕತಿ ಶಬ್ದವು ಡತ್ಯಂತ ಶಬ್ದವಾದುದರಿಂದ ಇದಕ್ಕೆ ಸಂಖ್ಯಾ ಎಂಬ ಸಂಜ್ಞೆ ಬರುತ್ತದೆ. ಈ ಸಂಜ್ಞೆಗೆ ಇಲ್ಲಿ

ಪ್ರಯೋಜನವಿಲ್ಲ. ಇದನ್ನು ಉದ್ದೇಶಿಸಿ ಮುಂದೆ "ಷಟ್" ಎಂಬ ಸಂಜ್ಞೆ ಹೇಳು. ವುದರಿಂದ ಮೊದಲು ಸಂಖ್ಯಾ ಸಂಜ್ಞೆಯನ್ನು ಹೇಳಿರುತ್ತಾನೆ.

("ಷಟ್" ಸಂಜ್ಞೆಯನ್ನು ಹೇಳುವ ಸೂತ್ರ)

## ೧೮೭. ಡತಿ ಚ ‖ ೧-೧-೨೫ ‖

**ಡತ್ಯಂತಾ ಸಂಖ್ಯಾ ಷಟ್ಸಂಜ್ಞಾ ಸ್ಯಾತ್ ‖**

ದ್ವಿಪದ ಸೂತ್ರ. ‖ "ಷ್ಣಾಂತಾ ಷಟ್" ಸೂತ್ರದಿಂದ "ಷಟ್" ಹಿಂದಿನ ಸೂತ್ರದಿಂದ "ಸಂಖ್ಯಾ" ಪದವೂ ಅನುವೃತ್ತವಾಗುತ್ತವೆ. ಡತಿಯೆಂದು ಯಾವ ವಿಭಕ್ತಿಯೂ ಇಲ್ಲದೆ ಹೇಳಿರುತ್ತಾನೆ. ಇದು ಪ್ರತ್ಯಯವಾದುದರಿಂದ ತದಂತವನ್ನು ತೆಗೆದುಕೊಳಬೇಕು. **ಸೂತ್ರಾರ್ಥ.** ಡತ್ಯಂತವಾದ ಸಂಖ್ಯಾ ಸಂಜ್ಞೆಯುಳ್ಳ ಶಬ್ದವು "ಷಟ್" ಎಂಬ ಸಂಜ್ಞೆಯನ್ನು ಹೊಂದುತ್ತದೆ. ಕತಿ ಶಬ್ದವು ಡತ್ಯಂತ ಸಂಖ್ಯಾವಾಚಕವಾದುದರಿಂದ ಅದಕ್ಕೆ ಷಟ್ ಸಂಜ್ಞೆ ಬರುತ್ತದೆ. ಈ ಸಂಜ್ಞೆಗೆ ಪ್ರಯೋಜನವನ್ನು ಹೇಳುತ್ತಾನೆ.

(ಜಸ್ ಶಸ್‌ಗಳಿಗೆ ಲುಕ್ ಹೇಳುವ ಸೂತ್ರ)

## ೧೮೮. ಷಡ್ಭ್ಯೋ ಲುಕ್ ‖ ೭-೧-೨೨ ‖

**ಷಡ್ಭ್ಯಃ ಪರಯೋಃ ಜಶ್ಶಸೋಃ ಲುಕ್ ಸ್ಯಾತ್ ‖**

ಷಡ್ಭ್ಯಃ, ಲುಕ್ ‖ ದ್ವಿಪದ ಸೂತ್ರ. "ಜಶ್ಶಸೋಃ ಶಿಃ" ಸೂತ್ರದಿಂದ "ಜಶ್ಶಸೋಃ" ಅನುವೃತ್ತಿ. ಷಡ್ಭ್ಯಃ ಪಂಚಮಿಯಾದುದರಿಂದ ಪರಕ್ಕೆ ಕಾರ್ಯ. **ಸೂತ್ರಾರ್ಥ.** ಷಟ್ ಸಂಜ್ಞೆಯುಳ್ಳ ಅಂಗದ ಪರದಲ್ಲಿರುವ ಜಸ್, ಶಸ್ ಪ್ರತ್ಯಯಗಳಿಗೆ ಲುಕ್ ಬರುತ್ತದೆ. ಕತಿ+ಶಸ್ ಎಂದಿರುವಾಗ ಕತಿ ಶಬ್ದಕ್ಕೆ ಷಟ್ ಸಂಜ್ಞೆ ಇರುವುದರಿಂದ ಪ್ರತ್ಯಯಗಳಿಗೆ ಲುಕ್. ಲುಕ್ ಎಂದರೂ ಲೋಪವೆಂದು ಮುಂದಿನ ಸೂತ್ರದಿಂದ ವಿವರಿಸುತ್ತಾನೆ.

(ಲುಕ್. ಶ್ಲು, ಲುಪ್ ಸಂಜ್ಞೆ ಹೇಳುವ ಸೂತ್ರ)

## ೧೮೯. ಪ್ರತ್ಯಯಸ್ಯ ಲುಕ್‌ಶ್ಲುಲುಪಃ ‖ ೧-೧-೬೧ ‖

**ಲುಕ್, ಶ್ಲು, ಲುಪ್‌ಶಬ್ದೈಃ ಕೃತಂ ಪ್ರತ್ಯಯಾದರ್ಶನಂ ಕ್ರಮಾತ್ ತತ್ತತ್ಸಂಜ್ಞಂ ಸ್ಯಾತ್ ‖**

ದ್ವಿಪದ ಸೂತ್ರ. ‖ ಲುಕ್ ಚ ಶ್ಲುಚ, ಲುಪ್ ಚ ಲುಕ್‌ಶ್ಲುಲುಪಃ । "ಅದರ್ಶನಂ ಲೋಪಃ" ಸೂತ್ರದಿಂದ "ಅದರ್ಶನಂ" ಅನುವೃತ್ತಿ. ಲುಕ್‌ಶ್ಲು ಲುಪಃ ಎಂಬುದು ಆವೃತ್ತವಾಗುತ್ತದೆ. (ಎರಡುಸಲ ಹೇಳಿಕೊಳ್ಳಬೇಕು),

ಸೂತ್ರಾರ್ಥ. ಲುಕ್, ಶ್ಲು, ಲುಪ್ ಎಂದು ಉಚ್ಚರಿಸಿ ಹೇಳಿದ ಪ್ರತ್ಯಯದ ಅದರ್ಶನವು (ಅದರ್ಶನ ಇಲ್ಲಿ ಅನುಚ್ಚಾರಣೆ) ಕ್ರಮವಾಗಿ ಲುಕ್, ಶ್ಲು, ಲುಪ್ ಸಂಜ್ಞೆಯನ್ನು ಹೊಂದುತ್ತದೆ. ಎಲ್ಲಿ ಲುಕ್, ಶಬ್ದ ಹೇಳಿ ಲೋಪಮಾಡು ವನೋ ಅಲ್ಲಿ ಆ ಲೋಪಕ್ಕೆ ಲುಕ್ ಎಂದು ಹೆಸರು. ಇಲ್ಲಿ "ಷಡ್ಭ್ಯೋಲುಕ್" ಎಂದು ಲುಕ್ ಹೇಳಿರುವುದರಿಂದ ಜಸ್ ಶಸಿಗೆ ಲೋಪವೆನ್ನಬಾರದು. ಲುಕ್ ಎಂದೇ ಹೇಳಬೇಕು. ಲೋಪವೆಂದರೆ ಸಾಮಾನ್ಯಸಂಜ್ಞೆ. ಲುಗಾದಿಮೂರು ವಿಶೇಷಸಂಜ್ಞೆ. "ಜುಹೋತ್ಯಾದಿಭ್ಯಃ ಶ್ಲುಃ" ಜುಹೋತ್ಯಾದಿಗಳ ಪರದಲ್ಲಿರುವ ಶಪಿಗೆ ಶ್ಲು ಬರುತ್ತದೆ. ಇಲ್ಲಿ ಶಪ್‌ಪ್ರತ್ಯಯಾದರ್ಶನಕ್ಕೆ ಶ್ಲು ಎಂದೇ ಹೇಳಬೇಕು. ಹೀಗೆ ವಿಶೇಷಸಂಜ್ಞೆ ಹೇಳಿದುದಕ್ಕೆ ಕಾರ್ಯವಿಶೇಷ ಹೇಳುತ್ತಾನೆ.

(ಪ್ರತ್ಯಯಾಶ್ರಿತಕಾರ್ಯ ಹೇಳುವ ಸೂತ್ರ)

## ೧೯೦. ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್

॥ ೧-೧-೬೨ ॥

**ಪ್ರತ್ಯಯೇ ಲುಪ್ತೇ ತದಾಶ್ರಿತಂ ಕಾರ್ಯಂ ಸ್ಯಾತ್ । ಇತಿ ಜಸಿ ಚೇತಿ ಗುಣೇ ಪ್ರಾಪ್ತೇ ॥**

ದ್ವಿಪದ ಸೂತ್ರ. ಪ್ರತ್ಯಯಃ ಲಕ್ಷಣಂ=ನಿಮಿತ್ತಂ ಯಸ್ಯ ತತ್—ಪ್ರತ್ಯಯ ಲಕ್ಷಣಮ್. ಪ್ರತ್ಯಯವೇ ನಿಮಿತ್ತವಾಗಿರುವುದು. ಸೂತ್ರಾರ್ಥ. ಪ್ರತ್ಯಯ ಲೋಪವಾದರೂ ಆ ಪ್ರತ್ಯಯ ನಿಮಿತ್ತಿಕ ಕಾರ್ಯವು ಬರುತ್ತದೆ. ಎಲ್ಲಿಯಾದರೂ ಪ್ರತ್ಯಯ ಲೋಪವಾದಾಗ ಪ್ರತ್ಯಯ ಇಲ್ಲವೆಂದು ಅದನ್ನು ನಿಮಿತ್ತೀಕರಿಸಿ ಬರುವ ಕಾರ್ಯ ಮಾಡದಿರಬಾರದು. ಪ್ರತ್ಯಯ ಇದೆಯೆಂದೇ ತಿಳಿದು ಆ ಕಾರ್ಯವನ್ನು ಮಾಡಬೇಕು ಪ್ರಕೃತ, ಕತಿ+ಜಸ್ ಎಂದಿರುವಾಗ ಜಸ್ ಲುಕ್ಕಾಗಿ ಕತಿ ಎಂದು ಉಳಿದಿದೆ. ಇಲ್ಲಿ ಜಸ್ ಇದ್ದಿದ್ದರೆ "ಜಸಿ ಚ" ಸೂತ್ರದಿಂದ ಗುಣ ಬರುತ್ತಿತ್ತು. ಈಗ ಜಸ್ ಇಲ್ಲವೆಂದು ಗುಣ ಮಾಡದಿರಬಾರದು. ಜಸ್ ಇದೆಯೆಂದೇ ತಿಳಿದು ಇಕಾರಕ್ಕೆ ಗುಣ ಹೇಳಬೇಕು. ಎಂದು ಈ ಸೂತ್ರ ಬೋಧಿಸುತ್ತದೆ. ಪ್ರತ್ಯಯಕ್ಕೆ ಸ್ಥಾನಿವದ್ಭಾವ ಹೇಳಿದಂತಾಗುತ್ತದೆ. ಪ್ರಕೃತ ಕತಿ ಎಂಬಲ್ಲಿ ಇಕಾರಕ್ಕೆ ಗುಣ ಪ್ರಾಪ್ತವಾದರೆ ನಿಷೇಧ ಹೇಳುತ್ತಾನೆ.

(ಲುಗಾದಿಗಳಿಂದ ಲೋಪವಾದಲ್ಲಿ ಅಂಗಕಾರ್ಯ ನಿಷೇಧ ಹೇಳುವ ಸೂತ್ರ)

## ೧೯೧. ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್

॥ न लुमताऽङ्गस्य ॥ ॥ ೧-೧-೬೩ ॥

**ಲುಮತಾ ಶಬ್ದೇನ ಲುಪ್ತೇ ತನ್ನಿಮಿತ್ತಮಂಗಕಾರ್ಯಂ ನ ಸ್ಯಾತ್ ॥ ಕತಿ ೨ । ಕತಿಭಿಃ । ಕತಿಭ್ಯಃ ೨ । ಕತೀನಾಮ್ । ಕತಿಷು ॥ ಯುಷ್ಮದಸ್ಮತ್ ಷಟ್ ಸಂಜ್ಞಕಾಸ್ತ್ರಿಷು ಸರೂಪಾಃ ।**

ನ, ಲುಮತಾ, ಅಂಗಸ್ಯ ॥ ತ್ರಿಪದಸೂತ್ರ. "ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್" ಸೂತ್ರವು ಅನುವೃತ್ತವಾಗುತ್ತದೆ. ಲು ಅಸ್ಯಾಸ್ತೀತಿ ಲುಮಾನ್ ತೇನ ಲುಮತಾ । ಲು ಎಂಬುದರಿಂದ ಕೂಡಿರುವುದು ಲುಕ್, ಶ್ಲು, ಲುಪ್, ಈ ಮೂರರಲ್ಲಿಯೂ ಲು ಇರುವುದರಿಂದ ಇವು ಲುಮಂತಗಳು. ಸೂತ್ರಾರ್ಥ. ಲುಕ್, ಶ್ಲು, ಲುಪ್, ಇವುಗಳಿಂದ ಪ್ರತ್ಯಯಲೋಪಮಾಡಿದಾಗ ಅಲ್ಲಿ ಆ ಪ್ರತ್ಯಯವನ್ನು ನಿಮಿತ್ತೀಕರಿಸಿ ಅಂಗಕ್ಕೆ ಕಾರ್ಯವು ಬರುವುದಿಲ್ಲ. ಪ್ರಕೃತ ಜಸ್ ಲುಕ್‌ಶಬ್ದದಿಂದ ಅದರ್ಶನವನ್ನು ಹೊಂದಿದೆ. ಆದುದರಿಂದ ಲುಮತಾಲುಪ್ತವಾಯಿತು. ಇಲ್ಲಿ ಜಸನ್ನು ನಿಮಿತ್ತೀಕರಿಸಿ ಅಂಗಕ್ಕೆ ಗುಣರೂಪಕಾರ್ಯ ಬರುವುದಿಲ್ಲ. ಕತಿಯೆಂದೇ ಇರುತ್ತದೆ. ತೃತೀಯಾ ಬಹುವಚನದಲ್ಲಿಯೂ ಶಸಿಗೆ ಲುಕ್ ಬರುವುದರಿಂದ ಕತಿಯೆಂದೇ ರೂಪ. ಹಲಾದಿಯಾದ ಭಿಸ್, ಭ್ಯಸ್‌ಗಳಲ್ಲಿ ಕತಿಭಿಃ, ಕತಿಭ್ಯಃ ಎಂದಾಗುತ್ತದೆ. ಷಷ್ಠೀ ಬಹುವಚನದಲ್ಲಿ ಕತಿ+ಆಮ್ ಎಂದಿರುವಾಗ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಡಾಗಮ. "ನಾಮಿ" ಅಂಗಕ್ಕೆ ದೀರ್ಘ. ಕತೀನಾಮ್. ಸಪ್ತಮಿಯಲ್ಲಿ ಕತಿಷು. "ಆದೇಶಪ್ರತ್ಯಯಯೋಃ" ಸೂತ್ರದಿಂದ ಪ್ರತ್ಯಯಕ್ಕೆ ಷತ್ವಬಂದಿದೆ. ಪ್ರಸಂಗಸಂಗತಿಯಿಂದ ಈ ಕತಿಶಬ್ದದಲ್ಲಿ ವಿಶೇಷವನ್ನು ಹೇಳುತ್ತಾನೆ. "ಯುಷ್ಮದ್–।" ಯುಷ್ಮದ್ ಅಸ್ಮದ್ ಶಬ್ದಗಳೂ (ನೀನು, ನಾನು) ಷಟ್ ಸಂಜ್ಞೆಯಿರುವ ಶಬ್ದಗಳೂ ಮೂರು ಲಿಂಗಗಳಲ್ಲಿಯೂ ಒಂದೇ ರೂಪವನ್ನು ಹೊಂದುತ್ತವೆ. ರೂಪವ್ಯತ್ಯಾಸವಿಲ್ಲ. ಕತಿಶಬ್ದಕ್ಕೆ ಷಟ್ ಸಂಜ್ಞೆ ಇರುವುದರಿಂದ ಪುಂಸ್ತ್ರೀನಪುಂಸಕಲಿಂಗಗಳಲ್ಲಿ ಒಂದೇರೀತಿಯಾಗಿರುತ್ತದೆ.

---

## ತ್ರಿ ಶಬ್ದ.

**ತ್ರಿಶಬ್ದೋ ನಿತ್ಯಂ ಬಹುವಚನಾಂತಃ । ತ್ರಯಃ । ತ್ರೀನ್ । ತ್ರಿಭಿಃ । ತ್ರಿಭ್ಯಃ ೨ ॥**

ಬಹುತ್ವಸಂಖ್ಯಾವಾಚಕವಾಗಿರುವುದರಿಂದ ತ್ರಿಶಬ್ದವು ನಿತ್ಯಬಹುವಚನಾಂತವಾಗಿರುತ್ತದೆ. ಏಕವಚನ ದ್ವಿವಚನಗಳಿಲ್ಲ. ತ್ರಿ+ಜಸ್ ಎಂದಿರುವಾಗ "ಜಸಿಚ" ಸೂತ್ರದಿಂದ ಗುಣ, ತ್ರೇ+ಅಸ್. ಅಯಾದೇಶ. ಸಕಾರಕ್ಕೆ ರುತ್ವವಿಸರ್ಗ. ತ್ರಯಃ. ಶಸಿನಲ್ಲಿ "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣದೀರ್ಘ. ತ್ರೀಸ್. "ತಸ್ಮಾಚ್ಛಸೋ ನಃ ಪುಂಸಿ" ಸೂತ್ರದಿಂದ ಸಕಾರಕ್ಕೆ ನತ್ವ. ತ್ರೀನ್. ಹಲಾದಿಯಲ್ಲಿ ವಿಭಕ್ತಿಯನ್ನು ಸೇರಿಸುವುದು ಮಾತ್ರ. ತೃ-ತ್ರಿಭಿಃ, ಚ-ತ್ರಿಭ್ಯಃ, ಪಂ-ತ್ರಿಭ್ಯಃ ॥ ತ್ರಿಶಬ್ದಕ್ಕೆ ಷಷ್ಠೀ ಬಹುವಚನದಲ್ಲಿ ಆಮ್ ಬಂದಾಗ ಪ್ರಕೃತಿಗೆ ಆದೇಶ ಹೇಳುತ್ತಾನೆ.

(ತ್ರಿಗೆ ತ್ರಯಾದೇಶ ಹೇಳುವ ಸೂತ್ರ)

## ೧೯೨. ತ್ರೇಸ್ತ್ರಯಃ ॥ ೭-೧-೫೩ ॥

**ತ್ರಿಶಬ್ದಸ್ಯ ತ್ರಯಾದೇಶಃ ಸ್ಯಾದಾಮಿ । ತ್ರಯಾಣಾಮ್ । ತ್ರಿಷು । ಗೌಣತ್ವೇಽಪಿ ಪ್ರಿಯತ್ರಯಾಣಾಮ್ ॥**

ತ್ರೇಃ, ತ್ರಯಃ । ದ್ವಿಪದಸೂತ್ರ. "ಆಮಿ ಸರ್ವನಾಮ್ನಃ ಸುಟ್" ಸೂತ್ರದಿಂದ "ಆಮಿ" ಅನುವೃತ್ತವಾಗುತ್ತದೆ. ಅಂಗಾಧಿಕಾರದಲ್ಲಿ ಹೇಳಿದ ಸೂತ್ರ. **ಸೂತ್ರಾರ್ಥ.** ತ್ರಿಶಬ್ದರೂಪವಾದ ಅಂಗಕ್ಕೆ ಆಮ್ ಪರವಾದಾಗ "ತ್ರಯ" ಆದೇಶ ಬರುತ್ತದೆ. ಆದೇಶವು ಅನೇಕಾಲಾದುದರಿಂದ "ಅನೇಕಾಲ್‌ಶಿತ್ ಸರ್ವಸ್ಯ" ಪರಿಭಾಷೆಯಿಂದ ಸರ್ವಾದೇಶವಾಗಿ ಬರುತ್ತದೆ. ತ್ರಯ+ಆಮ್ ಎಂದಿರುವಾಗ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಡಾಗಮ. "ನಾಮಿ" ಅಜಂತಾಂಗಕ್ಕೆ ದೀರ್ಘ. ತ್ರಯಾನಾಮ್. "ಅಟ್‌ಕುಪ್ವಾಙ್‌ನುಮ್‌ವ್ಯವಾಯೇಽಪಿ" ಸೂತ್ರದಿಂದ ನಕಾರಕ್ಕೆ ಣತ್ವ. ತ್ರಯಾಣಾಮ್. ಸಪ್ತಮಿಯಲ್ಲಿ ಪ್ರತ್ಯಯಸಕಾರಕ್ಕೆ ಷತ್ವ. ತ್ರಿಷು. "ಗೌಣತ್ವೇಽಪಿ" ॥ "ಗೌಣಮುಖ್ಯಯೋಃ ಮುಖ್ಯೇ ಕಾರ್ಯಸಂಪ್ರತ್ಯಯಃ" ಎಂದು ಪರಿಭಾಷೆ. ಒಂದು ಪ್ರಧಾನ, ಇನ್ನೊಂದು ಅಪ್ರಧಾನ (ಗೌಣ) ಇವುಗಳ ಮಧ್ಯೆ ಕಾರ್ಯಬರುವುದಾದರೆ ಮುಖ್ಯ (ಪ್ರಧಾನ) ವಾದುದಕ್ಕೇ ಕಾರ್ಯಬರುತ್ತದೆಂದು ಈ ಪರಿಭಾಷೆ ತಿಳಿಸುತ್ತದೆ. ಪ್ರಧಾನವೆಂದರೆ ಅದರ ಅರ್ಥವು ಇನ್ನೊಂದುಕಡೆ ವಿಶೇಷಣವಾಗಿರುವುದು. ಅಪ್ರಧಾನವೆಂದರೆ ಅದರ ಅರ್ಥವು ಇನ್ನೊಂದರಲ್ಲಿ ವಿಶೇಷಣವಾಗಿರುವುದು. ತ್ರಯಃ ಎಂದರೆ ಮೂರು ಎಂದು ಅರ್ಥವಾಗುವುದರಿಂದ ಇದು ಪ್ರಧಾನ. ಪ್ರಿಯವಾದ ಮೂರು ಉಳ್ಳವನು. ಪ್ರಿಯತ್ರಿಃ. ಇಲ್ಲಿ ಮೂರು ಎಂಬುದು ಇನ್ನೊಂದರಲ್ಲಿ ವಿಶೇಷಣವಾದುದರಿಂದ ಅಪ್ರಧಾನ. ಪ್ರಿಯತ್ರಿ ಶಬ್ದ ಹರಿಶಬ್ದದಂತೇ ಆಗುತ್ತದೆ. ಆಮಿನಲ್ಲಿ ತ್ರಿಶಬ್ದಕ್ಕೆ ತ್ರಯಾದೇಶ ಬರುತ್ತದೆಯೇ ಇಲ್ಲವೇ ಎಂದು ಜಿಜ್ಞಾಸೆ ಬಂದರೆ ಹಿಂದೆ ಹೇಳಿದ ಪರಿಭಾಷೆಯಿಂದ ಅಪ್ರಧಾನವಾದುದರಿಂದ ಇಲ್ಲವೆಂದು ಕೆಲವರ ಅಭಿಪ್ರಾಯ. ಗ್ರಂಥಕಾರನು ಅಪ್ರಧಾನವಾದರೂ ಬರುತ್ತದೆಯೆಂದು ಹೇಳುತ್ತಾನೆ. ಗೌಣಮುಖ್ಯನ್ಯಾಯವು ಪದಕಾರ್ಯದಲ್ಲಿ ಮಾತ್ರವೆಂದೂ ಇದು ಅಂಗಕಾರ್ಯವಾದುದರಿಂದ ಬರಲು ಯಾವ ಅಭ್ಯಂತರವೂ ಇಲ್ಲವೆಂದು ಅವರ ಮತ. ಪ್ರಿಯತ್ರಯಾಣಾಮ್. ಉಳಿದೆಡೆಗಳಲ್ಲಿ ಹರಿಶಬ್ದದಂತೇ ರೂಪವನ್ನು ತಿಳಿಯಬೇಕು. ಪ್ರಿಯವಾದ ಮೂರು ಉಳ್ಳವನು ಎಂದುದರಿಂದ ಇಲ್ಲಿ ಏಕವಚನ ದ್ವಿಚನಗಳೂ ಇವೆ. ಮೂರು ಉಳ್ಳವನು ಅನ್ಯನು.

---

### ದ್ವಿ ಶಬ್ದ

ಇದು ದ್ವಿತ್ವ ಸಂಖ್ಯಾವಾಚಕವಾದುದರಿಂದ ನಿತ್ಯ ದ್ವಿವಚನಾಂತ. ಪ್ರಥಮಾ ದ್ವಿವಚನದಲ್ಲಿ ಔ ಬಂದಾಗ ಪ್ರಕೃತಿಗೆ ಅಕಾರವನ್ನು ವಿಧಿಸುತ್ತಾನೆ.

(ತ್ಯದಾದಿಗಳಿಗೆ ಅಕಾರ ಹೇಳುವ ಸೂತ್ರ)

## ೧೯೩. ತ್ಯದಾದೀನಾಮಃ ॥ ೭-೨-೧೦೨ ॥

**ಏಷಾಮಕಾರೋ ವಿಭಕ್ತೌ । (ದ್ವಿಪರ್ಯಂತಾನಾಮೇವೇಷ್ಟಿಃ)**
**ದ್ವೌ ೨ । ದ್ವಾಭ್ಯಾಮ್ ೩ । ದ್ವಯೋಃ ೨ ।**

ತ್ಯದಾದೀನಾಮ್, ಅಃ । ದ್ವಿಪದ ಸೂತ್ರ. "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ವಿಭಕ್ತೌ" ಪದಕ್ಕೆ ಅನುವೃತ್ತಿ. ತ್ಯದ್ ಆದಿಃ ಏಷಾಂತೇ ತ್ಯದಾದಯಃ ತೇಷಾಂ ತ್ಯದಾದೀನಾಮ್. **ಸೂತ್ರಾರ್ಥ.** ತ್ಯದ್ ಮುಂತಾದ ಶಬ್ದಗಳಿಗೆ ವಿಭಕ್ತಿ ಪರವಾದಾಗ ಅಕಾರಾದೇಶ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯಕ್ಕೆ ಆದೇಶ. ತ್ಯದಾದಿಗಳು ಸರ್ವನಾಮ ಗಣದಲ್ಲಿ ಪಠಿತವಾಗಿವೆ. ತ್ಯದ್ ಮೊದಲಾದವುಗಳು ಅನೇಕಗಳಾದರೂ ದ್ವಿಶಬ್ದದವರೆಗೇ ತೆಗೆದುಕೊಳ್ಳಬೇಕೆಂದು ಭಾಷ್ಯಕಾರರ ಅಭಿಪ್ರಾಯ. ಭಾಷ್ಯಕಾರರ ಸ್ವಂತ ಅಭಿಪ್ರಾಯಕ್ಕೆ ಇಷ್ಟಿಯೆಂದು ಹೆಸರು. ಪ್ರಕೃತ ದ್ವಿಶಬ್ದವು ತ್ಯದಾದಿಯಲ್ಲಿ ಸೇರಿರುವುದರಿಂದ ಔ ವಿಭಕ್ತಿ ಪರವಾದಾಗ ಅತ್ವ ಬರುತ್ತದೆ. ಇಕಾರಕ್ಕೆ ಅತ್ವಬಂದರೆ ದ್ವ+ಔ, "ವೃದ್ಧಿರೇಚಿ" ವೃದ್ಧಿ. ದ್ವೌ. ದ್ವಿತೀಯಾದಲ್ಲಿಯೂ ಔಟ್ ಪ್ರತ್ಯಯವಾದುದರಿಂದ ಇದೇರೀತಿ ಅತ್ವವೃದ್ಧಿ. ತೃ. ಚ, ಪಂ—ಗಳಲ್ಲಿ ಭ್ಯಾಮ್ ಪ್ರತ್ಯಯ. ಅತ್ವ ಬಂದರೆ "ಸುಪಿ ಚ" ಸೂತ್ರದಿಂದ ದೀರ್ಘ. ದ್ವಾಭ್ಯಾಮ್ (೩) ಷ, ಸ—ಗಳಲ್ಲಿ ಓಸ್ ಪ್ರತ್ಯಯ. ಅತ್ವ. "ಓಸಿಚ" ಸೂತ್ರದಿಂದ ಅಕಾರಕ್ಕೆ ಏಕಾರ. "ಏಚೋಯವಾಯಾವಃ" ಸೂತ್ರದಿಂದ ಅಯಾದೇಶ. ದ್ವಯೋಃ, (೨)

**ಇತಿ ಇಕಾರಾಂತಾಃ**



ಈಕಾರಾಂತ ಪಪೀ ಶಬ್ದ

**ಪಾತಿ ಲೋಕಮಿತಿ ಪಪೀಃ ಸೂರ್ಯಃ ॥**

ಪಪೀ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾನೆ. "ಯಾಪೋಃ ಕಿದ್ದ್ವೇಚ" ಔಣಾದಿಕ ಸೂತ್ರ. ಯಾ, ಪಾ ಧಾತುವಿಗೆ ಈ ಪ್ರತ್ಯಯ. ಧಾತುವಿಗೆ ದ್ವಿತ್ವ. ಪ್ರತ್ಯಯ ಕಿತ್ತಿನಂತಾಗುತ್ತದೆ ಎಂದುದರಿಂದ ಪ್ರಕೃತ ಪಾಧಾತುವಿಗೆ ಈ ಪ್ರತ್ಯಯ ಬಂದು ದ್ವಿತ್ವ ಬಂದರೆ ಪಾಪಾ+ಈ ಆಗುತ್ತದೆ. ಮೊದಲಿನ ಪಾ ಎಂಬುದಕ್ಕೆ ಹ್ರಸ್ವವೂ ಎರಡನೇದರ ಆಕಾರಕ್ಕೆ "ಆತೋಲೋಪ ಇಟಿಚ" ಸೂತ್ರದಿಂದ ಲೋಪವೂ ಬಂದರೆ ಪಪೀ ಎಂದಾಗುತ್ತದೆ. ಲೋಕವನ್ನು ರಕ್ಷಿಸುವವನು. ಸೂರ್ಯ. ಪಪೀ ಸ್—ರುತ್ವ ವಿಸರ್ಗ. ಪಪೀಃ. ದ್ವಿವಚನದಲ್ಲಿ ಔ ಪರವಾದಾಗ ಪೂರ್ವ ಸವಣದೀರ್ಘಪ್ರಾಪ್ತವಾದರೆ,

## ೧೯೪. ದೀರ್ಘಾಜ್ಜಸಿ ಚ ॥ ೬-೧-೧೦೫ ॥

**ಪಪ್ಯೌ ೨ ॥ ಪಪ್ಯಃ ॥**

ಈ ಸೂತ್ರವು ವ್ಯಾಖ್ಯಾತವಾಗಿದೆ. (ಸೂ. ೧೬೨) ದೀರ್ಘದಪರದಲ್ಲಿ ಇಚ್ ಬಂದುದರಿಂದ ನಿಷೇಧಬಂದರೆ "ಇಕೋಽಯಣಚಿ" ಸೂತ್ರದಿಂದ ಯಣಾದೇಶ. ಪಪ್ಯೌ. ದ್ವಿತೀಯಾ ದ್ವಿವಚನದಲ್ಲಿಯೂ ಇದೇರೂಪ. ಜಸ್‌ಪ್ರತ್ಯಯ ಪರವಾದಾಗಲೂ ಈ ಸೂತ್ರದಿಂದ ನಿಷೇಧಬರುವುದರಿಂದ ಯಣಾದೇಶ. ಸಕಾರಕ್ಕೆ ರುತ್ವ, ವಿಸರ್ಗ. ಪಪ್ಯಃ ॥

**ಪಪೀಮ್ । ಪಪೀನ್ । ಪಪ್ಯಾ । ಪಪೀಭ್ಯಾಮ್ ೩ । ಪಪೀಭಿಃ । ಪಪ್ಯೇ । ಪಪೀಭ್ಯಃ ೨ । ಪಪ್ಯಃ ೨ । ಪಪ್ಯೋಃ ೨ ॥ ದೀರ್ಘತ್ವಾನ್ನ ನುಟ್, ಪಪ್ಯಾಮ್ । ಙೌ ತು ಸವರ್ಣದೀರ್ಘಃ, ಪಪೀ । ಪಪೀಷು ॥ ಏವಂ ವಾತಪ್ರಮ್ಯಾದಯಃ ।**

ದ್ವಿತೀಯಾದಲ್ಲಿ ಅಮ್‌ಪರವಾದಾಗ "ಅಮಿ ಪೂರ್ವಃ" ಪೂರ್ವರೂಪ. ಪಪೀಮ್. ದ್ವಿ–ಪಪ್ಯೌ. ಬಹುವಚನದಲ್ಲಿ ಶಸ್ ಬಂದಾಗ, "ಪ್ರಥಮಯೋಃ"–ಸೂತ್ರದಿಂದ ಪೂರ್ವಸವರ್ಣದೀರ್ಘ. "ತಸ್ಮಾಚ್ಛಸೋನಃ ಪುಂಸಿ" ಸೂತ್ರದಿಂದ ಸಕಾರಕ್ಕೆ ನಕಾರಾದೇಶ ಪಪೀನ್. ತೃತೀಯಾದಲ್ಲಿ ಟಾಪರವಾದಾಗ ಯಣಾದೇಶ. ಪಪೀ+ಆ—ಪಪ್ಯಾ । ತೃ. ಚ, ಪ. ಭ್ಯಾಮ್ ಪರವಾದಾಗ ಒಂದೇ ರೂಪ. ಪಪೀಭ್ಯಾಮ್. ಬಹುವಚನದಲ್ಲಿ ಪಪೀಭಿಃ । ಚತುರ್ಥೀ ಕಾರ್ಯವೇನೂ ಇಲ್ಲ. ಪಪೀಭ್ಯಾಮ್. ಬಹುವಚನದಲ್ಲಿ ಪಪೀಭಿಃ । ಚತುರ್ಥೀ ಏಕವಚನದಲ್ಲಿ ಪಪೀ+(ಙ್) ಏ ಯಣಾದೇಶ. ಪಪ್ಯೇ. ಭ್ಯಸಿನಲ್ಲಿ ಪಪೀಭ್ಯಃ. ಪಂ. ಬಹುವಚನದಲ್ಲಿಯೂ ಹೀಗೇ ರೂಪ. ಪಂ. ಷಷ್ಠೀ ಏಕವಚನಗಳಲ್ಲಿ ಅಸ್ ಬಂದಾಗ ಯಣಾದೇಶ. ಸಕಾರಕ್ಕೆ ರುತ್ವವಿಸರ್ಗ. ಪಪ್ಯಃ ೨. ಷಷ್ಠೀ, ಸಪ್ತಮೀ ದ್ವಿವಚನಗಳಲ್ಲಿ ಓಸ್ ಬಂದಾಗ ಯಣ್. ರುತ್ವವಿಸರ್ಗ. ಪಪ್ಯೋಃ ೨. ಷಷ್ಠೀ ಬಹುವಚನದಲ್ಲಿ ಆಮ್. ಪಪೀ+ಆಮ್ ಎಂದಿರುವಾಗ ದೀರ್ಘದ ಪರದಲ್ಲಿ ಆಮಿರುವುದರಿಂದ ನುಡಾಗಮ (ಹ್ರಸ್ವನದ್ಯಾಪೋನುಟ್) ಬರುವುದಿಲ್ಲ. ಯಣ್. ಪಪ್ಯಾಮ್. ಸಪ್ತಮೀ ಏಕವಚನದಲ್ಲಿ ಪಪೀ+(ಙ್) ಇ ಎಂದಿರುವಾಗ "ಅಕಃ ಸವರ್ಣೇದೀರ್ಘಃ "ಅಕಃ ಸವರ್ಣೇದೀರ್ಘಃ" ಸೂತ್ರದಿಂದ ಸವರ್ಣದೀರ್ಘ. ಪಪೀ. ಬಹುವಚನದಲ್ಲಿ ಷತ್ವ. ಪಪೀಷು. ಹೀಗೆಯೇ ವಾತಪ್ರಮೀಮುಂತಾದ ಶಬ್ದಗಳ ರೂಪವನ್ನು ತಿಳಿಯಬೇಕು.

### ಈಕಾರಾಂತ "ಬಹುಶ್ರೇಯಸೀ" ಶಬ್ದ

**ಬಹ್ವ್ಯಃ ಶ್ರೇಯಸ್ಯೋ ಯಸ್ಯ ಸಃ ಬಹುಶ್ರೇಯಸೀ ।**

ಬಹಳವಾದ ಪ್ರಾಶಸ್ತ್ಯವಿರುವ ಸ್ತ್ರೀಯರು ಉಳ್ಳವನು (ಪುರುಷ). ಬಹುವ್ರೀಹಿ ಸಮಾಸ. ಪ್ರಶಸ್ಯ ಶಬ್ದಕ್ಕೆ ಈಯಸುನ್ ಪ್ರತ್ಯಯ ಬಂದಾಗ "ಪ್ರಶಸ್ಯಸ್ಯ

ತ್ರಃ" ಸೂತ್ರದಿಂದ ಪ್ರಕೃತಿಗೆ ಶ್ರ ಆದೇಶ. ಈಯಸಂತ ಬಹುವ್ರೀಹಿಗೆ ಹ್ರಸ್ವ ನಿಷೇಧ ಮಾಡಿರುವುದರಿಂದ ಸಮಾಸಾಂತದಲ್ಲಿ ಹ್ರಸ್ವ ಬರುವುದಿಲ್ಲ. ಶ್ರೇಯಸೀ ಎಂಬಲ್ಲಿ "ಉಗಿತಶ್ಚ" ಸೂತ್ರದಿಂದ ಸ್ತ್ರೀಲಿಂಗದಲ್ಲಿ ಙೀಪ್ ಪ್ರತ್ಯಯ ಬರುವುದರಿಂದ ದೀರ್ಘ ಙ್ಯಂತವಾದ ಶಬ್ದ. ಬಹುಶ್ರೇಯಸೀ+ಸ್ ಎಂದಿರುವಾಗ ದೀರ್ಘಙ್ಯಂತದ ಪರದಲ್ಲಿ ಸು ಬಂದುದರಿಂದ "ಹಲ್ಙ್ಯಾಭ್ಯೋದೀರ್ಘಾತ್...." ಸೂತ್ರದಿಂದ ಸುವಿಗೆ ಲೋಪ. ಬಹುಶ್ರೇಯಸೀ. ಔ ಪರವಾದಾಗ ದೀರ್ಘದ ಪರದಲ್ಲಿ ಇಚ್ ಬಂದುದ ರಿಂದ ಪೂರ್ವಸವರ್ಣದೀರ್ಘ ಬರುವುದಿಲ್ಲ. ಯಣ್. ಬಹುಶ್ರೇಯಸ್ಯೌ-ಬಹುವಚನ ದಲ್ಲಿಯೂ ಯಣ್. ಬಹುಶ್ರೇಯಸ್ಯಃ ಸಂಬುದ್ಧಿಯಲ್ಲಿ ಸು ಪರವಾದಾಗ ಕಾರ್ಯ ವಿಶೇಷಕೋಸ್ಕರ ಪ್ರಕೃತಿಗೆ ನದೀ ಸಂಜ್ಞೆ ಹೇಳುತ್ತಾನೆ.

(ನದೀ ಸಂಜ್ಞಾ ಹೇಳುವ ಸೂತ್ರ)

## ೧೯೫. ಯೂ ಸ್ತ್ರ್ಯಾಖ್ಯೌ ನದೀ ॥೧-೪-೩॥

**ಈದೂದಂತೌ ನಿತ್ಯಸ್ತ್ರೀಲಿಂಗೌ ನದೀಸಂಜ್ಞೌ ಸ್ತಃ ॥ ವಾ ॥ (ಪ್ರಥಮಲಿಂಗಗ್ರಹಣಂಚ) ಪೂರ್ವಂ ಸ್ತ್ರ್ಯಾಖ್ಯಸ್ಯೋಪ ಸರ್ಜನತ್ವೇಽಪಿ ನದೀತ್ವಂ ವಕ್ತವ್ಯಮಿತ್ಯರ್ಥಃ ॥**

ಯೂ, ಸ್ತ್ರ್ಯಾಖ್ಯೌ, ನದೀ ॥ ತ್ರಿಪದಸೂತ್ರ. ಇಶ್ಚ ಊಶ್ಚ ಯೂ (ಈ+ಊ ಯಣ್. ಯ್+ಊ=ಯೂ) ದೀರ್ಘವಾದ ಈಕಾರ, ಊಕಾರಗಳು. ದ್ವಿವಚನ ಪರವಾದಾಗ ಪೂರ್ವಸವರ್ಣದೀರ್ಘ ಬಂದಿದೆ. ಸ್ತ್ರಿಯಮಾಚಕ್ಷಾತೇ ಇತಿ ಸ್ತ್ರ್ಯಾಖ್ಯೌ. ಸ್ತ್ರೀಲಿಂಗವನ್ನು ಹೇಳುವ ಶಬ್ದಗಳು. ಯೂ ಅದಕ್ಕೆ ವಿಶೇಷಣವಾದುದರಿಂದ ತದಂತ ಲಾಭ. ಈಕಾರಾಂತ ಊಕಾರಾಂತ ಸ್ತ್ರೀಲಿಂಗ ಶಬ್ದಗಳು. ಇಲ್ಲಿ ಆಖ್ಯೌ ಎಂದುದ ರಿಂದ ನಿತ್ಯಸ್ತ್ರೀಲಿಂಗವೆಂಬ ಅರ್ಥ ಸಿಗುತ್ತದೆ. **ಸೂತ್ರಾರ್ಥ** ಈಕಾರಾಂತ ವಾದ ನಿತ್ಯಸ್ತ್ರೀಲಿಂಗ ಶಬ್ದಗಳು "ನದೀ" ಎಂಬ ಸಂಜ್ಞೆಯನ್ನು ಹೊಂದು ತ್ತವೆ. ಪ್ರಕೃತ ಬಹುಶ್ರೇಯಸೀ ಶಬ್ದವು ಪುಲ್ಲಿಂಗವಾದುದರಿಂದ ಹೇಗೆ ನದೀ ಸಂಜ್ಞೆ ಬರುತ್ತದೆ ಎಂದು ಆಶಂಕೆ ಬಂದರೆ ವಾರ್ತಿಕದಲ್ಲಿ ಸಮಾಧಾನ ಹೇಳು ತ್ತಾನೆ. "ಪ್ರಥಮ....॥" ಪ್ರಥಮಸ್ಯ=ಸಮಾಸ ಬರಬೇಕಾದರೆ ಮೊದಲು ಇರುವ ಲಿಂಗಸ್ಯ=ಸ್ತ್ರೀಲಿಂಗಕ್ಕೆ ಈ ಸೂತ್ರದಲ್ಲಿ ಗ್ರಹಣವಿದೆ ಎಂದರ್ಥ. ಇದೇ ಅರ್ಥ ವನ್ನು ವೃತ್ತಿಯಲ್ಲಿ ಸ್ಪಷ್ಟವಾಗಿ ವಿವರಿಸುತ್ತಾನೆ. "ಪೂರ್ವಮಿತಿ ॥" ಪೂರ್ವಂ ಎಂದರೆ ಸಮಾಸಾದಿ ವೃತ್ತಿ ಬರಬೇಕಾದರೆ ಮೊದಲು (ಸ್ತ್ರ್ಯಾಖ್ಯಸ್ಯ) ನಿತ್ಯ ಸ್ತ್ರೀಲಿಂಗವಾಚಕ ಶಬ್ದಕ್ಕೆ ಈಗ (ಉಪಸರ್ಜನತ್ವೇಽಪಿ) ಸಮಾಸದಲ್ಲಿ ಅಪ್ರಾಧಾನ್ಯ ವಿದ್ದರೂ ನದೀಸಂಜ್ಞಾ ಹೇಳಬೇಕು ಎಂದರ್ಥ. ಪ್ರಕೃತ ಬಹುಶ್ರೇಯಸೀ ಶಬ್ದದಲ್ಲಿ ಶ್ರೇಯಸೀ ಬೇರೆ ಇದ್ದಾಗ ನಿತ್ಯ ಸ್ತ್ರೀಲಿಂಗವಾಗಿತ್ತು. ಈಗ ಸಮಾಸದಲ್ಲಿ ಅನ್ಯಪದಾರ್ಥ (ಪುರುಷ) ದಲ್ಲಿ ವಿಶೇಷಣವಾಗಿ ಅಪ್ರಧಾನವಾಗಿದೆ. ಆದರೂ ನದೀ

ಸಂಜ್ಞೆಗೆ ಬಾಧಕವಿಲ್ಲ. ಹೀಗೆ ಸಂಬುದ್ಧಿಯಲ್ಲಿ ನದೀ ಸಂಜ್ಞೆಯಿರುವುದರಿಂದ ಅದನ್ನು ನಿಮಿತ್ತೀಕರಿಸಿ ಬರುವ ಕಾರ್ಯವನ್ನು ಹೇಳುತ್ತಾನೆ.

(ನದೀಗೆ ಹ್ರಸ್ವ ಹೇಳುವ ಸೂತ್ರ)

## ೧೯೬. ಅಂಬಾರ್ಥನದ್ಯೋರ್ಹ್ರಸ್ವಃ ॥ ೭-೩-೧೦೭ ॥

**ಅಂಬಾರ್ಥಾನಾಂ ನದ್ಯಂತಾನಾಂ ಚ ಹ್ರಸ್ವಃ ಸ್ಯಾತ್ಸಂಬುದ್ಧೌ ॥ ಹೇ ಬಹುಶ್ರೇಯಸಿ ॥**

ಅಂಬಾರ್ಥನದ್ಯೋಃ, ಹ್ರಸ್ವಃ ॥ ದ್ವಿಪದ ಸೂತ್ರ. "ಅಂಗಸ್ಯ" ಅಧಿಕಾರ. ನದೀ ಅದಕ್ಕೆ ವಿಶೇಷಣ. "ಸಂಬುದ್ಧೌ ಚ" ಸೂತ್ರದಿಂದ ಸಂಬುದ್ಧೌ" ಅನುವೃತ್ತಿ. ಅಂಬಾರ್ಥ ಶಬ್ದಗಳು ಅಂದರೆ ಅಂಬಾ (ತಾಯಿ) ಪರ್ಯಾಯ ಶಬ್ದಗಳು. ಅಕ್ಕಾ, ಅಲ್ಲಾ ಮುಂತಾದವುಗಳು. **ಸೂತ್ರಾರ್ಥ.** ಅಂಬಾರ್ಥವನ್ನು ಕೊಡುವ ಶಬ್ದಗಳಿಗೂ ನದ್ಯಂತವಾದ ಶಬ್ದಗಳಿಗೂ ಸಂಬುದ್ಧಿ (ಸು) ಪರವಾದಾಗ ಹ್ರಸ್ವ ಬರುತ್ತದೆ. ಹೇ ಬಹುಶ್ರೇಯಸಿ. ಸುವಿಗೆ ಹಿಂದಿನಂತೇ ಹ್ರಸ್ವಾಂತದ ಪರದಲ್ಲಿರುವುದರಿಂದ ಲೋಪ. ದ್ವಿ, ಬಹುವಚನಗಳಲ್ಲಿ ಹಿಂದಿನಂತೇ ಯಣ್. ಹೇ ಬಹುಶ್ರೇಯಸ್ಯೌ, ಹೇ ಬಹುಶ್ರೇಯಸ್ಯಃ । ದ್ವಿತೀಯಾದಲ್ಲಿ ಅಮಿನಲ್ಲಿ "ಅಮಿ ಪೂರ್ವಃ" ಪೂರ್ವ ರೂಪ. ಬಹುಶ್ರೇಯಸೀಮ್. ಔಟಿನಲ್ಲಿ ಯಣ್. ಬಹುಶ್ರೇಯಸ್ಯೌ. ಶಸಿನಲ್ಲಿ ಪೂರ್ವ ಸವರ್ಣದೀರ್ಘ. ನತ್ವ. ಬಹುಶ್ರೇಯಸೀನ್. ತೃತೀಯಾದಲ್ಲಿ - ದೀರ್ಘಾಂತವಾದುದರಿಂದ ಘಿ ಸಂಜ್ಞಾ ಇಲ್ಲ. ಟಾ ಪರವಾದಾಗ ಯಣಾದೇಶ. ಬಹುಶ್ರೇಯಸೀ+ಆ=ಬಹುಶ್ರೇಯಸ್ಯಾ. ಹಲಾದಿಯಲ್ಲಿ ವಿಭಕ್ತಿ ಸೇರಿಸುವುದು ಮಾತ್ರ. ಬಹುಶ್ರೇಯಸೀಭ್ಯಾಮ್-ಬಹುಶ್ರೇಯಸೀಭಿಃ-ಚತುರ್ಥಿಯಲ್ಲಿ ಙೇ ಪ್ರತ್ಯಯ. ಬಹುಶ್ರೇಯಸೀ+ಏ ಎಂದಿರುವಾಗ ಪ್ರತ್ಯಯಕ್ಕೆ ಆಡಾಗಮ ಹೇಳುತ್ತಾನೆ.

(ಙಿತ್ತಾದ ಸುಪಿಗೆ ಆಡಾಗಮ ಹೇಳುವ ಸೂತ್ರ)

## ೧೯೭. ಆಣ್ನದ್ಯಾಃ ॥ ೭-೩-೧೧೨ ॥

**ನದ್ಯಂತಾತ್ಪರೇಷಾಂ ಙಿತಾಮಾಡಾಗಮಃ ।**

ಆಟ್, ನದ್ಯಾಃ ॥ ದ್ವಿಪದ ಸೂತ್ರ. "ಅಂಗಸ್ಯ" ಅಧಿಕಾರ. ನದ್ಯಾಃ ಅಂಗಕ್ಕೆ ವಿಶೇಷಣ. "ಘೇರ್ಙಿತಿ" ಸೂತ್ರದಿಂದ "ಙಿ" ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. "ಅಂಗಸ್ಯ" ಎಂಬುದೂ ವಿಶೇಷಣಾನುಸಾರವಾಗಿ ಪಂಚಮ್ಯಂತವಾಗಿ ಪರಿಣಾಮ ಮಾಡಿಕೊಳ್ಳಬೇಕು. ಆಟ್ ಟಿತ್ತಾದುದರಿಂದ ಆಗಮ. **ಸೂತ್ರಾರ್ಥ.** ನದ್ಯಂತವಾದ ಅಂಗದ ಪರದಲ್ಲಿರುವ ಙಿತ್ ಪ್ರತ್ಯಯಗಳಿಗೆ ಆಡಾಗಮ ಬರುತ್ತದೆ. ಬಹುಶ್ರೇಯಸೀ ನದ್ಯಂತವಾದ ಅಂಗ. ಇದರ

ಪರವಾದ ಙಿತ್ತಾದ (ಙ್ + ಏ) ಏಗೆ ಆಡಾಗಮ. "ಆದ್ಯಂತೌ ಟಕಿತೌ" ಸೂತ್ರದಿಂದ ಟಿತ್ತಾದುದರಿಂದ ಆದ್ಯವಯವವಾಗಿ ಬಂದರೆ ಬಹುಶ್ರೇಯಸೀ+ಆ+ಏ ಎಂದಿರುವಾಗ ವೃದ್ಧಿ ಹೇಳುತ್ತಾನೆ.

(ಆಟನಲ್ಲಿ ವೃದ್ಧಿ ಹೇಳುವ ಸೂತ್ರ)

## ೧೯೮. ಆಟಶ್ಚ ॥ ೬-೧-೯೦ ॥

**ಆಟೋಽಚಿ ಪರೇ ವೃದ್ಧಿರೇಕಾದೇಶಃ ಬಹುಶ್ರೇಯಸ್ಯೈ ॥ ಬಹುಶ್ರೇಯಸ್ಯಾಃ । ಬಹುಶ್ರೇಯಸೀನಾಮ್ ।**

ಆಟಃ, ಚ । ದ್ವಿಪದ ಸೂತ್ರ. "ಇಕೋಯಣಚಿ" ಸೂತ್ರದಿಂದ "ಅಚಿ" "ವೃದ್ಧಿರೇಚಿ" ಸೂತ್ರದಿಂದ, "ವೃದ್ಧಿಃ" ಅನುವೃತ್ತವಾಗುತ್ತದೆ. "ಏಕಃ ಪೂರ್ವಪರಯೋಃ" ಅಧಿಕಾರ. **ಸೂತ್ರಾರ್ಥ.** ಆಟಗೆ ಅಚ್ ಪರವಾದಾಗ ಪೂರ್ವಪರ ಸ್ಥಾನದಲ್ಲಿ ವೃದ್ಧಿಯು ಏಕಾದೇಶವಾಗಿ ಬರುತ್ತದೆ. ಬಹುಶ್ರೇಯಸೀ+ಆ+ಏ ಎಂದಿರುವಾಗ ಆ, ಏಗಳಿಗೆ ವೃದ್ಧಿ ಐಕಾರ ಏಕಾದೇಶವಾಗಿ ಬಂದರೆ ಬಹುಶ್ರೇಯಸೀ+ಐ ಎಂದಾಗುತ್ತದೆ. ಯಣಾದೇಶ. ಬಹುಶ್ರೇಯಸ್ಯೈ. ಬಹುಶ್ರೇಯಸೀಭ್ಯಾಮ್–ಬಹುಶ್ರೇಯಸೀಭ್ಯಃ ॥ ಪಂಚಮಿಯಲ್ಲಿ ಙಸಿ ಪ್ರತ್ಯಯ ಙಿತ್ತಾದುದರಿಂದ "ಆಣ್ ನದ್ಯಾಃ" ಸೂತ್ರದಿಂದ ಆಡಾಗಮ. ವೃದ್ಧಿ. ಪ್ರಕೃತಿಯೊಡನೆ ಯಣಾದೇಶ. ಬಹುಶ್ರೇಯಸೀ+ಆ+ಅಸ್, ಬಹುಶ್ರೇಯಸ್ಯಾಸ್. ಸಕಾರಕ್ಕೆ ರುತ್ವವಿಸರ್ಗ. ಬಹುಶ್ರೇಯಸ್ಯಾಃ—ಬಹುಶ್ರೇಯಸೀಭ್ಯಾಮ್-ಬಹುಶ್ರೇಯಸೀಭ್ಯಃ ॥

ಷಷ್ಠೀ ಏಕವಚನದಲ್ಲಿ ಹಿಂದಿನಂತೇ ರೂಪ. ಬಹುಶ್ರೇಯಸ್ಯಾಃ. ಓಸ್ ಪರವಾದಾಗ ಯಣಾದೇಶ. ಸಕಾರಕ್ಕೆ ರುತ್ವವಿಸರ್ಗ. ಬಹುಶ್ರೇಯಸ್ಯೋಃ. ಬಹುವಚನದಲ್ಲಿ ಆಮ್ ಬಂದಾಗ ಬಹುಶ್ರೇಯಸೀ+ಆಮ್ ಎಂದಿರುವಾಗ ನದ್ಯಂತವಾದುದರಿಂದ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಡಾಗಮ. ಬಹುಶ್ರೇಯಸೀನಾಮ್ ॥ ಸಪ್ತಮೀ ಏಕವಚನದಲ್ಲಿ ಙಿ ಪ್ರತ್ಯಯ. ಬಹುಶ್ರೇಯಸೀ+ಇ ಎಂದಿರುವಾಗ ಪ್ರತ್ಯಯಕ್ಕೆ ಆಮ್ ಆದೇಶಹೇಳುತ್ತಾನೆ.

(ಙಿಪ್ರತ್ಯಯಕ್ಕೆ ಆಮ್ ಹೇಳುವ ಸೂತ್ರ)

## ೧೯೯. ಙೇರಾಮ್ನದ್ಯಾಮ್ನೀಭ್ಯಃ ॥ ೭-೩-೧೧೬ ॥

**ನದ್ಯಂತಾತ್, ಆಬಂತಾತ್, ನೀಶಬ್ದಾಚ್ಚ ಪರಸ್ಯ ಙೇರಾಮ್ । ಬಹುಶ್ರೇಯಸ್ಯಾಮ್ । ಶೇಷಂ ಪಠೀವತ್ ॥**

ಙೇಃ. ಆಮ್, ನದ್ಯಾಮ್ನೀಭ್ಯಃ । ತ್ರಿಪದಸೂತ್ರ. "ಅಂಗಸ್ಯ" ಅಧಿಕಾರ ಪಂಚಮ್ಯಂತವಾಗಿ ವಿಪರಿಣಾಮಮಾಡಿಕೊಳ್ಳಬೇಕು. ನದೀ, ಆಪ್ ಆದಕ್ಕೆ ವಿಶೇಷಣ. ತದಂತವಿಧಿ. ಙೇಃ ಸಪ್ತಮ್ಯೇಕವಚನದ ಷಷ್ಠೀ. **ಸೂತ್ರಾರ್ಥ.** ನದ್ಯಂ

ತವಾದ, ಆಬಂತವಾದ, ಅಂಗದ, ಸೀ ಶಬ್ದರೂಪ ಅಂಗದ ಪರದಲ್ಲಿರುವ ಙಿಪ್ರತ್ಯಯಕ್ಕೆ ಆಮ್ ಆದೇಶ. ಅನೇಕಾಲ್ ಆದುದರಿಂದ "ಅನೇಕಾಲ್ ಶಿತ್ ಸರ್ವಸ್ಯ" ಸೂತ್ರದಿಂದ ಸರ್ವಾದೇಶ. ಬಹುಶ್ರೇಯಸೀ ನದ್ಯಂತವಾದುದರಿಂದ ಅದರ ಪರದ ಙಿಗೆ ಆಮ್ ಬಂದರೆ ಬಹುಶ್ರೇಯಸೀ+ಆಮ್ ಎಂದಿರುವಾಗ ಪ್ರತ್ಯಯು ಙಿತ್ತಾದುದರಿಂದ "ಆಣ್ನದ್ಯಾಃ" ಸೂತ್ರದಿಂದ ಆಟಾಗಮ. ಬಹುಶ್ರೇಯಸೀ+ಆ-ಆಮ್.
ವೃದ್ಧಿ. ಸವರ್ಣದೀರ್ಘ. ಬಹುಶ್ರೇಯಸೀ+ಆಮ್ ಯಣ್. ಬಹು ಶ್ರೇಯಸ್ಯಾಮ್. ದ್ವಿ ಬಹುವಚನಗಳಲ್ಲಿ ಬಹುಶ್ರೇಯಸ್ಯೋಃ-ಬಹುಶ್ರೇಯಸೀಷು. ಇಲ್ಲಿ ವಿಶೇಷಪ್ರಕ್ರಿಯೆ ಹೇಳದಿರುವಾಗ ಪಪೀ ಶಬ್ದದಂತೇ ರೂಪ.

ಈಕಾರಾಂತ ಅತಿಲಕ್ಷ್ಮೀ ಶಬ್ದ.

**ಅತಿಲಕ್ಷ್ಮೀಃ । ಅಙ್ಯಂತತ್ವಾತ್ ನ ಸುಲೋಪಃ । ಶೇಷಂ ಬಹುಶ್ರೇಯಸೀವತ್ ॥**

ಲಕ್ಷ್ಮೀಂ ಅತಿಕ್ರಾಂತಃ ಲಕ್ಷ್ಮಿಯನ್ನು ಮೀರಿದವನು, ಅತಿಲಕ್ಷ್ಮೀ. ಸಮಾಸದಲ್ಲಿ ಪುಲ್ಲಿಂಗ. ಲಕ್ಷ್ಮೀಶಬ್ದ ಙ್ಯಂತವಲ್ಲ. "ಲಕ್ಷೇರ್ಮುಟ್ ಚ" ಉಣಾದಿಸೂತ್ರದಿಂದ ಲಕ್ಷಧಾತುವಿಗೆ ಈ ಪ್ರತ್ಯಯ. ಮುಟ್ ಆಗಮ. ಲಕ್ಷ್+ಮ್+ಈ= ಲಕ್ಷ್ಮೀ. ಈ ಪ್ರತ್ಯಯಾಂತಶಬ್ದ. ಅತಿಲಕ್ಷ್ಮೀ+ಸ್ ಎಂದಿರುವಾಗ ದೀರ್ಘವಾದರೂ ಙೀ ಪ್ರತ್ಯಯಾಂತವಲ್ಲದಿರುವುದರಿಂದ "ಹಲ್ಙ್ಯಾಭ್ಯೋ-" ಸೂತ್ರದಿಂದ ಸುವಿಗೆ ಲೋಪವಿಲ್ಲ. ರುತ್ವವಿಸರ್ಗ. ಅತಿಲಕ್ಷ್ಮೀಃ. ದ್ವಿಬಹುವಚನಗಳಲ್ಲಿ ಯಣ್. ಅತಿಲಕ್ಷ್ಮ್ಯೌ ಅತಿಲಕ್ಷ್ಮ್ಯಃ. ಇಲ್ಲಿಯೂ ಲಕ್ಷ್ಮೀಶಬ್ದಕ್ಕೆ ಪ್ರಾಧಾನ್ಯವಿಲ್ಲವಾದರೂ ಹಿಂದೆ ಹೇಳಿದ ವಾರ್ತಿಕದಿಂದ ಸಮಾಸವಾಗಬೇಕಾದರೆ ಮೊದಲು ನಿತ್ಯ ಸ್ತ್ರೀಲಿಂಗವಾದುದರಿಂದ ನದೀಸಂಜ್ಞೆ ಬರುತ್ತದೆ. ಆದುದರಿಂದ ಸಂಬುದ್ಧ್ಯಾದಿ ವಿಭಕ್ತಿಗಳಲ್ಲಿ ಬಹುಶ್ರೇಯಸೀ ಶಬ್ದದಂತೇ ಆಗುತ್ತದೆ. ಸಂ—ಹೇ ಅತಿಲಕ್ಷ್ಮಿ । ಹೇ ಅತಿಲಕ್ಷ್ಮ್ಯೌ । ಹೇ ಅತಿಲಕ್ಷ್ಮ್ಯಃ ॥ ದ್ವಿ—ಅತಿಲಕ್ಷ್ಮೀಂ । ಅತಿಲಕ್ಷ್ಮ್ಯೌ । ಅತಿಲಕ್ಷ್ಮೀನ್ ॥ ತೃತೀಯಾ—ಅತಿಲಕ್ಷ್ಮ್ಯಾ । ಅತಿಲಕ್ಷ್ಮೀಭ್ಯಾಂ । ಅತಿಲಕ್ಷ್ಮೀಭಿಃ ॥ ಚ—ಅತಿಲಕ್ಷ್ಮ್ಯೈ । ಅತಿಲಕ್ಷ್ಮೀಭ್ಯಾಂ । ಅತಿಲಕ್ಷ್ಮೀಭ್ಯಃ ॥ ಪ—ಅತಿಲಕ್ಷ್ಮ್ಯಾಃ । ಅತಿಲಕ್ಷ್ಮೀಭ್ಯಾಮ್ । ಅತಿಲಕ್ಷ್ಮೀಭ್ಯಃ ॥ ಷ-ಅತಿಲಕ್ಷ್ಮ್ಯಾಃ । ಅತಿಲಕ್ಷ್ಮ್ಯೋಃ । ಅತಿಲಕ್ಷ್ಮೀನಾಮ್ ॥ ಸ—ಅತಿಲಕ್ಷ್ಮ್ಯಾಮ್ । ಅತಿಲಕ್ಷ್ಮ್ಯೋಃ ಅತಿಲಕ್ಷ್ಮೀಷು ॥

---

ಈಕಾರಾಂತ ಪ್ರಧೀ ಶಬ್ದ

**ಪ್ರಧೀಃ ॥**

ಪ್ರಧ್ಯಾಯತಿ—ಚನ್ನಾಗಿ ಧ್ಯಾನಮಾಡುವವನು ಪ್ರಧೀಃ ॥ ಪ್ರಕೃಷ್ಟಾಧೀಃ ಯಸ್ಯ ಸಃ-ಉತ್ಕೃಷ್ಟವಾದ ಬುದ್ಧಿಯುಳ್ಳವನು, ಪ್ರಧೀಃ "ಧ್ಯಾಯತೇಃ ಸಂಪ್ರ-

ಸಾರಣಂಚ" ಸೂತ್ರದಿಂದ ಧ್ಯೈಧಾತುವಿಗೆ ಈ ಪ್ರತ್ಯಯ ಬಂದು ಧೀ ಆಗಿದೆ. ಇದು ಈ ಪ್ರತ್ಯಯಾಂತ ಶಬ್ದ. ಙ್ಯಂತವಲ್ಲ. ಆದುದರಿಂದ ಪ್ರಥಮಾ ಸುವಿಗೆ "ಹಲ್ ಙ್ಯಾದಿ"-ಸೂತ್ರದಿಂದ ಲೋಪವಿಲ್ಲ. ರುತ್ವವಿಸರ್ಗ. ಪ್ರಧೀಃ. ದ್ವಿವಚನದಲ್ಲಿ ಔ ಪರವಾದಾಗ ಪ್ರಧೀ—ಔ ಎಂದಿರುವಾಗ ಈಕಾರಕ್ಕೆ ಇಯಙ್ ಆದೇಶ ಆಶಂಕಿಸುತ್ತಾನೆ.

(ಇಯಙ್ ಉವಙ್ ಆದೇಶ ಹೇಳುವ ಸೂತ್ರ)

## ೨೦೦. ಅಚಿ, ಶ್ನುಧಾತುಭ್ರುವಾಂ, ಯ್ವೋರಿ-ಯಙುವಙೌ ೬-೪-೭೭ ॥

ಶ್ನುಪ್ರತ್ಯಯಾಂತಸ್ಯೇವರ್ಣೋವರ್ಣಾಂತಸ್ಯ ಧಾತೋರ್ಭ್ರೂ ಇತ್ಯಸ್ಯಚಾಂಗಸ್ಯೇಯಙುವಙೌ ಸ್ತೋಽಜಾದೌ ಪ್ರತ್ಯಯೇ ಪರೇ । ಇತಿ ಪ್ರಾಪ್ತೇ ॥

ಅಚಿ, ಶ್ನುಧಾತುಭ್ರುವಾಂ, ಯ್ವೋಃ, ಇಯಙುವಙೌ ॥ ನಾಲ್ಕು ಪದವುಳ್ಳ ಸೂತ್ರ. ಇಶ್ಚ ಉಶ್ಚ ಯೂ. ತಯೋಃ ಯ್ವೋಃ. ಇಕಾರ ಉಕಾರಗಳಿಗೆ ಎಂದರ್ಥ. ಇದು ಶ್ನುಧಾತುಭ್ರುವಾಂ ಎಂಬಲ್ಲಿರುವ ಧಾತುವಿನಲ್ಲಿ ಮಾತ್ರ ವಿಶೇಷಣ. ಶ್ನುಭ್ರು ಯಾವಾಗಲೂ ಉವರ್ಣಾಂತವಾದುದರಿಂದ ಅಲ್ಲಿ ಹೇಳಬೇಕಾಗಿಲ್ಲ. ವಿಶೇಷಣವಾದುದರಿಂದ ತದಂತಲಾಭ. ಇಕಾರಾಂತ ಉಕಾರಾಂತ ಧಾತುವಿಗೆ ಎಂದರ್ಥ. ಅಂಗಾಧಿಕಾರವಿರುವುದರಿಂದ "ಪ್ರತ್ಯಯೇ" (ಪ್ರತ್ಯಯ ಪರವಾದಾಗ) ಎಂದು ಲಬ್ಧವಾಗುತ್ತದೆ. ಆದಕ್ಕೆ "ಅಚಿ" ಸಪ್ತಮ್ಯಂತವು ವಿಶೇಷಣವಾದುದರಿಂದ "ಯಸ್ಮಿನ್ ವಿಧಿಃ-" ಪರಿಭಾಷೆಯಿಂದ ಅಜಾದಿ ಪ್ರತ್ಯಯ ಪರವಾದಾಗ ಎಂದರ್ಥವಾಗುತ್ತದೆ. ಶ್ನುಪ್ರತ್ಯಯವಾದುದರಿಂದ ಪ್ರತ್ಯಯಗ್ರಹಣ-ಪರಿಭಾಷೆಯಿಂದ ತದಂತಲಾಭ. **ಸೂತ್ರಾರ್ಥ.** ಶ್ನುಪ್ರತ್ಯಯಾಂತವಾದ ಅಂಗಕ್ಕೂ ಇವರ್ಣಾಂತ ಧಾತುರೂಪ ಅಂಗಕ್ಕೂ ಭ್ರೂ ಶಬ್ದಕ್ಕೂ ಅಜಾದಿ ಪ್ರತ್ಯಯ ಪರದಲ್ಲಿರುವಾಗ ಇಯಙ್ ಉವಙ್ ಆದೇಶ ಬರುತ್ತವೆ. ಅನೇಕಾಲಾದರೂ ಙಿತ್ತಾದುದರಿಂದ "ಙಿಚ್ಚ" ಸೂತ್ರದಿಂದ ಅಂತ್ಯಕ್ಕೆ ಆದೇಶ. ಇಕಾರಕ್ಕೆ ಇಯಙ್, ಉಕಾರಕ್ಕೆ ಉವಙ್ ಬರುತ್ತದೆ. ಪ್ರಕೃತ ಪ್ರಧೀ ಎಂಬುದು ಇಕಾರಾಂತವಾದ (ಇ=18 ಭೇದ) ಧಾತುವಾದುದರಿಂದ ಅದಕ್ಕೆ "ಔ" ಅಜಾದಿ ಪ್ರತ್ಯಯ ಪರವಾದುದರಿಂದ ಈಕಾರಕ್ಕೆ ಇಯಙ್ ಆದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಯಣ್ ಹೇಳುತ್ತಾನೆ.

(ಧಾತುವಿನ ಇಕಾರಕ್ಕೆ ಯಣ್ ಹೇಳುವ ಸೂತ್ರ)

## ೨೦೧. ಏರನೇಕಾಚೋಽಸಂಯೋಗಪೂರ್ವಸ್ಯ ॥ ೬-೪-೮೨ ॥

ಧಾತ್ವವಯವಸಂಯೋಗಪೂರ್ವೋ ನ ಭವತಿ ಯ ಇವರ್ಣಸ್ತದಂತೋ ಯೋ ಧಾತುಸ್ತದಂತಸ್ಯಾನೇಕಾಚೋಽಂಗಸ್ಯ ಯಣಜಾದೌ ಪ್ರತ್ಯಯೇ ॥ ಪ್ರಧ್ಯೌ । ಪ್ರಧ್ಯಃ । ಪ್ರಧ್ಯಮ್ । ಪ್ರಧ್ಯಾ । ಪ್ರಧ್ಯಃ । ಶೇಷಂ ಪಠೀವತ್ ॥ ಏವಂ ಗ್ರಾಮಣೀಃ । ಜಾತು ಗ್ರಾಮಣ್ಯಾಮ್ । ಅನೇಕಾಚಃ ಕಿಮ್ ? ನೀಃ । ನಿಯೌ । ನಿಯಃ । ಅಮಿ ಶಸಿ ಚ ಪರತ್ವಾದಿಯಙ್, ನಿಯಮ್ । ಙೇರಾಮ್, ನಿಯಾಮ್ ॥ ಅಸಂಯೋಗಪೂರ್ವಸ್ಯ ಕಿಮ್ ? ಸುಶ್ರಿಯೌ । ಯವಕ್ರಿಯೌ ॥

ಏಃ, ಅನೇಕಾಚಃ ಅಸಂಯೋಗಪೂರ್ವಸ್ಯ ॥ ತ್ರಿಪದಸೂತ್ರ. "ಇಣೋ ಯಣ್" ಸೂತ್ರದಿಂದ ಯಣ್ ಅನುವೃತ್ತವಾಗುತ್ತದೆ. "ಅಚಿಶ್ನುಧಾತುಭ್ರುವಾಂ" ಸೂತ್ರದಲ್ಲಿ ಧಾತುಪದವು ಸಮಾಸದಲ್ಲಿ ಸೇರಿದ್ದರೂ ಇಲ್ಲಿ ಮಕಾರಾನ್ವಯಾನುಸಾರ ದಿಂದ ಅನುವೃತ್ತವಾಗುತ್ತದೆ, ಶ್ನುಭ್ರೂಉಕಾರಾಂತಗಳು. "ಧಾತೋಃ" ಷಷ್ಠ್ಯಂತವು ಅನುವೃತ್ತವಾಗಿ ಆವೃತ್ತವಾಗುತ್ತದೆ, ಧಾತೋಃ ಧಾತೋಃ ಎರಡುಸಲ ಹೇಳಿಕೊಳ್ಳಬೇಕು. ಒಂದು ಅವಯವಷಷ್ಠ್ಯಂತ. ಇನ್ನೊಂದು ಸ್ಥಾನಷಷ್ಠ್ಯಂತ. ಅವಯವಷಷ್ಠ್ಯಂತವಾದ "ಧಾತೋಃ" ಎಂಬುದು "ಅಸಂಯೋಗಪೂರ್ವಸ್ಯ" ಎಂಬಲ್ಲಿರುವ ಸಂಯೋಗ ಪದದಲ್ಲಿ ಅನ್ವಯ ಹೊಂದುತ್ತದೆ. ಧಾತ್ವವಯವಸಂಯೋಗಪೂರ್ವೋ ಯಸ್ಮಾತ್ ಸಃ ಧಾತ್ವವಯವಸಂಯೋಗಪೂರ್ವಃ, ತದ್ಭಿನ್ನಃ ಅಸಂಯೋಗಪೂರ್ವಃ. ಧಾತುವಿನ ಅವಯವವಾದ ಸಂಯೋಗವು ಪೂರ್ವದಲ್ಲ ಇರಬಾರದು. (ಇಕಾರಕ್ಕೆ) ಏಃ ಇಕಾರದ ಷಷ್ಠೀ. ಇದು "ಧಾತೋಃ" ಎಂಬುದಕ್ಕೆ ವಿಶೇಷಣ: ತದಂತವಿಧಿಯಿಂದ ಇಕಾರಾಂತಧಾತುವೆಂದು ಲಬ್ಧವಾಗುತ್ತದೆ. "ಅಂಗಸ್ಯ" ಅಧಿಕಾರ. "ಧಾತೋಃ" ಅದಕ್ಕೆ ವಿಶೇಷಣವಾದುದರಿಂದ ಇಕಾರಾಂತ ಧಾತ್ವಂತವಾದ ಅಂಗಕ್ಕೆ ಎಂದರ್ಥವಾಗುತ್ತದೆ. ಅನೇಕಃ ಅಚ್ ಯಸ್ಯ ಸಃ ಅನೇಕಾಚ್. ತಸ್ಯ. ಅಂಗದಲ್ಲಿ ಅನ್ವಯ, ಅಂಗದಿಂದ ಆಕ್ಷಿಪ್ತವಾದ ಪ್ರತ್ಯಯಕ್ಕೆ "ಅಚಿ" ಪೂರ್ವಸೂತ್ರದಿಂದ ಅನುವೃತ್ತವಾಗಿ ವಿಶೇಷಣವಾದುದರಿಂದ (ಅದು ಸಪ್ತಮ್ಯಂತವಾದುದರಿಂದ) ಅಜಾದಿ ಪ್ರತ್ಯಯ ಎಂದರ್ಥವಾಗುತ್ತದೆ. ಸೂತ್ರಾರ್ಥ. ಧಾತ್ವವಯವ ಸಂಯೋಗವು ಪೂರ್ವದಲ್ಲಿಲ್ಲದಿರುವ ಇಕಾರವೇ ಅಂತವಾದ ಧಾತುವೇ ಕೊನೆಯಲ್ಲಿರುವ ಅನೇಕಾಚಾದ ಅಂಗಕ್ಕೆ ಅಜಾದಿ ಪ್ರತ್ಯಯಪರವಾದಾಗ ಯಣಾದೇಶ ಬರುತ್ತದೆ ಪ್ರಕೃತ ಪ್ರಧೀ ಶಬ್ದದಲ್ಲಿ ಧೀ-ಧಾತು. ಅದರ ಅವಯವ ಧಕಾರ. ಅದು ಸಂಯೋಗವಲ್ಲ. ಅದೇ ಪೂರ್ವದಲ್ಲಿರುವ ಈಕಾರ ಧೀಯಲ್ಲಿರುವ ಈಕಾರ. ಇದೇ ಅಂತವಾಗಿರುವ ಧಾತು ಧೀ, ಈ ಧಾತುವೇ ಅಂತವಾಗಿರುವ ಅನೇಕಾಚಾದ ಅಂಗ ಪ್ರಧೀ. ಇದಕ್ಕೆ ಔರೂಪ ಅಜಾದಿಪ್ರತ್ಯಯ ಪರವಾದುದರಿಂದ ಯಣ್. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂಗದ ಅಂತ್ಯ ಇಕಾರಕ್ಕೆ ಯಣ್ ಬಂದರೆ

ಪ್ರಧ್ + ಯ್ + ಔ=ಪ್ರಧ್ಯೌ. ಜಸ್, ಅಮ್, ಔಟ್, ಶಸ್‌ಗಳಲ್ಲಿಯೂ ಅಜಾದಿಯಾದುದರಿಂದ ಈ ಸೂತ್ರದಿಂದಲೇ ಯಣಾದೇಶ. ಪ್ರಧ್ಯಃ। ದ್ವಿ. ಪ್ರಧ್ಯಮ್–ಪ್ರಧ್ಯೌ–ಪ್ರಧ್ಯಃ॥ ಇನ್ನು ಮುಂದೆ ಪಪೀಶಬ್ದದಂತೆ ರೂಪ. ಅಜಾದಿಯಲ್ಲಿ ಯಣಾದೇಶ. ಹಲಾದಿಯಲ್ಲಿ ಕೇವಲ ವಿಭಕ್ತಿ ಸೇರಿಸುವುದು. ತೃ—ಪ್ರಧ್ಯಾ। ಪ್ರಧೀಭ್ಯಾಮ್ ಪ್ರಧೀಭಿಃ॥ ಚ—ಪ್ರಧ್ಯೇ। ಪ್ರಧೀಭ್ಯಾಮ್। ಪ್ರಧೀಭ್ಯಃ॥ ಪಂ ಪ್ರಧ್ಯಃ। ಪ್ರಧೀಭ್ಯಾಮ್। ಪ್ರಧೀಭ್ಯಃ॥ ಷ—ಪ್ರಧ್ಯಃ। ಪ್ರಧ್ಯೋಃ। ಪ್ರಧ್ಯಾಮ್॥ ಸ—ಪ್ರಧ್ಯಿ। ಪ್ರಧ್ಯೋಃ ಪ್ರಧೀಷು॥ (ಪ್ರಧೀ+ಇ=ಪ್ರಧ್+ಯ್+ಇ=ಪ್ರಧ್ಯಿ)

ಏವಂ ಗ್ರಾಮಣೀಃ. ಹೀಗೆಯೇ ಗ್ರಾಮಣೀಶಬ್ದ. ಗ್ರಾಮಂ ನಯತಿ–ಗ್ರಾಮದ ಮುಖಂಡ ಪಟೇಲ. ಸುವಿಗೆ ರುತ್ವವಿಸರ್ಗ. ಗ್ರಾಮಣೀಃ (ನೀಗೆ ಣತ್ವ) ಅಜಾದಿಯಲ್ಲಿ ಅಸಂಯೋಗಪೂರ್ವಕ ಇಕಾರಾಂತ ಧಾತುವೇ ಅಂತವಾಗಿರುವ ಅನೇಕಾಚಾದ ಅಂಗವಾದುದರಿಂದ ಯಣಾದೇಶ. ಗ್ರಾಮಣ್ಯೌ-ಗ್ರಾಮಣ್ಯಃ॥ ಇತ್ಯಾದಿ ಹಿಂದಿನಂತೇ ರೂಪ. ಸಪ್ತಮೀ ಏಕವಚನದಲ್ಲಿ ಮಾತ್ರ ಗ್ರಾಮಣೀ+ಇ ಎಂದಿರುವಾಗ ನೀಶಬ್ದಪರದಲ್ಲಿ ಙಿ ಬಂದುದರಿಂದ "ಙೇರಾಮ್ ನದ್ಯಾಮ್ನೀಭ್ಯಃ" ಸೂತ್ರದಿಂದ ಅದಕ್ಕೆ ಆಮ್ ಆದೇಶ. ಗ್ರಾಮಣೀ+ಆಮ್. ಯಣ್ ಗ್ರಾಮಣ್ಯಾಮ್-ಗ್ರಾಮಣ್ಯೋಃ ಗ್ರಾಮಣೀಷು.

ಸೂತ್ರದ ದಳದ ಪ್ರಯೋಜನವನ್ನು ಹೇಳುತ್ತಾನೆ. ಅನೇಕಾಚಃ ಕಿಮ್? ಅಂಗವು ಅನೇಕಾಚಾಗಿರಬೇಕೆಂಬುದೇಕೆ? ನೀಃ-ನಿಯೌ-ನಿಯಃ॥ ನಯತಿ ಇತಿ ನೀಃ. ಒಯ್ಯುವವ. ನೀ ಧಾತು (ಣೀಞ್-ಪ್ರಾಪಣೇ) ಇಕಾರಾಂತ ಧಾತುವೇ ಅಂತವಾದ ಅಂಗವೆಂದರೆ ನೀ. ಇಕಾರದ ಹಿಂದೆ ಸಂಯೋಗವೂ ಇಲ್ಲ. ಸೂತ್ರದಲ್ಲಿ ಅನೇಕಾಚ್ ಪದವಿಲ್ಲವಾದರೆ ಇಲ್ಲಿಯೂ ಯಣ್ ಬರಬೇಕಾಗುತ್ತದೆ. (ಇಲ್ಲಿ ಯಣ್ ಬಾರದಿರಲು ಅನೇಕಾಚಃ ಎಂದಿದೆ) ಯಣ್ ಬಾರದಿದ್ದರೆ ಸಾಮಾನ್ಯ ಸೂತ್ರದಿಂದ (೨೦೦) ಇಯಙ್ ಆದೇಶ. "ಅಚಿಶ್ನು ಧಾತು ಭ್ರುವಾಂ"–ಸೂತ್ರದಲ್ಲಿ ಇಕಾರಾಂತ ಧಾತುವಿನ ಇಕಾರಕ್ಕೆ ಇಯಙ್ ಹೇಳಿದೆ. ಇಯಙ್‌ನಲ್ಲಿ ಙಕಾರ "ಹಲಂತ್ಯಮ್" ಸೂತ್ರದಿಂದ ಇತ್‌ಸಂಜ್ಞೆ ಬಂದು ಲೋಪವಾಗುತ್ತದೆ. ಅಕಾರ ಉಚ್ಚಾರಣಾರ್ಥ. ನ್+ಇಯ್+ಔ=ನಿಯೌ-ನಿಯಃ. ಇತ್ಯಾದಿ. ಅಜಾದಿಯಲ್ಲಿ ಇಯಙಾದೇಶ ವಿಶೇಷ. ಹಲಾದಿಯಲ್ಲಿ ಕಾರ್ಯವಿಲ್ಲ. ಅಮಿನಲ್ಲಿಯೂ ಶಸಿನಲ್ಲಿಯೂ ಪೂರ್ವರೂಪ, ಸವರ್ಣದೀರ್ಘಗಳನ್ನು ಬಾಧಿಸಿ ಪರವಾದುದರಿಂದ ಇಯಙ್ ಆದೇಶವೇ ಬರುತ್ತದೆ. ಸಪ್ತಮೀ ಏಕವಚನದಲ್ಲಿ ಙಿಗೆ ಹಿಂದಿನಂತೇ "ಙೇರಾಮ್ನದ್ಯಾಮ್ನೀಭ್ಯಃ" ಸೂತ್ರದಿಂದ ಆಮ್ ಆದೇಶ. ಈಕಾರಕ್ಕೆ ಇಯಙ್. ನಿಯಾಮ್. ನಿಯೋಃ-ನೀಷು॥ ಅಸಂಯೋಗ ಪೂರ್ವಸ್ಯ ಕಿಮ್? ಧಾತುವಿನ ಇಕಾರದ ಹಿಂದೆ ಸಂಯೋಗವಿರಬಾರದು ಎಂದುದೇಕೆ? ಸುಶ್ರಿಯೌ-ಸುಶ್ರಿಯಃ॥ ಯವಕ್ರಿಯೌ॥ ಇಲ್ಲಿ ಯಣ್ ಬರುವುದಿಲ್ಲ. "ಅಚಿಶ್ನು ಧಾತು" ಸೂತ್ರದಿಂದ ಇಯಙಾದೇಶ ಬಂದಿದೆ.

ಸು ಶ್ರಯತಿ ಇತಿ ಸುಶ್ರೀಃ. ಚನ್ನಾಗಿ ಸೇವಿಸುವವನು. ಇಲ್ಲಿ ಧಾತು ಇಕಾರಾಂತವಾಗಿದೆ. ಆ ಧಾತುವೇ ಅಂತವಾದ ಅನೇಕಾಚಾದ ಅಂಗವೂ ಇದೆ. ಆದರೆ ಇಕಾರದ ಹಿಂದೆ ಸಂಯೋಗವಿದೆ. ಸುಶ್+ರ್+ಈ+ಔ. ಆದುದರಿಂದ ಯಣ್ ಬರುವುದಿಲ್ಲ. ಇಯಙ್ ಬಂದರೆ ಸುಶ್ರಿಯೌ ಇತ್ಯಾದಿ. ಯವಂ ಕ್ರೀಣಾತಿ ಇತಿ ಯವಕ್ರೀಃ. ಭತ್ತ ಮಾರುವವನು. ಇಲ್ಲಿಯೂ ಧಾತುವಿನ ಇಕಾರದ ಹಿಂದೆ ಧಾತುವಿನ ಅವಯವವಾದ ಸಂಯೋಗವಿದೆ. ಆದುದರಿಂದ ಯಣ್ ಬರಲಿಲ್ಲ. ಅಜಾದಿ ಪ್ರತ್ಯಯ ಪರವಾದಾಗ ಇಯಙ್. ಯವಕ್ರಿಯೌ ಇತ್ಯಾದಿ ಊಹಿಸಿಕೊಳ್ಳಬೇಕು.

---

### ಈಕಾರಾಂತ ಶುದ್ಧಧೀ ಶಬ್ದ

ಶುದ್ಧಾ ಧೀಃ ಯಸ್ಯ ಸಃ ಶುದ್ಧಧೀಃ. ಶುದ್ಧವಾದ ಬುದ್ಧಿಯುಳ್ಳವನು. ಸುವಿಗೆ ರುತ್ವವಿಸರ್ಗ. ಶುದ್ಧಧೀಃ ॥ ದ್ವಿವಚನದಲ್ಲಿ ಔಪರವಾದಾಗ ಪ್ರಧೀಶಬ್ದದಂತೆ ಯಣ್ ಪ್ರಾಪ್ತವಾದರೆ ವಾರ್ತಿಕದಿಂದ ನಿಷೇಧ ಹೇಳುತ್ತಾನೆ. ಅದಕ್ಕೋಸ್ಕರ ಮೊದಲು "ಗತಿ" ಎಂಬ ಸಂಜ್ಞೆ ಹೇಳುತ್ತಾನೆ.

(ಗತಿ ಸಂಜ್ಞೆ ಹೇಳುವ ಸೂತ್ರ)

## ೨೦೨. ಗತಿಶ್ಚ ॥ ೧-೪-೬೦ ॥

**ಪ್ರಾದಯಃ ಕ್ರಿಯಾಯೋಗೇ ಗತಿಸಂಜ್ಞಾಃ ಸ್ಯುಃ ।**

ಗತಿಃ, ಚ ॥ ದ್ವಿಪದಸೂತ್ರ. "ಉಪಸರ್ಗಾಃ ಕ್ರಿಯಾಯೋಗೇ" "ಪ್ರಾದಯಃ" ಸೂತ್ರಗಳು ಅನುವೃತ್ತವಾಗುತ್ತವೆ. ಕ್ರಿಯಾಯಾಃ ಯೋಗಃ ಕ್ರಿಯಾಯೋಗಃ ತಸ್ಮಿನ್ ಕ್ರಿಯಾಯೋಗೇ. ಸೂತ್ರಾರ್ಥ. ಪ್ರಾದಿಗಳು ಕ್ರಿಯಾಸಂಬಂಧವಿರುವಾಗ 'ಗತಿ' ಎಂಬ ಸಂಜ್ಞೆಯನ್ನು ಹೊಂದುತ್ತವೆ. ಹಿಂದೆ ಉಪಸರ್ಗಸಂಜ್ಞೆಯು ಇವುಗಳಿಗೆ ಹೇಳಿದೆ. ಕ್ರಿಯಾಸಂಬಂಧವಿರುವಾಗ ಎರಡು ಸಂಜ್ಞೆ ಹೇಳಿದಂತಾಯಿತು. ಪ್ರಾದಿಗಳು ಇಪ್ಪತ್ತೆರಡೆಂದು ಹಿಂದೆ ಹೇಳಿದೆ.

(ಯಣ್ ನಿಷೇಧಮಾಡುವ ವಾರ್ತಿಕ)

**ವಾ ॥ ಗತಿಕಾರಕೇತರ ಪೂರ್ವಪದಸ್ಯ ಯಣ್ ನೇಷ್ಯತೇ ॥ ಶುದ್ಧಧಿಯೌ ॥**

ಗತಿ, ಕಾರಕಾಭ್ಯಾಂ ಇತರತ್, ಪೂರ್ವಂ ಪದಂ ಯಸ್ಯ ॥ ಗತಿಕಾರಕಗಳಿಗಿಂತಲೂ ಬೇರೆಯಾದ ಪದವು ಪೂರ್ವಪದವಾಗಿರುವ ಅಂಗದ ಇಕಾರಕ್ಕೆ ಯಣ್ ಬರುವುದಿಲ್ಲ. ಗತಿಸಂಜ್ಞೆ ಇಲ್ಲಿ ಹೇಳಿದೆ. ಕಾರಕವೆಂದರೆ ಕರ್ಮಾದಿ ಆರು ಎಂದು ಮುಂದೆ ಹೇಳುತ್ತಾನೆ. ಪ್ರಕೃತ ಶುದ್ಧಧೀಶಬ್ದದಲ್ಲಿ ಶುದ್ಧವೆಂಬುದು ಪೂರ್ವಪದ. ಇದು ಗತಿಯೂ ಅಲ್ಲ. ಕಾರಕವೂ ಅಲ್ಲ. ಆದುದರಿಂದ ಈ ವಾರ್ತಿಕದಿಂದ ಯಣ್

ನಿಷೇಧ. ಯಣ್‌ಬಾರದಿದ್ದರೆ "ಅಚಿಶ್ನುಧಾತುಭ್ರುವಾಮ್"-ಸೂತ್ರದಿಂದ ಅಜಾದಿ ಪ್ರತ್ಯಯಪರವಾದಾಗ ಎಲ್ಲಾ ಕಡೆಯಲ್ಲಿಯೂ ಇಯಜಾದೇಶ. ಶುದ್ಧಧಿಯೌ-ಶುದ್ಧಧಿಯಃ ಇತ್ಯಾದಿ ರೂಪಗಳನ್ನು ಊಹಿಸಿಕೊಳ್ಳಬೇಕು. ಹಲಾದಿಯಲ್ಲಿ ಕೇವಲ ಪ್ರತ್ಯಯ ಸೇರಿಸುವುದು ಮಾತ್ರ.

ಸುಧೀ ಶಬ್ದ. (ಒಳ್ಳೇ ಬುದ್ಧಿಯುಳ್ಳವನು.)

ಶೋಭನಾ ಧೀಃ ಯಸ್ಯ ಸಃ, ಸುಧೀಃ। ಪ್ರಥಮಾ ಸುಪರವಾದಾಗ ರುತ್ವ ವಿಸರ್ಗ. ಸುಧೀಃ ದ್ವಿವಚನದಲ್ಲಿ ಔ ಪರವಾದಾಗ ಮೊದಲು "ಅಚಿಶ್ನುಧಾತುಭ್ರುವಾಂ"-ಸೂತ್ರದಿಂದ ಈಕಾರಕ್ಕೆ ಇಯಜಾದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ "ಏರನೇಕಾಚೋಽಸಂಯೋಗಪೂರ್ವಸ್ಯ" ಸೂತ್ರದಿಂದ ಯಣಾದೇಶ ಬರುತ್ತದೆ. ಇಲ್ಲಿ ಗತಿಪೂರ್ವವಾದುದರಿಂದ ವಾರ್ತಿಕದಿಂದ ನಿಷೇಧವಿಲ್ಲ. ಆದರೆ ಯಣ್ ನಿಷೇಧವನ್ನು ಸೂತ್ರದಿಂದ ಹೇಳುತ್ತಾನೆ.

(ಭೂ, ಸುಧೀ ಶಬ್ದಗಳಿಗೆ ಯಣ್ ನಿಷೇಧ ಹೇಳುವ ಸೂತ್ರ)

**೨೦೩. ನ, ಭೂಸುಧಿಯೋಃ ॥ ೬-೪-೮೫ ॥**

**ಏತಯೋರಚಿ ಸುಪಿ ಯಣ್ ನ ॥ ಸುಧಿಯೌ । ಸುಧಿಯ ಇತ್ಯಾದಿ ॥ ಸುಖಮಿಚ್ಛತೀತಿ ಸುಖೀಃ । ಸುಖ್ಯೌ । ಸುಖ್ಯುಃ । ಸುತಮಿಚ್ಛತೀತಿ ಸುತೀಃ । ಸುತ್ಯೌ । ಸುತ್ಯುಃ । ಶೇಷಂ ಪ್ರಧೀವತ್ ॥**

ದ್ವಿಪದ ಸೂತ್ರ. "ಇಕೋಯಣಚಿ" ಸೂತ್ರದಿಂದ "ಅಚಿ" "ಇಣೋಯಣ್" ಸೂತ್ರದಿಂದ "ಯಣ್" "ಓಃ ಸುಪಿ" ಸೂತ್ರದಿಂದ "ಸುಪಿ" ಶಬ್ದಗಳು ಅನುವೃತ್ತವಾಗುತ್ತವೆ. ಅಚಿ ಎಂಬುದು ಸುಪಿ ಎಂಬ ಸಪ್ತಮ್ಯಂತ್ಯಕ್ಕೆ ವಿಶೇಷಣವಾದುದರಿಂದ "ಯಸ್ಮಿನ್ ವಿಧಿಃ"-ಪರಿಭಾಷೆಯಿಂದ ತದಾದಿಲಾಭ. **ಸೂತ್ರಾರ್ಥ.** ಭೂ, ಸುಧೀ ಶಬ್ದಗಳಿಗೆ ಅಜಾದಿಯಾದ ಸುಪ್ ಪರವಾದಾಗ ಯಣ್ ಬರುವುದಿಲ್ಲ. ಸುಧೀ+ಔ ಎಂದಿರುವಾಗ ಯಣ್ ನಿಷೇಧ ಬಂದರೆ ಸಾಮಾನ್ಯ ಸೂತ್ರದಿಂದ (ಅಚಿಶ್ನುಧಾ-) ಇಯಜಾದೇಶ. ಸುಧಿಯೌ-ಸುಧಿಯಃ ಇತ್ಯಾದಿ. ಅಜಾದಿಯಲ್ಲಿ ಇಯಜಾದೇಶ. ಹಲಾದಿಯಲ್ಲಿ ಕೇವಲ ಪ್ರತ್ಯಯ ಸೇರಿಸುವುದು ಮಾತ್ರ.

ಸುಖೀ ಶಬ್ದ । ಸುಖವನ್ನು ಬಯಸುವವನು. ಇಚ್ಛಾರ್ಥ ತೋರುವಾಗ ಸುಖಶಬ್ದದಮೇಲೆ ಕ್ಯಚ್ (ಸುಪ ಆತ್ಮನಃ ಕ್ಯಚ್) ಪ್ರತ್ಯಯ. ಕ್ಯಚಿನಲ್ಲಿ "ಯ" ಉಳಿಯುತ್ತದೆ. ಸುಖ+ಯ ಎಂದಿರುವಾಗ "ಕ್ಯಚಿ ಚ" ಸೂತ್ರದಿಂದ ಖಕಾರದ ಮೇಲಿರುವ ಅಕಾರಕ್ಕೆ ಈಕಾರ. ಸುಖೀಯ. ಶಬ್ದದಮೇಲೆ ಕ್ವಿಪ್ ಪ್ರತ್ಯಯ. ಕ್ವಿಪಿನಲ್ಲಿ ಸರ್ವವೂ ಲೋಪವಾಗುತ್ತದೆ. ಕ್ವಿಪನ್ನು ನಿಮಿತ್ತೀಕರಿಸಿ ಕ್ಯಚಿಗೂ ಲೋಪ. ಸುಖೀ ಉಳಿಯುತ್ತದೆ. ಕೃದಂತವಾದುದರಿಂದ "ಕೃತ್ತದ್ಧಿತಸಮಾಸಾಶ್ಚ" ಸೂತ್ರ

ದಿಂದ ಪ್ರಾತಿಪದಿಕಸಂಜ್ಞೆ. ಹೀಗೆಯೇ ಸುತಮಿಚ್ಛತಿ. (ಮಗನನ್ನು ಬಯಸುವವನು) ಎಂಬರ್ಥದಲ್ಲಿಯೂ ಹಿಂದಿನಂತೆಯೇ ಕ್ಯಚ್-ಕ್ವಿಪ್. ಸುತೀ ಆಗುತ್ತದೆ. ಇವುಗಳಿಗೆ ಸುಪರವಾದಾಗ ರುತ್ವವಿಸರ್ಗ. ಸುಖೀಃ, ಸುತೀಃ. ದ್ವಿವಚನದಲ್ಲಿ ಔ ಪರವಾದಾಗ ಇಯಙಿಗೆ ಅಪವಾದವಾಗಿ ಯಣ್. ಸುಖ್ಯೌ ಸುತ್ಯೌ ಸುತ್ಯೌ. ॥ ಜಸ್—ಸುಖ್ಯಃ=ಸುತ್ಯಃ ॥ ಪ್ರಧೀಶಬ್ದದಂತೇ ರೂಪ. ಆದರೆ ಪಂಚಮಿಷಷ್ಠೀ ಏಕವಚನಗಳಲ್ಲಿ ಅಸ್ ಪರವಾದಾಗ ಯಣ್ ಬಂದರೆ ಸುಖ್ಯಃ, ಸುತ್ಯಃ ಎಂದಾದಾಗ ಖೀ-ತೀ ಶಬ್ದಗಳಿಗೆ ಯಣ್ ಬಂದು ಅದರಪರದಲ್ಲಿ ಜಸ್ ಜಸಿನ ಅಕಾರ ಇರುವುದರಿಂದ "ಖ್ಯತ್ಯಾತ್ಪರಸ್ಯ" ಸೂತ್ರದಿಂದ ಅಕಾರಕ್ಕೆ ಉತ್ವ. ಸುಖ್ಯುಃ ೨ ॥ ಈ ಎರಡು ರೂಪಗಳು ಮಾತ್ರ ಪ್ರಧೀಶಬ್ದಕ್ಕಿಂತ ಬೇರೆಯಾಗುತ್ತವೆ. ಉಳಿದೆಡೆಯಲ್ಲಿ ಪ್ರಧೀಶಬ್ದದಂತೇ ತಿಳಿಯಬೇಕು.

ಇತಿ ಈಕಾರಾಂತಾಃ

---

(ಉಕಾರಾಂತ ಪ್ರಕರಣಮ್.)

ಶಂಭು ಶಬ್ದ. (ಈಶ್ವರ.)

**ಶಂಭುರ್ಹರಿವತ್ ॥ ಏವಂ ಭಾನ್ವಾದಯಃ ॥**

ಶಂಭು ಶಬ್ದ ಹರಿಶಬ್ದದಂತೇ ಆಗುತ್ತದೆ. ಪ್ರಥಮಾಸುವಿಗೆ ರುತ್ವವಿಸರ್ಗ. ಶಂಭುಃ. ದ್ವಿವಚನದಲ್ಲಿ "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣದೀರ್ಘ. ಶಂಭು+ಔ, ಶಂಭೂ ॥ ಜಸ್ ಪರವಾದಾಗ, "ಜಸಿಚ" ಸೂತ್ರದಿಂದ ಗುಣ. ಅವಾದೇಶ. ಸಕಾರಕ್ಕೆ ರುತ್ವವಿಸರ್ಗ. ಶಂಭು+(ಜ್) ಅಸ್—ಶಂಭೋ+ಅಸ್-ಶಂಭವಸ್-ಶಂಭವಃ ॥ ಸಂಬುದ್ಧಿಯಲ್ಲಿ "ಹ್ರಸ್ವಸ್ಯ ಗುಣಃ" ಸೂತ್ರದಿಂದ ಅಂಗಕ್ಕೆ ಗುಣ. ಹೇ ಶಂಭು+ಸ್-ಹೇಶಂಭೋ+ಸ್ "ಏಙ್ ಹ್ರಸ್ವಾತ್"—ಸೂತ್ರದಿಂದ ಓಕಾರದಪರದಲ್ಲಿರುವುದರಿಂದ ಸುವಿಗೆ ಲೋಪ. ಹೇ ಶಂಭೋ— ಹೇ ಶಂಭೂ—ಹೇ ಶಂಭವಃ ॥ ಅಮಿನಲ್ಲಿ "ಅಮಿ ಪೂರ್ವಃ" ಸೂತ್ರದಿಂದ ಪೂರ್ವರೂಪ. ಶಂಭುಂ-ಶಂಭೂ-ಶಂಭೂನ್. ಪೂರ್ವಸವರ್ಣದೀರ್ಘದ ಪರದಲ್ಲಿ ಶಸಿನ ಸಕಾರವಿರುವುದರಿಂದ "ತಸ್ಮಾಚ್ಛಸೋನಃ ಪುಂಸಿ" ಸೂತ್ರದಿಂದ ನತ್ವ. ತೃತೀಯಾ ಏಕವಚನದಲ್ಲಿ "ಆಙೋನಾಽಸ್ತ್ರಿಯಾಮ್" ಸೂತ್ರದಿಂದ ಟಾವಿಭಕ್ತಿಗೆ ನಾ ಭಾವ. ಶಂಭುನಾ. ಹಲಾದಿಯಲ್ಲಿ ಕಾರ್ಯವಿಶೇಷವಿಲ್ಲ. ಶಂಭುಭ್ಯಾಮ್-ಶಂಭುಭಿಃ ॥ ಚತುರ್ಥೀ ಏಕವಚನಲ್ಲಿ ಙೇ ಪ್ರತ್ಯಯ. "ಶೇಷೋಘ್ಯಸಖಿ" ಸೂತ್ರದಿಂದ ಶಂಭುಶಬ್ದಕ್ಕೂ ಘಿಸಂಜ್ಞೆ ಬರುವುದರಿಂದ "ಘೇರ್ಙಿತಿ" ಸೂತ್ರದಿಂದ ಶಂಭುವಿನ ಉಕಾರಕ್ಕೆ ಗುಣ. ಅವಾದೇಶ. ಶಂಭೋ+ಏ-ಶಂಭವೇ ಶಂಭುಭ್ಯಾಂ-ಶಂಭುಭ್ಯಃ ॥ ಪಂಚಮಿಯಲ್ಲಿ ಙಸಿಪರವಾದಾಗ "ಘೇರ್ಙಿತಿ" ಸೂತ್ರದಿಂದ ಗುಣ

“ಙಸಿಙಸೋಶ್ಚ” ಸೂತ್ರದಿಂದ ಪೂರ್ವರೂಪ. ಶಂಭೋ+ಅಸ್=ಶಂಭೋಸ್-ಶಂಭೋಃ ॥ ಶಂಭುಭ್ಯಾಮ್-ಶಂಭುಭ್ಯಃ ॥ ಷಷ್ಠೀಏಕವಚನದಲ್ಲಿ ಹಿಂದಿನಂತೆ. ಗುಣ, ಪೂರ್ವರೂಪ. ಶಂಭೋಃ. ದ್ವಿವಚನದಲ್ಲಿ ಓಸ್ ಪರವಾದಾಗ ಯಣ್ ಶಂಭ್ವೋಃ ॥ ಬಹುವಚನದಲ್ಲಿ ಆಮ್. ಹ್ರಸ್ವದಪರದಲ್ಲಿರುವುದರಿಂದ “ಹ್ರಸ್ವನದ್ಯಾಪೋನುಟ್” ಸೂತ್ರದಿಂದ ಆಮಿಗೆ ನುಟಾಗಮ. “ನಾಮಿ” ಸೂತ್ರದಿಂದ ಅಂಗಕ್ಕೆ ದೀರ್ಘ. ಶಂಭೂನಾಮ್ । ಸಪ್ತಮಿಏಕವಚನದಲ್ಲಿ ಙಿಪರವಾದಾಗ. “ಅಚ್ಚಘೇಃ” ಸೂತ್ರದಿಂದ ಶಂಭುವಿನ ಉಕಾರಕ್ಕೆ ಅಕಾರಾದೇಶ. ಙಿಗೆ ಔಕಾರಾದೇಶ. ಶಂಭ+ಔ ವೃದ್ಧಿ. ಶಂಭೌ. ದ್ವಿವಚನದಲ್ಲಿ ಯಣ್. ಶಂಭ್ವೋಃ-ಬಹುವಚನದಲ್ಲಿ “ಆದೇಶಪ್ರತ್ಯಯಯೋಃ” ಸೂತ್ರದಿಂದ ಸಕಾರಕ್ಕೆ ಷತ್ವ. ಶಂಭುಷು. ಹೀಗೇ ಭಾನುಮುಂತಾದ ಶಬ್ದಗಳರೂಪವನ್ನು ತಿಳಿಯಬೇಕು.

(ಉಕಾರಾಂತ. ಕ್ರೋಷ್ಟುಶಬ್ದ. ನರಿ.)

ಕ್ರುಶ್ ಧಾತುವಿಗೆ ತುನ್ ಪ್ರತ್ಯಯ ಬಂದಾಗ ಕ್ರೋಷ್ಟುಶಬ್ದವಾಗಿದೆ. ಇದಕ್ಕೆ ತೃಜಂತದ ಭಾವವನ್ನು ಹೇಳುತ್ತಾನೆ.

(ಕ್ರೋಷ್ಟುಶಬ್ದಕ್ಕೆ ತೃಜಂತವದ್ಭಾವ ಹೇಳುವ ಸೂತ್ರ)

## ೨೦೪. ತೃಜ್ವತ್‌ಕ್ರೋಷ್ಟುಃ ॥ ೭-೧-೯೫ ॥

ಕ್ರೋಷ್ಟುಶಬ್ದಃ ತೃಜಂತವದ್ರೂಪಂ ಲಭತೇ ಅಸಂಬುದ್ಧೌ ಸರ್ವನಾಮಸ್ಥಾನೇ ಪರೇ ॥ ಕ್ರೋಷ್ಟುಶಬ್ದಸ್ಯ ಸ್ಥಾನೇ ಕ್ರೋಷ್ಟೃಶಬ್ದಃ ಪ್ರಯೋಕ್ತವ್ಯ ಇತ್ಯರ್ಥಃ ॥

ತೃಜ್ವತ್, ಕ್ರೋಷ್ಟುಃ ॥ ದ್ವಿಪದಸೂತ್ರ. ತೃಚ್‌ಪ್ರತ್ಯಯವಾದುದರಿಂದ ಪ್ರತ್ಯಯ ಗ್ರಹಣಪರಿಭಾಷೆಯಿಂದ ತೃಜಂತವೆಂದು ತೆಗೆದುಕೊಳ್ಳಬೇಕು. “ಇತೋತ್ಸರ್ವನಾಮಸ್ಥಾನೇ” ಸೂತ್ರದಿಂದ “ಸರ್ವನಾಮಸ್ಥಾನೇ” “ಸಖ್ಯುರಸಂಬುದ್ಧೌ” ಸೂತ್ರದಿಂದ “ಅಸಂಬುದ್ಧೌ ಎಂತಲೂ ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಸಂಬುದ್ಧಿಯನ್ನು ಬಿಟ್ಟು ಉಳಿದ ಸರ್ವನಾಮಸ್ಥಾನವು (ಸುಟ್ 5) ಪರದಲ್ಲಿರುವಾಗ ಕ್ರೋಷ್ಟು ಶಬ್ದವು ತೃಜಂತದಂತೆ ರೂಪವನ್ನು ಹೊಂದುತ್ತದೆ. ತುನ್ ಪ್ರತ್ಯಯಾಂತವಾದ ಕ್ರೋಷ್ಟುಶಬ್ದವು ತೃಚ್‌ಪ್ರತ್ಯಯಾಂತವಾದ ಕ್ರೋಷ್ಟೃಶಬ್ದರೂಪವನ್ನು ಹೊಂದುತ್ತದೆ ಕ್ರೋಷ್ಟುಶಬ್ದದ ಸ್ಥಾನದಲ್ಲಿ ಕ್ರೋಷ್ಟೃ ಶಬ್ದವನ್ನು ಪ್ರಯೋಗಿಸಬೇಕು ಎಂದರ್ಥ. ಇದು ಅತಿದೇಶ ಸೂತ್ರ. ಕಾರ್ಯ, ರೂಪ, ನಿಮಿತ್ತ, ಅರ್ಥ, ಶಾಸ್ತ್ರ, ತಾದಾತ್ಮ್ಯ, ವ್ಯಪದೇಶವೆಂದು ಏಳುರೀತಿಯಾದ ಅತಿದೇಶಗಳವೆ. ಇಲ್ಲಿ ಮುಖ್ಯವಾದ ರೂಪಾತಿದೇಶ. ತೃಜಂತದರೂಪಗಳು ಕರ್ತೃ, ಭರ್ತೃ, ಮುಂತಾದವುಗಳು ಅನೇಕವಿಧಗಳಾಗಿದ್ದರೂ ಅರ್ಥವನ್ನು ಅನುಸರಿಸಿ.

ಕ್ರೋಷ್ಟೃ ಎಂಬ ತೃಜಂತದ ರೂಪವೇ ಬರುತ್ತದೆ. ಈಗ ಋಕಾರಾಂತಶಬ್ದವಾಗುತ್ತದೆ. ಕ್ರೋಷ್ಟೃ + ಸ್ ಎಂದಿರುವಾಗ ಅಂಗಕ್ಕೆ ಗುಣ ಹೇಳುತ್ತಾನೆ.

(ಋದಂತಾಂಗಕ್ಕೆ ಗುಣ ಹೇಳುವ ಸೂತ್ರ)

## ೨೦೫. ಋತೋ ಙಿಸರ್ವನಾಮಸ್ಥಾನಯೋಃ ॥ ೭-೩-೧೧೦ ॥

**ಋತೋಽಂಗಸ್ಯ ಗುಣಃ ಙೌ ಸರ್ವನಾಮಸ್ಥಾನೇ ಚ । ಇತಿ ಸ್ರ್ಪಾಪ್ತೇ ॥**

ಋತಃ, ಙಿಸರ್ವನಾಮಸ್ಥಾನಯೋಃ ॥ ದ್ವಿಪದಸೂತ್ರ. "ಹ್ರಸ್ವಸ್ಯ ಗುಣಃ" ಸೂತ್ರದಿಂದ "ಗುಣಃ" ಅನುವೃತ್ತವಾಗುತ್ತದೆ. "ಅಂಗಸ್ಯ" ಅಧಿಕಾರ. "ಋತಃ" ಅದಕ್ಕೆ ವಿಶೇಷಣವಾದುದರಿಂದ ತದಂತಲಾಭ. ಙಿಶ, ಸರ್ವನಾಮಸ್ಥಾನಂ ಚ ಙಿಸರ್ವನಾಮಸ್ಥಾನೇ-ತಯೋಃ ಙಿಸರ್ವನಾಮಸ್ಥಾನಯೋಃ. ಸಪ್ತಮೀದ್ವಿವಚನ. ಸೂತ್ರಾರ್ಥ. ಙಿಪ್ರತ್ಯಯ, ಮತ್ತು ಸರ್ವನಾಮಸ್ಥಾನ (ಸ್ವಾದಿಪಂಚ) ಪರದಲ್ಲಿರುವಾಗ ಹ್ರಸ್ವಋಕಾರಾಂತವಾದ ಅಂಗಕ್ಕೆ ಗುಣ ಬರುತ್ತದೆ. ಅಂಗಕ್ಕೆ ಗುಣವೆಂದರೆ "ಅಲೋಽಂತ್ಯಸ್ಯ" ಪರಿಭಾಷೆಯಿಂದ ಅಂತ್ಯವಾದ ಋಕಾರಕ್ಕೆ ಎಂದೇ ಅರ್ಥವಾಗುತ್ತದೆ. ಪ್ರಕೃತ ಸು ಸರ್ವನಾಮಸ್ಥಾನ. ಇದು ಪರವಾಗಿದೆ. ಆದುದರಿಂದ ಕ್ರೋಷ್ಟೃರೂಪ ಅಂಗದ ಋಕಾರಕ್ಕೆ ಗುಣವು ಪ್ರಾಪ್ತವಾದರೆ-ಅದಕ್ಕೆ ಅಪವಾದವಾಗಿ ಅನಙ್ಆದೇಶ ಹೇಳುತ್ತಾನೆ.

(ಋದಂತಾದಿಗಳಿಗೆ ಅನಙ್ ಹೇಳುವ ಸೂತ್ರ)

## ೨೦೬. ಋದುಶನಸ್ಪುರುದಂಸೋಽನೇಹಸಾಂ ಚ ॥ ೭-೧-೯೪ ॥

**ಋದಂತಾನಾಮುಶನಸಾದೀನಾಂ ಚಾನಙ್ ಸ್ಯಾದಸಂಬುದ್ಧೌ ಸೌ ॥**

ಋದುಶನಸ್ಪುರುದಂಸೋಽನೇಹಸಾಂ, ಚ ॥ ದ್ವಿಪದಸೂತ್ರ "ಸಖ್ಯುರಸಂಬುದ್ಧೌ" ಸೂತ್ರದಿಂದ "ಅಸಂಬುದ್ಧೌ" ಪದವೂ, "ಅನಙ್ ಸೌ" ಸೂತ್ರವೂ ಅನುವೃತ್ತವಾಗುತ್ತವೆ. ಋಚ್ಚ, ಉಶನಸ್ ಚ, ಪುರುದಂಸಸ್ ಚ, ಅನೇಹಸ್ ಚ ಋದುಶನಸ್ಪುರುದಂಸೋಽನೇಹಸಃ-ತೇಷಾಂ । ಋತ್=ಋಕಾರ. ಉಳಿದ ಮೂರು ಸಾಂತಶಬ್ದಗಳು "ಅಂಗಸ್ಯ" ಅಧಿಕಾರ, ಅದಕ್ಕೆ ಋದಾದಿಗಳು ವಿಶೇಷಣವಾದುದರಿಂದ ತದಂತಲಾಭ. ಸೂತ್ರಾರ್ಥ. ಸಂಬುದ್ಧಿವರ್ಜವಾದ ಸು ಪರದಲ್ಲಿರುವಾಗ ಋದಂತವಾದ, ಮತ್ತು ಉಶನಸಾದಿರೂಪವಾದ ಅಂಗಕ್ಕೆ ಅನಙ್ ಆದೇಶ ಬರುತ್ತದೆ. ಙಿತ್ತಾದುದರಿಂದ (ಙಕಾರ "ಹಲಂತ್ಯಮ್" ಸೂತ್ರದಿಂದ ಇತ್, ಅಕಾರ ಉಚ್ಚಾ

ರಣಾರ್ಥ) "ಙಿಚ್ಚ" ಪರಿಭಾಷೆಯಿಂದ ಅಂಗದ ಅಂತ್ಯಕ್ಕೆ ಬರುತ್ತದೆ. ಕ್ರೋಷ್ಟೃ ಋಕಾರಾಂತವಾದ ಅಂಗ. ಇದಕ್ಕೆ ಸಂಬುದ್ಧಿಯಲ್ಲದ ಸು ಪರವಾಗಿದೆ. ಅನಙ್ ಆದೇಶ ಅಂಗದ ಅಂತ್ಯವಾದ ಋಕಾರಕ್ಕೆ ಬಂದರೆ ಕ್ರೋಷ್ಟ್+ಅನ್+ಸ್= ಕ್ರೋಷ್ಟನ್+ಸ್ ಎಂದಾಗುತ್ತದೆ. ಈಗ ಅದರ ಉಪಧೆಗೆ ದೀರ್ಘ ಹೇಳುತ್ತಾನೆ.

(ಅಬಾದಿಗಳ ಉಪಧೆಗೆ ದೀರ್ಘ ಹೇಳುವ ಸೂತ್ರ)

## ೨೦೭. ಅಪ್ತೃನ್ತೃಚ್‌ಸ್ವಸೃ ನಪ್ತೃ ನೇಷ್ಟೃ ತ್ವಷ್ಟೃ ಕ್ಷತ್ತೃ ಹೋತೃ ಪೋತೃ ಪ್ರಶಾಸ್ತೃಣಾಮ್ ॥ ೬-೪-೧೧ ॥

**ಅಬಾದೀನಾಮುಪಧಾಯಾ ದೀರ್ಘೋಽಸಂಬುದ್ಧೌ ಸರ್ವನಾಮ-ಸ್ಥಾನೇ ॥ ಕ್ರೋಷ್ಟಾರೌ । ಕ್ರೋಷ್ಟಾರಃ । ಕ್ರೋಷ್ಟೂನ್ ॥**

ಒಂದೇ ಪದವುಳ್ಳ ಸೂತ್ರ. ಅಪ್, ಇದೊಂದು ಶಬ್ದ. ತೃನ್, ತೃಚ್, ಇವೆರಡು ಪ್ರತ್ಯಯ. ಸ್ವಸೃ, ನಪ್ತೃ, ನೇಷ್ಟೃ, ತ್ವಷ್ಟೃ, ಕ್ಷತ್ತೃ, ಹೋತೃ, ಪೋತೃ, ಪ್ರಶಾಸ್ತೃ ಈ ಎಂಟು ಋಕಾರಾಂತ ಶಬ್ದಗಳು. ಇವುಗಳ ಮೇಲೆ ಷಷ್ಠೀ ಬಹುವಚನ ಬಂದಿದೆ. "ನೋಪಧಾಯಾಃ" ಸೂತ್ರದಿಂದ "ಉಪಧಾಯಾಃ" "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಸೂತ್ರದಿಂದ "ದೀರ್ಘಃ", "ಸರ್ವನಾಮಸ್ಥಾನೇ ಚಾಸಂಬುದ್ಧೌ" ಚಕಾರ ಬಿಟ್ಟು ಇಡೀ ಸೂತ್ರವೂ ಅನುವೃತ್ತವಾಗುತ್ತವೆ. ಸೂತ್ರಾರ್ಥ. ಸಂಬುದ್ಧಿವರ್ಜವಾದ ಸರ್ವನಾಮಸ್ಥಾನ ಪರವಾದಾಗ ಅಬಾದಿಗಳ ಉಪಧೆಗೆ ದೀರ್ಘ ಬರುತ್ತದೆ. "ಅಲೋಂತ್ಯಾತ್ಪೂರ್ವ ಉಪಧಾ" (176) ಎಂದು ಅಂತ್ಯವರ್ಣದ ಪೂರ್ವ ವರ್ಣಕ್ಕೆ ಉಪಧೆಯೆಂಬ ಸಂಜ್ಞೆ ಹೇಳಿದೆ. ಇಲ್ಲಿ ಸುವೆಂಬುದು ಸಂಬುದ್ಧಿವರ್ಜವಾದ ಸರ್ವನಾಮಸ್ಥಾನ. ಇದು ಪರವಾದುದರಿಂದ ಕ್ರೋಷ್ಟನ್ ಶಬ್ದದ ಉಪಧೆಗೆ ದೀರ್ಘ. ಅಂತ್ಯವರ್ಣ ನಕಾರ ಅದರ ಪೂರ್ವವರ್ಣ ಟಕಾರದ ಮೇಲಿರುವ ಅಕಾರ. ಆಗ ಕ್ರೋಷ್ಟಾನ್+ಸ್ ಎಂದಾಗುತ್ತದೆ. ಸ್ ಹಲಂತದ ಪರದಲ್ಲಿರುವುದರಿಂದ "ಹಲ್‌ಙ್ಯಾಭ್ಯೋದೀರ್ಘಾತ್–" (ಸೂ. ೧೭೯) ಸೂತ್ರದಿಂದ ಅದಕ್ಕೆ ಲೋಪ. ಕ್ರೋಷ್ಟಾನ್. ನಕಾರವು ಪದದ ಕೊನೆಯಲ್ಲಿರುವುದರಿಂದ "ನಲೋಪಃ ಪ್ರಾ–" (ಸೂ. ೧೮೦) ಸೂತ್ರದಿಂದ ಲೋಪ. ಕ್ರೋಷ್ಟಾ.

ಕ್ರೋಷ್ಟೃ+ಔ ಎಂದಿರುವಾಗ "ಋತೋಙಿಸರ್ವನಾಮಸ್ಥಾನಯೋಃ ।" ಸೂತ್ರದಿಂದ ಸರ್ವನಾಮಸ್ಥಾನ ಪರವಾದುದರಿಂದ ಋಕಾರಕ್ಕೆ ಗುಣ. ಋಕಾರದ ಸ್ಥಾನಕ್ಕೆ ಬರುವುದರಿಂದ "ಉರಣ್‌ರಪರಃ" ಸೂತ್ರದಿಂದ ಅಕಾರರೂಪ ಗುಣವು ರಪರವಾಗಿ ಬರುತ್ತದೆ. ಕ್ರೋಷ್ಟರ್+ಔ. "ಅಪ್ತೃನ್ತೃಚ್—" ಸೂತ್ರದಿಂದ ಉಪಧಾ ಅಕಾರಕ್ಕೆ ದೀರ್ಘ. ಕ್ರೋಷ್ಟಾರೌ. ಜಸಿನಲ್ಲಿಯೂ ಹೀಗೆ ಗುಣ, ದೀರ್ಘ. ಕ್ರೋಷ್ಟಾರಃ ॥

ಸಂಬುದ್ಧಿಯಲ್ಲಿ ತೃಜ್ವದ್ಭಾವ ನಿಷೇಧ ಮಾಡಿರುವುದರಿಂದ ಉಕಾರಾಂತವಾಗಿಯೇ ಇರುತ್ತದೆ. ಕ್ರೋಷ್ಟು+ಸ್ ಎಂದಿರುವಾಗ "ಹ್ರಸ್ವಸ್ಯ ಗುಣಃ" ಸೂತ್ರದಿಂದ ಉಕಾರಕ್ಕೆ ಗುಣ. ಕ್ರೋಷ್ಟೋ+ಸ್. ಏಙಂತದ ಪರದಲ್ಲಿ ಸು ಇರುವುದರಿಂದ "ಏಙ್ಹ್ರಸ್ವಾತ್ ಸಂಬುದ್ಧೇಃ" ಸೂತ್ರದಿಂದ ಸುವಿಗೆ ಲೋಪ. ಹೇ ಕ್ರೋಷ್ಟೋ. ದ್ವಿವಚನ ಬಹುವಚನಗಳಲ್ಲಿ ಪ್ರಥಮಾದಂತೇ ರೂಪ. ಹೇ ಕ್ರೋಷ್ಟಾರೌ-ಹೇ ಕ್ರೋಷ್ಟಾರಃ ॥

ದ್ವಿತೀಯಾ ಏಕವಚನ, ದ್ವಿವಚನ ಸರ್ವನಾಮಸ್ಥಾನವಾದುದರಿಂದ ಹಿಂದಿನಂತೇ ಗುಣ. ಉಪಧಾದೀರ್ಘ. ಕ್ರೋಷ್ಟೃ+ಅಮ್=ಕ್ರೋಷ್ಟಾರಮ್ ।-ಕ್ರೋಷ್ಟಾರೌ. ಬಹುವಚನದಲ್ಲಿ ಶಸ್ ಪರವಾದಾಗ ಸರ್ವನಾಮಸ್ಥಾನವಲ್ಲದುದರಿಂದ ತೃಜ್ವದ್ಭಾವವಿಲ್ಲ. ಕ್ರೋಷ್ಟು+ಅಸ್. "ಪ್ರಥಮಯೋಃ ಪೂರ್ವಸವರ್ಣದೀರ್ಘಃ" ಸೂತ್ರದಿಂದ ಪೂರ್ವಸವರ್ಣದೀರ್ಘ. ಕ್ರೋಷ್ಟೂಸ್. "ತಸ್ಮಾಚ್ಛಸೋ ನಃ ಪುಂಸಿ" ಸೂತ್ರದಿಂದ ಸಕಾರಕ್ಕೆ ನತ್ವ. ಕ್ರೋಷ್ಟೂನ್ ॥ ತೃತೀಯಾದಲ್ಲಿ ಟಾಪರವಾದಾಗ ವಿಕಲ್ಪವಾಗಿ ತೃಜ್ವದ್ಭಾವ ಹೇಳುತ್ತಾನೆ.

(ವಿಕಲ್ಪವಾಗಿ ತೃಜ್ವದ್ಭಾವ ಹೇಳುವ ಸೂತ್ರ)

## ೨೦೮. ವಿಭಾಷಾ ತೃತೀಯಾದಿಷ್ವಚಿ ॥ ೭-೧-೯೭ ॥

**ಅಜಾದಿಷು ತೃತೀಯಾದಿಷು ಕ್ರೋಷ್ಟುರ್ವಾ ತೃಜ್ವತ್ । ಕ್ರೋಷ್ಟ್ರಾ, ಕ್ರೋಷ್ಟ್ರೇ ॥**

ವಿಭಾಷಾ, ತೃತೀಯಾದಿಷು, ಅಚಿ ॥ ತ್ರಿಪದಸೂತ್ರ. "ತೃಜ್ವತ್ ಕ್ರೋಷ್ಟುಃ" ಸೂತ್ರವು ಅನುವೃತ್ತವಾಗುತ್ತದೆ. ಅಚಿ ಸಪ್ತಮ್ಯಂತವು "ತೃತೀಯಾದಿಷು" ಸಪ್ತಮ್ಯಂತಕ್ಕೆ ವಿಶೇಷಣ. "ಯಸ್ಮಿನ್ ವಿಧಿಸ್ತದಾದಾವಲ್ಗ್ರಹಣೇ" ಪರಿಭಾಷೆಯಿಂದ ತದಾದಿಲಾಭ. ಅಜಾದಿಯಾದ ತೃತೀಯಾದಿಗಳು ಪರವಾದಾಗ ಎಂದರ್ಥ. ವಿಭಾಷಾಪದಕ್ಕೆ ವಿಕಲ್ಪವೆಂದರ್ಥ. **ಸೂತ್ರಾರ್ಥ.** ಅಜಾದಿ ತೃತೀಯಾದಿ ವಿಭಕ್ತಿ ಪರವಾದಾಗ ಕ್ರೋಷ್ಟುಶಬ್ದವು ವಿಕಲ್ಪವಾಗಿ ತೃಜ್ವದ್ಭಾವವನ್ನು ಹೊಂದುತ್ತದೆ. ಕ್ರೋಷ್ಟು ಶಬ್ದಸ್ಥಾನದಲ್ಲಿ ವಿಕಲ್ಪವಾಗಿ ಕ್ರೋಷ್ಟೃ ಶಬ್ದವನ್ನು ಹೇಳಬೇಕು ಎಂದರ್ಥ. ಟಾ ಅಜಾದಿಯಾದುದರಿಂದ (ಟ್+ಆ) ವಿಕಲ್ಪವಾಗಿ ಕ್ರೋಷ್ಟೃಶಬ್ದ ಹೇಳಿದರೆ ಕ್ರೋಷ್ಟೃ+ಆ ಎಂದಾಗುತ್ತದೆ. "ಇಕೋಯಣಚಿ" ಸೂತ್ರದಿಂದ ಯಣ್. ಕ್ರೋಷ್ಟ್ರಾ. ಕ್ರೋಷ್ಟೃಭಾವಬಾರದಿದ್ದರೆ ಉಕಾರಾಂತವಾದುದರಿಂದ ಘಿಸಂಜ್ಞಾ ಬಂದು "ಆಙೋನಾಽಸ್ತ್ರಿಯಾಮ್" ಸೂತ್ರದಿಂದ ಟಾ ಪ್ರತ್ಯಯಕ್ಕೆ ನಾ ಭಾವ. ಕ್ರೋಷ್ಟು+ಆ-ಕ್ರೋಷ್ಟುನಾ ॥ ಹಲಾದಿಯಲ್ಲಿ ಯಾವಕಾರ್ಯವೂ ಇಲ್ಲ. ಕ್ರೋಷ್ಟುಭ್ಯಾಮ್-ಕ್ರೋಷ್ಟುಭಿಃ ।

ಚತುರ್ಥಿಯಲ್ಲಿ ಙೇ ಪರವಾದಾಗ ಅಜಾದಿಯಾದುದರಿಂದ ವಿಕಲ್ಪವಾಗಿ ತೃಜ್ವದ್ಭಾವಬಂದರೆ ಕ್ರೋಷ್ಟೃ+ಏ-ಯಣ್. ಕ್ರೋಷ್ಟ್ರೇ. ಬಾರದಿದ್ದರೆ "ಘೇರ್ಙಿತಿ" ಸೂತ್ರದಿಂದ ಉಕಾರಕ್ಕೆ ಗುಣ. ಅವಾದೇಶ. ಕ್ರೋಷ್ಟು+ಏ. ಕ್ರೋಷ್ಟೋ+ಏ. ಕ್ರೋಷ್ಟವೇ. ದ್ವಿ ಬಹುವಚನಗಳಲ್ಲಿ ಕ್ರೋಷ್ಟುಭ್ಯಾಮ್— ಕ್ರೋಷ್ಟುಭ್ಯಃ ॥ ಪಂಚಮಿಯಲ್ಲಿ ಙಸಿ ಪರವಾದಾಗ ಹಿಂದಿನಂತೆ ವಿಕಲ್ಪವಾಗಿ ತೃಜ್ವದ್ಭಾವ. ಕ್ರೋಷ್ಟೃ+ಅಸ್, ಎಂದಿರುವಾಗ ಯಣ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಋಕಾರಕ್ಕೆ ಉತ್ವ ಹೇಳುತ್ತಾನೆ.

(ಋಕಾರಕ್ಕೆ ಉತ್ವ ಹೇಳುವ ಸೂತ್ರ)

## ೨೦೯. ಋತ ಉತ್ ॥ ೬-೧-೧೧೧ ॥

**ಋತೋ ಙಸಿಙಸೋರತಿ ಉದೇಕಾದೇಶಃ । ರಪರಃ ॥**

ಋತಃ, ಉತ್ ॥ ದ್ವಿಪದಸೂತ್ರ. "ಏಙಃ ಪದಾಂತಾದತಿ" ಸೂತ್ರದಿಂದ "ಅತಿ" "ಙಸಿಙಸೋಶ್ಚ" ಸೂತ್ರದಿಂದ "ಙಸಿಙಸೋಃ" ಅನುವೃತ್ತವಾಗುತ್ತವೆ. ಪ್ರತ್ಯಯದಿಂದ ಅಂಗವು ಆಕ್ಷಿಪ್ತವಾಗುತ್ತದೆ. ಋತಃ ಎಂಬುದು ಅಂಗಕ್ಕೆ ವಿಶೇಷಣ. ತದಂತವಿಧಿ. "ಏಕಃಪೂರ್ವಪರಯೋಃ" ಅಧಿಕಾರ. ಅತಿ ಸಪ್ತಮೀ. **ಸೂತ್ರಾರ್ಥ** ಋದಂತವಾದ ಅಂಗದಪರದಲ್ಲಿ ಙಸಿಙಸ್ ಪ್ರತ್ಯಯಗಳ ಅಕಾರಪರವಾದಾಗ ಋಕಾರ ಅಕಾರಗಳಿಗೆ ಉಕಾರವು ಏಕಾದೇಶವಾಗಿ ಬರುತ್ತದೆ. ಋಕಾರದ ಸ್ಥಾನಕ್ಕೆ ಆದೇಶ ಬರುವುದಾದುದರಿಂದ "ಉರಣ್ರಪರಃ" ಸೂತ್ರದಿಂದ ರಪರವಾಗಿ ಬರುತ್ತದೆ. ಕೋಷ್ಟ್+ಉರ್-ಸ್-ಕ್ರೋಷ್ಟುರ್ಸ್. ಎಂದಿರುವಾಗ ಸಕಾರಕ್ಕೆ ಲೋಪಹೇಳುತ್ತಾನೆ.

(ಸಕಾರಕ್ಕೆ ಲೋಪ ಹೇಳುವ ಸೂತ್ರ)

## ೨೧೦. ರಾತ್ಸಸ್ಯ ॥ ೮-೨-೨೪ ॥

**ರೇಫಾತ್ಸಂಯೋಗಾಂತಸ್ಯ ಸಸ್ಯೈವ ಲೋಪೋ ನಾನ್ಯಸ್ಯ । ರಸ್ಯ ವಿಸರ್ಗಃ ॥ ಕ್ರೋಷ್ಟುಃ ೨ ॥ ಕ್ರೋಷ್ಟ್ರೋಃ ॥**

ರಾತ್, ಸಸ್ಯ ॥ ದ್ವಿಪದ ಸೂತ್ರ. "ಸಂಯೋಗಾಂತಸ್ಯ ಲೋಪಃ" ಸೂತ್ರವು ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ರೇಫದ ಪರದಲ್ಲಿರುವ ಸಂಯೋಗದ ಅಂತ್ಯದಲ್ಲಿರುವ ಸಕಾರಕ್ಕೆ ಲೋಪ ಬರುತ್ತದೆ. ಪ್ರಕೃತ ಸಂಯೋಗ ರ್ಸ್. ಇದರ ಅಂತ್ಯದ ಸಕಾರಕ್ಕೆ ಲೋಪಬಂದರೆ ಕ್ರೋಷ್ಟುರ್ ಎಂದಾಗುತ್ತದೆ. ರೇಫ ಅವಸಾನದಲ್ಲಿರುವುದರಿಂದ "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ಅದಕ್ಕೆ ವಿಸರ್ಗ. ಕ್ರೋಷ್ಟುಃ. ಷಷ್ಠೀಏಕವಚನದಲ್ಲಿಯೂ ಹೀಗೆಯೇ ರೂಪವಾಗುತ್ತದೆ. ಇಲ್ಲಿ ಸಕಾರಲೋಪಕ್ಕೋಸ್ಕರ "ರಾತ್ಸಸ್ಯ" ಸೂತ್ರ ಏಕೆ ಹೇಳಬೇಕು? ಈ ಸೂತ್ರ

ದಿಂದ ಆಗುವ ಕಾರ್ಯವು "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದಲೇ ಆಗುತ್ತದೆ. ಯಾವುದರ ಪರದಲ್ಲಿದ್ದರೂ ಸಂಯೋಗಾಂತವಾದ ಪದವಾದರೆ ಸರಿ. ಅಗ ಅಂತ್ಯಕ್ಕೆ ಅದರಿಂದ ಲೋಪಬರುತ್ತದೆ. ಹೀಗಿರುವಾಗ ಪುನಃ ಈ ಸೂತ್ರವೇಕೆ? ವ್ಯರ್ಥವಲ್ಲವೇ ಅಂದರೆ "ಸಿದ್ಧೇ ಸತ್ಯಾರಭ್ಯಮಾಣೋ ವಿಧಿಃ ನಿಯಮಾಯ" ಒಂದು ಸೂತ್ರದಿಂದ ಸಿದ್ಧಿಸುತ್ತಿರುವಾಗ ಪುನಃ ಅದನ್ನೇ ಇನ್ನೊಂದು ಸೂತ್ರ ಹೇಳುವುದಾದರೆ ಅದು ನಿಯಮಕ್ಕೋಸ್ಕರವೆಂದುದರಿಂದ ಈ ಸೂತ್ರವು ಸಂಯೋಗಾಂತ ಲೋಪವನ್ನು ನಿಯಮಮಾಡುತ್ತದೆ. ರೇಫದಪರದಲ್ಲಿ ಸಂಯೋಗಾಂತಲೋಪಬರುವುದಾದರೆ ಸಕಾರಕ್ಕೆ ಮಾತ್ರ ಲೋಪ. ಇತರವರ್ಣಗಳಿದ್ದರೆ ಲೋಪಬರುವುದಿಲ್ಲ. ಊರ್ಜ್ ಶಬ್ದವನ್ನು ಮುಂದೆ ಹೇಳುತ್ತಾನೆ. ಅಲ್ಲಿ ರೇಫದಪರದಲ್ಲಿ ಜಕಾರವಿರುವುದರಿಂದ ಲೋಪಬರುವುದಿಲ್ಲ. ಹೀಗೆ ಕ್ರೋಷ್ಟೃಭಾವಬಂದಾಗ ಕ್ರೋಷ್ಟುಃ ಎಂದು ಒಂದುರೂಪ. ಬಾರದಿದ್ದರೆ ಕ್ರೋಷ್ಟು+(ಜಸಿ) ಅಸ್ ಎಂದಿರುವಾಗ "ಘೇರ್ಙಿತಿ" ಸೂತ್ರದಿಂದ ಉಕಾರಕ್ಕೆ ಗುಣ. "ಕ್ರೋಷ್ಟೋ+ಅಸ್. "ಜಸಿಜಸೋಶ್ಚ" ಸೂತ್ರದಿಂದ ಪೂರ್ವರೂಪ. ಕ್ರೋಷ್ಟೋಸ್. ರುತ್ವವಿಸರ್ಗ. ಕ್ರೋಷ್ಟೋಃ-ಕ್ರೋಷ್ಟುಭ್ಯಾಮ್-ಕ್ರೋಷ್ಟುಭ್ಯಃ ||

ಷಷ್ಠೀ ಏಕವಚನದಲ್ಲಿ ಪಂಚಮೀಏಕವಚನದ ರೂಪವೇ, ಕ್ರೋಷ್ಟುಃ. ತೃಜ್ವದ್ಭಾವ ಬಾರದಿದ್ದರೆ ಕ್ರೋಷ್ಟೋಃ | ದ್ವಿವಚನದಲ್ಲಿ ತೃಜ್ವದ್ಭಾವ ಬಂದಾಗಲೂ ಬಾರದಿರುವಾಗಲೂ ಯಣ್. ಕ್ರೋಷ್ಟೃ+ಜಸ್. ಕ್ರೋಷ್ಟ್ರೋಸ್-ಕ್ರೋಷ್ಟ್ರೋಃ || ಕ್ರೋಷ್ಟು+ಓಸ್ ಕ್ರೋಷ್ಟ್ವೋಃ || ಬಹುವಚನದಲ್ಲಿ ಆಮ್ ಪರವಾದಾಗ ಅಜಾದಿಯಾದುದರಿಂದ ತೃಜ್ವದ್ಭಾವವೂ ಬರಬಹುದು. ಹ್ರಸ್ವದ ಪರದಲ್ಲಿರುವುದರಿಂದ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಡಾಗಮವೂ ಬರಬಹುದು. ಆಮಿಗೆ ನುಟ್ ಬಂದರೆ ತೃಜ್ವದ್ಭಾವ ಬರುವುದಿಲ್ಲ. ಹಲಾದಿಯಾಗುತ್ತದೆ. "ವಿಪ್ರತಿಷೇಧೇ ಪರಂ ಕಾರ್ಯಮ್" ಎಂಬುದರಿಂದ ಕಾರ್ಯ ಹೇಳುವುದಾದರೆ ಪರಸೂತ್ರ ತೃಜ್ವದ್ಭಾವ ಹೇಳುವುದು. (ವಿಭಾಷಾತೃತೀಯಾದಿಷ್ವಚಿ) ತೃಜ್ವದ್ಭಾವ ಬಂದಮೇಲೆ ನುಟ್ ಬರುವುದಿಲ್ಲ. ಅಜಾದಿ ಪ್ರತ್ಯಯವನ್ನು ನಿಮಿತ್ತೀಕರಿಸಿ ಬಂದ ತೃಜ್ವದ್ಭಾವವು ಅಜಾದಿತ್ವವನ್ನು ಭಂಗಮಾಡುವ ನುಟಿಗೆ ನಿಮಿತ್ತವಾಗುವುದಿಲ್ಲ. "ಸಂನಿಪಾತಲಕ್ಷಣೋ ವಿಧಿರನಿಮಿತ್ತಂ ತದ್ವಿಘಾತಸ್ಯ" ಎಂಬ ಪರಿಭಾಷೆಯು ಈ ಅರ್ಥವನ್ನು ಹೇಳುತ್ತದೆ. (ಉಂಡಮನೆಗೆರಡನ್ನು ಬಗೆಯಬಾರದು. ಇದರ ತಾತ್ಪರ್ಯ) ಯಾವುದೋ ಒಂದು ಸಂಬಂಧವನ್ನು ನಿಮಿತ್ತೀಕರಿಸಿ ಬಂದ ಒಂದು ಕಾರ್ಯವು ಆ ಸಂಬಂಧವಿಘಾತಕವಾಗುವುದಿಲ್ಲ. ಹೀಗೆ ಪರಸೂತ್ರದಿಂದ ತೃಜ್ವದ್ಭಾವ ಪ್ರಾಪ್ತವಾದರೆ ವಾರ್ತಿಕಕಾರರು ನುಟೇ ಇಲ್ಲಿ ಪ್ರಬಲವೆನ್ನುತ್ತಾರೆ.

(ಪೂರ್ವವಿಪ್ರತಿಷೇಧದಿಂದ ನುಟ್‌ನ್ನು ಹೇಳುವ ವಾರ್ತಿಕ)

**ವಾ || (ನುಮಚಿರತೃಜ್ವದ್ಭಾವೇಭ್ಯೋ, ನುಟ್, ಪೂರ್ವವಿಪ್ರತಿ-**

ಷೇಧೇನ ||) ಕ್ರೋಷ್ಟೂನಾಮ್ || ಪಕ್ಷೇ ಹಲಾದೌ ಚ ಶಂಭು-ವತ್ ||

ತ್ರಿಪದ ವಾರ್ತಿಕ. ನುಮ್, ಅಚಿರ, ತೃಜ್ವದ್ಭಾವಗಳಿಗಿಂತಲೂ ಪೂರ್ವ ವಿಪ್ರತಿಷೇಧದಿಂದ ನುಟೇ ಬರುತ್ತದೆ. ನುಮ್, ಅಚಿರ ಮುಂದೆ ಬರುತ್ತವೆ. "ವಿಪ್ರತಿಷೇಧೇ ಪರಂ ಕಾರ್ಯಂ" ಎಂದಿದ್ದರೆ ಅಲ್ಲಿ ಪರಸ್ಥಾನದಲ್ಲಿ ಪೂರ್ವಂ ಕಾರ್ಯಮ್ ಎಂದು ಮಾಡಿಕೊಳ್ಳಬೇಕು. ಆಗ ಪೂರ್ವಸೂತ್ರ, ನುಡ್ ವಿಧಾಯಕ ವಾದ "ಹ್ರಸ್ವನದ್ಯಾಪೋನುಟ್" ಎಂಬುದು ಆಗುವುದರಿಂದ ಅದೇ ಬರುತ್ತದೆ. ಕೆಲವರು ಪರಂಕಾರ್ಯಂ ಎಂಬುದಕ್ಕೆ ಉತ್ಕೃಷ್ಟವಾದದ್ದು ಮಾಡಬೇಕು ಎಂದರ್ಥ ಸ್ವೀಕಾರಮಾಡಿ ಉತ್ಕೃಷ್ಟವೆಂದರೆ ಪ್ರಕೃತ ಬೇಕಾದದ್ದು ಎಂದು ಯಾವುದು ಬೇಕೋ ಅದನ್ನು ತೆಗೆದುಕೊಂಡು ಪ್ರಕೃತಕಾರ್ಯ ಮಾಡುತ್ತಾರೆ. ಇನ್ನು ಕೆಲವರು "ವಿಪ್ರತಿ-ಷೇಧೇಽಪರಂ ಕಾರ್ಯಮ್" ಎಂದು ಪಾಠಮಾಡಿ ಅಪರಂ ಕಾರ್ಯಂ ಎಂದು ಛೇದಮಾಡುತ್ತಾರೆ. ಆಗ ಅಪರಂ ಎಂದರೆ ಪೂರ್ವಸೂತ್ರ. ಬೇಕಾದಲ್ಲಿ ಹೀಗೆ ಮಾಡಿಕೊಳ್ಳುವುದು. ಪ್ರಕೃತ ಕ್ರೋಷ್ಟು+ಆಮ್ ಎಂದಿರುವಾಗ ತೃಜ್ವದ್ಭಾವವನ್ನು ಬಾಧಿಸಿ ನುಟೇ ಬಂದರೆ ಕ್ರೋಷ್ಟು+ನಾಮ್ ಆಗುತ್ತದೆ. ಈಗ ಹಲಾದಿಯಾದುದ ರಿಂದ ತೃಜ್ವದ್ಭಾವ ಬರುವುದಿಲ್ಲ "ನಾಮಿ" ಸೂತ್ರದಿಂದ ದೀರ್ಘ. ಕ್ರೋಷ್ಟೂನಾಮ್.

ಸಪ್ತಮಿಯಲ್ಲಿ ಙಿ ಪರವಾದಾಗ ಅಜಾದಿಯಾದುದರಿಂದ ಕ್ರೋಷ್ಟೃಭಾವ ಬಂದರೆ "ಋತೋಙಿಸ"(ಸೂ ೨೦೫) ಸೂತ್ರದಿಂದ ಋಕಾರಕ್ಕೆ ಗುಣ. ರಪರವಾಗಿ ಬಂದರೆ ಕ್ರೋಷ್ಟರ್+ಇ=ಕ್ರೋಷ್ಟರಿ. ತೃಜ್ವದ್ಭಾವಬಾರದಿದ್ದರೆ ಕ್ರೋಷ್ಟು+ಇ ಎಂದಿರುವಾಗ "ಅಚ್ಚಘೇಃ" ಸೂತ್ರದಿಂದ ಉಕಾರಕ್ಕೆ ಅಕಾರ. ಙಿಗೆ ಔಕಾರಾ ದೇಶ. ಕ್ರೋಷ್ಟ+ಔ "ವೃದ್ಧಿರೇಚಿ" ಸೂತ್ರದಿಂದ ವೃದ್ಧಿ, ಕ್ರೋಷ್ಟೌ. ದ್ವಿವಚನದಲ್ಲಿ ಹಿಂದಿನಂತೇ ಕ್ರೋಷ್ಟ್ರೋಃ-ಕ್ರೋಷ್ಟ್ವೋಃ ಎರಡುರೂಪ. ಬಹುವಚನದಲ್ಲಿ ಹಲಾದಿ ಯಾದುದರಿಂದ ತೃಜ್ವದ್ಭಾವವಿಲ್ಲ. "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷತ್ವ. ಕ್ರೋಷ್ಟುಷು. ಇದನ್ನೇ ಹಲಾದಿಯಲ್ಲಿಯೂ, ತೃಜ್ವದ್ಭಾವಬಾರದಿರುವಾ ಗಲೂ ಶಂಭು ಶಬ್ದದಂತೇ ರೂಪವಾಗುತ್ತದೆ. ಎಂದು ಹೇಳಿರುತ್ತಾನೆ.

ಇತಿ ಉದಂತಪ್ರಕರಣಮ್ ||



ಊಕಾರಾ. ತ, ಹೂಹೂ ಶಬ್ದ. ದೇವಗಾಯಕ.

ಹೂಹೂ+ಸ್. ರುತ್ವವಿಸರ್ಗ. ಹೂಹೂಃ || ಹೂಹೂ+ಔ. ಯಣ್. ಹೂಹ್ವೌ. ಹೂಹೂ+ಅಸ್ (ಜಸ್) ಯಣ್. ಸಕಾರಕ್ಕೆ ರುತ್ವವಿಸರ್ಗ. ಹೂಹ್ವಃ ಸಂಬೋಧನೆಯಲ್ಲಿ ಇದೇರೂಪ. ದ್ವಿ|| ಹೂಹೂ+ಅಮ್ "ಅಮಿಪೂರ್ವಃ" ಸೂತ್ರ ದಿಂದ ಪೂರ್ವರೂಪ. ಹೂಹೂಮ್. ಹೂಹೂ+ಔ. ಯಣ್. ಹೂಹ್ವೌ.

ಹೂಹೂ+ಅಸ್ (ಶಸ್) "ಪ್ರಥಮಯೋಃ ಪೂರ್ವಸವರ್ಣಃ" ಪೂರ್ವಸವರ್ಣ ದೀರ್ಘ. "ತಸ್ಮಾಚ್ಛಸೋ ನಃ ಪುಂಸಿ" ಸೂತ್ರದಿಂದ ಸಕಾರಕ್ಕೆ ನತ್ವ ಹೂಹೂನ್. ತೃ || ಹೂಹೂ+ಆ (ಟಾ) ಯಣ್. ಹೂಹ್ವಾ. ಹೂಹೂಭ್ಯಾಂ-ಹೂಹೂಭಿಃ || ಚ || ಹೂಹೂ+ಏ (ಙೇ) ಯಣ್. ಹೂಹ್ವೇ-ಹೂಹೂಭ್ಯಾಂ,-ಹೂಹೂಭ್ಯಃ || ಪಂ || ಹೂಹೂ+ಅಸ್ (ಙಸಿ) ಯಣ್. ಹೂಹ್ವಃ ಹೂಹೂಭ್ಯಾಂ-ಹೂಹೂಭ್ಯಃ || ಷ || ಹೂಹೂ+ಅಸ್ (ಙಸ್) ಯಣ್. ಹೂಹ್ವಃ ಹೂಹ್ವೋಃ ಹೂಹೂ+ಆಮ್-ಹೂಹ್ವಾಮ್. ಸ || ಹೂಹೂ+ಇ (ಙಿ) ಯಣ್ ಹೂಹ್ವಿ ಹೂಹ್ವೋಃ ಹೂಹೂಷು ||

---

ಅತಿಚಮೂ ಶಬ್ದ. ಸೈನ್ಯವನ್ನು ಅತಿಕ್ರಮಿಸಿದವನು.

**ಅತಿಚಮೂಶಬ್ದೇತು ನದೀಕಾರ್ಯಂ ವಿಶೇಷಃ || ಹೇ ಅತಿಚಮು | ಅತಿಚಮ್ವೈ | ಅತಿಚಮ್ವಾಃ ೨ | ಅತಿಚಮೂನಾಮ್ | ಅತಿಚಮ್ವಾಮ್ ||**

ಚಮೂಂ ಅತಿಕ್ರಾಂತಃ ಅತಿಚಮೂಃ || ಚಮೂ ಶಬ್ದಕ್ಕೆ ನದೀ ಸಂಜ್ಞೆಯಿರುವುದರಿಂದ ಸಮಾಸವಾದಾಗಲೂ "ಪ್ರಥಮ ಲಿಂಗಗ್ರಹಣಂ ಚ" ಎಂಬುದರಿಂದ ಅತಿ ಚಮೂ ಶಬ್ದಕ್ಕೂ ನದೀ ಸಂಜ್ಞಾ ಬರುವುದರಿಂದ ನದೀ ಕಾರ್ಯಗಳು ಬರುತ್ತವೆ. ನದೀ ಕಾರ್ಯಗಳು ಬಂದ ರೂಪಗಳನ್ನು ಮಾತ್ರ ಹೇಳಿರುತ್ತಾನೆ. ಸಂಬುದ್ಧಿಯಲ್ಲಿ "ಅಂಬಾರ್ಥನದ್ಯೋರ್ಹ್ರಸ್ವಃ" ಎಂಬುದರಿಂದ ಊಕಾರಕ್ಕೆ ಹ್ರಸ್ವ ಬಂದು ಹ್ರಸ್ವದ ಪರದ ಸುವಿಗೆ "ಏಙ್ಹ್ರಸ್ವಾತ್ ಸಂಬುದ್ಧೇಃ" ಸೂತ್ರದಿಂದ ಲೋಪ. ಹೇ ಅತಿ ಚಮು. ಚತುರ್ಥ್ಯೇಕವಚನದಲ್ಲಿ "ಆಣ್ನದ್ಯಾಃ" ಎಂಬುದರಿಂದ ಙೇ ವಿಭಕ್ತಿಗೆ ಆಟ್. "ಆಟಶ್ಚ" ಸೂತ್ರದಿಂದ ವೃದ್ಧಿ. ಅತಿಚಮೂ=ಏ-ಅತಿಚಮೂ+ಆ+ಏ ಅತಿಚಮೂ+ಐ. ಯಣ್. ಅತಿಚಮ್ವೈ || ಪಂಚಮೀ ಷಷ್ಠೀ ಏಕವಚನಗಳಲ್ಲಿ ಅಸ್ ವಿಭಕ್ತಿಗೆ "ಆಣ್ನದ್ಯಾಃ" ಸೂತ್ರದಿಂದ ಆಡಾಗಮ "ಆಟಶ್ಚ" ಸೂತ್ರದಿಂದ ವೃದ್ಧಿ. ಅತಿಚಮೂ=ಅಸ್-ಅತಿಚಮೂ+ಆ+ಅಸ್-ಅತಿಚಮೂ+ಆಸ್. ಯಣ್ ಅಕಾರಕ್ಕೆ ರುತ್ವ ವಿಸರ್ಗ. ಅತಿಚಮ್ವಾಃ ೨ || ಷಷ್ಠೀ ಬಹುವಚನದಲ್ಲಿ ಆಮ್ ಪರವಾದಾಗ "ಹ್ರಸ್ವನದ್ಯಾಪೋ ನುಟ್" ಸೂತ್ರದಿಂದ ಆಮಿಗೆ ನುಟಾಗಮ. ಅತಿಚಮೂನಾಮ್ || ಸಪ್ತಮ್ಯೇಕವಚನದಲ್ಲಿ ಙಿ ಪರವಾದಾಗ ಅದಕ್ಕೆ "ಙೇರಾಮ್ನದ್ಯಾಮ್ನೀಭ್ಯಃ" ಸೂತ್ರದಿಂದ ನದಿಯುಪರದಲ್ಲಿರುವುದರಿಂದ ಆಮ್ ಆದೇಶ. ಆಮಿಗೆ ಆಡಾಗಮ ವೃದ್ಧಿ. ಅತಿಚಮೂ+ಇ-ಅತಿಚಮೂ+ಆಮ್-ಅತಿಚಮೂ+ಆ-ಆಮ್-ಅತಿಚಮೂ+ಆಮ್ ಯಣ್. ಅತಿಚಮ್ವಾಮ್. ಹೀಗೆ ನದೀಕಾರ್ಯಗಳಿಂದ ಮಾತ್ರ ವಿಶೇಷರೂಪ ಹೊಂದುತ್ತದೆ. ಉಳಿದ ವಿಭಕ್ತಿಗಳಲ್ಲಿ ಹೂಹೂ ಶಬ್ದದಂತೇ ರೂಪವಾಗುತ್ತದೆ.

## ಖಲಪೂ ಶಬ್ದ. (ಅಂಗಳಗುಡಿಸುವವನು)

ಖಲಂ ಪುನಾತಿ ಇತಿ ಖಲಪೂಃ. ಅಂಗಳವನ್ನು ಶುದ್ಧಿ ಮಾಡುವವನು. ಪೂಞ್ ಪವನೇ ಧಾತು. ಕ್ವಿಪ್ ಪ್ರತ್ಯಯ. ಸುವಿಗೆ ರುತ್ವವಿಸರ್ಗ. ಖಲಪೂಃ. ದ್ವಿವಚನ ಔ ಪರವಾದಾಗ ಉವರ್ಣಾಂತಧಾತುವಾದುದರಿಂದ "ಅಚಿಶ್ನುಧಾತುಭ್ರುವಾಂ- (ಸೂ.೨೦೦) ಸೂತ್ರದಿಂದ ಇಯಙಾದೇಶಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಯಣ್ ಹೇಳುತ್ತಾನೆ.

(ಧಾತುವಿನ ಉಕಾರಕ್ಕೆ ಯಣ್ ಹೇಳುವ ಸೂತ್ರ)

### ೨೧೧. ಓಃ ಸುಪಿ ॥ ೬-೪-೮೩ ॥

ಧಾತ್ವವಯವಸಂಯೋಗಪೂರ್ವೋ ನ ಭವತಿ ಯ ಉವರ್ಣಸ್ತ- ದಂತೋ ಯೋ ಧಾತುಃ ತದಂತಸ್ಯ ಅನೇಕಾಚೋಽಂಗಸ್ಯ ಯಣ್ ಸ್ಯಾದಚಿ ಸುಪಿ ॥ ಖಲಪ್ವೌ । ಖಲಪ್ವಃ । ಏವಂ ಸುಲ್ವಾದಯಃ ।

ಓಃ. ಸುಪಿ ॥ ದ್ವಿಪದ ಸೂತ್ರ. "ಏರನೇಕಾಚೋಽಸಂಯೋಗ ಪೂರ್ವಸ್ಯ" ಏಃ ಬಿಟ್ಟು ಎಲ್ಲವೂ ಅನುವೃತ್ತವಾಗುತ್ತದೆ. "ಅಚಿಶ್ನುಧಾತು"-(೨೦೧) ಸೂತ್ರ ದಿಂದ "ಅಚಿ" ಅನುವೃತ್ತಿ. ಏಃ ಸ್ಥಾನದಲ್ಲಿ ಓಃ ಸೇರಿಸಿಕೊಂಡರೆ ಏರನೇಕಾಚಃ- (ಸೂ ೨೦೧) ಸೂತ್ರದಲ್ಲಿ ಹೇಳಿದಂತೇ ಸೂತ್ರಾರ್ಥವಾಗುತ್ತದೆ 'ಅಚಿ' ಎಂಬುದು ಸುಪಿಗೆ ವಿಶೇಷಣ. "ಯಸ್ಮಿನ್ ವಿಧಿಸ್ತದಾದಾವಲ್ಗ್ರಹಣೇ." ಪರಿಭಾಷೆಯಿಂದ ಅಜಾದಿಯಾದ ಸುಪ್ ಎಂದರ್ಥವಾಗುತ್ತದೆ. "ಏರನೇಕಾಚಃ"-ಸೂತ್ರದಲ್ಲಿ ಹೇಳಿ ದಂತೆಯೇ ಅನ್ವಯಕ್ರಮ. **ಸೂತ್ರಾರ್ಥ.** ಧಾತ್ವವಯವಸಂಯೋಗವು ಪೂರ್ವ ದಲ್ಲಿ ಇಲ್ಲದೇ ಇರುವ ಉಕಾರವೇ ಅಂತವಾದ ಧಾತುವೇ ಅಂತವಾದ ಅನೇಕಾಚಾದ ಅಂಗಕ್ಕೆ ಅಜಾದಿಯಾದ ಸುಪ್ ಪರವಾದಾಗ ಯಣ್ ಬರುತ್ತದೆ. ಖಲಪೂ+ಔ ಎಂದಿರುವಾಗ ಔ ಅಜಾದಿಯಾದ ಪ್ರತ್ಯಯ. ಇದು ಪರವಾದಾಗ ಅನೇಕಾಚಾದ ಅಂಗ=ಖಲಪೂ ಇದು ಉಕಾರಾಂತವಾದ ಧಾತುವೇ ಪೂ ಎಂಬುದು ಅಂತದಲ್ಲಿ ಕೂಡಿದೆ. ಉಕಾರದ ಹಿಂದೆ ಧಾತ್ವವಯವಸಂಯೋಗವೂ ಇಲ್ಲ. ಆದುದರಿಂದ ಯಣ್ ಬಂದರೆ ಖಲಪ್ವೌ ಎಂದಾಗುತ್ತದೆ. ಹೀಗೆ ಅಜಾದಿಯಲ್ಲಿ ಎಲ್ಲಾ ಕಡೆಯ ಲ್ಲಿಯೂ ಯಣ್ ಬರುತ್ತದೆ. ಹಲಾದಿಯಲ್ಲಿ ಕೇವಲ ವಿಭಕ್ತಿಯನ್ನು ಸೇರಿಸಬೇಕು. ಪ್ರ ॥ ಖಲಪೂಃ ಖಲಪ್ವೌ-ಖಲಪ್ವಃ । ದ್ವಿ-ಖಲಪ್ವಮ್-ಖಲಪ್ವೌ ಖಲಪ್ವಃ-ತೃ- ಖಲಪ್ವಾ-ಖಲಪೂಭ್ಯಾಮ್ ಖಲಪೂಭಿಃ । ಚ-ಖಲಪ್ವೇ-ಖಲಪೂಭ್ಯಾಮ್-ಖಲ ಪೂಭ್ಯಃ ॥ ಪಂ-ಖಲಪ್ವಃ-ಖಲಪೂಭ್ಯಾಂ-ಖಲಪೂಭ್ಯಃ ॥ ಷ-ಖಲಪ್ವಃ-ಖಲಪ್ವೋಃ- ಖಲಪ್ವಾಮ್ ॥ ಸ-ಖಲಪ್ವಿ-ಖಲಪ್ವೋಃ-ಖಲಪೂಷು ॥

ಹೀಗೇ ಸುಲೂ ಮುಂತಾದ ಶಬ್ದಗಳನ್ನೂ ತಿಳಿಯಬೇಕು. ಊಕಾರಾಂತ ಧಾತುವೇ ಅಂತವಾದ ಶಬ್ದಗಳಾದುದರಿಂದ ಯಣ್ ಬರುತ್ತದೆ.

---

## ಸ್ವಭೂ ಶಬ್ದ (ಕಾರಣವಿಲ್ಲದವನು)

ಸ್ವಸ್ಮಾತ್ ಭವತಿ ಇತಿ ಸ್ವಭೂಃ | ಭೂ ಧಾತುವಿಗೆ ಕ್ವಿಪ್ ಬಂದಿದೆ. ತನ್ನಿಂದಲೇ ತಾನು ಆಗುವವನು. ಬೇರೆ ಕಾರಣವಿಲ್ಲದವನು. ಸು ಪರವಾದಾಗ ರುತ್ವವಿಸರ್ಗ. ಸ್ವಭೂಃ | ಸ್ವಭೂ+ಔ ಎಂದಿರುವಾಗ ಉವರ್ಣಾಂತವಾಗಿ ಸಂಯೋಗಪೂರ್ವದಲ್ಲಿ ಇಲ್ಲದ ಉಕಾರವಿರುವುದರಿಂದ "ಓಃ ಸುಪಿ" ಸೂತ್ರದಿಂದ ಯಣ್ ಪ್ರಾಪ್ತವಾದರೆ "ನ ಭೂಸುಧಿಯೋಃ" (ಸೂ ೨೦೩) ಸೂತ್ರದಿಂದ ಆದಕ್ಕೆ ನಿಷೇಧ. ಆಗ "ಅಚಿಶ್ನು ಧಾತುಭ್ರುವಾಂ"-ಸೂತ್ರದಿಂದ ಉವಜಾದೇಶ, ಸ್ವಭ್+ಉವ್+ಔ-ಸ್ವಭುವೌ ಹೀಗೆ ಅಜಾದಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಉವಜಾದೇಶ.

ಪ್ರ-ಸ್ವಭೂಃ | ಸ್ವಭುವೌ | ಸ್ವಭುವಃ || ದ್ವಿ-ಸ್ವಭುವಮ್ | ಸ್ವಭುವೌ | ಸ್ವಭುವಃ || ತೃ-ಸ್ವಭುವಾ | ಸ್ವಭೂಭ್ಯಾಮ್ | ಸ್ವಭೂಭಿಃ || ಚ-ಸ್ವಭುವೇ | ಸ್ವಭೂಭ್ಯಾಮ್ | ಸ್ವಭೂಭ್ಯಃ || ಪಂ-ಸ್ವಭುವಃ | ಸ್ವಭೂಭ್ಯಾಮ್ | ಸ್ವಭೂಭ್ಯಃ || ಷ-ಸ್ವಭುವಃ | ಸ್ವಭುವೋಃ | ಸ್ವಭುವಾಮ್ || ಸ-ಸ್ವಭುವಿ | ಸ್ವಭುವೋಃ | ಸ್ವಭೂಷು ||

---

## ವರ್ಷಾಭೂ ಶಬ್ದ (ಕಪ್ಪೆ)

ವರ್ಷಾಸು ಭವತಿ || ಮಳೆಗಾಲದಲ್ಲಿ ಹೆಚ್ಚಾಗುವುದು ಕಪ್ಪೆ. ಸುವಿಗೆ ರುತ್ವವಿಸರ್ಗ. ವರ್ಷಾಭೂಃ || ದ್ವಿವಚನ ಔ ಪರವಾದಾಗ ಮೊದಲು "ಅಚಿಶ್ನು-ಧಾತುಭ್ರುವಾಂ"-ಸೂತ್ರದಿಂದ ಉವಜಾದೇಶ ಪ್ರಾಪ್ತಿ. ಅದನ್ನು ಬಾಧಿಸಿ "ಓಃ ಸುಪಿ" ಸೂತ್ರದಿಂದ ಪುನಃ ಯಣ್. ಆಮೇಲೆ "ನಭೂಸುಧಿಯೋಃ" ಸೂತ್ರದಿಂದ ಯಣಿಗೆ ನಿಷೇಧ ಪ್ರಾಪ್ತವಾದರೆ ಪುನಃ ಯಣ್ ಹೇಳುವ ಸೂತ್ರವನ್ನು ಹೇಳುತ್ತಾನೆ.

(ವರ್ಷಾಭೂ ಶಬ್ದಕ್ಕೆ ಯಣ್ ಹೇಳುವ ಸೂತ್ರ)

### ೨೧೨. ವರ್ಷಾಭ್ವಶ್ಚ || ೬-೪-೮೪ ||

**ಅಸ್ಯ ಯಣ್ ಸ್ಯಾದಚಿ ಸುಪಿ || ವರ್ಷಾಭ್ವಾವಿತ್ಯಾದಿ ||**

ವರ್ಷಾಭ್ವಃ, ಚ || ದ್ವಿಪದ ಸೂತ್ರ. "ಓಃ ಸುಪಿ" ಸೂತ್ರವೇ ಅನುವೃತ್ತವಾಗುತ್ತದೆ. "ಅಚಿಶ್ನುಧಾತುಭ್ರುವಾಂ"-ಸೂತ್ರದಿಂದ "ಅಚಿ" "ಇಣೋಯಣ್" ಸೂತ್ರದಿಂದ "ಯಣ್" ಅನುವೃತ್ತವಾಗುತ್ತವೆ. ಸೂತ್ರಾರ್ಥ. ವರ್ಷಾಭೂ ಶಬ್ದದ ಉಕಾರಕ್ಕೆ ಅಜಾದಿಯಾದ ಸುಪ್ ಪರದಲ್ಲಿರುವಾಗ ಯಣ್ ಬರುತ್ತದೆ.

ಯಣ್ ನಿಷೇಧಕ್ಕೆ ನಿಷೇಧ. ವರ್ಷಾಭ್ವೌ. ಹೀಗೆ ಅಜಾದಿಯಾದ ವಿಭಕ್ತಿಗಳಲ್ಲೆಲ್ಲಾ ಈ ಸೂತ್ರದಿಂದ ಯಣಾದೇಶ. ವರ್ಷಾಭ್ವಃ ಇತ್ಯಾದಿ. ಪ್ರಧೀ ಶಬ್ದದಂತೆ ತಿಳಿಯ ಬೇಕು.

(ದೃನ್ಭೂ ಶಬ್ದ (ಹಿಂಸೆಯನ್ನು ಹೊಂದುವುದು)

ದೃನ್ ಎಂಬ ನಾಂತವಾದ ಹಿಂಸಾರ್ಥಕವಾದ ಅವ್ಯಯ ಉಪಪದವಾಗಿರುವಾಗ ಭೂ ಧಾತುವಿಗೆ ಕ್ವಿಪ್. ಹಿಂಸೆಯನ್ನು ಹೊಂದುವುದು ಮರ ಮುಂತಾದವು. ದೃನ್ಭೂಃ. ಔ ಪರವಾದಾಗ ವಾರ್ತಿಕದಿಂದ ಯಣ್ ಹೇಳುತ್ತಾನೆ.

(ಭೂವಿಗೆ ಯಣ್ ಹೇಳುವ ವಾರ್ತಿಕ)

ವಾ ॥ (ದೃನ್, ಕರ, ಪುನಃ ಪೂರ್ವಸ್ಯ ಭುವೋ ಯಣ್ ವಕ್ತವ್ಯಃ)
ದೃನ್ಭ್ವೌ । ಏವಂ ಕರಭೂಃ ॥

ದೃನ, ಕರ, ಪುನಃ ಈ ಮೂರ ಶಬ್ದಗಳೇ ಪೂರ್ವದಲ್ಲಿರುವ ಭೂವಿಗೆ ಅಜಾದಿ ಸುಪ್ ಪರವಾದಾಗ ಯಣ್ ಬರುತ್ತದ. (ಹೇಳಬೇಕು) "ನಭೂಸುಧಿಯೋಃ" ಸೂತ್ರಕ್ಕೆ ಅಪವಾದ. ಅದರಿಂದ ನಿಷೇಧ ಪ್ರಾಪ್ತವಾದರೆ ಪುನಃ ಯಣ್ ಹೇಳಿದ್ದಾನೆ. ಅಜಾದಿ ಸುಪ್ ಪರವಾದಾಗ ಎಲ್ಲಾ ಕಡೆಯಲ್ಲಿಯೂ ಯಣ್. ದೃನ್ಭ್ವೌ-ದೃನ್ಭ್ವಃ ॥ ಇತ್ಯಾದಿ ವರ್ಷಾಭೂ ಶಬ್ದದಂತೇ ತಿಳಿದುಕೊಳ್ಳಬೇಕು. ಹೀಗೆಯೇ ಕರಭೂಃ, ಪುನರ್ಭೂಃ ಶಬ್ದಗಳೂ ಅಜಾದಿಯಲ್ಲಿ ಯಣ್ ಹೊಂದುತ್ತವೆ.

ಇತಿ ಊಕಾರಾಂತ ಶಬ್ದಾಃ

---

ಋಕಾರಾಂತ ಧಾತೃ ಶಬ್ದ (ಬ್ರಹ್ಮ)

ಧಾ ಧಾತುವಿಗೆ ತೃಚ್ ಪ್ರತ್ಯಯ ಬಂದರೆ ಧಾತೃ ಎಂದಾಗುತ್ತದೆ. ಧಾತೃ+ಸು (ಉ ಇತ್) ಎಂದಿರುವಾಗ "ಋದುಶನಸ್ಪುರುದಂಸೋಽನೇಹಸಾಂ ಚ" ಸೂತ್ರದಿಂದ ಋಕಾರಕ್ಕೆ ಅನಙಾದೇಶ. (ಅನ್ ಉಳಿಯುತ್ತದೆ) ಧಾತನ್+ಸ್ ಎಂದಿರುವಾಗ "ಅಪ್‌ತೃನ್ ತೃಚ್"-(ಸೂ ೨೦೭) ಸೂತ್ರದಿಂದ ತೃಜಂತವಾದುದರಿಂದ ಉಪಧಾದೀರ್ಘ ಧಾತಾನ್+ಸ್. ಹಲಂತದ ಪರದಲ್ಲಿ ಸು ಪರವಾದುದರಿಂದ "ಹಲ್‌ಙ್ಯಾಭ್ಯೋ"-(ಸೂ. ೧೭೯) ಸೂತ್ರದಿಂದ ಸುವಿಗೆ ಲೋಪ. ಪ್ರಾತಿಪದಿಕ ಸಂಜ್ಞೆಯುಳ್ಳ ಪದದ ಕೊನೆಯಲ್ಲಿ ನಕಾರವಿರುವುದರಿಂದ "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ. ಧಾತಾನ್-ಧಾತಾ. ದ್ವಿವಚನದಲ್ಲಿ ಔ ಪರವಾದಾಗ "ಋತೋಙಿ ಸರ್ವನಾಮಸ್ಥಾನಯೋಃ" ಸೂತ್ರದಿಂದ ಋಕಾರಕ್ಕೆ ಗುಣ. "ಉರಣ್ರಪರಃ" ಸೂತ್ರದಿಂದ ರಪರವಾಗಿ ಬಂದರೆ ಧಾತರ್+ಔ ಎಂದಾ

ಗುತ್ತದೆ. ಆಗ "ಅಪ್‌ತೃನ್"-(ಸೂತ್ರ ೨೦೭) ಸೂತ್ರದಿಂದ ಉಪಧಾದೀರ್ಘ. ಧಾತಾರೌ. ಜಸಿನಲ್ಲಿಯೂ ಹಿಂದಿನಂತೇ ಗುಣದೀರ್ಘ. ಧಾತಾರಸ್. ಸಕಾರಕ್ಕೆ ರುತ್ವ ವಿಸರ್ಗ. ಧಾತಾರಃ ॥ ಸಂಬುದ್ಧಿಯಲ್ಲಿ ಸು ಪರವಾದಾಗ ಅಸಂಬುದ್ಧಿ ಸುವಿನಲ್ಲಿ ಅನಙಾದೇಶ ಹೇಳಿದುದರಿಂದ ಅನಙ್ ಬರುವುದಿಲ್ಲ. "ಋತೋಙಿಸ-" ಸೂತ್ರದಿಂದ ಗುಣ. ಹೇ ಧಾತಾರ್+ಸ್. ದೀರ್ಘವೂ ಅಸಂಬುದ್ಧಿಯಲ್ಲಿ ಹೇಳಿದುದರಿಂದ ದೀರ್ಘವಿಲ್ಲ. "ಹಲ್‌ಙ್ಯಾಭ್ಯೋದೀರ್ಘಾತ್-" ಸೂತ್ರದಿಂದ ಸು ಲೋಪ. "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ರೇಫಕ್ಕೆ ವಿಸರ್ಗ. ಹೇ ಧಾತಃ. ದ್ವಿಬಹುವಚನಗಳಲ್ಲಿ ಹಿಂದಿನಂತೇ ರೂಪ. ಹೇ ಧಾತಾರೌ-ಹೇ ಧಾತಾರಃ। ಅಮಿನಲ್ಲಿ "ಋತೋಙಿ-" ಸೂತ್ರದಿಂದ ಗುಣ. "ಅಪ್‌ತೃನ್" ಸೂತ್ರದಿಂದ ಉಪಧಾದೀರ್ಘ. ಧಾತಾರಮ್. ದ್ವಿವಚನದಲ್ಲಿ ಧಾತಾರೌ। ಶಸಿನಲ್ಲಿ ಸರ್ವನಾಮಸ್ಥಾನವಲ್ಲವಾದುದರಿಂದ ಗುಣಾದಿಗಳು ಬರುವುದಿಲ್ಲ. ಧಾತೃ+ಅಸ್ ಎಂದಿರುವಾಗ "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ಪೂರ್ವಸವರ್ಣದೀರ್ಘ. ಧಾತೄಸ್-"ತಸ್ಮಾಚ್ಛಸೋನಃ ಪುಂಸಿ" ಸೂತ್ರದಿಂದ ಸಕಾರಕ್ಕೆ ನಕಾರ. ಧಾತೄನ್. ತೃತೀಯಾದಲ್ಲಿ ಟಾ ಪರವಾದಾಗ ಯಣ್. ಧಾತೃ+ಆ=ಧಾತ್ರಾ-ಧಾತೃಭ್ಯಾಮ್-ಧಾತೃಭಿಃ।

ಚತುರ್ಥಿ ಏಕವಚನದಲ್ಲಿ ಙೇ ಪರವಾದಾಗ ಯಣ್. ಧಾತೃ+ಏ=ಧಾತ್ರೇ ಧಾತೃಭ್ಯಾಮ್ ಧಾತೃಭ್ಯಃ॥ ಪಂಚಮಿ ಏಕವಚನದಲ್ಲಿ ಙಸಿ ಪ್ರತ್ಯಯ. ಧಾತೃ+ಅಸ್ ಎಂದಿರುವಾಗ "ಋತಉತ್" ಸೂತ್ರದಿಂದ ಋಕಾರಕ್ಕೂ ಙಸಿನ ಅಕಾರಕ್ಕೂ ಉಕಾರಏಕಾದೇಶ. ಅದು ರಪರವಾಗಿ ಬಂದರೆ ಧಾತುರ್‌ಸ್ ಎಂದಾಗುತ್ತದೆ. "ರಾತ್ಸಸ್ಯ" ಸೂತ್ರದಿಂದ ಸಂಯೋಗಾಂತದ ಸಕಾರಕ್ಕೆ ಲೋಪ. ರೇಫಕ್ಕೆ ವಿಸರ್ಗ. ಧಾತುಃ-ಧಾತೃಭ್ಯಾಮ್. ಧಾತೃಭ್ಯಃ॥. ಷಷ್ಠೀ ಏಕವಚನದಲ್ಲಿಯೂ ಪಂಚಮಿ ಏಕವಚನದಂತೇ ರೂಪ. ಧಾತುಃ. ದ್ವಿವಚನದಲ್ಲಿ ಓಸ್‌ಪರವಾದಾಗ ಯಣ್. ಧಾತೃ+ಓಸ್=ಧಾತ್ರೋಸ್. ಸಕಾರಕ್ಕೆ ರುತ್ವವಿಸರ್ಗ. ಧಾತ್ರೋಃ. ಬಹುವಚನದಲ್ಲಿ ಧಾತೃ+ಆಮ್ ಎಂದಿರುವಾಗ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಟಾಗಮ. "ನಾಮಿ" ಸೂತ್ರದಿಂದ ಅಂಗಕ್ಕೆ ದೀರ್ಘ. ಧಾತೃ+ನಾಮ್ ಧಾತೄನಾಮ್. ಋಕಾರದಪರದಲ್ಲಿ ನಕಾರ ಬಂದುದರಿಂದ ವಾರ್ತಿಕದಿಂದ ಣತ್ವ ಹೇಳುತ್ತಾನೆ.

(ನಕಾರಕ್ಕೆ ಣತ್ವ ಹೇಳುವ ವಾರ್ತಿಕ)

**ವಾ॥ (ಋವರ್ಣಾನ್ನಸ್ಯ ಣತ್ವಂ ವಾಚ್ಯಮ್ ॥)**

ಋಕಾರದ ಪರದಲ್ಲಿರುವ ನಕಾರಕ್ಕೆ ಣಕಾರಾದೇಶ ಬರುತ್ತದೆಂದು ಹೇಳಬೇಕು. ಈ ವಾರ್ತಿಕದಿಂದ ಣತ್ವಬಂದರೆ ಧಾತೄಣಾಮ್. ಸಪ್ತಮಿಯಲ್ಲಿ ಙಿಪರವಾದಾಗ "ಋತೋಙಿಸರ್ವನಾಮಸ್ಥಾನಯೋಃ" ಸೂತ್ರದಿಂದ ಋಕಾರಕ್ಕೆ ಗುಣ.

(ಅರ್) ರಪರವಾಗಿ ಬಂದರೆ ಧಾತರ್ + ಇ=ಧಾತರಿ. ಓಸಿನಲ್ಲಿ ಯಣ್. ಧಾತ್ರೋಃ. ಸುಪಿನಲ್ಲಿ "ಆದೇಶಪ್ರತ್ಯಯಯೋಃ" ಷತ್ವ. ಧಾತೃಷು. ಹೀಗೆಯೇ ನಪ್ತೃ ಮುಂತಾದ ಋಕಾರಾಂತ ಶಬ್ದಗಳನ್ನು ತಿಳಿಯಬೇಕು. "ಅಪ್‌ತೃನ್‌ತೃಚ್—" ಸೂತ್ರದಲ್ಲಿ ತೃನ್‌ತೃಚ್ ಎರಡು ಪ್ರತ್ಯಯಗಳು ಉಕ್ತವಾಗಿವೆ. ಅವು ಧಾತು ಸಾಮಾನ್ಯದ ಮೇಲೆ ಬರುತ್ತವೆ. ಪಾಣಿನಿಯು ಹೇಳದಿದ್ದರೂ ಶಾಕಟಾಯನರು ಉಣಾದಿಯಲ್ಲಿ ಎಲ್ಲಾ ಶಬ್ದಗಳೂ ಧಾತುವಿನಿಂದೇ ನಿಷ್ಪನ್ನವಾಗಿವೆಯೆಂದು ಪ್ರತಿಪಾದಿಸಿರುತ್ತಾರೆ. ಪ್ರಕೃತಿಪ್ರತ್ಯಯವನ್ನು ವಿವೇಚನಮಾಡುವುದಾದರೆ ನಪ್ತ್ರಾದಿ ಶಬ್ದಗಳೂ ತೃಜಂತರೂಪಗಳೆಂದು ಉಣಾದಿಸೂತ್ರದಿಂದ ತಿಳಿದುಬರುತ್ತದೆ. ಪ್ರಕೃತಿ ಪ್ರತ್ಯಯ ವಿವೇಚನೆ ಮಾಡುವುದಕ್ಕೆ ವ್ಯುತ್ಪತ್ತಿಪಕ್ಷವೆಂದು ಹೆಸರು. ಉಣಾದಿನಿಷ್ಪನ್ನ ಶಬ್ದಗಳಲ್ಲಿ ವ್ಯುತ್ಪತ್ತಿಪಕ್ಷವೂ ಇದೆ. ಅವ್ಯುತ್ಪತ್ತಿಪಕ್ಷವೂ ಇದೆ. ಅವ್ಯುತ್ಪತ್ತಿಪಕ್ಷ ವೆಂದರೆ ಶಬ್ದ ಹೇಗಾಯಿತು? ಯಾವಪ್ರಕೃತಿ ಯಾವ ಪ್ರತ್ಯಯವೆಂದು ವಿಚಾರಿಸದೇ ಇರುವುದು ಪ್ರಕೃತ ನಪ್ತ್ರಾದಿವಿಷಯದಲ್ಲಿ ವ್ಯುತ್ಪತ್ತಿಪಕ್ಷವನ್ನು ಆಶ್ರಯಣಮಾಡಿದರೆ ಅವುಗಳು ತೃನ್ ಪ್ರತ್ಯಯಾಂತಗಳೆಂದು ತಿಳಿಯುತ್ತದೆ. ಆಗ ಅವುಗಳನ್ನು ಪುನಃ ಹೇಳಬೇಕಾಗಿಲ್ಲ. ಸೂತ್ರದಲ್ಲಿ ತೃನ್ ತೃಜಂತಗಳ ಉಪಧೆಗೆ ದೀರ್ಘವು ಸಾಮಾನ್ಯ ವಾಗಿ ವಿಹಿತವಾದುದರಿಂದ ಅವುಗಳ ಉಪಧೆಗೂ ಬರುತ್ತವೆ. ಹೀಗೆ ಸಿದ್ಧವಾಗುವಾಗ ಪುನಃ ಹೇಳಿದುದೇಕೆ? ಎಂದರೆ ನಿಯಮಕ್ಕೋಸ್ಕರ ಪುನಃ ಹೇಳಿದೆ ಎನ್ನಬೇಕು. "ಸಿದ್ಧೇ ಸತಿ ಆರಭ್ಯಮಾಣಃ ವಿಧಿಃ ನಿಯಮಾಯ" ಎಂದು ಹಿಂದೆ ಹೇಳಿದೆ. ಉಣಾದಿನಿಷ್ಪನ್ನಗಳಾದ ತೃನ್‌ತೃಜಂತಗಳಿಗೆ ಉಪಧಾದೀರ್ಘಬರುವುದಾದರೆ ಸೂತ್ರ ದಲ್ಲಿ ಪಠಿತವಾದ ನಪ್ತ್ರಾದಿಗಳಿಗೆ ಮಾತ್ರ. ಬೇರೆ ಶಬ್ದಗಳ (ತೃನ್‌ತೃಜಂತಗಳ) ಉಪಧೆಗೆ ದೀರ್ಘಬರುವುದಿಲ್ಲ, ಎಂದು ನಿಯಮಾಕಾರ. ಆಗ ಪಿತ್ರಾದಿಶಬ್ದಗಳು ತೃನ್ನಂತಗಳಾದರೂ ಅವುಗಳ ಉಪಧೆಗೆ ದೀರ್ಘಬರುವುದಿಲ್ಲ.

---

## ಪಿತೃಶಬ್ದ (ತಂದೆ)

ಇದು ಧಾತೃಶಬ್ದದಂತೇ ಪ್ರಕ್ರಿಯೆಯನ್ನು ಹೊಂದಿದರೂ ಸರ್ವನಾಮಸ್ಥಾನ ದಲ್ಲಿ ಮೇಲೆ ಹೇಳಿದ ನಿಯಮದಿಂದ "ಅಪ್‌ತೃನ್‌ತೃಚ್" ಸೂತ್ರದಿಂದ ಉಪಧಾ ದೀರ್ಘವನ್ನು ಮಾತ್ರ ಹೊಂದುವುದಿಲ್ಲ. ಪ್ರ. ಪಿತಾ–ಪಿತರೌ–ಪಿತರಃ ॥ ದ್ವಿ. ಪಿತರಂ–ಪಿತರೌ–ಪಿತ್ನೄನ್. ಇನ್ನು ಉಳಿದ ವಿಭಕ್ತಿಗಳಲ್ಲಿ ಧಾತೃಶಬ್ದದಂತೇ ರೂಪ. ಹೀಗೆಯೇ ಜಾಮಾತೃ (ಅಳಿಯ) ಭ್ರಾತೃ=(ಸಹೋದರ) ಶಬ್ದಗಳೂ ಆಗುತ್ತವೆ.

---

## ನೃ ಶಬ್ದ (ಮನುಷ್ಯನು)

ನೃ + ಸು ಎಂದಿರುವಾಗ "ಋದುಶನಸ್ಪುರುದಂಸೋಽನೇಹಸಾಂಚ" ಸೂತ್ರ ದಿಂದ ಋಕಾರಕ್ಕೆ ಅನಙಾದೇಶ. ನನ್ + ಸ್. ನಾಂತಕ್ಕೆ ಸರ್ವನಾಮಸ್ಥಾನಪರ

ವಾದುದರಿಂದ "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರದಿಂದ ಉಪಧಾ ದೀರ್ಘ. ತೃಜಂತವಾಗದಿದ್ದುದರಿಂದ "ಅಪ್‌ತೃನ್"-ಸೂತ್ರದಿಂದ ದೀರ್ಘಬರುವುದಿಲ್ಲ. ನಾನ್+ಸ್ "ಹಲ್‌ಙ್ಯಾಭ್ಯೋದೀರ್ಘಾತ್"-ಸೂತ್ರದಿಂದ ಸು ಲೋಪ. "ನ ಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ. ನಾ. ನೃ+ಔ ಎಂದಿರುವಾಗ "ಋತೋಙಿ ಸರ್ವನಾಮಸ್ಥಾನಯೋಃ" ಸೂತ್ರದಿಂದ ಋಕಾರಕ್ಕೆ ಗುಣ. ನರ್+ಔ=ನರೌ ‖ ಜಸಿನಲ್ಲಿಯೂ ಹೀಗೆ ಗುಣ. ನರಃ ‖ ಸಂಬುದ್ಧಿಯಲ್ಲಿ ಗುಣ. ಹೇ ನರ್+ಸ್. "ಹಲ್‌ಙ್ಯಾಭ್ಯೋದೀರ್ಘಾತ್-" ಸೂತ್ರದಿಂದ ಸು ಲೋಪ. ರೇಫಕ್ಕೆ ಅವಸಾನದಲ್ಲಿ ವಿಸರ್ಗ. ಹೇ ನಃ-ಹೇ ನರೌ-ಹೇನರಃ ‖ ಅಮ್-ಔಟಿನಲ್ಲಿ ಹಿಂದಿನಂತೇ ಗುಣ. ನರಮ್-ನರೌ. ನೃ+ಶಸ್-ನೃ+ಅಸ್ ಎಂದಿರುವಾಗ ಪೂರ್ವಸವರ್ಣದೀರ್ಘ. ಸಕಾರಕ್ಕೆ ನಕಾರಾದೇಶ. ನೄನ್. ಷಷ್ಠೀ ದ್ವಿವಚನದವರೆಗೂ ಧಾತೃ ಶಬ್ದದಂತೇ ರೂಪ. ತೃ-ನ್ರಾ-ನೃಭ್ಯಾಮ್-ನೃಭಿಃ ‖ ಚ-ನ್ರೇ-ನೃಭ್ಯಾಮ್-ನೃಭ್ಯಃ । ಪಂ-ನುಃ-ನೃಭ್ಯಾಮ್-ನೃಭ್ಯಃ । ಷಷ್ಠೀ-ನುಃ-ನ್ರೋಃ, ನೃ+ಆಮ್ ಎಂದಿರುವಾಗ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಟಾಗಮ. ನೃ+ನಾಮ್. ಇಲ್ಲಿ "ನಾಮಿ" ಸೂತ್ರದಿಂದ ದೀರ್ಘ ಪ್ರಾಪ್ತವಾದರೆ ವಿಕಲ್ಪದೀರ್ಘ ಹೇಳುತ್ತಾನೆ.

(ನೃ ಶಬ್ದಕ್ಕೆ ವಿಕಲ್ಪದೀರ್ಘ ಹೇಳುವ ಸೂತ್ರ)

## ೨೧೩. ನೃ ಚ ‖ ೬-೪-೬ ‖

**ಅಸ್ಯ ನಾಮಿ ವಾ ದೀರ್ಘಃ । ನೃಣಾಮ್ । ನೄಣಾಮ್ ‖**

ನೃ ಚ ‖ ದ್ವಿಪದಸೂತ್ರ. ನೃ ಎಂಬುದು ಲುಪ್ತಷಷ್ಠೀಕ. ಷಷ್ಠ್ಯಂತವಾಗಿ ಹೇಳುವಲ್ಲಿ ಹೇಳಲಿಲ್ಲ. "ನಾಮಿ" ಸೂತ್ರವೇ ಅನುವೃತ್ತವಾಗುತ್ತದೆ. "ಢ್ರಲೋಪೇ-ದೀರ್ಘೋ"-ಸೂತ್ರದಿಂದ "ದೀರ್ಘಃ" "ಛಂದಸ್ಯುಭಯಥಾ" ಸೂತ್ರದಿಂದ "ಉಭಯಥಾ" ಪದಗಳಿಗೆ ಅನುವೃತ್ತಿ. ಉಭಯಥಾ ಎಂದರೆ ವಿಕಲ್ಪ. **ಸೂತ್ರಾರ್ಥ.** ನೃ ಶಬ್ದಕ್ಕೆ ನಾಮ್ ಪರವಾದಾಗ ವಿಕಲ್ಪವಾಗಿ ದೀರ್ಘ ಬರುತ್ತದೆ. ನೄನಾಂ-ನೃನಾಂ ‖ ಋಕಾರದಪರದಲ್ಲಿ ನಕಾರಬಂದುದರಿಂದ "ಋವರ್ಣಾನ್ನಸ್ಯ ಣತ್ವಂ ವಾಚ್ಯಮ್" ವಾರ್ತಿಕದಿಂದ ನಕಾರಕ್ಕೆ ಣತ್ವ ನೄಣಾಮ್-ನೃಣಾಮ್ ‖ ಸಪ್ತಮೀ ಏಕವಚನದಲ್ಲಿ "ಋತೋಙಿಸರ್ವನಾಮಸ್ಥಾನಯೋಃ" ಸೂತ್ರದಿಂದ ಗುಣ. ನರ್+ಇ=ನರಿ. ಓಸಿನಲ್ಲಿ ಯಣ್. ನ್ರೋಃ. ಸುಪಿನಲ್ಲಿ ಷತ್ವ. ನೃಷು ‖

ಇತಿ ಋಕಾರಾಂತಾಃ ‖

---

ೠಕಾರಾಂತ, ಏಕಾರಾಂತ, ಐಕಾರಾಂತಶಬ್ದಗಳು ಸಂಸ್ಕೃತದಲ್ಲಿ ಅಪ್ರಸಿದ್ಧವಾದುದರಿಂದ ಹೇಳಲಿಲ್ಲ.

## ಓಕಾರಾಂತ. ಗೋ ಶಬ್ದ. (ಎತ್ತು.)

ಗೋಶಬ್ದದಮೇಲೆ ಪ್ರಥಮಾ ಸುಪರವಾದಾಗ ಸರ್ವನಾಮಸ್ಥಾನಕ್ಕೆ ಣಿದ್ವದ್ಭಾವ ಹೇಳುತ್ತಾನೆ.

(ಸುಟಿಗೆ ಣಿದ್ವದ್ಭಾವ ಹೇಳುವ ಸೂತ್ರ)

## ೨೧೪. ಗೋತೋ ಣಿತ್ ॥ ೭-೧-೯೦ ॥

**ಓಕಾರಾದ್ವಿಹಿತಂ ಸರ್ವನಾಮಸ್ಥಾನಂ ಣಿದ್ವತ್ ॥ ಗೌಃ, ಗಾವೌ, ಗಾವಃ ॥**

ಗೋತಃ, ಣಿತ್ ॥ ದ್ವಿಪದ ಸೂತ್ರ ವಾರ್ತಿಕಕಾರರು "ಓತೋಣಿದಿತಿವಾಚ್ಯಮ್" ಗೋತಃ ಶಬ್ದ ಸ್ಥಾನದಲ್ಲಿ ಓತಃ ಎಂದು ಪಾಠಮಾಡಿರುವುದರಿಂದ ವೃತ್ತಿಯಲ್ಲಿ ಅದನ್ನು ಆಶ್ರಯಿಸಿ ವ್ಯಾಖ್ಯಾನಮಾಡಿರುತ್ತಾನೆ. "ಇತೋಽತ್ಸರ್ವನಾಮಸ್ಥಾನೇ" ಸೂತ್ರದಿಂದ "ಸರ್ವನಾಮಸ್ಥಾನೇ" ಪದವು ಅನುವೃತ್ತವಾಗಿ ವಿಪರಿಣತವಾಗುತ್ತದೆ. **ಸೂತ್ರಾರ್ಥ** ಓಕಾರದ ಮೇಲೆ ವಿಹಿತವಾದ ಸರ್ವನಾಮಸ್ಥಾನವು ಣಿತ್ತಿನಂತೆ ಆಗುತ್ತದೆ. ಣಿತ್ ಪರವಾದಾಗ ಯಾವ ಕಾರ್ಯ ಬರುತ್ತದೆಯೋ ಆ ಕಾರ್ಯ ಬರುತ್ತದೆ. ಇದು ಕಾರ್ಯಾತಿದೇಶ. ಸುಟ್ ಪಂಚಕ ಸರ್ವನಾಮಸ್ಥಾನ. ಇದು ಣಿತ್ತಲ್ಲ. ಣಿತ್ತಿನಂತೆ ಆಗುತ್ತದೆ ಎಂದುದರಿಂದ ಣಿತ್ತಿನ ಕಾರ್ಯ ಬರುತ್ತದೆ ಎಂದು ತಿಳಿಯಬೇಕು ಓಕಾರದ ಪರದಲ್ಲಿರುವ ಎಂದು ಅರ್ಥಮಾಡಿಲ್ಲ. ಓಕಾರದ ಮೇಲೆ ವಿಹಿತವಾಗಿರಬೇಕು. ವಿಹಿತ ವಿಶೇಷಣ ಮಾಡದೇ ಹೋದರೆ ಹೇ ಭಾನೋ + ಸ್ ಎಂದಿರುವಾಗಲೂ ಣಿತ್ ಕಾರ್ಯ ಬರಬೇಕಾಗುತ್ತದೆ. ಆದರೆ ಅಲ್ಲಿ ಸು ಓಕಾರದ ಮೇಲೆ ವಿಹಿತವಾಗಿಲ್ಲ. ಉಕಾರದ ಮೇಲೆ ವಿಹಿತವಾಗಿ ಅದನ್ನು ನಿಮಿತ್ತೀಕರಿಸಿ ಗುಣಬಂದಿದೆ, ಆದುದರಿಂದ ಅಲ್ಲಿ ಣಿತ್ಕಾರ್ಯವಿಲ್ಲ. ಗೋಶಬ್ದ ಒಂದನ್ನೇ ತೆಗೆದುಕೊಂಡಿದ್ದರೆ ಸುದ್ಯೋ ಮುಂತಾದ ಓಕಾರಾಂತಗಳಲ್ಲಿ ಈ ಕಾರ್ಯ ಬರುತ್ತಿರಲಿಲ್ಲ. ಎಲ್ಲಾಕಡೆಯೂ ಣಿತ್ಕಾರ್ಯ ಬರುವುದಕ್ಕೋಸ್ಕರ ಸಾಮಾನ್ಯವಾಗಿ ಓತಃ ಎಂದಿರುತ್ತಾನೆ. ಪ್ರಕೃತ ಗೋ+ಸ್ ಎಂದಿರುವಾಗ ಸ್ ಣಿತ್ತಾದುದರಿಂದ "ಅಚೋಞ್ಣಿತಿ" ಸೂತ್ರದಿಂದ ಓಕಾರಕ್ಕೆ ವೃದ್ಧಿ. ಔ ಸ್ಥಾನಸಾಮ್ಯದಿಂದ ಬರುತ್ತದೆ. ಸಕಾರಕ್ಕೆ ರುತ್ವ ವಿಸರ್ಗ. ಗೌಃ. ದ್ವಿವಚನದಲ್ಲಿ ವೃದ್ಧಿ ಬಂದಾಗ "ಏಚೋಽಯವಾಯಾವಃ" ಸೂತ್ರದಿಂದ ಆವಾದೇಶ. ಗಾವೌ. ಜಸಿನಲ್ಲಿಯೂ ವೃದ್ಧಿ ಆವಾದೇಶ. ಸಕಾರಕ್ಕೆ ರುತ್ವ ವಿಸರ್ಗ. ಗಾವಃ ॥ ಸಂಬೋಧನೆಯಲ್ಲಿಯೂ ವಿಶೇಷವಿಲ್ಲದುದರಿಂದ ಪ್ರಥಮಾದಂತೇರೂಪವಾಗುತ್ತದೆ.

ದ್ವಿತೀಯಾದಲ್ಲಿ ಅಮ್ ಪರವಾದಾಗ "ಗೋತೋಣಿತ್" ಸೂತ್ರದಿಂದ ಣಿದ್ವದ್ಭಾವಬಂದು ವೃದ್ಧಿಪ್ರಾಪ್ತವಾದರೆ ಆಕಾರ ಏಕಾದೇಶ ಹೇಳುತ್ತಾನೆ.

(ಅಮ್‌ಶಸ್‌ಗಳಲ್ಲಿ ಆಕಾರ ಹೇಳುವ ಸೂತ್ರ)

## ೨೧೫. ಔತೋಽಮ್‌ಶಸೋಃ ॥ ೬-೧-೯೩ ॥

**ಓತೋಽಮ್‌ಶಸೋರಚಿ ಆಕಾರ ಏಕಾದೇಶಃ । ಗಾಮ್ । ಗಾವೌ । ಗಾಃ । ಗವಾ । ಗವೇ । ಗೋಃ । ಇತ್ಯಾದಿ ॥**

ಆ-ಓತಃ-ಅಮ್‌ಶಸೋಃ ॥ ತ್ರಿಪದಸೂತ್ರ. ಅಮ್, ಚ್ ಶಸ್ ಚ, ಅಮ್ ಶಸೌ-ತಯೋಃ ಅಮ್‌ಶಸೋಃ. ಓತಃ ಪಂಚಮೀ. "ಇಕೋಯಣಚಿ" ಸೂತ್ರದಿಂದ "ಅಚಿ" ಅನುವೃತ್ತವಾಗುತ್ತದೆ. ಅಮ್‌ಶಸೋಃ ಅವಯವಷಷ್ಠ್ಯಂತವಾದುದರಿಂದ ಅಚಿನಲ್ಲಿ ಅನ್ವಯು. "ಏಕಃ ಪೂರ್ವಪರಯೋಃ" ಅಧಿಕಾರ. ಸೂತ್ರಾರ್ಥ. ಓಕಾರದ ಪರದಲ್ಲಿ ಅಮ್, ಶಸ್‌ಗಳ ಅಚ್‌ಪರವಾದಾಗ ಓಕಾರ ಮತ್ತು ಅಮ್ ಶಸ್‌ಗಳ ಅಚಿಗೆ ಆಕಾರ ಏಕಾದೇಶವಾಗಿ ಬರುತ್ತದೆ. ಗೋ+ಅಮ್ ಎಂದಿರುವಾಗ ಓ+ಅಕಾರಗಳಿಗೆ ಆಕಾರ ಏಕಾದೇಶವಾಗಿ ಬಂದರೆ ಗ್+ಆ+ಮ್= ಗಾಮ್ । ಗೋ+ಔ ಎಂದಿರುವಾಗ ಸರ್ವನಾಮಸ್ಥಾನವಾದುದರಿಂದ ಣಿದ್ವದ್ಭಾವ ಬಂದು ವೃದ್ಧಿ-ಆವಾದೇಶಬಂದರೆ, ಗಾವೌ ॥ ಶಸಿನಲ್ಲಿ ಅಮಿನಂತೆರೂಪ. ಗೋ+ ಅಸ್=ಗ್+ಆ+ಸ್=ಗಾಃ ॥ ತೃತೀಯಾದಲ್ಲಿ ಟಾಪರವಾದಾಗ ಗೋ+ಆ ಎಂದಿರುವಾಗ ಅವಾದೇಶ. ಗವಾ. ಹಲಾದಿಯಲ್ಲಿ ಕಾರ್ಯವಿಶೇಷವಿಲ್ಲ. ಗೋಭ್ಯಾಂ-ಗೋಭಿಃ ॥ ಚತುರ್ಥೀ ಏಕವಚನದಲ್ಲಿ ಅವಾದೇಶ. ಗೋ+ಏ=ಗವೇ- ಗೋಭ್ಯಾಮ್-ಗೋಭ್ಯಃ ॥ ಪಂಚಮೀಷಷ್ಠೀ ಏಕವಚನದಲ್ಲಿ ಗೋ+ಅಸ್ ಎಂದಿರುವಾಗ "ಙಸಿಙಸೋಶ್ಚ" ಸೂತ್ರದಿಂದ ಪೂರ್ವರೂಪ ಏಕಾದೇಶ. ಗೋಸ್ (ಓ+ ಅ=ಓ) ಸಕಾರಕ್ಕೆ ರುತ್ವವಿಸರ್ಗ. ಗೋಃ ಗೋಭ್ಯಾಮ್-ಗೋಭ್ಯಃ । ಷ-ಗೋಃ. ದ್ವಿವಚನದಲ್ಲಿ ಅವಾದೇಶ. ಸಕಾರಕ್ಕೆ ರುತ್ವವಿಸರ್ಗ. ಗೋ+ಓಸ್=ಗವೋಸ್- ಗವೋಃ. ಬಹುವಚನನದಲ್ಲಿ ಆಮ್ ಪರವಾದಾಗ ಅವಾದೇಶ. ಗವಾಮ್. ಸಂಸ್ಕೃತದಲ್ಲಿ ಏಚಿಗೆ (ಏ ಓ ಐ ಔ) ಹ್ರಸ್ವವಿಲ್ಲವೆಂದುದರಿಂದ "ಹ್ರಸ್ವನದ್ಯಾಪಃ"-ಸೂತ್ರದಿಂದ ನುಡಾಗವು ಬರುವುದಿಲ್ಲ. ಸಪ್ತಮೀ ಏಕವಚನ ದ್ವಿವಚನಗಳಲ್ಲಿ ಅವಾದೇಶ. ಗೋ+ಇ=ಗವೋಃ. ಬಹುವಚನದಲ್ಲಿ ಇಣಿನಪರದಲ್ಲಿರುವುದರಿಂದ ಸಕಾರಕ್ಕೆ ಷತ್ವ. ಗೋಷು ॥

ಐಕಾರಾಂತ ರೈ ಶಬ್ದ. (ಸಂಪತ್ತು.)

ಪ್ರಥಮಾದಲ್ಲಿ ರೈಸ್ ಎಂದಿರುವಾಗ ಐಕಾರಕ್ಕೆ ಆತ್ವ ಹೇಳುತ್ತಾನೆ.

(ರೈ ಶಬ್ದಕ್ಕೆ ಆತ್ವಹೇಳುವ ಸೂತ್ರ)

## ೨೧೬. ರಾಯೋ ಹಲಿ ॥ ೭-೨-೮೫ ॥

**ರೈ ಶಬ್ದಸ್ಯಾಕಾರೋಽಂತಾದೇಶಃ ಸ್ಯಾದ್ಧಲಿ ವಿಭಕ್ತೌ ॥ ರಾಃ ರಾಯೌ ರಾಯಃ । ರಾಭ್ಯಾಮ್ ಇತ್ಯಾದಿ ॥**

ರಾಯಃ ಹಲಿ ॥ ದ್ವಿಪದಸೂತ್ರ. "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ಆ" "ವಿಭಕ್ತೌ" ಎರಡು ಪದಗಳು ಅನುವೃತ್ತವಾಗುತ್ತವೆ. ರಾಯಃ ಷಷ್ಠೀ. ಹಲಿ ಸಪ್ತಮ್ಯಂತವು ವಿಭಕ್ತೌ ಎಂಬ ಸಪ್ತಮ್ಯಂತಕ್ಕೆ ವಿಶೇಷಣ. "ಯಸ್ಮಿನ್ ವಿಧಿಃ ತದಾದಾವಲ್ಗ್ರಹಣೇ" ಪರಿಭಾಷೆಯಿಂದ ತದಾದಿಲಾಭ. **ಸೂತ್ರಾರ್ಥ.** ರೈ ಶಬ್ದಕ್ಕೆ ಹಲಾದಿಯಾದ ವಿಭಕ್ತಿಪರವಾದಾಗ ಆಕಾರವು ಅಂತಾದೇಶವಾಗಿ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯಕ್ಕೆ ಎಂದು ಲಭ್ಯವಾಗುವುದರಿಂದ ವೃತ್ತಿಯಲ್ಲಿ ಅಂತಾದೇಶವೆಂದಿರುತ್ತಾನೆ. ಪ್ರಕೃತ ಸು ಹಲಾದಿಯಾದುದರಿಂದ ರೈ ಶಬ್ದದ ಅಂತ್ಯವಾದ ಐಕಾರಕ್ಕೆ ಆತ್ವಬಂದರೆ ರಾಸ್ ಎಂದಾಗುತ್ತದೆ. ಸುವಿಗೆ ರುತ್ವವಿಸರ್ಗ. ರಾಃ. ರೈ+ಔ ಎಂದಿರುವಾಗ ಅಜಾದಿವಿಭಕ್ತಿಯಿರುವುದರಿಂದ ಆತ್ವವಿಲ್ಲ. 'ಏಚೋಽಯವಾಯಾವಃ' ಸೂತ್ರದಿಂದ ಆಯಾದೇಶ. ಅಜಾದಿಯಾದ ಎಲ್ಲಾ ವಿಭಕ್ತಿಗಳಲ್ಲಿಯೂ ಹೀಗೆಯೇ ಆಯಾದೇಶ. ರಾಯೌ. ಜಸಿನಲ್ಲಿ ರಾಯಃ. ದ್ವಿ–ಸಂಬೋಧನೆಯಲ್ಲಿ ಪ್ರಥಮೆಯಂತೇರೂಪ. ಹೇ ರಾಃ ಹೇರಾಯೌ-ಹೇರಾಯಃ। ರಾಯಮ್-ರಾಯೌ-ರಾಯಃ। ತೃತೀಯಾ ಏಕವಚನದಲ್ಲಿ ಟಾಪರವಾದಾಗ ಆಯಾದೇಶ. ರಾಯಾ. ಭ್ಯಾಮ್ ಪರವಾದಾಗ ಹಲಾದಿಯಾದುದರಿಂದ ಐಕಾರಕ್ಕೆ ಆಕಾರಾದೇಶ. ರಾಭ್ಯಾಮ್. ಹಲಾದಿಯಲ್ಲೆಲ್ಲಾ ಹೀಗೇ ಆತ್ವ ಬರುತ್ತದೆ. ರಾಭಿಃ। ಚ-ರೈ+ಏ=ರಾಯೇ-ರಾಭ್ಯಾಮ್-ರಾಭ್ಯಃ। ಪಂ–ರೈ+ಅಸ್. ರಾಯಃ– ರಾಭ್ಯಾಮ್-ರಾಭ್ಯಃ। ಷಷ್ಠೀ-ರಾಯಃ-ರಾಯೋಃ-ರೈ+ಆಮ್=ರಾಯಾಮ್। ಸ-ರಾಯಿ-ರಾಯೋಃ-ರಾಸು. ಇಣಿನಪರದಲ್ಲಿಲ್ಲದಿರುವುದರಿಂದ ಸಕಾರಕ್ಕೆ ಷತ್ವ ಬರುವುದಿಲ್ಲ.

---

ಔಕಾರಾಂತ ಗ್ಲೌ ಶಬ್ದ=(ಚಂದ್ರ)

**ಗ್ಲೌಃ। ಗ್ಲಾವೌ। ಗ್ಲಾವಃ। ಗ್ಲೌಭ್ಯಾಮ್— ಇತ್ಯಾದಿ॥ ಇತ್ಯಜಂತ ಪುಲ್ಲಿಂಗಾಃ।**

ಗ್ಲೌಸ್ ಎಂದಿರುವಾಗ ಸಕಾರಕ್ಕೆ ರುತ್ವ ವಿಸರ್ಗ. ಗ್ಲೌಃ. ಇನ್ನು ಅಜಾದಿಯಲ್ಲಿ "ಏಚೋಽಯವಾಯಾವಃ" ಸೂತ್ರದಿಂದ ಆವಾದೇಶ. ಹಲಾದಿಯಲ್ಲಿ ಕೇವಲ ಪ್ರತ್ಯಯ ಸೇರಿಸುವುದು ಮಾತ್ರ. ಗ್ಲೌ+ಔ=ಗ್ಲಾವೌ—ಗ್ಲೌ+ಅಸ್= ಗ್ಲಾವಃ।

ಪ್ರ.—ಗ್ಲೌಃ। ಗ್ಲಾವೌ। ಗ್ಲಾವಃ॥ ದ್ವಿ—ಗ್ಲಾವಂ ಗ್ಲಾವೌ। ಗ್ಲಾವಃ॥ ತೃ— ಗ್ಲಾವಾ। ಗ್ಲೌಭ್ಯಾಮ್। ಗ್ಲೌಭಿಃ॥ ಚ—ಗ್ಲಾವೇ। ಗ್ಲೌಭ್ಯಾಮ್। ಗ್ಲೌಭ್ಯಃ॥ ಪಂ—ಗ್ಲಾವಃ। ಗ್ಲೌಭ್ಯಾಮ್। ಗ್ಲೌಭ್ಯಃ॥ ಷ—ಗ್ಲಾವಃ। ಗ್ಲಾವೋಃ। ಗ್ಲಾವಾಮ್॥ ಸ—ಗ್ಲಾವಿ। ಗ್ಲಾವೋಃ। ಗ್ಲೌಷು॥

ಹೀಗೆ ಅಜಂತಪುಲ್ಲಿಂಗ ಶಬ್ದಗಳು ವಿವರಿಸಲ್ಪಟ್ಟಿವೆ.

# ಅಥಾಜಂತ ಸ್ತ್ರೀಲಿಂಗಾಃ

ಅಜಂತಸ್ತ್ರೀಲಿಂಗ ಶಬ್ದಗಳಲ್ಲಿ ಹ್ರಸ್ವಾಕಾರಾಂತಶಬ್ದಗಳು ಇಲ್ಲ. ಅದಂತವಾದ ಪ್ರಾತಿಪದಿಕಗಳಿಗೆ ಸಾಮಾನ್ಯವಾಗಿ ಸ್ತ್ರೀಲಿಂಗದಲ್ಲಿ ಟಾಪ್ ಪ್ರತ್ಯಯ ಬರುವುದರಿಂದ ಆದಂತಗಳಾಗುತ್ತವೆ.

ಆಕಾರಾಂತ ಸ್ತ್ರೀಲಿಂಗ ರಮಾ ಶಬ್ದ (ಲಕ್ಷ್ಮಿ)

## ರಮಾ

ರಮತೇ ಇತಿ ರಮಾ. ರಮು ಕ್ರೀಡಾಯಾಂ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ರಮ್+ಅ=ರಮ. ಅದಂತವಾದುದರಿಂದ ಸ್ತ್ರೀಲಿಂಗದಲ್ಲಿ ಟಾಪ್ ಪ್ರತ್ಯಯ. ರಮ+ಆ=ರಮಾ. ರಮಾ ಶಬ್ದ ಆಬಂತವಾಗಿದೆ. (ಟಾಪಿನಲ್ಲಿ ಆಪ್ ಉಳಿಯುವುದು. ಕೊನೆಗೆ ಪಕಾರವೂ ಹೋಗುತ್ತದೆ.) ರಮಾ+ಸು ಎಂದಿರುವಾಗ ಆಬಂತದಪರದಲ್ಲಿ ಸು ಬಂದುದರಿಂದ "ಹಲ್ಙ್ಯಾಭ್ಯೋದೀರ್ಘಾತ್"-ಸೂತ್ರದಿಂದ ಸುವಿಗೆ ಲೋಪ. ರಮಾ. ದ್ವಿವಚನದಲ್ಲಿ ರಮಾ+ಔ ಎಂದಿರುವಾಗ ವಿಭಕ್ತಿಗೆ ಶೀಭಾವ ಹೇಳುತ್ತಾನೆ.

(ಆಪಿನ ಪರದಲ್ಲಿರುವ ಔ ವಿಭಕ್ತಿಗೆ ಶೀಭಾವ ಹೇಳುವ ಸೂತ್ರ)

### ೨೧೭. ಔಙ ಆಪಃ ॥ ೭-೧-೧೮ ॥

**ಆಬಂತಾದಂಗಾತ್ಪರಸ್ಯ ಔಙಃ ಶೀ ಸ್ಯಾತ್ । ಔಙಿತ್ಯೌಕಾರ-ವಿಭಕ್ತೇಃ ಸಂಜ್ಞಾ । ರಮೇ । ರಮಾಃ ॥**

ಔಙಃ, ಆಪಃ ॥ ದ್ವಿಪದ ಸೂತ್ರ. "ಜಸಃಶೀ" ಸೂತ್ರದಿಂದ "ಶೀ" ಅನುವೃತ್ತವಾಗುತ್ತದೆ. ಆಪ್ ಪ್ರತ್ಯಯವಾದುದರಿಂದ ತದಂತಗ್ರಹಣ. "ಅಂಗಸ್ಯ" ಅಧಿಕಾರ. ಆಪಃ ಪಂಚಮಿಯಾದುದರಿಂದ ವಿಶೇಷಣಾನುಸಾರವಾಗಿ ಅಂಗಾತ್ ಎಂದು ವಿಪರಿಣಾಮಮಾಡಿಕೊಳ್ಳಬೇಕು. ಔಙಃ, ಷಷ್ಠೀ. **ಸೂತ್ರಾರ್ಥ.** ಆಬಂತವಾದ ಅಂಗದ ಪರದಲ್ಲಿರುವ ಔಙಿಗೆ ಶೀ ಆದೇಶ ಬರುತ್ತದೆ. ಔಙ್ ಅಂದರೆ ಏನು ಎಂಬುದನ್ನು ವಿವರಿಸುತ್ತಾನೆ. "ಔಙಿತಿ"–ಔ–ಔಟ್ ಇವೆರಡಕ್ಕೂ ಪ್ರಾಚೀನರು ಔಙ್ ಎಂದು ವ್ಯವಹರಿಸುತ್ತಾರೆ. ಪ್ರಕೃತ ರಮಾ ಆಬಂತ ಅಂಗ. ಅದರ ಪರದಲ್ಲಿ ಔ ಬಂದುದರಿಂದ ಅದಕ್ಕೆ ಶೀಭಾವ. ಅನೇಕಾಲಾದುದರಿಂದ ಸರ್ವಾದೇಶ. ಔ ಸ್ಥಾನಕ್ಕೆ ಬಂದ ಮೇಲೆ "ಸ್ಥಾನಿವಾದಾದೇಶೋಽನಲ್ವಿಧೌ" ಸೂತ್ರದಿಂದ ಶಕಾರಕ್ಕೆ ಇತ್ ಸಂಜ್ಞಾ ಬಂದು ಲೋಪವಾಗುತ್ತದೆ. ರಮಾ+ಈ ಎಂದಿರುವಾಗ "ಆದ್ಗುಣಃ" ಸೂತ್ರದಿಂದ ಗುಣ. ರಮೇ. ರಮಾ+ಜಸ್ ಎಂದಿರುವಾಗ ಸವರ್ಣದೀರ್ಘ. ರಮಾಸ್. ಸಕಾರಕ್ಕೆ ರುತ್ವವಿಸರ್ಗ. ರಮಾಃ ॥

ಸಂಬುದ್ಧಿಯಲ್ಲಿ ಸುಪರವಾದಾಗ ಆಬಂತಕ್ಕೆ ಏಕಾರಾದೇಶ ಹೇಳುತ್ತಾನೆ.

(ಆಬಂತಕ್ಕೆ ಏಕಾರ ಹೇಳುವ ಸೂತ್ರ)

**೨೧೮. ಸಂಬುದ್ಧೌ ಚ ॥ ೭-೩-೧೦೬ ॥**

**ಆಪ ಏಕಾರಃ ಸ್ಯಾತ್ಸಂಬುದ್ಧೌ । ಏಙ್ಹ್ರಸ್ವಾದಿತಿ ಸಂಬುದ್ಧಿ ಲೋಪಃ ಹೇ ರಮೇ । ಹೇ ರಮೇ । ಹೇ ರಮಾಃ । ರಮಾಂ । ರಮೇ ॥ ಸ್ತ್ರೀತ್ವಾನ್ನತ್ವಾಭಾವಃ ॥ ರಮಾಃ ॥**

ದ್ವಿಪದ ಸೂತ್ರ । "ಆಙಿ ಚಾಪಃ" ಸೂತ್ರದಿಂದ "ಆಪಃ", "ಬಹುವಚನೇ ಝಲ್ಯೇತ್" ಸೂತ್ರದಿಂದ "ಏತ್" ಅನುವೃತ್ತವಾಗುತ್ತವೆ. ಅಂಗಸ್ಯ ಅಧಿಕಾರ, ಆಪಃ ಅದಕ್ಕೆ ವಿಶೇಷಣ. **ಸೂತ್ರಾರ್ಥ:** ಆಬಂತವಾದ ಅಂಗಕ್ಕೆ ಸಂಬುದ್ಧಿ ಪರ ದಲ್ಲಿರುವಾಗ ಏಕಾರಾದೇಶ ಬರುತ್ತದೆ. ಅಂಗಕ್ಕೆ ಎಂದುದರಿಂದ "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯಕ್ಕೆ ಆದೇಶ. ರಮಾ+ಸ್ ಎಂದಿರುವಾಗ "ಹಲ್ಙ್ಯಾಭ್ಯೋ" ಸೂತ್ರವನ್ನು ಬಾಧಿಸಿ ಈ ಸೂತ್ರದಿಂದ ಏತ್ವಬಂದರೆ ರಮೇ+ಸ್ ಎಂದಾಗುತ್ತದೆ. ಆಗ ಏಙಂತದಪರದಲ್ಲಿ ಸುಬಂದುದರಿಂದ "ಏಙ್ಹ್ರಸ್ವಾತ್ ಸಂಬುದ್ಧೇಃ" ಸೂತ್ರ ದಿಂದ ಸುವಿಗೆ ಲೋಪ. ಹೇ ರಮೇ. ದ್ವಿಬಹುವಚನಗಳಲ್ಲಿ ಪ್ರಥಮಾದಂತೇ ರೂಪ. ಹೇರಮೇ--ಹೇರಮಾಃ ॥

ದ್ವಿತೀಯಾ ಏಕವಚನದಲ್ಲಿ ಅಮ್ ಬಂದಾಗ "ಅಮಿಪೂರ್ವಃ" ಸೂತ್ರದಿಂದ ಪೂರ್ವರೂಪ. ರಮಾ+ಅಮ್—ರಮಾಮ್. ರಮಾ+ಔ (ಟ್) ಎಂದಿರುವಾಗ "ಔಙಆಪಃ" ಸೂತ್ರದಿಂದ ಪ್ರತ್ಯಯಕ್ಕೆ ಶೀ ಭಾವ. ರಮಾ+ಈ. ಗುಣ. ರಮೇ. ಬಹುವಚನದಲ್ಲಿ ರಮಾ+(ಶ್) ಅಸ್ ಎಂದಿರುವಾಗ ಪೂರ್ವಸವರ್ಣದೀರ್ಘ. ರಮಾಸ್. ಸಕಾರಕ್ಕೆ ನತ್ವ ಬರಲಿ ಎಂದರೆ "ತಸ್ಮಾಚ್ಛಸೋ ನಃ ಪುಂಸಿ" ಸೂತ್ರ ದಲ್ಲಿ ಪುಲ್ಲಿಂಗದಲ್ಲಿ ಮಾತ್ರವೆಂದುದರಿಂದ ಬರುವುದಿಲ್ಲ. ಅದನ್ನೇ "ಸ್ತ್ರೀತ್ವಾತ್–" ಎಂದು ಹೇಳಿರುತ್ತಾನೆ. ರುತ್ವವಿಸರ್ಗ, ರಮಾಃ ॥

ತೃತೀಯಾ ಏಕವಚನದಲ್ಲಿ ಟಾ ಬಂದಾಗ ಆಬಂತಕ್ಕೆ ಏತ್ವ ಹೇಳುತ್ತಾನೆ.

(ಆಬಂತಕ್ಕೆ ಏತ್ವ ಹೇಳುವ ಸೂತ್ರ)

**೨೧೯. ಆಙಿ ಚಾಪಃ ॥ ೭-೩-೧೦೫ ॥**

**ಆಙಿ ಓಸಿ ಚ ಪರೇ ಆಬಂತಸ್ಯ ಅಂಗಸ್ಯ ಏಕಾರಃ ಸ್ಯಾತ್ ॥ ರಮಯಾ ರಮಾಭ್ಯಾಮ್ ರಮಾಭಿಃ ।**

**ಆಙಿ, ಚ, ಆಪಃ** ॥ ತ್ರಿಪದ ಸೂತ್ರ. "ಬಹುವಚನೇಝಲ್ಯೇತ್" ಸೂತ್ರ ದಿಂದ "ಏತ್" ಪದವೂ "ಓಸಿಚ" ಸೂತ್ರವೂ ಅನುವೃತ್ತವಾಗುತ್ತವೆ. "ಅಂಗಸ್ಯ"

ಅಧಿಕಾರ. ಆಪಃ ಅದಕ್ಕೆ ವಿಶೇಷಣ. ತದಂತವಿಧಿ. **ಸೂತ್ರಾರ್ಥ.** ಆಙ್ ಓಸ್ ವಿಭಕ್ತಿಗಳು ಪರವಾದಾಗ ಆಬಂತವಾದ ಅಂಗಕ್ಕೆ ಏತ್ವ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂಗದ ಅಂತ್ಯ ಆಕಾರಕ್ಕೆ ಆದೇಶ. ಆಙ್ ಟಾವಿಭಕ್ತಿಯ ಸಂಜ್ಞೆ ಯೆಂದು ಹಿಂದೆ ಹೇಳಿದೆ. ಪ್ರಕೃತ ಟಾಪರವಾದುದರಿಂದ ಆಪಿಗೆ ಏಕಾರ ಬಂದರೆ ರಮಾ+ಏ=ರಮೇ+ಏ ಎಂದಾಗುತ್ತದೆ. ಏಕಾರಕ್ಕೆ ಅಚ್ ಪರವಾದುದರಿಂದ "ಏಚೋಽಯವಾಯಾವಃ" ಸೂತ್ರದಿಂದ ಅಯಾದೇಶ. ರಮಯಾ. ಹಲಾದಿ ಯಲ್ಲಿ ಕಾರ್ಯವಿಶೇಷವಿಲ್ಲ. ರಮಾಭ್ಯಾಮ್—ರಮಾಭಿಃ ॥

ಚತುರ್ಥಿಯಲ್ಲಿ ಙೇಪರವಾದಾಗ ಪ್ರತ್ಯಯಕ್ಕೆ ಯಾಡಾಗಮ ಹೇಳುತ್ತಾನೆ.

(ಆಪಿನ ಪರವಾದ ಙಿತ್ತಿಗೆ ಯಾಟ್ ಹೇಳುವ ಸೂತ್ರ)

## ೨೨೦. ಯಾಡಾಪಃ ॥ ೭।೩।೧೧೩ ॥

**ಆಪಃ ಪರಸ್ಯ ಙಿದ್ವಚನಸ್ಯ ಯಾಡಾಗಮಃ ಸ್ಯಾತ್ ॥ ವೃದ್ಧಿರೇಚಿ ॥ ರಮಾಯೈ । ರಮಾಭ್ಯಾಮ್ । ರಮಾಭ್ಯಃ । ರಮಾಯಾಃ ೨ । ರಮಯೋಃ ೨ । ರಮಾಣಾಮ್ । ರಮಾಯಾಮ್ । ರಮಾಸು ॥ ಏವಂ ದುರ್ಗಾಂಬಿಕಾದಯಃ ॥**

ಯಾಟ್ ಆಪಃ। ದ್ವಿಪದ ಸೂತ್ರ. "ಘೇರ್ಙಿತಿ" ಸೂತ್ರದಿಂದ "ಙಿತಿ" ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಆಪಃ ಪಂಚಮೀ. "ತಸ್ಮಾದಿತ್ಯುತ್ತರಸ್ಯ" ಪರಿಭಾಷೆಯಿಂದ ಪರಕ್ಕೆ ಕಾರ್ಯವೆಂದು ತಿಳಿಯಬೇಕು. ಯಾಟ್ ಟಿತ್ತಾದುದರಿಂದ ಆಗಮ. **ಸೂತ್ರಾರ್ಥ.** ಆಬಂತದ ಪರದಲ್ಲಿರುವ ಙಿದ್ವಿಭಕ್ತಿಗೆ ಯಾಡಾಗಮ ಬರುತ್ತದೆ. ಚತುರ್ಥೀ ಪಂಚಮೀ ಷಷ್ಠೀ, ಸಪ್ತಮೀ ಏಕವಚನಗಳು ಙಿತ್ತಾಗುತ್ತವೆ. ಯಾಟ್ ಟಿತ್ತಾದುದರಿಂದ "ಆದ್ಯಂತೌ ಟಕಿತೌ" ಪರಿಭಾಷೆಯಿಂದ ಆದ್ಯವಯವವಾಗಿ ಬರುತ್ತದೆ. ರಮಾ+ಏ=ರಮಾ+ಯಾ+ಏ. ಆಕಾರಕ್ಕೆ ಏಕಾರಪರವಾದುದರಿಂದ "ವೃದ್ಧಿರೇಚಿ" ಸೂತ್ರದಿಂದ ವೃದ್ಧಿ. ರಮಾಯೈ । ರಮಾಭ್ಯಾಮ್ । ರಮಾಭ್ಯಃ ॥

ಪಂಚಮೀ ಏಕವಚನದಲ್ಲಿ ಹಿಂದಿನಂತೆ ಙಸಿಗೆ ಯಾಡಾಗಮ. ರಮಾ+ಯಾ+ಅಸ್. "ಅಕಃ ಸವರ್ಣೇ ದೀರ್ಘಃ" ಸೂತ್ರದಿಂದ ಸವರ್ಣದೀರ್ಘ. ಸಕಾರಕ್ಕೆ ರುತ್ವ ವಿಸರ್ಗ. ರಮಾಯಾಃ । ರಮಾಭ್ಯಾಮ್ । ರಮಾಭ್ಯಃ ॥ ಷಷ್ಠೀ ಏಕವಚನ ದಲ್ಲಿ ಪಂಚಮೀ ಏಕವಚನದಂತೇ ರೂಪ. ರಮಾಯಾಃ । ದ್ವಿವಚನದಲ್ಲಿ ಓಸ್ ಪರವಾದಾಗ "ಆಙಿ ಚಾಪಃ" ಸೂತ್ರದಿಂದ ಆಪಿಗೆ ಏಕಾರಾದೇಶ. ರಮಾ+ಓಸ್ =ರಮೇ+ಓಸ್. ಅಯಾದೇಶ. ರಮಯೋಸ್. ರುತ್ವವಿಸರ್ಗ. ರಮಯೋಃ । ಬಹುವಚನದಲ್ಲಿ ಆಮ್. "ಹ್ರಸ್ವನದ್ಯಾಪೋ ನುಟ್" ಸೂತ್ರದಲ್ಲಿ ಆಪ್ ಸೇರಿಸಿರು

ವುದರಿಂದ ಆಪಿನ ಪರವಾದ ಆಮಿಗೆ ಅದರಿಂದ ನುಡಾಗಮ. ರಮಾ+ನ್+ಆಮ್ =ರಮಾನಾಮ್. ರೇಫ ನಕಾರ ಮಧ್ಯದಲ್ಲಿ ಅಟ್, ಪವರ್ಗವಿರುವುದರಿಂದ "ಅಟ್ ಕುಪ್ವಾಙ್ನುಮ್ವ್ಯವಾಯೇಽಪಿ" ಸೂತ್ರದಿಂದ ನಕಾರಕ್ಕೆ ಣತ್ವ. ರಮಾಣಾಮ್. ಸಪ್ತಮೀ ಏಕವಚನದಲ್ಲಿ ಙಿ ಬಂದಾಗ ಆಬಂತದ ಪರದಲ್ಲಿರುವುದರಿಂದ "ಙೇರಾಮ್ನದ್ಯಾಮ್ನೀಭ್ಯಃ" ಸೂತ್ರದಿಂದ ಙಿಗೆ ಆಮ್ ಆದೇಶ. "ಯಾಡಾಪಃ" ಸೂತ್ರದಿಂದ ಅದಕ್ಕೆ ಯಾಡಾಗಮ. ರಮಾ+ಯಾ+ಆಮ್=ರಮಾಯಾಮ್. ದ್ವಿವಚನದಲ್ಲಿ ಷಷ್ಠೀ ದ್ವಿವಚನದಂತೇ ರೂಪ. ರಮಯೋಃ. ಬಹುವಚನದಲ್ಲಿ ಸು(ಪ್) ಬಂದಾಗ ರಮಾಸು ರೂಪವಾಗುತ್ತದೆ. ಇಣಿನ ಪರದಲ್ಲಿಲ್ಲದುದರಿಂದ ಷತ್ವವಿಲ್ಲ. ಹೀಗೇ ದುರ್ಗಾ, ಅಂಬಿಕಾ ಮುಂತಾದ ಆಬಂತ ಶಬ್ದಗಳ ರೂಪವನ್ನು ತಿಳಿಯಬೇಕು.

---

### ಆಕಾರಾಂತ ಸ್ತ್ರೀಲಿಂಗ ಸರ್ವನಾಮ ಶಬ್ದಗಳು

ಸರ್ವ ಶಬ್ದದ ಮೇಲೆ ಸ್ತ್ರೀಲಿಂಗದಲ್ಲಿ ಅದಂತವಾದುದರಿಂದ "ಅಜಾದ್ಯತಷ್ಟಾಪ್" ಸೂತ್ರದಿಂದ ಟಾಪ್ ಬಂದರೆ ಸರ್ವಾ ಎಂದಾಗುತ್ತದೆ. ಇದೂ ರಮಾ ಶಬ್ದದಂತೇ ಸಾಮಾನ್ಯವಾಗಿ ರೂಪವನ್ನು ಹೊಂದುತ್ತದೆ. ಙಿದ್ವಿಭಕ್ತಿಗಳಲ್ಲಿ, ಆಮಿನಲ್ಲಿ ಮಾತ್ರ ವಿಶೇಷ ರೂಪವನ್ನು ಹೊಂದುತ್ತದೆ. ತೃತೀಯಾದವರೆಗೆ ರಮಾದಂತೇ ರೂಪ.

ಪ್ರ–ಸರ್ವಾ । ಸರ್ವೇ । ಸರ್ವಾಃ ॥ ಸಂ-ಪ್ರ-ಹೇ ಸರ್ವೇ । ಹೇ ಸರ್ವೇ । ಹೇಸರ್ವಾಃ ॥ ದ್ವಿ—ಸರ್ವಾಮ್ । ಸರ್ವೇ । ಸರ್ವಾಃ ॥ ತೃ—ಸರ್ವಯಾ । ಸರ್ವಾಭ್ಯಾಮ್ । ಸರ್ವಾಭಿಃ ॥ ಚತುರ್ಥೀ ಏಕವಚನದಲ್ಲಿ ಙೇಗೆ ಯಾಟಾಗಮ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಸ್ಯಾಟ್ ಆಗಮ ಹೇಳುತ್ತಾನೆ.

(ಸರ್ವನಾಮದಲ್ಲಿ ಸ್ಯಾಡಾಗಮ ಹೇಳುವ ಸೂತ್ರ)

## ೨೨೧. ಸರ್ವನಾಮ್ನಃ ಸ್ಯಾಡ್ಢ್ರಸ್ವಶ್ಚ ॥ ೭-೩-೧೧೪ ॥

ಆಬಂತಾತ್ಸರ್ವನಾಮ್ನೋ ಙಿತಃ ಸ್ಯಾಟ್ ಸ್ಯಾದಾಪಶ್ಚ ಹ್ರಸ್ವಃ । ಸರ್ವಸ್ಯೈ । ಸರ್ವಸ್ಯಾಃ । ಸರ್ವಸ್ಯಾಃ । ಸರ್ವಾಸಾಮ್ । ಸರ್ವಸ್ಯಾಮ್ । ಶೇಷಂ ರಮಾವತ್ । ಏವಂ ವಿಶ್ವಾದಯ ಆಬಂತಾಃ॥

ಸರ್ವನಾಮ್ನಃ, ಸ್ಯಾಟ್, ಹ್ರಸ್ವಃ, ಚ ॥ ನಾಲ್ಕು ಪದವುಳ್ಳ ಸೂತ್ರ. "ಯಾಡಾಪಃ" ಸೂತ್ರದಿಂದ "ಆಪಃ" ಅನುವೃತ್ತವಾಗುತ್ತದೆ. ಇದು ಸರ್ವನಾಮ್ನಃ ಪದಕ್ಕೆ ವಿಶೇಷಣವಾದುದರಿಂದ ಆಬಂತವಾದ ಸರ್ವನಾಮದ ಪರದ ಎಂದರ್ಥವಾಗುತ್ತದೆ. "ಘೇರ್ಙಿತಿ" ಸೂತ್ರದಿಂದ ಅನುವೃತ್ತವಾದ ಙಿತಿ ಎಂಬುದು

ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಹ್ರಸ್ವಃ ಚ ಎಂದಿರುವಾಗ ಇಲ್ಲಿ ಎರಡು ವಾಕ್ಯ ಮಾಡಿಕೊಳ್ಳಬೇಕು. "ಆಬಂತಾತ್ ಸರ್ವನಾಮ್ನಃ ಪರಸ್ಯ ಙಿತಃ ಸ್ಯಾಟ್ ಸ್ಯಾತ್" ಎಂದು ಒಂದು ವಾಕ್ಯ. ಹ್ರಸ್ವಶ್ಚ ಎಂಬಲ್ಲಿ ಆಪಃ ಅನುವೃತ್ತವಾಗುತ್ತದೆ. ಇಲ್ಲಿ ಅದು ಷಷ್ಠೀ ಎಂದು ಭಾವಿಸಬೇಕು. "ಆಪಃ ಸ್ಥಾನೇ ಹ್ರಸ್ವೋ ಭವತಿ" ಎಂದು ಎರಡನೇ ವಾಕ್ಯ. ಸೂತ್ರಾರ್ಥ. ೧) ಆಬಂತವಾದ ಸರ್ವನಾಮ ಶಬ್ದಗಳ ಪರದಲ್ಲಿರುವ ಙಿತ್ತಾದ ವಿಭಕ್ತಿಗಳಿಗೆ ಸ್ಯಾಟ್ ಆಗಮ. ೨) ಆಪಿಗೆ ಹ್ರಸ್ವವೂ ಬರುತ್ತದೆ. ಸರ್ವಾ+ಏ ಎಂದಿರುವಾಗ ಏ ಙಿದ್ವಿಭಕ್ತಿ. ಆಪಿನ ಪರದಲ್ಲಿರುವುದರಿಂದ ಅದಕ್ಕೆ ಸ್ಯಾಟಾಗಮ. ಸರ್ವಾ+ಸ್ಯಾ+ಏ ಆಪಿಗೆ ಹ್ರಸ್ವ. ಸರ್ವ+ಸ್ಯಾ+ಏ. ಆಕಾರ ಏಕಾರಗಳಿಗೆ ವೃದ್ಧಿ. ಸರ್ವಸ್ಯೈ-ಸರ್ವಾಭ್ಯಾಮ್ ಸರ್ವಾಭ್ಯಃ ||

ಪಂಚಮಿಯ ಏಕವಚನವೂ ಙಿತ್ತಾದುದರಿಂದ ಙಸಿಗೆ ಸ್ಯಾಟಾಗಮ. ಆಪಿಗೆ ಹ್ರಸ್ವ. ಸರ್ವಾ+ಅಸ್=ಸರ್ವಾ+ಸ್ಯಾ+ಅಸ್=ಸರ್ವಸ್ಯಾಸ್=ಸರ್ವಸ್ಯಾಸ್= ಸರ್ವಸ್ಯಾಃ-ಸರ್ವಾಭ್ಯಾಮ್-ಸರ್ವಾಭ್ಯಃ | ಅದಂತವಾಗದಿರುವುದರಿಂದ ಏತ್ವವಿಲ್ಲ. ಷಷ್ಠೀ ಏಕವಚನದಲ್ಲಿ ಙಸಿನಂತೇ ರೂಪ. ಸರ್ವಸ್ಯಾಃ. ದ್ವಿವಚನದಲ್ಲಿ ಓಸ್ ಪರವಾದಾಗ "ಓಸಿಚ" ಸೂತ್ರದಿಂದ ಆಪಿಗೆ ಏತ್ವ. ಸರ್ವಾ+ಓಸ್=ಸರ್ವೇ+ಓಸ್ ಏಕಾರಕ್ಕೆ ಅಯಾದೇಶ. ಸರ್ವಯೋಃ ಸರ್ವಾ+ಆಮ್ ಎಂದಿರುವಾಗ "ಆಮಿ ಸರ್ವನಾಮ್ನಃ ಸುಟ್" ಸೂತ್ರದಿಂದ ಆಮಿಗೆ ಸುಡಾಗಮ. ಟಿತ್ತಾದುದರಿಂದ ಆದ್ಯವಯವ. ಸರ್ವಾ+ಸ್+ಆಮ್=ಸರ್ವಾಸಾಮ್. ಇಣಿನ ಪರದಲ್ಲಿ ಇಲ್ಲದಿರುವುದರಿಂದ ಸಕಾರಕ್ಕೆ ಷತ್ವವಿಲ್ಲ. ಸಪ್ತಮಿಯಲ್ಲಿ ಸರ್ವಾ+ಙಿ ಎಂದಿರುವಾಗ "ಙೇರಾಮ್ನದ್ಯಾಮ್ನೀಭ್ಯಃ" ಸೂತ್ರದಿಂದ ಙಿಗೆ ಆಮ್ ಆದೇಶ. ಙಿತ್ತಾದುದರಿಂದ ಹಿಂದಿನಂತೆ ಸ್ಯಾಟ್ ಆಗಮ ಆಪಿಗೆ, ಹ್ರಸ್ವ. ಸರ್ವಾ+ಆಮ್=ಸರ್ವ+ಸ್ಯಾಮ್=ಸರ್ವಸ್ಯಾಮ್. ಓಸಿನಲ್ಲಿ ಹಿಂದಿನಂತೇ ರೂಪ. ಸರ್ವಯೋಃ. ಬಹುವಚನದಲ್ಲಿ ಸರ್ವಾಸು. ಆಕಾರದ ಪರದಲ್ಲಿರುವುದರಿಂದ ಷತ್ವವಿಲ್ಲ. ಹೀಗೆಯೇ ಅದಂತ ಸರ್ವನಾಮಗಳಿಗೆ ಸ್ತ್ರೀಲಿಂಗದಲ್ಲಿ ಟಾಪ್ ಬಂದು ಇದರಂತೇ ರೂಪವಾಗುತ್ತವೆ. ವಿಶ್ವಾ ಮುಂತಾದವುಗಳನ್ನು ಊಹಿಸಿಕೊಳ್ಳಬೇಕು.

---

## ಆಕಾರಾಂತ ಉತ್ತರಪೂರ್ವಾ ಶಬ್ದ. (ಉತ್ತರಪೂರ್ವದ ಮಧ್ಯೆ)

ಉತ್ತರಸ್ಯಾಃ ಪೂರ್ವಸ್ಯಾಶ್ಚ ದಿಶೋಽಂತರಾಲಮ್, ಉತ್ತರಪೂರ್ವಾ. ಇದು ಬಹುವ್ರೀಹಿಸಮಾಸ. ಬಹುವ್ರೀಹಿಯಲ್ಲಿ ವಿಗ್ರಹದಲ್ಲಿರುವ ಪದಗಳಿಗೆ ಪ್ರಾಧಾನ್ಯವಿಲ್ಲ. ಅನ್ಯಪದಪ್ರಾಧಾನ್ಯ. ಆಗ ಉತ್ತರಪೂರ್ವಾ ಉಪಸರ್ಜನ, ಗೌಣ, ಅಥವಾ ಅಪ್ರಧಾನವಾಗುವುದರಿಂದ ಸರ್ವನಾಮಸಂಜ್ಞಾ ಬರುವುದಿಲ್ಲ. ರಮಾಶಬ್ದದಂತೇ ರೂಪಪ್ರಾಪ್ತವಾದರೆ ವಿಕಲ್ಪವಾಗಿ ಸರ್ವನಾಮಸಂಜ್ಞೆಯನ್ನು ಹೇಳುತ್ತಾನೆ.

(ದಿಕ್ಸಮಾಸದಲ್ಲಿ ವಿಕಲ್ಪಸರ್ವನಾಮ ಸಂಜ್ಞೆ ಹೇಳುವ ಸೂತ್ರ)

**೨೨೨. ವಿಭಾಷಾ ದಿಕ್ಸಮಾಸೇ ಬಹುವ್ರೀಹೌ ॥೧-೧-೧೮॥**

**ಅತ್ರ ಸರ್ವನಾಮತಾ ವಾ । ಉತ್ತರಪೂರ್ವಸ್ಯೈ । ಉತ್ತರ-ಪೂರ್ವಾಯೈ ॥ ಇತ್ಯಾದಿ.**

ತ್ರಿಪದ ಸೂತ್ರ. "ಸರ್ವಾದೀನಿ ಸರ್ವನಾಮಾನಿ" ಸೂತ್ರದಿಂದ "ಸರ್ವನಾಮಾನಿ" ಅನುವೃತ್ತವಾಗುತ್ತದೆ. **ಸೂತ್ರಾರ್ಥ-** ದಿಕ್ಪದಘಟಿತವಾದ (ಕೂಡಿದ) ಬಹುವ್ರೀಹಿಸಮಾಸದಲ್ಲಿ ವಿಕಲ್ಪವಾಗಿ ಸರ್ವನಾಮಸಂಜ್ಞೆ ಬರುತ್ತದೆ. ಇದು ಅಪ್ರಾಪ್ತವಿಭಾಷೆ. ಗೌಣವಾದುದರಿಂದ ಸರ್ವನಾಮಸಂಜ್ಞೆಗೆ ಪ್ರಾಪ್ತಿಯಿಲ್ಲ. ಇಲ್ಲಿ ವಿಕಲ್ಪವಾಗಿ ಹೇಳಿರುವುದರಿಂದ ಅಪ್ರಾಪ್ತವಿಭಾಷೆ. ಉತ್ತರಪೂರ್ವಾ ಬಹುವ್ರೀಹಿಯಲ್ಲಿ ದಿಕ್ಸಮಾಸ. ಆದುದರಿಂದ ವಿಕಲ್ಪವಾಗಿ ಸರ್ವನಾಮ ಸಂಜ್ಞೆ ಬರುತ್ತದೆ. ಸರ್ವನಾಮಕಾರ್ಯ ಙೇ ತ್ತಾದ ನಾಲ್ಕು ವಿಭಕ್ತಿಗಳಲ್ಲಿಯೂ ಆಮಿನಲ್ಲಿಯೂ ಮಾತ್ರ ಬರುವುದರಿಂದ ಅಲ್ಲಿ ಎರಡೆರಡು ರೂಪಗಳಾಗುತ್ತವೆ. ಒಂದು ರಮಾಶಬ್ದದಂತೆಯೂ ಇನ್ನೊಂದು ಸರ್ವಾಶಬ್ದದಂತೆಯೂ ಆಗುತ್ತದೆ.

ಪ್ರ—ಉತ್ತರಪೂರ್ವಾ । ಉತ್ತರಪೂರ್ವೇ । ಉತ್ತರಪೂರ್ವಾಃ ॥ ಸಂ—ಹೇ ಉತ್ತರಪೂರ್ವೇ । ಹೇಉತ್ತರಪೂರ್ವೇ । ಹೇಉತ್ತರಪೂರ್ವಾಃ ॥ ದ್ವಿ—ಉತ್ತರಪೂರ್ವಾಂ । ಉತ್ತರಪೂರ್ವೇ । ಉತ್ತರಪೂರ್ವಾಃ ॥ ತೃ—ಉತ್ತರಪೂರ್ವಯಾ । ಉತ್ತರಪೂರ್ವಾಭ್ಯಾಮ್ । ಉತ್ತರಪೂರ್ವಾಭಿಃ ॥ ಚ—ಉತ್ತರಪೂರ್ವಸ್ಯೈ ಉತ್ತರಪೂರ್ವಾಯೈ । ಉತ್ತರಪೂರ್ವಾಭ್ಯಾಮ್ । ಉತ್ತರಪೂರ್ವಾಭ್ಯಃ ॥ ಪಂ—ಉತ್ತರಪೂರ್ವಸ್ಯಾಃ । ಉತ್ತರಪೂರ್ವಾಯಾಃ । ಉತ್ತರಪೂರ್ವಾಭ್ಯಾಮ್ । ಉತ್ತರಪೂರ್ವಾಭ್ಯಃ ॥ ಷ—ಉತ್ತರಪೂರ್ವಸ್ಯಾಃ ಉತ್ತರಪೂರ್ವಾಯಾಃ ಉತ್ತರಪೂರ್ವಯೋಃ । ಉತ್ತರಪೂರ್ವಾಸಾಮ್ ಉತ್ತರಪೂರ್ವಾಣಾಮ್ ! । ಸ—ಉತ್ತರಪೂರ್ವಸ್ಯಾಮ್ ಉತ್ತರಪೂರ್ವಾಯಾಮ್ । ಉತ್ತರಪೂರ್ವಯೋಃ । ಉತ್ತರಪೂರ್ವಾಸು ॥

ಹೀಗೆ ದಿಕ್ಸಮಾಸದಲ್ಲಿ ಇತರ ಶಬ್ದಗಳ ರೂಪವನ್ನೂ ತಿಳಿಯಬೇಕು.

———

ಆಕಾರಾಂತ ದ್ವಿತೀಯಾ ಶಬ್ದ (ಎರಡನೆಯವಳು)

ದ್ವಿತೀಯ ಶಬ್ದಕ್ಕೆ ಸ್ತ್ರೀಲಿಂಗದಲ್ಲಿ ಅದಂತವಾದುದರಿಂದ ಟಾಪ್. ದ್ವಿತೀಯಾ ಆಗುತ್ತದೆ.

**ತೀಯಸ್ಯೇತಿ ವಾ ಸರ್ವನಾಮಸಂಜ್ಞಾ । ದ್ವಿತೀಯಸ್ಯೈ । ದ್ವಿತೀಯಾಯೈ ॥ ಏವಂ ತೃತೀಯಾ ॥**

ದ್ವಿತೀಯಾ ಶಬ್ದ ತೃತೀಯಾ ಬಹುವಚನದವರೆಗೆ ರಮಾ ಶಬ್ದದಂತೇ ಆಗುತ್ತದೆ. ಚತುರ್ಥಿಯಿಂದ ಏಕವಚನದಲ್ಲಿ ಎರಡೆರಡು ರೂಪಗಳನ್ನು ಹೊಂದುತ್ತವೆ. ಇದು ತೀಯಪ್ರತ್ಯಯಾಂತ ಶಬ್ದ. "ತೀಯಸ್ಯ ಙಿತ್ಸು ವಾ" ವಾರ್ತಿಕದಿಂದ ಙಿತ್ತಿನಲ್ಲಿ ವಿಕಲ್ಪವಾಗಿ ಸರ್ವನಾಮ ಸಂಜ್ಞೆ ಬರುತ್ತದೆ. ಸರ್ವನಾಮ ಸಂಜ್ಞೆ ಇದ್ದಾಗ ಸ್ಯಾಡಾಗಮ. ಇಲ್ಲದಾಗ ಯಾಡಾಗಮ. ಆಮ್ (ಷ.ಬ.) ಒಂದನ್ನು ಬಿಟ್ಟರೆ ಉತ್ತರ ಪೂರ್ವಾ ಶಬ್ದದಂತೇ ರೂಪವಾಗುತ್ತದೆ. ಆಮಿನಲ್ಲಿ ದ್ವಿತೀಯಾನಾಮ್. ರಮಾದಂತೇರೂಪ. ದ್ವಿತೀಯಸ್ಯೈ—ದ್ವಿತೀಯಾಯೈ ಇತ್ಯಾದಿ ಹಿಂದಿನಂತೇ ತಿಳಿಯಬೇಕು. ಹೀಗೆ ತೃತೀಯಾಶಬ್ದ. ಇವುಗಳ ವ್ಯುತ್ಪತ್ತಿ ಪುಲ್ಲಿಂಗದಲ್ಲಿ ಹೇಳಿದೆ.

### ಆಕಾರಾಂತ ಅಂಬಾ ಶಬ್ದ

**ಅಂಬಾರ್ಥೇತಿ ಹ್ರಸ್ವಃ । ಹೇ ಅಂಬ । ಹೇ ಅಕ್ಕ । ಹೇ ಅಲ್ಲ ॥**

ಅಂಬಾ ಎಂದರೆ ತಾಯಿ. ಇದು ಆಬಂತ. ರಮಾ ಶಬ್ದದಂತೇ ರೂಪ ಹೊಂದುತ್ತದೆ. ಸಂಬುದ್ಧಿಯಲ್ಲಿ ಮಾತ್ರ ವಿಶೇಷ ಹೇಳುತ್ತಾನೆ. ಅಂಬಾರ್ಥೇತಿ ॥ "ಅಂಬಾರ್ಥನದ್ಯೋರ್ಹ್ರಸ್ವಃ" ಸೂತ್ರದಲ್ಲಿ ಅಂಬಾ ಎಂಬರ್ಥಕೊಡುವ ಪದಗಳಿಗೆ ಸಂಬುದ್ಧಿಯಲ್ಲಿ ಹ್ರಸ್ವ ಹೇಳಿರುವುದರಿಂದ "ಸಂಬುದ್ಧೌ ಚ" ಸೂತ್ರದಿಂದ ಹೇಳಿದ ಏಕಾರ ಬರುವುದಿಲ್ಲ. ಆಗ ಹ್ರಸ್ವಬಂದರೆ ಹೇ ಅಂಬ+ಸ್ ಎಂದಾಗುತ್ತದೆ. ಹ್ರಸ್ವದ ಪರದಲ್ಲಿ ಸ್ ಇರುವುದರಿಂದ "ಏಙ್ಹ್ರಸ್ವಾತ್ ಸಂಬುದ್ಧೇಃ" ಸೂತ್ರದಿಂದ ಸುವಿಗೆ ಲೋಪ. ಹೇ ಅಂಬ ಎಂದಾಗುತ್ತದೆ, ಅಂಬಾರ್ಥಕೊಡುವ ಶಬ್ದಗಳನ್ನು ಹೇಳುತ್ತಾನೆ. ಹೇ ಅಕ್ಕ. ಹೇ ಅಲ್ಲ. ಅಕ್ಕಾ, ಅಲ್ಲ ಶಬ್ದಗಳಿಗೂ ತಾಯಿಯೆಂದರ್ಥ. ಇವುಗಳಿಗೂ ಸಂಬುದ್ಧಿಯಲ್ಲಿ ಹ್ರಸ್ವ. ಉಳಿದ ಎಲ್ಲಾ ವಿಭಕ್ತಿಗಳಲ್ಲಿಯೂ ರಮಾ ಶಬ್ದದಂತೇ ರೂಪವಾಗುತ್ತದೆ.

---

### ಆಕಾರಂತ ಜರಾ ಶಬ್ದ. (ಮುಪ್ಪು)

ಜರಾ ಆಬಂತಶಬ್ದ. ಇದರಲ್ಲಿ ಕಾರ್ಯವಿಶೇಷಗಳು ಪುಲ್ಲಿಂಗದಲ್ಲಿ ಹೇಳಿದಂತೆಯೇ ಆಗುವುದರಿಂದ ಸಂಗ್ರಹವಾಗಿ ಬರೆದಿರುತ್ತಾನೆ.

**ಜರಾ । ಜರಸೌ । ಇತ್ಯಾದಿ । ಪಕ್ಷೇ ರಮಾವತ್ ॥**

ಜರಾಶಬ್ದವೂ ರಮಾಶಬ್ದದಂತೇ ರೂಪ ಹೊಂದುತ್ತದೆ. ಅಜಾದಿಯಲ್ಲಿ ಮಾತ್ರ "ಜರಾಯಾ ಜರಸನ್ಯತರಸ್ಯಾಮ್" ಸೂತ್ರದಿಂದ ಜರಾಶಬ್ದಕ್ಕೆ ಜರಸ್ ಆದೇಶಬಂದು ಹಲಂತವಾಗುತ್ತದೆ. ಜರಸ್ ಆದೇಶ ಬಂದಾಗ ಕೇವಲಪ್ರತ್ಯಯ ಸೇರಿಸುವುದು ಮಾತ್ರ. ಅಜಾದಿಯಲ್ಲಿ ಹೀಗೆ ಎರಡು ರೂಪಗಳಾಗುತ್ತವೆ. ಔ.

ವಿಭಕ್ತಿಯಲ್ಲಿ ಶೀ ಭಾವಕ್ಕಿಂತಲೂ ಪರವಾದುದರಿಂದ ಜರಸಾದೇಶ. ಆಗ ಹಲಂತವಾದುದರಿಂದ ಪುನಃ ಶೀಭಾವವಿಲ್ಲ. ಆಮಿನಲ್ಲಿಯೂ ನುಟಿಗಿಂತ ಪರವಾದುದರಿಂದ ಜರಸಾದೇಶ. ಆದೇಶಬಂದಮೇಲೆ ಆಬಂತವಿಲ್ಲದುದರಿಂದ ನುಡಾಗಮವಿಲ್ಲ.

ಪ್ರ—ಜರಾ । ಜರಸೌ ಜರೇ । ಜರಸಃ ಜರಾಃ ॥ ಸಂ. ಪ್ರ—ಹೇ ಜರೇ । ಹೇ ಜರಸೌ ಹೇ ಜರೇ । ಹೇ ಜರಸಃ ಹೇ ಜರಾಃ ॥ ದ್ವಿ-ಜರಸಮ್ ಜರಾಮ್ । ಜರಸೌ ಜರೇ । ಜರಸಃ ಜರಾಃ ॥ ತೃ—ಜರಸಾ ಜರಯಾ । ಜರಾಭ್ಯಾಮ್ । ಜರಾಭಿಃ ॥ ಚ-ಜರಸೇ ಜರಾಯೈ । ಜರಾಭ್ಯಾಮ್ । ಜರಾಭ್ಯಃ ॥ ಪಂ—ಜರಸಃ ಜರಾಯಾಃ । ಜರಾಭ್ಯಾಮ್ । ಜರಾಭ್ಯಃ ॥ ಷ—ಜರಸಃ ಜರಾಯಾಃ । ಜರಸೋಃ ಜರಯೋಃ । ಜರಸಾಮ್ ಜರಾಣಾಮ್ ॥ ಸ—ಜರಸಿ ಜರಾಯಾಮ್ । ಜರಸೋಃ ಜರಯೋಃ । ಜರಾಸು ॥

### ಆಕಾರಾಂತ ಗೋಪಾ ಶಬ್ದ (ಗೊಲ್ಲರವಳು)

**ಗೋಪಾ ವಿಶ್ವಪಾವತ್ ॥**

ಗಾಂ ಪಾತಿ ಇತಿ ಗೋಪಾ. ಗೋವನ್ನು ಸಾಕುವವಳು. ಇದು ಆಕಾರಾಂತ. ಧಾತ್ವಂತವಾದ ಶಬ್ದ. ವಿಶ್ವಪಾ ಶಬ್ದದಲ್ಲಿ ಹೇಳಿದ ಕಾರ್ಯಗಳೇ ಬರುತ್ತವೆ. ಆಬಂತವಾಗದಿರುವುದರಿಂದ ಆಪ್ ನಿಮಿತ್ತಕ ಕಾರ್ಯಗಳು ಬರುವುದಿಲ್ಲ. ಭ ಸಂಜ್ಞೆಯಿರುವಾಗ (ಯಚಿಭಮ್) ಅಂದರೆ ಶಸಾದಿ ಅಜಾದಿ ವಿಭಕ್ತಿಗಳಲ್ಲಿ "ಆತೋಧಾತೋಃ" ಸೂತ್ರದಿಂದ ಅಕಾರಕ್ಕೆ ಲೋಪ. ಗೋಪಾಃ ಗೋಪೌ ಗೋಪಾಃ । ಗೋಪಾಂ ಗೋಪೌ ಗೋಪಃ ಇತ್ಯಾದಿ. ವಿಶ್ವಪಾ ಶಬ್ದದಂತೇ ತಿಳಿಯಬೇಕು.

ಇತಿ ಆಕಾರಾಂತಾಃ ॥

---

### ಇಕಾರಾಂತ ಮತಿ ಶಬ್ದ (ಬುದ್ಧಿ)

**ಮತೀಃ । ಮತ್ಯಾ ॥**

ಸ್ವಾದಿ ಪಂಚವಚನಗಳಲ್ಲಿ ಹರಿಶಬ್ದದಂತೇ ರೂಪ ತಿಳಿಯಬೇಕು. ಪ್ರ-ಮತಿಃ-ಮತೀ-ಮತಯಃ ॥ ಸಂ. ಪ್ರ-ಹೇ ಮತೇ-ಹೇಮತೀ-ಹೇ ಮತಯಃ ॥ ದ್ವಿ. ಮತಿಂ-ಮತೀ. ಬಹುವಚನದಲ್ಲಿ ಮತಿ+ಶಸ್ ಎಂದಿರುವಾಗ ಪೂರ್ವಸವರ್ಣ ದೀರ್ಘ. ಮತೀಸ್. "ತಸ್ಮಾಚ್ಛಸೋ ನಃ ಪುಂಸಿ" ಸೂತ್ರದಲ್ಲಿ ಪುಲ್ಲಿಂಗದಲ್ಲಿ ಮಾತ್ರ ನತ್ವ ಹೇಳಿರುವುದರಿಂದ ಸಕಾರಕ್ಕೆ ನತ್ವವಿಲ್ಲ. ರುತ್ವವಿಸರ್ಗ. ಮತೀಃ ॥ ತೃತೀಯಾ ಏಕವಚನದಲ್ಲಿಯೂ "ಆಙೋನಾಽಸ್ತ್ರಿಯಾಮ್" ಸೂತ್ರದಲ್ಲಿ ಸ್ತ್ರೀಲಿಂಗದಲ್ಲಿ ನಿಷೇಧ ಮಾಡಿರುವುದರಿಂದ ಟಾ ಪ್ರತ್ಯಯಕ್ಕೆ ನಾಭಾವವಿಲ್ಲ. ಮತಿ+ಆ ಎಂದಿರುವಾಗ "ಇಕೋಯಣಚಿ" ಸೂತ್ರದಿಂದ ಯಣ್. ಮತ್ಯಾ.

ಹಲಾದಿಯಲ್ಲಿ ಕಾರ್ಯ ವಿಶೇಷವಿಲ್ಲ. ಮತಿಭ್ಯಾಮ್–ಮತಿಭಿಃ || ಚತುರ್ಥಿಯಲ್ಲಿ ನಿತ್ಯವಾಗಿ ಘಿಸಂಜ್ಞಾ ಪ್ರಾಪ್ತವಾದರೆ ಅಪವಾದವಾಗಿ ವಿಕಲ್ಪವಾಗಿ ನದೀಸಂಜ್ಞೆ ಹೇಳುತ್ತಾನೆ.

(ವಿಕಲ್ಪ ನದೀ ಸಂಜ್ಞೆಯನ್ನು ಹೇಳುವ ಸೂತ್ರ)

## ೨೨೩. ಙಿತಿ ಹ್ರಸ್ವಶ್ಚ || ೧-೪-೬ ||

**ಇಯಙುವಙ್‌ಸ್ಥಾನೌ ಸ್ತ್ರೀಶಬ್ದಭಿನ್ನೌ ನಿತ್ಯಸ್ತ್ರೀಲಿಂಗಾವೀ-ದೂತೌ, ಹ್ರಸ್ವೌ ಚೇವರ್ಣೋವರ್ಣೌ, ಸ್ತ್ರಿಯಾಂ ವಾ ನದೀ-ಸಂಜ್ಞೌ ಸ್ತಃ ಙಿತಿ ಪರೇ । ಮತ್ಯೈ । ಮತಯೇ । ಮತ್ಯಾಃ ಮತೇಃ । ಮತ್ಯಾಃ । ಮತೇಃ ।**

ಙಿತಿ, ಹ್ರಸ್ವಃ, ಚ || ತ್ರಿಪದಸೂತ್ರ. "ಯೂಸ್ತ್ರ್ಯಾಖ್ಯೌ ನದೀ" ಸೂತ್ರ ಅನುವೃತ್ತವಾಗುತ್ತದೆ. "ನೇಯಙ್ ಉವಙ್ ಸ್ಥಾನಾವಸ್ತ್ರೀ" ಸೂತ್ರದಿಂದ ನ ಬಿಟ್ಟು ಉಳಿದ ಎಲ್ಲಾ ಪದಗಳು ಅನುವೃತ್ತವಾಗುತ್ತವೆ. ಯೂ ಎಂದರೆ ಈಕಾರ ಊಕಾರಗಳೆಂದು ಹಿಂದೆ ಹೇಳಿದೆ. ಸ್ತ್ರ್ಯಾಖ್ಯೌ ಎಂದರೆ ಯಾವಾಗಲೂ ಸ್ತ್ರೀಲಿಂಗವನ್ನು ಹೇಳುವವುಗಳು, ಅಂದರೆ ನಿತ್ಯಸ್ತ್ರೀಲಿಂಗಗಳು. ಇಯಙ್ ಉವಙೋಃ ಸ್ಥಾನಂ (ಸ್ಥಿತಿಃ=) ಯಯೋಸ್ತೌ ಇಯಙುವಙ್‌ಸ್ಥಾನೌ. ಇಯಙ್ ಉವಙ್ ಆದೇಶಗಳನ್ನು ಹೊಂದಲು ಯೋಗ್ಯವಾದವುಗಳು ಎಂದರ್ಥ. ನಸ್ತ್ರೀ ಅಸ್ತ್ರೀ. ಸ್ತ್ರೀ ಶಬ್ದವೂ ಇಯಙ್ ಹೊಂದಲು ಯೋಗ್ಯವಾದುದರಿಂದ ಅದನ್ನು ಬಿಟ್ಟು ಇತರ ಶಬ್ದಗಳನ್ನು ತೆಗೆದುಕೊಳ್ಳಬೇಕು. ಹೀಗೆ ಇಲ್ಲಿ ಚಕಾರವಿರುವುದರಿಂದ ಎರಡು ವಾಕ್ಯಗಳಾಗುತ್ತವೆ. ೧) ಇಯಙ್ ಉವಙ್ ಸ್ಥಾನೌ ಸ್ತ್ರೀ ಶಬ್ದ ಭಿನ್ನೌ ನಿತ್ಯಸ್ತ್ರೀಲಿಂಗೌ, ಈದೂತೌ ನದೀಸಂಜ್ಞೌ ವಾ ಸ್ತಃ ಙಿತಿ ಪರೇ. **ಸೂತ್ರಾರ್ಥ.** ಇಯಙುವಙ್ ಆದೇಶ ಹೊಂದಲು ಯೋಗ್ಯವಾದ ಸ್ತ್ರೀ ಶಬ್ದಭಿನ್ನವಾದ ನಿತ್ಯಸ್ತ್ರೀಲಿಂಗವಾದ ಈಕಾರಾಂತ, ಊಕಾರಾಂತ ಶಬ್ದಗಳು ಙಿತ್ತಾದ ಪ್ರತ್ಯಯ ಪರವಾದಾಗ ವಿಕಲ್ಪವಾಗಿ ನದೀಸಂಜ್ಞೆಯನ್ನು ಹೊಂದುತ್ತವೆ. "ನೇಯಙುವಙ್ ಸ್ಥಾನಾವಸ್ತ್ರೀ" ಸೂತ್ರದಿಂದ ಇಯಙು ವಙ್ ಹೊಂದುವವುಗಳಿಗೆ ನದೀಸಂಜ್ಞಾ ನಿಷೇಧಮಾಡಿರುವುದರಿಂದ ವಿಕಲ್ಪವಾಗಿ ಇಲ್ಲಿ ಹೇಳಿರುವುದು. ಹ್ರಸ್ವಶ್ಚ ಎಂಬುದೇ ಎರಡನೇ ವಾಕ್ಯ. ಇಲ್ಲಿಯೂ ಯೂ ಅನುವೃತ್ತವಾಗುತ್ತದೆ. ಇಶ್ಚ ಉಶ್ಚ ಯೂ. ಹ್ರಸ್ವಃ ಎಂಬುದು ಪ್ರತ್ಯೇಕ ಇಕಾರೋಕಾರಗಳಲ್ಲಿ ಅನ್ವಯ ಹೊಂದುತ್ತದೆ. ಸ್ತ್ರ್ಯಾಖ್ಯೌ ಪದವು ಇಲ್ಲಿ ಸಂಬದ್ಧವಾದರೂ ಹಿಂದಿನಂತೆ ಇಲ್ಲಿ ಅರ್ಥವಿಲ್ಲ. ಸ್ತ್ರೀಲಿಂಗವಾಚಕಗಳು ಎಂದು ಸಾಮಾನ್ಯಾರ್ಥ. ನಿತ್ಯಸ್ತ್ರೀಲಿಂಗವೆಂದಲ್ಲ. ಹೀಗೆ ವಿಶೇಷಾರ್ಥ ಸ್ವೀಕರಿಸುವುದರಲ್ಲಿ ವ್ಯಾಖ್ಯಾನವೇ ಪ್ರಮಾಣ, "ವಾಮಿ" ಸೂತ್ರದಿಂದ "ವಾ" ಅನುವೃತ್ತಿ. ೨) ಸ್ತ್ರೀಲಿಂಗೌ ಹ್ರಸ್ವೌ ಚೇವರ್ಣೋವರ್ಣೌ ನದೀಸಂಜ್ಞಾ ವಾ ಸ್ತೋ ಙಿತಿ ಪರೇ

ಎಂದು ಎರಡನೇವಾಕ್ಯ. ಸ್ತ್ರೀಲಿಂಗವಾಚಕವಾದ ಹ್ರಸ್ವವಾದ ಇವರ್ಣೋವರ್ಣಾಂತ ಪದಗಳು ಙಿತ್ತಾದ ಪ್ರತ್ಯಯಪರವಾದಾಗ ವಿಕಲ್ಪವಾಗಿ ನದೀಸಂಜ್ಞೆಯನ್ನು ಹೊಂದುತ್ತವೆ. ಇದು ಅಪ್ರಾಪ್ತವಿಭಾಷೆ ಒಟ್ಟಿಗೆ **ಸೂತ್ರಾರ್ಥ.** ಇಯಙುವಙ್ ಹೊಂದಲು ಯೋಗ್ಯವಾದ ಸ್ತ್ರೀಶಬ್ದಭಿನ್ನವಾದ ನಿತ್ಯ ಸ್ತ್ರೀಲಿಂಗವಾದ ಈಕಾರ ಊಕಾರಗಳೂ ಸ್ತ್ರೀಲಿಂಗದಲ್ಲಿ ಙಿತ್‌ಪ್ರತ್ಯಯ ಪರವಾದಾಗ ವಿಕಲ್ಪವಾಗಿ ನದೀ ಸಂಜ್ಞೆಯನ್ನು ಹೊಂದುತ್ತವೆ. ಎರಡನೇ ವಾಕ್ಯದಂತೆ ಮತಿ ಶಬ್ದಕ್ಕೆ ವಿಕಲ್ಪವಾಗಿ ನದೀಸಂಜ್ಞೆ. ಮತಿಯೆಂಬುದು ಸ್ತ್ರೀಲಿಂಗ, ಇಕಾರಾಂತವಾಗಿದೆ. (ಙೇ) ಚತುರ್ಥಿ ಯಿಂದ ಏಕವಚನವೆಲ್ಲಾ ಙಿತ್ತಾದ ಪ್ರತ್ಯಯ. ಮತಿ+ಏ ಎಂದಿರುವಾಗ ನದೀ ಸಂಜ್ಞೆ ಬಂದರೆ "ಆಣ್ನದ್ಯಾಃ" ಸೂತ್ರದಿಂದ ಙೇಗೆ ಆಟಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬಂದರೆ ಮತಿ+ಆ+ಏ ಎಂದಾಗ "ಆಟಶ್ಚ" ಸೂತ್ರದಿಂದ ಆ ಏಗಳಿಗೆ ವೃದ್ಧಿ. ಮತಿ+ಐ. ಯಣ್. ಮತ್ಯೈ. ನದೀಸಂಜ್ಞಾ ಬಾರದಿರುವಾಗ "ಘೇರ್ಙಿತಿ" ಸೂತ್ರದಿಂದ ಇಕಾರಕ್ಕೆ ಗುಣ. ಗುಣದ ಏಕಾರಕ್ಕೆ ಅಯಾದೇಶ. ಹರಿಶಬ್ದದಂತೇ ರೂಪ. ಮತಿ+ಏ=ಮತೇ+ಏ=ಮತಯೇ. ಹಲಾದಿಯಲ್ಲಿ ಕೇವಲ ವಿಭಕ್ತಿ ಸೇರಿಸುವುದು ಮಾತ್ರ. ಮತಿಭ್ಯಾಮ್ ಮತಿಭ್ಯಃ ॥ ಪಂಚಮಿ, ಷಷ್ಠಿ, ಏಕವಚನಗಳಲ್ಲಿ ಙಸಿ ಙಸ್ ಪ್ರತ್ಯಯ ಬಂದು ಅಸ್ ಉಳಿಯುತ್ತದೆ. ಙಿತ್ತಾದುದರಿಂದ ವಿಕಲ್ಪ ನದೀ ಸಂಜ್ಞಾ ಬಂದರೆ ಹಿಂದಿನಂತೆ "ಆಣ್ನದ್ಯಾಃ" ಸೂತ್ರದಿಂದ ಆಟ್. "ಆಟಶ್ಚ" ಸೂತ್ರದಿಂದ ವೃದ್ಧಿ. ಮತಿ+ಅಸ್=ಮತಿ+ಆ +ಅಸ್ ಮತಿ+ಆಸ್. ಯಣ್. ಮತ್ಯಾಸ್. ಸಕಾರಕ್ಕೆ ರುತ್ವವಿಸರ್ಗ. ಮತ್ಯಾಃ -ಮತ್ಯಾಃ ದ್ವಿಬಹುವಚನಗಳಲ್ಲಿ ಹರಿ- ಶಬ್ದದಂತೇ ರೂಪ. ಪಂ-ಮತಿಭ್ಯಾಮ್- ಮತಿಭ್ಯಃ । ಮತ್ಯೋಃ-ಮತೀನಾಮ್. (ನುಟ್-ದೀರ್ಘ.)

ಸಪ್ತಮಿ ಏಕವಚನದಲ್ಲಿ ಙಿಪರವಾದಾಗ ನದೀಸಂಜ್ಞಾ ಬಂದಾಗ ಙಿಗೆ ಆಮ್ ಆದೇಶ ಹೇಳುತ್ತಾನೆ.

(ಙಿಗೆ ಆಮ್ ಹೇಳುವ ಸೂತ್ರ)

## ॥ ೨೨೪. ಇದುದ್ಭ್ಯಾಮ್ ॥ ೭-೩-೧೧೭ ॥

**ನದೀಸಂಜ್ಞಕಾಭ್ಯಾಮಿದುದ್ಭ್ಯಾಂ ಪರಸ್ಯ ಙೇರಾಮ್ ಸ್ಯಾತ್ । ಮತ್ಯಾಮ್ ಮತೌ । ಶೇಷಂ ಹರಿವತ್ ॥ ಏವಂ ಬುದ್ಧ್ಯಾದಯಃ ॥**

ಏಕಪದಸೂತ್ರ. "ಙೇರಾಮ್ನದ್ಯಾಮ್ನೀಭ್ಯಃ" ಸೂತ್ರದಿಂದ "ನದೀ" "ಆಮ್" ಅನುವೃತ್ತವಾಗುತ್ತವೆ. ಇದುದ್ಭ್ಯಾಮ್ ಪಂಚಮೀ. ಅಲ್ಲಿ ನದೀ ಎಂಬುದಕ್ಕೆ ಅನ್ವಯ. **ಸೂತ್ರಾರ್ಥ.** ನದೀಸಂಜ್ಞೆಯುಳ್ಳ ಇಕಾರಉಕಾರಗಳ

ಪರದಲ್ಲಿರುವ ಙಿ ಪ್ರತ್ಯಯಕ್ಕೆ ಆಮ್ ಬರುತ್ತದೆ. ಯದ್ಯಪಿ ಇಲ್ಲಿ "ಙೇರಾಮ್-" ಸೂತ್ರದಿಂದಲೇ ಆಮ್ ಬರಬಹುದು. ಆದರೆ ಅದಕ್ಕೆ ಬಾಧಕವಾಗಿ "ಔತ್" ಸೂತ್ರದಿಂದ ಙಿಗೆ ಔತ್ವ ಬರಬೇಕಾಗುತ್ತದೆ. ಙೇರಾಮ್-ಗೌರೀಮುಂತಾದಸ್ಥಳದಲ್ಲಿ ಚರಿತಾರ್ಥವನ್ನು ಹೊಂದುತ್ತದೆ. "ಔತ್" ಸೂತ್ರಕ್ಕೆ ಸಖ್ಯೌ ಎಂಬಲ್ಲಿ ಚರಿತಾರ್ಥ. ಪ್ರಕೃತಙಿ ಪರವಾದುದರಿಂದ ಔತ್ವವನ್ನು ಬಾಧಿಸಿ ಈ ಸೂತ್ರದಿಂದ ಆಮ್ ಬಂದರೆ ಮತಿ+ಆಮ್. ಙಿತ್ತಾದುದರಿಂದ ಆಟ್. ಮತಿ+ಆ+ಆಮ್. ಮತಿ+ಆಮ್. ಯಣ್. ಮತ್ಯಾಮ್. ಆಟ್‌ಮಾಡದಿದ್ದರೂ ಮತ್ಯಾಮ್ ರೂಪಸಿದ್ಧಿಯಾದರೂ ಆಟಿಗೆ ಲಕ್ಷ್ಯವಾದುದರಿಂದ ಮಾಡಲೇಬೇಕು. "ಪರ್ಜನ್ಯವತ್ ಲಕ್ಷಣಪ್ರವೃತ್ತಿಃ" ಸೂತ್ರವು ಮಳೆಯಂತೆ ಪ್ರವೃತ್ತಿಹೊಂದುವುದೆಂದು ಪರಿಭಾಷೆ ಹೇಳುತ್ತದೆ. ಮಳೆಯು ಬೇಕಾದಲ್ಲಿಯೂ, ಬೇಡವಾದಲ್ಲೂ ಬರುತ್ತದೆ. ಅದರಂತೆ ಸೂತ್ರವು ತನ್ನ ಲಕ್ಷ್ಯದಲ್ಲಿ ಪ್ರಯೋಜನವಿರಲೀ ಇಲ್ಲದಿರಲಿ ಬರುತ್ತದೆ. ನದೀಸಂಜ್ಞಾಬಾರದಿದ್ದರೆ "ಅಚ್ಚಘೇಃ" ಸೂತ್ರದಿಂದ ಙಿಗೆ ಔತ್ವ. ತಕಾರದ ಮೇಲಿರುವ ಇಕಾರಕ್ಕೆ ಅಕಾರಾದೇಶ. ಮತ+ಔ. ವೃದ್ಧಿ. ಮತೌ. ಉಳಿದೆಡೆ ಹರಿಶಬ್ದದಂತೇರೂಪ. ಮತ್ಯೋಃ—ಮತಿಷು. ಇಣಿನಪರದಲ್ಲಿರುವುದರಿಂದ "ಆದೇಶ ಪ್ರತ್ಯಯಯೋಃ" ಸೂತ್ರದಿಂದ ಷತ್ವ. ಹೀಗೆಯೇ ಬುದ್ಧಿ ಮುಂತಾದ ಇಕಾರಾಂತ ಸ್ತ್ರೀಲಿಂಗಶಬ್ದಗಳ ರೂಪವನ್ನು ತಿಳಿದುಕೊಳ್ಳಬೇಕು.

---

ಇಕಾರಾಂತ ಸ್ತ್ರೀಲಿಂಗ ತ್ರಿ ಶಬ್ದ. (ಮೂರು)

ಬಹುತ್ವಸಂಖ್ಯಾವಾಚಕವಾದುದರಿಂದ ಇದು ನಿತ್ಯಬಹುವಚನಾಂತ. ತ್ರಿ+ಜಸ್ ಎಂದಿರುವಾಗ ಪ್ರಕೃತಿಗೆ ಆದೇಶ ಹೇಳುತ್ತಾನೆ.

(ತ್ರಿಚತುರ್‌ಗಳಿಗೆ ಆದೇಶ ಹೇಳುವ ಸೂತ್ರ)

## ೨೨೫. ತ್ರಿಚತುರೋಃ, ಸ್ತ್ರಿಯಾಂ, ತಿಸೃಚತಸೃ ॥ ೭-೨-೯೯ ॥

**ಸ್ತ್ರೀಲಿಂಗಯೋರೇತಯೋರೇತಾವಾದೇಶೌ ಸ್ತಃ ವಿಭಕ್ತೌ ಪರತಃ ॥**

ತ್ರಿಪದಸೂತ್ರ. "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ವಿಭಕ್ತೌ" ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ತ್ರಿ, ಚತುರ್ ಶಬ್ದಗಳಿಗೆ ಸ್ತ್ರೀಲಿಂಗದಲ್ಲಿ ವಿಭಕ್ತಿ ಪರವಾದಾಗ ಕ್ರಮವಾಗಿ ತಿಸೃ. ಚತಸೃ ಆದೇಶಗಳು ಬರುತ್ತವೆ. ಪ್ರಕೃತ ಅಜಾದಿಯಾದುದರಿಂದ ತಿಸೃ ಆದೇಶಬಂದರೆ ತಿಸೃ+ಅಸ್ ಎಂದಾಗುತ್ತದೆ. ಆಗ ಋಕಾರಕ್ಕೆ ಕಾರ್ಯ ಹೇಳುತ್ತಾನೆ.

(ಋಕಾರಕ್ಕೆ ರೇಫಾದೇಶ ಹೇಳುವ ಸೂತ್ರ)

**೨೨೬. ಅಚಿ ರ ಋತಃ ॥ ೭-೨-೧೦೦ ॥**

**ತಿಸೃ ಚತಸೃ ಏತಯೋರ್ಋಕಾರಸ್ಯ ರೇಫಾದೇಶಃ ಸ್ಯಾದಚಿ । ಗುಣದೀರ್ಘೋತ್ವಾನಾಮಪವಾದಃ । ತಿಸ್ರಃ । ತಿಸ್ರಃ । ತಿಸೃಭಿಃ । ತಿಸೃಭ್ಯಃ । ತಿಸೃಭ್ಯಃ । ಆಮಿ ನುಟ್ ॥**

ತ್ರಿಪದ ಸೂತ್ರ. ಹಿಂದಿನ ಸೂತ್ರದಿಂದ "ತಿಸೃಚತಸೃ" ಅನುವೃತ್ತವಾಗುತ್ತದೆ. ಅದು ಇಲ್ಲಿ ಷಷ್ಠ್ಯಂತವಾಗಬೇಕಾದುದರಿಂದ ಲುಪ್ತಷಷ್ಠೀಕವೆಂದು (ಷಷ್ಠೀಲುಪ್ತವಾಗಿದೆಯೆಂದು) ಭಾವಿಸಬೇಕು. ರಃ ಅಂದರೆ ರೇಫ. **ಸೂತ್ರಾರ್ಥ.** ತಿಸೃಚತಸೃಶಬ್ದಗಳ ಋಕಾರಕ್ಕೆ ಅಚ್‌ಪರವಾದಾಗ ರೇಫಾದೇಶ ಬರುತ್ತದೆ. ಪ್ರಕೃತ ಜಸ್ ಪರವಾದಾಗ ಅಜಾದಿಪ್ರತ್ಯಯವಿರುವುದರಿಂದ ಋಕಾರಕ್ಕೆ ರೇಫಾದೇಶ. ತಿಸೃ+ಅಸ್=ತಿಸ್-ರ್+ಅಸ್=ತಿಸ್ರಸ್. ಸಕಾರಕ್ಕೆ ರುತ್ವವಿಸರ್ಗ. ತಿಸ್ರಃ ಹೀಗೆಯೇ ಶಸಿನಲ್ಲಿಯೂ ರೇಫಾದೇಶ. ತಿಸ್ರಃ ॥

ತಿಸ್ರಃ ರೂಪಸಿದ್ಧಿಗೋಸ್ಕರ ಈ ಸೂತ್ರ ಹೇಳಬೇಕಾಗಿಲ್ಲ. ತಿಸೃ+ಅಸ್ ಎಂದಿರುವಾಗ "ಇಕೋಯಣಚಿ" ಸೂತ್ರದಿಂದ ಯಣಾದೇಶಬಂದರೆ ತಿಸ್ರಃ ಎಂದಾಗುತ್ತದೆ. ಹೀಗಿರುವಾಗ ಏಕೆ ಪುನಃ ಹೇಳಿದುದು? ಅಂದರೆ ಗುಣ, ದೀರ್ಘ, ಉತ್ವಗಳಿಗೆ ಇದು ಅಪವಾದವೆಂದು ತಿಳಿಸುತ್ತಾನೆ. ತಿಸೃ+ಅಸ್ ಎಂದಿರುವಾಗ ಪ್ರಥಮಾಬಹುವಚನದಲ್ಲಿ "ಜಸಿ ಚ" ಸೂತ್ರದಿಂದ ಋಕಾರಕ್ಕೆ ಗುಣಬರಬೇಕಾಗುತ್ತದೆ. ಹಾಗೆಯೇ ಶಸಿನಲ್ಲಿ "ಪ್ರಥಮಯೋಃ ಪೂರ್ವಸವರ್ಣಃ" ಎಂಬುದರಿಂದ ಪೂರ್ವಸವರ್ಣದೀರ್ಘ ಪ್ರಾಪ್ತವಾಗುತ್ತದೆ. ಪ್ರಿಯತಿಸೃ+ಅಸ್ ಎಂದು ಪಂಚಮೀ ಷಷ್ಠೀ ಏಕವಚನದಲ್ಲಿ "ಋತ ಉತ್" ಸೂತ್ರದಿಂದ ಉತ್ವ ಬರಬೇಕಾಗುತ್ತದೆ. ತಿಸೃ ಶಬ್ದ ಗೌಣವಾದಾಗ ಏಕವಚನದಲ್ಲಿಯೂ ಪ್ರಯೋಗವಿದೆ. ಈ ಮೂರು ಕಾರ್ಯಗಳನ್ನೂ ಬಾಧಿಸಿ ಪುನಃ ಪ್ರಕೃತಸೂತ್ರದಿಂದ ರೇಫಾದೇಶ ಹೇಳಿರುತ್ತಾನೆ. ಆದುದರಿಂದ ಇದು ಸಾರ್ಥಕವಾಗಿದೆ. ಹಲಾದಿಯಲ್ಲಿ ಕಾರ್ಯವಿಲ್ಲ. ತೃ-ತಿಸೃಭಿಃ ಚ. ಪಂ-ತಿಸೃಭ್ಯಃ ೨ । ತಿಸೃ+ಆಮ್ ಎಂದಿರುವಾಗ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಡಾಗಮ. ತಿಸೃ+ನಾಮ್ ಎಂದಿರುವಾಗ "ನಾಮಿ" ಸೂತ್ರದಿಂದ ದೀರ್ಘಪ್ರಾಪ್ತವಾದರೆ ನಿಷೇಧಹೇಳುತ್ತಾನೆ.

(ನಾಮಿ ದೀರ್ಘನಿಷೇಧಹೇಳುವ ಸೂತ್ರ

**೨೨೭. ನ, ತಿಸೃಚತಸೃ ॥ ೬-೪-೪ ॥**

**ಏತಯೋರ್ನಾಮಿ ದೀರ್ಘೋ ನ । ತಿಸೃಣಾಮ್ । ತಿಸೃಷು ॥ ದ್ವೇ ದ್ವೇ । ದ್ವಾಭ್ಯಾಮ್ । ದ್ವಾಭ್ಯಾಮ್ । ದ್ವಾಭ್ಯಾಮ್ ।**

ದ್ವಯೋಃ । ದ್ವಯೋಃ ॥ ಗೌರೀ । ಗೌರ್ಯೌ । ಗೌರ್ಯಃ ॥ ಹೇ ಗೌರಿ । ಇತ್ಯಾದಿ । ಏವಂ ನದ್ಯಾದಯಃ । ಲಕ್ಷ್ಮೀಃ । ಶೇಷಂ ಗೌರೀವತ್ । ಏವಂ ತರೀತಂತ್ರ್ಯಾದಯಃ । ಸ್ತ್ರೀ । ಹೇ ಸ್ತ್ರಿ ॥

ದ್ವಿಪದ ಸೂತ್ರ. "ಧ್ರುಲೋಪೇದೀ—" ಸೂತ್ರದಿಂದ "ದೀರ್ಘಃ" ಅನುವೃತ್ತವಾಗುತ್ತದೆ. "ನಾಮಿ" ಸೂತ್ರಾನುವೃತ್ತಿ. ತಿಸೃ ಚತಸೃ ಲುಪ್ತಷಷ್ಠ್ಯೇಕಪದ. ಸೂತ್ರಾರ್ಥ. ತಿಸೃ, ಚತಸೃಶಬ್ದಗಳಿಗೆ ನಾಮ್ ಪರವಾದಾಗ ದೀರ್ಘ ಬರುವುದಿಲ್ಲ. ತಿಸೃನಾಮ್ ಎಂದಿರುವಾಗ ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ತ್ರಿಸೃಣಾಮ್. ಸಪ್ತ-ತಿಸೃಷು.

ಇಕಾರಾಂತಸ್ತ್ರೀಲಿಂಗ ದ್ವಿಶಬ್ದ. (ಎರಡು) ಇದು ದ್ವಿತ್ವ ಸಂಖ್ಯಾವಿಶಿಷ್ಟವಾಚಕವಾದುದರಿಂದ ನಿತ್ಯದ್ವಿವಚನಾಂತ. ದ್ವಿ+ಔ ಎಂದಿರುವಾಗ ತ್ಯದಾದೀನಾಮಃ" ಸೂತ್ರದಿಂದ ತ್ಯದಾದಿಯಲ್ಲಿ ದ್ವಿಶಬ್ದ ಸೇರಿರುವುದರಿಂದ ಅಕಾರಾದೇಶ. ದ್ವ+ಔ. ಅದಂತವಾದುದರಿಂದ "ಅಜಾದ್ಯತಷ್ಟಾಪ್" ಸೂತ್ರದಿಂದ ಸ್ತ್ರೀಲಿಂಗದಲ್ಲಿ ಟಾಪ್. ದ್ವಾ+ಔ "ಔಙ ಆಪಃ" ಸೂತ್ರದಿಂದ ವಿಭಕ್ತಿಗೆ ಶೀಭಾವ. ಗುಣ. ದ್ವೇ. ಇನ್ನು ಎಲ್ಲಾ ವಿಭಕ್ತಿಗಳಲ್ಲಿಯೂ ರಮಾಶಬ್ದದಂತೇ ಆಗುತ್ತದೆ. ದ್ವೇ-ತೃ-ಚ-ಪಂ-ದ್ವಾಭ್ಯಾಮ್. ಷ-ಸ-ದ್ವಯೋಃ ॥ ಹೀಗೆ ಇಕಾರಾಂತ ಸ್ತ್ರೀಲಿಂಗ ಶಬ್ದಗಳು ಆಗುತ್ತವೆ.

ಈಕಾರಾಂತ ಸ್ತ್ರೀಲಿಂಗ ಗೌರೀ ಶಬ್ದ. (ಪಾರ್ವತಿ) ಗೌರ ಶಬ್ದದ ಮೇಲೆ ಸ್ತ್ರೀತ್ವದಲ್ಲಿ "ಗೌರಾದಿಭ್ಯಶ್ಚ" ಸೂತ್ರದಿಂದ ಙೀಷ್ ಪ್ರತ್ಯಯ. ಗೌರ+ಈ ಎಂದಿರುವಾಗ "ಯಸ್ಯೇತಿಚ" ಸೂತ್ರದಿಂದ ಅಕಾರ ಲೋಪ. ಗೌರೀ. ನಿತ್ಯಸ್ತ್ರೀಲಿಂಗವಾಗಿ ಈಕಾರಾಂತವಾದುದರಿಂದ ನದೀ ಸಂಜ್ಞೆಯನ್ನು ಹೊಂದುತ್ತದೆ. ಸು ಪರವಾದಾಗ "ಹಲ್‌ಙ್ಯಾಭ್ಯೋ"-ಸೂತ್ರದಿಂದ ಙ್ಯಂತದ ಪರದಲ್ಲಿರುವುದರಿಂದ ಸುವಿಗೆ ಲೋಪ. ಗೌರೀ. ದ್ವಿವಚನದಲ್ಲಿ ಔ ಪರವಾದಾಗ ದೀರ್ಘದ ಪರದಲ್ಲಿರುವುದರಿಂದ ಪೂರ್ವಸವರ್ಣದೀರ್ಘ ಬರುವುದಿಲ್ಲ. ಯಣ್. ಗೌರೀ+ಔ=ಗೌರ್ಯೌ. ಜಸಿನಲ್ಲಿ ಹಿಂದಿನಂತೇ ಯಣ್. ಗೌರ್ಯಃ. ಸಂಬುದ್ಧಿಯಲ್ಲಿ ನದ್ಯಂತವಾದುದರಿಂದ "ಅಂಬಾರ್ಥನದ್ಯೋರ್ಹ್ರಸ್ವಃ" ಸೂತ್ರದಿಂದ ಹ್ರಸ್ವ. ಹೇ ಗೌರಿ+ಸ್. ಹ್ರಸ್ವದ ಪರದಲ್ಲಿರುವುದರಿಂದ "ಏಙ್‌ಹ್ರಸ್ವಾತ್ ಸಂಬುದ್ಧೇಃ" ಸೂತ್ರದಿಂದ ಸುವಿಗೆ ಲೋಪ. ಹೇ ಗೌರಿ. ದ್ವಿಬಹುವಚನಗಳಲ್ಲಿ ಪ್ರಥಮದಂತೇ ರೂಪ. ಹೇ ಗೌರ್ಯೌ-ಹೇ ಗೌರ್ಯಃ. ಗೌರೀ+ಅಮ್ ಎಂದಿರುವಾಗ "ಅಮಿ ಪೂರ್ವಃ" ಸೂತ್ರದಿಂದ ಪೂರ್ವರೂಪ. ಗೌರೀಮ್. ಗೌರ್ಯೌ. ಗೌರೀ+ಶಸ್ ಎಂದಿರುವಾಗ ಪೂರ್ವಸವರ್ಣದೀರ್ಘ. ಗೌರೀಸ್. ಸಕಾರಕ್ಕೆ ರುತ್ವವಿಸರ್ಗ. ಗೌರೀಃ. ತೃತೀಯಾ ಏಕವಚನದಲ್ಲಿ ಯಣ್. ಗೌರೀ+ಆ, ಗೌರ್ಯಾ. ಹಲಾದಿಯಲ್ಲಿ ವಿಭಕ್ತಿ ಸೇರಿಸು

ವುದು ಮಾತ್ರ. ಗೌರೀಭ್ಯಾಮ್-ಗೌರೀಭಿಃ ॥ ಚತುರ್ಥೀ ಏಕವಚನದಲ್ಲಿ ಗೌರೀ+ಏ ಎಂದಿರುವಾಗ ನದೀಕಾರ್ಯ. "ಆಣ್ನದ್ಯಾಃ" ಸೂತ್ರದಿಂದ ಆಡಾಗಮ. "ಆಟಶ್ಚ" ಸೂತ್ರದಿಂದ ವೃದ್ಧಿ. ಗೌರೀ+ಆ-ಏ=ಗೌರೀ+ಐ. ಯಣ್. ಗೌರ್ಯೈ. ಗೌರೀಭ್ಯಾಮ್-ಗೌರೀಭ್ಯಃ ॥ ಪಂಚಮೀ ಷಷ್ಠೀ ಏಕವಚನಗಳಲ್ಲಿ ಹಿಂದೆ ಹೇಳಿದಂತೆ ಪ್ರತ್ಯಯಕ್ಕೆ ಆಡಾಗಮ ವೃದ್ಧಿ. ಗೌರೀ+ಆ+ಅಸ್= ಗೌರೀ+ಆಸ್. ಗೌರ್ಯಾಸ್ (ಯಣ್) ಗೌರ್ಯಾಃ ೨. ಷಷ್ಠೀ ದ್ವಿವಚನದಲ್ಲಿ ಯಣ್. ಗೌರೀ+ಓಸ್=ಗೌರ್ಯೋಃ. ಗೌರೀ+ಆಮ್ ಎಂದಿರುವಾಗ ನದಿಯು ಪರದಲ್ಲಿರುವುದರಿಂದ "ಹ್ರಸ್ವನದ್ಯಾ"-ಸೂತ್ರದಿಂದ ಆಮಿಗೆ ನುಡಾಗಮ. ಗೌರೀ+ನಾಮ್ "ಅಟ್‌ಕುಪ್ವಾಙ್"-ಸೂತ್ರದಿಂದ ನಕಾರಕ್ಕೆ ಣತ್ವ. ಗೌರೀಣಾಮ್ ॥ ಸಪ್ತಮೀ ಏಕವಚನದಲ್ಲಿ ಙಿ ಬಂದಾಗ ಅದಕ್ಕೆ "ಙೇರಾಮ್"-ಸೂತ್ರದಿಂದ ಆಮಾದೇಶ. ಅದಕ್ಕೆ ಆಡಾಗಮ. ವೃದ್ಧಿ. ಯಣಾದೇಶ. ಗೌರೀ+ಇ=ಗೌರೀ+ ಆಮ್. ಗೌರೀ+ಆ+ಆಮ್. ಗೌರ್ಯಾಮ್ ಗೌರ್ಯೋಃ-ಗೌರೀಷು. ಇಣಿನ ಪರದಲ್ಲಿರುವುದರಿಂದ ಷತ್ವ. ಹೀಗೆಯೇ ನದೀ ಮುಂತಾದ ಙ್ಯಂತ ಶಬ್ದಗಳನ್ನು ತಿಳಿಯಬೇಕು. ಲಕ್ಷ್ಮೀ ಶಬ್ದ ಙ್ಯಂತವಲ್ಲ. ಈ ಪ್ರತ್ಯಯಾಂತ ಶಬ್ದವೆಂದು ಹಿಂದೆ ಹೇಳಿದೆ. ಆದಕ್ಕೋಸ್ಕರ ಪ್ರಥಮಾ ಸು ಪರವಾದಾಗ ಙ್ಯಂತದ ಪರದಲ್ಲಿಲ್ಲದುದರಿಂದ "ಹಲ್‌ಙ್ಯಾಭ್ಯಃ-" ಸೂತ್ರದಿಂದ ಸುಲೋಪ ಬರುವುದಿಲ್ಲ. ಸುವಿಗೆ ರುತ್ವ, ವಿಸರ್ಗ. ಲಕ್ಷ್ಮೀಃ. ಇದನ್ನು ತಿಳಿಸಲು ಬೇರೆ ಬರೆದಿರುತ್ತಾನೆ. ನದೀ ಸಂಜ್ಞೆಗೆ ಬಾಧವಿಲ್ಲದುದರಿಂದ ಇನ್ನು ಉಳಿದ ಎಲ್ಲಾ ವಿಭಕ್ತಿಗಳಲ್ಲಿಯೂ ಗೌರೀ ಶಬ್ದದಂತೇ ಆಗುತ್ತದೆ. ಹೀಗೆಯೇ ತರೀ, ತಂತ್ರೀ ಮುಂತಾದ ಈ ಪ್ರತ್ಯಯಾಂತ ಶಬ್ದಗಳಲ್ಲಿ ಪ್ರಥಮಾಂತದಲ್ಲಿ ಮಾತ್ರ ಸು ಲೋಪವಿಲ್ಲ. ಉಳಿದೆಡೆಗಳಲ್ಲಿ ಗೌರೀ ಶಬ್ದದಂತೇ ರೂಪ ತಿಳಿಯಬೇಕು.

ಈಕಾರಾಂತ ಸ್ತ್ರೀ ಶಬ್ದ. (ಹೆಂಗಸು)

ಸ್ತ್ಯೈಧಾತುವಿಗೆ ಡ್ರಟ್ ಪ್ರತ್ಯಯ ಬಂದಾಗ ಸ್ತ್ರೀ ರೂಪವಾಗುತ್ತದೆ. ಟಿತ್ತಾದುದರಿಂದ ಙೀಪ್ ಬಂದು ಙ್ಯಂತವಾಗಿದೆ. "ಹಲ್‌ಙ್ಯಾಭ್ಯೋದೀರ್ಘಾತ್"-ಸೂತ್ರದಿಂದ ಸುವಿಗೆ ಲೋಪ. ಸ್ತ್ರೀ. ನದೀ ಸಂಜ್ಞೆ ಇರುವುದರಿಂದ ಸಂಬುದ್ಧಿಯಲ್ಲಿ ಹ್ರಸ್ವ. ಸುಲೋಪ. (ಗೌರೀವತ್) ಹೇಸ್ತ್ರಿ. ದ್ವಿವಚನದಲ್ಲಿ ಔಪರವಾದಾಗ ಯಣಾದೇಶ ಪ್ರಾಪ್ತವಾದರೆ ಅಪವಾದವಾಗಿ ಇಯಙ್ ಆದೇಶ ಹೇಳುತ್ತಾನೆ.

(ಸ್ತ್ರೀ ಶಬ್ದಕ್ಕೆ ಇಯಙ್ ಹೇಳುವ ಸೂತ್ರ)

**೨೨೮. ಸ್ತ್ರಿಯಾಃ ॥ ೬-೪-೭೯ ॥**

**ಅಸ್ಯ ಇಯಙ್ ಸ್ಯಾದಜಾದೌ ಪ್ರತ್ಯಯೇ ಪರೇ ॥ ಸ್ತ್ರಿಯೌ ॥ ಸ್ತ್ರಿಯಃ ॥**

ಏಕಪದಸೂತ್ರ. "ಅಚಿ ಶ್ನುಧಾತುಭ್ರುವಾಂ"-ಸೂತ್ರದಿಂದ "ಇಯಙ್" ಅಚಿ ಪದಗಳು ಅನುವೃತ್ತವಾಗುತ್ತವೆ. "ಸ್ತ್ರಿಯಾಃ" ಷಷ್ಠೀ. ಸೂತ್ರಾರ್ಥ. ಸ್ತ್ರೀ ಶಬ್ದಕ್ಕೆ ಅಜಾದಿಯಾದ ಪ್ರತ್ಯಯ ಪರವಾದಾಗ ಇಯಙ್ ಆದೇಶಬರುತ್ತದೆ. ಙಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ಸ್ತ್ರೀ+ಔ=ಸ್ತ್ರ್+ಇಯ್+ಔ= ಸ್ತ್ರಿಯೌ. ದ್ವಿತೀಯಾದ್ವಿವಚನದಲ್ಲಿಯೂ ಹೀಗೇ ರೂಪವಾಗುತ್ತದೆ. ಜಸ್‌ಪರವಾದಾಗಲೂ ಅಜಾದಿಯಾದುದರಿಂದ ಇಯಙ್. ಸಕಾರಕ್ಕೆ ರುತ್ವವಿಸರ್ಗ. ಸ್ತ್ರಿಯಃ. ದ್ವಿತೀಯಾದಲ್ಲಿ ಅಮ್‌ಪರವಾದಾಗ ಪೂರ್ವರೂಪವನ್ನು ಬಾಧಿಸಿ ಈ ಸೂತ್ರದಿಂದ ಇಯಙ್ ಪ್ರಾಪ್ತವಾದರೆ ವಿಕಲ್ಪಹೇಳುತ್ತಾನೆ.

(ಸ್ತ್ರೀ ಶಬ್ದಕ್ಕೆ ವಿಕಲ್ಪ ಇಯಙ್ ಹೇಳುವ ಸೂತ್ರ)

## ೨೨೯. ವಾಮ್‌ಶಸೋಃ ॥ ೬-೪-೮೦ ॥

**ಅಮಿ ಶಸಿ ಚ ಸ್ತ್ರಿಯಾ ಇಯಙ್ ವಾ ಸ್ಯಾತ್ ॥ ಸ್ತ್ರಿಯಮ್ । ಸ್ತ್ರೀಮ್ । ಸ್ತ್ರಿಯಃ ಸ್ತ್ರೀಃ ॥ ಸ್ತ್ರಿಯಾ । ಸ್ತ್ರಿಯೈ । ಸ್ತ್ರಿಯಾಃ । ಸ್ತ್ರಿಯೋಃ ೨ ॥ ಪರತ್ವಾನ್ನುಟ್ । ಸ್ತ್ರೀಣಾಮ್ । ಸ್ತ್ರೀಷು ॥ ಶ್ರೀಃ । ಶ್ರಿಯೌ । ಶ್ರಿಯಃ ॥**

ವಾ, ಅಮ್‌ಶಸೋಃ । ದ್ವಿಪದಸೂತ್ರ. ಹಿಂದಿನಿಂದ "ಸ್ತ್ರಿಯಾಃ" ಸೂತ್ರವೂ "ಇಯಙ್" ಪದವೂ ಅನುವೃತ್ತವಾಗುತ್ತವೆ. **ಸೂತ್ರಾರ್ಥ.** ಸ್ತ್ರೀಶಬ್ದಕ್ಕೆ ಅಮ್, ಶಸ್ ಪರವಾದಾಗ ಇಯಙ್ ವಿಕಲ್ಪವಾಗಿ ಬರುತ್ತದೆ. ಪ್ರಕೃತ ಅಮ್‌ಪರವಾದುದರಿಂದ ಇಯಙ್ ಬಂದರೆ ಸ್ತ್ರಿಯ್+ಅಮ್=ಸ್ತ್ರಿಯಮ್. ಬಾರದಿದ್ದರೆ "ಅಮಿ ಪೂರ್ವಃ" ಸೂತ್ರದಿಂದ ಪೂರ್ವರೂಪ ೨) ಸ್ತ್ರೀಮ್. ಶಸಿನಲ್ಲಿಯೂ ಹೀಗೆ ಇಯಙ್ ಬಂದರೆ. ಸ್ತ್ರಿಯ್+ಅಸ್=ಸ್ತ್ರಿಯಃ. ಬಾರದಿದ್ದರೆ ಪೂರ್ವಸವರ್ಣದೀರ್ಘ. ಸ್ತ್ರೀಃ. ಪುಲ್ಲಿಂಗವಾಗದಿರುವುದರಿಂದ ಸಕಾರಕ್ಕೆ ನತ್ವವಿಲ್ಲ. ತೃತೀಯಾದಲ್ಲಿ ಟಾಪರವಾದಾಗ "ಸ್ತ್ರಿಯಾಃ" ಸೂತ್ರದಿಂದ ಇಯಙ್ ಆದೇಶ. ಸ್ತ್ರೀ+ಆ=ಸ್ತ್ರಿಯಾ-ಸ್ತ್ರೀಭ್ಯಾಮ್-ಸ್ತ್ರೀಭಿಃ ॥ ಚತುರ್ಥಿಏಕವಚನದಲ್ಲಿ ಙೇ ಬಂದಾಗ "ಆಣ್ನದ್ಯಾಃ" ಸೂತ್ರದಿಂದ ಅದಕ್ಕೆ ಆಟಾಗಮ. ಸ್ತ್ರೀ+ಆ-ಏ ಎಂದಿರುವಾಗ "ಆಟಶ್ಚ" ಸೂತ್ರದಿಂದ ವೃದ್ಧಿ ಸ್ತ್ರೀ+ಐ ಈಗ "ಸ್ತ್ರಿಯಾ" ಸೂತ್ರದಿಂದ ಇಯಙಾದೇಶ. ಸ್ತ್ರಿಯೈ-ಸ್ತ್ರೀಭ್ಯಾಮ್-ಸ್ತ್ರೀಭ್ಯಃ । ಪಂಚಮಿಯಲ್ಲಿ ಙಸಿಗೆ ಆಟ್‌ವೃದ್ಧಿ. ಈಕಾರಕ್ಕೆ ಇಯಙ್ ಸ್ತ್ರೀ+ಅಸ್-ಸ್ತ್ರೀ+ಆ-ಅಸ್. ಸ್ತ್ರಿಯಾಸ್ ಸ್ತ್ರಿಯಾಃ । ಸ್ತ್ರೀಭ್ಯಾಮ್ ಸ್ತ್ರೀಭ್ಯಃ ॥ ಷಷ್ಠೀ ಏಕವಚನದಲ್ಲಿಯೂ ಸ್ತ್ರಿಯಾಃ । ಓಸ್‌ಪರವಾದಾಗ ಇಯಙ್. ಸ್ತ್ರಿಯೋಃ. ಆಮಿನಲ್ಲಿ ಅಜಾದಿಯಾದುದರಿಂದ ಇಯಙ್ ಆದೇಶವೂ ಬರಬಹುದು. ನದಿಯಪರದಲ್ಲಿರುವುದರಿಂದ ಆಮಿಗೆ ನುಟ್ ಆಗಮವೂ ಬರಬಹುದು. ನುಡಾಗಮ ಬಂದರೆ ಅಜಾದಿತ್ವಭಂಗಬರುವುದರಿಂದ ತಿರುಗಿ ಇಯಙ್ ಬರುವುದಿಲ್ಲ. ಇಯಙ್ ಬಂದರೆ ನದೀತ್ವ

ಭಂಗಬರುವುದರಿಂದ ನುಟ್ ಬರುವುದಿಲ್ಲ. ಆಗ ಪರತ್ವಾನ್ನುಟ್ ಎನ್ನುತ್ತಾನೆ. "ವಿಪ್ರತಿಷೇಧೇಪರಂ ಕಾರ್ಯಮ್" ಎಂದುದರಿಂದ ಪರಸೂತ್ರದಿಂದ ನುಟೇಮೊದಲು ಬರುತ್ತದೆ. ಸ್ತ್ರೀನಾಮ್ "ಅಟ್ಕುಪ್ವಾಙ್"-ಸೂತ್ರದಿಂದ ಣತ್ವ. ಸ್ತ್ರೀಣಾಮ್ ॥ ಸಪ್ತಮಿಯಲ್ಲಿ ಙಿಪರವಾದಾಗ 'ಙೇರಾಮ್' ಸೂತ್ರದಿಂದ ಆದಕ್ಕೆ ಆಮ್. ಆಮಿಗೆ ಆಟ್ ವೃದ್ಧಿ. ಸ್ತ್ರೀ+ಆಮ್ "ಸ್ತ್ರಿಯಾ." ಸೂತ್ರದಿಂದ ಇಯಙ್ ಸ್ತ್ರಿಯಾಮ್ । ಸ್ತ್ರಿಯೋಃ । ಸ್ತ್ರೀಷು.

---

ಈಕಾರಾಂತ ಶ್ರೀಶಬ್ದ. (ಲಕ್ಷ್ಮಿ)

ಶ್ರಿಞ್ ಸೇವಾಯಾಂ ಧಾತು. (ಇವಳನ್ನು ಎಲ್ಲರೂ ಆಶ್ರಯಿಸುತ್ತಾರೆ) ಕ್ವಿಪ್ ಪ್ರತ್ಯಯ ಬಂದು ಪ್ರಕೃತಿಗೆ ದೀರ್ಘ ಬಂದಿದೆ. ಕ್ವಿಪಿನಲ್ಲಿ ಸರ್ವವೂ ಲೋಪವಾಗುತ್ತದೆ. ಶ್ರೀ ಈಕಾರಾಂತವಾಯಿತು. ಙೀಬಂತವಲ್ಲ. ಆದುದರಿಂದ ಸುವಿಗೆ ಲಕ್ಷ್ಮೀ ಶಬ್ದದಂತೆ ಲೋಪವಿಲ್ಲ. ಶ್ರೀಃ. ಶ್ರೀ+ಔ ಎಂದಿರುವಾಗ ಇಕಾರಾಂತಧಾತುವಾದುದರಿಂದ "ಅಚಿಶ್ನು" (ಸೂ. ೨೦೦) ಸೂತ್ರದಿಂದ ಇಯಙಾದೇಶ. ಶ್ರಿಯೌ. ಇನ್ನು ಮುಂದೆ ಅಜಾದಿಯಲ್ಲೆಲ್ಲಾ ಇದೇ ಸೂತ್ರದಿಂದ ಇಯಙಾದೇಶ. ಇಕಾರದ ಹಿಂದೆ ಧಾತ್ವವಯುವ ಸಂಯೋಗವಿರುವುದರಿಂದ "ಏರನೇಕಾಚಃ-(ಸೂ. ೨೦೧)" ಸೂತ್ರದಿಂದ ಯಣ್ ಬರುವುದಿಲ್ಲ. ಜಸಿನಲ್ಲಿ ಶ್ರಿಯಃ । ಸಂಬುದ್ಧಿಯಲ್ಲಿ ನದ್ಯಂತವಾದುದರಿಂದ ಹ್ರಸ್ವಪ್ರಾಪ್ತವಾದರೆ ನದೀಸಂಜ್ಞಾ ನಿಷೇಧ ಹೇಳುತ್ತಾನೆ.

(ನದೀಸಂಜ್ಞಾ ನಿಷೇಧ ಹೇಳುವ ಸೂತ್ರ)

**೨೩೦. ನೇಯುಙುವಙ್‌ಸ್ಥಾನಾವಸ್ತ್ರೀ ॥ ೧-೪-೪ ॥**

**ಇಯುಙುವಙೋಃ ಸ್ಥಿತಿರ್ಯಯೋಸ್ತಾವೀದೂತೌ ನದೀಸಂಜ್ಞೌನಸ್ತಃ ನ ತು ಸ್ತ್ರೀ। ಹೇ ಶ್ರೀಃ। ಶ್ರಿಯೈ-ಶ್ರಿಯೇ। ಶ್ರಿಯಾಃ ಶ್ರಿಯಃ-೨ ॥**

ನ ಇಯುಙುವಙ್‌ಸ್ಥಾನೌ, ಅಸ್ತ್ರೀ। ತ್ರಿಪದಸೂತ್ರ. "ಯೂಸ್ತ್ರ್ಯಾಖ್ಯೌನದೀ" ಸೂತ್ರದಿಂದ "ಯೂನದೀ" ಪದಗಳು ಅನುವೃತ್ತವಾಗುತ್ತವೆ. ಈಶ್ಚ ಊಶ್ಚ ಯೂ. ಈಕಾರ ಊಕಾರಗಳು. ಇಯುಙುವಙೋಃ ಸ್ಥಾನಂ (=ಸ್ಥಿತಿಃ) ಯಯೋಸ್ತೌ ಇಯುಙುವಙ್‌ಸ್ಥಾನೌ. **ಸೂತ್ರಾರ್ಥ.** ಇಯುಙ್ ಉವಙ್ ಹೊಂದಲು ಯೋಗ್ಯವಾದ ಈಕಾರ ಊಕಾರಗಳು ನದೀಸಂಜ್ಞೆಯನ್ನು ಹೊಂದುವುದಿಲ್ಲ. ಸ್ತ್ರೀ ಶಬ್ದಕ್ಕೆ ಈ ನಿಷೇಧವಿಲ್ಲ. ಆದು ಇಯುಙ್ ಹೊಂದಿದರೂ ನದೀಸಂಜ್ಞೆ ಇದ್ದೇ ಇದೆ. ಪ್ರಕೃತ ಶ್ರೀ ಶಬ್ದವು ಇಯುಙ್ ಹೊಂದುವುದಾದುದರಿಂದ ನದೀಸಂಜ್ಞಾ ಬರುವುದಿಲ್ಲ. ಆಗ "ಅಂಬಾರ್ಥನದ್ಯೋರ್ಹ್ರಸ್ವಃ" ಸೂತ್ರದಿಂದ ಸಂಬುದ್ಧಿಯಲ್ಲಿ ಹ್ರಸ್ವಬರುವುದಿಲ್ಲ. ಹೇ ಶ್ರೀಃ-ಹೇ ಶ್ರಿಯೌ-ಹೇ ಶ್ರಿಯಃ. ದ್ವಿ-ಶ್ರಿಯಮ್ ("ಅಮಿಪೂರ್ವಃ" ಬಾಧಿಸಿ.

ಇಯಙಾದೇಶ) ಶ್ರಿಯೌ-ಶ್ರಿಯಃ ‖ ತೃ-ಶ್ರಿಯಾ-ಶ್ರೀಭ್ಯಾಮ್-ಶ್ರೀಭಿಃ ‖ ಚತುರ್ಥಿಯಲ್ಲಿ ಙೇ ಬಂದಾಗ ಅದು ಙಿತ್ತಾದುದರಿಂದ "ಙಿತಿ ಹ್ರಸ್ವಶ್ಚ" (ಸೂ. ೨೨೫) ಸೂತ್ರದಿಂದ ವಿಕಲ್ಪವಾಗಿ ನದೀಸಂಜ್ಞಾ ಬಂದರೆ ಪ್ರತ್ಯಯಕ್ಕೆ "ಆಣ್ನದ್ಯಾಃ" ಸೂತ್ರದಿಂದ ಆಟ್ "ಆಟಶ್ಚ" ಸೂತ್ರದಿಂದ ವೃದ್ಧಿ. ಶ್ರೀ+ಏ=ಶ್ರೀ+ಆ·ಏ=ಶ್ರೀ+ಐ "ಅಚಿಶ್ನು"-(ಸೂ. ೨೦೦) ಸೂತ್ರದಿಂದ ಇಯಙ್. ಶ್ರಿಯೈ-ನದೀಸಂಜ್ಞಾ ಬಾರದಿದ್ದರೆ ಕೇವಲ ಇಯಙ್. ಶ್ರಿಯೇ-ಶ್ರೀಭ್ಯಾಮ್-ಶ್ರೀಭ್ಯಃ ‖ ಪಂಚಮೀ ಷಷ್ಠೀ ಏಕವಚನಗಳಲ್ಲಿ ನದೀಸಂಜ್ಞಾ ಬಂದರೆ ಹಿಂದಿನಂತೆ ಕ್ರಮವಾಗಿ ಆಟ್, ವೃದ್ಧಿ, ಇಯಙ್. ಶ್ರೀ+ಅಸ್-ಶ್ರೀ+ಆ+ಅಸ್-ಶ್ರೀ+ಆಸ್-ಶ್ರಿಯಾಸ್ । ಶ್ರಿಯಾಃ ೨. ಓಸಿನಲ್ಲಿ ಇಯಙ್ ಶ್ರಿಯೋಃ ೨. ಶ್ರೀ+ಆಮ್ ಎಂದಿರುವಾಗ ಙಿತ್ತಲ್ಲವಾದುದರಿಂದ ವಿಕಲ್ಪನದೀ ಸಂಜ್ಞೆಯೂ ಬಾರದಿರುವಾಗ ನದೀಸಂಜ್ಞೆ ಹೇಳುತ್ತಾನೆ.

(ವಿಕಲ್ಪನದೀ ಸಂಜ್ಞೆ ಹೇಳುವ ಸೂತ್ರ)

**೨೩೧. ವಾಽಮಿ ‖ ೧-೪-೫ ‖**

**ಇಯಙುವಙ್‌ಸ್ಥಾನೌ ಸ್ತ್ರ್ಯಾಖ್ಯೌ ಯೂ ಆಮಿ ವಾ ನದೀಸಂಜ್ಞೌ ಸ್ತಃ ನತು ಸ್ತ್ರೀ । ಶ್ರೀಣಾಮ್-ಶ್ರಿಯಾಮ್ । ಶ್ರಿಯಿ-ಶ್ರಿಯಾಮ್ ‖ ಧೇನುರ್ಮತಿವತ್ ‖**

ವಾ, ಆಮಿ ‖ ದ್ವಿಪದ ಸೂತ್ರ. "ಯೂಸ್ತ್ರ್ಯಾಖ್ಯೌನದೀ" ಸೂತ್ರವೇ ಅನುವೃತ್ತವಾಗುತ್ತದೆ. "ನೇಯಙುವಙ್‌ಸ್ಥಾನಾವಸ್ತ್ರೀ" ಸೂತ್ರದಿಂದ ನಞ್ ಬಿಟ್ಟು ಎಲ್ಲಾ ಪದಗಳೂ ಬರುತ್ತವೆ. ಪದಾರ್ಥ ಹಿಂದೆ ವಿವರಿಸಿದೆ. ಸೂತ್ರಾರ್ಥ. ಇಯಙ್ ಉವಙ್ ಹೊಂದಲು ಯೋಗ್ಯವಾಗಿ ಸ್ತ್ರೀಲಿಂಗವಾದ ಈಕಾರ ಊಕಾರಗಳು ಆಮ್ ಪರವಾದಾಗ ವಿಕಲ್ಪವಾಗಿ ನದೀಸಂಜ್ಞೆಯನ್ನು ಹೊಂದುತ್ತವೆ. ಸ್ತ್ರೀ ಶಬ್ದಕ್ಕೆ ಈ ವಿಕಲ್ಪವಿಲ್ಲ ಇಯಙ್ ಹೊಂದುವ ಶ್ರೀ ಶಬ್ದಕ್ಕೆ ಆಮಿನಲ್ಲಿ ನದೀಸಂಜ್ಞಾ ಬಂದರೆ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಟ್ ಬರುತ್ತದೆ. ನುಟ್ ಬಂದಾಗ ಅಜಾದಿಯಾಗದಿರುವುದರಿಂದ ಇಯಙ್ ಬರುವುದಿಲ್ಲ. ಶ್ರೀಣಾಮ್. ನದೀಸಂಜ್ಞಾ ಬಾರದಿದ್ದರೆ ಇಯಙ್ ಆದೇಶ. ‖ ಸಪ್ತಮಿ ಏಕವಚನದಲ್ಲಿ ಙಿತ್ತಾದುದರಿಂದ ವಿಕಲ್ಪನದೀಸಂಜ್ಞೆ. ನದೀಸಂಜ್ಞೆ ಬಂದಾಗ ಙಿಗೆ "ಙೇರಾಮ್"-ಸೂತ್ರದಿಂದ ಆಮ್ ಆದೇಶ. ಅದಕ್ಕೆ ಆಟ್, ವೃದ್ಧಿ. ಇಯಙಾದೇಶ. ಶ್ರಿಯಾಮ್ (ನುಟ್ ಬಾರದ ಷಷ್ಠೀ ಬಹುವಚನದಂತೇ ರೂಪ.) ಶ್ರಿಯೋಃ ಶ್ರೀಷು.

ಇತಿ ಈಕಾರಾಂತಾಃ ‖

ಉಕಾರಾಂತ ಸ್ತ್ರೀಲಿಂಗ ಧೇನು ಶಬ್ದ. (ಹಸು) ಇದು ಮತಿ ಶಬ್ದದಂತೇ ಪ್ರಕ್ರಿಯೆ ಹೊಂದುತ್ತದೆ. ಙಿತ್ತಿನಲ್ಲಿ ವಿಕಲ್ಪ ನದೀಸಂಜ್ಞಾ ಪ್ರಯುಕ್ತ ಕಾರ್ಯ. ಅದು ಬಾರದಿರುವಾಗ ಘಿಸಂಜ್ಞಾ ಪ್ರಯುಕ್ತ ಕಾರ್ಯ.

ಪ್ರ—ಧೇನುಃ । ಧೇನೂ । ಧೇನವಃ ॥ ಸಂ—ಹೇ ಧೇನೋ । ಹೇ ಧೇನೂ । ಹೇ ಧೇನವಃ ॥ ದ್ವಿ—ಧೇನುಂ । ಧೇನೂ । ಧೇನೂಃ ॥ (ಸ್ತ್ರೀಲಿಂಗವಾದುದರಿಂದ ನತ್ವವಿಲ್ಲ) ತೃ—ಧೇನ್ವಾ । ಧೇನುಭ್ಯಾಮ್ । ಧೇನುಭಿಃ ॥ ಚ—ಧೇನ್ವೈ ಧೇನವೇ । ಧೇನುಭ್ಯಾಮ್ । ಧೇನುಭ್ಯಃ ॥ ಪಂ—ಧೇನ್ವಾಃ ಧೇನೋಃ । ಧೇನುಭ್ಯಾಮ್ । ಧೇನುಭ್ಯಃ ॥ ಷ-ಧೇನ್ವಾಃ ಧೇನೋಃ । ಧೇನ್ವೋಃ । ಧೇನೂನಾಮ್ ॥ ಸ-ಧೇನ್ವಾಮ್ ಧೇನೌ । ಧೇನ್ವೋಃ । ಧೇನುಷು ॥

### ಉಕಾರಾಂತ ಕ್ರೋಷ್ಟು ಶಬ್ದ (ಸ್ತ್ರೀ)

ಇದಕ್ಕೆ ಸರ್ವನಾಮಸ್ಥಾನಾದಿಗಳಲ್ಲಿ ತೃಜ್ವದ್ಭಾವ ಪ್ರಾಪ್ತವಾದರೆ ಸ್ತ್ರೀಲಿಂಗ ದಲ್ಲಿ ಎಲ್ಲಾ ವಿಭಕ್ತಿಗಳಲ್ಲಿಯೂ ತೃಜ್ವದ್ಭಾವ ಹೇಳುತ್ತಾನೆ.

(ಕ್ರೋಷ್ಟು ಶಬ್ದಕ್ಕೆ ತೃಜ್ವದ್ಭಾವ ಹೇಳುವ ಸೂತ್ರ)

### ೨೩೨. ಸ್ತ್ರಿಯಾಂ ಚ ॥ ೭-೧-೯೬ ॥

**ಸ್ತ್ರೀವಾಚೀ ಕ್ರೋಷ್ಟುಶಬ್ದಸ್ತೃಜಂತವದ್ರೂಪಂ ಲಭತೇ ॥**

ಸ್ತ್ರಿಯಾಂ, ಚ, ॥ ದ್ವಿಪದ ಸೂತ್ರ. "ತೃಜ್ವತ್ ಕ್ರೋಷ್ಟುಃ" ಅನುವೃತ್ತ ವಾಗುತ್ತದೆ. ಸೂತ್ರಾರ್ಥ. ಸ್ತ್ರೀವಾಚಕವಾದ ಕ್ರೋಷ್ಟು ಶಬ್ದವು ತೃಜಂತದ ರೂಪವನ್ನು ಹೊಂದುತ್ತದೆ. ರೂಪಾತಿದೇಶಸೂತ್ರ. ಅರ್ಥಾನುಸಾರದಿಂದ ತೃಜಂತ ವಾದ ಕ್ರೋಷ್ಟೃಶಬ್ದದ ರೂಪವನ್ನು ಹೊಂದುತ್ತದೆ. ಸ್ತ್ರೀಲಿಂಗದಲ್ಲಿ ಉಕಾರಾಂತ ಕ್ರೋಷ್ಟುಶಬ್ದವೇ ಇಲ್ಲವೆಂದು ಹೇಳಿದಂತಾಗುತ್ತದೆ. ಕ್ರೋಷ್ಟೃ ಎಂದು ಋಕಾ ರಾಂತವಾದಾಗ ಙೀಪ್ ಪ್ರತ್ಯಯ ಹೇಳುತ್ತಾನೆ.

(ಋಕಾರಾಂತ ನಾಂತಗಳಿಗೆ ಙೀಪ್ ಹೇಳುವ ಸೂತ್ರ)

### ೨೩೩. ಋನ್ನೇಭ್ಯೋ ಙೀಪ್ ॥ ೪-೧-೫ ॥

**ಋದಂತೇಭ್ಯೋ ನಾಂತೇಭ್ಯಶ್ಚ ಸ್ತ್ರಿಯಾಂ ಙೀಪ್ । ಕ್ರೋಷ್ಟ್ರೀ ಗೌರೀವತ್ ॥ ಭ್ರೂಃ ಶ್ರೀವತ್ ॥ ಸ್ವಯಂಭೂಃ ಪುಂವತ್ ॥**

ಋನ್ನೇಭ್ಯಃ, ಙೀಪ್ ॥ ದ್ವಿಪದ ಸೂತ್ರ. ಋತಶ್ಚ ನಾಶ್ಚ ಋನ್ನಾಃ ತೇಭ್ಯಃ ಋನ್ನೇಭ್ಯಃ ॥ (ಋಕಾರ ನಕಾರಗಳು) "ಸ್ತ್ರಿಯಾಂ" ಅಧಿಕಾರ. "ಙ್ಯಾಪ್ ಪ್ರಾತಿಪದಿಕಾತ್" ಸೂತ್ರದಿಂದ "ಪ್ರಾತಿಪಾದಿಕಾತ್" ಅನುವೃತ್ತಿ. ಬಹುವಚ ನಾಂತವಾಗಿ ವಿಪರಿಣಾಮ ಮಾಡಿಕೊಂಡ ಅದಕ್ಕೆ "ಋನ್ನೇಭ್ಯಃ" ಪದವು ವಿಶೇಷಣ. "ಯೇನವಿಧಿಸ್ತದಂತಸ್ಯ" ಪರಿಭಾಷೆಯಿಂದ ತದಂತಲಾಭ. ಸೂತ್ರಾರ್ಥ.

ಋದಂತ, ನ್ನಾಂತ ಪ್ರಾತಿಪದಿಕಗಳಿಗೆ ಸ್ತ್ರೀತ್ವ ತೋರುವಾಗ ಙೀಪ್ ಬರುತ್ತದೆ. ಪ್ರಕೃತ ಋದಂತವಾದುದರಿಂದ ಙೀಪ್ ಬಂದರೆ ಕ್ರೋಷ್ಟೃ+ಙೀಪ್. ಙೀಪಿನಲ್ಲಿ ಪಕಾರ "ಹಲಂತ್ಯಮ್" ಸೂತ್ರದಿಂದ ಙಕಾರ "ಲಶಕ್ವತದ್ಧಿತೇ" ಸೂತ್ರದಿಂದಲೂ ಇತ್ ಸಂಜ್ಞೆ ಹೊಂದಿ ಲೋಪವಾಗುತ್ತದೆ. ಈ ಉಳಿದಾಗ ಯಣ್. ಕ್ರೋಷ್ಟ್ರೀ. ಈಕಾರಾಂತ ಶಬ್ದವಾಯಿತು. ಙ್ಯಂತವಾದುದರಿಂದ ನದೀಸಂಜ್ಞೆಯನ್ನು ಹೊಂದಿ ಗೌರೀ ಶಬ್ದದಂತೇ ರೂಪ ಹೊಂದುತ್ತದೆ. ಕ್ರೋಷ್ಟ್ರೀ-ಕ್ರೋಷ್ಟ್ರ್ಯೌ-ಕ್ರೋಷ್ಟ್ರ್ಯಃ ಇತ್ಯಾದಿ. ಊಕಾರಾಂತ ಭ್ರೂಶಬ್ದ (ಹುಬ್ಬು) ಇದು ಶ್ರೀ ಶಬ್ದದಂತೆ ರೂಪ ಹೊಂದುತ್ತದೆ. "ಅಚಿಶ್ನುಧಾತುಭ್ರುವಾಂ"-(ಸೂ. ೩೦೦) ಸೂತ್ರದಲ್ಲಿ ಭ್ರೂ ಶಬ್ದವನ್ನೂ ಹೇಳಿರುವುದರಿಂದ ಅಜಾದಿಯಲ್ಲಿ ಉವಙಾದೇಶ. ಙಿತ್ತಿನಲ್ಲಿಯೂ ಆಮಿನಲ್ಲಿಯೂ ಉವಙ್ ಹೊಂದುವುದರಿಂದ ವಿಕಲ್ಪ ನದೀಸಂಜ್ಞೆಯನ್ನು ಹೊಂದಿ ಶ್ರೀಶಬ್ದದಂತೆ ಅಲ್ಲಿ ಎರಡೆರಡು ರೂಪಗಳನ್ನು ಹೊಂದುತ್ತದೆ.

ಊಕಾರಾಂತಸ್ತ್ರೀಲಿಂಗ ಸ್ವಯಂಭೂ ಶಬ್ದ. ತಾನಾಗಿ ಆಗುವುದು. ಮೂಲಪ್ರಕೃತಿ. ಇದು ಪುಲ್ಲಿಂಗದಂತೇ ರೂಪ ಹೊಂದುತ್ತದೆ. ಉವರ್ಣಾಂತಧಾತುವಾದರೂ "ನಭೂಸುಧಿಯೋಃ" ಸೂತ್ರದಿಂದ ಯಣ್ ನಿಷೇಧಮಾಡಿರುವುದರಿಂದ ಯಣ್ ಬರುವುದಿಲ್ಲ. ಅಜಾದಿಯಲ್ಲಿ ಉವಙ್. ಸ್ವಯಂಭೂಃ— ಸ್ವಯಂ ಭುವೌ-ಸ್ವಯಂಭುವಃ ॥ ಇತ್ಯಾದಿ (ಪುಲ್ಲಿಂಗ ನೋಡಿ.)

ಅಥ ಋಕಾರಾಂತಾಃ ॥

ಋಕಾರಾಂತ ಸ್ತ್ರೀಲಿಂಗ ಸ್ವಸೃಶಬ್ದ. (ತಂಗಿ) ಋಕಾರಾಂತವಾದುದರಿಂದ ಸ್ತ್ರೀಲಿಂಗದಲ್ಲಿ ಙೀಪ್ ಪ್ರಾಪ್ತವಾದರೆ ನಿಷೇಧ ಹೇಳುತ್ತಾನೆ.

(ಙೀಪ್ ನಿಷೇಧ ಹೇಳುವ ಸೂತ್ರ)

## ೨೩೪. ನ ಷಟ್ ಸ್ವಸ್ರಾದಿಭ್ಯಃ ॥ ೪-೧-೧೦ ॥

ಷಟ್ಸಂಜ್ಞಕೇಭ್ಯಃ ಸ್ವಸ್ರಾದಿಭ್ಯಶ್ಚ ಙೀಪ್ ಟಾಪೌ ನಸ್ತಃ ॥
ಸ್ವಸಾ ತಿಸ್ರಶ್ಚತಸ್ರಶ್ಚ ನನಾಂದಾ ದುಹಿತಾ ತಥಾ। ಯಾತಾ-ಮಾತೇತಿ ಸಪ್ತೈತೇ ಸ್ವಸ್ರಾದಯ ಉದಾಹೃತಾಃ ॥ ಸ್ವಸಾ। ಸ್ವಸಾರೌ। ಸ್ವಸಾರಃ। ಮಾತಾ ಪಿತೃವತ್। ಶಸಿ ಮಾತೄಃ। ದ್ಯೌರ್ಗೋವತ್। ರಾಃ ಪುಂವತ್ ನೌರ್ಗ್ಲೌವತ್ ॥

ನ, ಷಟ್ಸ್ವಸ್ರಾದಿಭ್ಯಃ ॥ ದ್ವಿಪದ ಸೂತ್ರ. "ಋನ್ನೇಭ್ಯೋಙೀಪ್" ಸೂತ್ರದಿಂದ ಙೀಪ್. "ಟಾಬೃಚಿ" ಸೂತ್ರದಿಂದ ಟಾಪ್ ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಷಟ್ ಸಂಜ್ಞೆಯಿರುವ ಶಬ್ದಗಳಿಗೂ ಸ್ವಸೃಮುಂತಾದ ಶಬ್ದಗಳಿಗೂ ಸ್ತ್ರೀತ್ವದಲ್ಲಿ ಙೀಪ್ ಟಾಪ್ ಬರುವುದಿಲ್ಲ. "ಷ್ಣಾಂತಾಷಟ್" ಸೂತ್ರದಿಂದ ಷಾಂತ

"ನಾಂತಗಳಿಗೆ ಷಟ್‌ಸಂಜ್ಞೆ ಹೇಳಿದೆ. ಅಲ್ಲಿ ನಾಂತಗಳಿಗೆ " ಋನ್ನೇಭ್ಯೋ ಙೀಪ್ " ಸೂತ್ರದಿಂದ ಙೀಪ್ ಪ್ರಾಪ್ತವಾದರೆ ಇದರಿಂದ ನಿಷೇಧ. ಸ್ವಸೃ ಮುಂತಾದವುಗಳು ಋಕಾರಾಂತಗಳು. ಅವು ಎಷ್ಟು ಅಂದರೆ ಶ್ಲೋಕದಿಂದ ಗಣನೆ ಮಾಡಿರುತ್ತಾನೆ. ಸ್ವಸೃ-ತಿಸೃ-ಚತಸೃ-ನನಾಂದೃ-ದುಹಿತೃ-ಯಾತೃ-ಮಾತೃ-ಇವುಏಳು ಸ್ವಸ್ರಾದಿಗಳು. ಇವುಗಳಿಗೆ ಙೀಪ್ ಬರುವುದಿಲ್ಲ. " ಅಪ್‌ತೃನ್-" ಸೂತ್ರದಲ್ಲಿ ಸ್ವಸೃ ಶಬ್ದವನ್ನೂ ಸೇರಿಸಿರುವುದರಿಂದ ಧಾತೃ ಶಬ್ದದಂತೇ ರೂಪವಾಗುತ್ತದೆ. ಸ್ವಸಾ-ಸ್ವಸಾರೌ-ಸ್ವಸಾರಃ। (ಧಾತೃಶಬ್ದ ನೋಡಿ) ಮಾತೃ (ತಾಯಿ) ಶಬ್ದವು ಪಿತೃಶಬ್ದದಂತೇ ರೂಪ ಹೊಂದುತ್ತದೆ. " ಅಪ್‌ತೃನ್ "-ಸೂತ್ರದಲ್ಲಿ ಮಾತೃಶಬ್ದ ಹೇಳದಿರುವುದರಿಂದ ಉಪಧಾದೀರ್ಘ ಬರುವುದಿಲ್ಲ. ಮಾತಾ-ಮಾತರೌ-ಮಾತರಃ (ಪಿತೃಶಬ್ದ ನೋಡಿ.) ಶಸಿನಲ್ಲಿ ಮಾತ್ರ ಪೂರ್ವಸವರ್ಣದೀರ್ಘ ಬಂದಾಗ ನತ್ವ ಬರುವುದಿಲ್ಲ. ಪುಲ್ಲಿಂಗದಲ್ಲಿ ಮಾತ್ರ ನತ್ವ. ಮಾತೄಃ ಎಂದಾಗುತ್ತದೆ.

ಓಕಾರಾಂತಸ್ತ್ರೀಲಿಂಗ ದ್ಯೋ ಶಬ್ದ. (ಸ್ವರ್ಗ ಅಥವಾ ಆಕಾಶ) ಇದು ಗೋ ಶಬ್ದದಂತೇ ಆಗುತ್ತದೆ. ಸರ್ವನಾಮಸ್ಥಾನದಲ್ಲಿ ಣಿದ್ವದ್ಭಾವ. ಅಮ್ ಶಸ್‌ಗಳಲ್ಲಿ ಓಕಾರಕ್ಕೆ ಆಕಾರಾದೇಶ. ಉಳಿದ ಅಜಾದಿಗಳಲ್ಲಿ ಅವಾದೇಶ. ದ್ಯೌಃ-ದ್ಯಾವೌ-ದ್ಯಾವಃ ಇತ್ಯಾದಿ (ಗೋ ಶಬ್ದನೋಡಿ). ಐಕಾರಾಂತ ಸ್ತ್ರೀಲಿಂಗ ರೈ ಶಬ್ದ (ಲಕ್ಷ್ಮಿ ಅಥವಾ ಹಣ.) ಇದು ಪುಲ್ಲಿಂಗದಂತೇ ರೂಪ ಹೊಂದುತ್ತದೆ. ಹಲಾದಿಯಲ್ಲಿ ಐಕಾರಕ್ಕೆ ಆಯಾದೇಶ. (ಪುಲ್ಲಿಂಗದ ರೈಶಬ್ದ ನೋಡಿ) ರಾಃ—ರಾಯೌ—ರಾಯಃ ಇತ್ಯಾದಿ॥ ಔಕಾರಾಂತ ನೌ ಶಬ್ದ (ದೋಣಿ) ಇದು ಗ್ಲೌ ಶಬ್ದದಂತೇ ರೂಪ ಹೊಂದುತ್ತದೆ. ಅಜಾದಿಯಲ್ಲಿ ಆವಾದೇಶ. ನೌಃ—ನಾವೌ—ನಾವಃ ಇತ್ಯಾದಿ॥ (ಗ್ಲೌ ಶಬ್ದನೋಡಿ).

ಇತ್ಯಜಂತ ಸ್ತ್ರೀಲಿಂಗಾಃ॥

ಹೀಗೆ ಅಜಂತಸ್ತ್ರೀಲಿಂಗ ಶಬ್ದಗಳು ವಿವೃತವಾಗಿವೆ.

# ಅಥ ಅಜಂತ ನಪುಂಸಕಲಿಂಗಾಃ

ಅಕಾರಾಂತ ನಪುಂಸಕಲಿಂಗ ಜ್ಞಾನ ಶಬ್ದ

ಜ್ಞಾ ಧಾತುವಿಗೆ ಲ್ಯುಟ್ ಪ್ರತ್ಯಯ. ಲ್ಯುಟಿಗೆ ಅನಾದೇಶ. ಜ್ಞಾನವೆಂತಾಗುತ್ತದೆ. ಪ್ರಥಮಾ ಸು ಬಂದಾಗ " ಸ್ವಮೋರ್ನಪುಂಸಕಾತ್ " ಸೂತ್ರದಿಂದ ಅದಕ್ಕೆ ಲೋಪ ಪ್ರಾಪ್ತವಾದರೆ ಅಮ್ ಆದೇಶ ಹೇಳುತ್ತಾನೆ.

(ಸು ಅಮ್ ಪ್ರತ್ಯಯಗಳಿಗೆ ಅಮ್ ಹೇಳುವ ಸೂತ್ರ)

೨೩೫. ಅತೋಽಮ್ ॥ ೭-೧-೨೪ ॥

**ಅತೋಽಂಗಾತ್ ಕ್ಲೀಬಾತ್ ಸ್ವಮೋರಮ್ ಸ್ಯಾತ್ । ಅಮಿ ಪೂರ್ವಃ ॥ ಜ್ಞಾನಮ್ । ಏಙ್ಹ್ರಸ್ವಾದಿತಿ ಹಲ್ಲೋಪಃ । ಹೇ ಜ್ಞಾನ ॥**

ಅತಃ, ಅಮ್ । ದ್ವಿಪದ ಸೂತ್ರ. "ಅಂಗಸ್ಯ" ಅಧಿಕಾರ. ಇಲ್ಲಿ ಪಂಚಮ್ಯಂತವಾಗಿ ವಿಪರಿಣತವಾಗುತ್ತದೆ. ಅತಃ ಎಂಬ ಪಂಚಮ್ಯಂತವು ಅದಕ್ಕೆ ವಿಶೇಷಣ. ಆದುದರಿಂದ ತದಂತವಿಧಿ. "ಸ್ವಮೋರ್ನಪುಂಸಕಾತ್" ಸೂತ್ರವೇ ಅನುವೃತ್ತವಾಗುತ್ತದೆ. ನಪುಂಸಕಾತ್ ಶಬ್ದಕ್ಕೆ ಅಂಗದಲ್ಲಿ ಅನ್ವಯ. **ಸೂತ್ರಾರ್ಥ.** ಹ್ರಸ್ವಾಕಾರಾಂತವಾದ ನಪುಂಸಕವಾದ ಅಂಗದ ಪರದಲ್ಲಿರುವ ಸು, ಅಮ್ ಎರಡು ಪ್ರತ್ಯಯಗಳಿಗೆ ಅಮ್ ಆದೇಶ ಬರುತ್ತದೆ. ಜ್ಞಾನವೆಂಬುದು ಹ್ರಸ್ವಾಕಾರಾಂತ ನಪುಂಸಕ ಅಂಗ. ಇದರ ಪರದ ಸುವಿಗೆ ಅಮ್ ಬಂದರೆ ಜ್ಞಾನ+ಅಮ್ ಎಂದಾಗುತ್ತದೆ. ಆಗ "ಅಮಿಪೂರ್ವಃ" ಸೂತ್ರದಿಂದ ಪೂರ್ವರೂಪ. ಜ್ಞಾನಮ್. ಸಂಬುದ್ಧಿ ಸುವಿಗೂ ನಿಷೇಧವಿಲ್ಲವಾದುದರಿಂದ ಅಮ್ ಆದೇಶ ಬಂದು ಪೂರ್ವರೂಪ ಬಂದಾಗ ಹೇ ಜ್ಞಾನಮ್ ಎಂದಾಗುತ್ತದೆ. ಪೂರ್ವರೂಪ ಬಂದಮೇಲೆ ಹ್ರಸ್ವದ ಪರದಲ್ಲಿ ಸಂಬುದ್ಧಿಯ ಹಲ್ ಮ್ ಬಂದುದರಿಂದ "ಏಙ್ಹ್ರಸ್ವಾತ್ ಸಂಬುದ್ಧೇಃ" ಸೂತ್ರದಿಂದ ಮಕಾರಕ್ಕೆ ಲೋಪ. ಹೇ ಜ್ಞಾನ, ದ್ವಿತೀಯಾ ಏಕವಚನದ ಅಮಿಗೂ ಅಮ್ ಆದೇಶ. ಪೂರ್ವರೂಪ. ಜ್ಞಾನಮ್. ಅಮಿಗೆ ಪುನಃ ಅಮ್ ಆದೇಶ ಏಕೆ ಹೇಳಬೇಕು? ಅಂದರೆ ಸಾಮಾನ್ಯವಾಗಿ ನಪುಂಸಕದಲ್ಲಿ "ಸ್ವಮೋರ್ನಪುಂಸಕಾತ್" ಸೂತ್ರದಿಂದ ಸು ಮತ್ತು ಅಮ್‌ಗಳಿಗೆ ಲುಕ್ ಹೇಳುತ್ತಾನೆ. ಅದಕ್ಕೆ ಬಾಧಕವಾಗಿ ಅಮ್ ಪುನಃ ವಿಧಿಸಿರುತ್ತಾನೆ. ನಪುಂಸಕದಲ್ಲಿ ಪ್ರಥಮಾ ದ್ವಿತೀಯಾ ವಿಭಕ್ತಿಗಳಿಗೆ ಸೇರಿ ಒಂದೇ ಕಾರ್ಯ ಹೇಳಿದುದರಿಂದ ಪ್ರಥಮಾ ದ್ವಿತೀಯಾದಲ್ಲಿ ಒಂದೇ ರೂಪವಾಗುತ್ತದೆ. ಜ್ಞಾನ ಶಬ್ದದಮೇಲೆ ದ್ವಿವಚನದ ಔ ಇರುವಾಗ ವಿಭಕ್ತಿಗೆ ಆದೇಶ ಹೇಳುತ್ತಾನೆ.

(ಔಙಿಗೆ ಶೀ ಆದೇಶ ಹೇಳುವ ಸೂತ್ರ)

## ೨೩೭. ನಪುಂಸಕಾಚ್ಚ ॥ ೭-೧-೧೯ ॥

**ಕ್ಲೀಬಾದೌಙಃ ಶೀ ಸ್ಯಾತ್ । ಭಸಂಜ್ಞಾಯಾಮ್ ॥**

ನಪುಂಸಕಾತ್, ಚ ॥ ದ್ವಿಪದ ಸೂತ್ರ. "ಔಙ ಆಪಃ" ಸೂತ್ರದಿಂದ "ಔಙಃ" "ಜಸಃ ಶೀ" ಸೂತ್ರದಿಂದ "ಶೀ" ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ನಪುಂಸಕ ಶಬ್ದದ (ಲಿಂಗದ) ಪರದಲ್ಲಿರುವ ಔಙಿಗೆ ಶೀ ಆದೇಶ ಬರುತ್ತದೆ. ಔಙ್, ಔಕಾರಾತ್ಮಕ ವಿಭಕ್ತಿಗೆ ಸಂಜ್ಞೆಯೆಂದು ಹಿಂದೆ ಹೇಳಿದೆ. ಆಗ ಪ್ರಥಮಾ ದ್ವಿತೀಯಾ ದ್ವಿವಚನಗಳಿಗೆ ಶೀ ಆದೇಶವೆಂದಾಗುತ್ತದೆ. ನಪುಂಸಕದಲ್ಲಿ ಸಾಮಾನ್ಯವಾಗಿ ಈ

ಆದೇಶ ಬರುತ್ತದೆ. ಶೀಯಲ್ಲಿ "ಲಶಕ್ವತದ್ಧಿತೇ" ಸೂತ್ರದಿಂದ ಶಕಾರ ಇತ್ ಸಂಜ್ಞೆಯನ್ನು ಹೊಂದಿ ಲೋಪವಾಗುತ್ತದೆ. ಜ್ಞಾನ+ಈ ಎಂದಿರುವಾಗ ಜ್ಞಾನ ವೆಂಬುದಕ್ಕೆ ಅಜಾದಿ ಪ್ರತ್ಯಯ ಪರವಾದುದರಿಂದ "ಯಚಿಭಮ್" ಸೂತ್ರದಿಂದ ಭ ಸಂಜ್ಞಾ ಬರುತ್ತದೆ. ಸ್ವಾದಿ ಪಂಚವಚನದಲ್ಲಿ ಸೇರಿದರೂ ನಪುಂಸಕದಲ್ಲಿ ಸರ್ವ ನಾಮಸ್ಥಾನ ಸಂಜ್ಞೆಯಿಲ್ಲ. ಈಗ ಭ ಸಂಜ್ಞಾ ಇರುವಾಗ ಕಾರ್ಯ ಹೇಳುತ್ತಾನೆ.

(ಭ ಸಂಜ್ಞೆಯ ಇಕಾರ ಉಕಾರಗಳಿಗೆ ಲೋಪ ಹೇಳುವ ಸೂತ್ರ)

**೨೩೭. ಯಸ್ಯೇತಿ ಚ ॥ ೬-೪-೧೪೮ ॥**

**ಈಕಾರೇ ತದ್ಧಿತೇ ಚ ಪರೇ ಭಸ್ಯೇವರ್ಣಾವರ್ಣಯೋರ್ಲೋಪಃ ॥**
**ಇತ್ಯಲ್ಲೋಪೇ ಪ್ರಾಪ್ತೇ ॥**

**ವಾ ॥ (ಔಙಃ ಶ್ಯಾಂ ಪ್ರತಿಷೇಧೋ ವಾಚ್ಯಃ) । ಜ್ಞಾನೇ ।**

ಯಸ್ಯ, ಈತಿ, ಚ । ತ್ರಿಪದ ಸೂತ್ರ. ಇಶ್ಚ ಅಶ್ಚ ತಯೋಃ ಸಮಾಹಾರಃ ಯಂ. ತಸ್ಯ ಯಸ್ಯ. ಇಕಾರ ಅಕಾರಗಳಿಗೆ ಎಂದರ್ಥ. "ಭಸ್ಯ" ಅಧಿಕಾರ. "ನಸ್ತದ್ಧಿತೇ" ಸೂತ್ರದಿಂದ "ತದ್ಧಿತೇ" ಅನುವೃತ್ತವಾಗುತ್ತದೆ. ಈತಿ ಸಪ್ತಮೀ. (ದೀರ್ಘ ಈಕಾರ) ಸೂತ್ರಾರ್ಥ. ಭ ಸಂಜ್ಞೆಯುಳ್ಳ ಅಂಗದ ಇಕಾರ ಅಕಾರಗಳಿಗೆ ಈಕಾರವೂ ತದ್ಧಿತವೂ ಪರವಾದಾಗ ಲೋಪ ಬರುತ್ತದೆ. ಯಕಾರಾದಿ, ಅಜಾದಿ ಪ್ರತ್ಯಯ ಪರವಾದಾಗ ಪೂರ್ವಕ್ಕೆ ಭ ಸಂಜ್ಞೆಯೆಂದು ಹಿಂದೆ ಹೇಳಿದೆ. ಈಗ ಅಜಾದಿಪ್ರತ್ಯಯ ಪರವಾದ್ದುದರಿಂದ ಭ ಸಂಜ್ಞೆಯಿರುವ ಅಂಗ ಜ್ಞಾನ ಶಬ್ದ. ಇದಕ್ಕೆ ಈಕಾರ ಪರವಾದುದರಿಂದ ಜ್ಞಾನ ಎಂಬಲ್ಲಿ ನಕಾರದ ಮೇಲಿರುವ ಅಕಾರಕ್ಕೆ ಲೋಪ ಪ್ರಾಪ್ತವಾದರೆ ವಾರ್ತಿಕದಿಂದ ನಿಷೇಧ ಹೇಳುತ್ತಾನೆ.

ವಾ ॥ ಚತುಷ್ಪದ ವಾರ್ತಿಕ. ಔಙಿಗೆ ಶೀ ಆದೇಶ ಬಂದು ಅದು ಪರವಾದಾಗ ಭ ಸಂಜ್ಞೆಯ ಇಕಾರ ಅಕಾರ ಲೋಪಕ್ಕೆ ನಿಷೇಧ ಹೇಳಬೇಕು ಎಂದರ್ಥ. ಪ್ರಕೃತ ಈಕಾರ ಔಙಿಗೆ ಬಂದ ಶೀ ಆದೇಶವಾದುದರಿಂದ ಅಕಾರ ಲೋಪಬರುವುದಿಲ್ಲ. ಜ್ಞಾನ+ಈ ಎಂದಿರುವಾಗ "ಆದ್ಗುಣಃ" ಸೂತ್ರದಿಂದ ಗುಣ. ಜ್ಞಾನೇ. ದ್ವಿತೀಯಾ ದ್ವಿವಚನದಲ್ಲಿಯೂ ಇದೇ ರೂಪ. ಪ್ರಥಮಾ ಬಹುವಚನದಲ್ಲಿ ಜಸ್ ಬಂದಾಗ ಜ್ಞಾನ+ಜಸ್ ಎಂದಿರುವಾಗ ವಿಭಕ್ತಿಗೆ ಆದೇಶ ಹೇಳುತ್ತಾನೆ.

(ಜಸ್ ಶಸ್‌ಗಳಿಗೆ ಶಿ ಆದೇಶ ಹೇಳುವ ಸೂತ್ರ)

**೨೩೮. ಜಶ್ಶಸೋಃ ಶಿಃ ॥ ೭-೧-೨೦ ॥**

**ಕ್ಲೀಬಾದನಯೋಃ ಶಿಃ ಸ್ಯಾತ್ ॥**

ದ್ವಿಪದಸೂತ್ರ. "ಸ್ವಮೋರ್ನಪುಂಸಕಾತ್" ಸೂತ್ರದಿಂದ "ನಪುಂಸಕಾತ್

ಅನುವೃತ್ತಿ. ಜಸ್‌ಚ ಶಸ್‌ಚ ಜಶ್ಶಸೌ. ತಯೋಃ ಜಶ್ಶಸೋಃ ಸೂತ್ರಾರ್ಥ-ನಪುಂಸಕದ ಪರದಲ್ಲಿರುವ ಜಸ್ ಶಸ್ ವಿಭಕ್ತಿಗಳಿಗೆ ಶಿ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. ಆದೇಶವಾಗಿ ಬಂದಮೇಲೆ ಸ್ಥಾನಿವದ್ಭಾವದಿಂದ ಪ್ರತ್ಯಯತ್ವಬಂದು "ಲಶಕ್ವತದ್ಧಿತೇ" ಸೂತ್ರದಿಂದ ಶಕಾರಕ್ಕೆ ಇತ್‌ಸಂಜ್ಞಾಬಂದು ಲೋಪ. ಜ್ಞಾನ+ಇ ಎಂದಾಗುತ್ತದೆ. ಕಾರ್ಯವಿಶೇಷಕ್ಕೋಸ್ಕರ ಶಿಗೆ ಸರ್ವನಾಮ ಸ್ಥಾನ ಸಂಜ್ಞೆಯನ್ನು ಹೇಳುತ್ತಾನೆ.

(ಸರ್ವನಾಮಸ್ಥಾನಸಂಜ್ಞೆ ಹೇಳುವ ಸೂತ್ರ)

## ೨೩೯. ಶಿ ಸರ್ವನಾಮಸ್ಥಾನಮ್ ॥ ೧-೧-೪೨ ॥

**ಶಿ ಇತ್ಯೇತದುಕ್ತಸಂಜ್ಞಂ ಸ್ಯಾತ್ ।**

ದ್ವಿಪದಸೂತ್ರ. ಇದಕ್ಕೆ ಅನುವೃತ್ತಿ ಇಲ್ಲ. ಸೂತ್ರಾರ್ಥ. ಶಿ ಎಂಬುದು "ಸರ್ವನಾಮಸ್ಥಾನ" ಎಂಬ ಸಂಜ್ಞೆಯನ್ನು ಹೊಂದುತ್ತದೆ. ನಪುಂಸಕದಲ್ಲಿ ಈ ಸಂಜ್ಞೆಯಿಲ್ಲವಾದುದರಿಂದ ಇಲ್ಲಿ ಪುನಃ ಹೇಳಿರುತ್ತಾನೆ. ಶಿಗೆ ಸರ್ವನಾಮಸ್ಥಾನ ಸಂಜ್ಞೆಯಿಂದ ಪ್ರಕೃತ ಉಪಯೋಗವನ್ನು ಹೇಳುತ್ತಾನೆ.

(ನುಮಾಗಮವಿಧಾಯಕ ಸೂತ್ರ)

## ೨೪೦. ನಪುಂಸಕಸ್ಯ ಝಲಚಃ ॥ ೭-೧-೭೨ ॥

**ಝಲಂತಸ್ಯ ಅಜಂತಸ್ಯ ಚ ಕ್ಲೀಬಸ್ಯ ನುಮ್ ಸ್ಯಾತ್ ಸರ್ವ-ನಾಮಸ್ಥಾನೇ ॥**

ದ್ವಿಪದ ಸೂತ್ರ. ಝಲ್ ಚ ಅಚ್ ಚ ತಯೋಃ ಸಮಾಹಾರಃ ಝಲಚ್‌ತಸ್ಯ ಝಲಚಃ. ಅಂಗಸ್ಯ ಅಧಿಕಾರ. ಝಲಚಃ ಅದಕ್ಕೆ ವಿಶೇಷಣ. ತದಂತಲಾಭ. ಝಲಂತ ಅಜಂತವಾದ ಅಂಗಕ್ಕೆ ಎಂದರ್ಥವಾಗುತ್ತದೆ. "ಉಗಿದಚಾಂ ಸರ್ವನಾಮ ಸ್ಥಾನೇಽಧಾತೋಃ" ಸೂತ್ರದಿಂದ "ಸರ್ವನಾಮಸ್ಥಾನೇ" "ಇದಿತೋನುಮ್ ಧಾತೋಃ" ಸೂತ್ರದಿಂದ "ನುಮ್" ಅನುವೃತ್ತವಾಗುತ್ತದೆ. ಸೂತ್ರಾರ್ಥ. ಝಲಂತವಾದ ಅಜಂತವಾದ ನಪುಂಸಕಾಂಗಕ್ಕೆ ಸರ್ವನಾಮಸ್ಥಾನಪರವಾದಾಗ ನುಮಾಗಮ ಬರುತ್ತದೆ. ಪ್ರಕೃತ ಅಜಂತವಾದ ನಪುಂಸಕಾಂಗವಾಗಿ ಅದಕ್ಕೆ ಶಿರೂಪ ಸರ್ವನಾಮಸ್ಥಾನ ಪರವಾದುದರಿಂದ ನುಮ್ ಬರುತ್ತದೆ. ಇದು ಬರುವುದಾದರೆ ಎಲ್ಲಿಗೆ ಬರಬೇಕು? ಆದೇಶವೇ ಆಗಮವೇ ಅಂದರೆ ಆಗಮವೆಂದು ಮುಂದಿನ ಸೂತ್ರದಿಂದ ತೋರಿಸುತ್ತಾನೆ. ನುಮಿನಲ್ಲಿ ಮಕಾರವು "ಹಲಂತ್ಯಮ್" ಸೂತ್ರದಿಂದ ಇತ್ತಾಗುತ್ತದೆ. ಉಕಾರ ಉಚ್ಚಾರಣಾರ್ಥವಾಗಿದೆ. ನ್ ಉಳಿಯುವುದು. ಇದು ಎಲ್ಲಿಗೆ ಬರುವುದೆಂಬುದನ್ನು ತಿಳಿಸುತ್ತಾನೆ.

(ಮಿತ್ತಾದುದು ಎಲ್ಲಿಗೆ ಬರುವುದೆಂದು ತಿಳಿಸುವ ಸೂತ್ರ)

## ೨೪೧. ಮಿದಚೋಽನ್ತ್ಯಾತ್ಪರಃ ॥ ೧-೧-೪೭ ॥

**ಅಚಾಂ ಮಧ್ಯೇ ಯೋಽನ್ತ್ಯಸ್ತಸ್ಮಾತ್ಪರಸ್ತಸ್ಯೈವಾಂತಾವಯವೋ ಮಿತ್ ಸ್ಯಾತ್ ॥ ಉಪಧಾದೀರ್ಘಃ । ಜ್ಞಾನಾನಿ । ಪುನಸ್ತದ್ವತ್। ಶೇಷಂ ಪುಂವತ್ । ಏವಂ ಧನವನಫಲಾದಯಃ ॥**

ಮಿತ್, ಅಚಃ, ಅಂತ್ಯಾತ್. ಪರಃ । ನಾಲ್ಕುಪದಗಳುಳ್ಳ ಸೂತ್ರ. ಮಕಾರಃ ಇತ್ ಯಸ್ಯ ಸಃ ಮಿತ್. ಮಕಾರವೇ ಇತ್ ಸಂಜ್ಞೆಯಾಗಿರುವುದು. ಅಚಃ ಎಂಬಲ್ಲಿ ನಿರ್ಧಾರಣಷಷ್ಠೀ. ಅಚ್‌ಗಳ ಮಧ್ಯೇ ಎಂದರ್ಥ. ಆಗ ಏಕವಚನ ಆರ್ಷವೆನ್ನ ಬೇಕು. ಅಚಾಂ ಎಂದಿದ್ದರೆ ಸಾಧುವಾಗುತ್ತಿತ್ತು. "ಆದ್ಯಂತೌಟಕಿತೌ" ಸೂತ್ರ ದಿಂದ ಅಂತ ಪದಮಾತ್ರ ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಅಚ್‌ಗಳ ಮಧ್ಯ ದಲ್ಲಿ ಯಾವುದು ಅಂತ್ಯವೋ ಅದರ ಪರವಾಗಿ ಅದರ ಅಂತ್ಯಾವಯವವಾಗಿ ಮಿತ್ತಾ ದುದು ಬರುತ್ತದೆ. ಒಂದು ಶಬ್ದದಲ್ಲಿ ಅನೇಕ ಅಚ್ ಇದ್ದರೆ ಅದರಲ್ಲಿ ಕೊನೆಯ ಅಚಿನ ಅಂತಾವಯವವಾಗಿ ಮಿತ್ ಬರುತ್ತದೆ. ಪ್ರಕೃತ ಜ್ಞಾನವೆಂಬಲ್ಲಿ ಎರಡು ಅಚ್ ಇವೆ. ಅದರಲ್ಲಿ ಕೊನೆಯ ಅಚ್ ನಕಾರದಮೇಲಿರುವ ಅಕಾರ. ಅದರ ಪರಕ್ಕೆ ಅಂತಾವಯವವಾಗಿ ನುಮ್ ಬಂದರೆ ಜ್ಞಾನ+ನ್+ಇ ಎಂದಾಗುತ್ತದೆ. ನಾಂತ ವಾಗಿ ಅದಕ್ಕೆ ಸರ್ವನಾಮಸ್ಥಾನಪರವಾದುದರಿಂದ "ಸರ್ವನಾಮಸ್ಥಾನೇ ಚಾಸಂ ಬುದ್ಧೌ" (ಸೂ. ೧೭೭) ಸೂತ್ರದಿಂದ ಉಪಧಾದೀರ್ಘ. ಜ್ಞಾನಾನಿ, ಪುನಸ್ತದ್ವತ್. ದ್ವಿತೀಯಾ ಶಸ್ಸಿಗೂ ಶಿ ಆದೇಶ ಹೇಳಿದುದರಿಂದ ಅಲ್ಲಿಯೂ ಇದೇ ರೂಪವಾಗುತ್ತದೆ. ಇನ್ನು ನಪುಂಸಕದಲ್ಲಿ ಯಾವಾಗಲೂ ಪ್ರಥಮಾದ್ವಿತೀಯಾಗಳಲ್ಲಿ ಒಂದೇ ರೂಪ ವೆಂದು ತಿಳಿಯಬೇಕು. ಶೇಷಂ ಪುಂವತ್. ತೃತೀಯಾದಿಂದ ನಪುಂಸಕದಲ್ಲಿ ಇತರ ಕಾರ್ಯವಿಲ್ಲದುದರಿಂದ ಪುಲ್ಲಿಂಗದಂತೇ ರೂಪವಾಗುತ್ತದೆ. ಜ್ಞಾನೇನ-ಜ್ಞಾನಾ ಭ್ಯಾಮ್-ಜ್ಞಾನೈಃ ಇತ್ಯಾದಿ ರಾಮಶಬ್ದದಂತೇ ತಿಳಿಯಬೇಕು. ಹೀಗೆಯೇ ಧನ, ವನ (ಕಾಡು) ಫಲ (ಹಣ್ಣು) ಮುಂತಾದವುಗಳನ್ನು ತಿಳಿಯಬೇಕು.

---

ಅಕಾರಾಂತ ಕತರ ಶಬ್ದ (ಯಾವುದು)

ಕತರ+ಸ್ ಎಂದಿರುವಾಗ ಸುವಿಗೆ "ಅತೋಽಮ್" ಸೂತ್ರದಿಂದ ಅಮಾ ದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಅದ್‌ಡ್ ಆದೇಶ ಹೇಳುತ್ತಾನೆ.

(ಅದ್‌ಡಾದೇಶ ಹೇಳುವ ಸೂತ್ರ)

## ೨೪೨. ಅದ್ಡ್ಡತರಾದಿಭ್ಯಃ ಪಂಚಭ್ಯಃ ॥ ೭-೧-೨೫ ॥

**ಏಭ್ಯಃ ಕ್ಲೀಬೇಭ್ಯಃ ಸ್ವಮೋರದ್‌ಡಾದೇಶಃ ಸ್ಯಾತ್ ॥**

ಅದ್‌ಡ್, ಡತರಾಧಿಭ್ಯಃ, ಪಂಚಭ್ಯಃ ॥ ತ್ರಿಪದಸೂತ್ರ. "ಸ್ವಮೋರ್ನಪುಂಸಕಾತ್" ಸೂತ್ರವು ಅನುವೃತ್ತವಾಗುತ್ತದೆ. ನಪುಂಸಕಾತ್ ಇಲ್ಲಿ ಬಹುವಚನಾಂತವಾಗಿ ವಿಪರಿಣತವಾಗುತ್ತದೆ. ಸೂತ್ರಾರ್ಥ. ಡತರಾದಿ ಐದು ನಪುಂಸಕಶಬ್ದಗಳ ಪರದಲ್ಲಿರುವ ಸು, ಅಮ್‌ಗಳಿಗೆ ಅದ್‌ಡ್ ಆದೇಶ ಬರುತ್ತದೆ. ಡತರ, ಡತಮ, ಅನ್ಯ, ಅನ್ಯತರ, ಇತರ ಇವು ಡತರಾದಿಗಳು. ಕತರವೆಂಬುದು ಡತರಾಂತಶಬ್ದ. ಇವರಲ್ಲಿ ಮೊದಲಿನ ಎರಡು ಪ್ರತ್ಯಯಗಳಾದುದರಿಂದ ತದಂತಗ್ರಹಣ. ಅದ್‌ಡ್‌ನಲ್ಲಿ "ಹಲಂತ್ಯಮ್" ಸೂತ್ರದಿಂದ ಡಕಾರ ಇತ್ತಾಗುತ್ತದೆ. ಕತರ+ಅದ್ ಎಂದಿರುವಾಗ ಸವರ್ಣದೀರ್ಘ ಪ್ರಾಪ್ತವಾದರೆ ಅಪವಾದವಾಗಿ ಲೋಪಹೇಳುತ್ತಾನೆ.

(ಟಿಗೆ ಲೋಪಹೇಳುವ ಸೂತ್ರ)

## ೨೪೩. ಟೇಃ ॥ ೬-೪-೧೪೩ ॥

**ಡಿತಿ ಭಸ್ಯ ಟೇರ್ಲೋಪಃ ॥ ಕತರತ್ ಕತರದ್ । ಕತರೇ ಕತರಾಣಿ । ಹೇ ಕತರತ್ । ಶೇಷಂ ಪುಂವತ್ ॥ ಏವಂ ಕತಮತ್ । ಇತರತ್ । ಅನ್ಯತ್ । ಅನ್ಯತರತ್ । ಅನ್ಯತಮಸ್ಯ ತ್ವನ್ಯತಮಮಿತ್ಯೇವ ।**

ಏಕಪದಸೂತ್ರ. ಭಸ್ಯ ಅಧಿಕಾರ. ("ಯಾದಿ ಅಜಾದಿ ಪರವಾದಾಗ ಭಸಂಜ್ಞೆ) "ತಿವಿಂಶತೇರ್ಡಿತಿ" ಸೂತ್ರದಿಂದ "ಡಿತಿ" "ಅಲ್ಲೋಪೋಽನಃ" ಸೂತ್ರದಿಂದ "ಲೋಪಃ" ಅನುವೃತ್ತಿ. ಸೂತ್ರಾರ್ಥ. ಡಕಾರ ಇತ್ತಾದ ಪ್ರತ್ಯಯಪರವಾದಾಗ ಭಸಂಜ್ಞೆಯಿರುವ ಅಂಗದ ಟಿಗೆ ಲೋಪ. ಪ್ರಕೃತ ಅದ್‌ಡ್ ಡಿತ್ತಾಗಿದೆ. ಅಜಾದಿ ಪ್ರತ್ಯಯಪರವಾದುದರಿಂದ ಭಸಂಜ್ಞಾ ಇದೆ. ಕತರ ಎಂಬಲ್ಲಿ ಟಿ ರೇಫದಮೇಲಿರುವ ಅಕಾರ. ಅದಕ್ಕೆ ಲೋಪಬಂದರೆ ಕತರ್+ಅದ್=ಕತರದ್. ಅವಸಾನವಿರುವುದರಿಂದ "ವಾವಸಾನೇ" ಸೂತ್ರದಿಂದ ದಕಾರಕ್ಕೆ ಚರ್ತ್ವ ಬಂದರೆ ಕತರತ್. ವಿಕಲ್ಪವಾದುದರಿಂದ ಕತರದ್. ದ್ವಿವಚನದಿಂದ ಜ್ಞಾನಶಬ್ದದಂತೇ ರೂಪ. ಔಙಿಗೆ ಶಿ ಆದೇಶ. ಗುಣ. ಕತರೇ. ಜಸಿಗೆ ಶಿ ಆದೇಶ. ನುಮಾಗಮ. ದೀರ್ಘ ಕತರಾನಿ. "ಅಟ್‌ಕುಪ್ವಾಙ್"-ಸೂತ್ರದಿಂದ ನಕಾರಕ್ಕೆ ಣತ್ವ. ಕತರಾಣಿ. ಸಂಬುದ್ಧಿಯಲ್ಲಿಯೂ ಸುವಿಗೆ ಅದ್‌ಡ್ ಆದೇಶ ಟಿಲೋಪ. ಹೇ ಕತರತ್. ಇಲ್ಲಿ ಸಂಬುದ್ಧಿಯ ಹಲ್ ಇದ್ದರೂ ಲೋಪವಿಲ್ಲ. ಹ್ರಸ್ವದಪರದಲ್ಲಿದ್ದರೂ ಹ್ರಸ್ವಾಂತ ಅಂಗವಲ್ಲ ಲೋಪವಾದಾಗ ಕತರ್ ಮಾತ್ರ ಅಂಗ. ಉಳಿದದ್ದು ಹಿಂದಿನಂತೇ ಆಗುತ್ತದೆ. ತೃತೀಯಾದಿಯಲ್ಲಿ ಪುಲ್ಲಿಂಗದಂತೇ ರೂಪವಾಗುತ್ತದೆ. (ಸರ್ವಶಬ್ದನೋಡಿ) ಕತಮವೆಂಬುದು ಡತಮಪ್ರತ್ಯಯಾಂತವಾದ ಶಬ್ದ. ಇದರ ಪರದ ಸುವಿಗೂ ಅದ್‌ಡ್ ಆದೇಶ ಬಂದರೆ, ಕತಮತ್ ಕತಮದ್ ಎಂದು ಹಿಂದಿನಂತೇ ಆಗುತ್ತದೆ. ಹೀಗೆಯೇ ಇನ್ನುಳಿದ ಇತರ, ಅನ್ಯ, ಅನ್ಯತರ ಮೂರಕ್ಕೂ ಸು ಅಮ್‌ಗಳಲ್ಲಿ ಇತರತ್, ಅನ್ಯತ್, ಅನ್ಯತರತ್ ರೂಪಗಳಾಗುತ್ತವೆ. ಅನ್ಯತಮಶಬ್ದಕ್ಕಾದರೋ ಅನ್ಯತಮಮ್

ಎಂದೇ ರೂಪ. ಇದು ಡತಮ ಪ್ರತ್ಯಯಾಂತದಂತೆ ತೋರಿದರೂ ಡತಮಾಂತವಲ್ಲ. ಇದು ಅವ್ಯುತ್ಪನ್ನಪ್ರಾತಿಪದಿಕ. (ಪ್ರಕೃತಿಪ್ರತ್ಯಯ ವಿವೇಚನೆ ಇಲ್ಲ.) ಆದುದರಿಂದ ನಪುಂಸಕದಲ್ಲಿ ಜ್ಞಾನಶಬ್ದದಂತೇರೂಪ. ಸುವಿಗೆ ಅಮಾದೇಶ. ಏಕತರ ಶಬ್ದ ಡತರ ಪ್ರತ್ಯಯಾಂತವಾದುದರಿಂದ ಅದ್‌ಡ್‌ಆದೇಶವನ್ನು ಹೊಂದಬೇಕು. ಆದರೆ ವಾರ್ತಿಕಕಾರರು ಇದಕ್ಕೆ ನಿಷೇಧ ಹೇಳುತ್ತಾರೆ.

ವಾ|| (ಏಕತರಾತ್ಪ್ರತಿಷೇಧೋ ವಕ್ತವ್ಯಃ ||)

ಏಕತರಮ್ ।

ಏಕತರಾತ್ ಪ್ರತಿಷೇಧಃ, ವಕ್ತವ್ಯಃ || ಏಕತರ ಶಬ್ದದ ಪರದಲ್ಲಿರುವ ಸು ಅಮ್‌ಗಳಿಗೆ ಅದ್‌ಡ್ ಆದೇಶ ನಿಷೇಧ ಹೇಳಬೇಕು. ಅದ್‌ಡ್ ಆದೇಶ ಬಾರದಿದ್ದರೆ ಸಾಮಾನ್ಯ ಪ್ರಾಪ್ತವಾದ ಅಮಾದೇಶವೇ ಬರುತ್ತದೆ. ಏಕತರಮ್. ಜ್ಞಾನ ಶಬ್ದದಂತೇ ರೂಪ ಹೊಂದುತ್ತದೆ. ಶ್ರಿಯಂ ಪಾತಿ ಶ್ರೀಪಾ. ಲಕ್ಷ್ಮಿಯನ್ನು ಕಾಪಾಡಿಕೊಂಡು ಬಂದ ಕುಲ. ಆಕಾರಾಂತವಾಗಿದ್ದರೆ ನಪುಂಸಕದಲ್ಲಿ ಹ್ರಸ್ವ ಹೇಳುತ್ತಾನೆ.

(ಪ್ರಾತಿಪದಿಕಕ್ಕೆ ಹ್ರಸ್ವ ಹೇಳುವ ಸೂತ್ರ)

**೨೪೪. ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ ||೧-೨-೪೭||**

**ಕ್ಲೀಬೇ ಪ್ರಾತಿಪದಿಕಸ್ಯಾಜಂತಸ್ಯ ಹ್ರಸ್ವಃ ಸ್ಯಾತ್ || ಶ್ರೀಪಂ ಜ್ಞಾನವತ್ ||**

ಹ್ರಸ್ವಃ, ನಪುಂಸಕೇ, ಪ್ರಾತಿಪದಿಕಸ್ಯ || ತ್ರಿಪದ ಸೂತ್ರ. "ಅಚಶ್ಚ" ಎಂಬ ಪರಿಭಾಷೆಯಲ್ಲಿ ಎಲ್ಲಿಯಾದರೂ ಹ್ರಸ್ವದೀರ್ಘ ಪ್ಲುತಗಳು ಸ್ಥಾನಿ ಹೇಳದೆ ವಿಧಿಸಲ್ಪಟ್ಟರೆ ಅಲ್ಲಿ "ಅಚಃ" ಎಂಬ ಷಷ್ಠ್ಯಂತ ಪದವು ಉಪಸ್ಥಿತವಾಗುತ್ತದೆ ಎಂದು ಹೇಳಿದುದರಿಂದ ಇಲ್ಲಿ ಹ್ರಸ್ವಃ ಎಂದು ವಿಧಾನ ಮಾಡಿರುವುದರಿಂದ "ಅಚಃ" ಬಂದರೆ ಅದು ಪ್ರಾತಿಪದಿಕಕ್ಕೆ ವಿಶೇಷಣ. ತದಂತಲಾಭ. **ಸೂತ್ರಾರ್ಥ.** ನಪುಂಸಕದಲ್ಲಿ ಅಜಂತವಾದ ಪ್ರಾತಿಪದಿಕಕ್ಕೆ ಹ್ರಸ್ವ ಬರುತ್ತದೆ. ಪ್ರಕೃತ ಶ್ರೀಪಾ ಪ್ರಾತಿಪದಿಕಕ್ಕೆ ಹ್ರಸ್ವ ಬಂದರೆ ಶ್ರೀಪವೆಂದಾಗುತ್ತದೆ. ಹ್ರಸ್ವಾಕಾರಾಂತವಾದಮೇಲೆ ಅದು ಜ್ಞಾನ ಶಬ್ದದಂತೇ ರೂಪ ಹೊಂದುತ್ತದೆ. ಶ್ರೀಪಂ-ಶ್ರೀಪೇ-ಶ್ರೀಪಾಣಿ. ಇತ್ಯಾದಿ. ಈ ಸೂತ್ರವು ಎಲ್ಲಾ ದೀರ್ಘಗಳಿಗೂ ಹ್ರಸ್ವ ಹೇಳುವುದರಿಂದ ನಪುಂಸಕದಲ್ಲಿ ದೀರ್ಘಾಂತವೇ ಇಲ್ಲ.

ಇತಿ ಅದಂತಾಃ ||

## ಇಕಾರಾಂತ " ವಾರಿ " ಶಬ್ದ (ನೀರು)

ವಾರಿ ಶಬ್ದದಮೇಲೆ ಪ್ರಥಮಾ ಸು ಬಂದಾಗ ಅದಂತವಾಗದಿರುವುದರಿಂದ ಅಮ್ ಬರುವುದಿಲ್ಲ. ರುತ್ವವಿಸರ್ಗ ಪ್ರಾಪ್ತವಾದರೆ ಲೋಪ ಹೇಳುತ್ತಾನೆ.

(ಸು ಅಮ್‌ಗಳಿಗೆ ಲುಕ್ ಹೇಳುವ ಸೂತ್ರ)

### ೨೪೫. ಸ್ವಮೋರ್ನಪುಂಸಕಾತ್ ॥ ೭-೧-೨೩ ॥

**ಕ್ಲೀಬಾದಂಗಾತ್ ಸ್ವಮೋರ್ಲುಕ್ ಸ್ಯಾತ್ ॥ ವಾರಿ ॥**

ಸ್ವಮೋಃ, ನಪುಂಸಕಾತ್ ॥ ದ್ವಿಪದಸೂತ್ರ. " ಅಂಗಸ್ಯ " ಅಧಿಕಾರ. ಪಂಚಮ್ಯಂತ ವಿಪರಿಣಾಮ. " ಷಡ್ಭ್ಯೋ ಲುಕ್ " ಸೂತ್ರದಿಂದ " ಲುಕ್ " ಅನುವೃತ್ತಿ. **ಸೂತ್ರಾರ್ಥ.** ನಪುಂಸಕಾಂಗದ ಪರದಲ್ಲಿರುವ ಸು, ಅಮ್‌ಗಳಿಗೆ ಲುಕ್ ಬರುತ್ತದೆ. ಲುಕ್ ಲೋಪದ ಪರ್ಯಾಯ ಶಬ್ದ. ಲುಕ್ ಎಂದು ಲೋಪಮಾಡಿದಲ್ಲಿ ಸ್ಥಾನಿವದ್ಭಾವ ಬರುವುದಿಲ್ಲ. ನಪುಂಸಕ ಸಾಮಾನ್ಯದಲ್ಲಿಯೂ ಇದು ಬರುತ್ತದೆ. ಪ್ರಕೃತ ಸು ಲುಕ್ಕಾದರೆ ವಾರಿ ಎಂದು ಉಳಿಯುತ್ತದೆ. ವಾರಿ + ಔ ಎಂದಿರುವಾಗ " ನಪುಂಸಕಾಚ್ಚ " ಸೂತ್ರದಿಂದ ಔಗೆ ಶೀ ಭಾವ. ವಾರಿ + ಈ ಎಂದಿರುವಾಗ ನುಮಾಗಮ ಹೇಳುತ್ತಾನೆ.

(ನಪುಂಸಕದಲ್ಲಿ ನುಮಾಗಮ ಹೇಳುವ ಸೂತ್ರ)

### ೨೪೬. ಇಕೋಽಚಿ ವಿಭಕ್ತೌ ॥ ೭-೧-೭೩ ॥

**ಇಗಂತಸ್ಯ ಕ್ಲೀಬಸ್ಯ ನುಮಚಿ ವಿಭಕ್ತೌ ॥ ವಾರಿಣೀ । ವಾರೀಣಿ ॥ ನ ಲುಮತೇತ್ಯಸ್ಯಾನಿತ್ಯತ್ವಾತ್ಪಕ್ಷೇ ಸಂಬುದ್ಧಿನಿಮಿತ್ತೋ ಗುಣಃ ॥ ಹೇ ವಾರೇ ಹೇ ವಾರಿ । ಘೇರ್ಙಿತೀತಿ ಗುಣೇ ಪ್ರಾಪ್ತೇ**

**ವಾ ॥ (ವೃದ್ಧ್ಯೌತ್ವತೃಜ್ವದ್ಭಾವಗುಣೇಭ್ಯೋ ನುಮ್ ಪೂರ್ವವಿಪ್ರತಿಷೇಧೇನ) ವಾರಿಣೇ । ವಾರಿಣಃ । ವಾರಿಣೋಃ । ನುಮಚಿರೇತಿ ನುಟ್ । ವಾರೀಣಾಮ್ । ವಾರಿಣಿ । ಹಲಾದೌ ಹರಿವತ್ ॥**

ಇಕಃ, ಅಚಿ, ವಿಭಕ್ತೌ ॥ ತ್ರಿಪದಸೂತ್ರ. " ಇದಿತೋನುಮ್ ಧಾತೋಃ " ಸೂತ್ರದಿಂದ " ನುಮ್ " " ನಪುಂಸಕಸ್ಯ ಝಲಚಃ " ಸೂತ್ರದಿಂದ " ನಪುಂಸಕಸ್ಯ " ಪದಗಳು ಅನುವೃತ್ತವಾಗುತ್ತವೆ. ಅಂಗಸ್ಯ ಅಧಿಕಾರ. ಇಕಃ ಅದಕ್ಕೆ ವಿಶೇಷಣವಾದುದರಿಂದ ತದಂತಲಾಭ. ಅಚಿ ಸಪ್ತಮ್ಯಂತವು ವಿಭಕ್ತೌ ಸಪ್ತಮ್ಯಂತ್ಯಕ್ಕೆ ವಿಶೇಷಣವಾದುದರಿಂದ ತದಾದಿಲಾಭ. **ಸೂತ್ರಾರ್ಥ.** ಇಗಂತವಾದ ನಪುಂಸಕಾಂಗಕ್ಕೆ

ಅಜಾದಿ ವಿಭಕ್ತಿಪರವಾದಾಗ ನುಮಾಗಮ ಬರುತ್ತದೆ. ಪ್ರಕೃತ ಶೀ ಅಜಾದಿವಿಭಕ್ತಿ ಪರವಾಗಿದೆ. ವಾರಿ ಇಗಂತನಪುಂಸಕಾಂಗ. " ಮಿದಚೋಂತ್ಯಾತ್ಪರಃ" ಸೂತ್ರದಿಂದ ನುಮ್ ಮಿತ್ತಾದುದರಿಂದ ಅಂತ್ಯವಾದ ಅಚಿನಪರಕ್ಕೆ ಬರುತ್ತದೆ. ವಾರಿ+ನ್+ಈ. ವಾರಿನೀ. " ಅಟ್‌ಕುಪ್ವಾಙ್ "-ಸೂತ್ರದಿಂದ ನಕಾರಕ್ಕೆ ಣತ್ವ. ವಾರಿಣೀ. ವಾರಿ+ ಇ. ಎಂದಿರುವಾಗ ನುಮಾಗಮ. ವಾರಿನ್+ಇ. ಸರ್ವನಾಮಸ್ಥಾನ ಪರವಾದುದರಿಂದ " ಸರ್ವನಾಮಸ್ಥಾನೇಚಾಸಂಬುದ್ಧೌ " ಸೂತ್ರದಿಂದ ನಾಂತದ ಉಪಧೆಗೆ ದೀರ್ಘ. ವಾರೀನ್+ಇ. ವಾರೀನಿ. ಹಿಂದಿನಂತೇ ಣತ್ವ. ವಾರೀಣಿ. ಸಂಬುದ್ಧಿಯಲ್ಲಿ ಸು ಬಂದಾಗ ಅದಕ್ಕೆ ಲುಕ್. ಹೇ ವಾರಿ ಎಂದಾಗುತ್ತದೆ. ಲುಕ್ಕಾದುದರಿಂದ ಅದಕ್ಕೆ ಸ್ಥಾನಿವದ್ಭಾವವಿಲ್ಲ. ಆದರೆ ಸ್ಥಾನಿವದ್ಭಾವವನ್ನು ನಿಷೇಧಮಾಡುವ " ನ ಲುಮತಾಂಗಸ್ಯ " ಸೂತ್ರವು ಅನಿತ್ಯ. " ಇಕೋಽಚಿ ವಿಭಕ್ತೌ " ಸೂತ್ರದಲ್ಲಿ ಅಜ್ ಗ್ರಹಣ ಈ ವಿಷಯವನ್ನು ಜ್ಞಾಪಿಸುತ್ತದೆ. ಯಾವಾಗ ಅದು ಅನಿತ್ಯವಾಯಿತೋ ನಿಷೇಧಮಾಡದಿರುವಾಗ ಸ್ಥಾನಿವದ್ಭಾವ ಬರುವುದರಿಂದ ಸು ಪರದಲ್ಲಿ ಇದ್ದಂತೆ ಆಯಿತು. ಆಗ " ಹ್ರಸ್ವಸ್ಯ ಗುಣಃ " ಸೂತ್ರದಿಂದ ವಾರಿ ಎಂಬಲ್ಲಿ ಗುಣ ಬಂದರೆ ಹೇ ವಾರೇ ಎಂದಾಗುತ್ತದೆ. ನಿಷೇಧಬಂದರೆ ಸಂಬುದ್ಧಿಪರದಲ್ಲಿಲ್ಲದಿರುವುದರಿಂದ ಗುಣ ಬರುವುದಿಲ್ಲ. ಹೇ ವಾರಿ. ಹೀಗೆ ಸಂಬುದ್ಧಿಯಲ್ಲಿ ಎರಡು ರೂಪವಾಗುತ್ತವೆ. ಇದನ್ನೇ " ನಲುಮತಾ "-ಎಂಬ ವಾಕ್ಯದಿಂದ ವಿವರಿಸಿರುತ್ತಾನೆ. " ನಲುಮತಾ " ಎಂಬುದಕ್ಕೆ ಅನಿತ್ಯತ್ವವನ್ನಂಗೀಕರಿಸಿರುವುದರಿಂದ ಸೂತ್ರಪ್ರವರ್ತಿಸದಿರುವಾಗ ಸಂಬುದ್ಧಿಯನ್ನು ನಿಮಿತ್ತೀಕರಿಸಿ ಗುಣ ಬರುತ್ತದೆ ಎಂದರ್ಥ. ದ್ವಿತೀಯಾವಿಭಕ್ತಿಯಲ್ಲಿ ಹಿಂದಿನ ರೂಪವೇ. ವಾರಿ-ವಾರಿಣೀ-ವಾರೀಣಿ. ತೃತೀಯಾಏಕವಚನದಲ್ಲಿ ಅಜಾದಿವಿಭಕ್ತಿಪರವಾದುದರಿಂದ ಹಿಂದಿನ ಸೂತ್ರದಿಂದ ನುಮಾಗಮ. ಣತ್ವ. ವಾರಿ +ಆ-ವಾರಿಣಾ. ವಾರಿಭ್ಯಾಮ್ ವಾರಿಭಿಃ. ಹಲಾದಿಯಲ್ಲಿ ಕಾರ್ಯವಿಶೇಷವಿಲ್ಲದಿರುವುದರಿಂದ ಹರಿಶಬ್ದದಂತೇ ರೂಪ.

ಚತುರ್ಥಿಯಲ್ಲಿ ಙೇ ಬಂದಾಗ ವಾರಿ+ಏ ಎಂದಿರುವಾಗ ಅಜಾದಿ ಪ್ರತ್ಯಯ ಪರವಾದುದರಿಂದ " ಇಕೋಽಚಿ ವಿಭಕ್ತೌ " ಸೂತ್ರದಿಂದ ನುಮಾಗಮವೂ ಬರಬಹುದು. ಙಿತ್ತಾದ ಪ್ರತ್ಯಯ ಪರವಾದುದರಿಂದ " ಘೇರ್ಙಿತಿ " ಸೂತ್ರದಿಂದ ವಾರಿಯಲ್ಲಿ ಇಕಾರಕ್ಕೆ ಗುಣವೂ ಬರಬಹುದು. ಹೀಗೆ ಪ್ರಬಲ ಎರಡು ಸೂತ್ರಗಳೂ ಪ್ರಾಪ್ತವಾದರೆ " ವಿಪ್ರತಿಷೇಧೇ ಪರಂ ಕಾರ್ಯಂ " ಎಂಬುದರಿಂದ ಪರಸೂತ್ರದಿಂದ ಕಾರ್ಯ ಮಾಡಬೇಕು. ಆದರೆ ಅದು ಇಷ್ಟವಲ್ಲ. ಅದಕ್ಕೋಸ್ಕರ ವಾರ್ತಿಕಕಾರರು ಪೂರ್ವವಿಪ್ರತಿಷೇಧ ಹೇಳುತ್ತಾರೆ. ವೃದ್ಧಿ, ಔತ್ವ, ತೃಜ್ವದ್ಭಾವ, ಗುಣ ಈ ನಾಲ್ಕು ಕಾರ್ಯಗಳಿಗಿಂತ ನುಮ್ ಎಂಬುದೇ ಪೂರ್ವವಿಪ್ರತಿಷೇಧದಿಂದ ಬರುತ್ತದೆ ಎಂದು ವಾರ್ತಿಕಾರ್ಥ. " ವಿಪ್ರತಿಷೇಧೇ ಪೂರ್ವಂ ಕಾರ್ಯಂ " ಎಂದು ಅವರ ಮತ. ಪ್ರಕೃತ ಗುಣ ಮಾತ್ರ ಇಲ್ಲಿ ಪ್ರಸಕ್ತವಾಗಿದೆ. ವೃದ್ಧ್ಯಾದಿಗಳಿಗೆ ಮುಂದೆ ಉದಾಹರಣೆ

ಬರುತ್ತದೆ. ಪೂರ್ವಕ್ಕೇ ಪ್ರಾಬಲ್ಯವೆಂದುದರಿಂದ ಗುಣವನ್ನು ಬಾಧಿಸಿ ನುಮ್ ಬಂದರೆ ವಾರಿನ್+ಏ=ವಾರಿನೇ. "ಅಟ್‌ಕುಪ್ವಾಙ್"-ಸೂತ್ರದಿಂದ ಣತ್ವ-ವಾರಿಣೇ. ವಾರಿಭ್ಯಾಮ್-ವಾರಿಭ್ಯಃ ||

ಪಂಚಮಿ ಏಕವಚನದಲ್ಲಿಯೂ ಹೀಗೆಯೇ ಪ್ರಾಪ್ತವಾದ ಗುಣವನ್ನು ಬಾಧಿಸಿ ನುಮ್ ಬಂದರೆ ವಾರಿ+ನ್+ಅಸ್. ವಾರಿಣಃ-ವಾರಿಭ್ಯಾಮ್-ವಾರಿಭ್ಯಃ || ಷಷ್ಠೀ ಏಕವಚನದಲ್ಲಿಯೂ ನುಮ್. ವಾರಿಣಃ | ದ್ವಿವಚನದಲ್ಲಿ ಅಜಾದಿಯಾದುದರಿಂದ ನುಮ್. ವಾರಿನೋಃ=ವಾರಿಣೋಃ | ಅಮ್ ಪರವಾದಾಗ ಹ್ರಸ್ವದ ಪರದಲ್ಲಿರುವುದರಿಂದ ಆಮಿಗೆ ನುಡಾಗಮವೂ ಬರಬಹುದು. ಅಜಾದಿಯಾದುದರಿಂದ ಅಂಗಕ್ಕೆ ನುಮಾಗಮವೂ ಬರಬಹುದು. ಹೀಗೆ ನುಟ್, ನುಮ್ ಪ್ರಾಪ್ತವಾದರೆ "ನುಮ್, ಅಚಿರ,ತೃಜ್ವದ್ಭಾವೇಭ್ಯೋ ನುಟ್ ಪೂರ್ವವಿಪ್ರತಿಷೇಧೇನ" ವಾರ್ತಿಕದಿಂದ ನುಮನ್ನು ಬಾಧಿಸಿ ಪೂರ್ವವಿಪ್ರತಿಷೇಧದಿಂದ ನುಟೇ ಬರುತ್ತದೆಯೆಂದುದರಿಂದ ನುಟ್ ಬಂದರೆ ಅಜಾದಿ ಪರವಾಗದಿರುವುದರಿಂದ ನುಮ್ ಬರುವುದಿಲ್ಲ. ವಾರಿ+ನ್ ಆಮ್. "ನಾಮಿ" ಸೂತ್ರದಿಂದ ಇಕಾರಕ್ಕೆ ದೀರ್ಘ. "ಅಟ್‌ಕುಪ್ವಾಙ್"-ಸೂತ್ರದಿಂದ ಣತ್ವ. ವಾರೀನಾಮ್=ವಾರೀಣಾಮ್ || ಸಪ್ತಮ್ಯೇಕವಚನದಲ್ಲಿ ವಾರಿ+ಙಿ ಎಂದಿರುವಾಗ "ಅಚ್ಚಘೇಃ" ಸೂತ್ರದಿಂದ ಔತ್ವ ಪರವಾದರೆ "ವೃದ್ಧ್ಯೌತ್ವ"-ವಾರ್ತಿಕದಿಂದ ಔತ್ವವನ್ನು ಬಾಧಿಸಿ ಅಂಗಕ್ಕೆ ನುಮಾಗಮ. ವಾರಿನ್+ಇ. ಣತ್ವ. ವಾರಿಣಿ-ವಾರಿಣೋಃ-ವಾರಿಷು.

ಇಕಾರಾಂತ ದಧಿ ಶಬ್ದ. (ಮೊಸರು)

ದಧಿ+ಸ್ ಎಂದಿರುವಾಗ "ಸ್ವಮೋರ್ನಪುಂಸಕಾತ್" ಸೂತ್ರದಿಂದ ಸುವಿಗೆ ಲ್ಲುಕ್. ದಧಿ. ಔ ಪರವಾದಾಗ "ಇಕೋಽಚಿ ವಿಭಕ್ತೌ" ಸೂತ್ರದಿಂದ ನುಮಾಗಮ. ಔಗೆ ಶೀ ಭಾವ. ದಧಿನೀ. ಸಂಬುದ್ಧಿಯಲ್ಲಿ ಹಿಂದಿನಂತೆಯೇ ಹೇ ದಧೇ ಹೇ ದಧಿ ಎರಡು ರೂಪ. ದ್ವಿತೀಯಾ ಪ್ರಥಮದಂತೇ ಆಗುತ್ತದೆ. ದಧಿ-ದಧಿನೀ-ದಧೀನಿ || ತೃತೀಯಾದಲ್ಲಿ ಟಾ ಪರವಾದಾಗ ಅನಙ್ ಆದೇಶ ಹೇಳುತ್ತಾನೆ.

(ದಧ್ಯಾದಿಗಳಿಗೆ ಅನಙ್ ಹೇಳುವ ಸೂತ್ರ)

## ೨೪೭. ಅಸ್ಥಿದಧಿಸಕ್ಥ್ಯಕ್ಷ್ಣಾಮನಙುದಾತ್ತಃ ||೭-೧-೭೫||

**ಏಷಾಮನಙ್ ಸ್ಯಾಟ್ಟಾದಾವಚಿ ||**

ಅಸ್ಥಿದಧಿಸಕ್ಥ್ಯಕ್ಷ್ಣಾಂ, ಅನಙ್, ಉದಾತ್ತಃ || ತ್ರಿಪದಸೂತ್ರ. "ಇಕೋಽಚಿ ವಿಭಕ್ತೌ" ಸೂತ್ರದಿಂದ "ಅಚಿ" "ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ" ಸೂತ್ರದಿಂದ "ತೃತೀಯಾದಿಷು" ಪದಗಳು ಅನುವೃತ್ತವಾಗುತ್ತವೆ. (ಅಸ್ಥಿ, ದಧಿ, ಸಕ್ಥಿ, ನಾಲ್ಕು ಶಬ್ದಗಳು.) ತೃತೀಯಾದಿಗೆ ಅಚಿ ವಿಶೇಷಣವಾದುದರಿಂದ

ಆಜಾದಿಯೆಂಬ ಅರ್ಥವಾಗುತ್ತದೆ. ಸೂತ್ರಾರ್ಥ. ಅಸ್ಥಿ, ದಧಿ, ಸಕ್ಥಿ, ಅಕ್ಷಿ ಈ ನಾಲ್ಕುಶಬ್ದಗಳಿಗೆ ಅಜಾದಿಯಾದ ತೃತೀಯಾದಿವಿಭಕ್ತಿಪರವಾದಾಗ ಅನಙ್ ಬರುತ್ತದೆ. ಪ್ರಕೃತ ದಧಿ+ಆ ಎಂದು ಅಜಾದಿವಿಭಕ್ತಿಪರವಾದುದರಿಂದ ಅನಙ್ ಆದೇಶ ಙಿತ್ತಾದುದರಿಂದ "ಙಿಚ್ಚ" ಪರಿಭಾಷೆಯಿಂದ ದಧಿ ಎಂಬಲ್ಲಿ ಅಂತ್ಯ ಇಕಾರಕ್ಕೆ ಬಂದರೆ ದಧ್ ಅನ್+ಆ ಎಂದಾಗುತ್ತದೆ. ದಧನ್+ಆ ಎಂದಿರುವಾಗ ಅನ್ನಿನ ಅಕಾರಕ್ಕೆ ಲೋಪ ಹೇಳುತ್ತಾನೆ.

(ಅನ್ನಿನ ಅಕಾರಕ್ಕೆ ಲೋಪಹೇಳುವ ಸೂತ್ರ)

## ೨೪೮. ಅಲ್ಲೋಪೋಽನಃ ॥ ೬-೪-೧೩೪ ॥

ಅಂಗಾವಯವೋಽಸರ್ವನಾಮಸ್ಥಾನಯಜಾದಿಸ್ವಾದಿಪರೋ ಯೋಽನ್ ತಸ್ಯಾಽಕಾರಸ್ಯ ಲೋಪಃ ॥ ದಧ್ನಾ ದಧ್ನೇ । ದಧ್ನಃ । ದಧ್ನಃ ದಧ್ನೋಃ । ದಧ್ನೋಃ ।

ಅತ್, ಲೋಪಃ, ಅನಃ । ತ್ರಿಪದಸೂತ್ರ. ಅತ್ ಎಂಬುದು ಲುಪ್ತಷಷ್ಠೀಕ ಪದ. ಅತಃ ಎಂದಿರಬೇಕಾಗಿತ್ತು. ಷಷ್ಠೀಲುಪ್ತವಾಗಿದೆ. ಅನಃ ಷಷ್ಠೀ. ಅತ್ ಎಂಬಲ್ಲಿ ಇದಕ್ಕೆ ಅನ್ವಯ. ಅನಿನ ಅವಯುವವಾದ ಹ್ರಸ್ವಾಕಾರಕ್ಕೆ ಎಂದರ್ಥ. "ಭಸ್ಯ" ಅಧಿಕಾರ. "ಯಚಿಭಮ್" ಸೂತ್ರದಿಂದ ಸರ್ವನಾಮಸ್ಥಾನವಲ್ಲದ ಅಜಾದಿ, ಯಾದಿ ಪ್ರತ್ಯಯ (ಕಪಿನವರೆಗಿರುವ) ಪರವಾದಾಗ ಪೂರ್ವಕ್ಕೆ ಭ ಸಂಜ್ಞಾ ಹೇಳಿರುತ್ತಾನೆ. ಆಗ ಸೂತ್ರಾರ್ಥ. ಸರ್ವನಾಮಸ್ಥಾನವಲ್ಲದ ಯಕಾರಾದಿ, ಅಜಾದಿ ಪ್ರತ್ಯಯಪರವಾದ ಅಂಗಾವಯುವವಾದ ಯಾವ ಅನ್ ಇದೆಯೋ ಅದರ ಅವಯುವವಾದ ಅಕಾರಕ್ಕೆ ಲೋಪ ಬರುತ್ತದೆ. ಪ್ರಕೃತ ಕಪ್ ಪ್ರತ್ಯಯದ ಒಳಗೆ ಸೇರಿದ ಸರ್ವನಾಮಸ್ಥಾನವಲ್ಲದ ಅಜಾದಿಪ್ರತ್ಯಯ ಪರವಾದುದರಿಂದ ದಧನ್ ಎಂಬಲ್ಲಿರುವ ಅನಿನ ಅಕಾರಕ್ಕೆ ಲೋಪ ಬಂದರೆ ದಧ್ನ್+ಆ=ದಧ್ನಾ ಎಂದಾಗುತ್ತದೆ. ಹೀಗೆ ಮುಂದೆ ಅಜಾದಿಯಲ್ಲೆಲ್ಲಾ ಲೋಪ ಬಂದುದನ್ನು ತೋರಿಸಿರುತ್ತಾನೆ. ಚ॥ ದಧ್ನೇ । ಪಂ॥ ದಧ್ನಃ । ಷ-ದಧ್ನಃ ॥ ಷ-ದ್ವಿ-ದಧಿ+ಓಸ್=ದಧನ್+ಓಸ್ ದಧ್ನೋಸ್-ದಧ್ನೋಃ । ಸ-ದ್ವಿ-ದಧ್ನೋಃ ॥ ಷ-ಬ-ದಧ್ನಾಮ್. ಸಪ್ತಮೀ ಏಕವಚನದಲ್ಲಿಯೂ ಅಜಾದಿಯಾದುದರಿಂದ ನಿತ್ಯಲೋಪಪ್ರಾಪ್ತವಾದರೆ ವಿಕಲ್ಪ ಲೋಪ ಹೇಳುತ್ತಾನೆ.

(ಅನಿನ ಅಕಾರಕ್ಕೆ ವಿಕಲ್ಪ ಲೋಪ ಹೇಳುವ ಸೂತ್ರ)

## ೨೪೯. ವಿಭಾಷಾ ಙಿಶ್ಯೋಃ ॥ ೬-೪-೧೩೬ ॥

ಅಂಗಾವಯವೋಽಸರ್ವನಾಮಸ್ಥಾನಯಜಾದಿಸ್ವಾದಿಪರೋ ಯೋಽನ್ ತಸ್ಯಾಕಾರಸ್ಯ ಲೋಪೋ ವಾ ಸ್ಯಾತ್, ಙಿಶ್ಯೋಃ ಪರಯೋಃ ॥ ದಧ್ನಿ, ದಧನಿ । ಶೇಷಂ ವಾರಿವತ್ । ಏವಮಸ್ಥಿಸಕ್ಥ್ಯಕ್ಷಿ ॥

ದ್ವಿಪಥಸೂತ್ರ "ಅಲ್ಲೋಪೋಽನಃ" ಸೂತ್ರವು ಅನುವೃತ್ತವಾಗುತ್ತದೆ. ಅದರಂತೇ ಸೂತ್ರಾರ್ಥ. "ಅಂಗಸ್ಯ" "ಭಸ್ಯ" ಅಧಿಕಾರ. ಇಲ್ಲಿ ವಿಕಲ್ಪವೊಂದೇ ವಿಶೇಷ. ಸೂತ್ರಾರ್ಥ. ಸರ್ವನಾಮಸ್ಥಾನ ವರ್ಜವಾದ ಅಜಾದಿ, ಯಾದಿ ಪರವಾದ ಅಂಗಾವಯವವಾದ ಅನಿನ ಅಕಾರಕ್ಕೆ ಙಿ, ಶೀ ಎರಡು ಪ್ರತ್ಯಯಪರವಾದಾಗ ವಿಕಲ್ಪವಾಗಿ ಲೋಪಬರುತ್ತದೆ. ಪ್ರಕೃತ ಸರ್ವನಾಮಸ್ಥಾನವಲ್ಲದ ಅಜಾದಿ ಪ್ರತ್ಯಯ ಪರವಾದರೂ ಙಿ ಆದುದರಿಂದ ಇದರಿಂದ ವಿಕಲ್ಪಲೋಪ. ಲೋಪಬಂದರೆ ದಧ್ನ್ + ಇ = ದಧ್ನಿ. ಲೋಪಬಾರದಿದ್ದರೆ ಇದ್ದಂತೇ ಇರುತ್ತದೆ. ದಧನ್ + ಇ = ದಧನಿ. ಶೇಷಂವಾರಿವತ್. ಇನ್ನು ತೃತೀಯಾದಿಹಲಾದಿ ವಿಭಕ್ತಿಗಳಲ್ಲಿ ಕಾರ್ಯ ವಿಶೇಷವಿಲ್ಲದುದರಿಂದ ವಾರಿಶಬ್ದದಂತೇ ಆಗುತ್ತದೆ. ದಧಿಭ್ಯಾಂ-ದಧಿಭಿಃ ಇತ್ಯಾದಿ. ಹೀಗೆಯೇ ಸೂತ್ರೋಪಾತ್ತಗಳಾದ ಅಸ್ಥಿ, (ಮೂಳೆ) ಸಕ್ಥಿ (ತೊಡೆ) ಅಕ್ಷಿ (ಕಣ್ಣು) ಮೂರು ಶಬ್ದಗಳೂ ಆಗುತ್ತವೆ-ಅಜಾದಿ ಟಾದಿಯಲ್ಲಿ ಅನಙ್ ಬಂದು ಅಕಾರಲೋಪ ಹೊಂದುತ್ತವೆ. ಸಪ್ತಮೀಏಕವಚನದಲ್ಲಿ ವಿಕಲ್ಪಲೋಪ. ಅಸ್ಥಿ-ಅಸ್ಥಿನೀ, ಅಸ್ಥೀನಿ. ೨. ಅಸ್ಥ್ನಾ-ಅಸ್ಥಿಭ್ಯಾಮ್-ಅಸ್ಥಿಭಿಃ ॥ ಇತ್ಯಾದಿ.

---

(ಇಕಾರಾಂತ ಸುಧಿ ಶಬ್ದ)

**ಸುಧಿ । ಸುಧಿನೀ । ಸುಧೀನಿ ॥ ಹೇ ಸುಧೇ—ಹೇ ಸುಧಿ ॥**

ಶೋಭನಾ ಧೀಃ ಯಸ್ಯ ತತ್. ಒಳ್ಳೇ ಬುದ್ಧಿಯುಳ್ಳ ಕುಲ. ಸುಧೀ ಎಂದಿರುವಾಗ "ಹ್ರಸ್ವೋನಪುಂಸಕೇ ಪ್ರಾತಿಪದಿಕಸ್ಯ" ಸೂತ್ರದಿಂದ ನಪುಂಸಕದಲ್ಲಿ ಹ್ರಸ್ವ. ಸುಧಿ ಹ್ರಸ್ವ ಇಕಾರಾಂತವಾಗುತ್ತದೆ. ಪ್ರಥಮ, ದ್ವಿತೀಯಾ ಏಕವಚನಗಳಲ್ಲಿ "ಸ್ವಮೋರ್ನಪುಂಸಕಾತ್" ಸೂತ್ರದಿಂದ ಸು, ಅಮ್‌ಗಳಿಗೆ ಲುಕ್. ಸುಧಿ. ದ್ವಿವಚನದಲ್ಲಿ ಔಪರವಾದಾಗ "ನಪುಂಸಕಾಚ್ಚ" ಸೂತ್ರದಿಂದ ಔಗೆ ಶೀ ಭಾವ. ಸುಧಿ + ಈ. "ಇಕೋಽಚಿವಿಭಕ್ತೌ" ಸೂತ್ರದಿಂದ ನುಮಾಗಮ. ಸುಧಿನ್ + ಈ = ಸುಧಿನೀ ॥ ಜಸ್‌ಶಸ್‌ಗಳಿಗೆ ಶಿ ಭಾವ. ಸುಧಿ + ಇ ಎಂದಿರುವಾಗ ನುಮ್. "ಸರ್ವನಾಮಸ್ಥಾನೇಚಾಸಂಬುದ್ಧೌ" ಸೂತ್ರದಿಂದ ದೀರ್ಘ. ಸುಧೀನಿ ॥ ಸಂಬುದ್ಧಿಯಲ್ಲಿ ಸುವಿಗೆ ಲುಕ್. ಹೇ ಸುಧಿ ಲುಕಿಗೆ ಸ್ಥಾನಿವದ್ಭಾವವಿದ್ದರೆ "ಹ್ರಸ್ವಸ್ಯಗುಣಃ" ಸೂತ್ರದಿಂದ ಗುಣ. ಹೇ ಸುಧೇ. ತೃತೀಯಾದಿ ಅಜಾದಿಗಳಲ್ಲಿ ನಿತ್ಯವಾಗಿ "ಇಕೋಽಚಿವಿಭಕ್ತೌ" ಸೂತ್ರದಿಂದ ನುಮ್ ಬಂದು ಒಂದೇರೂಪವಾಗುವುದಾದರೆ ಪುಲ್ಲಿಂಗದಂತೆಯೂ ಒಂದು ರೂಪವನ್ನು ಹೇಳುತ್ತಾನೆ.

(ನಪುಂಸಕಕ್ಕೆ ಪುಂವದ್ಭಾವ ಹೇಳುವ ಸೂತ್ರ

**೨೫೦. ತೃತೀಯಾದಿಷು ಭಾಷಿತಪುಂಸ್ಕಂ ಪುಂವದ್ಗಾಲವಸ್ಯ ॥ ೭-೧-೭೪ ॥**

**ಪ್ರವೃತ್ತಿನಿಮಿತ್ತೈಕ್ಯೇ ಭಾಷಿತಪುಸ್ಕಮಿಗಂತಂ ಕ್ಲೀಬಂ ಪುಂವದ್ವಾ ಟಾದಾವಚಿ ॥ ಸುಧಿಯಾ, ಸುಧಿನೇತ್ಯಾದಿ ॥**

ತೃತೀಯಾದಿಷು, ಭಾಷಿತಪುಂಸ್ಕಂ, ಪುಂವತ್, ಗಾಲವಸ್ಯ ॥ ನಾಲ್ಕುಪದಗಳುಳ್ಳ ಸೂತ್ರ. "ಇಕೋಽಚಿ ವಿಭಕ್ತೌ" ಸೂತ್ರದಿಂದ "ಅಚಿ" "ಇಕ್" ಅನುವೃತ್ತವಾಗುತ್ತವೆ. ತೃತೀಯಾದಿಗೆ ಅಚಿ ವಿಶೇಷಣ, ಸಪ್ತಮ್ಯಂತವಾದುದರಿಂದ ತದಾದಿಲಾಭ. ಭಾಷಿತಃ ಪುಮಾನ್ ಯೇನ ಪ್ರವೃತ್ತಿನಿಮಿತ್ತೇನ ತತ್ ಭಾಷಿತ ಪುಂಸ್ಕಮ್. ಪುಲ್ಲಿಂಗದಲ್ಲಿಯೂ ನಪುಂಸಕದಲ್ಲಿಯೂ ಒಂದೇ ಪ್ರವೃತ್ತಿನಿಮಿತ್ತವುಳ್ಳ ಶಬ್ದ. ಪುಲ್ಲಿಂಗಕ್ಕೂ ನಪುಂಸಕಕ್ಕೂ ಸಮನ್ವಯವಾಗುವ ಅರ್ಥವುಳ್ಳ ಶಬ್ದ. "ನಪುಂಸಕಸ್ಯ ಝಲಚಃ" ಸೂತ್ರದಿಂದ "ನಪುಂಸಕಸ್ಯ" ಅನುವೃತ್ತಿ. ಇಕಃ ಎಂಬುದು ಅದಕ್ಕೆ ವಿಶೇಷಣವಾದುದರಿಂದ ಇಗಂತವಾದ ನಪುಂಸಕಕ್ಕೆ ಎಂದರ್ಥವಾಗುತ್ತದೆ. ಸುಧೀ ಎಂಬುದು ಭಾಷಿತಪುಂಸ್ಕ. ಒಳ್ಳೇ ಬುದ್ಧಿ ಉಳ್ಳವ ಎಂದು ಪುಲ್ಲಿಂಗದಲ್ಲಿಯೂ ಪುರುಷನಿಗೆ ವಿಶೇಷಣವಾಗಿ ಹೇಳಬಹುದು. ಕುಲರೂಪ ನಪುಂಸಕಕ್ಕೆ ವಿಶೇಷಣವಾಗಿ ಹೇಳಬಹುದು. ಎರಡರಲ್ಲಿಯೂ ಹೊಂದುವ ಒಂದರ್ಥವಿರುವ ಶಬ್ದವೇ ಭಾಷಿತಪುಂಸ್ಕಶಬ್ದ. ಶಬ್ದವನ್ನು ಒಂದು ಅರ್ಥದಲ್ಲಿ ಪ್ರಯೋಗಿಸಲು ಕಾರಣ ಯಾವುದೋ ಅದು ಪ್ರವೃತ್ತಿನಿಮಿತ್ತ. ಗೋತ್ವವಿರುವುದರಿಂದ ಗೌಃ ಎಂದು ಪ್ರಯೋಗಿಸುತ್ತೇವೆ. ಈ ನಿಮಿತ್ತ ಎರಡು ಲಿಂಗಗಳಲ್ಲಿಯೂ ಒಂದಾಗಿದ್ದರೆ ಅದು ಭಾಷಿತಪುಂಸ್ಕ. ಗಾಲವಸ್ಯ ಎಂದುದರಿಂದ ಗಾಲವಋಷಿಗಳ ಮತದಲ್ಲಿ ಮಾತ್ರ ಈ ಕಾರ್ಯವೆಂದುದರಿಂದ ಪಾಣಿನಿಗಳಿಗೆ ಇದು ಇಷ್ಟವಲ್ಲ. ಆಗ ಅದು ವಿಕಲ್ಪವೆಂದಾಗುತ್ತದೆ. **ಸೂತ್ರಾರ್ಥ.** ಪ್ರವೃತ್ತಿನಿಮಿತ್ತವು ಒಂದೇ ಆಗಿರುವಾಗ ಭಾಷಿತಪುಂಸ್ಕವಾದ ಇಗಂತನಪುಸಂಕವು ಅಜಾದಿತೃತೀಯಾದಿವಿಭಕ್ತಿಪರವಾದಾಗ ವಿಕಲ್ಪವಾಗಿ ಪುಲ್ಲಿಂಗದಂತೆ ಆಗುತ್ತದೆ. ಸುಧೀಶಬ್ದ ಭಾಷಿತಪುಂಸ್ಕ. ಎರಡು ಲಿಂಗಗಳಲ್ಲಿಯೂ ಒಳ್ಳೇ ಬುದ್ಧಿಯಿರುವಿಕೆ ರೂಪವಾದ ಪ್ರವೃತ್ತಿನಿಮಿತ್ತ ಒಂದೇ ಆಗಿದೆ. ವಿಕಲ್ಪವಾಗಿ ಪುಂವದ್ಭಾವ ಬಂದರೆ ನುಮಾಗಮ ಬರುವುದಿಲ್ಲ. ಸುಧೀ+ಆ ಎಂದಿರುವಾಗ "ಅಚಿಶ್ನುಧಾತುಭ್ರುವಾಂ—" (ಸೂ. ೨೦೦) ಸೂತ್ರದಿಂದ ಇಯಜಾದೇಶ. ಸುಧ್‌ಇಯ್+ಆ=ಸುಧಿಯಾ ಎಂದಾಗುತ್ತದೆ. ಪುಂವದ್ಭಾವ ಬಾರದಿದ್ದರೆ ನುಮಾಗಮ. ಸುಧಿನಾ ಎಂದಾಗುತ್ತದೆ. ಹೀಗೆ ಅಜಾದಿಯಲ್ಲಿ ಎರಡೆರಡು ರೂಪ. ಹಲಾದಿಯಲ್ಲಿ ಕೇವಲ ವಿಭಕ್ತಿಸೇರಿಸುವುದು ಮಾತ್ರ. ಚ ॥ ಸುಧಿಯೇ—ಸುಧಿನೇ ॥ ಸುಧಿಭ್ಯಾಂ ಸುಧಿಭ್ಯಃ ॥ ಪಂ ॥ ಸುಧಿಯಃ—ಸುಧಿನಃ ॥ ಸುಧಿಭ್ಯಾಂ ॥ ಸುಧಿಭ್ಯಃ ॥ ಷ–ಸುಧಿಯಃ–ಸುಧಿನಃ ॥ ಸುಧಿಯೋಃ–ಸುಧಿನೋಃ ॥ ಸುಧಿಯಾಂ–ಸುಧೀನಾಮ್ ॥ ಸ–ಸುಧಿಯಿ–ಸುಧಿನಿ ॥ ಸುಧಿಯೋಃ–ಸುಧಿನೋಃ । ಸುಧಿಷು ॥

---

ಉಕಾರಾಂತ ಮಧು ಶಬ್ದ. (ಜೇನು)

**ಮಧು । ಮಧುನೀ । ಮಧೂನಿ । ಹೇ ಮಧೋ-ಹೇ ಮಧು ॥**

ಇದು ವಾರಿ ಶಬ್ದದಂತೆಯೇ ಕಾರ್ಯ ಹೊಂದುತ್ತದೆ. ಏಕವಚನದಲ್ಲಿ ಪ್ರತ್ಯಯಕ್ಕೆ ಲುಕ್. ದ್ವಿವಚನದಲ್ಲಿ ಶೀ ಭಾವ ನುಮ್. ಬಹುವಚನಲ್ಲಿ ಶಿ ಭಾವ. ನುಮ್ ದೀರ್ಘ. ಸಂಬುದ್ಧಿಯಲ್ಲಿ ವಿಕಲ್ಪ ಗುಣ. ತೃತೀಯಾದ್ಯಜಾದಿಯಲ್ಲಿ ನುಮ್. ಮಧುನಾ-ಇತ್ಯಾದಿ.

---

ಉಕಾರಾಂತ ಸುಲು ಶಬ್ದ. (ಚನ್ನಾಗಿ ಕತ್ತರಿಸುವ ಕುಲ)

**ಸುಲು । ಸುಲುನೀ । ಸುಲೂನಿ । ಸುಲ್ವಾ । ಸುಲುನಾ । ಇತ್ಯಾದಿ ॥**

ಸುಷ್ಠು ಲುನಾತಿ ಇತಿ ಸೂಲೂ ಚನ್ನಾಗಿ ಕತ್ತರಿಸುವುದು. ಕುಲಕ್ಕೆ ವಿಶೇಷಣ ಮಾಡಿದರೆ ನಪುಂಸಕವಾಗುತ್ತದೆ. "ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ" ಸೂತ್ರದಿಂದ ಹ್ರಸ್ವ. ಪ್ರಥಮಾ ದ್ವಿತೀಯಾಗಳಲ್ಲಿ ಮಧು ಶಬ್ದದಂತೇ ಆಗುತ್ತದೆ. ಇಲ್ಲಿಯೂ ಚನ್ನಾಗಿ ಕತ್ತರಿಸುವಿಕೆ ಈ ಅರ್ಥ ಪುಲ್ಲಿಂಗದಲ್ಲಿಯೂ ನಪುಂಸಕದಲ್ಲಿಯೂ ಒಂದಾದುದರಿಂದ ಪ್ರವೃತ್ತಿ ನಿಮಿತ್ತೈಕ್ಯವಿರುವುದರಿಂದ ಭಾಷಿತಪುಂಸ್ಕವಾಗುತ್ತದೆ. ಆಗ ಅಜಾದಿ ತೃತೀಯಾದಿಯಲ್ಲಿ ವಿಕಲ್ಪವಾಗಿ ಪುಲ್ಲಿಂಗದಂತಾಗುವುದರಿಂದ ಪುಲ್ಲಿಂಗದಂತೆ ಒಂದು ರೂಪ. ಪುಲ್ಲಿಂಗದಲ್ಲಿ "ಓಃ ಸುಪಿ" ಸೂತ್ರದಿಂದ ಯಣ್ ಬರುವುದರಿಂದ ಸುಲ್ವಾ ಎಂದಾಗುತ್ತದೆ. ಪುಲ್ಲಿಂಗದಂತೆ ಆಗದಿರುವಾಗ ನುಮ್. ಸುಲುನಾ ಎಂದಾಗುತ್ತದೆ. ಹೀಗೆ ಅಜಾದಿಯಲ್ಲಿ ಚ ॥ ಸುಲ್ವೇ-ಸುಲುನೇ ॥ ಪಂ ಸುಲ್ವಃ-ಸುಲುನಃ ॥ ಷ. ಸುಲ್ವಃ ಸುಲುನಃ ॥ ಸುಲ್ವೋಃ ಸುಲುನೋಃ ॥ ಸುಲ್ವಾಂ-ಸುಲುನಾಂ ॥ ಸ-ಸುಲ್ವಿ-ಸುಲಿನಿ ॥ ಸುಲ್ವೋಃ-ಸುಲುನೋಃ ॥ ಎಂದು ಎರಡೆರಡು ರೂಪಗಳಾಗುತ್ತವೆ. ಹಲಾದಿಯಲ್ಲಿ ವಿಶೇಷವಿಲ್ಲ.

---

ಋಕಾರಾಂತ ಧಾತೃ ಶಬ್ದ. (ಸೃಷ್ಟಿಮಾಡುವುದು)

**ಧಾತೃ । ಧಾತೃಣೀ । ಧಾತೄಣಿ ॥ ಹೇ ಧಾತಃ-ಹೇ ಧಾತೃ ॥**
**ಧಾತೄಣಾಮ್ । ಏವಂ ಜ್ಞಾತ್ರಾದಯಃ ॥**

ಧಾತೃ ಶಬ್ದದ ಮೇಲೆ ಸು, ಅಮ್, ಬಂದಾಗ "ಸ್ವಮೋರ್ನಪುಂಸಕಾತ್" ಸೂತ್ರದಿಂದ ಲುಕ್. ಧಾತೃ. ಔ ಪರವಾದಾಗ ಶೀ ಭಾವ ನುಮ್. (ವಾರಿ ಶಬ್ದದಂತೇ.) ಧಾತೃನೀ ಎಂದಿರುವಾಗ "ಋವರ್ಣಾನ್ನಸ್ಯ ಣತ್ವ ವಾಚ್ಯಮ್" ವಾರ್ತಿಕದಿಂದ ಋಕಾರದ ಪರದಲ್ಲಿ ನಕಾರವಿರುವುದರಿಂದ ಣತ್ವ, ಧಾತೃಣೀ. ಜಸಿನಲ್ಲಿ ನುಮ್, ಧೀರ್ಘ, ಣತ್ವ. ಧಾತೄಣಿ ॥ ಸಂಬುದ್ಧಿಯಲ್ಲಿ "ನಲುಮತಾಂಗಸ್ಯ" ಸೂತ್ರ ಪ್ರವರ್ತಿಸದಿರುವಾಗ "ಹ್ರಸ್ವಸ್ಯ ಗುಣಃ" ಸೂತ್ರದಿಂದ ಗುಣ. ಹೇ ಧಾತರ್.

"ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ರೇಫಕ್ಕೆ ವಿಸರ್ಗ. ಹೇ ಧಾತಃ ಸ್ಥಾನಿವದ್ಭಾವ ಬಾರದಿದ್ದರೆ ಗುಣವಿಲ್ಲ. ಹೇ ಧಾತೃ. ತೃತೀಯಾದಿಯಲ್ಲಿ ಅಜಾದಿ ಪ್ರತ್ಯಯ ಪರವಾದಾಗ "ಇಕೋಚಿ ವಿಭಕ್ತೌ" ಸೂತ್ರದಿಂದ ನುಮಾಗಮ. ತೃ ॥ ಧಾತೃಣಾ-ಧಾತೃಭ್ಯಾಮ್-ಧಾತೃಭಿಃ ॥ ಚ ಧಾತೃಣೇ-ಧಾತೃಭ್ಯಾಮ್-ಧಾತೃಭ್ಯಃ ॥ ಪಂ-ಧಾತೃಣಃ-ಧಾತೃಭ್ಯಾ-ಧಾತೃಭ್ಯಃ ॥ ಷ-ಧಾತೃಣಃ-ಧಾತೃಣೋಃ ॥ ಬಹುವಚನದಲ್ಲಿ ಆಮ್ ಪರವಾದಾಗ ನುಮನ್ನು ಭಾಧಿಸಿ "ನುಮಚಿರ ತೃಜ್ವದ್ಭಾವೇಭ್ಯೋ ನುಟ್ ಪೂರ್ವವಿಪ್ರತಿಷೇಧೇನ" ವಾರ್ತಿಕದಿಂದ ಆಮಿಗೆ ನುಟ್. ಹಲಾದಿಯಾದುದರಿಂದ ಪುನಃ ನುಟ್ ಬರುವುದಿಲ್ಲ. "ನಾಮಿ" ಸೂತ್ರದಿಂದ ದೀರ್ಘ. ಧಾತೃಣಾಮ್. ॥ ಸ-ಧಾತೃಣಿ-ಧಾತೃಣೋಃ-ಧಾತೃಷು ॥ ಹೀಗೆಯೇ ಜ್ಞಾತೃ ಮುಂತಾದ ಶಬ್ದಗಳ ರೂಪವನ್ನು ತಿಳಿಯಬೇಕು.



ಉಕಾರಾಂತ ಪ್ರದ್ಯು ಶಬ್ದ (ಒಳ್ಳೇ ಆಕಾಶವುಳ್ಳ ದಿನ)

ಪ್ರಕೃಷ್ಟಾ ದ್ಯೌಃ ಯಸ್ಮಿನ್ ತತ್. ಉತ್ಕೃಷ್ಟವಾದ ಆಕಾಶವುಳ್ಳದ್ದು ಪ್ರದ್ಯೋ ಎಂದು ಆದಾಗ ನಪುಂಸಕದಲ್ಲಿ ಹ್ರಸ್ವ ಹೇಳಬೇಕು. ಓಕಾರಕ್ಕೆ ಹ್ರಸ್ವ ಅಕಾರವೂ ಬರಬಹುದು. ಉಕಾರವೂ ಬರಬಹುದು. ಅದಕ್ಕೋಸ್ಕರ ನಿಯಮ ಮಾಡುತ್ತಾನೆ.

(ಏಚಿಗೆ ಹ್ರಸ್ವ ಹೇಳುವ ಸೂತ್ರ)

೨೫೧. ಏಚ ಇಗ್ಘ್ರಸ್ವಾದೇಶೇ ॥ ೧-೧-೪೮ ॥

ಆದಿಶ್ಯಮಾನೇಷು ಹ್ರಸ್ವೇಷು ಏಚಃ ಇಗೇವ ಸ್ಯಾತ್ ॥ ಪ್ರದ್ಯು । ಪ್ರದ್ಯುನೀ । ಪ್ರದ್ಯೂನಿ । ಪ್ರದ್ಯುನಾ । ಇತ್ಯಾದಿ ॥ ಪ್ರರಿ । ಪ್ರರಿಣೀ । ಪ್ರರೀಣಿ । ಪ್ರರಿಣಾ । ಏಕದೇಶವಿಕೃತಮನನ್ಯವತ್ ॥ ಪ್ರರಾಭ್ಯಾಮ್ । ಪ್ರರೀಣಾಮ್ ॥ ಸುನು । ಸುನುನೀ । ಸುನೂನಿ । ಸುನುನೇತ್ಯಾದಿ ॥

ಏಚಃ, ಇಕ್, ಹ್ರಸ್ವಾದೇಶೇ ॥ ತ್ರಿಪದಸೂತ್ರ. ಆದಿಶ್ಯತೇ ಇತಿ ಆದೇಶಃ ಆದೇಶಿಸಲ್ಪಡುವುದು. ಹ್ರಸ್ವಶ್ಚಾಸೌ ಆದೇಶಶ್ಚ ಹ್ರಸ್ವಾದೇಶಃ. ತಸ್ಮಿನ್. ನಿರ್ಧಾರಣ ಸಪ್ತಮೀ ಏಕವಚನ ಅರ್ಥ. **ಸೂತ್ರಾರ್ಥ.** ಆದೇಶಿಸಲ್ಪಡುವ (ಆದೇಶ ಹೊಂದುವ) ಹ್ರಸ್ವಗಳ ಪೈಕಿ (ಮಧ್ಯದಲ್ಲಿ) ಏಚಿಗೆ ಇಕ್ಕೇ ಬರುತ್ತದೆ. ಏಚಿಗೆ ಇಕ್ಕೂ ಬರುತ್ತಿರುವಾಗ ಪುನಃ ಇಕ್ ಬರುತ್ತದೆ ಎಂದುದರಿಂದ ನಿಯಮವಾಗುತ್ತದೆ. ಇಕ್ಕೇ ವಿನಾ ಬೇರೆಯಾವುದೂ ಬರುವುದಿಲ್ಲ. ಇದರಿಂದ ಅಕಾರವನ್ನು ನಿವೃತ್ತಿಪಡಿಸಿದಂತಾಯಿತು. ಪ್ರಕೃತ ಪ್ರದ್ಯೋ ಎಂಬಲ್ಲಿ ಏಚಾದ ಓಕಾರಕ್ಕೆ ಹ್ರಸ್ವ ಬರುವುವಾದರೆ ಇಕ್ ಎಂದುದರಿಂದ ಸ್ಥಾನಸಾಮ್ಯದಿಂದ ಉಕಾರವೇ ಬರುತ್ತದೆ.

ಆಗ ಪ್ರದ್ಯೋ ಎಂಬುದು ಉಕಾರಾಂತಶಬ್ದವಾಯಿತು. ಮಧುಶಬ್ದದಂತೆ ರೂಪ ಹೊಂದುತ್ತದೆ. ಅಜಾದಿಯಲ್ಲಿ ನುಮಾಗಮ. ಪ್ರದ್ಯು ಪ್ರದ್ಯುನೀ, ಪ್ರದ್ಯೂನಿ, ಇತ್ಯಾದಿ.

ಪ್ರಕೃಷ್ಟೋ ರಾಃ ಯಸ್ಯ ತತ್. ಅಧಿಕಹಣವುಳ್ಳಕುಲ. ಪ್ರರೈ ಎಂದಿರುವಾಗ ಹಿಂದಿನಂತೆ ಹ್ರಸ್ವ ಬಂದರೆ ಸ್ಥಾನಸಾಮ್ಯದಿಂದ ಐಕಾರಕ್ಕೆ ಇಕಾರಬರುತ್ತದೆ. ಪ್ರರಿ ಎಂದು ಇಕಾರಾಂತವಾಗುತ್ತದೆ. ವಾರಿ ಶಬ್ದದಂತೇ ರೂಪ ತಿಳಿಯಬೇಕು. ಅಜಾದಿಯಲ್ಲಿ ನುಮಾಗಮ. ಭ್ಯಾಮಾದಿ ಹಲಾದಿ ವಿಭಕ್ತಿಪರವಾದಾಗ "ರಾಯೋ ಹಲಿ" ಸೂತ್ರದಿಂದ ಆತ್ವ ಹೇಳಬೇಕು. ಆದರೆ ರೈ ಶಬ್ದವಿಲ್ಲ. ಅದಕ್ಕೋಸ್ಕರ "ಏಕದೇಶವಿಕೃತಮನನ್ಯವತ್" ಪರಿಭಾಷೆಯಿಂದ ಆತ್ವ ಹೇಳುತ್ತಾನೆ. ಸ್ವಲ್ಪವಿಕಾರ ಬಂದುದರಿಂದ ಇದು ಬೇರೆಯಲ್ಲವೆಂದು ತಿಳಿದು ಆತ್ವಹೇಳಬೇಕು. ಪ್ರರಾಭ್ಯಾಮ್-ಪ್ರರಾಭಿಃ ಇತ್ಯಾದಿ ಹಲಾದಿಯಲ್ಲೆಲ್ಲಾ ಹೀಗೆ ಆತ್ವಬರುತ್ತದೆ. ಷಷ್ಠೀ ಬಹುವಚನದಲ್ಲಿ ನುಮನ್ನು ಬಾಧಿಸಿ ಪೂರ್ವವಿಪ್ರತಿಷೇಧದಿಂದ ಆಮಿಗೆ ನುಟ್. "ನಾಮಿ" ಸೂತ್ರದಿಂದ ದೀರ್ಘ. ಪ್ರರೀಣಾಮ್ (ಅಟ್‌ಕುಪ್ವಾಙ್-ಸೂತ್ರದಿಂದ ಣತ್ವ) ಪ್ರರಾಸು. ಇಣಿನಪರದಲ್ಲಿಲ್ಲದಿರುವುದರಿಂದ ಷತ್ವವಿಲ್ಲ. ||

ಶೋಭನಾ ನೌಃ ಯಸ್ಯ ತತ್. ಒಳ್ಳೇ ದೋಣಿಇರುವ ಕುಲ. ಸುನೌಶಬ್ದ. ಇದಕ್ಕೂ ನಪುಂಸಕದಲ್ಲಿ ಹ್ರಸ್ವ ಪ್ರಾಪ್ತವಾದರೆ ಹಿಂದಿನ ನಿಯಮದಿಂದ ಇಕಿನಲ್ಲಿ ಊಕಾರವೇ ಬರುತ್ತದೆ. ಸುನು ಎಂದು ಉಕಾರಾಂತಶಬ್ದವಾಗುತ್ತದೆ. ಮಧುಶಬ್ದದಂತೆ ರೂಪ. ಸುನು-ಸುನುನೀ-ಸುನೂನಿ ಇತ್ಯಾದಿ. || ಅಜಾದಿಯಲ್ಲಿ ನುಮಾಗಮ-ಸುನುನಾ-ಸುನುಭ್ಯಾಮ್-ಸುನುಭಿಃ ಇತ್ಯಾದಿ.

ಹೀಗೆ ಅಜಂತನಪುಂಸಕಲಿಂಗ ಶಬ್ದಗಳು ವಿವೃತವಾಗಿವೆ.

# ಅಥ ಹಲಂತ ಪುಲ್ಲಿಂಗ ಪ್ರಕರಣಮ್

### ಹಕಾರಾಂತ "ಲಿಹ್" ಶಬ್ದ. (ರುಚಿ ನೋಡುವವನು)

(...) ಲಿಹ=ಆಸ್ವಾದನೇ. ಲಿಹ್ ಧಾತುವಿಗೆ ಕ್ವಿಪ್ ಪ್ರತ್ಯಯ. ಕ್ವಿಪಿನಲ್ಲಿ ಎಲ್ಲವೂ ಲೋಪವಾಗುತ್ತದೆ. ಲಿಹ್ ಉಳಿಯುತ್ತದೆ. ಇದು ಕೃದಂತವಾದುದರಿಂದ "ಕೃತ್ತದ್ಧಿತ ಸಮಾಸಾಶ್ಚ" ಸೂತ್ರದಿಂದ ಪ್ರಾತಿಪದಿಕ ಸಂಜ್ಞೆಯನ್ನು ಹೊಂದುತ್ತದೆ. ವರ್ಣಸಮಾಮ್ನಾಯದಲ್ಲಿ ಹೇಳಿದ ವರ್ಣಕ್ರಮವನ್ನನುಸರಿಸಿ ಹಲಂತ ಶಬ್ದಗಳನ್ನು ಹೇಳುತ್ತಾನೆ. ಹಕಾರ ಮೊದಲಿರುವುದರಿಂದ ಹಕಾರಾಂತ ಶಬ್ದ ಮೊದಲು ಹೇಳಿದೆ. ಲಿಹ್+ಸ್ ಎಂದಿರುವಾಗ ಹಲಂತದ ಪರದಲ್ಲಿರುವುದರಿಂದ "ಹಲ್‌ಙ್ಯಾಭ್ಯೋ

ದೀರ್ಘಾತ್ "-ಸೂತ್ರದಿಂದ ಸುಲೋಪ. ಲಿಹ್ ಎಂದಿರುವಾಗ ಹಕಾರಕ್ಕೆ ಢಕಾರಾದೇಶ ಹೇಳುತ್ತಾನೆ.

(ಹಕಾರಕ್ಕೆ ಢಕಾರ ಹೇಳುವ ಸೂತ್ರ)

## ೨೫೨. ಹೋಢಃ ॥ ೮-೨-೩೧ ॥

**ಹಸ್ಯ ಢಃ ಸ್ಯಾಜ್ಝಲಿ ಪದಾಂತೇ ಚ । ಲಿಟ್, ಲಿಡ್ ॥ ಲಿಹೌ ।**
**ಲಿಹಃ ॥ ಲಿಡ್ಭ್ಯಾಮ್ । ಲಿಟ್ತ್ಸು, ಲಿಟ್ಸು ॥**

ಹಃ ಢಃ ॥ ದ್ವಿಪದ ಸೂತ್ರ. "ಝಲೋರ್ಝಲಿ" ಸೂತ್ರದಿಂದ "ಝಲಿ" "ಸ್ಕೋಸ್ಸಂಯೋಗಾದ್ಯೋರಂತೇ ಚ" ಸೂತ್ರದಿಂದ "ಅಂತೇ" ಅನುವೃತ್ತಿ. "ಪದಸ್ಯ" ಅಧಿಕಾರ. ಅದಕ್ಕೆ ಅಂತೇ ಎಂಬಲ್ಲಿ ಅನ್ವಯ. ಹಃ ಷಷ್ಠೀ, ಢಃ ಪ್ರಥಮಾ. **ಸೂತ್ರಾರ್ಥ.** ಹಕಾರಕ್ಕೆ ಝಲ್ ಪರದಲ್ಲಿರುವಾಗಲೂ ಪದಾಂತದಲ್ಲಿಯೂ ಢಕಾರಾದೇಶ ಬರುತ್ತದೆ. ಪ್ರಕೃತ ಲಿಹ್ ಶಬ್ದದಲ್ಲಿ ಹಕಾರ ಪದದ ಕೊನೆಯಲ್ಲಿರುವುದರಿಂದ ಅದಕ್ಕೆ ಢಕಾರಾದೇಶ. ಲಿಢ್. ಢಕಾರ ಪದದ ಕೊನೆಯಲ್ಲಿರುವುದರಿಂದ "ಝಲಾಂ ಜಶೋಂತೇ" ಸೂತ್ರದಿಂದ ಜಸ್ತ್ವ ಬಂದರೆ ಲಿಡ್ ಎಂದಾಗುತ್ತದೆ. ಅವಸಾನದಲ್ಲಿ ಡಕಾರರೂಪ ಝಲ್ ಇರುವುದರಿಂದ ಅದಕ್ಕೆ "ವಾವಸಾನೇ" ಸೂತ್ರದಿಂದ ಚರ್ ಆದೇಶ ಬಂದರೆ ಟಕಾರಬರುತ್ತದೆ. ಲಿಟ್. ಇದು ವಿಕಲ್ಪವಾದುದರಿಂದ ಲಿಡ್ ಎಂದೂ ಆಗುತ್ತೆ. ಇನ್ನು ಅಜಾದಿ ವಿಭಕ್ತಿಪರವಾದಾಗ ಯಾವಕಾರ್ಯವಿಶೇಷವೂ ಬರುವುದಿಲ್ಲ. ಕೇವಲ ವಿಭಕ್ತಿಸೇರಿಸುವುದು ಮಾತ್ರ. ಲಿಹೌ-ಲಿಹಃ ॥ ದ್ವಿ. ಲಿಹಂ ಲಿಹೌ-ಲಿಹಃ ॥ ತೃ-ಲಿಹಾ. ಭ್ಯಾಮ್‌ಪರವಾದಾಗ ಲಿಹ್ + ಭ್ಯಾಮ್ ಎಂದಿರುವಾಗ ಮೊದಲು "ಹೋಢಃ" ಸೂತ್ರದಿಂದ ಹಕಾರಕ್ಕೆ ಢಕಾರದೇಶ. ಝಲ್ ಪರವಾಗಿರುವುದೇ ನಿಮಿತ್ತ. ಲಿಢ್ + ಭ್ಯಾಮ್. ಇಲ್ಲಿ "ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಪದಸಂಜ್ಞೆಯಿರುವುದರಿಂದ "ಝಲಾಂ ಜಶೋಂತೇ" ಸೂತ್ರದಿಂದ ಢಕಾರಕ್ಕೆ ಜಸ್ತ್ವ. ಲಿಡ್ಭ್ಯಾಮ್. ಇನ್ನು ಹಲಾದಿಪ್ರತ್ಯಯ ಪರವಾದಾಗ ಹೀಗೆ ಈ ಎರಡು ಸೂತ್ರಗಳಿಂದ ಢತ್ವ, ಜಸ್ತ್ವ ಹೇಳಬೇಕು. ಲಿಡ್ಭಿಃ॥ ಚ-ಲಿಹೇ-ಲಿಡ್ಭ್ಯಾಮ್-ಲಿಡ್ಭ್ಯಃ॥ಪಂ ಲಿಹಃ-ಲಿಡ್ಭ್ಯಾಮ್ ಲಿಡ್ಭ್ಯಃ॥ ಷ-ಲಿಹಃ-ಲಿಹೋಃ-ಲಿಹಾಮ್ ॥ ಸ-ಲಿಹಿ ಲಿಹೋಃ. ಬಹುವಚನದಲ್ಲಿ ಲಿಹ್ + ಸು ಎಂದಿರುವಾಗ "ಹೋಢಃ" ಸೂತ್ರದಿಂದ ಹಕಾರಕ್ಕೆ ಢತ್ವ. ಲಿಢ್ + ಸು. ಜಸ್ತ್ವ. ಲಿಡ್ + ಸು. ಇಲ್ಲಿ ಡಕಾರದಪರದಲ್ಲಿ ಸಕಾರಬಂದುದರಿಂದ "ಡಃ ಸಿ ಧುಟ್" ಸೂತ್ರದಿಂದ ಸಕಾರಕ್ಕೆ ಧುಟಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬಂದರೆ ಲಿಡ್ + ಧ್‌ಸು. ಧಕಾರಕ್ಕೆ ಖರ್ ಪರವಾದುದರಿಂದ "ಖರಿಚ" ಸೂತ್ರದಿಂದ ಅದಕ್ಕೆ ಚರ್. ಸ್ಥಾನಸಾಮ್ಯದಿಂದ ತಕಾರವನ್ನು ನಿಮಿತ್ತೀಕರಿಸಿ ಧಕಾರಕ್ಕೆ ಚರ್ತ್ವ.

ಲಿಡ್+ತ್ಸು. ಲಿಟ್+ತ್ಸು=ಲಿಟ್ತ್ಸು. ಧುಡಾಗಮವು ವಿಕಲ್ಪವಾದುದರಿಂದ ಬಾರದಿದ್ದರೆ ಡಕಾರಕ್ಕೆ ಚರ್ತ್ವ ಬಂದು ಲಿಟ್ಸು ಎಂದಾಗುತ್ತದೆ. ಲಿಟ್ತ್ಸು-ಲಿಟ್ಸು ಹೀಗೆ ಎರಡುರೂಪ.

ಹಕಾರಾಂತ ದುಹ್ ಶಬ್ದ (ಹಾಲುಕರೆಯುವವನು)

ದುಹ=ಪ್ರಪೂರಣೇ. ಧಾತು. ಕ್ವಿಪ್ ಪ್ರತ್ಯಯ ಬಂದು ದುಹ್ ಶಬ್ದವಾಗಿದೆ. ದುಹ್+ಸ್ ಎಂದಿರುವಾಗ "ಹೋಢಃ" ಸೂತ್ರದಿಂದ ಹಕಾರಕ್ಕೆ ಢಕಾರ ಪ್ರಾಪ್ತವಾದರೆ ಅಪವಾದವಾಗಿ ಘಕಾರಾದೇಶ ಹೇಳುತ್ತಾನೆ.

(ಹಕಾರಕ್ಕೆ ಘಕಾರ ಹೇಳುವ ಸೂತ್ರ)

**೨೫೩. ದಾದೇರ್ಧಾತೋರ್ಘಃ ॥ ೮-೨-೩೨ ॥**

**ಝಲಿ ಪದಾಂತೇ ಚ ಉಪದೇಶೇ ದಾದೇರ್ಧಾತೋರ್ಹಸ್ಯ ಘಃ ॥**

ದಾದೇಃ, ಧಾತೋಃ, ಘಃ ॥ ತ್ರಿಪದಸೂತ್ರ. "ಝಲೋಝಲಿ" ಸೂತ್ರದಿಂದ "ಝಲಿ" "ಸ್ಕೋಃಸಂಯೋ"-ಸೂತ್ರದಿಂದ "ಅಂತೇ" ಅನುವೃತ್ತಿ "ಪದಸ್ಯ" ಅಧಿಕಾರ. ಸೂತ್ರದಲ್ಲಿರುವ "ಧಾತೋಃ" ಎಂಬ ಪದವು ಆವೃತ್ತವಾಗುತ್ತದೆ. ಎರಡುಬಾರಿ ಹೇಳಿಕೊಳ್ಳಬೇಕು. ಒಂದು "ಧಾತೋಃ" ಎಂಬುದಕ್ಕೆ "ಹೋಢಃ" ಸೂತ್ರದಿಂದ ಅನುವೃತ್ತವಾದ ಹಃ ಎಂಬಲ್ಲಿ ಅನ್ವಯ. ಧಾತುವಿನ ಅವಯವವಾದ ಹಕಾರಕ್ಕೆ ಎಂದರ್ಥವಾಗುತ್ತದೆ. ಇನ್ನೊಂದು "ಧಾತೋಃ" ಪದಕ್ಕೆ ದಾದೇಃ ಎಂಬಲ್ಲಿ ಅನ್ವಯ. ದಃ ಆದಿಃ, ದಾದಿಃ. ದಕಾರವೇ ಆದಿಯಾಗಿರುವದೆಂದರ್ಥ. ಧಾತುವೆಂದು ಹಿಂದಿನಿಂದಲೇ ಸಿಕ್ಕುತ್ತಿರುವಾಗ ತಿರುಗಿ ಹೇಳುವುದರಿಂದ ಉಪದೇಶಕಾಲದಲ್ಲಿಯೇ ದಕಾರಾದಿಯಾಗಿರಬೇಕೆಂದು ಸೂಚಿಸುತ್ತದೆ. ಕೆಲವು ಧಾತುಗಳು ಮೊದಲು ಪಾಣಿನಿಯಿಂದ ಉಚ್ಚರಿಸುವಾಗ ದಕಾರಾದಿಯಾಗಿದ್ದು ಕೊನೆಗೆ ಕಾರ್ಯಾಂತರ ಹೊಂದಿ ದಕಾರಾದಿಯಾಗದೇ ಇರುತ್ತವೆ. ಇನ್ನು ಕೆಲವು ಪಾಣಿನಿಯ ಉಪದೇಶಕಾಲದಲ್ಲಿ ದಕಾರಾದಿಯಾಗದೇ ಆಮೇಲೆ ಕಾರ್ಯಾಂತರದಿಂದ ದಕಾರಾದಿಯಾದ ಧಾತುವಾಗುತ್ತವೆ. ಇವೆರಡರಲ್ಲಿ ಮೊದಲನೆಯದಕ್ಕೆ ಮಾತ್ರ ಈ ಕಾರ್ಯ ಬರಬೇಕೆಂದು ಉಪದೇಶಕಾಲದಲ್ಲಿ ದಕಾರಾದಿಯಾಗಿರಬೇಕೆಂದು ಹೇಳಿದೆ. **ಸೂತ್ರಾರ್ಥ.** ಉಪದೇಶಕಾಲದಲ್ಲಿ ದಕಾರಾದಿಯಾದ ಧಾತುವಿನ ಹಕಾರಕ್ಕೆ ಝಲ್ ಪರವಾದಾಗ ಅಥವಾ ಪದಾಂತದಲ್ಲಿ ಘಕಾರಾದೇಶ ಬರುತ್ತದೆ. ಪ್ರಕೃತ ದುಹ್ ಎಂಬುದು ಉಪದೇಶಕಾಲದಲ್ಲಿಯೇ ದಕಾರಾದಿಯಾಗಿದೆ. ಇದರ ಹಕಾರ ಪದಾಂತದಲ್ಲಿರುವುದರಿಂದ ಅದಕ್ಕೆ ಘಕಾರಾದೇಶ. ಸುವಿಗೆ "ಹಲ್ ಙ್ಯಾಭ್ಯೋ"-ಸೂತ್ರದಿಂದ ಲೋಪ. ದುಘ್ ಎಂದಿರುವಾಗ ಆದಿಯ ದಕಾರಕ್ಕೆ ಧಕಾರಾದೇಶ ಹೇಳುತ್ತಾನೆ.

(ಧಾತುವಿನ ಬಶಿಗೆ ಭಷ್ ಹೇಳುವ ಸೂತ್ರ)

## ೨೫೩. ಏಕಾಚೋ ಬಶೋ ಭಷ್ ಝಷಂತಸ್ಯ ಸ್ಧ್ವೋಃ ॥ ೮-೨-೩೭ ॥

ಧಾತ್ವವಯವಸ್ಯೈಕಾಚೋ ಝಷಂತಸ್ಯ ಬಶೋ ಭಷ್ ಸೇ ಧ್ವೇ ಪದಾಂತೇ ಚ॥ ಧುಕ್, ಧುಗ್। ದುಹೌ। ದುಹಃ। ಧುಗ್ಭ್ಯಾಮ್। ಧುಕ್ಷು ॥

ಏಕಾಚಃ, ಬಶಃ, ಭಷ್, ಝಷಂತಸ್ಯ, ಸ್ಧ್ವೋಃ ॥ ಐದು ಪದವುಳ್ಳ ಸೂತ್ರ. ಏಕಃ ಅಚ್ ಯಸ್ಯ ಸಃ ಏಕಾಚ್. ತಸ್ಯ ಏಕಾಚಃ, ಒಂದು ಅಚ್ ಇರುವ ಸಮುದಾಯಕ್ಕೆ ಎಂದರ್ಥ. ಬಶಃ ಸ್ಥಾನ ಷಷ್ಠೀ. ಬಶ್‌ನ ಸ್ಥಾನಕ್ಕೆ ಎಂದರ್ಥ. ಸ್ ಚ ಧ್ವ ಚ ಸ್ಧ್ವ. ತಯೋಃ ಸ್ಧ್ವೋಃ. ಸಕಾರ, ಧ್ವಶಬ್ದ ಪರವಾದಾಗ ಎಂದರ್ಥ. "ದಾದೇರ್ಧಾತೋರ್ಘಃ" ಸೂತ್ರದಿಂದ "ಧಾತೋಃ" ಅನುವೃತ್ತವಾಗುತ್ತದೆ. ಏಕಾಚಿನಲ್ಲಿ ಅದಕ್ಕೆ ಅನ್ವಯ. ಸೂತ್ರಾರ್ಥ. ಧಾತುವಿನ ಅವಯವವಾದ ಝಷ್ ಕೊನೆಯಲ್ಲಿರುವ ಏಕಾಚು ಶಬ್ದದಲ್ಲಿರುವ ಬಶ್ ವರ್ಣಗಳಿಗೆ ಸಕಾರ, ಧ್ವ ಎಂಬುದು ಪರವಾದಾಗಲೂ ಪದಾಂತದಲ್ಲಿಯೂ ಭಷ್ ವರ್ಣ ಆದೇಶವಾಗಿ ಬರುತ್ತದೆ. "ಪದಸ್ಯ" ಅಧಿಕಾರ. ಅಂತೇ ಅನುವೃತ್ತಿ. ಪ್ರಕೃತ ಪದಾಂತ ವಿಷಯವಾಗಿದೆ. ಧಾತುವಿನ ಅವಯವವಾದ ಏಕಾಚೆಂದರೆ ದುಘ್. ಇದು ಏಕಾಚಾಗಿ ಝಷಂತವಾಗಿದೆ. ಘಕಾರ ಝಷ್. ಇದರ ಬಶ್ ದಕಾರ. ಅದಕ್ಕೆ ಭಷ್ ಅಂದರೆ ಸ್ಥಾನ ಸಾಮ್ಯದಿಂದ ಧಕಾರ ಬಂದರೆ ಧುಘ್ ಎಂದಾಗುತ್ತದೆ. ಪದಾಂತ ಘಕಾರಕ್ಕೆ ಹಿಂದಿನಂತೆ ಜಸ್ತ್ವದಿಂದ ಗಕಾರಾದೇಶ. ಅದಕ್ಕೆ ವಿಕಲ್ಪವಾಗಿ "ವಾವಸಾನೇ" ಸೂತ್ರದಿಂದ ಚರ್ತ್ವ ಬಂದರೆ ಕಕಾರಾದೇಶ. ಧುಕ್-ಧುಗ್. ಅಜಾದಿಯಲ್ಲಿ ಸೇರಿಸುವುದು ಮಾತ್ರ. ದುಹೌ-ದುಹಃ ॥ ದ್ವಿ-ದುಹಂ-ದುಹೌ-ದುಹಃ ॥ ತೃ-ದುಹಾ-ಭ್ಯಾಮಾದಿಗಳು ಪರವಾದಾಗ "ದಾದೇರ್ಧಾತೋರ್ಘಃ" ಸೂತ್ರದಿಂದ ಹಕಾರಕ್ಕೆ ಘಕಾರ. "ಏಕಾಚೋ ಬಶೋ"-ಸೂತ್ರದಿಂದ ದಕಾರಕ್ಕೆ ಧಕಾರ. ಧುಘ್+ಭ್ಯಾಮ್ ಎಂದಿರುವಾಗ "ಝಲಾಂ ಜಶೋಂತೇ" ಸೂತ್ರದಿಂದ ಘಕಾರಕ್ಕೆ ಜಸ್ತ್ವ. ಧುಗ್ಭ್ಯಾಮ್-ಧುಗ್ಭಿಃ । ಚ-ದುಹೇ-ಧುಗ್ಭ್ಯಾಮ್ ಧುಗ್ಭ್ಯಃ ॥ ಪಂ-ದುಹಃ-ಧುಗ್ಭ್ಯಾಮ್-ಧುಗ್ಭ್ಯಃ ॥ ಷ-ದುಹಃ-ದುಹೋಃ ದುಹಾಮ್ ॥ ಸ-ದುಹಿ ದುಹೋಃ-ಧುಕ್ಷು. ದುಹ್+ಸು ಎಂದಿರುವಾಗ ಹಿಂದಿನಂತೆ ಘಕಾರ, ಧಕಾರ ಆದೇಶ. ಧುಘ್+ಸು ಎಂದಾಗ ಜಸ್ತ್ವ. ಧುಗ್+ಸು. "ಖರಿಚ" ಸೂತ್ರದಿಂದ ಗಕಾರಕ್ಕೆ ಕಕಾರಾದೇಶ. ಧುಕ್+ಸು. "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷಕಾರಾದೇಶ. ಧುಕ್+ಷು. ಕ ಷ ಸೇರಿದರೆ ಕ್ಷ ಆಗುತ್ತದೆ. ಹೀಗೆ ಧುಕ್ಷು ಎಂದಾಗಿದೆ.

ಹಕಾರಾಂತ ದ್ರುಹ್ ಶಬ್ದ. (ದ್ರೋಹಮಾಡುವವನು)

ದ್ರುಹ ಜಿಘಾಂಸಾಯಾಮ್. ಧಾತು. ಕ್ವಿಪ್ ಪ್ರತ್ಯಯಬಂದರೆ ದ್ರುಹ್ ಎಂದಾಗುತ್ತದೆ. ಇದು ದಕಾರಾದಿಯಾದುದರಿಂದ ನಿತ್ಯವಾಗಿ ಹಿಂದಿನಂತೆ ಹಕಾರಕ್ಕೆ ಘತ್ವಬಂದರೆ ವಿಕಲ್ಪ ಹೇಳುತ್ತಾನೆ.

(ವಿಕಲ್ಪವಾಗಿ ಹಕಾರಕ್ಕೆ ಘಕಾರ ಹೇಳುವ ಸೂತ್ರ)

## ೨೫೫. ವಾ ದ್ರುಹಮುಹ ಷ್ಣುಹಷ್ಣಿಹಾಮ್ ॥೮-೨-೩೩॥

ಏಷಾಂ ಹಸ್ಯ ವಾ ಘಃ ಸ್ಯಾತ್ ಝಲಿ ಪದಾಂತೇ ಚ ॥ ಧ್ರುಕ್-ಧ್ರುಗ್ । ಧ್ರುಟ್-ಧ್ರುಡ್ । ದ್ರುಹೌ-ದ್ರುಹಃ । ಧ್ರುಗ್ಭ್ಯಾಮ್, ಧ್ರುಡ್ಭ್ಯಾಮ್ ॥ ಧ್ರುಕ್ಷು, ಧ್ರುಟ್ತ್ಸು ಧ್ರುಟ್ಸು ॥ ಏವಂ ಮುಕ್, ಮುಗ್ ಇತ್ಯಾದಿ ॥

ದ್ವಿಪದಸೂತ್ರ. "ದ್ರುಹಶ್ಚ, ಮುಹಶ್ಚ, ಷ್ಣುಹಶ್ಚ, ಷ್ಣಿಹ್ ಚ, ದ್ರುಹಮುಹಷ್ಣುಹಷ್ಣಿಹಃ. ತೇಷಾಮ್ ದ್ರುಹ....ಷ್ಣಿಹಾಮ್" ಹಿಂದಿನಂತೆ ಝಲಿ, ಪದಾಂತೇ ಅನುವೃತ್ತಿ. **ಸೂತ್ರಾರ್ಥ**. ದುಹ್. ಮುಹ್, ಷ್ಣುಹ್ ಷ್ಣಿಹ್ ಈ ನಾಲ್ಕರ ಹಕಾರಕ್ಕೆ ಝಲ್ ಪರವಾದಾಗಲೂ ಪದಾಂತದಲ್ಲಿಯೂ ವಿಕಲ್ಪವಾಗಿ ಘಕಾರ ಬರುತ್ತದೆ. ಹಿಂದಿನ ಸೂತ್ರಗಳಿಂದಲೇ ಹಃ, ಘಃ ಅನುವೃತ್ತಿ. ಪ್ರಕೃತ ಪದಾಂತವಾದುದರಿಂದ ದ್ರುಹಿನ ಹಕಾರಕ್ಕೆ ಘ ಬಂದರೆ ದ್ರುಘ್ ಎಂದಾಗುತ್ತದೆ. "ಏಕಾಚಃ" (ಸೂ ೨೫೫) ಸೂತ್ರದಿಂದ ದಕಾರಕ್ಕೆ ಧಕಾರಾದೇಶ. ಘಕಾರಕ್ಕೆ ಹಿಂದಿನಂತೆ ಜಸ್ತ್ವ. ವಿಕಲ್ಪ ಚರ್ತ್ವ. ಧ್ರುಕ್-ಧ್ರುಗ್. ಹಕಾರಕ್ಕೆ ಘಕಾರ ಬಾರದಿದ್ದರೆ ಸಾಮಾನ್ಯ ಸೂತ್ರವಾದ "ಹೋಢಃ" ಸೂತ್ರದಿಂದ ಢಕಾರಾದೇಶ. ಹಿಂದಿನಂತೇ ಈಗಲೂ "ಏಕಾಚಃ"-ಸೂತ್ರದಿಂದ ಆದಿದಕಾರಕ್ಕೆ ಧಕಾರಾದೇಶ. ಢಕಾರಕ್ಕೆ ಜಸ್ತ್ವ. ವಿಕಲ್ಪಚರ್ತ್ವ. ಧ್ರುಟ್-ಧ್ರುಡ್. ಹೀಗೆ ಪ್ರಥಮಾ ಸುವಿನಲ್ಲಿ ನಾಲ್ಕು ರೂಪ. ಅಜಾದಿಯಲ್ಲಿ ಕಾರ್ಯವಿಲ್ಲ. ದ್ರುಹೌ-ದ್ರುಹಃ ॥ ಲಿಹ್ ಶಬ್ದದಂತೇ ರೂಪ. ಭ್ಯಾಮಾದಿಗಳು ಪರವಾದಾಗ ಘಕಾರಬಂದರೆ ದುಹ್‌ಶಬ್ದದಂತೆ ರೂಪ. ಧ್ರುಗ್ಭ್ಯಾಮ್. ಹೀಗೆ ಎರಡೆರಡುರೂಪ. ಸಪ್ತಮೀ ಬಹುವಚನದಲ್ಲಿ ಘಕಾರ ಬಂದರೆ ದುಹ್‌ನಂತೇ ರೂಪ. ಧ್ರುಕ್ಷು. ಢಕಾರಬಂದಾಗ ಲಿಹ್ ಶಬ್ದದಲ್ಲಿ ಹೇಳಿದಂತೆ ವಿಕಲ್ಪವಾಗಿ "ಡಃ ಸಿಧುಟ್" ಸೂತ್ರದಿಂದ ಧುಟಾಗಮ. ಧ್ರುಟ್ತ್ಸು-ಧ್ರುಟ್ಸು. ಹೀಗೆಯೇ ಮುಹ್, ಶಬ್ದದರೂಪ. ಏಕಾಚಃ"-ಸೂತ್ರಕ್ಕೆ ಇಲ್ಲಿ ಪ್ರವೃತ್ತಿ ಇಲ್ಲ. ಮುಕ್-ಮುಗ್-ಮುಟ್-ಮುಡ್. ಭ್ಯಾಮಾದಿಗಳಲ್ಲಿ ಮುಗ್ಭ್ಯಾಮ್-ಮುಡ್ಭ್ಯಾಮ್. ಹೀಗೆ ಎರಡುರೂಪ. ಸಪ್ತಮೀ ಬಹುವಚನದಲ್ಲಿ ಮುಕ್ಷು-ಮುಟ್ತ್ಸು-ಮುಟ್ಸು. ಎಂದಾಗುತ್ತದೆ. ಮುಕ್-ಮೋಹಗೊಂಡವ.

ಷ್ಣುಹ, ಷ್ಣಿಹ ಈ ಎರಡುಧಾತುಗಳಿಗೆ ಕ್ವಿಪ್ ಬಂದರೆ ಷ್ಣುಹ್-ಷ್ಣಿಹ್ ಶಬ್ದ ವಾಗುತ್ತದೆ. ಇವುಗಳ ಹಕಾರಕ್ಕೂ ಘತ್ವವಿಕಲ್ಪವಾದುದರಿಂದ ಪ್ರಥಮಾಸುವಿನಲ್ಲಿ ನಾಲ್ಕುರೂಪ. ಆದಿಯ ಷಕಾರಕ್ಕೆ ಸಕಾರಾದೇಶ ಹೇಳುತ್ತಾನೆ.

(ಧಾತ್ವಾದಿಷಕಾರಕ್ಕೆ ಸಕಾರ ಹೇಳುವ ಸೂತ್ರ)

## ೨೫೬. ಧಾತ್ವಾದೇಃ, ಷಃ, ಸಃ ॥ ೬-೧-೬೪ ॥

**ಧಾತೋರಾದೇಃ ಷಸ್ಯ ಸಃ ಸ್ಯಾತ್ । ಸ್ನುಕ್-ಸ್ನುಗ್-ಸ್ನುಟ್-ಸ್ನುಡ್ । ಏವಂ ಸ್ನಿಕ್-ಸ್ನಿಗ್-ಸ್ನಿಟ್-ಸ್ನಿಡ್ ॥ ಇತ್ಯಾದಿ ॥**

ತ್ರಿಪದಸೂತ್ರ. ಷಃ ಷಷ್ಠೀ. ಸಃ ಪ್ರಥಮಾ. ಅಲ್ಲಿ ಅಕಾರ ಉಚ್ಚಾರಣಾರ್ಥ. ಅನುವೃತ್ತಿಯಾವುದೂ ಇಲ್ಲ. **ಸೂತ್ರಾರ್ಥ.** ಧಾತುವಿನ ಆದಿಯಲ್ಲಿರುವ ಷಕಾರಕ್ಕೆ ಸಕಾರಾದೇಶ ಬರುತ್ತದೆ. ಪ್ರಕೃತ ಎರಡು ಧಾತುಗಳ ಆದಿಯಲ್ಲಿಯೂ ಷಕಾರವಿರುವುದರಿಂದ ಅವಕ್ಕೆ ಸಕಾರ ಬರುತ್ತದೆ. ಸಕಾರ ಬಂದಾಗ ಣಕಾರ ಸ್ಥಾನದಲ್ಲಿ ನಕಾರ ಹೇಳಬೇಕು. ಷಕಾರವಿದ್ದುದರಿಂದ ಣಕಾರವಿತ್ತು. ತನ್ನ ನಿಮಿತ್ತಹೋದರೆ ತಾನೂ ಹೋಗುತ್ತದೆ. ಸ್ನು, ಸ್ನಿ ಎಂದಾಗುತ್ತದೆ. ಹಿಂದಿನಂತೆ ಪ್ರಥಮಾ ಸುವಿನಲ್ಲಿ ನಾಲ್ಕು ರೂಪ. ಸಪ್ತಮೀ ಸುವಿನಲ್ಲಿ ಮೂರುರೂಪ. ಭ್ಯಾಮಾದಿಗಳಲ್ಲಿ ಎರಡು ರೂಪ. ಸ್ನುಕ್=ವಾಂತಿಮಾಡುವವನು. ಸ್ನಿಕ್=ಸ್ನೇಹಿತ.

---

ಹಕಾರಾಂತ "ವಿಶ್ವವಾಹ್" ಶಬ್ದ. (ಪ್ರಪಂಚಧರಿಸಿದವ)

ವಿಶ್ವಂ ವಹತಿ ಇತಿ ವಿಶ್ವವಾಹ್. (ಪ್ರಪಂಚವನ್ನು ಧರಿಸುವವ) ವಹ್ ಧಾತುವಿಗೆ ಣ್ವಿಪ್ರತ್ಯಯ ಬಂದು ವಿಶ್ವವಾಹ್ ಎಂದಾಗಿದೆ. ಪ್ರಥಮಾ ಸುವಿನಲ್ಲಿ "ಹೋಢಃ" ಸೂತ್ರದಿಂದ ಹಕಾರಕ್ಕೆ ಢಕಾರಾದೇಶ. ಜಸ್ತ್ವ, ವಿಕಲ್ಪ ಚರ್ತ್ವ. ಹಲಂತ ಎಲ್ಲಾ ಶಬ್ದಗಳಲ್ಲಿಯೂ ಸುವಿಗೆ "ಹಲ್ಙ್ಯಾಭ್ಯೋ ದೀರ್ಘಾತ್"-ಸೂತ್ರದಿಂದ ಲೋಪವೆಂದು ತಿಳಿಯಬೇಕು. ವಿಶ್ವವಾಟ್-ವಿಶ್ವವಾಡ್. ವಿಶ್ವವಾಹ್+(ಶ್) ಅಸ್ ಎಂದಿರುವಾಗ ವಕಾರಕ್ಕೆ ಸಂಪ್ರಸಾರಣ ಹೇಳಲು ಮೊದಲು ಸಂಪ್ರಸಾರಣ ಸಂಜ್ಞೆಯನ್ನು ವಿವರಿಸುತ್ತಾನೆ.

(ಸಂಪ್ರಸಾರಣ ಸಂಜ್ಞೆ ಹೇಳುವ ಸೂತ್ರ

## ೨೫೭. ಇಗ್ಯಣಃ ಸಂಪ್ರಸಾರಣಮ್ ॥ ೧-೧-೪೫ ॥

**ಯಣಃ ಸ್ಥಾನೇ ಪ್ರಯುಜ್ಯಮಾನೋ ಯ ಇಕ್ ಸ ಸಂಪ್ರಸಾರಣ ಸಂಜ್ಞಃ ಸ್ಯಾತ್ ॥**

ಇಕ್, ಯಣಃ ಸಂಪ್ರಸಾರಣಮ್ ॥ ತ್ರಿಪದಸೂತ್ರ. ಯಣಃ ಸ್ಥಾನಷಷ್ಠೀ. **ಸೂತ್ರಾರ್ಥ.** ಯಣಿನಸ್ಥಾನದಲ್ಲಿ ಪ್ರಯೋಗಿಸಲ್ಪಡುವ ಇಕ್ಕಿಗೆ "ಸಂಪ್ರಸಾರಣ"

ವೆಂದು ಹೆಸರು. ಯ, ವ, ರ, ಲಗಳ ಸ್ಥಾನದಲ್ಲಿ ಬರುವ ಇ,ಉ ಋ ಌ ಗಳಿಗೆ ಸಂಪ್ರಸಾರಣವೆಂಬ ಸಂಜ್ಞೆ ಬರುತ್ತದೆ.

(ವಾಹ್ ಶಬ್ದಕ್ಕೆ ಸಂಪ್ರಸಾರಣ ಹೇಳುವ ಸೂತ್ರ)

## ೨೫೮. ವಾಹ ಊಠ್ ॥ ೬_೪_೧೩೨ ॥

ಭಸ್ಯ ವಾಹಃ ಸಂಪ್ರಸಾರಣಮೂಠ್ ॥

ವಾಹಃ ಊಠ್ । ದ್ವಿಪದಸೂತ್ರ. "ಭಸ್ಯ" ಅಧಿಕಾರ. "ವಸೋಃ ಸಂಪ್ರಸಾರಣಮ್" ಸೂತ್ರದಿಂದ "ಸಂಪ್ರಸಾರಣಮ್" ಅನುವೃತ್ತಿ. ಇದಕ್ಕೆ ಊಠ್ ಶಬ್ದದಲ್ಲಿ ಅನ್ವಯ. ಯಕಾರಾದಿ ಅಜಾದಿ ಪ್ರತ್ಯಯಪರವಾದಾಗ ಪೂರ್ವಕ್ಕೆ ಭಸಂಜ್ಞಾ ಹೇಳಿದೆ. ಸೂತ್ರಾರ್ಥ. ಭಸಂಜ್ಞೆಯಿರುವ ವಾಹಿಗೆ (ವಾಹ್ ಶಬ್ದಕ್ಕೆ) ಸಂಪ್ರಸಾರಣವಾದ ಊಠ್ ಬರುತ್ತದೆ. ಸಂಪ್ರಸಾರಣ ವೂಠೆಂದುದರಿಂದ ಯಣ್ ನಲ್ಲಿ ಸೇರಿದ ವಕಾರಕ್ಕೆಂದು ತಿಳಿಯಬೇಕು. ಸಂಪ್ರಸಾರಣ ಊಠೆಂದು ಹೇಳದಿದ್ದರೆ "ಅಲೋಽನ್ತ್ಯಸ್ಯ ಪರಿಭಾಷೆಯಿಂದ ಅಂತ್ಯವಾದ ಹಕಾರಕ್ಕೆ ಬರುತ್ತಿತ್ತು. ವಕಾರಕ್ಕೆ ಅಜಾದಿ ಪ್ರತ್ಯಯಪರವಾದುದರಿಂದ ಭಸಂಜ್ಞಾನಿಮಿತ್ತ ಊಠ್ ಬಂದರೆ ವಿಶ್ವ ಊ + ಆಹ್ + ಅಸ್ ಎಂದಾಗುತ್ತದೆ. ಈಗ ಪೂರ್ವರೂಪ ಹೇಳುತ್ತಾನೆ.

(ಸಂಪ್ರಸಾರಣ ಬಂದಾಗ ಪೂರ್ವರೂಪ ಹೇಳುವ ಸೂತ್ರ)

## ೨೫೯. ಸಂಪ್ರಸಾರಣಾಚ್ಚ ॥ ೬-೧-೧೦೮ ॥

ಸಂಪ್ರಸಾರಣಾದಚಿ ಪೂರ್ವರೂಪಮೇಕಾದೇಶಃ । "ಏತ್ಯೇಧತ್ಯೂಠ್ಸು" ಇತಿ ವೃದ್ಧಿಃ । ವಿಶ್ವೌಹಃ । ವಿಶ್ವೌಹೇತ್ಯಾದಿ ॥

ಸಂಪ್ರಸಾರಣಾತ್, ಚ ॥ ದ್ವಿಪದ ಸೂತ್ರ. "ಇಕೋಯಣಚಿ ಸೂತ್ರದಿಂದ "ಅಚಿ" "ಅಮಿ ಪೂರ್ವಃ" ಸೂತ್ರದಿಂದ "ಪೂರ್ವಃ" ಎಂಬ ಪದಗಳು ಅನುವೃತ್ತವಾಗುತ್ತವೆ. "ಏಕಃ ಪೂರ್ವಪರಯೋಃ" ಅಧಿಕಾರ. ಸೂತ್ರಾರ್ಥ. ಸಂಪ್ರಸಾರಣದ ಅಚ್ ಬಂದಾಗ ಪೂರ್ವಪರಸ್ಥಾನಕ್ಕೆ. (ಸಂಪ್ರಸಾರಣ ಮತ್ತು ಅಚಿಗೆ) ಪೂರ್ವರೂಪವು ಏಕಾದೇಶವಾಗಿ ಬರುತ್ತದೆ. ವಿಶ್ವ + ಊ + ಆಹ್ + ಅಸ್ ಎಂದಿರುವಾಗ ಸಂಪ್ರಸಾರಣ ಊ, ಅಚ್ ಆಕಾರ. ಊಕಾರಾಕಾರ ಇವೆರಡಕ್ಕೂ ಪೂರ್ವದ ರೂಪವಾದ ಊಕಾರವೇ ಬಂದರೆ ವಿಶ್ವ + ಊಹ್ + ಅಸ್ ಎಂದಾಗುತ್ತದೆ. ಇಲ್ಲಿ ಅಕಾರಕ್ಕೆ ಊಠ್ ಪರವಾದುದರಿಂದ ಗುಣವನ್ನು ಬಾಧಿಸಿ "ಏತ್ಯೇಧತ್ಯೂಠ್ಸು" ಸೂತ್ರದಿಂದ ವೃದ್ಧಿ. ಅ + ಊಗಳಿಗೆ ಔಕಾರ ವೃದ್ಧಿ. ವಿಶ್ವೌಹಸ್. ಸಕಾರಕ್ಕೆ ರುತ್ವವಿಸರ್ಗ. ವಿಶ್ವೌಹಃ ಎಂದಾಗುತ್ತದೆ. ಇನ್ನು ತೃತೀಯಾದಿಗಳಲ್ಲಿ ಅಜಾದಿ ಪ್ರತ್ಯಯ ಪರವಾದಾಗ ಭ ಸಂಜ್ಞೆಯಿರುವುದರಿಂದ ವಾಹಿನ ವಕಾರಕ್ಕೆ ಊಠ್.

ಪೂರ್ವರೂಪ, ವೃದ್ಧಿ ಬರುತ್ತವೆ. ತೃ-ವಿಶ್ವೌಹಾ. ವಿಶ್ವವಾಹ್+ಭ್ಯಾಮ್ ಎಂದಿರುವಾಗ "ಹೋಢಃ" ಸೂತ್ರದಿಂದ ಹಕಾರಕ್ಕೆ ಢತ್ವ, ಜಶ್ತ್ವದಿಂದ ಅದಕ್ಕೆ ಡಕಾರಾದೇಶ. ವಿಶ್ವವಾಡ್ಭ್ಯಾಮ್. ವಿಶ್ವವಾಡ್ಭಿಃ ॥ ಚ-ವಿಶ್ವೌಹೇ-ವಿಶ್ವವಾಡ್ಭ್ಯಾಮ್-ವಿಶ್ವವಾಡ್ಭ್ಯಃ ॥ ಪಂ-ವಿಶ್ವೌಹಃ-ವಿಶ್ವವಾಡ್ಭ್ಯಾಮ್ ವಿಶ್ವವಾಡ್ಭ್ಯಃ ॥ ಷ-ವಿಶ್ವೌಹಃ-ವಿಶ್ವೌಹೋಃ-ವಿಶ್ವೌಹಾಮ್ ॥ ಸ-ವಿಶ್ವೌಹಿ-ವಿಶ್ವೌಹೋಃ-ವಿಶ್ವವಾಟ್ತ್ಸು-ವಿಶ್ವವಾಟ್ಸು ॥

ಹಕಾರಾಂತ ಅನಡುಹ್ ಶಬ್ದ. (ಎತ್ತು)

ಅನಡುಹ್+ಸ್ ಎಂದಿರುವಾಗ ಸು ಆದಿ ಐದು ಸರ್ವನಾಮಸ್ಥಾನವಾದುದರಿಂದ ಅದು ಪರವಾದಾಗ ಆಮ್ ಹೇಳುತ್ತಾನೆ.

(ಚತುರ್ ಅನುಡುಹ್‌ಗಳಿಗೆ ಆಮ್ ಹೇಳುವ ಸೂತ್ರ.)

## ೨೬೦. ಚತುರನಡುಹೋರಾಮುದಾತ್ತಃ ॥ ೭-೧-೯೮ ॥

ಅನಯೋರಾಮ್ ಸ್ಯಾತ್ಸರ್ವನಾಮಸ್ಥಾನೇ ಪರೇ

ಚತುರನಡುಹೋಃ, ಆಮ್, ಉದಾತ್ತಃ ॥ ತ್ರಿಪದಸೂತ್ರ. "ಚತುರ್ ಚ ಅನುಡುಹ್ ಚ. ಚತುರನಡುಹೌ-ತಯೋಃ ಚತುರನಡುಹೋಃ" "ಇತೋಽತ್ಸರ್ವನಾಮಸ್ಥಾನೇ" ಸೂತ್ರದಿಂದ "ಸರ್ವನಾಮಸ್ಥಾನೇ" ಎಂಬುದಕ್ಕೆ ಅನುವೃತ್ತಿ. ಸೂತ್ರಾರ್ಥ. ಚತುರ್, ಅನುಡುಹ್ ಶಬ್ದಗಳಿಗೆ ಸರ್ವನಾಮಪರವಾದಾಗ ಆಮ್. ಬರುತ್ತದೆ. ಅದು ಉದಾತ್ತಸ್ವರದಿಂದ ಕೂಡಿರುತ್ತದೆ. ಸ್ವರಕ್ಕೆ ವೇದದಲ್ಲಿ ಪ್ರಯೋಜನ. ಪ್ರಕೃತ ಅನುಡುಹ್ ಶಬ್ದಕ್ಕೆ ಸರ್ವನಾಮಸ್ಥಾನಪರವಾದುದರಿಂದ ಆಮ್. ಆಮಿನಲ್ಲಿ ಮಕಾರ "ಹಲಂತ್ಯಮ್" ಸೂತ್ರದಿಂದ ಇತ್ ಸಂಜ್ಞೆ ಹೊಂದಿ ಲೋಪವಾಗುತ್ತದೆ. ಮಿತ್ತಾದುದರಿಂದ "ಮಿದಚೋಽಂತ್ಯಾತ್ಪರಃ" ಪರಿಭಾಷೆಯಿಂದ ಅನಡುಹ್ ಶಬ್ದದ ಅಂತ್ಯವಾದ ಅಚಿನ ಪರಕ್ಕೆ ಅದರ ಅವಯವವಾಗಿ ಬರುತ್ತದೆ. ಅಂತ್ಯ ಅಚ್ ಉಕಾರ. ಅದರ ಪರವಾಗಿ ಬಂದರೆ ಅನಡು+ಅಹ್+ಸ್ ಎಂದಾಗುತ್ತದೆ. ಯಣ್. ಅನಡ್ವಾಹ್+ಸ್ ಎಂದಿರುವಾಗ ನುಮಾಗಮ ಹೇಳುತ್ತಾನೆ.

(ಅನಡುಹ್ ಶಬ್ದಕ್ಕೆ ನುಮ್ ಹೇಳುವ ಸೂತ್ರ)

## ೨೬೧. ಸಾವನಡುಹಃ ॥ ೭-೧-೮೨ ॥

ಅಸ್ಯ ನುಮ್ ಸ್ಯಾತ್ ಸೌ ಪರೇ ॥ ಅನಡ್ವಾನ್ ॥

ಸೌ, ಅನಡುಹಃ ॥ ದ್ವಿಪದ ಸೂತ್ರ. "ಆಚ್ಛೀನದ್ಯೋರ್ನುಮ್" ಸೂತ್ರದಿಂದ "ನುಮ್" ಅನುವೃತ್ತಿ. ಅನುಡುಹಃ ಷಷ್ಠೀ. ಸೂತ್ರಾರ್ಥ. ಅನುಡುಹ್ ಶಬ್ದಕ್ಕೆ ಸುಪರವಾದಾಗ ನಮ್ ಆಗಮ ಬರುತ್ತದೆ. ನುಮಿನಲ್ಲಿ ಮಕಾರ "ಹಲಂ

ತ್ಯಮ್ " ಸೂತ್ರದಿಂದ ಇತ್ತಾಗುತ್ತದೆ. ಉಕಾರ ಉಚ್ಚಾರಣಾರ್ಥ. ನ್ ಉಳಿಯುತ್ತದೆ. ಇದೂ ಮಿತ್ತಾದುದರಿಂದ ಅಂತ್ಯವಾದ ಅಚ್ ಆಕಾರ. ಅದರ ಪರವಾಗಿ ಅವಯುವವಾಗಿ ಬಂದರೆ ಅನಡ್ವಾನ್ ಹ್ + ಸ್ ಎಂದಾಗುತ್ತದೆ. "ಹಲ್‌ಙ್ಯಾಭ್ಯೋ ದೀರ್ಘಾತ್ "–ಸೂತ್ರದಿಂದ ಸುಲೋಪ. ಅನಡ್ವಾನ್ ಹ್. ಸಂಯೋಗಾಂತಪದವಾದುದರಿಂದ "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ಹಕಾರಕ್ಕೆ ಲೋಪ. ಅನಡ್ವಾನ್. ಇಲ್ಲಿ ನಕಾರಕ್ಕೆ "ನ ಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ಲೋಪ ಬರುವುದಿಲ್ಲ. ಆ ಸೂತ್ರಕ್ಕೆ ಹಕಾರ ಲೋಪವಾದದ್ದು ಅಸಿದ್ಧವಾದುದರಿಂದ ಕೊನೆಯಲ್ಲಿ ಹಕಾರವಿದೆಯೆಂದೇ ತಿಳಿಯುತ್ತದೆ. ಆದ್ದರಿಂದ ಲೋಪವಿಲ್ಲ. ಅನಡ್ವಾನ್–ಅನಡ್ವಾಹೌ–ಅನಡ್ವಾಹಃ। ಸರ್ವನಾಮ ಸ್ಥಾನವಾದುದರಿಂದ ಆಮ್. ನುಮ್ ಸುವಿನಲ್ಲಿ ಮಾತ್ರ. ಸಂಬುದ್ಧಿ ಸುಪರವಾದಾಗ ಆಮಿಗೆ ಬದಲಾಗಿ ಅಮ್ ಆದೇಶ ಹೇಳುತ್ತಾನೆ.

(ಸಂಬುದ್ಧಿಯಲ್ಲಿ ಅಮ್ ಹೇಳುವ ಸೂತ್ರ)

## ೨೬೨. ಅಮ್ ಸಂಬುದ್ಧೌ ॥ ೭-೧-೯೯ ॥

**ಚತುರನಡುಹೋರಮ್‌ಸ್ಯಾತ್ ಸಂಬುದ್ಧೌ ॥ ಹೇ ಅನಡ್ವನ್ ಹೇ ಅನಡ್ವಾಹೌ। ಹೇ ಅನಡ್ವಾಹಃ। ಅನಡುಹಃ ॥ ಅನಡುಹಾ ॥**

ದ್ವಿಪದಸೂತ್ರ. ಹಿಂದಿನಸೂತ್ರದಿಂದ "ಚತುರನಡುಹೋಃ" ಅನುವೃತ್ತಿ. **ಸೂತ್ರಾರ್ಥ.** ಚತುರ್ ಅನಡುಹ್ ಶಬ್ದಗಳಿಗೆ ಸಂಬುದ್ಧಿ ಪರವಾದಾಗ ಅಮ್ ಆಗಮ ಬರುತ್ತದೆ. ಇದು ಆಮ್ ಬರುತ್ತಿರುವಾಗ ಹೇಳಿದುದರಿಂದ ಅದಕ್ಕೆ ಅಪವಾದ. ಅಂತ್ಯಾಚಿಗೆ ಪರವಾಗಿ ಬಂದರೆ ಅನಡು + ಅಹ್ + ಸ್. ಯಣ್. ಅನಡ್ವಹ್ + ಸ್. ಹಿಂದಿನಂತೇನುಮಾಗಮ. ಸುಲೋಪ, ಹಲೋಪ, ಹೇ. ಅನಡ್ವನ್ ಹ್ + ಸ್–ಅನಡ್ವನ್ ಹ್–ಅನಡ್ವನ್ । ಹೇ ಅನಡ್ವಾಹೌ–ಹೇ ಅನಡ್ವಾಹಃ. ದ್ವಿಅನಡ್ವಾಹಂ–ಅನಡ್ವಾಹೌ–ಅನಡುಹಃ. ಶಸ್ ಸರ್ವನಾಮಸ್ಥಾನವಲ್ಲದುದರಿಂದ ಆಮ್ ಇಲ್ಲ. ಇನ್ನು ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ತೃ॥ ಅನಡುಹಾ ಅನಡುಹ್ + ಭ್ಯಾಮ್ ಎಂದಿರುವಾಗ ಹಕಾರಕ್ಕೆ ದಕಾರಾದೇಶ ಹೇಳುತ್ತಾನೆ.

(ವಸ್ವಾದಿಗಳಿಗೆ ದಕಾರಾದೇಶ ಹೇಳುವ ಸೂತ್ರ)

## ೨೬೩. ವಸುಸ್ರಂಸುಧ್ವಂಸ್ವನಡುಹಾಂ ದಃ ॥ ೮-೨-೭೨ ॥

**ಸಾಂತವಸ್ವಂತಸ್ಯ ಸ್ರಂಸಾದೇಶ್ಚ ದಃ ಸ್ಯಾತ್ಪದಾಂತೇ। ಅನಡುದ್ಭ್ಯಾಮಿತ್ಯಾದಿ ॥ ಸಾಂತೇತಿ ಕಿಮ್? ವಿದ್ವಾನ್। ಪದಾಂತೇ ಕಿಮ್? ಸ್ರಸ್ತಮ್। ಧ್ವಸ್ತಮ್ ॥**

ವಸುಸ್ರಂಸುಧ್ವಂಸ್ವನಡುಹಾಂ, ದಃ ॥ ದ್ವಿಪದ ಸೂತ್ರ. ವಸು ಪ್ರತ್ಯಯ ವಾದುದರಿಂದ "ಪ್ರತ್ಯಯಗ್ರಹಣೇ ತದಂತಗ್ರಹಣಮ್" ಪರಿಭಾಷೆಯಿಂದ ವಸ್ವಂತ ತೆಗೆದುಕೊಳ್ಳಬೇಕು. "ಸಸಜುಷೋರುಃ" ಸೂತ್ರದಿಂದ "ಸ" ವೆಂಬುದು ಅನುವೃತ್ತವಾಗಿ ವಸುವಿಗೆ ಮಾತ್ರ ವಿಶೇಷಣ. ತದಂತಲಾಭ. ಸಾಂತವಾದ ವಸ್ವಂತಕ್ಕೆ ಎಂದರ್ಥ. ಸ್ರಂಸ್, ಧ್ವಂಸ್ ಯಾವಾಗಲೂ ಸಾಂತವಾದುದರಿಂದ ಅಲ್ಲಿ ವಿಶೇಷಣವಿಲ್ಲ. ಅನುಡುಹ್ ಶಬ್ದದಲ್ಲಿ ಸಕಾರವಿಲ್ಲದಿರುವುದರಿಂದ ಸಂಭವವೇ ಇಲ್ಲ. ವಸುವಿನಲ್ಲಿ ಕೆಲವುಕಡೆ ವಿಕಾರ ಬರುವುದರಿಂದ ಸಾಂತವೆಂದರೆ ಸಾರ್ಥಕವಾಗುತ್ತದೆ. "ಪದಸ್ಯ" ಅಧಿಕಾರ. ಅಂತೇ ಅನುವೃತ್ತಿ. **ಸೂತ್ರಾರ್ಥ.** ಸಕಾರಾಂತವಾದ ವಸ್ವಂತಕ್ಕೂ ಸ್ರಂಸ್ ಧ್ವಂಸ್ ಅನುಡುಹ್ ಶಬ್ದಗಳಿಗೂ ಪದಾಂತ ವಿಷಯದಲ್ಲಿ ದಕಾರಾದೇಶ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯಕ್ಕೆ ಆದೇಶ. ಪ್ರಕೃತ "ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಅನಡುಹ್ ಶಬ್ದಕ್ಕೆ ಭ್ಯಾಮ್ ಪರವಾದಾಗ ಪದಸಂಜ್ಞೆಯಿರುವುದರಿಂದ ಹಕಾರಕ್ಕೆ ದಕಾರಾದೇಶ. ಅನಡುದ್ಭ್ಯಾಮ್-ಅನುಡುದ್ಭಿಃ ॥ ಹೀಗೆ ಹಲಾದಿಯಲ್ಲಿ ದಕಾರಾದೇಶ. ಸೂತ್ರದಲ್ಲಿ ಪದದ ಪ್ರಯೋಜನ ಹೇಳುತ್ತಾನೆ. ಸಾಂತೇತಿಕಿಮ್" ಶಾಂತವಾದ ವಸ್ವಂತವೆಂದುದೇಕೆ? ವಿದ್ವಾನ್. ಇಲ್ಲಿ ಹಾಗೆ ಹೇಳಿರುವುದರಿಂದ ದತ್ವ ಬರುವುದಿಲ್ಲ. ವಿದ್ ಧಾತುವಿಗೆ ಶತೃ ಪ್ರತ್ಯಯ. ಅದಕ್ಕೆ ವಸು ಆದೇಶ ವಿದ್+ವಸ್= ವಿದ್ವಸ್ ಶಬ್ದ. ಪ್ರಥಮಾ ಸು ಪರವಾದಾಗ ಉಗಿತ್ತಾದುದರಿಂದ ನುಮ್. ವಿದ್ವನ್ ಸ್+ಸ್. "ಸಾಂತಮಹತಃ"-ಸೂತ್ರದಿಂದ ದೀರ್ಘ. ವಿದ್ವಾನ್ ಸ್ + ಸ್ ಹಲ್ಙ್ಯಾದಿ ಸೂತ್ರದಿಂದ ಸುಲೋಪ. "ಸಂಯೋಗಾಂತಸ್ಯಲೋಪಃ" ಸೂತ್ರದಿಂದ ಸಕಾರ ಲೋಪ. ವಿದ್ವಾನ್. ಇಲ್ಲಿ ವಸ್ವಂತವಾದರೂ ಸಾಂತವಾಗಿಲ್ಲ. ಆದುದರಿಂದ ದತ್ವವಿಲ್ಲ. ಪದಾಂತದಲ್ಲಿ ಮಾತ್ರ ದಕಾರಾದೇಶವೆಂದುದರಿಂದ ಸ್ರಸ್ತಮ್, ಎಂಬಲ್ಲಿ ಸಕಾರಕ್ಕೆ ದಕಾರವಿಲ್ಲ. ಸ್ರಂಸ್, ಧ್ವಂಸ್ ಧಾತುಗಳಿಗೆ ಕ್ತ ಪ್ರತ್ಯಯ ಬಂದಾಗ ಅನುನಾಸಿಕ ಲೋಪವಾಗಿ ಸ್ರಸ್ತಮ್, ಧ್ವಸ್ತಮ್ ಎಂದಾಗಿದೆ. ಇಲ್ಲಿ ಸ್ರಸ್, ಧ್ವಸ್, ಪದಾಂತವಲ್ಲ. ಕ್ತ ಸೇರಿದ ಮೇಲೆ ಪದವಾಗುತ್ತದೆ. ಆದ್ದರಿಂದ ದತ್ವವಿಲ್ಲ.

ಹಕಾರಾಂತ ತುರಾಸಾಹ್ ಶಬ್ದ. (ಇಂದ್ರ)

ತುರಾಸಾಹ್+ಸ್ ಎಂದಿರುವಾಗ "ಹಲ್ಙ್ಯಾಭ್ಯೋ"-ಸೂತ್ರದಿಂದ ಸುಲೋಪ. "ಹೋಢಃ" ಸೂತ್ರದಿಂದ ಹಕಾರಕ್ಕೆ ಢಕಾರಾದೇಶ. "ಝಲಾಂ ಜಶೋಂತೇ" ಸೂತ್ರದಿಂದ ಢಕಾರಕ್ಕೆ ಜಶ್ ಡಕಾರ. ತುರಾಸಾಡ್ ಎಂದಿರುವಾಗ ಸಕಾರಕ್ಕೆ ಷತ್ವ ಹೇಳುತ್ತಾನೆ.

(ಸಹ್ ಧಾತುವಿನ ಸಕಾರಕ್ಕೆ ಷತ್ವ ಹೇಳುವ ಸೂತ್ರ)

**೨೬೪. ಸಹೇಃ ಸಾಡಃ ಸಃ ॥ ೮-೩-೫೬ ॥**

**ಸಾಡ್ ರೂಪಸ್ಯ ಸಹೇಃ ಸಸ್ಯ ಮೂರ್ಧನ್ಯಾದೇಶಃ ಸ್ಯಾತ್ । ತುರಾಷಾಟ್, ತುರಾಷಾಡ್ ॥ ತುರಾಸಾಹೌ । ತುರಾಸಾಹಃ । ತುರಾಷಾಡ್ಭ್ಯಾಮ್ । ಇತ್ಯಾದಿ ॥**

ತ್ರಿಪದಸೂತ್ರ. । ಧಾತುವನ್ನು ನಿರ್ದೇಶಿಸುವಾಗ ಇಕ್ ಸೇರಿಸಿಯಾಗಲೀ (ಶ್) ತಿಪ್ ಸೇರಿಸಿಯಾಗಲೀ ಹೇಳಬೇಕೆಂದು "ಇಕ್ಶ್ತಿಪೌಧಾತುನಿರ್ದೇಶೇ" ವಾರ್ತಿಕವು ಹೇಳುತ್ತದೆ. ಆದರಂತೆ ಇಲ್ಲಿ ಸಹಿ ಎಂದು ಇಕ್‌ಸೇರಿಸಿ ಹೇಳಿದೆ. ಸಾಡಃ ಅದಕ್ಕೆ ವಿಶೇಷಣ. ಸಾಡ್ ಎಂಬ ರೂಪಹೊಂದಿರುವ ಸಹ್ ಧಾತುವಾಗ ಬೇಕೆಂದುದರಿಂದ ಪದಾಂತವಿಷಯದಲ್ಲಿ ಎಂದರ್ಥವಾಗುತ್ತದೆ. ಪದಾಂತದಲ್ಲಿ ಮಾತ್ರ ಢತ್ವ ಡತ್ವ ಬರುವುದು. "ಅಪದಾಂತಸ್ಯ ಮೂರ್ಧನ್ಯಃ" ಎಂದು ಅಧಿಕಾರ. ಮೂರ್ಧನಿ ಭವಃ ಮೂರ್ಧನ್ಯಃ. ಸಕಾರಕ್ಕೆ ಮೂರ್ಧನ್ಯ ಷಕಾರವೇ. ಸೂತ್ರಾರ್ಥ. ಸಾಡ್‌ರೂಪವನ್ನು ಹೊಂದಿದ ಸಹ್‌ಧಾತುವಿನ ಸಕಾರಕ್ಕೆ ಮೂರ್ಧನ್ಯಾದೇಶ ಬರುತ್ತದೆ. ಪದಾಂತದಲ್ಲಿ ಷತ್ವಬರುವುದೆಂದು ತಾತ್ಪರ್ಯ. ಪ್ರಕೃತ ಸಾಡ್‌ರೂಪ ಹೊಂದಿರುವುದರಿಂದ ಷತ್ವಬಂದರೆ ತುರಾಷಾಡ್. "ವಾವಸಾನೇ" ಸೂತ್ರದಿಂದ ಚರ್ತ್ವಬಂದರೆ ತುರಾಷಾಟ್. ಅಜಾದಿಯಲ್ಲಿ ವಿಶೇಷವಿಲ್ಲ. ತುರಾಸಾಹೌ-ತುರಾಸಾಹಃ । ಇತ್ಯಾದಿ. ಭ್ಯಾಮಾದಿಯಲ್ಲಿ ಪದಸಂಜ್ಞಾ ಇದ್ದು ಸಾಡ್‌ರೂಪ ಹೊಂದುವುದರಿಂದ ಷತ್ವ. ತುರಾಷಾಡ್ಭ್ಯಾಮ್-ತುರಾಷಾಡ್ಭಿಃ ॥ ಇತ್ಯಾದಿ. ಸಪ್ತಮೀ ಬಹುವಚನದಲ್ಲಿ ತುರಾಷಾಡ್‌ತ್ಸು-ತುರಾಷಾಟ್ಸು ಎಂದಾಗುತ್ತದೆ. ಧುಡಾಗಮವಿಕಲ್ಪ.

ವಕಾರಾಂತ ಸುದಿವ್ ಶಬ್ದ. (ಶುಭ್ರಾಕಾಶವುಳ್ಳದಿನ)

ಶೋಭನಾ ದ್ಯೌಃ ಯಸ್ಯ ಸಃ. ಸುದ್ಯೌಃ. ಒಳ್ಳೇ ಆಕಾಶವುಳ್ಳದಿನ ಮುಂತಾದವು. ಸುದಿವ್ + ಸ್ ಎಂದಿರುವಾಗ ವಕಾರಕ್ಕೆ ಔಕಾರದೇಶ ಹೇಳುತ್ತಾನೆ.

(ದಿವ್‌ಶಬ್ದಕ್ಕೆ ಔತ್ವ ಹೇಳುವ ಸೂತ್ರ).

**೨೬೫. ದಿವ ಔತ್ ॥ ೭-೧-೮೪ ॥**

**ದಿವಿತಿ ಪ್ರಾತಿಪದಿಕಸ್ಯ ಔತ್ಸ್ಯಾತ್ ಸೌ ಪರೇ ॥ ಸುದ್ಯೌಃ-ಸುದಿವೌ-ಸುದಿವಃ ॥**

ದಿವಃ ಔತ್ ॥ ದ್ವಿಪದಸೂತ್ರ. "ಸಾವನಡುಹಃ" ಸೂತ್ರದಿಂದ "ಸೌ" ಅನುವೃತ್ತವಾಗುತ್ತದೆ. ದಿವಃ ಷಷ್ಠೀ ಸೂತ್ರಾರ್ಥ. ದಿವ್ ಎಂಬ ಪ್ರಾತಿಪದಿಕಕ್ಕೆ ಸುಪರವಾದಾಗ ಔತ್ ಆದೇಶ ಬರುತ್ತದೆ. ಔತ್‌ನಲ್ಲಿ ತಕಾರ ಸುಖೋಚ್ಚಾರಣೆ ಗೋಸ್ಕರ ಹೇಳಿದೆ. ಆದುದರಿಂದ ಅನೇಕಾಲಲ್ಲ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯಕ್ಕೆ ಬರುತ್ತದೆ. ದಿವ್ ಎಂಬುದು ಅವ್ಯುತ್ಪನ್ನ ಪ್ರಾತಿಪದಿಕ. (ಉಣಾದಿಯಿಂದ ನಿಷ್ಪನ್ನವಾಗಿದೆ) ಸುದಿವ್ ಎಂಬಲ್ಲಿ ವಕಾರಕ್ಕೆ ಔಕಾರ ಬಂದರೆ

ಸುದಿ+ಔ+ಸ್. ಎಂದಾಗುತ್ತದೆ. ಯಣ್. ಸುದ್ಯ್ವಾಸ್. ಹಲಿನಪರದಲ್ಲಿ ಸು. ಬಾರದಿರುವುದರಿಂದ "ಹಲಙ್ಯಾಪ್"—ಸೂತ್ರದಿಂದ ಸುಲೋಪವಿಲ್ಲ. ರುತ್ವ. ವಿಸರ್ಗ. ಸುದ್ಯ್ವಾಃ. ಅಜಾದಿಯಲ್ಲಿ ಕಾರ್ಯವಿಲ್ಲ. ಸುದಿವೌ—ಸುದಿವಃ ॥ ದ್ವಿ. ಸುದಿವಂ-ಸುದಿವೌ ಸುದಿವಃ ॥ ತೃ ಸುದಿವಾ—ಸುದಿವ್+ಭ್ಯಾಮ್ ಎಂದಿರುವಾಗ. ವಕಾರಕ್ಕೆ ಉತ್ವ ಹೇಳುತ್ತಾನೆ.

(ದಿವಿಗೆ ಉತ್ವ ಹೇಳುವ ಸೂತ್ರ)

## ೨೬೬. ದಿವ ಉತ್ ॥ ೬-೧-೧೩೧ ॥

**ದಿವೋಽಂತಾದೇಶ ಉಕಾರಃ ಸ್ಯಾತ್ ಪದಾಂತೇ ॥ ಸದ್ಯುಭ್ಯಾಮಿತ್ಯಾದಿ ॥**

ದಿವಃ ಉತ್ ॥ ದ್ವಿಪದ ಸೂತ್ರ. "ಏಙಃ ಪದಾಂತಾದತಿ" ಸೂತ್ರದಿಂದ "ಪದಾಂತಾತ್" ಅನುವೃತ್ತವಾಗಿ ಸಪ್ತಮ್ಯಂತವಾಗಿ ವಿಪರಿಣತವಾಗುತ್ತದೆ. ಸೂತ್ರಾರ್ಥ. ದಿವ್ ಪ್ರಾತಿಪದಿಕಕ್ಕೆ ಪದಾಂತ ವಿಷಯದಲ್ಲಿ ಉಕಾರಾದೇಶ ಬರುತ್ತದೆ. "ಅಲೋಽಂತ್ಯಸ್ಯ" ಪರಿಭಾಷೆಯಿಂದ.ಅಂತ್ಯಕ್ಕೆಂದು ಲಬ್ಧವಾಗುವುದರಿಂದ ವೃತ್ತಿಯಲ್ಲಿ ಅಂತಾದೇಶವೆಂದು ಬರೆದಿರುತ್ತಾನೆ. ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಭ್ಯಾಮಾದಿಗಳಲ್ಲಿ ಪದಸಂಜ್ಞಾ. ವಕಾರಕ್ಕೆ ಉಕಾರಾದೇಶ ಬಂದರೆ ದಿ+ಉ+ಭ್ಯಾಮ್. ಯಣ್. ದ್ಯುಭ್ಯಾಮ್. ಹೀಗೆ ಹಲಾದಿ ವಿಭಕ್ತಿಯಲ್ಲಿ ಉಕಾರಾಂತಾದೇಶ. ದ್ಯುಭಿಃ ಇತ್ಯಾದಿ. ಸಪ್ತಮೀ ಬಹುವಚನದಲ್ಲಿ ದಿವ್+ಸು. ದಿ+ಉ+ಸು—ದ್ಯುಸು. "ಆದೇಶಪ್ರತ್ಯಯಯೋಃ" ಷತ್ವ । ದ್ಯುಷು ॥

ಇತಿ ವಾಂತಾಃ

---

ರೇಫಾಂತ ಚತುರ್ ಶಬ್ದ

ಯಾವ ವರ್ಣಾಂತವಾದುದು ಪ್ರಸಿದ್ಧವಾಗಿದೆಯೋ ಅಂಥಾ ಶಬ್ದಗಳನ್ನು ಹೇಳುತ್ತಾನೆ. ಯಕಾರಾಂತ ಶಬ್ದ ಪ್ರಸಿದ್ಧವಾಗಿಲ್ಲದಿರುವುದರಿಂದ ಹೇಳಿಲ್ಲ. ಚತುರ್ ಶಬ್ದ ಬಹುತ್ವಸಂಖ್ಯಾ ಹೇಳುವುದರಿಂದ ನಿತ್ಯ ಬಹುವಚನಾಂತ. ಚತುರ್+ಜಸ್ ಎಂದಿರುವಾಗ "ಚತುರನಡುಹೋಃ—" ಸೂತ್ರದಿಂದ ಆಮ್ ಆಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬಂದರೆ ಚತು+ಆರ್+ಅಸ್. ಯಣ್. ಚತ್ವಾರಸ್. ಸಕಾರಕ್ಕೆ ರುತ್ವ ವಿಸರ್ಗ. ಚತ್ವಾರಃ । ದ್ವಿ. ಶಸ್ ಸರ್ವನಾಮಸ್ಥಾನವಾಗದುದರಿಂದ ಆಮ್ ಇಲ್ಲ. ಚತುರ್+ಅಸ್ ಚತುರಃ ॥ ತೃ—ಚತುರ್ಭಿಃ ॥ ಚ—ಚತುರ್ಭ್ಯಃ ॥ ಪಂ-ಚತುರ್ಭ್ಯಃ ॥ ಷ. ಚತುರ್+ಆಮ್ ಎಂದಿರುವಾಗ ನುಡಾಗಮ ಹೇಳುತ್ತಾನೆ.

(ಆಮಿಗೆ ನುಡಾಗಮ ಹೇಳುವ ಸೂತ್ರ)

## ೨೬೭. ಷಟ್‌ಚತುರ್ಭ್ಯಶ್ಚ ॥ ೭-೧-೫೫ ॥

**ಷಟ್ ಸಂಜ್ಞಕೇಭ್ಯಃ ಚತುರಶ್ಚ ಪರಸ್ಯ ಆಮಃ ನುಡಾಗಮಃ ॥**

ಷಟ್‌ಚತುರ್ಭ್ಯಃ, ಚ ॥ ದ್ವಿಪದ ಸೂತ್ರ. "ಆಮಿ ಸರ್ವನಾಮ್ನಃ ಸುಟ್" ಸೂತ್ರದಿಂದ "ಆಮಿ" ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ನುಟ್ ಅನುವೃತ್ತಿ. ಷಟ್ ಚತುರ್ಭ್ಯಃ ಪಂಚಮೀ. ಷಟ್ ಶಬ್ದವಲ್ಲ. "ಷ್ಣಾಂತಾಷಟ್" ಸೂತ್ರದಿಂದ ಹೇಳಿದ ಷಟ್ ಸಂಜ್ಞೆಯುಳ್ಳಶಬ್ದ. ಸೂತ್ರಾರ್ಥ. ಷಟ್ ಸಂಜ್ಞೆಯಿರುವ ಶಬ್ದದ ಪರದಲ್ಲಿರುವ, ಚತುರ್ ಶಬ್ದದ ಪರದಲ್ಲಿರುವ ಆಮಿಗೆ ನುಡಾಗಮ ಬರುತ್ತದೆ. ನುಟಿನಲ್ಲಿ ಟಕಾರ ಇತ್. ಉಕಾರ ಉಚ್ಚಾರಣಾರ್ಥ. ನ್ ಉಳಿಯುತ್ತದೆ. ಟಿತ್ತಾದುದರಿಂದ ಆಮಿಗೆ ಆದ್ಯವಯವವಾಗಿ ಬರುತ್ತದೆ. ಚತುರ್+ನ್ ಆಮ್. ರೇಫದ ಪರವಾದ ನಕಾರಕ್ಕೆ ಣತ್ವ ಹೇಳುತ್ತಾನೆ.

(ನಕಾರಕ್ಕೆ ಣಕಾರಹೇಳುವ ಸೂತ್ರ)

## ೨೬೮. ರಷಾಭ್ಯಾಂ ನೋ ಣಃ ಸಮಾನಪದೇ ॥ ೮-೪-೧ ॥

**ಏಕಪದಸ್ಥಾಭ್ಯಾಂ ರೇಫಷಕಾರಾಭ್ಯಾಂ ಪರಸ್ಯ ನಸ್ಯ ಣಃ ಸ್ಯಾತ್ ॥**

ರಷಾಭ್ಯಾಂ-ನಃ-ಣಃ-ಸಮಾನಪದೇ ॥ ನಾಲ್ಕು ಪದವುಳ್ಳ ಸೂತ್ರ. ರಷಾಭ್ಯಾಂ ಪಂಚಮೀ. "ತಸ್ಮಾದಿತ್ಯುತ್ತರಸ್ಯ" ಪರಿಭಾಷೆಯಿಂದ ಅವ್ಯವಹಿತ ಪರಕ್ಕೆ ಕಾರ್ಯವೆಂದು ತಿಳಿಯುತ್ತದೆ. ನಃ ಷಷ್ಠೀ. ಣಃ ಪ್ರಥಮಾ. ಸಮಾನಪದವೆಂದರೆ ಅಖಂಡವಾದ ಒಂದೇಪದ. ಸಮಾಸ ಬಂದು ಒಂದು ಪದವಾಗಬಾರದು. ರಾಮನಾಮ. ಇದು ಒಂದುಪದವಲ್ಲ. ಸೂತ್ರಾರ್ಥ. ಒಂದೇಪದದಲ್ಲಿ ರೇಫಷಕಾರದ ಅವ್ಯವಹಿತ ಪರದಲ್ಲಿರುವ ನಕಾರಕ್ಕೆ ಣಕಾರಬರುತ್ತದೆ. ಚತುರ್‌ನಾಮ್ ಇದು ಒಂದೇ ಪದವಾದುದರಿಂದ ರೇಫದಪರದ ನಕಾರಕ್ಕೆ ಣಕಾರ ಬಂದರೆ 'ಚತುರ್ಣಾಮ್' ಎಂದಾಗುತ್ತದೆ. ಇಲ್ಲಿ ವಿಕಲ್ಪದ್ವಿತ್ವ ಹೇಳುತ್ತಾನೆ.

(ಯರ್‌ವರ್ಣಗಳಿಗೆ ದ್ವಿತ್ವ ಹೇಳುವ ಸೂತ್ರ)

## ೨೬೯. ಅಚೋರಹಾಭ್ಯಾಂ ದ್ವೇ ॥ ೮-೪-೪೬ ॥

**ಅಚಃ ಪರಭ್ಯಾಂ ರೇಫಹಕಾರಾಭ್ಯಾಂ ಪರಸ್ಯ ಯರೋ ದ್ವೇ ವಾ ಸ್ತಃ ॥ ಚತುರ್ಣ್ಣಾಮ್-ಚತುರ್ಣಾಮ್ ॥**

ಅಚಃ, ರಹಾಭ್ಯಾಂ, ದ್ವೇ ॥ ತ್ರಿಪದಸೂತ್ರ. ಅಚಃ, ರಹಾಭ್ಯಾಂ, ಎರಡೂ ಪಂಚಮ್ಯಂತವಾದುದರಿಂದ "ತಸ್ಮಾದಿತ್ಯುತ್ತರಸ್ಯ" ಪರಿಭಾಷೆ ಉಪಸ್ಥಿತವಾಗುತ್ತದೆ. "ಯರೋನುನಾಸಿಕೇ" ಸೂತ್ರದಿಂದ "ಯರಃ" "ವಾ" ಅನುವೃತ್ತಿ. ಸೂತ್ರಾರ್ಥ. ಅಚಿನ ಅವ್ಯವಹಿತಪರದಲ್ಲಿರುವ ರೇಫಹಕಾರಗಳ ಅವ್ಯವಹಿತ ಪರ

ದಲ್ಲಿರುವ ಯರ್ ವರ್ಣಗಳಿಗೆ ವಿಕಲ್ಪವಾಗಿ ದ್ವಿತ್ವ ಬರುತ್ತದೆ. ಚತುರ್ ಣಾಮ್ ಎಂದಿರುವಾಗ ಅಚ್ ತಕಾರದ ಮೇಲಿರುವ ಉಕಾರ. ಅದರ ಪರದಲ್ಲಿ ರೇಫವಿದೆ. ಅದರ ಪರದಲ್ಲಿ ಯರ್ ಣಕಾರ. ಅದಕ್ಕೆ ದ್ವಿತ್ವಬಂದರೆ ಚತುರ್ಣ್ಣಾಮ್. ಬಾರದಿದ್ದರೆ ಚತುರ್ಣಾಮ್ ಎಂದು ಎರಡು ರೂಪಗಳು. ಸಪ್ತಮೀ ಬಹುವಚನದಲ್ಲಿ ಸುಪ್ ಪರವಾದಾಗ ಚತುರ್ + ಸು ಎಂದಿರುವಾಗ ರೇಫಕ್ಕೆ ವಿಸರ್ಗಪ್ರಾಪ್ತವಾದರೆ ನಿಯಮಮಾಡುತ್ತಾನೆ.

(ರುವಿಗೆ ವಿಸರ್ಗ ಹೇಳುವ ಸೂತ್ರ)

## ೨೭೦. ರೋಃ ಸುಪಿ ॥ ೮-೩-೧೬ ॥

**ರೋ ರೇವ ವಿಸರ್ಗಃ ಸುಪಿ । ಷತ್ವಮ್ । ಷಸ್ಯ ದ್ವಿತ್ವೇ ಪ್ರಾಪ್ತೇ ॥**

ದ್ವಿಪದಸೂತ್ರ. "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ "ವಿಸರ್ಜನೀಯಃ" ಅನುವೃತ್ತಿ. **ಸೂತ್ರಾರ್ಥ.** ಸಪ್ತಮೀ ಬಹುವಚನ ಸು ಪರವಾದಾಗ ರುವಿನ ರೇಫಕ್ಕೆ ಮಾತ್ರ ವಿಸರ್ಗ ಬರುತ್ತದೆ. ಇದು ನಿಯಮ ಸೂತ್ರ. ಚತುರ್ ಸು ಎಂಬಲ್ಲಿ ವಿಸರ್ಗ ಬರುವಂತೇ ರುವಿನ ರೇಫವಿದ್ದಲ್ಲಿಯೂ ವಿಸರ್ಗ "ಖರವಸಾ"_ ಸೂತ್ರದಿಂದಲೇ ಬರುತ್ತಿರುವಾಗ ಪುನಃ ಈ ಸೂತ್ರ ಏಕೆ ಹೇಳಬೇಕು? "ಸಿದ್ಧೇ ಸತ್ಯಾರಭ್ಯಮಾಣೋ ವಿಧಿಃ ನಿಯಮಾಯ" ಒಂದು ಸೂತ್ರದಿಂದ ಒಂದು ಕಾರ್ಯ ಬರುತ್ತಿರುವಾಗ ಅದನ್ನೇ ಇನ್ನೊಂದು ಸೂತ್ರ ಹೇಳುವುದಾದರೆ ಅಲ್ಲಿ ನಿಯಮ ಹೇಳಬೇಕು. ಸಪ್ತಮೀ ಬಹುವಚನ ಪರವಾದಾಗ ಎಲ್ಲಿಯಾದರೂ ರೇಫಕ್ಕೆ ವಿಸರ್ಗ ಬರುವುದಾದರೆ "ಸಸಜುಷೋರುಃ" ಸೂತ್ರದಿಂದ ಬಂದ ರುವಿನ ಸಂಬಂಧಿ ರೇಫಕ್ಕೆ ಮಾತ್ರ ವಿಸರ್ಗ ಬರುತ್ತದೆ. ಇತರ ಸ್ವಾಭಾವಿಕ ರೇಫಕ್ಕೆ ಬರುವುದಿಲ್ಲ. ಪ್ರಕೃತ ಸ್ವಾಭಾವಿಕ ರೇಫ. ರು ಬಂದ ರೇಫವಲ್ಲ. ಆದುದರಿಂದ ರೇಫಕ್ಕೆ ವಿಸರ್ಗವಿಲ್ಲ. ಚತುರ್ + ಸು ಎಂದಿರುವಾಗ ಇಣಿನ ಪರದಲ್ಲಿ ಸಕಾರವಿರುವುದರಿಂದ "ಆದೇಶ ಪ್ರತ್ಯಯಯೋಃ" ಸೂತ್ರದಿಂದ ಷತ್ವ. ಚತುರ್ಷು. "ಅಚೋರಹಾಭ್ಯಾಂದ್ವೇ" ಸೂತ್ರದಿಂದ ರೇಫದಪರದಲ್ಲಿ ಯರಿನ ಷಕಾರವಿರುವುದರಿಂದ ದ್ವಿತ್ವಪ್ರಾಪ್ತವಾದರೆ ನಿಷೇಧ ಹೇಳುತ್ತಾನೆ.

(ಶರಿಗೆ ದ್ವಿತ್ವ ನಿಷೇಧ ಹೇಳುವ ಸೂತ್ರ)

## ೨೭೧. ಶರೋಽಚಿ ॥ ೮-೪-೪೯ ॥

**ಅಚಿ ಪರೇ ಶರೋ ನ ದ್ವೇಸ್ತಃ । ಚತುರ್ಷು ॥**

ಶರಃ ಅಚಿ । ದ್ವಿಪದಸೂತ್ರ. "ನಾದಿನ್ಯಾಕ್ರೋಶೇ ಪುತ್ರಸ್ಯ" ಸೂತ್ರದಿಂದ "ನ" "ಅಚೋರಹಾಭ್ಯಾಂದ್ವೇ" ಸೂತ್ರದಿಂದ "ದ್ವೇ" ಅನುವೃತ್ತವಾಗುತ್ತವೆ.

ಶರಃ ಷಷ್ಠೀ. **ಸೂತ್ರಾರ್ಥ.** ಶರ್‌ವರ್ಣಗಳಿಗೆ ಅಚ್‌ಪರವಾದಾಗ ದ್ವಿತ್ವ ಬರುವು ದಿಲ್ಲ. ಪ್ರಕೃತ ಷಕಾರರೂಪ ಶರಿಗೆ ಉಕಾರರೂಪ ಅಚ್‌ಪರವಾದುದರಿಂದ ದ್ವಿತ್ವ ಬರುವುದಿಲ್ಲ. ಚತುಷ್ರ್ಷು ಎಂದೇ ಇರುತ್ತದೆ.

ಮಕಾರಾಂತ "ಪ್ರಶಾಮ್" ಶಬ್ದ. (ಶಾಂತನು)

ಪ್ರ ಉಪಸರ್ಗಸಹಿತವಾದ ಶಮು (ಉಪಶಮೇ) ಧಾತುವಿಗೆ ಕ್ವಿಪ್ ಬಂದು ದೀರ್ಘಬಂದಿದೆ. ಪ್ರಶಾಮ್+ಸ್ ಎಂದಿರುವಾಗ "ಹಲ್‌ಙ್ಯಾಭ್ಯೋ"—ಸೂತ್ರ ದಿಂದ ಸುಲೋಪ. ಪ್ರಶಾಮ್ ಎಂದಿರುವಾಗ ಮಕಾರಕ್ಕೆ ನಕಾರಾದೇಶ ಹೇಳುತ್ತಾನೆ.

(ಮಕಾರಕ್ಕೆ ನಕಾರ ಹೇಳುವ ಸೂತ್ರ)

## ೨೭೨. ಮೋ ನೋ ಧಾತೋಃ ॥ ೮-೨-೬೪ ॥

**ಧಾತೋರ್ಮಸ್ಯ ನಃ ಸ್ಯಾತ್ಪದಾಂತೇ । ಪ್ರಶಾನ್ ॥**

ಮಃ, ನಃ ಧಾತೋಃ ॥ ತ್ರಿಪದಸೂತ್ರ. ಮಃ ಷಷ್ಠೀ. ನಃ ಪ್ರಥಮಾ. "ಪದಸ್ಯ" ಅಧಿಕಾರ. "ಸ್ಕೋಃ ಸಂಯೋಗಾದ್ಯೋರಂತೇ ಚ" ಸೂತ್ರದಿಂದ "ಅಂತೇ" ಅನುವೃತ್ತಿ. ಮಃ ಧಾತೋಃ ಎಂಬುದಕ್ಕೆ ವಿಶೇಷಣ. ತದಂತಲಾಭ. **ಸೂತ್ರಾರ್ಥ.** ಮಕಾರಾಂತ ಧಾತುವಿಗೆ ಪದಾಂತದಲ್ಲಿ ನಕಾರಾದೇಶ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯವಾದ ಮಕಾರಕ್ಕೆ ಆದೇಶ. ಪ್ರಶಾನ್. ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಪ್ರಶಾ-ಮೌ-ಪ್ರಶಾಮಃ ಇತ್ಯಾದಿ. ಭ್ಯಾಮಾದಿಗಳಲ್ಲಿ ಪದಸಂಜ್ಞಾ ಇರುವುದರಿಂದ ಮಕಾರಕ್ಕೆ ನಕಾರಾದೇಶ. ಪ್ರಶಾನ್ಭ್ಯಾಮ್—ಇತ್ಯಾದಿ. ಸಪ್ತಮೀ ಬಹುವಚನದಲ್ಲಿ ಪ್ರಶಾನ್ಸು ॥

ಮಕಾರಾಂತ "ಕಿಮ್" ಶಬ್ದ. (ಯಾರು?)

ಇದು ಸರ್ವನಾಮಶಬ್ದ. ಕಿಮ್+ಸ್ ಎಂದಿರುವಾಗ ಪ್ರಕೃತಿಗೆ ಆದೇಶ ಹೇಳುತ್ತಾನೆ.

(ಕಿಮಿಗೆ ಕಾದೇಶ ಹೇಳುವ ಸೂತ್ರ)

## ೨೭೩. ಕಿಮಃ ಕಃ ॥ ೭-೨-೧೦೩ ॥

**ಕಿಮಃ ಕಃ ಸ್ಯಾದ್ವಿಭಕ್ತೌ । ಕಃ-ಕೌ-ಕೇ । ಇತ್ಯಾದಿ । ಶೇಷಂ ಸರ್ವವತ್ ॥**

ದ್ವಿಪದಸೂತ್ರ । ಕಿಮಃ ಷಷ್ಠೀ. "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ವಿಭಕ್ತೌ" ಅನುವೃತ್ತಿ. ಸೂತ್ರಾರ್ಥ. ಕಿಮ್ ಶಬ್ದಕ್ಕೆ ವಿಭಕ್ತಿಪರವಾದಾಗ ಕ

ಎಂಬ ಆದೇಶ ಬರುತ್ತದೆ. ವಿಭಕ್ತಿಯೆಂದುದರಿಂದ ೨೧ ವಿಭಕ್ತಿಗಳಲ್ಲಿಯೂ ಈ ಆದೇಶ ಬರುವುದಲ್ಲದೆ ವಿಭಕ್ತಿ ಸಂಜ್ಞೆಯುಳ್ಳ ಇತರ ಪ್ರತ್ಯಯವಿರುವಾಗಲೂ ಕಾದೇಶ ಬರುತ್ತದೆ. ಕ ಅನೇಕಾಲಾದುದರಿಂದ "ಅನೇಕಾಲ್‌ಶಿತ್ಸರ್ವಸ್ಯ" ಸೂತ್ರದಿಂದ ಸರ್ವಾದೇಶ. ಕ+ಸ್. ಸಕಾರಕ್ಕೆ ರುತ್ವ ವಿಸರ್ಗ ಕಃ. ಇನ್ನು ಇದು ಅಕಾರಾಂತವಾಗಿ ಸರ್ವನಾಮ ಸಂಜ್ಞೆ ಹೊಂದಿರುವುದರಿಂದ ಸರ್ವಶಬ್ದದಂತೇ ರೂಪಹೊಂದುತ್ತದೆ.

ಪ್ರ–ಕಃ । ಕೌ । ಕೇ ॥ ದ್ವಿ–ಕಮ್ । ಕೌ । ಕಾನ್ ॥ ತೃ–ಕೇನ । ಕಾಭ್ಯಾಮ್ । ಕೈಃ ॥ ಚ–ಕಸ್ಮೈ । ಕಾಭ್ಯಾಮ್ । ಕೇಭ್ಯಃ ॥ ಪಂ–ಕಸ್ಮಾತ್ ಕಾಭ್ಯಾಮ್ । ಕೇಭ್ಯಃ ॥ ಷ–ಕಸ್ಯ । ಕಯೋಃ । ಕೇಷಾಮ್ ॥ ಸ–ಕಸ್ಮಿನ್ । ಕಯೋಃ । ಕೇಷು ॥

---

ಮಕಾರಾಂತ "ಇದಮ್" ಶಬ್ದ. (ಇವನು)

ಇದೂ ಸರ್ವನಾಮ ಶಬ್ದ. ಇದಮ್+ಸ್ ಎಂದಿರುವಾಗ ತ್ಯದಾದಿಗಳಲ್ಲಿ ಸೇರಿರುವುದರಿಂದ "ತ್ಯದಾದೀನಾಮಃ" ಸೂತ್ರದಿಂದ ಮಕಾರಕ್ಕೆ ಅಕಾರ ಪ್ರಾಪ್ತವಾದರೆ ಅಪವಾದ ಹೇಳುತ್ತಾನೆ.

(ಇದಮ್ ಶಬ್ದಕ್ಕೆ ಮಕಾರ ಹೇಳುವ ಸೂತ್ರ)

## ೨೭೪. ಇದಮೋ ಮಃ ॥ ೭-೨-೧೦೮ ॥

**ಇದಮೋ ಮಸ್ಯ ಮಃ ಸ್ಯಾತ್ಸೌ ಪರೇ ॥ ತ್ಯದಾದ್ಯತ್ವಾಪವಾದಃ ॥**

ಇದಮಃ, ಮಃ ॥ ದ್ವಿಪದ ಸೂತ್ರ. "ತದೋಃ ಸಃ ಸಾವನಂತ್ಯಯೋಃ" ಸೂತ್ರದಿಂದ "ಸೌ" ಅನುವೃತ್ತಿ. ಸೂತ್ರಾರ್ಥ. ಇದಮ್ ಶಬ್ದಕ್ಕೆ ಸು ವಿಭಕ್ತಿ ಪರವಾದಾಗ ಮಕಾರಾದೇಶ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯಮಕಾರಕ್ಕೆ ಆದೇಶ. ಮಕಾರಕ್ಕೆ ಮಕಾರ ಏಕೆ ಹೇಳಬೇಕು? ವ್ಯರ್ಥವಲ್ಲವೇ? ಅಂದರೆ "ತ್ಯದಾದೀನಾಮಃ" ಸೂತ್ರದಿಂದ ಬರುವ ಅಕಾರಕ್ಕೆ ಅಪವಾದ. ಮಕಾರ ಹೇಳದಿದ್ದರೆ ಅಕಾರ ಬರುತ್ತಿತ್ತು. ಅಕಾರವನ್ನು ಬಾರದಂತೆ ಮಾಡುವುದೇ ಮಕಾರಕ್ಕೆ ಮಕಾರ ಹೇಳುವುದರ ತಾತ್ಪರ್ಯ. ಇದಮ್+ಸ್ ಎಂದೇ ಇರುವಾಗ ಪ್ರಕೃತಿ ಅವಯವಕ್ಕೆ ಆದೇಶ ಹೇಳುತ್ತಾನೆ.

(ಇದಮಿನ ಇದಿಗೆ ಆದೇಶ ಹೇಳುವ ಸೂತ್ರ)

## ೨೭೫. ಇದೋಽಯ್ ಪುಂಸಿ ॥ ೭-೨-೧೧೧ ॥

**ಇದಮ ಇದೋಽಯ್ ಸ್ಯಾತ್ ಸೌ ಪುಂಸಿ । ಅಯಮ್ । ತ್ಯದಾದ್ಯತ್ವೇ ।**

ಇದಃ, ಅಯ್, ಪುಂಸಿ ॥ ತ್ರಿಪದಸೂತ್ರ. "ಯಃ ಸೌ" ಸೂತ್ರದಿಂದ "ಸೌ" ಅನುವೃತ್ತಿ. ಸಪ್ತಮಿಯಾದುದರಿಂದ ಸುಪರವಾದಾಗ ಎಂದರ್ಥ. ಇದಃ ಸ್ಥಾನಾರ್ಥಕಷಷ್ಠ್ಯಂತಪದ. "ಇದಮೋ ಮಃ" ಸೂತ್ರದಿಂದ "ಇದಮಃ" ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಪುಲ್ಲಿಂಗದಲ್ಲಿ ಇದಮ್‌ಶಬ್ದದ ಇದ್ ಎಂಬುದಕ್ಕೆ ಸುಪರವಾದಾಗ "ಅಯ್" ಆದೇಶ ಬರುತ್ತದೆ. ಅನೇಕಾಲಾದುದರಿಂದ ಇದ್ ಸಂಪೂರ್ಣಕ್ಕೆ ಆದೇಶ. ಇದಮ್ + ಸ್=ಅಯ್ + ಅಮ್ + ಸ್=ಅಯಮ್ + ಸ್. "ಹಲ್‌ಙ್ಯಾಭ್ಯೋ—" ಸೂತ್ರದಿಂದ ಸುಲೋಪ. ಅಯಮ್. ಇದಮ್ + ಔ ಎಂದಿರುವಾಗ "ತ್ಯದಾದೀನಾಮಃ" ಸೂತ್ರದಿಂದ ಅತ್ವಬಂದರೆ ಇದ + ಅ + ಔ ಎಂದಾಗುತ್ತದೆ. ಆಗ ಪರರೂಪ ಹೇಳುತ್ತಾನೆ.

(ಗುಣಪರವಾದಾಗ ಪರರೂಪ ಹೇಳುವ ಸೂತ್ರ)

## ೨೭೩. ಅತೋ ಗುಣೇ ॥ ೬-೧-೯೭ ॥

**ಅಪದಾಂತಾದತೋ ಗುಣೇ ಪರರೂಪಮೇಕಾದೇಶಃ ॥**

ಅತಃ, ಗುಣೇ ॥ ದ್ವಿಪದಸೂತ್ರ. "ಏಙಿಪರರೂಪಮ್" ಸೂತ್ರದಿಂದ "ಪರರೂಪಮ್" "ಉಸ್ಯಪದಾಂತಾತ್" ಸೂತ್ರದಿಂದ "ಅಪದಂತಾತ್" ಅನುವೃತ್ತಿ. "ಏಕಃ ಪೂರ್ವಪರಯೋಃ" ಅಧಿಕಾರ. ಅತಃ ಪಂಚಮೀ. **ಸೂತ್ರಾರ್ಥ.** ಅಪದಾಂತವಾದ (ಪದಾಂತದಲ್ಲಿ ಇಲ್ಲದ) ಅಕಾರದ ಪರದಲ್ಲಿ ಗುಣವಿರುವಾಗ (ಅ–ಏ–ಓ) ಪರರೂಪವು ಏಕಾದೇಶವಾಗಿ ಬರುತ್ತದೆ. ಅಕಾರಕ್ಕೂ ಗುಣಕ್ಕೂ ಒಂದೇ ಪರರೂಪ ಏಕಾದೇಶ. ಪ್ರಕೃತ ಇದ ಎಂಬಲ್ಲಿರುವ ದಕಾರದ ಮೇಲಿನ ಅಕಾರವು ಅಪದಾಂತ ಆಕಾರ. ಇದಕ್ಕೆ ಅಕಾರರೂಪ ಗುಣ ಪರದಲ್ಲಿ ಇದೆ. ಆ ಅಗಳಿಗೆ ಒಂದೇ ಪರದ ಅಕಾರ ಆದೇಶ. ಇದ + ಔ ಎಂದಾಗುತ್ತದೆ. ಈಗ ದಕಾರಕ್ಕೆ ಮಕಾರಾದೇಶ ಹೇಳುತ್ತಾನೆ.

ಇದಮಿನ ದಕಾರಕ್ಕೆ ಮಕಾರ ಹೇಳುವ ಸೂತ್ರ)

## ೨೭೭. ದಶ್ಚ ॥ ೭-೨-೧೦೯ ॥

**ಇದಮೋ ದಸ್ಯ ಮಃ ಸ್ಯಾದ್ವಿಭಕ್ತೌ । ಇಮೌ । ಇಮೇ । ತ್ಯದಾದೇಃ ಸಂಬೋಧನಂ ನಾಸ್ತೀತ್ಯುತ್ಸರ್ಗಃ ॥ ಇಮಂ-ಇಮೌ-ಇಮಾನ್ ॥**

ದಃ ಚ ॥ ದ್ವಿಪದ ಸೂತ್ರ. "ಇದಮೋಮಃ" ಸೂತ್ರದಿಂದ "ಮಃ" "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ವಿಭಕ್ತೌ" ಅನುವೃತ್ತಿ. ದಃ ಷಷ್ಠೀ. **ಸೂತ್ರಾರ್ಥ.** ಇದಮ್ ಶಬ್ದದ ದಕಾರಕ್ಕೆ ವಿಭಕ್ತಿ ಪರವಾದಾಗ ಮಕಾರಾದೇಶ ಬರುತ್ತದೆ. ಪ್ರಕೃತ ವಿಭಕ್ತಿ ಪರವಾದುದರಿಂದ ದಕಾರಕ್ಕೆ ಮಕಾರ ಬಂದರೆ

ಇಮ+ಔ. "ವೃದ್ಧಿರೇಚಿ" ಸೂತ್ರದಿಂದ ವೃದ್ಧಿ. ಇಮೌ. ಇದಮ್+ಜಸ್ ಎಂದಿರುವಾಗ "ತ್ಯದಾದೀನಾಮಃ" ಸೂತ್ರದಿಂದ ಮಕಾರಕ್ಕೆ ಅಕಾರಾದೇಶ. ಇದ+ಅ+ಜಸ್. "ಅತೋಗುಣೇ" ಪರರೂಪ. ಇದ+ಜಸ್. ಅಕಾರದ ಪರದಲ್ಲಿ ಜಸ್ ಇರುವುದರಿಂದ "ಜಸಃ ಶೀ" ಸೂತ್ರದಿಂದ ಜಸಿಗೆ ಶೀ ಭಾವ. ಶೀಯಲ್ಲಿ ಶಕಾರ ಇತ್. ಇದ+ಈ. "ಆದ್ಗುಣಃ" ಇದೇ. "ದಶ್ಚ" ಸೂತ್ರದಿಂದ ದಕಾರಕ್ಕೆ ಮಕಾರಾದೇಶ. ಇಮೇ. "ತ್ಯದಾದೇರಿತಿ" ॥ ತ್ಯದ್ ಮುಂತಾದ ಶಬ್ದಗಳಲ್ಲಿ ಸಾಮಾನ್ಯವಾಗಿ ಸಂಬೋಧನೆಯಿಲ್ಲ. ಉತ್ಸರ್ಗಃ ಅಂದರೆ ಸಾಮಾನ್ಯವಾಗಿ ಎಂದರ್ಥ. ಹೇ ಸಃ ಎಂದು ಭಾಷ್ಯದಲ್ಲಿ ಪ್ರಯೋಗಿಸಿರುವುದರಿಂದ ಸಂಬೋಧನವಿರುವುದಾದರೂ ಬಹಳ ವಿರಳ. ಪ್ರಕೃತ ಇದಮ್ ತ್ಯದಾದಿಯಲ್ಲಿರುವುದರಿಂದ ಸಂಬೋಧನವಿಲ್ಲ. ದ್ವಿತೀಯಾದಲ್ಲಿ ಅಮ್ ಪರವಾದಾಗ ಇದಮ್+ಅಮ್ ಎಂದಿರುವಾಗ ತ್ಯದಾದ್ಯತ್ವ ಪರರೂಪ. ದಕಾರಕ್ಕೆ ಮಕಾರ. ಇಮ+ಅಮ್. "ಅಮಿಪೂರ್ವಃ" ಇಮಮ್. ಇಮೌ. (ಹಿಂದಿನಂತೇ) ಶಸಿನಲ್ಲಿ ಇದಮ್+ಅಸ್. ಹಿಂದಿನಂತೇ ಕಾರ್ಯಗಳು ಬಂದರೆ ಇಮ+ಅಸ್. "ಪ್ರಥಮಯೋಃ ಪೂರ್ವಸವರ್ಣಃ" ಸೂತ್ರದಿಂದ ದೀರ್ಘ. "ತಸ್ಮಾಚ್ಛಸೋನಃ ಪುಂಸಿ" ಸೂತ್ರದಿಂದ ಸಕಾರಕ್ಕೆ ನಕಾರ. ಇಮಾನ್. ತೃತೀಯಾದಲ್ಲಿ ಇದಮ್+(ಟ್)ಆ ಎಂದಿರುವಾಗ "ತ್ಯದಾದೀನಾಮಃ" ಸೂತ್ರದಿಂದ ಅತ್ವ. ಪರರೂಪ. ಇದ+ಆ. ಈಗ ಇದಿಗೆ ಅನ್ ಆದೇಶ ಹೇಳುತ್ತಾನೆ.

(ಇದಮಿನ ಇದಿಗೆ ಅನ್ ಆದೇಶ ಹೇಳುವ ಸೂತ್ರ)

## ೨೭೮. ಅನಾಪ್ಯಕಃ ॥ ೭-೨-೧೧೨ ॥

**ಅಕಕಾರಸ್ಯೇದಮ ಇದೋಽನಾಪಿ ವಿಭಕ್ತೌ ॥ ಆಬಿತಿಪ್ರತ್ಯಾಹಾರಃ ॥ ಅನೇನ ॥**

ಅನ್, ಆಪಿ, ಅಕಃ ॥ ತ್ರಿಪದಸೂತ್ರ. 'ನವಿದ್ಯತೇ ಕ್ ಯಸ್ಯ ಸಃ ಅಕ್, ತಸ್ಯ ಅಕಃ'. ಕಕಾರವಿಲ್ಲದ ಎಂದರ್ಥ. "ಇದಮೋಮಃ" ಸೂತ್ರದಿಂದ "ಇದಮಃ" "ಇದೋಽಯ್‌ಪುಂಸಿ" ಸೂತ್ರದಿಂದ "ಇದಃ" "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ವಿಭಕ್ತೌ" ಅನುವೃತ್ತಿ. **ಸೂತ್ರಾರ್ಥ.** ಕಕಾರರಹಿತವಾದ ಇದಮ್ ಶಬ್ದದ ಇದ್ ಎಂಬುದಕ್ಕೆ ಆಪ್ ವಿಭಕ್ತಿಪರವಾದಾಗ ಅನ್ ಆದೇಶ ಬರುತ್ತದೆ. ಆಪ್ ಪ್ರತ್ಯಾಹಾರ. ಟಾ ಆರಂಭಿಸಿ ಸುಪ್ ಪರ್ಯಂತ. (ತೃತೀಯಾ, ಚತುರ್ಥಿ ಪಂಚಮಿ, ಷಷ್ಠೀ, ಸಪ್ತಮಿ) ಇದಮ್ ಶಬ್ದಕ್ಕೆ ಅಕಚ್ ಬಂದಾಗ ಕಕಾರದಿಂದ, ಕೂಡಿರುತ್ತದೆ. ಆಗ ಈ ಆದೇಶ ಬರುವುದಿಲ್ಲ. ಪ್ರಕೃತ ಕಕಾರವಿಲ್ಲದ ಇದಮಿಗೆ ಟಾ ಪರವಾದುದರಿಂದ ಇದ್ ಅಂಶಕ್ಕೆ ಅನ್ ಬಂದರೆ ಅನ+ಆ ಎಂದಾಗುತ್ತದೆ. ಅಕಾರದ ಪರದಲ್ಲಿ ಟಾ ಇರುವುದರಿಂದ "ಟಾಙಸಿಙಸಾ"-ಸೂತ್ರದಿಂದ ಟಾಕ್ಕೆ

ಇನಾದೇಶ. ಅನ+ಇನ, ಗುಣ ಅನೇನ. ಇದಮ್+ಭ್ಯಾಮ್ ಎಂದಿರುವಾಗ ತ್ಯದಾದ್ಯತ್ವ, ಪರರೂಪ. ಇದ+ಭ್ಯಾಮ್. ಈಗ ಇಡಿಗೆ ಲೋಪ ಹೇಳುತ್ತಾನೆ.

(ಇದಮಿನ ಇದಿಗೆ ಲೋಪ ಹೇಳುವ ಸೂತ್ರ)

## ೨೭೯. ಹಲಿ ಲೋಪಃ ॥ ೭-೨-೧೧೩ ॥

**ಅಕಕಾರಸ್ಯೇದಮ ಇದೋ ಲೋಪ ಆಪಿ ಹಲಾದೌ ॥ ನಾನರ್ಥಕೇಽಲೋಂತ್ಯವಿಧಿರನಭ್ಯಾಸವಿಕಾರೇ ॥**

ಹಲಿ, ಲೋಪಃ ॥ ದ್ವಿಪದಸೂತ್ರ. ಹಿಂದಿನಿಂದ "ಆಪಿ," "ಇದಮಃ" "ಇದಃ" ಅನುವೃತ್ತಿ. ಆಪಿ ಎಂಬುದಕ್ಕೆ ಹಲಿ ವಿಶೇಷಣ. ಸಪ್ತಮ್ಯಂತ ಅಲ್ ಆದುದರಿಂದ ತದಾದಿಲಾಭ. ಹಲಾದಿಯಾದ ಆಪ್ ವಿಭಕ್ತಿ. (ಭ್ಯಾಮಾದಿ) ಸೂತ್ರಾರ್ಥ. ಕಕಾರರಹಿತವಾದ ಇದಮ್ ಶಬ್ದದ ಇದಿಗೆ ಹಲಾದಿಯಾದ ಟಾದಿ ವಿಭಕ್ತಿಪರವಾದಾಗ ಲೋಪ ಬರುತ್ತದೆ. ಭ್ಯಾಮ್ : ಹಲಾದಿ ಆಪ್ ವಿಭಕ್ತಿಯಾದುದರಿಂದ ಇದಿಗೆ ಲೋಪಬರಬೇಕು. ಇದಿಗೆ ಲೋಪವೆಂದು ಷಷ್ಠೀ ನಿರ್ದೇಶಮಾಡಿರುವುದರಿಂದ ಇದಿಗೆ ಲೋಪಬರಬೇಕು. ಇದಿಗೆ ಲೋಪವೆಂದು ಷಷ್ಠೀ ನಿರ್ದೇಶ ಮಾಡಿರುವುದರಿಂದ "ಅಲೋಂತ್ಯಸ್ಯ" ಸೂತ್ರದಿಂದ ಇದಿನ ಅಂತ್ಯ ದಕಾರಕ್ಕೆ ಲೋಪಪ್ರಾಪ್ತವಾದರೆ ಪರಿಭಾಷೆಯಿಂದ ನಿಷೇಧ ಹೇಳುತ್ತಾನೆ. "ನಾನರ್ಥಕೇ"- ಇತಿ ॥ ಇದು ಪರಿಭಾಷೆ. ನ ಅನರ್ಥಕೇ ಅಲೋಂತ್ಯವಿಧಿಃ, ಅನಭ್ಯಾಸವಿಕಾರೇ ॥ ಅನರ್ಥಕವಾದ ಶಬ್ದ ವಿಷಯದಲ್ಲಿ "ಅಲೋಂತ್ಯಸ್ಯ" ಪರಿಭಾಷೆ ಬರುವುದಿಲ್ಲ. ಅಲ್ಲಿ ಅಂತ್ಯಕ್ಕೆಂದು ನಿಯಮಮಾಡುವುದಿಲ್ಲ "ಅನಭ್ಯಾಸವಿಕಾರೇ ॥" ಅಭ್ಯಾಸಕ್ಕೆ ಏನಾದರೂ ಕಾರ್ಯಮಾಡುವುದಾದರೆ ಅಲ್ಲಿ ಈ ನಿಷೇಧವಿಲ್ಲ. "ಪೂರ್ವೋಽಭ್ಯಾಸಃ" ಸೂತ್ರದಿಂದ ದ್ವಿತ್ವಬಂದಲ್ಲಿ ಪೂರ್ವಕ್ಕೆ ಅಭ್ಯಾಸ ಸಂಜ್ಞೆ ಹೇಳುತ್ತಾನೆ. ಇಲ್ಲಿ ಅರ್ಥವಿಲ್ಲವಾದರೂ "ಅಲೋಂತ್ಯಸ್ಯ" ಪರಿಭಾಷೆ ಬಂದೇಬರುತ್ತದೆ. ಇತರ ಕಡೆಯಲ್ಲಿ ಮಾತ್ರ ಅನರ್ಥಕ ವಿಷಯದಲ್ಲಿ ಬರುವುದಿಲ್ಲ. ಪ್ರಕೃತ ಇದಮ್ ಶಬ್ದದ ಭಾಗವಾದ ಇದಿಗೆ ಅರ್ಥವಿಲ್ಲ. ಇದು ಅಭ್ಯಾಸವಲ್ಲ. ಆದುದರಿಂದ ಆ ಪರಿಭಾಷೆ ಬಂದು ಅಂತ್ಯಕ್ಕೆಂದು ನಿಯಮಮಾಡುವುದಿಲ್ಲ. ಇದ್ ಸಂಪೂರ್ಣಕ್ಕೆ ಲೋಪ. ಆಗ ಅ+ಭ್ಯಾಮ್ ಎಂದು ಉಳಿಯುತ್ತದೆ. ಇಲ್ಲಿ ದೀರ್ಘ ಹೇಳುವುದಕ್ಕೋಸ್ಕರ ವ್ಯಪದೇಶಿವದ್ಭಾವವನ್ನು ಹೇಳುತ್ತಾನೆ.

(ವ್ಯಪದೇಶಿವದ್ಭಾವವನ್ನು ಹೇಳುವ ಸೂತ್ರ)

## ೨೮೦. ಆದ್ಯಂತವದೇಕಸ್ಮಿನ್ ॥ ೧-೧-೨೧ ॥

**ಏಕಸ್ಮಿನ್ ಕ್ರಿಯಮಾಣಂ ಕಾರ್ಯಮಾದಾವಿವಾಂತ ಇವ ಚ ಸ್ಯಾತ್ ॥ ಸುಪಿ ಚೇತಿ ದೀರ್ಘಃ । ಆಭ್ಯಾಮ್ ॥**

ಆದ್ಯಂತವತ್, ಏಕಸ್ಮಿನ್ ॥ ದ್ವಿಪದಸೂತ್ರ. ಇಲ್ಲಿ ಏಕಶಬ್ದ ಅಸಹಾಯ ವೆಂಬ ಅರ್ಥವನ್ನು ತಿಳಿಸುತ್ತದೆ. ಇವಾರ್ಥದಲ್ಲಿ ವತಿಪ್ರತ್ಯಯ. ಇದು ದ್ವಂದ್ವದ ಕೊನೆಯಲ್ಲಿರುವುದರಿಂದ ಪ್ರತ್ಯೇಕಾನ್ವಯ. ಆದಿವತ್, ಅಂತವತ್ ಎಂದು ಮಾಡಿ ಕೊಳ್ಳಬೇಕು. ಸೂತ್ರಾರ್ಥ. ಒಂದುಶಬ್ದ ಅಥವಾ ವರ್ಣವು ಆದಿಯಾಗಿರುವುದಕ್ಕೆ, ಅಥವಾ ಅಂತವಾಗಿರುವುದಕ್ಕೆ ಹೇಳಿದ ಕಾರ್ಯವು ಅಸಹಾಯಕವಾದ ಒಂದರಲ್ಲೀ ಬರುತ್ತದೆ. ಅದೇ ಆದಿಯಾಗಿರುವುದಕ್ಕೂ ಅದಕ್ಕೂ ಬರುತ್ತದೆ. ತದಾದಿತದಂತಕ್ಕೆ ಮಾಡುವ ಕಾರ್ಯವು ಅದಕ್ಕೂ ಬರುವುದೆಂದರ್ಥ. ಧಾತುವಿನ ಅವಯವವಾದ ಝುಷಂತದ ಬಳಿಗೆ ಭಷ್ ಬರುತ್ತದೆಯೆಂದು ಹೇಳಿದೆ. ಆಗ ಧಾತುವಿನ ಅವಯವ ಗಳು ಎರಡು ಇರಬೇಕು ಎಂದರ್ಥವಾಗುತ್ತದೆ. ಝುಷಂತ ಅವಯುವವೊಂದು. ಇನ್ನೊಂದು. ಹೀಗಿದ್ದರೆ ಮಾತ್ರ ಬರುತ್ತದೆಯಾದುದರಿಂದ ದುಹ್ ಎಂಬಲ್ಲಿ ಬಾರದೇ. ಹೋಗಬೇಕಾಗುತ್ತದೆ. ಈ ಸೂತ್ರದಿಂದ ಅಲ್ಲಿಯೂ ಬರುತ್ತದೆ. ಝುಷಂತವಾದ ಧಾತುವಿನ ಅವಯವವೂ ಅದೇ. ಅದೇ ಅಂತವಾದ ಧಾತುವೂ ಅದೇ. ಒಬ್ಬನೇ ಮಗನಿದ್ದರೆ ಜ್ಯೇಷ್ಠನೂ ಅವನೇ ಕನಿಷ್ಠನೂ ಅವನೇ. ಜ್ಯೇಷ್ಠಾದಿವ್ಯವಹಾರವಾಗ ಬೇಕಾದರೆ ವಾಸ್ತವವಾಗಿ ಚಿಕ್ಕವನಿರಬೇಕು. ಇಲ್ಲವಾದಾಗ ಎಲ್ಲವೂ ಅವನಲ್ಲಿಯೇ ಆರೋಪ. ಪ್ರಕೃತ "ಸುಪಿ ಚ" ಸೂತ್ರದಲ್ಲಿ ಹ್ರಸ್ವಾಕಾರಾಂತವಾದ ಅಂಗಕ್ಕೆ ಯಞಾದಿಸುಪ್ ಪರವಾದಾಗ ದೀರ್ಘವಿಂದಿದೆ. ತದಂತವಾದದಕ್ಕೆ ಕಾರ್ಯವೆಂದರೆ ಹ್ರಸ್ವವೇ ಅಂತವಾದ ಅಂಗಕ್ಕೆ ಕಾರ್ಯವೆಂದರ್ಥ. ಪ್ರಕೃತ ಅ+ಭ್ಯಾಮ್. ಎಂಬಲ್ಲಿ ಹ್ರಸ್ವರೂಪ ಅಂಗವಿದೆ ಹ್ರಸ್ವಾಂತವಾದ ಅಂಗ ಬೇರೊಂದಿಲ್ಲ. ಆದುದ ರಿಂದ ದೀರ್ಘಪ್ರಾಪ್ತಿ ಇಲ್ಲವೆಂದರೆ ಈ ವ್ಯವಹಾರದಿಂದ ದೀರ್ಘ ಬರುತ್ತದೆ. ಅದೇ ಅಂತವಾದುದಕ್ಕೆ ಹೇಳಿದಕಾರ್ಯ ಆದಕ್ಕೂ ಬರುವುದೆಂದುದರಿಂದ ಹ್ರಸ್ವಾಂತವಾದ ಅಂಗಕ್ಕೆ ಹೇಳಿದ ಕಾರ್ಯ ಹ್ರಸ್ವರೂಪ ಅಂಗಕ್ಕೂ ಬರುತ್ತದೆ. ಹೀಗೆ "ಸುಪಿ ಚ" ಸೂತ್ರದಿಂದ ದೀರ್ಘಬಂದರೆ ಆಭ್ಯಾಮ್. ಇದಮ್+ಭಿಸ್ ಎಂದಿರುವಾಗ ತ್ಯದಾ ದ್ಯತ್ವ. ಪರರೂಪ, ಇದ+ಭಿಸ್. "ಹಲಿಲೋಪಃ" ಸೂತ್ರದಿಂದ ಇದಿಗೆ ಲೋಪ ಬಂದರೆ ಅ+ಭಿಸ್ ಎಂದಾಗುತ್ತದೆ. ಇಲ್ಲಿ ಅಕಾರದಪರದಲ್ಲಿ ಭಿಸ್ ಬಂದುದ ರಿಂದ ಅದಕ್ಕೆ "ಅತೋ ಭಿಸ ಐಸ್" ಸೂತ್ರದಿಂದ ಐಸ್ ಆದೇಶ ಪ್ರಾಪ್ತವಾದರೆ ನಿಷೇಧ ಹೇಳುತ್ತಾನೆ.

(ಭಿಸಿಗೆ ಐಸ್ ನಿಷೇಧ ಹೇಳುವ ಸೂತ್ರ)

## ೨೮೧. ನೇದಮದಸೋರಕೋಃ ॥ ೭-೧-೧೧ ॥

**ಅಕಕಾರಯೋರಿದಮದಸೋರ್ಭಿಸ ಐಸ್ ನ । ಏಭಿಃ ॥ ಅಸ್ಮೈ । ಏಭ್ಯಃ । ಅಸ್ಮಾತ್ । ಅಸ್ಯ । ಅನಯೋಃ । ಏಷಾಮ್ । ಅಸ್ಮಿನ್ । ಅನಯೋಃ । ಏಷು ॥**

ನ, ಇದಮದಸೋಃ, ಅಕೋಃ || ತ್ರಿಪದ ಸೂತ್ರ. ನ ವಿದ್ಯತೇ ಕಕಾರಃ ಯಯೋಃ ಅಕೋಃ ಕಕಾರವಿಲ್ಲದವುಗಳು. "ಅತೋ ಭಿಸ ಐಸ್" ಸೂತ್ರದಿಂದ "ಭಿಸಃ," "ಐಸ್" ಅನುವೃತ್ತವಾಗುತ್ತವೆ. ಸೂತ್ರಾರ್ಥ. ಕಕಾರರಹಿತವಾದ ಇದಮ್, ಅದಸ್ ಶಬ್ದಗಳ ಸಂಬಂಧಿಯಾದ ಭಿಸಿಗೆ ಐಸ್ ಬರುವುದಿಲ್ಲ. ಐಸ್ ಆದೇಶ ಬಾರದಿದ್ದರೆ "ಬಹುವಚನೇ ಝಲ್ಯೇತ್" ಸೂತ್ರದಿಂದ ಅಕಾರಕ್ಕೆ ಏತ್ವ. ಏಭಿಸ್. ರುತ್ವ, ವಿಸರ್ಗ. ಏಭಿಃ || ಚತುರ್ಥಿ ಏಕವಚನ ಪರವಾದಾಗ ತ್ಯದಾದ್ಯತ್ವ, ಪರರೂಪ. ಇದ+ಙೇ. "ಸರ್ವನಾಮ್ನಃ ಸ್ಮೈ" ಸೂತ್ರದಿಂದ ಙೇ ವಿಭಕ್ತಿಗೆ ಅದಂತದ ಪರದಲ್ಲಿರುವುದರಿಂದ ಸ್ಮೈ ಆದೇಶ. ಇದ+ಸ್ಮೈ. ಈಗ ಹಲಾದಿ ವಿಭಕ್ತಿಯಾದುದರಿಂದ ಇದಿನ ಇದಿಗೆ ಲೋಪ. (ಹಲಿಲೋಪಃ) ಅಸ್ಮೈ | ಆಭ್ಯಾಮ್. ಹಿಂದಿನಂತೇ ಪ್ರಕ್ರಿಯಾ. ಏಭ್ಯಃ. ಹಿಂದಿನಂತೆ "ಹಲಿಲೋಪಃ" ಸೂತ್ರದಿಂದ ಇದಿಗೆ ಲೋಪವಾದಮೇಲೆ ಏತ್ವ || ಪಂಚಮೀ ಏಕವಚನದಲ್ಲಿ ಹಿಂದಿನಂತೆ ಇದ+ಙಸಿ ಮಾಡಿದ ಮೇಲೆ ಅದಂತದ ಪರದಲ್ಲಿರುವುದರಿಂದ "ಙಸಿಙ್ಯೋಃ ಸ್ಮಾತ್ ಸ್ಮಿನೌ" ಸೂತ್ರದಿಂದ ವಿಭಕ್ತಿಗೆ ಸ್ಮಾತ್ ಆದೇಶ. ಆಗ ಹಲಾದಿಯಾದುದರಿಂದ ಇದಿಗೆ ಲೋಪ. ಅಸ್ಮಾತ್. ಆಭ್ಯಾಮ್— ಏಭ್ಯಃ || ಷಷ್ಠೀ ಏಕವಚನದಲ್ಲಿ ಙಸ್ ಪರವಾದಾಗ ತ್ಯದಾದ್ಯತ್ವಪರರೂಪ ಬಂದಮೇಲೆ ಅದಂತವಾದುದರಿಂದ "ಟಾಙಸಿಙಸಾಮಿನಾತ್ಸ್ಯಾಃ" ಸೂತ್ರದಿಂದ ಪ್ರತ್ಯಯಕ್ಕೆ ಸ್ಯ ಆದೇಶ. ಆಗ ಹಲಾದಿಯಾದುದರಿಂದ ಇದಿಗೆ ಲೋಪ. ಅಸ್ಯ || ಇದಮ್+ಓಸ್. ಎಂದಿರುವಾಗ ತ್ಯದಾದ್ಯತ್ವ ಪರರೂಪ. ಇದ+ಓಸ್. ಇಲ್ಲಿ ಹಲಾದಿಯಾಗದಿರುವುದರಿಂದ ಇದಿಗೆ ಲೋಪವಿಲ್ಲ. ಆಗ "ಅನಾಪ್ಯಕಃ" ಸೂತ್ರದಿಂದ ಇದಿಗೆ ಅನ್ ಆದೇಶ. ಅನ+ಓಸ್. "ಓಸಿ ಚ" ಸೂತ್ರದಿಂದ ಅಂತಕ್ಕೆ ಏಕಾರ. ಅನೇ+ಓಸ್. "ಏಚೋಯವಾಯಾವಃ" ಸೂತ್ರದಿಂದ ಏಕಾರಕ್ಕೆ ಅಯಾದೇಶ ಸಕಾರಕ್ಕೆ ರುತ್ವ ವಿಸರ್ಗ. ಅನಯೋಃ || ಇದಮ್+ಆಮ್ ಎಂದಿರುವಾಗ ಅತ್ವ, ಪರರೂಪ. ಇದ+ಆಮ್. ಸರ್ವನಾಮವಾದುದರಿಂದ "ಆಮಿಸರ್ವನಾಮ್ನಃ ಸುಟ್" ಸೂತ್ರದಿಂದ ಆಮಿಗೆ ಸುಡಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬಂದರೆ ಇದ+ಸಾಮ್ ಎಂದಾಗುತ್ತದೆ. ಈಗ ಪ್ರತ್ಯಯ ಹಲಾದಿಯಾದುದರಿಂದ "ಹಲಿಲೋಪಃ" ಸೂತ್ರದಿಂದ ಇದಿಗೆ ಲೋಪ. ಅ+ಸಾಮ್. ಝಲಾದಿಯಾದ ಬಹುವಚನ ಪರದಲ್ಲಿರುವುದರಿಂದ ಹಿಂದಿನಂತೆ ಏತ್ವ. ಏಸಾಮ್. ಇಣಿನಪರದಲ್ಲಿ ಸಕಾರವಿರುವುದರಿಂದ "ಆದೇಶಪ್ರತ್ಯಯಯೋಃ" ಸೂತ್ರದಿಂದ ಷತ್ವ. ಏಷಾಮ್ || ಸಪ್ತಮೀ ಏಕವಚನದಲ್ಲಿ ಙಿಪರವಾದಾಗ ಅತ್ವ, ಪರರೂಪ ಬಂದರೆ ಇದ+ಇ ಎಂದಿರುವಾಗ ಪ್ರತ್ಯಯಕ್ಕೆ ಪಂಚಮಿಯಲ್ಲಿ ಹೇಳಿದಂತೆ ಸ್ಮಿನ್ ಆದೇಶ. ಹಲಾದಿಯಾದುದರಿಂದ ಇದಿಗೆ ಲೋಪ. ಅಸ್ಮಿನ್. ಅನಯೋಃ ಹಿಂದಿನಂತೇ ಆಗುತ್ತದೆ. ಸುಪ್ ಪರವಾದಾಗ "ಹಲಿಲೋಪಃ" ಸೂತ್ರದಿಂದ ಇದಿಗೆ ಲೋಪ. "ಬಹುವಚನೇ ಝಲ್ಯೇತ್" ಸೂತ್ರದಿಂದ ಏತ್ವ. "ಆದೇಶ

ಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷತ್ವ. ಏಷು. ॥ ಕಕಾರ ಬಂದರೆ ಇದಕಮ್ ಶಬ್ದವಾಗುತ್ತದೆ. ಇದು ಅಯಕಮ್+ಇಮಕೌ—ಇಮಕೇ। ಇತ್ಯಾದಿ ಸರ್ವಶಬ್ದದಂತೆ ರೂಪಹೊಂದುತ್ತದೆ. ಈ ಶಬ್ದದಲ್ಲಿ ಇದಿಗೆ ಲೋಪವಾಗಲೀ, ಅನಾದೇಶವಾಗಲೀ ಇಲ್ಲ. ಹಾಗೆ ಭಿಸಿಗೆ ಐಸ್ ನಿಷೇಧವೂ ಇಲ್ಲ. ಇಮಕೇನ ಇಮಕಾಭ್ಯಾಮ್–ಇಮಕೈಃ ॥ ಹೀಗೆ ರೂಪಗಳಾಗುತ್ತವೆ. ಇದಮ್ ಶಬ್ದಕ್ಕೆ ದ್ವಿತೀಯಾದಿಯಲ್ಲಿ ಏನಾದೇಶ ಹೇಳುತ್ತಾನೆ.

(ಏನಾದೇಶ ಹೇಳುವ ಸೂತ್ರ)

## ೨೮೨. ದ್ವಿತೀಯಾಟೌಸ್ಸ್ವೇನಃ ॥ ೨–೪–೩೪ ॥

**ದ್ವಿತೀಯಾಯಾಂ, ಟೌಸೋಶ್ಚ ಪರತಃ ಇದಮೇತದೋರೇನಾದೇಶಃ ಸ್ಯಾದನ್ವಾದೇಶೇ ॥**

ಕಿಂಚಿತ್ಕಾರ್ಯಂ ವಿಧಾತುಮುಪಾತ್ತಸ್ಯ ಕಾರ್ಯಾಂತರಂ ವಿಧಾತುಂ ಪುನರುಪಾದಾನಮನ್ವಾದೇಶಃ । ಯಥಾ-ಅನೇನ ವ್ಯಾಕರಣಮಧೀತಮೇನಂ ಛಂದೋಽಧ್ಯಾಪಯೇತಿ । ಅನಯೋಃ ಪವಿತ್ರಂ ಕುಲಮೇನಯೋಃ ಪ್ರಭೂತಂ ಸ್ವಮಿತಿ ॥ ಏನಮ್ । ಏನೌ । ಏನಾನ್ ॥ ಏನೇನ । ಏನಯೋಃ । ಏನಯೋಃ ॥

ದ್ವಿತೀಯಾಟೌಸ್ಸು, ಏನಃ ॥ ದ್ವಿಪದ ಸೂತ್ರ. "ಇದಮೋಽನ್ವಾದೇಶೇ" ಸೂತ್ರದಿಂದ "ಇದಮಃ" "ಅನ್ವಾದೇಶೇ" ಅನುವೃತ್ತವಾಗುತ್ತವೆ. "ದ್ವಿತೀಯಾ ಚ, ಟಾಚ, ಓಸ್‌ಚ, ದ್ವಿತೀಯಾ ಟೌಸಃ, ತೇಷು, ದ್ವಿತೀಯಾಟೌಸ್ಸು." ದ್ವಿತೀಯಾ ವಿಭಕ್ತಿ, ತೃತೀಯಾ ಏಕವಚನ ಟಾ, ಷಷ್ಠೀ, ಸಪ್ತಮೀ ದ್ವಿವಚನ ಓಸ್ ಇವು ಪರವಾದಾಗ ಎಂದರ್ಥ. "ಏತದಃ" ಹಿಂದಿನ ಸೂತ್ರದಿಂದ (ಏತದಸ್ತ್ರತಸೋಃ) ಅನುವೃತ್ತಿ. **ಸೂತ್ರಾರ್ಥ.** ಇದಮ್, ಏತದ್ ಶಬ್ದಗಳಿಗೆ ದ್ವಿತೀಯಾ, ಟಾ, ಓಸ್ ಈ ವಿಭಕ್ತಿಗಳು ಪರವಾದಾಗ ಅನ್ವಾದೇಶ ವಿಷಯದಲ್ಲಿ "ಏನ" ಎಂಬ ಆದೇಶ ಬರುತ್ತದೆ. ಅನ್ವಾದೇಶವೆಂದರೇನೆಂಬುದನ್ನು "ಕಿಂಚಿತ್ಕಾರ್ಯಂ"-ಎಂಬ ವಾಕ್ಯದಿಂದ ವಿವರಿಸುತ್ತಾನೆ. ಒಂದು ಅಪೂರ್ವವಾದ ಕಾರ್ಯವನ್ನು ವಿಧಾನಮಾಡಲು ಒಬ್ಬನನ್ನು ಮೊದಲು ತೆಗೆದುಕೊಂಡು. ಪುನಃ ಇನ್ನೊಂದು ಕಾರ್ಯವನ್ನು ಹೇಳಲು ಪುನಃ ಅವನನ್ನೇ ತೆಗೆದುಕೊಳ್ಳುವುದಕ್ಕೆ ಅನ್ವಾದೇಶವೆಂದು ಹೆಸರು. ಹೇಗೆಂದರೆ-ಇವನಿಂದ ವ್ಯಾಕರಣವು ಚನ್ನಾಗಿ ಕಲಿಯಲ್ಪಟ್ಟಿದೆ. ಇವನಿಗೆ ಛಂದಃಶಾಸ್ತ್ರವನ್ನು ಹೇಳಿಕೊಡು. ಇದೊಂದು ಅನ್ವಾದೇಶ. ಇವರಿಬ್ಬರ ಕುಲವು ಪವಿತ್ರವಾಗಿದೆ. ಇವರಿಬ್ಬರಲ್ಲಿ ಬೇಕಾದಷ್ಟು ಹಣವಿದೆ. ಇದೂ ಅನ್ವಾದೇಶ. ಮೊದಲನೇ ವಾಕ್ಯದಲ್ಲಿ ವ್ಯಾಕರಣಾಧ್ಯಯನರೂಪಕಾರ್ಯ ತಿಳಿಸಲು ಒಂದುಸಲ ಉಪಾತ್ತನಾದ

ವನನ್ನೇ ತಿರುಗಿ ಛಂದಸ್ಸು ಹೇಳಲು ಪುನಃ ಉಪಾದಾನಮಾಡಿದೆ. ಹಾಗೆಯೇ ಎರಡನೇ ವಾಕ್ಯದಲ್ಲಿಯೂ ಮೊದಲಿನ ವ್ಯಕ್ತಿಗಳನ್ನೇ ಪುನಃ ತೆಗೆದುಕೊಂಡಿದ್ದಾರೆ. ಹಾಗೆ ಎರಡನೇಸಲ ಅವರನ್ನು ಹೇಳುವಾಗ ಅನ್ವಾದೇಶವಿರುವುದರಿಂದ ಏನಾದೇಶ ಹೇಳಬೇಕು. ಮೊದಲನೇಸಲ ಕೇವಲ ಆಯಾಯ ಶಬ್ದಗಳ ರೂಪವನ್ನೇ ಹೇಳಬೇಕು. ಎರಡನೇಸಲ ಅವರನ್ನೇ ಹೇಳುವುದಾದುದರಿಂದ ಏನಾದೇಶ. ಅನೇಕಾಲಾದುದರಿಂದ ಸರ್ವಾದೇಶ. ದ್ವಿತೀಯಾದಲ್ಲಿ ಅಮ್ ಪರವಾದಾಗ ಏನ+ಅಮ್ ಎಂದಿರುವಾಗ "ಅಮಿಪೂರ್ವಃ" ಸೂತ್ರದಿಂದ ಪೂರ್ವರೂಪ. ಏನಮ್. ಏನ+ಔ ಎಂದಿರುವಾಗ ದ್ವಿವಚನದಲ್ಲಿ ವೃದ್ಧಿ ಏನೌ. ಬಹುವಚನ ಶಸ್ ಪರವಾದಾಗ ಪೂರ್ವಸವರ್ಣದೀರ್ಘ. ಸಕಾರಕ್ಕೆ ನಕಾರ. ಏನ+ಅಸ್=ಏನಾಸ್=ಏನಾನ್ ॥ ತೃತೀಯಾ ಟಾ ಪರವಾದಾಗ ಏನಾದೇಶ. ಅದಂತದ ಪರದಲ್ಲಿರುವುದರಿಂದ ಟಾ ವಿಭಕ್ತಿಗೆ ಇನಾದೇಶ. ಗುಣ. ಏನ+ಆ=ಏನ+ಇನ=ಏನೇನ. ಓಸ್ ಪರವಾದಾಗ ಏನಾದೇಸ. ಏನ+ಓಸ್. "ಓಸಿಚ" ಸೂತ್ರದಿಂದ ಅಕಾರಕ್ಕೆ ಏತ್ವ. ಅಯಾದೇಶ. ಏನಯೋಃ. ಸಪ್ತಮೀ ದ್ವಿವಚನದಲ್ಲಿಯೂ ಹೀಗೆ ಏನಯೋಃ. ಹೀಗೆ ಇಲ್ಲಿ ಹೇಳಿದ ವಿಭಕ್ತಿಗಳಲ್ಲಿ ಎರಡೆರಡು ರೂಪಗಳಾಗುತ್ತವೆ.



ನಕಾರಾಂತ ರಾಜನ್ ಶಬ್ದ (ರಾಜನು)

ರಾಜಾ.

ರಾಜನ್ ಶಬ್ದದ ಮೇಲೆ ಪ್ರಥಮಾ ಸು ಬಂದಾಗ ಸರ್ವನಾಮಸ್ಥಾನವಾದುದರಿಂದ "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರದಿಂದ ಉಪಧಾದೀರ್ಘ. (ಅಂತ್ಯದ ಹಿಂದಿನ ವರ್ಣ ಉಪಧಾ) ರಾಜಾನ್+ಸ್. "ಹಲ್ ಙ್ಯಾಭ್ಯೋ-ಸೂತ್ರದಿಂದ ಸುಲೋಪ. ರಾಜಾನ್. ಪದಾಂತದಲ್ಲಿ ನಕಾರವಿರುವುದರಿಂದ "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಕಾರಕ್ಕೆ ಲೋಪ. ರಾಜಾ. ಸಂಬುದ್ಧಿ ಸು ಪರವಾದಾಗಲೂ ಹೀಗೆ ಲೋಪಪ್ರಾಪ್ತವಾದರೆ ನಿಷೇಧ ಹೇಳುತ್ತಾನೆ.

(ಸಂಬುದ್ಧಿಯಲ್ಲಿ ನಲೋಪ ನಿಷೇಧ ಹೇಳುವ ಸೂತ್ರ)

**೨೮೩. ನ ಙಿಸಂಬುದ್ಧ್ಯೋಃ ॥ ೮-೨-೮ ॥**

**ನಸ್ಯ ಲೋಪೋ ನ ಙೌ ಸಂಬುದ್ಧೌ ಚ ॥ ಹೇ ರಾಜನ್ (ಙಾವುತ್ತರ ಪದೇ ಪ್ರತಿಷೇಧೋ ವಕ್ತವ್ಯಃ) ಬ್ರಹ್ಮನಿಷ್ಠಃ ॥ ರಾಜಾನೌ ॥ ರಾಜಾನಃ । ರಾಜ್ಞಃ ।**

ನ, ಙಿಸಂಬುದ್ಧ್ಯೋಃ ॥ ದ್ವಿಪದಸೂತ್ರ "ಙಿ ಚ ಸಂಬುದ್ಧಿಶ್ಚ ಙಿಸಂಬುದ್ಧೀ-ತಯೋಃ ಙಿಸಂಬುದ್ಧ್ಯೋಃ" ಙಿ, ಸಂಬುದ್ಧಿಪರದಲ್ಲಿರುವಾಗ

ಎಂದರ್ಥ. "ನ ಲೋಪಃ"-ಸೂತ್ರದಿಂದ "ನ" "ಲೋಪಃ" ಅನುವೃತ್ತವಾಗುತ್ತವೆ. ನ ಎಂಬಲ್ಲಿ ಷಷ್ಠೀಲೋಪವಾಗಿದೆ. ನಕಾರಕ್ಕೆ ಎಂದರ್ಥ. ಸೂತ್ರಾರ್ಥ. ಙಿ ಮತ್ತು ಸಂಬುದ್ಧಿ ಪರದಲ್ಲಿರುವಾಗ ನಾಂತಪದದ ನಕಾರಕ್ಕೆ ಲೋಪಬರುವುದಿಲ್ಲ. ಪ್ರಕೃತಸಂಬುದ್ಧಿಪರವಾದುದರಿಂದ ನಕಾರಕ್ಕೆ ಲೋಪವಿಲ್ಲ. "ಸರ್ವನಾಮಸ್ಥಾನೇ ಚಾಽಸಂಬುದ್ಧೌ" ಸೂತ್ರದಲ್ಲಿ "ಅಸಂಬುದ್ಧೌ" ಎಂದು ಸಂಬುದ್ಧಿಯಲ್ಲಿ ನಿಷೇಧ ಮಾಡಿರುವುದರಿಂದ ಉಪಧಾದೀರ್ಘವೂ ಇಲ್ಲ. "ಹಲ್ಙ್ಯಾಬ್ಭ್ಯೋ"-ಸೂತ್ರದಿಂದ ಸುವಿಗೆ ಲೋಪ. ಹೇ ರಾಜನ್. ಛಂದಸ್ಸಿನಲ್ಲಿ ಙಿಪರವಾದಾಗ ಲೋಪನಿಷೇಧಕ್ಕೆ ಉದಾಹರಣೆ ಸಿಗುತ್ತದೆ. ಪದಾಂತದಲ್ಲಿ ಙಿಪರವಾದಾಗ ಲೋಪಬರುವುದಿಲ್ಲವೆಂಬುದಕ್ಕೆ ವಾರ್ತಿಕದಿಂದ ನಿಷೇಧ ಹೇಳುತ್ತಾನೆ. "ಙಾವುತ್ತರ"— ಇತಿ. ವಾರ್ತಿಕಾರ್ಥ. ಉತ್ತರಪದಪರದಲ್ಲಿರುವಾಗ ಯಾವ ಙಿ ಇದೆಯೋ ಅದು ಪರವಾದಾಗ "ನಙಿಸಂಬುದ್ಧ್ಯೋಃ" ಎಂಬ ನಿಷೇಧವು ಬರುವುದಿಲ್ಲ. ಹೀಗಿರುವಾಗ ನ ಲೋಪ ಬರುವುದೆಂದರ್ಥ. ಸಮಾಸದಲ್ಲಿ ಇದರ ಉದಾಹರಣೆ ಸಿಗುತ್ತದೆ. ಬ್ರಹ್ಮನಿಷ್ಠಃ. "ಬ್ರಹ್ಮಣಿ ನಿಷ್ಠಾ ಯಸ್ಯ ಸಃ" ಇಲ್ಲಿ ಬ್ರಹ್ಮನ್+ಙಿ, ನಿಷ್ಠಾ+ಸು ಎಂದು ಅಲೌಕಿಕ ವಿಗ್ರಹವಾಕ್ಯ. ಇಲ್ಲಿ ಙಿಗೆ ನಿಷ್ಠಾ ಎಂಬ ಉತ್ತರಪದ ಪರದಲ್ಲಿದೆ. ಆದುದರಿಂದ ನಲೋಪ ಬರುತ್ತದೆ. ಸಮಾಸದಲ್ಲಿ ಸುಪಿಗೆ ಲುಕ್. ಅಂತ್ಯಕ್ಕೆ ಹ್ರಸ್ವ. ಬ್ರಹ್ಮನಿಷ್ಠ ಎಂದಾದಮೇಲೆ ಸಮಾಸವಾದುದರಿಂದ ಪ್ರಾತಿಪದಿಕಸಂಜ್ಞೆ ಬಂದು ಅದರ ಮೇಲೆ ಸು ಮೊದಲಾದುವುಗಳು ಬರುತ್ತವೆ. ಬ್ರಹ್ಮನಿಷ್ಠಃ ||

ರಾಜನ್+ಔ ಎಂದಿರುವಾಗ "ಸರ್ವನಾಮಸ್ಥಾನೇ ಚಾಽಸಂಬುದ್ಧೌ" ಸೂತ್ರದಿಂದ ಉಪಧಾದೀರ್ಘ. ರಾಜಾನೌ. ರಾಜನ್+(ಜ್) ಅಸ್. ಇಲ್ಲಿಯೂ ಹಾಗೇ ದೀರ್ಘ. ಔಟಿನ ವರೆಗೆ ದೀರ್ಘ. ರಾಜಾನಸ್. ರುತ್ವವಿಸರ್ಗ. ರಾಜಾನಃ || ಸಂಬೋಧನಾ ದ್ವಿಬಹುವಚನಗಳಲ್ಲಿ ಹೀಗೇ ರೂಪ. ಹೇ ರಾಜಾನೌ-ಹೇ ರಾಜಾನಃ || ದ್ವಿತೀಯಾದಲ್ಲಿ ರಾಜಾನಮ್-ರಾಜಾನೌ. ರಾಜನ್+ಶಸ್= ರಾಜನ್+ಅಸ್ ಎಂದಿರುವಾಗ ಸರ್ವನಾಮಸ್ಥಾನವಿಲ್ಲವಾದುದರಿಂದ ದೀರ್ಘವಿಲ್ಲ. ಅಜಾದಿ ಪ್ರತ್ಯಯ ಪರವಾದುದರಿಂದ "ಯಚಿಭಮ್" ಸೂತ್ರದಿಂದ ಭ ಸಂಜ್ಞೆ ಬರುತ್ತದೆ. ಆಗ "ಅಲ್ಲೋಪೋಽನಃ" ಸೂತ್ರ (೨೪೮) ದಿಂದ ಅನಿನ ಅಕಾರಕ್ಕೆ ಲೋಪ. ರಾಜ್+ನ್+ಅಸ್. ನಕಾರಕ್ಕೆ "ಸ್ತೋಃ ಶ್ಚುನಾ ಶ್ಚುಃ" ಸೂತ್ರದಿಂದ ಞಕಾರಾದೇಶ. ಜ ಞ ಸೇರಿದರೆ ಜ್ಞ ಆಗುತ್ತದೆ. ರಾಜ್ಞಃ ||

ಇನ್ನು ಅಜಾದಿಯಲ್ಲಿ ಎಲ್ಲಾ ಕಡೆಯಲ್ಲಿಯೂ ಅನಿನ ಅಕಾರಕ್ಕೆ ಲೋಪ, ತೃತೀಯಾ ಏಕವಚನದಲ್ಲಿ ರಾಜನ್+(ಟ್) ಆ=ರಾಜ್ಞಾ. ರಾಜನ್+ಭ್ಯಾಮ್ "ನಲೋಪಃ" ಸೂತ್ರದಿಂದ ನಲೋಪ. ರಾಜಭ್ಯಾಮ್. ಇನ್ನು ಹಲಾದಿ ವಿಭಕ್ತಿಗಳಲ್ಲಿ ಪದಸಂಜ್ಞೆಯಿರುವುದರಿಂದ ನಲೋಪ. ರಾಜಭಿಃ || ಚ-ರಾಜನ್+ಏ ರಾಜ್ಞೇ-ರಾಜಭ್ಯಾಮ್-ರಾಜಭ್ಯಃ || ಪಂ-ರಾಜನ್+ಅಸ್=ರಾಜ್ಞಃ—ರಾಜ

ಭ್ಯಾಮ್—ರಾಜಭ್ಯಃ ॥ ಷ—ರಾಜ್ಞಃ—ರಾಜ್ಞೋಃ—ರಾಜ್ಞಾಮ್. ॥ ಸಪ್ತಮೀ ಏಕವಚನದಲ್ಲಿ ಙಿ ಪರವಾದಾಗ ನಿತ್ಯವಾಗಿ ಲೋಪ ಪ್ರಾಪ್ತವಾದರೆ "ವಿಭಾಷಾ ಙಿಶ್ಯೋಃ" ಸೂತ್ರ (೨೩೦) ದಿಂದ ವಿಕಲ್ಪಲೋಪ. ಲೋಪ ಬಂದರೆ ರಾಜ್ಞಿ. ಬಾರದಿದ್ದರೆ ರಾಜನಿ—ರಾಜ್ಞೋಃ—ರಾಜಸು.

ರಾಜ+ಭ್ಯಾಮ್ ಎಂದಿರುವಾಗ ಅಕಾರದ ಪರದಲ್ಲಿ ಸುಪ್ಪಿರುವುದರಿಂದ "ಸುಪಿ ಚ" ಸೂತ್ರದಿಂದ ದೀರ್ಘವೂ, ರಾಜ+ಭ್ಯಸ್ ಎಂದಿರುವಾಗ "ಬಹುವಚನೇಝಲ್ಯೇತ್" ಸೂತ್ರದಿಂದ ಏತ್ವವೂ, ರಾಜ+ಭಿಸ್ ಎಂದಿರುವಾಗ "ಅತೋಭಿಸ ಐಸ್" ಸೂತ್ರದಿಂದ ಭಿಸಿಗೆ ಐಸ್ತ್ವವೂ ಏಕೆ ಬರಬಾರದು? ನಲೋಪವಾದುದರಿಂದ ಬರುವುದಿಲ್ಲವೆನ್ನಬೇಕು. "ಸುಪಿ ಚ" ಮುಂತಾದ ಸೂತ್ರಗಳು ಸಪಾದ ಸಪ್ತಾಧ್ಯಾಯಿಯಲ್ಲಿವೆ. ನಲೋಪ ಹೇಳುವ ಸೂತ್ರವು ತ್ರಿಪಾದಿಯಲ್ಲಿದೆ. "ಪೂರ್ವತ್ರಾಸಿದ್ಧಮ್" ಸೂತ್ರವು ತ್ರಿಪಾದಿ ಅಸಿದ್ಧವೆಂದು ಹೇಳಿದೆ. ನಲೋಪ ಅಸಿದ್ಧವಾದುದರಿಂದ "ಸುಪಿಚ" ಮುಂತಾದ ಸೂತ್ರಗಳು ಅಲ್ಲಿ ನಕಾರವಿದೆಯೆಂದೇ ತಿಳಿದಿರುತ್ತವೆ. ನಾಂತವಾದುದರಿಂದ ಅದಂತವಾಗಲಿಲ್ಲ. ಆದುದರಿಂದ ಆತ್ವ, ಏತ್ವ, ಐಸ್ತ್ವಗಳು ಬರುವುದಿಲ್ಲ. ಹೀಗೆ ಸಾಮಾನ್ಯವಾಗಿ ನ ಲೋಪವು ಅಸಿದ್ಧವಾದುದರಿಂದ ನಕಾರವಿದ್ದಂತೇ ಪೂರ್ವ ಸೂತ್ರಗಳು (ಸಪಾದ ಸಪ್ತಾಧ್ಯಾಯೀ) ತಿಳಿಯುವುದರಿಂದ ಯಾವ ಕಾರ್ಯಗಳೂ ಬಾರದೇ ಹೋದರೆ ನಲೋಪ ವಿಷಯದಲ್ಲಿ ಮಾತ್ರ ಕೆಲವು ಕಡೆಗಳಲ್ಲಿ ಅಸಿದ್ಧವೆಂದೂ ಇನ್ನು ಕೆಲವು ಕಡೆಯಲ್ಲಿ ಅದು ಸಿದ್ಧವೇ ಆಗುತ್ತದೆಂದೂ ಸೂತ್ರದಿಂದ ನಿಯಮ ಮಾಡುತ್ತಾನೆ.

(ನಲೋಪಕ್ಕೆ ಅಸಿದ್ಧತ್ವವನ್ನು ನಿಯಮ ಮಾಡುವ ಸೂತ್ರ)

**೨೪೪. ನಲೋಪಃ ಸುಪ್ಸ್ವರ ಸಂಜ್ಞಾ ತುಗ್ವಿಧಿಷು ಕೃತಿ ॥ ೮-೨-೨ ॥**

**ಸುಬ್ವಿಧೌ, ಸ್ವರವಿಧೌ, ಕೃತಿ ತುಗ್ವಿಧೌ ಚ ನಲೋಪೋಽಸಿದ್ಧೋ ನಾನ್ಯತ್ರ-ರಾಜಾಶ್ವ ಇತ್ಯಾದೌ। ಇತ್ಯಸಿದ್ಧತ್ವಾದಾತ್ವಮೇತ್ವಮೈಸ್ತ್ವಂ ಚ ನ ॥ ರಾಜಭ್ಯಾಮ್. ಇತ್ಯಾದಿ ॥**

ತ್ರಿಪದಸೂತ್ರ. "ನಸ್ಯಲೋಪಃ ನಲೋಪಃ" "ಸುಪ್ ಚ ಸ್ವರಶ್ಚ, ಸಂಜ್ಞಾ ಚ ತುಕ್ ಚ-ಸುಪ್ಸ್ವರಸಂಜ್ಞಾತುಕಃ"—"ಸು... ತುಕಾಂ ವಿಧಯಃ." "ಸುಪ್ಸ್ವರಸಂಜ್ಞಾತುಗ್ ವಿಧಯಃ"। ತೆ.ಪು. "ಪೂರ್ವತ್ರಾ ಸಿದ್ಧಮ್" ಹಿಂದಿನ ಸೂತ್ರಾನುವೃತ್ತಿಯಿದೆ. ಕೃತಿ ಎಂಬುದಕ್ಕೆ ತುಕಿನಲ್ಲಿ ಮಾತ್ರ ಸಂಬಂಧ. ಸುಬಾದಿಗಳಲ್ಲಿ ಅಸಂಭವವಾದುದರಿಂದ ವಿಶೇಷಣವಿಲ್ಲ. ಸೂತ್ರಾರ್ಥ. ಸುಪನ್ನು ಆಶ್ರಯಿಸಿ ಮಾಡುವ ಕಾರ್ಯದಲ್ಲಿಯೂ, ಸ್ವರ ವಿಧಾನಮಾಡುವಾಗಲೂ, ಸಂಜ್ಞಾವಿಧಾನ ಮಾಡುವಾಗಲೂ, ಕೃತ್‌ಪ್ರತ್ಯಯ ಪರವಾದಾಗ ಮಾಡುವ ತುಕ್‌ವಿಧಿಯಲ್ಲಿಯೂ

ನಲೋಪವು ಅಸಿದ್ಧವಾಗುತ್ತದೆ. ಇತರ ಕಾರ್ಯಮಾಡುವಾಗ ಅಸಿದ್ಧವಾಗುವುದಿಲ್ಲ. ಪೂರ್ವಸೂತ್ರದಿಂದಲೇ ನಲೋಪವು ಅಸಿದ್ಧವೆಂದು ತಿಳಿದಮೇಲೆ ಈ ಸೂತ್ರವು ಪುನಃ ಅಸಿದ್ಧಭಾವ ಹೇಳಿದುದರಿಂದ "ಸಿದ್ಧೇ ಸತ್ಯಾರಭ್ಯಮಾಣೋವಿಧಿಃ ನಿಯಮಾಯ" ಎಂಬಂತೆ ನಿಯಮಮಾಡುತ್ತದೆ. ಇಲ್ಲಿ ಹೇಳಿದ ಕಾರ್ಯಮಾಡುವಾಗ ಮಾತ್ರ ಅಸಿದ್ಧ. ಬೇರೆ ಕಾರ್ಯಮಾಡುವಾಗ ಅಸಿದ್ಧವಾಗುವುದಿಲ್ಲ ಎಂದು ನಿಯಮದ ಫಲ. ಪ್ರಕೃತ ಸುಬಾಶ್ರಯ ವಿಧಿಯಾದುದರಿಂದ ನಲೋಪ ಅಸಿದ್ಧವಾಗುತ್ತದೆ. ಆದುದರಿಂದ ಆತ್ವ, ಏತ್ವ, ಐಸ್ತ್ವಕಾರ್ಯಗಳು ಬರುವುದಿಲ್ಲ. ಇತರ ಕಡೆಯಲ್ಲಿ ಅಸಿದ್ಧವಾಗುವುದಿಲ್ಲವೆಂದುದರಿಂದ ರಾಜಾಶ್ವ ಎಂಬಲ್ಲಿ ಸವರ್ಣದೀರ್ಘ ಬಂದಿದೆ. "ರಾಜನ್ + ಅಸ್ + ಅಶ್ವ + ಸ್" ಎಂದು ಅಲೌಕಿಕ ವಿಗ್ರಹವಾಕ್ಯ. ಇಲ್ಲಿ ಸುಲೋಪವಾದಮೇಲೆ ನಲೋಪ. ನಲೋಪವಾದದ್ದು ಸವರ್ಣದೀರ್ಘ ವಿಧಾಯಕ ಸೂತ್ರಕ್ಕೆ ಸಿದ್ಧವಾದುದರಿಂದ ಬರಲು ತೊಂದರೆ ಇಲ್ಲ. ರಾಜಾಶ್ವಃ ||

---

ನಕಾರಾಂತ ಯಜ್ವನ್ ಶಬ್ದ. (ಯಾಗಮಾಡುವವನು)

**ಯಜ್ವಾ-ಯಜ್ವಾನೌ-ಯಜ್ವಾನಃ |**

ಸರ್ವನಾಮಸ್ಥಾನದವರೆಗೆ (ಸು-ಔಟ್) ರಾಜನ್ ಶಬ್ದದಂತೇ ರೂಪ. ನಲೋಪದೀರ್ಘ. ಯಜ್ವಾ-ಯಜ್ವಾನೌ-ಯಜ್ವಾನಃ || ಹೇ ಯಜ್ವನ್-ಹೇ ಯಜ್ವಾನೌ-ಹೇ ಯಜ್ವಾನಃ || ಯಜ್ವಾನಂ-ಯಜ್ವಾನೌ— || ಯಜ್ವನ್ + (ಶ್) ಅಸ್ ಎಂದಿರುವಾಗ "ಅಲ್ಲೋಪೋಽನಃ" ಸೂತ್ರದಿಂದ ಅಕಾರಲೋಪಪ್ರಾಪ್ತವಾದರೆ ನಿಷೇಧಹೇಳುತ್ತಾನೆ.

(ಅಲ್ಲೋಪಕ್ಕೆ ನಿಷೇಧ ಹೇಳುವ ಸೂತ್ರ)

## ೨೮೫. ನ ಸಂಯೋಗಾದ್ವಮಂತಾತ್ || ೬-೪-೧೩೭ ||

**ವಮಂತಸಂಯೋಗಾದನೋಽಕಾರಸ್ಯ ಲೋಪೋ ನ | ಯಜ್ವನಃ | ಯಜ್ವನಾ | ಯಜ್ವಭ್ಯಾಮ್ || ಬ್ರಹ್ಮಣಃ | ಬ್ರಹ್ಮಣಾ ||**

ನ, ಸಂಯೋಗಾತ್, ವಮಂತಾತ್ || ತ್ರಿಪದಸೂತ್ರ. "ವಶ್ಚ ಮ್‌ಚ ವಮೌ. ವಮೌ ಅಂತೌ ಯಸ್ಯ ಸಃ ವಮಂತಃ, ತಸ್ಮಾತ್ ವಮಂತಾತ್." ವಕಾರಮಕಾರಗಳೇ ಕೊನೆಯಲ್ಲಿರುವ ಎಂದರ್ಥ. "ಅಲ್ಲೋಪೋಽನಃ" ಅನುವೃತ್ತಿ. ಸೂತ್ರಾರ್ಥ. ವಕಾರವೇ ಅಂತವಾದ ಅಥವಾ ಮಕಾರವೇ ಅಂತವಾದ ಸಂಯೋಗದ ಪರದಲ್ಲಿರುವ ಅನಿನ ಅಕಾರಕ್ಕೆ ಲೋಪ ಬರುವುದಿಲ್ಲ. ಯಜ್ವನ್ + ಅಸ್ ಎಂಬಲ್ಲಿ (ಯಜ್ + ಅನ್ + ಅಸ್) ವಕಾರವೇ ಅಂತವಾದ ಸಂಯೋಗ ಅಂದರೆ ಜ್‌ವ್ ಆದರ ಪರದಲ್ಲಿ ಅನ್ ಬಂದುದರಿಂದ ಅಕಾರಕ್ಕೆ ಲೋಪವಿಲ್ಲ. ಯಜ್ವನಃ ||

ಇನ್ನು ಅಜಾದಿಯಲ್ಲಿ ಕೇವಲ ವಿಭಕ್ತಿ ಸೇರಿಸುವುದು ಮಾತ್ರ. ಹಲಾದಿಯಲ್ಲಿ ನಲೋಪ. ತೃ॥ ಯಜ್ವನಾ-ಯಜ್ವಭ್ಯಾಮ್-ಯಜ್ವಭಿಃ ॥ ಚ-ಯಜ್ವನೇ ಯಜ್ವಭ್ಯಾಮ್-ಯಜ್ವಭ್ಯಃ ॥ ಪಂ-ಯಜ್ವನಃ-ಯಜ್ವಭ್ಯಾಮ್-ಯಜ್ವಭ್ಯಃ ॥ ಷ. ಯಜ್ವನಃ-ಯಜ್ವನೋಃ-ಯಜ್ವನಾಮ್ ॥ ಸ-ಯಜ್ವನಿ ಯಜ್ವನೋಃ-ಯಜ್ವಸು ॥ ಮಕಾರಾಂತ ಸಂಯೋಗದ ಪರದ ಅನಿಗೆ ಲೋಪ ಬರುವುದಿಲ್ಲವೆಂದು ಸೂಚಿಸಲು "ಬ್ರಹ್ಮಣಃ ಬ್ರಹ್ಮಣಾ" । ಉದಾಹರಣೆ ಕೊಡುತ್ತಾನೆ. ಬ್ರಹ್ಮನ್ ಶಬ್ದ. ಸುಟ್ ವರೆಗೆ ರಾಜನ್‌ಶಬ್ದದಂತೆ. ಪ್ರ. ಬ್ರಹ್ಮಾ-ಬ್ರಹ್ಮಾಣೌ-ಬ್ರಹ್ಮಾಣಃ॥ ದ್ವಿ. ಬ್ರಹ್ಮಾಣಂ-ಬ್ರಹ್ಮಾಣೌ-ಬ್ರಹ್ಮನ್+ಅಸ್ ಎಂದಿರುವಾಗ ಅನಿನ ಅಕಾರಕ್ಕೆ ಲೋಪವಿಲ್ಲ. ಹ್ಮ್ ಸಂಯೋಗ. ಇದು ಮಕಾರಾಂತವಾಗಿದೆ. ಇದರ ಪರದಲ್ಲಿ ರುವುದರಿಂದ ಲೋಪವಿಲ್ಲ. ಯಜ್ವನ್ ಶಬ್ದದಂತೇ. ಬ್ರಹ್ಮಣಃ ॥ ತೃ-ಬ್ರಹ್ಮಣಾ -ಇತ್ಯಾದಿ.

---

ನಕಾರಾಂತ "ವೃತ್ರಹನ್" ಶಬ್ದ. (ಇಂದ್ರ)

"ವೃತ್ರಂ ಹತವಾನ್." ವೃತ್ರನನ್ನು ಕೊಂದವನು. ಹನ್ ಧಾತುವಿಗೆ ಕ್ವಿಪ್ ಪ್ರತ್ಯಯ. ಕೃದಂತವಾದುದರಿಂದ ಪ್ರಾತಿಪದಿಕ ಸಂಜ್ಞೆ. ಸು ಪರವಾದಾಗ ದೀರ್ಘ ಪ್ರಾಪ್ತವಾದರೆ ನಿಯಮ ಮಾಡುತ್ತಾನೆ.

(ಉಪಧಾದೀರ್ಘ ನಿಯಮ ಮಾಡುವ ಸೂತ್ರ)

**೨೮೬. ಇನ್‌ಹನ್‌ಪೂಷಾರ್ಯಮ್ಣಾಂ ಶೌ ॥ ೬-೪-೧೨ ॥**

**ಏಷಾಂ ಶಾವೇವೋಪಧಾಯಾ ದೀರ್ಘೋ ನಾನ್ಯತ್ರ ॥ ಇತಿ-ನಿಷೇಧೇ ಪ್ರಾಪ್ತೇ ॥**

ದ್ವಿಪದ ಸೂತ್ರ. "ಢ್ರಲೋಪೇ-ದೀರ್ಘೋಽಣಃ" ಸೂತ್ರದಿಂದ "ದೀರ್ಘಃ" "ನೋಪಧಾಯಾಃ" ಸೂತ್ರದಿಂದ "ಉಪಧಾಯಾಃ" ಪದಗಳಿಗೆ ಅನುವೃತ್ತಿ. ಇನ್ ಚ, ಹನ್ ಚ, ಪೂಷಾ ಚ, ಅರ್ಯಮಾ ಚ, "ಇನ್ ಹನ್ ಪೂಷಾರ್ಯಮಣಃ" ತೇಷಾಂ. "ಅಂಗಸ್ಯ" ಅಧಿಕಾರ. ಇನ್ನಾದಿಗಳು ಅಂಗಕ್ಕೆ ವಿಶೇಷಣ. ಇನ್ನಾದ್ಯಂತ ಅಂಗಕ್ಕೆ ಎಂದರ್ಥವಾಗುತ್ತದೆ. ಸೂತ್ರಾರ್ಥ. ಇನ್ ಹನ್, ಪೂಷನ್, ಅರ್ಯಮನ್ ಅಂತವಾದ ಅಂಗದ ಉಪಧೆಗೆ ಶೀ ಪರವಾದಾಗ ಮಾತ್ರ ದೀರ್ಘ, ಬರುವುದಿಲ್ಲ. "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರದಿಂದ ದೀರ್ಘ ಬರುತ್ತಿರುವಾಗ ಈ ಸೂತ್ರ ದಿಂದ ಪುನಃ ದೀರ್ಘ ಹೇಳಿದುದು ವ್ಯರ್ಥವಾಗಿ "ಸಿದ್ಧೇಸತ್ಯಾರಭ್ಯಮಾಣೋ ವಿಧಿಃ ನಿಯಮಾಯ ಎಂಬಂತೆ ನಿಯಮವನ್ನು ಮಾಡುತ್ತದೆ. ಶಿ ರೂಪ ಸರ್ವನಾಮಸ್ಥಾನದಲ್ಲಿ ಮಾತ್ರ ಉಪಧಾದೀರ್ಘ. ಇತರ ಸರ್ವನಾಮಸ್ಥಾನ

ಗಳಲ್ಲಿ ದೀರ್ಘವಿಲ್ಲ. ಇದೇ ನಿಯಮ. ಪ್ರಕೃತ ಇಲ್ಲಿ ಶಿ ಸರ್ವನಾಮಸ್ಥಾನವಿಲ್ಲ. ಸುವಿದೆ. ಆದುದರಿಂದ ನಿಷೇಧ ಪ್ರಾಪ್ತವಾದರೆ.

(ಸುವಿನಲ್ಲಿ ಉಪಧಾದೀರ್ಘ ಹೇಳುವ ಸೂತ್ರ

## ೨೮೭. ಸೌ ಚ ॥ ೬-೪-೧೩ ॥

**ಇನ್ನಾದೀನಾಮುಪಧಾಯಾ ದೀರ್ಘೋಽಸಂಬುದ್ಧೌ ಸೌ ॥ ವೃತ್ರಹಾ ॥ ಹೇ ವೃತ್ರಹನ್ ॥**

ದ್ವಿಪದ ಸೂತ್ರ. ಹಿಂದಿನ ಸೂತ್ರವೇ ಅನುವೃತ್ತವಾಗುತ್ತದೆ. "ಸರ್ವನಾಮಸ್ಥಾನೇಚಾಽಸಂಬುದ್ಧೌ" ಸೂತ್ರದಿಂದ "ಅಸಂಬುದ್ಧೌ" ಅನುವೃತ್ತಿ. ಹಿಂದಿನ ಸೂತ್ರದಿಂದ ನಿಷೇಧ ಬಂದರೆ ಇದು ಪುನಃ ಕಾರ್ಯ ಹೇಳುತ್ತದೆ. ಸೂತ್ರಾರ್ಥ. ಸಂಬುದ್ಧಿಯಲ್ಲದ ಸುಪರವಾದಾಗ ಇನ್ನಾದ್ಯಂತ ಅಂಗದ ಉಪಧೆಗೆ ದೀರ್ಘ ಬರುತ್ತದೆ. ಸರ್ವನಾಮಸ್ಥಾನ ಸಂಪೂರ್ಣದಲ್ಲಿ ನಿಷೇಧ ಬಂದರೆ ಸುವಿನಲ್ಲಿ ಮಾತ್ರ ಬರಬಹುದೆಂದು ಈ ಸೂತ್ರ ಹೇಳುತ್ತದೆ. ಪ್ರಕೃತ ಹನ್ನಂತ ಅಂಗ ವೃತ್ರಹನ್. ಅದಕ್ಕೆ ಸುಪರವಾದುದರಿಂದ ದೀರ್ಘ. ವೃತ್ರಹಾನ್+ಸ್. "ಹಲ್ಙ್ಯಾಭ್ಯೋ"—ಸೂತ್ರದಿಂದ ಸುವಿಗೆ ಲೋಪ. "ನಲೋಪಃ"-ಸೂತ್ರದಿಂದ ನಲೋಪ. ವೃತ್ರಹಾ. ಸಂಬುದ್ಧಿ ಸುವಿನಲ್ಲಿ "ಅಸಂಬುದ್ಧೌ" ಎಂದು ನಿಷೇಧಮಾಡಿರುವುದರಿಂದ ಸುವಿನಲ್ಲಿ ದೀರ್ಘವಿಲ್ಲ. "ನಙಿಸಂಬುದ್ಧ್ಯೋಃ" ಸೂತ್ರದಿಂದ ನಲೋಪ ನಿಷೇಧ. ಹೇ ವೃತ್ರಹನ್. ವೃತ್ರಹನ್+ಔ ಎಂದಿರುವಾಗ ಹಿಂದಿನ ಸೂತ್ರದ ನಿಯಮದಿಂದ ದೀರ್ಘವಿಲ್ಲ. ವೃತ್ರಹನೌ. ರೇಫನಕಾರಗಳ ಮಧ್ಯದಲ್ಲಿ ಅಟ್ ಮಾತ್ರ ವ್ಯವಧಾನವಿದ್ದರೂ "ಅಟ್‌ಕುಪ್ವಾಙ್‌ನುಮ್‌ವ್ಯವಾಯೇಪಿ" ಸೂತ್ರದಿಂದ ನಕಾರಕ್ಕೆ ಣತ್ವ ಬರುವುದಿಲ್ಲ. ಅಲ್ಲಿ "ಸಮಾನಪದೇ"=ಒಂದೇ ಪದದಲ್ಲಿ ನಿಮಿತ್ತನಿಮಿತ್ತಿ ಇರಬೇಕು ಎಂದಿದೆ. ಇಲ್ಲಿ ಎರಡು ಪದಗಳಿದ್ದು ನಿಮಿತ್ತ ಒಂದು ಪದದಲ್ಲಿ, ಸ್ಥಾನಿ ಒಂದು ಪದದಲ್ಲಿ ಇದೆ. ಆದುದರಿಂದ ಣತ್ವವಿಲ್ಲ, ಅದಕ್ಕೋಸ್ಕರ ಅನ್ಯಸೂತ್ರದಿಂದ ಇಲ್ಲಿ ಣತ್ವ ಹೇಳುತ್ತಾನೆ.

(ನಕಾರಕ್ಕೆ ಣಕಾರ ಹೇಳುವ ಸೂತ್ರ)

## ೨೮೮. ಏಕಾಜುತ್ತರಪದೇ ಣಃ ॥ ೮-೪-೧೨ ॥

**ಏಕಾಜುತ್ತರಪದಂ ಯಸ್ಯ ತಸ್ಮಿನ್ ಸಮಾಸೇ ಪೂರ್ವಪದಸ್ಥಾನ್ನಿಮಿತ್ತಾತ್ಪರಸ್ಯ ಪ್ರಾತಿಪದಿಕಾಂತ ನುಮ್ ವಿಭಕ್ತಿಸ್ಥಸ್ಯ ನಸ್ಯ ಣಃ ॥ ವೃತ್ರಹಣೌ ॥**

ದ್ವಿಪದ ಸೂತ್ರ. "ಪ್ರಾತಿಪದಿಕಾಂತನುಮ್‌ವಿಭಕ್ತಿಷು ಚ" ಹಿಂದಿನ ಸೂತ್ರವೇ ಅನುವೃತ್ತವಾಗುತ್ತದೆ, "ಪೂರ್ವಪದಾತ್ಸಂಜ್ಞಾಯಾಮಗಃ" ಸೂತ್ರ

ದಿಂದ "ಪೂರ್ವಪದಾತ್" ಅನುವೃತ್ತಿ. "ಪೂರ್ವಂ ಪದಂ ಯಸ್ಯ ತತ್ ಪೂರ್ವ ಪದಮ್." ತಸ್ಮಾತ್. ದ್ವಿವಚನಾಂತವಾಗಿ ವಿಪರಿಣಾಮ ಮಾಡಿಕೊಳ್ಳಬೇಕು. ಪೂರ್ವಪದದಲ್ಲಿರುವ ನಿಮಿತ್ತದ ಪರದಲ್ಲಿರುವ ಎಂದರ್ಥ. "ಏಕಃ ಅಚ್ ಯಸ್ಮಿನ್ ತತ್, ಏಕಾಚ್." "ಏಕಾಚ್ ಉತ್ತರಪದಂ ಯಸ್ಯ ಸಃ" ಏಕಾಜುತ್ತರಪದಃ ತಸ್ಮಿನ್ ಏಕಾಜುತ್ತರಪದೇ. ಒಂದೇ ಅಚುಳ್ಳ ಉತ್ತರ ಪದವುಳ್ಳ ಸಮಾಸದಲ್ಲಿ ಎಂದರ್ಥ ಸೂತ್ರಾರ್ಥ. ಒಂದೇ ಅಚುಳ್ಳ ಉತ್ತರ ಪದವುಳ್ಳ ಸಮಾಸದಲ್ಲಿ ಪೂರ್ವ ಪದದಲ್ಲಿರುವ ನಿಮಿತ್ತದ ಅಂದರೆ ರೇಫ ಷಕಾರಗಳ ಪರದಲ್ಲಿರುವ ಪ್ರಾತಿಪದಿಕದ ಕೊನೆಯಲ್ಲಿರುವ, ನುಮ್ ಸಂಬಂಧಿಯಾದ, ವಿಭಕ್ತಿಯಲ್ಲಿರುವ ನಕಾರಕ್ಕೆ ಣಕಾರ ಬರುತ್ತದೆ. ನಕಾರವು ಮೂರು ರೀತಿಯಾಗಿದ್ದರೂ ಬರುತ್ತದೆ. ವೃತ್ರಹಣೌ ಎಂಬಲ್ಲಿ ವೃತ್ರ ಪೂರ್ವಪದ. ಹನ್ ಉತ್ತರಪದ. ಪೂರ್ವಪದದಲ್ಲಿ ರೇಫರೂಪ ನಿಮಿತ್ತವಿದೆ. (ವೃತ್‌ರ್+ಅ) ಉತ್ತರಪದವಾದ ಹನ್ ಏಕಾಜಾಗಿದೆ. ನಕಾರವು ಪ್ರಾತಿಪದಿಕದ ಕೊನೆಯಲ್ಲಿದೆ. ಆದಕ್ಕೆ ಣತ್ವ ಬಂದರೆ ವೃತ್ರಹಣೌ. ಜಸಿನಲ್ಲಿಯೂ ಹೀಗೇ ಣತ್ವ. ವೃತ್ರಹಣಃ । ದ್ವಿ–ವೃತ್ರಹಣಂ–ವೃತ್ರಹಣೌ. । ಬಹುವಚನದಲ್ಲಿ ವೃತ್ರಹನ್+(ಶ್) ಅಸ್ ಎಂದಿರುವಾಗ ಭಸಂಜ್ಞಾ ಇರುವುದರಿಂದ "ಅಲ್ಲೋಪೋಽನಃ" ಸೂತ್ರದಿಂದ ಅನಿನ ಅಕಾರಕ್ಕೆ ಲೋಪ. ವೃತ್ರಹ್+ಅಸ್ ಎಂದಾಗುತ್ತದೆ. ಇಲ್ಲಿ ಹಕಾರಕ್ಕೆ ಘಕಾರಾದೇಶ ಹೇಳುತ್ತಾನೆ.

(ಹನ್ ಧಾತುವಿನ ಹಕಾರಕ್ಕೆ ಘಕಾರ ಹೇಳುವ ಸೂತ್ರ)

## ೨೮೯. ಹೋ ಹಂತೇರ್ಞ್ಣಿನ್ನೇಷು ॥ ೭-೩-೫೪ ॥

**ಞಿತಿ ಣಿತಿ ಪ್ರತ್ಯಯೇ, ನಕಾರೇ ಚ ಪರೇ ಹಂತೇರ್ಹಕಾರಸ್ಯ ಕುತ್ವಮ್ ॥ ವೃತ್ರಘ್ನಃ ಇತ್ಯಾದಿ ॥ ಏವಂ ಶಾರ್ಙ್ಗಿನ್, ಯಶಸ್ವಿನ್, ಅರ್ಯಮನ್, ಪೂಷನ್ ॥**

ಹಃ, ಹಂತೇಃ, ಞ್ಣಿನ್ನೇಷು ॥ ತ್ರಿಪದಸೂತ್ರ. ಹಃ ಸ್ಥಾನಾರ್ಥದಲ್ಲಿ ಷಷ್ಠೀ ಬಂದಿದೆ. ಹಕಾರದ ಸ್ಥಾನದಲ್ಲಿ ಎಂದರ್ಥ. ಹಂತೇಃ ಅವಯವ ಷಷ್ಠೀ. ಹನ್ ಧಾತುವಿನ ಅವಯವವಾದ ಎಂದರ್ಥ. ಶ್ತಿಪಿನಿಂದ ಧಾತುನಿರ್ದೇಶಮಾಡಿರುತ್ತಾನೆ. "ಞ್ ಚ ಣ್ ಚ ಞ್ಣೌ. ಞ್ಣೌ ಇತೌ ಯಯೋಸ್ತೌ ಞ್ಣಿತೌ. ಞ್ಣಿತೌ ಚ ನಶ್ಚ ಞ್ಣಿನ್ನಾಃ" ತೇಷು. ದ್ವಂದ್ವದ ಕೊನೆಯಲ್ಲಿ ಇತ್ ಇರುವುದರಿಂದ ಅದಕ್ಕೆ ಪ್ರತ್ಯೇಕಾನ್ವಯ. ಞಿತ್, ಣಿತ್, ನಕಾರ ಇವು ಪರವಾದಾಗ ಎಂದರ್ಥ. ಞಿತ್, ಣಿತ್, ಪ್ರತ್ಯಯ. ಅಂಗಾಧಿಕಾರದಲ್ಲಿ ಹೇಳಿರುವುದರಿಂದ ಪ್ರತ್ಯಯ ಪರದಲ್ಲಿ ಇರಲೇಬೇಕು. ಸೂತ್ರಾರ್ಥ. ಞಿತ್, ಣಿತ್ ಆದ ಪ್ರತ್ಯಯವೂ ನಕಾರವೂ ಪರದಲ್ಲಿರುವಾಗ ಹನ್‌ಧಾತುವಿನ ಹಕಾರಕ್ಕೆ ಕುತ್ವ ಬರುತ್ತದೆ. "ಚಜೋಃ ಕು ಘಿಣ್ಣ್ಯತೋಃ" ಸೂತ್ರದಿಂದ 'ಕುಃ' ಅನುವೃತ್ತಿ. ಪ್ರಕೃತ ನಿಮಿತ್ತ

ವಾದ ನಕಾರ ಪರವಾಗಿದೆ. ಆದುದರಿಂದ ಹಕಾರಕ್ಕೆ ಕುತ್ವ. ಕು ಅಂದರೆ ಕವರ್ಗ. ಅದರಲ್ಲಿ ಘೋಷ, ನಾದ, ಸಂವಾರ, ಮಹಾಪ್ರಾಣ ಯತ್ನಸಾಮ್ಯದಿಂದ ಹಕಾರಕ್ಕೆ ಘಕಾರವೇ ಬರುತ್ತದೆ. ವೃತ್ರಘ್ನ್+ಅಸ್=ವೃತ್ರಘ್ನಸ್=ವೃತ್ರಘ್ನಃ ‖ ಇನ್ನು ಅಜಾದಿಗಳಲ್ಲಿ ಅಲ್ಲೋಪ. ಈ ಸೂತ್ರದಿಂದ ಹಕಾರಕ್ಕೆ ಘಕಾರಾದೇಶ. ತೃ ‖ ವೃತ್ರಘ್ನಾ-ಹಲಾದಿಯಲ್ಲಿ ನಲೋಪ. ವೃತ್ರಹಭ್ಯಾಮ್-ವೃತ್ರಹಭಿಃ ‖ ಚ ‖ ವೃತ್ರಘ್ನೇ-ವೃತ್ರಹಭ್ಯಾಮ್-ವೃತ್ರಹಭ್ಯಃ ‖ ಪಂ-ವೃತ್ರಘ್ನಃ-ವೃತ್ರಹಭ್ಯಾಮ್-ವೃತ್ರಹಭ್ಯಃ ‖ ಷ-ವೃತ್ರಘ್ನಃ-ವೃತ್ರಘ್ನೋಃ-ವೃತ್ರಘ್ನಾಮ್ ‖ ಸ-ವೃತ್ರಘ್ನಿ-ವೃತ್ರಹಣಿ । ವೃತ್ರಘ್ನೋಃ-ವೃತ್ರಹಸು ‖

"ಶಾರ್ಙ್ಗಂ ಅಸ್ಯ ಅಸ್ತಿ ಇತಿ ಶಾರ್ಙ್ಗೀ" (ವಿಷ್ಣು) "ಶಾರ್ಙ್ಗಿನ್" ಶಬ್ದ. ಇದು ಇನ್ನಂತವಾದುದರಿಂದ ನಿಯಮಕ್ಕೆ ಒಳಪಡುತ್ತದೆ. ಹಿಂದಿನಂತೆ ಸುಪಿನಲ್ಲಿ ಮಾತ್ರದೀರ್ಘ. ರೇಫವಿರುವುದರಿಂದ "ಅಟ್ಕುಪ್ವಾಙ್—" ಸೂತ್ರದಿಂದ ನಕಾರಕ್ಕೆ ಣಕಾರಾದೇಶ. ಪ್ರ-ಶಾರ್ಙ್ಗೀ-ಶಾರ್ಙ್ಗಿಣೌ-ಶಾರ್ಙ್ಗಿಣಃ ‖ ದ್ವಿ—ಶಾರ್ಙ್ಗಿಣಂ-ಶಾರ್ಙ್ಗಿಣೌ-ಶಾರ್ಙ್ಗಿಣಃ‖ತೃ-ಶಾರ್ಙ್ಗಿಣಾ-ಶಾರ್ಙ್ಗಿಭ್ಯಾಮ್. ಶಾರ್ಙ್ಗಿಭಿಃ‖ ಇತ್ಯಾದಿ. "ಯಶಃ ಅಸ್ಯ ಅಸ್ತಿ ಇತಿ" ಯಶಸ್ವೀ. "ಯಶಸ್ವಿನ್" ಶಬ್ದ. ಇನ್ನಂತವಾದುದರಿಂದ ಶಾರ್ಙ್ಗಿನ್ ಶಬ್ದದಂತೇರೂಪ. ಅರ್ಯಮನ್-ಪೂಷನ್. ಸೂರ್ಯನ ಹೆಸರು. ಇವೆರಡು ಶಬ್ದಗಳೂ ಸೂತ್ರದಲ್ಲಿ ಸೇರಿರುವುದರಿಂದ ನಿಯಮದಿಂದ ಸುಪಿನಲ್ಲಿ ಮಾತ್ರದೀರ್ಘ. ರೇಫಷಕಾರ ನಿಮಿತ್ತವಿರುವುದರಿಂದ "ಅಟ್ಕುಪ್ವಾಙ್—" ಸೂತ್ರದಿಂದ ನಕಾರಕ್ಕೆ ಣತ್ವ. ಅರ್ಯಮಾ. ಅರ್ಯಮಣೌ ಅರ್ಯಮಣಃ ‖ ಶಸಾದಿ ಅಜಾದಿಗಳಲ್ಲಿ ಅನ್ನಿನ ಅಕಾರಕ್ಕೆ "ಅಲ್ಲೋಪೋಽನಃ" ಸೂತ್ರದಿಂದ ಲೋಪ. ಅರ್ಯಮ್ಣಃ-ಅರ್ಯಮ್ಣಾ-ಇತ್ಯಾದಿ ‖ ಪೂಷಾ-ಪೂಷಣೌ ಪೂಷಣಃ । ಪೂಷಣಂ-ಪೂಷಣೌ-ಪೂಷ್ಣಃ‖ಇತ್ಯಾದಿ. ಹಿಂದಿನಂತೇ ತಿಳಿಯಬೇಕು.

## ನಕಾರಾಂತ ಮಘವನ್ ಶಬ್ದ (ಇಂದ್ರ)

## ೨೯೦. ಮಘವಾ ಬಹುಲಮ್ ‖ ೬-೪-೧೨೮ ‖

**ಮಘವನ್ ಶಬ್ದಸ್ಯ ವಾ ತೃ ಇತ್ಯಂತಾದೇಶಃ ‖ ಋ ಇತ್ ‖**

ದ್ವಿಪದಸೂತ್ರ. "ಅರ್ವಣಸ್ತ್ರಸಾವನಞಃ" ಸೂತ್ರದಿಂದ "ತೃ" ಅನುವೃತ್ತವಾಗುತ್ತದೆ. ತೃ ಎಂಬಲ್ಲಿ ಪ್ರಥಮಾಲುಪ್ತವಾಗಿದೆ. ಮಘವಾ ಎಂಬಲ್ಲಿ ಷಷ್ಠ್ಯರ್ಥದಲ್ಲಿ ಪ್ರಥಮಾವಿಭಕ್ತಿಬಂದಿದೆ. ಮಘವನ್ ಶಬ್ದಕ್ಕೆ ಎಂದರ್ಥ. **ಸೂತ್ರಾರ್ಥ**—ಮಘವನ್ ಶಬ್ದಕ್ಕೆ ವಿಕಲ್ಪವಾಗಿ ತೃ ಆದೇಶ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯವಾದ ನಕಾರಕ್ಕೆ ಆದೇಶ. ಇದನ್ನೇ ವೃತ್ತಿಯಲ್ಲಿ ಅಂತಾದೇಶವೆಂದಿರುತ್ತಾನೆ. ತೃ ಎಂಬಲ್ಲಿ "ಉಪದೇಶೇಽನುನಾಸಿಕ ಇತ್" ಸೂತ್ರದಿಂದ ಋಕಾರ

ಇತ್ತಾಗುತ್ತದೆ. ಮಘವತ್ ಶಬ್ದವಾಯಿತು. ನಾಂತ ಹೋಗಿ ತಾಂತವಾಯಿತು. ಮಘವತ್ + ಸ್ ಎಂದಿರುವಾಗ ನುಮಾಗಮ ಹೇಳುತ್ತಾನೆ.

(ನುಮಾಗಮ ಹೇಳುವ ಸೂತ್ರ)

## ೨೯೧. ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ

॥ ೭-೧-೭೦ ॥

ಅಧಾತೋರುಗಿತೋ ನಲೋಪಿನೋಽಞ್ಚತೇಶ್ಚ ನುಮ್ ಸ್ಯಾತ್ ಸರ್ವನಾಮಸ್ಥಾನೇ ಪರೇ ॥ ಮಘವಾನ್-ಮಘವಂತೌ-ಮಘವಂತಃ ॥ ಹೇ ಮಘವನ್ । ಮಘವದ್ಭ್ಯಾಮ್ । ತೃತ್ವಾಭಾವೇ ಮಘವಾ । ಸುಟಿರಾಜವತ್ ॥

ಉಗಿದಚಾಂ, ಸರ್ವನಾಮಸ್ಥಾನೇ, ಅಧಾತೋಃ ॥ ತ್ರಿಪದ ಸೂತ್ರ. "ಉಕ್ ಇತ್ ಯೇಷಾಂತೇ" ಉಗಿತಃ. ಉಕ್ ಪ್ರತ್ಯಾಹಾರ. (ಉ, ಋ, ಌ) ಇವುಗಳಲ್ಲಿ ಯಾವುದಾದರೂ ಇತ್ ಆಗಿರುವುದು ಉಗಿತ್. "ಉಗಿತಶ್ಚ, ಅಚ್‌ಚ," ಉಗಿದಚಃ, ತೇಷಾಂ ಉಗಿದಚಾಮ್. ಅಞ್ಚುಗತಿಪೂಜನಯೋಃ, ಧಾತು. ಅಲ್ಲಿ ನಲೋಪ ಮಾಡಿದರೆ ಅಚ್ ಎಂದಾಗುತ್ತದೆ. ನಲೋಪಮಾಡಿದ ಅಂಚುಧಾತು ಇಲ್ಲಿ ಹೇಳಿರುವುದು ಅಧಾತೋಃ ಎಂಬುದು ಉಗಿತ್ತಿಗೆ ಮಾತ್ರ ವಿಶೇಷಣ. ಅಂಚುವಿನಲ್ಲಿ ಅಸಂಭವವಾದುದರಿಂದ ವಿಶೇಷಣವಿಲ್ಲ. "ಇದಿತೋ ನುಮ್ ಧಾತೋಃ" ಸೂತ್ರದಿಂದ "ನುಮ್" ಅನುವೃತ್ತಿ. ಸೂತ್ರಾರ್ಥ. ಧಾತುಭಿನ್ನವಾದ ಉಕ್ ಇತ್ತಾದ ಶಬ್ದಕ್ಕೂ, ನಲೋಪವನ್ನು ಹೊಂದಿದ ಅಂಚುಧಾತುವಿಗೂ ಸರ್ವನಾಮಸ್ಥಾನ ಪರವಾದಾಗ ನುಮಾಗಮ ಬರುತ್ತದೆ. ಮಘವತ್‌ಶಬ್ದ ಉಗಿತ್. ತೃ ಅಂತವಾದುದರಿಂದ ಅಲ್ಲಿ ಋಕಾರ ಇತ್ತಾಗಿದೆ. ಋಕಾರ ಉಕಿನಲ್ಲಿ ಸೇರಿದೆ. ಸರ್ವನಾಮಸ್ಥಾನ ಪರದಲ್ಲಿದೆ. ಆದುದರಿಂದ ನುಮ್. ನುಮಿನಲ್ಲಿ ಮಕಾರ "ಹಲಂತ್ಯಮ್" ಸೂತ್ರದಿಂದ ಇತ್. ಉಕಾರ ಉಚ್ಚಾರಣಾರ್ಥವಾಗಿದೆ. ನ್ ಉಳಿಯುತ್ತದೆ. ಮಿತ್ತಾದುದರಿಂದ "ಮಿದಚೋಂತ್ಯಾತ್ಪರಃ" ಸೂತ್ರದಿಂದ ಮಘವತಿನ ಅಂತ್ಯಾಚಿನ ಪರಕ್ಕೆ ಬರುತ್ತದೆ. ಅಂತ್ಯಾಚ್ ವಕಾರದ ಮೇಲಿರುವ ಅಕಾರ. ಅದರ ಪರಕ್ಕೆ ನುಮ್ ಬಂದರೆ ಮಘವನ್ + ಸ್ ಎಂದಾಗುತ್ತದೆ. "ಹಲ್‌ಙ್ಯಾಭ್ಯೋ" ಸೂತ್ರದಿಂದ ಸುವಿಗೆ ಲೋಪ. ಮಘವನ್‌ತ್. ಸಂಯೋಗಾಂತ ಪರವಾದುದರಿಂದ "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ಅಂತ್ಯ ತಕಾರಕ್ಕೆ, ಲೋಪ. ಮಘವನ್. ಈಗ ನಾಂತವಾದುದರಿಂದ "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರದಿಂದ ಉಪಧಾದೀರ್ಘ. ಮಘವಾನ್. ನ ಲೋಪ ಮಾತ್ರ ಬರುವುದಿಲ್ಲ. ಸಂಯೋಗಾಂತಲೋಪವು ಅಸಿದ್ಧವಾದುದರಿಂದ "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರವು ತಕಾರವಿದೆಯೆಂದು

ತಿಳಿದಿರುವುದರಿಂದ ಬರುವುದಿಲ್ಲ. ಹಾಗಾದರೆ ದೀರ್ಘ ಹೇಗೆ ಬಂತು? "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರ ಸಪಾದ ಸಪ್ತಾಧ್ಯಾಯಿಯಲ್ಲಿದೆ. ತ್ರಿಪಾದಿಯ ಕಾರ್ಯ ಅದಕ್ಕೆ ಹೇಗೆ ಗೊತ್ತಾಗುತ್ತದೆ? ಅಂದರೆ ದೀರ್ಘ ವಿಷಯದಲ್ಲಿ ಮಾತ್ರ ಲೋಪಸಿದ್ಧವಾಗುತ್ತದೆ. ಇತರ ಕಾರ್ಯದಲ್ಲಿ ಅಸಿದ್ಧ. ಇದು "ಮಘವಾ ಬಹುಲಮ್" ಎಂಬ ಸೂತ್ರದಲ್ಲಿ ಬಹುಲಗ್ರಹಣದಿಂದ ತಿಳಿಯುತ್ತದೆ. ಬಹುಳವೆಂದರೆ ಸಾಮಾನ್ಯವಾಗಿ ವಿಕಲ್ಪವೆಂದರ್ಥ. ಅಂದರೆ "ಬಹೂನ್ ಅರ್ಥಾನ್ ಲಾತಿ" ಬಹುಲಮ್ ಎಂದು ಅವಯವಾರ್ಥವಿರುವುದರಿಂದ ಕೆಲವು ಕಡೆ ವಿಶೇಷಾರ್ಥವನ್ನು ಕೊಡುತ್ತದೆ. ಆದುದರಿಂದ ಇಲ್ಲಿ ಈ ರೀತಿ ವಿಶೇಷಾರ್ಥ ಆ ಪದದಿಂದಲೇ ಸಿಕ್ಕಿದೆ. ಅದಕ್ಕೋಸ್ಕರ "ಕ್ವಚಿತ್‌ಪ್ರವೃತ್ತಿಃ, ಕ್ವಚಿದಪ್ರವೃತ್ತಿಃ, ಕ್ವಚಿದ್ವಿಭಾಷಾ, ಕ್ವಚಿದನ್ಯದೇವ ‖ ಶಿಷ್ಟಪ್ರಯೋಗಾನನುಸೃತ್ಯಲೋಕೇ ವಿಜ್ಞೇಯಮೇತತ್ ಬಹುಲಗ್ರಹೇತು ‖" ಎಂದು ಬಹುಲಗ್ರಹಣವಿದ್ದಲ್ಲಿ ಈ ರೀತಿ ಅರ್ಥ ಹೇಳುತ್ತಾರೆ. ಕೆಲವು ಕಡೆ ಬರುತ್ತದೆ ಯೆಂಬ ಅಂಶಮಾತ್ರ. ಕೆಲವುಕಡೆ ಬರುವುದಿಲ್ಲವೆಂಬ ಅಂಶಮಾತ್ರ. ಕೆಲವುಕಡೆ ಬರುತ್ತದೆ ಬರುವುದಿಲ್ಲ ಎರಡು ಅಂಶಗಳು. ಕೆಲವುಕಡೆ ವ್ಯತ್ಯಸ್ತಕಾರ್ಯ. ಹೀಗೆ ಬಹುಲಂ ಎಂದು ಹೇಳಿದಾಗ ನಾನಾ ರೀತಿಯಾಗಿ ರೂಪನೋಡಿ ತೀದುಕೊಳ್ಳಬೇಕು. ಪ್ರಕೃತ "ಕ್ವಚಿದನ್ಯದೇವ" ಎಂಬ ಅಂಶಮಾತ್ರ ಬರುತ್ತದೆ. ಹೀಗೆ ಬಹುಳ ಗ್ರಹಣದಿಂದ ದೀರ್ಘವಿಷಯದಲ್ಲಿ ಮಾತ್ರ ಸಂಯೋಗಾಂತಲೋಪವು ಅಸಿದ್ಧವಾಗುವುದಿಲ್ಲ. ಮಘವತ್ + ಔ ಎಂದಿರುವಾಗ ಹಿಂದಿನ ಸೂತ್ರದಿಂದ ನುಮ್. ಮಘವನ್‌ತ್+ಔ. ನಕಾರಕ್ಕೆ "ನಶ್ಚಾಪದಾಂತಸ್ಯ ಝಲಿ" ಸೂತ್ರದಿಂದ ಅನುಸ್ವಾರ. "ಅನುಸ್ವಾರಸ್ಯಯಯಿ ಪರಸವರ್ಣಃ" ಸೂತ್ರದಿಂದ ಪರಸವರ್ಣ ನಕಾರ. ಮಘವನ್ತೌ-ಸರ್ವನಾಮಸ್ಥಾನಗಳಲ್ಲಿ ಹೀಗೇ ನುಮ್. ನಕಾರಕ್ಕೆ ಅನುಸ್ವಾರ, ಪರಸವರ್ಣ. ಮಘವನ್ತಃ ‖ ಸಂಬುದ್ಧಿಯಲ್ಲಿ "ಅಸಂಬುದ್ಧೌ" ನಿಷೇಧ ಮಾಡಿರುವುದರಿಂದ ದೀರ್ಘವಿಲ್ಲ. ಹೇ ಮಘವನ್-ಹೇ ಮಘವನ್ತೌ-ಹೇ ಮಘವನ್ತಃ ‖ ಮಘವನ್ತಂ-ಮಘವನ್ತೌ-ಮಘವತಃ ‖ ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ತೃ ‖ ಮಘವತಾ ಹಲಾದಿಯಲ್ಲಿ ತಕಾರಕ್ಕೆ "ಝಲಾಂ ಜಶೋಂತೇ" ಸೂತ್ರದಿಂದ ಜಶ್ತ್ವ. ದಕಾರ. ಮಘವದ್ಭ್ಯಾಮ್-ಮಘವದ್ಭಿಃ ‖ ಚ-ಮಘವತೇ-ಮಘವದ್ಭ್ಯಾಮ್-ಮಘವದ್ಭ್ಯಃ ‖ ಪಂ-ಮಘವತಃ-ಮಘವದ್ಭ್ಯಾಮ್ ಮಘವದ್ಭ್ಯಃ ‖ ಷ-ಮಘವತಃ-ಮಘವತೋಃ-ಮಘವತಾಮ್ । ಸ । ಮಘವತಿ । ಮಘವತೋಃ-ಮಘವತ್ಸು ‖

ತೃತ್ವ ವಿಕಲ್ಪವಾದುದರಿಂದ ಬಾರದಿದ್ದರೆ ಮಘವನ್ ನಾಂತವಾಗಿಯೇ ಇರುತ್ತದೆ. ಸುಟನಲ್ಲಿ(ಸರ್ವನಾಮಸ್ಥಾನ) ರಾಜನ್ ಶಬ್ದದಂತೇ ರೂಪ. ಪ್ರ. ಮಘವಾ-ಮಘವಾನೌ-ಮಘವಾನಃ ‖ ಸಂ-ಹೇ ಮಘವನ್-‖ ದ್ವಿ. ಮಘವಾನಮ್ ಮಘವಾನೌ-। ಮಘವನ್+ಶಸ್ ಎಂದಿರುವಾಗ ವಿಶೇಷಕಾರ್ಯ ಹೇಳುತ್ತಾನೆ.

(ಶ್ವಾದಿಗಳಿಗೆ ಸಂಪ್ರಸಾರಣ ಹೇಳುವ ಸೂತ್ರ)

## ೨೮೨. ಶ್ವಯುವ ಮಘೋನಾಮತದ್ಧಿತೇ ॥೬-೪-೧೩೩॥

ಅನ್ನಂತಾನಾಂ ಭಸಂಜ್ಞಕಾನಾಮೇಷಾಮತದ್ಧಿತೇ ಸಂಪ್ರಸಾರಣಂ ಸ್ಯಾತ್ ॥ ಮಘೋನಃ । ಮಘವಭ್ಯಾಮ್ । ಇತ್ಯಾದಿ । ಏವಂ ಶ್ವನ್, ಯುವನ್ ॥

ಶ್ವಯುವಮಘೋನಾಂ, ಅತದ್ಧಿತೇ ॥ "ವಸೋಃ ಸಂಪ್ರಸಾರಣಮ್" ಸೂತ್ರದಿಂದ "ಸಂಪ್ರಸಾರಣಮ್" ಅನುವೃತ್ತಿ. "ಅಲ್ಲೋಪೋಽನಃ" ಸೂತ್ರದಿಂದ "ಅನಃ" ಅಪಕರ್ಷ. ಅದು ಮುಂದಿನ ಸೂತ್ರವಾದುದರಿಂದ ಅಪಕರ್ಷ. "ಭಸ್ಯ" ಅಧಿಕಾರ. "ಶ್ವಾಚ, ಯುವಾಚ, ಮಘವಾಚ," ಶ್ವಯುವಮಘವಾನಃ. ತೇಷಾಂ ಶ್ವಯುವಮಘೋನಾಂ. "ಅನಃ" ಎಂಬುದು ಪ್ರತ್ಯೇಕವಾಗಿ ಅಲ್ಲಿ ಅನ್ವಯ ಹೊಂದುತ್ತದೆ. ವಿಶೇಷಣವಾದುದರಿಂದ ತದಂತವಿಧಿ. ಸೂತ್ರಾರ್ಥ. ಭಸಂಜ್ಞೆಯುಳ್ಳ ಅನ್ನಂತವಾದ ಶ್ವನ್, ಯುವನ್, ಯುವನ್, ಮಘವನ್ ಶಬ್ದಗಳಿಗೆ ತದ್ಧಿತ ಪ್ರತ್ಯಯಪರದಲ್ಲಿ ಇಲ್ಲದೇ ಇರುವಾಗ ಸಂಪ್ರಸಾರಣ ಬರುತ್ತದೆ. (ಯಚಿಭಮ್-ಭ ಸಂಜ್ಞಾ) ಅಜಾದಿ ಪ್ರತ್ಯಯಪರವಾದುದರಿಂದ ಭಸಂಜ್ಞೆ ಇದೆ. ತದ್ಧಿತ ಪ್ರತ್ಯಯ ಇಲ್ಲಿ ಪರವಾಗಿಲ್ಲ. ಮಘವನ್ ಅನ್ನಂತವಾಗಿದೆ. ಸಂಪ್ರಸಾರಣ ಬಂದರೆ (ಇಗ್ಯಣಃ ಸಂಪ್ರಸಾರಣಮ್) ಮಘವನ್ ಎಂಬಲ್ಲಿ ವಕಾರಕ್ಕೆ ಉಕಾರ. ಮಘ+ಉ+ಅನ್+ಅಸ್. "ಆದ್ಗುಣಃ" ಸೂತ್ರದಿಂದ ಗುಣ. ಮಘೋನಸ್. ರುತ್ವವಿಸರ್ಗ. ಮಘೋನಃ ॥ ತೃತೀಯಾ ಅಜಾದಿಗಳಲ್ಲಿ ಇನ್ನು ಮುಂದೆ ಹೀಗೆ ಕಾರ್ಯಬಂದು ಮಘೋನ್ ರೂಪವಾಗಿ ಆಯಾಯ ಪ್ರತ್ಯಯ ಸೇರಿಸುವುದುಮಾತ್ರ. ಮಘವನ್ ಶಬ್ದಕ್ಕೆ ತಕಾರಾದೇಶ ಬಂದಾಗ ಅದು ಅನ್ನಂತವಾಗದಿರುವುದರಿಂದ ಅಲ್ಲಿ ಬರುವುದಿಲ್ಲ. ತೃ-ಮಘೋನಾ-ಹಲಾದಿಯಲ್ಲಿ "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ. ಮಘವಭ್ಯಾಮ್-ಮಘವಭಿಃ ॥ ಚ-ಮಘೋನೇ-ಮಘವಭ್ಯಾಮ್-ಮಘವಭ್ಯಃ ॥ ಪಂ-ಮಘೋನಃ-ಮಘವಭ್ಯಾಮ್-ಮಘವಭ್ಯಃ ॥ ಷ-ಮಘೋನಃ-ಮಘೋನೋಃ-ಮಘೋನಾಮ್ ॥ ಸ-ಮಘೋನಿ-ಮಘೋನೋಃ-ಮಘವಸು ॥ ಹೀಗೆಯೇ ಶ್ವನ್, ಯುವನ್ ಶಬ್ದ ತಿಳಿಯಬೇಕು. ಶ್ವನ್ ಶಬ್ದ ಸುಟಿನಲ್ಲಿ ರಾಜನ್ ಶಬ್ದದಂತೇ ಆಗುತ್ತದೆ. ಶ್ವಾ-ಶ್ವಾನೌ-ಶ್ವಾನಃ । ಹೇ ಶ್ವನ್-॥ ದ್ವಿ. ಶ್ವಾನಂ-ಶ್ವಾನೌ ॥ ಶ್ವನ್+ಅಸ್ ಎಂದಿರುವಾಗ ಈ ಸೂತ್ರದಿಂದ ಸಂಪ್ರಸಾರಣ, ಪೂರ್ವರೂಪ ಬಂದರೆ ಶ್+ಉ+ಅನ್+ಅಸ್ ಶುನಸ್=ಶುನಃ । ಶುನಾ-ಶ್ವಭ್ಯಾಮ್-ಶ್ವಭಿಃ ॥ ಇತ್ಯಾದಿ. ಯುವನ್ ಶಬ್ದವೂ ಸುಟಿಯಲ್ಲಿ ರಾಜನ್ ಶಬ್ದದಂತೇ ಆಗುತ್ತದೆ. ಯುವಾ-ಯುವಾನೌ-ಯುವಾನಃ ॥ ಹೇ ಯುವನ್ ॥ ದ್ವಿ-ಯುವಾನಂ-ಯುವಾನೌ-ಯುವನ್+(ಶ್) ಅಸ್ ಎಂದಿರುವಾಗ ಈ ಸೂತ್ರದಿಂದ ಸಂಪ್ರಸಾರಣ ಬರಬೇಕು.

ಆಧರೆ ಯಣಿಗೆ ಇಕ್ ಬರುವುದೇ ಸಂಪ್ರಸಾರಣವೆಂದುದರಿಂದ ಇಲ್ಲಿ ಯಣ್ ಎರಡಿದೆ. ಯಕಾರ, ವಕಾರ. ಯಾವುದಕ್ಕೆ ಬರಬೇಕು ? ಅಂದರೆ ಇದನ್ನು ವ್ಯವಸ್ಥೆ ಮಾಡಲು ಸೂತ್ರ ಹೇಳುತ್ತಾನೆ.

(ಸಂಪ್ರಸಾರಣನಿಯಮ ಮಾಡುವ ಸೂತ್ರ)

**೨೯೩. ನ ಸಂಪ್ರಸಾರಣೇ ಸಂಪ್ರಸಾರಣಮ್ ॥೬-೧-೩೭॥**

**ಸಂಪ್ರಸಾರಣೇ ಪರತಃ ಪೂರ್ವಸ್ಯ ಯಣಃ ಸಂಪ್ರಸಾರಣಂ ನ ಸ್ಯಾತ್ । ಇತಿ ಯಕಾರಸ್ಯ ನೇತ್ತ್ವಮ್ । ಅತ ಏವ ಜ್ಞಾಪಕಾದಂತ್ಯಸ್ಯ ಯಣಃ ಪೂರ್ವಂ ಸಂಪ್ರಸಾರಣಮ್ । ಯೂನಃ । ಯೂನಾ । ಯುವಭ್ಯಾಮ್ । ಇತ್ಯಾದಿ । ಅರ್ವಾ । ಹೇ ಅರ್ವನ್ ॥**

ತ್ರಿಪದ ಸೂತ್ರ । **ಸೂತ್ರಾರ್ಥ.** ಸಂಪ್ರಸಾರಣಪರದಲ್ಲಿರುವಾಗ ಅದರ ಪೂರ್ವಕ್ಕೆ ಸಂಪ್ರಸಾರಣ ಬರುವುದಿಲ್ಲ. ಹೀಗೆ ಈ ಸೂತ್ರ ಹೇಳಿದುದರಿಂದಲೇ ಪರಕ್ಕೆ ಮೊದಲು ಸಂಪ್ರಸಾರಣಮಾಡಬೇಕೆಂದು ತಿಳಿಯುತ್ತದೆ. ವಕಾರಕ್ಕೆ ಮೊದಲು ಸಂಪ್ರಸಾರಣಮಾಡಿದರೆ ಯು+ಉ+ಅನ್=ಅಸ್ ಎಂದಿರುವಾಗ "ಸಂಪ್ರಸಾರಣಾಚ್ಚ" ಸೂತ್ರದಿಂದ ಪೂರ್ವರೂಪ. ಯು+ಉನ್+ಅಸ್. ಯಕಾರಕ್ಕೆ ಸಂಪ್ರಸಾರಣ ಇಕಾರ ಬರಲಿ ಎಂದರೆ ಈಗ ಬರುವುದಿಲ್ಲ. ಈಗ ಅದಕ್ಕೆ ಸಂಪ್ರಸಾರಣಪರವಾದುದರಿಂದ ಈ ಸೂತ್ರದಿಂದ ನಿಷೇಧ. ಸವರ್ಣದೀರ್ಘ. ಯೂನಸ್=ಯೂನಃ॥ ಇನ್ನು ಅಜಾದಿಯಲ್ಲಿ ಯೂನ್ ಅಂಗ. ಪ್ರತ್ಯಯ ಸೇರಿಸುವುದುಮಾತ್ರ. ತೃ॥ ಯೂನಾ-ಯುವಭ್ಯಾಮ್ ಯುವಭಿಃ ॥ ಚ ಯೂನೇ-ಯುವಭ್ಯಾಮ್-ಯುವಭ್ಯಃ॥ ಪಂ-ಯೂನಃ—ಯುವಭ್ಯಾಮ್—ಯುವಭ್ಯಃ ॥ ಷ—ಯೂನಃ—ಯೂನೋಃ—ಯೂನಾಮ್ ॥ ಸ—ಯೂನಿ—ಯೂನೋಃ—ಯುವಸು ॥

---

ನಕಾರಾಂತ ಅರ್ವನ್ ಶಬ್ದ (ಕುದುರೆ)

ಅರ್ವನ್+ಸ್ ಎಂದಿರುವಾಗ "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರದಿಂದ ಉಪಧಾದೀರ್ಘ. "ಹಲ್‌ಙ್ಯಾಭ್ಯೋ"—ಸೂತ್ರದಿಂದ ಸುಲೋಪ, "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ, ಅರ್ವಾ. ದ್ವಿವಚನಾದಿಗಳಲ್ಲಿ ತೃ ಆದೇಶ ಹೇಳುತ್ತಾನೆ.

(ಅರ್ವನ್ ಶಬ್ದಕ್ಕೆ ತೃ ಆದೇಶ ಹೇಳುವ ಸೂತ್ರ)

**೨೯೪. ಅರ್ವಣಸ್ತ್ರಸಾವನಞಃ ॥ ೬-೪-೧೨೭ ॥**

**ನಞಾರಹಿತಸ್ಯ ಅರ್ವನ್ನಿತ್ಯಸ್ಯಾಂಗಸ್ಯ ತೃ ಇತ್ಯಂತಾದೇಶೋ ನ ತು ಸೌ ॥ ಅರ್ವಂತೌ । ಅರ್ವಂತಃ ॥ ಅರ್ವಂತಂ । ಅರ್ವತಃ ॥ ಅರ್ವತಾ । ಅರ್ವದ್ಭ್ಯಾಮ್ । ಇತ್ಯಾದಿ ॥**

ಅರ್ವಣಃ, ತೃ, ಅಸೌ, ಅನಞಃ ॥ ನಾಲ್ಕುಪದವುಳ್ಳ ಸೂತ್ರ. ಸಪದ್ಯತೇ ನಞ್ಯಸ್ಯಸಃ ಅನಞ್. ತಸ್ಯ ಅನಞಃ ॥ ನಞ್ ಇಲ್ಲದಿರುವ ಎಂದರ್ಥ. "ಅಂಗಸ್ಯ" ಅಧಿಕಾರ. ನಸೌ. ಅಸೌ, ಸುಪರವಾದಾಗ ಇಲ್ಲ. ಸೂತ್ರಾರ್ಥ. ನಞ್ ಇಲ್ಲದಿರುವ ಅರ್ವನ್ ರೂಪವಾದ ಅಂಗಕ್ಕೆ ತೃ ಅಂತಾದೇಶವಾಗಿ ಬರುತ್ತದೆ. ಆದರೆ ಸುಪರದಲ್ಲಿದ್ದರೆ ಬರುವುದಿಲ್ಲ. ಅಂಗಕ್ಕೆ ಆದೇಶವೆಂದರೆ "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂಗದ ಅಂತ್ಯಕ್ಕೆಂದುದರಿಂದ ವೃತ್ತಿಯಲ್ಲಿ ಅಂತಾದೇಶವೆಂದಿರುತ್ತಾನೆ. ಪ್ರಕೃತ ನಞ್ ಇಲ್ಲ. ಸುಪರದಲ್ಲಿಯೂ ಇಲ್ಲ. ಅರ್ವನ್+ಔ ಎಂದಿರುವಾಗ ತೃ ಅಂತಾದೇಶ. ತೃವಿನಲ್ಲಿ ಋಕಾರ ಇತ್. ನಕಾರಕ್ಕೆ ತಕಾರ ಬಂದರೆ ಅರ್ವತ್+ಔ ಎಂದು ನಕಾರಾಂತ ಹೋಗಿ ತಕಾರಾಂತವಾಗುತ್ತದೆ ತೃವಿನಲ್ಲಿ ಋಕಾರ ಇತ್ತಾದುದರಿಂದ ಉಗಿತ್ತಾಯಿತು. ಆಗ ಸರ್ವನಾಮ ಸ್ಥಾನದಲ್ಲಿ ಮಘವತ್ ಶಬ್ದದಂತೇ "ಉಗಿದಚಾಂ ಸರ್ವನಾಮಸ್ಥಾನೇಧಾತೋಃ" ಸೂತ್ರದಿಂದ ನುಮಾಗಮ. ಮಿತ್ತಾದುದರಿಂದ ಅಂತ್ಯಾಚಿನಪರವಾಗಿ ಬರುತ್ತದೆ. ಅರ್ವನ್ತ್+ಔ. ನಕಾರಕ್ಕೆ ಅನುಸ್ವಾರ, ಪರಸವರ್ಣ. ಅರ್ವನ್ತೌ-ಅರ್ವನ್ತಃ ॥ ಸಂ-ಪ್ರ-ಹೇ ಅರ್ವನ್-ಹೇ ಅರ್ವನ್ತೌ-ಹೇ ಅರ್ವನ್ತಃ ॥ ದ್ವಿ-ಅರ್ವನ್ತಂ । ಅರ್ವನ್ತೌ. ಅರ್ವತಃ ॥ ಕೇವಲ ತೃ ಅಂತಾದೇಶ. ತೃ-ಅರ್ವತಾ ಅರ್ವದ್ಭ್ಯಾಮ್ "ಝಲಾಂ ಜಶೋಂತೇ" ಸೂತ್ರದಿಂದ ತಕಾರಕ್ಕೆ ದಕಾರಾದೇಶ. ಅರ್ವದ್ಭಿಃ ॥ ಚ—ಅರ್ವತೇ— ಇತ್ಯಾದಿ. ಅರ್ವತ್ ಅಂಗ ಪ್ರತ್ಯಯ ಸೇರಿಸುವುದು ಮಾತ್ರ.

ನಕಾರಾಂತ "ಪಥಿನ್" ಶಬ್ದ (ದಾರಿ)

ಪಥಿನ್+ಸು ಎಂದಿರುವಾಗ ಆತ್ವ ಹೇಳುತ್ತಾನೆ.

(ಪಥಿನ್ ಮುಂತಾದವುಗಳಿಗೆ ಆತ್ವಹೇಳುವ ಸೂತ್ರ)

## ೨೯೫. ಪಥಿಮಥ್ಯೃಭುಕ್ಷಾಮಾತ್ ॥ ೭-೧-೮೫ ॥

**ಏಷಾಮಾಕಾರೋಽನ್ತಾದೇಶಃ ಸ್ಯಾತ್ ಸೌ ಪರೇ ॥**

ಪಥಿಮಥ್ಯೃಭುಕ್ಷಾಮ್, ಆತ್ ॥ ದ್ವಿಪದ ಸೂತ್ರ. "ಸಾವನಡುಹಃ" ಸೂತ್ರದಿಂದ "ಸೌ" ಅನುವೃತ್ತಿ. "ಪಂಥಾಶ್ಚ, ಮಂಥಾಶ್ಚ, ಋಭುಕ್ಷಾಶ್ಚ" ಪಥಿಮಥ್ಯೃಭುಕ್ಷಾಣಃ. ತೇಷಾಂ ಪಥಿಮಥ್ಯೃಭುಕ್ಷಾಮ್. ಆತ್ ತಪರ ಮಾಡಿರುವುದರಿಂದ "ತಪರಸ್ತತ್ಕಾಲಸ್ಯ" ಸೂತ್ರದಿಂದ ದೀರ್ಘ ಮಾತ್ರ ತೆಗೆದುಕೊಳ್ಳಬೇಕು. ಸೂತ್ರಾರ್ಥ. ಪಥಿನ್, ಮಥಿನ್, ಋಭುಕ್ಷಿನ್ ಈ ಶಬ್ದಗಳಿಗೆ ಸುಪರವಾದಾಗ

ಆಕಾರ ಅಂತಾದೇಶವಾಗಿ ಬರುತ್ತದೆ. "ಅಲೋಽಂತ್ಯಸ್ಯ" ಪರಿಭಾಷೆಯಿಂದ ಅಂತಾದೇಶವೆಂದು ಲಬ್ಧವಾಗುತ್ತದೆ. ನಕಾರಕ್ಕೆ ಆಕಾರ ಬಂದರೆ ಪಥಿನ್+ಸ್ ಎಂದಾಗುತ್ತದೆ. ಈಗ ಇಕಾರಕ್ಕೆ ಅಕಾರ ಹೇಳುತ್ತಾನೆ.

(ಪಥಿನ್ ಪ್ರಭೃತಿಗಳ ಇಕಾರಕ್ಕೆ ಅಕಾರ ಹೇಳುವ ಸೂತ್ರ)

## ೨೯೬. ಇತೋಽತ್ಸರ್ವನಾಮಸ್ಥಾನೇ ॥ ೭-೧-೮೬ ॥

**ಪಥ್ಯಾದೇರಿಕಾರಸ್ಯ ಅಕಾರಸ್ಸ್ಯಾತ್ ಸರ್ವನಾಮಸ್ಥಾನೇ ಪರೇ ॥**

ಇತಃ, ಅತ್, ಸರ್ವನಾಮಸ್ಥಾನೇ ॥ ತ್ರಿಪದಸೂತ್ರ. ಹಿಂದಿನ ಸೂತ್ರದಿಂದ "ಪಥಿಮಥ್ಯೃಭುಕ್ಷಾಂ" ಅನುವೃತ್ತಿ. "ಅತ್" ತಪರಮಾಡಿರುವುದರಿಂದ ಹ್ರಸ್ವ ಅಕಾರಮಾತ್ರವೆಂದು ಬೋಧಿತವಾಗುತ್ತದೆ. ವಿಧಿಸಲ್ಪಡುವುದರಿಂದ ಸವರ್ಣಗ್ರಹಣವಿಲ್ಲ. ಸ್ಪಷ್ಟಪ್ರತಿಪತ್ತಿಗೋಸ್ಕರ ತಪರಮಾಡಿರುತ್ತಾನೆ. **ಸೂತ್ರಾರ್ಥ.** ಪಥಿನ್, ಮಥಿನ್, ಋಭುಕ್ಷಿನ್ ಈ ಮೂರು ಶಬ್ದಗಳ ಇಕಾರಕ್ಕೆ ಸರ್ವನಾಮಸ್ಥಾನ (ಸುಟ್) ಪರವಾದಾಗ ಅಕಾರ ಬರುತ್ತದೆ. ಪಥಿ+ಆ+ಸ್ ಎಂದಿರುವಾಗ ಇಕಾರಕ್ಕೆ ಅಕಾರ ಬಂದರೆ ಪಥ+ಆ-ಸ್ ಎಂದಾಗುತ್ತದೆ. ಇಲ್ಲಿ ಥಕಾರಕ್ಕೆ ನ್ಥ ಆದೇಶ ಹೇಳುತ್ತಾನೆ.

(ಥಕಾರಕ್ಕೆ ನ್ಥ ಆದೇಶ ಹೇಳುವ ಸೂತ್ರ)

## ೨೯೭. ಥೋನ್ಥಃ ॥ ೭-೧-೮೭ ॥

**ಪಥಿಮಥೋಸ್ಥಸ್ಯ ನ್ಥಾದೇಶಃ ಸ್ಯಾತ್ ಸರ್ವನಾಮಸ್ಥಾನೇ ಪರೇ॥**

**ಪನ್ಥಾಃ । ಪನ್ಥಾನೌ । ಪನ್ಥಾನಃ ॥ ಪನ್ಥಾನಂ । ಪನ್ಥಾನೌ ॥**

ಥಃ ನ್ಥಃ ॥ ದ್ವಿಪದಸೂತ್ರ. ಥ್-ಥೌ-ಥಃ ॥ ಥಃ-ಥೋಃ ಥಾಮ್ ॥ ಥಃ ಷಷ್ಠೀ. ನ್ಥಃ ಪ್ರಥಮಾ. ಅಲ್ಲಿ ಅಕಾರ ಉಚ್ಚಾರಣಾರ್ಥ. ಹಿಂದಿನ ಸೂತ್ರದಿಂದ ಪಥಿಮಥಿ ಎರಡು ಶಬ್ದಗಳು ಮಾತ್ರ ಅನುವೃತ್ತವಾಗುತ್ತವೆ. ಋಭುಕ್ಷಿನ್ ಶಬ್ದದಲ್ಲಿ ಥಕಾರವಿಲ್ಲದುದರಿಂದ ಅದಕ್ಕೆ ಇಲ್ಲಿ ಅನುವೃತ್ತಿಯಿಲ್ಲ. ಹಿಂದಿನ ಸೂತ್ರದಿಂದ "ಸರ್ವನಾಮಸ್ಥಾನೇ" ಅನುವೃತ್ತಿ. **ಸೂತ್ರಾರ್ಥ** ಪಥಿನ್ ಮಥಿನ್ ಶಬ್ದಗಳ ಥಕಾರಕ್ಕೆ ಸರ್ವನಾಮಸ್ಥಾನ ಪರವಾದಾಗ ನ್ಥಾದೇಶ ಬರುತ್ತದೆ. ಥ್‌ಗೆ ನ್ಥ್ ಆದೇಶ ಪಥ+ಆ+ಸ್. ಪನ್ಥ+ಆ+ಸ್ ಆಗುತ್ತದೆ. ಸವರ್ಣದೀರ್ಘ. ಪನ್ಥಾಸ್. "ಸಸಜುಷೋರುಃ" ರುತ್ವ. "ಖರವಸಾನಯೋಃ-" ಸೂತ್ರದಿಂದ ವಿಸರ್ಗ. ಪನ್ಥಾಃ ॥ ಹೀಗೇ ಸರ್ವನಾಮಸ್ಥಾನಗಳಲ್ಲಿ ಹಿಂದೆ ಹೇಳಿದಂತೆ ಇಕಾರಕ್ಕೆ ಅಕಾರ. ಥಕಾರಕ್ಕೆ ನ್ಥಾದೇಶ. ಪಥಿನ್+ಔ. ಪಥನ್+ಔ=ಪನ್ಥನ್+ಔ. "ಸರ್ವನಾಮಸ್ಥಾನೇ ಚಾಽಸಂಬುದ್ಧೌ" ಸೂತ್ರದಿಂದ ಉಪಧಾದೀರ್ಘ. ಪನ್ಥಾನೌ-ನಕಾರಕ್ಕೆ ಆಕಾರ ಸುವಿನಲ್ಲಿ ಮಾತ್ರ. ಪಥಿನ್+(ಜ್)ಅಸ್=ಪಥನ್+ಅಸ್-ಪನ್ಥನ್+ಅಸ್. ದೀರ್ಘ. ಪನ್ಥಾನಃ ॥ ಸಂಬೋಧನೆಯಲ್ಲಿ ಹೇ ಪಂಥಾಃ ಹೇ ಪಂಥಾನೌ-ಹೇ

ಪಂಥಾನಃ ॥ ದ್ವಿ. ಪಂಥಾನಂ-ಪಂಥಾನೌ-ಪಥಿನ್+(ಶ್) ಅಸ್ ಎಂದಿರುವಾಗ (ಇದು ಸರ್ವನಾಮಸ್ಥಾನವಲ್ಲ) ಟಲೋಪ ಹೇಳುತ್ತಾನೆ.

(ಪಥಿನ್ ಮುಂತಾದವುಗಳ ಟಿಗೆ ಲೋಪ ಹೇಳುವ ಸೂತ್ರ)

## ೨೯೮. ಭಸ್ಯ ಟೇರ್ಲೋಪಃ ॥ ೭-೧-೮೮ ॥

**ಭಸ್ಯ ಪಥ್ಯಾದೇಷ್ಟೇರ್ಲೋಪಃ ॥ ಪಥಃ । ಪಥಾ । ಪಥಿಭ್ಯಾಮ್ ॥ ಏವಂ ಮಥಿನ್, ಋಭುಕ್ಷಿನ್ ॥**

ಭಸ್ಯ, ಟೇ, ಲೋಪಃ ॥ ತ್ರಿಪದಸೂತ್ರ. "ಪಥಿಮಥ್ಯೃಭುಕ್ಷಾಮ್" ಪೂರ್ವಸೂತ್ರದಿಂದ ಅನುವೃತ್ತಿ. ಸೂತ್ರಾರ್ಥ. ಭಸಂಜ್ಞೆಯಿರುವ (ಯಾದಿ, ಅಜಾದಿ ಪ್ರತ್ಯಯಪರವಾದಾಗ) ಪಥಿನ್, ಮಥಿನ್, ಋಭುಕ್ಷಿನ್ ಶಬ್ದಗಳ ಟಿಗೆ ಲೋಪ ಬರುತ್ತದೆ. ಪ್ರಕೃತ ಅಜಾದಿ ಪ್ರತ್ಯಯ ಪರವಾದುದರಿಂದ ಭಸಂಜ್ಞೆಯಿದೆ. "ಅಚೋಂತ್ಯಾದಿಟಿ" ಸೂತ್ರದಿಂದ ಟಿ ಸಂಜ್ಞೆ ಹೇಳಿದೆ. ಪಥಿನ್ ಶಬ್ದದಲ್ಲಿ ಇನ್ ಟಿ. ಆದಕ್ಕೆ ಲೋಪ ಬಂದರೆ ಪಥ್+ಅಸ್=ಪಥಃ ॥ ಇನ್ನು ಅಜಾದಿಯಲೆಲ್ಲಾ ಟಿಗೆ ಲೋಪ. ಹಲಾದಿಯಲ್ಲಿ ನಲೋಪ. ತೃ-ಪಥಾ-ಪಥಿಭ್ಯಾಮ್-ಪಥಿಭಿಃ । ಚ-ಪಥೇ-ಪಥಿಭ್ಯಾಮ್-ಪಥಿಭ್ಯಃ ॥ ಪಂ-ಪಥಃ-ಪಥಿಭ್ಯಾಮ್ ಪಥಿಭ್ಯಃ ॥ ಷ-ಪಥಃ-ಪಥೋಃ-ಪಥಾಮ್ ॥ ಸ. ಪಥಿ-ಪಥೋಃ-ಪಥಿಷು. ಹೀಗೆಯೇ ಮಥಿನ್ ಶಬ್ದ. ಮಥಃ-ಮಂಥಾಃ-ಮಂಥಾನೌ-ಮಂಥಾನಃ ॥ ಇತ್ಯಾದಿ. ಭ ಸಂಜ್ಞೆ ಇರುವಲ್ಲಿ. ಮಥಃ-ಇತ್ಯಾದಿ. (ಕಡಗೋಲು ಅರ್ಥ) ಹೀಗೆಯೇ ಋಭುಕ್ಷಿನ್ ಶಬ್ದ. ಇಲ್ಲಿ ಥಕಾರವಿಲ್ಲದುದರಿಂದ ಅವರ ಕಾರ್ಯವಿಲ್ಲ. ಋಭುಕ್ಷಾಃ-ಋಭುಕ್ಷಾಣೌ-ಋಭುಕ್ಷಾಣಃ ॥ "ಅಟ್‌ಕುಪ್ವಾಙ್‌ನುಮ್" ಸೂತ್ರದಿಂದ ಷಕಾರ ನಿಮಿತ್ತವಿರುವುದರಿಂದ ನಕಾರಕ್ಕೆ ಣಕಾರಾದೇಶ. ಭ ಸಂಜ್ಞೆಯಿರುವಲ್ಲಿ ಋಭುಕ್ಷಿನ್+ಅಸ್=ಋಭುಕ್ಷಃ-ಋಭುಕ್ಷಾ-ಇತ್ಯಾದಿ.

---

ನಕಾರಾಂತ,-"ಪಂಚನ್"-ಶಬ್ದ (ಐದು)

ಇದು ಬಹುತ್ವ ಸಂಖ್ಯಾವಾಚಕವಾದುದರಿಂದ ಯಾವಾಗಲೂ ಬಹುವಚನಾಂತವಾಗಿಯೇ ಇರುತ್ತದೆ. ಈಗ ಇದಕ್ಕೆ "ಷಟ್" ಸಂಜ್ಞಾ ಹೇಳುತ್ತಾನೆ.

("ಷಟ್" ಸಂಜ್ಞಾ ಹೇಳುವ ಸೂತ್ರ)

## ೨೯೯. ಷ್ಣಾಂತಾ ಷಟ್ ॥ ೧-೧-೨೪ ॥

**ಷಾಂತಾ ನಾಂತಾ ಚ ಸಂಖ್ಯಾ ಷಟ್‌ಸಂಜ್ಞಾ ಸ್ಯಾತ್ ॥ ಪಂಚನ್-ಶಬ್ದೋ ನಿತ್ಯಂ ಬಹುವಚನಾಂತಃ ॥ ಪಂಚ । ಪಂಚ । ಪಂಚಭಿಃ । ಪಂಚಭ್ಯಃ । ಪಂಚಭ್ಯಃ ॥ ನುಟ್ ॥**

ಷ್ಣಾಂತಾ, ಷಟ್ ॥ ದ್ವಿಪದ ಸೂತ್ರ. "ಬಹುಗಣವತುಡತಿ ಸಂಖ್ಯಾ" ಸೂತ್ರದಿಂದ "ಸಂಖ್ಯಾ" ಅನುವೃತ್ತಿ. ಷ್ ಚ, ನ್ಶ್ಚ-ಷ್ಣೌ (ಷ್ಟುತ್ವದಿಂದ ನಕ್ಕೆ ಣ) ಷ್ಣೌ ಅಂತೇ ಯಸ್ಯಾಃ ಸಾ ಷ್ಣಾಂತಾ ॥ ಅನುವೃತ್ತವಾದ ಸಂಖ್ಯಾವೆಂಬುದಕ್ಕೆ ಸಂಜ್ಞಾ ಎಂದಿದ್ದರೂ ಇಲ್ಲಿ ಅದರ ಅರ್ಥ ತೆಗೆದುಕೊಳ್ಳಬೇಕು. ಸಂಖ್ಯಾ ಹೇಳುವ ಪಂಚ ಷಟ್, ಮುಂತಾದವುಗಳನ್ನು ತೆಗೆದುಕೊಳ್ಳಬೇಕು. ಸೂತ್ರಾರ್ಥ. ಷಕಾರಾಂತವಾದ ನಕಾರಾಂತವಾದ ಸಂಖ್ಯಾವಾಚಕ ಶಬ್ದಗಳು "ಷಟ್" ಸಂಜ್ಞೆಯನ್ನು ಹೊಂದುತ್ತವೆ. ಪ್ರಕೃತ ಪಂಚನ್ ಎಂಬುದು ನಾಂತವಾದ ಸಂಖ್ಯಾವಾಚಕ ಶಬ್ದವಾದುದರಿಂದ ಷಟ್ ಸಂಜ್ಞೆಯನ್ನು ಹೊಂದುತ್ತದೆ. ಇದು ನಿತ್ಯ ಬಹುವಚನಾಂತವೆಂದು ಹೇಳಿದೆ. ಪಂಚನ್+ಜಸ್ ಎಂದಿರುವಾಗ ಷಟ್ ಸಂಜ್ಞೆಯಿರುವುದರಿಂದ "ಷಡ್ಭ್ಯೋಲುಕ್" ಸೂತ್ರದಿಂದ ಪರದಲ್ಲಿರುವ ಜಸ್ ಶಸ್‌ಗಳಿಗೆ ಲುಕ್ ಬರುತ್ತದೆ. ಆಗ ಪಂಚನ್ ಉಳಿಯುತ್ತದೆ. ಈಗ ನಾಂತವಾದ ಪದಸಂಜ್ಞೆಯುಳ್ಳ ಪ್ರಾತಿಪದಿಕವಾದುದರಿಂದ "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪಃ. ಪಂಚ. ಶಸಿಗೂ ಲುಕ್ ಬರುವುದರಿಂದ ಹೀಗೇ ಪಂಚರೂಪವಾಗುತ್ತದೆ. ಭಿಸಾದಿಗಳಲ್ಲಿ ಮೇಲೆ ಹೇಳಿದ ಸೂತ್ರದಿಂದ ನಲೋಪ. ಪಂಚಭಿಃ ॥ ಚ-ಪಂಚಭ್ಯಃ । ಪಂ-ಪಂಚಭ್ಯಃ ॥ ಷಷ್ಠಿಯಲ್ಲಿ ಪಂಚನ್+ಆಮ್ ಎಂದಿರುವಾಗ "ಷಟ್‌ಚತುರ್ಭ್ಯಶ್ಚ" ಸೂತ್ರ (೨೬೭)ದಿಂದ ಆಮಿಗೆ ನುಟಾಗಮ. ಟಿತ್ತಾದುದರಿಂದ ಆದ್ಯವಯವ. ಪಂಚನ್+ನಾಮ್ ಎಂದಿರುವಾಗ ಉಪಧೆಗೆ ದೀರ್ಘ ಹೇಳುತ್ತಾನೆ.

(ನಾಂತದ ಉಪಧೆಗೆ ದೀರ್ಘ ಹೇಳುವ ಸೂತ್ರ)

### ೩೦೦. ನೋಪಧಾಯಾಃ ॥ ೬-೪-೭ ॥

**ನಾಂತಸ್ಯೋಪಧಾಯಾಃ ದೀರ್ಘೋ ನಾಮಿ ॥ ಪಂಚಾನಾಮ್ ॥ ಪಂಚಸು ॥**

ನ, ಉಪಧಾಯಾಃ ॥ ದ್ವಿಪದಸೂತ್ರ. "ಅಂಗಸ್ಯ" ಅಧಿಕಾರ. ನ ಎಂಬುದು ಲುಪ್ತಷಷ್ಠೀಕಪದ. ಅಲ್ಲಿ ಷಷ್ಠೀ ಲುಪ್ತವಾಗಿದೆ. ಅದು ಅಂಗಕ್ಕೆ ವಿಶೇಷಣವಾದುದರಿಂದ ತದಂತಲಾಭ. ನಕಾರಾಂತವಾದ ಅಂಗಕ್ಕೆ ಎಂದರ್ಥ. "ಢ್ರಲೋಪೇ"-ಸೂತ್ರದಿಂದ "ದೀರ್ಘಃ" ಪದವೂ "ನಾಮಿ" ಸೂತ್ರವೂ ಅನುವೃತ್ತವಾಗುತ್ತದೆ. ಸೂತ್ರಾರ್ಥ. ನಾಮ್ ಪರದಲ್ಲಿರುವಾಗ ನಕಾರಾಂತವಾದ ಅಂಗದ ಉಪಧೆಗೆ ದೀರ್ಘ ಬರುತ್ತದೆ. ಪ್ರಕೃತ ನಾಮ್ ಪರವಾದುದರಿಂದ ನಾಂತವಾದ ಅಂಗ ಪಂಚನ್. ಅದರ ಉಪಧೆಯೆಂದರೆ ಚಕಾರದ ಮೇಲಿರುವ ಅಕಾರ. ಅದಕ್ಕೆ ದೀರ್ಘ ಬಂದರೆ ಪಂಚಾನ್+ನಾಮ್. "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ. ಪಂಚಾನಾಮ್. ಸ ॥ ಪಂಚಸು. ಇಣ್‌ಪರದಲ್ಲಿಲ್ಲದಿರುವುದರಿಂದ ಷತ್ವವಿಲ್ಲ.

## ನಕಾರಾಂತ ಅಷ್ಟನ್ ಶಬ್ದ (ಎಂಟು)

ಇದು ನಿತ್ಯ ಬಹುವಚನಾಂತಶಬ್ದ. ಅಷ್ಟನ್ + ಜಸ್ ಎಂದಿರುವಾಗ ಆತ್ವ ಬರುವ ವಿಧಾನವನ್ನು ತಿಳಿಸುತ್ತಾನೆ.

(ಅಷ್ಟನ್ ಶಬ್ದಕ್ಕೆ ಆಕಾರ ಹೇಳುವ ಸೂತ್ರ)

## ೩೦೧. ಅಷ್ಟನ ಆ ವಿಭಕ್ತೌ ॥ ೭-೨-೮೪ ॥

**ಅಷ್ಟನಃ ಆತ್ವಂ ವಾ ಸ್ಯಾದ್ಧಲಾದೌ ವಿಭಕ್ತೌ ಪರತಃ ॥**

ಅಷ್ಟನಃ, ಆ, ವಿಭಕ್ತೌ ॥ ತ್ರಿಪದ ಸೂತ್ರ. "ರಾಯೋ ಹಲಿ" ಸೂತ್ರದಿಂದ "ಹಲಿ" ಎಂಬುದಕ್ಕೆ ಅಪಕರ್ಷ. ಅದು ಸಪ್ತಮ್ಯಂತವಾಗಿ "ವಿಭಕ್ತೌ" ಎಂಬುದಕ್ಕೆ ವಿಶೇಷಣವಾದುದರಿಂದ "ಯಸ್ಮಿನ್ ವಿಧಿಸ್ತದಾದಾವಲ್ಗ್ರಹಣೇ" ಪರಿಭಾಷೆಯಿಂದ ತದಾದಿಲಾಭ. ಹಲಾದಿಯಾದ ವಿಭಕ್ತಿಪರದಲ್ಲಿರುವಾಗ ಎಂದರ್ಥ. ಆ ಎಂಬುದು ವಿಧಿಸಲ್ಪಡುವುದರಿಂದ ಸವರ್ಣಗ್ರಹಣವಿಲ್ಲ. ವಾ ಎಂಬುದು ಜ್ಞಾಪಕದಿಂದ ಸಿದ್ಧವಾದುದು. ಸೂತ್ರಾರ್ಥ. ಅಷ್ಟನ್ ಶಬ್ದಕ್ಕೆ ಹಲಾದಿವಿಭಕ್ತಿಪರದಲ್ಲಿರುವಾಗ ವಿಕಲ್ಪವಾಗಿ ಆತ್ವ ಬರುತ್ತದೆ. ಷಷ್ಠ್ಯಂತಕ್ಕೆ ಹೇಳಿದುದರಿಂದ "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯನಕಾರಕ್ಕೆ ಬರುತ್ತದೆ. ಪ್ರಕೃತ ಹಲಾದಿಪ್ರತ್ಯಯವಿಲ್ಲವಾದುದರಿಂದ ಆತ್ವಕ್ಕೆ ಪ್ರಸಕ್ತಿಯಿಲ್ಲ. ಅದು ಬರುವ ಉಪಾಯವನ್ನು ಮುಂದೆ ಹೇಳುತ್ತಾನೆ.

(ಅಷ್ಟನ್ ಶಬ್ದದ ಜಶ್ಶಸ್‌ಗಳಿಗೆ ಔಕಾರ ಹೇಳುವ ಸೂತ್ರ)

## ೩೦೨. ಅಷ್ಟಾಭ್ಯ ಔಶ್ ॥ ೭-೧-೨೧ ॥

**ಕೃತಾಕಾರಾದಷ್ಟನಃ ಪರಯೋಃ ಜಸ್‌ಶಸೋಃ ಔಶ್ ಸ್ಯಾತ್ ಅಷ್ಟಭ್ಯ ಇತಿ ವಕ್ತವ್ಯೇ ಕೃತಾऽऽತ್ವನಿರ್ದೇಶೋ ಜಶ್ಶಸೋರ್ವಿಷಯೇ ಆತ್ವಂ ಜ್ಞಾಪಯತಿ । ಅಷ್ಟೌ । ಅಷ್ಟೌ । ಅಷ್ಟಾಭಿಃ । ಅಷ್ಟಾಭ್ಯಃ । ಅಷ್ಟಾಭ್ಯಃ । ಅಷ್ಟಾನಾಮ್ । ಅಷ್ಟಾಸು । ಆತ್ವಾಭಾವೇ ಅಷ್ಟ ಪಂಚವತ್ ॥**

ಅಷ್ಟಾಭ್ಯಃ ಔಶ್ ॥ ದ್ವಿಪದಸೂತ್ರ. "ಜಶ್ಶಸೋಃಶಿಃ" ಸೂತ್ರದಿಂದ "ಜಶ್ಶಸೋಃ" ಅನುವೃತ್ತಿ. ಅಷ್ಟಾಭ್ಯಃ ಎಂದು ದೀರ್ಘ ಹೇಳಿದುದರಿಂದ ಅಷ್ಟಾ ಎಂಬ ದೀರ್ಘಾಂತವು ಇಲ್ಲಿ ವಿವಕ್ಷಿತ. ಪಂಚಮಿಯಾದುದರಿಂದ "ತಸ್ಮಾದಿತ್ಯುತ್ತರಸ್ಯ" ಪರಿಭಾಷೆಯಿಂದ,ಪರಕ್ಕೆ ಕಾರ್ಯವೆಂದು ತಿಳಿಯಬೇಕು. ಸೂತ್ರಾರ್ಥ. ಮಾಡಲ್ಪಟ್ಟ ಆಕಾರವುಳ್ಳ ಅಷ್ಟನ್ ಶಬ್ದದ ಪರದಲ್ಲಿರುವ ಜಸ್ ಶಸ್‌ಗಳಿಗೆ ಔಶ್ ಆದೇಶ ಬರುತ್ತದೆ. ಔಶಿನಲ್ಲಿ ಶಕಾರ ಇತ್. ಶಿತ್ತಾದುದರಿಂದ ಸರ್ವಾದೇಶ. (ಅನೇಕಾಲ್‌ಶಿತ್‌ಸರ್ವಸ್ಯ) ಇಲ್ಲಿ ಆಕಾರಾದೇಶ ಹೊಂದಿದ ಅಷ್ಟನ್ ಶಬ್ದದ ಪರದ

ಜಶ್ಶಸ್‌ಗಳಿಗೆ ಔತ್ವ ಹೇಳಿದುದೇ ಕೂಡುವುದಿಲ್ಲ. ಆತ್ವ ಹಲಾದಿ ವಿಭಕ್ತಿಪರವಾದಾಗ ಮಾತ್ರ ಹೇಳಿದೆ. ಹೀಗಿರುವಾಗ ಹೇಗೆ ಇದು ಸಮಂಜಸವಾಗುತ್ತದೆ? ಅಂದರೆ "ಅಷ್ಟಭ್ಯ" ವಾಕ್ಯದಿಂದ ಸಮಾಧಾನ ಹೇಳುತ್ತಾನೆ. ಅಷ್ಟಭ್ಯ ಔಶ್ ಎಂದು ಸೂತ್ರಮಾಡುವುದನ್ನು ಬಿಟ್ಟು ಅಷ್ಟಾಭ್ಯಔಶ್ ಎಂದು ದೀರ್ಘಹೇಳಿದುದರಿಂದ ಜಸ್ ಶಸ್ ಪರವಾದಾಗಲೂ ಆತ್ವ ಬರುತ್ತದೆ. ಎಂದು ಜ್ಞಾಪಿತವಾಗುತ್ತದೆ. ಲಾಘವವನ್ನಪೇಕ್ಷಿಸುವವರು ವೈಯಾಕರಣರು. ಆತ್ವವಿಕಲ್ಪವಾದುದರಿಂದ ಲಾಘವವಾಗಿ ಅಷ್ಟಭ್ಯಃ ಎಂದೇ ಹೇಳಬಹುದಿತ್ತು. ಹಾಗೆ ಹೇಳದೆ ದೀರ್ಘಹೇಳಿದುದರಿಂದ ಇಲ್ಲಿಯೂ ಆತ್ವ ಬರುತ್ತದೆ ಎಂದು ಪಾಣಿನಿಯು ಸೂಚಿಸಿರುತ್ತಾನೆ. ಅಷ್ಟನ್+ಜಸ್ ಎಂದಿರುವಾಗ ನಕಾರಕ್ಕೆ ಜ್ಞಾಪಿತವಾದ ಆಕಾರಾದೇಶ. ಅಷ್ಟಾ+ಜಸ್. ಇಲ್ಲಿ ಆಕಾರಪರದಲ್ಲಿ ಜಸ್ ಇರುವುದರಿಂದ ಅದಕ್ಕೆ ಔಶ್. ಅಷ್ಟಾ+ಔ "ವೃದ್ಧಿರೇಚಿ" ಅಷ್ಟೌ. ಶಸಿನಲ್ಲಿಯೂ ಇದೇರೂಪ. ಅಷ್ಟೌ. ಅಷ್ಟನ್+ಭಿಸ್ ಎಂದಿರುವಾಗ "ಅಷ್ಟನ ಆ ವಿಭಕ್ತೌ" ಸೂತ್ರದಿಂದ ಆತ್ವ. ಅಷ್ಟಾಭಿಃ. ಹಲಾದಿಯಲ್ಲೆಲ್ಲಾ ಆತ್ವ. ಚ || ಅಷ್ಟಾಭ್ಯಃ | ಅಷ್ಟಾಭ್ಯಃ || ಷಷ್ಠಿಯಲ್ಲಿ ಆಮ್ ಪರವಾದಾಗ ಅಷ್ಟನ್+ಆಮ್ ಎಂದಿರುವಾಗ "ಷಟ್‌ಚತುರ್ಭ್ಯಶ್ಚ" ಸೂತ್ರದಿಂದ ಆಮಿಗೆ ನುಟಾಗಮ. ಅಷ್ಟನ್+ನಾಮ್. ಈಗ ಹಲಾದಿಯಾದುದರಿಂದ ನಕಾರಕ್ಕೆ ಆತ್ವ. ಅಷ್ಟಾನಾಮ್. ಸ || ಅಷ್ಟಾಸು. || ಆತ್ವವಿಕಲ್ಪವೆಂದುದರಿಂದ ಆತ್ವಬಾರದಿದ್ದರೆ ಜಸ್ ಶಸ್‌ಗಳಿಗೆ ಔತ್ವವೂ ಇಲ್ಲ. ಪಂಚನ್ ಶಬ್ದದಂತೇ ರೂಪ. ಷಟ್‌ಸಂಜ್ಞಾ ಇರುವುದರಿಂದ ಜಸ್ ಶಸ್‌ಗಳಿಗೆ ಲುಕ್. "ನಲೋಪಃ"–ಸೂತ್ರದಿಂದ ನಲೋಪ. ಪ್ರ || ಅಷ್ಟ || ದ್ವಿ || ಅಷ್ಟ || ಹಲಾದಿಯಲ್ಲಿ ನಲೋಪ. ಅಷ್ಟಭಿಃ || ಚ–ಅಷ್ಟಭ್ಯಃ || ಪಂ. ಅಷ್ಟಭ್ಯಃ || ಷ. ಅಷ್ಟಾನಾಮ್ || ಸ. ಅಷ್ಟಸು ||

ಇತಿ ನಾಂತಾಃ ||

---

ಜಕಾರಾಂತ, ಋತ್ವಿಜ್ ಶಬ್ದ.

(ಕ್ವಿನ್ ವಿಧಾಯಕ ಸೂತ್ರ)

## ೩೦೩. ಋತ್ವಿಗ್ದಧೃಕ್ ಸ್ರಗ್ದಿಗುಷ್ಣಿಗಞ್ಚುಯುಜಿ ಕ್ರುಞ್ಚಾಂ ಚ || ೩-೨-೫೯ ||

**ಏಭ್ಯಃ ಕ್ವಿನ್, ಅಂಚೇಃ ಸುಪ್ಯುಪಪದೇ, ಯುಜಿಕ್ರುಂಚೋಃ ಕೇವಲಯೋಃ ಕ್ರುಂಚೇರ್ನಲೋಪಾಭಾವಶ್ಚ ನಿಪಾತ್ಯತೇ || ಕನಾವಿತೌ ||**

ಋತ್ವಿಕ್, ದಧೃಕ್, ಸ್ರಕ್, ದಿಕ್, ಉಷ್ಣಿಕ್, ಅಂಚು, ಯುಜಿ, ಕ್ರುಂಚಾಂ, ಚ || ದ್ವಿಪದ ಸೂತ್ರ: "ಧಾತೋಃ" ಅಧಿಕಾರ. "ಸ್ಪೃಶೋಽನುದಕೇ ಕ್ವಿನ್"

ಅನುವೃತ್ತಿ. "ಋತ್ವಿ....ಂಚಾಂ" ಎಂಬಲ್ಲಿ ಪಂಚಮ್ಯರ್ಥದಲ್ಲಿ ಷಷ್ಠೀ ಬಂದಿದೆ. **ಸೂತ್ರಾರ್ಥ.** ಋತು ಉಪಪದವಾಗಿರುವ ಯಜ್ ಧಾತುವಿಗೂ, ಧೃಷ್, ಸೃಜ್, ದಿಶ್, ಷ್ಣಿಹ್, ಅಂಚು, ಯುಜ್, ಕ್ರುಂಚ್ ಧಾತುಗಳಿಗೂ ಕ್ವಿನ್ ಪ್ರತ್ಯಯ ಬರುತ್ತದೆ. ಸಾಮಾನ್ಯ ಈ ಧಾತುಗಳಿಗೆ ಕ್ವಿನ್ ಹೇಳಿದರೂ ಕೆಲವು ಕಾರ್ಯಗಳು ನಿಪಾತಿತವಾಗಿವೆ. ಸೂತ್ರಾಂತರದಿಂದ ಬಾರದಿರುವ ಕೆಲವು ಕಾರ್ಯಗಳನ್ನು ಸೇರಿಸಿ ಕ್ವಿನ್ ಪ್ರತ್ಯಯ ಹೇಳಿರುತ್ತಾನೆ. ಋತು ಉಪಪದವಾಗಿರುವಾಗ ಯಜ್ ಧಾತುವಿಗೆ ಕ್ವಿನ್ ಬಂದಾಗ ಸಂಪ್ರಸಾರಣ, ಕುತ್ವ. ಧೃಷ್ ಧಾತುವಿಗೆ ಕ್ವಿನ್ ಬಂದಾಗ ದ್ವಿತ್ವ. ಸೃಜ್ ಧಾತುವಿಗೆ ಅಮಾಗಮ. ದಿಶ್ ಧಾತುವಿಗೆ ಕರ್ಮಣಿಯಲ್ಲಿ ಕ್ವಿನ್. ಉತ್ ಉಪಸರ್ಗ ಪೂರ್ವಕವಾದ ಸ್ನಿಹ್ ಧಾತುವಿಗೆ ಕ್ವಿನ್ ಬಂದಾಗ ಉದಿನ ದಕಾರಕ್ಕೆ ಲೋಪ. ಷತ್ವ. ಅಂಚು ಧಾತುವಿಗೆ ಸುಬಂತ ಉಪಪದವಾಗಿರುವಾಗ ಮಾತ್ರ ಕ್ವಿನ್. ಯುಜ್ ಧಾತು ಕೇವಲವಾಗಿರುವಾಗ ಕ್ವಿನ್. ಕ್ರುಂಚ್ ಕೇವಲಕ್ಕೆ ಕ್ವಿನ್ ಬಂದಾಗ ನಲೋಪ ಬರಬೇಕಾದಾಗ ನಲೋಪಾಭಾವ. ಇಷ್ಟು ಕಾರ್ಯಗಳು ನಿಪಾತಿತವಾಗಿವೆ. ಪ್ರಕೃತ ಋತು ಉಪಪದವಾದ ಯಜಗೆ ಕ್ವಿನ್ ಬಂದಾಗ ಸಂಪ್ರಸಾರಣ ಪೂರ್ವರೂಪ ಯಣ್ ಬಂದರೆ ಋತ್ವಿಜ್+ಕ್ವಿನ್ ಎಂದಾಗುತ್ತದೆ. ಕನಾವಿತೌ. "ಹಲಂತ್ಯಮ್" ಸೂತ್ರದಿಂದ ನಕಾರವೂ "ಲಶಕ್ವತದ್ಧಿತೇ" ಸೂತ್ರದಿಂದ ಕಕಾರವೂ ಇತ್ತಾಗಿ ಲೋಪವಾಗುತ್ತವೆ. ಇಕಾರ ಉಚ್ಚಾರಣೆಗೋಸ್ಕರ ಹೇಳಿದೆ. ಆಗ ವಕಾರ ಉಳಿಯುತ್ತದೆ. ಅದಕ್ಕೂ ಲೋಪ ಹೇಳಲು ಕೃತ್ ಸಂಜ್ಞೆ ಹೇಳುತ್ತಾನೆ.

(ಕೃತ್ ಸಂಜ್ಞಾ ಹೇಳುವ ಸೂತ್ರ

## ೩೦೪. ಕೃದತಿಙ್ ॥ ೩-೧-೯೩ ॥

**ಅತ್ರ ಧಾತ್ವಧಿಕಾರೇ ತಿಙ್‌ಭಿನ್ನಃ ಪ್ರತ್ಯಯಃ ಕೃತ್‌ಸಂಜ್ಞಃ ಸ್ಯಾತ್ ॥**

ಕೃತ್ ಅತಿಙ್ ॥ ದ್ವಿಪದ ಸೂತ್ರ. "ಧಾತೋಃ" "ಪ್ರತ್ಯಯಃ" ಅಧಿಕಾರಗಳು. "ಧಾತೋಃ" ವಿಹಿತ ವಿಶೇಷಣವೆಂದು ತಿಳಿಯಬೇಕು. ಧಾತುವಿಗೆ ವಿಹಿತವಾದ ಪ್ರತ್ಯಯ ಎಂದರ್ಥ. ನ ತಿಙ್ ಅತಿಙ್. ತಿಙ್ ಭಿನ್ನವಾದ ಎಂದರ್ಥ. "ಧಾತೋಃ" ಎಂಬ ಅಧಿಕಾರ ಸೂತ್ರಗಳು ಮೂರಿವೆ. ಅದರಲ್ಲಿ ಇದರ ಅವ್ಯವಹಿತ ಪೂರ್ವದಲ್ಲಿ ಹೇಳಿದ "ಧಾತೋಃ" ಎಂಬ ಅಧಿಕಾರವನ್ನು ತೆಗೆದುಕೊಳ್ಳಬೇಕು. ಅದಕ್ಕೋಸ್ಕರ ಈ ಧಾತ್ವಧಿಕಾರದಲ್ಲಿ ಎಂದು ವೃತ್ತಿಯಲ್ಲಿ ಬರೆದಿರುತ್ತಾನೆ. **ಸೂತ್ರಾರ್ಥ.** ಸನ್ನಿಹಿತವಾದ ಧಾತ್ವಧಿಕಾರದಲ್ಲಿ ಹೇಳಿದ ತಿಙ್‌ಭಿನ್ನವಾದ ಪ್ರತ್ಯಯವು ಕೃತ್ ಎಂಬ ಸಂಜ್ಞೆಯನ್ನು ಹೊಂದುತ್ತದೆ. ೩-೧-೯೩ ರಿಂದ ಮೂರನೇ ಅಧ್ಯಾಯ ಮುಗಿಯುವವರೆಗೂ ಧಾತುವಿಗೆ ಪ್ರತ್ಯಯ ಹೇಳುವುದರಿಂದ ಅವು ಎಲ್ಲಾ ಕೃತ್ ಎಂಬ ಸಂಜ್ಞೆ ಹೊಂದುತ್ತವೆ. ಪ್ರಕೃತ ಕ್ವಿನ್ ಧಾತ್ವಧಿಕಾರಕ್ಕೆ ಒಳಪಟ್ಟು ವಿಹಿತವಾದುದರಿಂದ ಅದು ಕೃತ್ ಸಂಜ್ಞೆಯನ್ನು ಹೊಂದುತ್ತದೆ.

(ವಕಾರಕ್ಕೆ ಲೋಪ ಹೇಳುವ ಸೂತ್ರ)

## ೩೦೫. ವೇರಪೃಕ್ತಸ್ಯ ॥ ೬-೧-೬೭ ॥

**ಅಪೃಕ್ತಸ್ಯ ವಸ್ಯ ಲೋಪಃ ॥**

ವೇಃ, ಅಪೃಕ್ತಸ್ಯ ॥ ದ್ವಿಪದ ಸೂತ್ರ. "ಲೋಪೋ ವ್ಯೋರ್ವಲಿ" ಸೂತ್ರದಿಂದ "ಲೋಪಃ" ಅನುವೃತ್ತಿ. **ಸೂತ್ರಾರ್ಥ.** ಅಪೃಕ್ತವಾದ ವಕಾರಕ್ಕೆ ಲೋಪ ಬರುತ್ತದೆ. "ಅಪೃಕ್ತಏಕಾಲ್ ಪ್ರತ್ಯಯಃ" ಎಂದು ಒಂದು ಅಲ್‌ರೂಪವಾದ ಪ್ರತ್ಯಯಕ್ಕೆ ಅಪೃಕ್ತಸಂಜ್ಞೆ ಹಿಂದೆ ಹೇಳಿದೆ. ಪ್ರಕೃತ ಕ್ವಿನ್ನಿನಲ್ಲಿ ವ್ ಮಾತ್ರ ಉಳಿದುದರಿಂದ ಅದು ಅಪೃಕ್ತವಾಗುತ್ತದೆ. ಆದುದರಿಂದ ಅದಕ್ಕೆ ಲೋಪ. ಋತ್ವಿಜ್ ಎಂದೇ ಉಳಿಯುತ್ತದೆ. ಕೃದಂತವಾದುದರಿಂದ ಪ್ರಾತಿಪದಿಕಸಂಜ್ಞೆ. ಜಾಂತ ಶಬ್ದ. ಋತ್ವಿಜ್+ಸು ಎಂದಿರುವಾಗ "ಹಲ್ಙ್ಯಾಭ್ಯೋ—" ಸೂತ್ರದಿಂದ ಸುಲೋಪವಾದಾಗ ಕುತ್ವ ಹೇಳುತ್ತಾನೆ.

(ಕ್ವಿನ್ನಂತಕ್ಕೆ ಕುತ್ವಹೇಳುವ ಸೂತ್ರ)

## ೩೦೬. ಕ್ವಿನ್‌ಪ್ರತ್ಯಯಸ್ಯ ಕುಃ ॥ ೮-೨-೬೨ ॥

**ಕ್ವಿನ್ ಪ್ರತ್ಯಯೋ ಯಸ್ಮಾತ್ತಸ್ಯ ಕವರ್ಗೋಽಂತಾದೇಶಃ ಸ್ಯಾತ್ಪದಾಂತೇ॥ ಅಸ್ಯ ಅಸಿದ್ಧತ್ವಾತ್ ಚೋಃ ಕುರಿತಿ ಕುತ್ವಮ್॥ ಋತ್ವಿಕ್ ಋತ್ವಿಗ್ ॥ ಋತ್ವಿಜೌ—ಋತ್ವಿಗ್ಭ್ಯಾಮ್ ॥**

ಕ್ವಿನ್‌ಪ್ರತ್ಯಯಸ್ಯ, ಕುಃ ॥ ದ್ವಿಪದಸೂತ್ರ. "ಪದಸ್ಯ" ಅಧಿಕಾರ. "ಝಲಾಂ ಜಶೋಂತೇ" ಸೂತ್ರದಿಂದ "ಅಂತೇ" ಅನುವೃತ್ತಿ. ಕ್ವಿನ್‌ಪ್ರತ್ಯಯೋ ಯಸ್ಮಾತ್ ಸಃ ಕ್ವಿನ್‌ಪ್ರತ್ಯಯಃ। ಕ್ವಿನ್‌ಪ್ರತ್ಯಯವು ಯಾವುದರ ಮೇಲೆ ವಿಹಿತವಾಗಿದೆಯೋ ಅದು ಕ್ವಿನ್ ಪ್ರತ್ಯಯ. ಆಗ ಕ್ವಿನ್ ಪ್ರತ್ಯಯ ಅಂತದಲ್ಲಿರಬೇಕು ಎಂದರ್ಥವಾಗುವುದಿಲ್ಲ. ಪರಕ್ಕೆ ಬಂದು ಅದು ಲೋಪವಾದರೂ ಕ್ವಿನ್‌ಪ್ರತ್ಯಯ. ಪ್ರಕೃತ ಋತ್ವಿಜ್ ಕ್ವಿನ್‌ಪ್ರತ್ಯಯ. ಕ್ವಿನ್ ಲುಪ್ತವಾದರೂ ಋತ್ವಿಜಿನ ಮೇಲೆ ಅದು ವಿಹಿತವಾಗಿದೆ. **ಸೂತ್ರಾರ್ಥ.** ಕ್ವಿನ್‌ಪ್ರತ್ಯಯವು ಯಾವುದರಮೇಲೆ ವಿಹಿತವಾಗಿದೆಯೋ ಅದಕ್ಕೆ ಪದಾಂತದಲ್ಲಿ ಕವರ್ಗವು ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯಕ್ಕೆ ಬರುತ್ತದೆ. ಕು ಎಂಬಲ್ಲಿ ಉದಿತ್ ಮಾಡಿದುದರಿಂದ ಕವರ್ಗ ತೆಗೆದುಕೊಳ್ಳಬೇಕು. ಕ್ವಿನ್‌ಪ್ರತ್ಯಯ ಋತ್ವಿಜಿನಮೇಲೆ ವಿಹಿತವಾಗಿದೆ. ಪ್ರಕೃತ ಪದಾಂತವಾದುದರಿಂದ ಅದಕ್ಕೆ ಕುತ್ವ. "ಸ್ಥಾನೇಂತರತಮಃ" ಪರಿಭಾಷೆಯಿಂದ ಜಕಾರಕ್ಕೆ ಗಕಾರ. ಋತ್ವಿಗ್. "ಅಸ್ಯಅಸಿದ್ಧತ್ವಾದಿತಿ" ॥ ಹೀಗೆ ಈ ಸೂತ್ರದಿಂದ ಕುತ್ವಮಾಡಿದರೂ ಇದು ಅಸಿದ್ಧಸೂತ್ರವಾದುದರಿಂದ "ಚೋಃ ಕುಃ" ಎಂಬ ಸೂತ್ರದಿಂದಲೇ (ಸೂ. ೩೦೮) ಕುತ್ವ ಹೇಳಬೇಕು. ಪದಾಂತದಲ್ಲಿ ಚವರ್ಗಕ್ಕೆ ಕವರ್ಗ

ದೇಶ ಆ ಸೂತ್ರ ಹೇಳುತ್ತದೆ. ಆ ಸೂತ್ರದೃಷ್ಟಿಯಲ್ಲಿ ಕುತ್ವ/ ಅಸಿದ್ಧವಾದುದರಿಂದ ಜಕಾರವೇ ಇರುವುದರಿಂದ ಕುತ್ವ ಹೇಳುತ್ತದೆ. ಗಕಾರ ಬಂದರೆ ಋತ್ವಿಗ್ ಎಂದಾಗುತ್ತದೆ. ಇದಕ್ಕೆ "ವಾವಸಾನೇ" ಸೂತ್ರದಿಂದ ವಿಕಲ್ಪವಾಗಿ ಚರ್ ಬಂದರೆ ಋತ್ವಿಕ್ ಬಾರದಿದ್ದರೆ ಋತ್ವಿಗ್ ಹೀಗೆ ಎರಡು ರೂಪಗಳಾಗುತ್ತವೆ. ಅಜಾದಿಯಲ್ಲಿ ವಿಭಕ್ತಿ ಸೇರಿಸುವುದು ಮಾತ್ರ. ಋತ್ವಿಜೌ-ಋತ್ವಿಜಃ ॥ ದ್ವಿ. ಋತ್ವಿಜಮ್-ಋತ್ವಿಜೌ-ಋತ್ವಿಜಃ ॥ ತೃ. ಋತ್ವಿಜಾ-ಹಲಾದಿಯಲ್ಲಿ ಕುತ್ವ. ಋತ್ವಿಗ್ಭ್ಯಾಂ-ಋತ್ವಿಗ್ಭಿಃ ॥ ಸಪ್ತಮೀ-ಋತ್ವಿಜೋಃ-ಋತ್ವಿಕ್ಷು ॥ ಋತ್ವಿಜ್+ಸು ಎಂದಿರುವಾಗ ಕುತ್ವ. ಋತ್ವಿಗ್+ಸೂತ್ರದಿಂದ ಕವರ್ಗಪರದಲ್ಲಿರುವುದರಿಂದ ಸಕಾರಕ್ಕೆ ಷತ್ವ. ಕಷ ಸೇರಿದರೆ ಕ್ಷ ಆಗುತ್ತದೆ.

---

ಜಕಾರಾಂತ ಯುಜ್‌ಶಬ್ದ. (ಸೇರಿಸುವವನು)

ಯುಜ್‌ಧಾತುವಿಗೆ ಹಿಂದಿನ ಸೂತ್ರದಿಂದ ಕ್ವಿನ್. ಕೃದಂತವಾದುದರಿಂದ ಪ್ರಾತಿಪದಿಕ ಸಂಜ್ಞಾ. ಕ್ವಿನ್‌ಸರ್ವಲೋಪ. ಸರ್ವನಾಮಸ್ಥಾನಗಳಲ್ಲಿ ನುಮಾಗಮ ಹೇಳುತ್ತಾನೆ.

(ಯುಜಿಗೆ ನುಮಾಗಮ ಹೇಳುವ ಸೂತ್ರ)

### ೩೦೭. ಯುಜೇರಸಮಾಸೇ ॥ ೭-೧-೭೧ ॥

ಯುಜೇಃ ಸರ್ವನಾಮಸ್ಥಾನೇ ನುಮ್ ಸ್ಯಾದಸಮಾಸೇ ॥ ಸಂಯೋಗಾಂತಲೋಪಃ ॥ ಕುತ್ವೇನ ನಸ್ಯ ಙಃ । ಯುಙ್ । ಅನುಸ್ವಾರ ಪರಸವರ್ಣೌ । ಯುಞ್ಜೌ ॥ ಯುಞ್ಜಃ ॥ ಯುಗ್ಭ್ಯಾಮ್ ॥

ಯುಜೇಃ, ಅಸಮಾಸೇ ॥ ದ್ವಿಪದಸೂತ್ರ. "ಇದಿತೋ ನುಮ್‌ಧಾತೋಃ" ಸೂತ್ರದಿಂದ "ನುಮ್" "ಉಗಿದಚಾಂ"—ಸೂತ್ರದಿಂದ "ಸರ್ವನಾಮಸ್ಥಾನೇ" ಅನುವೃತ್ತಿ. **ಸೂತ್ರಾರ್ಥ.** ಸಮಾಸದಲ್ಲಿಲ್ಲದೇ ಇರುವ ಯುಜಿಗೆ ಸರ್ವನಾಮಸ್ಥಾನ ಪರವಾದಾಗ ನುಮಾಗಮ ಬರುತ್ತದೆ. (ಸುಟ್ ಸರ್ವನಾಮಸ್ಥಾನ) ಪ್ರಕೃತ ಸಮಾಸವಾಗದ ಯುಜ್‌ಗೆ ಸರ್ವನಾಮಸ್ಥಾನ ಪರವಾಗಿದೆ. ನುಮ್ ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬಂದರೆ ಯುನ್-ಜ್+ಸ್ ಎಂದಾಗುತ್ತದೆ. "ಹಲ್‌ಙ್ಯಾಭ್ಯೋ"-ಸೂತ್ರದಿಂದ ಸುಲೋಪ ಯುನ್‌ಜ್. ಸಂಯೋಗಾಂತಪದವಾದುದರಿಂದ "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ಸಂಯೋಗದ ಅಂತ್ಯವಾದ ಜಕಾರಕ್ಕೆ ಲೋಪ. ಯುನ್. ಇದರಮೇಲೆ ಕ್ವಿನ್ ಪ್ರತ್ಯಯ ವಿಧಾನಮಾಡಿದುದರಿಂದ ಯುಜ್ ಕ್ವಿನ್ಪ್ರತ್ಯಯ ಆದುದರಿಂದ "ಕ್ವಿನ್ ಪ್ರತ್ಯಯಸ್ಯ ಕುಃ" ಸೂತ್ರದಿಂದ ಯುನ್ನಿಗೆ ಕುತ್ವ. ನಕಾರಕ್ಕೆ ಸದೃಶವಾದ ಙಕಾರ

ಬಂದರೆ ಯುಜ್. ಔಸರವಾದಾಗ ಯುಜ್+ಔ ಎಂದಿರುವಾಗ ಸರ್ವನಾಮಸ್ಥಾನವಾದುದರಿಂದ ನುಮ್. ಯುನ್ ಜ್+ಔ. ಸಂಯೋಗಾಂತವಾದ ಪದವಾಗದಿರುವುದರಿಂದ ಜಕಾರಲೋಪವಿಲ್ಲ. ಅಪದಾಂತದಲ್ಲಿ ನಕಾರವಿರುವುದರಿಂದ "ನಶ್ಚಾಪದಾಂತಸ್ಯಝಲಿ" ಸೂತ್ರದಿಂದ ನಕಾರಕ್ಕೆ ಅನುಸ್ವಾರ. ಯುಂಜ್+ಔ. ಅನುಸ್ವಾರಕ್ಕೆ ಯಮ್ ಪರವಾದುದರಿಂದ "ಅನುಸ್ವಾರಸ್ಯ ಯಯಿ ಪರಸವರ್ಣಃ" ಸೂತ್ರದಿಂದ ಪರಸವರ್ಣ. ಸ್ಥಾನಸಾಮ್ಯದಿಂದ ಞಕಾರ. ಯುಞ್ಜೌ. ಅಜಾದಿಯಲ್ಲೆಲ್ಲಾ (ಸುಟನಲ್ಲಿ) ಹೀಗೆ ಕಾರ್ಯಗಳು. ಯುಜ್+ಜಸ್. ಯುಞ್ಜಃ ‖ ದ್ವಿ. ಯುಞ್ಜಮ್ –ಯುಞ್ಜೌ-ಯುಜ್+ಶಸ್. ಶಸ್ ಸರ್ವನಾಮಸ್ಥಾನವಲ್ಲ. ಆದುದರಿಂದ ನುಮಾದಿಗಳಿಲ್ಲ. ಯುಜಃ ‖ ತೃ. ‖ ಅಜಾದಿಯಲ್ಲೆಲ್ಲಾ ಪ್ರತ್ಯಯ ಸೇರಿಸುವುದುಮಾತ್ರ. ಯುಜಾ-ಯುಜ್+ಭ್ಯಾಮ್ ಕುತ್ವ. ಯುಗ್ಭ್ಯಾಮ್–ಯುಗ್ಭಿಃ ‖ ಚ-ಯುಜೇ-ಯುಗ್ಭ್ಯಾಮ್-ಯುಗ್ಭ್ಯಃ ‖ ಪಂ-ಯುಜಃ-ಯುಗ್ಭ್ಯಾಮ್-ಯುಗ್ಭ್ಯಃ ‖ ಷ-ಯುಜಃ-ಯುಜೋಃ-ಯುಜಾಮ್ ‖ ಸ-ಯುಜಿ-ಯುಜೋಃ ಯುಜ್+ಸು. ಕುತ್ವ. (ಸೂ. ೩೦೭) ಯುಗ್+ಸು. "ಖರಿಚ" ಯುಕ್+ಸು. ಷತ್ವ. (ಸೂ. ೧೫೦). ಯುಕ್+ಷು. ಯುಕ್ಷು.

ಜಕಾರಾಂತ "ಸುಯುಜ್ ಶಬ್ದ. (ಚನ್ನಾಗಿ ಜೋಡಿಸುವವನು)

ಕೇವಲವಾದ ಯುಜಿಗೆ ಕ್ವಿನ್ ಹೇಳಿರುವುದರಿಂದ ಸುಪೂರ್ವಕವಾದ ಯುಜಿಗೆ ಕ್ವಿನ್ ಬರುವುದಿಲ್ಲ. ಕ್ವಿಪ್ ಪ್ರತ್ಯಯ. ಇದರಲ್ಲಿಯೂ ಸರ್ವಲೋಪ. ಕೃದಂತವಾದುದರಿಂದ ಪ್ರಾತಿಪದಿಕ. ಸುಯುಜ್+ಸ್. "ಹಲ್‌ಙ್ಯಾಭ್ಯೋ–" ಸೂತ್ರದಿಂದ ಸುಲೋಪ ಜಕಾರಕ್ಕೆ ಕುತ್ವ ಹೇಳುತ್ತಾನೆ.

(ಚವರ್ಗಕ್ಕೆ ಕವರ್ಗ ಹೇಳುವ ಸೂತ್ರ)

## ೩೦೮. ಚೋಃ ಕುಃ ‖ ೧–೨–೩೦ ‖

**ಚವರ್ಗಸ್ಯ ಕವರ್ಗಃ ಸ್ಯಾಜ್ಝಲಿ ಪದಾಂತೇ ಚ ‖ ಸುಯುಕ್ ಸುಯುಗ್ । ಸುಯುಗ್ಭ್ಯಾಮ್ ‖ ಖನ್ । ಖಞ್ಜೌ ‖ ಖನ್ಭ್ಯಾಮ್ ‖**

ದ್ವಿಪದಸೂತ್ರ. ಚೋಃ ಷಷ್ಠೀ. ಉದಿತ್ತಾದುದರಿಂದ ಚವರ್ಗ, ಕವರ್ಗ ತೆಗೆದುಕೊಳ್ಳಬೇಕು. "ಝಲೋ ಝಲಿ" ಸೂತ್ರದಿಂದ "ಝಲಿ" "ಸ್ಕೋಃ ಸಂಯೋಗಾದ್ಯೋರಂತೇಚ" ಸೂತ್ರದಿಂದ "ಅಂತೇ" ಅನುವೃತ್ತವಾಗುತ್ತವೆ. "ಪದಸ್ಯ" ಅಧಿಕಾರ. **ಸೂತ್ರಾರ್ಥ.** ಚವರ್ಗಕ್ಕೆ ಝಲ್ ಪರದಲ್ಲಿರುವಾಗಲೂ ಪದಾಂತದಲ್ಲಿಯೂ ಕವರ್ಗಾದೇಶ ಬರುತ್ತದೆ. ಪ್ರಕೃತ ಪದಾಂತದಲ್ಲಿ ಜಕಾರವಿರುವುದರಿಂದ ಕವರ್ಗದಲ್ಲಿನ ಗಕಾರಬರುತ್ತದೆ. ಸುಯುಗ್. "ವಾವಸಾನೇ"

ಸೂತ್ರದಿಂದ ವಿಕಲ್ಪವಾಗಿ ಗಕಾರಕ್ಕೆ ಬರಿನ ಕಕಾರಾದೇಶ. ಸುಯುಕ್. ಇನ್ನು ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು. ಸುಯುಜೌ ಸುಯುಜಃ ॥ ಇತ್ಯಾದಿ. ಹಲಾದಿಯಲ್ಲಿ "ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಪದಸಂಜ್ಞಾ ಇರುವುದರಿಂದ ಕುತ್ವ. ಸುಯುಗ್ಭ್ಯಾಮ್ ಸುಯುಗ್ಭಿಃ ॥ ಇತ್ಯಾದಿ.

ಖಜಿ ಗತಿವೈಕಲ್ಯೇ ಧಾತು. ಇದಕ್ಕೆ ಕ್ವಿಪ್ ಪ್ರತ್ಯಯ. ಧಾತು ಇದಿತ್ತಾದುದರಿಂದ ನುಮಾಗಮ. ಖನ್ಜ್. ಜಕಾರಾಂತ ಶಬ್ದ. ಸುಪರವಾದಾಗ "ಹಲ್ಙ್ಯಾದಿ" ಸೂತ್ರದಿಂದ ಸುವಿಗೆ ಲೋಪ. ಸಂಯೋಗಾಂತ ಪದವಾದುದರಿಂದ "ಸಂಯೋಗಾಂತಸ್ಯಲೋಪಃ" ಸೂತ್ರದಿಂದ ಜಕಾರಕ್ಕೆ ಲೋಪ. ಖನ್. ಖನ್ಜ್+ಔ ಎಂದಿರುವಾಗ ನಕಾರಕ್ಕೆ ಅನುಸ್ವಾರ (ಸೂ. ೭೮) ಅನುಸ್ವಾರಕ್ಕೆ ಪರಸವರ್ಣ. (ಸೂ. ೭೯) ಖಞ್ಜೌ-ಖಞ್ಜಃ ಇತ್ಯಾದಿ. ಹಲಾದಿಯಲ್ಲಿ ಖನಜ್+ಭ್ಯಾಮ್ ಎಂದಿರುವಾಗ "ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಪದಸಂಜ್ಞಾ ಬರುವುದರಿಂದ ಸಂಯೋಗಾಂತ ಲೋಪ. ಖನ್ಭ್ಯಾಮ್ ಖನ್ಭಿಃ ಇತ್ಯಾದಿ.

---

ಜಕಾರಾಂತ "ರಾಜ್" ಶಬ್ದ. (ರಾಜ, ಪ್ರಕಾಶಿಸುವವ)

ರಾಜೃ ದೀಪ್ತೌ ಧಾತು. ಕ್ವಿಪ್‌ಪ್ರತ್ಯಯ. ಕ್ವಿಪ್‌ನಲ್ಲಿ ಸರ್ವಲೋಪ. ಕೃದಂತವಾದುದರಿಂದ ಪ್ರಾತಿಪದಿಕ ಸಂಜ್ಞೆ. ರಾಜ್+ಅಸ್ ಎಂದಿರುವಾಗ ಷತ್ವ ಹೇಳುತ್ತಾನೆ.

(ವ್ರಶ್ಚಾದಿಗಳಿಗೆ ಷತ್ವ ಹೇಳುವ ಸೂತ್ರ)

## ೩೦೯. ವ್ರಶ್ಚಭ್ರಸ್ಜಸೃಜ ಮೃಜಯಜರಾಜ ಭ್ರಾಜಛಶಾಂ, ಷಃ ॥ ೮-೨-೩೬ ॥

ಝಲಿ ಪದಾಂತೇ ಚ ॥ ಜಶ್ತ್ವ ಚರ್ತ್ವೇ ॥ ರಾಟ್, ರಾಡ್ । ರಾಜೌ । ರಾಜಃ ॥ ರಾಡ್ಭ್ಯಾಮ್ ॥ ಏವಂ ವಿಭ್ರಾಟ್, ದೇವೇಟ್, ವಿಶ್ವಸೃಟ್ ॥

ವಾ ॥ (ಪರೌ ವ್ರಜೇಃ ಷಃ ಪದಾಂತೇ) ಪರಾವುಪಪದೇ ವ್ರಜೇಃ ಕ್ವಿಪ್‌ಸ್ಯಾದ್ದೀರ್ಘಶ್ಚ ಪದಾಂತೇ ಷತ್ವಮಪಿ ॥ ಪರಿವ್ರಾಟ್ । ಪರಿವ್ರಾಜೌ ॥

ದ್ವಿಪದ ಸೂತ್ರ. ವ್ರಶ್ಚ, ಭ್ರಸ್ಜ, ಸೃಜ, ಮೃಜ, ಯಜ, ರಾಜ, ಭ್ರಾಜ, ಇವು ಏಳು ಧಾತುಗಳು. ಛ ಶ ಇವೆರಡು ವರ್ಣಗಳು. ಶಬ್ದರೂಪ ಅಧ್ಯಾಹಾರಮಾಡಿಕೊಂಡು ಅವುಗಳನ್ನು ವಿಶೇಷಣವನ್ನಾಗಿ ಮಾಡಿದರೆ ಛಕಾರಾಂತ, ಶಕಾರಾಂತ ಶಬ್ದಗಳಿಗೆ ಎಂದರ್ಥವಾಗುತ್ತದೆ. "ಪದಸ್ಯ" ಅಧಿಕಾರ. "ಸ್ಕೋಃ ಸಂಯೋಗಾದ್ಯೋ

ರಂತೇಚ" ಸೂತ್ರದಿಂದ "ಅಂತೇ" "ಝಲೋ ಝಲಿ" ಸೂತ್ರದಿಂದ "ಝಲಿ" ಅನುವೃತ್ತಿ. ಸೂತ್ರಾರ್ಥ. ವ್ರಶ್ಚಾದಿಗಳಿಗೂ ಛಾಂತ, ಶಾಂತ ಶಬ್ದಗಳಿಗೂ ಝಲ್ ಪರದಲ್ಲಿರುವಾಗಲೂ ಪದಾಂತದಲ್ಲಿಯೂ ಷಕಾರಾದೇಶ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತಾದೇಶ. ರಾಜ್+ಸ್ ಎಂದಿರುವಾಗ "ಹಲ್ ಙ್ಯಾಭ್ಯೋ"–ಸೂತ್ರದಿಂದ ಸುಲೋಪವಾದಾಗ ಪದಾಂತವಾದುದರಿಂದ ಈ ಸೂತ್ರದಿಂದ ಜಕಾರಕ್ಕೆ ಷಕಾರಾದೇಶ. ರಾಷ್. ಷಕಾರ ಝಲಿನಲ್ಲಿ ಸೇರುವುದರಿಂದ "ಝಲಾಂ ಜಶೋಂತೇ" ಸೂತ್ರದಿಂದ ಷಕಾರಕ್ಕೆ ಜಶ್ತ್ವ. ಸ್ಥಾನಸಾಮ್ಯದಿಂದ ಡಕಾರ. ರಾಡ್ "ವಾವಸಾನೇ" ಸೂತ್ರದಿಂದ ವಿಕಲ್ಪವಾಗಿ ಚರ್ ಬಂದರೆ ರಾಟ್. ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ರಾಜೌ–ರಾಜಃ ಇತ್ಯಾದಿ. ಭ್ಯಾಮಾದಿ ಹಲಾದಿಯಲ್ಲಿ ಪದಾಂತತ್ವವಿರುವುದರಿಂದ ಹಿಂದಿನ ಸೂತ್ರದಿಂದ ಜಕಾರಕ್ಕೆ ಷತ್ವ. ರಾಷ್+ಭ್ಯಾಮ್ ಎಂದಿರುವಾಗ ಹಿಂದಿನಂತೆ ಜಶ್ತ್ವ ಡ, ರಾಡ್ಭ್ಯಾಮ್. ಚರ್ತ್ವಕ್ಕೆ ನಿಮಿತ್ತವಿಲ್ಲ. ಸಪ್ತಮೀ ಸುವಿನಲ್ಲಿ ರಾಜ್+ಸು. ಷತ್ವ ರಾಷ್–ಸು. ಜಶ್ತ್ವ ಡ. ರಾಡ್+ಸು. "ಡಃ ಸಿ ಧುಟ್" ಸೂತ್ರದಿಂದ ಸಕಾರಕ್ಕೆ ವಿಕಲ್ಪವಾಗಿ ಧುಟಾಗಮ. ರಾಡ್+ಧ್ ಸು. "ಖರಿಚ" ಎರಡುಬಾರಿ ಬಂದು ರಾಟ್ತ್ಸು. ಧುಟ್ ಬಾರದಿದ್ದರೆ ರಾಟ್ಸು. ಹೀಗೆಯೇ ವಿಭ್ರಾಜ್ ಶಬ್ದ. ಭ್ರಾಜಧಾತು ವ್ರಶ್ಚಾದಿ ಸೂತ್ರದಲ್ಲಿ ಸೇರಿರುವುದರಿಂದ ಷತ್ವ. ಜಶ್ತ್ವ. ವಿಭ್ರಾಟ್–ವಿಭ್ರಾಜೌ ವಿಭ್ರಾಜಃ ‖ ಸ-ಬ–ವಿಭ್ರಾಟತ್ಸು–ವಿಭ್ರಾಟ್ಸು ‖ ದೇವೇಜ್ ಶಬ್ದ. (ದೇವರನ್ನು ಪೂಜಿಸುವವನು) ಯಜ ಧಾತು ಸೂತ್ರದಲ್ಲಿ ಸೇರಿರುವುದರಿಂದ ಷತ್ವಾದಿ. ದೇವೇಜ್. ಇತ್ಯಾದಿ. ಸೃಜಧಾತುವೂ ಸೇರಿರುವುದರಿಂದ ವಿಶ್ವಸೃಟ್-ವಿಶ್ವಸೃಜೌ-ವಿಶ್ವಸೃಜಃ ಇತ್ಯಾದಿ. ಪರಿವ್ರಾಜ್ ಶಬ್ದ.(ಸನ್ಯಾಸಿ) ಸರ್ವಂ ಪರಿತ್ಯಜ್ಯ ವ್ರಜತಿ. ಎಲ್ಲರನ್ನೂ ಬಿಟ್ಟು ಹೋಗುತ್ತಾನೆ. ಪರಿವ್ರಜ್. ಪರಿ ಉಪಸರ್ಗಪೂರ್ವಕವಾದ ವ್ರಜಧಾತು. (ವ್ರಜಗತೌ) ಇದಕ್ಕೆ ದೀರ್ಘ, ಶತ್ವ ವಾರ್ತಿಕದಿಂದ ಸಿದ್ಧವಾಗುತ್ತವೆ. ವಾರ್ತಿಕಾರ್ಥ. ಪರಿಯೆಂಬುದು ಉಪಪದವಾಗಿರುವಾಗ (ಸಮೀಪದಲ್ಲಿರುವಾಗ) ವ್ರಜಧಾತುವಿಗೆ ಕ್ವಿಪ್, ದೀರ್ಘವೂ ಬರುತ್ತದೆ. ಪದಾಂತ ವಿಷಯದಲ್ಲಿ ಷತ್ವವೂ ಬರುತ್ತದೆ. ಪರಿವ್ರಾಜ್ ಎಂದಾಗುತ್ತದೆ. ಸು ಬಂದು ಲೋಪವಾದಾಗ ಪದಾಂತವಾದುದರಿಂದ ಷತ್ವ. ಪರಿವ್ರಾಷ್–ಜಶ್ತ್ವ. ಪರಿವ್ರಾಡ್. "ವಾವಸಾನೇ" ಪರಿವ್ರಾಟ್. ಅಜಾದಿಯಲ್ಲಿ ಷತ್ವವಿಲ್ಲ. ಪರಿವ್ರಾಜೌ–ಪರಿವ್ರಾಜಃ ಇತ್ಯಾದಿ. ಸಪ್ತಮೀ ಸುವಿನಲ್ಲಿ ಪರಿವ್ರಾಟ್ತ್ಸು–ಪರಿವ್ರಾಟ್ಸು ‖

## ಜಕಾರಾಂತ ವಿಶ್ವರಾಜ್ ಶಬ್ದ. (ಈಶ್ವರ)

ವಿಶ್ವಸ್ಮಿನ್ ರಾಜತೇ. ಪ್ರಪಂಚದಲ್ಲಿ ಪ್ರಕಾಶಿಸುವವನು. ವಿಶ್ವಶಬ್ದ ಉಪಪದವಾಗಿರುವಾಗ ರಾಜೃ ಧಾತುವಿಗೆ ಕ್ವಿಪ್. ವಿಶ್ವರಾಜ್ ಶಬ್ದ. ಇದಕ್ಕೆ ಪೂರ್ವಪದಾಂತದಲ್ಲಿ ದೀರ್ಘ ಹೇಳುತ್ತಾನೆ.

(ವಿಶ್ವಶಬ್ದಕ್ಕೆ ದೀರ್ಘ ಹೇಳುವ ಸೂತ್ರ)

## ೩೧೦. ವಿಶ್ವಸ್ಯ ವಸುರಾಟೋಃ ॥ ೬-೩-೧೨೮ ॥

**ವಿಶ್ವಶಬ್ದಸ್ಯ ದೀರ್ಘೋಽಂತಾದೇಶಃ ಸ್ಯಾದ್ವಸೌ ರಾಟ್‌ಶಬ್ದೇ ಚ ಪರೇ ॥ ವಿಶ್ವಾರಾಟ್ । ವಿಶ್ವಾರಾಡ್ । ವಿಶ್ವರಾಜೌ । ವಿಶ್ವಾರಾಡ್ಭ್ಯಾಮ್ ॥ ಇತ್ಯಾದಿ ॥**

ದ್ವಿಪದಸೂತ್ರ. "ಢ್ರಲೋಪೇ–" ಸೂತ್ರದಿಂದ "ದೀರ್ಘಃ" ಪದಕ್ಕೆ ಅನುವೃತ್ತಿ. ವಸುಶ್ಚರಾಟ್‌ಚ ವಸುರಾಟೌ–ತಯೋಃ ವಸುರಾಟೋಃ. ವಸು, ರಾಟ್‌ಶಬ್ದಗಳು. ಸೂತ್ರಾರ್ಥ. ವಿಶ್ವಶಬ್ದಕ್ಕೆ ವಸುಶಬ್ದ ರಾಟ್ ಶಬ್ದಗಳು ಪರವಾದಾಗ ದೀರ್ಘ ಬರುತ್ತದೆ. "ಅಲೋಽಂತ್ಯಸ್ಯ" ಪರಿಭಾಷೆಯಿಂದ ಅಂತಾದೇಶ. ಇಲ್ಲಿ ರಾಟ್‌ಶಬ್ದ ಪರದಲ್ಲಿರಬೇಕು ಎಂದುದರಿಂದ ರಾಟ್ ರೂಪವಾಗುವುದು ಪದಾಂತದಲ್ಲಿ ಆದುದರಿಂದ ಪದಾಂತದಲ್ಲಿ ಎಂದು ಅರ್ಥವಾಗುತ್ತದೆ. ಆಗ ಪದಾಂತದಲ್ಲಿ ಮಾತ್ರ ದೀರ್ಘವೆಂದು ತಿಳಿಯಬೇಕು. ವಿಶ್ವರಾಜ್. "ವ್ರಶ್ಚಭ್ರಸ್ಜ—" (ಸೂ. ೩೧೦) ಸೂತ್ರದಲ್ಲಿ ರಾಜ್ ಶಬ್ದ ಸೇರಿರುವುದರಿಂದ ಪದಾಂತದಲ್ಲಿ ಜಕಾರಕ್ಕೆ ಷಕಾರ. ವಿಶ್ವಾರಾಷ್. "ಝಲಾಂಜಶೋಽಂತೇ" ಸೂತ್ರದಿಂದ ಷಕಾರಕ್ಕೆ ಡಕಾರ. "ವಾವಸಾನೇ" ಸೂತ್ರದಿಂದ ವಿಕಲ್ಪವಾಗಿ ಚರ್ತ್ವ. ವಿಶ್ವಾರಾಟ್. ಅಜಾದಿಯಲ್ಲಿ ರಾಟ್ ರೂಪವಾಗುವುದಿಲ್ಲ. ಪದಾಂತತ್ವ ಇಲ್ಲ. ಕೇವಲ ಪ್ರತ್ಯಯ ಸೇರಿಸುವುದು ಮಾತ್ರ. ವಿಶ್ವರಾಜೌ ವಿಶ್ವರಾಜಃ । ಇತ್ಯಾದಿ. ವಿಶ್ವರಾಜ್+ಭ್ಯಾಮ್ ಎಂದಿರುವಾಗ ಪದಾಂತತ್ವವಿದೆ (ಸ್ವಾದಿಷ್ವಸರ್ವನಾಮಸ್ಥಾನೇ) ಆದುದರಿಂದ "ವ್ರಶ್ಚಭ್ರಸ್ಜ—" ಸೂತ್ರದಿಂದ ಷತ್ವ. ಜಶ್ತ್ವ. ವಿಶ್ವರಾಡ್+ಭ್ಯಾಮ್. ಈ ಸೂತ್ರದಿಂದ ದೀರ್ಘ. ವಿಶ್ವಾರಾಡ್ಭ್ಯಾಮ್–ವಿಶ್ವಾರಾಡ್ಭಿಃ. ಸಪ್ತಮಿ ಸುವಿನಲ್ಲಿ ವಿಶ್ವಾರಾಟ್‌ತ್ಸು ವಿಶ್ವಾರಾಟ್ಸು ॥

———

ಜಕಾರಾಂತ "ಭೃಸ್ಜ್" ಶಬ್ದ (ಹುರಿಯುವವನು)

ಭೃಸ್ಜ್+ಸ್ ಎಂದಿರುವಾಗ "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ಜಕಾರಕ್ಕೆ ಲೋಪ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಸಕಾರಕ್ಕೆ ಲೋಪ ಹೇಳುತ್ತಾನೆ.

(ಸಂಯೋಗಾದಿಯ ಸಕಾರ ಠಕಾರಗಳಿಗೆ ಲೋಪ ಹೇಳುವ ಸೂತ್ರ)

## ೩೧೧. ಸ್ಕೋಃ ಸಂಯೋಗಾದ್ಯೋರಂತೇ ಚ ॥ ೮-೨-೨೯ ॥

**ಪದಾಂತೇ ಝುಲಿ ಚ ಯಃ ಸಂಯೋಗಸ್ತದಾದ್ಯೋಃ ಸ್ಕೋರ್ಲೋಪಃ । ಭೃಟ್ । ಸಸ್ಯ ಶ್ಚುತ್ವೇನ ಶಃ । ಝುಲಾಂ ಜಶ್ ಝುಶಿ ಇತಿ ಶಸ್ಯ ಜಃ । ಭೃಜ್ಜೌ । ಭೃಡ್ಭ್ಯಾಮ್ । ಇತ್ಯಾದಿ.**

ಸ್ಕೋಃ, ಸಂಯೋಗ, ಆದ್ಯೋಃ, ಅಂತೇ, ಚ ॥ ಐದು ಪದಗಳುಳ್ಳ ಸೂತ್ರ. "ಪದಸ್ಯ" ಅಧಿಕಾರ. "ಝುಲೋಝುಲಿ" ಸೂತ್ರದಿಂದ "ಝುಲಿ" "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ "ಲೋಪಃ" ಅನುವೃತ್ತವಾಗುತ್ತವೆ. ಸಂಯೋಗ ಎಂಬುದು ಲುಪ್ತಷಷ್ಠೀಕ ಪದ. "ಝುಲಿ," "ಪದಾಂತೇ" ಎರಡು ಪದಗಳು ಸಂಯೋಗ ಎಂಬಲ್ಲಿ ಅನ್ವಯಹೊಂದುತ್ತವೆ. "ಸ್‌ಚ. ಕ್‌ಚ, ಸ್ಕೌ, ತಯೋಃ ಸ್ಕೋಃ." **ಸೂತ್ರಾರ್ಥ**. ಪದಾಂತ ವಿಷಯದಲ್ಲಿಯೂ ಝುಲ್ ಪರದಲ್ಲಿರುವಾಗಲೂ ಯಾವ ಸಂಯೋಗವಿದೆಯೋ ಅದರ ಆದಿಯಲ್ಲಿರುವ ಸಕಾರ ಕಕಾರಗಳಿಗೆ ಲೋಪ ಬರುತ್ತದೆ. ಭೃಸ್‌ಜ್+ಸ್ ಎಂದಿರುವಾಗ "ಹಲ್‌ಙ್ಯಾಭ್ಯೋ"–ಸೂತ್ರದಿಂದ ಸುಲೋಪವಾದಮೇಲೆ ಭೃಸ್‌ಜ್ ಪದಾಂತವಾಗುತ್ತದೆ. ಪದಾಂತದಲ್ಲಿ ಸಂಯೋಗ ವಿದೆ. ಅದರ ಆದಿಯ ಸಕಾರಕ್ಕೆ ಈ ಸೂತ್ರದಿಂದ ಲೋಪ. ಭೃಜ್. "ವ್ರಶ್ಚಭ್ರಸ್ಜ" –ಸೂತ್ರದಲ್ಲಿ ಸೇರಿರುವುದರಿಂದ ಜಕಾರಕ್ಕೆ ಷಕಾರ. "ಝುಲಾಂ ಜಶೋಂತೇ" ಸೂತ್ರದಿಂದ ವಿಕಲ್ಪಚರ್ತ್ವ. ಭೃಟ್. ಭೃಸ್‌ಜ್+ಔ ಎಂದಿರುವಾಗ "ಸ್ತೋಃ ಶ್ಚುನಾ ಶ್ಚುಃ" ಸೂತ್ರದಿಂದ ಸಕಾರಕ್ಕೆ ಜಕಾರಯೋಗವಿರುವುದರಿಂದ ಶಕಾರಾದೇಶ. ಭೃಶ್ ಜ್+ಔ. ಇಲ್ಲಿ "ಝುಲಾಂ ಜಶ್ ಝುಶಿ" ಸೂತ್ರ (೧೯) ದಿಂದ ಝುಶ್ ಪರದಲ್ಲಿರುವುದರಿಂದ ಝುಲ್ಲಾದ ಶಕಾರಕ್ಕೆ ಜಕಾರಾದೇಶ. ಭೃಜ್ಜೌ. ಇನ್ನು ಅಜಾದಿಯಲ್ಲೆಲ್ಲಾ ಹೀಗೇ ರೂಪ. ಭೃಜ್ಜಃ-॥ ದ್ವಿ. ಭೃಜ್ಜಂ-ಇತ್ಯಾದಿ. ಭ್ಯಾಮ್ ಪರವಾದಾಗ "ಸ್ವಾದಿಷ್ವ ಸರ್ವನಾಮಸ್ಥಾನೇ" ಸೂತ್ರದಿಂದ ಪದಸಂಜ್ಞಾ ಇರುವುದರಿಂದ ಹಿಂದಿನಂತೆ "ಸ್ಕೋಃ ಸಂಯೋಗಾದ್ಯೋರಂತೇಚ" ಸೂತ್ರದಿಂದ ಸಕಾರ ಲೋಪ. ಜಕಾರಕ್ಕೆ ಷತ್ವ. ಡತ್ವ. ಭೃಸ್‌ಜ್+ಭ್ಯಾಮ್. ಭೃಜ್+ಭ್ಯಾಮ್– ಭೃಡ್ಭ್ಯಾಮ್-ಭೃಡ್ಭಿಃ. ಇನ್ನು ಹಲಾದಿಯಲ್ಲಿ ಹೀಗೇ ರೂಪ. ಸಪ್ತಮೀ ಬಹುವಚನದಲ್ಲ ಭೃಟ್‌ತ್ಸು-ಭೃಟ್ಸು. ಎರಡು ರೂಪಗಳು.

**ಇತಿ ಜಾಂತಾಃ**

---

ದಕಾರಾಂತ "ತ್ಯದ್" ಶಬ್ದ. (ಅವನು)

**ತ್ಯದಾದ್ಯತ್ವಂ । ಪರರೂಪತ್ವಂ ಚ ॥**

ತ್ಯದ್ ಸರ್ವನಾಮಶಬ್ದ. ಇದಕ್ಕೆ ವಿಭಕ್ತಿಪರವಾದಾಗ "ತ್ಯದಾದೀನಾಮಃ" ಸೂತ್ರ (೧೯೩) ದಿಂದ ಅಕಾರಾಂತಾದೇಶ. ತದ್+ಸ್ ಎಂದಿರುವಾಗ ತ್ಯ+ಅ+

ಸ್ ಎಂದಾಗುತ್ತದೆ. "ಅತೋ ಗುಣೇ" ಸೂತ್ರ (೨೭೭) ದಿಂದ ಪರರೂಪ. ತ್ಯ+ಸ್ ಎಂದಿರುವಾಗ ಆದಿಯ ತಕಾರಕ್ಕೆ ಸಕಾರ ಹೇಳುತ್ತಾನೆ.

(ತ್ಯದಾದಿಗಳ ತ, ದಗಳಿಗೆ ಸಕಾರ ಹೇಳುವ ಸೂತ್ರ)

## ೩೧೨. ತದೋಃ ಸಃ ಸಾವನನ್ತ್ಯಯೋಃ ॥ ೭-೨-೧೦೬ ॥

**ತ್ಯದಾದೀನಾಂ ತಕಾರ ದಕಾರಯೋರನಂತ್ಯಯೋಃ ಸಃ ಸ್ಯಾತ್ಸೌ, ॥ ಸ್ಯಃ । ತ್ಯೌ । ತ್ಯೇ ॥ ಸಃ । ತೌ । ತೇ ॥ ಯಃ । ಯೌ । ಯೇ ॥ ಏಷಃ । ಏತೌ । ಏತೇ ॥**

ತದೋಃ, ಸಃ, ಸೌ, ಅನಂತ್ಯಯೋಃ ॥ ನಾಲ್ಕು ಪದಗಳುಳ್ಳ ಸೂತ್ರ. "ತಶ್ಚ ದ್ ಚ ತದೌ." ತಯೋಃ ತದೋಃ. ತಕಾರ ದಕಾರಗಳಿಗೆ ಎಂದರ್ಥ. ತಕಾರದ ಮೇಲಿರುವ ಅಕಾರ ಉಚ್ಚಾರಣಾರ್ಥ. "ತ್ಯದಾದೀನಾಮಃ" ಸೂತ್ರದಿಂದ "ತ್ಯದಾದೀನಾಮ್" ಅನುವೃತ್ತಿ. ಸೂತ್ರಾರ್ಥ. ತ್ಯದಾದಿಗಳಿಗೆ ಸು ಪರದಲ್ಲಿರುವಾಗ ಅವುಗಳ ಅಂತ್ಯದಲ್ಲಿ ಇಲ್ಲದೆಇರುವ ತಕಾರ ದಕಾರಗಳಿಗೆ ಸಕಾರ ಆದೇಶ ಬರುತ್ತದೆ. ಪ್ರಕೃತ ತ್ಯ+ಸ್ ಎಂದಿರುವಾಗ ಸು ಪರದಲ್ಲಿದೆ. ತಕಾರ ಅಂತ್ಯದಲ್ಲಿ ಇಲ್ಲ. ಆದುದರಿಂದ ತಕಾರಕ್ಕೆ ಸಕಾರ. ಸ್ಯಸ್. ಸಕಾರಕ್ಕೆ ರುತ್ವವಿಸರ್ಗ. ಸು ಪರದಲ್ಲಿರುವಾಗ ಮಾತ್ರ ಸತ್ವ. ಇತರ ವಿಭಕ್ತಿಗಳಲ್ಲಿ ಇಲ್ಲ. ಇನ್ನು ಎಲ್ಲಾ ವಿಭಕ್ತಿಗಳಲ್ಲಿಯೂ ತ್ಯದಾದ್ಯತ್ವ, ಪರರೂಪ ಬಂದು ತ್ಯ ಎಂದು ಅಕಾರಾಂತವಾಗುತ್ತದೆ. ಆಗ ಸರ್ವ ಶಬ್ದದಂತೆ ರೂಪ ತಿಳಿಯಬೇಕು. ಸ್ಯಃ-ತ್ಯೌ-ತ್ಯೇ ॥ ದ್ವಿ. ತ್ಯಂ-ತ್ಯೌ-ತ್ಯಾನ್. ॥ ತೃ-ತ್ಯೇನ-ತ್ಯಾಭ್ಯಾಂ-ತ್ಯೈಃ । ಚ-ತ್ಯಸ್ಮೈ-ತ್ಯಾಭ್ಯಾಮ್-ತ್ಯೇಭ್ಯಃ । ಪಂ-ತ್ಯಸ್ಮಾತ್-ತ್ಯಾಭ್ಯಾಮ್-ತ್ಯೇಭ್ಯಃ । ಷ. ತ್ಯಸ್ಯ-ತ್ಯಯೋಃ-ತ್ಯೇಷಾಂ ॥ ಸ. ತ್ಯಸ್ಮಿನ್-ತ್ಯಯೋಃ-ತ್ಯೇಷು ॥

---

### ದಕಾರಾಂತ ತದ್ ಶಬ್ದ. (ಅವನು.)

ತ್ಯದ್ ಶಬ್ದದಂತೆ ಪ್ರಕ್ರಿಯಾ ಹೊಂದುತ್ತದೆ. ಅಂತ್ಯವಲ್ಲದ ತಕಾರಕ್ಕೆ ಸುವಿನಲ್ಲಿ ಸಕಾರಾದೇಶ. ಸಃ-ತೌ-ತೇ ಇತ್ಯಾದಿ. ॥ ತ್ಯದಿನಂತೇ ತಿಳಿಯಬೇಕು.

---

### ದಕಾರಾಂತ "ಯದ್" ಶಬ್ದ. (ಯಾರು. ಪ್ರಶ್ನೆಯಲ್ಲ.)

ಇಲ್ಲಿ ಅತ್ವ, ಪರರೂಪ ಮಾತ್ರ. ತಕಾರ ದಕಾರಗಳಿಲ್ಲ. ಯ ಅಕಾರಾಂತವಾದ ಮೇಲೆ ಸರ್ವಶಬ್ದದಂತೇ ರೂಪ. ಯಃ-ಯೌ-ಯೇ. ಇತ್ಯಾದಿ.

---

## ದಕಾರಾಂತ, "ಏತದ್" ಶಬ್ದ (ಇವನು)

ಏತದ್+ಸ್ ಎಂದಿರುವಾಗ "ತ್ಯದಾದೀನಾಮಃ" ಸೂತ್ರದಿಂದ ಅತ್ವ. "ಅತೋಗುಣೇ" ಪರರೂಪ. ಏತ+ಸ್. ಅನಂತ್ಯದ ತಕಾರಕ್ಕೆ "ತದೋಃ ಸಾವನಂತ್ಯಯೋಃ" ಸೂತ್ರದಿಂದ ಸಕಾರ. ಏಸ+ಸ್. ಇಣಿನ ಪರದಲ್ಲಿ ಆದೇಶ ಸಕಾರವಿರುವುದರಿಂದ "ಆದೇಶಪ್ರತ್ಯಯಯೋಃ" ಸೂತ್ರದಿಂದ ಷತ್ವ. ಏಷಸ್. ರುತ್ವ, ವಿಸರ್ಗ. ಏಷಃ। ಇನ್ನು ತ್ಯದಾದ್ಯತ್ವ ಪರರೂಪ. ಅದಂತವಾಗುತ್ತದೆ. ಸರ್ವಶಬ್ದದಂತೇ ರೂಪ. ಏತೌ-ಏತೇ ಇತ್ಯಾದಿ. ಅನ್ವಾದೇಶದಲ್ಲಿ (ಇದಮ್ ಶಬ್ದದಲ್ಲಿ ಇದರ ವಿಚಾರ ಬಂದಿದೆ) ಏನಾದೇಶ. ದ್ವಿ. ಏತಂ, ಏನಂ-ಏತೌ-ಏನೌ-ಏತಾನ್, ಏನಾನ್. ತೃ. ಏತೇನ, ಏನೇನ-ಏತಾಭ್ಯಾಂ-ಏತೈಃ॥ ಚ-ಏತಸ್ಮೈ-ಏತಾಭ್ಯಾಮ್-ಏತೇಭ್ಯಃ॥ಪಂ. ಏತಸ್ಮಾತ್-ಏತಾಭ್ಯಾಮ್-ಏತೇಭ್ಯಃ॥ ಷ. ಏತಸ್ಯ-ಏತಯೋಃ-ಏನಯೋಃ-ಏತೇಷಾಮ್ ॥ ಸ. ಏತಸ್ಮಿನ್ ಏತಯೋಃ, ಏನಯೋಃ-ಏತೇಷು ॥

---

## ದಕಾರಾಂತ. ಯುಷ್ಮದ್, ಅಸ್ಮದ್, ಶಬ್ದಗಳು (ನೀನು, ನಾನು)

ಇವುಗಳ ಪ್ರಕ್ರಿಯೆಯನ್ನು ಒಟ್ಟಿಗೆ ಹೇಳುತ್ತಾ ಹೋಗುತ್ತಾನೆ. ಪ್ರತಿಯೊಂದು ವಿಭಕ್ತಿಯಲ್ಲಿಯೂ ಇವುಗಳಿಗೆ ಪ್ರಕ್ರಿಯೆ ಇದೆ. ಒಂದೂ ಪ್ರಕೃತಿಗೆ ಆದೇಶ, ಅಥವಾ ಪ್ರತ್ಯಯಕ್ಕೆ ಆದೇಶ. ಹೀಗೆ ಆದೇಶ ಬಂದು ಮೂಲಸ್ವರೂಪವೇ ಬೇರೆಯಾಗುವುದಿದೆ. ಯುಷ್ಮದ್+ಸ್, ಅಸ್ಮದ್+ಸ್ ಎಂದಿರುವಾಗ ಪ್ರತ್ಯಯಗಳಿಗೆ ಆದೇಶ ಹೇಳುತ್ತಾನೆ.

---

(ಙೇ ಪ್ರಥಮಾಪ್ರತ್ಯಯಗಳಿಗೆ ಅಮಾದೇಶ ಹೇಳುವ ಸೂತ್ರ)

## ೩೧೩. ಙೇಪ್ರಥಮಯೋರಮ್ ॥ ೭-೧-೨೮ ॥

**ಯುಷ್ಮದಸ್ಮಭ್ಯಾಂ ಪರಸ್ಯ ಙೇ ಇತ್ಯೇತಸ್ಯ ಪ್ರಥಮಾದ್ವಿತೀಯಯೋಶ್ಚಾಮಾದೇಶಃ ॥**

ಙೇ, ಪ್ರಥಮಯೋಃ, ಅಮ್ ॥ ತ್ರಿಪದಸೂತ್ರ. ಙೇ ಎಂಬುದು ಲುಪ್ತ ಷಷ್ಠೀಕ ಪದ. "ಪ್ರಥಮಾ ಚ, ಪ್ರಥಮಾ ಚ ಪ್ರಥಮೇ. ಪ್ರಥಮಾದ್ವಿತೀಯಾ ವಿಭಕ್ತಿಗಳು. ತಯೋಃ, "ಪ್ರಥಮಾದ್ವಿತೀಯಯೋಃ" "ಯುಷ್ಮದಸ್ಮಭ್ಯಾಂ ಙಸೋಽಶ್" ಸೂತ್ರದಿಂದ "ಯುಷ್ಮದಸ್ಮಭ್ಯಾಮ್" ಅನುವೃತ್ತಿ. **ಸೂತ್ರಾರ್ಥ.** ಯುಷ್ಮದಸ್ಮದ್ ಶಬ್ದಗಳ ಪರದಲ್ಲಿರುವ ಙೇ ವಿಭಕ್ತಿಗೂ ಪ್ರಥಮಾದ್ವಿತೀಯಾ ವಿಭಕ್ತಿಗಳ ಮೂರು ವಚನಗಳಿಗೂ ಅಮ್ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. "ನ ವಿಭಕ್ತೌತುಸ್ಮಾಃ" ಸೂತ್ರದಿಂದ ಮಕಾರಕ್ಕೆ ಇತ್ಸಂಜ್ಞಾ

ಬರುವುದಿಲ್ಲ. ಯುಷ್ಮದ್+ಅಮ್, ಅಸ್ಮದ್+ಅಮ್ ಎಂದಾದಾಗ ಪ್ರಕೃತಿಗೆ ಆದೇಶ ಹೇಳುತ್ತಾನೆ.

(ಮಪರ್ಯಂತಕ್ಕೆ ಆದೇಶಹೇಳುವ ಸೂತ್ರ)

## ೩೧೪. ತ್ವಾಹೌ ಸೌ ॥ ೭-೨-೯೦ ॥

**ಅನಯೋರ್ಮಪರ್ಯಂತಸ್ಯ ತ್ವಾಹೌ ಆದೇಶೌ ಸ್ತಃ ॥**

ದ್ವಿಪದ ಸೂತ್ರ, "ಮಪರ್ಯಂತಸ್ಯ" ಅಧಿಕಾರ. ಮುಂದೆ ಹೇಳುವ ಆದೇಶಗಳು ಯುಷ್ಮದ್, ಅಸ್ಮದಿನ ಮಪರ್ಯಂತಕ್ಕೆ ಎಂದು ಅಧಿಕಾರದ ಅರ್ಥ. ಯುಷ್ಮ್, ಅಸ್ಮ್ ಇವುಗಳಿಗೆ ಬರುತ್ತದೆ. "ಯುಷ್ಮದಸ್ಮದೋರನಾದೇಶೇ" ಸೂತ್ರದಿಂದ "ಯುಷ್ಮದಸ್ಮದೋಃ" ಅನುವೃತ್ತಿ. **ಸೂತ್ರಾರ್ಥ.** ಸು ಪರದಲ್ಲಿರುವಾಗ ಯುಷ್ಮದ್, ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ ತ್ವ, ಅಹ ಆದೇಶಗಳು ಕ್ರಮವಾಗಿ ಬರುತ್ತವೆ. ಪ್ರಕೃತ ಸುಪರದಲ್ಲಿರುವುದರಿಂದ ಆದೇಶಬಂದರೆ ತ್ವ+ಅದ್+ಅಮ್. ಅಹ+ಅದ್+ಅಮ್ ಎಂದಾಗುತ್ತದೆ. ಈಗ ಅದ್ ಎಂಬುದಕ್ಕೆ ಲೋಪ ಹೇಳುತ್ತಾನೆ.

(ಯುಷ್ಮದಸ್ಮದ್‌ಗಳ ಅದಿಗೆ ಲೋಪಹೇಳುವ ಸೂತ್ರ)

## ೩೧೫. ಶೇಷೇ ಲೋಪಃ ॥ ೭-೨-೯೦ ॥

**ಶೇಷೇ ವಿಭಕ್ತೌ ಏತಯೋಷ್ಟಿಲೋಪಃ ॥ ತ್ವಮ್ । ಅಹಮ್ ॥**

ದ್ವಿಪದಸೂತ್ರ. "ಯುಷ್ಮದಸ್ಮದೋಃ" (೩೨೪) ಅನುವೃತ್ತಿ. "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ವಿಭಕ್ತೌ" ಅನುವೃತ್ತಿ. ಶೇಷೇ ಎಂಬುದಕ್ಕೆ ವಿಭಕ್ತಿಯಲ್ಲಿ ಅನ್ವಯ. ಹಿಂದೆ ಹೇಳಿ ಬಿಟ್ಟದ್ದು ಶೇಷ. ಹಿಂದೆ ಆತ್ವಕ್ಕೆ ಯತ್ವಕ್ಕೆ ನಿಮಿತ್ತಗಳಾದ ವಿಭಕ್ತಿ ಹೇಳಿದೆ. ಈಗ ಶೇಷಪದದಿಂದ ಆತ್ವ ಯತ್ವಗಳಿಗೆ ನಿಮಿತ್ತವಾಗದ ವಿಭಕ್ತಿ ಎಂದರ್ಥವಾಗುತ್ತದೆ. **ಸೂತ್ರಾರ್ಥ.** ಆತ್ವಯತ್ವಗಳಿಗೆ ನಿಮಿತ್ತವಾಗದ ವಿಭಕ್ತಿಪರದಲ್ಲಿರುವಾಗ ಯುಷ್ಮದ್, ಅಸ್ಮದ್ ಶಬ್ದಗಳ ಟಿಗೆ ಲೋಪಬರುತ್ತದೆ. ಪ್ರಕೃತ ಸುವಿಗೆ ಬಂದ ಅಮ್ ಆತ್ವಕ್ಕಾಗಲೀ ಯತ್ವಕ್ಕಾಗಲೀ ನಿಮಿತ್ತವಾಗಿಲ್ಲ. ಆದುದರಿಂದ ಟಿಗೆ ಲೋಪ. "ಅಚೋಽಂತ್ಯಾದಿ ಟಿ" ಸೂತ್ರದಿಂದ ಟಿಯೆಂದರೆ ಅದ್. ಲೋಪಬಂದರೆ ತ್ವ+ಅಮ್, ಅಹ+ಅಮ್ ಎಂದಾಗುತ್ತದೆ. "ಅಮಿ ಪೂರ್ವಃ" ಸೂತ್ರದಿಂದ ಪೂರ್ವರೂಪ. ತ್ವಮ್. ಅಹಮ್.

ಯುಷ್ಮದ್+ಔ, ಅಸ್ಮದ್+ಔ ಎಂದಿರುವಾಗ "ಙೇ ಪ್ರಥಮಯೋರಮ್" ಸೂತ್ರದಿಂದ ವಿಭಕ್ತಿಗೆ ಅಮಾದೇಶ. ಯುಷ್ಮದ್+ಅಮ್, ಅಸ್ಮದ್+ಅಮ್. ಈಗ ಮಪರ್ಯಂತಕ್ಕೆ ಆದೇಶ ಹೇಳುತ್ತಾನೆ.

(ಮಪರ್ಯಂತಕ್ಕೆ ಯುವ, ಆವ ಆದೇಶ ಹೇಳುವ ಸೂತ್ರ)

## ೩೧೩. ಯುವಾವೌ ದ್ವಿವಚನೇ ॥ ೭-೨-೯೨ ॥

**ದ್ವಯೋರುಕ್ತೌ ಅನಯೋರ್ಮಪರ್ಯಂತಸ್ಯ ಯುವಾವೌ ಸ್ತೋ ವಿಭಕ್ತೌ ॥**

ದ್ವಿಪದಸೂತ್ರ. ಯುವಶ್ಚ, ಆವಶ್ಚ, ಯುವಾವೌ. "ಯುಷ್ಮದಸ್ಮದೋರನಾದೇಶೇ" ಸೂತ್ರದಿಂದ "ಯುಷ್ಮದಸ್ಮದೋಃ" ಅನುವೃತ್ತಿ. "ಮಪರ್ಯಂತಸ್ಯ" ಅಧಿಕಾರ. ದ್ವಯೋರ್ವಚನಮ್. ದ್ವಿವಚನಮ್ ಇದು ಯುಷ್ಮದಸ್ಮದೋಃ ಎಂಬಲ್ಲಿ ಅನ್ವಯ ಹೊಂದುತ್ತದೆ. ದ್ವಿವಚನದಲ್ಲಿರುವ ಯುಷ್ಮದಸ್ಮದೋಃ ಎಂದರ್ಥ. ದ್ವಿವಚನದಲ್ಲಿರುವುದೆಂದರೆ ದ್ವಿತ್ವ ಸಂಖ್ಯೆಯನ್ನು ಹೇಳುವವುಗಳು ಎಂದರ್ಥ. ದ್ವಿವಚನಪರದಲ್ಲಿರುವಾಗ ಎಂದರ್ಥವಲ್ಲ. ಹಾಗೆ ಹೇಳಿದರೆ ನಿನ್ನನ್ನು ಅತಿಕ್ರಮಿಸಿದವರಿಬ್ಬರು ಎಂದರ್ಥ ವಿವಕ್ಷಾಮಾಡಿದಾಗ ಅತಿಯುಷ್ಮದ್ + ಔ ಎಂದಿರುವಾಗ ಆದೇಶ ಬರಬೇಕಾಗುತ್ತದೆ. ಆದರೆ ಅಲ್ಲಿ ಯುಷ್ಮದ್ ಏಕತ್ವಸಂಖ್ಯಾವಿಶಿಷ್ಟಾರ್ಥ ವಾಚಕವಾದುದರಿಂದ ಬರುವುದಿಲ್ಲ. **ಸೂತ್ರಾರ್ಥ.** ದ್ವಿತ್ವಸಂಖ್ಯಾ ವಿಶಿಷ್ಟಾರ್ಥ ವಾಚಕವಾದ ಯುಷ್ಮದ್, ಅಸ್ಮದ್‌ಗಳ ಮಪರ್ಯಂತಕ್ಕೆ ವಿಭಕ್ತಿಪರದಲ್ಲಿರುವಾಗ, ಕ್ರಮವಾಗಿ ಯುವ, ಆವ, ಆದೇಶ ಬರುತ್ತವೆ. ಇಲ್ಲಿ ಈ ಎರಡು ಶಬ್ದಗಳು ದ್ವಿತ್ವ ಸಂಖ್ಯಾ ವಿಶಿಷ್ಟಾರ್ಥ ವಾಚಕಗಳಾಗಿವೆ. ಮಪರ್ಯಂತಕ್ಕೆ ಆದೇಶ ಬಂದರೆ ಯುವ + ಅದ್ + ಅಮ್, ಆವ + ಅದ್ + ಅಮ್. ಎಂದಾಗುತ್ತದೆ. ಗುಣವಾದ ಅಕಾರ ಪರದಲ್ಲಿರುವುದರಿಂದ "ಅತೋಗುಣೇ" ಸೂತ್ರದಿಂದ ಪರರೂಪ. ಯುವದ್ + ಅಮ್, ಆವದ್ + ಅಮ್. ಈಗ ದಕಾರಕ್ಕೆ ಆತ್ವಹೇಳುತ್ತಾನೆ.

(ಔ ಪರವಾದಾಗ ಆತ್ವ ಹೇಳುವ ಸೂತ್ರ)

## ೩೧೪. ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್ ॥ ೭-೨-೮೮ ॥

**ಔಙ್ಯೇತಯೋರಾತ್ವಂ ಲೋಕೇ ॥ ಯುವಾಮ್ । ಆವಾಮ್ ॥**

ಪ್ರಥಮಾಯಾಃ, ಚ, ದ್ವಿವಚನೇ, ಭಾಷಾಯಾಮ್ ॥ ನಾಲ್ಕು ಪದಗಳುಳ್ಳ ಸೂತ್ರ. ಇಲ್ಲಿ ದ್ವಿವಚನವೆಂದರೆ ಔ ವಿಭಕ್ತಿ. ಪ್ರಥಮಾ ಎಂಬುದು ಪ್ರಥಮಾ, ದ್ವಿತೀಯಾ ವಿಭಕ್ತಿ ಬೋಧಕವೆಂದು ಹಿಂದಿನ ಸೂತ್ರದಲ್ಲಿ ಹೇಳಿದೆ. "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ಆ" ಅನುವೃತ್ತಿ. "ಯುಷ್ಮದಸ್ಮದೋಃ" ಅನುವೃತ್ತಿ ಇದ್ದೇಇದೆ. ಇನ್ನುಮುಂದೆ ಎಲ್ಲಾಕಡೆಯಲ್ಲಿಯೂ "ಯುಷ್ಮದಸ್ಮದೋರನಾದೇಶೇ" ಸೂತ್ರದಿಂದ "ಯುಷ್ಮದಸ್ಮದೋಃ" ಅನುವೃತ್ತಿಯೆಂದು ತಿಳಿಯಬೇಕು. "ಭಾಷಾಯಾಂ" ಎಂಬುದಕ್ಕೆ ಲೋಕದಲ್ಲಿ ಎಂದರ್ಥ. ವೇದದಲ್ಲಿ ಈ ಆದೇಶವಿಲ್ಲ.

**ಸೂತ್ರಾರ್ಥ**. ಪ್ರಥಮಾ ದ್ವಿತೀಯಾಗಳ ದ್ವಿವಚನವಾದ ಔ ಪರವಾದಾಗ ಯುಷ್ಮದಸ್ಮದ್ ಶಬ್ದಗಳಿಗೆ ಆಕಾರಾದೇಶ ಬರುತ್ತದೆ. "ಅಲೋಂತ್ಯಸ್ಯ" ಸೂತ್ರದಿಂದ ಅಂತಾದೇಶ. ದಕಾರಕ್ಕೆ ಆಕಾರಬಂದರೆ ಯುವ+ಆ+ಅಮ್. ಆವ+ಆ+ಅಮ್. ಸವರ್ಣದೀರ್ಘ. ಯುವಾಮ್. ಆವಾಯ್.

ಯುಷ್ಮದ್+ಜಸ್, ಅಸ್ಮದ್+ಜಸ್ ಎಂದಿರುವಾಗ "ಙೇ ಪ್ರಥಮಯೋರಮ್" ಸೂತ್ರದಿಂದ ಪ್ರತ್ಯಯಕ್ಕೆ ಅಮಾದೇಶ. ಈಗ ಪ್ರಕೃತಿಗೆ ಆದೇಶ ಹೇಳುತ್ತಾನೆ.

(ಯೂಯ, ವಯ, ಆದೇಶ ಹೇಳುವ ಸೂತ್ರ)

## ೩೧೮. ಯೂಯವಯೌ, ಜಸಿ ॥ ೭-೨-೯೩ ॥

### ಅನಯೋರ್ಮಪರ್ಯಂತಸ್ಯ । ಯೂಯಮ್ । ವಯಮ್ ॥

ದ್ವಿಪದ ಸೂತ್ರ. "ಯುಷ್ಮದಸ್ಮದೋಃ" ಅನುವೃತ್ತಿ. "ಮಪರ್ಯಂತಸ್ಯ" ಅಧಿಕಾರ. **ಸೂತ್ರಾರ್ಥ**. ಜಸ್ ಪರದಲ್ಲಿರುವಾಗ ಯುಷ್ಮದ್ ಅಸ್ಮದ್‌ಗಳ ಮಪರ್ಯಂತಕ್ಕೆ ಯೂಯ, ವಯ ಆದೇಶಗಳು ಬರುತ್ತವೆ. ಯುಷ್ಮದ್+ಅಮ್ ಅಸ್ಮದ್+ಅಮ್ ಎಂದಿರುವಾಗ ಮಪರ್ಯಂತಕ್ಕೆ ಆದೇಶ ಬಂದರೆ ಯೂಯ+ಅದ್ ಅಮ್, ವಯ+ಅದ್+ಅಮ್ ಎಂದಾಗುತ್ತದೆ. ಇಲ್ಲಿ ಆತ್ವ ಯತ್ವಕ್ಕೆ ನಿಮಿತ್ತವಲ್ಲದ ವಿಭಕ್ತಿ ಪರವಾದುದರಿಂದ "ಶೇಷೇ ಲೋಪಃ" ಸೂತ್ರದಿಂದ ಮಪರ್ಯಂತದ ಪರದ ಶೇಷವಾದ ಅದಿಗೆ ಲೋಪ. ಯೂಯ+ಅಮ್, ವಯ+ಅಮ್. "ಅಮಿ ಪೂರ್ವಃ" ಸೂತ್ರದಿಂದ ಪೂರ್ವರೂಪ. ಯೂಯಮ್. ವಯಮ್. ಸರ್ವನಾಮ ಶಬ್ದಗಳಿಗೆ ಸಂಬೋಧನೆ ಇಲ್ಲವೆಂದು ಹಿಂದೆ ಹೇಳಿದೆ. ದ್ವಿತೀಯಾ ವಿಭಕ್ತಿಯ ಏಕವಚನದಲ್ಲಿ ಅಮ್ ಪರವಾದಾಗ ಯುಷ್ಮದ್+ಅಮ್, ಅಸ್ಮದ್+ಅಮ್ ಎಂದಿರುವಾಗ ಪ್ರಕೃತಿಗೆ ಆದೇಶಹೇಳುತ್ತಾನೆ.

(ಮಪರ್ಯಂತಕ್ಕೆ ತ್ವ, ಮ ಆದೇಶ ಹೇಳುವ ಸೂತ್ರ)

## ೩೧೯. ತ್ವಮಾವೇಕವಚನೇ ॥ ೭-೨-೯೭ ॥

### ಏಕಸ್ಯೋಕ್ತೌ ಅನಯೋರ್ಮಪರ್ಯಂತಸ್ಯ ತ್ವಮೌಸ್ತಃ ವಿಭಕ್ತೌ ॥

ತ್ವಮೌ, ಏಕವಚನೇ ॥ ದ್ವಿಪದಸೂತ್ರ. "ಮಪರ್ಯಂತಸ್ಯ" ಅಧಿಕಾರ. "ಯುಷ್ಮದಸ್ಮದೋಃ" ಅನುವೃತ್ತಿ. ಇಲ್ಲಿ ಏಕವಚನ ಶಬ್ದ ಯುಷ್ಮದ್‌ಅಸ್ಮದ್‌ಗಳಿಗೆ ವಿಶೇಷಣ. ಏಕವಚನ ಪರದಲ್ಲಿರುವಾಗ ಎಂದರ್ಥವಲ್ಲ. ಏಕತ್ವಸಂಖ್ಯಾ ವಿಶಿಷ್ಟಾರ್ಥಕವಾದ ಯುಷ್ಮದಸ್ಮದ್‌ಗಳು ಎಂದರ್ಥ. **ಸೂತ್ರಾರ್ಥ**. ವಿಭಕ್ತಿ ಪರದಲ್ಲಿರುವಾಗ ಏಕತ್ವಸಂಖ್ಯಾವಿಶಿಷ್ಟಾರ್ಥಕಗಳಾದ ಯುಷ್ಮದ್ ಅಸ್ಮದ್‌ಗಳ

ಮಪರ್ಯಂತಗಳಿಗೆ ಕ್ರಮವಾಗಿ ತ್ವ, ಮ ಆದೇಶಗಳು ಬರುತ್ತವೆ. ಪ್ರಕೃತ ಈ ಶಬ್ದಗಳು ಏಕತ್ವವನ್ನು ಹೇಳುತ್ತವೆ. ಮಪರ್ಯಂತಕ್ಕೆ ಆದೇಶ ಬಂದರೆ ತ್ವ+ಅದ್+ಅಮ್, ಮ+ಅದ್ ಅಮ್, ಎಂದಾಗುತ್ತದೆ. "ಅತೋಗುಣೇ" ಸೂತ್ರದಿಂದ ಪರರೂಪ. ತ್ವದ್+ಅಮ್, ಮದ್+ಅಮ್. ಈಗ ಆತ್ವ ಹೇಳುತ್ತಾನೆ.

(ದ್ವಿತೀಯಾವಿಭಕ್ತಿಯಲ್ಲಿ ಆತ್ವ ಹೇಳುವ ಸೂತ್ರ)

## ೩೨೦. ದ್ವಿತೀಯಾಯಾಂ ಚ ॥ ೭-೨-೮೭ ॥

**ಅನಯೋರಾತ್ ಸ್ಯಾತ್ ॥ ತ್ವಾಮ್, ಮಾಮ್ ॥**

ದ್ವಿಪದ ಸೂತ್ರ. "ಯುಷ್ಮದಸ್ಮದೋಃ" ಅನುವೃತ್ತಿ. "ಅಷ್ಟನ ಆವಿಭಕ್ತೌ" ಸೂತ್ರದಿಂದ "ಆ" ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ದ್ವಿತೀಯಾವಿಭಕ್ತಿ ಪರದಲ್ಲಿರುವಾಗ ಯುಷ್ಮದ್, ಅಸ್ಮದ್ ಶಬ್ದಗಳಿಗೆ ಆಕಾರ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ದಕಾರಕ್ಕೆ ಆಕಾರಾದೇಶ. ತ್ವ+ಆ+ಅಮ್. ಮ+ಆ+ಅಮ್ ಸವರ್ಣದೀರ್ಘ. ತ್ವಾಮ್. ಮಾಮ್ ॥ ದ್ವಿತೀಯಾ ದ್ವಿವಚನದಲ್ಲಿ ಪ್ರಥಮಾ ದ್ವಿವಚನದಂತೇ ರೂಪ. "ಙೇಪ್ರಥಮಯೋರಮ್" ಸೂತ್ರದಿಂದ ಔಗೆ ಅಮಾದೇಶ, ಮಪರ್ಯಂತಕ್ಕೆ ಯುವ, ಆವ ಆದೇಶ. ದಕಾರಕ್ಕೆ "ಪ್ರಥಮಾಯಾಶ್ಚ-" (ಸೂ. ೩೧೭) ಸೂತ್ರದಿಂದ ಆತ್ವ. ಯುವಾಂ, ಆವಾಮ್.

ಬಹುವಚನದಲ್ಲಿ ಯುಷ್ಮದ್+ಶಸ್, ಅಸ್ಮದ್+ಶಸ್ ಎಂದಿರುವಾಗ ಶಸಿಗೆ ಅಮಾದೇಶಪ್ರಾಪ್ತವಾದರೆ ಆದಕ್ಕೆ ಅಪವಾದವಾಗಿ ನಕಾರಹೇಳುತ್ತಾನೆ.

(ಶಸಿಗೆ ನಕಾರ ಹೇಳುವ ಸೂತ್ರ)

## ೩೨೧. ಶಸೋ ನ ॥ ೭-೧-೨೯ ॥

**ಆಭ್ಯಾಂ ಶಸಃ ನಃ ಸ್ಯಾತ್ । ಅಮೋಽಪವಾದಃ । ಆದೇಃ ಪರಸ್ಯ ॥ ಸಂಯೋಗಾಂತಲೋಪಃ । ಯುಷ್ಮಾನ್ ಅಸ್ಮಾನ್ ॥**

ಶಸಃ, ನ ॥ ದ್ವಿಪದ ಸೂತ್ರ, ನ ಎಂಬುದು ಅವಿಭಕ್ತಿಪದ. ಪ್ರಥಮಾ ವಿಭಕ್ತಿ ಹೇಳಬೇಕಿತ್ತು. "ಯುಷ್ಮದಸ್ಮದ್ಭ್ಯಾಂಙಸೋಽಶ್" ಸೂತ್ರದಿಂದ "ಯುಷ್ಮದಸ್ಮದ್ಭ್ಯಾಂ" ಎಂಬ ಪಂಚಮ್ಯಂತಪದಾನುವೃತ್ತಿ. **ಸೂತ್ರಾರ್ಥ.** ಯುಷ್ಮದ್ ಅಸ್ಮದ್ ಶಬ್ದಗಳ ಪರದಲ್ಲಿರುವ ಶಸಿಗೆ ನಕಾರ ಬರುತ್ತದೆ. ಪರಕ್ಕೆ ವಿಧಾನಮಾಡಿರುವುದರಿಂದ "ಆದೇಃ ಪರಸ್ಯ" ಸೂತ್ರದಿಂದ ಪರದ ಆದಿಗೆ ಆದೇಶ. ಯುಷ್ಮದ್+ಶಸ್, ಅಸ್ಮದ್+ಶಸ್ ಎಂಬಲ್ಲಿ ಶಕಾರ (ಲಶಕ್ವತದ್ಧಿತೇ) ಇತ್ತಾದರೆ ಅಸ್ ಉಳಿಯುತ್ತದೆ. ಅಸಿನ ಆದಿ ಅಕಾರಕ್ಕೆ ನಕಾರಾದೇಶ. ಆಗ ಯುಷ್ಮದ್+ನ್ ಸ್, ಅಸ್ಮದ್+ನ್ ಸ್ ಎಂದಾಗುತ್ತದೆ. "ದ್ವಿತೀಯಾಯಾಂ

ಚಿ" ಸೂತ್ರದಿಂದ (೩೨೦) ದಕಾರಕ್ಕೆ ಆಕಾರಾದೇಶ. ಯುಷ್ಮಾ+ನ್‌ಸ್, ಅಸ್ಮಾ+ನ್‌ಸ್. ಸಂಯೋಗಾಂತಪದವಾದುದರಿಂದ "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ಅಂತ್ಯದ ಸಕಾರಕ್ಕೆ ಲೋಪ. ಯುಷ್ಮಾನ್ ಅಸ್ಮಾನ್. ತೃತೀಯಾದಲ್ಲಿ ಯುಷ್ಮದ್+ಟಾ, ಅಸ್ಮದ್+ಟಾ ಎಂದಿರುವಾಗ "ಚುಟೂ" ಸೂತ್ರದಿಂದ ಟಕಾರಕ್ಕೆ ಇತ್ ಸಂಜ್ಞೆ ಬಂದು ಲೋಪ. ಆ ಉಳಿಯುತ್ತದೆ. "ತ್ವಮಾವೇಕವಚನೇ" ಸೂತ್ರದಿಂದ ಮಪರ್ಯಂತಕ್ಕೆ ತ್ವ, ಮಾ ಆದೇಶ. ತ್ವ+ಅದ್+ಆ. ಮಾ+ಅದ್+ಆ ಎಂದಿರುವಾಗ "ಅತೋ ಗುಣೇ" ಸೂತ್ರದಿಂದ ಪರರೂಪ. ತ್ವದ್+ಆ, ಮದ್+ಆ ಎಂದಿರುವಾಗ ದಕಾರಕ್ಕೆ ಯಕಾರ ಹೇಳುತ್ತಾನೆ.

(ಯುಷ್ಮದ್ ಅಸ್ಮದ್‌ಗಳಿಗೆ ಯಕಾರ ಹೇಳುವ ಸೂತ್ರ)

## ೩೨೨. ಯೋಽಚಿ ॥ ೭-೨-೮೯ ॥

**ಅನಯೋರ್ಯಕಾರಾದೇಶಃ ಸ್ಯಾದನಾದೇಶೇಽಜಾದೌ ಪರತಃ ॥ ತ್ವಯಾ । ಮಯಾ ॥**

ಯಃ, ಅಚಿ॥ ದ್ವಿಪದಸೂತ್ರ "ಯುಷ್ಮದಸ್ಮದೋರನಾದೇಶೇ" ಸೂತ್ರವೂ "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ವಿಭಕ್ತೌ" ಪದವೂ ಅನುವೃತ್ತವಾಗುತ್ತವೆ. ಅಚಿ ಸಪ್ತಮ್ಯಂತವು ವಿಭಕ್ತೌ ಸಪ್ತಮ್ಯಂತಕ್ಕೆ ವಿಶೇಷಣ. "ಯಸ್ಮಿನ್ ವಿಧಿಃ—" ಪರಿಭಾಷೆಯಿಂದ ತದಾದಿಲಾಭ. ಸೂತ್ರಾರ್ಥ. ಆದೇಶವಲ್ಲದ ಅಜಾದಿ ವಿಭಕ್ತಿ ಪರದಲ್ಲಿರುವಾಗ ಯುಷ್ಮದ್, ಅಸ್ಮದ್ ಶಬ್ದಗಳಿಗೆ ಯಕಾರಾದೇಶ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತಾದೇಶ. ತ್ವದ್+ಆ, ಮದ್+ಆ ಎಂದಿರುವಾಗ ವಿಭಕ್ತಿಗೆ ಯಾವ ಆದೇಶವೂ ಬಂದಿಲ್ಲ. ಅನಾದೇಶವಾದ ಅಜಾದಿ ವಿಭಕ್ತಿಯಾಗಿದೆ. ದಕಾರಕ್ಕೆ ಯಕಾರಾದೇಶ ಬಂದರೆ ತ್ವಯ್+ಆ+ತ್ವಯಾ. ಮಯ್+ಆ+ಮಯಾ ಎಂದಾಗುತ್ತದೆ. ಭ್ಯಾಮ್ ಪರವಾದಾಗ ಯುಷ್ಮದ್+ಭ್ಯಾಮ್, ಅಸ್ಮದ್+ಭ್ಯಾಮ್ ಎಂದಿರುವಾಗ ಮಪರ್ಯಂತಕ್ಕೆ "ಯುವಾವೌ ದ್ವಿವಚನೇ" ಸೂತ್ರದಿಂದ ಯುವ, ಆವಾದೇಶ. ಯುವ+ಅದ್+ಭ್ಯಾಮ್, ಆವ+ಅದ್+ಭ್ಯಾಮ್. "ಅತೋಗುಣೇ" ಪರರೂಪ. ಯುವದ್+ಭ್ಯಾಮ್. ಆವದ್+ಭ್ಯಾಮ್. ಈಗ ದಕಾರಕ್ಕೆ ಆಕಾರಾದೇಶ ಹೇಳುತ್ತಾನೆ, ಆದೇಶಕ್ಕೆ ನಿಮಿತ್ತವಾದ ವಿಭಕ್ತಿ ಪರದಲ್ಲಿರುವುದರಿಂದ "ಶೇಷೇಲೋಪಃ" ಸೂತ್ರದಿಂದ ಲೋಪವಿಲ್ಲ.

(ಹಲಾದಿವಿಭಕ್ತಿಯಲ್ಲಿ ಆತ್ವ ಹೇಳುವ ಸೂತ್ರ)

## ೩೨೩. ಯುಷ್ಮದಸ್ಮದೋರನಾದೇಶೇ ॥ ೭-೨-೮೬ ॥

**ಅನಯೋರಾತ್ ಸ್ಯಾದನಾದೇಶೇ ಹಲಾದೌ ವಿಭಕ್ತೌ ॥ ಯುವಾಭ್ಯಾಮ್ ॥ ಆವಾಭ್ಯಾಮ್ ॥ ಯುಷ್ಮಾಭಿಃ । ಅಸ್ಮಾಭಿಃ ॥**

ಯುಷ್ಮದಸ್ಮದೋಃ ಅನಾದೇಶೇ || ದ್ವಿಪದ ಸೂತ್ರ. "ಅಷ್ಟನ ಆ ವಿಭಕ್ತೌ" ಸೂತ್ರದಿಂದ "ಆ", "ವಿಭಕ್ತೌ" ಪದಗಳೂ "ರಾಯೋ ಹಲಿ" ಸೂತ್ರದಿಂದ "ಹಲಿ" ಎಂಬುದೂ ಅನುವೃತ್ತವಾಗುತ್ತವೆ. ಹಲಿಯೆಂಬ ಸಪ್ತಮ್ಯಂತವು ವಿಭಕ್ತೌ ಎಂಬುದಕ್ಕೆ ವಿಶೇಷಣವಾದುದರಿಂದ "ಯಸ್ಮಿನ್ವಿಧಿಸ್ತದಾದಾವಲ್ಗ್ರಹಣೇ" ಪರಿಭಾಷೆಯಿಂದ ತದಾದಿಲಾಭ. ಹಲಾದಿ ವಿಭಕ್ತಿ ಪರದಲ್ಲಿರುವಾಗ ಎಂದರ್ಥ. ಸೂತ್ರಾರ್ಥ. ಆದೇಶವಲ್ಲದ ಹಲಾದಿಯಾದ ವಿಭಕ್ತಿ ಪರದಲ್ಲಿರುವಾಗ ಯುಷ್ಮದ್ ಅಸ್ಮದ್‌ಗಳಿಗೆ ಆಕಾರ ಬರುತ್ತದೆ. "ಅಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯಕ್ಕೆ ಆದೇಶ. ಯುವ+ಆ+ಭ್ಯಾಮ್. ಆವ+ಆ+ಭ್ಯಾಮ್. ಸವರ್ಣದೀರ್ಘ. ಯುವಾಭ್ಯಾಮ್, ಆವಾಭ್ಯಾಮ್. ಯುಷ್ಮದ್+ಭಿಸ್ ಅಸ್ಮದ್+ಭಿಸ್ ಎಂದಿರುವಾಗ ಪ್ರಕೃತಿ ಪ್ರತ್ಯಯಗಳಿಗೆ ಯಾವ ಆದೇಶವೂ ಇಲ್ಲ. ಅನಾದೇಶ ಹಲಾದಿ ವಿಭಕ್ತಿ ಪರವಾದುದರಿಂದ ಹಿಂದೆ ಹೇಳಿದ ಸೂತ್ರದಿಂದ ಆಕಾರ ಅಂತಾದೇಶ. ಯುಷ್ಮ+ಆ+ಭಿಸ್. ಅಸ್ಮ+ಆ+ಭಿಸ್. ಸವರ್ಣದೀರ್ಘ. ಯುಷ್ಮಾಭಿಃ, ಅಸ್ಮಾಭಿಃ, (ಸಕಾರಕ್ಕೆ ರುತ್ವ ವಿಸರ್ಗ.)

ಚತುರ್ಥಿಯಲ್ಲಿ ಯುಷ್ಮದ್+ಙೇ, ಅಸ್ಮದ್+ಙೇ ಎಂದಿರುವಾಗ "ಙೇ ಪ್ರಥಮಯೋರಮ್" ಸೂತ್ರದಿಂದ ಙೇ ವಿಭಕ್ತಿಗೆ ಅಮಾದೇಶ. ಯುಷ್ಮದ್+ಅಮ್, ಅಸ್ಮದ್+ಅಮ್ ಎಂದಿರುವಾಗ ಮಪರ್ಯಂತಕ್ಕೆ ಆದೇಶ ಹೇಳುತ್ತಾನೆ.

(ಙೇಪರವಾದಾಗ ಮಪರ್ಯಂತಕ್ಕೆ ಆದೇಶ ಹೇಳುವ ಸೂತ್ರ)

## ೩೨೪. ತುಭ್ಯಮಹ್ಯೌ ಙಯಿ || ೭-೨-೯೫ ||

**ಅನಯೋರ್ಮಪರ್ಯಂತಸ್ಯ || ಟೆ ಲೋಪಃ | ತುಭ್ಯಮ್ ಮಹ್ಯಮ್ ||**

ದ್ವಿಪದ ಸೂತ್ರ. ತುಭ್ಯಶ್ಚ ಮಹ್ಯಶ್ಚ ತುಭ್ಯಮಹ್ಯೌ, ಙೇ ವಿಭಕ್ತಿಯ ಸಪ್ತಮ್ಯಂತರೂಪ "ಙಯಿ" "ಯುಷ್ಮದಸ್ಮದೋಃ" ಅನುವೃತ್ತಿ. "ಮಪರ್ಯಂತಸ್ಯ" ಅಧಿಕಾರ. ಸೂತ್ರಾರ್ಥ. ಚತುರ್ಥೀ ಏಕವಚನ ಪರವಾದಾಗ ಯುಷ್ಮದ್ ಅಸ್ಮದ್‌ಗಳ ಮಪರ್ಯಂತಕ್ಕೆ ಕ್ರಮವಾಗಿ ತುಭ್ಯ, ಮಹ್ಯ ಆದೇಶಗಳು ಬರುತ್ತವೆ. ಆಗ ತುಭ್ಯ+ಅದ್+ಅಮ್. ಮಹ್ಯ+ಅದ್+ಅಮ್. ಎಂದಾಗುತ್ತದೆ. ಇಲ್ಲಿ ಆತ್ವ, ಯತ್ವಗಳಿಗೆ ನಿಮಿತ್ತವಾಗದ ವಿಭಕ್ತಿ ಪರದಲ್ಲಿರುವುದರಿಂದ "ಶೇಷೇ ಲೋಪಃ" ಸೂತ್ರದಿಂದ ಟಿಗೆ (ಅದ್) ಲೋಪ. ತುಭ್ಯ+ಅಮ್ ಮಹ್ಯ+ಅಮ್. "ಅಮಿ ಪೂರ್ವಃ" ಸೂತ್ರದಿಂದ ಪೂರ್ವರೂಪ. ತುಭ್ಯಮ್, ಮಹ್ಯಮ್, ಭ್ಯಾಮ್ ಪರವಾದಾಗ ತೃತೀಯಾದ್ವಿವಚನದಂತೇ ರೂಪ. ಮಪರ್ಯಂತಕ್ಕೆ ಯುವ, ಆವ ಆದೇಶ. ದಕಾರಕ್ಕೆ ಆತ್ವ. ಯುವಾಭ್ಯಾಮ್-ಆವಾಭ್ಯಾಮ್. ಚತುರ್ಥೀ

ಬಹುವಚನದಲ್ಲಿ ಯುಷ್ಮದ್+ಭ್ಯಸ್, ಅಸ್ಮದ್+ಭ್ಯಸ್ ಎಂದಿರುವಾಗ ವಿಭಕ್ತಿಗೆ ಆದೇಶ ಹೇಳುತ್ತಾನೆ.

(ಭ್ಯಸಿಗೆ ಭ್ಯಮಾದೇಶ ಹೇಳುವ ಸೂತ್ರ)

### ೩೨೫. ಭ್ಯಸೋಽಭ್ಯಮ್ ॥ ೭-೧-೩೦ ॥

**ಆಭ್ಯಾಂ ಪರಸ್ಯ ಭ್ಯಸಃ ಅಭ್ಯಮ್ ಸ್ಯಾತ್ ॥ ಯುಷ್ಮಭ್ಯಮ್, ಅಸ್ಮಭ್ಯಮ್ ॥**

ಭ್ಯಸಃ, ಅಭ್ಯಮ್ ॥ ದ್ವಿಪದ ಸೂತ್ರ. "ಯುಷ್ಮದಸ್ಮಭ್ಯಾಂ ಙಸೋಽಶ್" ಸೂತ್ರದಿಂದ "ಯುಷ್ಮದಸ್ಮಭ್ಯಾಮ್" ಅನುವೃತ್ತಿ. ಪಂಚಮಿಯಾದುದರಿಂದ ಪರಕ್ಕೆ ಎಂದು ತಿಳಿಯುತ್ತದೆ. **ಸೂತ್ರಾರ್ಥ.** ಯುಷ್ಮದ್, ಅಸ್ಮದ್‌ಗಳ ಪರದಲ್ಲಿರುವ ಭ್ಯಸಿಗೆ ಅಭ್ಯಮ್ ಆದೇಶಬರುತ್ತದೆ. ಭ್ಯಸಿಗೆ ಅಭ್ಯಮ್ ಆದೇಶ ಬಂದರೆ ಯುಷ್ಮದ್+ಅಭ್ಯಮ್. ಅಸ್ಮದ್+ಅಭ್ಯಮ್ ಎಂದಾಗುತ್ತದೆ. ಇಲ್ಲಿ ಆದೇಶವಾಗಿ ಬಂದ ವಿಭಕ್ತಿಪರದಲ್ಲಿರುವುದರಿಂದ "ಯುಷ್ಮದ್"-(ಸೂ ೩೨೩) ಸೂತ್ರದಿಂದ ಆತ್ವ ಬರುವುದಿಲ್ಲ. "ಶೇಷೇ ಲೋಪಃ" ಸೂತ್ರದಿಂದ ಟಿಗೆ (ಅದ್) ಲೋಪ ಬಂದರೆ ಯುಷ್ಮಭ್ಯಮ್, ಅಸ್ಮಭ್ಯಮ್ ಎಂದಾಗುತ್ತದೆ. ಪಂಚಮಿಯಲ್ಲಿ ಯುಷ್ಮದ್+ಙಸಿ, ಅಸ್ಮದ್+ಙಸಿ ಎಂದಿರುವಾಗ ವಿಭಕ್ತಿಗೆ ಆದೇಶ ಹೇಳುತ್ತಾನೆ.

(ಪಂಚಮೀ ಏಕವಚನಕ್ಕೆ ಆದೇಶ ಹೇಳುವ ಸೂತ್ರ)

### ೩೨೬. ಏಕವಚನಸ್ಯ ಚ ॥ ೭-೧-೩೨ ॥

**ಆಭ್ಯಾಂ ಙಸೇರತ್ ತ್ವತ್, ಮತ್ ॥**

ದ್ವಿಪದಸೂತ್ರ. "ಪಂಚಮ್ಯಾ ಅತ್" ಸೂತ್ರದಿಂದ "ಪಂಚಮ್ಯಾಃ" "ಯುಷ್ಮದಸ್ಮಭ್ಯಾಂ" ಸೂತ್ರದಿಂದ "ಯುಷ್ಮದಸ್ಮಭ್ಯಾಂ" ಅನುವೃತ್ತಿ. **ಸೂತ್ರಾರ್ಥ.** ಯುಷ್ಮದ್ ಅಸ್ಮದ್‌ಗಳ ಪರದಲ್ಲಿರುವ ಪಂಚಮೀ ಏಕವಚನವಾದ ಙಸಿಗೆ ಅತ್ ಆದೇಶ ಬರುತ್ತದೆ. ಆಗ ಯುಷ್ಮದ್+ಅತ್, ಅಸ್ಮದ್+ಅತ್ ಎಂದಾಗುತ್ತದೆ. "ತ್ವಮಾವೇಕವಚನೇ" ಸೂತ್ರದಿಂದ ಮಪರ್ಯಂತಕ್ಕೆ ತ್ವ, ಮ ಆದೇಶ. ತ್ವ+ಅದ್+ಅತ್. ಮ+ಅದ್+ಅತ್. ಅತ್ವಾದಿಗಳಿಗೆ ನಿಮಿತ್ತವಿಲ್ಲ ಆದೇಶವಾದ ಅಜಾದಿ ಪ್ರತ್ಯಯವಾದುದರಿಂದ ಯತ್ವವಿಲ್ಲ. "ಶೇಷೇಲೋಪಃ" ಸೂತ್ರದಿಂದ ಅದಿಗೆ ಲೋಪ. ತ್ವ+ಅತ್. ಮ+ಅತ್. "ಅತೋಗುಣೇ" ಸೂತ್ರದಿಂದ ಪರರೂಪ. ತ್ವತ್. ಮತ್. ದ್ವಿವಚನದಲ್ಲಿ ಭ್ಯಾಮ್ ಪರವಾದಾಗ ತೃತೀಯಾ, ಚತುರ್ಥೀ ದ್ವಿವಚನದಂತೇ ರೂಪ. ಯುವಾಭ್ಯಾಮ್. ಆವಾಭ್ಯಾಮ್, ಬಹುವಚನದಲ್ಲಿ ಭ್ಯಸ್‌ಪರವಾದಾಗ ಅದಕ್ಕೆ ಆದೇಶಹೇಳುತ್ತಾನೆ.

(ಪಂಚಮಿಯ ಭ್ಯಸಿಗೆ ಆದೇಶ ಹೇಳುವ ಸೂತ್ರ)

## ೩೨೭. ಪಂಚಮ್ಯಾ ಅತ್ ॥ ೭-೧-೩೧ ॥

**ಆಭ್ಯಾಂ ಪಂಚಮ್ಯಾ ಭ್ಯಸೋಽತ್ಸ್ಯಾತ್ ॥ ಯುಷ್ಮತ್ । ಅಸ್ಮತ್ ॥**

ಪಂಚಮ್ಯಾಃ, ಅತ್ ॥ ದ್ವಿಪದ ಸೂತ್ರ. "ಯುಷ್ಮದಸ್ಮಭ್ಯಾಂ" ಅನುವೃತ್ತಿ. "ಭ್ಯಸೋಽಭ್ಯಮ್" ಸೂತ್ರದಿಂದ "ಭ್ಯಸಃ" ಅನುವೃತ್ತಿ. **ಸೂತ್ರಾರ್ಥ.** ಯುಷ್ಮದಸ್ಮದಿನ ಪರದಲ್ಲಿರುವ ಪಂಚಮೀ ಬಹುವಚನವಾದ ಭ್ಯಸಿಗೆ ಅತ್ ಆದೇಶ ಬರುತ್ತದೆ. "ನವಿಭಕ್ತೌ ತುಸ್ಮಾಃ" ಸೂತ್ರದಿಂದ ಅತಿನಲ್ಲಿರುವ ತಕಾರಕ್ಕೆ ಲೋಪಬರುವುದಿಲ್ಲ. ಯುಷ್ಮದ್+ಅತ್. ಅಸ್ಮದ್+ಅತ್. ಆದೇಶವಾದ ವಿಭಕ್ತಿ ಪರದಲ್ಲಿರುವುದರಿಂದ ಆತ್ವ ಬರುವುದಿಲ್ಲ. ಶೇಷೇಲೋಪಃ ಸೂತ್ರದಿಂದ ಅದಿಗೆ ಲೋಪ ಯುಷ್ಮ+ಅತ್. ಅಸ್ಮ+ಅತ್. "ಅತೋಗುಣೇ" ಸೂತ್ರದಿಂದ ಪರರೂಪ. ಯುಷ್ಮತ್. ಅಸ್ಮತ್. ಷಷ್ಠಿಯಲ್ಲಿ ಯುಷ್ಮದ್+ಙಸ್. ಅಸ್ಮದ್+ಙಸ್ ಎಂದಿರುವಾಗ ಪ್ರಕೃತಿಗೆ ಆದೇಶ ಹೇಳುತ್ತಾನೆ,

(ತವ, ಮಮ, ಆದೇಶ ಹೇಳುವ ಸೂತ್ರ)

## ೩೨೮. ತವಮಮೌ ಙಸಿ ॥ ೭-೨-೯೬ ॥

**ಅನಯೋರ್ಮಪರ್ಯಂತಸ್ಯ ತವ ಮಮೌ ಸ್ತಃ ಙಸಿ ॥**

ದ್ವಿಪದ ಸೂತ್ರ. "ಮಪರ್ಯಂತಸ್ಯ" ಅಧಿಕಾರ. "ಯುಷ್ಮದಸ್ಮದೋಃ" ಅನುವೃತ್ತಿ. ಙಸಿ ಷಷ್ಠೀ ಏಕವಚನದ ಸಪ್ತಮೀರೂಪ. "ತಸ್ಮಿನ್ನಿತಿನಿರ್ದಿಷ್ಟೇ" ಪರಿಭಾಷೆಯಿಂದ ಪೂರ್ವಕ್ಕೆ ಕಾರ್ಯವೆಂದು ತಿಳಿಯಬೇಕು. **ಸೂತ್ರಾರ್ಥ.** ಷಷ್ಠೀ ಏಕವಚನ ಙಸ್ ಪರವಾದಾಗ ಯುಷ್ಮದಸ್ಮದ್‌ಗಳ ಮಪರ್ಯಂತಕ್ಕೆ ಕ್ರಮವಾಗಿ ತವ, ಮಮ ಆದೇಶಗಳು ಬರುತ್ತವೆ. ಆಗ ತವ+ಅದ್+ಅಸ್. ಮಮ+ಅದ್+ಅಸ್ ಎಂದಾಗುತ್ತದೆ. ಆಗ ಪ್ರತ್ಯಯಕ್ಕೆ ಆದೇಶ ಹೇಳುತ್ತಾನೆ.

(ಙಸಿಗೆ ಅಶಾದೇಶ ಹೇಳುವ ಸೂತ್ರ)

## ೩೨೯. ಯುಷ್ಮದಸ್ಮಭ್ಯಾಂ ಙಸೋಽಶ್ ॥ ೭-೧-೨೭ ॥

**ಸ್ಪಷ್ಟಮ್ ॥ ತವ, ಮಮ । ಯುವಯೋಃ, ಆವಯೋಃ ॥**

ಯುಷ್ಮದಸ್ಮಭ್ಯಾಂ, ಙಸಃ, ಅಶ್ ॥ ತ್ರಿಪದಸೂತ್ರ. ಅನುವೃತ್ತ್ಯಾದಿಗಳು ಇಲ್ಲದಿರುವುದರಿಂದ ಸ್ಪಷ್ಟವಾಗಿದೆ. **ಸೂತ್ರಾರ್ಥ.** ಯುಷ್ಮದಸ್ಮದ್‌ಗಳ ಪರದಲ್ಲಿರುವ ಷಷ್ಠೀ ಏಕವಚನವಾದ ಙಸಿಗೆ ಅಶಾದೇಶ ಬರುತ್ತದೆ. ಅಶಿನಲ್ಲಿ ಶಕಾರ "ಹಲಂ

ತ್ಯಮ್" ಸೂತ್ರದಿಂದ ಇತ್ವಾಗುತ್ತದೆ. ಶಿತ್ತಾದುದರಿಂದ ಸರ್ವಾದೇಶ. ತವ+ಅದ್+ಅ. ಮಮ+ಅದ್+ಅ. ಎಂದಾಗುತ್ತದೆ. ಆದೇಶವಾದ ವಿಭಕ್ತಿಪರದಲ್ಲಿರುವುದರಿಂದ ಯಾದೇಶ ಬರುವುದಿಲ್ಲ. "ಶೇಷೇಲೋಪ." ಸೂತ್ರದಿಂದ ಅದಿಗೆ ಲೋಪ. ತವ+ಅ. ಮಮ+ಅ. "ಅತೋಗುಣೇ" ಸೂತ್ರದಿಂದ ಪರರೂಪ. ತವ. ಮಮ. ॥ ದ್ವಿವಚನದಲ್ಲಿ ಯುಷ್ಮದ್+ಓಸ್, ಅಸ್ಮದ್+ಓಸ್ ಎಂದಿರುವಾಗ ಮಪರ್ಯಂತಕ್ಕೆ "ಯುವಾವೌ ದ್ವಿವಚನೇ" ಸೂತ್ರದಿಂದ ಯುವ, ಆವ ಆದೇಶ. ಯುವ+ಅದ್+ಓಸ್. ಆವ+ಅದ್+ಓಸ್. "ಅತೋಗುಣೇ" ಸೂತ್ರದಿಂದ ಪರರೂಪ. ಯುವದ್+ಓಸ್. ಆವದ್+ಓಸ್. ಇಲ್ಲಿ ಅನಾದೇಶವಾದ ಅಜಾದಿ ವಿಭಕ್ತಿಪರವಾದುದರಿಂದ "ಯೋಽಚಿ" ಸೂತ್ರದಿಂದ ಯಕಾರ ಅಂತಾದೇಶ. ದಕಾರಕ್ಕೆ ಯಕಾರ ಬಂದರೆ ಯುವಯ್+ಓಸ್+ಯುವಯೋಃ. ಆವಯ್+ಓಸ್+ಆವಯೋಃ ಎಂದಾಗುತ್ತದೆ. ಬಹುವಚನದಲ್ಲಿ ಯುಷ್ಮದ್+ಅಮ್, ಅಸ್ಮದ್+ಅಮ್ ಎಂದಿರುವಾಗ ಪ್ರತ್ಯಯಕ್ಕೆ ಆದೇಶ ಹೇಳುತ್ತಾನೆ.

(ಆಕಮ್ ಆದೇಶ ಹೇಳುವ ಸೂತ್ರ)

### ೩೩೦. ಸಾಮ ಆಕಮ್ ॥ ೭-೧-೩೩ ॥

ಆಭ್ಯಾಂ ಪರಸ್ಯ ಸಾಮ ಆಕಂ ಸ್ಯಾತ್ । ಯುಷ್ಮಾಕಂ । ಅಸ್ಮಾಕಮ್ ॥ ತ್ವಯಿ । ಮಯಿ । ಯುವಯೋಃ । ಆವಯೋಃ । ಯುಷ್ಮಾಸು । ಅಸ್ಮಾಸು ॥

ಸಾಮಃ, ಆಕಮ್. ದ್ವಿಪದಸೂತ್ರ. "ಯುಷ್ಮದಸ್ಮದ್ಭ್ಯಾಮ್" ಅನುವೃತ್ತಿ. ಸೂತ್ರಾರ್ಥ. ಯುಷ್ಮದಸ್ಮದ್ ಶಬ್ದಗಳ ಪರದಲ್ಲಿರುವ ಸುಟ್ ಸಹಿತವಾದ ಆಮ್ ಪ್ರತ್ಯಯಕ್ಕೆ ಆಕಮ್ ಆದೇಶ ಬರುತ್ತದೆ. ಪ್ರಕೃತ ಕೇವಲ ಆಮ್ ಇದೆ. ಮುಂದೆ ಬರಬಹುದಾದ ಸುಟನ್ನು ಸೇರಿಸಿ ಈಗಲೇ ಆಕಮ್ ಆದೇಶ ಹೇಳಿರುತ್ತಾನೆ. ಆಕಮ್ ಆದೇಶ ಹೇಳಿದ್ದ ಮೇಲೆ ದಕಾರಕ್ಕೆ ಲೋಪವಾಗಿ ಅದಂತವಾಗುವುದರಿಂದ "ಆಮಿಸರ್ವನಾಮ್ನಃ ಸುಟ್" ಸೂತ್ರದಿಂದ ಸುಟಾಗಮ ಬರುತ್ತಿತ್ತು. ಅದನ್ನು ಹೋಗಲಾಡಿಸಲು ಹೀಗೆ ಹೇಳಿರುತ್ತಾನೆ. ಇದರಿಂದ ಮುಂದೆ ಅದಂತವಾದರೂ ಸುಟ್ ಬರುವುದಿಲ್ಲವೆಂದು ತಿಳಿಸಿದಂತಾಗುತ್ತದೆ. ಹೀಗೆ ಆಕಮ್ ಆದೇಶ ಬಂದರೆ ಯುಷ್ಮದ್+ಆಕಮ್. ಅಸ್ಮದ್+ಆಕಮ್. ಆದೇಶವಾದ ಅಜಾದಿ ಪ್ರತ್ಯಯವಾದುದರಿಂದ ಯಾದೇಶವಿಲ್ಲ. "ಶೇಷೇ ಲೋಪಃ" ಸೂತ್ರದಿಂದ ಅದಿಗೆ ಲೋಪ. ಯುಷ್ಮ+ಆಕಮ್=ಯುಷ್ಮಾಕಮ್. ಅಸ್ಮ+ಆಕಮ್=ಅಸ್ಮಾಕಮ್.

ಸಪ್ತಮಿ ಏಕವಚನದಲ್ಲಿ ಙಿಪರವಾದಾಗ "ತ್ವಮಾವೇಕವಚನೇ" ಸೂತ್ರದಿಂದ ಮಪರ್ಯಂತಕ್ಕೆ ತ್ವ. ಮ ಆದೇಶ. ತ್ವ+ಅದ್+ಇ. ಮ+ಅದ್+ಇ.

"ಅತೋಗುಣೇ" ಪರರೂಪ. ತ್ವದ್+ಇ. ಮದ್+ಇ. ಅನಾದೇಶವಾದ ಅಜಾದಿ ಪ್ರತ್ಯಯ ಇರುವುದರಿಂದ "ಯೋಽಚಿ" ಸೂತ್ರದಿಂದ ದಕಾರಕ್ಕೆ ಯಕಾರಾದೇಶ ತ್ವಯಿ. ಮಯಿ. ದ್ವಿವಚನದಲ್ಲಿ ಷಷ್ಠೀದ್ವಿವಚನದಂತೇ ರೂಪ. ಯುವಯೋಃ, ಆವಯೋಃ. ಬಹುವಚನದಲ್ಲಿ ಸುಪ್ ಪರವಾದಾಗ ಪ್ರತ್ಯಯ ಪ್ರಕೃತಿಗಳಿಗೆ ಯಾವ ಆದೇಶವೂ ಇಲ್ಲ. "ಯುಷ್ಮದಸ್ಮದೋರನಾದೇಶೇ" ಸೂತ್ರದಿಂದ ಅಂತ್ಯಕ್ಕೆ ಆಕಾರಾದೇಶ. ದಕಾರಕ್ಕೆ ಆಕಾರ ಬಂದರೆ ಯುಷ್ಮ+ಆ+ಸು. ಅಸ್ಮ+ಆ+ಸು. ಸವರ್ಣದೀರ್ಘ. ಯುಷ್ಮಾಸು. ಅಸ್ಮಾಸು ||

ಈಗ ಈ ಎರಡು ಶಬ್ದಗಳಿಗೆ ಕೆಲವು ವಿಭಕ್ತಿಗಳಲ್ಲಿ (ವಿಭಕ್ತ್ಯಂತಗಳಿಗೆ) ಆದೇಶಗಳನ್ನು ಹೇಳುತ್ತಾನೆ.

(ವಾಂ, ನೌ ಆದೇಶ ಹೇಳುವ ಸೂತ್ರ)

## ೩೩೧. ಯುಷ್ಮದಸ್ಮದೋಃ ಷಷ್ಠೀ ಚತುರ್ಥೀ ದ್ವಿತೀಯಾಸ್ಥಯೋರ್ವಾಂನಾವೌ || ೮-೧-೨೦ ||

**ಪದಾತ್ಪರಯೋರಪಾದಾದೌ ಸ್ಥಿತಯೋಃ ಷಷ್ಠ್ಯಾದಿವಿಶಿಷ್ಟಯೋಃ ವಾಂ ನೌ ಇತ್ಯಾದೇಶೌ ಸ್ತಃ ||**

ಯುಷ್ಮದಸ್ಮದೋಃ, ಷಷ್ಠೀಚತುರ್ಥೀದ್ವಿತೀಯಾಸ್ಥಯೋಃ, ವಾಂನಾವೌ || ತ್ರಿಪದ ಸೂತ್ರ. "ಪದಾತ್" "ಅನುದಾತ್ತಂ ಸರ್ವಮಪಾದಾದೌ" ಎರಡು ಅಧಿಕಾರ ಸೂತ್ರಗಳು. ಇವುಗಳ ಮುಂದೆ ಹೇಳುವ ಕಾರ್ಯಗಳು ಪದದ ಪರದಲ್ಲಿರುವಾಗ, ಪಾದದ ಆದಿಯಲ್ಲಿ ಇಲ್ಲದಿರುವಾಗ ಎಂದು ಇವುಗಳು ತಿಳಿಸುತ್ತವೆ. "ಷಷ್ಠೀಚತುರ್ಥೀದ್ವಿತೀಯಾಭಿಃ ಸಹ ತಿಷ್ಠತಃ" ಇತಿ ಷಷ್ಠೀಚತುರ್ಥೀದ್ವಿತೀಯಾಸ್ಥತಯೋಃ. ಷಷ್ಠೀ ಚತುರ್ಥೀ, ದ್ವಿತಿಯಾ ವಿಭಕ್ತಿಗಳಿಂದ ಕೂಡಿದ ಯುಷ್ಮದ್ ಅಸ್ಮದ್‌ಗಳಿಗೆ ಎಂದರ್ಥ. "ವಾಂ, ಚ, ನೌ ಚ ವಾಂನಾವೌ." **ಸೂತ್ರಾರ್ಥ.** ಪದದ ಪರದಲ್ಲಿರುವ, ಪಾದದ ಆದಿಯಲ್ಲಿ ಇಲ್ಲದಿರುವ ಷಷ್ಠೀ, ಚತುರ್ಥೀ, ದ್ವಿತೀಯಾವಿಭಕ್ತಿವಿಶಿಷ್ಟವಾದ ಯುಷ್ಮದಸ್ಮದ್ ಶಬ್ದಗಳಿಗೆ ವಾಂ, ನೌ ಆದೇಶಗಳು ಕ್ರಮವಾಗಿ ಬರುತ್ತವೆ. ಯಾವುದಾದರೊಂದು ಪದದ ಪರದಲ್ಲಿ ಈ ಶಬ್ದಗಳು ಬಂದಿರಬೇಕು. ಶ್ಲೋಕದ ಪಾದದ ಆದಿಯಲ್ಲಿ ಬಂದಿರಬಾರದು. ಹೀಗಿದ್ದರೆ ಆದೇಶಗಳು ಬರುತ್ತವೆ. ಇವುಗಳಿಗೆ ಉದಾಹರಣೆ ಮುಂದೆ ಹೇಳುವವುಗಳನ್ನೂ ಸೇರಿಸಿ ಒಟ್ಟಿಗೆ ಶ್ಲೋಕದಲ್ಲಿ ತೋರಿಸುತ್ತಾನೆ.

(ಬಹುವಚನಕ್ಕೆ ವಸ್ ನಸ್ ಆದೇಶ ಹೇಳುವ ಸೂತ್ರ)

## ೩೩೨. ಬಹುವಚನಸ್ಯ ವಸ್ನಸೌ || ೮-೧-೨೧ ||

**ಉಕ್ತವಿಧಯೋರಸಯೋಃ ಷಷ್ಠ್ಯಾದಿಬಹುವಚನಾಂತಯೋರ್ವ-ಸ್ನಸೌ ಸ್ತಃ ॥**

ದ್ವಿಪದಸೂತ್ರ. ಹಿಂದೆ ಹೇಳಿದ ಅಧಿಕಾರದಲ್ಲಿ ವಿಹಿತವಾಗಿದೆ. ಹಿಂದೆ ಸಾಮಾನ್ಯ ಮೂರು ವಿಭಕ್ತ್ಯಂತಗಳಿಗೆ ಆದೇಶಹೇಳಿದರೆ ಇದರಿಂದ ಬಹುವಚನದಲ್ಲಿ ಅಪವಾದರೂಪವಾಗಿ ಬೇರೆ ಆದೇಶ ಹೇಳುತ್ತಾನೆ. **ಸೂತ್ರಾರ್ಥ.** ಪದದಪರದಲ್ಲಿರುವ ಪಾದದ ಆದಿಯಲ್ಲಿರದ ಷಷ್ಠೀಚತುರ್ಥೀ, ದ್ವಿತೀಯಾ ವಿಭಕ್ತಿಗಳ ಬಹುವಚನಾಂತವಾದ ಯುಷ್ಮದಸ್ಮದ್‌ಗಳಿಗೆ ಕ್ರಮವಾಗಿ ವಸ್‌ನಸ್ ಆದೇಶಗಳು ಬರುತ್ತವೆ. ಆಗ ವಾಂ, ನೌ ಆದೇಶ ಷಷ್ಠೀ ಚತುರ್ಥೀ ದ್ವಿತೀಯಾಗಳ ದ್ವಿವಚನ, ಏಕವಚನಗಳಲ್ಲಿ ಮಾತ್ರವೆಂದು ತಿಳಿಯುತ್ತದೆ.

(ಏಕವಚನಕ್ಕೆ ತೇ, ಮೇ ಆದೇಶ ಹೇಳುವ ಸೂತ್ರ)

## ೩೩೩. ತೇ ಮಯಾವೇಕವಚನಸ್ಯ ॥ ೮-೧-೨೨ ॥

**ಉಕ್ತವಿಧಯೋರನಯೋಃ ಷಷ್ಠೀ ಚತುರ್ಥ್ಯೇಕವಚನಾಂತ-ಯೋಸ್ತೇ ಮೇ ಏತೌ ಸ್ತಃ ॥**

ತೇಮಯೌ, ಏಕವಚನಸ್ಯ ॥ ದ್ವಿಪದಸೂತ್ರ. ಈ ಸೂತ್ರವೂ ಹಿಂದಿನ ಸೂತ್ರವೂ ವಾಂನೌ ಆದೇಶಗಳಿಗೆ ಅಪವಾದವಾಗಿ ಬೇರೆ ಆದೇಶ ಹೇಳುತ್ತವೆ. ಏಕವಚನ, ದ್ವಿವಚನಗಳಲ್ಲಿ ವಾಂನೌ ಪ್ರಾಪ್ತವಾದರೆ ಈ ಸೂತ್ರ ಏಕವಚನದಲ್ಲಿ ಇತರ ಆದೇಶಹೇಳುತ್ತದೆ. **ಸೂತ್ರಾರ್ಥ.** ಪದದ ಪರದಲ್ಲಿರುವ, ಪಾದದ ಆದಿಯಲ್ಲಿ ಇಲ್ಲದ ಷಷ್ಠೀ, ಚತುರ್ಥೀ, ದ್ವಿತೀಯಾ ಏಕವಚನಾಂತಗಳಾದ ಯುಷ್ಮದಸ್ಮದ್‌ಗಳಿಗೆ ತೇ, ಮೇ ಆದೇಶಗಳು ಬರುತ್ತವೆ. ಈ ಆದೇಶ ಹೇಳಿದಮೇಲೆ ವಾಂ, ನೌ ಆದೇಶಗಳು ಕೇವಲ ಆ ಮೂರು ವಿಭಕ್ತಿಗಳ ದ್ವಿವಚನದಲ್ಲಿ ಮಾತ್ರವೆಂದು ತಿಳಿಯಬೇಕು.

(ದ್ವಿತೀಯಾದಲ್ಲಿ ತ್ವಾ, ಮಾ ಆದೇಶ ಹೇಳುವ ಸೂತ್ರ)

## ೩೩೪. ತ್ವಾಮೌ ದ್ವಿತೀಯಾಯಾಃ ॥ ೮-೧-೨೩ ॥

**ದ್ವಿತೀಯೈಕವಚನಾಂತಯೋಸ್ತ್ವಾಮಾ ಇತ್ಯಾದೇಶೌ ಸ್ತಃ ॥**

ದ್ವಿಪದಸೂತ್ರ. ಇದು ಹಿಂದಿನ ಸೂತ್ರಕ್ಕೆ ಅಪವಾದ. **ಸೂತ್ರಾರ್ಥ-** ಪದದ ಪರದಲ್ಲಿರುವ ಪಾದದ ಆದಿಯಲ್ಲಿ ಇಲ್ಲದ ದ್ವಿತೀಯಾ ಏಕವಚನಾಂತವಾದ ಯುಷ್ಮದ್ ಅಸ್ಮದ್‌ಗಳಿಗೆ ತ್ವಾ, ಮಾ ಆದೇಶಗಳು ಬರುತ್ತವೆ. ಏಕವಚನ ಸಾಮಾನ್ಯದಲ್ಲಿ ತೇ ಮೇ ಆದೇಶಗಳು ಪ್ರಾಪ್ತವಾದರೆ ದ್ವಿತೀಯಾ ಏಕವಚನದಲ್ಲಿ ಮಾತ್ರ ಅವುಗಳಿಗೆ ಅಪವಾದವಾಗಿ ತ್ವಾ, ಮಾ ಆದೇಶಗಳು ಬರುತ್ತವೆ. ಆಗ ತೇ, ಮೇ ಆದೇಶಗಳು

ಚತುರ್ಥೀ ಏಕವಚನದಲ್ಲಿ ಮಾತ್ರವೆಂದು ತಿಳಿಯಬೇಕು. ಈಗ ಈ ಎಲ್ಲಾ ಆದೇಶಗಳಿಗೆ ಶ್ಲೋಕದಲ್ಲಿ ಉದಾಹರಣೆ ಹೇಳುತ್ತಾನೆ.

ಶ್ರೀಶಸ್ತ್ವಾಽವತು ಮಾಽಪೀಹ ದತ್ತಾತ್ತೇ ಮೇಽಪಿ ಶರ್ಮ ಸಃ ||
ಸ್ವಾಮೀ ತೇ ಮೇಽಪಿ ಸ ಹರಿಃ ಪಾತು ವಾಮಪಿ ನೌ ವಿಭುಃ ||
ಸುಖಂ ವಾಂ ನೌ ದದಾತ್ವೀಶಃ ಪತಿರ್ವಾಮಪಿ ನೌ ಹರಿಃ ||
ಸೋಽವ್ಯಾದ್ವೋ ನಃ ಶಿವಂ ವೋ ನೋ ದದ್ಯಾತ್ ಸೇವ್ಯೋಽ-
ತ್ರ ವಃ ಸ ನಃ ||

ದ್ವಿತೀಯಾ, ಚತುರ್ಥೀ, ಷಷ್ಠೀ, ವಿಭಕ್ತಿಗಳಿಗೆ ಕ್ರಮವಾಗಿ ಉದಾಹರಣೆ ಹೇಳಿರುತ್ತಾನೆ. ಇಲ್ಲಿ ಎಲ್ಲಾ ಆದೇಶಗಳು ಒಂದು ಪದದ ಪರದಲ್ಲಿಯೇ ಬಂದಿವೆ. ಪಾದದ ಆದಿಯಲ್ಲಿ ಬಂದಿಲ್ಲ. ೧) "ಶ್ರೀಶಃ ತ್ವಾ ಮಾ ಅಪಿ ಅವತು." ಲಕ್ಷ್ಮೀಪತಿಯು ನಿನ್ನನ್ನೂ ನನ್ನನ್ನೂ ಕಾಪಾಡಲಿ. ದ್ವಿತೀಯಾ ಏಕವಚನಾಂತಕ್ಕೆ ತ್ವಾ, ಮಾ ಆದೇಶಗಳು ಬಂದಿವೆ. ೨) "ಸಃ ತೇ, ಮೇ, ಅಪಿ ಶರ್ಮ ದತ್ತಾತ್." ಅವನು ನಿನಗೋಸ್ಕರ, ನನಗೋಸ್ಕರ ಸುಖ ಕೊಡಲಿ. ಇಲ್ಲಿ ಚತುರ್ಥೀ ಏಕವಚನಾಂತಕ್ಕೆ ತೇ, ಮೇ ಆದೇಶಗಳು ಬಂದಿವೆ. ೩) "ಸ ಹರಿಃ ತೇ, ಮೇ ಅಪಿ ಸ್ವಾಮೀ" ಆ ವಿಷ್ಣುವು ನಿನಗೂ ನನಗೂ ಒಡೆಯನು. ಇಲ್ಲಿ ಷಷ್ಠೀ ಏಕವಚನಾಂತಕ್ಕೆ ತೇ, ಮೇ ಬಂದುದನ್ನು ತೋರಿಸಿರುತ್ತಾನೆ. ೪) "ವಿಭುಃ ವಾಂ (ಅಪಿ) ನೌ ಪಾತು." ಸರ್ವವ್ಯಾಪಿಯಾದ ಆತನು ನಿಮ್ಮಿಬ್ಬರನ್ನೂ ನಮ್ಮಿಬ್ಬರನ್ನೂ ಕಾಪಾಡಲಿ. ಇಲ್ಲಿ ದ್ವಿತೀಯಾ ದ್ವಿವಚನಾಂತಕ್ಕೆ ಆದೇಶ ಬಂದಿದೆ. ೫) "ಈಶಃ ವಾಂ, ನೌ ಸುಖಂ ದದಾತು" ಹರಿಯು ನಿಮ್ಮಿಬ್ಬರಿಗೋಸ್ಕರ, ನಮ್ಮಿಬ್ಬರಿಗೋಸ್ಕರ ಸುಖವನ್ನು ಕೊಡಲಿ. ಇಲ್ಲಿ ಚತುರ್ಥೀ ದ್ವಿವಚನಾಂತಕ್ಕೆ ವಾಂ, ನೌ ಆದೇಶಗಳು ಬಂದಿವೆ. ೬) "ಹರಿ ವಾಂ (ಅಪಿ) ನೌ ಪತಿಃ" ವಿಷ್ಣುವು ನಿಮ್ಮಿಬ್ಬರಿಗೂ ನಮ್ಮಿಬ್ಬರಿಗೂ ಒಡೆಯನು. ಇಲ್ಲಿ ಷಷ್ಠೀ ದ್ವಿವಚನಾಂತಕ್ಕೆ ವಾಂ, ನೌ ಆದೇಶಗಳು ಬಂದಿವೆ. ೭) "ಸಃ ವಃ ನಃ ಅವ್ಯಾತ್." ಅವನು ನಿಮ್ಮನ್ನೂ ನಮ್ಮನ್ನೂ ಕಾಪಾಡಲಿ. ಇಲ್ಲಿ ದ್ವಿತೀಯಾ ಬಹುವಚನಾಂತಕ್ಕೆ ವಃ, ನಃ, ಆದೇಶಗಳು ಬಂದಿವೆ. ೮) "ವಃ, ನಃ ಶಿವಂ ದದ್ಯಾತ್" ನಿಮಗೋಸ್ಕರ, ನಮಗೋಸ್ಕರ ಮಂಗಳವನ್ನು ಕೊಡಲಿ. ಚತುರ್ಥೀ ಬಹುವಚನಾಂತಗಳಿಗೆ ವಃ, ನಃ ಆದೇಶಗಳು ಬಂದಿವೆ. ೯) ಅತ್ರ ವಃ, ನಃ ಸಃ ಸೇವ್ಯಃ. ಈ ಲೋಕದಲ್ಲಿ ನಿಮಗೂ, ನಮಗೂ ಅವನು ಸೇವಿಸಲು ಯೋಗ್ಯನು. ಇಲ್ಲಿ ಷಷ್ಠೀ ಬಹುವಚನಾಂತಕ್ಕೆ ವಃ ನಃ ಆದೇಶಗಳು ಬಂದಿವೆ. ಇವೆರಡು ಶಬ್ದಗಳೂ ವ್ಯವಹಾರದಲ್ಲಿ ಉಪಯೋಗಿಸಲ್ಪಡುತ್ತವೆ.

ಯುಷ್ಮದ್— (ನೀನು)

ಪ್ರ— ತ್ವಂ. । ಯುವಾಂ । ಯೂಯಂ. ॥ ದ್ವಿ-ತ್ವಾಂ ತ್ವಾ । ಯುವಾಂ ವಾಂ ।. ಯುಷ್ಮಾನ್ ವಃ । ತೃ-ತ್ವಯಾ । ಯುವಾಭ್ಯಾಂ । ಯುಷ್ಮಾಭಿಃ ॥ ಚ-ತುಭ್ಯಂ ತೇ ।.

ಯುವಾಭ್ಯಾಂ ವಾಂ । ಯುಷ್ಮಭ್ಯಂ ವಃ । ಪಂ-ತ್ವತ್ । ಯುವಾಭ್ಯಾಮ್ । ಯುಷ್ಮತ್ ॥ ಷ-ತವ ತೇ । ಯುವಯೋಃ ವಾಂ । ಯುಷ್ಮಾಕಂ ವಃ ॥ ಸ-ತ್ವಯಿ । ಯುವಯೋಃ । ಯುಷ್ಮಾಸು.

ಅಸ್ಮದ್-(ನಾನು)

ಪ್ರ-ಅಹಂ । ಆವಾಂ । ವಯಂ ॥ ದ್ವಿ-ಮಾಂ ಮಾ । ಆವಾಂ ನೌ । ಅಸ್ಮಾನ್ ನಃ । ತೃ-ಮಯಾ । ಆವಾಭ್ಯಾಂ । ಅಸ್ಮಾಭಿಃ ॥ ಚ-ಮಹ್ಯಂ ಮೇ । ಆವಾಭ್ಯಾಂ ನೌ । ಅಸ್ಮಭ್ಯಂ ನಃ ॥ ಪಂ-ಮತ್ । ಆವಾಭ್ಯಾಂ । ಅಸ್ಮತ್. ॥ ಷ-ಮಮ ಮೇ । ಆವಯೋಃ ನೌ । ಅಸ್ಮಾಕಂ ನಃ ॥ ಸ-ಮಯಿ । ಆವಯೋಃ । ಅಸ್ಮಾಸು ॥

**(ವಾ ॥ ಏಕವಾಕ್ಯೇ ಯುಷ್ಮದಸ್ಮದಾದೇಶಾ ವಕ್ತವ್ಯಾಃ)**

**ಏಕತಿಙ್ ವಾಕ್ಯಮ್ । ಓದನಂ ಪಚ. ತವ ಭವಿಷ್ಯತಿ ॥**

ವಾರ್ತಿಕಕಾರರು ಈ ಆದೇಶ ವಿಷಯದಲ್ಲಿ ನಿಯಮಮಾಡುತ್ತಾರೆ. ಪದದ ಪರದಲ್ಲಿರಬೇಕೆಂದು ಹೇಳಿದೆಯಷ್ಟೆ. ಆಗ ಅದು ನಿಮಿತ್ತವಾಯಿತು. ಆ ಪದವೂ ಯುಷ್ಮದಸ್ಮದ್ ಶಬ್ದಗಳೂ ಒಂದೇ ವಾಕ್ಯದಲ್ಲಿರಬೇಕು. ಹಾಗಿಲ್ಲದೆ ಬೇರೆ ಬೇರೆ ವಾಕ್ಯಗಳಲ್ಲಿ ಇದ್ದರೆ ಆಗ ಆದೇಶ ಬರುವುದಿಲ್ಲ. "ಏಕತಿಙ್‌ವಾಕ್ಯಮ್" ವಾಕ್ಯದ ಲಕ್ಷಣ ಹೇಳುತ್ತಾನೆ. ಒಂದು ತಿಙಂತ ಪದದಿಂದ ಕೂಡಿದ್ದು ವಾಕ್ಯ. "ಸ ಭವತಿ" ಇದು ವಾಕ್ಯ. "ಓದನಂ ಪಚ, ತವ ಭವಿಷ್ಯತಿ." ಅನ್ನ ಮಾಡು. ನಿನಗೆ ಆಗುವುದು. ಎಂದರ್ಥ. ಇಲ್ಲಿ ಪಚ ಎಂಬ ಪದದ ಪರದಲ್ಲಿ ಯುಷ್ಮದ್ ಶಬ್ದ ಬಂದರೂ ಆ ಪದವುಳ್ಳ ವಾಕ್ಯವೇ ಒಂದು. ಯುಷ್ಮದಿರುವ ವಾಕ್ಯ ಇನ್ನೊಂದು. ಒಂದೊಂದೂ ತಿಙಂತ ಘಟಿತವಾಗಿರುವುದರಿಂದ ಅಲ್ಲಿ ಎರಡು ವಾಕ್ಯಗಳಿವೆ. ಒಂದೊಂದು ವಾಕ್ಯದಲ್ಲಿ ಒಂದೊಂದಿರುವುದರಿಂದ ಆದೇಶ ಬರುವುದಿಲ್ಲ. ತವ ಎಂದೇ ಹೇಳಬೇಕು, ತೇ ಎಂದು ಹೇಳಬಾರದು.

**(ವಾ ॥ ಏತೇ ವಾನ್ನಾವಾದಯೋಽನನ್ವಾದೇಶೇ ವಾ ವಕ್ತವ್ಯಾಃ ॥)**

**ಅನ್ವಾದೇಶೇ ತು ನಿತ್ಯಂ ಸ್ಯುಃ । ಧಾತಾ ತೇ ಭಕ್ತೋಽಸ್ತಿ, ಧಾತಾ ತವ ಭಕ್ತೋಽಸ್ತಿ ವಾ । ತಸ್ಮೈ ತೇ ನಮಃ ಇತ್ಯೇವ ॥**

ವಾರ್ತಿಕಾರ್ಥ. ಈ ವಾಂ ನೌ ಮುಂತಾದ ಆದೇಶಗಳು ಅನನ್ವಾದೇಶದಲ್ಲಿ ವಿಕಲ್ಪವಾಗಿ ಹೇಳಬೇಕು. ಒಂದು ಕಾರ್ಯ ಹೇಳಿ ಇನ್ನೊಂದು ಕಾರ್ಯ ಹೇಳಲು ಅವನನ್ನೇ ಪುನಃ ತೆಗೆದುಕೊಳ್ಳುವುದಕ್ಕೆ ಅನ್ವಾದೇಶವೆಂದು ಹೇಳಿದೆ. ಈ ಅನ್ವಾದೇಶ ತೋರದಿರುವಾಗ ವಾಂ ನೌ ಮುಂತಾದ ಆದೇಶಗಳು ವಿಕಲ್ಪವಾಗಿ ಬರುತ್ತವೆ. ಅನ್ವಾದೇಶದಲ್ಲಿ ನಿತ್ಯವಾಗಿ ಬರುತ್ತವೆ. "ಧಾತಾ ತೇ-" ಉದಾಹರಣೆ. ಬ್ರಹ್ಮನು ನಿನ್ನ ಭಕ್ತನಾಗಿದ್ದಾನೆ ಎಂದು ವಾಕ್ಯಾರ್ಥ. ಇದು ಅನನ್ವಾದೇಶವಾಕ್ಯ. ಮೊದಲು

ಎಂದರ್ಥವನ್ನು ತಿಳಿಸುತ್ತದೆ. ಇಲ್ಲಿ ಧಾತಾ ಎಂಬ ಪದದ ಪರದಲ್ಲಿರುವುದರಿಂದ ಆದೇಶ ಬಂದರೂ ಬರಬಹುದು. ಬಾರದಿದ್ದರೂ ಇರಬಹುದು. ತವ, ಅಥವಾ ತೇ ಎಂದು ಹೇಳಬಹುದು. "ತಸ್ಮೈತೇ ನಮಃ" ಇದು ಅನ್ವಾದೇಶವಾಕ್ಯ. ಅಂಥ ನಿನಗೆ ನಮಸ್ಕಾರ. ಬ್ರಹ್ಮನು ನಿನ್ನ ಭಕ್ತನಾಗಿರುತ್ತಾನೆ ಎಂದು ಮೊದಲು ಒಂದು ಬಾರಿ ತೆಗೆದುಕೊಂಡ ವಿಷ್ಣುವೇ ಎರಡನೇ ಕಾರ್ಯ ಅಂದರೆ ನಮಸ್ಕಾರ ಮಾಡಲು ಪುನಃ ತೆಗೆದುಕೊಂಡುದರಿಂದ ಅನ್ವಾದೇಶ. ಇಲ್ಲಿ ತೇ ಎಂಬ ಆದೇಶವನ್ನೇ ಹೇಳಬೇಕು. "ತಸ್ಮೈ ತುಭ್ಯಂ ನಮಃ" ಎನ್ನಬಾರದು. ಹೀಗೆ ನಿಯಮಗಳನ್ನರಿತು ಈ ಆದೇಶಗಳನ್ನು ಪ್ರಯೋಗಿಸಬೇಕು.

---

ದಕಾರಾಂತ, "ಸುಪಾದ್" ಶಬ್ದ. (ಸುಂದರವಾದ ಕಾಲುಳ್ಳವನು)

**ಸುಪಾತ್, ಸುಪಾದ್ । ಸುಪಾದೌ । ಸುಪಾದಃ ॥ ಸುಪಾದಂ । ಸುಪಾದೌ ॥**

ಶೋಭನೌ ಪಾದೌ ಯಸ್ಯ ಸಃ । ಸುಪಾತ್. ಸುಂದರವಾದ ಕಾಲು ಯಾರಿಗಿದೆಯೋ ಅವನು ಸುಪಾತ್, ಸಮಾಸವಾದಾಗ "ಸಂಖ್ಯಾ ಸುಪೂರ್ವಸ್ಯ" ಸೂತ್ರದಿಂದ ಪಾದ ಶಬ್ದದ ಅಂತ್ಯಕ್ಕೆ (ಅ) ಲೋಪ ಬಂದು ಸುಪಾತ್ ಶಬ್ದವಾಗಿದೆ. ಪ್ರಥಮಾ ಸುವಿನಲ್ಲಿ "ವಾವಸಾನೇ" ಸೂತ್ರದಿಂದ ವಿಕಲ್ಪವಾಗಿ ದಕಾರಕ್ಕೆ ತಕಾರಾದೇಶ. ಸುಪಾತ್-ಸುಪಾದ್. ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಸುಪಾದೌ-ಸುಪಾದಃ ॥ ದ್ವಿ. ಸುಪಾದಮ್-ಸುಪಾದೌ-ಸುಪಾದ್ + ಶಸ್ ಎಂದಿರುವಾಗ. ಶಕಾರಕ್ಕೆ "ಲಶಕ್ವತದ್ಧಿತೇ" ಸೂತ್ರದಿಂದ ಇತ್ ಸಂಜ್ಞಾ. ಸುಪಾದ್ + ಅಸ್ ಎಂದಿರುವಾಗ ಪದಾದೇಶ ಹೇಳುತ್ತಾನೆ.

(ಪಾದ್ ಶಬ್ದಕ್ಕೆ ಪದಾದೇಶ ಹೇಳುವ ಸೂತ್ರ)

**೩೩೫. ಪಾದಃ ಪತ್ ॥ ೬-೪-೧೩೦ ॥**

**ಪಾಚ್ಛಬ್ದಾಂತಂ ಯದಂಗಂ ಭಂ ತದವಯವಸ್ಯ ಪಾಚ್ಛಬ್ದಸ್ಯ ಪದಾದೇಶಃ । ಸುಪದಃ । ಸುಪದಾ । ಸುಪಾದ್ಭ್ಯಾಮ್ ॥ ಅಗ್ನಿಮತ್ ಅಗ್ನಿಮದ್ ॥ ಅಗ್ನಿಮಥಃ ॥ ಅಗ್ನಿಮದ್ಭ್ಯಾಮ್ ॥ ಇತ್ಯಾದಿ ॥**

ದ್ವಿಪದ ಸೂತ್ರ. "ಭಸ್ಯ" "ಅಂಗಸ್ಯ" ಅಧಿಕಾರ. ಪಾದ್ ಎಂಬುದು ಅಂಗಕ್ಕೆ ವಿಶೇಷಣ. ಪಾದ್ ಶಬ್ದ ಅಂತವಾದ ಭ ಸಂಜ್ಞೆಯುಳ್ಳ (ಯುಚಿಭಮ್) ಅಂಗಕ್ಕೆ ಎಂದರ್ಥವಾಗುತ್ತದೆ. ಪಾದ್ ಶಬ್ದಾಂತ ಅಂಗಕ್ಕೆ ಆದೇಶ ಹೇಳಿದರೂ "ನಿರ್ದಿಶ್ಯಮಾನಸ್ಯಾದೇಶಾ ಭವಂತಿ" ಪರಿಭಾಷೆಯಿಂದ ಸೂತ್ರದಲ್ಲಿ ನಿರ್ದೇಶ

ಮಾಡಿದ ಪಾದ್ ಎಂಬುದಕ್ಕೆ ಮಾತ್ರ ಪದ್ ಆದೇಶ ಬರುತ್ತದೆ. ಸೂತ್ರಾರ್ಥ- ಪಾಚ್ಚಬ್ದವೇ ಅಂತವಾದ ಭ ಸಂಜ್ಞೆಯುಳ್ಳ (ಯಾದಿ ಅಜಾದಿ ಪ್ರತ್ಯಯ ಪರವಾದ) ಅಂಗದ ಅವಯವವಾದ ಪಾದ್ ಎಂಬುದಕ್ಕೆ ಪತ್ ಎಂಬ ಆದೇಶ ಬರುತ್ತದೆ. ಪ್ರಕೃತಸುಪಾದ್ ಎಂಬುದು ಪಾಚ್ಚಬ್ದಾಂತವಾಗಿದೆ. ಅಸ್ ಅಜಾದಿಪ್ರತ್ಯಯಪರ ವಾದುದರಿಂದ ಭ ಸಂಜ್ಞೆ ಇದೆ. ಪಾದ್ ಎಂಬುದಕ್ಕೆ ಪದ್ ಆದೇಶ ಬಂದರೆ ಸುಪದ್ + ಅಸ್ = ಸುಪದಃ ಎಂದಾಗುತ್ತದೆ. ಇನ್ನು ಅಜಾದಿಯಲ್ಲೆಲ್ಲಾ ಹೀಗೆ ಪದಾದೇಶ. ತೃ. ಸುಪದಾ-ಸುಪಾದ್ಭ್ಯಾಮ್-ಸುಪಾದ್ಭಿಃ ಇತ್ಯಾದಿ. ಹಲಾದಿಯಲ್ಲಿ ಭಸಂಜ್ಞೆ ಇಲ್ಲದಿರುವುದರಿಂದ ಪದಾದೇಶವಿಲ್ಲ. ಸಪ್ತಮೀ ಸುಪಿನಲ್ಲಿ ಸುಪಾತ್ಸು ಎಂದಾಗುತ್ತದೆ. " ಖರಿ ಚ " ಸೂತ್ರದಿಂದ ದಕಾರಕ್ಕೆ ತಕಾರಾದೇಶ.

---

ಥಕಾರಾಂತ " ಅಗ್ನಿಮಥ್ " ಶಬ್ದ. (ಅಗ್ನಿಯನ್ನು ಕಡೆಯುವವನು)

" ಅಗ್ನಿಂ ಮಥ್ನಾತಿ " ಇತಿ ಅಗ್ನಿಮಥ್. ಮಂಥ ವಿಲೋಡನೇ ಧಾತು. ಕ್ವಿಪ್ ಪ್ರತ್ಯಯ ಬಂದರೆ ಅಗ್ನಿಮಥ್ ಎಂದಾಗುತ್ತದೆ. ಕೃದಂತವಾದುದರಿಂದ ಪ್ರಾತಿಪದಿಕ. ಸುಪರವಾದಾಗ " ಝಲಾಂಜಶೋಂತೇ " ಸೂತ್ರದಿಂದ ಥಕಾರಕ್ಕೆ ಜಶ್ತ್ವ. ದಕಾರ. " ವಾವಸಾನೇ " ಸೂತ್ರದಿಂದ ವಿಕಲ್ಪ ಚರ್ತ್ವ. ಅಗ್ನಿಮತ್- ಅಗ್ನಿಮದ್. ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಅಗ್ನಿಮಥೌ ಇತ್ಯಾದಿ. ಹಲಾದಿಯಲ್ಲಿ ಪದಸಂಜ್ಞೆಯಿರುವುದರಿಂದ ಹಿಂದಿನಂತೆ ಜಶ್ತ್ವ ಅಗ್ನಿಮದ್ಭ್ಯಾಮ್ ಇತ್ಯಾದಿ. ಸಪ್ತಮೀಸುವಿನಲ್ಲಿ ಜಶ್ತ್ವ, ಚರ್ತ್ವ. ಅಗ್ನಿಮತ್ಸು ||

---

ಚಕಾರಾಂತ ಪ್ರಾಙ್ಚ್ ಶಬ್ದ. (ಚನ್ನಾಗಿ ಹೋಗುವವನು)

" ಪ್ರ ಅಂಚತಿ " ಎಂಬರ್ಥದಲ್ಲಿ " ಋತ್ವಿಕ್ ದಧೃಕ್ "-ಸೂತ್ರ (ಸೂ ೩೦೩) ದಿಂದ ಪ್ರ ಉಪಪದವಾಗಿರುವಾಗ ಅಂಚು ಗತಿ ಪೂಜನಯೋಃ ಧಾತುವಿಗೆ ಕ್ವಿನ್ ಪ್ರತ್ಯಯ. ಕ್ವಿನ್ನಿನಲ್ಲಿ ಸರ್ವಲೋಪವೆಂದು ಹಿಂದೆ ಹೇಳಿದೆ. ಪ್ರಾಙ್ಚ್. ಇಲ್ಲಿ ಅನ್ ಚ್ ಎಂದಿರುವುದು. ನಕಾರಕ್ಕೆ ಅನುಸ್ವಾರ ಪರಸವರ್ಣ ಬಂದು ಅಙ್ಚ್ ಎಂದಾಗಿದೆ. ಈಗ ನಲೋಪ ಹೇಳುತ್ತಾನೆ.

(ಉಪಧಾ ನಕಾರಕ್ಕೆ ಲೋಪ ಹೇಳುವ ಸೂತ್ರ)

## ೩೩೭. ಅನಿದಿತಾಂ ಹಲ ಉಪಧಾಯಾಃ ಕ್ಙಿತಿ ||೬-೪-೨೪||

ಹಲಂತಾನಾಮನಿದಿತಾಮಂಗಾನಾಮುಪಧಾಯಾ ನಸ್ಯ ಲೋಪಃ ಕಿತಿ ಙಿತಿ || ನುಮ್ | ಸಂಯೋಗಾಂತಸ್ಯ ಲೋಪಃ | ನಸ್ಯ ಕುತ್ವೇನ ಙಃ | ಪ್ರಾಙ್ | ಪ್ರಾಙ್ಚೌ | ಪ್ರಾಙ್ಚಃ ||

ನಾಲ್ಕು ಪದಗಳುಳ್ಳ ಸೂತ್ರ. "ಅಂಗಸ್ಯ" ಅಧಿಕಾರ. ಇಲ್ಲಿ ಬಹುವಚನಾಂತವಾಗಿ ವಿಪರಿಣತವಾಗುತ್ತದೆ. ಹಲಃ ಅದಕ್ಕೆ ವಿಶೇಷಣ. ಹಲಂತಾನಾಮಂಗಾನಾಂ, -ಹಲಂತವಾದ ಅಂಗಗಳಿಗೆ ಎಂದರ್ಥವಾಗುತ್ತದೆ. "ಅನಿದಿತಾಂ" ಎಂಬುದೂ ಅದಕ್ಕೆ ವಿಶೇಷಣ. ಇತ್ ಅಂದರೆ ಹ್ರಸ್ವ ಇಕಾರವು ಇತ್=ಇತ್ ಸಂಜ್ಞೆಯುಳ್ಳದ್ದು ಯೇಷಾಂ ತಾನಿ=ಯಾರಿಗೆ ಇದೆಯೋ ಅವುಗಳು ಇದಿಂತಿ. ನ ಇಂದಿತಿ, ಅನಿದಿಂತಿ, ತೇಷಾಂ ಅನಿದಿತಾಂ. ಹ್ರಸ್ವ ಇಕಾರ ಇತ್ತಾಗಿಲ್ಲದಿರುವವುಗಳು. ಕ್ ಚ ಙ್ ಚ ಕ್ಙೌ. ಕ್ಙೌ ಇತೌ ಯಸ್ಯ ಸಃ ಕ್ಙಿತ್. ತಸ್ಮಿನ್ ಕ್ಙಿತಿ. ಕಕಾರ ಙಕಾರ ಇತ್ತಾಗಿರುವುದರಿಂದ ಪ್ರತ್ಯೇಕಾನ್ವಯ- ಕಿತಿ-ಙಿತಿ. ಎಂದಾಗುತ್ತದೆ. ಅಂಗಾನಾಂ ಅವಯವಾರ್ಥದಲ್ಲಿ ಷಷ್ಠೀ. ಸೂತ್ರಾರ್ಥ. ಹ್ರಸ್ವ ಇಕಾರ ಇತ್ತಾಗದಿರುವ ಹಲಂತವಾದ ಅಂಗಗಳ ಅವಯವವಾದ ನಕಾರಕ್ಕೆ ಕಿತ್ತಾದ ಯಾ ಙಿತ್ತಾದ ಪ್ರತ್ಯಯಪರದಲ್ಲಿರುವಾಗ ಲೋಪ ಬರುತ್ತದೆ. "ಶ್ನಾನ್ನಲೋಪಃ" ಸೂತ್ರದಿಂದ "ನ," "ಲೋಪಃ" ಅನುವೃತ್ತಿ. ಅಲ್ಲಿ ನ ಎಂಬುದು ಲುಪ್ತಷಷ್ಠೀಕ. ಪ್ರಕೃತ ಪ್ರಾಙ್ಚ್ ಎಂಬುದು ಹಲಂತವಾಗಿದೆ. ಇಲ್ಲಿ ಹ್ರಸ್ವ ಇಕಾರ ಇತ್ತಾಗಲಿಲ್ಲ. ಇಲ್ಲಿ ಉಪಧೆ (ಅಂತ್ಯವರ್ಣದ ಪೂರ್ವ ವರ್ಣ) ನಕಾರವಿದೆ. (ಪ್ರಾನ್‌ಚ್) ಅದಕ್ಕೆ ಕಿತ್ತಾದ ಪ್ರತ್ಯಯ ಪರದಲ್ಲಿದೆ. ಕ್ವಿನ್ ಕಿತ್ತಾದ ಪ್ರತ್ಯಯ. ಆದುದರಿಂದ ನಕಾರ ಲೋಪ ಬಂದರೆ ಪ್ರಾಚ್ ಎಂದಾಗುತ್ತದೆ. ಪ್ರಾಚ್+ಸ್ ಎಂದಿರುವಾಗ ಅಂಚು ಧಾತುವಿನಲ್ಲಿ ಉಕಾರ ಇತ್ತಾದುದರಿಂದ ಇದು ಉಗಿತ್. ಆಗ "ಉಗಿದಚಾಂ ಸರ್ವನಾಮಸ್ಥಾನೇಧಾತೋಃ" (ಸೂತ್ರ ೨೯೧) ಸೂತ್ರದಿಂದ ನುಮಾಗಮ ಬರುತ್ತದೆ. ನುಮಿನಲ್ಲ ಮಕಾರ "ಹಲಂತ್ಯಮ್" ಸೂತ್ರದಿಂದ ಇತ್. ಉಕಾರ ಉಚ್ಚಾರಣಾರ್ಥ. ಮಿತ್ತಾದುದರಿಂದ "ಮಿದಚೋಂತ್ಯಾತ್ಪರಃ" ಸೂತ್ರದಿಂದ ಅಂತ್ಯಾಚಿನ ಪರಕ್ಕೆ ಅವಯವವಾಗಿ ಬರುತ್ತದೆ. ಆಗ ಪ್ರಾನ್‌ಚ್-ಸ್ ಎಂದಾಗುತ್ತದೆ. ಸುವಿಗೆ "ಹಲ್‌ಙ್ಯಾಭ್ಯೋ"-ಸೂತ್ರದಿಂದ ಲೋಪ. ಆಗ ಸಂಯೋಗಾಂತವಾದ ಪದವಾದುದರಿಂದ "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ಸಂಯೋಗಾಂತವಾದ ಚಕಾರಕ್ಕೆ ಲೋಪ. ಪ್ರಾನ್. ಇದು ಕ್ವಿನ್‌ಪ್ರತ್ಯಯವನ್ನು ಹೊಂದಿರುವುದರಿಂದ "ಕ್ವಿನ್‌ಪ್ರತ್ಯಯಸ್ಯಕುಃ" ಸೂತ್ರದಿಂದ ಕುತ್ವ. ನಕಾರಕ್ಕೆ ಸ್ಥಾನಸಾಮ್ಯದಿಂದ ಕವರ್ಗದಲ್ಲಿ ಙಕಾರ ಬಂದರೆ ಪ್ರಾಙ್. ಎಂದಾಗುತ್ತದೆ. ಪ್ರಾನ್‌ಚ್+ಔ. ಎಂದಿರುವಾಗ ಹಿಂದಿನಂತೇ "ಅನಿದಿತಾಂ"-ಸೂತ್ರದಿಂದ ನಲೋಪ. ಪ್ರಾಚ್+ಔ. "ಉಗಿದಚಾಂ"-ಸೂತ್ರದಿಂದ ನುಮ್. ಪ್ರಾನ್‌ಚ್+ಔ. "ನಶ್ಚಾಪದಾಂತಸ್ಯ ಝಲಿ" ಸೂತ್ರದಿಂದ ಅಪದಾಂತ ನಕಾರಕ್ಕೆ ಅನುಸ್ವಾರ. "ಅನುಸ್ವಾರಸ್ಯ ಯಯಿ ಪರಸವರ್ಣಃ" ಸೂತ್ರದಿಂದ ಅದಕ್ಕೆ ಪರದ ಚಕಾರದ ಸವರ್ಣ ಅಂದರೆ ಞಕಾರ ಬರುತ್ತದೆ. ಪ್ರಾಞ್ಚೌ। ಪ್ರಾನ್‌ಚ್+ಜಸ್. ಹಿಂದಿನಂತೇ ಪ್ರಕ್ರಿಯೆ ಬಂದರೆ ಪ್ರಾಞ್ಚಃ॥ ದ್ವಿತೀಯಾದಲ್ಲಿಯೂ ಏಕವಚನ, ದ್ವಿವಚನ ಪ್ರತ್ಯಯ ಸರ್ವನಾಮ

ಸ್ಥಾನವಾದುದರಿಂದ ಹಿಂದಿನಂತೇ ನಲೋಪ, ನುಮ್, ಅನುಸ್ವಾರ, ಪರಸವರ್ಣ. ಪ್ರಾಙ್ಕ್ ಪ್ರಾಙ್ಕ್ಷ || ಪ್ರಾನ್ಚ್+(ಶ್) ಅಸ್ ಎಂದಿರುವಾಗ "ಅನಿದಿತಾಂ"– ಸೂತ್ರದಿಂದ ನಲೋಪ. ಪ್ರ ಅಚ್+ಅಸ್. (ಪ್ರ+ಅನ್ ಚ್+ಅಸ್) ಈಗ ಭಸಂಜ್ಞೆಯಿರುವುದರಿಂದ ಅಕಾರ ಲೋಪ ಹೇಳುತ್ತಾನೆ.

(ಅಂಚಿನ ಅಕಾರ ಲೋಪ ಹೇಳುವ ಸೂತ್ರ)

## ೩೩೭. ಅಚಃ || ೬-೪-೧೩೮ ||

### ಲುಪ್ತನಕಾರಸ್ಯಾಞ್ಚತೇರ್ಭಸ್ಯಾಕಾರಸ್ಯ ಲೋಪಃ ||

ಏಕಪದಸೂತ್ರ. "ಭಸ್ಯ" ಅಧಿಕಾರ. ಅಚಃ ಎಂಬುದು ಅಂಚುಧಾತುವಿಗೆ ನಲೋಪವಾದಾಗ ಷಷ್ಠೀ ಬಂದು ಆಗಿದೆ. ಅಚಃ ಎಂದು ನಿರ್ದೇಶಮಾಡಿರುವುದರಿಂದ ನಲೋಪವಾದಮೇಲೆ ಕಾರ್ಯವೆಂದು ತಿಳಿಯಬೇಕು. "ಅಲ್ಲೋಪೋಽನಃ" ಸೂತ್ರದಿಂದ "ಅತಃ" "ಲೋಪಃ" ಅನುವೃತ್ತವಾಗುತ್ತವೆ. ಸೂತ್ರಾರ್ಥ. ನಕಾರ ಲೋಪ ಹೊಂದಿದ ಅಂಚುಧಾತುವಿನ ಅಕಾರಕ್ಕೆ ಭಸಂಜ್ಞಾ ಇರುವಾಗ ಲೋಪ ಬರುತ್ತದೆ. (ಯಚಿ ಭಮ್) ಪ್ರಕೃತ ಅಜಾದಿ ಪ್ರತ್ಯಯ ಪರವಾದುದರಿಂದ ಭಸಂಜ್ಞೆ ಇದೆ. ಅಂಚುವಿನಲ್ಲಿ ನಕಾರಲೋಪವೂ ಆಗಿದೆ. ಪ್ರ+ಅಚ್+ಅಸ್ ಎಂದಿರುವಾಗ ಅಕಾರಕ್ಕೆ ಲೋಪ. ಪ್ರ+ಚ್+ಅಸ್ ಎಂದಿರುವಾಗ ಪ್ರ ಎಂಬುದರ ಅಕಾರಕ್ಕೆ ದೀರ್ಘ ಹೇಳುತ್ತಾನೆ.

(ಅಚಿನ ಪೂರ್ವಕ್ಕೆ ದೀರ್ಘ ಹೇಳುವ ಸೂತ್ರ)

## ೩೩೮. ಚೌ || ೬-೩-೧೩೮ ||

### ಲುಪ್ತಾಕಾರನಕಾರೇಽಞ್ಚತೌ ಪರೇ ಪೂರ್ವಸ್ಯಾಣೋ ದೀರ್ಘಃ | ಪ್ರಾಚಾ | ಪ್ರಾಗ್ಭ್ಯಾಮ್ || ಪ್ರತ್ಯಙ್ | ಪ್ರತ್ಯಞ್ಚೌ | ಪ್ರತೀಚಃ | ಪ್ರತ್ಯಗ್ಭ್ಯಾಮ್ | ಉದಙ್ | ಉದಞ್ಚೌ |

ಏಕಪದಸೂತ್ರ. ಇದು ನಕಾರ, ಅಕಾರ ಲೋಪಹೊಂದಿದ ಅಂಚುಧಾತುವಿನ ಸಪ್ತಮೀ ಏಕವಚನಾಂತರೂಪ. "ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ" ಸೂತ್ರದಿಂದ "ಪೂರ್ವಸ್ಯ, ದೀರ್ಘಃ, ಅಣಃ" ಅನುವೃತ್ತಿ. ಸೂತ್ರಾರ್ಥ. ಲುಪ್ತವಾದ ಅಕಾರನಕಾರವುಳ್ಳ ಅಂಚುಧಾತು ಪರದಲ್ಲಿರುವಾಗ ಪೂರ್ವದಲ್ಲಿರುವ ಅಣ್ (ಅ, ಇ, ಉ) ಗೆ, ದೀರ್ಘ ಬರುತ್ತದೆ. ಪ್ರ+ಚ್+ಅಸ್ ಎಂಬಲ್ಲಿ ಅಕಾರ ನಕಾರ ಲೋಪ ಹೊಂದಿದ ಅಂಚುಧಾತು ಪರದಲ್ಲಿರುವುದರಿಂದ ಪೂರ್ವದ ಅಣ್ ಪ್ರ+ಅ ದಲ್ಲಿರುವ ಅಕಾರ, ಅದಕ್ಕೆ ದೀರ್ಘಬಂದರೆ ಪ್ರಾಚ್+ಅಸ್=ಪ್ರಾಚಃ ಎಂದಾಗುತ್ತದೆ. ಇನ್ನುಮುಂದೆ ಅಜಾದಿಯಲ್ಲೆಲ್ಲಾ ಭಸಂಜ್ಞೆಯಿರುವುದರಿಂದ "ಅಚಃ" ಸೂತ್ರದಿಂದ ಅಕಾರಲೋಪ. "ಚೌ" ಸೂತ್ರದಿಂದ ಪೂರ್ವಕ್ಕೆ ದೀರ್ಘ. ಹಲಾದಿ

ಯಲ್ಲಿ " ಅನಿದಿತಾ–" ಸೂತ್ರದಿಂದ ನಲೋಪಬಂದ ಮೇಲೆ ಚಕಾರಕ್ಕೆ " ಚೋಃಕುಃ " (ಸೂ. ೩೮೯) ಸೂತ್ರದಿಂದ ಕುತ್ವ. ಅಂದರೆ ಕಕಾರ. ಕಕಾರಕ್ಕೆ " ಝಲಾಂ ಜಶೋಂತೇ " ಸೂತ್ರದಿಂದ ಜಶ್ತ್ವ. ಗಕಾರ. ತೃ॥ ಪ್ರಾಚಾಪ್ರಾಗ್ಭ್ಯಾಮ್-ಪ್ರಾಗ್ಭಿಃ। ಚ। ಪ್ರಾಚೇ–ಪ್ರಾಗ್ಭ್ಯಾಮ್–ಪ್ರಾಗ್ಭ್ಯಃ।ಪಂ ಪ್ರಾಚಃ-ಪ್ರಾಗ್ಭ್ಯಾಮ್–ಪ್ರಾಗ್ಭ್ಯಃ। ಷ. ಪ್ರಾಚಃ-ಪ್ರಾಚೋಃ ಪ್ರಾಚಾಮ್।ಸ ಪ್ರಾಚಿ-ಪ್ರಾಚೋಃ-ಪ್ರಾಕ್ಷು॥ಪ್ರಾಚ್+ಸು ಎಂದಿರುವಾಗ " ಚೋಃ ಕುಃ " ಸೂತ್ರದಿಂದ ಚಕಾರಕ್ಕೆ ಕಕಾರ. " ಆದೇಶ ಪ್ರತ್ಯಯಯೋಃ " ಸೂತ್ರದಿಂದ ಸಕಾರಕ್ಕೆ ಷಕಾರ. ಕ್+ಷ್ ಸೇರಿದರೆ ಕ್ಷ ಆಗುತ್ತೆ. ಚಕಾರಾಂತ ಪ್ರತ್ಯಞ್ಚ್ ಶಬ್ದ. (ಪಶ್ಚಿಮದೇಶದಲ್ಲಿರುವುದು ಅಥವಾ ವಿರುದ್ಧಗಾಮಿ॥

ಪ್ರತಿಪೂರ್ವದಲ್ಲಿರುವಾಗ ಅಂಚುಧಾತುವಿಗೆ ಹಿಂದಿನಂತೆ ಕ್ವಿನ್ ಪ್ರತ್ಯಯ. ಪ್ರತ್ಯಞ್ಚ್+ಕ್ವಿನ್ ಎಂದಿರುವಾಗ " ಅನಿದಿತಾಂ "—ಸೂತ್ರದಿಂದ ನಲೋಪ. ಕ್ವಿನ್ನಿನಲ್ಲಿ ಸರ್ವಲೋಪ. ಸು ಮುಂತಾದ (೫) ಸರ್ವನಾಮಸ್ಥಾನಪ್ರತ್ಯಯ ಪರವಾದಾಗ " ಉಗಿದಚಾಂ "—ಸೂತ್ರದಿಂದ ನುಮಾಗಮ. ಪ್ರತ್ಯನ್‌ಚ್+ಸ್ ಎಂದಿರುವಾಗ " ಹಲ್‌ಙ್ಯಾಭ್ಯೋ "—ಸೂತ್ರದಿಂದ ಸುಲೋಪ. " ಸಂಯೋಗಾಂ ತಸ್ಯ ಲೋಪಃ" ಸೂತ್ರದಿಂದ ಚಕಾರಕ್ಕೆ ಲೋಪ. ಪ್ರತ್ಯನ್ ಎಂದಿರುವಾಗ " ಕ್ವಿನ್ ಪ್ರತ್ಯಯಸ್ಯಕುಃ " ಸೂತ್ರದಿಂದ ನಕಾರಕ್ಕೆ ಕುತ್ವ ಅಂದರೆ ಙಕಾರಾದೇಶ. ಪ್ರತ್ಯಙ್ ಪ್ರತ್ಯಞ್ಚೌ ಪ್ರತ್ಯಞ್ಚಃ ॥ ದ್ವಿ-ಪ್ರತ್ಯಞ್ಚಂ-ಪ್ರತ್ಯಞ್ಚೌ–ಇಲ್ಲಿ ನುಮಿನ ನಕಾರಕ್ಕೆ ಅನುಸ್ವಾರ ಪರಸವರ್ಣ. ಪ್ರತ್ಯಚ್=(ಶ್) ಅಸ್ ಎಂದಿರುವಾಗ " ಅಚಃ " ಸೂತ್ರದಿಂದ ಅಚಿನ ಅಕಾರಕ್ಕೆ ಲೋಪ. ಪ್ರತಿ ಚ್+ಅಸ್. " ಚೌ " ಸೂತ್ರದಿಂದ ಪೂರ್ವದ ಅಣಾದ ಇಕಾರಕ್ಕೆ ದೀರ್ಘ. ಪ್ರತೀಚಃ ॥ ಪ್ರತೀಚಾ– ಪ್ರತ್ಯಗ್ಭ್ಯಾಮ್–ಪ್ರತ್ಯಗ್ಭಿಃ ॥ ಇತ್ಯಾದಿ. ಚಕಾರಕ್ಕೆ ಕುತ್ವ, ಜಶ್ತ್ವ.

---

ಚಕಾರಾಂತ. ಉದಞ್ಚ್ ಶಬ್ದ. (ಉತ್ತರದೇಶದಲ್ಲಿರುವುದು)

ಉತ್ ಅಂಚತಿ ಎಂಬರ್ಥದಲ್ಲಿ ಉತ್ ಉಪಪದವಾಗಿರುವಾಗ ಅಂಚುಧಾತುವಿಗೆ ಕ್ವಿನ್ ಪ್ರತ್ಯಯ. ಹಿಂದಿನಂತೇ ಕಾರ್ಯಗಳು. ಉದಙ್-ಉದಞ್ಚೌ-ಉದಞ್ಚಃ। ದ್ವಿ. ಉದಞ್ಚಂ-ಉದಞ್ಚೌ. ಉದಚ್+(ಶ್) ಅಸ್ ಎಂದಿರುವಾಗ ಪೂರ್ವದಲ್ಲಿ ಅಣ್ ಇಲ್ಲದಿರುವುದರಿಂದ ದೀರ್ಘಾದಿಗಳು ಬರುವುದಿಲ್ಲ. ಅಚಿನ ಅಕಾರಕ್ಕೆ ಈತ್ವ ಹೇಳುತ್ತಾನೆ.

(ಅಚಿನ ಅಕಾರಕ್ಕೆ ಈಕಾರ ಹೇಳುವ ಸೂತ್ರ)

## ೩೪೯. ಉದ ಈತ್ ॥ ೬_೪_೧೩೯ ॥

**ಉಚ್ಛಬ್ದಾತ್ಪರಸ್ಯ ಲುಪ್ತನಕಾರಸ್ಯಾಞ್ಚತೇರ್ಭಸ್ಯಾಕಾರಸ್ಯ ಈತ್॥**
**ಉದೀಚಃ। ಉದೀಚಾ ಉದಗ್ಭ್ಯಾಮ್ ॥**

ಉದಃ ಈತ್ ॥ ದ್ವಿಪದ ಸೂತ್ರ. "ಅಚಃ" ಸೂತ್ರವು ಅನುವೃತ್ತವಾಗುತ್ತದೆ. "ಅಲ್ಲೋಪೋಽನಃ" ಸೂತ್ರದಿಂದ "ಅತ್" ಅನುವೃತ್ತಿ. ಅದು ಲುಪ್ತಷಷ್ಠೀಕ. ಅತಃ ಎಂದಿರಬೇಕಿತ್ತು. "ಭಸ್ಯ" ಅಧಿಕಾರ. ಉದಃ ಪಂಚಮೀ. ಪರಕ್ಕೆ ಎಂದು ಲಬ್ಧವಾಗುತ್ತದೆ. **ಸೂತ್ರಾರ್ಥ.** ಉದ್ ಎಂಬ ಪದದ (ಉಪಸರ್ಗ) ಪರದಲ್ಲಿರುವ ಭ ಸಂಜ್ಞೆಯುಳ್ಳ, ನಕಾರ ಲೋಪ ಹೊಂದಿದ, ಅಂಚು ಧಾತುವಿನ ಅಕಾರಕ್ಕೆ ಈಕಾರಾದೇಶ ಬರುತ್ತದೆ. ಅಜಾದಿ ಪ್ರತ್ಯಯಪರದಲ್ಲಿರುವುದರಿಂದ ಭ ಸಂಜ್ಞೆ ಇದೆ. ಉದ್ + ಅಚ್ + ಅಸ್ ಎಂದಿರುವಾಗ ಅಚಿನ ಅಕಾರಕ್ಕೆ ಈಕಾರ ಬಂದರೆ ಉದೀಚಃ ಎಂದಾಗುತ್ತದೆ. ಹೀಗೇ ಅಜಾದಿ ಪ್ರತ್ಯಯ ಪರದಲ್ಲಿರುವಾಗ ಅಚಿನ ಅಕಾರಕ್ಕೆ ಈತ್ವ. ತೃ॥ ಉದೀಚಾ— ಉದಗ್ಭ್ಯಾಮ್— ಉದಗ್ಭಿಃ ಇತ್ಯಾದಿ. ಇಲ್ಲಿ ಚಕಾರಕ್ಕೆ ಜಶ್ತ್ವ, ಕುತ್ವ ಬಂದಿದೆ.

---

ಚಕಾರಾಂತ ಸಮ್ಯಞ್ಚ್ ಶಬ್ದ. (ಚನ್ನಾಗಿ ಹೋಗುವವನು)

ಸಮ್ = ಸಮ್ಯಕ್ ಅಂಚತಿ (ಚನ್ನಾಗಿ ನಡೆಯುತ್ತಾನೆ) ಎಂದರ್ಥವಿವಕ್ಷೆ ಮಾಡಿದಾಗ ಸಮ್ ಪೂರ್ವದಲ್ಲಿರುವಾಗ ಅಂಚು ಧಾತುವಿಗೆ ಕ್ವಿನ್. ಸಮ್ಯಞ್ಚ್ ಶಬ್ದ. ಇಲ್ಲಿ ಸಮ್ + ಅಞ್ಚ್ ಎಂದಿರುವಾಗ ಸಮಞ್ಚ್ ಎಂದಾಗಬೇಕಿತ್ತು. ಆದ ಕ್ಕೋಸ್ಕರ ಸಮ್ ಎಂಬುದಕ್ಕೆ ಸಮಿ ಆದೇಶ ಹೇಳುತ್ತಾನೆ.

(ಸಮ್ ಗೆ ಸಮಿ ಆದೇಶ ಹೇಳುವ ಸೂತ್ರ)

## ೩೪೦. ಸಮಃ ಸಮಿ ॥ ೬-೩-೯೩ ॥

**ವಪ್ರತ್ಯಯಾಂತೇಽಞ್ಚತೌ ॥ ಸಮ್ಯಙ್ । ಸಮ್ಯಞ್ಚೌ । ಸಮೀಚಃ ॥ ಸಮ್ಯಗ್ಭ್ಯಾಮ್ ॥ ಇತ್ಯಾದಿ.**

ದ್ವಿಪದ ಸೂತ್ರ. ಸಮಿ ಲುಪ್ತಪ್ರಥಮಾಕ. ಅಲ್ಲಿ ಪ್ರಥಮಾವಿಭಕ್ತಿಲುಪ್ತ ವಾಗಿದೆ. "ವಿಷ್ವಕ್‌ದೇವ"— ಸೂತ್ರದಿಂದ "ವಪ್ರತ್ಯಯೇ" ಅನುವೃತ್ತಿ. "ಅಪ್ರತ್ಯಯೇ" ಎಂದೂ ಬಂದುವುತ. ಪ್ರತ್ಯಯವಾದುದರಿಂದ "ಪ್ರತ್ಯಯಗ್ರಹಣೇ ತದಂತಗ್ರಹಣಮ್" ಪರಿಭಾಷೆಯಿಂದ ತದಂತವನ್ನು ತೆಗೆದುಕೊಳ್ಳಬೇಕು. ಆಗ ವಪ್ರತ್ಯಯಾಂತಪದ ಪರದಲ್ಲಿರುವಾಗ ಎಂದರ್ಥವಾಗುತ್ತದೆ. ಕ್ವಿನ್ನಿನಲ್ಲಿ ವ ಉಳಿಯುವುದರಿಂದ ವಪ್ರತ್ಯಯಾಂತಪದ ಅಞ್ಚ್ ಆಗುತ್ತದೆ. "ಅಪ್ರತ್ಯಯಾಂತೇ" ಎಂದು ಅರ್ಥಮಾಡಿದ್ದರೂ ಅಞ್ಚ್ ಆಗುತ್ತದೆ. ಆಗ ಯಾವ ಪ್ರತ್ಯಯವೂ ಇಲ್ಲದದ್ದು ಎಂದರ್ಥ. ಕ್ವಿನ್ನಿನಲ್ಲಿ ಎಲ್ಲವೂ ಲೋಪವಾಗುವುದರಿಂದ ಅಞ್ಚ್ ಅಪ್ರತ್ಯಯಾಂತವಾಗುತ್ತದೆ. **ಸೂತ್ರಾರ್ಥ.** ಸಮ್ ಶಬ್ದಕ್ಕೆ ವಪ್ರತ್ಯಯಾಂತವಾದ ಅಞ್ಚ್ ಧಾತುಪರವಾದಾಗ ಸಮಿ ಆದೇಶ ಬರುತ್ತದೆ. ಪ್ರಕೃತ ಅಞ್ಚ್ ಹಾಗಿರುವುದರಿಂದ ಸಮಿ ಆದೇಶ ಬಂದರೆ ಸಮಿ + ಅಞ್ಚ್. ಹಿಂದಿನಂತೆ ನಲೋಪ. ನುಮ್. ಕುತ್ವ.

ಸಮ್ಯಙ್. ಟಾ ಮುಂತಾದ ಅಚಾದಿಯಲ್ಲಿ ನಲೋಪ, ನುಮ್, ಅನುಸ್ವಾರ ಪರಸವರ್ಣ. ಸಮ್ಯಞ್ಚಾ-ಸಮ್ಯಞ್ಚಃ ಇತ್ಯಾದಿ ಹಿಂದಿನಂತೇ ತಿಳಿಯಬೇಕು. ಶಸಾದಿ ಪರವಾದಾಗ ಭಸಂಜ್ಞೆಯಿರುವುದರಿಂದ "ಅಚಃ" ಸೂತ್ರದಿಂದ ಅಚಿನ ಅಕಾರಕ್ಕೆ ಲೋಪ. "ಚೌ" ಸೂತ್ರದಿಂದ ಪೂರ್ವದಲ್ಲಿರುವ ಸಮಿನ ಇಕಾರಕ್ಕೆ (ಅಣ್) ದೀರ್ಘ. ಸಮೀಚಃ ॥ ತೃ, ಸಮೀಚಾ-ಸಮ್ಯಗ್ಭ್ಯಾಮ್-ಇತ್ಯಾದಿ ಹಿಂದಿನಂತೇ ತಿಳಿಯಬೇಕು.

---

ಚಕಾರಾಂತ "ಸಧ್ರ್ಯಞ್ಚ್" ಶಬ್ದ. (ಒಟ್ಟಿಗೆ ಹೋಗುವವನು)

ಸಹ ಉಪಪದವಾಗಿರುವಾಗ ಅಂಚು ಧಾತುವಿಗೆ ಕ್ವಿನ್ ಪ್ರತ್ಯಯ. ಸಹ+ಅಞ್ಚ್ ಎಂದಿರುವಾಗ ಸಹ ಎಂಬುದಕ್ಕೆ ಸಧ್ರಿ ಆದೇಶ ಹೇಳುತ್ತಾನೆ.

(ಸಹಕ್ಕೆ ಸಧ್ರಿ ಆದೇಶ ಹೇಳುವ ಸೂತ್ರ)

## ೩೪೧. ಸಹಸ್ಯ ಸಧ್ರಿಃ ॥ ೬-೩-೯೫ ॥

**ತಥಾ ॥ ಸಧ್ರ್ಯಙ್ ॥ ಇತ್ಯಾದಿ.**

**ತಥಾ ॥ ಸಧ್ರ್ಯಙ್ ॥ ಇತ್ಯಾದಿ.**

ದ್ವಿಪದ ಸೂತ್ರ. ಹಿಂದಿನಂತೇ "ವಪ್ರತ್ಯಯೇ" ಅನುವೃತ್ತಿ. ಹಿಂದಿನಂತೇ ಅನುವೃತ್ತ್ಯಾದಿಗಳಿರುವುದರಿಂದ ತಥಾ ಅಂದರೆ ಹಾಗೆ ಎಂದು ವೃತ್ತಿ ಬರೆದಿರುತ್ತಾನೆ. **ಸೂತ್ರಾರ್ಥ.** ವಪ್ರತ್ಯಯಾಂತವಾದ ಅಞ್ಚುಧಾತು ಪರವಾದಾಗ ಸಹ ಎಂಬುದಕ್ಕೆ ಸಧ್ರಿ ಆದೇಶ ಬರುತ್ತದೆ. ಪ್ರಕೃತ ಹಾಗೆ ಆದೇಶ ಬಂದರೆ ಸಧ್ರಿ+ಅಞ್ಚ್. ಯಣ್. ಸಧ್ರ್ಯಞ್ಚ್ ಎಂದಾಗುತ್ತದೆ. ಹಿಂದಿನಂತೇ ನಲೋಪ, ನುಮ್, ಕುತ್ವಾದಿಕಾರ್ಯ ತಿಳಿಯಬೇಕು. ಸಧ್ರ್ಯಙ್-ಸಧ್ರ್ಯಞ್ಚೌ ಸಧ್ರ್ಯಞ್ಚಃ ಇತ್ಯಾದಿ. ಶಸಾದಿಗಳಲ್ಲಿ ಅಚಿನ ಅಕಾರಕ್ಕೆ ಲೋಪ ಬಂದು ಹಿಂದಿನ ಇಕಾರಕ್ಕೆ ದೀರ್ಘ ಬಂದರೆ ಸಧ್ರೀಚಃ ಸಧ್ರೀಚಾ ಇತ್ಯಾದಿ ರೂಪಗಳು ಹಿಂದಿನಂತೇ ಆಗುತ್ತವೆ. ಹಲಾದಿಯಲ್ಲಿ ಜಶ್ತ್ವ ಕುತ್ವ. ಸಧ್ರ್ಯಗ್ಭ್ಯಾಮ್ ಇತ್ಯಾದಿ.

ಚಕಾರಾಂತ ಪುಲ್ಲಿಂಗ "ತಿರ್ಯಞ್ಚ್" ಶಬ್ದ. (ಅಡ್ಡವಾಗಿ ಹೋಗುವುದು ಪಶುಪಕ್ಷ್ಯಾದಿ)

ತಿರ್ಯಕ್ ಅಂಚತಿ. ಅಡ್ಡವಾಗಿ ಹೋಗುತ್ತದೆ ಎಂಬ ಅರ್ಥದಲ್ಲಿ ತಿರಸ್ ಎಂಬ ಪದವು ಉಪಪದವಾಗಿರುವಾಗ ಅಂಚು ಧಾತುವಿಗೆ ಕ್ವಿನ್ ಪ್ರತ್ಯಯ. ತಿರಸ್+ಅಞ್ಚ್ ಎಂದಿರುವಾಗ ತಿರಸ್ ಶಬ್ದಕ್ಕೆ ತಿರಿ ಆದೇಶ ಹೇಳುತ್ತಾನೆ.

(ತಿರಸ್ ಶಬ್ದಕ್ಕೆ ತಿರಿ ಆದೇಶ ಹೇಳುವ ಸೂತ್ರ)

## ೩೪೨. ತಿರಸಸ್ತಿರ್ಯಲೋಪೇ ॥ ೬-೩-೯೪ ॥

ಅಲುಪ್ತಾಕಾರೇಽಞ್ಚತಾ ವಪ್ರತ್ಯಯಾಂತೇ ತಿರಸಸ್ತಿರ್ಯಾದೇಶಃ ॥ ತಿರ್ಯಙ್ । ತಿರ್ಯಞ್ಚೌ । ತಿರಶ್ಚಃ । ತಿರ್ಯಗ್ಭ್ಯಾಮ್ ॥

ತಿರಸಃ ತಿರಿ, ಅಲೋಪೇ ॥ ತ್ರಿಪದಸೂತ್ರ. ತಿರಿ ಲುಪ್ತಪ್ರಥಮಾಕ. (ತಿರಿಃ) ಪ್ರಥಮಾಲುಪ್ತವಾಗಿದೆ. "ವಿಷ್ವಗ್ದೇವ"-ಸೂತ್ರದಿಂದ "ಅಞ್ಚತೌ" "ಅಪ್ರತ್ಯಯೇ" ಅನುವೃತ್ತಿ. "ನವಿದ್ಯತೇ ಅಲೋಪಃ ಯಸ್ಮಿನ್ ಸಃ" ಅಲೋಪಃ. ತಸ್ಮಿನ್ ಅಲೋಪೇ. ಅಲೋಪವಿಲ್ಲದಿರುವ ಅಂಚುಧಾತು ಪರವಾದಾಗ ಎಂದರ್ಥ. ಸೂತ್ರಾರ್ಥ. ಅಕಾರಲೋಪ ಹೊಂದದಿರುವ ವಪ್ರತ್ಯಯಾಂತವಾದ ಅಞ್ಚ್ ಧಾತುಪರದಲ್ಲಿರುವಾಗ ತಿರಸ್ ಶಬ್ದಕ್ಕೆ ತಿರಿ ಎಂಬ ಆದೇಶ ಬರುತ್ತದೆ. ಪ್ರಕೃತ ಅಂಚಿನ ಅಕಾರಲೋಪ ಬಂದಿಲ್ಲ. ಕ್ವಿನ್ನಂತವಾದುದರಿಂದ ವಪ್ರತ್ಯಯಾಂತವಾಗಿದೆ. ತಿರಿ ಆದೇಶ ಬಂದರೆ ತಿರಿ+ಅಞ್ಚ್ ಎಂದಾದಾಗ ಯಣ್. ತಿರ್ಯಞ್ಚ್. ಸುಮುಂತಾದ ಸರ್ವನಾಮಸ್ಥಾನ ಪರವಾದಾಗ ನಲೋಪ. ನುಮ್. ಅನುಸ್ವಾರ, ಪರಸವರ್ಣ ಕಾರ್ಯಗಳು ಹಿಂದಿನಂತೆ. ತಿರ್ಯಙ್ ತಿರ್ಯಞ್ಚೌ-ತಿರ್ಯಞ್ಚಃ ಇತ್ಯಾದಿ. ಶಸಾದಿ ಅಜಾದಿಯಲ್ಲಿ ಭಸಂಜ್ಞೆಯಿರುವುದರಿಂದ "ಅಚಃ" ಸೂತ್ರದಿಂದ ಅಞ್ಚುವಿನ ಅಕಾರಕ್ಕೆ ಲೋಪ. ಆಗ ಅಲೋಪ ಹೊಂದಿದ ಅಞ್ಚು ಧಾತು ಪರವಾದುದರಿಂದ ತಿರಸ್ ಶಬ್ದಕ್ಕೆ ತಿರಿ ಆದೇಶ ಬರುವುದಿಲ್ಲ. ತಿರಸ್ ಚ್+ಅಸ್. ಸಕಾರಕ್ಕೆ ಚವರ್ಗದ (ಚ) ಯೋಗವಿರುವುದರಿಂದ "ಸ್ತೋಃ ಶ್ಚುನಾಶ್ಚುಃ" ಸೂತ್ರದಿಂದ ಸಕಾರಕ್ಕೆ ಶಕಾರಾದೇಶ. ತಿರಶ್ಚಃ । ತೃ-ತಿರಶ್ಚಾ-ಇತ್ಯಾದಿ. ಹಲಾದಿಯಲ್ಲಿ ಅಲೋಪವಾಗದಿರುವುದರಿಂದ ತಿರಸ್ ಶಬ್ದಕ್ಕೆ ತಿರಿ ಆದೇಶಬರುತ್ತದೆ. ತಿರ್ಯಗ್ಭ್ಯಾಮ್ ಇತ್ಯಾದಿ. ಇದುವರೆಗೆ ಸುಬಂತ ಉಪಪದವಾಗಿರುವಾಗ ಅಂಚುಧಾತುವಿಗೆ ಕ್ವಿನ್ ಹೇಳಿ ರೂಪವನ್ನು ಹೇಳಿರುತ್ತಾನೆ. ಅಂಚು ಧಾತುವಿಗೆ ಎರಡು ಅರ್ಥಗಳಿವೆ. "ಅಂಚು, ಗತಿಪೂಜನಯೋಃ" ಗತ್ಯರ್ಥ, ಪೂಜಾರ್ಥ, ಈ ಎರಡು ಅರ್ಥಗಳಲ್ಲಿ ಅಂಚುಧಾತುವಿದೆ. ಇದುವರೆಗೆ ಹೇಳಿದ ರೂಪಗಳು ಗತ್ಯರ್ಥದಲ್ಲಿ ಮಾತ್ರ. ಪೂಜಾರ್ಥದಲ್ಲಿ ಕ್ವಿನ್ ಬಂದಾಗ ವಿಶೇಷ ಹೇಳುತ್ತಾನೆ.

(ಅಂಚುವಿನ ನಲೋಪ ನಿಷೇಧ ಹೇಳುವ ಸೂತ್ರ)

## ೩೪೩. ನಾಞ್ಚೇಃ ಪೂಜಾಯಾಮ್ ॥ ೬-೪-೩೦ ॥

ಪೂಜಾರ್ಥಸ್ಯ ಅಂಚತೇರುಪಧಾಯಾ ನಸ್ಯ ಲೋಪೋ ನ । ಪ್ರಾಙ್ । ಪ್ರಾಞ್ಚೌ । ನಲೋಪಾಭಾವಾದಲೋಪೋ ನ । ಪ್ರಾಞ್ಚಃ । ಪ್ರಾಙ್ಭ್ಯಾಮ್ । ಪ್ರಾಙ್ಕ್ಷು ॥ ಏವಂ ಪೂಜಾರ್ಥೇ ಪ್ರತ್ಯಙ್ಙಾದಯಃ । ಕ್ರುಙ್ । ಕ್ರುಞ್ಚೌ । ಕ್ರುಙ್ಭ್ಯಾಮ್ ॥

**ಪಯೋಮುಕ್, ಪಯೋಮುಗ್ । ಪಯೋಮುಚೌ । ಪಯೋಮುಗ್ಭ್ಯಾಮ್ ॥**

ನ, ಅಂಚೇಃ, ಪೂಜಾಯಾಮ್॥ ತ್ರಿಪದ ಸೂತ್ರ. "ಅನಿದಿತಾಂ"-ಸೂತ್ರದಿಂದ "ಉಪಧಾಯಾಃ" "ಕ್ಙಿತಿ" ಎಂದೂ "ಶ್ನಾನ್ನಲೋಪಃ" ಸೂತ್ರದಿಂದ "ನ ಲೋಪಃ" ಎಂದೂ ಅನುವೃತ್ತವಾಗುತ್ತದೆ. **ಸೂತ್ರಾರ್ಥ.** ಪೂಜಾರ್ಥದಲ್ಲಿರುವ ಅಂಚು ಧಾತುವಿನ ಉಪಧೆಯಾದ ನಕಾರಕ್ಕೆ ಕಿತ್ ಙಿತ್ ಆದ ಪ್ರತ್ಯಯ ಪರವಾದಾಗ ಲೋಪ ಬರುವುದಿಲ್ಲ. ಪ್ರಾನ್ಚ್ ಎಂದಿರುವಾಗ ನಲೋಪ ಬಾರದಿದ್ದರೆ ಸಂಯೋಗಾಂತವಾದುದರಿಂದ "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ಚಕಾರಕ್ಕೆ ಲೋಪ. "ಕ್ವಿನ್ಪ್ರತ್ಯಯಸ್ಯ ಕುಃ" ಸೂತ್ರದಿಂದ ನಕಾರಕ್ಕೆ ಕುತ್ವ ಬಂದರೆ ಙಕಾರ. ಪ್ರಾಙ್. ದ್ವಿವಚನಾದಿಗಳಲ್ಲಿ ಯಾವ ಕಾರ್ಯವೂ ಇಲ್ಲ. ಪ್ರಾಞ್ಚೌ-ಪ್ರಾಞ್ಚಃ ಇತ್ಯಾದಿ. ಶಸಾದಿಯಲ್ಲಿ ನಲೋಪ ಬಾರದಿರುವುದರಿಂದ ಅಂಚುವಿನ ಅಕಾರಕ್ಕೆ ಲೋಪವಿಲ್ಲ. ಅಕಾರಕ್ಕೆ ಲೋಪ ಬಾರದಿದ್ದರೆ ಪೂರ್ವಕ್ಕೆ ದೀರ್ಘಾದಿ ಕಾರ್ಯಗಳೂ ಇಲ್ಲ. ಪ್ರಾಞ್ಚಃ। ತೃ. ಪ್ರಾಞ್ಚಾ ಇತ್ಯಾದಿ. ಹಲಾದಿಯಲ್ಲಿ ಪದಸಂಜ್ಞೆಯಿರುವುದರಿಂದ ಪ್ರಾಞ್ಚ್+ಭ್ಯಾಮ್ ಎಂದಿರುವಾಗ ಸಂಯೋಗಾಂತ ಲೋಪ. ಪ್ರಾನ್+ಭ್ಯಾಮ್. ಕುತ್ವ. ಪ್ರಾಙ್ಭ್ಯಾಮ್. ಇತ್ಯಾದಿ. ಪ್ರಾನಚ್+ಸು ಎಂದಿರುವಾಗ ಸಂಯೋಗಾಂತ ಲೋಪ. ಕುತ್ವ. ಪ್ರಾಙ್+ಸು. "ಙ್ಣೋಃ ಕುಕ್ ಟುಕ್ ಶರಿ" ಸೂತ್ರದಿಂದ "ಶರ್" (ಸು) ಪರದಲ್ಲಿರುವುದರಿಂದ ಙಕಾರಕ್ಕೆ ಕುಕ್ ಆಗಮ. ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ಪ್ರಾಙ್ಕ್ ಸು. "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷತ್ವ. ಪ್ರಾಙ್ಕ್‌ಷು. ಪ್ರಾಙಕ್ಷು. ಪ್ರಾಙ್ ಕ್‌ಷು ಎಂದಿರುವಾಗ "ಚಯೋಃ ದ್ವಿತೀಯಾ ಶರಿ ಪೌಷ್ಕರಸಾದೇರಿತಿ ವಾಚ್ಯಮ್" ವಾರ್ತಿಕದಿಂದ ಕಕಾರಕ್ಕೆ ವಿಕಲ್ಪವಾಗಿ ದ್ವಿತೀಯಾಕ್ಷರ ಖಕಾರ ಬರುತ್ತದೆ. ಬಂದರೆ ಪ್ರಾಙ್ಖ್‌ಷು. ಬಾರದಿದ್ದರೆ ಪ್ರಾಙ್ಕ್ಷು. ಕುಕಾಗಮ ವಿಕಲ್ಪವಾದುದರಿಂದ ಪ್ರಾಙ್ಷು. ಹೀಗೆ ಮೂರು ರೂಪಗಳಾಗುತ್ತವೆ. ಪೂಜಾರ್ಥದಲ್ಲಿ ಹಿಂದೆ ಹೇಳಿದ ಪ್ರತ್ಯಙ್ಙಾದಿ ಶಬ್ದಗಳಲ್ಲಿಯೂ ಉಪಧಾನಲೋಪ ಬರುವುದಿಲ್ಲ. ಹಿಂದಿನಂತೇ ರೂಪವಾಗುತ್ತದೆ. ಪ್ರತ್ಯಙ್-ಪ್ರತ್ಯಞ್ಚೌ-ಪ್ರತ್ಯಞ್ಚಃ ಇತ್ಯಾದಿ. ಹಲಾದಿಯಲ್ಲಿ ಪ್ರತ್ಯಙ್ಭ್ಯಾಮ್ ಇತ್ಯಾದಿ. ಸುವಿನಲ್ಲಿ ಪ್ರತ್ಯಙ್ಕ್ಷು-ಪ್ರತ್ಯಙ್ಖ್‌ಷು-ಪ್ರತ್ಯಙ್‌ಷು.

---

ಚಕಾರಾಂತ ಕ್ರುಞ್ಚ್ ಶಬ್ದ. (ನೀರಿನಲ್ಲಿರುವ ಪಕ್ಷಿವಿಶೇಷ)

ಕ್ರುಞ್ಚ=ಕೌಟಿಲ್ಯ ಅಲ್ಪೀಭಾವಯೋಃ. ಧಾತು "ಋತ್ವಿಕ್‌ದಧೃಕ್"-ಸೂತ್ರದಿಂದ ಕ್ವಿನ್ ಪ್ರತ್ಯಯ. ನಲೋಪಾಭಾವವು ಅದರಿಂದಲೇ ನಿಪಾತಿತವಾಗಿದೆ. ಸುವಿನಲ್ಲಿ ಸಂಯೋಗಾಂತಲೋಪ. "ಕ್ವಿನ್ ಪ್ರತ್ಯಯಸ್ಯ ಕುಃ" ಸೂತ್ರದಿಂದ ಙಕಾ

ರಕ್ಕೆ ಕುತ್ವ. ಐಕಾರ. ಇದು ನೋಪಧವಲ್ಲ. ಇಕಾರೋಪಧವಾದ ಧಾತು. ಕ್ರುಂಚ್ -ಕ್ರುಙ್ಕ್ -ಕ್ರುಙ್ಕ್ಷಃ ಇತ್ಯಾದಿ. ಹಲಾದಿಯಲ್ಲಿ ಸಂಯೋಗಾಂತಲೋಪ ಬಂದಾಗ ಹಿಂದಿನಂತೆ ಕುತ್ವ. ಕ್ರುಙ್ಭ್ಯಾಮ್ ಇತ್ಯಾದಿ. ಸಪ್ತಮೀ ಸುವಿನಲ್ಲಿ ಕ್ರುಙ್ಕ್ಷು. ಕ್ರುಙ್ಖ್ಷು, ಕ್ರುಙ್ಷು. ಹೀಗೆ ಮೂರು ರೂಪಗಳನ್ನು ಹಿಂದಿನಂತೇ ತಿಳಿಯ ಬೇಕು.

---

ಚಕಾರಾಂತ ಪಯೋಮುಚ್‌ಶಬ್ದ. (ಮೋಡ)

ಪಯಃ ಮುಂಚತಿ=ನೀರು ಬಿಡುವುದು. ಮುಚ್ಲೃ ಮೋಕ್ಷಣೇ ಧಾತು ಕ್ವಿಪ್‌ಪ್ರತ್ಯಯ. ಪಯೋಮುಚ್+ಸ್. "ಹಲ್‌ಙ್ಯಾಭ್ಯೋ"-ಸೂತ್ರದಿಂದ ಸುಲೋಪ. "ಚೋಃ ಕುಃ" ಸೂತ್ರದಿಂದ ಚಕಾರಕ್ಕೆ ಕಕಾರಾದೇಶ. "ಝಲಾಂ ಜಶೋಂತೇ" ಸೂತ್ರದಿಂದ ಕಕಾರಕ್ಕೆ ಗಕಾರಾದೇಶ. ಪಯೋಮುಗ್. "ವಾವ ಸಾನೇ" ಸೂತ್ರದಿಂದ ಗಕಾರಕ್ಕೆ ವಿಕಲ್ಪವಾಗಿ ಚರ್ ಬಂದರೆ ಪಯೋಮುಕ್ ಎಂದಾಗುತ್ತದೆ. ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಪಯೋಮುಚೌ ಪಯೋಮುಚಃ ಇತ್ಯಾದಿ. ಸಪ್ತಮೀಸುವಿನಲ್ಲಿ ಪಯೋಮುಚ್+ಸು ಎಂದಿರುವಾಗ "ಝಲಾಂ ಜಶೋಂತೆ" ಸೂತ್ರದಿಂದ ಚಕಾರಕ್ಕೆ ಜಕಾರ. "ಚೋಃಕುಃ" ಸೂತ್ರದಿಂದ ಕುತ್ವ ಬಂದರೆ ಜಕಾರಕ್ಕೆ ಗಕಾರ ಬರುತ್ತದೆ. "ಖರಿಚ" ಸೂತ್ರದಿಂದ ಅದಕ್ಕೆ ಕಕಾರಾದೇಶ. ಪಯೋಮುಕ್+ಸು "ಆದೇಶಪ್ರತ್ಯಯಯೋಃ" ಸೂತ್ರದಿಂದ ಕವರ್ಗದ ಪರದಲ್ಲಿರುವುದರಿಂದ ಸಕಾರಕ್ಕೆ ಷತ್ವ. ಪಯೋಮುಕ್+ಷು= ಪಯೋಮುಕ್ಷು.

ಇತಿ ಚಾಂತಾಃ



ತಕಾರಾಂತ ಮಹತ್ ಶಬ್ದ. (ದೊಡ್ಡದು)

ಮಹ ಪೂಜಾಯಾಮ್. ಧಾತು. ಅತಿ ಪ್ರತ್ಯಯ. ಶತೃಪ್ರತ್ಯಯದಂತೆ ಕಾರ್ಯವಾಗುತ್ತದೆ ಎಂದು ಉಣಾದಿ ಸೂತ್ರದಲ್ಲಿ ಹೇಳಿದೆ. ಆಗ ಮಹತ್ ಉಗಿತ್ತಿನಂತಾಗುತ್ತದೆ. ಉಗಿತ್ತಾದುದರಿಂದ ಸರ್ವನಾಮಸ್ಥಾನ ಪರವಾದಾಗ (ಸುಟ್) "ಉಗಿದಚಾಂ"-ಸೂತ್ರದಿಂದ ನುಮಾಗಮ. ಮಹನ್ತ್+ಸ್. ಈಗ ನಕಾರದ ಪೂರ್ವಕ್ಕೆ ದೀರ್ಘ ಹೇಳುತ್ತಾನೆ.

(ನಕಾರದ ಉಪಧೆಗೆ ದೀರ್ಘ ಹೇಳುವ ಸೂತ್ರ)

**೩೪೪. ಸಾಂತಮಹತಃ ಸಂಯೋಗಸ್ಯ ॥ ೬-೪-೧೦ ॥**

**ಸಾಂತಸಂಯೋಗಸ್ಯ ಮಹತಶ್ಚ ಯೋ ನಕಾರಸ್ತಸ್ಯೋಪಧಾಯಾ**

**ದೀರ್ಘೋಽಸಂಬುದ್ಧೌ ಸರ್ವನಾಮಸ್ಥಾನೇ ॥ ಮಹಾನ್ । ಮಹಾಂತೌ । ಮಹಾನ್ತಃ । ಹೇ ಮಹನ್ । ಮಹದ್ಭ್ಯಾಮ್ ॥**

ಸಾಂತ, ಮಹತಃ, ಸಂಯೋಗಸ್ಯ ॥ ತ್ರಿಪದಸೂತ್ರ. "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರವೂ "ಢ್ರಲೋಪೇ"-ಸೂತ್ರದಿಂದ "ದೀರ್ಘಃ" ಪದವೂ "ನೋಪಧಾಯಾಃ" ಸೂತ್ರವೂ ಅನುವೃತ್ತವಾಗುತ್ತವೆ. ಸ ಎಂಬುದು ಲುಪ್ತ ಷಷ್ಠೀಕನೆಂದು ಹಿಂದೆ ಹೇಳಿದೆ. ಉಪಧೆಯಲ್ಲಿ ಅದಕ್ಕೆ ಅನ್ವಯ. ನಕಾರದ ಉಪಧೆಗೆ ಎಂದರ್ಥ. ಸಾಂತವೆಂಬುದೂ ಷಷ್ಠ್ಯಂತಪದ. ಅಲ್ಲಿ ಷಷ್ಠೀ ಲೋಪವಾಗಿದೆ. ಸಂಯೋಗಸ್ಯ ಎಂಬಲ್ಲಿ ಅದಕ್ಕೆ ಅಭೇದಾನ್ವಯ. ಮಹತಃ ಅವಯವ ಷಷ್ಠೀ. ನಕಾರದಲ್ಲಿ ಅದಕ್ಕೆ ಅನ್ವಯ. **ಸೂತ್ರಾರ್ಥ.** ಸಂಬುದ್ಧಿಯಲ್ಲದ ಸರ್ವನಾಮಸ್ಥಾನಪರದಲ್ಲಿರುವಾಗ ಸಕಾರಾಂತವಾದ ಸಂಯೋಗದ ಉಪಧೆಗೂ ಮಹತ್ ಶಬ್ದಾವಯವವಾದ ನಕಾರದ ಉಪಧೆಗೂ ದೀರ್ಘಬರುತ್ತದೆ. ಮಹನ್‌ತ್+ಸ್ ಎಂದಿರುವಾಗ ಸರ್ವನಾಮಸ್ಥಾನಪರದಲ್ಲಿದೆ. ಅಲ್ಲಿ ಮಹಚ್ಛಬ್ದದ ನಕಾರದ ಉಪಧೆಯೆಂದರೆ ಹಕಾರದ ಮೇಲಿರುವ ಅಕಾರ. ಅದಕ್ಕೆ ದೀರ್ಘಬಂದರೆ ಮಹಾನ್‌ತ್+ಸ್ ಎಂದಾಗುತ್ತದೆ. "ಹಲ್‌ಙ್ಯಾಭ್ಯೋ"-ಸೂತ್ರದಿಂದ ಸುಲೋಪ. "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ತಕಾರಲೋಪ. ಈ ಲೋಪಬಂದುದು ಅಸಿದ್ಧವಾದುದರಿಂದ "ನ ಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ ಬರುವುದಿಲ್ಲ. ಮಹಾನ್. ಮಹತ್+ಔ ಎಂದಿರುವಾಗ "ಉಗಿದಚಾಂ"-ಸೂತ್ರದಿಂದ ನುಮಾಗಮ. "ಸಾಂತಮಹತಃ"-ಸೂತ್ರದಿಂದ ನಕಾರದ ಉಪಧೆಗೆ ದೀರ್ಘ. ಮಹನ್‌ತ್+ಔ ಎಂದಿರುವಾಗ ಅಪದಾಂತನಕಾರಕ್ಕೆ "ನಶ್ಚಾಪದಾಂತಸ್ಯ"-ಸೂತ್ರದಿಂದ ಅನುಸ್ವಾರಕ್ಕೆ ಪರಸವರ್ಣ. (ನ) ಮಹಾನ್ತೌ. ಮಹತ್+(ಜ್) ಅಸ್ ಎಂದಿರುವಾಗ ಹೀಗೇ ಕಾರ್ಯ ಬಂದರೆ ಮಹಾನ್ತಃ ಎಂದಾಗುತ್ತದೆ. ಸಂಬುದ್ಧಿಯಲ್ಲಿ ನಿಷೇದಮಾಡಿರುವುದರಿಂದ ದೀರ್ಘವಿಲ್ಲ. ಹೇ ಮಹಾನ್-ಹೇಮಹಾನ್ತೌ-ಹೇ ಮಹಾನ್ತಃ ॥ ದ್ವಿ-ಮಹಾನ್ತಮ್-ಮಹಾನ್ತೌ-ಶಸಾದಿ ಅಜಾದಿಗಳಲ್ಲಿ ಕೇವಲ ಪ್ರತ್ಯಯ ಸೇರಿಸುವುದು ಮಾತ್ರ. ಮಹತಃ । ತೃ-ಮಹತಾ. ಭ್ಯಾಮಾದಿಗಳಲ್ಲಿ ಪದಸಂಜ್ಞೆಯಿರುವುದರಿಂದ "ಝಲಾಂ ಜಶೋಂತೇ" ಸೂತ್ರದಿಂದ ತಕಾರಕ್ಕೆ ಜಶ್ತ್ವ. ಮಹದ್ಭ್ಯಾಮ್ ಮಹದ್ಭಿಃ । ಇತ್ಯಾದಿ. ಸಪ್ತಮೀಸುವಿನಲ್ಲಿ ತಕಾರಕ್ಕೆ ಜಶ್ತ್ವ ಬಂದಾಗ "ಖರಿಚ" ಸೂತ್ರದಿಂದ ಅದಕ್ಕೆ ಪುನಃ ತಕಾರ ಮಹತ್ಸು.

---

ತಕಾರಾಂತ ಧೀಮತ್ ಶಬ್ದ. (ಬುದ್ಧಿವಂತ)

ಧೀಃ ಅಸ್ಯ ಅಸ್ತಿ ಇತಿ ಧೀಮಾನ್. ಬುದ್ಧಿ ಇವನಿಗೆ ಇದೆ ಎಂಬರ್ಥದಲ್ಲಿ ಧೀ ಶಬ್ದದಮೇಲೆ ಮತುಪ್‌ಪ್ರತ್ಯಯ. ಧೀಮತ್‌ಶಬ್ದ. ಇದಕ್ಕೆ ಸುಪರವಾದಾಗ ದೀರ್ಘ ಹೇಳುತ್ತಾನೆ.

(ಅತ್ವಂತ, ಅಸಂತಗಳಿಗೆ ದೀರ್ಘ ಹೇಳುವ ಸೂತ್ರ)

**೩೪೫. ಅತ್ವಸಂತಸ್ಯ ಚಾಧಾತೋಃ ॥ ೬-೪-೧೪ ॥**

**ಅತ್ವಂತಸ್ಯೋಪಧಾಯಾ ದೀರ್ಘೋ ಧಾತುಭಿನ್ನಾಸಂತಸ್ಯ ಚಾಸಂಬುದ್ಧೌ ಸೌ ಪರೇ ॥ ಉಗಿತ್ತ್ವಾನ್ನುಮ್। ಧೀಮಾನ್। ಧೀಮಂತೌ। ಧೀಮಂತಃ। ಹೇ ಧೀಮನ್। ಶಸಾದೌ ಮಹದ್ವತ್ ॥ ಭಾತೇರ್ಡವತುಃ। ಡಿತ್ವಸಾಮರ್ಥ್ಯಾದಭಸ್ಯಾಪಿ ಟೇರ್ಲೋಪಃ। ಭವಾನ್ ಭವಂತೌ। ಭವಂತಃ। ಶತ್ರಂತಸ್ಯ ಭವನ್ ॥**

ಅತು, ಅಸಂತಸ್ಯ, ಚ, ಅಧಾತೋಃ ॥ ನಾಲ್ಕು ಪದಗಳುಳ್ಳ ಸೂತ್ರ. ಅತು ಎಂಬುದು ಲುಪ್ತ ಷಷ್ಠೀಕ. ಅಲ್ಲಿ ಷಷ್ಠೀಲೋಪವಾಗಿದೆ, ಅತೋಃ ಎಂದಿರಬೇಕಿತ್ತು. "ಅಂಗಸ್ಯ" ಅಧಿಕಾರ. ಇದಕ್ಕೆ ಅತು ವಿಶೇಷಣ. ಅತು ಅಂತವಾದ ಅಂಗದ ಎಂದರ್ಥವಾಗುತ್ತದೆ. "ಅಧಾತೋಃ" ಎಂಬುದು "ಅಸಂತಸ್ಯ" ಎಂಬಲ್ಲಿ ಅನ್ವಯಹೊಂದುತ್ತದೆ. ಧಾತುಭಿನ್ನವಾದ ಅಸಂತದ ಎಂದರ್ಥ. "ಸರ್ವನಾಮಸ್ಥಾನೇ ಚಾಸಂಬುದ್ಧೌ ಸೂತ್ರದಿಂದ "ಅಸಂಬುದ್ಧೌ" "ಸೌಚ" ಸೂತ್ರದಿಂದ "ಸೌ" "ನೋಪಧಾಯಾಃ" ಸೂತ್ರದಿಂದ "ಉಪಧಾಯಾಃ" "ಢ್ರಲೋಪೇ—" ಸೂತ್ರದಿಂದ "ದೀರ್ಘಃ" ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ. ಸಂಬುದ್ಧಿಭಿನ್ನವಾದ ಸುಪರದಲ್ಲಿರುವಾಗ ಅತು ಅಂತವಾದ ಅಂಗದ ಉಪಧೆಗೂ, ಧಾತುಭಿನ್ನವಾದ ಅಸಂತದ ಉಪಧೆಗೂ ದೀರ್ಘ ಬರುತ್ತದೆ. ಪ್ರಕೃತ ಮತುಪ್ ಪ್ರತ್ಯಯ ಬಂದುದರಿಂದ ಧೀಮತ್ ಅತುಅಂತವಾಗಿದೆ, ಸುಪರವಾದುದರಿಂದ ಉಪಧಾ ಅಂದರೆ ತಕಾರದ ಹಿಂದಿನ ಅಕಾರಕ್ಕೆ ದೀರ್ಘ. ಧೀಮಾತ್+ಸ್. ಉಗಿತ್ತಾದುದರಿಂದ "ಉಗಿದಚಾಂ—" ಸೂತ್ರದಿಂದ ನುಮಾಗಮ. ಧೀಮಾನ್ ತ್+ಸ್. "ಹಲ್ಙ್ಯಾಭ್ಯೋ—" ಸೂತ್ರದಿಂದ ಸುಲೋಪ. ಸಂಯೋಗಾಂತ ಪದವಾದುದರಿಂದ "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ತಕಾರಕ್ಕೆ ಲೋಪ. ಇದು ಅಸಿದ್ಧವಾದುದರಿಂದ "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ ಬರುವುದಿಲ್ಲ. ಧೀಮಾನ್. ಇನ್ನು ಔ ಮುಂತಾದ ಸರ್ವನಾಮಸ್ಥಾನ ಪರವಾದಾಗ "ಉಗಿದಚಾಂ—" ಸೂತ್ರದಿಂದ ನುಮಾಗಮ. ಧೀಮನ್+ತ್+ಔ. ನಕಾರಕ್ಕೆ ಅನುಸ್ವಾರ, ಪರಸವರ್ಣ. ಸುವಿನಲ್ಲಿ ಮಾತ್ರ ದೀರ್ಘಹೇಳಿರುವುದರಿಂದ ದೀರ್ಘವಿಲ್ಲ. ಧೀಮನ್ತೌ – ಧೀಮನ್ತಃ ॥ ಅಸಂಬುದ್ಧೌ ಎಂದುದರಿಂದ ಸಂಬುದ್ಧಿಸುವಿನಲ್ಲಿ ದೀರ್ಘವಿಲ್ಲ. ಹೇ ಧೀಮನ್–ಹೇ ಧೀಮನ್ತೌ-ಹೇ ಧೀಮನ್ತಃ ॥ ದ್ವಿ-ಧೀಮನ್ತಮ್-ಧೀಮನ್ತೌ-ಧೀಮತಃ। ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಹಲಾದಿಯಲ್ಲಿ ಜಶ್ತ್ವ. ಮಹತ್‌ಶಬ್ದದಂತೇ ರೂಪ. ತೃ-ಧೀಮತಾ-ಧೀಮದ್ಭ್ಯಾಮ್-ಧೀಮದ್ಭಿಃ ಇತ್ಯಾದಿ.

———

### ತಕಾರಾಂತ ಭವತ್‌ಶಬ್ದ (ಆಗುವವನು)

ಭವತ್‌ಶಬ್ದ ಎರಡು ರೀತಿಯಾಗಿದೆ. ಭಾ ದೀಪ್ತೌಧಾತು. ಇದಕ್ಕೆ ಡವತು. ಪ್ರತ್ಯಯ. ಡವತು ಎಂಬಲ್ಲಿ ಉಕಾರ ಇತ್. "ಚುಟೂ" ಸೂತ್ರದಿಂದ ಡಕಾರ. ಇತ್ತಾಗುತ್ತದೆ. ಡಿತ್ತಾದುದರಿಂದ ಭಾ ಧಾತುವಿನ ಟಿಗೆಲೋಪ. ಭ್+ಅವತ್+ ಭವತ್. "ಡಿತ್ವಸಾಮರ್ಥ್ಯಾದಭಸ್ಯಾಪಿ ಟೇರ್ಲೋಪಃ" ಟಿಗೆ ಲೋಪಬರಬೇ. ಕಾದರೆ ಭಸಂಜ್ಞಾ ಇರಬೇಕು. ಡವತು ಪ್ರತ್ಯಯ ಸ್ವಾದಿಕಪ್ರತ್ಯಯಾವಧಿಯಲ್ಲಿ ಸೇರಿಲ್ಲ. ಹೇಗೆ ಟಿಲೋಪ ಹೇಳಿದೆ? ಅಂದರೆ ಡವತುವಿನಲ್ಲಿ ಡಿತ್‌ಮಾಡಿದುದು. ವ್ಯರ್ಥವಾಗುತ್ತೆ. ಅದನ್ನು ನಿಮಿತ್ತೀಕರಿಸಿ ಟಿಲೋಪ ಹೇಳುವುದಾದರೆ ಸಫಲವಾಗು. ತ್ತದೆ. ಡಿತ್ ಮಾಡಿದುದರಿಂದ ಟಿಲೋಪವೆಂದು ಹೇಳಬೇಕು. ಭವತ್ ಉಗಿತ್ತಾ. ದುದರಿಂದ ಧೀಮತ್‌ಶಬ್ದದಂತೇ ಆಗುತ್ತದೆ. ಸುವಿನಲ್ಲಿ "ಅತ್ವಸಂತಸ್ಯ ಚಾಧಾತೋಃ" ಸೂತ್ರದಿಂದ ದೀರ್ಘ. "ಉಗಿದಚಾಂ" ಸೂತ್ರದಿಂದ ನುಮ್. ಸಂಯೋಗಾಂತ. ಲೋಪ. ಭವಾನ್. ಸರ್ವನಾಮಸ್ಥಾನದಲ್ಲಿ ನುಮ್. ಅನುಸ್ವಾರ, ಪರಸವರ್ಣ. ಭವನ್ತೌ-ಭವನ್ತಃ ಇತ್ಯಾದಿ. ಇನ್ನೊಂದು ಭವತ್‌ಶಬ್ದ ಭೂಧಾತುವಿನಿಂದ ಆಗುತ್ತದೆ. ಭೂಸತ್ತಾಯಾಂ-ಧಾತು. ಶತೃಪ್ರತ್ಯಯ. ಶತೃವಿನಲ್ಲಿ ಅತ್ ಉಳಿಯು. ತ್ತದೆ. ಭೂ+ಅತ್ ಎಂದಿರುವಾಗ ಮಧ್ಯೇ ಅ ವಿಕರಣ ಬರುತ್ತದೆ. ಭೂ+ಅ+ಅತ್. ಅ-ನಿಮಿತ್ತೀಕರಿಸಿ ಗುಣ. ಅವಾದೇಶ. ಭವ್+ಅ+ಅತ್. ಭವ+ಅತ್. "ಅತೋಗುಣೇ" ಸೂತ್ರದಿಂದ ಪರರೂಪ. ಭವತ್. ಇಲ್ಲಿ ಸುಪರವಾದಾಗ ದೀರ್ಘ ಬರುವುದಿಲ್ಲ. ಅತು ಅಂತವಾದುದಕ್ಕೆ ಹಿಂದಿನ ಸೂತ್ರದಿಂದ ದೀರ್ಘಹೇಳಿದೆ. ಇದು. ಅತ್ ಅಂತವಾಗಿದೆ. ಅತ್ ಉಕಾರಾಂತವಾಗಿಲ್ಲ. ಶತೃವಿನಲ್ಲಿ ಋಕಾರ ಇತ್ತಾದು. ದರಿಂದ ಉಗಿತ್ತಾಗಿದೆ. ನುಮಾದಿಗಳು ಹಿಂದಿನಂತೆ ಬರುತ್ತವೆ. ಭವನ್-ಭವನ್ತೌ-ಭವನ್ತಃ ॥ ದ್ವಿ ಭವನ್ತಂ-ಭವನ್ತೌ-ಭವತಃ ಇತ್ಯಾದಿ.

---

### ತಕಾರಾಂತ ದದತ್‌ಶಬ್ದ+(ಕೊಡುವವನು)

ದದಾತಿ ಇತಿ ದದತ್. ದಾನಮಾಡುವವನು. ಡುದಾಞ್ ದಾನೇ. ಧಾತು. ಶತೃಪ್ರತ್ಯಯ. ಅತ್ ಉಳಿಯುತ್ತದೆ. ಈ ಧಾತು ಜುಹೋತ್ಯಾದಿ ಗಣದಲ್ಲಿ ಸೇರಿರು. ವುದರಿಂದ ಧಾತುವಿಗೆ ದ್ವಿತ್ವಾದಿಗಳು ಬಂದು ದದತ್ ಎಂದಾಗುತ್ತದೆ. ನುಮಾದಿಗಳು. ಪ್ರಾಪ್ತವಾದರೆ ಅದಕ್ಕೆ ನಿಷೇಧ ಹೇಳುತ್ತಾನೆ. ಅದಕ್ಕೆ ಮೊದಲು ಅಭ್ಯಸ್ತಸಂಜ್ಞೆ. ಹೇಳುತ್ತಾನೆ.

(ಅಭ್ಯಸ್ತಸಂಜ್ಞಾ ಹೇಳುವ ಸೂತ್ರ)

**೩೪೬. ಉಭೇ ಅಭ್ಯಸ್ತಮ್ ॥ ೬-೧-೫ ॥**

**ಷಾಷ್ಠದ್ವಿತ್ವಪ್ರಕರಣೇ ಯೌ ದ್ವೇ ವಿಹಿತೇ ತೇ ಉಭೇ ಸಮುದಿತೇ ಅಭ್ಯಸ್ತಸಂಜ್ಞೇ ಸ್ತಃ ||**

ದ್ವಿಪದಸೂತ್ರ. "ಏಕಾಚೋ ದ್ವೇ ಪ್ರಥಮಸ್ಯ" ಸೂತ್ರದಿಂದ "ದ್ವೇ" ಅನುವೃತ್ತಿ. ದ್ವಿತ್ವ ಎರಡುಕಡೆ ಹೇಳಿದೆ. ಆರನೇ ಅಧ್ಯಾಯದಲ್ಲಿ ಒಂದು ದ್ವಿತ್ವ. ಎಂಟನೇ ಅಧ್ಯಾಯದಲ್ಲಿ ಒಂದು ದ್ವಿತ್ವ. ಇಲ್ಲಿ ಆರನೇ ಅಧ್ಯಾಯದಲ್ಲಿ ಹೇಳಿದ ದ್ವಿತ್ವವೇ ಉಪಾದೇಯವಾಗಿದೆ. **ಸೂತ್ರಾರ್ಥ.** ಆರನೇ ಅಧ್ಯಾಯದ ದ್ವಿತ್ವ ಪ್ರಕರಣದಲ್ಲಿ ಯಾವುದು ಎರಡು ಹೇಳಿದೆಯೋ ದ್ವಿತ್ವಹೊಂದಿದ ಆ ಎರಡೂ ಸೇರಿ ಅಭ್ಯಸ್ತವೆಂಬ ಸಂಜ್ಞೆಯನ್ನು ಹೊಂದುತ್ತವೆ. ದದತ್ ಎಂಬಲ್ಲಿ ಆರನೇ ಅಧ್ಯಾಯದಲ್ಲಿ ಹೇಳಿದ "ಶ್ಲೌ" ಸೂತ್ರದಿಂದ ದ್ವಿತ್ವ ಬಂದಿರುವುದರಿಂದ ಇದಕ್ಕೆ ಅಭ್ಯಸ್ತಸಂಜ್ಞೆ ಬರುತ್ತದೆ. ಅಭ್ಯಸ್ತಸಂಜ್ಞೆ ಇರುವುದರಿಂದ ನುಮಿಗೆ ನಿಷೇಧವನ್ನು ಮುಂದಿನ ಸೂತ್ರದಿಂದ ಹೇಳುತ್ತಾನೆ.

(ಶತೃಬಂದಾಗ ನುಮ್ ನಿಷೇಧ ಹೇಳುವ ಸೂತ್ರ)

## ೩೪೭. ನಾಭ್ಯಸ್ತಾಚ್ಛತುಃ || ೭-೧-೭೮ ||

**ಅಭ್ಯಸ್ತಾತ್ಪರಸ್ಯ ಶತುರ್ನುಮ್ ನ । ದದತ್ ದದದ್ । ದದತೌ । ದದತಃ ||**

ನ, ಅಭ್ಯಸ್ತಾತ್, ಶತುಃ || ತ್ರಿಪದ ಸೂತ್ರ. "ಇದಿತೋನುಮ್ ಧಾತೋಃ" ಸೂತ್ರದಿಂದ "ನುಮ್" ಅನುವೃತ್ತವಾಗುತ್ತದೆ. ಶತೃಪ್ರತ್ಯಯದ ಷಷ್ಠೀ ಶತುಃ ಎಂದಾಗುತ್ತದೆ. **ಸೂತ್ರಾರ್ಥ.** ಅಭ್ಯಸ್ತದ ಪರದಲ್ಲಿರುವ ಶತೃಪ್ರತ್ಯಯಕ್ಕೆ ನುಮಾಗಮ ಬರುವುದಿಲ್ಲ. ಪ್ರಕೃತ "ದದತ್" ಅಭ್ಯಸ್ತ. ಇಲ್ಲಿ ಶತೃಪ್ರತ್ಯಯ ಬಂದಿದೆ ಉಗಿತ್ತಾದುದರಿಂದ (ಋ ಇತ್) ನುಮ್ ಬರುತ್ತಿದ್ದರೆ ಈ ಸೂತ್ರದಿಂದ ನಿಷೇಧ ಹೇಳಿರುವುದರಿಂದ ನುಮ್ ಬರುವುದಿಲ್ಲ. ಪದಾಂತದಲ್ಲಿ ಜಶ್ತ್ವಬಂದರೆ "ವಾವಸಾನೇ" ಸೂತ್ರದಿಂದ ವಿಕಲ್ಪ ಚರ್ತ್ವ. ದದತ್ ದದದ್. ಅಜಾದಿಯಲ್ಲಿ ಕೇವಲ ಪ್ರತ್ಯಯವನ್ನು ಸೇರಿಸುವುದು ಮಾತ್ರ. ದದತೌ-ದದತಃ ಇತ್ಯಾದಿ. ಭ್ಯಾಮಾದಿಗಳಲ್ಲಿ "ಝಲಾಂ ಜಶೋಂತೇ" ಸೂತ್ರದಿಂದ ಜಶ್ತ್ವ. ದದದ್ಭ್ಯಾಮ್-ದದದ್ಭಿಃ-ಇತ್ಯಾದಿ. ಸಪ್ತಮೀ ಸುವಿನಲ್ಲಿ ಜಶ್ತ್ವಬಂದಮೇಲೆ "ಖರಿಚ" ಸೂತ್ರದಿಂದ ಚರ್ ಬಂದರೆ ದದತ್ಸು ಎಂದಾಗುತ್ತದೆ.

---

ತಕಾರಾಂತ ಜಕ್ಷತ್ ಶಬ್ದ. (ತಿನ್ನುವವ, ಅಥವಾ ನಗುವವನು)

ಜಕ್ಷ=ಭಕ್ಷಹಸನಯೋಃ ಧಾತು. ಶತೃಪ್ರತ್ಯಯ ಬಂದರೆ ಜಕ್ಷತ್ ಎಂದಾಗುತ್ತದೆ. ಇಲ್ಲಿ ಆರನೇ ಅಧ್ಯಾಯದಲ್ಲಿ ಹೇಳಿದ ಸೂತ್ರದಿಂದ ದ್ವಿತ್ವಬಂದಿಲ್ಲ. ಆದುದ

ರಿಂದ "ಉಭೇ ಅಭ್ಯಸ್ತಮ್" ಸೂತ್ರದಿಂದ ಅಭ್ಯಸ್ತಸಂಜ್ಞೆ ಬಾರದಿರುವುದರಿಂದ ಅಧಿಕವಾಗಿ ಈ ಶಬ್ದವೇ ಮೊದಲಾದ ಏಳು ಶಬ್ದಗಳಿಗೆ ಅಭ್ಯಸ್ತಸಂಜ್ಞೆ ಹೇಳುತ್ತಾನೆ.

(ಜಕ್ಷ ಮುಂತಾದವುಗಳಿಗೆ ಅಭ್ಯಸ್ತ ಸಂಜ್ಞೆ ಹೇಳುವ ಸೂತ್ರ)

## ೩೪೪. ಜಕ್ಷಿತ್ಯಾದಯಃ, ಷಟ್ ॥ ೬-೧-೭ ॥

**ಷಡ್ ಧಾತವೋ ಅನ್ಯೇ ಜಕ್ಷಿತಿಶ್ಚ ಸಪ್ತಮ ಏತೇ ಅಭ್ಯಸ್ತಸಂಜ್ಞಾಃ ಸ್ಯುಃ ॥ ಜಕ್ಷತ್-ಜಕ್ಷದ್ । ಜಕ್ಷತೌ. ಜಕ್ಷತಃ ॥ ಏವಂ ಜಾಗ್ರತ್ । ದರಿದ್ರತ್ । ಶಾಸತ್ । ಚಕಾಸತ್ ॥ ಗುಪ್, ಗುಬ್ । ಗುಪೌ । ಗುಪಃ । ಗುಬ್ಭ್ಯಾಮ್ । ಇತ್ಯಾದಿ ॥**

ದ್ವಿಪದ ಸೂತ್ರ, "ಉಭೇ ಅಭ್ಯಸ್ತಮ್" ಸೂತ್ರದಿಂದ ಅನುವೃತ್ತವಾದ "ಅಭ್ಯಸ್ತ" ಪದವು ಬಹುವಚನಾಂತವಾಗಿ ವಿಪರಿಣತವಾಗುತ್ತದೆ. "ಜಕ್ಷಿತಿಃ ಆದಿಃ ಏಷಾಂತೇ" ಜಕ್ಷಿತ್ಯಾದಯಃ. ಇದು ಬಹುವ್ರೀಹಿ ಸಮಾಸ. ಬಹುವ್ರೀಹಿಯಲ್ಲಿ ಅನ್ಯ ಪದಾರ್ಥಕ್ಕೆ ಪ್ರಾಧಾನ್ಯ. ನೀಲವಾದ ಬಟ್ಟೆಯುಳ್ಳವನು ಯಾರೋ ಅವನು ನೀಲಾಂಬರ. ಆತನು ನೀಲ ಬಟ್ಟೆಗಳಿಂದ ಬೇರೆಯಾದವನು. ಇದರಲ್ಲಿ ಎರಡು ವಿಧ. ತದ್ಗುಣ ಸಂವಿಜ್ಞಾನ ಬಹುವ್ರೀಹಿ. ಅತದ್ಗುಣಸಂವಿಜ್ಞಾನ ಬಹುವ್ರೀಹಿ. ಲಂಬವಾದ ಉದರವುಳ್ಳವನು ಲಂಬೋದರ. ಇದು ತದ್ಗುಣಸಂವಿಜ್ಞಾನ ಬಹುವ್ರೀಹಿ ಚಿತ್ರ ಬಣ್ಣಗಳುಳ್ಳ ಹಸುವುಳ್ಳವನು ಚಿತ್ರಗು. ಇದು ಅತದ್ಗುಣ ಸಂವಿಜ್ಞಾನ ಬಹುವ್ರೀಹಿ. ಮೊದಲನೇದರಲ್ಲಿ ವಿಗ್ರಹದಲ್ಲಿರುವ ಪದಗಳಿಗೂ ಕ್ರಿಯಾನ್ವಯ ಇರುತ್ತದೆ. ಲಂಬೋದರನನ್ನು ಕರೆತಾ ಎಂದರೆ ಹೊಟ್ಟೆ ಬಿಟ್ಟು ಆತ ಬರುವುದಿಲ್ಲ. ಆಗಮನ ಕ್ರಿಯೆಯಲ್ಲಿ ಹೊಟ್ಟೆಗೂ ಅನ್ವಯವಿದೆ. ಎರಡನೇದರಲ್ಲಿ ವಿಗ್ರಹದ ಪದಾರ್ಥಗಳಿಗೆ ಅನ್ವಯವಿಲ್ಲ. ಚಿತ್ರಗುವನ್ನು ಕರೆತಾ ಎಂದರೆ ಗೋಪ ಮಾತ್ರ ಬರುತ್ತಾನೆ. ಅಲ್ಲಿ ಹಸುಗಳು ಬರುವುದಿಲ್ಲ. ಹೀಗೆ ಬಹುವ್ರೀಹಿಯಲ್ಲಿ ಎರಡು ವಿಧ. ಇಲ್ಲಿ ತದ್ಗುಣ ಸಂವಿಜ್ಞಾನ ಬಹುವ್ರೀಹಿಯನ್ನು ತೆಗೆದುಕೊಂಡರೆ ಜಕ್ಷ್ ಸೇರಿ ಆರು ಆಗಬೇಕಾಗುತ್ತದೆ, ಆದುದರಿಂದ ಅತದ್ಗುಣಸಂವಿಜ್ಞಾನವೆಂದು ಸ್ವೀಕರಿಸಬೇಕು. ಆಗ ಸಮುದಾಯದಲ್ಲಿ ಜಕ್ಷ್ ಸೇರುವುದಿಲ್ಲ. ಅದಕ್ಕೋಸ್ಕರ ಜಕ್ಷ್ ಎಂದು ಒಂದು ಪದ. ಇತ್ಯಾದಯಃ ಎಂದು ಬೇರೊಂದು ಪದವೆಂದು ಮಾಡಿಕೊಳ್ಳಬೇಕು. ಇತಿ ಪದದಿಂದ ಜಕ್ಷ್ ತೆಗೆದುಕೊಳ್ಳಬೇಕು. ಸೂತ್ರಾರ್ಥ. ಜಕ್ಷ್ ಧಾತು ಅಭ್ಯಸ್ತಸಂಜ್ಞೆ ಹೊಂದುತ್ತದೆ: ಜಕ್ಷ್ ಮುಂತಾದ ಆರು ಧಾತುಗಳು ಅಭ್ಯಸ್ತಸಂಜ್ಞೆಯನ್ನು ಹೊಂದುತ್ತವೆ. ಜಕ್ಷ್ ಮುಂತಾದ ಎನ್ನುವಾಗ ಅತದ್ಗುಣಸಂವಿಜ್ಞಾನ ಬಹುವ್ರೀಹ್ಯಾಶ್ರಯಣದಿಂದ ಜಕ್ಷ್ ಸಮುದಾಯದಲ್ಲಿ ಸೇರುವುದಿಲ್ಲ. ಇತರ ಆರು ಧಾತುಗಳು, ಜಕ್ಷ್ ಧಾತು, ಹೀಗೆ ಏಳು ಧಾತುಗಳು ದ್ವಿತ್ವ ಹೊಂದಿದ್ದರೂ ಅಭ್ಯಸ್ತಸಂಜ್ಞೆ

ಯನ್ನು ಹೊಂದುತ್ತವೆ. ಜಕ್ಷತ್, ಜಾಗ್ರತ್, ದರಿದ್ರತ್, ಚಕಾಸತ್, ಶಾಸತ್, ದೀಧ್ಯತ್, ವೇವ್ಯತ್ ಹೀಗೆ ಏಳು ಶಬ್ದಗಳಿಗೆ ಅಭ್ಯಸ್ತಸಂಜ್ಞೆ ಬರುವುದರಿಂದ ಶತೃ ಉಗಿತ್ತಾದರೂ ಹಿಂದಿನ ಸೂತ್ರದಿಂದ ನಿಷೇಧ ಹೇಳಿರುವುದರಿಂದ ನುವಾಗಮ ಬರುವುದಿಲ್ಲ. ಸುವಿನಲ್ಲಿ "ಝಲಾಂ ಜಶೋಽಂತೇ" ಸೂತ್ರದಿಂದ ಜಶ್ತ್ವ ಬಂದಾಗ "ವಾವಸಾನೇ" ಸೂತ್ರದಿಂದ ವಿಕಲ್ಪವಾಗಿ ಚರ್ತ್ವ. ಜಕ್ಷತ್-ಜಕ್ಷದ್. ಮುಂದೆ ಕೇವಲ ಪ್ರತ್ಯಯ ಸೇರಿಸುವುದು ಮಾತ್ರ. ಜಕ್ಷತೌ-ಜಕ್ಷತಃ ಇತ್ಯಾದಿ. ಹೀಗೆ ಜಾಗ್ರತ್ ಮುಂತಾದ ಶಬ್ದಗಳ ರೂಪವನ್ನು ತಿಳಿಯಬೇಕು.

---

ಪಕಾರಾಂತ. "ಗುಪ್" ಶಬ್ದ. (ರಕ್ಷಿಸುವವನು)

ಗುಪೂ+ರಕ್ಷಣೇ. ಧಾತು. ಕ್ವಿಪ್‌ಪ್ರತ್ಯಯ. ಗುಪ್+ಕ್ವಿಪ್. ಕ್ವಿಪಿನಲ್ಲಿ ಸರ್ವಲೋಪ. ಗುಪ್ ಪಾಂತವಾಗುತ್ತದೆ. ಸುಪರವಾದಾಗ "ಝಲಾಂಜಶೋಽಂತೇ" ಸೂತ್ರದಿಂದ ಜಶ್ತ್ವ. ಗುಬ್. "ವಾವಸಾನೇ" ಸೂತ್ರದಿಂದ ವಿಕಲ್ಪ ಚರ್ತ್ವ. ಗುಪ್. ಇನ್ನು ಪ್ರತ್ಯಯ ಸೇರಿಸುವುದು ಮಾತ್ರ. ಗುಪೌ-ಗುಪಃ ಇತ್ಯಾದಿ. ಭ್ಯಾಮಾದಿಯಲ್ಲಿ ಜಶ್ತ್ವ. ಗುಬ್ಭ್ಯಾಮ್-ಗುಬ್ಭಿಃ ಇತ್ಯಾದಿ. ಸಪ್ತಮೀ ಸುವಿನಲ್ಲಿ ಜಶ್ತ್ವ, ಚರ್ತ್ವ-ಗುಪ್ಸು.

---

ಶಕಾರಾಂತ. ತಾದೃಶ್ ಶಬ್ದ. (ಆ ರೀತಿಯವನು)

ಈ ಶಬ್ದದ ವ್ಯುತ್ಪತ್ತಿಯನ್ನು ತೋರಿಸುತ್ತಾನೆ.

(ತ್ಯದಾದಿಗಳು ಇರುವಾಗ ದೃಶಿಗೆ ಕ್ವಿನ್ ಹೇಳುವ ಸೂತ್ರ)

**೩೪೯. ತ್ಯದಾದಿಷು ದೃಶೋಽನಾಲೋಚನೇ ಕಞ್ಚ ॥**

**॥ ೩-೨-೬೦ ॥**

**ತ್ಯದಾದಿಷೂಪಪದೇಷು ಅಜ್ಞಾನಾರ್ಥಾದ್ ದೃಶೇಃ ಕಞ್ ಸ್ಯಾತ್ ॥ ಚಾತ್ ಕ್ವಿನ್ ॥**

ತ್ಯದಾದಿಷು, ದೃಶಃ, ಅನಾಲೋಚನೇ, ಕಞ್, ಚ ॥ ಐದುಪದಗಳುಳ್ಳ ಸೂತ್ರ. ಹಿಂದೆ "ಸ್ಪೃಶೋಽನುದಕೇಕ್ವಿನ್" ಸೂತ್ರವಿದೆ. ಚಕಾರದಿಂದ ಅಲ್ಲಿನ ಕ್ವಿನ್ ಅನುವೃತ್ತವಾಗುತ್ತದೆ. ಇಲ್ಲಿ ಆಲೋಚನ ಶಬ್ದಕ್ಕೆ ಜ್ಞಾನವೆಂದರ್ಥ. ಅನಾಲೋಚನೇ ಎಂದುದರಿಂದ ಜ್ಞಾನಾರ್ಥವನ್ನು ಕೊಡದ ಎಂದರ್ಥ. ಸೂತ್ರಾರ್ಥ. ತ್ಯದಾದಿಗಳು ಉಪಪದವಾಗಿರುವಾಗ ಜ್ಞಾನಾರ್ಥವನ್ನು ಕೊಡದಿರುವ ದೃಶ್ ಧಾತುವಿಗೆ ಕಞ್ ಪ್ರತ್ಯಯವೂ ಕ್ವಿನ್‌ಪ್ರತ್ಯಯವೂ ಬರುತ್ತದೆ. ತ್ಯದ್ ತದ್ ಮುಂತಾದವುಗಳು ಸರ್ವನಾಮಗಣದಲ್ಲಿ ಹೇಳಿವೆ. ಪ್ರಕೃತ ತದ್‌ಶಬ್ದವು ಉಪಪದವಾಗಿರುವಾಗ ದೃಶ್

ಧಾತುವಿಗೆ ಕ್ವಿನ್ ಬಂದರೆ ತದ್+ದೃಶ್+ಕ್ವಿನ್ ಎಂದಾಗುತ್ತದೆ. ಹಿಂದಿನಂತೆ ಕ್ವಿನಿನಲ್ಲಿ ಸರ್ವಲೋಪ. ತದ್+ದೃಶ್ ಎಂದಿರುವಾಗ ಅತ್ವ ಹೇಳುತ್ತಾನೆ.

(ದೃಶಾದಿಗಳು ಪರವಾದಾಗ ಅತ್ವ ಹೇಳುವ ಸೂತ್ರ)

**೩೫೦. ಆ ಸರ್ವನಾಮ್ನಃ ॥ ೬-೩-೯೧ ॥**

**ಸರ್ವನಾಮ್ನ ಆಕಾರೋಽನ್ತಾದೇಶಃ ಸ್ಯಾತ್ ದೃಗ್ದೃಶವತುಷು । ತಾದೃಕ್ । ತಾದೃಗ್ । ತಾದೃಶೌ । ತಾದೃಶಃ । ತಾದೃಗ್ಭ್ಯಾಮ್ ॥ ವ್ರಶ್ಚೇತಿ ಷಃ । ಜಶ್ತ್ವ ಚರ್ತ್ವೇ । ವಿಟ್-ವಿಡ್ । ವಿಶೌ । ವಿಶಃ । ವಿಡ್ಭ್ಯಾಮ್ ॥**

ದ್ವಿಪದ ಸೂತ್ರ. "ದೃಗ್ ದೃಶವತುಷು" ಸೂತ್ರಾನುವೃತ್ತವಾಗುತ್ತದೆ. "ಆ" ವಿಭಕ್ತಿಯಿಲ್ಲದೆ ನಿರ್ದೇಶ ಮಾಡಿರುತ್ತಾನೆ. **ಸೂತ್ರಾರ್ಥ.**—ದೃಗ್, ದೃಶಶಬ್ದಗಳೂ ವತುಪ್ರತ್ಯಯವೂ ಪರದಲ್ಲಿರುವಾಗ ಸರ್ವನಾಮಪದಗಳಿಗೆ ಆಕಾರ ಅಂತಾದೇಶವಾಗಿ ಬರುತ್ತದೆ. "ಅಲೋಽಂತ್ಯಸ್ಯ" ಪರಿಭಾಷೆ ಬರುವುದರಿಂದ ಅಂತಾದೇಶವೆಂದು ಲಬ್ಧವಾಗಿದೆ. ತದ್+ದೃಶ್ ಎಂದಿರುವಾಗ ತದ್ ಸರ್ವನಾಮ. ಅಲ್ಲಿ ದಕಾರಕ್ಕೆ ಆಕಾರ ಬಂದರೆ ತ+ಆ+ದೃಶ್ ಆಗುತ್ತದೆ. ಸವರ್ಣದೀರ್ಘ. ತಾದೃಶ್. ಇದಕ್ಕೆ ಸುಪರವಾದಾಗ "ಹಲ್ಙ್ಯಾಭ್ಯೋ" ಸೂತ್ರದಿಂದ ಸುಲೋಪ. ಕ್ವಿನ್ ಪ್ರತ್ಯಯಾಂತವಾದುದರಿಂದ "ಕ್ವಿನ್ ಪ್ರತ್ಯಯಸ್ಯ ಕುಃ" ಸೂತ್ರದಿಂದ ಕುತ್ವ ಪ್ರಾಪ್ತವಾದರೆ ಅದು ಅಸಿದ್ಧವಾದುದರಿಂದ "ವ್ರಶ್ಚಭ್ರಸ್ಜಸೃ" (ಸೂ. ೩೦೯) ಸೂತ್ರದಿಂದ ಶಕಾರಕ್ಕೆ ಷಕಾರಾದೇಶ. ತಾದೃಷ್. "ಝಲಾಂ ಜಶೋಽನ್ತೇ" ಸೂತ್ರದಿಂದ ಷಕಾರಕ್ಕೆ ಡಕಾರ. ತಾದೃಡ್. ಆಮೇಲೆ "ಕ್ವಿನ್‌ಪ್ರ–" ಸೂತ್ರದಿಂದ ಕುತ್ವ. ತಾದೃಗ್. "ವಾವಸಾನೇ" ಸೂತ್ರದಿಂದ ವಿಕಲ್ಪ ಚರ್ತ್ವ. ತಾದೃಕ್. ಹೀಗೆ ಎರಡುರೂಪ. ಇನ್ನು ಪ್ರತ್ಯಯಸೇರಿಸುವುದು ಮಾತ್ರ. ತಾದೃಶೌ–ತಾದೃಶಃ ಇತ್ಯಾದಿ. ಭ್ಯಾಮಾದಿಗಳಲ್ಲಿ ಹಿಂದಿನಂತೆ ಶಕಾರಕ್ಕೆ "ವ್ರಶ್ಚ–" ಸೂತ್ರದಿಂದ ಷತ್ವ. ಷಕಾರಕ್ಕೆ ಜಶ್ತ್ವದಿಂದ ಡಕಾರಾದೇಶ. ಡಕಾರಕ್ಕೆ ಕುತ್ವದಿಂದ ಗಕಾರ. ತಾದೃಗ್ಭ್ಯಾಮ್–ತಾದೃಗ್ಭಿಃ ಇತ್ಯಾದಿ. ಸಪ್ತಮೀಸುವಿನಲ್ಲಿ ತಾದೃಗ್+ಸು ಎಂದಾದಾಗ "ಖರಿಚ" ಸೂತ್ರದಿಂದ ಚರ್ತ್ವ. ತಾದೃಕ್+ಸು. "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷಕಾರಾದೇಶ. ಕಷಸೇರಿದರೆ ಕ್ಷ ಆಗುತ್ತದೆ. ತಾದೃಕ್ಷು.

---

ಶಕಾರಾಂತ "ವಿಶ್" ಶಬ್ದ (ವೈಶ್ಯ)

ವಿಶ್+ಸ್ ಎಂದಿರುವಾಗ "ಹಲ್ಙ್ಯಾಭ್ಯೋ–" ಸೂತ್ರದಿಂದ ಸುಲೋಪ. ಶ ಪದದ ಕೊನೆಯಲ್ಲಿರುವುದರಿಂದ "ವ್ರಶ್ಚಭ್ರಸ್ಜ"- (ಸೂ. ೩೦೯) ಸೂತ್ರದಿಂದ ಅದಕ್ಕೆ ಷಕಾರ. ವಿಷ್. "ಝಲಾಂ ಜಶೋಽನ್ತೇ" ಸೂತ್ರದಿಂದ ಷಕಾರಕ್ಕೆ ಡಕಾರಾ

ದೇಶ. ವಿಡ್. "ವಾವಸಾನೇ" ಸೂತ್ರದಿಂದ ವಿಕಲ್ಪವಾಗಿ ಚರ್ ಬಂದರೆ ವಿಟ್. ಅಜಾದಿಪ್ರತ್ಯಯು ಪರವಾದಾಗ ಇತರ ಕಾರ್ಯವಿಲ್ಲ. ವಿಶೌ-ವಿಶಃ ಇತ್ಯಾದಿ. ಭ್ಯಾಮಾದಿಗಳಲ್ಲಿ ಷತ್ವ, ಜಶ್ತ್ವ ಹಿಂದಿನಂತೇ ತಿಳಿಯಬೇಕು. ವಿಡ್ಭ್ಯಾಮ್ ಸಪ್ತಮೀ ಸುವಿನಲ್ಲಿ ಷತ್ವ, ಜಶ್ತ್ವ ಬಂದಾಗ ವಿಡ್‌ಸು ಎಂದಿರುವಾಗ "ಡಃ ಸಿ. ಧುಟ್" ಸೂತ್ರದಿಂದ ಇತ್ಯಾದಿ. ಡಕಾರದ ಪರದ ಸಕಾರಕ್ಕೆ ಧುಡಾಗಮ. ವಿಡ್‌ಧ್ ಸು. "ಖರಿಚ" ಸೂತ್ರ ಎರಡುಬಾರಿ ಬಂದರೆ ವಿಡ್‌ತ್ ಸು. ಎಂದಾಗುತ್ತದೆ. ಧುಡಾಗಮ ಅನಿತ್ಯವಾದುದರಿಂದ ಬಾರದಿದ್ದರೆ ವಿಟ್‌ಸು. ಎಂದಾಗುತ್ತದೆ.

ಶಕಾರಾಂತ "ನಶ್" ಶಬ್ದ. (ನಾಶಹೊಂದುವವನು)

ಣಶ=ಅದರ್ಶನೇ ಧಾತು. ಕ್ವಿಪ್‌ಪ್ರತ್ಯಯ. ನಶ್ ರೂಪವಾಗುತ್ತದೆ. ಸುಪರವಾದಾಗ "ಹಲ್‌ಙ್ಯಾಭ್ಯೋ"-ಸೂತ್ರದಿಂದ ಸುಲೋಪ. ನಶ್ ಎಂದಿರುವಾಗ ವಿಕಲ್ಪವಾಗಿ ಕುತ್ವ ಹೇಳುತ್ತಾನೆ.

(ನಶಿಗೆ ಕುತ್ವ ಹೇಳುವ ಸೂತ್ರ)

## ೩೫೧. ನಶೇರ್ವಾ ॥ ೮-೨-೬೩ ॥

**ನಶೇಃ ಕವರ್ಗೋಽನ್ತಾದೇಶೋ ವಾ ಪದಾಂತೇ ॥ ನಕ್-ನಗ್ ನಟ್-ನಡ್ । ನಶೌ । ನಶಃ । ನಗ್ಭ್ಯಾಮ್-ನಡ್ಭ್ಯಾಮ್ ॥**

ನಶೇಃ, ವಾ॥ ದ್ವಿಪದಸೂತ್ರ. "ಕ್ವಿನ್‌ಪ್ರತ್ಯಯಸ್ಯಕುಃ" ಸೂತ್ರದಿಂದ "ಕುಃ" "ಸ್ಕೋಃ ಸಂಯೋ"-ಸೂತ್ರದಿಂದ "ಅಂತೇ" ಪದಗಳು ಅನುವೃತ್ತವಾಗುತ್ತವೆ. "ಪದಸ್ಯ" ಅಧಿಕಾರ. **ಸೂತ್ರಾರ್ಥ.** ನಶಿಗೆ ಪದಾಂತದಲ್ಲಿ ಕುತ್ವ ಬರುತ್ತದೆ. ಶಕಾರಕ್ಕೆ ಸ್ಥಾನಸಾಮ್ಯದಿಂದ ಖಕಾರ ಬಂದರೆ "ಝಲಾಂ ಜಶೋಽನ್ತೇ" ಸೂತ್ರದಿಂದ ಅದಕ್ಕೆ ಗಕಾರಾದೇಶ. "ವಾವಸಾನೇ" ಎಂಬುದರಿಂದ ಅದಕ್ಕೆ ವಿಕಲ್ಪವಾಗಿ ಚರ್ತ್ವ ಬಂದರೆ ನಕ್. ನಗ್. ಕುತ್ವವಿಕಲ್ಪವಾದುದರಿಂದ ಹಿಂದಿನಂತೆ "ವ್ರಶ್ಚಭ್ರಸ್ಜ-" ಸೂತ್ರ ದಿಂದಶಕಾರಕ್ಕೆ ಷಕಾರಬಂದು ಅದಕ್ಕೆ ಜಶ್ತ್ವ ಚರ್ತ್ವಬಂದರೆ ನಟ್-ನಡ್ ಎಂದು ಎರಡು ರೂಪಗಳಾಗುತ್ತವೆ. ಅಜಾದಿಯಲ್ಲಿ ವಿಶೇಷಕಾರ್ಯವಿಲ್ಲ. ನಶೌ-ನಶಃ ಇತ್ಯಾದಿ. ಭ್ಯಾಮಾದಿಗಳಲ್ಲಿ ಪದಸಂಜ್ಞೆಯಿರುವುದರಿಂದ "ನಶೇರ್ವಾ" ಸೂತ್ರದಿಂದ ವಿಕಲ್ಪವಾಗಿ ಕುತ್ವ. ನಗ್ಭ್ಯಾಮ್. ಬಾರದಿದ್ದರೆ ಹಿಂದಿನಂತೆ ಶಕಾರಕ್ಕೆ "ವ್ರಶ್ಚ-" ಸೂತ್ರದಿಂದ ಷತ್ವಬಂದು ಅದಕ್ಕೆ ಜಶ್ತ್ವಬಂದರೆ ನಡ್ಭ್ಯಾಮ್ ಎಂದು ಎರಡೆರಡು ರೂಪಗಳಾಗುತ್ತವೆ. ಸಪ್ತಮೀ ಸುವಿನಲ್ಲಿ ಕುತ್ವಬಂದಾಗ ನಕ್+ಸು. ನಕ್+ಷು. ನಕ್ಷು ಎಂದೂ, ಷತ್ವಬಂದು ಜಶ್ತ್ವಬಂದಾಗ ನಡ್+ಸು ಎಂದಿರುವಾಗ ವಿಕಲ್ಪವಾಗಿ ಧುಡ್ ಬಂದು, "ಖರಿಚ" ಸೂತ್ರದಿಂದ ಚರ್ತ್ವಬಂದರೆ ನಟ್‌ತ್ಸು ಎಂದೂ ಧುಟ್ ಬಾರದಿದ್ದರೆ ನಟ್‌ಸು ಎಂದೂ ಮೂರು ರೂಪಗಳಾಗುತ್ತವೆ.

ಶಕಾರಾಂತ ಘೃತಸ್ಪೃಶ್ ಶಬ್ದ. (ತುಪ್ಪ ಮುಟ್ಟುವವನು)
(ಸ್ಪೃಶ್ ಧಾತುವಿಗೆ ಕ್ವಿನ್ ಹೇಳುವ ಸೂತ್ರ)

೩೫೨. ಸ್ಪೃಶೋಽನುದಕೇ ಕ್ವಿನ್ ॥ ೩-೨-೫೮ ॥

ಅನುದಕೇ ಸುಪ್ಯುಪಪದೇ ಸ್ಪೃಶೇಃ ಕ್ವಿನ್ ॥ ಘೃತಸ್ಪೃಕ್, ಘೃತಸ್ಪೃಗ್ । ಘೃತಸ್ಪೃಶೌ-ಘೃತಸ್ಪೃಶಃ ॥ ದಧೃಗ್-ದಧೃಕ್ । ದಧೃಷೌ । ದಧೃಗ್ಭ್ಯಾಮ್ ॥ ರತ್ನಮುಟ್-ರತ್ನಮುಡ್ । ರತ್ನಮುಷೌ । ರತ್ನಮುಡ್ಭ್ಯಾಮ್ ॥ ಷಟ್, ಷಡ್ । ಷಡ್ಭಿಃ । ಷಡ್ಭ್ಯಃ ೨ । ಷಣ್ಣಾಮ್ । ಷಟ್‌ತ್ಸು, ಷಟ್ಸು ॥

ಸ್ಪೃಶಃ, ಅನುದಕೇ, ಕ್ವಿನ್ ॥ ತ್ರಿಪದ ಸೂತ್ರ. "ಸುಪಿಸ್ಥಃ" ಸೂತ್ರದಿಂದ ಸುಪಿ ಅನುವೃತ್ತಿ. ಪ್ರತ್ಯಯವಾದುದರಿಂದ ತದಂತವನ್ನು ತೆಗೆದುಕೊಳ್ಳಬೇಕು. "ನ ಉದಕಂ ಅನುದಕಂ" ತಸ್ಮಿನ್ ಅನುದಕೇ. ಸೂತ್ರಾರ್ಥ. ಉದಕ ಶಬ್ದ ಭಿನ್ನವಾದ ಸುಬಂತ ಪದ ಉಪಪದವಾಗಿರುವಾಗ ಸ್ಪೃಶ್ ಧಾತುವಿಗೆ ಕ್ವಿನ್ ಪ್ರತ್ಯಯ ಬರುತ್ತದೆ. ಘೃತಂಸ್ಪೃಶತಿ (ತುಪ್ಪಮುಟ್ಟುತ್ತಾನೆ) ಎಂಬರ್ಥದಲ್ಲಿ ಘೃತ ಎಂಬ ಪದ ಉಪಪದವಾಗಿರುವಾಗ ಸ್ಪೃಶ್ ಧಾತುವಿಗೆ ಕ್ವಿನ್. ಘೃತಸ್ಪೃಶ್+ಕ್ವಿನ್. ಹಿಂದೆ ಹೇಳಿದಂತೆ (ಸೂ. ೩೦೪) ಕ್ವಿನ್ನಿನಲ್ಲಿ ಸರ್ವವೂ ಲೋಪಹೊಂದುತ್ತವೆ. ಸು ಪರವಾದಾಗ "ಹಲ್ಙ್ಯಾಭ್ಯೋ-" ಸೂತ್ರದಿಂದ ಸುವಿಗೆ ಲೋಪ. ಕ್ವಿನ್ ಪ್ರತ್ಯಯ ಹೊಂದುವುದರಿಂದ "ಕ್ವಿನ್ ಪ್ರತ್ಯಯಸ್ಯ ಕುಃ" ಸೂತ್ರದಿಂದ ಕುತ್ವ. ಘೃತಸ್ಪೃಖ್. (ಮಹಾಪ್ರಾಣ ಸಾಮ್ಯದಿಂದ ಖಕಾರ) ಪದಾಂತದಲ್ಲಿ ಜಶ್ತ್ವ. ಘೃತಸ್ಪೃಗ್. "ವಾವಸಾನೇ" ವಿಕಲ್ಪ ಚರ್ತ್ವ. ಘೃತಸ್ಪೃಕ್. ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಘೃತಸ್ಪೃಶೌ-ಘೃತಸ್ಪೃಶಃ ಇತ್ಯಾದಿ. ಭ್ಯಾಮಾದಿಗಳಲ್ಲಿ ಕುತ್ವ. ಜಶ್ತ್ವ. ಘೃತಸ್ಪೃಗ್ಭ್ಯಾಮ್-ಘೃತಸ್ಪೃಗ್ಭಿಃ ಇತ್ಯಾದಿ. ಸಪ್ತಮೀ ಸುವಿನಲ್ಲಿ ಘೃತಸ್ಪೃಕ್ಷು.

ಇತಿ ಶಾಂತಾಃ

---

ಷಕಾರಾಂತ ದಧೃಷ್ ಶಬ್ದ. (ಧರ್ಷಣ ಮಾಡುವವನು, ಉದ್ಧತ)

"ಞಿ ಧೃಷಾ ಪ್ರಾಗಲ್ಭ್ಯೇ" ಧಾತು. ಇದಕ್ಕೆ "ಋತ್ವಿಕ್-"(ಸೂ.೩೦೩) ಸೂತ್ರದಿಂದ ಕ್ವಿನ್ ಪ್ರತ್ಯಯ, ದ್ವಿತ್ವ, ಅಂತೋದಾತ್ತಸ್ವರ, ಇವುಗಳು ನಿಪಾತಿತವಾಗಿವೆ. ದಧೃಷ್ ಎಂದಾಗುತ್ತದೆ. ಸು ಪರವಾದಾಗ "ಝಲಾಂ ಜಶೋಂತೇ" ಸೂತ್ರದಿಂದ ಷಕಾರಕ್ಕೆ ಡಕಾರ. "ಕ್ವಿನ್ ಪ್ರತ್ಯಯಸ್ಯ ಕುಃ" ಸೂತ್ರದಿಂದ ಡಕಾರಕ್ಕೆ ಗಕಾರಾದೇಶ. "ವಾವಸಾನೇ" ಸೂತ್ರದಿಂದ ವಿಕಲ್ಪ ಚರ್ತ್ವ. ದಧೃಕ್-

ಧೃಗ್-ದಧೃಕ್ಷು-ದಧೃಕ್ಷು ॥ ಇತ್ಯಾದಿ. ಭ್ಯಾಮಾದಿಯಲ್ಲಿ ದಧೃಗ್ಭ್ಯಾಮ್. ಇತ್ಯಾದದಿ. ಸಪ್ತಮಿ ಸುವಿನಲ್ಲಿ ದಧೃಕ್ಷು ಎಂದಾಗುತ್ತದೆ.

---

॥ ಷಕಾರಾಂತ "ರತ್ನಮುಷ್" ಶಬ್ದ. (ರತ್ನ ಕದಿಯುವವನು)

ರತ್ನಂ ಮುಷ್ಣಾತಿ ಇತಿ ರತ್ನಮುಟ್. (ರತ್ನವನ್ನು ಕದಿಯುತ್ತಾನೆ) ಮುಷ ಸ್ತೇಯೇ ಧಾತು. ಕ್ವಿಪ್ ಪ್ರತ್ಯಯ. ರತ್ನಮುಷ್ ಶಬ್ದ. ಸುಪರವಾದಾಗ "ಹಲ್ ಙ್ಯಾಭ್ಯೋ" ಸೂತ್ರದಿಂದ ಅದಕ್ಕೆ ಲೋಪ. "ಝಲಾಂ ಜಶೋಽನ್ತೇ" ಸೂತ್ರದಿಂದ ಷಕಾರಕ್ಕೆ। ಜಶ್ತ್ವ. "ವಾವಸಾನೇ" ವಿಕಲ್ಪ ಚರ್ತ್ವ, ರತ್ನಮುಟ್-ರತ್ನಮುಡ್. ಅಜಾದಿಯಲ್ಲಿ ಕಾರ್ಯವಿಲ್ಲ. ಹಲಾದಿಯಲ್ಲಿ ಜಶ್ತ್ವ. ರತ್ನಮುಡ್ಭ್ಯಾಮ್ ಇತ್ಯಾದಿ.

---

ಷಕಾರಾಂತ ಷಷ್ ಶಬ್ದ. (ಆರು)

ಬಹುತ್ವ ಸಂಖ್ಯಾವಾಚಿಯಾದುದರಿಂದ ನಿತ್ಯ ಬಹುವಚನಾಂತ. ಷಾಂತಶಬ್ದ ವಾದುದರಿಂದ "ಷ್ಣಾಂತಾ ಷಟ್" ಸೂತ್ರದಿಂದ ಇದಕ್ಕೆ ಷಟ್ ಎಂಬ ಸಂಜ್ಞೆ ಬರುತ್ತದೆ. ಷಷ್+ಜಸ್. ಷಷ್+ಶಸ್ ಎಂದಿರುವಾಗ "ಷಡ್ಭ್ಯೋ ಲುಕ್" ಸೂತ್ರದಿಂದ ಜಸ್ ಶಸ್‌ಗಳಿಗೆ ಲುಕ್ ಬರುತ್ತದೆ. ಆಗ ಷಷ್ ಎಂದೇ ಉಳಿಯು ತ್ತದೆ. ಪದಾಂತದಲ್ಲಿ ಷಕಾರವಿರುವುದರಿಂದ "ಝಲಾಂಜಶೋಂತೇ" ಸೂತ್ರದಿಂದ ಜಶ್ತ್ವ ಬಂದರೆ ಷಡ್. "ವಾವಸಾನೇ" ವಿಕಲ್ಪ ಚರ್ತ್ವ. ಷಟ್. ಭಿಸ್, ಭ್ಯಸ್ ಪರ ವಾದಾಗ ಪದಸಂಜ್ಞೆಯಿರುವುದರಿಂದ ಹಿಂದೆ ಹೇಳಿದಂತೆ ಜಶ್ತ್ವ. ಷಡ್ಭಿಃ। ಷಡ್ಭ್ಯಃ। ಷಡ್ಭ್ಯಃ। ಷಷ್+ಆಮ್ ಎಂದಿರುವಾಗ ಷಟ್ ಸಂಜ್ಞೆಯಿರುವುದರಿಂದ "ಷಟ್ ಚತುರ್ಭ್ಯಶ್ಚ" ಸೂತ್ರದಿಂದ ಆಮಿಗೆ ನುಟಾಗಮ. ಟಿತ್ತಾದುದರಿಂದ ಆದ್ಯವಯವ. ಷಷ್+ನಾಮ್. ಈಗ ಹಲಾದಿಪ್ರತ್ಯಯವಿರುವುದರಿಂದ ಪದ ಸಂಜ್ಞೆ ಬರುತ್ತದೆ, ಆಗ ಜಶ್ತ್ವ. ಷಡ್+ನಾಮ್. "ಪ್ರತ್ಯಯೇ ಭಾಷಾಯಾಂ ನಿತ್ಯಂ" ವಾರ್ತಿಕ ದಿಂದ ಡಕಾರಕ್ಕೆ ಅನುನಾಸಿಕ ಣಕಾರ. ನಾಮಿನ ನಕಾರಕ್ಕೆ ಟವರ್ಗದ ಯೋಗವಿರು ವುದರಿಂದ "ಷ್ಟುನಾ ಷ್ಟುಃ" ಸೂತ್ರದಿಂದ ಷ್ಟುತ್ವಬಂದರೆ ಷಣ್+ಣಾಮ್= ಷಣ್ಣಾಮ್. ಷಷ್+ಸು ಎಂದಿರುವಾಗ ಜಶ್ತ್ವ. ಷಡ್+ಸು. "ಡಃ ಸಿ ಧುಟ್" ಸೂತ್ರದಿಂದ ವಿಕಲ್ಪವಾಗಿ ಸಕಾರಕ್ಕೆ ಧುಟ್. ಷಡ್+ಧ್ ಸು. "ಖರಿಚ" ಸೂತ್ರ ಎರಡುಸಲ ಬಂದರೆ ಷಟ್ ತ್ಸು, ಧುಟ್ ಬಾರದಿದ್ದರೆ ಷಟ್ಸು.

---

ಷಕಾರಾಂತ "ಪಿಪಠಿಷ್" ಶಬ್ದ. (ಓದಲು ಬಯಸುವವನು)

ಪಠಿತುಂ ಇಚ್ಛತಿ (ಓದಲು ಬಯಸುತ್ತಾನೆ) ಎಂದು ಅರ್ಥವಿವಕ್ಷೆಮಾಡಿದಾಗ ಪಠ್ ಧಾತುವಿಗೆ ಸನ್‌ಪ್ರತ್ಯಯ ಬಂದು ಪಿಪಠಿಷ್ ಎಂದಾಗಿದೆ. ಇದಕ್ಕೆ ಸುಪರ

ವಾದಾಗ "ಹಲ್‌ಙ್ಯಾಭ್ಯೋ" ಸೂತ್ರದಿಂದ ಅದಕ್ಕೆ ಲೋಪ. ಈಗ ಪದಾಂತದಲ್ಲಿ ಇಕಿಗೆ ದೀರ್ಘ ಹೇಳುತ್ತಾನೆ.

(ಧಾತುವಿನ ಉಪಧೆ ಇಕ್ಕಿಗೆ ದೀರ್ಘ ಹೇಳುವ ಸೂತ್ರ)

**೩೫೩. ರ್ವೋರುಪಧಾಯಾ ದೀರ್ಘ ಇಕಃ ||೮-೨-೭೬||**

**ರೇಫವಾಂತಯೋರ್ಧಾತ್ವೋರುಪಧಾಯಾ ಇಕೋ ದೀರ್ಘಃ ಪದಾಂತೇ || ಪಿಪಠೀಃ | ಪಿಪಠಿಷೌ | ಪಿಪಠೀರ್ಭ್ಯಾಮ್ ||**

ರ್ವೋಃ, ಉಪಧಾಯಾಃ, ದೀರ್ಘಃ, ಇಕಃ || ನಾಲ್ಕು ಪದಗಳುಳ್ಳ ಸೂತ್ರ. "ರ್ ಚ ವ್ ಚ" ರ್ವೌ. ತಯೋಃ ರ್ವೋಃ. "ಸಿಪಿಧಾತೋರುರ್ವಾ" ಸೂತ್ರದಿಂದ "ಧಾತೋಃ" ಅನುವೃತ್ತಿ. "ರ್ವೋಃ" ಧಾತುವಿಗೆ ವಿಶೇಷಣವಾದುದರಿಂದ ತದಂತಲಾಭ "ಪದಸ್ಯ" ಅಧಿಕಾರ. "ಸ್ಕೋಃಸಂಯೋ"-ಸೂತ್ರದಿಂದ "ಅಂತೇ" ಅನುವೃತ್ತಿ. **ಸೂತ್ರಾರ್ಥ.** ರೇಫಾಂತ ಮತ್ತು ವಕಾರಾಂತ ಧಾತುವಿನ ಉಪಧೆಯಾದ ಇಕ್ಕಿಗೆ ಪದಾಂತದಲ್ಲಿ ದೀರ್ಘ ಬರುತ್ತದೆ. ಪಿಪಠಿಷ್ ಎಂಬಲ್ಲಿ "ಆದೇಶ ಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷಕಾರಬಂದಿರುತ್ತದೆ. "ಸಸಜುಷೋರುಃ" ಸೂತ್ರದೃಷ್ಟ್ಯಾ ಈ ಷತ್ವವು "ಪೂರ್ವತ್ರಾಸಿದ್ಧಮ್" ಸೂತ್ರದಿಂದ ಅಸಿದ್ಧವಾಗುತ್ತದೆ. ಆಗ ಸಕಾರವಿದ್ದಂತೇ ಆಗುವುದರಿಂದ ಪಿಪಠಿಸ್ ಎಂಬಲ್ಲಿ ಪದಾಂತ ಸಕಾರವಿರುವುದರಿಂದ ಅದಕ್ಕೆ ರುತ್ವ ಬರುತ್ತದೆ. ಪಿಪಠಿರ್. ಈಗ ರೇಫಾಂತಧಾತು ಪಿಪಠಿರ್. ಇದರ ಉಪಧೆಯಾದ ಇಕ್ಕೆಂದರೆ ಠಕಾರದ ಮೇಲಿರುವ ಇಕಾರ. ಇದಕ್ಕೆ ದೀರ್ಘಬಂದರೆ ಪಿಪಠೀರ್ ಆಗುತ್ತದೆ. "ಖರವಸಾನಯೋಃ—" ಸೂತ್ರದಿಂದ ರುವಿನ ರೇಫಕ್ಕೆ ವಿಸರ್ಗ. ಪಿಪಠೀಃ. ಅಜಾದಿಯಲ್ಲಿ ವಿಶೇಷವಿಲ್ಲ. ಪಿಪಠಿಷೌ | ಪಿಪಠಿಷಃ || ದ್ವಿ—ಪಿಪಠಿಷಂ | ಪಿಪಠಿಷೌ | ಪಿಪಠಿಷಃ || ತೃ—ಪಿಪಠಿಷ್+ಭ್ಯಾಮ್ ಎಂದಿರುವಾಗ ಹಿಂದಿನಂತೆ ಷಕಾರ ಅಸಿದ್ಧವಾದುದರಿಂದ ಸಕಾರಕ್ಕೆ ರುತ್ವ. "ರ್ವೋರುಪಧಾಯಾಃ"—ಸೂತ್ರದಿಂದ ಉಪಧಾ ಇಕ್ಕಿಗೆ ದೀರ್ಘ. ಪಿಪಠೀರ್ಭ್ಯಾಮ್ | ಪಿಪಠೀರ್ಭಿಃ || ಚ | ಪಿಪಠಿಷೇ ಪಿಪಠೀರ್ಭ್ಯಾಮ್ | ಪಿಪಠೀರ್ಭ್ಯಃ || ಪಂ—ಪಿಪಠಿಷಃ | ಪಿಪಠೀರ್ಭ್ಯಾಮ್ | ಪಿಪಠೀರ್ಭ್ಯಃ || ಷ—ಪಿಪಠಿಷಃ | ಪಿಪಠಿಷೋಃ | ಪಿಪಠಿಷಾಮ್ || ಸ—ಪಿಪಠಿಷಿ | ಪಿಪಠಿಷೋಃ, ಪಿಪಠಿಷ್+ಸು ಎಂದಿರುವಾಗ ಹಿಂದಿನಂತೆ ಷಕಾರ ಅಸಿದ್ಧವಾದುದರಿಂದ ಸಕಾರಕ್ಕೆ ರುತ್ವ. ಪಿಪಠಿರ್+ಸು. ಉಪಧೆಗೆ ದೀರ್ಘ. ಪಿಪಠೀರ್+ಸು. ಸುಪ್‌ಪರವಾದಾಗ ರುವಿಗೆ ಮಾತ್ರ ವಿಸರ್ಗವೆಂದುದರಿಂದ "ರೋಃಸುಪಿ" (ಸೂ ೨೭೦) ಸೂತ್ರದಿಂದ ರೇಫಕ್ಕೆ ವಿಸರ್ಗ. ಪಿಪಠೀಃ+ಸು. "ವಾಶರಿ" ಸೂತ್ರದಿಂದ ವಿಸರ್ಗಕ್ಕೆ ವಿಸರ್ಗವೇ ಬಂದರೆ ಪಿಪಠೀಃಸು ಎಂದಿರುವಾಗ, "ವಿಸರ್ಜನೀಯಸ್ಯ ಸಃ" ಸೂತ್ರದಿಂದ ವಿಸರ್ಗಕ್ಕೆ ಸಕಾರಾದೇಶ ಬಂದರೆ ಪಿಪಠೀಸ್‌ಸು, ಎಂದಿರುವಾಗಲೂ ಸುಪಿನ ಸಕಾರಕ್ಕೆ ಷತ್ವ ಹೇಳುತ್ತಾನೆ.

(ನುಮಾದಿವ್ಯವಧಾನವಿರುವಾಗ ಸಕಾರಕ್ಕೆ ಷತ್ವ ಹೇಳುವ ಸೂತ್ರ)

## ೩೫೪. ನುಮ್ವಿಸರ್ಜನೀಯ ಶರ್ವ್ಯವಾಯೇಽಪಿ

॥ ೮-೩-೫೮ ॥

**ಏತೈಃ ಪ್ರತ್ಯೇಕಂ ವ್ಯವಧಾನೇಽಪಿ ಇಣ್ಕುಭ್ಯಾಂ ಪರಸ್ಯ ಸಸ್ಯ ಮೂರ್ಧನ್ಯಾದೇಶಃ ॥ ಷ್ಟುತ್ವೇನ ಪೂರ್ವಸ್ಯ ಷಃ । ಪಿಪಠೀಷ್ಷು, ಪಿಪಠೀಃಷು । ಚಿಕೀಃ ಚಿಕೀರ್ಷೌ । ಚಿಕೀರ್ಷಃ । ಚಿಕೀರ್ಭ್ಯಾಮ್ । ಚಿಕೀರ್ಷು ॥**

ನುಮ್ವಿಸರ್ಜನೀಯಶರ್ವ್ಯವಾಯೇ, ಅಪಿ ॥ ದ್ವಿಪದಸೂತ್ರ. "ಇಣ್ಕೋಃ" "ಅಪದಾಂತಸ್ಯ ಮೂರ್ಧನ್ಯಃ" ಅಧಿಕಾರ. ವ್ಯವಾಯವೆಂದರೆ ವ್ಯವಧಾನ. ನುಮ್, ವಿಸರ್ಜನೀಯ, ಶರ್, ಈ ಮೂರರ ವ್ಯವಧಾನದಲ್ಲಿ ಎಂದಿರುವಾಗ ಪ್ರತ್ಯೇಕ ಒಂದೊಂದರ ವ್ಯವಧಾನವು ಇಲ್ಲಿ ವಿವಕ್ಷಿತವೆಂದು ಭಾಷ್ಯದಲ್ಲಿ ಹೇಳಿದೆ. **ಸೂತ್ರಾರ್ಥ.** ನುಮ್, ವಿಸರ್ಗ, ಶರ್ (ಶಷಸ) ಇವುಗಳಿಂದ ಒಂದೊಂದರ ವ್ಯವಧಾನವಿರುವಾಗ ಇಣ್ ಕವರ್ಗದ ಪರದಲ್ಲಿರುವ ಸಕಾರಕ್ಕೆ ಮೂರ್ಧನ್ಯಾದೇಶ (ಷ) ಬರುತ್ತದೆ. ಪ್ರಕೃತ ವಿಸರ್ಗವಿರುವ ರೂಪದಲ್ಲಿ ಇಣ್ ಎಂದರೆ ಠಕಾರದಮೇಲಿರುವ ಇಕಾರ. ಅದಕ್ಕೂ ಸಕಾರಕ್ಕೂ ವಿಸರ್ಗವ್ಯವಧಾನವಿರುವುದರಿಂದ ಸಕಾರಕ್ಕೆ ಷಕಾರ ಬಂದರೆ ಪಿಪಠೀಃ ಷು ಎಂದಾಗುತ್ತದೆ. ವಿಸರ್ಗಕ್ಕೆ ಸತ್ವಬಂದಾಗ ಮಧ್ಯದಲ್ಲಿ ಶರ್ ವ್ಯವಧಾನವಿದೆ ಎಂದು ಸಕಾರಕ್ಕೆ ಷತ್ವ, ಪಿಪಠೀಸ್ಷು, ವಿಸರ್ಗದ ಸಕಾರಕ್ಕೆ ಷಕಾರದ ಯೋಗವಿರುವುದರಿಂದ "ಷ್ಟುನಾ ಷ್ಟುಃ" ಸೂತ್ರದಿಂದ ಷ್ಟುತ್ವ. ಪಿಪಠೀಷ್ಷು ಎಂದು ಎರಡನೇ ರೂಪ.

---

ಷಕಾರಾಂತ "ಚಿಕೀರ್ಷ್" ಶಬ್ದ. (ಮಾಡಲು ಬಯಸುವವನು)

ಕರ್ತುಂ ಇಚ್ಛತಿ (ಮಾಡಲು ಬಯಸುತ್ತಾನೆ) ಎಂಬರ್ಥದಲ್ಲಿ ಕೃಞ್ ಧಾತುವಿಗೆ ಸನ್ ಪ್ರತ್ಯಯ ಬಂದರೆ ಚಿಕೀರ್ಷ ಎಂದಾಗುತ್ತದೆ. ಇದಕ್ಕೆ ಕ್ವಿಪ್ ಬಂದರೆ ಚಿಕೀರ್ಷ್ ಶಬ್ದವಾಗುತ್ತದೆ. ಕೃದಂತವಾದುದರಿಂದ ಪ್ರಾತಿಪದಿಕ ಸಂಜ್ಞಾ. ಚಿಕೀರ್ಷ್+ಸ್ ಎಂದಿರುವಾಗ "ಹಲ್ಙ್ಯಾಭ್ಯಃ"–ಸೂತ್ರದಿಂದ ಸುಲೋಪ. ಇಲ್ಲಿಯೂ ಸನಿನ ಸಕಾರಕ್ಕೆ ಷತ್ವ ಬಂದುದು ಅಸಿದ್ಧವಾದುದರಿಂದ ಸಕಾರವಿದ್ದಂತೇ ಇರುವುದರಿಂದ ಚಿಕೀರ್ಸ್ ಎಂದಿರುವಾಗ ರೇಫದ ಪರದಲ್ಲಿ ಸಕಾರ ಬಂದುದರಿಂದ "ರಾತ್ಸಸ್ಯ" ಸೂತ್ರದಿಂದ ಸಂಯೋಗಾಂತ್ಯದ ಸಕಾರಕ್ಕೆ ಲೋಪ. ಚಿಕೀರ್. ಅವಸಾನದಲ್ಲಿ "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ರೇಫಕ್ಕೆ ವಿಸರ್ಗ. ಚಿಕೀಃ. ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಚಿಕೀರ್ಷೌ–ಚಿಕೀರ್ಷಃ ಇತ್ಯಾದಿ. ಹಲಾದಿಯಲ್ಲಿಯೂ ಪದಸಂಜ್ಞೆಯಿರುವುದರಿಂದ "ರಾತ್ಸಸ್ಯ" ಸೂತ್ರ

ಧಿಂದ ಸಕಾರಕ್ಕೆ ಲೋಪ. ಚಿಕೀರ್ಭ್ಯಾಮ್-ಚಿಕೀರ್ಭಿಃ। ಇತ್ಯಾದಿ. ಸಪ್ತಮೀ ಸುವಿನಲ್ಲಿ ಚಿಕೀರ್ಷ್+ಸು ಎಂದಿರುವಾಗ ಹಿಂದಿನಂತೆ ಸಕಾರಕ್ಕೆ ಲೋಪ. ಚಿಕೀರ್ +ಸು. ಇಲ್ಲಿ ಸ್ವಾಭಾವಿಕ ರೇಫವಿರುವುದರಿಂದ ಅದಕ್ಕೆ ವಿಸರ್ಗ ಬರುವುದಿಲ್ಲ. ಸುಪ್ ಪರವಾದಾಗ ರುವಿನ ರೇಫಕ್ಕೆ ವಿಸರ್ಗವೆಂದು "ರೋಃ ಸುಪಿ" ಸೂತ್ರದಿಂದ ನಿಯಮಮಾಡಿರುವುದರಿಂದ ಇಲ್ಲಿ ಸಕಾರಕ್ಕೆ ರು ಬಂದು ರೇಫವಾಗಿಲ್ಲ. ಆದುದರಿಂದ ಚಿಕೀರ್ ಸು ಎಂದೇ ಇರುವಾಗ "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷತ್ವ. ಚಿಕೀರ್ಷು.

ಸಕಾರಾಂತ "ವಿದ್ವಸ್" ಶಬ್ದ. (ಪಂಡಿತ)

**ವಿದ್ವಾನ್ । ವಿದ್ವಾಂಸೌ । ವಿದ್ವಾಂಸಃ । ಹೇ ವಿದ್ವನ್ । ವಿದ್ವಾಂಸಮ್ । ವಿದ್ವಾಂಸೌ ।**

ವಿದ ಜ್ಞಾನೇ ಧಾತು. ಇದಕ್ಕೆ ಶತೃಪ್ರತ್ಯಯ ಬಂದಾಗ ಅದಕ್ಕೆ ವಸುರಾದೇಶ. ವಸುವಿನಲ್ಲಿ ಉಕಾರ ಇತ್. ವಿದ್ವಸ್ ಸಾಂತವಾಗುತ್ತದೆ. ವಿದ್ವಸ್+ಸ್ ಎಂದಿರುವಾಗ ಉಗಿತ್ತಾದುದರಿಂದ "ಉಗಿದಚಾಂ"—ಸೂತ್ರದಿಂದ ನುಮಾಗಮ. ವಿದ್ವನ್ ಸ್+ಸ್. "ಸಾಂತಮಹತಃ"-ಸೂತ್ರದಿಂದ ನಾಂತದ ಉಪಧೆಗೆ ದೀರ್ಘ. ವಿದ್ವಾನ್ ಸ್+ಸ್ "ಹಲ್ಙ್ಯಾಭ್ಯೋ"—ಸೂತ್ರದಿಂದ ಸುಲೋಪ. "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ಸಕಾರಲೋಪ. ವಿದ್ವಾನ್. ಸರ್ವನಾಮಸ್ಥಾನ ಪರವಾದಾಗ ನುಮಾಗಮ ದೀರ್ಘ. ವಿದ್ವಾನ್ ಸ್+ಔ. "ನಶ್ಚಾಪದಾಂತಸ್ಯ ಝಲಿ" ಸೂತ್ರದಿಂದ ನಕಾರಕ್ಕೆ ಅನುಸ್ವಾರ. ವಿದ್ವಾಂಸೌ—ವಿದ್ವಾಂಸಃ ॥ ಸಂಬುದ್ಧಿಯಲ್ಲಿ "ಅಸಂಬುದ್ಧೌ" ಎಂದು ದೀರ್ಘನಿಷೇಧಮಾಡಿರುವುದರಿಂದ ದೀರ್ಘಬರುವುದಿಲ್ಲ. ಹೇ ವಿದ್ವನ್-ಹೇ ವಿದ್ವಾಂಸೌ-ಹೇ ವಿದ್ವಾಂಸಃ ॥ ದ್ವಿತೀಯಾದಲ್ಲಿ ಅಮ್+ಔಗಳಲ್ಲಿ ಹಿಂದಿನಂತೆ ಕಾರ್ಯಬರುತ್ತವೆ. ವಿದ್ವಾಂಸಮ್-ವಿದ್ವಾಂಸೌ. ವಿದ್ವಸ್+(ಶ್) ಅಸ್ ಎಂದಿರುವಾಗ ವಕಾರಕ್ಕೆ ಉತ್ವ ಹೇಳುತ್ತಾನೆ.

(ವಸುಪ್ರತ್ಯಯಾಂತಕ್ಕೆ ಸಂಪ್ರಸಾರಣ ಹೇಳುವ ಸೂತ್ರ)

## ೩೫೫. ವಸೋಃ ಸಂಪ್ರಸಾರಣಮ್ ॥ ೬-೪-೧೩೧ ॥

**ವಸ್ವಂತಸ್ಯ ಭಸ್ಯ ಸಂಪ್ರಸಾರಣಂ ಸ್ಯಾತ್ । ವಿದುಷಃ ॥ ವಸುಸ್ರಂಸ್ವಿತಿದಃ ॥ ವಿದ್ವದ್ಭ್ಯಾಮ್ ॥ ಇತ್ಯಾದಿ.**

ದ್ವಿಪದ ಸೂತ್ರ. "ಭಸ್ಯ" ಅಧಿಕಾರ. ವಸುಪ್ರತ್ಯಯ. "ಪ್ರತ್ಯಯಗ್ರಹಣೇ ತದಂತ ಗ್ರಹಣಮ್" ಪರಿಭಾಷೆಯಿಂದ ವಸ್ವಂತವೆಂದು ತೆಗೆದುಕೊಳ್ಳಬೇಕು. **ಸೂತ್ರಾರ್ಥ.** ವಸ್ವಂತವಾದ ಭ ಸಂಜ್ಞೆಯುಳ್ಳ ಅಂಗಕ್ಕೆ ಸಂಪ್ರಸಾರಣ ಬರುತ್ತದೆ. "ಇಗ್ಯಣಃ ಸಂಪ್ರಸಾರಣಮ್" ಸೂತ್ರದಿಂದ ಯಣಿನ ಸ್ಥಾನಕ್ಕೆ ಬರುವ ಇಕ್ಕಿಗೆ

ಸಂಪ್ರಸಾರಣವೆಂದು ಹೆಸರು. ಪ್ರಕೃತ ವಸ್ವಂತವಾದ ಅಂಗ ವಿದ್ವಸ್. ಇದಕ್ಕೆ ಶಸಾದಿ ವಿಭಕ್ತಿ ಪರದಲ್ಲಿರುವುದರಿಂದ "ಯಚಿ ಭಮ್" ಸೂತ್ರದಿಂದ ಭ ಸಂಜ್ಞೆಯಿರುವುದರಿಂದ ವಿದ್ವಸಿನಲ್ಲಿರುವ ವಕಾರಕ್ಕೆ ಸಂಪ್ರಸಾರಣ ಉಕಾರ ಬರುತ್ತದೆ. ವಿದ್ಉಸ್+ಅಸ್. "ಆದೇಶಪ್ರತ್ಯಯಯೋಃ" ಸೂತ್ರದಿಂದ ಇಣಿನ ಪರದಲ್ಲಿ ಸಕಾರ ಬರುವುದರಿಂದ ಅದಕ್ಕೆ ಷತ್ವ. ವಿದುಷಸ್. ಅಂತ್ಯ ಸಕಾರಕ್ಕೆ ರುತ್ವ ವಿಸರ್ಗ. ವಿದುಷಃ. ಇನ್ನು ಅಜಾದಿಯಲ್ಲಿ ಭ ಸಂಜ್ಞೆಯಿರುವುದರಿಂದ ಹೀಗೆ ಸಂಪ್ರಸಾರಣ ಷತ್ವ. ತೃ॥ ವಿದುಷಾ— ವಿದ್ವಸ್+ಭ್ಯಾಮ್ ಎಂದಿರುವಾಗ ವಸ್ವಂತವಾದುದರಿಂದ "ವಸುಸ್ರಂಸು—" (ಸೂ ೨೬೪) ಸೂತ್ರದಿಂದ ಸಕಾರಕ್ಕೆ ದಕಾರಾದೇಶ. ವಿದ್ವದ್ಭ್ಯಾಮ್–ವಿದ್ವದ್ಭಿಃ॥ ಚ–ವಿದುಷೇ–ವಿದ್ವದ್ಭ್ಯಾಮ್–ವಿದ್ವದ್ಭ್ಯಃ॥ ಪಂ–ವಿದುಷಃ–ವಿದ್ವದ್ಭ್ಯಾಮ್–ವಿದ್ವದ್ಭ್ಯಃ ॥ ಷ–ವಿದುಷಃ–ವಿದುಷೋಃ–ವಿದುಷಾಮ್ ಸ–ವಿದುಷಿ–ವಿದುಷೋಃ–ವಿದ್ವಸ್+ಸು ಎಂದಿರುವಾಗ ಹಿಂದಿನಂತೆ ಸಕಾರಕ್ಕೆ ದತ್ವ. ವಿದ್ವದ್+ಸು. "ಖರಿಚ" ಸೂತ್ರದಿಂದ ದಕಾರಕ್ಕೆ ಚರ್ತ್ವ. ವಿದ್ವತ್ಸು.

---

ಸಕಾರಾಂತ ಪುಂಸ್ ಶಬ್ದ. (ಪುರುಷ)

ಪೂಙ್ ಪವನೇ ಧಾತು. ಇದಕ್ಕೆ ಡುಮ್ಸುನ್ ಪ್ರತ್ಯಯಬಂದು ಪುಂಸ್ ಶಬ್ದವಾಗಿದೆ. ಇದಕ್ಕೆ ಸು ಮುಂತಾದ ಸರ್ವನಾಮಸ್ಥಾನಪರವಾದಾಗ ಅಸುಙ್ ಆದೇಶ ಹೇಳುತ್ತಾನೆ.

(ಪುಂಸ್ ಶಬ್ದಕ್ಕೆ ಅಸುಙ್ ಆದೇಶ ಹೇಳುವ ಸೂತ್ರ)

**೩೫೩. ಪುಂಸೋಽಸುಙ್ ॥ ೭-೧-೮೯ ॥**

**ಸರ್ವನಾಮಸ್ಥಾನೇ ವಿವಕ್ಷಿತೇ ಪುಂಸೋಽಸುಙ್ ಸ್ಯಾತ್ ॥ ಪುಮಾನ್ । ಹೇ ಪುಮನ್ । ಪುಮಾಂಸೌ–ಪುಮಾಂಸಃ॥ ಪುಂಸಃ । ಪುಮ್ಭ್ಯಾಮ್ । ಪುಂಸು ॥ ಋದುಶನೇತ್ಯನಙ್ । ಉಶನಾ । ಉಶನಸೌ । ವಾ ॥ (ಅಸ್ಯ ಸಂಬುದ್ಧೌ ವಾನಙ್, ನಲೋಪಶ್ಚ ವಾ ವಾಚ್ಯಃ । ) ಹೇ ಉಶನ, ಹೇ ಉಶನನ್, ಹೇ ಉಶನಃ । ಹೇ ಉಶನಸೌ । ಉಶನೋಭ್ಯಾಮ್ । ಉಶನಸ್ಸು । ಅನೇಹಾ । ಅನೇಹಸೌ–ಅನೇಹಸಃ । ಹೇ ಅನೇಹಃ ॥ ವೇಧಾಃ । ವೇಧಸೌ ॥ ಹೇ ವೇಧಃ । ವೇಧೋಭ್ಯಾಮ್ ॥**

ಪುಂಸಃ, ಅಸುಙ್॥ ದ್ವಿಪದಸೂತ್ರ. "ಇತೋತ್ಸರ್ವನಾಮಸ್ಥಾನೇ" ಸೂತ್ರದಿಂದ "ಸರ್ವನಾಮಸ್ಥಾನೇ" ಎಂಬ ಪದ ಅನುವೃತ್ತವಾಗುತ್ತದೆ. ಸಪ್ತಮಿಯಿರುವುದರಿಂದ ಪರಸಪ್ತಮಿಯೆಂದು ಲಬ್ಧವಾದರೂ ಇಲ್ಲಿ ವಿವಕ್ಷಿತೇ ಎಂದು ಅಧ್ಯಾಹಾರಮಾಡಿ

ಕೊಳ್ಳಬೇಕು. ಹೀಗೆ ಮಾಡುವುದರಿಂದ ಸ್ವರದಲ್ಲಿ ಪ್ರಯೋಜನವಿದೆ. ಸೂತ್ರಾರ್ಥ. ಸರ್ವನಾಮಸ್ಥಾನ (ಸುಟ್) ವಿವಕ್ಷೆಮಾಡಿದಾಗ ಪುಂಸ್ ಶಬ್ದಕ್ಕೆ ಅಸುಙ್ ಆದೇಶ ಬರುತ್ತದೆ. ಅಸುಙ್ ಎಂಬಲ್ಲಿ ಅಸ್ ಉಳಿಯುತ್ತದೆ. ಙಕಾರ "ಹಲಂತ್ಯಮ್" ಸೂತ್ರದಿಂದ ಇತ್. ಉಕಾರ ಉಚ್ಚಾರಣಾರ್ಥ. ಇದು ಅನೇಕಾಚ್ಕವಾದರೂ ಙಿತ್ತಾದುದರಿಂದ "ಙಿಚ್ಚ" ಸೂತ್ರದಿಂದ ಅಂತಾದೇಶವಾಗಿ ಬರುತ್ತದೆ. ಪುಮ್ ಸ್ ಎಂಬಲ್ಲಿ ಸಕಾರಕ್ಕೆ ಅಸ್ ಆದೇಶಬಂದರೆ ಪುಮಸ್ ಎಂದಾಗುತ್ತದೆ. ಸುಪರವಾದಾಗ ಉಗಿತ್ತಾದುದರಿಂದ (ಅಸುಙಿನಲ್ಲಿ ಉಕಾರ ಇತ್) "ಉಗಿದಚಾಂ ಸರ್ವನಾ"-ಸೂತ್ರದಿಂದ ನುಮಾಗಮ. ಪುಮನ್ ಸ್+ಸ್. ಸಾಂತ ಸಂಯೋಗವಾದುದರಿಂದ "ಸಾಂತ ಮಹತಃ ಸಂಯೋಗಸ್ಯ" ಸೂತ್ರದಿಂದ ನಕಾರದ ಉಪಧೆಗೆ (ಮಕಾರದ ಮೇಲಿರುವ ಅಕಾರಕ್ಕೆ) ದೀರ್ಘ. ಪುಮಾನ್ ಸ್+ಸ್. "ಹಲ್ಙ್ಯಾಬ್ಭ್ಯೋ"-ಸೂತ್ರದಿಂದ ಸುಲೋಪ. "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ ಅಂತ್ಯದ ಸಕಾರಕ್ಕೆ ಲೋಪ. ಪುಮಾನ್. ಪುಂಸ್+ಔ ಎಂದಿರುವಾಗ ಹಿಂದಿನಂತೆ ಅಸುಙ್. ನುಮ್. ದೀರ್ಘ. ಪುಮಾನ್ ಸ್+ಔ, ಪದಸಂಜ್ಞೆಯಿಲ್ಲದಿರುವುದರಿಂದ ಸಂಯೋಗಾಂತಲೋಪ ಬರುವುದಿಲ್ಲ. ನಕಾರಕ್ಕೆ "ನಶ್ಚಾಪದಾಂತಸ್ಯ"-ಸೂತ್ರದಿಂದ ಅನುಸ್ವಾರ ಪುಮಾಂಸೌ-ಪುಮಾಂಸಃ । ಸಂಬುದ್ಧಿಯಲ್ಲಿ "ಅಸಂಬುದ್ಧೌ" ಎಂದು ನಿಷೇಧ ಮಾಡಿರುವುದರಿಂದ ದೀರ್ಘ ಬರುವುದಿಲ್ಲ. ಹೇಪುಮನ್. ಹೇಪುಮಾಂಸೌ-ಹೇ ಪುಮಾಂಸಃ ॥ ದ್ವಿ-ಪುಮಾಂಸೌ-ಇಲ್ಲಿಯವರೆಗೆ ಸರ್ವನಾಮಸ್ಥಾನವಾದುದರಿಂದ ಹಿಂದೆ ಹೇಳಿದ ಕಾರ್ಯಗಳೇ ಬರುತ್ತವೆ. ಶಸಾದಿಯಲ್ಲಿ ಕಾರ್ಯವಿಲ್ಲ. ಪುಂಸ್+ಅಸ್ ಪುಂಸಃ ॥ ತೃ-ಪುಂಸಾ-ಪುಮ್ ಸ್+ಭ್ಯಾಮ್ ಎಂದಿರುವಾಗ "ಸಂಯೋಗಾಂತಸ್ಯ ಲೋಪಃ" ಸೂತ್ರದಿಂದ. ಸಕಾರಲೋಪ. "ನಶ್ಚಾಪದಾಂತಸ್ಯ ಝಲಿ" ಸೂತ್ರದಿಂದ ಮಕಾರಕ್ಕೆ ಅನುಸ್ವಾರ. ಪುಂಭ್ಯಾಮ್. "ಅನುಸ್ವಾರಸ್ಯ"-ಸೂತ್ರದಿಂದ ಅದಕ್ಕೆ ಪರಸವರ್ಣ (ಮ) ಪುಮ್‌ಭ್ಯಾಮ್-ಹಲಾದಿಯಲ್ಲಿ ಹೀಗೆ ಎರಡುಕಾರ್ಯ. ಪುಮ್‌ಭಿಃ. ಚ॥ ಪುಂಸೇ-ಪುಮ್‌ಭ್ಯಾಮ್-ಪುಮ್‌ಭ್ಯಃ । ಷ-ಪುಂಸಃ-ಪುಂಸೋಃ-ಪುಂಸಾಮ್ । ಸ-ಪುಂಸಿ-ಪುಂಸೋಃ-ಪುಂಸು. ಇಲ್ಲಿ ಯಯ್ ಪರವಾಗದಿರುವುದರಿಂದ ಪರಸವರ್ಣ ಬರುವುದಿಲ್ಲ.

---

## ಸಕಾರಾಂತ ಉಶನಸ್ ಶಬ್ದ. (ಶುಕ್ರಾಚಾರ್ಯ)

ಉಶನಸ್+ಸ್ ಎಂದಿರುವಾಗ "ಋದುಶನ" (ಸೂ. ೨೦೫) ಸೂತ್ರದಿಂದ ಅನಙ್ ಆದೇಶ. ಙಿತ್ತಾದುದರಿಂದ ಅಂತಾದೇಶ. ಉಶನ+ಅನ್+ಸ್. "ಅತೋಗುಣೇ." ಪರರೂಪ. ಉಶನನ್+ಸ್. ನಾಂತವಾದುದರಿಂದ "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರದಿಂದ ಉಪಧಾದೀರ್ಘ. ಉಶನಾನ್+ಸ್. "ಹಲ್ಙ್ಯಾಬ್ಭ್ಯೋ"-ಸೂತ್ರದಿಂದ ಸುಲೋಪ "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರ

ದಿಂದ ಕೊನೆಯ ನಕಾರಕ್ಕೆ ಲೋಪ. ಉಶನಾ. ಸುವಿನಲ್ಲಿಮಾತ್ರ ಅನಙಾದೇಶ. ಇನ್ನು ಅಜಾದಿಯಲ್ಲಿ ಕಾರ್ಯವಿಲ್ಲ. ಉಶನಸೌ-ಉಶನಸಃ || ಸಂಬುದ್ಧಿಯಲ್ಲಿ ಉಶನಸ್+ಸ್ ಎಂದಿರುವಾಗ ವಾರ್ತಿಕದಿಂದ ವಿಶೇಷಕಾರ್ಯ ಹೇಳುತ್ತಾನೆ. ವಾರ್ತಿಕಾರ್ಥ. ಉಶನಸ್ ಶಬ್ದಕ್ಕೆ ಸಂಬುದ್ಧಿ (ಸ್) ಪರದಲ್ಲಿರುವಾಗ ವಿಕಲ್ಪವಾಗಿ ಅನಙ್ ಆದೇಶವೂ ವಿಕಲ್ಪವಾಗಿ ಸಲೋಪವೂ ಬರುತ್ತವೆ. ಅನಙ್ ಬಂದರೆ ಉಶನನ್+ಸ್. ಇಲ್ಲಿ ಸಂಬುದ್ಧಿಯಲ್ಲಿ ದೀರ್ಘ ನಿಷೇಧಮಾಡಿರುವುದರಿಂದ ದೀರ್ಘ ಬರುವುದಿಲ್ಲ. "ಹಲ್‌ಙ್ಯಾ"-ಸೂತ್ರದಿಂದ ಸುಲೋಪಬಂದಮೇಲೆ ಹಿಂದಿನಂತೆ ಪದಾಂತದ ನಕಾರಕ್ಕೆ ಲೋಪಬರಬೇಕು. ವಾರ್ತಿಕದಿಂದ ವಿಕಲ್ಪಲೋಪವೆಂದ್ದುದ್ದರಿಂದ ಲೋಪಬಂದರೆ ಹೇ ಉಶನ. ಬಾರದಿದ್ದರೆ ಹೇ ಉಶನನ್. ಅನಙ್ ವಿಕಲ್ಪವೆಂದುದರಿಂದ ಉಶನಸ್ ಎಂದೇ ಉಳಿಯುತ್ತದೆ. ಆಗ ಪದಾಂತ ಸಕಾರಕ್ಕೆ ರುತ್ವ ವಿಸರ್ಗ. ಹೇ ಉಶನಃ. ಹೀಗೆ ಮೂರುರೂಪಗಳಾಗುತ್ತವೆ. ಹೇ ಉಶನಸೌ-ಹೇ ಉಶನಸಃ | ದ್ವಿ-ಉಶನಸಮ್-ಉಶನಸೌ-ಉಶನಸಃ | ತೃ-ಉಶನಸಾ ಉಶನಸ್+ಭ್ಯಾಮ್ ಎಂದಿರುವಾಗ "ಸಸಜುಷೋರುಃ" ಸೂತ್ರದಿಂದ ಸಕಾರಕ್ಕೆ ರುತ್ವ. ಉಶನರ್+ಭ್ಯಾಮ್. "ಹಶಿಚ" ಸೂತ್ರದಿಂದ ಆ ರುವಿಗೆ ಉತ್ವ. ಉಶನ+ಉ+ಭ್ಯಾಮ್. "ಆದ್ಗುಣಃ" ಉಶನೋಭ್ಯಾಮ್. ಹಲಾದಿಯಲ್ಲಿ ಹೀಗೇ ರುತ್ವ, ಉತ್ವ, ಗುಣ. ಉಶನೋಭಿಃ|| ಚ|| ಉಸನಸೇ-ಉಶನೋಭ್ಯಾಮ್-ಉಶನೋಭ್ಯಃ | ಪಂ-ಉಶನಸಃ-ಉಶನೋಭ್ಯಾಮ್-ಉಶನೋಭ್ಯಃ | ಷ-ಉಶನಸಃ-ಉಶನಸೋಃ-ಉಶನಸಾಮ್ || ಸ-ಉಶನಸಿ-ಉಶನಸೋಃ-ಉಶನಸ್+ಸು ಎಂದಿರುವಾಗ ಸಕಾರಕ್ಕೆ ಹಿಂದಿನಂತೆ ರುತ್ವ. ಉಶನರ್+ಸು. ಇಲ್ಲಿ ಹಶ್‌ಪರದಲ್ಲಿ ಇಲ್ಲದಿರುವುದರಿಂದ ರುವಿಗೆ ಉತ್ವವಿಲ್ಲ. ಖರ್‌ಪರದಲ್ಲಿರುವುದರಿಂದ "ರೋಃಸುಪಿ" ಸೂತ್ರದಿಂದ ವಿಸರ್ಗ. ಉಶನಃಸು. "ವಿಸರ್ಜನೀಯಸ್ಯಸಃ" ವಿಸರ್ಗಕ್ಕೆ ಸತ್ವ. ಉಶನಸ್ಸು.

---

ಸಕಾರಾಂತ, "ಅನೇಹಸ್" ಶಬ್ದ. (ಕಾಲ)

ಅನೇಹಸ್+ಸ್ ಎಂದಿರುವಾಗ "ಋದುಶನ"-(ಸೂ ೨೦೫) ಸೂತ್ರದಿಂದ ಅನಙ್ ಆದೇಶ. ಅನಙಿನಲ್ಲಿ ಅನ್ ಉಳಿಯುತ್ತದೆ. ಙಿತ್ತಾದುದರಿಂದ ಅಂತ್ಯವಾದ ಸಕಾರಕ್ಕೆ ಆದೇಶಬಂದರೆ ಅನೇಹನ್+ಸ್ ಎಂದಾಗುತ್ತದೆ. "ಸರ್ವನಾಮಸ್ಥಾನೇ ಚಾಽಸಂಬುದ್ಧೌ" ಸೂತ್ರದಿಂದ ನಾಂತದ ಉಪಧೆಗೆ ದೀರ್ಘ. ಅನೇಹಾನ್+ಸ್. "ಹಲ್‌ಙ್ಯಾಭ್ಯೋ—" ಸೂತ್ರದಿಂದ ಸುಲೋಪ. "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ. ಅನೇಹಾ. ಇನ್ನು ಅಜಾದಿಯಲ್ಲಿ ಕಾರ್ಯವಿಲ್ಲ. ಅನೇಹಸೌ-ಅನೇಹಸಃ | ಸಂಬುದ್ಧಿಯಲ್ಲಿ ನಿಷೇಧಮಾಡಿರುವುದರಿಂದ ಅನಙ್ ಆದೇಶವಿಲ್ಲ. ಅನೇಹಸ್ ಎಂದಿರುವಾಗ ಸಕಾರಕ್ಕೆ ರುತ್ವವಿಸರ್ಗ ಹೇ ಅನೇಹಃ ಹೇ ಅನೇಹಸೌ-ಹೇ ಅನೇಹಸಃ | ದ್ವಿ | ಅನೇಹಸಮ್-ಅನೇಹಸೌ-ಅನೇಹಸಃ | ತೃ-ಅನೇಹಸಾ-

ಅನೇಹಸ್+ಭ್ಯಾಮ್ ಎಂದಿರುವಾಗ ಸಕಾರಕ್ಕೆ ರುತ್ವ. "ಹಶಿಚ" ಸೂತ್ರದಿಂದ ಅದಕ್ಕೆ ಉತ್ವ. ಅನೇಹ+ಉ+ಭ್ಯಾಮ್ ಗುಣ. ಅನೇಹೋಭ್ಯಾಮ್-ಅನೇಹೋಭಿಃ ಇತ್ಯಾದಿ. ಉಶನಸ್ ಶಬ್ದದಂತೆ ರೂಪ ತಿಳಿಯಬೇಕು.

---

## ಸಕಾರಾಂತ ವೇಧಸ್ ಶಬ್ದ. (ಬ್ರಹ್ಮನು)

ವೇಧಸ್+ಅಸ್ ಎಂದಿರುವಾಗ ಅಸಂತವಾಗಿರುವುದರಿಂದ "ಅತ್ವಸಂತಸ್ಯ ಚಾಧಾತೋಃ" ಸೂತ್ರದಿಂದ ಉಪಧಾದೀರ್ಘ. ವೇಧಾಸ್+ಸ್. "ಹಲ್ ಙ್ಯಾಭ್ಯೋ-" ಸೂತ್ರದಿಂದ ಸುಲೋಪ ವೇಧಾಸ್. ಸಕಾರಕ್ಕೆ ರುತ್ವವಿಸರ್ಗ. ವೇಧಾಃ. ಅಜಾದಿಯಲ್ಲಿ ವಿಶೇಷಕಾರ್ಯವಿಲ್ಲ. ಭ್ಯಾಮಾದಿಗಳಲ್ಲಿ ಸಕಾರಕ್ಕೆ ಹಿಂದಿನಂತೆ ರುತ್ವ ಬಂದಾಗ "ಹಶಿಚ ಸೂತ್ರದಿಂದ ಅದಕ್ಕೆ ಉತ್ವ. ಅಕಾರೋಕಾರಗಳಿಗೆ ಗುಣ. ಪ್ರ. ವೇಧಾಃ-ವೇಧಸೌ-ವೇಧಸಃ । ಸಂಬುದ್ಧಿಯಲ್ಲಿ "ಅಸಂಬುದ್ಧೌ" ಎಂದು ದೀರ್ಘ ನಿಷೇಧಮಾಡಿರುವುದರಿಂದ ದೀರ್ಘವಿಲ್ಲ. ಹೇ ವೇಧಃ-ಹೇ ವೇಧಸೌ-ಹೇ ವೇಧಸಃ ॥ ದ್ವಿ-ವೇಧಸಂ-ವೇಧಸೌ-ವೇಧಸಃ । ತೃ-ವೇಧಸಾ-ವೇಧೋಭ್ಯಾಮ್-ವೇಧೋಭಿಃ ಇತ್ಯಾದಿ ಹಿಂದಿನಂತೇ ತಿಳಿಯಬೇಕು. ಸ॥ ವೇಧಸಿ-ವೇಧಸೋಃ ವೇಧಸ್ಸು ॥

---

## ಸಕಾರಾಂತ ಅದಸ್ ಶಬ್ದ. (ಇವನು)

ಇದು ಸರ್ವನಾಮ ಶಬ್ದ. ಅದಸ್+ಸ್ ಎಂದಿರುವಾಗ ಔಕಾರಾದೇಶ ಸುಲೋಪ ಹೇಳುತ್ತಾನೆ.

(ಅದಸಿಗೆ ಔತ್ವ, ಸುಲೋಪ ಹೇಳುವ ಸೂತ್ರ)

### ೩೫೭. ಅದಸ ಔ ಸುಲೋಪಶ್ಚ ॥ ೭-೨-೧೦೭ ॥

**ಅದಸಃ ಔಕಾರೋನ್ತಾದೇಶಃ ಸ್ಯಾತ್ಸೌ ಪರೇ ಸುಲೋಪಶ್ಚ । ತದೋರಿತಿ ಸಃ । ಅಸೌ । ತ್ಯದಾದ್ಯತ್ವಮ್ । ಪರರೂಪತ್ವಮ್ । ವೃದ್ಧಿಃ ।**

ಅದಸಃ, ಔ, ಸುಲೋಪಃ, ಚ ॥ ನಾಲ್ಕು ಪದಗಳುಳ್ಳ ಸೂತ್ರ. "ತದೋಃ ಸಃ ಸಾವನಂತ್ಯಯೋಃ" ಸೂತ್ರದಿಂದ "ಸೌ" ಅನುವೃತ್ತಿ. ಅದಸಃ ಷಷ್ಠೀ. ಸೂತ್ರಾರ್ಥ. ಸು ಪರದಲ್ಲಿರುವಾಗ ಅದಸ್ ಶಬ್ದಕ್ಕೆ ಔಕಾರ ಅಂತಾದೇಶವಾಗಿ ಬರುತ್ತದೆ. ಪರದ ಸುವಿಭಕ್ತಿಗೆ ಲೋಪವೂ ಆಗುತ್ತದೆ. "ಅಲೋಂತ್ಯಸ್ಯ" ಪರಿಭಾಷೆ ಇಲ್ಲಿ ಬರುವುದರಿಂದ ಅಂತಾದೇಶವೆಂದು ಲಬ್ಧವಾಗಿದೆ. ಸಕಾರಕ್ಕೆ ಔ ಬಂದರೆ ಅದ+ಔ. ಅಕಾರಕ್ಕೆ ಔ ಪರವಾದುದರಿಂದ "ವೃದ್ಧಿರೇಚಿ" ಸೂತ್ರದಿಂದ ವೃದ್ಧಿ.

ಅದೌ. ಅದಸ್ ಶಬ್ದ ತ್ಯದಾದಿಗಳಲ್ಲಿ ಸೇರಿರುವುದರಿಂದ ತ್ಯದಾದಿಗಳ ತಕಾರ ದಕಾರ ಗಳಿಗೆ ಸು ಪರವಾದಾಗ ಸಕಾರವನ್ನು "ತದೋಃ ಸಃ–" ಸೂತ್ರವು ಹೇಳುವುದರಿಂದ ಇಲ್ಲಿ ದಕಾರಕ್ಕೆ ಸಕಾರ. ಅಸೌ. ಅದಸ್+ಔ ಎಂದಿರುವಾಗ "ತ್ಯದಾದ್ಯತ್ವಮ್" "ತ್ಯದಾದೀನಾಮಃ" ಸೂತ್ರದಿಂದ ವಿಭಕ್ತಿ ಪರವಾದಾಗ ಅಕಾರ ಅಂತಾದೇಶ. ಇದು ತ್ಯದಾದಿಯಲ್ಲಿ ಸೇರಿರುವುದರಿಂದ ಕೊನೆಯ ಸಕಾರಕ್ಕೆ ಅಕಾರ. ಅದ+ಅ+ಔ. ಅಕಾರಕ್ಕೆ ಅಕಾರರೂಪ ಗುಣಪರವಾದುದರಿಂದ "ಅತೋಗುಣೇ" ಸೂತ್ರದಿಂದ ಪರರೂಪ. ಅದ+ಔ. "ವೃದ್ಧಿರೇಚಿ" ಸೂತ್ರದಿಂಧ ವೃದ್ಧಿ. ಅದೌ. ಈಗ ದಕಾರಕ್ಕೆ ಮಕಾರ ಔಕಾರಕ್ಕೆ ಊಕಾರ ಹೇಳುತ್ತಾನೆ.

(ಅದಸಿನ ದಕಾರಕ್ಕೆ ಮತ್ವ. ಮಕಾರದ ಪರಕ್ಕೆ ಉ ಊ ಹೇಳುವ ಸೂತ್ರ)

**೩೫೮. ಅದಸೋಽಸೇರ್ದಾದು ದೋಮಃ ॥ ೮–೨–೮೦ ॥**

**ಅದಸೋಽಸಾನ್ತಸ್ಯ ದಾತ್ಪರಸ್ಯ ಉದೂತೌ ಸ್ತಃ ದಸ್ಯ ಮಶ್ಚ । ಆಂತರ ತಮ್ಯಾತ್ ಹ್ರಸ್ವಸ್ಯ ಉಃ ದೀರ್ಘಸ್ಯ ಊಃ ॥ ಅಮೂ ॥ ಜಸಃಶೀ ॥ ಗುಣಃ ॥**

ಅದಸಃ, ಅಸೇಃ, ದಾತ್, ಉ, ದಃ, ಮಃ ॥ ಆರು ಪದಗಳುಳ್ಳ ಸೂತ್ರ ಅದಸಃ ಎಂಬಲ್ಲಿ ಅವಯವಾರ್ಥದಲ್ಲಿ ಷಷ್ಠೀ ಬಂದಿದೆ. "ಅಸೇಃ" ಎಂಬುದು ಅದಕ್ಕೆ ವಿಶೇಷಣ. "ನವಿದ್ಯತೇಸಿಃ ಯಸ್ಯಸಃ" ಅಸಿಃ, ತಸ್ಯ ಅಸೇಃ. ಸಕಾರವಿಲ್ಲ ದಿರುವ ಎಂದರ್ಥ. ಸಿ ಎಂಬಲ್ಲಿ ಇಕಾರ ಉಚ್ಚಾರಣಾರ್ಥ. ದಾತ್ ಪಂಚಮಿ ಯಾದುದರಿಂದ ಪರಸ್ಯ ಎಂದು ಲಬ್ಧವಾಗುತ್ತದೆ. ಸೂತ್ರಾರ್ಥ. ಸಕಾರಾನ್ತವಾಗ ದಿರುವ ಅದಸ್ ಶಬ್ದಾವಯವವಾದ ದಕಾರದ ಪರಕ್ಕೆ ಉಕಾರ, ಊಕಾರಗಳು ಬರುತ್ತವೆ, ದಕಾರಕ್ಕೆ ಮಕಾರವೂ ಬರುತ್ತದೆ. ಸೂತ್ರದಲ್ಲಿ ಉ ಎಂಬುದು ಉ, ಊ ಎರಡನ್ನೂ ಬೋಧಿಸುತ್ತದೆ. ಉಶ್ಚ ಊಶ್ಚ ತಯೋಃ ಸಮಾಹಾರಃ ಉ, ಸಮಾಹಾರ ದ್ವಂದ್ವ ಸಮಾಸ. ದಕಾರದ ಪರದಲ್ಲಿ ಹ್ರಸ್ವವಿದ್ದರೆ ಹ್ರಸ್ವ ಉಕಾರವೂ ದೀರ್ಘವಿದ್ದರೆ ದೀರ್ಘ ಊಕಾರವೂ ಸಾಮ್ಯದಿಂದ ಬರುತ್ತದೆ ಎಂದು ತಿಳಿಯಬೇಕು. ಪ್ರಕೃತ-ಅದೌ ಎಂಬಲ್ಲಿ ದಕಾರದ ಪರದಲ್ಲಿ ದೀರ್ಘ ಔಕಾರವಿರುವುದರಿಂದ ಊಕಾರ ಬಂದು ದಕಾರಕ್ಕೆ ಮಕಾರ ಬಂದರೆ ಅಮೂ ಎಂದಾಗುತ್ತದೆ. ಅದಸ್+ಜಸ್ ಎಂದಿರುವಾಗ ಹಿಂದಿನಂತೆ "ತ್ಯದಾದೀನಾಮಃ" ಸೂತ್ರದಿಂದ ಅಂತ್ಯಸಕಾರಕ್ಕೆ ಅಕಾರ. ಅದ+ಜಸ್. ಈಗ ಅದಂತವಾದ ಸರ್ವನಾಮದ ಪರದಲ್ಲಿ ಜಸ್ ಬಂದು ದರಿಂದ "ಜಸಃ ಶೀಃ" ಸೂತ್ರದಿಂದ ಜಸಿಗೆ ಶೀ ಆದೇಶ. ಅದ+ಈ. ಶೀ ಎಂಬಲ್ಲಿ "ಲಶಕ್ವತದ್ಧಿತೇ" ಸೂತ್ರದಿಂದ ಶಕಾರಕ್ಕೆ ಇತ್ ಸಂಜ್ಞೆ. ಇತ್ ಸಂಜ್ಞೆ ಬರಬೇಕಾ ದರೆ ಮೊದಲು ಅನೇಕಾಲಾದುದರಿಂದ ಸರ್ವಾದೇಶ ಬಂದಿದೆ. ಗುಣ. ಅದೇ ಎಂದಿ ರುವಾಗ ಏಕಾರಕ್ಕೆ ಈತ್ವ ಹೇಳುತ್ತಾನೆ.

(ಬಹುವಚನದಲ್ಲಿ ಅದಸಿನ ದಕಾರದ ಪರಕ್ಕೆ ಈತ್ವ ಹೇಳುವ ಸೂತ್ರ)

**೩೫೯. ಏತ ಈದ್ಬಹುವಚನೇ ॥ ೮-೨-೮೧ ॥**

**ಅದಸಃ ದಾತ್ಪರಸ್ಯೈತ ಈದ್ದಸ್ಯ ಚ ಮೋ ಬಹ್ವರ್ಥೋಕ್ತೌ ॥ ಅಮೀ ॥ ಪೂರ್ವತ್ರಾಸಿದ್ಧಮಿತಿ ವಿಭಕ್ತಿಕಾರ್ಯಂ ಪ್ರಾಕ್ ಪಶ್ಚಾದುತ್ವಮತ್ವೇ ॥ ಅಮುಮ್ । ಅಮೂ । ಅಮೂನ್ । ಮುತ್ವೇ ಕೃತೇ ಘಿಸಂಜ್ಞಾಯಾಂ ನಾಭಾವಃ ॥**

ಏತಃ, ಈತ್, ಬಹುವಚನೇ ॥ ತ್ರಿಪದಸೂತ್ರ. ಹಿಂದಿನ ಸೂತ್ರದಿಂದ ಅದಸಃ, ದಾತ್, ದಃ, ಮಃ, ಈ ನಾಲ್ಕು ಪದಗಳು ಅನುವೃತ್ತವಾಗುತ್ತವೆ. ಬಹುವಚನೇ ಎಂದಿದ್ದರೂ ಇದು ಪರಸಪ್ತಮಿಯಲ್ಲ. ಯೌಗಿಕವಾದ ಅರ್ಥವನ್ನು ತೆಗೆದುಕೊಳ್ಳಬೇಕು. ಬಹುವಚನ ಪರವಾದಾಗ ಎಂದು ಅರ್ಥ ಹೇಳಿದರೆ ಅದೇ ಎಂದು ರೂಪವಾದುದರಿಂದ ಇದಕ್ಕೆ ಬೇರೊಂದು ಬಹುವಚನಪರದಲ್ಲಿ ಇಲ್ಲದಿರುವುದರಿಂದ ಕಾರ್ಯ ಬಾರದೇ ಹೋಗಬೇಕಾಗುತ್ತದೆ. ಆದುದರಿಂದ ಬಹುತ್ವ ಹೇಳುವಾಗ ಎಂದರ್ಥ ಮಾಡಬೇಕು. **ಸೂತ್ರಾರ್ಥ.** ಅದಸ್ ಶಬ್ದ ಬಹುತ್ವಸಂಖ್ಯಾ ಹೇಳುತ್ತಿರುವಾಗ ಅದಸಿನ ಅವಯವವಾದ ದಕಾರದ ಪರದಲ್ಲಿರುವ ಏಕಾರಕ್ಕೆ ಈಕಾರವೂ ದಕಾರಕ್ಕೆ ಮಕಾರವೂ ಬರುತ್ತವೆ. ಅದೇ ಎಂಬಲ್ಲಿ ಏಕಾರಕ್ಕೆ ಈಕಾರ, ದಕಾರಕ್ಕೆ ಮಕಾರ ಬಂದರೆ ಅಮೀ ಎಂದಾಗುತ್ತದೆ. ಪ್ರ-ಅಸೌ-ಅಮೂ-ಅಮೀ... ತ್ಯದಾದಿಗಳಿಗೆ ಸಂಬೋಧನೆಯಿಲ್ಲವೆಂದು ಹಿಂದೆ ಹೇಳಿದೆ. ದ್ವಿತೀಯಾದಲ್ಲಿ ಅದಸ್+ಅಮ್ ಎಂದಿರುವಾಗ "ತ್ಯದಾದೀನಾಮಃ" ಅತ್ವ, ಪರರೂಪ. ಅದ+ಅಮ್. "ಅಮಿಪೂರ್ವಃ" ಪೂರ್ವರೂಪ. ಅದಮ್ ಇಲ್ಲಿ ದಕಾರದ ಪರದಲ್ಲಿ ಹ್ರಸ್ವವಿರುವುದರಿಂದ "ಅದಸೋಽಸೇಃ"-ಸೂತ್ರದಿಂದ ಹ್ರಸ್ವ ಉಕಾರ. ದಕಾರಕ್ಕೆ ಮಕಾರ. ಅಮುಮ್. ಅದಸ್+ಔ. ಪ್ರಥಮಾ ದ್ವಿವಚನದಂತೇ ಪ್ರಕ್ರಿಯಾ. ಅಮೂ. ಅದಸ್+(ಶ್) ಅಸ್. ತ್ಯದಾದ್ಯತ್ವ. ಪರರೂಪ. ಅದ+ಅಸ್. "ಪ್ರಥಮಯೋಃ"-ಸೂತ್ರದಿಂದ ಪೂರ್ವಸವರ್ಣದೀರ್ಘ. ಅದಾಸ್. ಪೂರ್ವಸವರ್ಣದೀರ್ಘದ ಪರದಲ್ಲಿ ಶಸಿನ ಸಕಾರ ಬಂದಿರುವುದರಿಂದ "ತಸ್ಮಾಚ್ಛಸೋಃ"-ಸೂತ್ರದಿಂದ ಸಕಾರಕ್ಕೆ ನಕಾರ ಅದಾನ್. ಈಗ "ಅದಸೋಽಸೇಃ"-ಸೂತ್ರದಿಂದ ದಕಾರಕ್ಕೆ ಮಕಾರ. ದಕಾರದ ಪರದ ಆಕಾರಕ್ಕೆ ಊಕಾರ. ಅಮೂನ್.

ಇಲ್ಲಿ ಮೊದಲೇ ಉತ್ವಮತ್ವ ಏಕೆ ಮಾಡಬಾರದು ಎಂಬ ಶಂಕೆ ಬರುತ್ತದೆ. ಹಾಗೆ ಮೊದಲೇ ಉತ್ವಮತ್ವ ಬಂದರೆ ಇಷ್ಟರೂಪವಾಗಲಾರದು. ಅದಸ್+ಔ ಎಂದು ಇರುವಾಗ ತ್ಯದಾದ್ಯತ್ವ, ಪರರೂಪ. ಅದ+ಔ. ಈಗ ಉತ್ವಮತ್ವ ಬಂದರೆ ಅಮು+ಔ ಎಂದಾಗುತ್ತದೆ. ಹೀಗಿರುವಾಗ ಯಣ್ ಬಂದು ಅನಿಷ್ಟರೂಪವಾಗಬೇಕಾಗುತ್ತದೆ. ಅದಕ್ಕೋಸ್ಕರ "ಪೂರ್ವತ್ರಾಸಿದ್ಧಂ"-ಎಂಬ ವಾಕ್ಯದಿಂದ ಕಾರ್ಯವಿವೇಕ

ವನ್ನು ಹೇಳುತ್ತಾನೆ. “ ಪೂರ್ವತ್ರಾಸಿದ್ಧಮ್ ” ಸೂತ್ರದಿಂದ ಸಪಾದ ಸಪ್ತಾಧ್ಯಾಯಿ ಕಾರ್ಯಗಳಿಗೆ ತ್ರಿಪಾದಿಕಾರ್ಯ ಅಸಿದ್ಧವಾಗುತ್ತದೆ ಎಂದು ಹೇಳಿದೆ. ಉತ್ವ ಮತ್ವ ಹೇಳುವ ಸೂತ್ರ ತ್ರಿಪಾದಿಯಲ್ಲಿದೆ. ಅದು ವಿಭಕ್ತಿ ಕಾರ್ಯಗಳಿಗೆ ಅಸಿದ್ಧವಾಗುವುದರಿಂದ ಮೊದಲು ವಿಭಕ್ತಿ ಕಾರ್ಯಗಳು ಬರುತ್ತವೆ. ಕೊನೆಯಲ್ಲಿ ಉತ್ವಮತ್ವ ಹೇಳಬೇಕು. ಆದರೆ ಉತ್ವಮತ್ವವನ್ನು ನಿಮಿತ್ತೀಕರಿಸಿ ಏನಾದರೂ ವಿಭಕ್ತಿಕಾರ್ಯ ಬರುವುದಾದರೆ ಆಗ ಅಲ್ಲಿ ಉತ್ವಮತ್ವ ಅಸಿದ್ಧವಾಗುವುದಿಲ್ಲವೆಂದು ತಿಳಿಯಬೇಕು. ನಿಮಿತ್ತವಾಗದಿರುವಾಗ ಅಸಿದ್ಧವೆಂದು ತಿಳಿಯಬೇಕು, ಆದುದರಿಂದಲೇ “ ಮುತ್ವೇಕೃತೇ ಘಿಸಂಜ್ಞಾಯಾಂ ನಾಭಾವಃ “ ಎಂದು ಹೇಳಿರುತ್ತಾನೆ. ತೃತೀಯಾ ಏಕವಚನದಲ್ಲಿ ಉತ್ವಮತ್ವ ಬಂದಮೇಲೆ ವಿಭಕ್ತಿಕಾರ್ಯ ಹೇಳಬೇಕು. ಅಲ್ಲಿ ಅಸಿದ್ಧವಾಗುವುದಿಲ್ಲ. ಅದಸ್+(ಟಾ) ಆ ಎಂದಿರುವಾಗ. ತ್ಯದಾದ್ಯತ್ವ, ಪರರೂಪ. ಅದ+ಆ. ಈಗ “ ಅದ ಸೋಽಸೇ ”–ಸೂತ್ರದಿಂದ ದಕಾರಕ್ಕೆ ಮಕಾರ, ಪರದ ಆಕಾರಕ್ಕೆ ಉಕಾರ. ಅಮು+ಆ. ಇದಕ್ಕೆ ಹ್ರಸ್ವ ಉಕಾರಾಂತವಾದುದರಿಂದ “ ಶೇಷೋಽಘ್ಯಸಖಿ ” ಸೂತ್ರದಿಂದ ಘಿಸಂಜ್ಞಾ ಬರುವುದರಿಂದ “ ಆಙೋನಾಽಸ್ತ್ರಿಯಾಂ ” ಸೂತ್ರದಿಂದ ವಿಭಕ್ತಿಗೆ ನಾ ಆದೇಶ. ಅಮುನಾ. ಇಲ್ಲಿ ಉಕಾರ ಅಸಿದ್ಧವಾದುದರಿಂದ ಹೇಗೆ ಘಿಸಂಜ್ಞಾ ಬರುತ್ತದೆ ? ಅಂದರೆ ನಿಮಿತ್ತವಾಗುವ ವಿಷಯದಲ್ಲಿ ಅಸಿದ್ಧವಿಲ್ಲವೆಂದು ತಿಳಿಸುತ್ತಾನೆ.

(ಮು ಭಾವಕ್ಕೆ ಅಸಿದ್ಧತ್ವವಿಲ್ಲವೆಂದು ತಿಳಿಸುವ ಸೂತ್ರ)

## ೩೬೦. ನ ಮು ನೇ ॥ ೮-೨-೩ ॥

**ನಾಭಾವೇ ಕರ್ತವ್ಯೇ ಕೃತೇ ಚ ಮುಭಾವೋ ನಾಸಿದ್ಧಃ। ಅಮುನಾ। ಅಮೂಭ್ಯಾಂ ೩ ॥ ಅಮೀಭಿಃ। ಅಮುಷ್ಮೈ। ಅಮೀಭ್ಯಃ ೨। ಅಮುಷ್ಮಾತ್। ಅಮುಷ್ಯ। ಅಮುಯೋಃ ೨। ಅಮೀಷಾಮ್। ಅಮುಷ್ಮಿನ್। ಅಮೀಷು ॥**

ಮೂರು ಪದಗಳುಳ್ಳ ಸೂತ್ರ. “ ಪೂರ್ವತ್ರಾಸಿದ್ಧಮ್ ” ಸೂತ್ರದಿಂದ “ ಅಸಿದ್ಧಮ್ ” ಅನುವೃತ್ತವಾಗುತ್ತದೆ. “ ಮ್ ಚ ಉಶ್ಚ ತಯೋಃ ಸಮಾಹಾರಃ ಮು ” ಸಮಾಹಾರದ್ವಂದ್ವ. ನಾ ಎಂಬುದರ ಸಪ್ತಮೀ ನೇ. **ಸೂತ್ರಾರ್ಥ.** ನಾ ಆದೇಶಮಾಡುವಾಗಲೂ ಮಾಡಿದ ಮೇಲೂ ಮು ಭಾವವು ಅಸಿದ್ಧವಾಗುವುದಿಲ್ಲ. ನಾಭಾವ ಮಾಡುವಾಗ ಮಾತ್ರ ಅಸಿದ್ಧವಾಗುವುದಿಲ್ಲವೆಂದು ಹೇಳಿದರೆ ನಾಭಾವ ಬಂದಮೇಲೆ ಅಮುನಾ ಎಂದಾದರೂ “ ಸುಪಿಚ ” ಎಂಬ ಸೂತ್ರಕ್ಕೆ ಮುಭಾವ ಬಂದುದು ಅಸಿದ್ಧವಾದುದರಿಂದ ಅಕಾರವಿದೆಯೆಂದು ಅದಕ್ಕೆ ಯಞಾದಿ ಸುಪ್ ಪರವಾದುದರಿಂದ ದೀರ್ಘ ಬರಬೇಕಾಗುತ್ತದೆ. ಆದುದರಿಂದ ಮಾಡಿದ ಮೇಲೂ ಅಸಿದ್ಧವಾಗುವುದಿಲ್ಲವೆನ್ನಬೇಕು. ಹೀಗೆ ಹೇಳಿದರೆ ಉಕಾರ ಬಂದುದು ಗೊತ್ತಿರುವುದ

ರಿಂದ ಅಕಾರವಿಲ್ಲದಿರುವುದರಿಂದ ದೀರ್ಘ ಬರುವುದಿಲ್ಲ. ಅಮುನಾ. ಅದಸ್+ಭ್ಯಾಮ್ ಎಂದಿರುವಾಗ ತ್ಯದಾದ್ಯತ್ವ, ಪರರೂಪ. ಅದ+ಭ್ಯಾಮ್. "ಸುಪಿಚ" ಸೂತ್ರದಿಂದ ಅದಂತಕ್ಕೆ ದೀರ್ಘ. ಅದಾಭ್ಯಾಮ್. "ಅದಸೋಽಸೇಃ–" ಸೂತ್ರದಿಂದ ಊತ್ವಮತ್ವ. ಅಮೂಭ್ಯಾಮ್. ಅದಸ್+ಭಿಸ್. ತ್ಯದಾದತ್ವ, ಪರರೂಪ. ಅದ+ಭಿಸ್. ಅದಂತದ ಪರದಲ್ಲಿ ಭಿಸ್ ಇರುವುದರಿಂದ ಐಸ್ ಪ್ರಾಪ್ತವಾದರೆ "ನೇದಮದಸೋರಕೋಃ" ಸೂತ್ರದಿಂದ ಐಸಿಗೆ ನಿಷೇಧ."ಬಹುವಚನೇ ಝಲ್ಯೇತ್" ಸೂತ್ರದಿಂದ ಅಕಾರಕ್ಕೆ ಏತ್ವ. ಅದೇಭಿಃ "ಏತಈತ್ ಬಹುವಚನೇ" ಸೂತ್ರದಿಂದ ಏಕಾರಕ್ಕೆ ಈತ್ವ. ದಕಾರಕ್ಕೆ ಮತ್ವ. ಅಮೀಭಿಃ ॥ ಚ–ಅದಸ್+ಙೇ. ತ್ಯದಾದ್ಯತ್ವ. ಪರರೂಪ. ಅದ+ಙೇ "ಸರ್ವನಾಮ್ನಃ ಸ್ಮೈ" ಸೂತ್ರದಿಂದ ಙೇಗೆ ಸ್ಮೈ ಆದೇಶ. ಅದಸ್ಮೈ. ಈಗ ಉತ್ವಮತ್ವ. ಅಮುಸ್ಮೈ. "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷಕಾರ. ಅಮುಷ್ಮೈ. ಭ್ಯಾಮಿನಲ್ಲಿ ಹಿಂದಿನಂತೇ ರೂಪ. ಅಮೂಭ್ಯಾಮ್. ಭ್ಯಸಿನಲ್ಲಿ ಭಿಸಿನಂತೇ ರೂಪ. ಅಮೀಭ್ಯಃ ॥ ಪಂ–ಅದಸ್+ಙಸಿ. ತ್ಯದಾದ್ಯತ್ವ, ಪರರೂಪ. ಅದ+ಙಸಿ. "ಙಸಿಙ್ಯೋಃ ಸ್ಮಾತ್‌ಸ್ಮಿನೌ" ಸೂತ್ರದಿಂದ ಙಸಿಗೆ ಸ್ಮಾತ್ ಆದೇಶ. ಉತ್ವಮತ್ವ, ಷತ್ವ. ಅಮುಷ್ಮಾತ್. ಭ್ಯಾಮ್ ಭ್ಯಸ್‌ಗಳಲ್ಲಿ ಹಿಂದಿನಂತೇ ರೂಪ. ಅಮೂಭ್ಯಾಮ್–ಅಮೀಭ್ಯಃ। ಷ–ಅದಸ್+ಙಸ್. ತ್ಯದಾದ್ಯತ್ವ, ಪರರೂಪ, "ಟಾಙಸಿಙಸಾಮ್–" ಸೂತ್ರದಿಂದ ವಿಭಕ್ತಿಗೆ ಸ್ಯಾದೇಶ. ಅದಸ್ಯ. ಉತ್ವ, ಮತ್ವ. ಷತ್ವ. ಅಮುಷ್ಯ. ಅದಸ್+ಓಸ್. ತ್ಯದಾದ್ಯತ್ವ ಪರರೂಪ. ಅದ+ಓಸ್. "ಓಸಿಚ" ಸೂತ್ರದಿಂದ ಏತ್ವ. ಅದೇ+ಓಸ್. ಅಯಾದೇಶ. ಅದಯೋಃ ಉತ್ವಮತ್ವ ಅಮುಯೋಃ. ಅದಸ್+ಆಮ್. ಅತ್ವ, ಪರರೂಪ. ಅದ+ಆಮ್. "ಆಮಿಸರ್ವನಾಮ್ನಃ ಸುಟ್" ಸೂತ್ರದಿಂದ ಆಮಿಗೆ ಸುಡಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಅಮೀಷಾಮ್ ॥ ಸ–ಅತ್ವ, ಪರರೂಪ. ಙಿಗೆ ಸ್ಮಿನ್ನಾದೇಶ. ಅದಸ್ಮಿನ್. ಉತ್ವಮತ್ವ. ಷತ್ವ. ಅಮುಷ್ಮಿನ್. ಙಸಿನಲ್ಲಿ ಹಿಂದಿನಂತೆ. ಅಮುಯೋಃ. ಸುಪಿನಲ್ಲಿ ತ್ಯದಾದ್ಯತ್ವ, ಪರರೂಪ, ಏತ್ವ. ಅದೇಸು. "ಏತಈತ್"– ಏಕಾರಕ್ಕೆ ಈತ್ವ ದಕಾರಕ್ಕೆ ಮತ್ವ. ಷತ್ವ. ಅಮೀಷು ॥ ಇತಿ ಸಾಂತಾಃ ॥

ಇತಿ ಹಲಂತಪುಲ್ಲಿಂಗ ಪ್ರಕರಣಮ್ ॥

# ಅಥ ಹಲಂತ ಸ್ತ್ರೀಲಿಂಗ ಪ್ರಕರಣಮ್

ಇನ್ನು ಹಲಂತಗಳಾದ ಸ್ತ್ರೀಲಿಂಗ ಶಬ್ದಗಳನ್ನು ಹೇಳುತ್ತಾನೆ. ಇಲ್ಲಿಯೂ ಹಕಾರಾದಿಕ್ರಮದಿಂದಲೇ ಶಬ್ದಗಳನ್ನು ತೋರಿಸುತ್ತಾನೆ. ಹಕಾರಾಂತ ಉಪಾನಹ್ ಶಬ್ದ. (ಪಾದರಕ್ಷೆ.) ಣಹ ಬಂಧನೇ. ಧಾತು. ಕ್ವಿಪ್ ಪ್ರತ್ಯಯ. ಉಪಸರ್ಗಕ್ಕೆ ದೀರ್ಘ. ಉಪಾನಹ್ ಎಂದಾಗುತ್ತದೆ. ಉಪ+ನಹ್ ಎಂದಿರುವಾಗ ದೀರ್ಘ ಹೇಳುವ ಸೂತ್ರವನ್ನು ಹೇಳುತ್ತಾನೆ.

(ನಹ್ಯಾದಿಗಳು ಪರವಾದಾಗ ಪೂರ್ವಪದಕ್ಕೆ ದೀರ್ಘ ಹೇಳುವ ಸೂತ್ರ)

**೩೬೧. ನಹಿವೃತಿವೃಷಿವ್ಯಧಿರುಚಿ ಸಹಿತನಿಷು ಕ್ವೌ ॥**

**೬-೩-೧೧೬ ॥**

**ಕ್ವಿಬಂತೇಷು ಪೂರ್ವಪದಸ್ಯ ದೀರ್ಘಃ ॥ ಉಪಾನಹ್.**

ದ್ವಿಪದ ಸೂತ್ರ. ಕ್ವಿಪ್ ಪ್ರತ್ಯಯ ನಹ್ಯಾದಿಗಳಿಗೆ ವಿಶೇಷಣ. ತದಂತಲಾಭ. "ಢ್ರಲೋಪೇ–" ಸೂತ್ರದಿಂದ "ದೀರ್ಘಃ" ಅನುವೃತ್ತಿ. **ಸೂತ್ರಾರ್ಥ.** ಕ್ವಿಪ್ ಪ್ರತ್ಯಯಾಂತವಾದ, ನಹ್, ವೃತ್, ವೃಷ್, ವ್ಯಧ್, ರುಚ್, ಸಹ್, ತನ್ ಎಂಬ ಏಳು ಧಾತುಗಳು ಪರವಾದಾಗ ಪೂರ್ವಪದಕ್ಕೆ ದೀರ್ಘ. ಪ್ರಕೃತ ಉಪ ಪೂರ್ವಪದ. ಕ್ವಿಬಂತವಾದ ನಹ್ ಪರದಲ್ಲಿದೆ. ದೀರ್ಘ ಬಂದರೆ ಉಪಾನಹ್. ಇದಕ್ಕೆ ಸುಪರದಲ್ಲಿರುವಾಗ "ಹೋಢಃ" ಸೂತ್ರದಿಂದ ಸಾಮಾನ್ಯ ಹಕಾರಕ್ಕೆ ಢಕಾರ ಪ್ರಾಪ್ತವಾದರೆ ಅಪವಾದವಾಗಿ ಹಕಾರಕ್ಕೆ ಧಕಾರ ಹೇಳುತ್ತಾನೆ.

(ನಹಿನ ಹಕಾರಕ್ಕೆ ಧಕಾರ ಹೇಳುವ ಸೂತ್ರ)

**೩೬೨. ನಹೋಧಃ ॥ ೮-೨-೩೪ ॥**

**ನಹೋ ಹಸ್ಯ ಧಃ ಸ್ಯಾತ್ ಝಲಿ ಪದಾಂತೇ ಚ ॥ ಉಪಾನತ್, ಉಪಾನದ್ । ಉಪಾನಹೌ । ಉಪಾನತ್ಸು ॥**

ನಹಃ, ಧಃ । ದ್ವಿಪದ ಸೂತ್ರ. "ಪದಸ್ಯ" ಅಧಿಕಾರ. "ಅಂತೇ" "ಝಲೋ ಝಲಿ" ಸೂತ್ರದಿಂದ "ಝಲಿ" ಎಂಬುದಕ್ಕೆ ಅನುವೃತ್ತಿ. "ಹೋಢಃ" ಸೂತ್ರದಿಂದ ಹಃ ಎಂಬುದು ಇದ್ದೇ ಇದೆ. **ಸೂತ್ರಾರ್ಥ.** ಝಲ್ ಪರದಲ್ಲಿರುವಾಗಲೂ ಪದಾಂತದಲ್ಲಿಯೂ ನಹ್ ಎಂಬುದರ ಹಕಾರಕ್ಕೆ ಧಕಾರಾದೇಶ ಬರುತ್ತದೆ. ಪ್ರಕೃತ "ಹಲ್ ಙ್ಯಾಭ್ಯೋ–" ಸೂತ್ರದಿಂದ ಸುಲೋಪವಾದಮೇಲೆ ಪದಾಂತವಾದುದರಿಂದ ಹಕಾರಕ್ಕೆ ಧಕಾರ ಬಂದರೆ ಉಪಾನಧ್. "ಝಲಾಂ ಜಶೋಂತೇ" ಉಪಾನದ್. "ವಾವಸಾನೇ" ಸೂತ್ರದಿಂದ ವಿಕಲ್ಪ ಚರ್ತ್ವ. ಉಪಾನತ್.

ಅಜಾದಿಯಲ್ಲಿ ಕಾರ್ಯವಿಲ್ಲ. ಲಿಹ್‌ಶಬ್ದದಂತೇ ರೂಪ. ಉಪಾನಹಾ-ಉಪಾನಹಃ ಇತ್ಯಾದಿ. ಭ್ಯಾಮಾದಿಗಳಲ್ಲಿ "ನಹೋಧಃ" ಸೂತ್ರದಿಂದ ಹಕಾರಕ್ಕೆ ಧಕಾರ ಬಂದಾಗ ಜಶ್ತ್ವ. ಉಪಾನದ್ಭ್ಯಾಮ್-ಉಪಾನದ್ಭಿಃ ಇತ್ಯಾದಿ. ಸಪ್ತಮೀ ಸುಪಿನಲ್ಲಿ ಹಿಂದಿನಂತೆ ಬಂದ ಜಶ್ತ್ವಕ್ಕೆ "ಖರಿಚ" ಸೂತ್ರದಿಂದ ಚರ್ತ್ವ ಬಂದರೆ ಉಪಾನತ್ಸು ಎಂದಾಗುತ್ತದೆ.

---

ಹಕಾರಾಂತ ಉಷ್ಣಿಹ್ ಶಬ್ದ. (ಛಂದಸ್ಸು)

**ಕ್ವಿನ್ನಂತತ್ವಾತ್ ಕುತ್ವೇನ ಘಃ । ಉಷ್ಣಿಕ್, ಉಷ್ಣಿಗ್ । ಉಷ್ಣಿಹಾ । ಉಷ್ಣಿಗ್ಭ್ಯಾಮ್ ॥ ದ್ಯೌಃ । ದಿವೌ । ದಿವಃ । ದ್ಯುಭ್ಯಾಮ್ ॥ ಗೀಃ । ಗಿರೌ । ಗಿರಃ ॥ ಏವಂ ಪೂಃ ॥ ಚತಸ್ರಃ । ಚತಸೃಣಾಮ್ ॥ ಕಾ । ಕೇ । ಕಾಃ । ಸರ್ವಾವತ್ ॥**

"ಋತ್ವಿಕ್ ದಧೃಕ್-" ಸೂತ್ರದಲ್ಲಿ ಉಷ್ಣಿಹ್ ಎಂದು ಕ್ವಿನ್ನಂತವಾಗಿ ನಿಪಾತಿತವಾಗಿದೆ. ಇದು ಛಂದೋವಿಶೇಷವನ್ನು ಹೇಳುತ್ತದೆ. ಉಷ್ಣಿಹ್+ಸ್ ಎಂದಿರುವಾಗ "ಹಲ್‌ಙ್ಯಾಭ್ಯೋ" ಸೂತ್ರದಿಂದ ಸುಲೋಪ. ಕ್ವಿನ್ ಪ್ರತ್ಯಯಾಂತವಾದುದರಿಂದ "ಕ್ವಿನ್‌ಪ್ರತ್ಯಯಸ್ಯ ಕುಃ" ಸೂತ್ರದಿಂದ ಹಕಾರಕ್ಕೆ ಕುತ್ವ. ಘೋಷ ನಾದ, ಸಂವಾರ, ಮಹಾಪ್ರಾಣ ಯತ್ನಸಾಮ್ಯದಿಂದ ಕವರ್ಗದಲ್ಲಿ ಘಕಾರ ಬಂದರೆ ಉಷ್ಣಿಘ್. "ಝಲಾಂ ಜಶೋಽನ್ತೇ" ಸೂತ್ರದಿಂದ ಘಕಾರಕ್ಕೆ ಜಶ್ತ್ವ ಉಷ್ಣಿಗ್. "ವಾವಸಾನೇ" ವಿಕಲ್ಪ ಚರ್ತ್ವ. ಉಷ್ಣಿಕ್. ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಉಷ್ಣಿಹಾ-ಉಷ್ಣಿಹಃ ಇತ್ಯಾದಿ. ಭ್ಯಾಮಾದಿಗಳಲ್ಲಿ ಹಿಂದಿನಂತೆ ಕುತ್ವ. ಉಷ್ಣಿಘ್+ಭ್ಯಾಮ್. ಜಶ್ತ್ವ. ಉಷ್ಣಿಗ್‌ಭ್ಯಾಮ್-ಉಷ್ಣಿಗ್ಭ್ಯಃ ಇತ್ಯಾದಿ. ಸಪ್ತಮೀ ಸುಪಿನಲ್ಲಿ ಘ, ಗ, ಕ, ಷ ಬಂದರೆ ಉಷ್ಣಿಕ್ಷು ಎಂದಾಗುತ್ತದೆ.

---

ವಕಾರಾಂತ ಸ್ತ್ರೀಲಿಂಗ ದಿವ್ ಶಬ್ದ. (ಸ್ವರ್ಗ ಅಥವಾ ಆಕಾಶ)

ದಿವ್+ಸ್ ಎಂದಿರುವಾಗ "ದಿವ ಔತ್" ಸೂತ್ರದಿಂದ ಸುಪರವಾದಾಗ ವಕಾರಕ್ಕೆ ಔಕಾರಾದೇಶ. ದಿ+ಔ+ಸ್. ಯಣ್. ದ್ಯೌಸ್. ಸಕಾರಕ್ಕೆ ರುತ್ವವಿಸರ್ಗ. ದ್ಯೌಃ. ದಿವ್+ಔ-ದಿವೌ-ದಿವಃ ಇತ್ಯಾದಿ. ದಿವ್+ಭ್ಯಾಮ್ ಎಂದಿರುವಾಗ "ದಿವ ಉತ್" ಸೂತ್ರದಿಂದ ವಕಾರಕ್ಕೆ ಉಕಾರ. ದಿ+ಉ+ಭ್ಯಾಮ್ ಯಣ್. ದ್ಯುಭ್ಯಾಮ್. ಹಲಾದಿಯಲ್ಲೆಲ್ಲಾ ಇದೇ ಕಾರ್ಯ. ದ್ಯುಭಿಃ । ಚ-ದಿವೇ-ದ್ಯುಭ್ಯಾಮ್-ದ್ಯುಭ್ಯಃ ॥ ಪಂ-ದಿವಃ-ದ್ಯುಭ್ಯಾಮ್-ದ್ಯುಭ್ಯಃ ॥ ಷ-ದಿವಃ-ದಿವೋಃ-ದಿವಾಮ್. ಸ-ದಿವಿ-ದಿವೋಃ-ದ್ಯುಷು ॥

---

### ರೇಫಾಂತ ಸ್ತ್ರೀಲಿಂಗ ಗಿರ್ ಶಬ್ದ. (ಮಾತು)

ಗಿರ್ + ಸ್ ಎಂದಿರುವಾಗ "ಹಲ್‌ಙ್ಯಾಭ್ಯೋ" ಸೂತ್ರದಿಂದ ಸುಲೋಪ. ರೇಫಾಂತವಾದ ಧಾತುವಾದುದರಿಂದ "ರ್ವೋರುಪಧಾಯಾಃ ದೀರ್ಘ ಇಕಃ" ಸೂತ್ರದಿಂದ ಉಪಧೆಯಾದ ಇಕ್ಕಿಗೆ ದೀರ್ಘ. ಗೀರ್. "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ವಿಸರ್ಗ. ಗೀಃ. ಅಜಾದಿಯಲ್ಲಿ ಪ್ರತ್ಯಯಸೇರಿಸುವುದು ಮಾತ್ರ. ಗಿರೌ-ಗಿರಃ. ದ್ವಿ॥ ಗಿರಂ-ಗಿರೌ-ಗಿರಃ. ತೃ-ಗಿರಾ ಗಿರ್‌ಭ್ಯಾಮ್ ಎಂದಿರುವಾಗ ಹಿಂದಿನಂತೆ ಉಪಧೆಗೆ ದೀರ್ಘ. ಗೀರ್ಭ್ಯಾಮ್. ಗೀರ್ಭಿಃ। ಚ-ಗಿರೇ-ಗೀರ್ಭ್ಯಾಮ್-ಗೀರ್ಭ್ಯಃ॥ ಪಂ-ಗಿರಃ-ಗೀರ್ಭ್ಯಾಮ್-ಗೀರ್ಭ್ಯಃ॥ ಷ-ಗಿರಃ-ಗಿರೋಃ-ಗಿರಾಮ್। ಸ। ಗಿರಿ-ಗಿರೋಃ-ಗೀರ್ಷು. ಇಲ್ಲಿ ಸ್ವಾಭಾವಿಕ ರೇಫವಾದುದರಿಂದ ಅದಕ್ಕೆ ಖರ್ ಪರವಾದರೂ ವಿಸರ್ಗವಿಲ್ಲ. "ರೋಃಸುಪಿ" ಸೂತ್ರದಿಂದ ರುವಿನ ರೇಫಕ್ಕೆ ಮಾತ್ರ ವಿಸರ್ಗವೆಂದು ನಿಯಮಮಾಡಿದೆ. ಹೀಗೆಯೇ ರೇಫಾಂತ ಸ್ತ್ರೀಲಿಂಗ ಪುರ್ ಶಬ್ದ. ಹಲಾದಿಯಲ್ಲಿ ಉಪಧಾದೀರ್ಘ. ಪೂಃ-ಪುರೌ-ಪುರಃ ಇತ್ಯಾದಿ.

### ರೇಫಾಂತ ಸ್ತ್ರೀಲಿಂಗ "ಚತುರ್" ಶಬ್ದ. (ನಾಲ್ಕು ಸ್ತ್ರೀತ್ವ ವಿಶಿಷ್ಟವಾದುದು)

ಬಹುತ್ವ ಸಂಖ್ಯಾವಾಚಕವಾದುದರಿಂದ ನಿತ್ಯ ಬಹುವಚನಾಂತ. ಚತುರ್ + ಜಸ್ ಎಂದಿರುವಾಗ "ತ್ರಿಚತುರೋಃ"-ಸೂತ್ರದಿಂದ ಚತಸೃ ಆದೇಶ. ಚತಸೃ + ಅಸ್. "ಜಸಿಚ" ಸೂತ್ರದಿಂದ ಗುಣಪ್ರಾಪ್ತವಾದರೆ "ಅಚಿರಋತಃ" ಸೂತ್ರದಿಂದ ಋಕಾರಕ್ಕೆ ರೇಫಾದೇಶ. ಚತಸ್ರಃ, ಶಸಿನಲ್ಲಿಯೂ ಚತಸ್ರಃ॥ ತೃ। ಚತಸೃಭಿಃ। ಚ। ಚತಸೃಭ್ಯಃ। ಪಂ-ಚತಸೃಭ್ಯಃ। ಷ-ಚತಸೃ+ಆಮ್ ಎಂದಿರುವಾಗ "ಹ್ರಸ್ವನದ್ಯಾಪೋನುಟ್" ಸೂತ್ರದಿಂದ ಆಮಿಗೆ ನುಡಾಗಮ. ಚತಸೃ+ನಾಮ್. "ನಾಮಿ" ದೀರ್ಘ ಪ್ರಾಪ್ತವಾದರೆ "ನತಿಸೃಚತಸೃ" ಸೂತ್ರದಿಂದ ನಿಷೇಧ. "ಋವರ್ಣಾನ್ನಸ್ಯಣತ್ವಂ ವಾಚ್ಯಮ್" ವಾರ್ತಿಕದಿಂದ ಋಕಾರದ ಪರದಲ್ಲಿರುವ ನಕಾರಕ್ಕೆ ಣತ್ವ. ಚತಸೃಣಾಮ್॥ ಸ-ಚತಸೃಷು.

---

### ಮಕಾರಾಂತ ಸ್ತ್ರೀಲಿಂಗ "ಕಿಮ್" ಶಬ್ದ. (ಯಾವಳು ?)

ಇದು ಸರ್ವನಾಮಶಬ್ದ. ಇದಕ್ಕೆ ವಿಭಕ್ತಿ ಪರವಾದಾಗ "ಕಿಮಃ ಕಃ" ಸೂತ್ರದಿಂದ ಕ ಆದೇಶ. ಆಗ ಅದಂತವಾದುದರಿಂದ "ಅಜಾದ್ಯತಷ್ಟಾಪ್" ಸೂತ್ರದಿಂದ ಸ್ತ್ರೀಲಿಂಗದಲ್ಲಿ ಟಾಪ್. ಕಾ. ಕಾ + ಸ್ ಎಂದಿರುವಾಗ "ಹಲ್‌ಙ್ಯಾಭ್ಯೋ"- ಸೂತ್ರದಿಂದ ಸುಲೋಪ. ಇದು ಆಕಾರಾಂತವಾದ ಸರ್ವಾ ಶಬ್ದದಂತೇ ಆಗುತ್ತದೆ. (ಸ್ತ್ರೀಲಿಂಗ ಸರ್ವಾಶಬ್ದ ನೋಡಿರಿ.)

ಪ್ರ-ಕಾ-ಕೇ-ಕಾಃ ದ್ವಿ-ಕಾಂ-ಕೇ-ಕಾಃ ತೃ-ಕಯಾ-ಕಾಭ್ಯಾಮ್-ಕಾಭಿಃ ಚ-ಕಸ್ಯೈ-ಕಾಭ್ಯಾಂ-ಕಾಭ್ಯಃ ಪಂ-ಕಸ್ಯಾಃ-ಕಾಭ್ಯಾಂ-ಕಾಭ್ಯಃ ಷ-ಕಸ್ಯಾಃ-ಕಯೋಃ-ಕಾಸಾಮ್. ಸ-ಕಸ್ಯಾಮ್-ಕಯೋಃ-ಕಾಸು.

ಮಕಾರಾಂತ ಸ್ತ್ರೀಲಿಂಗ "ಇದಮ್" ಶಬ್ದ. (ಇವಳು)

ಇದಮ್+ಸ್ ಎಂದಿರುವಾಗ ತ್ಯದಾದ್ಯತ್ವಕ್ಕೆ ಅಪವಾದವಾಗಿ "ಇದಮೋಮಃ" ಸೂತ್ರದಿಂದ ಮಕಾರಕ್ಕೆ ಮಕಾರವೇ ಬರುತ್ತದೆ. ಆಗ "ಹಲ್ಙ್ಯಾಭ್ಯೋ"-ಸೂತ್ರದಿಂದ ಸುಲೋಪ. ಸುಪರವಾದಾಗ ದಕಾರಕ್ಕೆ ಯಕಾರಾದೇಶ ಹೇಳುತ್ತಾನೆ.

(ಇದಮಿನ ದಕಾರಕ್ಕೆ ಯಕಾರ ಹೇಳುವ ಸೂತ್ರ)

## ३೬३. ಯಃ ಸೌ ॥ ೭-೨-೧೧೦ ॥

ಇದಮೋ ದಸ್ಯ ಯಃ। ಇಯಮ್। ತ್ಯದಾದ್ಯತ್ವಮ್। ಪರರೂಪತ್ವಮ್। ಟಾಪ್। ದಶ್ಚೇತಿ ಮಃ। ಇಮೇ। ಇಮಾಃ। ಇಮಾಮ್। ಅನಯಾ। ಹಲಿಲೋಪಃ। ಆಭ್ಯಾಮ್। ಆಭಿಃ। ಅಸ್ಯೈ। ಅಸ್ಯಾಃ। ಅನಯೋಃ। ಆಸಾಮ್। ಅಸ್ಯಾಮ್। ಆಸು॥ ತ್ಯದಾದ್ಯತ್ವಮ್। ಟಾಪ್। ಸ್ಯಾಃ। ತ್ಯೇ। ತ್ಯಾಃ॥ ಏವಂ ತದ್ ಏತದ್॥ ವಾಕ್, ವಾಗ್॥ ವಾಚೌ। ವಾಗ್ಭ್ಯಾಮ್। ವಾಕ್ಷು॥ ಅಪ್ ಶಬ್ದೋ ನಿತ್ಯಂ ಬಹುವಚನಾಂತಃ। ಅಪ್ತೃನ್ನಿತಿ ದೀರ್ಘಃ। ಆಪಃ। ಅಪಃ॥

ದ್ವಿಪದಸೂತ್ರ। "ಇದಮೋಮಃ" ಸೂತ್ರದಿಂದ "ಇದಮಃ" "ದಶ್ಚ" ಸೂತ್ರದಿಂದ "ದಃ" ಅನುವೃತ್ತಿ. ಸೂತ್ರಾರ್ಥ. ಸುಪರದಲ್ಲಿರುವಾಗ ಇದಮಿನ ದಕಾರಕ್ಕೆ ಯಕಾರಾದೇಶ ಬರುತ್ತದೆ. ಇಯಮ್. ಇದಮ್-ಔ ಎಂದಿರುವಾಗ "ತ್ಯದಾದೀನಾಮಃ" ಸೂತ್ರದಿಂದ ಮಕಾರಕ್ಕೆ ಅತ್ವ. ಇದ+ಅ+ಔ. "ಅತೋ ಗುಣೇ" ಪರರೂಪ. ಇದ+ಔ. ಈಗ ಅದಂತವಾದುದರಿಂದ ಟಾಪ್. ಇದಾ+ಔ. "ಔಙ ಆಪಃ" ಸೂತ್ರದಿಂದ ಔವಿಭಕ್ತಿಗೆ ಶೀಭಾವ. ಶಕಾರಇತ್. ಈ ಉಳಿಯುತ್ತದೆ ಇದ+ಈ ಆದ್ಗುಣಃ, ಇದೇ "ದಶ್ಚ" ಸೂತ್ರದಿಂದ ದಕಾರಕ್ಕೆ ಮತ್ವ. ಇಮೇ ಇದಮ್+ಜಸ್. ತ್ಯದಾದ್ಯತ್ವ, ಪರರೂಪ, ಟಾಪ್ "ಪ್ರಥಮಯೋಃ ಪೂರ್ವಸವರ್ಣಃ" ಪೂರ್ವಸವರ್ಣದೀರ್ಘ. "ದಶ್ಚ" ದಕಾರಕ್ಕೆ ಮಕಾರ. ಇಮಾಸ್. ಸಕಾರಕ್ಕೆ ರುತ್ವವಿಸರ್ಗ. ಇಮಾಃ॥ ಇದಮ್. ಅತ್ವ, ಪರರೂಪ, ಟಾಪ್, ಮತ್ವಗಳು ಬಂದಮೇಲೆ "ಅಮಿಪೂರ್ವಃ" ಸೂತ್ರದಿಂದ ಪೂರ್ವರೂಪ. ಇಮಾಮ್. ದ್ವಿವಚನದಲ್ಲಿ ಹಿಂದಿನಂತೇ ರೂಪ. ಇಮೇ. ಶಸಿನಲ್ಲಿ ಜಸಿನಂತೇ ರೂಪ. ಇಮಾಃ. ಪುಲ್ಲಿಂಗವಾಗದಿರುವುದರಿಂದ ಶಸಿನ ಸಕಾರಕ್ಕೆ ನತ್ವವಿಲ್ಲ. ತೃತೀಯಾದಲ್ಲಿ ಇದಮ್+(ಟ್) ಆ ಎಂದಿರುವಾಗ ಅತ್ವ, ಪರರೂಪ, ಟಾಪ್. ಇದಾ+ಆ "ಅನಾಪ್ಯಕಃ" ಸೂತ್ರದಿಂದ ಇದಿಗೆ ಅನ್ ಆದೇಶ. ಅನಾ+ಆ-"ಆಙಿಚಾಪಃ" ಸೂತ್ರದಿಂದ ಟಾ ಪರವಾದುದರಿಂದ ಆಪಿಗೆ ಏಕಾರಾದೇಶ. ಅನೇ+ಆ. ಅಯಾದೇಶ.

ಅನಯಾ. ಇದಮ್+ಭ್ಯಾಮ್. ತ್ಯದಾದ್ಯತ್ವ, ಪರರೂಪ, ಇದಾ+ಭ್ಯಾಮ್. "ಹಲಿಲೋಪಃ" ಸೂತ್ರದಿಂದ ಇದ್ ಎಂಬುದಕ್ಕೆ ಲೋಪ. ಆಭ್ಯಾಮ್. ಹಲಾದಿಯಲ್ಲಿ ಹೀಗೇ ಅತ್ವ, ಪರರೂಪ, ಟಾಪ್, ಇದ್‌ಲೋಪ. ಆಭಿಃ ॥ ಚ-ಅಜಾದಿಯಲ್ಲಿ ಇದಿಗೆ ಅನಾದೇಶ. ಇದಮ್+ಏ ಎಂದಿರುವಾಗ ಅತ್ವ, ಪರರೂಪ, ಟಾಪ್. ಇದಾ+ಏ "ಸರ್ವನಾಮ್ನಃ ಸ್ಯಾಟ್" ಸೂತ್ರದಿಂದ ಏಗೆ ಸ್ಯಾಟಾಗಮ. ಆಪಿಗೆ ಹ್ರಸ್ವ. ಇದ+ಸ್ಯಾ+ಏ ವೃದ್ಧಿ. ಇದಸ್ಯೈ. ಈಗ ಹಲಾದಿ ಪ್ರತ್ಯಯ ಪರವಾದುದರಿಂದ "ಹಲಿಲೋಪಃ" ಸೂತ್ರದಿಂದ ಇದಿಗೆ ಲೋಪ. ಅಸ್ಯೈ-ಆಭ್ಯಾಮ್. ಆಭ್ಯಃ ॥ ಪಂ-ಇದಮ್+ಙಸಿ. ಅತ್ವ, ಪರರೂಪ, ಟಾಪ್. ಇದಾ+ಅಸ್. ಸ್ಯಾಟಾಗಮ, ಹ್ರಸ್ವ. ಇದ್‌ಲೋಪ. ಅಸ್ಯಾಃ ಆಭ್ಯಾಮ್-ಆಭ್ಯಃ ॥ ಷ-ಏಕವಚನ ಹಿಂದಿನಂತೆಯೇ. ಅಸ್ಯಾಃ, ಇದಮ್+ಓಸ್. ಎಂದಿರುವಾಗ ತ್ಯದಾದ್ಯತ್ವ, ಪರರೂಪ, ಟಾಪ್. ಇದಾ+ಓಸ್. ಇದಿಗೆ ಅನಾದೇಶ. ಅನಾ+ಓಸ್. "ಆಙಿಚಾಪಃ" ಸೂತ್ರದಿಂದ ಟಾಪಿಗೆ ಏಕಾರ. ಅಯಾದೇಶ. ಅನಯೋಃ ಇದಮ್+ಆಮ್. ತ್ಯದಾದ್ಯತ್ವ. ಪರರೂಪ. ಇದಾ+ಆಮ್. "ಆಮಿಸರ್ವನಾಮ್ನಃ ಸುಟ್" ಸೂತ್ರದಿಂದ ಆಮಿಗೆ ಸುಟಾಗಮ. ಇದಾ+ಸಾಮ್. ಈಗ ಹಲಾದಿ ವಿಭಕ್ತಿಯಾದುದರಿಂದ ಇದಿಗೆ ಲೋಪ. ಆಸಾಮ್. ಸ-ಇದಮ್‌ಙಿ ಎಂದಿರುವಾಗ ತ್ಯದಾದ್ಯತ್ವ, ಪರರೂಪ. ಇದಾ+ಇ. "ಙೇರಾಮ್ ನದ್ಯಾಮ್ನೀಭ್ಯಃ" ಸೂತ್ರದಿಂದ ಙಿಗೆ ಆಮ್ ಆದೇಶ. ಅದಕ್ಕೆ ಸ್ಯಾಟ್ ಆಗಮ. ಆಪಿಗೆ ಹ್ರಸ್ವ. ಇದ+ಸ್ಯಾಮ್. ಹಲಾದಿಯಾದುದರಿಂದ ಇದಿಗೆ ಲೋಪ. ಅಸ್ಯಾಮ್. ಙಸಿನಲ್ಲಿ ಹಿಂದಿನಂತೇ ರೂಪ. ಅನಯೋಃ. ಇದಮ್+ಸು ಎಂದಿರುವಾಗ, ತ್ಯದಾದ್ಯತ್ವ, ಪರರೂಪ, ಟಾಪ್. ಇದ್‌ಲೋಪ. ಆಸು.

---

ಜಕಾರಾಂತ, ಸ್ರಜ್ ಶಬ್ದ. (ಮಾಲೆ)

ಸ್ರಜ್+ಸ್ ಎಂದಿರುವಾಗ "ಹಲ್‌ಙ್ಯಾಭ್ಯೋ–" ಸೂತ್ರದಿಂದ ಸುಲ್ಲೋಪ. "ಚೋಃ ಕುಃ" ಸೂತ್ರದಿಂದ ಜಕಾರಕ್ಕೆ ಗಕಾರಾದೇಶ. ಸ್ರಗ್. "ವಾವಸಾನೇ" ಚರ್ತ್ವ. ಸ್ರಕ್. ಅಜಾದಿಯಲ್ಲಿ ಕಾರ್ಯವಿಲ್ಲ. ಸ್ರಜೌ-ಸ್ರಜಃ ಇತ್ಯಾದಿ. ಹಲಾದಿಯಲ್ಲಿ ಕುತ್ವ. ಸ್ರಗ್ಭ್ಯಾಮ್ ಇತ್ಯಾದಿ. ಸಪ್ತಮೀ ಸುವಿನಲ್ಲಿ ಕುತ್ವ ಬಂದಾಗ "ಖರಿಚ"ದಿಂದ ಗಕಾರಕ್ಕೆ ಕಕಾರ. ಸ್ರಕ್+ಸು. "ಆದೇಶಪ್ರತ್ಯಯಯೋಃ" ಸ್ರಕ್+ಷು. ಸ್ರಕ್ಷು.

---

ದಕಾರಾಂತ. ತ್ಯದ್ ಶಬ್ದ. (ಅವಳು)

ತ್ಯದ್, ತದ್, ಏತದ್ ಈ ಮೂರು ಸರ್ವನಾಮ ಶಬ್ದಗಳು. ತ್ಯದ್+ಸ್ ಎಂದಿರುವಾಗ "ತ್ಯದಾದೀನಾಮಃ" ಸೂತ್ರದಿಂದ ಅತ್ವ. ತ್ಯ+ಅ+ಸ್.

"ಅತೋಗುಣೇ" ಪರರೂಪ. ತ್ಯ+ಸ್. ಅದಂತವಾದುದರಿಂದ ಸ್ತ್ರೀಲಿಂಗದಲ್ಲಿ ಟಾಪ್. ತ್ಯಾ+ಸ್. ಆಬಂತದ ಪರದಲ್ಲಿರುವುದರಿಂದ "ಹಲ್‌ಙ್ಯಾಭ್ಯೋ-" ಸೂತ್ರದಿಂದ ಸುಲೋಪ. ತ್ಯಾ. "ತದೋಃ ಸಃ ಸಾವನಂತ್ಯಯೋಃ" ಸೂತ್ರದಿಂದ ಆದಿಯ ತಕಾರಕ್ಕೆ ಸಕಾರಾದೇಶ. ಸ್ಯಾ. ಇನ್ನು ಸರ್ವಾ ಶಬ್ದದಂತೇ ರೂಪವಾಗುತ್ತದೆ. ಹೀಗೆಯೇ ತದ್ ಶಬ್ದ. ತ್ಯದಾದ್ಯತ್ವ. ಪರರೂಪ. ಟಾಪ್. ತಕಾರಕ್ಕೆ ಸಕಾರ. ಸುಲೋಪ. ಸಾ-ತೇ-ತಾಃ. ಸರ್ವನಾಮ ಶಬ್ದದಂತೇ ರೂಪ. ಸು ಪರವಾದಾಗ ಮಾತ್ರ ತಕಾರಕ್ಕೆ ಸಕಾರ. ಇತರ ಕಡೆಯಲ್ಲಿ ಇಲ್ಲ. ಹೀಗೆಯೇ ಏತದ್ ಶಬ್ದ. (ಇವಳು) ಅತ್ವ. ಪರರೂಪ. ಸತ್ವ, ಟಾಪ್. ಏಸಾ. "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷಕಾರಾದೇಶ. ಏಷಾ-ಏತೇ-ಏತಾಃ ॥ ದ್ವಿತೀಯಾ, ಟಾ, ಓಸಿನಲ್ಲಿ "ದ್ವಿತೀಯಾಟೌಸ್ವೇನಃ" ಸೂತ್ರದಿಂದ ಏನಾದೇಶ.

ದ್ವಿ-ಏತಾಂ ಏನಾಂ। ಏತೇ ಏನೇ। ಏತಾಃ ಏನಾಃ ॥ ತೃ-ಏತಯಾ ಏನಯಾ। ಏತಾಭ್ಯಾಮ್। ಏತಾಭಿಃ ॥ ಚ-ಏತಸ್ಯೈ। ಏತಾಭ್ಯಾಮ್। ಏತಾಭ್ಯಃ ॥ ಪಂ-ಏತಸ್ಯಾಃ। ಏತಾಭ್ಯಾಮ್। ಏತಾಭ್ಯಃ ॥ ಷ-ಏತಸ್ಯಾಃ। ಏತಯೋಃ ಏನಯೋಃ। ಏತಾಸಾಮ್ ॥ ಸ-ಏತಸ್ಯಾಮ್। ಏತಯೋಃ ಏನಯೋಃ। ಏತಾಸು ॥ ಸರ್ವಾದಂತೆ ಪ್ರಕ್ರಿಯಾ ॥

---

### ಚಕಾರಾಂತ "ವಾಚ್" ಶಬ್ದ. (ಮಾತು)

ವಾಚ್+ಸ್ ಎಂದಿರುವಾಗ "ಹಲ್‌ಙ್ಯಾಭ್ಯೋ" ಸೂತ್ರದಿಂದ ಸುಲೋಪ. "ಚೋಃ ಕುಃ" ಸೂತ್ರದಿಂದ ಪದಾಂತದಲ್ಲಿ ಕುತ್ವ, ವಾಕ್. "ಝಲಾಂಜಶೋಂತೇ, ವಾವಸಾನೇ" ವಾಕ್‌ವಾಗ್. ವಾಚೌ-ವಾಚಃ ಇತ್ಯಾದಿ. ಭ್ಯಾಮಾದಿಗಳಲ್ಲಿ ಕುತ್ವ, ಜಶ್ತ್ವ. ವಾಗ್ಭ್ಯಾಮ್ ಇತ್ಯಾದಿ. ಸಪ್ತಮೀ ಸುವಿನಲ್ಲಿ ಕುತ್ವ. ಜಶ್ತ್ವ, ಚರ್ತ್ವ, ಷತ್ವ. ವಾಕ್ಷು ॥

---

### ಪಕಾರಾಂತ. ಅಪ್. ಶಬ್ದ. (ನೀರು)

ಇದು ನಿತ್ಯ ಬಹುವಚನಾಂತವಾಗುತ್ತದೆ. ಅಪ್+ಜಸ್ ಎಂದಿರುವಾಗ "ಅಪ್‌ತೃನ್"-(ಸೂ. ೨೦೬) ಸೂತ್ರದಿಂದ ಉಪಧಾದೀರ್ಘ ಆಪ್+ಅಸ್. ಸಕಾರಕ್ಕೆ ರುತ್ವವಿಸರ್ಗ. ಆಪಃ. ಅಪ್ (ಶ್) ಅಸ್. ರುತ್ವ, ವಿಸರ್ಗಃ ಅಪಃ। ಅಪ್+ಭಿಸ್ ಎಂದಿರುವಾಗ ಪಕಾರಕ್ಕೆ ದಕಾರ ಹೇಳುತ್ತಾನೆ.

(ಅಪ್ ಶಬ್ದಕ್ಕೆ ದಕಾರ ಹೇಳುವ ಸೂತ್ರ)

### ೩೬೪. ಅಪೋ ಭಿ ॥ ೭-೪-೪೮ ॥

**ಅಪಸ್ತಕಾರೋ ಭಾದೌ ಪ್ರತ್ಯಯೇ ॥ ಅದ್ಭಿಃ। ಅದ್ಭ್ಯಃ। ಅದ್ಭ್ಯಃ। ಅಪಾಮ್। ಅಪ್ಸು ॥ ದಿಕ್, ದಿಗ್। ದಿಶೌ। ದಿಶಃ। ದಿಗ್ಭ್ಯಾಮ್।**

ದಿಕ್ಷು ॥ ತ್ಯದಾದಿಷ್ವಿತಿ ದೃಶೇಃ ಕ್ವಿನ್ವಿಧಾನಾದನ್ಯತ್ರಾಪಿ ಕುತ್ವಮ್। ದೃಕ್-ದೃಗ್। ದೃಶೌ-ದೃಶಃ। ದೃಗ್ಭ್ಯಾಮ್। ದೃಕ್ಷು ॥ ತ್ವಿಟ್, ತ್ವಿಡ್। ತ್ವಿಷೌ। ತ್ವಿಡ್ಭ್ಯಾಮ್। ತ್ವಿಟ್ತ್ಸು, ತ್ವಿಟ್ಸು ॥ ಸಸಜುಷೋ ರುರಿತಿ ರುತ್ವಮ್। ಸಜೂರ್ಭ್ಯಾಮ್ ॥ ಆಶೀಃ ಆಶಿಷೌ। ಆಶೀರ್ಭ್ಯಾಮ್ ॥ ಅಸೌ। ಉತ್ವಮತ್ವೇ। ಅಮೂ। ಅಮೂಃ। ಅಮುಯಾ। ಅಮೂಭ್ಯಾಮ್ ॥ ೩ ॥ ಅಮೂಭಿಃ। ಅಮುಷ್ಯೈ। ಅಮೂಭ್ಯಃ ೨ ॥ ಅಮುಷ್ಯಾಃ ೨ ॥ ಅಮುಯೋಃ ೨ ॥ ಅಮೂಷಾಮ್ । ಅಮುಷ್ಯಾಮ್ । ಅಮೂಷು ॥

ಇತಿ ಹಲಂತಸ್ತ್ರೀಲಿಂಗಾಃ ॥

ಅಪಃ, ಭಿ ॥ ದ್ವಿಪದಸೂತ್ರ. ಅಂಗಾಧಿಕಾರದಲ್ಲಿ ಈ ಸೂತ್ರವಿರುವುದರಿಂದ "ಪ್ರತ್ಯಯೇ" ಎಂಬುದು ಆಕ್ಷೇಪದಿಂದ ಸಿಗುತ್ತದೆ. ಅದಕ್ಕೆ ಭಿ ಎಂಬ ಸಪ್ತಮ್ಯಂತ ವಿಶೇಷಣವಾದುದರಿಂದ ಭಕಾರಾದಿಪ್ರತ್ಯಯಪರವಾದಾಗ ಎಂದರ್ಥವಾಗುತ್ತದೆ. "ಅಚ ಉಪಸರ್ಗಾತ್ತಃ" ಸೂತ್ರದಿಂದ "ತಃ" ಅನುವೃತ್ತಿ. ಸೂತ್ರಾರ್ಥ. ಅಪ್ ಶಬ್ದಕ್ಕೆ ಭಕಾರಾದಿ ಪ್ರತ್ಯಯಪರವಾದಾಗ ತಕಾರಾದೇಶ ಬರುತ್ತದೆ. "ಆಲೋಂತ್ಯಸ್ಯ" ಪರಿಭಾಷೆಯಿಂದ ಅಂತ್ಯಕ್ಕೆ ಆದೇಶ. ಅದ್ಭಿಃ॥ ಭಕಾರಾದಿ ಪ್ರತ್ಯಯಗಳಲ್ಲಿ ಹೀಗೆ, ತಕಾರಾದೇಶ. ಅದಕ್ಕೆ "ಝಲಾಂ ಜಶೋಂತೇ" ಸೂತ್ರದಿಂದ ಜಶ್ತ್ವ. ಅದ್‌ಭ್ಯಃ ಅದ್ಭ್ಯಃ, ಅಪಾಮ್ ಅಪ್‌ಸು.

---

ಶಕಾರಾಂತ. "ದಿಶ್" ಶಬ್ದ. (ದಿಕ್ಕು)

ದಿಶ ಅತಿಸರ್ಜನೇ. ಧಾತು. "ಋತ್ವಿಕ್ ದಧೃಕ್"-ಸೂತ್ರದಿಂದ ಕ್ವಿನ್ ಪ್ರತ್ಯಯ. ಕ್ವಿನಿನಲ್ಲಿ ಸರ್ವಲೋಪ. ದಿಶ್+ಸ್. "ಹಲ್ಙ್ಯಾಭ್ಯೋ"-ಸೂತ್ರದಿಂದ ಸುಲೋಪ. "ವ್ರಶ್ಚಭ್ರಸ್ಜ"-ಸೂತ್ರದಿಂದ ಶಕಾರಕ್ಕೆ ಷಕಾರಾದೇಶ. "ಕ್ವಿನ್ ಪ್ರತ್ಯಯಸ್ಯ ಕುಃ" ಸೂತ್ರದಿಂದ ಡಕಾರಕ್ಕೆ ಗಕಾರಾದೇಶ. ದಿಗ್. "ವಾಸವಸಾನೇ" ದಿಕ್ ದಿಶೌ-ದಿಶಃ ಇತ್ಯಾದಿ. ಭ್ಯಾಮಾದಿಗಳಲ್ಲಿ ಷತ್ವ, ಜಶ್ತ್ವ, ಕುತ್ವ. ದಿಗ್ಭ್ಯಾಮ್-ದಿಗ್ಭ್ಯಃ ಇತ್ಯಾದಿ. ಸುಪಿನಲ್ಲಿ ಷತ್ವ, ಜಶ್ತ್ವ, ಕುತ್ವ, "ಖರಿಚ" ಚರ್ತ್ವ. "ಆದೇಶಪ್ರತ್ಯಯಯೋಃ" ಷತ್ವ. ದಿಕ್ಷು ॥

---

ಶಕಾರಾಂತ ದೃಶ್ ಶಬ್ದ (ಕಣ್ಣು.)

ದೃಶಿರ್ ಪ್ರೇಕ್ಷಣೇ, ಧಾತು. ಕ್ವಿಪ್ ಪ್ರತ್ಯಯ. ಕ್ವಿಪಿನಲ್ಲಿ ಸರ್ವಲೋಪ. ದೃಶ್+ಸ್ ಎಂದಿರುವಾಗ ದಿಶ್‌ಶಬ್ದದಂತೇ ರೂಪ. ದೃಶ್, ದೃಗ್-ದೃಶೌ-ದೃಶಃ.

ಇತ್ಯಾದಿ. ಭ್ಯಾಮಾದಿಗಳಲ್ಲಿ ದೃಗ್ಭ್ಯಾಮ್-ದೃಗ್ಭಿಃ ಇತ್ಯಾದಿ. ಸಪ್ತಮೀ ಸುವಿನಲ್ಲಿ ದೃಕ್ಷು. ಇಲ್ಲಿ ಒಂದು ಆಶಂಕೆ ಬರುತ್ತದೆ. ದೃಶ್ ಧಾತುವಿಗೆ ಕ್ವಿನ್ ಬರಲಿಲ್ಲ. ಬಂದದ್ದು ಕ್ವಿಪ್‌ಪ್ರತ್ಯಯ. ಹೀಗಿರುವಾಗ ಜಶ್ತ್ವ ಬಂದಮೇಲೆ ದೃಡ್ ಎಂದಿರುವಾಗ ಕುತ್ವ ಬರುವುದು ಹೇಗೆ? ಅಂದರೆ—"ಕ್ವಿನ್‌ಪ್ರತ್ಯಯಸ್ಯಕುಃ" ಎಂಬುದು ಬಹುವ್ರೀಹಿಯೆಂದು ಹಿಂದೆ ಹೇಳಿದೆ. ಇದನ್ನೇ "ತ್ಯದಾದಿಷು"-ಎಂಬ ವಾಕ್ಯದಿಂದ ವಿವರಿಸುತ್ತಾನೆ. "ತ್ಯದಾದಿಷು ದೃಶೋಽನಾಲೋಚನೇ ಕಞ್ಚ" ಸೂತ್ರದಿಂದ ತ್ಯದಾದಿಗಳು ಉಪಪದವಾಗಿರುವಾಗ ದೃಶಿಗೆಕ್ವಿನ್ ಹೇಳಿರುತ್ತಾನೆ. ಆದುದರಿಂದ ದೃಶ್ ಕ್ವಿನ್ ಹೊಂದುವುದಾಯಿತು. ಈಗ ತ್ಯದಾದಿಗಳು ಸಮೀಪದಲ್ಲಿ ಇಲ್ಲದಿದ್ದರೂ ಕ್ವಿನ್ ಹೊಂದಲು ಯೋಗ್ಯತೆಯಿರುವುದರಿಂದ ಕುತ್ವ ಬರುತ್ತದೆಯೆಂದು ತಿಳಿಯಬೇಕು.

---

### ಷಕಾರಾಂತ ತ್ವಿಷ್ ಶಬ್ದ. (ಕಾಂತಿ)

ತ್ವಿಷ್+ಸ್ ಎಂದಿರುವಾಗ "ಹಲ್‌ಙ್ಯಾಭ್ಯೋ"-ಸೂತ್ರದಿಂದ ಸುಲೋಪ "ಝಲಾಂ ಜಶೋಽಂತೇ" ಸೂತ್ರದಿಂದ ಷಕಾರಕ್ಕೆ ಡಕಾರ. "ವಾವಸಾನೇ" ಸೂತ್ರದಿಂದ ಅದಕ್ಕೆ ವಿಕಲ್ಪ ಟಕಾರ. ತ್ವಿಡ್, ತ್ವಿಟ್-ತ್ವಿಷೌ-ತ್ವಿಷಃ ಇತ್ಯಾದಿ. ಭ್ಯಾಮಾದಿಗಳಲ್ಲಿ ಜಶ್ತ್ವಮಾತ್ರ. ತ್ವಿಡ್ಭ್ಯಾಮ್-ತ್ವಿಡ್ಭಿಃ ಇತ್ಯಾದಿ. ಸುಪರವಾದಾಗ ಜಶ್ತ್ವ. ತ್ವಿಡ್‌ಸು. "ಡಃಸಿಧುಟ್" ಸೂತ್ರದಿಂದ ಸಕಾರಕ್ಕೆ ವಿಕಲ್ಪಧುಡಾಗಮ. ಆದಕ್ಕೆ ಚರ್ತ್ವ. ತ್ವಿಟ್‌ತ್‌ಸು. ಧುಡಾಗಮ ಬಾರದಿದ್ದರೆ ಡಕಾರಕ್ಕೆ ಚರ್ತ್ವ. ತ್ವಿಟ್ಸು.

---

### ಷಕಾರಾಂತ ಸಜುಷ್ ಶಬ್ದ. (ಸ್ನೇಹಿತಳು)

ಸಜುಷ್+ಸ್ ಎಂದಿರುವಾಗ. "ಹಲ್‌ಙ್ಯಾಭ್ಯೋ"—ಸೂತ್ರದಿಂದ ಸುಲೋಪ. "ಸಸಜುಷೋರುಃ" ಸೂತ್ರದಿಂದ ಪದಾಂತದಲ್ಲಿ ಷಕಾರಕ್ಕೆ ರುತ್ವ. ಸಜುರ್. "ರ್ವೋರುಪಧಾಯಾ ದೀರ್ಘ ಇಕಃ" ಸೂತ್ರದಿಂದ ರೇಫಾಂತ ಧಾತುವಾದುದರಿಂದ ಉಪಧೆಯಾದ ಉಕಾರಕ್ಕೆ (ಇಕ್) ದೀರ್ಘ. ಸಜೂರ್. "ಖರವಸಾನಯೋಃ"—ಸೂತ್ರದಿಂದ ವಿಸರ್ಗ. ಸಜೂಃ-ಸಜುಷೌ-ಸಜುಷಃ। ಸಜುಷಮ್—ಸಜುಷೌ-ಸಜುಷಃ। ತೃ-ಸಜುಷಾ-ಭ್ಯಾಮಾದಿಗಳಲ್ಲಿ ಹಿಂದಿನಂತೆ ರುತ್ವ, ಉಪಧೆಗೆ ದೀರ್ಘ. ಖರ್ ಅವಸಾನ ಪರದಲ್ಲಿಲ್ಲದಿರುವುದರಿಂದ ರೇಫಕ್ಕೆ ವಿಸರ್ಗವಿಲ್ಲ. ಸಜೂರ್ಭ್ಯಾಮ್. ಸಜೂರ್ಭಿಃ ಇತ್ಯಾದಿ. ಸುವಿನಲ್ಲಿ ಖರ್‌ಪರವಾದುದರಿಂದ ವಿಸರ್ಗ. ಸಜೂಃಸು. "ವಾಶರಿ" ಸೂತ್ರದಿಂದ ವಿಸರ್ಗಕ್ಕೆ ವಿಕಲ್ಪವಾಗಿ ವಿಸರ್ಗ. ಇದು ಬಾರದಿದ್ದರೆ "ವಿಸರ್ಜನೀಯಸ್ಯಸಃ" ಸೂತ್ರದಿಂದ ವಿಸರ್ಗಕ್ಕೆ ಸಕಾರ. ಸಜೂಸ್‌ಸು. ಎರಡುರೂಪಗಳಲ್ಲಿಯೂ "ನುಮ್ ವಿಸರ್ಜನೀಯ ಶರ್‌ವ್ಯವಾಯೇಽಪಿ" ಸೂತ್ರದಿಂದ

ವಿಸರ್ಗ ಶರ್‌ವ್ಯವಧಾನವಿರುವುದರಿಂದ ಸುವಿನ ಸಕಾರಕ್ಕೆ ಷತ್ವ. ಸಜೂಃಷು, ಸಜೂಷ್ಷು.

ಷಕಾರಾಂತ, ಆಶಿಷ್ ಶಬ್ದ. (ಆಶೀರ್ವಾದ)

ಆಶಿಷ್ + ಸ್. "ಹಲ್‌ಙ್ಯಾಭ್ಯೋ"-ಸೂತ್ರದಿಂದ ಸುಲೋಪ. ಆಶಿಷ್ ಎಂಬಲ್ಲಿ ಆಙ್ ಉಪಸರ್ಗ. ಶಾಸ್ ಧಾತುವಿಗೆ ಕ್ವಿಪ್. ಇದು ಪರವಾದಾಗ ಇತ್ವ. ಆಶಿಸ್. "ಶಾಸಿವಸಿಘಸೀನಾಂ ಚ" ಸೂತ್ರದಿಂದ ಸಕಾರಕ್ಕೆ ಷತ್ವ. "ಸಸಜುಷೋರುಃ" ಸೂತ್ರಕ್ಕೆ ಈ ಷತ್ವ ಬಂದುದು "ಪೂರ್ವತ್ರಾಸಿದ್ಧಮ್" ಸೂತ್ರರೀತ್ಯಾ ಅಸಿದ್ಧವಾದುದರಿಂದ ಸಕಾರವಿದೆಯೆಂದು ಪದಾಂತದಲ್ಲಿ ರುತ್ವ ಬರುತ್ತದೆ. ಆಶಿರ್. "ರ್ವೋರುಪಧಾಯಾಃ"-ಸೂತ್ರದಿಂದ ಉಪಧಾ ಇಕ್ಕಿಗೆ ದೀರ್ಘ. ಆಶೀರ್. ರೇಫಕ್ಕೆ "ಖರವ"-ಸೂತ್ರದಿಂದ ವಿಸರ್ಗ. ಆಶೀಃ-ಆಶಿಷೌ-ಆಶಿಷಃ ಇತ್ಯಾದಿ. ಭ್ಯಾಮಾದಿಗಳಲ್ಲಿಯೂ ಹೀಗೆ ರುತ್ವ. ಆಶೀರ್ಭ್ಯಾಮ್. ಆಶೀರ್ಭಿಃ ಇತ್ಯಾದಿ. ಸುವಿನಲ್ಲಿ ಸಜೂಷ್ ಶಬ್ದದಂತೆ ಆಶೀಃಷು, ಆಶೀಷ್ಷು. ಎರಡುರೂಪಗಳು.

---

ಸಕಾರಾಂತ ಅದಸ್ ಶಬ್ದ. (ಇವಳು)

ಸರ್ವ ನಾಮಶಬ್ದಗಳು ಮೂರು ಲಿಂಗಗಳಲ್ಲಿಯೂ ಇರುವುದರಿಂದ ಈಗ ಸ್ತ್ರೀಲಿಂಗದಲ್ಲಿ ಪ್ರಕ್ರಿಯಾ ಹೇಳುತ್ತಾನೆ. ಅದಸ್ + ಸ್ ಎಂದಿರುವಾಗ ಪುಲ್ಲಿಂಗದಂತೇ ರೂಪ. ಅಸೌ, ("ಅದಸ ಔಸುಲೋಪಶ್ಚ") ಅದಸ್ + ಔ ಎಂದಿರುವಾಗ ತ್ಯದಾದ್ಯತ್ವ, ಪರರೂಪ. ಟಾಪ್. ಔ. "ಔಙ ಆಪಃ" ಸೂತ್ರದಿಂದ ಔಗೆ ಶೀಭಾವ. ಶಕಾರಇತ್. ಅದಾ + ಈ. ಗುಣ. ಅದೇ. "ಅದಸೋಸೇರ್ದಾದುದೋಮಃ" ಸೂತ್ರದಿಂದ ದಕಾರಕ್ಕೆ ಮಕಾರ, ಏಕಾರಕ್ಕೆ ಊಕಾರ. ಅಮೂ. ಎಲ್ಲಾ ವಿಭಕ್ತಿಪರವಾದಾಗಲೂ ತ್ಯದಾದ್ಯತ್ವ. ಪರರೂಪ, ಟಾಪ್, ಈ ಮೂರು ಕಾರ್ಯಗಳು ಮೊದಲು ಬರುತ್ತವೆ. ಅದಾ + ಜಸ್. ಸವರ್ಣ ದೀರ್ಘ, ಅದಾಸ್. ಸಕಾರಕ್ಕೆ ರುತ್ವವಿಸರ್ಗ. ಅದಾಃ. ಈಗ "ಅದ ಸೋಃ"-ಸೂತ್ರದಿಂದ ದಕಾರಕ್ಕೆ ಮತ್ವ. ಆಕಾರಕ್ಕೆ ಊತ್ವ. ಅಮೂಃ. ಅದಂತದ ಪರದಲ್ಲಿ ಇಲ್ಲದಿರುವುದರಿಂದ ಜಸಿಗೆ ಶೀ ಭಾವವಿಲ್ಲ. ಅದಸ್ + ಅಮ್ ಅದಾ + ಅಮ್. "ಅಮಿಪೂರ್ವ" ಪೂರ್ವರೂಪ. ಅದಾಮ್. ಊತ್ವ, ಮತ್ವ. ಅಮೂಮ್. ಅಮೂ (ಹಿಂದಿನಂತೇ ಪ್ರಕ್ರಿಯಾ) ಅಮೂಃ (ಜಸಿನಂತೇ ರೂಪ) ಅದಾ + ಆ. "ಆಙಿಚಾಪಃ" ಸೂತ್ರದಿಂದ ಆಪಿಗೆ ಏಕಾರ. ಅದೇ + ಆ, ಅಯಾದೇಶ. ಅದಯಾ. ಉತ್ವ, ಮತ್ವ. ಅಮುಯಾ. ಅದಾ + ಭ್ಯಾಮ್. ಉತ್ವ. ಮತ್ವ. ಅಮೂಭ್ಯಾಮ್. ಅದಾ + ಭಿಸ್. ಅಮೂಭಿಃ॥ ಚ-ಅದಾ + ಙೇ. "ಸರ್ವನಾಮ್ನಃ"-ಸೂತ್ರದಿಂದ ಙೀಗೆ ಸ್ಯಾಟಾಗಮ. ಆಪಿಗೆ ಹ್ರಸ್ವ. ಅದ + ಸ್ಯಾ + ಏ. ವೃದ್ಧಿ. ಅದಸ್ಯೈ. ಉತ್ವಮತ್ವ. ಅಮುಷ್ಯೈ "ಆದೇಶಪ್ರತ್ಯಯಯೋಃ" ಸೂತ್ರ

ದಿಂದ ಷತ್ವ. ಅಮುಷ್ಯೈ ಅಮೂಭ್ಯಾಮ್-ಅಮೂಭ್ಯಃ। ಪಂ। ಅದಾ+ಙಸಿ. ಹಿಂದಿನಂತೇ ಸ್ಯಾಟ್, ಹ್ರಸ್ವ. ವೃದ್ಧಿ. ಅದಸ್ಯಾಃ. ಉತ್ವ, ಮತ್ವ, ಷತ್ವ, ಅಮುಷ್ಯಾಃ-ಅಮೂಭ್ಯಾಮ್. ಅಮೂಭ್ಯಃ। ಷ. ಏಕವಚನದಲ್ಲಿ ಹಿಂದಿನಂತೇ ರೂಪ. ಅಮುಷ್ಯಾಃ-ಅದಾ+ಓಸ್. "ಓಸಿಚ" ಸೂತ್ರದಿಂದ ಆಪಿಗೆ ಏಕಾರ. ಅದೇ+ಓಸ್. ಅಯಾದೇಶ. ಅದಯೋಸ್. ಉತ್ವ, ಮತ್ವ. ಸಕಾರಕ್ಕೆ ರುತ್ವವಿಸರ್ಗ ಅಮುಯೋಃ. ಅದಾ+ಆಮ್. "ಆಮಿಸರ್ವನಾಮ್ನಃ"-ಸೂತ್ರದಿಂದ ಆಮಿಗೆ ಸುಡಾಗಮ. ಅದಾಸಾಮ್. ಊತ್ವ, ಮತ್ವ, ಅಮೂಸಾಮ್ "ಆದೇಶ"-ಷತ್ವ. ಅಮೂಷಾಮ್ । ಸ। ಅದಾ+ಙಿ. "ಙೇರಾಮ್"-ಸೂತ್ರದಿಂದ ಙಿಗೆ ಆಮಾದೇಶ. ಅದಕ್ಕೆ ಹಿಂದಿನಂತೆ ಸ್ಯಾಡಾಗಮ ವೃದ್ಧಿ. ಆಪಿಗೆ ಹ್ರಸ್ವ. ಅದಸ್ಯಾಮ್. ಉತ್ವ, ಷತ್ವ, ಅಮುಷ್ಯಾಮ್. ಅಮುಯೋಃ ಹಿಂದಿನಂತೇ ಆಗುತ್ತದೆ. ಅದಾ+ಸು. ಊತ್ವ. ಮತ್ವ, ಷತ್ವ. ಅಮೂಷು. ಹೀಗೆ ಹಲಂತ ಸ್ತ್ರೀಲಿಂಗಶಬ್ದಗಳ ಪ್ರಕ್ರಿಯೆ ಮುಗಿದಿದೆ.

# ಅಥ ಹಲಂತನಪುಂಸಕಲಿಂಗ ಪ್ರಕರಣಮ್

ಇಲ್ಲಿಯೂ ವರ್ಣಸಮಾಮ್ನಾಯದ ಕ್ರಮದಂತೇ ಹಲಂತ ಶಬ್ದಗಳ ರೂಪವನ್ನು ಹೇಳುತ್ತಾನೆ. ಹಕಾರಾಂತ ನಪುಂಸಕಲಿಂಗ ಸ್ವನಡುಹ್ ಶಬ್ದ. ಶೋಭನಾಃ ಅನಡ್ವಾಹಃ ಯಸ್ಮಿನ್ ತತ್, ಸ್ವನ್‌ಡುತ್ ಕುಲಮ್. ಸುಂದರಗಳಾದ ಎತ್ತುಗಳು ಇರುವ ಕುಲ. ಸ್ವನ್‌ಡುಹ್+ಸ್ ಎಂದಿರುವಾಗ ಕಾರ್ಯ ಹೇಳುತ್ತಾನೆ.

**ಸ್ವಮೋರ್ಲುಕ್। ದತ್ವಮ್। ಸ್ವನಡುತ್, ಸ್ವನಡುದ್। ಸ್ವನಡುಹೀ। ಚತುರನಡುಹೋರಿತ್ಯಾಮ್ । ಸ್ವನಡ್ವಾಂಹಿ । ಪುನಸ್ತದ್ವತ್ । ಶೇಷಂ ಪುಂವತ್ । ವಾಃ। ವಾರೀ। ವಾರಿ । ವಾರ್ಭ್ಯಾಮ್ ॥ ಚತ್ವಾರಿ ॥ ಕಿಮ್ । ಕೇ। ಕಾನಿ ॥ ಇದಮ್ । ಇಮೇ। ಇಮಾನಿ ॥**

**ವಾ ॥ (ಅನ್ವಾದೇಶೇ ನಪುಂಸಕೇ ವಾ ಏನದ್ವಕ್ತವ್ಯಃ) ಏನತ್ । ಏನೇ । ಏನಾನಿ । ಏನೇನ। ಏನಯೋಃ ॥ ಅಹಃ। ವಿಭಾಷಾ ಙಿಶ್ಯೋಃ । ಅಹ್ನೀ, ಅಹನೀ । ಅಹಾನಿ ॥**

"ಸ್ವಮೋರ್ನಪುಂಸಕಾತ್" ಸೂತ್ರದಿಂದ ಸು, ಅಮ್‌ಗಳಿಗೆ ಲುಕ್. ಸ್ವನಡುಹ್. ಪದಾಂತವಾದುದರಿಂದ "ವಸುಸ್ರಂಸುಧ್ವಂಸ್ವನಡುಹಾಂದಃ" ಸೂತ್ರದಿಂದ ಡಕಾರಕ್ಕೆ ದಕಾರಾದೇಶ. ಸ್ವನಡುದ್. "ವಾವಸಾನೇ" ಸ್ವನಡುತ್. ಸ್ವನಡುಹ್+ಔ ಎಂದಿರುವಾಗ "ನಪುಂಸಕಾಚ್ಚ" ಸೂತ್ರದಿಂದ ಔಗೆ ಶೀ ಆದೇಶ.

ಶಕಾರ ಇತ್. ಸ್ವನಡುಹೀ. ಸ್ವನಡುಹ್ + ಜಸ್ ಎಂದಿರುವಾಗ "ಜಶ್ಶಸೋಃ ಶಿಃ" ಸೂತ್ರದಿಂದ ಜಸ್ ಶಸ್‌ಗಳಿಗೆ ಶಿ ಆದೇಶ. ಇ ಉಳಿಯುತ್ತದೆ. "ಶಿ ಸರ್ವನಾಮ ಸ್ಥಾನಮ್" ಸೂತ್ರದಿಂದ ಶಿಗೆ ಸರ್ವನಾಮಸ್ಥಾನ ಸಂಜ್ಞೆಯಿರುವುದರಿಂದ "ನಪುಂಸಕಸ್ಯ ಝಲಚಃ" (ಸೂ. ೨೪೦) ಸೂತ್ರದಿಂದ ನುಮಾಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬಂದರೆ ಸ್ವನಡುನ್‌ಹ್ + ಇ. "ಚತುರನಡುಹೋರಾಮ್ ಉದಾತ್ತಃ" (ಸೂ. ೨೬೦) ಸೂತ್ರದಿಂದ ಆಮಾಗಮ. ಇದೂ ಅಂತ್ಯಾಚಿನ ಪರವಾಗಿ ಬಂದರೆ ಸ್ವನಡು+ಆನ್‌ಹ್ + ಇ. ಯಣ್. ಸ್ವನಡ್ವಾನ್‌ಹ್ + ಇ. "ನಶ್ಚಾಪದಾಂತಸ್ಯ ಝಲಿ" ಸೂತ್ರದಿಂದ ನಕಾರಕ್ಕೆ ಅನುಸ್ವಾರ. ಸ್ವನಡ್ವಾಂಹಿ. ಸು-ಅಮ್‌ಗಳಿಗೆ ಲುಕ್ ಹೇಳಿದುದರಿಂದಲೂ, ಔಗೆ ಶೀ ಭಾವ, ಜಸ್ ಶಸ್‌ಗಳಿಗೆ ಶಿಭಾವ ಹೇಳಿದುದರಿಂದಲೂ ದ್ವಿತೀಯಾದಲ್ಲಿಯೂ ಹೀಗೆ ರೂಪವಾಗುತ್ತದೆ. ಸ್ವನಡುತ್-ದ್ । ಸ್ವನಡುಹೀ-ಸ್ವನಡ್ವಾಂಹಿ. ತೃತೀಯಾದಿಗಳಲ್ಲಿ ನಪುಂಸಕದ ಕಾರ್ಯವಿಲ್ಲದಿರುವುದರಿಂದ ಪುಲ್ಲಿಂಗದಂತೇ ರೂಪವಾಗುತ್ತದೆ. ಹಲಾದಿ ವಿಭಕ್ತಿಗಳಲ್ಲಿ ಹಕಾರಕ್ಕೆ ದಕಾರ. ಸ್ವನಡುದ್ಭ್ಯಾಮ್. ಇತ್ಯಾದಿ. ಅಜಾದಿಯಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ.

---

### ರೇಫಾಂತ. ವಾರ್ ಶಬ್ದ. (ನೀರು)

ಸು, ಅಮ್‌ಗಳಿಗೆ "ಸ್ವಮೋರ್ನಪುಂಸಕಾತ್" ಸೂತ್ರದಿಂದ ಲುಕ್. ವಾರ್. ಅವಸಾನವಿರುವುದರಿಂದ "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ರೇಫಕ್ಕೆ ವಿಸರ್ಗ. ವಾಃ. ಔಗೆ "ನಪುಂಸಕಾಚ್ಚ"ದಿಂದ ಶೀಭಾವ. ವಾರೀ. ಜಸ್ ಶಸ್‌ಗಳಿಗೆ "ಜಶ್ಶಸೋಃ ಶಿಃ" ಸೂತ್ರದಿಂದ ಶಿಭಾವ. ವಾರಿ. ಝಲಂತವಾಗದಿರುವುದರಿಂದ ನುಮಾಗಮವಿಲ್ಲ. ದ್ವಿತೀಯಾದಲ್ಲಿಯೂ ಹೀಗೆ ರೂಪ. ವಾಃ-ವಾರೀ-ವಾರಿ ॥ ತೃ. ವಾರಾ-ವಾರ್ಭ್ಯಾಮ್-ವಾರ್ಭಿಃ ಇತ್ಯಾದಿ. ಸುಪಿನಲ್ಲಿ ಸ್ವಾಭಾವಿಕ ರೇಫವಾದುದರಿಂದ ವಿಸರ್ಗವಿಲ್ಲ. ವಾರ್ಷು ॥

---

### ರೇಫಾಂತ ಚತುರ್ ಶಬ್ದ. (ನಾಲ್ಕು)

ಇದು ನಿತ್ಯ ಬಹುವಚನ ಹೇಳುವುದರಿಂದ ಜಸ್ ಪ್ರತ್ಯಯಬಂದರೆ ಅದಕ್ಕೆ ಶಿ ಆದೇಶ. ಚತುರ್+(ಶ್) ಇ ಎಂದಿರುವಾಗ "ಚತುರನಡುಹೋರಾಮ್ ಉದಾತ್ತಃ" ಸೂತ್ರದಿಂದ ಆಮ್ ಆಗಮ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬಂದರೆ ಚತುಆರ್ + ಇ. ಯಣ್. ಚತ್ವಾರಿ. ಶಸಿಗೂ ಶಿ ಆದೇಶ ಬರುವುದರಿಂದ ಚತ್ವಾರಿ ರೂಪವಾಗುತ್ತದೆ. ಭಿಸಾದಿಗಳಲ್ಲಿ ಪುಲ್ಲಿಂಗದಂತೇ ಪ್ರಕ್ರಿಯೆ. ಚತುರ್ಭಿಃ, ಚತುರ್ಭ್ಯಃ, ಚತುರ್ಭ್ಯಃ । ಚತುರ್ಣಾಮ್. ಚತುರ್ಷು.

---

## ಮಕಾರಾಂತ ಕಿಮ್ ಶಬ್ದ. (ಯಾವುದು ?)

"ಸ್ವಮೋರ್ನಪುಂಸಕಾತ್" ಸೂತ್ರದಿಂದ ಸು, ಅಮ್‌ಗಳಿಗೆ ಲುಕ್. ಕಿಮ್ ಎಂದೇ ಉಳಿಯುತ್ತದೆ. ಔ ವಿಭಕ್ತಿಗೆ "ನಪುಂಸಕಾಚ್ಚ" ಸೂತ್ರದಿಂದ ಶೀಭಾವ. "ಕಿಮಃ ಕಃ" ಸೂತ್ರದಿಂದ ಕ ಆದೇಶ. ಕ+ಈ ಎಂದಿರುವಾಗ ಗುಣ. ಕೇ. ಕಿಮ್+ಜಸ್. ಕಿಮಿಗೆ ಕಾದೇಶ. ಜಸಿಗೆ ಶಿ ಆದೇಶ. ಕ+ಇ ಎಂದಿರುವಾಗ "ನಪುಂಸಕಸ್ಯಝಲಚಃ" ಸೂತ್ರದಿಂದ ನುಮಾಗಮ. ಕನ್+ಇ. "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರದಿಂದ ಉಪಧಾದೀರ್ಘ. ಕಾನಿ. ದ್ವಿತೀಯಾದಲ್ಲಿಯೂ ಇದೇ ರೂಪ. ಕಿಮ್-ಕೇ-ಕಾನಿ. ತೃತೀಯಾದಿಂದ ಪುಲ್ಲಿಂಗದಂತೇ ರೂಪ. ಕೇನ-ಕಾಭ್ಯಾಮ್-ಕೈಃ ಇತ್ಯಾದಿ.

---

## ಮಕಾರಾಂತ "ಇದಮ್" ಶಬ್ದ. (ಇದು)

ಇದಮಿನ ಪರದಲ್ಲಿರುವ ಸು, ಅಮ್‌ಗಳಿಗೆ ಲೋಪ. ಆಗ ಸುವಿನಲ್ಲಿ ಇದಮ್ ಎಂದೇ ರೂಪ. ಇದಮ್+ಔ ಎಂದಿರುವಾಗ ಹಿಂದಿನಂತೆ ಔ ವಿಭಕ್ತಿಗೆ ಶೀ ಆದೇಶ. "ತ್ಯದಾದೀನಾಮಃ" ಸೂತ್ರದಿಂದ ಮಕಾರಕ್ಕೆ ಅ ಆದೇಶ. "ಅತೋಗುಣೇ" ಪರರೂಪ. ಇದ+ಈ. "ಆದ್ಗುಣಃ" ಗುಣ. ಇದೇ. "ದಶ್ಚ" ಸೂತ್ರದಿಂದ ದಕಾರಕ್ಕೆ ಮಕಾರಾದೇಶ ಇಮೇ. ಇದಮ್+ಜಸ್. ಜಸ್ ಶಸ್‌ಗಳಿಗೆ ಹಿಂದಿನಂತೆ ಶಿ ಆದೇಶ. ಇದಮ್+ಇ. ತ್ಯದಾದ್ಯತ್ವ, ಪರರೂಪ. ಇದ+ಇ. ಶಿಗೆ ಸರ್ವನಾಮಸ್ಥಾನ ಸಂಜ್ಞೆಯಿರುವುದರಿಂದ "ನಪುಂಸಕಸ್ಯಝಲಚಃ" ಸೂತ್ರದಿಂದ ಇದ ಎಂಬುದಕ್ಕೆ ನುಮಾಗಮ. ಇದನ್+ಇ. "ಸರ್ವನಾಮಸ್ಥಾನೇ"-ಸೂತ್ರದಿಂದ ಉಪಧಾದೀರ್ಘ. ಇದಾನಿ "ದಶ್ಚ" ಸೂತ್ರದಿಂದ ದಕಾರಾದೇಶ. ಇಮಾನಿ. ದ್ವಿತೀಯಾದಲ್ಲಿಯೂ ಹೀಗೇ ರೂಪ. ತೃತೀಯಾದಿಂದ ಪುಲ್ಲಿಂಗದಂತೆ ರೂಪ. ದ್ವಿತೀಯಾ, ಟಾ, ಓಸ್ ವಿಭಕ್ತಿಗಳಲ್ಲಿ ಇದಮ್ ಶಬ್ದಕ್ಕೆ ಏನಾದೇಶ ಹಿಂದೆ ಹೇಳಿದೆ. (ಸೂ ೨೮೨) ಇಲ್ಲಿ ವಾರ್ತಿಕಕಾರರು ಏನಾದೇಶಕ್ಕೆ ಅಪವಾದವಾಗಿ ಏನತ್ ಆದೇಶ ಹೇಳುತ್ತಾರೆ ವಾರ್ತಿಕಾರ್ಥ. ಇದಮ್, ಏತದ್ ಶಬ್ದಗಳಿಗೆ ಅನ್ವಾದೇಶ ವಿಷಯದಲ್ಲಿ ಏನತ್ ಆದೇಶ ವಿಕಲ್ಪವಾಗಿ ಹೇಳಬೇಕು. ಅನ್ವಾದೇಶವೆಂದರೆ ಒಂದು ಕಾರ್ಯಕ್ಕೋಸ್ಕರ ಒಬ್ಬನನ್ನು ತೆಗೆದುಕೊಂಡು ಇನ್ನೊಂದು ಕಾರ್ಯ ಹೇಳಲು ಪುನಃ ಅವನನ್ನೇ ತೆಗೆದುಕೊಳ್ಳುವುದು ಎಂದು ಹಿಂದೆ ಹೇಳಿದೆ. ಏನತ್ ಆದೇಶದ ಪ್ರಯೋಜನ ದ್ವಿತೀಯಾ ಏಕವಚನದಲ್ಲಿ ಮಾತ್ರ ಸ್ಪಷ್ಟವಾಗಿದೆ. ಇಲ್ಲಿ ಏನತ್+ಅಮ್ ಎಂದಿರುವಾಗ ಅಮಿಗೆಸ್ವಮೋರ್ನಪುಂಸಕಾತ್" ಸೂತ್ರದಿಂದ ಲುಕ್ ಬರುವುದರಿಂದ ವಿಭಕ್ತಿ ಪರದಲ್ಲಿಲ್ಲದುದರಿಂದ ತ್ಯದಾದ್ಯತ್ವ ಬರುವುದಿಲ್ಲ. ಇತರ ವಿಭಕ್ತಿಗಳಲ್ಲಿ ತ್ಯದಾದ್ಯತ್ವ ಪರರೂಪ ಬಂದು ಏನ ಎಂದೇ ಆಗುತ್ತದೆ. ಔಗೆ ಶೀ ಆದೇಶಬಂದು ಗುಣ. ಏನ+ಈ.

ಏನೇ. ಶಸಿಗೆ ಶಿ ಆದೇಶ. ನುಮ್. ಉಪಧಾದೀರ್ಘ. ಏನಾನಿ. ಇತರ ವಿಭಕ್ತಿಗಳಲ್ಲಿ ಪುಲ್ಲಿಂಗದಂತೇ ರೂಪ.

ಪ್ರ-ಇದಮ್ । ಇಮೇ । ಇಮಾನಿ ॥ ದ್ವಿ-ಇದಮ್ ಏನತ್ ಏನದ್ । ಇಮೇ । ಏನೇ । ಇಮಾನಿ ಏನಾನಿ ॥ ತೃ-ಅನೇನ ಏನೇನ । ಆಭ್ಯಾಮ್ । ಏಭಿಃ ॥ ಚ-ಅಸ್ಮೈ । ಆಭ್ಯಾಮ್ । ಏಭ್ಯಃ ॥ ಪಂ-ಅಸ್ಮಾತ್ । ಆಭ್ಯಾಮ್ । ಏಭ್ಯಃ ॥ ಷ-ಅಸ್ಯ । ಅನಯೋಃ ಏನಯೋಃ । ಏಷಾಮ್ ॥ ಸ-ಅಸ್ಮಿನ್ । ಅನಯೋಃ ಏನಯೋಃ । ಏಷು ॥

———

## ನಕಾರಾಂತ, ಅಹನ್ ಶಬ್ದ. (ಹಗಲು)

ಅಹನ್+ಸ್ ಎಂದಿರುವಾಗ ಸುವಿಗೆ ಲುಕ್. ಅಹನ್. "ರೋಽಸುಪಿ" (ಸೂ. ೧೧೦) ಸೂತ್ರದಿಂದ ನಕಾರಕ್ಕೆ ರೇಫಾದೇಶ. ಅಹರ್. "ಖರವಸಾನಯೋರ್ವಿಸರ್ಜನೀಯಃ" ಸೂತ್ರದಿಂದ ರೇಫಕ್ಕೆ ವಿಸರ್ಗ. ಅಹಃ. ಅಹನ್+ಔ. "ನಪುಂಸಕಾಚ್ಚ" ಔಗೆ ಶೀಭಾವ. ಅಹನೀ. "ವಿಭಾಷಾ-ಙಿಶ್ಯೋಃ" (ಸೂ. ೨೪೯) ಸೂತ್ರದಿಂದ ಶೀ ಪರವಾದಾಗ ವಿಕಲ್ಪವಾಗಿ ಅನಿನ ಅಕಾರಕ್ಕೆ ಲೋಪ. ಅಹ್ನೀ. ಹೀಗೆ ಎರಡು ರೂಪ. ಅಹನ್+ಜಸ್. ಜಸಿಗೆ ಶಿಭಾವ. ಉಪಧಾದೀರ್ಘ. ಅಹಾನಿ. ದ್ವಿತೀಯಾದಲ್ಲಿಯೂ ಹೀಗೆ ರೂಪ. ಅಹಃ । ಅಹ್ನೀ-ಅಹನೀ । ಅಹಾನಿ. ತೃತೀಯಾದಿ ಅಜಾದಿಗಳಲ್ಲಿ ರಾಜನ್ ಶಬ್ದದಂತೇ ರೂಪ. ಅಹನ್+ಆ. "ಅಲ್ಲೋಪೋಽನಃ" ಸೂತ್ರದಿಂದ ಅನಿನ ಅಕಾರಕ್ಕೆ ಲೋಪ. ಅಹ್ನಾ-ಅಹನ್+ಭ್ಯಾಮ್ ಎಂದಿರುವಾಗ "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ರುತ್ವ ಹೇಳುತ್ತಾನೆ.

(ಅಹನ್ ಶಬ್ದಕ್ಕೆ ರುತ್ವ ಹೇಳುವ ಸೂತ್ರ)

### ೩೬೫. ಅಹನ್ ॥ ೮-೨-೬೮ ॥

**ಅಹನ್ನಿತ್ಯಸ್ಯ ರುಃ ಪದಾಂತೇ। ಅಹೋಭ್ಯಾಮ್ ॥ ದಂಡಿ । ದಂಡಿನೀ । ದಂಡೀನಿ । ದಂಡಿನಾ । ದಂಡಿಭ್ಯಾಮ್ ॥ ಸುಪಥಿ । ಟೇರ್ಲೋಪಃ । ಸುಪಥೀ । ಸುಪಂಥಾನಿ ॥ ಊರ್ಕ್, ಊರ್ಗ್ । ಊರ್ಜೀ । ಊರ್ನ್ಜಿ । ನರಜಾನಾಂ ಸಂಯೋಗಃ ।**

ಏಕಪದ ಸೂತ್ರ. "ಸಸಜುಷೋರುಃ" ಸೂತ್ರದಿಂದ ರುಃ ಅನುವೃತ್ತಿ. "ಪದಸ್ಯ" ಅಧಿಕಾರ. "ಸ್ಕೋಃ ಸಂಯೋಗಾದ್ಯೋರಂತೇ ಚ" ಸೂತ್ರದಿಂದ 'ಅಂತೇ' ಅನುವೃತ್ತಿ. ಅಹನ್ ಎಂಬುದು ಲುಪ್ತಷಷ್ಠೀಕ. ಷಷ್ಠೀ ಲುಪ್ತವಾಗಿದೆ. **ಸೂತ್ರಾರ್ಥ.** ಅಹನ್ ಶಬ್ದಕ್ಕೆ ಪದಾಂತದಲ್ಲಿ ರುತ್ವ ಬರುತ್ತದೆ. ಅಹನ್+ಭ್ಯಾಮ್ ಎಂದಿರುವಾಗ "ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಪದಸಂಜ್ಞೆ ಬರುತ್ತದೆ.

ರುತ್ವ, ಬಂದರೆ ಅಹರ್ ಭ್ಯಾಮ್. ಹಶ್ ಪರದಲ್ಲಿರುವುದರಿಂದ "ಹಶಿಚ" ಸೂತ್ರ. ದಿಂದ ರುವಿನ ರೇಫಕ್ಕೆ ಉತ್ವ. ಅಹ+ಉಭ್ಯಾಮ್. ಗುಣ. ಅಹೋಭ್ಯಾಮ್. ಹೀಗೆ ಹಲಾದಿಯಲ್ಲಿ ರುತ್ವ, ಉತ್ವ, ಗುಣ. ಅಹೋಭಿಃ । ಚ-ಅಹ್ನೇ-ಅಹೋಭ್ಯಾಮ್-ಅಹೋಭ್ಯಃ । ಪಂ-ಅಹ್ನಃ-ಅಹೋಭ್ಯಾಮ್-ಅಹೋಭ್ಯಃ । ಷ-ಅಹ್ನಃ-ಅಹ್ನೋಃ-ಅಹ್ನಾಮ್. ಸ ಅಹ್ನಿ-ಅಹನಿ (ವಿಭಾಷಾಙಿಶ್ಯೋಃ ಸೂತ್ರದಿಂದ ಅಲ್ಲೋಪವಿಕಲ್ಪ) ಅಹ್ನೋಃ-ಅಹಸ್ಸು. ಅಹಃಸು.

---

ನಕಾರಾಂತ ದಂಡಿನ್ ಶಬ್ದ. (ದಂಡವುಳ್ಳದ್ದು)

ದಂಡಃ ಅಸ್ಯ ಅಸ್ತಿ ಇತಿ ದಂಡಿ. ದಂಡವುಳ್ಳಕುಲ, ದಂಡಿನ್+ಸ್. ಹಿಂದಿನಂತೆ ಸು, ಅಮ್‌ಗಳಿಗೆ ಲುಕ್. ದಂಡಿನ್. "ನಲೋಪಃ ಪ್ರಾತಿಪದಿಕಾಂತಸ್ಯ" ಸೂತ್ರದಿಂದ ನಲೋಪ. ದಂಡಿ. ಔ ವಿಭಕ್ತಿಗೆ ಶೀ ಭಾವ. ದಂಡಿನೀ. ಜಸ್ ಶಸ್ ಗಳಿಗೆ ಶಿಭಾವ. ದಂಡಿನ್+ಇ. ಉಪಧಾದೀರ್ಘ. ದಂಡೀನಿ. ದ್ವಿತೀಯಾದಲ್ಲಿಯೂ ಹೀಗೇ ರೂಪ. ತೃತೀಯಾದಿಂದ ಪುಲ್ಲಿಂಗದಂತೇ ರೂಪ. ಹಲಾದಿಯಲ್ಲಿ ನಲೋಪ. ದಂಡಿನಾ-ದಂಡಿಭ್ಯಾಮ್. ದಂಡಿಭಿಃ॥ ಇತ್ಯಾದಿ.

---

ನಕಾರಾಂತ "ಸುಪಥಿನ್" ಶಬ್ದ. (ಒಳ್ಳೆ ದಾರಿಯುಳ್ಳದ್ದು.)

ಶೋಭನಃ ಪಂಥಾಃ ಯಸ್ಯ ತತ್ । ಸುಪಥಿ. ಸುಪಥಿನ್+ಸ್ ಎಂದಿರುವಾಗ ಹಿಂದಿನಂತೆ ಸುಲೋಪ, ನಲೋಪ. ಸುಪಥಿ. ಸುಪಥಿನ್+ಔ. ಔಗೆ ಶೀ ಭಾವ. ಸುಪಥಿನೀ. ಸುಪಥಿನ್+ಜಸ್. ಜಸ್ ಶಸ್‌ಗಳಿಗೆ ಶಿಭಾವ. ಇದಕ್ಕೆ ಸರ್ವನಾಮಸ್ಥಾನ ಸಂಜ್ಞೆಯಿರುವುದರಿಂದ "ಥೋನ್ಥಃ" ಸೂತ್ರದಿಂದ ಥಕಾರಕ್ಕೆ ನ್ಥಾದೇಶ. ಸುಪನ್ಥನ್+ಇ. "ಸರ್ವನಾಮಸ್ಥಾನೇ ಚಾಸಂಬುದ್ಧೌ" ಸೂತ್ರದಿಂದ ಉಪಧಾದೀರ್ಘ ಸುಪನ್ಥಾನಿ. ದ್ವಿತೀಯಾದಲ್ಲಿಯೂ ಹೀಗೇರೂಪ. ತೃತೀಯಾದಿಂದ ಪುಲ್ಲಿಂಗದ ಪಥಿನ್ ಶಬ್ದದಂತೇ ರೂಪ. ಸುಪಥಾ-ಸುಪಥಿಭ್ಯಾಮ್-ಸುಪಥಿಭಿಃ॥ ಇತ್ಯಾದಿ.

---

ಜಕಾರಾಂತ ಊರ್ಜ್ ಶಬ್ದ. (ಬಲ, ತೇಜಸ್ಸು.)

ಸು, ಅಮ್‌ಗಳಿಗೆ "ಸ್ವಮೋಃ"-ಸೂತ್ರದಿಂದ ಲುಕ್. ಊರ್ಜ್. "ಚೋಃ ಕುಃ" ಸೂತ್ರದಿಂದ ಜಕಾರಕ್ಕೆ ಗಕಾರಾದೇಶ. "ವಾವಸಾನೇ" ಸೂತ್ರದಿಂದ ಅದಕ್ಕೆ ವಿಕಲ್ಪ ಚರ್ತ್ವ. ಊರ್ಗ್, ಊರ್ಕ್. ಔಗೆ ಶೀ ಭಾವ. ಊರ್ಜೀ. ಊರ್ಜ್+ (ಶ್) ಇ ಎಂದಿರುವಾಗ ಝಲಂತವಾದುದರಿಂದ "ನಪುಂಸಕಸ್ಯ ಝಲಚಃ" ಸೂತ್ರದಿಂದ ನುಮಾಗಮ. ಅಂತ್ಯಾಚಿನಪರವಾಗಿ ಬಂದರೆ ಊನ್‌ರ್‌ಜ್+ಇ. ಊರ್ನ್‌ಜಿ. ನ, ರೇಫ, ಜಕಾರಗಳಿಗೆ ಸಂಯೋಗ. ನಕಾರಕ್ಕೆ ಮಧ್ಯೆ ರೇಫವಿರುವುದರಿಂದ ಜಕಾರ

ಸಂಬಂಧವಿಲ್ಲ. ಆದುದ್ದರಿಂದ ಶ್ಚುತ್ವವಿಲ್ಲ. ತೃತೀಯಾದಿಂದ ಪುಲ್ಲಿಂಗದಂತೇ ರೂಪ. ಊರ್ಜಾ-ಊರ್ಗ್ಭ್ಯಾಮ್-ಊರ್ಗ್ಭಿಃ || ಇತ್ಯಾದಿ.

---

ದಕಾರಾಂತ ತದ್ ಶಬ್ದ. (ಅದು)

**ತತ್-ತೇ-ತಾನಿ || ಯತ್-ಯೇ-ಯಾನಿ || ಏತತ್-ಏತೇ-ಏತಾನಿ ||**
**ಗವಾಕ್, ಗವಾಗ್ | ಗೋಚೀ | ಗವಾಞ್ಚಿ | ಪುನಸ್ತದ್ವತ್ ||**
**ಗೋಚಾ | ಗವಾಗ್ಭ್ಯಾಮ್ | ಶಕೃತ್-ಶಕೃತೀ-ಶಕೃನ್ತಿ ||**

ತದ್+ಸ್. "ಸ್ವಮೋರ್ನಪುಂಸಕಾತ್" ಸುಲುಕ್. ತದ್. "ವಾವಸಾನೇ" ತತ್. ತದ್+ಔ. "ನಪುಂಸಕಾಚ್ಚ" ಔಗೆ ಶೀ ಭಾವ. "ತ್ಯದಾದೀನಾಮಃ," ದಕಾರಕ್ಕೆ ಅತ್ವ. "ಆತೋಗುಣೇ" ಪರರೂಪ. ತ+ಇ. ಗುಣ. ತೇ. ತದ್+ಜಸ್. ಜಸ್ ಶಸ್‌ಗಳಿಗೆ ಶಿಭಾವ. ತ್ಯದಾದ್ಯತ್ವ, ಪರರೂಪ. ತ+ಇ. "ನಪುಂಸಕಸ್ಯ ಝಲಚಃ" ಸೂತ್ರದಿಂದ ಅಜಂತವಾದುದರಿಂದ ನುಮ್ ಆಗಮ. "ಸರ್ವನಾಮಸ್ಥಾನೇ"-ಉಪಧಾದೀರ್ಘ. ತಾನಿ, ದ್ವಿತೀಯಾದಲ್ಲಿಯೂ ಇದೇ ರೂಪ. ತೃತೀಯಾದಿಂದ ಪುಲ್ಲಿಂಗದಂತೇ ಪ್ರಕ್ರಿಯಾ. ತೇನ ತಾಭ್ಯಾಮ್-ತೈಃ ಇತ್ಯಾದಿ.

---

ದಕಾರಾಂತ "ಯದ್" ಶಬ್ದ. (ಯಾವುದು)

ತದ್‌ಶಬ್ದದಂತೇ ಈ ಶಬ್ದದ ಪ್ರಕ್ರಿಯೆ- ಪ್ರ-ದ್ವಿ-ಯತ್, ಯದ್-ಯೇ-ಯಾನಿ. ತೃತೀಯಾದಿಂದ ಪುಲ್ಲಿಂಗದಂತೇ ರೂಪ. ಯೇನ-ಯಾಭ್ಯಾಮ್-ಯೈಃ ಇತ್ಯಾದಿ.

---

ದಕಾರಾಂತ "ಏತದ್" ಶಬ್ದ (ಇದು)

ಏತದ್+ಸ್. ಹಿಂದಿನಂತೇ ಸುಲೋಪ. ವಾವಸಾನೇ. ಏತದ್-ಏತತ್. ಏತದ್+ಔ. ತ್ಯತಾದ್ಯತ್ವ. ಪರರೂಪ. ವಿಭಕ್ತಿಗೆ ಶೀ ಭಾವ. ಗುಣ. ಏತೇ. ಏತದ್+ಜಸ್. ಅತ್ವ, ಪರರೂಪ. ವಿಭಕ್ತಿಗೆ ಶಿಭಾವ. ನುಮ್. ಉಪಧಾದೀರ್ಘ. ಏತಾನಿ. ದ್ವಿತೀಯಾದಲ್ಲಿ ಏನದ್ ಆದೇಶ. ಅನ್ವಾದೇಶದಲ್ಲಿ ವಿಕಲ್ಪವಾಗಿ ಬರುವುದರಿಂದ ಎರಡುರೂಪಗಳು. ಏತದ್-ಏತತ್-ಏನತ್ ಏನದ್ | ಏತೇ-ಏನೇ ಏತಾನಿ, ಏನಾನಿ || ಏತೇನ-ಏನೇನ ಇತ್ಯಾದಿ ಪುಲ್ಲಿಂಗದಂತೇ ತಿಳಿಯಬೇಕು.

---

ಚಕಾರಾಂತ "ಗವಾಞ್ಚ್" ಶಬ್ದ. (ಗೋವನ್ನು ಕುರಿತು ಹೋಗುವುದು)

ಅಞ್ಚು ಧಾತುವಿಗೆ ಕ್ವಿಪ್‌ಪ್ರತ್ಯಯ. ಇದಕ್ಕೆ ಎರಡು ಅರ್ಥಗಳಿವೆ. ಗತಿ ಪೂಜಾ. ಇಲ್ಲಿ ಗತ್ಯರ್ಥವನ್ನು ಮಾತ್ರ ಹೇಳುತ್ತಾನೆ. ಪೂಜಾರ್ಥದಲ್ಲಿ "ನಾಞ್ಚೇಃ

ಪೂಜಾಯಾಮ್" ಎಂದು ನಿಷೇಧವಿರುವುದರಿಂದ ನಲೋಪ ಬರುವುದಿಲ್ಲ. ಗತ್ಯರ್ಥದಲ್ಲಿ "ಅನಿದಿತಾಂಹಲ ಉಪಧಾಯಾಃ ಕ್ಙಿತಿ" ಸೂತ್ರದಿಂದ ಅಞ್ಚುಧಾತುವಿನ ಉಪಧೆಯಾದ ನಕಾರಕ್ಕೆ ಲೋಪಬರುತ್ತದೆ. ಗವಾಞ್ಚ್+ಕ್ವಿಪ್. ನಲೋಪ. ಕ್ವಿಪಿನಲ್ಲಿ ಸರ್ವಲೋಪ. ಗವಾಚ್. ಸುಪರವಾದಾಗ ಅದಕ್ಕೆ ಲುಕ್. ಗವಾಚ್ ಎಂದೇ ಉಳಿಯುತ್ತದೆ. "ಚೋಃಕುಃ" ಸೂತ್ರದಿಂದ ಚಕಾರಕ್ಕೆ ಕಕಾರಾದೇಶ. ಗವಾಕ್. ಪದಾಂತದಲ್ಲಿ ಜಶ್ತ್ವ, ಚರ್ತ್ವವಿಕಲ್ಪ. ಗವಾಕ್+ಗವಾಗ್. ಇಲ್ಲಿ ಗೋ+ಅಕ್ ಎಂದಿರುವಾಗ ಅವಜ್ ಬಂದು ಗವಾಕ್ ಆಗಿದೆ. ಪ್ರಕೃತಿಭಾವಾದಿಗಳು ಬಂದರೆ ಅನೇಕ ರೂಪಗಳಾದರೂ ಕ್ಲಿಷ್ಟವಾದುದರಿಂದ ಅವುಗಳನ್ನು ಇಲ್ಲಿ ಹೇಳಲಿಲ್ಲ. ಗೋಅಞ್ಚ್+ಔ. ಶೀ ಭಾವ. ನಲೋಪ. ಗೋ+ಅಚ್+ಈ. ನಪುಂಸಕದಲ್ಲಿ ಸುಟಿಗೆ (ಔ) ಸರ್ವನಾಮಸ್ಥಾನ ಸಂಜ್ಞೆ ಇಲ್ಲ. ಆದುದರಿಂದ ಅಜಾದಿಪ್ರತ್ಯಯವಿರುವುದರಿಂದ "ಯಚಿಭಮ್" ಸೂತ್ರದಿಂದ ಭಸಂಜ್ಞೆ ಬರುತ್ತದೆ. ಆಗ "ಅಚಃ" ಸೂತ್ರದಿಂದ ಅಚಿನ ಅಕಾರಕ್ಕೆ ಲೋಪ. ಗೋಚ್+ಈ. ಗೋಚೀ ಗವಾಚ್+ಜಸ್. ಜಸ್ ಶಸ್‌ಗಳಿಗೆ ಶಿಭಾವ. ಇದಕ್ಕೆ ಸರ್ವನಾಮಸ್ಥಾನ ಸಂಜ್ಞೆಯಿರುವುದರಿಂದ "ಉಗಿದಚಾಂ" ಸೂತ್ರದಿಂದ ಶಿಪರವಾದಾಗ ನುಮಾಗಮ. ಗವಾನ್‌ಚ್+ಇ. "ನಶ್ಚಾಪದಾಂತಸ್ಯ ಝಲಿ" ಸೂತ್ರದಿಂದ ನಕಾರಕ್ಕೆ ಅನುಸ್ವಾರ. "ಅನುಸ್ವಾರಸ್ಯ ಯಯಿ" ಸೂತ್ರದಿಂದ ಅನುಸ್ವಾರಕ್ಕೆ ಪರದ ಚಕಾರಸವರ್ಣ ಞಕಾರಾದೇಶ. ಗವಾಞ್ಚ್+ಇ. ಗವಾಞ್ಚಿ ॥ ದ್ವಿತೀಯಾದಲ್ಲಿಯೂ ಹೀಗೆಯೇ ರೂಪ. ಗವಾಕ್-ಗವಾಗ್-ಗೋಚೀ-ಗವಾಞ್ಚಿ. ಇನ್ನು ಅಜಾದಿಯಲ್ಲಿ "ಅಚಃ" ಸೂತ್ರದಿಂದ ಅಚಿನ ಅಕಾರಕ್ಕೆ ಲೋಪ. ಆಗ ನಿಮಿತ್ತವಿಲ್ಲದುದರಿಂದ ಅವಙ್ ಇಲ್ಲ. ತೃ. ಗೋಚಾ-ಗವಾಚ್‌ಭ್ಯಾಮ್ ಎಂದಿರುವಾಗ "ಚೋಃಕುಃ" ಸೂತ್ರದಿಂದ ಕುತ್ವ. ಗವಾಕ್+ಭ್ಯಾಮ್. "ಝಲಾಂ ಜಶೋಽನ್ತೇ" ಗವಾಗ್ಭ್ಯಾಮ್. ಹಲಾದಿಯಲ್ಲಿ ಹೀಗೆ ಕುತ್ವ ಜಶ್ತ್ವ. ಗವಾಗ್ಭಿಃ ॥ ಚ-ಗೋಚೇ-ಗವಾಗ್ಭ್ಯಾಮ್-ಗವಾಗ್ಭ್ಯಃ ॥ ಪಂ-ಗೋಚಃ-ಗವಾಗ್ಭ್ಯಾಮ್-ಗವಾಗ್ಭ್ಯಃ। ಷ-ಗೋಚಃ-ಗೋಚೋಃ-ಗೋಚಾಮ್। ಸ-ಗೋಚಿ-ಗೋಚೋಃ। ಗವಾಚ್+ಸು. ಕುತ್ವ, ಜಶ್ತ್ವ ಚರ್ತ್ವ. ಗವಾಕ್+ಸು. "ಆದೇಶ. ಪ್ರತ್ಯಯಯೋಃ" ಸುವಿನ ಸಕಾರಕ್ಕೆ ಷತ್ವ. ಕಷಸಂಬಂಧದಿಂದ ಕ್ಷ. ಗವಾಕ್ಷು.

---

ತಕಾರಾಂತ "ಶಕೃತ್" ಶಬ್ದ. (ಮಲ)

ಸು, ಅಮ್‌ಗಳಿಗೆ ಹಿಂದಿನಂತೆ ಲುಕ್. ಶಕೃತ್. ಔಗೆ ಶೀ ಆದೇಶ. ಶಕೃತೀ. ಜಸ್‌ಶಸ್‌ಗಳಿಗೆ ಶಿ ಆದೇಶ. ಸರ್ವನಾಮಸ್ಥಾನವಾದುದರಿಂದ ನುಮಾಗಮ. ಶಕೃನ್‌ತ್+ಇ. ನಕಾರಕ್ಕೆ ಅನುಸ್ವಾರ ಪರಸವರ್ಣ. ಶಕೃನ್ತಿ ॥ ತೃತೀಯಾದಿಂದ ಪುಲಿಂಗದಂತೇ ರೂಪ.

---

ತಕಾರಾಂತ "ದದತ್" ಶಬ್ದ (ಕೊಡುವುದು)

ದಾ ಧಾತುವಿಗೆ ಶತೃಪ್ರತ್ಯಯ ಬಂದರೆ ದದತ್ ರೂಪವಾಗುತ್ತದೆ. ಹಿಂದಿನಂತೇ ನಪುಂಸಕದಲ್ಲಿ ಸು, ಅಮ್‌ಗಳಿಗೆ "ಸ್ವಮೋರ್ನಪುಂಸಕಾತ್" ಸೂತ್ರದಿಂದ ಲುಕ್. ಔ ವಿಭಕ್ತಿಗೆ ಶೀ ಆದೇಶ. ಜಸ್‌ಶಸ್‌ಗಳಿಗೆ ಶಿ ಆದೇಶ. ದದತ್ (ದದದ್) ದದತೀ. ದದತ್ + ಇ ಎಂದಿರುವಾಗ ನಿತ್ಯವಾಗಿ ನುಮ್ ಪ್ರಾಪ್ತವಾದರೆ ವಿಕಲ್ಪ ಹೇಳುತ್ತಾನೆ.

(ನಪುಂಸಕದಲ್ಲಿ ಶತೃ ಬಂದಾಗ ವಿಕಲ್ಪ ನುಮ್ ಹೇಳುವ ಸೂತ್ರ)

**೩೬೬. ವಾ ನಪುಂಸಕಸ್ಯ ॥ ೭-೧-೭೯ ॥**

**ಅಭ್ಯಸ್ತಾತ್ಪರೋ ಯಃ ಶತಾ ತದಂತಸ್ಯ ಕ್ಲೀಬಸ್ಯ ವಾ ಸುಮ್ ಸರ್ವನಾಮಸ್ಥಾನೇ ॥ ದದನ್ತಿ ದದತಿ ॥ ತುದತ್ ॥**

ದ್ವಿಪದ ಸೂತ್ರ. "ನಾಭ್ಯಸ್ತಾಚ್ಛತುಃ" ಸೂತ್ರದಿಂದ "ಅಭ್ಯಸ್ತಾತ್" "ಶತುಃ" "ಉಗಿದಚಾಂ" ಸೂತ್ರದಿಂದ "ಸರ್ವನಾಮಸ್ಥಾನೇ" "ಇದಿತೋನುಮ್ ಧಾತೋಃ" ಸೂತ್ರದಿಂದ "ನುಮ್" ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ. ಅಭ್ಯಸ್ತದ ಪರದಲ್ಲಿ ಯಾವ ಶತೃಪ್ರತ್ಯಯ ಇದೆಯೋ ಅದೇ ಅಂತವಾದ ನಪುಂಸಕ ಅಂಗಕ್ಕೆ ಸರ್ವನಾಮಸ್ಥಾನ ಪರವಾದಾಗ ವಿಕಲ್ಪವಾಗಿ ನುಮಾಗಮ ಬರುತ್ತದೆ. "ಉಭೇ ಅಭ್ಯಸ್ತಮ್" ಸೂತ್ರದಿಂದ ದ್ವಿತ್ವ ಎಲ್ಲಿ ಬಂದಿದೆಯೋ ಅಲ್ಲಿ ಆ ಎರಡಕ್ಕೂ ಸೇರಿ ಅಭ್ಯಸ್ತ ಎಂಬ ಸಂಜ್ಞೆಯನ್ನು ಹೇಳಿರುತ್ತಾನೆ. ದದತ್ ಎಂಬಲ್ಲಿ ದಾ ಧಾತು ಜುಹೋತ್ಯಾದಿ ಗಣದಲ್ಲಿ ಪಠಿತವಾದುದರಿಂದ ಶತೃಬಂದಾಗ ಶ್ಲು ಎಂಬ ವಿಕರಣ ಬಂದು ದ್ವಿತ್ವ ಬಂದಿದೆ. ಆಗ ದದಾ ಎಂಬುದು ಅಭ್ಯಸ್ತ. ಇದರ ಪರದಲ್ಲಿ ಶತೃ ಬಂದಿದೆ. ಇದೇ ಅಂತವಾದುದು ದದತ್ ಎಂಬ ಅಂಗ (ನಪುಂಸಕವಾಗಿದೆ). ಇದಕ್ಕೆ ಶಿ ಎಂಬ ಸರ್ವನಾಮಸ್ಥಾನ ಪರದಲ್ಲಿದೆ. ನುಮ್ ವಿಕಲ್ಪವಾಗಿ ಬಂದರೆ ದದನ್ತ್ + ಇ. ನಕಾರಕ್ಕೆ ಅನುಸ್ವಾರ ಪರಸವರ್ಣ. ದದನ್ತಿ–ನುಮ್ ಬಾರದಿದ್ದರೆ ದದತಿ. ತೃತೀಯಾದಿಂದ ಪುಲ್ಲಿಂಗದಂತೇ ರೂಪ. ದದತಾ ದದದ್ಭ್ಯಾಮ್–ದದದ್ಭಿಃ ಇತ್ಯಾದಿ. ತಕಾರಕ್ಕೆ ಜಶ್ತ್ವ ಬಂದಿದೆ.

ಹೀಗೇ ತುದ (ವ್ಯಥನೇ) ಧಾತುವಿಗೆ ಶತೃ ಪ್ರತ್ಯಯ ಬಂದರೆ ತುದತ್ ಶಬ್ದವಾಗುತ್ತದೆ. ವ್ಯಥೆಗೊಳಿಸುವುದು ಎಂದರ್ಥ. ಸುವಿನಲ್ಲಿ ಹಿಂದಿನಂತೇ ರೂಪ. ತುದತ್, ಔಗೆ ಶೀ ಭಾವಬಂದಾಗ ತುದತ್ + ಈ ಎಂದಿರುವಾಗ ವಿಕಲ್ಪ ನುಮ್ ಹೇಳುತ್ತಾನೆ.

(ಶೀ ಪರವಾದಾಗ ವಿಕಲ್ಪನುಮ್ ಹೇಳುವ ಸೂತ್ರ)

**೩೬೭. ಆಚ್ಛೀನದ್ಯೋರ್ನುಮ್ ॥ ೭-೧-೮೦ ॥**

**ಅವರ್ಣಾಂತಾದಂಗಾತ್ಪರೋ ಯಃ ಶತುರವಯುವಸ್ತದಂತಸ್ಯ ನುಮ್ ವಾ ಶೀನದ್ಯೋಃ। ತುದಂತೀ-ತುದತೀ। ತಂದಂತಿ ॥**

ಆತ್. ಶೀನದ್ಯೋಃ, ನುಮ್ । ತ್ರಿಪದಸೂತ್ರ. "ಅಂಗಸ್ಯ" ಅಧಿಕಾರ ಪಂಚಮ್ಯಂತವಾಗಿ ವಿಪರಿಣಾಮಮಾಡಿಕೊಳ್ಳಬೇಕು. ಆತ್ ಅದಕ್ಕೆ ವಿಶೇಷಣ. ತದಂತಲಾಭ. ಹಿಂದಿನಂತೆ "ಶತುಃ" "ವಾ," "ನುಮ್" ಅನುವೃತ್ತವಾಗುತ್ತವೆ. ಶತುಃ ಎಂಬಲ್ಲಿ ಅವಯವಷಷ್ಠೀ. **ಸೂತ್ರಾರ್ಥ.** ಅಕಾರಾಂತವಾದ ಅಂಗದ ಪರದಲ್ಲಿರುವ ಶತೃಪ್ರತ್ಯಯದ ಅವಯುವವೇ ಅಂತವಾದ ನಪುಂಸಕ ಶಬ್ದಕ್ಕೆ ಶೀ, ನದೀ ಪರದಲ್ಲಿರುವಾಗ ವಿಕಲ್ಪವಾಗಿ ನುಮಾಗಮ ಬರುತ್ತದೆ. ತುದ್+ಶತೃ ಎಂದಿರುವಾಗ ಮಧ್ಯೆ ಶ ವಿಕರಣ ಬಂದಿದೆ, ಆಗ ತುದ್+ಅ+ಅತ್. "ಅತೋ ಗುಣೇ" ಸೂತ್ರದಿಂದ ಪರರೂಪ, ತುದತ್. ಇಲ್ಲಿ ಅಕಾರಾಂತವಾದ ಅಂಗ, ತುದ, ಇದರ ಪರದಲ್ಲಿ ಶತೃವಿನ ಅವಯುವ ತಕಾರ. ಇದೇ ಅಂತವಾದ ಶಬ್ದ ತುದತ್. ಇದಕ್ಕೆ ಶೀ ಪರದಲ್ಲಿದೆ. ಆಗ ವಿಕಲ್ಪನುಮ್ ಬಂದರೆ ತುದನ್ ತ್+ಈ, ನಕಾರಕ್ಕೆ ಅನುಸ್ವಾರ, ಪರಸವರ್ಣ. ತುದನ್ತೀ–ನುಮ್ ಬಾರದಿದ್ದರೆ ತುದತೀ ಎಂದಾಗುತ್ತದೆ. ಜಸ್ ಗೆ ಶಿ ಆದೇಶಬಂದಾಗ "ನಪುಂಸಕಸ್ಯ ಝಲಚಃ" ಸೂತ್ರದಿಂದ ನಿತ್ಯವಾಗಿ ನುಮ್. ಅಭ್ಯಸ್ತಸಂಜ್ಞೆ ಇಲ್ಲಿ ದ್ವಿತ್ವ ಬಾರದಿರುವುದರಿಂದ ಬರುವುದಿಲ್ಲ. ತುದನ್ತಿ. ತೃತೀಯಾದಿಂದ ಪುಲ್ಲಿಂಗದಂತೇ ರೂಪ. ತುದತಾ–ತುದದ್ಭ್ಯಾಮ್–ತುದದ್ಭಿಃ ಇತ್ಯಾದಿ.

ತಕಾರಾಂತ "ಪಚತ್" ಶಬ್ದ (ಬೇಯಿಸುವುದು)

ಪಚ್ ಧಾತು. ಶತೃಪ್ರತ್ಯಯ. ಪಚ್ ಅತ್ ಎಂದಿರುವಾಗ ಶಪ್ (ಅ) ವಿಕರಣ. ಪಚ+ಅತ್ "ಅತೋಗುಣೇ" ಪಚತ್. ಸು ಅಮ್‌ಗಳಿಗೆ ಲುಕ್. ಪಚತ್. ಔಗೆ ಶೀ ಆದೇಶಬಂದಾಗ ಪಚತ್+ಈ ಎಂದಿರುವಾಗ ನಿತ್ಯ ನುಮಾಗಮ ಹೇಳುತ್ತಾನೆ.

---

(ಶೀನದೀಪರವಾದಾಗ ನಿತ್ಯನುಮಾಗಮ ಹೇಳುವ ಸೂತ್ರ)

**೩೬೮. ಶಪ್‌ಶ್ಯನೋರ್ನಿತ್ಯಮ್ ॥ ೭-೧-೮೧ ॥**

**ಶಪ್‌ಶ್ಯನೋರಾತ್ಪರೋ ಯಃ ಶತುರವಯುವಸ್ತದಂತಸ್ಯ ನಿತ್ಯಂ ನುಮ್ ಶೀನದ್ಯೋಃ। ಪಚನ್ತೀ। ಪಚನ್ತಿ ॥ ದೀವ್ಯತ್। ದೀವ್ಯನ್ತೀ। ದಿವ್ಯನ್ತಿ ॥ ಧನುಃ। ಧನುಷೀ। ಸಾನ್ತೇತಿದೀರ್ಘಃ। ನುಮ್‌ವಿಸರ್ಜನೀಯೇತಿ ಷಃ। ಧನೂಂಷಿ। ಧನುಷಾ। ಧನುರ್ಭ್ಯಾಮ್। ಏವಂ ಚಕ್ಷುರ್ಹವಿರಾದಯಃ ॥ ಪಯಃ। ಪಯಸೀ। ಪಯಾಂಸಿ। ಪಯಸಾ। ಪಯೋಭ್ಯಾಮ್ ॥ ಸುಪುಮ್।**

**ಸುಪುಂಸೀ ಸುಪುಮಾಂಸಿ || ಅದಃ | ವಿಭಕ್ತಿಕಾರ್ಯವ್ | ಉತ್ವಮತ್ವೇ | ಅಮೂ | ಅಮೂನಿ | ಶೇಷಂ ಪುಂವತ್ ||**

**|| ಇತಿ ಹಲಂತ ನಪುಂಸಕಲಿಂಗ ಪ್ರಕರಣಮ್ ||**

|| ಇತಿ ಷಡ್ಲಿಂಗಪ್ರಕರಣಮ್ ||

ಶಪ್‌ಶ್ಯನೋಃ, ನಿತ್ಯಮ್ || ದ್ವಿಪದ ಸೂತ್ರ. "ಅತ್" "ನುಮ್" "ಶತುಃ" ಪೂರ್ವಸೂತ್ರದಿಂದ ಅನುವೃತ್ತಿ. **ಸೂತ್ರಾರ್ಥ.** ಶಪ್ ಶ್ಯನ್ ಸಂಬಂಧಿಯಾದ ಅಕಾರದ ಪರದಲ್ಲಿ ಯಾವ ಶತೃಪ್ರತ್ಯಯದ ಅವಯವವಿದೆಯೋ ಅದೇ ಅಂತವಾದ ನಪುಂಸಕಶಬ್ದಕ್ಕೆ ಶೀನದೀ ಪರವಾದಾಗ ನಿತ್ಯವಾಗಿ ನುಮ್ ಬರುತ್ತದೆ. ಪಚತ್+ಈ. ಇಲ್ಲಿ ಶಪ್ ಅಂದರೆ ಪಚ ಎಂಬಲ್ಲಿ ಚಕಾರದ ಮೇಲಿರುವ ಅಕಾರ. ಇದರ ಪರದಲ್ಲಿ ಶತೃವಿನ ಅವಯವವೆಂದರೆ ತಕಾರ. ಅದೇ ಅಂತವಾದ ಪಚತ್ ಶಬ್ದಕ್ಕೆ ಶೀಪರವಾದುದರಿಂದ ನಿತ್ಯವಾಗಿ ನುಮ್. ಪಚನ್‌ತ್+ಈ. ನಕಾರಕ್ಕೆ ಅನುಸ್ವಾರ ಪರಸವರ್ಣ. ಪಚನ್ತೀ|| ಜಸಿಗೆ ಶಿ ಆದೇಶ. ಹಿಂದಿನಂತೆ ನುಮ್ ಪಚನ್ತಿ || ದ್ವಿ || ಪಚತ್-ಪಚನ್ತೀ-ಪಚನ್ತಿ || ಪಚತಾ—ಪಚದ್ಭ್ಯಾಮ್—ಪಚದ್ಭಿಃ ಪುಲ್ಲಿಂಗದಂತೇ ರೂಪ.

ತಕಾರಾಂತ ದೀವ್ಯತ್ ಶಬ್ದ. (ಪ್ರಕಾಶಿಸುವುದು)

ದಿವ್‌ಧಾತು. ಶತೃಪ್ರತ್ಯಯ. ಶ್ಯನ್ ವಿಕರಣ. ಯ ಉಳಿಯುತ್ತದೆ, ಉಪಧಾದೀರ್ಘ. ದೀವ್ಯ+ಅತ್ ಪರರೂಪ. ದೀವ್ಯತ್. ಸುಪರವಾದಾಗ ಹಿಂದಿನಂತೆ ಲುಕ್. ದೀವ್ಯತ್. ಔಗೆ ಶೀ ಆದೇಶಬಂದಾಗ ದೀವ್ಯತ್+ಈ ಎಂದಿರುವಾಗ ಶ್ಯನ್ ಪ್ರತ್ಯಯದ ಅಕಾರದಪರದಲ್ಲಿ ಶತೃವಿನ ಅವಯವವೆಂದರೆ ತಕಾರ, ಅದೇ ಅಂತ್ಯವಾದ ಶಬ್ದ ದೀವ್ಯತ್, ಅದಕ್ಕೆ ಶೀ ಪರವಾದುದರಿಂದ ನಿತ್ಯವಾಗಿ ನುಮ್. ದೀವ್ಯನ್ತೀ|| ದೀವ್ಯತ್+ಇ. "ನಪುಂಸಕಸ್ಯಝಲಚಃ" ನುಮ್. ದೀವ್ಯನ್ತಿ|| ದ್ವಿತೀಯಾದಲ್ಲಿಯೂ ಇದೇ ರೂಪ. ತೃತೀಯಾದಿಂದ ಪುಲ್ಲಿಂಗದಂತೆ ರೂಪ. ದೀವ್ಯತಾ ಇತ್ಯಾದಿ.

---

ಷಕಾರಾಂತ "ಧನುಷ್" ಶಬ್ದ. (ಬಿಲ್ಲು)

ಧನುಷ್+ಸ್. "ಸ್ವಮೋರ್ನಪುಂಸಕಾತ್" ಸು, ಅಮಿಗೆ ಲುಕ್. ಧನ್ ಧಾತುವಿಗೆ ಉಸ್ ಪ್ರತ್ಯಯ ಬಂದು ಧನುಸ್ ಆಗಿದೆ. "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷತ್ವ. ಇದು ತ್ರಿಪಾದಿಯಲ್ಲಿರುವುದರಿಂದ "ಸಸಜುಷೋರುಃ" ಸೂತ್ರಕ್ಕೆ ಅಸಿದ್ಧವಾಗುವುದರಿಂದ ಆ ಸೂತ್ರ ದೃಷ್ಟಿಯಿಂದ ಇಲ್ಲಿ ಸಕಾರವೇ ಇರುವುದರಿಂದ ಪದಾಂತದಲ್ಲಿರುವ ಸಕಾರಕ್ಕೆ ಅದರಿಂದ ರುತ್ವ. ಧನುರ್. "ಖರವಸಾನಯೋಃ ವಿಸರ್ಜನೀಯಃ" ಸೂತ್ರದಿಂದ ವಿಸರ್ಗ. ಧನುಃ. ಧನುಷ್+ಔ, ಔಗೆ

ಶೀ ಆದೇಶ. ಧನುಷೀ. ಧನುಷ್ + ಜಸ್. ಶಿ ಆದೇಶ. "ನಪುಂಸಕಸ್ಯ ಝಲಚಃ" ಸೂತ್ರದಿಂದ ನುಮಾಗಮ. ಧನುಸ್ (ಸ್) ಷ್ + ಇ. ಷತ್ವ ಅಸಿದ್ಧವಾದುದರಿಂದ "ಸಾಂತಮಹತಃ ಸಂಯೋಗಸ್ಯ" ಸೂತ್ರದಿಂದ ನಕಾರೋಪಧೆಗೆ ದೀರ್ಘ. ಧನೂನ್ ಸ್ + ಇ. "ನಶ್ಚಾ ಪದಾಂತಸ್ಯಝಲಿ" ಸೂತ್ರದಿಂದ ನಕಾರಕ್ಕೆ ಅನುಸ್ವಾರ. ವ್ಯವಧಾನವಿರುವುದರಿಂದ "ನುಮ್ ವಿ"-(ಸೂ ೩೫೪) ಸೂತ್ರದಿಂದ ಷತ್ವ. ಧನೂಂಷಿ. ದ್ವಿತೀಯಾದಲ್ಲಿಯೂ ಹೀಗೇ ರೂಪ. ಧನುಃ-ಧನುಷೀ-ಧನೂಂಷಿ. ತೃ. ಧನುಷಾ-ಧನುಷ್ + ಭ್ಯಾಮ್. "ಸ್ವಾದಿಷ್ವಸರ್ವನಾಮಸ್ಥಾನೇ" ಸೂತ್ರದಿಂದ ಪದಸಂಜ್ಞೆಯಿರುವುದರಿಂದ ಷತ್ವ ಅಸಿದ್ಧವಾದುದರಿಂದ ಸಕಾರಕ್ಕೆ "ಸಸಜು ಷೋರುಃ" ಸೂತ್ರದಿಂದ ರುತ್ವ. ಧನುರ್ಭ್ಯಾಮ್-ಹಲಾದಿಯಲ್ಲೆಲ್ಲಾ ಹೀಗೇ ರುತ್ವ. ಧನುರ್ಭಿಃ || ಚ-ಧನುಷೇ-ಧನುರ್ಭ್ಯಾಮ್-ಧನುರ್ಭ್ಯಃ || ಪಂ. ಧನುಷಃ-ಧನು ರ್ಭ್ಯಾಮ್-ಧನುರ್ಭ್ಯಃ || ಷ-ಧನುಷಃ-ಧನುಷೋಃ-ಧನುಷಾಮ್ || ಸ-ಧನುಷಿ- ಧನುಷೋಃ-ಧನುಷ್ಷು, ಧನುಃಷು. ಇಲ್ಲಿ ಸಕಾರಕ್ಕೆ ರುತ್ವ ಬಂದು ಅದಕ್ಕೆ ವಿಕಲ್ಪ ವಾಗಿ ವಿಸರ್ಗ, ಷತ್ವ ಬಂದಾಗ "ನುಮ್, ವಿಸರ್ಜನೀಯ"-ಸೂತ್ರದಿಂದ ಸುವಿನ ಸಕಾರಕ್ಕೆ ಷತ್ವ. ಇದೇರೀತಿಯಾಗಿ ಚಕ್ಷುಷ್, ಹವಿಷ್ ಮುಂತಾದ ಶಬ್ದಗಳ ರೂಪವನ್ನು ತಿಳಿಯಬೇಕು. ಷಕಾರವು ಅಸಿದ್ಧವಾದುದರಿಂದ ಪದಾಂತದಲ್ಲಿ ರುತ್ವ- ಚಕ್ಷುಃ-ಚಕ್ಷುಷೀ-ಚಕ್ಷೂಂಷಿ. ಇತ್ಯಾದಿ.

---

ಸಕಾರಾಂತ ಪಯಸ್ ಶಬ್ದ. (ಹಾಲು ಅಥವಾ ನೀರು)

ಪಯಸ್ + ಸ್ ಎಂದಿರುವಾಗ ಸುವಿಗೆ ಹಿಂದಿನಂತೆ ಲುಕ್. ಪದಾಂತದಲ್ಲಿ ಸಕಾರವಿರುವುದರಿಂದ "ಸಸಜುಷೋರುಃ" ಸೂತ್ರದಿಂದ ಅದಕ್ಕೆ ರುತ್ವ. ಪಯರ್. "ಖರವಸಾನಯೋರ್ವಿಸರ್ಜನೀಯಃ". ಸೂತ್ರದಿಂದ ರೇಫಕ್ಕೆ ವಿಸರ್ಗ. ಪಯಃ। ಔಗೆ ಶೀಭಾವ. ಪಯಸೀ. ಜಸ್ ಶಸ್‌ಗಳಿಗೆ ಶಿ ಆದೇಶ. "ನಪುಂಸಕಸ್ಯಝಲಚಃ" ಸೂತ್ರದಿಂದ ನುಮ್. ಪಯನ್ ಸ್ + ಇ. "ಸಾಂತಮಹತಃ ಸಂಯೋಗಸ್ಯ" ನಕಾರದ ಉಪಧೆಗೆ ದೀರ್ಘ. ಪಯಾನ್ ಸ್ + ಇ. "ನಶ್ಚಾಪ"-ಸೂತ್ರದಿಂದ ನಕಾ ರಕ್ಕೆ ಅನುಸ್ವಾರ. ಪಯಾಂಸಿ || ದ್ವಿ-ಪಯಃ-ಪಯಸೀ-ಪಯಾಂಸಿ। ತೃ-ಪಯಸಾ- ಪಯಸ್ + ಭ್ಯಾಮ್. ಪದಸಂಜ್ಞೆಯಿರುವುದರಿಂದ ಸಕಾರಕ್ಕೆ ಹಿಂದಿನಂತೆ ರುತ್ವ. ಪಯರ್ + ಭ್ಯಾಮ್. "ಹಶಿಚ" ಸೂತ್ರದಿಂದ ಹಶ್ ಪರದಲ್ಲಿರುವುದರಿಂದ ರುವಿಗೆ ಉಕಾರಾದೇಶ. ಪಯ + ಉ + ಭ್ಯಾಮ್. ಗುಣ. ಪಯೋಭ್ಯಾಮ್-ಹಲಾದಿಯಲ್ಲಿ ಹೀಗೇ ರುತ್ವ, ಉತ್ವ, ಗುಣ. ಪಯೋಭಿಃ|| ಚ-ಪಯಸೇ-ಪಯೋಭ್ಯಾಮ್- ಪಯೋಭ್ಯಃ|| ಪಂ-ಪಯಸಃ-ಪಯೋಭ್ಯಾಮ್-ಪಯೋಭ್ಯಃ|| ಷ-ಪಯಸಃ- ಪಯಸೋಃ-ಪಯಸಾಮ್|| ಸ-ಪಯಸಿ-ಪಯಸೋಃ ಪಯಸ್ಸು. ಇಲ್ಲಿ ಇಣ್ ಇಲ್ಲದಿರುವುದರಿಂದ ಸಕಾರಕ್ಕೆ ಷತ್ವವಿಲ್ಲ.

ಕಚ್ಚಿತ್ | ಯಂತ್ರ | ನಹ | ಹಂತ | ಮಕಿಃ | ಮಾಕಿಮ್ | ನಕಿಃ | ನಕಿಮ್ | ಮಾಙ್ | ನಞ್ | ಯಾವತ್ | ತಾವತ್ | ತ್ವೈ | ದ್ವೈ | ರೈ | ಶ್ರೌಷಟ್ | ವೌಷಟ್ | ಸ್ವಾಹಾ | ಸ್ವಧಾ | ವಷಟ್ | ತುಮ್ | ತಥಾಹಿ | ಖಲು | ಕಿಲ | ಅಥೋ | ಅಥ | ಸುಷ್ಠು | ಸ್ಮ | ಆದಹ |

ಸ್ವರಾದಿನಿಪಾತಂ, ಅವ್ಯಯಮ್ || ದ್ವಿಪದ ಸೂತ್ರ. ಸ್ವರ್ ಆದಿಃ ಯೇಷಾಂತೇ ಸ್ವರಾದಯಃ | ಸ್ವರಾದಯಶ್ಚ ನಿಪಾತಾಶ್ಚ ತೇಷಾಂ ಸಮಾಹಾರಃ | ಸ್ವರಾದಿ ನಿಪಾತಮ್. ಸೂತ್ರಾರ್ಥ. ಸ್ವರ್ ಮುಂತಾದವುಗಳೂ ನಿಪಾತಗಳೂ ಅವ್ಯಯ ವೆಂಬ ಸಂಜ್ಞೆಯನ್ನು ಹೊಂದುತ್ತವೆ. "ಚಾದಯೋಽಸತ್ವೇ" ಸೂತ್ರದಿಂದ ಚ ಮುಂತಾದುವುಗಳಿಗೆ ನಿಪಾತ ಸಂಜ್ಞೆ ಹಿಂದೆ ಹೇಳಿರುತ್ತಾನೆ. ಈಗ ಸ್ವರ್ ಮುಂತಾದ ವುಗಳನ್ನೂ ಚ ಮುಂತಾದವುಗಳನ್ನೂ ವಿವರಿಸುತ್ತಾನೆ. ಇವುಗಳ ಅರ್ಥ. ಸ್ವರ್= ಸ್ವರ್ಗ. ಅಂತರ್=ಮಧ್ಯ, ಪ್ರಾತರ್=ಬೆಳಿಗ್ಗೆ, ಪುನಃ=ತಿರುಗಿ, ವಿಶೇಷ, ಸನುತರ್=ಅಂತರ್ಧಾನ (ಮಾಯವಾಗುವುದು), ಉಚ್ಚೈಃ=ದೊಡ್ಡದು ಗಟ್ಟಿಯಾಗಿ ನೀಚೈಃ=ಅಲ್ಪ, ಕಡಿಮೆ, ಶನೈಃ=ಮೆಲ್ಲನೆ, ಋಧಕ್=ಸತ್ಯ, ಋತೇ=ಬಿಟ್ಟು, ಯುಗ ಪತ್=ಏಕಕಾಲದಲ್ಲಿ, ಆರಾತ್=ದೂರ, ಸಮೀಪ, ಪೃಥಕ್=ಬೇರೆ, ಅನ್ಯ. ಹ್ಯಸ್=ನಿನ್ನೆ, ಶ್ವಸ್=ನಾಳೆ, ದಿವಾ=ಹಗಲು, ರಾತ್ರೌ=ರಾತ್ರಿ, ಸಾಯಂ=ಸಾಯಂ ಕಾಲ, ಚಿರಂ=ಬಹುಕಾಲ, ಮನಾಕ್, ಈಷತ್=ಸ್ವಲ್ಪ, ಜೋಷಂ=ಸುಖ, ಮೌನ, ತೂಷ್ಣೀಂ=ಮೌನ, ಬಹಿಸ್, ಅವಸ್=ಹೊರಗೆ, ಸಮಯಾ=ಹತ್ತಿರ, ಸ್ವಯಂ= ತಾನಾಗಿ. ವೃಥಾ=ವ್ಯರ್ಥ, ನಕ್ತಂ=ರಾತ್ರಿ, ನಞ್=ಇಲ್ಲ, ನಿಷೇಧ. ಹೇತೌ=ನಿಮಿತ್ತ, ಕಾರಣ, ಇದ್ಧಾ=ಪ್ರಕಾಶವಾಗಿರುವದು, ಅದ್ಧಾ=ಸ್ಪಷ್ಟ, ನಿಶ್ಚಯ, ಸಾಮಿ=ಅರ್ಧ, ಜಿಗುಪ್ಸಿತ, ವತ್=ಸಾದೃಶ್ಯಾರ್ಥಕಪ್ರತ್ಯಯ, ಇದು ಅಂತವಾದುದು ಅವ್ಯಯ. ಹೇಗೆಂದರೆ ಬ್ರಾಹ್ಮಣವತ್=ಬ್ರಾಹ್ಮಣನಂತೆ, ಕ್ಷತ್ರಿಯವತ್=ಕ್ಷತ್ರಿಯನಂತೆ. ಸನಾ, ಸನತ್, ಸನಾತ್=ನಿತ್ಯ, ಉಪಧಾ=ಭೇದ, ತಿರಸ್=ಅಂತರ್ಧಾನ, ಅಡ್ಡ ತಿರಸ್ಕಾರ, ಅಂತರಾ=ಮಧ್ಯ, ಬಿಟ್ಟು, ಅಂತರೇಣ=ಬಿಟ್ಟು, ಜ್ಯೋಕ್=ಕಾಲಾಧಿಕ್ಯ, ಪ್ರಶ್ನೆ, ಶೀಘ್ರ, ಈಗ. ಕಮ್=ನೀರು, ತಲೆ, ನಿಂದಾ, ಸುಖ. ಶಮ್=ಸುಖ. ಸಹಸಾ=ಆಕಸ್ಮಿಕ, ಅವಿಮರ್ಶ. ವಿನಾ=ವರ್ಜ (ಬಿಟ್ಟು), ನಾನಾ=ಅನೇಕ, ವಿನಾ. ಸ್ವಸ್ತಿ=ಮಂಗಳ, ಸ್ವಧಾ=ಪಿತೃಗಳ ದಾನ ಸೂಚಕ, ಅಲಂ=ಅಲಂಕಾರ, ಸಾಕಷ್ಟು, ಶಕ್ತಿ, ನಿಷೇಧ, ತಡೆ. ವಷಟ್, ಶ್ರೌಷಟ್, ವೌಷಟ್=ಹವಿರ್ದಾನ ಸೂಚಕ. ಅನ್ಯತ್=ಬೇರೆ. ಅಸ್ತಿ=ಇರುವಿಕೆ. ಉಪಾಂಶು=ನಿದಾನೋಚ್ಚಾರಣೆ, ರಹಸ್ಯ. ಕ್ಷಮಾ=ಸಹನೆ. ವಿಹಾಯಸಾ=ಆಕಾಶ. ದೋಷಾ=ರಾತ್ರಿ. ಮೃಷಾ, ಮಿಥ್ಯಾ= ಸುಳ್ಳು. ಮುಧಾ=ವ್ಯರ್ಥ. ಪುರಾ=ಸತತ, ಬಹುಕಾಲದ ಹಿಂದೆ, ಮುಂದೆ ಆಗು ವುದು, ಆಸನ್ನವಾದುದು. ಮಿಥೋ, ಮಿಥಸ್=ಗುಟ್ಟು, ಜೊತೆಗೆ. ಪ್ರಾಯಸ್=

ಸಾಮಾನ್ಯ, ಪುಹುಸ್=ಪುನಃಪುನಃ. ಪ್ರಾಹುಕಮ್=ಸಮಾನಕಾಲ, ಮೇಲೆ.
ಪ್ರಾಹಿಕಾ ಎಂದರೂ ಇದೇ ಅರ್ಥ. ಅದು ಪಾಠಾಂತರ, ಆರ್ಯಹಲಮ್=ಬಲ
ತ್ಕಾರ. ಇದು ಭಿನ್ನವಾಗಿಯೂ ಇದೆ. ಆರ್ಯ=ಪ್ರತಿಬಂಧಕ. ಅಲಂ=ಪ್ರತಿಷೇಧ,
ವಿವಾದ. ಅಭೀಕ್ಷ್ಣಮ್=ಪೌನಃಪುನ್ಯ. ಸಾಕಮ್, ಸಾರ್ಧಮ್=ಒಟ್ಟಿಗೆ.
ನಮಸ್=ಬಗ್ಗಿರುವಿಕೆ. ಹಿರುಕ್=ವರ್ಜನ (ಬಿಟ್ಟಿರುವುದು) ಧಿಕ್=ನಿಂದಾ, ಗದರಿ
ಸುವಿಕೆ. ಅಥ=ಆಮೇಲೆ ಅರ್ಮ್=ಶೀಘ್ರ, ಅಲ್ಪ. ಆಮ್=ಅಂಗೀಕಾರ. ಪ್ರತಾಮ್
=ಬಾಡುವಿಕೆ. ಪ್ರಶಾನ್=ಸಮಾನ. ಪ್ರತಾನ್=ವಿಸ್ತಾರ. ಮಾ ಮಾಜ್=ನಿಷೇಧ,
ಆಶಂಕೆ. ಆಕೃತಿಗಣೋಯಮ್=ಈ ಸ್ವರಾದಿಗಳು ಕೆಲವು ಮಾತ್ರ ಇಲ್ಲಿ ಹೇಳಿದೆ.
ಆಕೃತಿಯಿಂದ ಇದರಂತೆ ಇರುವ ಇತರ ಶಬ್ದಗಳೂ ಅವ್ಯಯಎಂದು ಊಹಿಸಿಕೊಳ್ಳ
ಬೇಕು. ಅವು ಹೇಗೆಂದರೆ-ಕಾಮಂ ಇದು ಸ್ವಚ್ಛಂದ ಎಂಬರ್ಥ ಕೊಡುತ್ತದೆ. ಪರಂ
=ಆದರೆ. ಸಾಕ್ಷಾತ್=ಪ್ರತ್ಯಕ್ಷ. ಸಾಚಿ=ಅಡ್ಡಲಾಗಿ. ಸತ್ಯಂ=ಅರ್ಧ ಅಂಗೀಕಾರ.
ಮಂಕ್ಷು, ಆಶು=ಬೇಗ. ಸಂವತ್=ವರ್ಷ. ಅವಶ್ಯಂ=ನಿಶ್ಚಯ. ಉಷಾ=ರಾತ್ರಿ.
ಓಂ=ಅಂಗೀಕಾರ. ಬ್ರಹ್ಮ. ಭೂಃ=ಭೂಮಿ. ಭುವಃ=ಅಂತರಿಕ್ಷ. ಝಟಿತಿ, ಝಕ್,
ತರಸಾ=ಬೇಗ. ಸುಷ್ಠು=ಪ್ರಶಂಸೆ. ದುಷ್ಠು=ನಿಸ್ಕೃಷ್ಟ. ಸು=ಪೂಜಾ. ಕು=ಕುತ್ಸಿತ,
ಸ್ವಲ್ಪ. ಅಂಜಸಾ=ತತ್ವ, ಬೇಗ. ಮಿಥು=ಎರಡು, ಅಸ್ತಂ=ವಿನಾಶ. ಸ್ಥಾನೇ=ಯುಕ್ತ
ವರಂ=ಸ್ವಲ್ಪ, ಉತ್ಕರ್ಷ. ಸುದಿ=ಶುಕ್ಲಪಕ್ಷ. ವದಿ=ಕೃಷ್ಣಪಕ್ಷ.

ಇನ್ನು ಚಾದಿಗಳನ್ನು ಹೇಳುತ್ತಾನೆ. ಚ=ಸಮುಚ್ಚಯ, ಅನ್ವಾಚಯ, ಇತ
ರೇತರಯೋಗ, ಸಮಾಹಾರ. ವಾ=ವಿಕಲ್ಪ, ಉಪಮಾ, ಸಾದೃಶ್ಯ, ಸಮುಚ್ಚಯ.
ಹ=ಪ್ರಸಿದ್ಧಿ. ಏವ=ನಿಶ್ಚಯ. ಅನಿಶ್ಚಯ. ಏವಮ್=ಈರೀತಿಯಾಗಿ. ನೂನಮ್=
ತರ್ಕ, ನಿಶ್ಚಯ. ಶಶ್ವತ್=ಪುನಃಪುನಃ, ನಿತ್ಯ. ಒಟ್ಟಿಗೆ ಯುಗಪತ್=ಏಕಕಾಲ
ದಲ್ಲಿ ಭೂಯಸ್=ಪುನಃ, ಅಧಿಕ್ಯ. ಕೂಪತ್=ಪ್ರಶ್ನೆ, ಪ್ರಶಂಸಾ. ಕುವಿತ್=ಅಧಿಕ,
ಪ್ರಶಂಸಾ. ನೇತ್=ಶಂಕೆ, ನಿಷೇಧ, ವಿಚಾರ, ಸಮುಚ್ಚಯ. ಚೇತ್=ರೆ, (ಆದರೆ)
ಚಣ್=ಒಂದುವೇಳೆ (ರೆ) ಕಚ್ಚಿತ್=ಇಷ್ಟಪ್ರಶ್ನೆ. ಯತ್ರ=ಅನಿಶ್ಚಿತ ಪ್ರದೇಶ,
ಅಮರ್ಷ, ನಿಂದಾ, ಆಶ್ಚರ್ಯ. ನಹ=ಪ್ರತ್ಯಾರಂಭ. ಹಂತ=ಹರ್ಷ, ವಿಷಾದ,
ಅನುಕಂಪಾ, ವಾಕ್ಯಾರಂಭ. ಮಾಕಿಃ, ಮಾಕಿಂ, ನಕಿಃ, ನಕಿಮ್=ಬಿಟ್ಟು, ಮಾಜ್
ನಞ್=ಸ್ವರಾದ್ಯುಕ್ತಿ. ಯಾವತ್, ತಾವತ್=ಪೂರ್ತಿ, ಅವಧಿ, ಪರಿಮಾಣ. ನಿಶ್ಚಯ.
ತ್ವೈ=ವಿಶೇಷ, ವಿತರ್ಕ, ದ್ವೈ=ವಿತರ್ಕ. ನ್ವೈ=ವಿತರ್ಕ. ಇದು ಪಾಠಾಂತರ. ರೈ=
ದಾನ, ಅನಾದರ. ಶ್ರೌಷಟ್, ವೌಷಟ್, ಸ್ವಾಹಾ=ಸ್ವರಾದ್ಯುಕ್ತಿಯಲ್ಲಿ ಬರುತ್ತದೆ.
ಸ್ವಾಹಾ=ದೇವತಾ ದಾನದಲ್ಲಿ ಹೇಳುವುದು. ಸ್ವಧಾ=ಪಿತೃಗಳ ದಾನದಲ್ಲಿ ಹೇಳುವುದು
ವಷಟ್=ಮಂತ್ರದಲ್ಲಿ ಹೇಳುವುದು. ತುಮ್=ತುಚ್ಛೀಕರಿಸಿ ಹೇಳುವಾಗ ಉಪಯೋ
ಗಿಸುವುದು. ತಥಾಹಿ=ನಿದರ್ಶನ ಹೇಳುವಾಗ ಬರುವುದು. ಖಲು=ನಿಷೇಧ, ವಾಕ್ಯಾ
ಲಂಕಾರ, ನಿಶ್ಚಯ. ಕಿಲ=ವಾರ್ತೆದಲ್ಲಿ, ಸುಳ್ಳು. ಅಥೋ ಅಥ=ಮಂಗಲ, ಅನಂ

ತರ, ಆರಂಭ, ಪ್ರಶ್ನೆ, ಪೂರ್ತಿ, ಅಧಿಕಾರ, ಪ್ರತಿಜ್ಞಾ, ಸಮುಚ್ಚಯ. ಸುಷ್ಠು=ಪ್ರಶಂಸಾ. ಸ್ಮ=ಕಳೆದದ್ದು, ಪಾದ ಪೂರಣದಲ್ಲಿ ಬರುವುದು. ಅದಹ=ಉಪಕ್ರಮ, ಹಿಂಸಾ, ನಿಂದಿತ.

**ಉಪಸರ್ಗ ವಿಭಕ್ತಿ ಸ್ವರ ಪ್ರತಿರೂಪಕಾಶ್ಚ॥ ಅವದತ್ತಂ। ಅಹಂಯುಃ ಅಸ್ತಿಕ್ಷೀರಾ॥**

ಕೆಲವು ಅವ್ಯಯಗಳು ಉಪಸರ್ಗದಂತೆಯೂ ವಿಭಕ್ತ್ಯಂತದಂತೆಯೂ ಸ್ವರಗಳಂತೆಯೂ ಇರುತ್ತವೆ. ಉಪಸರ್ಗದಂತಿರುವವುಗಳು. ಅವದತ್ತಂ-ವಿದತ್ತಂ-ಪ್ರದತ್ತಂ, ಸುದತ್ತಂ ಇಲ್ಲಿ ಅವ, ವಿ, ಪ್ರ, ಸು, ಅವ್ಯಯಗಳು. ಇವು ಉಪಸರ್ಗಗಳಂತೆ ಇವೆ. ಉಪಸರ್ಗಗಳಲ್ಲ. ಹಾಗೆಯೇ ವಿಭಕ್ತ್ಯಂತದಂತೆ ಕೆಲವು ಇವೆ. ಅಹಂಯುಃ=ಅಹಂಕಾರಿ. ಅಸ್ತಿಕ್ಷೀರಾ=ಹಾಲುಳ್ಳದ್ದು. ಇವು ವಿಭಕ್ತ್ಯಂತದಂತೆ ತೋರುತ್ತವೆ. ಇನ್ನು ಸ್ವರದಂತಿರುವವುಗಳು.

**ಅ। ಆ। ಇ। ಈ। ಉ। ಊ। ಏ। ಐ। ಓ। ಔ।**

**ಪಶು। ಶುಕಮ್। ಯಥಾಕಥಾ ಚ। ಪಾಟ್। ಪ್ಯಾಟ್। ಅಂಗ। ಹೈ। ಹೇ। ಭೋಃ। ಅಯೇ। ದ್ಯ। ವಿಷು। ಏಕಪದೇ। ಯುತ್। ಆತಃ। ಚಾದಿರಪ್ಯಾಕೃತಿಗಣಃ॥ ತಸಿಲಾದಯಃ ಪ್ರಾಕ್ ಪಾಶಪಃ। ಶಸ್‌ಪ್ರಭೃತಯಃ ಪ್ರಾಕ್ ಸಮಾಸಾಂತೇಭ್ಯಃ॥ ಅಮ್। ಆಮ್। ಕೃತ್ವೋಽರ್ಥಾಃ। ತಸಿವತೀ। ನಾನಾಞೌ। ಏತದಂತಮಪ್ಯವ್ಯಯಮ್॥**

ಅ=ಕರೆಯುವಾಗ, ನಿಷೇಧದಲ್ಲಿ, ತಿರಸ್ಕರಿಸುವುದರಲ್ಲಿ ಬರುತ್ತದೆ. ಆ—ವಾಕ್ಯ ಸ್ಮರಣಾರ್ಥಗಳಲ್ಲಿ. ಇ=ಕರೆಯುವಾಗ, ಜುಗುಪ್ಸೆಯಲ್ಲಿ, ಆಶ್ಚರ್ಯದಲ್ಲಿ ಬರುತ್ತದೆ. ಈ ಯಿಂದ ಔವರೆಗೆ ಕರೆಯುವಾಗ ಉಪಯೋಗಿಸಲ್ಪಡುತ್ತವೆ. ಪಶು=ಚನ್ನಾಗಿ. ಶುಕಂ=ಬೇಗನೆ. ಯಥಾಕಥಾಚ=ಅನಾದರ ತಿಳಿಸುವುದು. ಪಾಟನಿಂದ ಅಯೇವರೆಗೆ ಸಂಬೋಧನೆಯಲ್ಲಿ ಉಪಯೋಗಿಸಲ್ಪಡುವವುಗಳು. ದ್ಯ=ಹಿಂಸಾ, ಪ್ರಾತಿಲೋಮ್ಯ-ಪಾದಪೂರಣೆಗಳಲ್ಲಿ ಬರುತ್ತದೆ. ವಿಷು=ನಾನಾ. ಏಕಪದೇ=ಅಕಸ್ಮಾತಾಗಿ. ಯುತ್=ಕುತ್ಸಿತ. ಆತಃ=ಇನ್ನೂ ಹೀಗೆ ಚಾದಿಗಳು ಉಕ್ತವಾಗಿವೆ. ಇದೂ ಆಕೃತಿಗಣ: ಇದರಂತೆ ದೃಷ್ಟವಾದವುಗಳನ್ನು ಹೇಳದಿದ್ದರೂ ಸೇರಿಸಿಕೊಳ್ಳಬೇಕು. ಹೇಗೆಂದರೆ ಯತ್, ತತ್=ಹೇತುವಿನಲ್ಲಿ ಬರುತ್ತವೆ. ಆಹೋಸ್ವಿತ್=ವಿಕಲ್ಪ, ಸೀಮ=ಎಲ್ಲಾ ರೀತಿಯಿಂದಲೂ, ವಾ=ಸಾದೃಶ್ಯ. ಪಾದಪೂರಕ. ದಿಷ್ಟ್ಯಾ=ಸಂತೋಷದಲ್ಲಿ. ಚಾಟು=ಪ್ರಿಯವಾಕ್ಯ ಹುಂ=ಗದರಿಸುವಿಕೆ. ಇವ=ಸಾದೃಶ್ಯ. ಅದ್ಯತ್ವೆ=ಈಗ.

ಇನ್ನು ತಸಿಲ್ ಪ್ರತ್ಯಯದಿಂದ ಪಾಶಪ್ ಪ್ರತ್ಯಯದವರೆಗೆ ಎಷ್ಟು ಪ್ರತ್ಯಯ ಹೇಳಿರುವವೋ ಆ ಪ್ರತ್ಯಯಾಂತವಾದವುಗಳೆಲ್ಲಾ ಅವ್ಯಯಗಳು. ವೃಕ್ಷತಃ ಇದು

ತಸಿಲಂತ. ವೃಕ್ಷದ ದೆಸೆಯಿಂದ ಎಂದರ್ಥ. ಹೀಗೇ ಶಸ್ ಪ್ರತ್ಯಯದಿಂದ ಆರಂಭಿಸಿ ಸಮಾಸಾಂತಪ್ರತ್ಯಯದವರೆಗೆ ಹೇಳಿರುವ ಪ್ರತ್ಯಯಾಂತ ಶಬ್ದಗಳು ಅವ್ಯಯಗಳು. ಇವು ತದ್ಧಿತದಲ್ಲಿ ಹೇಳಿವೆ. ಕಣಶಃ ಇದು ಶಸಂತ, ಕಣಕಣವಾಗಿ ಎಂದರ್ಥ ಕೃತ್ವ ಸುಚ್ ಪ್ರತ್ಯಯಾಂತವಾದುದೂ ಅವ್ಯಯ. ತದರ್ಥಕ ಪ್ರತ್ಯಯಾಂತವಾದುದೂ ಅವ್ಯಯ. ಕೃತ್ವಸುಚಿಗೆ ಬಾರಿ, ಸಲ ಎಂದರ್ಥ. ಪಂಚಕೃತ್ವಃ=ಐದು ಬಾರಿ (ಸಲ) ದ್ವಿಃ, ತ್ರಿಃ=ಎರಡುಸಲ, ಮೂರುಸಲ. ತಸ್ ವತ್ ಪ್ರತ್ಯಯಾಂತವಾದವುಗಳು ಅವ್ಯಯ. ವಿನಾ, ನಾನಾ ಉದಾಹರಣೆ. ಹೊರತಾಗಿ, ಅನೇಕರೀತಿ ಅರ್ಥ. ಇನ್ನೂ ಕೆಲವು ಪ್ರತ್ಯಯಾಂತವಾದವುಗಳನ್ನು ಸೂತ್ರದಿಂದ ನಿರ್ದೇಶಿಸುತ್ತಾನೆ.

(ಕೃದಂತಕ್ಕೆ ಅವ್ಯಯ ಸಂಜ್ಞೆ ಹೇಳುವ ಸೂತ್ರ)

## ೩೭೦. ಕೃನ್ಮೇಜಂತಃ ॥ ೧-೧-೩೯ ॥

**ಕೃದ್ಯೋ ಮಾಂತಃ ಏಜಂತಶ್ಚ ತದಂತಮವ್ಯಯಂ ಸ್ಯಾತ್ । ಸ್ಮಾರಂ ಸ್ಮಾರಂ । ಜೀವಸೇ । ಪಿಬಧ್ಯೈ ।**

ಕೃತ್, ಮೇಜಂತಃ॥ ಮ್ ಚ, ಏಚ್ ಚ ಮೇಚೌ । ತೌ ಅಂತೇ ಯಸ್ಯ ಸಃ। ಮೇಜಂತಃ. ಮಕಾರ, ಏಚ್ ಅಂತದಲ್ಲಿರುವವುಗಳು. **ಸೂತ್ರಾರ್ಥ.** ಮಕಾರಾಂತವಾದ, ಏಜಂತವಾದ ಕೃತ್ ಪ್ರತ್ಯಯವೇ ಕೊನೆಯಲ್ಲಿರುವ ಶಬ್ದವು ಅವ್ಯಯ ಸಂಜ್ಞೆಯನ್ನು ಹೊಂದುತ್ತದೆ. ಸ್ಮಾರಂ ಸ್ಮಾರಮ್. ಸ್ಮೃಧಾತುವಿಗೆ ಣಮುಲ್ ಪ್ರತ್ಯಯ ಬಂದಿದೆ. ಣಮುಲಿನಲ್ಲಿ ಅಮ್ ಉಳಿಯುತ್ತದೆ. ಆಗ ಮಾಂತವಾದ ಕೃದಂತ ಶಬ್ದ ಸ್ಮಾರಂ ಎಂಬುದು. ಣಮುಲಂತಕ್ಕೆ "ನಿತ್ಯವೀಪ್ಸಯೋಃ" ಎಂಬುದರಿಂದ ದ್ವಿತ್ವ ಬರುತ್ತದೆ. ಜೀವಸೇ. ಏಜಂತ ಕೃದಂತವಾಗಿದೆ. ಜೀವಧಾತುವಿಗೆ ಅಸೇ ಪ್ರತ್ಯಯ ಬಂದಿದೆ. ಪಿಬಧ್ಯೈ. ಇದೂ ಏಜಂತ ಕೃದಂತ ಅವ್ಯಯ. ಪಾಧಾತುವಿಗೆ ಶಧ್ಯೈ ಪ್ರತ್ಯಯ. ಶಕಾರ ಇತ್. ಪಾಧಾತುವಿಗೆ ಪಿಬಾದೇಶ. ಪಿಬಧ್ಯೈ.

(ಕೃದಂತಗಳಿಗೆ ಅವ್ಯಯ ಹೇಳುವ ಸೂತ್ರ)

## ೩೭೧. ಕ್ತ್ವಾತೋಸುನ್‌ಕಸುನಃ ॥ ೧-೧-೪೦ ॥

**ಏತದಂತಮವ್ಯಯಮ್ । ಕೃತ್ವಾ । ಉದೇತೋಃ । ವಿಸೃಪಃ**

ಏಕಪದಸೂತ್ರ. ಇಲ್ಲಿ ಮೂರು ಪ್ರತ್ಯಯಗಳು ಹೇಳಿವೆ. **ಸೂತ್ರಾರ್ಥ.** ಕ್ತ್ವಾ, ತೋಸುನ್, ಕಸುನ್ ಪ್ರತ್ಯಯಾಂತಗಳು ಅವ್ಯಯ ಸಂಜ್ಞೆಯನ್ನು ಹೊಂದುತ್ತವೆ. ಕ್ತ್ವಾ=ಕೃತ್ವಾ. ಕೃಞ್ ಧಾತುವಿಗೆ ಕ್ತ್ವಾಪ್ರತ್ಯಯ. ಕಕಾರ ಇತ್. (ಮಾಡಿ ಎಂದರ್ಥ). ತೋಸುನ್=ಉದೇತೋಃ. ಉತ್ ಉಪಸರ್ಗಸಹಿತವಾದ ಇಣ್ ಧಾತುವಿಗೆ "ಭಾವಲಕ್ಷಣೇ" ಸೂತ್ರದಿಂದ ತೋಸುನ್ ಪ್ರತ್ಯಯ. ಕಸುನ್=ವಿಸೃಪಃ

ಸ್ಪೃಹಸ್ಪೃಗತಾ ಧಾತು. ಕಸುನ್‌ಪ್ರತ್ಯಯ. "ಲಶಕ್ವತದ್ಧಿತೇ" ಕಕಾರ ಇತ್. "ಹಲಂತ್ಯಮ್" ನಕಾರ ಇತ್. ಅಸ್ ಉಳಿಯುತ್ತದೆ. ಉಕಾರ ಉಚ್ಚಾರಣಾರ್ಥ. ಸೃಪ್+ಅಸ್. ಸೃಪಸ್. ಸಕಾರಕ್ಕೆ ರುತ್ವವಿಸರ್ಗ. ವಿಸೃಪಃ. ಇದು ಅವ್ಯಯವಾಗುತ್ತದೆ.

(ಸಮಾಸದಲ್ಲಿ ಅವ್ಯಯ ಸಂಜ್ಞೆ ಹೇಳುವ ಸೂತ್ರ)

## ೩೭೨. ಅವ್ಯಯೀಭಾವಶ್ಚ ॥ ೧-೧-೪೧ ॥

**ಅಧಿಹರಿ.**

ಅವ್ಯಯೀಭಾವಃ, ಚ. ॥ ದ್ವಿಪದಸೂತ್ರ. "ಅವ್ಯಯಂ" ಅನುವೃತ್ತಿ. ಸೂತ್ರಾರ್ಥ. ಅವ್ಯಯೀಭಾವಸಮಾಸವೂ ಅವ್ಯಯಸಂಜ್ಞೆಯನ್ನು ಹೊಂದುತ್ತದೆ. ಅಧಿಹರಿ ಹರೌ=ಅಧಿಹರಿ. ವಿಭಕ್ತ್ಯರ್ಥದಲ್ಲಿ ಅವ್ಯಯೀಭಾವಸಮಾಸ. ಇದು ಅವ್ಯಯವಾಗುತ್ತದೆ. ಹೀಗೆ ಅವ್ಯಯಗಳನ್ನು ಹೇಳಿ ಅವುಗಳಮೇಲೆ ಬರುವ ಪ್ರತ್ಯಯಗಳಿಗೆ ಲೋಪಹೇಳುತ್ತಾನೆ.

(ಅವ್ಯಯದ ಮೇಲಿರುವ ಆಪ್ ಸುಪಿಗೆ ಲೋಪಹೇಳುವಸೂತ್ರ)

## ೩೭೩. ಅವ್ಯಯಾದಾಪ್‌ಸುಪಃ ॥ ೨-೪-೮೨ ॥

**ಅವ್ಯಯಾದ್ವಿಹಿತಸ್ಯಾಪಃ ಸುಪಶ್ಚ ಲುಕ್ ॥ ತತ್ರ ಶಾಲಾಯಾಮ್ ॥ ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಷು ॥ ವಚನೇಷು ಚ ಸರ್ವೇಷು ಯನ್ನ ವ್ಯೇತಿ ತದವ್ಯಯಮ್ ॥೧॥ ವಷ್ಟಿ ಭಾಗುರಿರಲ್ಲೋಪಮವಾಪ್ಯೋರುಪಸರ್ಗಯೋಃ ॥ ಆಪಂ ಚೈವ ಹಲಂತಾನಾಂ ಯಥಾವಾಚಾ ನಿಶಾ ದಿಶಾ॥೨॥ ವಗಾಹಃ। ಅವಗಾಹಃ। ಪಿಧಾನಂ। ಅಪಿಧಾನಂ ॥**

**ಇತಿ ಅವ್ಯಯಪ್ರಕರಣಮ್**

ಅವ್ಯಯಾತ್, ಆಪ್‌ಸುಪಃ ॥ ದ್ವಿಪದಸೂತ್ರ. ಆಪ್ ಚ, ಸುಪ್ ಚ ಆಪ್ ಸುಪ್. ಸಮಾಹಾರದ್ವಂದ್ವ. ತಸ್ಯ ಆಪ್‌ಸುಪಃ "ಣ್ಯಕ್ಷತ್ರಿಯಾರ್ಷ" ಸೂತ್ರದಿಂದ "ಲುಕ್" ಅನುವೃತ್ತಿ. **ಸೂತ್ರಾರ್ಥ.** ಅವ್ಯಯದಮೇಲೆ ವಿಹಿತವಾದ ಆಪ್‌ಪ್ರತ್ಯಯಕ್ಕೂ, ಸುಪ್‌ಪ್ರತ್ಯಯಕ್ಕೂ ಲುಕ್ ಬರುತ್ತದೆ. ತತ್ರ ಶಾಲಾಯಾಮ್. ತತ್ರ ಅವ್ಯಯ. ಇಲ್ಲಿ ಶಾಲಾಕ್ಕೆ ವಿಶೇಷಣವಾದುದರಿಂದ ಸ್ತ್ರೀಲಿಂಗದಲ್ಲಿ ಆಪ್ ಬರುತ್ತದೆ. ಅದಕ್ಕೆ ಈ ಸೂತ್ರದಿಂದ ಲುಕ್. ತತ್ರ ಎಂದೇ ಉಳಿಯುತ್ತದೆ. ಅಥ ಇಲ್ಲಿ ಸುಪಿಗೆ ಲುಕ್ ಬಂದಿದೆ. ಅವ್ಯಯಗಳಿಗೆ ಲಿಂಗವಿಲ್ಲದುದರಿಂದ ಆಪ್ ಇಲ್ಲಿ ಹೇಳಬೇಕಾಗಿಲ್ಲವೆಂದು ವಾರ್ತಿಕಕಾರರಮತ. "ಸದೃಶಂತ್ರಿಷು" ಶ್ಲೋಕದಿಂದ ಅವ್ಯಯ ಲಕ್ಷಣ

ಹೇಳುತ್ತಾನೆ. ಯತ್=ಯಾವ ಶಬ್ದರೂಪವು ತ್ರಿಷುಲಿಂಗೇಷು=ಮೂರು ಲಿಂಗಗಳಲ್ಲಿಯೂ, ಸರ್ವಾಸು ವಿಭಕ್ತಿಷು=ಎಲ್ಲಾ ವಿಭಕ್ತಿಗಳಲ್ಲಿಯೂ, ಸರ್ವೇಷು ವಚನೇಷು=ಎಲ್ಲಾ ವಚನಗಳಲ್ಲಿಯೂ ಸದೃಶಂ=ಸಮಾನರೂಪವುಳ್ಳದ್ದಾಗಿ, ನವ್ಯೇತಿ=ವಿಕಾರ ಹೊಂದುವುದಿಲ್ಲವೋ, ತತ್ ಅವ್ಯಯಮ್=ಅದು ಅವ್ಯಯ. ಯಾವ ವಿಕಾರವಿಲ್ಲದೇ ಒಂದೇ ರೀತಿಯಾಗಿರುವ ಶಬ್ದ ರೂಪವೇ ಅವ್ಯಯ. ಪ್ರಸಂಗಸಂಗತಿಯಿರುವುದರಿಂದ ಕೆಲವು ವಿಷಯಗಳನ್ನು ಹೇಳುತ್ತಾನೆ.

ಭಾಗುರಿಃ=ಭಾಗುರಿಯೆಂಬ ಆಚಾರ್ಯನು. ಅವಾಪ್ಯೋರುಪಸರ್ಗಯೋಃ=ಅವ, ಅಪಿ ಈ ಎರಡು ಉಪಸರ್ಗಗಳ ಅಲ್ಲೋಪಂ=ಆದಿಯ ಅಕಾರಕ್ಕೆ ಲೋಪವನ್ನು ವಷ್ಟಿ=ಬಯಸುತ್ತಾನೆ. ಭಾಗುರಿ ಹೇಳುವುದರಿಂದ ಪಾಣಿನಿರೀತ್ಯಾ ಲೋಪವಿಲ್ಲ. ಆಗ ವಿಕಲ್ಪವೆಂದಾಗುತ್ತದೆ. ಹಲಂತಾನಾಂ=ಹಲಂತ ಶಬ್ದಗಳಿಗೆ ಆಪಂಚ=ಆಪ್ ಪ್ರತ್ಯಯವನ್ನೂ ಬಯಸುತ್ತಾರೆ. ಪಾಣಿನಿಯ ಮತದಲ್ಲಿ ಅದಂತ ಶಬ್ದಗಳಿಗೆ ಮಾತ್ರ ಸ್ತ್ರೀತ್ವ ತೋರುವಾಗ ಟಾಪ್, ಹಲಂತಕ್ಕೆ ಟಾಪ್ ಇಲ್ಲ. ಯಥಾ=ಹೇಗೆಂದರೆ ವಾಚಾ, ನಿಶಾ, ದಿಶಾ. ವಾಚ್, ನಿಶ್, ದಿಶ್ ಇವು ಹಲಂತ ಶಬ್ದ. ಇವುಗಳಿಗೆ ಟಾಪ್ ಬಂದರೆ ವಾಚಾ, ನಿಶಾ, ದಿಶಾ ಎಂದಾಗುತ್ತವೆ. ಪಾಣಿನಿ ಮತದಲ್ಲಿ ಹಲಂತವಾಗಿಯೇ ಇರುತ್ತದೆ. ಉಪಸರ್ಗಗಳ ಅಕಾರಕ್ಕೆ ಲೋಪ ಬಂದುದಕ್ಕೆ ಉದಾಹರಣೆ. ಅಪಿಧಾನಂ, ಅವಗಾಹಃ ಎಂದಿದೆ. ಇಲ್ಲಿ ಅಪಿ, ಅವ ಗಳ ಅಕಾರಕ್ಕೆ ಭಾಗುರಿಗಳ ರೀತ್ಯಾ ಲೋಪಬಂದರೆ ವಗಾಹಃ, ಪಿಧಾನಂ ಎಂದಾಗುತ್ತದೆ. ವಗಾಹಃ (ಇಳಿಯುವಿಕೆ) ಪಿಧಾನಂ=ಮುಚ್ಚಳ "ಪೂರ್ವಾಪರೌ ತೋಯನಿಧೀ ವಗಾಹ್ಯ" ಎಂದು ಕಾಳಿದಾಸನು ಕುಮಾರಸಂಭವದಲ್ಲಿ ಪ್ರಯೋಗಿಸಿರುತ್ತಾನೆ.

ಹೀಗೆ ಅವ್ಯಯ ಪ್ರಕರಣ ವಿವೃತವಾಗಿದೆ. ಇದುವರೆಗೆ ನಾಮಪದಗಳ ವಿವರವನ್ನು ತೋರಿಸಿ ಇನ್ನುಮುಂದೆ ಕ್ರಿಯಾಪದಗಳ ಸ್ವರೂಪವನ್ನು ತೋರಿಸುತ್ತಾನೆ. "ಪಾಣಿನೀಯ ಪ್ರವೇಶಿಕಾ" ವ್ಯಾಖ್ಯಾನದಲ್ಲಿ ಲಘುಸಿದ್ಧಾಂತಕೌಮುದೀ ಪೂರ್ವಭಾಗವು ಸಮಾಪ್ತವಾಗಿದೆ.



|| ಶ್ರೀಃ ||

# ಲಘುಸಿದ್ಧಾಂತಕೌಮುದೀ

(ಕನ್ನಡ ವ್ಯಾಖ್ಯಾನ)

# ಪಾಣಿನೀಯ ಪ್ರವೇಶಿಕಾ

(ಭಾಗ ೨— ದಶವಿಕರಣೀ)

ವಿದ್ವಾನ್ ಜಿ. ವಿಷ್ಣುಮೂರ್ತಿ ಭಟ್ಟ
ವ್ಯಾಕರಣ, ಅಲಂಕಾರಶಾಸ್ತ್ರ, ತರ್ಕ, ಕನ್ನಡ ವಿದ್ವಾನ್, ರಾಷ್ಟ್ರಭಾಷಾವಿಶಾರದ
ಪ್ರಾಧ್ಯಾಪಕ, ಶ್ರೀಮನ್ಮಹಾರಾಜ ಸಂಸ್ಕೃತ ಮಹಾಪಾಠಶಾಲಾ, ಮೈಸೂರು

ಬೆಲೆ: ರೂ. ೪—೫೦

# ಮುನ್ನುಡಿ

ಪಾಣಿನೀಯ ಪ್ರವೇಶಿಕಾ ಗ್ರಂಥವು ಮುಗಿದು ಮೂರು ವರ್ಷಗಳಾದರೂ ಈ ಬೃಹದ್ಗ್ರಂಥವನ್ನು ಪುನಃ ಮುದ್ರಿಸಲು ದ್ರವ್ಯಾಭಾವದಿಂದ ಅಸಮರ್ಥನಾದುದರಿಂದ ಕಾಲನಿರೀಕ್ಷೆ ಮಾಡಬೇಕಾಯಿತು. ನಮ್ಮ ಸರಕಾರವನ್ನೂ, ವಿಶೇಷವಾಗಿ ಸಂಸ್ಕೃತಕ್ಕೆ ಪ್ರೋತ್ಸಾಹವನ್ನೀಯುವುದಕ್ಕೇ ಡೆಲ್ಲಿಯಲ್ಲಿರುವ ಕೇಂದ್ರ ವಿದ್ಯಾಶಾಖೆಯ ಸಂಸ್ಕೃತ ವಿಭಾಗವನ್ನೂ ಪುನಃ ಪುನಃ ಪ್ರಾರ್ಥಿಸಿ ವಿಫಲನಾದೆನು. ಅತಿಕಷ್ಟದಿಂದ ಪ್ರಥಮ ಭಾಗವನ್ನು ಪುನರ್ಮುದ್ರಣ ಮಾಡಿದರೂ ಇನ್ನೆರಡು ಭಾಗಗಳನ್ನು ಸಾಧ್ಯವಾಗದಿದ್ದುದರಿಂದ ಕೈಬಿಡಬೇಕಾಯಿತು. ಈಗ ಸಹೃದಯ ಮಿತ್ರರೊಬ್ಬರ ಉದಾರ ನೆರವಿನಿಂದ ದ್ವಿತೀಯ ಭಾಗದ ಮುದ್ರಣ ನೋಡಿ ಹರ್ಷಪಡುವಂತಾಗಿದೆ. "ಪ್ರದಾನಂ ಪ್ರಚ್ಛನ್ನಂ" ಎಂಬ ಭರ್ತೃಹರಿಯ ಸೂಕ್ತಿಯಂತೆ ಅವರು ತಮ್ಮ ಹೆಸರನ್ನು ಪ್ರಕಟಿಸಬಾರದೆಂದು ಆಗ್ರಹಮಾಡಿದುದರಿಂದ ಅದನ್ನು ಇಲ್ಲಿ ಸೂಚಿಸಲು ಅಸಮರ್ಥನಾಗಿದ್ದೇನೆ. ಪರಮಾತ್ಮನು ಅವರಿಗೆ ಆಯುರಾರೋಗ್ಯಾದಿ ಸಕಲ ಭಾಗ್ಯಗಳನ್ನೂ ಕೊಟ್ಟು ಇಂತಹ ಪುಣ್ಯಜನಕಕಾರ್ಯಗಳನ್ನು ಹೆಚ್ಚಾಗಿ ಮಾಡಿಸುವಂತೆ ಸಾಮರ್ಥ್ಯ ಕೊಡಲಿ ಎಂದು ಪ್ರಾರ್ಥಿಸುತ್ತೇನೆ. ಬಹುಕಾಲದಿಂದ ಪುನರ್ಮುದ್ರಣವಾಗಲಿಲ್ಲವೇ? ಎಂದು ಬಯಸುತ್ತಿರುವ ಸಹೃದಯರಾದ ವ್ಯಾಕರಣಾಭ್ಯಾಸಿಗಳಿಗೆ ಇದು ತೃಪ್ತಿಯನ್ನುಂಟುಮಾಡುತ್ತದೆಂದು ಭಾವಿಸುತ್ತೇನೆ. ಹೀಗೆಯೇ ಉದಾರಿಗಳಾದ ಸಹೃದಯರ ನೆರವಿನಿಂದ ಮೂರನೆಯ ಭಾಗವು ಪುನರ್ಮುದ್ರಣ ಹೊಂದುವಂತಾಗಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ. ಸಂಸ್ಕೃತಾಭಿಮಾನಿಗಳು ಹಿಂದಿನಂತೆಯೇ ಈಗಲೂ ಪ್ರೋತ್ಸಾಹ ಕೊಡುತ್ತಾರೆಂದು ನಂಬಿರುತ್ತೇನೆ.

ತಾ|| 3-2-1969
ಮೈಸೂರು

ಜಿ. ವಿಷ್ಣುಮೂರ್ತಿಭಟ್ಟ

# ವಿಷಯಸೂಚಿ

## ಎರಡನೆಯ ಭಾಗ

|| ಶ್ರೀ ||

# ಪಾಣಿನೀಯ ಪ್ರವೇಶಿಕಾ

## (ಉತ್ತರ ಭಾಗ)

---

## ಅಥ ತಿಙಂತಪ್ರಕರಣಮ್

### ಭ್ವಾದಯಃ

ಲಟ್, ಲಿಟ್, ಲುಟ್, ಲೃಟ್, ಲೇಟ್, ಲೋಟ್, ಲಙ್ ಲಿಙ್, ಲುಙ್, ಲೃಙ್, || ಏಷು ಪಂಚಮೋ ಲಕಾರಶ್ಛಂದೋಮಾತ್ರಗೋಚರಃ ||

'ಭೂವಾದಯೋ ಧಾತವಃ' ಸೂತ್ರದಿಂದ ಕ್ರಿಯಾವಾಚಕಗಳಾದ ಭೂ ಮುಂತಾದವುಗಳಿಗೆ ಧಾತುಸಂಜ್ಞೆಯನ್ನು ಹಿಂದೆ ಹೇಳಿರುತ್ತಾನೆ. 'ಸುಪ್ತಿಙಂತಂ ಪದಮ್' ಎಂಬ ಸೂತ್ರದಲ್ಲಿ ಸುಬಂತ, ತಿಙಂತಗಳಿಗೆ ಪದಸಂಜ್ಞೆ ಹೇಳಿದೆ. ಇದು ವರೆಗೆ ಸುಬಂತ ಪದಗಳ ವಿವರವನ್ನು ಹೇಳಿದಂತಾಯಿತು. ಇನ್ನು ತಿಙಂತ ಪದಗಳ ವಿವರವನ್ನು ತೋರಿಸುತ್ತಾನೆ. ತಿಙ್ ಎಂದರೆ ಮುಂದೆ ಹೇಳುವ ೧೮ ಪ್ರತ್ಯಯಗಳು. ಇವು ಧಾತುವಿನ ಮೇಲೆ ಬರುತ್ತವೆ. ಧಾತುವೇ ಪ್ರಕೃತಿ. ಕ್ರಿಯಾವಿಶೇಷವನ್ನು ಕಾಲ ತೋರಿಸುತ್ತದೆ. ಈ ಕಾಲವನ್ನು ತಿಳಿಸಿಕೊಡುವವುಗಳು ಲಟ್ ಮುಂತಾದವುಗಳು. ಇವು ಹತ್ತು. ಇವುಗಳಲ್ಲಿ ಲ್ ಮಾತ್ರ ಉಳಿಯುವುದರಿಂದ ಇವುಗಳಿಗೆ ಲಕಾರಗಳೆಂದು ಕರೆಯುತ್ತಾರೆ. ಪ್ರಸಿದ್ಧವಾಗಿ ವರ್ತಮಾನ, ಭೂತ, ಭವಿಷ್ಯತ್‌ಗಳೆಂದು ಮೂರು ಕಾಲಗಳಿದ್ದರೂ ಇವುಗಳಲ್ಲೇ ಅವಾಂತರ ಭೇದಗಳಿರುವುದರಿಂದ ಅವುಗಳನ್ನು ಈ ಲಕಾರಗಳು ತಿಳಿಸುತ್ತವೆ. ಇವುಗಳಲ್ಲಿ ಐದನೇದಾದ (ಏಷು........ ಗೋಚರಃ) ಲೇಟ್ ಎಂಬುದು ಛಂದಃ ಅಂದರೆ ವೇದದಲ್ಲಿ ಮಾತ್ರ ಪ್ರಯೋಗಿಸಲ್ಪಡುತ್ತದೆ. ಲೋಕದಲ್ಲಿ ಪ್ರಯೋಗಿಸಲ್ಪಡುವುದಿಲ್ಲ. ಈ ಹತ್ತು ಲಕಾರಗಳನ್ನು ಸ್ಥೂಲವಾಗಿ ಹೀಗೆ ವಿಂಗಡಿಸಿರುತ್ತಾರೆ:

ಲಡ್‌ವರ್ತಮಾನೇ ಲೇಡ್ವೇದೇ ಭೂತೇ ಲುಙ್‌ಲಙ್‌ಲಿಟಸ್ತಥಾ ||
ವಿಧ್ಯಾಶಿಷೋಸ್ತು ಲಿಙ್‌ಲೋಟೌ ಲೃಙ್ ಲೃಟ್ ಲುಟ್ ಭವಿಷ್ಯತಿ ||

ವರ್ತಮಾನಕಾಲದಲ್ಲಿ ಲಟ್. ಭೂತಕಾಲದಲ್ಲಿ ಲುಙ್, ಲಙ್, ಲಿಟ್‌ಗಳು ಬರುತ್ತವೆ. ಲೃಙ್, ಲೃಟ್ ಲುಟ್ ಭವಿಷ್ಯತ್ಕಾಲದಲ್ಲಿ ಬರುತ್ತವೆ. ವಿಧಿ, ಆಶೀರ್ವಾದ

ತಿಳಿಸುವಾಗ ಲಿಙ್, ಲೋಟ್ ಬರುತ್ತವೆ. ಲಿಙ್‌ನಲ್ಲಿ ವಿಧ್ಯರ್ಥದಲ್ಲಿಯೂ ಆಶೀರರ್ಥದಲ್ಲಿಯೂ ಭಿನ್ನ ಭಿನ್ನ ರೂಪಗಳಾಗುವುದರಿಂದ ವಿಧಿಲಿಙ್, ಆಶೀರ್ಲಿಙ್ ಎಂದು ಎರಡು ಪ್ರಕಾರಗಳಾಗುತ್ತವೆ. ಲೇಟ್ ವೇದದಲ್ಲಿ ಕಾಲಸಾಮಾನ್ಯದಲ್ಲಿಯೂ ಬರುತ್ತದೆ. ಭೂತಭವಿಷ್ಯತ್ಕಾಲಗಳಲ್ಲಿ ಅವಾಂತರಭೇದಗಳನ್ನು ಆಯಾಯ ಸೂತ್ರಗಳಿಂದ ಮುಂದೆ ವಿವರಿಸುತ್ತಾನೆ.

ಈ ಲಕಾರಗಳ ಸ್ಥಾನದಲ್ಲಿ ಹದಿನೆಂಟು ಪ್ರತ್ಯಯಗಳು ಆದೇಶವಾಗಿ ಬರುತ್ತವೆ:

ಪ್ರಥಮಪುರುಷ : ತಿಪ್–ತಸ್–ಝಿ॥ ಮಧ್ಯಮಪುರುಷ: ಸಿಪ್–ಥಸ್–ಥ॥ ಉತ್ತಮಪುರುಷ: ಮಿಪ್–ವಸ್–ಮಸ್॥ ಇವುಗಳಿಗೆ ಪರಸ್ಮೈಪದಪ್ರತ್ಯಯಗಳೆಂದು ಹೆಸರು. ಪ್ರಥಮಪುರುಷ : ತ–ಆತಾಂ–ಝ || ಮಧ್ಯಮಪುರುಷ : ಥಾಸ್–ಆಥಾಮ್–ಧ್ವಮ್ || ಉತ್ತಮಪುರುಷ : ಇಟ್–ವಹಿ–ಮಹಿಙ್ || ಇವುಗಳಿಗೆ ಆತ್ಮನೇಪದ ಪ್ರತ್ಯಯಗಳೆಂದು ಹೆಸರು.

ಈ ಹದಿನೆಂಟು ಪ್ರತ್ಯಯಗಳೂ ಸಾರ್ವಧಾತುಕವೆಂಬ ಸಂಜ್ಞೆ ಹೊಂದುತ್ತವೆ. ಧಾತುಗಳಿಗೆ ಇವು ಪರವಾದಾಗ ಮಧ್ಯೆ ಕೆಲವು ಪ್ರತ್ಯಯಗಳು ಬರುತ್ತವೆ. ಅವುಗಳಿಗೆ ವಿಕರಣ ಪ್ರತ್ಯಯಗಳೆಂದು ಹೆಸರು. ಈ ವಿಕರಣಭೇದದಿಂದ ಧಾತುಗಳನ್ನು ಹತ್ತು ಸಂಗಡವಾಗಿ ವಿಭಾಗಿಸಿರುತ್ತಾರೆ.

| | | | |
|---|---|---|---|
| (೧) | ಶಪ್ (ಅ) ವಿಕರಣ | — ಭೂ ಮುಂತಾದವುಗಳಿಗೆ | ಭ್ವಾದಿ |
| (೨) | ಲುಕ್ (ಶಪಿಗೆ ಲುಕ್) | — ಅದ್ ಮುಂತಾದವುಗಳಿಗೆ | ಅದಾದಿ |
| (೩) | ಶ್ಲು ವಿಕರಣ | — ಹು ಮುಂತಾದವುಗಳಿಗೆ | ಜುಹೋತ್ಯಾದಿ |
| (೪) | ಶ್ಯನ್ " | — ದಿವ್ ಮುಂತಾದವುಗಳಿಗೆ | ದಿವಾದಿ |
| (೫) | ಶ್ನು " | — ಸು ಮುಂತಾದವುಗಳಿಗೆ | ಸ್ವಾದಿ |
| (೬) | ಶ " | — ತುದ್ ಮುಂತಾದವುಗಳಿಗೆ | ತುದಾದಿ |
| (೭) | ಶ್ನಮ್ " | — ರುಧಿರ್ ಮುಂತಾದವುಗಳಿಗೆ | ರುಧಾದಿ |
| (೮) | ಉ " | — ತನು ಮುಂತಾದವುಗಳಿಗೆ | ತನಾದಿ |
| (೯) | ಶ್ನಾ " | — ಕ್ರೀಞ್ ಮುಂತಾದವುಗಳಿಗೆ | ಕ್ರ್ಯಾದಿ |
| (೧೦) | ಣಿಚ್–ಶಪ್ | — ಚುರ ಮುಂತಾದವುಗಳು | ಚುರಾದಿ |

ಹೀಗೆ ಈ ಹತ್ತಕ್ಕೆ ದಶವಿಕರಣಿಯೆನ್ನುತ್ತಾರೆ. ಹತ್ತು ವಿಕರಣಗಳಲ್ಲಿ ಶಕಾರ ಇತ್ತಾದವುಗಳು ಸಾರ್ವಧಾತುಕಸಂಜ್ಞೆ ಹೊಂದುತ್ತವೆ. ಧಾತುವಿನ ಮೇಲೆ ತಿಙ್, ಶಿತ್ ಪ್ರತ್ಯಯಗಳನ್ನು ಬಿಟ್ಟು ಇತರ ಪ್ರತ್ಯಯ ವಿಹಿತವಾದರೆ ಅವು ಆರ್ಧಧಾತುಕವೆನಿಸುತ್ತವೆ. ವಲಾದಿಯಾದ ಆರ್ಧಧಾತುಕಗಳಿಗೆ ಇಡಾಗಮ ಹೇಳುತ್ತಾನೆ. ಸಾಮಾನ್ಯವಾಗಿ ಧಾತುವಿನ ಪರಕ್ಕೆ ಇಡಾಗಮ ಬರುವುದಾದರೆ ಆ ಧಾತುವು ಸೇಟ್ ಎನಿಸುತ್ತದೆ. ಇಡಾಗಮ ಹೊಂದದವುಗಳು ಅನಿಟ್ ಧಾತುಗಳೆನಿಸುತ್ತವೆ.

ಲಿಟ್ ಆಶೀರ್ಲಿಙ್ ಸ್ಥಾನದಲ್ಲಿ ಬಂದ ತಿಙ್ ಪ್ರತ್ಯಯಗಳಿಗೆ ಆರ್ಧಧಾತುಕ ಸಂಜ್ಞೆ ಹೇಳುತ್ತಾನೆ. ಆಗ ಶಪ್ ವಿಕರಣ ಬರುವುದಿಲ್ಲ. ಲೃಟ್, ಲೃಙ್‌ಗಳಲ್ಲಿ ಶಪಿಗೆ ಬದಲಾಗಿ ಸ್ಯ ವಿಕರಣವೂ, ಲುಟಿನಲ್ಲಿ ಶಪಿಗೆ ತಾಸ್ ವಿಕರಣವೂ ಲುಙ್‌ನಲ್ಲಿ 'ಸಿಚ್' ವಿಕರಣವೂ ಬರುವುದರಿಂದ ಶಪ್ ಬರುವುದಿಲ್ಲ. ಆಗ ಶಪಾದಿ ವಿಕರಣ ಲಟ್, ಲೋಟ್, ಲಙ್, ವಿಧಿಲಿಙ್ ಈ ನಾಲ್ಕರಲ್ಲಿ ಮಾತ್ರವೆಂದು ತಿಳಿಯಬೇಕು. ಸಾರ್ವಧಾತುಕವೆಂದರೆ ಈ ನಾಲ್ಕೇ ಆಗುತ್ತವೆ.

ಲಕಾರಗಳು ಕಾಲವನ್ನು ವ್ಯಕ್ತಪಡಿಸುತ್ತವೆಯೆಂದು ಹಿಂದೆ ಹೇಳಿದೆ. ಈಗ ಅವುಗಳ ವಾಚ್ಯಾರ್ಥವನ್ನು ಹೇಳುತ್ತಾನೆ.

ಲಕಾರಗಳ ಅರ್ಥವನ್ನು ತಿಳಿಸುವ ಸೂತ್ರ।

೩೭೪. ಲಃ ಕರ್ಮಣಿ ಚ ಭಾವೇ ಚಾಕರ್ಮಕೇಭ್ಯಃ ॥ ೩-೪-೬೯ ॥

ಲಕಾರಾಃ ಸಕರ್ಮಕೇಭ್ಯಃ ಕರ್ಮಣಿ ಕರ್ತರಿ ಚ ಸ್ಯುಃ, ಅಕರ್ಮಕೇಭ್ಯಃ ಭಾವೇ ಕರ್ತರಿ ಚ ॥

ಆರು ಪದಗಳುಳ್ಳ ಸೂತ್ರ 'ಧಾತೋಃ' ಅಧಿಕಾರವಿದೆ 'ಕರ್ತರಿ ಕೃತ್' ಸೂತ್ರದಿಂದ 'ಕರ್ತರಿ' ಅನುವೃತ್ತವಾಗುತ್ತದೆ. ಇಲ್ಲಿ ಎರಡು ವಾಕ್ಯಗಳಿವೆ. ಲಃ ಬಹುವಚನ (ಲ್, ಲೌ, ಲಃ) ಲಃ ಕರ್ಮಣಿ ಕರ್ತರಿ ಚ। ಒಂದು ವಾಕ್ಯ. ಅಕರ್ಮಕೇಭ್ಯಃ ಕರ್ತರಿ, ಭಾವೇ ಚ। ಎರಡನೇ ವಾಕ್ಯ. ಮೊದಲನೇ ವಾಕ್ಯದಲ್ಲಿ ಕರ್ಮಣಿಯೆಂದುದರಿಂದ ಕರ್ಮವುಳ್ಳ ಧಾತುವಿಷಯವೆಂದು ತಿಳಿಯಬೇಕು. ಸೂತ್ರಾರ್ಥ—ಲಕಾರಗಳು ಸಕರ್ಮಕ ಧಾತುಗಳ ಮೇಲೆ ಕರ್ಮಣಿಯಲ್ಲಿಯೂ, ಕರ್ತರಿಯಲ್ಲಿಯೂ ಬರುತ್ತವೆ. ಅಕರ್ಮಕ ಧಾತುಗಳ ಮೇಲೆ ಕರ್ತರಿಯಲ್ಲಿಯೂ ಭಾವಾರ್ಥದಲ್ಲಿಯೂ ಬರುತ್ತವೆ ಧಾತುಗಳು ಎರಡು ವಿಧವಾಗಿವೆ: (೧) ಸಕರ್ಮಕ ಧಾತು, (೨) ಅಕರ್ಮಕ ಧಾತು. ಭವತಿ—ಆಗುತ್ತಾನೆ. ಇದು ಅಕರ್ಮಕ. ಏನನ್ನು? ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಸಿಗುವುದಿಲ್ಲ. ಕರೋತಿ—ಮಾಡುತ್ತಾನೆ. ಇದು ಸಕರ್ಮಕ. ಏನನ್ನು? ಅಂದರೆ 'ಕೆಲಸವನ್ನು' ಎಂಬ ಉತ್ತರ ಇಲ್ಲಿ ಸಿಗುತ್ತದೆ. ಹೀಗೆ ಉತ್ತರ ಎಲ್ಲಿ ದೊರೆಯುವುದೋ ಅದು ಸಕರ್ಮಕ. ಆಗ ಸಕರ್ಮಕ ಧಾತುಗಳ ಮೇಲೆ ಬರುವ ಲಕಾರಸ್ಥಾನಿಕ ಪ್ರತ್ಯಯಗಳಿಗೆ ಎರಡರ್ಥವೆಂದು ಇಲ್ಲಿ ಹೇಳುತ್ತಾನೆ. 'ಕ್ರಿಯತೇ ಕಟಃ'—ಚಾಪೆಯು ಮಾಡಲ್ಪಡುತ್ತದೆ. ಕೃಞ್ ಧಾತುವಿನ ಮೇಲೆ ಬರುವ ಲಕಾರಕ್ಕೆ ತೇ ಆದೇಶ ಬಂದಿದೆ. ಇದು ಕರ್ಮಾರ್ಥದಲ್ಲಿ ಬಂದುದರಿಂದ ಇದು ಕರ್ಮಣಿ ಪ್ರಯೋಗ. ತೇ ಎಂಬುದು ಕರ್ಮವನ್ನು ಹೇಳಿದೆ. ಕರ್ಮ ಹೇಳಿದುದರಿಂದ ಕರ್ಮವಾಚಕ ಕಟ ಪದದ ಮೇಲೆ ಪ್ರಥಮಾ ಬಂದಿದೆ. (ಕಟಃ—ಚಾಪೆ.)

ಕರ್ತೃ ಹೇಳದಿರುವುದರಿಂದ ತೃತೀಯಾ ಬರುತ್ತದೆ. 'ರಾಮೇಣ ಕಟಃ ಕ್ರಿಯತೇ' —ರಾಮನಿಂದ ಚಾಪೆಯು ಮಾಡಲ್ಪಡುತ್ತದೆ. ಇದು ಕರ್ಮಣಿಯಲ್ಲಿ ಲಕಾರ ಬಂದುದಕ್ಕೆ ಉದಾಹರಣೆ. ಕರ್ಮಾರ್ಥದಲ್ಲಿ ಲಕಾರ ಬಂದಿದೆಯೆಂದರ್ಥ. ಇದೇ ರೀತಿ ಸಕರ್ಮಕವಾದ ಧಾತುವಿನ ಮೇಲೆ ಕರ್ತರಿಯಲ್ಲಿ ಲಕಾರ ಬರುತ್ತದೆ. ಆಂದರೆ ಅಲ್ಲಿ ಲಕಾರ (ಅದರ ಸ್ಥಾನದಲ್ಲಿ ಬಂದ ಪ್ರತ್ಯಯ) ಕರ್ತೃವನ್ನು ಹೇಳುತ್ತದೆ. 'ರಾಮಃ ಕಟಂ ಕರೋತಿ'—ರಾಮನು ಚಾಪೆಯನ್ನು ಮಾಡುತ್ತಾನೆ. ಇದು ಕರ್ತರಿ ಪ್ರಯೋಗ. ಇಲ್ಲಿ ಲಕಾರ (ತಿ) ರಾಮರೂಪ ಕರ್ತೃವನ್ನು ಹೇಳುತ್ತದೆ. ಹೇಳಿದುದರಿಂದ ಪ್ರಥಮಾ ವಿಭಕ್ತಿ ಬರುತ್ತದೆ. ಹೇಳಲ್ಪಡದಿದ್ದರೆ ಕರ್ತೃವಿಗೆ ಯಾವಾಗಲೂ ತೃತೀಯಾ ವಿಭಕ್ತಿ ನಿಯತವಾಗಿದೆ. ಇಲ್ಲಿ ಕರ್ಮವು ಹೇಳಲ್ಪಡಲಿಲ್ಲ ವಾದುದರಿಂದ ಕರ್ಮದ ವಿಭಕ್ತಿ ದ್ವಿತೀಯಾ (ಕರ್ಮಣಿ ದ್ವಿತೀಯಾ) ಬಂದಿದೆ. ಆದೂ ಹೇಳಲ್ಪಟ್ಟಿದ್ದರೆ ಪ್ರಥಮಾ ಬರುತ್ತಿತ್ತು. ಹೀಗೆ ಸಕರ್ಮಕಧಾತುಗಳ ಮೇಲೆ ಕರ್ತೃರ್ಥದಲ್ಲಿಯೂ, ಭಾವಾರ್ಥದಲ್ಲಿಯೂ ಲಕಾರಗಳು ಬರುತ್ತವೆ. ಭೂ ಧಾತುವಿಗೆ ಕರ್ಮವಿಲ್ಲದುದರಿಂದ ಕರ್ಮಣಿಯಲ್ಲಿ ಲಕಾರವಿಲ್ಲ. 'ರಾಮಃ ಭವತಿ'—ರಾಮನು ಇರುತ್ತಾನೆ. ಇದು ಕರ್ತರಿ ಪ್ರಯೋಗ. ಇಲ್ಲಿ ಭೂ ಧಾತುವಿನ ಮೇಲೆ ತಿ ಎಂಬುದು ಕರ್ತೃರ್ಥದಲ್ಲಿ ಬಂದಿದೆ. ತಿ ಪ್ರತ್ಯಯದಿಂದ ಕರ್ತೃ ಅಭಿಹಿತವಾದುದರಿಂದ ಕರ್ತೃವಿಗೆ ಪ್ರಥಮಾ ಬಂದಿದೆ. 'ರಾಮೇಣ ಭೂಯತೇ'—ರಾಮನಿಂದ ಇರೋಣಾಗುತ್ತದೆ. ಇದು ಭಾವೇ ಪ್ರಯೋಗ. ಭಾವಾರ್ಥದಲ್ಲಿ ಲಕಾರ ಬಂದಿದೆ. ಇಲ್ಲಿನ ಲಕಾರ (ಆದರ ಸ್ಥಾನದ ಪ್ರತ್ಯಯ) ಭಾವ ಅಂದರೆ ಕ್ರಿಯೆಯನ್ನು ಹೇಳುತ್ತದೆ. ಕರ್ತೃವು ಯಾವುದರಿಂದಲೂ ಹೇಳಲ್ಪಡದಿರುವುದರಿಂದ ತೃತೀಯಾ ವಿಭಕ್ತಿ ಬಂದಿದೆ. ಕರ್ಮ ಭಾವಾರ್ಥಗಳಲ್ಲಿ ಆತ್ಮನೇಪದಪ್ರತ್ಯಯಗಳನ್ನು ಮುಂದೆ ಹೇಳುತ್ತಾನೆ. ಕರ್ತರಿಯಲ್ಲಿ ಪರಸ್ಮೈಪದವೂ, ಆತ್ಮನೇಪದವೂ ಬರುತ್ತದೆ. ಹೀಗೆ ಲಕಾರಗಳು ಕರ್ತೃ-ಕರ್ಮ ಭಾವವನ್ನು ಹೇಳುವುದಲ್ಲದೆ ಕಾಲವಿಶೇಷವನ್ನೂ ಪ್ರಕಾಶಪಡಿಸುತ್ತವೆ. ಕಾಲವನ್ನು ಧಾತುವು ಹೇಳಿದರೂ ಆದನ್ನು ಅಭಿವ್ಯಕ್ತಪಡಿಸುವವು ಲಕಾರಗಳು. ಇದಕ್ಕೆ ದ್ಯೋತಕವೆನ್ನುತ್ತಾರೆ. ಘಟ ಕತ್ತಲಲ್ಲಿದ್ದರೆ ದೀಪ ಅದನ್ನು ತಿಳಿಸಿಕೊಡುತ್ತದೆ. ಅದನ್ನು ಹುಟ್ಟಿಸುವುದಿಲ್ಲ. ದೀಪದಂತೆ ಲಕಾರ ಧಾತ್ವರ್ಥದಿಂದಲೇ ತೋರುವ ಕಾಲವಿಶೇಷವನ್ನು ವ್ಯಕ್ತಪಡಿಸುತ್ತದೆ. ಈಗ ಲಟನಿಂದ ವ್ಯಕ್ತವಾಗುವ ಕಾಲವನ್ನು ತೋರಿಸುತ್ತಾನೆ.

ಲಟಿನ ಕಾಲವನ್ನು ಹೇಳುವ ಸೂತ್ರ.

**೩೭೫. ವರ್ತಮಾನೇ ಲಟ್ || ೩-೨-೧೨೩ ||**

**ವರ್ತಮಾನಕ್ರಿಯಾವೃತ್ತೇರ್ಧಾತೋರ್ಲಟ್ ಸ್ಯಾತ್ । ಅಟಾವಿತೌ । ಉಚ್ಚಾರಣಸಾಮರ್ಥ್ಯಾಲ್ಲಸ್ಯ ನೇತ್ವಮ್ । ಭೂ ಸತ್ತಾಯಾಮ್ ॥ ೧ ॥ ಕರ್ತೃ ವಿವಕ್ಷಾಯಾಂ ಭೂ ಲ್ ಇತಿ ಸ್ಥಿತೇ ॥**

ದ್ವಿಪದ ಸೂತ್ರ. 'ಧಾತೋಃ' ಎಂಬ ಅಧಿಕಾರವು ತೃತೀಯಾಧ್ಯಾಯ ಮುಗಿಯುವವರೆಗೂ ಇರುತ್ತದೆ. 'ವರ್ತಮಾನೇ' ಎಂಬುದಕ್ಕೆ ಧಾತುವಿನಲ್ಲಿ ಅನ್ವಯ. ಸೂತ್ರಾರ್ಥ—ವರ್ತಮಾನಕಾಲ ಕ್ರಿಯೆಯನ್ನು ಹೇಳುವ ಧಾತುವಿನ ಮೇಲೆ ಲಟ್ ಬರುತ್ತದೆ. ಕ್ರಿಯಾವೃತ್ತಿ (ಇರುವುದು) ಅಂದರೆ ವಾಚ್ಯವಾಚಕಭಾವದಿಂದಿರುವುದು ಎಂದರ್ಥ. ವರ್ತಮಾನಕಾಲ ಕ್ರಿಯಾವಾಚಕ ಧಾತುವೆಂದರ್ಥ. ಧಾತುವಿನಿಂದ ವಾಚ್ಯವಾದ ಕ್ರಿಯೆಯು ವರ್ತಮಾನಕಾಲವನ್ನು ತಿಳಿಸುವಾಗ ಲಟ್. ವರ್ತಮಾನವೆಂದರೆ ಈಗ ನಡೆಯುವ ಕಾಲ. ಲಟ್ ಎಂಬಲ್ಲಿ 'ಹಲಂತ್ಯಮ್' ಸೂತ್ರದಿಂದ ಟಕಾರ ಇತ್. ಅಕಾರ 'ಉಪದೇಶೇಜನುನಾಸಿಕ ಇತ್' ಸೂತ್ರದಿಂದ ಇತ್ತಾಗುತ್ತದೆ. ಲ್ ಉಳಿಯುವುದು 'ಲಶಕ್ವತದ್ಧಿತೇ' ಸೂತ್ರದಿಂದ ಲಕಾರವೂ ಏಕೆ ಇತ್ತಾಗಲಿಲ್ಲ ಎಂಬುದಕ್ಕೆ ಸಮಾಧಾನ ಹೇಳುತ್ತಾನೆ. ಉಚ್ಚಾರಣೇತಿ||' ಲಕಾರವೂ ಇತ್ತಾಗುವುದಾದರೆ ಧಾತುವಿನ ಪರದಲ್ಲಿ ಲಕಾರಗಳನ್ನು ಏಕೆ ಹೇಳಬೇಕು? ಹೇಳಿ ಲೋಪ ಮಾಡಿದರೆ ವ್ಯರ್ಥವಲ್ಲವೇ? ಆದುದರಿಂದ ಲಕಾರಕ್ಕೆ ಇತ್ ಇಲ್ಲ. 'ಭೂ' ಧಾತು. 'ಸತ್ತಾಯಾಮ್'—ಇದು ಅರ್ಥವನ್ನು ನಿರ್ದೇಶಿಸುತ್ತದೆ. ಸತ್ತಾ ಎಂಬ ಅರ್ಥದಲ್ಲಿ ಭೂ ಧಾತುವಿದೆ. ಆತ್ಮಧಾರಣಾನುಕೂಲವ್ಯಾಪಾರಕ್ಕೆ ಸತ್ತಾ ಎಂದು ಹೆಸರು. (ಇರುವಿಕೆ) ವರ್ತಮಾನಕಾಲದಲ್ಲಿ ಕರ್ತೃ ವಿವಕ್ಷೆ ಮಾಡಿದಾಗ ಭೂ ಧಾತುವಿನ ಮೇಲೆ ಲಟ್ ಬರುತ್ತದೆ ಅದರಲ್ಲಿ ಲ್ ಉಳಿಯುವುದರಿಂದ ಭೂ+ಲ್ ಎಂದಿರುವಾಗ ಅದರ ಸ್ಥಾನಕ್ಕೆ ಬರುವ ಆದೇಶ ಪ್ರತ್ಯಯಗಳನ್ನು ಹೇಳುತ್ತಾನೆ.

ಲಕಾರ ಸ್ಥಾನಕ್ಕೆ ಆದೇಶ ಹೇಳುವ ಸೂತ್ರ.

**೩೭೬. ತಿಪ್‌ತಸ್‌ಝಿಸಿಪ್‌ಥಸ್‌ಥಮಿಬ್‌ವಸ್‌ಮಸ್‌ತಾತಾಂಝಥಾಸಾಥಾಂಧ್ವಮಿಡ್‌ವಹಿಮಹಿಙ್ || ೩-೪-೭೮ ||**

**ಏತೇಽಷ್ಟಾದಶ ಲಾದೇಶಾಃ ಸ್ಯುಃ ||**

ಏಕಪದ ಸೂತ್ರ. ತಿಪ್‌ಚ, ತಸ್‌ಚ, ಝಿಚ, ಸಿಪ್‌ಚ, ಥಸ್‌ಚ, ಥಚ, ಮಿಪ್‌ಚ, ವಸ್‌ಚ, ಮಸ್‌ಚ, ತಚ, ಆತಾಂಚ, ಝಚ, ಥಾಸ್‌ಚ, ಆಥಾಂಚ, ಧ್ವಮ್‌ಚ, ಇಟ್‌ಚ, ವಹಿಚ, ಮಹಿಙ್‌ಚ, ತೇಷಾಂ ಸಮಾಹಾರಃ || ತಿಪ್—ಹಿಙ್ || 'ಲಸ್ಯ' ಅಧಿಕಾರ. ಸೂತ್ರಾರ್ಥ—ತಿಬಾದಿ ಈ ಹದಿನೆಂಟು ಪ್ರತ್ಯಯಗಳು ಲಕಾರಗಳ ಸ್ಥಾನಕ್ಕೆ ಆದೇಶವಾಗಿ ಬರುತ್ತವೆ. ಇಲ್ಲಿ ಲಟ್ ಒಂದು. ಆದೇಶ ಹದಿನೆಂಟು. ಇದು ಹೇಗೆ ಸಾಧ್ಯವೆಂದರೆ ಪ್ರಧಾನಾನುರೋಧದಿಂದ—ಪ್ರಧಾನವನ್ನು ಅನುಸರಿಸಿ ಗುಣಗಳಿಗೆ—ಅಪ್ರಧಾನಗಳಿಗೆ ಆವೃತ್ತಿ ಮಾಡಿಕೊಳ್ಳಬೇಕು. ಇಲ್ಲಿ ಆದೇಶಪ್ರಧಾನವಾದುದರಿಂದ ಅಪ್ರಧಾನವಾದ ಲ್ ಎಂಬುದನ್ನು ಹದಿನೆಂಟು ಬಾರಿ

ಆವೃತ್ತಿಮಾಡಿಕೊಳ್ಳಬೇಕು. ಈಗ ಭೂ ಧಾತುವಿನ ಮೇಲೆ ಈ ಹದಿನೆಂಟು ಪ್ರತ್ಯಯಗಳು ಬರುತ್ತವೆ ಎಂದಾಗುತ್ತದೆ. ಇವುಗಳಿಗೆ ಬರುವ ಸಾಮಾನ್ಯ ಸಂಜ್ಞೆಯನ್ನು ಹೇಳುತ್ತಾನೆ.

ಲಾದೇಶಕ್ಕೆ ಬರುವ ಸಂಜ್ಞೆಯನ್ನು ಹೇಳುವ ಸೂತ್ರ.

**೩೭೭. ಲಃ ಪರಸ್ಮೈಪದಮ್ ‖ ೧-೪-೯೯ ‖**

**ಲಾದೇಶಾಃ ಪರಸ್ಮೈಪದಸಂಜ್ಞಾಃ ಸ್ಯುಃ**

ದ್ವಿಪದ ಸೂತ್ರ. ಲಃ ಷಷ್ಠೀ ಆದೇಶವನ್ನು ತಿಳಿಸುತ್ತದೆ. ಸೂತ್ರಾರ್ಥ— ಲಕಾರ ಸ್ಥಾನಕ್ಕೆ ಬಂದ ಆದೇಶಗಳು ಪರಸ್ಮೈಪದವೆಂಬ ಸಂಜ್ಞೆಯನ್ನು ಹೊಂದುತ್ತವೆ. ಆಗ ತಿಬಾದಿ ಹದಿನೆಂಟು ಪ್ರತ್ಯಯಗಳಿಗೂ ಪರಸ್ಮೈಪದ ಸಂಜ್ಞೆ ಬರುತ್ತದೆ.

ಆತ್ಮನೇಪದಸಂಜ್ಞಾವಿಧಾಯಕ ಸೂತ್ರ.

**೩೭೮. ತಙಾನಾವಾತ್ಮನೇಪದಮ್ ‖ ೧-೪-೧೦೦ ‖**

**ತಙ್ ಪ್ರತ್ಯಾಹಾರಃ, ಶಾನಚ್‌ಕಾನಚೌ ಚೈತತ್ಸಂಜ್ಞಾಃ ಸ್ಯುಃ ‖ ಪೂರ್ವಸಂಜ್ಞಾಪವಾದಃ ‖**

ತಙಾನೌ, ಆತ್ಮನೇಪದಮ್ ‖ ದ್ವಿಪದ ಸೂತ್ರ. ತಙ್‌ಚ ಆನಶ್ಚ ತಙಾನೌ। ತಙ್ ಪ್ರತ್ಯಾಹಾರ. ತ, ಆತಾಂ, ಝ | ಥಾಸ್, ಆಥಾಮ್, ಧ್ವಮ್ | ಇಟ್, ವಹಿ, ಮಹಿಙ್, ಇಲ್ಲಿ ತದಿಂದ ಙ್‌ವರೆಗೆ ಇರುವ ಒಂಭತ್ತು ಪ್ರತ್ಯಯಗಳು. ಶಾನಚ್, ಕಾನಚ್‌ಗಳಲ್ಲಿ ಇತ್‌ಗಳೆಲ್ಲಾ ಲುಪ್ತವಾದ ಮೇಲೆ ಆನ ಉಳಿಯುವುದರಿಂದ ಸೂತ್ರದಲ್ಲಿರುವ ಆನ ಎಂಬುದರಿಂದ ಎರಡು ಪ್ರತ್ಯಯಗಳನ್ನೂ ತೆಗೆದುಕೊಳ್ಳಬೇಕು. ಸೂತ್ರಾರ್ಥ—ತ ಮುಂತಾದ ಒಂಭತ್ತು ಪ್ರತ್ಯಯಗಳೂ ಶಾನಚ್ ಕಾನಚ್‌ಗಳೂ ಆತ್ಮನೇಪದವೆಂಬ ಸಂಜ್ಞೆಯನ್ನು ಹೊಂದುತ್ತವೆ. ತಙ್ (೯) ಹಿಂದಿನ ತಿಬಾದಿಗಳಲ್ಲಿ ಸೇರಿರುವುದರಿಂದ ಪೂರ್ವಸೂತ್ರದಿಂದ ಪರಸ್ಮೈಪದ ಸಂಜ್ಞೆ ಬರುತ್ತಿರುವಾಗ ಈ ಸೂತ್ರದಿಂದ ಅವುಗಳಿಗೆ ಆತ್ಮನೇಪದ ಸಂಜ್ಞೆ ಹೇಳಿರುವುದರಿಂದ ಇದು ಪೂರ್ವಸೂತ್ರಕ್ಕೆ ಅಪವಾದ. ಆಗ ಆ ಸೂತ್ರದಿಂದ ಪರಸ್ಮೈಪದ ಸಂಜ್ಞೆಯು ಕೇವಲ ತಿಬಾದಿ ಒಂಭತ್ತಕ್ಕೆ ಮಾತ್ರವೆಂದು ತಿಳಿಯಬೇಕು. ಹದಿನೆಂಟರಲ್ಲಿ ಮೊದಲಿನ ಒಂಭತ್ತು ಪರಸ್ಮೈಪದವೆಂದೂ ಕೊನೆಯ ಒಂಭತ್ತು ಆತ್ಮನೇಪದವೆಂದೂ ತಿಳಿಯಬೇಕು.

ಆತ್ಮನೇಪದಪ್ರತ್ಯಯ ಹೊಂದುವ ಧಾತುವನ್ನು ಹೇಳುತ್ತಾನೆ.

**೩೭೯. ಅನುದಾತ್ತಙಿತ ಆತ್ಮನೇಪದಮ್ ‖ ೧-೩-೧೨ ‖**

**ಅನುದಾತ್ತೇತೋ ಙಿತಶ್ಚ ಧಾತೋರಾತ್ಮನೇಪದಂ ಸ್ಯಾತ್ ‖**

ದ್ವಿಪದ ಸೂತ್ರ. ಅನುದಾತ್ತಶ್ಚ ಙ್‍ಚ । ಅನುದಾತ್ತಙೌ. ತೌ ಇತೌ ಯಸ್ಯ ಸಃ । ಅನುದಾತ್ತಙಿತ್ ತಸ್ಮಾತ್—ಅನುದಾತ್ತಙಿತಃ ದ್ವಂದ್ವದ ಕೊನೆಯಲ್ಲಿ ಇತ್ ಪದವಿರುವುದರಿಂದ ಅದು ಎರಡರಲ್ಲಿಯೂ ಅನ್ವಯ ಹೊಂದುತ್ತದೆ. ಅನುದಾತ್ತ ಇತ್ತಾದುದು, ಙ್‍ಕಾರ ಇತ್ತಾದುದು. 'ಭೂವಾದಯೋ ಧಾತವಃ' ಸೂತ್ರದಿಂದ 'ಧಾತವಃ' ಪದ ಅನುವೃತ್ತವಾಗಿ ಪಂಚಮ್ಯಂತವಾಗಿ ಪರಿಣತವಾಗುತ್ತದೆ. ಅದಕ್ಕೆ ಅನುದಾತ್ತೇತ್ತಿನಲ್ಲಿಯೂ, ಙಿತ್ತಿನಲ್ಲಿಯೂ ಕ್ರಮವಾಗಿ ಅನ್ವಯ ಸೂತ್ರಾರ್ಥ—ಅನುದಾತ್ತ ಇತ್ತಾದ ಧಾತುವಿನ ಮೇಲೂ, ಙಕಾರ ಇತ್ತಾದ ಧಾತುವಿನ ಮೇಲೂ ಆತ್ಮನೇಪದ ಸಂಜ್ಞೆಯುಳ್ಳ ಪ್ರತ್ಯಯಗಳು ಬರುತ್ತವೆ. ಭೂ ಧಾತು ಇವೆರಡರಲ್ಲಿ ಯಾವುದೂ ಆಗಿಲ್ಲ. ಙಿತ್ತಾದ ಧಾತುಗಳು ಶೀಙ್. ವೃಙ್ ಮುಂತಾದವುಗಳು. ಅನುದಾತ್ತ ಇತ್ತಾದ ಧಾತುಗಳು—ಏಧ, ಭಾಸ, ದ್ಯುತ ಇತ್ಯಾದಿಗಳು.

ಉಭಯಪದವನ್ನು ಹೊಂದುವ ಧಾತುವನ್ನು ಹೇಳುವ ಸೂತ್ರ.

೩೮೦. ಸ್ವರಿತಞಿತಃ, ಕರ್ತ್ರಭಿಪ್ರಾಯೇ, ಕ್ರಿಯಾಫಲೇ ॥ ೧-೩-೭೨ ॥

ಸ್ವರಿತೇತೋ ಞಿತಶ್ಚ ಧಾತೋರಾತ್ಮನೇಪದಂ ಸ್ಯಾತ್ ಕರ್ತೃಗಾಮಿನಿ ಕ್ರಿಯಾಫಲೇ ॥

ತ್ರಿಪದ ಸೂತ್ರ. ಸ್ವರಿತಶ್ಚ ಞ್‍ಚ ಸ್ವರಿತಞೌ । ತೌ ಇತೌ ಯಸ್ಯ ಸಃ । ಸ್ವರಿತ ಞಿತ್ । ತಸ್ಮಾತ್. ಸ್ವರಿತ ಇತ್ತಾದ ಧಾತು, ಞಕಾರ ಇತ್ತಾದ ಧಾತು. ಹಿಂದಿನಂತೇ ದ್ವಂದ್ವದ ಕೊನೆಯಲ್ಲಿ ಇತ್ ಹೇಳಿದುದರಿಂದ ಉಭಯಾನ್ವಯ. ಕರ್ತಾರಂ ಅಭಿಪ್ರೈತಿ ಇತಿ ಕರ್ತ್ರಭಿಪ್ರಾಯಂ । ತಸ್ಮಿನ್. ಕರ್ತ್ರಭಿಪ್ರಾಯೇ । ಕರ್ತೃವನ್ನು ಹೊಂದುತ್ತಿರುವಾಗ ಎಂದರ್ಥ. ಸೂತ್ರಾರ್ಥ—ಸ್ವರಿತ ಇತ್ತಾದ ಧಾತುವಿನ ಮೇಲೂ, ಞಕಾರ ಇತ್ತಾದ ಧಾತುವಿನ ಮೇಲೂ ಧಾತ್ವರ್ಥ ಕ್ರಿಯಾಫಲವು ಕರ್ತೃವನ್ನು ಹೊಂದುತ್ತಿದ್ದರೆ ಆತ್ಮನೇಪದ ಪ್ರತ್ಯಯಗಳು ಬರುತ್ತವೆ. 'ವೇತನೇನ ಯಜ್ಞದತ್ತಭೃತ್ಯಃ ದೇವದತ್ತಃ ಪಚತಿ'—ಸಂಬಳ ತೆಗೆದುಕೊಂಡು ಯಜ್ಞದತ್ತನ ಸೇವಕನಾದ ದೇವದತ್ತನು ಅಡಿಗೆಮಾಡುತ್ತಾನೆ. ಇಲ್ಲಿ ಅಡಿಗೆಯ ಫಲ ತೃಪ್ತಿ. ಇದು ಯಜಮಾನನಾದ ಯಜ್ಞದತ್ತನಿಗೆ. ದೇವದತ್ತನಿಗೆ ಸಂಬಳವೇ ಫಲ. ಆದುದರಿಂದ ಕರ್ತೃವಾದ ದೇವದತ್ತನನ್ನು ಫಲಹೊಂದದಿರುವುದರಿಂದ ಇಲ್ಲಿ ಆತ್ಮನೇಪದ ಬಂದಿಲ್ಲ. ಫಲವಾದ ತೃಪ್ತಿಯೂ ಅವನನ್ನು ಹೊಂದುವುದಾದರೆ ಅಲ್ಲಿ 'ದೇವದತ್ತಃ ಪಚತೇ' ಎಂದೇ ಪ್ರಯೋಗಿಸಬೇಕು. ಞಿತ್ತಾದ ಧಾತುಗಳು. ಕೃಞ್, ಭೃಞ್ ಇತ್ಯಾದಿ. ಇವುಗಳ ಮೇಲೆ ಫಲವನ್ನು ನೋಡಿ ನಿಶ್ಚಯಿಸಬೇಕು. ಆದರೆ ಈಗ ಈ ಫಲವಿಚಾರವಿಲ್ಲದೆ ಉಭಯಪದವನ್ನೂ ಪ್ರಯೋಗಿಸುತ್ತಾರೆ. ಭೂ ಧಾತುವು ಇವೆರಡು ನಿಯಮಗಳಿಗೂ ಒಳಪಡುವುದಿಲ್ಲ.

ಪರಸ್ಮೈಪದವನ್ನು ಹೊಂದುವ ಧಾತುವನ್ನು ಹೇಳುವ ಸೂತ್ರ.

**೩೮೧. ಶೇಷಾತ್, ಕರ್ತರಿ, ಪರಸ್ಮೈಪದಮ್ || ೧-೩-೭೮ ||**

**ಆತ್ಮನೇಪದನಿಮಿತ್ತಹೀನಾತ್ ಧಾತೋಃ ಕರ್ತರಿ ಪರಸ್ಮೈಪದಂ ಸ್ಯಾತ್||**

ತ್ರಿಪದ ಸೂತ್ರ. ಉಕ್ತಾದನ್ಯಃ ಶೇಷಃ || ಹಿಂದೆ ಹೇಳಿದ್ದನ್ನು ಬಿಟ್ಟು ಉಳಿದದ್ದು ಯಾವುದಿದೆಯೋ ಅದು ಶೇಷ. ಆತ್ಮನೇಪದ ಪ್ರತ್ಯಯ ಬರಬೇಕಾದರೆ ನಿಮಿತ್ತಗಳು ಹಿಂದೆ ಹೇಳಿವೆ. ಈಗ ಶೇಷವೆಂದರೆ ಆ ನಿಮಿತ್ತವಿಲ್ಲದ ಧಾತುಗಳೆಂದು ತಿಳಿಯಬೇಕು. ಸೂತ್ರಾರ್ಥ—ಆತ್ಮನೇಪದಕ್ಕೆ ನಿಮಿತ್ತವಿಲ್ಲದ ಧಾತುವಿನ ಮೇಲೆ ಕರ್ತ್ರರ್ಥದಲ್ಲಿ ಪರಮಸ್ಮೈಪದ ಪ್ರತ್ಯಯಗಳು ಬರುತ್ತವೆ. ಅನುದಾತ್ತ ಇತ್ತಿಲ್ಲದ ಙಿತ್ತಾಗದ ಧಾತುಗಳಿಗೂ, ಸ್ವರಿತ ಞಿತ್ತಾದ ಧಾತುಗಳಲ್ಲಿ ಫಲವು ಕರ್ತೃವನ್ನು ಹೊಂದದಿರುವಾಗಲೂ ಪರಸ್ಮೈಪದಗಳು ಬರುತ್ತವೆ. ಪ್ರಕೃತ ಭೂ ಧಾತುವು ಈ ಯಾವ ನಿಮಿತ್ತವನ್ನೂ ಹೊಂದಿಲ್ಲವಾದುದರಿಂದ ತಿಬಾದಿ ಒಂಭತ್ತು ಪರಸ್ಮೈಪದ ಪ್ರತ್ಯಯಗಳು ಮಾತ್ರ ಬರುತ್ತವೆ. ಭೂ ಧಾತುವಿನ ಪರದಲ್ಲಿರುವ ಲಕಾರಕ್ಕೆ ಸಾಮಾನ್ಯವಾಗಿ ಈ ಒಂಭತ್ತೂ ಏಕಕಾಲದಲ್ಲಿ ಪ್ರಾಪ್ತವಾದರೆ ಅವುಗಳಲ್ಲಿ ವಿವೇಕವನ್ನು ಹೇಳುತ್ತಾನೆ.

ಪ್ರಥಮ ಮುಂತಾದ ಪುರುಷಸಂಜ್ಞೆಯನ್ನು ಹೇಳುವ ಸೂತ್ರ.

**೩೮೨. ತಿಙಃ, ತ್ರೀಣಿ, ತ್ರೀಣಿ, ಪ್ರಥಮಮಧ್ಯಮೋತ್ತಮಾಃ | || ೧-೪-೧೦೧ ||**

**ತಿಙ ಉಭಯೋಃ ಪದಯೋಸ್ತ್ರಯಸ್ತ್ರಿಕಾಃ ಕ್ರಮಾದೇತ್ಸಂಜ್ಞಾಃ ಸ್ಯುಃ||**

ನಾಲ್ಕು ಪದಗಳುಳ್ಳ ಸೂತ್ರ. ಸೂತ್ರಾರ್ಥ—ತಿಙಿನಲ್ಲಿರುವ ಪರಸ್ಮೈಪದ, ಆತ್ಮನೇಪದಗಳ ಮೂರು ಮೂರು ಗುಂಪುಗಳು ಕ್ರಮವಾಗಿ ಪ್ರಥಮಪುರುಷ, ಮಧ್ಯಮಪುರುಷ, ಉತ್ತಮಪುರುಷ ಸಂಜ್ಞೆಯನ್ನು ಹೊಂದುತ್ತವೆ. ಇಲ್ಲಿ ತಿಬಾದಿಗಳನ್ನು ಮೂರು ಮೂರಾಗಿ ವಿಭಾಗಿಸಿದರೆ ಆರು ಮೂರರ ಗುಂಪಾಗುತ್ತದೆ. ಸಂಜ್ಞೆ ಮೂರು ಹೇಳಿದೆ. ಆಗ ಯಥಾಸಂಖ್ಯ ಬರುವುದಿಲ್ಲ. ಆದುದರಿಂದ ಪರಸ್ಮೈಪದದ ಒಂಭತ್ತು, ಆತ್ಮನೇಪದದ ಒಂಭತ್ತು ಮೊದಲು ವಿಂಗಡಿಸಿಕೊಳ್ಳಬೇಕು. ಅಲ್ಲಿ ಮೂರು ಮೂರರ ಗುಂಪು ಮೂರೇ ಆಗುತ್ತದೆ. ಆಗ ಯಥಾಸಂಖ್ಯ ಬರುವುದರಿಂದ ಮೂರು ಸಂಜ್ಞೆ ಕ್ರಮವಾಗಿ ಬರುತ್ತದೆ.

**ಪರಸ್ಮೈಪದದಲ್ಲಿ:** ಪ್ರಥಮಪುರುಷ (ಅವನು, ಅವಳು, ಅದು) ತಿಪ್-ತಸ್-ಝಿ|| ಮಧ್ಯಮಪುರುಷ (ನೀನು) ಸಿಪ್-ಥಸ್-ಥ|| ಉತ್ತಮಪುರುಷ (ನಾನು)

ಮಿಪ್-ವಸ್-ಮಸ್ || ಆತ್ಮನೇಪದದಲ್ಲಿ: ಪ್ರಥಮಪುರುಷ ತ-ಆತಾಂ-ಝ || ಮಧ್ಯಮಪುರುಷ ಥಾಸ್-ಆಥಾಮ್-ಧ್ವಮ್ || ಉತ್ತಮಪುರುಷ ಇಟ್-ವಹಿ-ಮಹಿಙ್ || ಹೀಗೆ ಈ ಸಂಜ್ಞೆಗಳನ್ನು ತಿಳಿಯಬೇಕು.

ಈಗ ಪುರುಷದಲ್ಲಿಯೂ ಏಕಕಾಲದಲ್ಲಿ ಮೂರು ಪ್ರತ್ಯಯಗಳು ಪ್ರಾಪ್ತವಾದರೆ ಅವುಗಳಲ್ಲಿ ವಚನನಿಯಮದಿಂದ ವಿಭಾಗ ಹೇಳುತ್ತಾನೆ.

### ಪ್ರಥಮಾದಿಪುರುಷಗಳಲ್ಲಿ ವಚನನಿಯಮ ಹೇಳುವ ಸೂತ್ರ

**೩೮೩. ತಾನ್ಯೇಕವಚನದ್ವಿವಚನಬಹುವಚನಾನ್ಯೇಕಶಃ ||೧-೪-೧೦೨||**

**ಲಬ್ಧಪ್ರಥಮಾದಿಸಂಜ್ಞಾನಿ ತಿಙಸ್ತ್ರೀಣಿ ತ್ರೀಣಿ ಪ್ರತ್ಯೇಕಮೇಕವಚನಾದಿ ಸಂಜ್ಞಾನಿ ಸ್ಯುಃ ||**

ತ್ರಿಪದಸೂತ್ರ. ತಚ್ಛಬ್ದವು ಯಾವಾಗಲೂ ಪೂರ್ವಪರಾಮರ್ಶ ಮಾಡುತ್ತದೆ. ಈ ಸೂತ್ರದ ಹಿಂದೆ ತಿಙಿನ ಮೂರು ಮೂರರ ಗುಂಪಿಗೆ ಪ್ರಥಮಾದಿ ಸಂಜ್ಞೆ ಹೇಳಿದೆ. ಅದನ್ನು ಇಲ್ಲಿ ತೆಗೆದುಕೊಳ್ಳಬೇಕು. ಏಕಶಃ ಎಂಬುದಕ್ಕೆ ಪ್ರತ್ಯೇಕವೆಂದರ್ಥ. ಸೂತ್ರಾರ್ಥ—ಪ್ರಥಮ, ಮಧ್ಯಮ, ಉತ್ತಮ ಸಂಜ್ಞೆಯನ್ನು ಹೊಂದಿದ ತಿಬಾದಿ ಮೂರು ಮೂರರ ಗುಂಪಿನಲ್ಲಿ (೬) ಪ್ರತಿಯೊಂದೂ ಮೂರರ ಸಮುದಾಯದಲ್ಲಿ ಕ್ರಮವಾಗಿ ಏಕವಚನ, ದ್ವಿವಚನ, ಬಹುವಚನ ಸಂಜ್ಞೆ ಬರುತ್ತದೆ. ಪರಸ್ಮೈಪದದಲ್ಲಿ ಮೂರರ ಮೂರು ಗುಂಪು ಇದೆ. ತಿಪ್, ತಸ್, ಝಿ—ಇದು ಪ್ರಥಮ ಪುರುಷ. ಇಲ್ಲಿ ತಿಪ್ ಏಕವಚನ; ತಸ್ ದ್ವಿವಚನ; ಝಿ ಬಹುವಚನ. ಹೀಗೆ ಉಳಿದ ಐದು ಮೂರರ ಗುಂಪಿನಲ್ಲಿ ಈ ವಚನಗಳನ್ನು ತಿಳಿದುಕೊಳ್ಳಬೇಕು. ಸಿಪ್ ಏಕವಚನ; ಥಸ್ ದ್ವಿವಚನ; ಥ ಬಹುವಚನ ಇತ್ಯಾದಿ. ಇನ್ನು ಮುಂದೆ ಯಾವ ಕರ್ತೃವನ್ನು ಈ ಪುರುಷಗಳು ಹೇಳುತ್ತವೆಯೆಂಬುದನ್ನು ವಿವರಿಸುತ್ತಾನೆ.

### ಮಧ್ಯಮಪುರುಷವನ್ನು ಹೇಳುವ ಸೂತ್ರ.

**೩೮೪. ಯುಷ್ಮದ್ಯುಪಪದೇ ಸಮಾನಾಧಿಕರಣೇ ಸ್ಥಾನಿನ್ಯಪಿ ಮಧ್ಯಮಃ || ೧-೪-೧೦೫ ||**

**ತಿಙ್‌ವಾಚ್ಯಕಾರಕವಾಚಿನಿ ಯುಷ್ಮದಿ ಪ್ರಯುಜ್ಯಮಾನೇಽಪ್ರಯುಜ್ಯಮಾನೇಚ ಮಧ್ಯಮಃ ||**

ಯುಷ್ಮದಿ, ಉಪಪದೇ, ಸಮಾನಾಧಿಕರಣೇ, ಸ್ಥಾನಿನಿ, ಅಪಿ, ಮಧ್ಯಮಃ || ಆರು ಪದಗಳುಳ್ಳ ಸೂತ್ರ. ಸೂತ್ರಾರ್ಥ—ತಙ್ ಪ್ರತ್ಯಯದಿಂದ ಹೇಳಲ್ಪಡುವ

ಕಾರಕವನ್ನೇ ಯುಷ್ಮದ್ ಶಬ್ದವು ಹೇಳುವಾಗ ಆ ಯುಷ್ಮದ್ ಶಬ್ದವನ್ನು ಸಮೀಪದಲ್ಲಿ ಉಚ್ಚರಿಸಿದರೂ, ಉಚ್ಚರಿಸದಿದ್ದರೂ ಮಧ್ಯಮಪುರುಷ ಪ್ರತ್ಯಯಗಳು ಬರುತ್ತವೆ. 'ಉಪೋಚ್ಚರಿತಂ ಪದಂ ಉಪಪದಮ್' — ಸಮೀಪದಲ್ಲಿ ಉಚ್ಚರಿಸಿದ ಪದಕ್ಕೆ ಉಪಪದವೆಂದು ಹೆಸರು. ಸಮಾನಂ ಅಧಿಕರಣಂ ವಾಚ್ಯಂ ಯಸ್ಯ ಸಃ ಸಮಾನಾಧಿಕರಣಃ; ಎರಡು ಶಬ್ದಗಳಿಗೂ ಒಂದೇ ವಾಚ್ಯ—ಅರ್ಥವಾದರೆ ಆಗ ಅವು ಸಮಾನಾಧಿಕರಣಗಳು. ಭವಸಿ ಎಂಬಲ್ಲಿ ಯುಷ್ಮಚ್ಛಬ್ದಕ್ಕೂ ಸಿಪಿಗೂ ಸಾಮಾನಾಧಿಕರಣ್ಯವಿದೆ. ಯುಷ್ಮಚ್ಛಬ್ದವೂ ಸಿಪ್ ಪ್ರತ್ಯಯವೂ ಒಂದೇ ಕರ್ತೃಕಾರಕವನ್ನು ಹೇಳುತ್ತವೆ. ಯುಷ್ಮದರ್ಥವೂ ಸಿಬರ್ಥವೂ ಒಂದೇ ಆಗಿರುವಾಗ ಸಿಪ್ ಬರುತ್ತದೆ. ದ್ವಿತ್ವಾದಿಯಲ್ಲಿಯೂ ಹೀಗೆ ತಿಳಿಯಬೇಕು. ತಿಙ್‌ನಿಂದ ವಾಚ್ಯವಾದ ಕಾರಕವೆಂದರೆ ನೀನು ಎಂದರ್ಥ. ಅದನ್ನೇ ಯುಷ್ಮದ್ ಹೇಳುತ್ತದೆ. ಹೀಗೆ ಹೇಳುವಾಗ ಯುಷ್ಮಚ್ಛಬ್ದವನ್ನು ಸಮೀಪದಲ್ಲಿ ಉಚ್ಚರಿಸಬೇಕೆಂಬ ನಿಯಮವಿಲ್ಲ. ಸ್ಥಾನಿನ್ಯಪಿ ಎಂಬುದರಿಂದ ಆ ವಿಷಯ ವ್ಯಕ್ತವಾಗುತ್ತದೆ. ಸ್ಥಾನವೆಂದರೆ ಪ್ರಸಕ್ತಿ. ಪ್ರಸಕ್ತಿಯೆಂದರೆ ಅದರ ಅರ್ಥ ತೋರುವಾಗ ಅದನ್ನು ಪ್ರಯೋಗಿಸದಿರುವುದು. ಭವಸಿ ಎಂದೊಡನೆಯೇ ನೀನು ಇರುತ್ತಿ ಎಂಬ ಅರ್ಥ ಜಾಗ್ರತೆಯಾಗಿ ತಿಳಿಯುತ್ತದೆ. 'ತ್ವಂ ಭವಸಿ' ಹೀಗೆ ಹೇಳಿದರೂ ವಿಶೇಷವೇನೂ ಇಲ್ಲ. ಆದುದರಿಂದ ಹೇಳಿದರೂ ಹೇಳದಿದ್ದರೂ ಯಾವ ವ್ಯತ್ಯಾಸವೂ ಇಲ್ಲ. ಯುಷ್ಮದ್ ದ್ವಿತ್ವಸಂಖ್ಯೆಯನ್ನು ಹೇಳುವಾಗ ಆ ಅರ್ಥವನ್ನು ಥಸ್ ಪ್ರತ್ಯಯ ಹೇಳುತ್ತದೆ. ಹಾಗೇ ಥ ಬಹುವಚನವನ್ನು ಹೇಳುತ್ತದೆ. ಉತ್ತಮಾದಿಗಳಲ್ಲಿಯೂ ಹೀಗೇ ವಿಶದವಾಗಿ ತಿಳಿಯಬೇಕು. ಆತ್ಮನೇಪದದಲ್ಲಿ ಥಾಸ್, ಆಥಾಂ, ಧ್ವಂ ಬರುತ್ತವೆ.

### ಉತ್ತಮಪುರುಷ ಹೇಳುವ ಸೂತ್ರ

೩೮೫. ಅಸ್ಮದ್ಯುತ್ತಮಃ ‖ ೧-೪-೧೦೭ ‖

ತಥಾ ಭೂತೇಽಸ್ಮದ್ಯುತ್ತಮಃ ‖

ಅಸ್ಮದಿ, ಉತ್ತಮಃ ‖ ದ್ವಿಪದ ಸೂತ್ರ. ಯುಷ್ಮದಿ, ಮಧ್ಯಮಃ ಎರಡು ಪದಗಳನ್ನು ಬಿಟ್ಟು ಹಿಂದಿನ ಸೂತ್ರವು ಅನುವೃತ್ತವಾಗುತ್ತದೆ. 'ತಿಙ್‌ವಾಚ್ಯಕಾರಕವಾಚಿನಿ ಅಸ್ಮದಿ ಪ್ರಯುಜ್ಯಮಾನೇಽಪ್ರಯುಜ್ಯಮಾನೇ ಚ ಉತ್ತಮಃ' ಎಂದಾಗುತ್ತದೆ. ಸೂತ್ರಾರ್ಥ—ತಿಙ್‌ನಿಂದ ಹೇಳಲ್ಪಟ್ಟ ಕಾರಕವನ್ನು ಅಸ್ಮಚ್ಛಬ್ದವು ಹೇಳುತ್ತಿರುವಾಗ ಆ ಅಸ್ಮಚ್ಛಬ್ದವು ಸಮೀಪದಲ್ಲಿ ಉಚ್ಚರಿಸಿದಾಗಲೂ ಉಚ್ಚರಿಸದಿರುವಾಗಲೂ ಉತ್ತಮಪುರುಷ ಪ್ರತ್ಯಯಗಳು ಬರುತ್ತವೆ. ಹಿಂದಿನಂತೇ ವಿವರವನ್ನು ತಿಳಿಯಬೇಕು. ಭವಾಮಿ ಎಂದೊಡನೆಯೇ ನಾನು (ಕರ್ತೃ) ಎಂದು ತಿಳಿಯುತ್ತದೆ. ಇಲ್ಲಿನ ಮಿಪ್ ಪ್ರತ್ಯಯ ಅದನ್ನು ತಿಳಿಸುತ್ತದೆ. ಅಹಂ ಭವಾಮಿ ಎಂದಾಗಲೂ

ಇದೇ ಅರ್ಥ ತೋರುತ್ತದೆ. ಮಿಪ್‌ನಿಂದಲೂ ಅಹಂ ಶಬ್ದದಿಂದಲೂ ಒಂದೇ ಅರ್ಥ (ಕಾರಕ) ತೋರುತ್ತದೆ. ಅಸ್ಮದಿನ ಏಕತ್ವ, ದ್ವಿತ್ವ, ಬಹುತ್ವ ತೋರುವಾಗ ಮಿಪ್, ವಸ್, ಮಸ್‌ಗಳು ಬರುತ್ತವೆ. ಹೀಗೇ ಆತ್ಮನೇಪದದಲ್ಲಿ ಇಟ್, ವಹಿ, ಮಹಿಙ್ ಬರುತ್ತವೆ.

ಪ್ರಥಮಪುರುಷ ಸಂಜ್ಞೆ ಹೇಳುವ ಸೂತ್ರ.

**೩೮೬. ಶೇಷೇ ಪ್ರಥಮಃ || ೧-೪-೧೦೮ ||**

**ಮಧ್ಯಮೋತ್ತಮಯೋರವಿಷಯೇ ಪ್ರಥಮಃ ಸ್ಯಾತ್ । ಭೂತಿ ಇತಿ ಸ್ಥಿತೇ ||**

ದ್ವಿಪದ ಸೂತ್ರ. ಸೂತ್ರಾರ್ಥ–ಹಿಂದೆ ಹೇಳಿದ ನಿಮಿತ್ತವಿಲ್ಲದಿರುವಾಗ ಅಂದರೆ ಮಧ್ಯಮಪುರುಷ ಪ್ರಥಮಪುರುಷಗಳು ಬಾರದಿರುವಾಗ ಪ್ರಥಮಪುರುಷ ಪ್ರತ್ಯಯ ಬರುತ್ತದೆ. ತಿಙ್‌ನಿಂದ ನೀನು, ನಾನು ರೂಪವಾದ ಕರ್ತೃ ಹೇಳದಿರುವಾಗ ನೀನು ನಾನು ಬಿಟ್ಟು ಉಳಿದ ಕರ್ತೃವನ್ನು ಹೇಳುವಾಗ ಪ್ರಥಮಪುರುಷವೆಂದರ್ಥ. ಅವನು ಅವಳು, ಅದು ಕರ್ತೃವಾದಾಗ ತಿಙ್ ಅದನ್ನು ಹೇಳಿದರೆ ಆಗ ಪ್ರಥಮಪುರುಷ. ಅಲ್ಲಿ ಏಕತ್ವ, ದ್ವಿತ್ವ. ಬಹುತ್ವ ತೋರುವಾಗ ಪರಸ್ಮೈಪದದಲ್ಲಿ ತಿಪ್, ತಸ್, ಝಿ; ಆತ್ಮನೇಪದದಲ್ಲಿ ತ, ಆತಾಂ, ಝ ಎಂಬ ಪ್ರತ್ಯಯಗಳು ಬರುತ್ತವೆ. ಈಗ ಭೂ + ಲ್ ಎಂದಿರುವಾಗ ಪ್ರಥಮಪುರುಷ ಏಕವಚನ ವಿವಕ್ಷಾ ಮಾಡಿದಾಗ ತಿಪ್ರತ್ಯಯ ಬರುತ್ತದೆ. ಭೂ + ತಿ ಎಂದಿರುವಾಗ ಕಾರ್ಯವಿಶೇಷ ಹೇಳುತ್ತಾನೆ.

ಸಾರ್ವಧಾತುಕ ಸಂಜ್ಞಾವಿಧಾಯಕ ಸೂತ್ರ.

**೩೮೭. ತಿಙ್‌ಶಿತ್ ಸಾರ್ವಧಾತುಕಮ್ || ೩-೪-೧೧೩ ||**

**ತಿಙಃ ಶಿತಶ್ಚ ಧಾತ್ವಧಿಕಾರೋಕ್ತಾ ಏತತ್ಸಂಜ್ಞಾಃ ಸ್ಯುಃ ||**

ದ್ವಿಪದ ಸೂತ್ರ. 'ತಿಙಶ್ಚ ಶಿತಶ್ಚ ತೇಷಾಂ ಸಮಾಹಾರಃ' ತಿಙ್‌ಶಿತ್. 'ಧಾತೋಃ' ಅಧಿಕಾರ. **ಸೂತ್ರಾರ್ಥ—ಧಾತ್ವಧಿಕಾರದಲ್ಲಿ ಹೇಳಿರುವ ತಿಙ್** ಪ್ರತ್ಯಯಗಳೂ ಶಕಾರ ಇತ್ತಾದ ಪ್ರತ್ಯಯಗಳೂ ಸಾರ್ವಧಾತುಕವೆಂಬ ಸಂಜ್ಞೆಯನ್ನು ಹೊಂದುತ್ತವೆ. 'ಧಾತೋಃ' ಅಧಿಕಾರವು ಮೂರನೇ ಅಧ್ಯಾಯದ ಒಂದನೇ ಪಾದದ ೯೧ನೇ ಸೂತ್ರ. ಇದರಿಂದ ಮುಂದೆ ಹೇಳಿದ ತಿಙ್ ಮತ್ತು ಶಿತ್ತಾದ ಪ್ರತ್ಯಯಗಳು ಈ ಸಂಜ್ಞೆಯನ್ನು ಹೊಂದುತ್ತವೆ.

ಶಪ್ ವಿಕರಣ ಹೇಳುವ ಸೂತ್ರ.

**೩೮೮. ಕರ್ತರಿ, ಶಪ್ || ೩-೧-೬೮ ||**

**ಕರ್ತ್ರರ್ಥೇ ಸಾರ್ವಧಾತುಕೇ ಪರೇ ಧಾತೋಃ ಶಪ್ ||**

ದ್ವಿಪದ ಸೂತ್ರ. 'ಸಾರ್ವಧಾತುಕೇ ಯಕ್' ಸೂತ್ರದಿಂದ 'ಸಾರ್ವಧಾತುಕೇ' ಅನುವೃತ್ತಿ. 'ಧಾತೋರೇಕಾಚಃ' — ಸೂತ್ರದಿಂದ 'ಧಾತೋಃ' ಅಧಿಕಾರ. ಸೂತ್ರಾರ್ಥ— ಕರ್ತ್ರರ್ಥದಲ್ಲಿ ಬಂದ ಸಾರ್ವಧಾತುಕ ಪರದಲ್ಲಿರುವಾಗ ಧಾತುವಿಗೆ ಶಪ್ ಪ್ರತ್ಯಯು ಬರುತ್ತದೆ. ಭೂ+ತಿ ಎಂಬಲ್ಲಿ ತಿ ಎಂಬುದು ಸಾರ್ವಧಾತುಕ. ಇದು ಕರ್ತ್ರರ್ಥದಲ್ಲಿ ಬಂದಿದೆ. ಇದು ಪರವಾದುದರಿಂದ ಭೂ ಧಾತುವಿನ ಪರಕ್ಕೆ ಶಪ್ ಬರುತ್ತದೆ. ಶಪಿನಲ್ಲಿ 'ಹಲಂತ್ಯಮ್' ಸೂತ್ರದಿಂದ ಪಕಾರ ಇತ್. ಲಶಕ್ವ ತದ್ಧಿತೇ' ಸೂತ್ರದಿಂದ ಶಕಾರ ಇತ್. ಅ ಉಳಿಯುತ್ತದೆ. ಆಗ ಭೂ+ಅ+ತಿ ಎಂದಾಗುತ್ತದೆ. ಇಲ್ಲಿ ಅ, ನಿಮಿತ್ತೀಕರಿಸಿ ಗುಣವನ್ನು ಹೇಳುತ್ತಾನೆ.

ಸಾರ್ವಧಾತುಕ ಆರ್ಧಧಾತುಕ ಪರವಾದಾಗ ಗುಣ ಹೇಳುವ ಸೂತ್ರ.

**೩೮೮. ಸಾರ್ವಧಾತುಕಾರ್ಧಧಾತುಕಯೋಃ ॥ ೭-೩-೮೪ ॥**

**ಅನಯೋಃ ಪರಯೋರಿಗಂತಾಙ್ಗಸ್ಯ ಗುಣಃ। ಅವಾದೇಶಃ। ಭವತಿ। ಭವತಃ ॥**

ಏಕಪದ ಸೂತ್ರ. ಸಾರ್ವಧಾತುಕಂ ಚ ಆರ್ಧಧಾತುಕಂ ಚ ಸಾರ್ವಧಾತುಕಾರ್ಧಧಾತುಕೇ. ತಯೋಃ ಸಾರ್ವಧಾತುಕಾರ್ಧಧಾತುಕಯೋಃ, ಸಪ್ತಮೀ ದ್ವಿವಚನ ಇವು ಪರವಾದಾಗ ಎಂದರ್ಥವಾಗುತ್ತದೆ. 'ಮಿದೇರ್ಗುಣಃ' ಸೂತ್ರದಿಂದ 'ಗುಣಃ' ಅನುವೃತ್ತಿ; 'ಅಂಗಸ್ಯ' ಅಧಿಕಾರ. ಗುಣವೃದ್ಧಿ ಶಬ್ದ ಹೇಳಿ ಎಲ್ಲಿ ಗುಣವೃದ್ಧಿ ವಿಧಾನಮಾಡುತ್ತಾನೋ ಅಲ್ಲಿ 'ಇಕಃ' ಎಂಬ ಷಷ್ಠ್ಯಂತ ಪದವು ಉಪಸ್ಥಿತವಾಗುತ್ತದೆ. (ಪರಿ-'ಇಕೋಗುಣವೃದ್ಧೀ') ಇಲ್ಲಿ ಗುಣಃ ಎಂದು ಹೇಳಿ ಗುಣ ವಿಧಿಸುವುದರಿಂದ 'ಇಕಃ' ಎಂಬ ಪದವು ಬರುತ್ತದೆ. ಅದು ಅಧಿಕಾರದಿಂದ ಬಂದಿರುವ 'ಅಂಗಸ್ಯ' ಎಂಬುದಕ್ಕೆ ವಿಶೇಷಣ. ತದಂತಲಾಭ. ಸೂತ್ರಾರ್ಥ—ಸಾರ್ವಧಾತುಕಾರ್ಧಧಾತುಕ ಪ್ರತ್ಯಯುಗಳು ಪರವಾದಾಗ ಇಗಂತವಾದ ಅಂಗಕ್ಕೆ ಗುಣಬರುತ್ತದೆ ತಿಙ್‌ಶಿತ್ ಸಾರ್ವಧಾತುಕವೆಂದು ಹೇಳಿದೆ. ಅರ್ಧಧಾತುಕ ಪ್ರತ್ಯಯುವನ್ನು ಮುಂದೆ ಹೇಳುತ್ತಾನೆ. ತಿಙ ಶಿತ್‌ಗಿಂತ ಭಿನ್ನವಾದ ಧಾತುವಿನಮೇಲೆ ವಿಹಿತವಾದ ಪ್ರತ್ಯಯು ಆರ್ಧಧಾತುಕ. 'ಅಲೋಂತ್ಯಸ್ಯ' ಪರಿಭಾಷೆಯಿಂದ ಅಂಗದ ಅಂತ್ಯ ಇಕ್ಕಿಗೆ ಗುಣ. ಭೂ+ಅ+ತಿ ಎಂದಿರುವಾಗ, ಅ ಶಿತ್ತಾದ ಪ್ರತ್ಯಯು. ಇಗಂತಾಂಗ ಭೂ. ಅದರ ಕೊನೆ ಊಕಾರಕ್ಕೆ ಗುಣ ಬಂದರೆ ಭೋ+ಅ+ತಿ ಎಂದಾಗುತ್ತದೆ. (ಸ್ಥಾನಸಾಮ್ಯದಿಂದ ಊಕಾರಕ್ಕೆ ಓಕಾರ ಗುಣ) ಓಕಾರಕ್ಕೆ ಅಚ್ ಪರವಾದುದರಿಂದ 'ಏಚೋಯವಾಯಾವಃ' ಸೂತ್ರದಿಂದ ಅವಾದೇಶ. ಭವ್+ಅ+ತಿ— ಭವತಿ. (ಅವನು ಆಗುತ್ತಾನೆ-ಇರುತ್ತಾನೆ) ದ್ವಿವಚನದಲ್ಲಿ ತಸ್ ಪ್ರತ್ಯಯು. 'ನ ವಿಭಕ್ತೌ ತುಸ್ಮಾಃ' ಸೂತ್ರದಿಂದ ಅಂತ್ಯದ ಸಕಾರಕ್ಕೆ ಇತ್ ಸಂಜ್ಞಾನಿಷೇಧ ಮಾಡಿರುವುದರಿಂದ ಸಕಾರ

ಲೋಪವಾಗುವುದಿಲ್ಲ. ಭೂ+ತಸ್. ಹಿಂದಿನಂತೆ 'ಕರ್ತರಿ ಶಪ್' ಸೂತ್ರದಿಂದ ಶಪ್. ಭೂ+ಅ+ತಸ್. 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ, ಅವಾದೇಶ. ಭವ ತಸ್. 'ಸಸಜುಷೋರು' ಸೂತ್ರದಿಂದ ಅಂತ್ಯ ಸಕಾರಕ್ಕೆ ರುತ್ವ. 'ಖರವಸಾನಯೋರ್ವಿಸರ್ಜನೀಯಃ' ಸೂತ್ರದಿಂದ ವಿಸರ್ಗ. ಭವತಃ. (ಇಬ್ಬರು ಆಗುತ್ತಾರೆ)

ಭೂ ಧಾತುವಿನ ಮೇಲೆ ಪ್ರಥಮಪುರುಷ ಬಹುವಚನ ವಿವಕ್ಷಾ ಮಾಡಿದಾಗ ಝಿ ಪ್ರತ್ಯಯ. ಹಿಂದಿನಂತೆ ಶಪ್ ವಿಕರಣ. ಗುಣ. ಭವ+ಝಿ ಎಂದಿರುವಾಗ ಝಿಗೆ ಅಂತಾದೇಶ ಹೇಳುತ್ತಾನೆ.

ಝಿಗೆ ಅಂತಾದೇಶ ಹೇಳುವ ಸೂತ್ರ.

೩೯೦. ಝೋಽನ್ತಃ ॥ ೭-೧-೩ ॥

ಪ್ರತ್ಯಯಾವಯವಸ್ಯ ಝಸ್ಯಾನ್ತಾದೇಶಃ ॥' ಅತೋಗುಣೇ । ಭವನ್ತಿ । ಭವಸಿ । ಭವಥಃ । ಭವಥ ॥

ಝಃ, ಅನ್ತಃ ॥ ದ್ವಿಪದ ಸೂತ್ರ. ಝಃ ಷಷ್ಠೀ ಅನ್ತಃ ಆದೇಶ. ಇಲ್ಲಿ ಅಕಾರ ಉಚ್ಚಾರಣಾರ್ಥ. 'ಆಯನೇಯೀನೀ' ಸೂತ್ರದಿಂದ 'ಪ್ರತ್ಯಯಾದೀನಾಮ್' ಅನುವೃತ್ತಿ. ಇಲ್ಲಿ ಪ್ರತ್ಯಯ ಎಂಬಲ್ಲಿ ಮಾತ್ರ ಸ್ವರಿತತ್ವವಿರುವುದರಿಂದ ಅಷ್ಟು ಮಾತ್ರ ಅನುವೃತ್ತವಾಗುತ್ತದೆ ಅದನ್ನು ಷಷ್ಠ್ಯಂತವಾಗಿ ವಿಪರಿಣಾಮ ಮಾಡಿಕೊಳ್ಳಬೇಕು. ಅದು ಅವಯವಷಷ್ಠೀ. ಸೂತ್ರಾರ್ಥ— ಪ್ರತ್ಯಯಾವಯವವಾದ ಝ್ ಎಂಬುದಕ್ಕೆ ಅನ್ತ್ ಆದೇಶ ಬರುತ್ತದೆ. ಅನ್ತ್ ಎಂಬುದಕ್ಕೆ ಝಿದ ಇಕಾರ ಸೇರಿಸಿದರೆ ಅನ್ತಿ ಎಂದಾಗುತ್ತದೆ. ಭವ+ಅನ್ತಿ ಎಂದಿರುವಾಗ ಅಕಾರಕ್ಕೆ ಗುಣವಾದ ಅಕಾರ (ಅ+ಅ—ಅ) ಪರವಾದುದರಿಂದ 'ಅತೋ ಗುಣೇ' (ಸೂ. ೨೭೬) ಸೂತ್ರದಿಂದ ಪರರೂಪಾದೇಶ—ಭವನ್ತಿ.

ಭವಸಿ. ಮಧ್ಯಮಪುರುಷೈಕವಚನವಿವಕ್ಷಾ ಮಾಡಿದಾಗ ಸಿಪ್ ಪ್ರತ್ಯಯ. 'ಹಲಂತ್ಯಮ್' ಸೂತ್ರದಿಂದ ಪಕಾರ ಇತ್. 'ತಸ್ಯ ಲೋಪಃ'ದಿಂದ ಅದಕ್ಕೆ ಲೋಪ. ಭೂ+ಅ+ಸಿ ಎಂದಿರುವಾಗ ಶಪ್ ವಿಕರಣ, ಗುಣ. ಅವಾದೇಶ. ಭೂ+ಅ+ಸಿ – ಭವಸಿ ॥ ಮಧ್ಯಮಪುರುಷ ದ್ವಿವಚನದಲ್ಲಿ ಥಸ್ ಪ್ರತ್ಯಯ. 'ನ ವಿಭಕ್ತೌ ತು ಸ್ಮಾಃ' ಸೂತ್ರದಿಂದ ಸಕಾರ ಇತ್ತಾಗುವುದಿಲ್ಲ. ಶಪ್, ಗುಣ, ಅವಾದೇಶ. ಭವಥಸ್. ಸಕಾರಕ್ಕೆ ರುತ್ವ, ವಿಸರ್ಗ. ಭವಥಃ ॥ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯ. ಭೂ+ಥ ಎಂದಿರುವಾಗ ಶಪ್, ಗುಣ, ಅವಾದೇಶ. ಭವಥ ॥

ಉತ್ತಮಪುರುಷ ಏಕವಚನ ವಿವಕ್ಷಾಮಾಡಿದಾಗ ಮಿಪ್ ಪ್ರತ್ಯಯ. ಪಕಾರ ‘ ಹಲಂತ್ಯಮ್ ’ ಸೂತ್ರದಿಂದ ಇತ್ತಾಗುತ್ತದೆ. ಭೂ+ಮಿ. ಹಿಂದಿನಂತೆ ಶಪ್, ಗುಣ, ಅವಾದೇಶ. ಭವ+ಮಿ ಎಂದಿರುವಾಗ ಅಂಗಕ್ಕೆ ದೀರ್ಘ ಹೇಳುತ್ತಾನೆ.

ಅದಂತಾಂಗಕ್ಕೆ ದೀರ್ಘ ಹೇಳುವ ಸೂತ್ರ.

೩೯೧. ಅತೋ, ದೀರ್ಘೋ, ಯಞಿ ॥ ೭-೩-೧೦೧ ॥

ಅತೋಽಙ್ಗಸ್ಯ ದೀರ್ಘೋ ಯಞಾದೌ ಸಾರ್ವಧಾತುಕೇ। ಭವಾಮಿ। ಭವಾವಃ। ಭವಾಮಃ ।। ಸಃ ಭವತಿ । ತೌ ಭವತಃ । ತೇ ಭವನ್ತಿ ।। ತ್ವಂ ಭವಸಿ । ಯುವಾಂ ಭವಥಃ ।। ಯೂಯಂ ಭವಥ ।। ಅಹಂ ಭವಾಮಿ । ಆವಾಂ ಭವಾವಃ । ವಯಂ ಭವಾಮಃ ।।

ತ್ರಿಪದ ಸೂತ್ರ. ‘ತುರುಸ್ತು ಶಮ್ಯಮಃ’ ಸೂತ್ರದಿಂದ ‘ಸಾರ್ವಧಾತುಕೇ’ ಅನುವೃತ್ತಿ. ಅದಕ್ಕೆ ಯಞಿ ಎಂಬ ಸಪ್ತಮ್ಯಂತ ವಿಶೇಷಣವಾದುದರಿಂದ ‘ಯಸ್ಮಿನ್ ವಿಧಿಃ’ ಪರಿಭಾಷೆಯಿಂದ ತದಾದಿಲಾಭ ಯಞಾದಿಸಾರ್ವಧಾತುಕ ಪರದಲ್ಲಿರುವಾಗ ಎಂದರ್ಥವಾಗುತ್ತದೆ. ‘ಅಂಗಸ್ಯ’ ಅಧಿಕಾರ. ಅತಃ ಅದಕ್ಕೆ ವಿಶೇಷಣ ತದಂತ ಲಾಭ. ಸೂತ್ರಾರ್ಥ–ಹ್ರಸ್ವ ಅಕಾರಾಂತವಾದ ಅಂಗಕ್ಕೆ ಯಞಾದಿಯಾದ ಸಾರ್ವ ಧಾತುಕಪರದಲ್ಲಿರುವಾಗ ದೀರ್ಘ ಬರುತ್ತದೆ. ಭವ+ಮಿ ಎಂದಿರುವಾಗ ಮಿ ತಿಙ್ ಆದುದರಿಂದ ಸಾರ್ವಧಾತುಕ ಅದು ಪರವಾದಾಗ ಅದಂತ ಅಂಗ ಭವ ಎಂಬುದಕ್ಕೆ ದೀರ್ಘ ಬಂದರೆ ಭವಾಮಿ ಎಂದಾಗುತ್ತದೆ. ಉತ್ತಮಪುರುಷ ದ್ವಿವಚನದಲ್ಲಿ ವಸ್ ಪ್ರತ್ಯಯ. ಭೂ+ವಸ್. ಹಿಂದಿನಂತೆ ಶಪ್, ಗುಣ, ಅವಾದೇಶ ಭವ+ವಸ್. ಈಗ ಹೇಳಿದ ಸೂತ್ರದಿಂದ ಭವ ಅಂಗಕ್ಕೆ ದೀರ್ಘ. ಭವಾವಸ್. ಸಕಾರಕ್ಕೆ ರುತ್ವ, ವಿಸರ್ಗ. ಭವಾವಃ ।। ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಹಿಂದಿನಂತೆ ಶಪ್, ಗುಣ, ಅವಾದೇಶ. ಅಂಗಕ್ಕೆ ದೀರ್ಘ. ರುತ್ವ. ವಿಸರ್ಗ. ಭವಾಮಃ ।। ಪುರುಷವ್ಯವಸ್ಥಾ ಹಿಂದೆ ಹೇಳಿದೆ. ಅದನ್ನು ಸ್ಪಷ್ಟಪಡಿಸಲು ಈಗ ಅರ್ಥನಿರ್ದೇಶದಿಂದ ಪ್ರಯೋಗ ತೋರಿಸುತ್ತಾನೆ.

**ಪ್ರಥಮಪುರುಷ :** ಸಃ ಭವತಿ—ಅವನು ಇರುತ್ತಾನೆ ತೌ ಭವತಃ—ಅವರಿಬ್ಬರು ಇರುತ್ತಾರೆ. ತೇ ಭವನ್ತಿ—ಅವರು ಇರುತ್ತಾರೆ.

**ಮಧ್ಯಮಪುರುಷ :** ತ್ವಂ ಭವಸಿ—ನೀನು ಇರುತ್ತೀ. ಯುವಾಂ ಭವಥಃ—ನೀವಿಬ್ಬರು ಇರುತ್ತೀರಿ. ಯೂಯಂ ಭವಥ—ನೀವು ಇರುತ್ತೀರಿ.

**ಉತ್ತಮಪುರುಷ :** ಅಹಂ, ಭವಾಮಿ—ನಾನು ಇರುತ್ತೇನೆ. ಆವಾಂ ಭವಾವಃ—ನಾವಿಬ್ಬರು ಇರುತ್ತೇವೆ. ವಯಂ ಭವಾಮಃ—ನಾವು ಇರುತ್ತೇವೆ.

ಹೀಗೆ ಪ್ರತಿಯೊಂದು ಲಕಾರದಲ್ಲಿಯೂ ಕಾಲವನ್ನು ನೋಡಿ ಅರ್ಥವ್ಯವಸ್ಥೆ ಮಾಡಿಕೊಳ್ಳಬೇಕು. ಅವನು, ನೀನು ಒಟ್ಟಿಗೆ ಬಂದಾಗ ಮಧ್ಯಮಪುರುಷವನ್ನೇ ಹೇಳಬೇಕು. ಅವನು, ನೀನು, ನಾನು ಮೂರು ಕರ್ತೃವಾದಾಗ ಉತ್ತಮಪುರುಷವನ್ನೇ ಹೇಳಬೇಕು. ಯಾವ ಎರಡು ಕರ್ತೃ ಬಂದಾಗಲೂ ಪರಪುರುಷವನ್ನೇ ಹೇಳಬೇಕು. ನೀನೂ ನಾನೂ ಕರ್ತೃವಾದಾಗ ಉತ್ತಮವೆಂದು ನಿರ್ಧರಿಸಬೇಕು. ಲಟ್, ಲಿಟ್, ಲುಟ್, ಲೃಟ್, ಲೇಟ್, ಲೋಟ್ ಎಂಬಲ್ಲಿ ಅಕಾರಾದಿ ಕ್ರಮದಿಂದ ಇತ್ ಸಂಜ್ಞೆಯುಳ್ಳ ಅಚ್ ಹೇಳಿದೆ. (ಅ, ಇ, ಉ, ಋ, ಏ, ಓ) ಹೀಗೆಯೇ ಲಙಾದಿಯಲ್ಲಿಯೂ ಅಕಾರಾದಿ ಕ್ರಮವಿದೆ. ಆ ಕ್ರಮವನ್ನು ಅನುಸರಿಸಿ ವ್ಯಾಖ್ಯಾನ ಮಾಡಿರುತ್ತಾರೆ. ಅದರಿಂದ ಮಧ್ಯೆ ಮಧ್ಯೆ ಯಾವ ಯಾವ ಕಾಲ ಬಂದರೂ ದೋಷವಿಲ್ಲ. ಲಟ್ ಆದಮೇಲೆ ಕ್ರಮಪ್ರಾಪ್ತವಾದುದು ಲಿಟ್. ಇಕಾರ ಟಕಾರ ಇತ್ತಾಗಿ ಲೋಪವಾಗುತ್ತವೆ. ಲಿಟನಿಂದ ವ್ಯಕ್ತವಾಗುವ ಕಾಲವನ್ನು ತೋರಿಸುತ್ತಾನೆ.

## ॥ ಲಿಟ್ ॥

ಲಿಟಸಿಂದ ತೋರುವ ಕಾಲವನ್ನು ಹೇಳುವ ಸೂತ್ರ.

೩೯೨. ಪರೋಕ್ಷೇ ಲಿಟ್ ॥ ೩-೨-೧೧೫ ॥

**ಭೂತಾನದ್ಯತನಪರೋಕ್ಷಾರ್ಥವೃತ್ತೇರ್ಧಾತೋರ್ಲಿಟ್ ಸ್ಯಾತ್ ಲಸ್ಯ ತಿಬಾದಯಃ ॥**

ದ್ವಿಪದ ಸೂತ್ರ. 'ಧಾತೋಃ' ಅಧಿಕಾರ. 'ಅನದ್ಯತನೇ ಲಙ್' ಸೂತ್ರದಿಂದ 'ಅನದ್ಯತನೇ' ಅನುವೃತ್ತಿ. 'ಭೂತೇ' ಅಧಿಕಾರ. **ಸೂತ್ರಾರ್ಥ**—ಭೂತಾನದ್ಯತನಪರೋಕ್ಷಾರ್ಥವನ್ನು ಕೊಡುವ ಧಾತುವಿನ ಮೇಲೆ ಲಿಟ್ ಬರುತ್ತದೆ. ಕಾಲದಲ್ಲಿ ಮೂರು ವಿಶೇಷಣ ತೋರುತ್ತದೆ. ಭೂತತ್ವ, ಅನದ್ಯತನತ್ವ, ಪರೋಕ್ಷತ್ವ. ಭೂತಕಾಲ ಪ್ರಸಿದ್ಧವಾಗಿದೆ. ವರ್ತಮಾನಧ್ವಂಸಪ್ರತಿಯೋಗಿ ಸಮಯ. ಅನದ್ಯತನವೆಂದರೆ ಈಗಿನ ರೈಲ್ವೆ ಸಮಯ ವ್ಯತಿರಿಕ್ತ ಸಮಯ. ಕಳೆದ ರಾತ್ರಿಯ ಅರ್ಧದಿಂದ ಬರುವ ರಾತ್ರಿಯ ಅರ್ಧದ ವರೆಗಿನ ಕಾಲ (೨೪ ಘಂಟೆ) ಅದ್ಯತನವೆನಿಸುತ್ತದೆ. ಅದಕ್ಕಿಂತ ಭಿನ್ನವಾದ ಕಾಲ ಅನದ್ಯತನ. ಇದು ಭೂತವೂ, ಭವಿಷ್ಯತ್ತೂ ಆಗಬಹುದು. ಗತರಾತ್ರಿಯರ್ಧದ ಹಿಂದಿನ ಕಾಲ ಅನದ್ಯತನಭೂತ. ಬರುವ ರಾತ್ರಿಯ ಅರ್ಧದ ಮುಂದಿನ ಕಾಲ ಅನದ್ಯತನ ಭವಿಷ್ಯತ್. ಅನದ್ಯತನ ಭೂತದಲ್ಲಿ ಲಿಟ್ ಬರುತ್ತದೆ. ಪರೋಕ್ಷ—'ಸಾಕ್ಷಾತ್ ಕೃತಮಿತ್ಯೇತಾದೃಶವಿಷಯತಾಶಾಲಿಜ್ಞಾನಾವಿಷಯತ್ವಮ್ ॥' ನಾನು ಇದನ್ನು ನೋಡಿದ್ದೇನೆ ಅಥವಾ ಅನುಭವಿಸಿದ್ದೇನೆ ಎಂಬ ಜ್ಞಾನಕ್ಕೆ ವಿಷಯವಾಗದಿರುವುದು. ನಮ್ಮ ಪ್ರತ್ಯಕ್ಷಕ್ಕೆ ವಿಷಯವಾಗದಿರುವುದೆಂದರ್ಥ

ಈ ಪರೋಕ್ಷವನ್ನು ನಾನಾ ರೀತಿಯಾಗಿ ಭಾಷ್ಯದಲ್ಲಿ ವಿವರಿಸಿರುತ್ತಾರೆ. ಇಂಥಾ ಪರೋಕ್ಷಾನದ್ಯತನಭೂತದಲ್ಲಿ ಲಿಟ್ ಬರುತ್ತದೆ. ಭೂ+ಲಿಟ್ ಎಂದಿರುವಾಗ ಲಕಾರಕ್ಕೆ ತಿಬಾದಿ ಆದೇಶ ಹಿಂದಿನಂತೆ ಬರುತ್ತವೆ. ಲಿಟಸಲ್ಲಿ ತಿಬಾದಿ ಒಂಭತ್ತಕ್ಕೂ ಒಂಭತ್ತು ಆದೇಶ ಸೂತ್ರದಿಂದ ಹೇಳುತ್ತಾನೆ.

ಲಿಟನ ತಿಬಾದಿಗಳಿಗೆ ಆದೇಶ ಹೇಳುವ ಸೂತ್ರ.

**೩೯೩. ಪರಸ್ಮೈಪದಾನಾಂ, ಣಲತುಸುಸ್ಥಲಥುಸಣಲ್ವಮಾಃ**
|| ೩-೪-೮೨ ||

**ಲಿಟಸ್ತಿಬಾದೀನಾಂ ನವಾನಾಂ ಣಲಾದಯಃ ಸ್ಯುಃ । ಭೂ + ಅ ಇತಿ ಸ್ಥಿತೇ।**

ದ್ವಿಪದ ಸೂತ್ರ. 'ಲಿಟಸ್ತಝಯೋರೇಶ್ ಇರೇಚ್' ಸೂತ್ರದಿಂದ ಲಿಟಃ ಅನುವೃತ್ತಿ. ಪರಸ್ಮೈಪದಗಳೆಂದರೆ ತಿಬಾದಿ ಒಂಭತ್ತು ಎಂದು ಹಿಂದೆ ಹೇಳಿದೆ. ಸೂತ್ರಾರ್ಥ — ಲಿಟಗೆ ಆದೇಶವಾಗಿ ಬಂದ ತಿಬಾದಿ ಒಂಭತ್ತು ಪರಸ್ಮೈಪದ ಪ್ರತ್ಯಯಗಳಿಗೆ ಣಲಾದಿ ಒಂಭತ್ತು ಆದೇಶವಾಗಿ ಬರುತ್ತವೆ. ಣಲ್‌ಚ, ಅತುಸ್‌ಚ ಉಸ್‌ಚ, ಥಲ್‌ಚ, ಅಥುಸ್‌ಚ, ಅಚ, ಣಲ್‌ಚ, ವಚ, ಮಚ, ಣಲತುಸುಸ್ಥಲಥುಸ ಣಲ್ವಮಾಃ ॥ ತಿಪಿಗೆ ಣಲ್, ತಸಿಗೆ ಅತುಸ್, ಝಿಗೆ ಉಸ್ । ಸಿಪಿಗೆ ಥಲ್, ಥಸಿಗೆ ಅಥುಸ್, ಥಕ್ಕೆ ಅ । ಮಿಪಿಗೆ ಣಲ್, ವಸಿಗೆ ವ, ಮಸ್‌ಗೆ ಮ ಬರುತ್ತವೆ.

ತಿಪಿಗೆ ಣಲ್ ಸರ್ವಾದೇಶವಾಗಿ ಬಂದರೆ ಪ್ರತ್ಯಯವಾಗುವುದರಿಂದ 'ಚುಟೂ' ಸೂತ್ರದಿಂದ ಣಕಾರಕ್ಕೂ, 'ಹಲಂತ್ಯಮ್' ಸೂತ್ರದಿಂದ ಲಕಾರಕ್ಕೂ ಇತ್ ಸಂಜ್ಞೆ ಬಂದು 'ತಸ್ಯ ಲೋಪಃ' ಸೂತ್ರದಿಂದ ಲೋಪವಾದರೆ ಅ ಉಳಿಯುತ್ತದೆ ಭೂ+ಅ ಎಂದಿರುವಾಗ ವುಕಾಗಮ ಹೇಳುತ್ತಾನೆ.

ಭೂ ಧಾತುವಿಗೆ ವುಕಾಗಮ ಹೇಳುವ ಸೂತ್ರ.

**೩೯೪. ಭುವೋ, ವುಗ್, ಲುಙ್‌ಲಿಟೋಃ || ೬-೪-೮೮ ||**

**ಭುವೋ ವುಗಾಗಮಃ ಸ್ಯಾತ್ ಲುಙ್‌ಲಿಟೋರಚಿ ||**

ತ್ರಿಪದ ಸೂತ್ರ. 'ಅಚಿಶ್ನುಧಾತುಭ್ರುವಾಂ' ಸೂತ್ರದಿಂದ ಅಚಿ ಅನುವೃತ್ತಿ. ಸೂತ್ರಾರ್ಥ—ಭೂ ಧಾತುವಿಗೆ ಲುಙ್‌ಲಿಟನ ಅಚ್ ಪರವಾದಾಗ ವುಕಾಗಮ ಬರುತ್ತದೆ. ವುಕ್ ಕಿತ್ತಾದುದರಿಂದ ಆಗಮವೆಂದು ತಿಳಿಯಬೇಕು. 'ಆದ್ಯಂತಾ ಟಕಿತಾ' ಸೂತ್ರದಿಂದ ಕಿತ್ತಾದುದರಿಂದ ಭೂವಿನ ಅಂತಾವಯವವಾಗಿ ಬರುತ್ತದೆ. ಊಕಾರದ ಅಂತಾವಯವ. ಆದರ ಕೊನೆಗೆ ಬಂದರೆ ಭೂವ್ ಎಂದಾಗುತ್ತದೆ. ವುಕಿನಲ್ಲಿ ಉಕಾರ ಉಚ್ಚಾರಣಾರ್ಥ. ವ್ ಉಳಿಯುವುದು. ಭೂವ್+ಅ ಎಂದಿರುವಾಗ ಲಿಟನಲ್ಲಿ ದ್ವಿತ್ವ ಹೇಳುತ್ತಾನೆ.

### ಲಿಟಿನಲ್ಲಿ ಧಾತುವಿನ ಏಕಾಚಿಗೆ ದ್ವಿತ್ವ ಹೇಳುವ ಸೂತ್ರ.

### ೩೯೫. ಲಿಟಿ ಧಾತೋರನಭ್ಯಾಸಸ್ಯ ॥ ೬–೧–೮ ॥

ಲಿಟಿ ಪರೇಽನಭ್ಯಾಸಧಾತ್ವವಯವಸ್ಯೈಕಾಚಃ ಪ್ರಥಮಸ್ಯ ದ್ವೇಸ್ತಃ, ಆದಿಭೂತಾದಚಃ ಪರಸ್ಯ ತು ದ್ವಿತೀಯಸ್ಯ ॥ ಭೂವ್ ಭೂವ್ ಅ ಇತಿ ಸ್ಥಿತೇ ॥

ಲಿಟಿ, ಧಾತೋಃ, ಅನಭ್ಯಾಸಸ್ಯ ॥ ತ್ರಿಪದ ಸೂತ್ರ. 'ಏಕಾಚೋ ದ್ವೇ ಪ್ರಥಮಸ್ಯ', 'ಅಜಾದೇರ್ದ್ವಿತೀಯಸ್ಯ' ಎರಡು ಅಧಿಕಾರಸೂತ್ರಗಳು ಇಲ್ಲಿ ಬರುತ್ತವೆ. 'ಏಕಃ ಅಚ್ ಯಸ್ಯ ಸಃ' ಏಕಾಚ್. ತಸ್ಯ ಏಕಾಚಃ ಒಂದು ಅಚ್‌ವುಳ್ಳ ಹಲ್‌ಸಮುದಾಯವೆಂದರ್ಥ. ಭೂವ್ ಇದು ಏಕಾಚ್. ಸೂತ್ರಾರ್ಥ—ಲಿಟ್ ಪರದಲ್ಲಿರುವಾಗ ಅಭ್ಯಾಸಭಿನ್ನವಾದ ಧಾತುವಿನ ಅವಯವವಾದ ಮೊದಲಿನ ಏಕಾಚಿಗೆ ದ್ವಿರುಚ್ಚಾರಣೆ ಬರುತ್ತದೆ. ಧಾತುವಿನ ಮೊದಲಿನ ಅವಯವವು ಅಜಾದಿಯಾಗಿದ್ದರೆ ಎರಡನೇ ಏಕಾಚಿಗೆ ದ್ವಿತ್ವ ಬರುತ್ತದೆ. ಪ್ರಕೃತ ಭೂವ್ ಎಂಬಲ್ಲಿ ಒಂದೇ ಏಕಾಚ್ ಇರುತ್ತದೆ. ಆದಿಯೂ, ಅಂತವೂ ಅದೇ ಆಗುತ್ತದೆ. ಆದಿಯಲ್ಲಿ ಅಚ್ ಇಲ್ಲ. ಅಭ್ಯಾಸವೆಂದರೆ ಮುಂದಿನ ಸೂತ್ರದಿಂದ ವಿವರಿಸುತ್ತಾನೆ. ಪ್ರಕೃತ ಲಿಟ್ ಪರವಾದಾಗ ದ್ವಿರುಚ್ಚಾರಣೆ ಬಂದರೆ ಭೂವ್ ಭೂವ್+ಅ ಎಂದಾಗುತ್ತದೆ. ಹೀಗಿರುವಾಗ ಮುಂದಿನ ಕಾರ್ಯ ಹೇಳಲು ಅಭ್ಯಾಸಸಂಜ್ಞೆ ಹೇಳುತ್ತಾನೆ.

### ಅಭ್ಯಾಸಸಂಜ್ಞೆ ಹೇಳುವ ಸೂತ್ರ.

### ೩೯೬. ಪೂರ್ವೋಽಭ್ಯಾಸಃ ॥ ೬–೧–೪ ॥

ಅತ್ರ ಯೇ ದ್ವೇ ವಿಹಿತೇ ತಯೋಃ ಪೂರ್ವೋಽಭ್ಯಾಸಸಂಜ್ಞಃ ಸ್ಯಾತ್ ॥

ಪೂರ್ವಃ ಅಭ್ಯಾಸಃ ॥ ದ್ವಿಪದ ಸೂತ್ರ. ದ್ವಿತ್ವ ಪ್ರಕರಣ ಎರಡು. ಆರನೇ ಅಧ್ಯಾಯದಲ್ಲಿ ಧಾತ್ವವಯವಕ್ಕೆ ದ್ವಿತ್ವ. ಎಂಟನೇ ಅಧ್ಯಾಯದಲ್ಲಿ ಪದಕ್ಕೆ ದ್ವಿತ್ವ. ಇದು ಆರನೇ ಅಧ್ಯಾಯದ ಸೂತ್ರ. ಆದುದರಿಂದ ಆರನೇ ಅಧ್ಯಾಯದ ದ್ವಿತ್ವ ವಿಷಯವೆಂದು ತಿಳಿಯಲು 'ಅತ್ರ' ಎಂದಿರುತ್ತಾನೆ. 'ಏಕಾಚೋ ದ್ವೇ ಪ್ರಥಮಸ್ಯ' ಸೂತ್ರದಿಂದ 'ದ್ವೇ' ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಸೂತ್ರಾರ್ಥ—ಷಾಷ್ಠದ್ವಿತ್ವಪ್ರಕರಣದಲ್ಲಿ ಯಾವುದು ದ್ವಿರುಚ್ಚಾರಣೆಯನ್ನು ಹೊಂದಿದೆಯೋ ಅಲ್ಲಿ ಪೂರ್ವಭಾಗಕ್ಕೆ ಅಭ್ಯಾಸವೆಂಬ ಸಂಜ್ಞೆ ಬರುತ್ತದೆ. ಭೂವ್ ಭೂವ್+ಅ ಎಂಬಲ್ಲಿ ಮೊದಲನೇ ಭೂವ್ ಅಭ್ಯಾಸವಾಗುತ್ತದೆ. ಈ ಅಭ್ಯಾಸ ಸಂಜ್ಞೆಗೆ ಪ್ರಯೋಜನ ಹೇಳುತ್ತಾನೆ.

2

ಅಭ್ಯಾಸದ ಹಲಿಗೆ ಲೋಪ ಹೇಳುವ ಸೂತ್ರ.

೩೯೭. ಹಲಾದಿಃ ಶೇಷಃ ‖ ೭-೪-೬೦ ‖

ಅಭ್ಯಾಸಸ್ಯ ಆದಿರ್ಹಲ್ ಶಿಷ್ಯತೇ ಅನ್ಯೇ ಹಲೋ ಲುಪ್ಯಂತೇ । ಇತಿ ವಲೋಪಃ ‖

ಹಲ್, ಆದಿಃ, ಶೇಷಃ ‖ ತ್ರಿಪದ ಸೂತ್ರ. 'ಅತ್ರ ಲೋಪೋಽಭ್ಯಾಸಸ್ಯ' ಸೂತ್ರದಿಂದ ಅಭ್ಯಾಸಸ್ಯ ಅನುವೃತ್ತಿ. ಶಿಷ್ಯತೇ ಇತಿ ಶೇಷಃ. ಕರ್ಮಾರ್ಥದಲ್ಲಿ ಘಞ್ ಪ್ರತ್ಯಯ. ಇತರ ನಿವೃತ್ತಿಯಾಗಿ ತಾನೊಂದು ಉಳಿಯುವುದೇ ಶೇಷ ಪದಾರ್ಥ. ಸೂತ್ರಾರ್ಥ—ಅಭ್ಯಾಸದ ಆದಿಯಲ್ಲಿರುವ ಹಲ್ ಉಳಿಯುತ್ತದೆ. ಇನ್ನುಳಿದ ಹಲ್ ಎಲ್ಲವೂ ಲೋಪವಾಗುತ್ತವೆ. ಭೂವ್ ಅಭ್ಯಾಸ. ಇಲ್ಲಿ ಆದಿಯ ಹಲ್ ಭಕಾರ. ಇತರ ಹಲ್ ವಕಾರ. ಅದು ಲೋಪವಾದರೆ ಭೂ ಭೂವ್+ಅ ಎಂದು ಉಳಿಯುತ್ತದೆ. ಈಗ ಅಭ್ಯಾಸಕ್ಕೆ ಹ್ರಸ್ವ ಹೇಳುತ್ತಾನೆ.

ಅಭ್ಯಾಸಕ್ಕೆ ಹ್ರಸ್ವ ಹೇಳುವ ಸೂತ್ರ.

೩೯೮. ಹ್ರಸ್ವಃ ‖ ೭-೪-೫೯ ‖

ಅಭ್ಯಾಸಸ್ಯಾಚೋ ಹ್ರಸ್ವಃ ಸ್ಯಾತ್ ‖

ಏಕಪದ ಸೂತ್ರ. ಹ್ರಸ್ವಕ್ಕೆ ಸ್ಥಾನಿ ಹೇಳದಿರುವುದರಿಂದ 'ಹ್ರಸ್ವಃ' ಎಂದು ಎಲ್ಲಿ ಹ್ರಸ್ವವಿಧಾನ ಮಾಡುತ್ತಾನೋ ಅಲ್ಲಿ 'ಅಚಃ' ಎಂಬ ಷಷ್ಠ್ಯಂತ ಪದವು ಉಪಸ್ಥಿತವಾಗುತ್ತದೆ ಎಂದು ತಿಳಿಸುವ 'ಅಚಶ್ಚ' ಪರಿಭಾಷೆಯಿಂದ 'ಅಚಃ' ಪದವು ಬರುತ್ತದೆ. 'ಅತ್ರ ಲೋಪೋಭ್ಯಾಸಸ್ಯ' ಸೂತ್ರದಿಂದ ಅಭ್ಯಾಸಸ್ಯ ಅನುವೃತ್ತಿ. ಸೂತ್ರಾರ್ಥ— ಅಭ್ಯಾಸದ ಅಚಿಗೆ ಹ್ರಸ್ವ ಬರುತ್ತದೆ. ಪ್ರಕೃತ ಭೂ ಅಭ್ಯಾಸ. ಇದರ ಅಚ್ ಊಕಾರ. ಇದಕ್ಕೆ ಹ್ರಸ್ವ ಬಂದರೆ ಭು ಭೂವ್+ಅ ಎಂದಾಗುತ್ತದೆ. ಈಗ ಉಕಾರಕ್ಕೆ ಅಕಾರಾದೇಶ ಹೇಳುತ್ತಾನೆ.

ಭೂ ಧಾತುವಿನ ಉಕಾರಕ್ಕೆ ಅಕಾರ ಹೇಳುವ ಸೂತ್ರ

೩೯೯. ಭವತೇರಃ ‖ ೭-೪-೭೩ ‖

ಭವತೇರಭ್ಯಾಸೋಕಾರಸ್ಯ ಅಃ ಸ್ಯಾಲ್ಲಿಟಿ ‖

ಭವತೇಃ, ಅಃ ‖ ದ್ವಿಪದ ಸೂತ್ರ. 'ಇಕ್ಶ್ತಿಪೌ ಧಾತುನಿರ್ದೇಶೇ' ಎಂಬ ಸೂತ್ರದಿಂದ ಎಲ್ಲಿಯಾದರೂ ಧಾತುವನ್ನು ನಿರ್ದೇಶಿಸುವುದಾದರೆ ಇಕ್ ಪ್ರತ್ಯಯ ದಿಂದಾಗಲೀ (ಇ) ಶ್ತಿಪ್ (ತಿ) ಪ್ರತ್ಯಯದಿಂದಾಗಲೀ ಸೇರಿಸಿ ಹೇಳಬೇಕೆಂದುದರಿಂದ ಇಲ್ಲಿ ಭವತೇಃ ಎಂಬುದು ಶ್ತಿಪ್‌ನಿಂದ ನಿರ್ದೇಶಿಸಿರುತ್ತಾನೆ. 'ಭವತಿಃ' ಅಂದರೆ

ಭೂ ಧಾತು ಎಂದರ್ಥ. ಭವತೇಃ ಷಷ್ಠಿ. 'ಅತ್ರ ಲೋಪೋಽಭ್ಯಾಸಸ್ಯ' ಸೂ...
ದಿಂದ 'ಅಭ್ಯಾಸಸ್ಯ', 'ವ್ಯಥೋಲಿಟಿ' ಸೂತ್ರದಿಂದ 'ಲಿಟಿ' ಅನುವೃ...
ಸೂತ್ರಾರ್ಥ— ಭೂ ಧಾತುವಿನ ಅಭ್ಯಾಸಕ್ಕೆ ಲಿಟ್ ಪರವಾದಾಗ ಅಕಾರಾ...
ಬರುತ್ತದೆ. 'ಅಲೋಽಂತ್ಯಸ್ಯ' ಪರಿಭಾಷೆಯಿಂದ ಅಭ್ಯಾಸದ ಅಂತ್ಯ ಉಕಾ...
ಬರುತ್ತದೆ. ಇದನ್ನೇ ವೃತ್ತಿಯಲ್ಲಿ 'ಉಕಾರಸ್ಯ' ಎಂದಿರುತ್ತಾನೆ. ಉಕಾ...
ಅಕಾರ ಬಂದರೆ ಭ ಭೂವ್ + ಅ ಎಂದಾಗುತ್ತದೆ. ಈಗ ಭಕಾರಕ್ಕೆ ಬಕಾರಾ...
ಹೇಳುತ್ತಾನೆ.

ಅಭ್ಯಾಸದ ಝಲ್ ವರ್ಣಗಳಿಗೆ ಚರ್ ಜಶ್ ಹೇಳುವ ಸೂತ್ರ.

೪೦೦. ಅಭ್ಯಾಸೇ ಚರ್ಚ || ೮-೪-೫೪ ||

ಅಭ್ಯಾಸೇ ಝಲಾಂ ಚರಃ ಸ್ಯುಃ ಜಶಶ್ಚ | ಝಶಾಂ ಜಶಃ ಖಯಾ...
ಚರ ಇತಿ ವಿವೇಕಃ || ಬಭೂವ || ಬಭೂವತುಃ || ಬಭೂವುಃ ||

ಅಭ್ಯಾಸೇ, ಚರ್, ಚ || ತ್ರಿಪದ ಸೂತ್ರ. 'ಝಲಾಂ ಜಶ್ ಝಶಿ' ಸೂ...
ದಿಂದ ಝಲಾಂ ಅನುವೃತ್ತಿ. ಸೂತ್ರದ ಚಕಾರದಿಂದ ಜಶ್ ಕೂಡಾ ಬರುತ್ತದೆ. ಇ...
ಅಭ್ಯಾಸದ ಝಲ್ ಸ್ಥಾನೀ. ಆದೇಶ ಎರಡು ರೀತಿಯಾಗಿದೆ. ಜಶ್, ಚ...
ಇದಕ್ಕೋಸ್ಕರ ಸ್ಥಾನಾದಿಸಾಮ್ಯದಿಂದ ಆದೇಶಕ್ಕನುಸಾರವಾಗಿ ಸ್ಥಾನಿಯನ್ನು ಎರ...
ರೀತಿಯಾಗಿ ವಿಭಾಗಿಸಿಕೊಳ್ಳಬೇಕು. ಝಲಿನಲ್ಲಿ ಶ-ಷ-ಸ ಅಭ್ಯಾಸದಲ್ಲಿ ಲೋ...
ಹೊಂದುತ್ತವೆ. ಹಕಾರಕ್ಕೆ ಚವರ್ಗ ಹೇಳುತ್ತಾನೆ. ಆಗ ಝಯ್ ಉಳಿಯುತ್ತ...
ಅಲ್ಲಿ ಝಲ್, ಖಯ್ ಎಂದು ಎರಡು ರೀತಿ ವಿಭಾಗಿಸಿ ಝಲಿಗೆ ಜಶ್ ಎಂದೂ...
ಖಯ್‌ಗೆ ಚರ್ ಎಂದೂ ತಿಳಿಯಬೇಕು. **ಸೂತ್ರಾರ್ಥ**— ಅಭ್ಯಾಸದಲ್ಲಿರುವ ಝ...
ವರ್ಣಗಳಿಗೆ ಜಶ್ ವರ್ಣಗಳೂ ಖಯ್ ವರ್ಣಗಳಿಗೆ ಚರ್ ವರ್ಣಗಳೂ ಬರುತ್ತ...
ಪ್ರಕೃತ ಭೂ ಅಭ್ಯಾಸದಲ್ಲಿ ಝಶಿನಲ್ಲಿ ಸೇರಿದ ಭಕಾರ ಇರುವುದರಿಂದ ಜಶಿನಲ್ಲಿ ಸೇರಿ...
ಬಕಾರ ಬರುತ್ತದೆ. ಸ್ಥಾನ್ಯಾದೇಶವಿಭಾಗವನ್ನೇ 'ಝಶಾಂ ಜಶಃ ಖಯಾಂ ಚ...
ಇತಿ ವಿವೇಕಃ' ಎಂಬುದರಿಂದ ವಿವರಿಸಿರುತ್ತಾನೆ. ಅಭ್ಯಾಸಕ್ಕೆ ಬ ಬಂದರೆ ಬಭೂ...
+ ಅ–ಬಭೂವ ಎಂದಾಗುತ್ತದೆ. ಪ್ರಥಮಪುರುಷ ದ್ವಿವಚನದಲ್ಲಿ ತಸ್ ಪ್ರತ್ಯಯ...
'ಪರಸ್ಮೈಪದಾನಾಂ' ಸೂತ್ರದಿಂದ ಅತುಸ್ ಆದೇಶ. ಭೂ + ಅತುಸ್ ಎಂದಿ...
ವಾಗ ಹಿಂದಿನಂತೆ ದ್ವಿತ್ವಾದಿ. ಒಂಭತ್ತು ಪ್ರತ್ಯಯಗಳಲ್ಲಿಯೂ ಬಭೂವ್ ಅಂಗವಾ...
ಕೊಳ್ಳಬೇಕು. ವುಕಾಗಮ. ಭೂವ್, ದ್ವಿತ್ವ, ಭೂವ್ ಭೂವ್. ಹಲಾದಿಃ ಶೇ...
ಭೂ ಭೂವ್. ಹ್ರಸ್ವಃ, ಭು ಭೂವ್. ಭವತೇರಃ, ಭ ಭೂವ್. ಅಭ್ಯಾಸೇಚಚ...
ಬಭೂವ್ + ಅತುಸ್— ಬಭೂವತುಸ್. ಸಕಾರಕ್ಕೆ 'ಸಸಜುಷೋರುಃ' ಸೂತ್ರದಿ...
ರುತ್ವ. 'ಖರವಸಾನಯೋರ್ವಿಸರ್ಜನೀಯಃ' ಸೂತ್ರದಿಂದ ವಿಸರ್ಗ. ಬಭೂವತು...

ಪ್ರಥಮಪುರುಷ ಬಹುವಚನ ಝಿಗೆ ಉಸಾದೇಶ. ಭೂ+ಉಸ್, ದ್ವಿತ್ವಾದಿಗ ಳಿಂದ ಬಭೂವ್ ಅಂಗವಾಗುತ್ತದೆ. ಬಭೂವ್+ಉಸ್ ಎಂದಿರುವಾಗ ಹಿಂದಿನಂತೆ ಸಕಾರಕ್ಕೆ ರುತ್ವ ವಿಸರ್ಗ. ಬಭೂವುಃ ॥

ಲಿಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ ಬಂದಾಗ ಅದಕ್ಕೆ ಥಲ್ ಆದೇಶ. ಭೂ+ಥಲ್ ಎಂದಿರುವಾಗ ಲಕಾರಕ್ಕೆ 'ಹಲಂತ್ಯಮ್' ಸೂತ್ರದಿಂದ ಇತ್ ಸಂಜ್ಞಾ. 'ತಸ್ಯ ಲೋಪಃ' ಸೂತ್ರದಿಂದ ಲೋಪ. ಹಿಂದಿನಂತೇ ಬಭೂವ್ ಅಂಗವಾಗುತ್ತದೆ. ಆದರೆ ಥಲ್ ಹಲಾದಿಯಾದುದರಿಂದ ಭೂವಿಗೆ ವುಕಾಗಮ ಬರುವುದಿಲ್ಲ. (ಲಿಟನ ಅಚ್ ಪರವಾದಾಗ ವುಕಾಗಮ ಹೇಳಿದೆ.) ಆದಕ್ಕೋಸ್ಕರ ಥಲಿಗೆ ಮೊದಲು ಇಡಾಗಮ ಹೇಳಬೇಕು. ಇಡಾಗಮ ಹೇಳುವ ಸೂತ್ರವನ್ನು ಹೇಳ ಬೇಕಾದರೆ ಮೊದಲು ಆರ್ಧಧಾತುಕ ಸಂಜ್ಞೆ ಅಪೇಕ್ಷಿತವಾದುದರಿಂದ ಲಿಟನ ಆದೇಶ ಗಳಿಗೆ ಆರ್ಧಧಾತುಕ ಸಂಜ್ಞೆ ಹೇಳುತ್ತಾನೆ.

ಲಿಡಾದೇಶಕ್ಕೆ ಆರ್ಧಧಾತುಕಸಂಜ್ಞೆ ಹೇಳುವ ಸೂತ್ರ.

**೪೦೧. ಲಿಟ್ ಚ ॥ ೩-೪-೧೧೫ ॥**

**ಲಿಡಾದೇಶಸ್ತಿಙ್ ಆರ್ಧಧಾತುಕಸಂಜ್ಞಃ ಸ್ಯಾತ್ ॥**

ಲಿಟ್, ಚ ॥ ದ್ವಿಪದ ಸೂತ್ರ. 'ಆರ್ಧಧಾತುಕಂ ಶೇಷಃ' ಸೂತ್ರದಿಂದ 'ಆರ್ಧಧಾತುಕಂ', 'ತಿಙ್ಶಿತ್ಸಾರ್ವಧಾತುಕಮ್' ಸೂತ್ರದಿಂದ 'ತಿಙ್' ಎಂಬುದೂ ಅನುವೃತ್ತವಾಗುತ್ತದೆ. ಲಿಟ್ ಎಂಬಲ್ಲಿ ಷಷ್ಠೀ ಲೋಪವಾಗಿದೆ. ಲಿಟಃ ಎಂದಿರಬೇಕಿತ್ತು. **ಸೂತ್ರಾರ್ಥ**—ಲಿಟನ ಸ್ಥಾನದಲ್ಲಿ ಆದೇಶವಾಗಿ ಬಂದ ತಿಙಿಗೆ ಆರ್ಧಧಾತುಕಸಂಜ್ಞೆ ಬರುತ್ತದೆ. ತಿಙ್ ಸಾಮಾನ್ಯ ಸಾರ್ವಧಾತುಕವಾದರೆ ಲಿಟನಲ್ಲಿ ಮಾತ್ರ ಆರ್ಧಧಾತುಕವಾಗುತ್ತದೆ. ಆದರ ಸ್ಥಾನದಲ್ಲಿ ಬಂದ ಣಲಾದಿಗಳೂ ಸ್ಥಾನಿ ವದ್ಭಾವದಿಂದ ಆರ್ಧಧಾತುಕಸಂಜ್ಞೆ ಹೊಂದುತ್ತವೆ. ಪ್ರಕೃತ ಈ ಆರ್ಧಧಾತುಕ ಸಂಜ್ಞೆಗೆ ಪ್ರಯೋಜನ ಹೇಳುತ್ತಾನೆ.

ಆರ್ಧಧಾತುಕಕ್ಕೆ ಇಡಾಗಮ ಹೇಳುವ ಸೂತ್ರ.

**೪೦೨. ಆರ್ಧಧಾತುಕಸ್ಯೇಡ್ವಲಾದೇಃ ॥ ೭-೨-೩೫ ॥**

**ವಲಾದೇರಾರ್ಧಧಾತುಕಸ್ಯೇಡಾಗಮಃ ಸ್ಯಾತ್ । ಬಭೂವಿಥ । ಬಭೂವಥುಃ । ಬಭೂವ ॥ ಬಭೂವ । ಬಭೂವಿವ । ಬಭೂವಿಮ ॥**

ಆರ್ಧಧಾತುಕಸ್ಯ, ಇಟ್, ವಲಾದೇಃ ॥ ತ್ರಿಪದ ಸೂತ್ರ. ವಲ್ ಆದಿಃ ಯಸ್ಯ ತತ್ ವಲಾದಿ. ತಸ್ಯ, ವಲಾದೇಃ. **ಸೂತ್ರಾರ್ಥ**–ವಲಾದಿಯಾದ ಆರ್ಧಧಾತುಕಕ್ಕೆ

ಇಡಾಗಮು ಬರುತ್ತದೆ. ಇಟ್ ಟಿತ್ತಾದುದರಿಂದ ಆದ್ಯವಯುವವಾಗಿ ಬರುತ್ತದೆ. (ಆದ್ಯಂತೌ ಟಕಿತೌ) ಪ್ರಕೃತ ಥಲ್ ವಲಾದಿಯಾದುದರಿಂದ ಅದಕ್ಕೆ ಆದ್ಯವಯುವವಾಗಿ ಬಂದರೆ ಇಥ ಎಂದಾಗುತ್ತದೆ. ಬಭೂವ್ ಅಂಗ ಹಿಂದಿನಂತೇ ತಿಳಿಯಬೇಕು. ಬಭೂವ್+ಇಥ. ಥಲಿಗೆ ಇಡಾಗಮು ಬಂದ ಮೇಲೆ ಅಜಾದಿಯಾಗುವುದರಿಂದ ವುಕಾಗಮು ಬರುತ್ತದೆ. ಬಭೂವಿಥ || ದ್ವಿವಚನದಲ್ಲಿ ಥಸ್ ಪ್ರತ್ಯಯಕ್ಕೆ ಅಥುಸ್ ಆದೇಶ. ಬಭೂವ್+ಅಥುಸ್. ಬಭೂವಥುಃ || ಥ ಪ್ರತ್ಯಯಕ್ಕೆ ಅ ಆದೇಶ. ಬಭೂವ+ಅ—ಬಭೂವ || ಉತ್ತಮದ ಮಿಪಿಗೆ ಣಲ್ ಆದೇಶ. ಅ ಉಳಿಯುತ್ತದೆ. ಬಭೂವ್+ಅ—ಬಭೂವ; ವಸ್ ಪ್ರತ್ಯಯಕ್ಕೆ ವ ಆದೇಶ. ಇದು ವಲಾದಿಯಾದುದರಿಂದ ಇಡಾಗಮು. ಆದ್ಯವಯುವವಾಗಿ ಬಂದರೆ ಇವ ಎಂದಾಗುತ್ತದೆ. ಬಭೂವಿವ. ಮಸ್ ಪ್ರತ್ಯಯಕ್ಕೆ ಮ ಆದೇಶ. ಇಡಾಗಮು. ಬಭೂವ್ ಅಂಗ. ಬಭೂವ್+ಇಮ—ಬಭೂವಿಮ.

## || ಲುಟ್ ||

ಲುಟನಿಂದ ತೋರುವ ಕಾಲವನ್ನು ಹೇಳುತ್ತಾನೆ.

೪೦೩. **ಅನದ್ಯತನೇ ಲುಟ್ || ೩-೩-೧೫ ||**
**ಭವಿಷ್ಯತ್ಯನದ್ಯತನೇಽರ್ಥೇ ಧಾತೋರ್ಲುಟ್ ||**

ದ್ವಿಪದ ಸೂತ್ರ. 'ಧಾತೋಃ' ಅಧಿಕಾರ. 'ಭವಿಷ್ಯತಿಗಮ್ಯಾದಯಃ' ಸೂತ್ರದಿಂದ 'ಭವಿಷ್ಯತಿ' ಅನುವೃತ್ತಿ. ಸೂತ್ರಾರ್ಥ—ಅನದ್ಯತನ ಭವಿಷ್ಯದರ್ಥವನ್ನು ಕೊಡುವ ಧಾತುವಿನ ಮೇಲೆ ಲುಟ್ ಬರುತ್ತದೆ. ಅನದ್ಯತನಾರ್ಥ 'ಪರೋಕ್ಷೇ ಲಿಟ್' ಎಂಬಲ್ಲಿ ವಿವೃತವಾಗಿದೆ. ಇಂದಿನ ರಾತ್ರಿಯ ಅರ್ಧರಾತ್ರಿಯ ಮೇಲಿನ ಕಾಲ ಅನದ್ಯತನ ಭವಿಷ್ಯತ್. ಈ ಕಾಲವನ್ನು ಸೂಚಿಸುವಾಗ ಲುಟ್. ಭೂ+ಲುಟ್ ಎಂದಿರುವಾಗ ಲುಟಿಗೆ ತಿಬಾದಿಗಳು ಬರುತ್ತವೆ. ಭೂ+ತಿ ಎಂದಿರುವಾಗ 'ಕರ್ತರಿ ಶಪ್' ಸೂತ್ರದಿಂದ ಶಪ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ತಾಸ್ ವಿಕರಣ ಹೇಳುತ್ತಾನೆ.

ಧಾತುವಿಗೆ ಸ್ಯ, ತಾಸ್ ವಿಕರಣ ಹೇಳುವ ಸೂತ್ರ

೪೦೪. **ಸ್ಯತಾಸೀ ಲೃಲುಟೋಃ || ೩-೧-೩೩ ||**

**ಧಾತೋಃ ಸ್ಯತಾಸೀ ಏತೌ ಪ್ರತ್ಯಯೌ ಸ್ತಃ ಲೃಲುಟೋಃ ಪರತಃ | ಶಬಾದ್ಯಪವಾದಃ | ಲೃ ಇತಿ ಲೃಙ್ಲೃಟೋರ್ಗ್ರಹಣಮ್ ||**

ದ್ವಿಪದ ಸೂತ್ರ । ಸ್ಯಶ್ಚ ತಾಸಿಶ್ಚ ಸ್ಯತಾಸೀ । ಲೃಚ ಲುಟ್‌ಚ ಲೃಲುಟೌ । ತಯೋಃ ಲೃಲುಟೋಃ । 'ಧಾತೋಃ' ಅಧಿಕಾರ. ಲೃಲುಟೋಃ ಸಪ್ತಮೀ ದ್ವಿವಚನ. ಸೂತ್ರಾರ್ಥ—ಧಾತುವಿಗೆ ಲೃಲುಟ್ ಪರದಲ್ಲಿರುವಾಗ ಸ್ಯ ತಾಸ್ ಪ್ರತ್ಯಯಗಳು ಬರುತ್ತವೆ. ಯಥಾಸಂಖ್ಯದಿಂದ ಲೃ ಪರವಾದಾಗ ಸ್ಯ ಎಂದೂ ಲುಟ್ ಪರವಾದಾಗ ತಾಸ್ ಎಂದೂ ತಿಳಿಯಬೇಕು. ಲೃ ಎಂದರೆ ಲೃಟ್ ಲೃಙ್ ಎರಡು ಲಕಾರಗಳನ್ನು ತೆಗೆದುಕೊಳ್ಳಬೇಕು. ಙಕಾರ ಟಕಾರ ಇತ್ತಾದರೆ ಲೃ ಉಳಿಯುತ್ತದೆ. ಸಾಮಾನ್ಯ ವಾಗಿ ಶಪ್ ಬರುತ್ತಿರುವಾಗ ಈ ಸೂತ್ರದಿಂದ ಇವೆರಡು ಪ್ರತ್ಯಯ ಹೇಳುವುದರಿಂದ ಶಪಿಗೆ ಅಪವಾದವಾಗಿ ಇವು ಬರುತ್ತವೆಂದು ತಿಳಿಯಬೇಕು. ಪ್ರಕೃತ ಲುಟ್ ಪರ ವಾದುದರಿಂದ ತಾಸ್ ಬರುತ್ತದೆ. ಭವ + ತಾಸ್ + ತಿ ಎಂದಿರುವಾಗ ತಾಸಿಗೆ ಇಡಾಗಮ ಹೇಳಲು ಆರ್ಧಧಾತುಕ ಸಂಜ್ಞೆ ಹೇಳುತ್ತಾನೆ.

ಆರ್ಧಧಾತುಕ ಸಂಜ್ಞೆಯನ್ನು ಹೇಳುವ ಸೂತ್ರ.

೪೦೫. ಆರ್ಧಧಾತುಕಂ ಶೇಷಃ ॥ ೩-೪-೧೧೪ ॥

ತಿಙ್‌ಶಿದ್ಭ್ಯೋಽನ್ಯೋಧಾತೋರಿತಿ ವಿಹಿತಃ ಪ್ರತ್ಯಯ ಏತತ್ಸಂಜ್ಞಃ ಸ್ಯಾತ್। ಇಟ್ ॥

ದ್ವಿಪದ ಸೂತ್ರ. 'ಧಾತೋಃ' ಅಧಿಕಾರ. ಇದರ ಹಿಂದೆ 'ತಿಙ್‌ಶಿತ್ ಸಾರ್ವ ಧಾತುಕಮ್' ಸೂತ್ರ ಹೇಳಿದೆ. 'ಉಕ್ತಾದನ್ಯಃ ಶೇಷಃ' ಹಿಂದೆ ಹೇಳಿದುದಕ್ಕಿಂತ ಉಳಿದುದು ಶೇಷವಾಗುತ್ತದೆ. ಸೂತ್ರಾರ್ಥ-ತಿಙ್, ಶಿತ್ ಪ್ರತ್ಯಯಗಳಿಂದ ಭಿನ್ನ ವಾಗಿ 'ಧಾತೋಃ' ಎಂದು (ಧಾತುವಿನ ಪರಕ್ಕೆಂದು) ವಿಹಿತವಾದ ಪ್ರತ್ಯಯಕ್ಕೆ ಆರ್ಧಧಾತುಕವೆಂಬ ಸಂಜ್ಞೆ ಬರುತ್ತದೆ. ಪ್ರಕೃತ ತಾಸ್ ಧಾತುವಿನ ಮೇಲೆ ವಿಹಿತ ವಾಗಿದೆ. ಇದು ತಿಙ್‌ನಲ್ಲಿ ಸೇರಲಿಲ್ಲ. ಇದರಲ್ಲಿ ಶಕಾರ ಇತ್ತಾಗಲೂ ಇಲ್ಲ. ಆದುದ ರಿಂದ ಇದು ಆರ್ಧಧಾತುಕವಾಗುತ್ತದೆ. ವಲಾದಿಯಾದುದರಿಂದ 'ಆರ್ಧಧಾತುಕ ಸ್ಯೇಟ್‌ವಲಾದೇಃ' ಸೂತ್ರದಿಂದ ಇಡಾಗಮ. ಟಿತ್ತಾದುದರಿಂದ ಆದ್ಯವಯವ. ಭೂ + ಇತಾಸ್ + ತಿ ಎಂದಿರುವಾಗ ತಿಬಾದಿಗಳಿಗೆ ಆದೇಶ ಹೇಳುತ್ತಾನೆ.

ಲುಟಿನ ಪ್ರಥಮಪುರುಷಕ್ಕೆ ಆದೇಶ ಹೇಳುವ ಸೂತ್ರ.

೪೦೬. ಲುಟಃ ಪ್ರಥಮಸ್ಯ ಡಾರೌರಸಃ ॥ ೨-೪-೮೫॥

ಡಾ ರೌ ರಸ್ ಏತೇ ಕ್ರಮಾತ್ ಸ್ಯುಃ । ಡಿತ್ವಸಾಮರ್ಥ್ಯಾದಭಸ್ಯಾಪಿ ಟೇರ್ಲೋಪಃ ॥ ಭವಿತಾ ॥

ತ್ರಿಪದ ಸೂತ್ರ. ತಾಸ್ ಆರ್ಧಧಾತುಕವಾದುದರಿಂದ ಇದು ಪರವಾದಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಭೂ ಎಂಬುದರ ಊಕಾರಕ್ಕೆ

ಗುಣ. ಭೋ+ಇತಾಸ್+ತಿ ಎಂದಿರುವಾಗ 'ಏಚೋಽಯವಾಯಾವಃ' ಸೂತ್ರದಿಂದ ಓಕಾರಕ್ಕೆ ಅಚ್ ಪರವಾದುದರಿಂದ ಅವಾದೇಶ. ಭವಿತಾಸ್+ತಿ. ಈಗ ಈ ಸೂತ್ರದಿಂದ ಕಾರ್ಯ ಹೇಳಬೇಕು. ಸೂತ್ರಾರ್ಥ— ಲುಟಿನ ಪ್ರಥಮಪುರುಷಕ್ಕೆ (ತಿಪ್, ತಸ್, ಝಿ) ಕ್ರಮವಾಗಿ ಡಾ, ರೌ, ರಸ್ ಆದೇಶಗಳು ಬರುತ್ತವೆ. ಅನೇಕಾಲ್ ಆದುದರಿಂದ ಸರ್ವಾದೇಶ. ಈಗ ತಿಪ್ ಪ್ರತ್ಯಯಕ್ಕೆ ಡಾ ಬಂದರೆ ಭವಿತಾತ್+ಡಾ ಎಂದಾಗುತ್ತದೆ. ಡಾ ಆದೇಶವು ಬಂದ ಮೇಲೆ ಅದು ಪ್ರತ್ಯಯವಾಗುವುದರಿಂದ 'ಚುಟೂ' ಸೂತ್ರದಿಂದ ಆದಿಯ ಡಕಾರಕ್ಕೆ ಲೋಪ. ಆ ಉಳಿಯುತ್ತದೆ. ಪ್ರಥಮ ಪುರುಷಕ್ಕೆ ಎಂದುದರಿಂದ ಆತ್ಮನೇಪದದಲ್ಲಿಯೂ ತ, ಆತಾಂ, ಝ ಈ ಮೂರಕ್ಕೆ ಡಾ, ರೌ, ರಸ್ ಮೂರು ಆದೇಶಗಳು ಬರುತ್ತವೆ. 'ಡಿತ್ವಸಾಮರ್ಥ್ಯಾದಿತಿ.' ಇಲ್ಲಿ ಡಾ ಎಂಬಲ್ಲಿ ಡಿತ್ವ ಮಾಡಿದುದಕ್ಕೆ ಇತರ ಪ್ರಯೋಜನವಿಲ್ಲ. ಡಿತ್ವ ಮಾಡಿದುದರಿಂದ ಅಂಗದ ಟಿಗೆ ಲೋಪ ಬರುತ್ತದೆಯೆಂದು ಹೇಳಬೇಕು. ಇಲ್ಲಿ ಭಸಂಜ್ಞಾ ಇದ್ದಿದ್ದರೆ ಸ್ವಾಭಾವಿಕವಾಗಿ ಸೂತ್ರದಿಂದ (ಡಿತಿಭಸ್ಯ ಟೇರ್ಲೋಪಃ) ಟಿಲೋಪ ಬರುತ್ತಿತ್ತು. ಆದರೆ ಕಪ್ ಪ್ರತ್ಯಯಾವಧಿಕವಾಗಿ ಸ್ವಾದಿಯಲ್ಲಿ ಇವು ಸೇರುವುದಿಲ್ಲ. ಆದುದರಿಂದ ಡಿತ್ವ ಸಾಮರ್ಥ್ಯದಿಂದ ಟಿ ಲೋಪ ಹೇಳಬೇಕು. ಭವಿತಾಸ್+ಆ ಇಲ್ಲಿ 'ಅಚೋಽಂತ್ಯಾದಿಟಿ' ಸೂತ್ರದಿಂದ ಟಿ—ಆಸ್ ಆಗುತ್ತದೆ. ಅದಕ್ಕೆ ಲೋಪ ಬಂದರೆ ಭವಿತ್+ಆ—ಭವಿತಾ ಎಂದಾಗುತ್ತದೆ. ದ್ವಿವಚನದಲ್ಲಿ ತಸ್ ಬಂದಾಗ ಅದಕ್ಕೆ ಆದೇಶ. ಭವಿತಾಸ್+ರೌ ಎಂದಿರುವಾಗ ಸಲೋಪ, ಸೂತ್ರದಿಂದ ತೋರಿಸುತ್ತಾನೆ. ಇಲ್ಲಿ ಭವಿತಾಸ್ ಅಂಗವೆಂದೂ ಹಿಂದಿನ ಪ್ರಕ್ರಿಯೆಯನ್ನೂ ತಿಳಿದಿರಬೇಕು. (ತಾಸ್ ವಿಕರಣ. ಭೂವಿಗೆ ಗುಣ, ಅವಾದೇಶ. ತಾಸಿಗೆ ಇಡಾಗಮ.)

ತಾಸ್, ಅಸ್‌ಗಳ ಸಕಾರ ಲೋಪ ಹೇಳುವ ಸೂತ್ರ.

**೪೦೭. ತಾಸಸ್ತ್ಯೋರ್ಲೋಪಃ || ೭-೪-೫೦ ||**

**ತಾಸೇರಸ್ತೇಶ್ಚ ಸಸ್ಯ ಲೋಪಃ ಸ್ಯಾತ್ ಸಾದೌ ಪ್ರತ್ಯಯೇ ಪರೇ ||**

ತಾಸಸ್ತ್ಯೋಃ, ಲೋಪಃ || ದ್ವಿಪದ ಸೂತ್ರ. ತಾಸ್ ಚ ಅಸ್ತಿಶ್ಚ ತಾಸಸ್ತೀ ತಯೋಃ ತಾಸಸ್ತ್ಯೋಃ | ಅಸ್ತಿ ಎಂಬುದು ಅಸ್ ಧಾತುವಿಗೆ ಶ್ತಿಪ್ ಸೇರಿಸಿ ಹೇಳುತ್ತಾನೆ. (ಧಾತುವನ್ನು ನಿರ್ದೇಶಿಸುವಾಗ ಇಕ್ ಅಥವಾ ಶ್ತಿಪ್ ಸೇರಿಸಬೇಕು.) ಅಂಗಾಧಿಕಾರದಲ್ಲಿ ಈ ಸೂತ್ರ ಹೇಳುವುದರಿಂದ ಅಂಗದಿಂದ ಪ್ರತ್ಯಯವು ಆಕ್ಷಿಪ್ತವಾಗುತ್ತದೆ. ಪ್ರತ್ಯಯ ಪರವಾದರೇ ಅಂಗಸಂಜ್ಞೆ ಬರುವುದು 'ಸಃ ಸಿ ಆರ್ಧಧಾತುಕೇ' ಸೂತ್ರದಿಂದ ಸಿ ಎಂಬ ಸಪ್ತಮ್ಯಂತ ವರ್ಣವು ಅನುವೃತ್ತವಾಗಿ ಪ್ರತ್ಯಯೇ ಎಂಬ ಸಪ್ತಮ್ಯಂತಕ್ಕೆ ವಿಶೇಷಣ. ತದಾದಿಲಾಭ. ಸಕಾರಾದಿ ಪ್ರತ್ಯಯ ಪರವಾದಾಗ ಎಂದರ್ಥವಾಗುತ್ತದೆ. ಸೂತ್ರಾರ್ಥ—ಸಕಾರಾದಿ ಪ್ರತ್ಯಯ ಪರವಾದಾಗ ತಾಸಿಗೂ

ಅಸ್ ಧಾತುವಿಗೂ ಲೋಪ ಬರುತ್ತದೆ. 'ಅಲೋಽಂತ್ಯಸ್ಯ' ಪರಿಭಾಷೆಯಿಂದ ಷಷ್ಠೀ ನಿರ್ದಿಷ್ಟವಾದುದರಿಂದ ತಾಸ್, ಅಸಿನ ಅಂತ್ಯಸಕಾರಕ್ಕೆ ಲೋಪವೆಂದು ತಿಳಿಯಬೇಕು. ಪ್ರಕೃತ ಸಾದಿ ಪ್ರತ್ಯಯ ಪರವಾಗಿಲ್ಲ. ಮಧ್ಯಮ ಏಕವಚನ ಇದಕ್ಕೆ ಲಕ್ಷ್ಯ. ಅಲ್ಲಿ ಸಿಪ್ ಸಕಾರಾದಿಯಾಗಿದೆ. ಆದರೆ ಮುಂದಿನ 'ರಿ ಚ' ಸೂತ್ರದಲ್ಲಿ ಇದೇ ಕಾರ್ಯ ಹೇಳುವುದರಿಂದ ಅಲ್ಲಿ ಅನುವೃತ್ತಿಸೌಕರ್ಯಕ್ಕೆ ಮೊದಲೇ ಹೇಳಿರುತ್ತಾನೆ. ರಾದಿ ಪ್ರತ್ಯಯ ಪರವಾದಾಗ ಇವುಗಳ ಸಕಾರಕ್ಕೆ ಲೋಪ ಹೇಳುವ ಸೂತ್ರ ಹೇಳುತ್ತಾನೆ.

ರೇಫಾದಿ ಪ್ರತ್ಯಯ ಪರವಾದಾಗ ಸಲೋಪ ಹೇಳುವ ಸೂತ್ರ.

೪೦೮. ರಿ ಚ || ೭-೪-೫೧ ||

**ರಾದೌ ಪ್ರತ್ಯಯೇ ತಥಾ || ಭವಿತಾರೌ | ಭವಿತಾರಃ || ಭವಿತಾಸಿ | ಭವಿತಾಸ್ಥಃ | ಭವಿತಾಸ್ಥ || ಭವಿತಾಸ್ಮಿ | ಭವಿತಾಸ್ವಃ | ಭವಿತಾಸ್ಮಃ ||**

ದ್ವಿಪದ ಸೂತ್ರ. ಹಿಂದಿನ ಸೂತ್ರ ಅನುವೃತ್ತವಾಗುತ್ತದೆ. ಪ್ರತ್ಯಯೇ ಎಂಬ ಸಪ್ತಮ್ಯಂತಕ್ಕೆ ರಿ ವಿಶೇಷಣ. ತದಾದಿಲಾಭ. ಸೂತ್ರಾರ್ಥ— ರೇಫಾದಿ ಪ್ರತ್ಯಯ ಪರವಾದಾಗ ತಾಸಿನ ಸಕಾರಕ್ಕೆ ಲೋಪ ಬರುತ್ತದೆ. ಇಲ್ಲಿ ಆಸಿಗೆ ಸಂಭವವಿಲ್ಲ. ಅಸ್ ಧಾತುವಿಗೆ ಆರ್ಧಧಾತುಕದಲ್ಲಿ ಭೂ ಆದೇಶ ಹೇಳುತ್ತಾನೆ. ಆದ್ದರಿಂದ ರಾದಿ ಪ್ರತ್ಯಯ ಪರದಲ್ಲಿರುವ ಅಸ್ ಇರುವುದೇ ಇಲ್ಲ. ಪ್ರಕೃತ ರಾದಿ ಪ್ರತ್ಯಯ ಪರವಾದುದರಿಂದ ತಾಸಿನ ಸಕಾರಕ್ಕೆ ಲೋಪ. ಭವಿತಾಸ್+ರೌ — ಭವಿತಾರೌ ಎಂದಾಗುತ್ತದೆ. ಬಹುವಚನದಲ್ಲಿ ಝಿಗೆ ರಸ್ ಆದೇಶ. ಹಿಂದಿನಂತೆ ಭವಿತಾಸ್ ಅಂಗ. ಭವಿತಾಸ್+ರಸ್. ರಾದಿ ಪ್ರತ್ಯಯ ಪರವಾದುದರಿಂದ ಸಕಾರಕ್ಕೆ ಲೋಪ. ಭವಿತಾರಃ ಮಧ್ಯಮಪುರುಷ ಏಕವಚನದಲ್ಲಿ ಸಿಪ್, ಪಕಾರ ಇತ್. ಭವಿತಾಸ್ ಅಂಗ. ಭವಿತಾಸ್+ಸಿ ಎಂದಿರುವಾಗ ಸಾದಿ ಪ್ರತ್ಯಯ ಪರವಾದುದರಿಂದ 'ತಾಸಸ್ತ್ಯೋರ್ಲೋಪಃ' ಸೂತ್ರದಿಂದ ಸಕಾರ ಲೋಪ. ಭವಿತಾಸಿ. ದ್ವಿವಚನದಲ್ಲಿ ಥಸ್. ಭವಿತಾಸ್+ಥಸ್. ಇಲ್ಲಿ ಯಾವ ನಿಮಿತ್ತವೂ ಇಲ್ಲದುದರಿಂದ ಸಕಾರಕ್ಕೆ ಲೋಪವಿಲ್ಲ. ಅಂತ್ಯ ಸಕಾರಕ್ಕೆ ರುತ್ವ ವಿಸರ್ಗ. ಭವಿತಾಸ್ಥಃ. ಬಹುವಚನದಲ್ಲಿ ಥ ಪ್ರತ್ಯಯ. ಭವಿತಾಸ್+ಥ— ಭವಿತಾಸ್ಥ. ಉತ್ತಮದಲ್ಲಿ ಮಿಪ್ ಬಂದಾಗ ಭವಿತಾಸ್ಮಿ. ವಸ್ ಬಂದಾಗ ಅಂತ್ಯ ಸಕಾರಕ್ಕೆ ರುತ್ವ ವಿಸರ್ಗ. ಭವಿತಾಸ್ವಃ ಬಹುವಚನದಲ್ಲಿ ಮಸ್. ಭವಿತಾಸ್ಮಃ ||

## ॥ ಲೃಟ್ ॥

### ಲೃಟ್ ಬರುವಾಗ ಕಾಲನಿಯಮ ಹೇಳುವ ಸೂತ್ರ.

### ೪೦೯. ಲೃಟ್ ಶೇಷೇಚ ॥ ೩-೩-೧೩ ॥

ಭವಿಷ್ಯದರ್ಥಾದ್ಧಾತೋರ್ಲೃಟ್ ಕ್ರಿಯಾರ್ಥಾಯಾಂ ಕ್ರಿಯಾಯಾಂ ಸತ್ಯಾಮಸತ್ಯಾಂ ವಾ॥ ಸ್ಯಃ। ಇಟ್ । ಭವಿಷ್ಯತಿ । ಭವಿಷ್ಯತಃ । ಭವಿಷ್ಯಂತಿ ॥ ಭವಿಷ್ಯಸಿ । ಭವಿಷ್ಯಥಃ । ಭವಿಷ್ಯಥ ॥ ಭವಿಷ್ಯಾಮಿ । ಭವಿಷ್ಯಾವಃ । ಭವಿಷ್ಯಾಮಃ ॥

ತ್ರಿಪದ ಸೂತ್ರ. 'ಭವಿಷ್ಯತಿ ಗಮ್ಯಾದಯಃ' ಸೂತ್ರದಿಂದ 'ಭವಿಷ್ಯತಿ' ಅನುವೃತ್ತಿ. ಅದಕ್ಕೆ ಧಾತ್ವರ್ಥದಲ್ಲಿ ಅನ್ವಯ. 'ಧಾತೋಃ' ಅಧಿಕಾರ. ಶೇಷೇ ಎಂದಿದೆ. ಉಕ್ತಾದನ್ಯಃ ಶೇಷಃ । 'ತುಮುನ್‌ಣ್ವುಲೌ ಕ್ರಿಯಾಯಾಂ ಕ್ರಿಯಾರ್ಥಾಯಾಂ' ಎಂಬುದು ಇದರ ಹಿಂದಿನ ಸೂತ್ರ. ಕ್ರಿಯಾರ್ಥ ಕ್ರಿಯೆ ಅಂದರೆ ಒಂದು ಕ್ರಿಯೆಯೇ ಪ್ರಯೋಜನವಾಗಿರುವ ಇನ್ನೊಂದು ಕ್ರಿಯಾವಾಚಕ ಪದ ಉಪಪದವಾಗಿರುವಾಗ ತುಮುನ್, ಣ್ವುಲ್ ಪ್ರತ್ಯಯಗಳು ಅಲ್ಲಿ ಹೇಳಿವೆ. ಭೋಕ್ತುಂ ಯಾತಿ. ಇಲ್ಲಿ ಹೋಗುವುದಕ್ಕೆ ಭೋಜನ ಪ್ರಯೋಜನ. ಕ್ರಿಯಾರ್ಥ ಕ್ರಿಯಾ ಗಮನಕ್ರಿಯಾ. ಇದನ್ನು ಹೇಳುವ ಯಾತಿ ಎಂಬುದು ಉಪಪದವಾಗಿರುವುದರಿಂದ ಭುಜ್ ಧಾತುವಿಗೆ ತುಮುನ್ ಬಂದು ಭೋಕ್ತುಂ ಎಂದಾಗಿದೆ. ಇಲ್ಲಿ ಶೇಷ ಎಂದುದರಿಂದ ಕ್ರಿಯಾರ್ಥ ಕ್ರಿಯೆಯು ಇಲ್ಲದಿರುವಾಗ ಎಂದು ತಿಳಿಯುತ್ತದೆ. ಚಕಾರದಿಂದ ಹಾಗೆ ಕ್ರಿಯಾರ್ಥ ಕ್ರಿಯೆಯು ಉಪಪದವಾಗಿರುವಾಗಲೂ ಎಂದು ಲಬ್ಧವಾಗುತ್ತದೆ. ಸೂತ್ರಾರ್ಥ–ಕ್ರಿಯಾರ್ಥಕ್ರಿಯಾ(ಗಕ್ರಿಯೆ ಪ್ರಯೋಜನವಾಗಿರುವ ಕ್ರಿಯೆ) ವಾಚಕ ಪದ ಉಪಪದವಾಗಿರುವಾಗಲೂ, ಇಲ್ಲದಿರುವಾಗಲೂ ಭವಿಷ್ಯದರ್ಥವಾಚಕವಾದ ಕ್ರಿಯಾವಾಚಕ ಧಾತುವಿನ ಮೇಲೆ ಲೃಟ್ ಬರುತ್ತದೆ. ಭವಿಷ್ಯತ್ ಸಾಮಾನ್ಯದಲ್ಲಿ ಈ ಲಕಾರ ಹೇಳಿದೆ. ಲುಟ್ ಅನದ್ಯತನ ಭವಿಷ್ಯತ್ತಿನಲ್ಲಿ ಮಾತ್ರ. ಲೃಙ್ ಕಾರ್ಯಕಾರಣ ತೋರುವಾಗ ಮಾತ್ರ ಹೇಳಿದುದರಿಂದ ಭವಿಷ್ಯತ್ ವಿಶೇಷವಾಯಿತು. ಲೃಟ್‌ನಲ್ಲಿ ಲ್ ಉಳಿದರೆ ಅವುಗಳಿಗೆ ತಿಬಾದಿಗಳು ಬರುತ್ತವೆ. ಇಲ್ಲಿ 'ಸ್ಯತಾಸೀ ಲೃಲುಟೋಃ' ಸೂತ್ರದಿಂದ ಸ್ಯ ವಿಕರಣ ಬರುತ್ತದೆ. ಭೂ+ಸ್ಯ+ತಿ ಎಂದಿರುವಾಗ ಸ್ಯ ಆರ್ಧಧಾತುಕವಾದುದರಿಂದ 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ಇಡಾಗಮ. ಭೂ+ಇಸ್ಯ+ತಿ. 'ಇಸ್ಯ' ಆರ್ಧಧಾತುಕವನ್ನು ನಿಮಿತ್ತೀಕರಿಸಿ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಭೂವಿನ ಊಕಾರಕ್ಕೆ ಗುಣ. ಭೋ+ಇಸ್ಯ+ತಿ. 'ಏಚೋಽಯವಾಯಾವಃ' ಸೂತ್ರದಿಂದ ಅವಾದೇಶ. ಭವ್+ಇಸ್ಯ+ತಿ-ಭವಿಸ್ಯ+ತಿ. ಇಕಾರದ ಪರದಲ್ಲಿ ಪ್ರತ್ಯಯ ಸಕಾರ ಬಂದುದರಿಂದ

'ಆದೇಶಪ್ರತ್ಯಯಯೋಃ' ಸೂತ್ರದಿಂದ ಸಕಾರಕ್ಕೆ ಷತ್ವ. ಭವಿಷ್ಯ + ತಿ. ಭವಿಷ್ಯ ಎಂಬುದು ಮುಂದೆ ಒಂಭತ್ತು ಪ್ರತ್ಯಯಗಳಲ್ಲಿಯೂ ಅಂಗವೆಂದು ತಿಳಿಯಬೇಕು. ಭವಿಷ್ಯ ಎಂಬುದರ ಮೇಲೆ ಪ್ರತ್ಯಯ ಹೇಳುತ್ತಾ ಹೋಗಬೇಕು. ಭವಿಷ್ಯತಿ। ತಸ್ ಬಂದಾಗ ಸಕಾರಕ್ಕೆ ರುತ್ವ ವಿಸರ್ಗ. ಭವಿಷ್ಯತಃ। ಝಿ ಬಂದಾಗ ಅದಕ್ಕೆ 'ಝೋಽನ್ತಃ' ಸೂತ್ರದಿಂದ ಅಂತಾದೇಶ. ಭವಿಷ್ಯ + ಅಂತಿ ಎಂದಿರುವಾಗ 'ಅತೋ ಗುಣೇ' ಸೂತ್ರದಿಂದ ಪರರೂಪ; ಭವಿಷ್ಯಂತಿ॥ ಮಧ್ಯಮದಲ್ಲಿ ಭವಿಷ್ಯಸಿ। ಭವಿಷ್ಯಥಃ। ಭವಿಷ್ಯಥ॥ ಉತ್ತಮದಲ್ಲಿ ಮಿಪ್ ಬಂದಾಗ ಭವಿಷ್ಯ + ಮಿ ಎಂದಿರುವಾಗ ಯಞಾದಿ ಸಾರ್ವಧಾತುಕ (ಮಿ) ಪರವಾದುದರಿಂದ 'ಅತೋ ದೀರ್ಘೋ ಯಞಿ' ಸೂತ್ರದಿಂದ ಅದಂತ ಅಂಗಕ್ಕೆ (ಭವಿಷ್ಯ) ದೀರ್ಘ. ಭವಿಷ್ಯಾಮಿ। ವಸ್ ಮಸ್‌ಗಳಲ್ಲಿಯೂ ಹೀಗೇ ದೀರ್ಘ. ಸಕಾರಕ್ಕೆ ರುತ್ವ ವಿಸರ್ಗ. ಭವಿಷ್ಯಾವಃ॥ ಭವಿಷ್ಯಾಮಃ॥ (ಅವನು ಆಗುವನು ಇತ್ಯಾದಿ ಅರ್ಥವನ್ನು ತಿಳಿಯಬೇಕು)

## ॥ ಲೋಟ್ ॥

ಲೇಟ್ ವೇದದಲ್ಲಿ ಮಾತ್ರ ಪ್ರಯೋಗಿಸಲ್ಪಡುವುದರಿಂದ ಆಕಾರಾದಿ ಇತ್ತಿನ ಕ್ರಮದಿಂದ ಲಕಾರವನ್ನು ಹೇಳುತ್ತಾ ಬಂದರೂ ಅದನ್ನು ಬಿಟ್ಟು ಈಗ ಓದಿತ್ತಾದ ಲೋಟ್ ಹೇಳುತ್ತಾನೆ.

ಲೋಟ್ ವಿಧಾನ ಮಾಡುವ ಸೂತ್ರ

೪೧೦. ಲೋಟ್ ಚ ॥ ೩-೩-೧೬೨ ॥

ವಿಧ್ಯಾದಿಷ್ವರ್ಥೇಷು ಧಾತೋರ್ಲೋಟ್ ಸ್ಯಾತ್ ॥

ದ್ವಿಪದ ಸೂತ್ರ. 'ವಿಧಿನಿಮಂತ್ರಣಾಮಂತ್ರಣಾಧೀಷ್ಟಸಂಪ್ರಶ್ನಪ್ರಾರ್ಥನೇಷು' ಎಂಬುದು ಹಿಂದಿನ ಸೂತ್ರದಿಂದ ಅನುವೃತ್ತವಾಗುತ್ತದೆ. ಸೂತ್ರಾರ್ಥ—ವಿಧಿ, ನಿಮಂತ್ರಣ, ಆಮಂತ್ರಣ, ಅಧೀಷ್ಟ, ಸಂಪ್ರಶ್ನ, ಪ್ರಾರ್ಥನೆ — ಈ ಅರ್ಥಗಳು ತೋರುವಾಗ ಧಾತುವಿಗೆ ಲೋಟ್ ಬರುತ್ತದೆ. 'ಧಾತೋಃ' ಅಧಿಕಾರದಿಂದ ಲಬ್ಧವಾಗುತ್ತದೆ. ವಿಧ್ಯಾದಿಗಳ ಅರ್ಥವು ಲಿಙ್‌ನಲ್ಲಿ ವಿಶದವಾಗುತ್ತದೆ.

ಆಶೀರರ್ಥದಲ್ಲಿ ಲಕಾರ ಹೇಳುವ ಸೂತ್ರ

೪೧೧. ಆಶಿಷಿ ಲಿಙ್‌ಲೋಟೌ ॥ ೩-೩-೧೭೩ ॥

ಸುಲಭವಾದುದರಿಂದ ವೃತ್ತಿ ಬರೆಯಲಿಲ್ಲ. ದ್ವಿಪದ ಸೂತ್ರ. ಲಿಙ್ ಚ, ಲೋಟ್ ಚ ಲಿಙ್‌ಲೋಟೌ. ಸೂತ್ರಾರ್ಥ-ಆಶೀರ್ವಾದರೂಪ ಅರ್ಥ ತೋರುವಾಗ ಲಿಙ್,

ಲೋಟ್‌ಗಳು ಬರುತ್ತವೆ. ಆಗ ಲೋಟಿಗೆ ವಿಧ್ಯಾದಿ ಆರು ಅರ್ಥಗಳಲ್ಲದೆ ಆಶೀರರ್ಥವೂ ಇದೆ ಎಂದು ತಿಳಿಯಬೇಕು. 'ತಿಪ್‌ತಸ್‌ಝಿ' ಸೂತ್ರದಿಂದ ಲೋಟಿಗೆ ತಿಬಾದಿ ಆದೇಶ ಹೇಳಬೇಕು. ಭೂ+ತಿ ಎಂದಿರುವಾಗ 'ಕರ್ತರಿಶಪ್' ಸೂತ್ರದಿಂದ ಧಾತುವಿಗೆ ಶಪ್ ವಿಕರಣ. ಭೂ+ಅ+ತಿ. 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಶಪ್ ನಿಮಿತ್ತವಾಗಿ ಗುಣ. ಭೋ+ಅ+ತಿ. 'ಏಚೋಽಯವಾಯಾವಃ' ಸೂತ್ರದಿಂದ ಅವಾದೇಶ. ಭವ+ತಿ. ಇನ್ನು ಒಂಭತ್ತು ಪ್ರತ್ಯಯಗಳಲ್ಲಿಯೂ ಭವ ಎಂಬ ಅಂಗವನ್ನು ಮಾಡಿಕೊಳ್ಳಬೇಕು. ಭವ+ತಿ ಎಂದಿರುವಾಗ ವಿಶೇಷ ಕಾರ್ಯ ಹೇಳುತ್ತಾನೆ.

ಲೋಟಿನ ಇಕಾರಕ್ಕೆ ಉಕಾರ ಹೇಳುವ ಸೂತ್ರ.

**೪೧೨. ಏರುಃ || ೩-೪-೮೬ ||**

**ಲೋಟಿ ಇಕಾರಸ್ಯ ಉಃ || ಭವತು ||**

ಏಃ, ಉಃ|| ದ್ವಿಪದ ಸೂತ್ರ. 'ಲೋಟೋ ಲಙ್ವತ್' ಸೂತ್ರದಿಂದ 'ಲೋಟಃ' ಅನುವೃತ್ತಿ. ಸೂತ್ರಾರ್ಥ—ಲೋಟಿನ ಇಕಾರಕ್ಕೆ ಉಕಾರ ಬರುತ್ತದೆ. ಲೋಟ್ ಎಲ್ಲಿಯೂ ಉಳಿಯದಿರುವುದರಿಂದ ಲೋಡಾದೇಶಗಳಲ್ಲಿ ಇಕಾರವಿದ್ದರೆ ಉಕಾರ ಬರುತ್ತದೆ. ಪ್ರಕೃತ ತಿಯ ಇಕಾರಕ್ಕೆ ಉಕಾರ ಬಂದರೆ ತು ಆಗುತ್ತದೆ. ಭವತು. ಆಶೀರರ್ಥದಲ್ಲಿ ವಿಶೇಷ ಹೇಳುತ್ತಾನೆ.

ತು, ಹಿ ಗಳಿಗೆ ತಾತಙ್ ಆದೇಶ ಹೇಳುವ ಸೂತ್ರ.

**೪೧೩. ತುಹ್ಯೋಸ್ತಾತಙ್ಙಾಶಿಷ್ಯನ್ಯತರಸ್ಯಾಮ್ || ೭-೧-೩೫ ||**

**ಆಶಿಷಿ ತುಹ್ಯೋಸ್ತಾತಙ್ ವಾ | ಪರತ್ವಾತ್ ಸರ್ವಾದೇಶಃ | ಭವತಾತ್ ||**

ತುಹ್ಯೋಃ, ತಾತಙ್, ಆಶಿಷಿ, ಅನ್ಯತರಸ್ಯಾಮ್|| ನಾಲ್ಕು ಪದಗಳುಳ್ಳ ಸೂತ್ರ ಅನುವೃತ್ತಿ ಯಾವುದೂ ಇಲ್ಲ. ಸೂತ್ರಾರ್ಥ—ಆಶೀರರ್ಥದಲ್ಲಿ ತು, ಹಿ ಎರಡು ಪ್ರತ್ಯಯಗಳಿಗೆ ತಾತಙ್ ಆದೇಶವು ವಿಕಲ್ಪವಾಗಿ ಬರುತ್ತದೆ. ಅನ್ಯತರಸ್ಯಾಮ್. ಇದು ವಿಕಲ್ಪವಾಚಕ. ವಾ, ವಿಭಾಷಾ ಅನ್ಯತರಸ್ಯಾಮ್. ಇವೆಲ್ಲಾ ಪರ್ಯಾಯ ವಾಚಕ. ಇಲ್ಲಿ ತಾತಙ್ ಆದೇಶದಲ್ಲಿ ಙಕಾರ 'ಹಲಂತ್ಯಮ್' ಸೂತ್ರದಿಂದ ಇತ್. ಅಕಾರ ಉಚ್ಚಾರಣಾರ್ಥ. ತಾತ್ ಉಳಿಯುತ್ತದೆ. ಇದು ಙಿತ್ತಾದುದರಿಂದ 'ಙಿಚ್ಚ' ಸೂತ್ರದಿಂದ ತು ಎಂಬುದಕ್ಕೆ ಅಂತ್ಯಾದೇಶವಾಗಿಯೂ ಇರಬಹುದು. ಅನೇಕಾಲಾದುದರಿಂದ 'ಅನೇಕಾಲ್ ಶಿತ್ ಸರ್ವಸ್ಯ' ಸೂತ್ರದಿಂದ ಸರ್ವಾದೇಶವಾಗಿಯೂ ಬರಬಹುದು. ಯಾವುದು ಮಾಡಬೇಕೆಂದು ಸಂಶಯ ಬಂದಾಗ 'ಪರತ್ವಾತ್ ಸರ್ವಾದೇಶಃ' ಎನ್ನುತ್ತಾನೆ. 'ಅನೇಕಾಲ್ ಶಿತ್ ಸರ್ವಸ್ಯ' ಇದು ಪರಪಠಿ

ಭಾಷೆಯಾದುದರಿಂದ ಇದರಿಂದ ಸರ್ವಾದೇಶವಾಗಿ ಬರುತ್ತದೆ. ಭವ ಅಂಗ. ತುವಿಗೆ ತಾತ್ ಬಂದರೆ ಭವತಾತ್. ದ್ವಿವಚನದಲ್ಲಿ ತಸ್ ಪ್ರತ್ಯಯ. ಭವ+ತಸ್ ಎಂದಿರುವಾಗ ಅದಕ್ಕೆ ಆದೇಶ ಹೇಳುತ್ತಾನೆ.

ಲೋಟಿನ ತಸಾದಿಗಳಿಗೆ ತಾಮಾದಿ ಆದೇಶ ಹೇಳುವ ಸೂತ್ರ

೪೧೪. ಲೋಟೋ ಲಙ್ವತ್ ॥ ೩-೪-೮೫ ॥

ಲೋಟಸ್ತಾಮಾದಯಃ ಸಲೋಪಶ್ಚ ॥

ಲೋಟಃ ಲಙ್ವತ್ ॥ ದ್ವಿಪದ ಸೂತ್ರ. 'ಲಙಃ ಇವ ಲಙ್ವತ್'. ಲಙಃ ಸ್ಥಾನ ಷಷ್ಠಿಯಾದುದರಿಂದ ಲಙಿನ ಸ್ಥಾನದಲ್ಲಿ ಬರುವುದು ಬರುತ್ತದೆಯೆಂದು ತಿಳಿಯಬೇಕು. ಸೂತ್ರಾರ್ಥ—ಲೋಟಿನ ಸ್ಥಾನಕ್ಕೆ ಲಙಿಗೆ ಬರುವ ಆದೇಶಗಳು ಬರುತ್ತವೆ. ಲಙಿಗೆ ಒಂಭತ್ತು ಆದೇಶಗಳು ಬಂದರೂ ಅವುಗಳಲ್ಲಿ ಕೆಲವೇ ಬರುತ್ತವೆ. ಅವು ಮುಂದಿನ ಸೂತ್ರದಿಂದ ಸ್ಪಷ್ಟವಾಗುವುದರಿಂದ ತಾಮಾದಿ ಆದೇಶಗಳೂ ಸಲೋಪವೂ ಬರುತ್ತದೆಂದು ವೃತ್ತಿಯಲ್ಲಿ ಹೇಳಿದೆ.

ತಸಾದಿಗಳಿಗೆ ತಾಮಾದಿ ಆದೇಶ ಹೇಳುವ ಸೂತ್ರ

೪೧೫. ತಸ್ಥಸ್ಥಮಿಪಾಂ ತಾಂತಂತಾಮಃ ॥ ೩-೪-೧೦೧ ॥

ಙಿತಶ್ಚತುರ್ಣಾಂ ತಾಮಾದಯಃ ಕ್ರಮಾತ್ ಸ್ಯುಃ ॥ ಭವತಾಂ | ಭವಂತು॥

ದ್ವಿಪದ ಸೂತ್ರ. ತಸ್‌ಚ, ಥಸ್‌ಚ, ಥಚ, ಮಿಪ್‌ಚ, ತಸ್ಥಸ್ಥಮಿಪಃ, ತೇಷಾಮ್. ತಾಮ್‌ಚ, ತಮ್‌ಚ, ತಚ, ಅಮ್‌ಚ, ತಾಂತಂತಾಮಃ. 'ನಿತ್ಯಂ ಙಿತಃ' ಸೂತ್ರದಿಂದ 'ಙಿತಃ' ಅನುವೃತ್ತಿ. ಸೂತ್ರಾರ್ಥ—ಙಿತ್ತಾದ ಲಕಾರಗಳ ಆದೇಶಗಳಾದ ತಸ್, ಥಸ್, ಥ, ಮಿಪ್‌ಗಳಿಗೆ ಕ್ರಮವಾಗಿ ತಾಮ್, ತಮ್, ತ, ಅಮ್ ಆದೇಶಗಳು ಬರುತ್ತವೆ. ಸ್ಥಾನ್ಯಾದೇಶಗಳು ಸಮವಾಗಿರುವುದರಿಂದ ಯಥಾಸಂಖ್ಯಪರಿಭಾಷೆ ಕ್ರಮವಾಗಿ ಹೇಳಬೇಕು. ಪ್ರಕೃತ ಲಙಿನಂತೇ ಲೋಟ್ ಎಂದುದರಿಂದ ಈ ಕಾರ್ಯವು ಲೋಟಿಗೂ ಬರುತ್ತದೆಯೆಂದು ತಿಳಿಯಬೇಕು. ಇಲ್ಲಿ ಸಲೋಪ ಹೇಳುವ 'ನಿತ್ಯಂಙಿತಃ' ಸೂತ್ರವೂ ಬರುವುದಾದರೂ ಉತ್ತಮಪುರುಷದಲ್ಲಿ ಅದರ ಕಾರ್ಯವಾದುದರಿಂದ ಮುಂದೆ ಹೇಳುತ್ತಾನೆ. ತಸ್ ಪ್ರತ್ಯಯಕ್ಕೆ ತಾಮ್ ಬಂದರೆ ಭವ+ತಸ್—ಭವತಾಮ್ ಎಂದಾಗುತ್ತದೆ. ಬಹುವಚನದಲ್ಲಿ ಝಿ ಪ್ರತ್ಯಯ ಬಂದಾಗ ಹಿಂದಿನಂತೆ 'ಝೋಽನ್ತಃ' ಸೂತ್ರದಿಂದ ಝಕ್ಕೆ ಅಂತಾದೇಶ. ಅಂತಿ ಎಂದಿರುವಾಗ 'ಏರುಃ' ಸೂತ್ರದಿಂದ ಇಕಾರಕ್ಕೆ ಉಕಾರಾದೇಶ. ಭವ ಅಂಗ. ಭವ+ಅಂತು ಎಂದಿರುವಾಗ 'ಅತೋಗುಣೇ' ಸೂತ್ರದಿಂದ ಪರರೂಪ. ಭವಂತು. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬಂದಾಗ ಅದಕ್ಕೆ ಆದೇಶ ಹೇಳುತ್ತಾನೆ.

### ಲೋಟಿನ ಸಿಪಿಗೆ ಹಿ ಆದೇಶ ಹೇಳುವ ಸೂತ್ರ.

**೪೧೩. ಸೇರ್ಹ್ಯಪಿಚ್ಚ || ೩-೪-೮೭ ||**

**ಲೋಟಃ ಸೇರ್ಹಿಃ ಸೋಽಪಿಚ್ಚ ||**

ಸೇಃ, ಹಿ, ಅಪಿತ್, ಚ || ನಾಲ್ಕು ಪದಗಳುಳ್ಳ ಸೂತ್ರ. 'ಲೋಟೋ ಲಙ್ವತ್' ಸೂತ್ರದಿಂದ ಲೋಟಃ ಅನುವೃತ್ತಿ. ಸೂತ್ರಾರ್ಥ—ಲೋಟಿನ ಆದೇಶ ವಾದ ಸಿಪಿಗೆ ಹಿ ಆದೇಶ ಬರುತ್ತದೆ. ಅದು ಅಪಿತ್ತಿನಂತೆ ಆಗುತ್ತದೆ. ಸಿಪ್ ಪಿತ್ತಾದುದರಿಂದ ಅದರ ಸ್ಥಾನಕ್ಕೆ ಬಂದ ಆದೇಶವೂ ಸ್ಥಾನಿವದ್ಭಾವದಿಂದ ಪಿತ್ತಾಗಬೇಕಾದುದರಿಂದ ಪಿತ್ತಿನ ಕಾರ್ಯ ಯಾವುದೂ ಬರುವುದಿಲ್ಲ. ಭವ ಅಂಗ. ಸಿಪಿಗೆ ಹಿ ಬಂದರೆ ಭವ+ಹಿ ಎಂದಾಗುತ್ತದೆ. ಈಗ ಆ ಲೋಪ ಹೇಳುತ್ತಾನೆ.

### ಹಿಗೆ ಲುಕ್ ಹೇಳುವ ಸೂತ್ರ.

**೪೧೭. ಅತೋ ಹೇಃ || ೬-೪-೧೦೫ ||**

**ಅತಃ ಪರಸ್ಯ ಹೇರ್ಲುಕ್ || ಭವ | ಭವತಾತ್ | ಭವತಮ್ | ಭವತ ||**

ಅತಃ, ಹೇಃ || ದ್ವಿಪದ ಸೂತ್ರ. ಅತಃ ಪಂಚಮೀ, ಪಂಚಮಿಯಾದುದರಿಂದ ಪರಕ್ಕೆ ಕಾರ್ಯವೆಂದು ತಿಳಿಯಬೇಕು. ಹೇಃ ಷಷ್ಠೀ. 'ಚಿಣೋ ಲುಕ್' ಸೂತ್ರದಿಂದ ಲುಕ್ ಅನುವೃತ್ತಿ. ಸೂತ್ರಾರ್ಥ—ಅದಂತ(ಹ್ರಸ್ವಾಕಾರಾಂತ)ವಾದ ಅಂಗದ ಪರದಲ್ಲಿರುವ ಹಿಗೆ ಲುಕ್. 'ಅಂಗಸ್ಯ' ಅಧಿಕಾರವಿರುವುದರಿಂದ 'ಅತಃ' ಅದಕ್ಕೆ ವಿಶೇಷಣವಾದುದರಿಂದ ಅದಂತಾಂಗವೆಂದು ಲಬ್ಧವಾಗುತ್ತದೆ. ಲುಕ್ ಎಂದರೆ ಪ್ರತ್ಯಯ ಲೋಪ. ಲುಕ್ ಹೇಳಿ ಲೋಪ ಹೇಳಿದುದರಿಂದ ಪ್ರತ್ಯಯಲಕ್ಷಣಕಾರ್ಯ ಬರುವುದಿಲ್ಲ. ಭವ+ಹಿ ಎಂದಿರುವಾಗ ಅಕಾರದ ಪರದಲ್ಲಿರುವ ಹಿಗೆ ಲೋಪ ಬಂದರೆ ಭವ ಎಂದಾಗುತ್ತದೆ. ಆಶೀರ್ವಾದಾರ್ಥವಿವಕ್ಷಾ ಮಾಡಿದಾಗ 'ತುಹ್ಯೋಸ್ತಾತಙ್' ಸೂತ್ರದಿಂದ ಹಿಗೆ ತಾತಙ್ ಆದೇಶ ಬಂದರೆ ಭವತಾತ್ ಎಂದಾಗುತ್ತದೆ. ಮಧ್ಯಮಪುರುಷ ಏಕವಚನದಲ್ಲಿ ಭವ, ಭವತಾತ್ ಎರಡು ರೂಪಗಳು. ಮಧ್ಯಮ ದ್ವಿವಚನದಲ್ಲಿ ಥಸ್ ಪ್ರತ್ಯಯ. ಅದಕ್ಕೆ 'ತಸ್ಥಸ್ಥಮಿಪಾಂ' ಸೂತ್ರದಿಂದ ತಮ್ ಆದೇಶ. ಭವ ಅಂಗ. ಭವತಮ್. ಥಕ್ಕೆ ಅದರಿಂದಲೇ ತ ಆದೇಶ. ಭವತ. ಉತ್ತಮಪುರುಷದಲ್ಲಿ ಮಿಪ್ ಪ್ರತ್ಯಯಕ್ಕೆ ಅದರಿಂದಲೇ ಅಮ್ ಆದೇಶ ಬರುತ್ತಿರುವಾಗ ಅದಕ್ಕೆ ಅಪವಾದವಾಗಿ ನಿ ಆದೇಶ ಹೇಳುತ್ತಾನೆ.

ಲೋಟಿನ ಮಿಗೆ ನಿ ಆದೇಶ ಹೇಳುವ ಸೂತ್ರ.

೪೧೮. ಮೇರ್ನಿಃ ॥ ೩-೪-೮೯ ॥

ಲೋಟೋ ಮೇರ್ನಿಃ ಸ್ಯಾತ್ ॥

ಮೇಃ, ನಿಃ ॥ ದ್ವಿಪದ ಸೂತ್ರ. 'ಲೋಟೋ ಲಙ್ವತ್' ಸೂತ್ರದಿಂದ ಲೋಟಃ ಅನುವೃತ್ತಿ. ಸೂತ್ರಾರ್ಥ—ಲೋಡಾದೇಶವಾಗಿ ಬಂದ ಮಿಪ್ ಪ್ರತ್ಯಯಕ್ಕೆ ನಿ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. ಹಿಂದಿನಂತೆ ಭವ ಅಂಗ ವೆಂದು ತಿಳಿಯಬೇಕು. ಭವ+ನಿ ಎಂದಿರುವಾಗ, ಉತ್ತಮಪುರುಷ ಪ್ರತ್ಯಯಗಳಿಗೆ ಆಡಾಗಮ ಹೇಳುತ್ತಾನೆ.

ಲೋಟಿನ ಉತ್ತಮಪುರುಷಕ್ಕೆ ಆಡಾಗಮ ಹೇಳುವ ಸೂತ್ರ.

೪೧೯. ಆಡುತ್ತಮಸ್ಯ ಪಿಚ್ಚ ॥ ೩-೪-೯೨ ॥

ಲೋಡುತ್ತಮಸ್ಯಾಟ್ ಸ್ಯಾತ್ ಪಿಚ್ಚ ॥ ಹಿನ್ಯೋರುತ್ವಂ ನ, ಇಕಾರೋಚ್ಚಾರಣಸಾಮರ್ಥ್ಯಾತ್ ॥

ಆಟ್, ಉತ್ತಮಸ್ಯ, ಪಿತ್, ಚ ॥ ನಾಲ್ಕು ಪದಗಳುಳ್ಳ ಸೂತ್ರ. 'ಲೋಟೋ ಲಙ್ವತ್' ಸೂತ್ರದಿಂದ ಲೋಟಃ ಅನುವೃತ್ತಿ. ಸೂತ್ರಾರ್ಥ—ಲೋಟಿನ ಉತ್ತಮ ಪುರುಷ ಪ್ರತ್ಯಯಗಳಿಗೆ ಆಟ್ ಆಗಮ ಬರುತ್ತದೆ. ಆಟ್ ಟಿತ್ತಾದುದರಿಂದ 'ಆದ್ಯಂತೌ ಟಕಿತೌ' ಪರಿಭಾಷೆಯಿಂದ ಆದ್ಯವಯವವಾಗಿ ಬರುತ್ತದೆ. ಮಿಪ್ ಪಿತ್ತಾಗಿದ್ದರೂ ವಸ್ ಮಸ್ ಅಪಿತ್ತಾದುದರಿಂದ ಅಲ್ಲಿ ಪಿತ್ತಿನ ಕಾರ್ಯ ಬರುವುದ ಕ್ಕೋಸ್ಕರ ಆಟ್ ಪಿತ್ತಾಗುತ್ತದೆ ಎಂದು ಹೇಳಿರುತ್ತಾನೆ. ಉತ್ತಮದ ಮಿಪ್‌ಗೆ ನಿ ಆದೇಶ ಬಂದಮೇಲೆ ಅಲ್ಲಿನ ಇಕಾರಕ್ಕೆ 'ಏರುಃ' ಸೂತ್ರದಿಂದ ಉತ್ವ ಏಕೆ ಬರಲಿಲ್ಲ? ಹಾಗೇ ಮಧ್ಯದಲ್ಲಿ ಹಿ ಆದೇಶ ಬಂದಾಗಲೂ ಉತ್ವ ಏಕೆ ಬರಲಿಲ್ಲ? ಅಂದರೆ ಅದಕ್ಕೆ ಸಮಾಧಾನ 'ಹಿನ್ಯೋರುತ್ವಂ ನ' ಎಂಬ ವಾಕ್ಯ ಹೇಳುತ್ತದೆ. ಆದೇಶ ಬಂದಮೇಲೆ ಉತ್ವ ಬರುವುದಾಗಿದ್ದರೆ ಆದೇಶ ಹೇಳುವಾಗಲೇ ಹುಃ, ನುಃ ಎಂದೇ ಪಾಣಿನಿ ಉಚ್ಚರಿಸುತ್ತಿದ್ದನು. ಇಕಾರ ಹೇಳಿ ಉಕಾರ ಹೇಳುವುದಾದರೆ ಇಕಾರ ಹೇಳಿದುದು ವ್ಯರ್ಥವಾಗುತ್ತದೆ. ಆದುದರಿಂದ ಉತ್ವ ಬರುವುದಿಲ್ಲವೆನ್ನಬೇಕು. ನಿ ಎಂಬುದಕ್ಕೆ ಆಟ್ ಆದ್ಯವಯವವಾಗಿ ಬಂದರೆ ಆನಿ ಎಂದಾಗುತ್ತದೆ. ಭವ+ಆನಿ ಎಂದಿರುವಾಗ 'ಅಕಃ ಸವರ್ಣೇ ದೀರ್ಘಃ' ಸೂತ್ರದಿಂದ ಸವರ್ಣದೀರ್ಘ. ಭವಾನಿ. ಈಗ ರೇಫಘಟಿತವಾದ ಕೆಲವು ಉಪಸರ್ಗಗಳ ಪದದಲ್ಲಿ ಭವಾನಿ ಪದ ಬಂದಾಗ ಅಲ್ಲಿ ನಕಾರಕ್ಕೆ ಣತ್ವ ಹೇಳುವ ಸೂತ್ರ ಹೇಳುತ್ತಾನೆ. ಮೊದಲು ಉಪಸರ್ಗಗಳು ಧಾತುವಿನ ಸಮೀಪದಲ್ಲಿ ಎಲ್ಲಿ ಬರುತ್ತವೆಂಬುದನ್ನು ತಿಳಿಸುತ್ತಾನೆ.

ಗತ್ಯುಪಸರ್ಗಗಳ ಸ್ಥಾನವ್ಯವಸ್ಥೆಯನ್ನು ಹೇಳುವ ಸೂತ್ರ.

೪೨೦. ತೇ ಪ್ರಾಗ್ಧಾತೋಃ || ೧-೪-೮೦ ||

ತೇ ಗತ್ಯುಪಸರ್ಗಸಂಜ್ಞಾ ಧಾತೋಃ ಪ್ರಾಗೇವ ಪ್ರಯೋಕ್ತವ್ಯಾಃ ||

ತೇ, ಪ್ರಾಕ್, ಧಾತೋಃ || ತ್ರಿಪದ ಸೂತ್ರ. 'ಉಪಸರ್ಗಾಃ ಕ್ರಿಯಾಯೋಗೇ', 'ಗತಿಶ್ಚ' ಇವೆರಡು ಹಿಂದಿನ ಸೂತ್ರಗಳು. ತೇ ಎಂಬುದು ಅವುಗಳನ್ನು ಪರಾಮರ್ಶಿಸುತ್ತದೆ. ಸೂತ್ರಾರ್ಥ — ಹಿಂದೆ ಹೇಳಿದ ಗತಿ, ಉಪಸರ್ಗಸಂಜ್ಞೆಯುಳ್ಳವುಗಳು ಧಾತುವಿನ ಪೂರ್ವದಲ್ಲಿಯೇ ಪ್ರಯೋಗಿಸಲ್ಪಡಬೇಕು. ಪೂರ್ವದಲ್ಲಿಯಾಗಲೀ, ಪರದಲ್ಲಿಯಾಗಲೀ ಪ್ರಯೋಗಿಸಲು ಬರುತ್ತಿರುವಾಗ ಪೂರ್ವದಲ್ಲಿಯೆಂದು ಈ ಸೂತ್ರ ಹೇಳಿದುದರಿಂದ ಪೂರ್ವದಲ್ಲಿಯೇ ಎಂದು ನಿಯಮವೆಂದು ತಿಳಿಯಬೇಕು. ಪ್ರ, ಪರಾ ಮುಂತಾದ ಉಪಸರ್ಗಗಳು ಪೂರ್ವದಲ್ಲಿಯೇ ಹೇಳಬೇಕು. ಪ್ರ ಭವಾನಿ ಎಂದಿರುವಾಗ ಣತ್ವ ಹೇಳುತ್ತಾನೆ. ಇಲ್ಲಿ ಸಮಾನ ಪದವಿಲ್ಲದುದರಿಂದ 'ಅಟ್ ಕುಪ್ವಾಙ್' ಸೂತ್ರದಿಂದ ಣತ್ವ ಬರುವುದಿಲ್ಲ. ಪ್ರ ಒಂದು ಪದ. ಭವಾನಿ ಒಂದು ಪದ. ಭಿನ್ನ ಪದಗಳು. ಆದುದರಿಂದ ಸೂತ್ರಾಂತರದಿಂದ ಹೇಳಬೇಕು.

ಲೋಟಿನ ಆನಿಯ ನಕಾರಕ್ಕೆ ಣತ್ವ ಹೇಳುವ ಸೂತ್ರ.

೪೨೧. ಆನಿ ಲೋಟ್ || ೮-೪-೧೬ ||

ಉಪಸರ್ಗಸ್ಥಾನ್ನಿಮಿತ್ತಾತ್ಪರಸ್ಯ ಲೋಡಾದೇಶಸ್ಯಾನೀತ್ಯಸ್ಯ ನಸ್ಯ ಣಃ ಸ್ಯಾತ್ || ಪ್ರಭವಾಣಿ |

ವಾ|| (ದುರಃ ಷತ್ವಣತ್ವಯೋರುಪಸರ್ಗತ್ವಪ್ರತಿಷೇಧೋ ವಕ್ತವ್ಯಃ) ದುಃಸ್ಥಿತಿಃ | ದುರ್ಭವಾನಿ |

ವಾ|| (ಅಂತಶ್ಶಬ್ದಸ್ಯಾಙ್‌ಕಿವಿಧಿಣತ್ವೇಷೂಪಸರ್ಗತ್ವಂ ವಾಚ್ಯಮ್) ಅಂತರ್ಭವಾಣಿ ||

ದ್ವಿಪದ ಸೂತ್ರ. ಆನಿ, ಲೋಟ್ ಷಷ್ಠ್ಯಂತ ಪದಗಳು. ಷಷ್ಠೀ ಲುಪ್ತವಾಗಿದೆ. 'ರಷಾಭ್ಯಾಂ ನೋ ಣಃ ಸಮಾನಪದೇ' ಸೂತ್ರದಿಂದ 'ರಷಾಭ್ಯಾಂ', 'ನಃ', 'ಣಃ', 'ಉಪಸರ್ಗಾದಸಮಾಸೇಽಪಿ' ಸೂತ್ರದಿಂದ 'ಉಪಸರ್ಗಾತ್' ಪದಾನುವೃತ್ತಿ. ಉಪಸರ್ಗ ಪದಕ್ಕೆ ಉಪಸರ್ಗಸ್ಥವೆಂದು ಲಕ್ಷಣಾವೃತ್ತಿಯಿಂದ ಅರ್ಥ. ಸೂತ್ರಾರ್ಥ — ಉಪಸರ್ಗದಲ್ಲಿರುವ ನಿಮಿತ್ತದ ಅಂದರೆ ರೇಫ ಅಥವಾ ಷಕಾರದ ಪರದಲ್ಲಿರುವ ಲೋಟಿನ ಆದೇಶವಾದ ಆನಿ ಎಂಬುದರ ನಕಾರಕ್ಕೆ ಣಕಾರಾದೇಶ ಬರುತ್ತದೆ. ಭಿನ್ನ ಪದವಾದುದರಿಂದ ಪುನಃ ಣತ್ವ ಹೇಳಿರುತ್ತಾನೆ. ಪ್ರಭವಾಣಿ ಉದಾಹರಣೆ. ಪ್ರ ಉಪಸರ್ಗ. ಅದರಲ್ಲಿ ರೇಫವಿದೆ, ಇದು ಣತ್ವಕ್ಕೆ ನಿಮಿತ್ತ. ಅದರ ಪರದಲ್ಲಿ ಲೋಟಿನ ಆನಿ ಎಂಬುದರ ನಕಾರವಿದೆ. ಆದುದರಿಂದ ನಕಾರಕ್ಕೆ ಣಕಾರ.

**ವಾರ್ತಿಕಾರ್ಥ**—ಷತ್ವ, ಣತ್ವ ರೂಪಕಾರ್ಯ ಮಾಡುವಾಗ ದುರ್ ಎಂಬ ಉಪಸರ್ಗಕ್ಕೆ ಉಪಸರ್ಗಧರ್ಮವಿಲ್ಲವೆಂದು ಹೇಳಬೇಕು. ಆಗ ಉಪಸರ್ಗ ಸಂಜ್ಞೆ ಇಲ್ಲವೆಂದರ್ಥ. ದುರ್ ಎಂಬುದು ಪ್ರ, ಪರಾ ಸಮುದಾಯದಲ್ಲಿ ಸೇರಿದೆ. ಆದರಿಂದ ಸಾಮಾನ್ಯಪ್ರಾಪ್ತವಾದ ಸಂಜ್ಞೆಗೆ ಇದು ಅಪವಾದ. ದುಃಸ್ಥಿತಿಃ || ಇಲ್ಲಿ 'ಉಪಸರ್ಗಾತ್ ಸುನೋತಿ' ಸೂತ್ರದಿಂದ ಉಪಸರ್ಗದ ಪರದಲ್ಲಿರುವ ಸ್ಥಾ ಸು ಮುಂತಾದ ಧಾತುಗಳ ಸಕಾರಕ್ಕೆ ಷತ್ವ ಬರುತ್ತದೆ ಎಂದು ಹೇಳಿದೆ. ದುರ್ ಎಂಬುದಕ್ಕೆ ಷತ್ವ ಮಾಡುವಾಗ ಉಪಸರ್ಗ ಸಂಜ್ಞೆಯಿಲ್ಲವೆಂದು ನಿಷೇಧಿಸಿರುವುದರಿಂದ ಸ್ಥಿತಿ ಎಂಬಲ್ಲಿ ಸ್ಥಾ ಧಾತುವಿನ ಸಕಾರಕ್ಕೆ ಷತ್ವ ಬಂದಿಲ್ಲ. ರೇಫಕ್ಕೆ ವಿಸರ್ಗ ಬಂದಿದೆ. ದುರ್ಭವಾನಿ. ಇದು ಣತ್ವ ಬಾರದಿರುವುದಕ್ಕೆ ಉದಾಹರಣೆ. ಹಿಂದೆ ಹೇಳಿದ 'ಆನಿ ಲೋಟ್' ಸೂತ್ರದಿಂದ ದುರ್ ಎಂಬುದಕ್ಕೆ ಉಪಸರ್ಗ ಸಂಜ್ಞೆಯಿದ್ದಿದ್ದರೆ ನಕಾರಕ್ಕೆ ಣತ್ವ ಬರಬೇಕಿತ್ತು. ಣತ್ವ ವಿಷಯದಲ್ಲಿ ನಿಷೇಧಿಸಿರುವುದರಿಂದ ಣತ್ವ ಬಂದಿಲ್ಲ.

**ವಾರ್ತಿಕಾರ್ಥ**—ಅಂತರ್ ಎಂಬ ಶಬ್ದಕ್ಕೆ ಅಙ್ವಿಧಿ, ಕಿವಿಧಿ, ಣತ್ವ ಈ ಕಾರ್ಯಗಳನ್ನು ಮಾಡುವಾಗ ಉಪಸರ್ಗ ಸಂಜ್ಞೆಯನ್ನು ಹೇಳಬೇಕು. ಅಂತರ್ ಎಂಬುದು ಪ್ರ, ಪರಾ ಮುಂತಾದ ಸಮುದಾಯದಲ್ಲಿ ಹೇಳಿಲ್ಲ. ಆದುದರಿಂದ ಉಪಸರ್ಗ ಸಂಜ್ಞೆಯಿಲ್ಲದಿರುವಾಗ ಈ ಮೂರು ಕಾರ್ಯಗಳನ್ನು ಮಾಡುವಾಗ ಹೊಸದಾಗಿ ಉಪಸರ್ಗ ಸಂಜ್ಞೆ ಈ ವಾರ್ತಿಕದಲ್ಲಿ ಹೇಳಿದೆ. ಅಂತರ್ಭವಾಣಿ. ಇಲ್ಲಿ ಣತ್ವ ಕಾರ್ಯ ಮಾಡುವುದರಿಂದ ಅಂತರ್ ಎಂಬುದಕ್ಕೆ ಉಪಸರ್ಗಸಂಜ್ಞೆ ಬಂದಿದೆ. ಉಪಸರ್ಗದ ರೇಫದ ಪರದಲ್ಲಿ ಆನಿ ನಕಾರ ಬಂದುದರಿಂದ 'ಆನಿಲೋಟ್' ಸೂತ್ರದಿಂದ ಣತ್ವ ಬಂದಿದೆ.

ಉತ್ತಮಪುರುಷ ದ್ವಿವಚನದಲ್ಲಿ ವಸ್ ಪ್ರತ್ಯಯ, ಭವ ಅಂಗ. ಭವ+ವಸ್ ಎಂದಿರುವಾಗ 'ಆಡುತ್ತಮಸ್ಯ ಪಿಚ್ಚ' ಸೂತ್ರದಿಂದ ವಸ್ ಪ್ರತ್ಯಯಕ್ಕೆ ಆಡಾಗಮ. ಭವ+ಆವಸ್. ಲೋಟಿಗೆ ಲಙಿನಂತೆ ಕಾರ್ಯ ಹೇಳಿರುವುದರಿಂದ ಇಲ್ಲಿ ಸಕಾರ ಲೋಪ ಹೇಳುತ್ತಾನೆ.

ಉತ್ತಮದ ಸಕಾರಕ್ಕೆ ಲೋಪ ಹೇಳುವ ಸೂತ್ರ.

೪೨೨. ನಿತ್ಯಂ ಙಿತಃ || ೩-೪-೯೯ ||

**ಸಕಾರಾಂತಸ್ಯ ಙಿದುತ್ತಮಸ್ಯ ನಿತ್ಯಂ ಲೋಪಃ || 'ಅಲೋಂತ್ಯಸ್ಯ' ಇತಿ ಸಲೋಪಃ || ಭವಾವ || ಭವಾಮ ||**

ದ್ವಿಪದ ಸೂತ್ರ. 'ಸ ಉತ್ತಮಸ್ಯ' ಸೂತ್ರವೂ, 'ಇತಶ್ಚ ಲೋಪಃ' ಸೂತ್ರದಿಂದ 'ಲೋಪಃ' ಪದವೂ ಅನುವೃತ್ತವಾಗುತ್ತವೆ. ಸ ಎಂಬುದು ಲುಪ್ತಷಷ್ಠೀಕ.

'ಉತ್ತಮಸ್ಯ' ಎಂಬುದಕ್ಕೆ ವಿಶೇಷಣ. ತದಂತಲಾಭ. ಸೂತ್ರಾರ್ಥ— ಸಕಾರಾಂತವಾದ ಙಿತ್ತಾದ ಲಕಾರದ ಉತ್ತಮಪುರುಷಕ್ಕೆ ನಿತ್ಯವಾಗಿ ಲೋಪ ಬರುತ್ತದೆ. 'ಅಲೋಂತ್ಯಸ್ಯ' ಪರಿಭಾಷೆಯಿಂದ ಅಂತ್ಯ ಸಕಾರಕ್ಕೆ ಲೋಪ ಙಿತ್ ಲಕಾರ ಲಙ್, ಲಿಙ್, ಲುಙ್, ಲೃಙ್— ಇವುಗಳ ಉತ್ತಮ ಸಕಾರಕ್ಕೆ ಲೋಪವೆಂದು ತಿಳಿಯಬೇಕು. ಪ್ರಕೃತ ಲಙಿನ ಭಾವ ಲೋಟಿಗೆ ಹೇಳಿದುದರಿಂದ ಲೋಟ್ ಙಿತ್ತಿನಂತಾದುದರಿಂದ ಇದರ ಉತ್ತಮ ಸಕಾರಕ್ಕೆ ಲೋಪ ಬರುತ್ತದೆ, ಭವ+ಆವ. ಸವರ್ಣದೀರ್ಘ. ಭವಾವ. ಬಹುವಚನದಲ್ಲಿ ಮಸ್. ಭವ+ಮಸ್. ಆಟ್. ಭವ+ಆಮಸ್. ಸವರ್ಣದೀರ್ಘ. ಭವಾಮಸ್. ಈಗ ಹೇಳಿದ ಸೂತ್ರದಿಂದ ಸಕಾರಕ್ಕೆ ಲೋಪ. ಭವಾಮ (ಆಗಬೇಕು).

ಲಙ್ ವಿಧಾನ ಮಾಡುವ ಸೂತ್ರ.

**೪೨೩. ಅನದ್ಯತನೇ ಲಙ್ || ೩-೨-೧೧೧ ||**

**ಅನದ್ಯತನಭೂತಾರ್ಥವೃತ್ತೇರ್ಧಾತೋರ್ಲಙ್ ಸ್ಯಾತ್ ||**

ದ್ವಿಪದ ಸೂತ್ರ. 'ಭೂತೇ', 'ಧಾತೋಃ' ಅಧಿಕಾರ. ಅನದ್ಯತನೇ, ಭೂತೇ, ಧಾತ್ವರ್ಥದಲ್ಲಿ ಅನ್ವಯ ಹೊಂದುತ್ತವೆ. ಸೂತ್ರಾರ್ಥ— ಅನದ್ಯತನಭೂತಾರ್ಥವನ್ನು ಹೇಳುವ ಧಾತುವಿನ ಮೇಲೆ ಲಙ್ ಬರುತ್ತದೆ. ಕಳೆದ ರಾತ್ರಿಯ ಅರ್ಧದ ಹಿಂದಿನ ಕಾಲ ಅನದ್ಯತನಭೂತವೆಂದು ಹಿಂದೆ ಹೇಳಿದೆ. ಲಙಿಗೆ ತಿಬಾದ್ಯಾದೇಶಗಳು ಬರುತ್ತವೆ, ಭೂ+ತಿ ಎಂದಿರುವಾಗ 'ಕರ್ತರಿ ಶಪ್' ಸೂತ್ರದಿಂದ ಶಪ್ ವಿಕರಣ. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ಅವಾದೇಶ. ಭವ+ತಿ. ಇಲ್ಲಿಯೂ ಶಪ್ ಬರುವುದರಿಂದ ಭವ ಎಂಬುದು ಅಂಗವೆಂದು ತಿಳಿಯಬೇಕು. ಭವ ಅಂಗಕ್ಕೆ ಈಗ ಅಡಾಗಮ ಹೇಳುತ್ತಾನೆ.

ಅಂಗಕ್ಕೆ ಅಡಾಗಮ ವಿಧಿಸುವ ಸೂತ್ರ.

**೪೨೪. ಲುಙ್‌ಲಙ್‌ಲೃಙ್ ಕ್ಷ್ವಡುದಾತ್ತಃ || ೬-೪-೭೧ ||**

**ಏಷ್ವಙ್ಗಸ್ಯಾಟ್ ||**

ಲುಙ್‌ಲಙ್‌ಲೃಙ್‌ಕ್ಷು, ಅಟ್, ಉದಾತ್ತಃ || ತ್ರಿಪದ ಸೂತ್ರ. 'ಅಂಗಸ್ಯ' ಅಧಿಕಾರ. ಸೂತ್ರಾರ್ಥ— ಲುಙ್, ಲಙ್, ಲೃಙ್ ಇವು ಪರವಾದಾಗ ಅಂಗಕ್ಕೆ ಉದಾತ್ತಸ್ವರವುಳ್ಳ ಅಡಾಗಮ ಬರುತ್ತದೆ. ಅಟ್ ಟಿತ್ತಾದುದರಿಂದ 'ಆದ್ಯಂತೌ ಟಕಿತೌ' ಸೂತ್ರದಿಂದ ಅಂಗದ ಆದ್ಯವಯವವಾಗಿ ಬರುತ್ತದೆ. ಭವ ಅಂಗದ ಆದ್ಯವಯವವಾಗಿ ಬಂದರೆ ಅಭವ+ತಿ ಎಂದಾಗುತ್ತದೆ. ಈಗ ಪ್ರತ್ಯಯದ ಇಕಾರಕ್ಕೆ ಲೋಪ ಹೇಳುತ್ತಾನೆ.

## ಪರಸ್ಮೈಪದದ ಇಕಾರಕ್ಕೆ ಲೋಪ ಹೇಳುವ ಸೂತ್ರ.

### ४२७. ಇತಶ್ಚ ॥ ३-४-१०० ॥

ಙಿತೋ ಲಸ್ಯ ಪರಸ್ಮೈಪದಮಿಕಾರಾಂತಂ ಯತ್ ತದಂತಸ್ಯ ಲೋಪಃ ॥ ಅಭವತ್ । ಅಭವತಾಮ್ । ಅಭವನ್ ॥ ಅಭವಃ । ಅಭವತಮ್ । ಅಭವತ ॥ ಅಭವಮ್ । ಅಭವಾವ । ಅಭವಾಮ ॥

ಇತಃ, ಚ ॥ ದ್ವಿಪದ ಸೂತ್ರ. 'ಇತಶ್ಚ ಲೋಪಃ ಪರಸ್ಮೈಪದೇಷು' ಸೂತ್ರದಿಂದ, 'ಲೋಪಃ', 'ಪರಸ್ಮೈಪದೇಷು', 'ನಿತ್ಯಂಙಿತಃ' ಸೂತ್ರದಿಂದ 'ಙಿತಃ' ಪದಗಳು ಅನುವೃತ್ತವಾಗುತ್ತವೆ. 'ಲಸ್ಯ' ಅಧಿಕಾರ. 'ಪರಸ್ಮೈಪದೇಷು' ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಇತಃ ಪರಸ್ಮೈಪದಕ್ಕೆ ವಿಶೇಷಣವಾದುದರಿಂದ ತದಂತಲಾಭ ಸೂತ್ರಾರ್ಥ—ಙಿತ್ತಾದ ಲಕಾರದ ಸ್ಥಾನಕ್ಕೆ ಬಂದ ಇಕಾರಾಂತವಾದ ಪರಸ್ಮೈಪದಕ್ಕೆ ಲೋಪ ಬರುತ್ತದೆ. 'ಅಲೋಂತ್ಯಸ್ಯ' ಪರಿಭಾಷೆಯಿಂದ ಪರಸ್ಮೈಪದದ ಅಂತ್ಯ ಇಕಾರಕ್ಕೇ ಲೋಪವೆಂದರ್ಥ. ಅಭವ+ತಿ ಎಂಬಲ್ಲಿ ಲಙ್ ಙಿತ್ತಾದ ಲಕಾರ. ಇದಕ್ಕೆ ಆದೇಶವಾಗಿ ಬಂದ ಪರಸ್ಮೈಪದ ತಿ. ಇದು ಇಕಾರಾಂತವಾಗಿದೆ. ಇದರ ಇಕಾರಕ್ಕೆ ಲೋಪ ಬಂದರೆ ಅಭವತ್ ಎಂದಾಗುತ್ತದೆ. ಇನ್ನು ಮುಂದೆ ಅಭವ ಅಂಗವೆಂದು ತಿಳಿಯಬೇಕು. ತಸ್ ಪ್ರತ್ಯಯಕ್ಕೆ 'ತಸ್ಥಸ್ಥಮಿಪಾಂ' ಸೂತ್ರದಿಂದ ತಾಮಾದೇಶ ಅಭವತಾಮ್. ಅಭವ+ಝಿ ಎಂದಿರುವಾಗ ಝ್ ಎಂಬುದಕ್ಕೆ 'ಝೋನ್ತಃ' ಸೂತ್ರದಿಂದ ಅನ್ತ್ ಆದೇಶ. ಇಕಾರಕ್ಕೆ 'ಇತಶ್ಚ' ಸೂತ್ರದಿಂದ ಲೋಪ. ಅಭವ+ಅನ್ತ್. 'ಅತೋ ಗುಣೇ' ಸೂತ್ರದಿಂದ ಪರರೂಪ. ಅಭವನ್ತ್. ಸಂಯೋಗಾಂತಪದವಾದುದರಿಂದ 'ಸಂಯೋಗಾಂತಸ್ಯ ಲೋಪಃ' ಸೂತ್ರದಿಂದ ಅಂತ್ಯ ತಕಾರಕ್ಕೆ ಲೋಪ. ಅಭವನ್. ಮಧ್ಯಮದಲ್ಲಿ ಸಿಪ್ ಬಂದಾಗ ಪಕಾರ ಇತ್ತಾಗಿ ಲೋಪವಾಗುತ್ತದೆ. 'ಇತಶ್ಚ' ದಿಂದ ಇಕಾರ ಲೋಪ. ಅಭವಸ್ ಎಂದಿರುವಾಗ ಪದಾಂತ ಸಕಾರವಾದುದರಿಂದ 'ಸಸಜುಷೋರುಃ' ಸೂತ್ರದಿಂದ ಅದಕ್ಕೆ ರುತ್ವ. 'ಖರವಸಾನಯೋ—' ಸೂತ್ರದಿಂದ ರೇಫಕ್ಕೆ ವಿಸರ್ಗ. ಅಭವಃ ॥ ಥಸ್ ಪ್ರತ್ಯಯಕ್ಕೆ ತಮ್ ಆದೇಶ. ಅಭವತಮ್ ಥ ಪ್ರತ್ಯಯಕ್ಕೆ ತ ಆದೇಶ. ಅಭವತ. ಉತ್ತಮದಲ್ಲಿ ಮಿಪಿಗೆ ಅಮ್ ಆದೇಶ. ಅಭವ+ಅಮ್ ಎಂದಿರುವಾಗ 'ಅಮಿಪೂರ್ವಃ' ಸೂತ್ರದಿಂದ ಪೂರ್ವರೂಪ. ಅಭವಮ್. ಅಭವ+ವಸ್ ಎಂದಿರುವಾಗ 'ನಿತ್ಯಂ ಙಿತಃ' ಸೂತ್ರದಿಂದ ಸಕಾರಕ್ಕೆ ಲೋಪ. ಯಞಾದಿಯಾದುದರಿಂದ 'ಅತೋದೀರ್ಘೋಯಞಿ' ಸೂತ್ರದಿಂದ ಅಭವ ಅಂಗದ ಅಕಾರಕ್ಕೆ ದೀರ್ಘ. ಅಭವಾವ ಅಭವ+ಮಸ್ ಎಂದಿರುವಾಗ ಹಿಂದಿನಂತೆ ಸಲೋಪ, ದೀರ್ಘ. ಅಭವಾಮ.

ಲಿಙ್ ವಿಧಾಯಕ ಸೂತ್ರ.

೪೨೬. ವಿಧಿನಿಮಂತ್ರಣಾಮಂತ್ರಣಾಧೀಷ್ಟಸಂಪ್ರಶ್ನಪ್ರಾರ್ಥನೇಷು, ಲಿಙ್ ॥ ೩-೩-೧೬೧ ॥

ಏಷ್ವರ್ಥೇಷು ಧಾತೋರ್ಲಿಙ್ ॥

ದ್ವಿಪದ ಸೂತ್ರ ॥ ವಿಧಿಶ್ಚ ನಿಮಂತ್ರಣಂಚ, ಆಮಂತ್ರಣಂಚ ಅಧೀಷ್ಟಂಚ, ಸಂಪ್ರಶ್ನಶ್ಚ, ಪ್ರಾರ್ಥನಂಚ, ವಿಧಿನಿಮಂತ್ರಣಾಮಂತ್ರಣಾಧೀಷ್ಟಸಂಪ್ರಶ್ನಪ್ರಾರ್ಥನಾನಿ. ತೇಷು. 'ಧಾತೋಃ' ಅಧಿಕಾರ. ಸೂತ್ರಾರ್ಥ—ವಿಧ್ಯಾದಿ ಆರು ಅರ್ಥಗಳು ತೋರುವಾಗ ಧಾತುವಿಗೆ ಲಿಙ್ ಬರುತ್ತದೆ. ವಿಧಿಯೆಂದರೆ ಪ್ರೇರಣೆ. ಒಬ್ಬನು ಒಂದು ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವುದು. ನಿಮಂತ್ರಣಂ - ನಿಯೋಗಕರಣ. ಆವಶ್ಯಕವಾಗಿ ಮಾಡುವ ಶ್ರಾದ್ಧಾದಿಗಳಲ್ಲಿ ಭೋಜನ ಮಾಡುವಂತೆ ಹೇಳುವುದು (ಹೇಳಿ ಊಟ ಮಾಡುವಂತೆ ಮಾಡಿಸುವುದು). ಆಮಂತ್ರಣಂ—ಕಾಮಚಾರಾನುಜ್ಞಾ. ಇಷ್ಟಬಂದಂತೆ ಮಾಡಲು ಹೇಳುವುದು. ಅಧೀಷ್ಟಃ—ಸತ್ಕಾರಪೂರ್ವಕ ವ್ಯಾಪಾರ. ಸಂಪ್ರಶ್ನಃ—ಈ ಕಾರ್ಯ ಮಾಡಬೇಕೇ ಬೇಡವೇ ಎಂದು ವಿಚಾರಿಸಿ ನಿರ್ಧರಿಸುವುದು. ಪ್ರಾರ್ಥನಂ—ಯಾಚಿಸುವುದು. ಲಿಙಿನಿಂದ ಈ ಅರ್ಥಗಳು ವಾಚ್ಯವಾಗುವಾಗಲೂ ಎಂದು ಒಂದು ಮತವಿದೆ. ಭೂ+ಲಿಙ್ ಎಂದಿರುವಾಗ ಲಿಙಿಗೆ ತಿಬಾದ್ಯಾದೇಶ. ಭೂ+ತಿ. ಶಪ್, ಗುಣ, ಅವಾದೇಶ. ಭವ+ತಿ. ಙಿತ್ತಿನ ಪರಸ್ಮೈಪದವಾದುದರಿಂದ 'ಇತಶ್ಚ' ಸೂತ್ರದಿಂದ ತಿಯ ಇಕಾರಕ್ಕೆ ಲೋಪ ಭವ+ತ್ ಎಂದಿರುವಾಗ ಲಿಙಿಗೆ ಯಾಸುಟಾಗಮ ಹೇಳುತ್ತಾನೆ.

ಲಿಙಿನ ಪರಸ್ಮೈಪದ ಪ್ರತ್ಯಯಗಳಿಗೆ ಯಾಸುಟ್ ಹೇಳುವ ಸೂತ್ರ.

೪೨೭. ಯಾಸುಟ್ ಪರಸ್ಮೈಪದೇಷೂದಾತ್ತೋ ಙಿಚ್ಚ ॥೩-೪-೧೦೩॥

ಲಿಙಃ ಪರಸ್ಮೈಪದಾನಾಂ ಯಾಸುಟಾಗಮೋ ಙಿಚ್ಚ ॥

ಯಾಸುಟ್, ಪರಸ್ಮೈಪದೇಷು, ಉದಾತ್ತಃ, ಙಿತ್, ಚ ॥ ಐದು ಪದಗಳುಳ್ಳ ಸೂತ್ರ. 'ಲಿಙಃ ಸೀಯುಟ್' ಸೂತ್ರದಿಂದ 'ಲಿಙಃ' ಅನುವೃತ್ತಿ. ಪರಸ್ಮೈಪದೇಷು ಎಂಬಲ್ಲಿ ಷಷ್ಠ್ಯರ್ಥದಲ್ಲಿ ಸಪ್ತಮೀ ಬಂದಿದೆ. ಸೂತ್ರಾರ್ಥ—ಲಿಙಿಗೆ ಆದೇಶವಾಗಿ ಬಂದ ಪರಸ್ಮೈಪದ ಪ್ರತ್ಯಯಗಳಿಗೆ ಯಾಸುಟಾಗಮ ಬರುತ್ತದೆ; ಅದು ಉದಾತ್ತ ಸ್ವರವುಳ್ಳದ್ದಾಗಿಯೂ ಙಿತ್ತಾಗಿಯೂ ಇರುತ್ತದೆ. ಯಾಸುಟ್ ವಿಶಿಷ್ಟ ಪರಸ್ಮೈಪದವೇ ಙಿತ್ತಿನಂತೆ ಆಗುತ್ತದೆ ಎಂದು ತಿಳಿಯಬೇಕು. ಟಿತ್ತಾದುದರಿಂದ ಆಗಮ. ಆಗಮಗಳು ಅನುದಾತ್ತವಾಗುವುದರಿಂದ ಇಲ್ಲಿ ಇದು ಉದಾತ್ತವಾಗು

ದೆಂದು ಹೇಳಿರುತ್ತಾನೆ. 'ಆದ್ಯಂತೌ ಟಕಿತೌ' ಪರಿಭಾಷೆಯಿಂದ ಯಾಸುಟ್ ಪರಸ್ಮೈಪದಗಳ ಆದ್ಯವಯವವಾಗಿ ಬರುತ್ತದೆ. ಯಾಸುಟಿನಲ್ಲಿ ಟಕಾರ 'ಹಲಂತ್ಯಮ್' ಸೂತ್ರದಿಂದ ಇತ್. ಉಕಾರ ಉಚ್ಚಾರಣಾರ್ಥ. ಯಾಸ್ ಉಳಿಯುತ್ತದೆ. ಭವ+ಯಾಸ್‌ತ್ ಎಂದಿರುವಾಗ ಸಲೋಪವನ್ನು ಆಶಂಕಿಸುತ್ತಾನೆ.

ಸಾರ್ವಧಾತುಕ ಲಿಙಿನ ಸಕಾರಕ್ಕೆ ಲೋಪ ಹೇಳುವ ಸೂತ್ರ.

**೪೨೮. ಲಿಙಃ ಸಲೋಪೋऽನನ್ತ್ಯಸ್ಯ || ೭-೨-೭೯ ||**

**ಸಾರ್ವಧಾತುಕಲಿಙೋಽನನ್ತ್ಯಸ್ಯ ಸಸ್ಯ ಲೋಪಃ || ಇತಿ ಪ್ರಾಪ್ತೇ ||**

ಲಿಙಃ, ಸಲೋಪಃ, ಅನನ್ತ್ಯಸ್ಯ || ತ್ರಿಪದ ಸೂತ್ರ. 'ರುಧಾದಿಭ್ಯಃ ಸಾರ್ವಧಾತುಕೇ' ಸೂತ್ರದಿಂದ 'ಸಾರ್ವಧಾತುಕೇ' ಪದವು ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಲಿಙಿನಲ್ಲಿ ಅದಕ್ಕೆ ಅನ್ವಯ. ಸ ಎಂಬುದು ಲುಪ್ತಷಷ್ಠೀಕಪದ. ಸಸ್ಯ ಎಂದಾಗಬೇಕು. ಸೂತ್ರಾರ್ಥ–ಸಾರ್ವಧಾತುಕವಾದ ಲಿಙಿನ ಅಂತ್ಯವಲ್ಲದ ಸಕಾರಕ್ಕೆ ಲೋಪ ಬರುತ್ತದೆ. 'ತಿಙ್‌ಶಿತ್ ಸಾರ್ವಧಾತುಕಮ್' ಎಂದುದರಿಂದ ಯಾಸ್‌ತ್ ಎಂಬುದು ಸಾರ್ವಧಾತುಕ. ಆಶೀರ್ಲಿಙಿನಲ್ಲಿ ಆರ್ಧಧಾತುಕ ಸಂಜ್ಞೆ ಹೇಳುತ್ತಾನೆ. ಅಲ್ಲಿ ಈ ಕಾರ್ಯ ಬರುವುದಿಲ್ಲ. ಯಾಸುಟ್ ಪರಸ್ಮೈಪದಕ್ಕೆ ಬಂದುದರಿಂದ ಯಾಸುಟ್ ವಿಶಿಷ್ಟವಾದುದೇ ಪರಸ್ಮೈಪದ. ಆಗ ಸಕಾರವು ಅನಂತ್ಯವಾಗುತ್ತದೆ. ಅನಂತ್ಯವಾದ ಸಕಾರಕ್ಕೆ ಲೋಪ ಪ್ರಾಪ್ತವಾದರೆ ಪ್ರಕೃತ ಅದಕ್ಕೆ ಅಪವಾದ ಹೇಳುತ್ತಾನೆ.

ಯಾಸಿಗೆ ಇಯಾದೇಶ ಹೇಳುವ ಸೂತ್ರ.

**೪೨೯. ಅತೋ ಯೇಯಃ || ೭-೨-೮೦ ||**

**ಅತಃ ಪರಸ್ಯ ಸಾರ್ವಧಾತುಕಾವಯವಸ್ಯ ಯಾಸ್ ಇತ್ಯಸ್ಯ ಇಯ್ || ಗುಣಃ ||**

ಅತಃ. ಯಾ, ಇಯಃ || ತ್ರಿಪದ ಸೂತ್ರ. ಯಾಸ್ ಇಯಃ ಎಂದಿರುವಾಗ ಸಕಾರಕ್ಕೆ ರುತ್ವ. ಯಾರ್+ಇಯಃ. 'ಭೋಭಗೋ ಅಘೋ ಅಪೂರ್ವಸ್ಯ ಯೋऽಶಿ' ಸೂತ್ರದಿಂದ ರುವಿಗೆ ಯಕಾರಾದೇಶ. ಯಾಯ್+ಇಯಃ || 'ಲೋಪಃ ಶಾಕಲ್ಯಸ್ಯ' ಸೂತ್ರದಿಂದ ಯಕಾರಕ್ಕೆ ಲೋಪ. ಯಾ+ಇಯಃ || ಯ ಲೋಪ ಅಸಿದ್ಧವಾದರೂ, ಸೌತ್ರಕಾರ್ಯವಾದುದರಿಂದ ಗುಣಸಂಧಿ ಬಂದಿದೆ (ಯೇಯಃ). ಅತಃ ಪಂಚಮೀ. 'ಅಂಗಸ್ಯ' ಅಧಿಕಾರ. ಅದಕ್ಕೆ ಅತಃ ವಿಶೇಷಣ. ತದಂತಲಾಭ. 'ಅಂಗಸ್ಯ' ಎಂಬುದು ಪಂಚಮ್ಯಂತವಾಗಿ ವಿಪರಿಣಾಮಹೊಂದುತ್ತದೆ. 'ರುಧಾದಿಭ್ಯಃ ಸಾರ್ವಧಾತುಕೇ' ಸೂತ್ರದಿಂದ ಸಾರ್ವಧಾತುಕೇ ಅನುವೃತ್ತವಾಗಿ

ಅವಯವಾರ್ಥಕ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಸೂತ್ರಾರ್ಥ—ಅದಂತಾಂಗದ ಪರದಲ್ಲಿರುವ ಸಾರ್ವಧಾತುಕಾವಯವವಾದ ಯಾಸ್ ಎಂಬುದಕ್ಕೆ ಇಯ್ ಆದೇಶ ಬರುತ್ತದೆ. ವಿಧಿಲಿಙ್ ಸಾರ್ವಧಾತುಕವೆಂದು ಹಿಂದೆ ಹೇಳಿದೆ. ಯಾಸ್ ತ್ ಸಾರ್ವಧಾತುಕ. ಇದರ ಅವಯವ ಯಾಸ್, ಅದಂತವಾದ ಭವ ಅಂಗದ ಪರದಲ್ಲಿರುವುದರಿಂದ ಅದಕ್ಕೆ ಇಯಾದೇಶ. ಅನೇಕಾಲಾದುದರಿಂದ ಸರ್ವಾದೇಶ (ಸೂ ೪೫). ಭವ+ ಇಯ್ ತ್. 'ಆದ್ಗುಣಃ' ಸೂತ್ರದಿಂದ ಗುಣ. ಭವೇಯ್ ತ್. ಇಲ್ಲಿ ಯಕಾರ ಲೋಪ ಹೇಳುತ್ತಾನೆ.

ಯಕಾರ ವಕಾರಗಳಿಗೆ ಲೋಪ ಹೇಳುವ ಸೂತ್ರ.

೪೩೦. ಲೋಪೋವ್ಯೋರ್ವಲಿ ॥ ೬-೧-೬೬ ॥

ವಕಾರಯಕಾರಯೋರ್ಲೋಪಃ ಸ್ಯಾತ್ ವಲಿ ಪರೇ ॥ ಭವೇತ್, ಭವೇತಾಮ್ ॥

ಲೋಪಃ, ವ್ಯೋಃ, ವಲಿ ॥ ತ್ರಿಪದ ಸೂತ್ರ. ವ್ ಚ ಯ್ ಚ ವ್ಯೌ । ತಯೋಃ ವ್ಯೋಃ । ಸೂತ್ರಾರ್ಥ—ಯಕಾರ ವಕಾರಗಳಿಗೆ ವಲ್ (ಯಕಾರ ಒಂದನ್ನು ಬಿಟ್ಟು ಉಳಿದ ವ್ಯಂಜನ) ಪರವಾದಾಗ ಲೋಪ ಬರುತ್ತದೆ. ಪ್ರಕೃತ ಯಕಾರಕ್ಕೆ ತಕಾರ ರೂಪ ವಲ್ ಪರವಾದುದರಿಂದ ಲೋಪ ಬಂದರೆ ಭವೇತ್ ಎಂದಾಗುತ್ತದೆ. ದ್ವಿವಚನದಲ್ಲಿ ತಸಿಗೆ ತಾಮಾದೇಶ (ಸೂ. ೪೧೫) ಭವ + ತಾಮ್. ಯಾಸುಟಾಗಮ. ಹಿಂದಿನಂತೆ ಅದಕ್ಕೆ ಇಯಾದೇಶ. ಯ ಲೋಪ. ಗುಣ. ಭವ + ಯಾಸ್ ತಾಮ್, ಭವ + ಇಯ್ ತಾಮ್–ಭವ + ಇತಾಮ್–ಭವೇತಾಮ್. ಬಹುವಚನದಲ್ಲಿ ಝಿ ಬಂದಾಗ ಅಂತಾದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಜುಸ್ ಆದೇಶ ಹೇಳುತ್ತಾನೆ.

ಝಿಗೆ ಜುಸ್ ಆದೇಶ ಹೇಳುವ ಸೂತ್ರ.

೪೩೧. ಝೇರ್ಜುಸ್ ॥ ೩-೪-೧೦೮ ॥

ಲಿಙೋ ಝೇರ್ಜುಸ್ ಸ್ಯಾತ್ । ಭವೇಯುಃ । ಭವೇಃ । ಭವೇತಮ್ । ಭವೇತ । ಭವೇಯಮ್ । ಭವೇವ । ಭವೇಮ ॥

ಝೇಃ, ಜುಸ್ ॥ ದ್ವಿಪದ ಸೂತ್ರ. 'ಲಿಙಃ ಸೀಯುಟ್' ಸೂತ್ರದಿಂದ 'ಲಿಙಃ' ಅನುವೃತ್ತಿ. ಸೂತ್ರಾರ್ಥ—ಲಿಙಿಗೆ ಆದೇಶವಾಗಿ ಬಂದ ಝಿಗೆ ಜುಸ್ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. 'ಚುಟೂ' ಸೂತ್ರದಿಂದ ಜುಸಿನ ಆದಿ ಜಕಾರಕ್ಕೆ ಇತ್ ಸಂಜ್ಞೆ ಬಂದು ಲೋಪವಾಗುತ್ತದೆ. 'ನ ವಿಭಕ್ತೌ ತುಸ್ಮಾಃ' ಸೂತ್ರದಿಂದ ಸಕಾರಕ್ಕೆ ಇತ್ ಸಂಜ್ಞೆಯಿಲ್ಲ ಉಸ್ ಉಳಿಯುತ್ತದೆ. ಉಸಿಗೆ ಯಾಸ್

ಬಂದರೆ ಭವ+ಯಾಸ್ ಉಸ್. ಇಲ್ಲಿ ಯಕಾರಕ್ಕೆ ವಲ್ ಪರದಲ್ಲಿಲ್ಲದುದರಿಂದ ಲೋಪವಿಲ್ಲ. ಗುಣ. ಭವೇಯುುಸ್. ಪದಾಂತ ಸಕಾರಕ್ಕೆ ರುತ್ವ. ವಿಸರ್ಗ. ಭವೇಯುಃ || ಮಧ್ಯಮಪುರುಷದಲ್ಲಿ ಸಿಪ್. ಭವ+ಸಿ ಎಂದಿರುವಾಗ 'ಇತಶ್ಚ' ಸೂತ್ರದಿಂದ ಇಕಾರಕ್ಕೆ ಲೋಪ. ಸಿಗೆ ಯಾಸುಟಾಗಮ. ಯಾಸಿಗೆ ಇಯಾದೇಶ. ಭವ+ಇಯ್‌ಸ್. ವಲ್ ಪರವಾದುದರಿಂದ ಯಕಾರಕ್ಕೆ ಲೋಪ. ಗುಣ. ಭವೇಸ್. ಸಕಾರಕ್ಕೆ ರುತ್ವ ವಿಸರ್ಗ. ಭವೇಃ || ದ್ವಿವಚನದಲ್ಲಿ ಥಸ್. ಅದಕ್ಕೆ ತಮ್ ಆದೇಶ (ಸೂ. ೪೧೫)ಯಾಸುಟಾಗಮ. ಅದಕ್ಕೆ ಇಯಾದೇಶ ಬಂದಾಗ ಯಕಾರಕ್ಕೆ ಲೋಪ. ಗುಣ. ಭವೇತಮ್. ಥಕ್ಕೆ ಹಿಂದಿನಂತೆ ತ ಆದೇಶ. ಯಾಸುಟಾಗಮ. ಇಯಾದೇಶ. ಯ ಲೋಪ. ಗುಣ. ಭವೇತ. ಉತ್ತಮಪುರುಷದಲ್ಲಿ ಮಿಪಿಗೆ ಅಮ್ ಆದೇಶ ಭವ+ಅಮ್ ಎಂದಿರುವಾಗ ಯಾಸುಟಾಗಮ. ಆದಕ್ಕೆ ಇಯಾದೇಶ. ವಲ್ ಪರದಲ್ಲಿಲ್ಲದುದರಿಂದ ಯಲೋಪ ವಿಲ್ಲ. ಗುಣ. ಭವೇಯಮ್. ವಸ್ ಬಂದಾಗ 'ನಿತ್ಯಂ ಙಿತಃ' ಸೂತ್ರದಿಂದ ಸಲೋಪ. ಯಾಸುಟಾಗಮ. ಆದಕ್ಕೆ ಇಯಾದೇಶ. ಯಲೋಪ. ಗುಣ. ಭವೇವ. ಮಸ್ ಬಂದಾಗಲೂ ಹೀಗೇ ಸಲೋಪ. ಯಾಸುಟಾದಿ. ಭವೇಮ.

'ಆಶಿಷಿ ಲಿಙ್‌ಲೋಟೌ' ಸೂತ್ರದಿಂದ ಆಶೀರರ್ಥದಲ್ಲಿಯೂ ಲಿಙ್ ಬರುತ್ತದೆ ಎಂದು ಹೇಳಿದೆ. ಆಶೀರರ್ಥದಲ್ಲಿ ಪ್ರಕ್ರಿಯೆ ಭಿನ್ನವಾದುದರಿಂದ ಈ ಲಕಾರ ವನ್ನು ಪ್ರತ್ಯೇಕವಾಗಿ ಹೇಳಿರುತ್ತಾನೆ.

ಆಶೀರ್ಲಿಙಿಗೆ ಆರ್ಧಧಾತುಕ ಸಂಜ್ಞೆಯನ್ನು ಹೇಳುವ ಸೂತ್ರ.

೪೩೭. ಲಿಙಾಶಿಷಿ || ೩-೪-೧೧೬ ||

ಆಶಿಷಿ ಲಿಙಸ್ತಿಙ್ ಆರ್ಧಧಾತುಕಸಂಜ್ಞಃ ಸ್ಯಾತ್ ||

ಲಿಙ್, ಆಶಿಷಿ || ದ್ವಿಪದ ಸೂತ್ರ. 'ಆರ್ಧಧಾತುಕಂ ಶೇಷಃ' ಸೂತ್ರದಿಂದ 'ಆರ್ಧಧಾತುಕಂ', 'ತಿಙ್‌ಶಿತ್ ಸಾರ್ವಧಾತುಕಮ್' ಸೂತ್ರದಿಂದ 'ತಿಙ್' ಅನುವೃತ್ತವಾಗುತ್ತವೆ. ಲಿಙ್, ಲುಪ್ತಷಷ್ಠೀಕ ಪದ. **ಸೂತ್ರಾರ್ಥ**—ಆಶೀರರ್ಥದಲ್ಲಿ ಲಿಙಿಗೆ ಆದೇಶವಾಗಿ ಬಂದ ತಿಙ್ ಪ್ರತ್ಯಯಗಳು (೧೮) ಆರ್ಧಧಾತುಕಸಂಜ್ಞೆ ಯನ್ನು ಹೊಂದುತ್ತವೆ. ತಿಙ್ ಸಾಮಾನ್ಯಕ್ಕೆ ಸಾರ್ವಧಾತುಕಸಂಜ್ಞೆ ಪ್ರಾಪ್ತ ವಾದರೆ ಆದಕ್ಕೆ ಇದು ಅಪವಾದ. ತಿಙ್ ಆರ್ಧಧಾತುಕವಾದುದರಿಂದ 'ಕರ್ತರಿ ಶಪ್' ಸೂತ್ರದಿಂದ ಆಶೀರ್ಲಿಙಿನಲ್ಲಿ ಶಪ್ ವಿಕರಣ ಬರುವುದಿಲ್ಲ. ಭೂ+ತಿ ಎಂದಿರುವಾಗ ಯಾಸುಟ್ ಆಗಮ (ಸೂ. ೪೨೭). ಭೂ+ಯಾಸ್‌ತಿ. 'ಇತಶ್ಚ' ಸೂತ್ರದಿಂದ ತಿಯ ಇಕಾರಕ್ಕೆ ಲೋಪ. ಭೂ+ಯಾಸ್‌ತ್. ಈಗ ಯಾಸುಟ್ ಆಗಮಕ್ಕೆ ಕಿತ್ತ್ವವನ್ನು ಹೇಳುತ್ತಾನೆ.

ಯಾಸುಟಗೆ ಕಿದ್ವದ್ಭಾವ ಹೇಳುವ ಸೂತ್ರ.

**೪೩೩. ಕಿದಾಶಿಷಿ || ೩-೪-೧೦೪ ||**

**ಆಶಿಷಿ ಲಿಙೋ ಯಾಸುಟ್ ಕಿತ್ || ಸ್ಕೋಃ ಸಂಯೋಗಾದ್ಯೋರಿತಿ ಸಲೋಪಃ ||**

ಕಿತ್, ಆಶಿಷಿ|| ದ್ವಿಪದ ಸೂತ್ರ. 'ಲಿಙಃ ಸೀಯುಟ್' ಸೂತ್ರದಿಂದ 'ಲಿಙಃ', 'ಯಾಸುಟ್ ಪರ—' ಸೂತ್ರದಿಂದ 'ಯಾಸುಟ್' ಅನುವೃತ್ತವಾಗುತ್ತವೆ. ಸೂತ್ರಾರ್ಥ—ಆಶೀರರ್ಥದಲ್ಲಿ ಲಿಙ್‌ಗೆ ಬಂದ ಯಾಸುಟಾಗಮವು ಕಿತ್ತಾಗುತ್ತದೆ. ಕಿತ್ತಿನಂತಾಗುತ್ತದೆಂದು ತಿಳಿಯಬೇಕು. ಯಾಸುಟ್ ಸಾಮಾನ್ಯ ಙಿತ್ತಾದುದರಿಂದ ಗುಣನಿಷೇಧ ಮುಂದೆ ಹೇಳುತ್ತಾನೆ. ಕಿತ್ತಿಗೆ ಇಲ್ಲಿ ಪ್ರಯೋಜನವಿಲ್ಲ. ಇಜ್ಯಾತ್ ಮುಂತಾದ ಸ್ಥಳಗಳಲ್ಲಿ ಕಿತ್ತನ್ನು ನಿಮಿತ್ತೀಕರಿಸಿ ಸಂಪ್ರಸಾರಣ ಬರುತ್ತದೆ. ಭೂ+ ಯಾಸ್ತ್ ಎಂದಿರುವಾಗ ಪದಾಂತದಲ್ಲಿ ಸಕಾರ ತಕಾರ ಸಂಯೋಗವಿರುವುದರಿಂದ 'ಸ್ಕೋಃ ಸಂಯೋಗಾದ್ಯೋರಂತೇ ಚ' ಸೂತ್ರದಿಂದ ಸಂಯೋಗದ ಆದಿಯಾದ ಸಕಾರಕ್ಕೆ ಲೋಪ. ಭೂ+ಯಾತ್ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಊಕಾರಕ್ಕೆ ಗುಣ ಬರಲಿ ಅಂದರೆ ಙಿತ್ತು ಕಿತ್ತು ಆಗಿರುವಾಗ ಗುಣ ನಿಷೇಧ ಹೇಳುತ್ತಾನೆ.

ಇಕಿಗೆ ಗುಣವೃದ್ಧಿನಿಷೇಧ ಹೇಳುವ ಸೂತ್ರ

**೪೩೪. ಕ್ಙಿತಿ, ಚ || ೧-೧-೫ ||**

**ಗಿತ್‌ಕಿಙ್‌ನ್ನಿಮಿತ್ತೇ ಇಗ್ಲಕ್ಷಣೇ ಗುಣವೃದ್ಧೀ ನ ಸ್ತಃ || ಭೂಯಾತ್| ಭೂಯಾಸ್ತಾಮ್ | ಭೂಯಾಸುಃ | ಭೂಯಾಃ | ಭೂಯಾಸ್ತಮ್ | ಭೂಯಾಸ್ತ | ಭೂಯಾಸಮ್ | ಭೂಯಾಸ್ವ | ಭೂಯಾಸ್ಮ ||**

ದ್ವಿಪದ ಸೂತ್ರ. ಗ್‌ಚ ಕ್‌ಚ ಙ್‌ಚ ತೇಷಾಂ ಸಮಾಹಾರಃ. ಕ್ಙ. ಕ್ಙ (ಗ್, ಕ್, ಙ್) ಇತ್ ಯಸ್ಯ ಸಃ ಕ್ಙಿತ್. ತಸ್ಮಿನ್. ಮೊದಲನೇ ಗಕಾರಕ್ಕೆ 'ಖರಿಚ' ಸೂತ್ರದಿಂದ ಕಕಾರಾದೇಶ ಬಂದಿದೆ. 'ಇಕೋ ಗುಣವೃದ್ಧೀ' ಸೂತ್ರ ಅನುವೃತ್ತವಾಗುತ್ತದೆ. ಕ್ಙಿತಿಯೆಂಬಲ್ಲಿ ನಿಮಿತ್ತಾರ್ಥದಲ್ಲಿ ಸಪ್ತಮೀ ಬಂದಿದೆ. ಚಕಾರದಿಂದ ಇಕಃ ಎಂದು ಉಚ್ಚರಿಸಿ ಎಲ್ಲಿ ಗುಣವೃದ್ಧಿ ವಿಹಿತವಾಗಿದೆಯೋ ಆ ಗುಣ ವೃದ್ಧಿಗಳೆಂದು ತಿಳಿಯುತ್ತದೆ. 'ನ ಧಾತುಲೋಪ ಆರ್ಧಧಾತುಕೇ' ಸೂತ್ರದಿಂದ 'ನ' ಅನುವೃತ್ತಿ. ಸೂತ್ರಾರ್ಥ—ಗಿತ್ ಕಿತ್ ಙಿತ್ ಪ್ರತ್ಯಯಗಳನ್ನು ನಿಮಿತ್ತೀಕರಿಸಿ ಇಕಿಗೆ ಗುಣವೃದ್ಧಿಗಳು ಬರುವುದಿಲ್ಲ. ಸಾರ್ವಧಾತುಕಾರ್ಧಧಾತುಕ

ಪ್ರತ್ಯಯಗಳನ್ನು ನಿಮಿತ್ತೀಕರಿಸಿ ಅಂಗದ ಇಕ್ಕಿಗೆ (ಅದು ಕೊನೆಯಲ್ಲಿದ್ದರೂ, ಉಪಧೆಯಾಗಿ ಇದ್ದರೂ) ಗುಣವೃದ್ಧಿಗಳು ಎರಡು ಸೂತ್ರಗಳಿಂದ ವಿಹಿತವಾಗಿವೆ. ಆ ಸಾರ್ವಧಾತುಕಾರ್ಧಧಾತುಕ ಪ್ರತ್ಯಯಗಳು ಗಿತ್ತಾಗಲೀ, ಕಿತ್ತಾಗಲೀ, ಙಿತ್ತಾಗಲೀ ಆಗಿದ್ದರೆ ಆಗ ಗುಣವೃದ್ಧಿಗಳು ಬರುವುದಿಲ್ಲವೆಂದು ಈ ಸೂತ್ರ ನಿಷೇಧ ಮಾಡುತ್ತದೆ. ಪ್ರಕೃತ ಭೂ+ಯಾತ್ ಎಂದಿರುವಾಗ 'ಸಾರ್ವಧಾತುಕಯೋಃ' ಸೂತ್ರದಿಂದ ಇಕ್ಕಿಗೆ (ಊ) ಗುಣ ಪ್ರಾಪ್ತವಾದರೆ ಯಾಸುಟ್ ಕಿತ್ತಾಗುತ್ತದೆ ಯೆಂದುದರಿಂದ ಗುಣ ಬರುವುದಿಲ್ಲ. ಭೂಯಾತ್ ಎಂದೇ ಉಳಿಯುತ್ತದೆ. ತಸಾದಿಗಳಿಗೆ 'ತಸ್ಥಸ್ಥಮಿಪಾಂ ತಾಂತಂತಾಮಃ' ಸೂತ್ರದಿಂದ ತಾಮಾದ್ಯಾದೇಶಗಳು ಬರುತ್ತವೆ. ಯಾಸುಟಾಗಮ ಇದ್ದೇ ಇದೆ. ಭೂ+ಯಾಸ್‌ತಾಮ್. ಇಲ್ಲಿ ಪದಾಂತವಾಗದಿರುವುದರಿಂದ 'ಸ್ಕೋಃ' ಸೂತ್ರದಿಂದ ಸಕಾರ ಲೋಪವಿಲ್ಲ. ಸಾರ್ವಧಾತುಕವಾಗದಿರುವುದರಿಂದ 'ಲಿಙಃ ಸಲೋಪೋಽನಂತ್ಯಸ್ಯ' ಸೂತ್ರದಿಂದಲೂ ಸಲೋಪ ಬರುವುದಿಲ್ಲ. ಭೂಯಾಸ್ತಾಮ್. ಝಿ ಬಂದಾಗ ಲಿಙಿನ ಝಿಯಾದುದರಿಂದ 'ಝೋರ್ಜುಸ್' ಸೂತ್ರದಿಂದ ಅದಕ್ಕೆ ಜುಸ್ ಆದೇಶ. ಭೂ+ಯಾಸ್ ಉಸ್. ಕೊನೆಯ ಸಕಾರಕ್ಕೆ ರುತ್ವ ವಿಸರ್ಗ. ಭೂಯಾಸುಃ. ಮಧ್ಯಮದಲ್ಲಿ ಸಿಪ್ ಬಂದಾಗ 'ಇತಶ್ಚ' ಸೂತ್ರದಿಂದ ಇಕಾರ ಲೋಪ. ಭೂಯಾಸ್‌ಸ್ ಎಂದಿರುವಾಗ 'ಸ್ಕೋಃ ಸಂಯೋಗಾದ್ಯೋರಂತೇ ಚ' ಸೂತ್ರದಿಂದ ಆದಿಯ ಸಕಾರಕ್ಕೆ ಲೋಪ. ಭೂಯಾಸ್ ಸಕಾರಕ್ಕೆ ರುತ್ವ ವಿಸರ್ಗ. ಭೂಯಾಃ || ದ್ವಿವಚನದಲ್ಲಿ ಥಸಿಗೆ ತಮ್ ಆದೇಶ. ಭೂಯಾಸ್ತಮ್. ಥಕ್ಕೆ ತ ಆದೇಶ. ಭೂಯಾಸ್ತ. ಉತ್ತಮದಲ್ಲಿ ಮಿಪಿಗೆ ಅಮ್ ಆದೇಶ. ಭೂಯಾಸಮ್. ವಸ್, ಮಸ್‌ಗಳ ಸಕಾರಕ್ಕೆ 'ನಿತ್ಯಂ ಙಿತಃ' ಸೂತ್ರದಿಂದ ಲೋಪ. ಭೂಯಾಸ್ವ. ಭೂಯಾಸ್ಮ.

## || ಲುಙ್ ||

ಲುಙ್ ವಿಧಾಯಕ ಸೂತ್ರ.

೪೩೫ ಲುಙ್ || ೩-೨-೧೧೦ ||

**ಭೂತಾರ್ಥೇ ಧಾತೋರ್ಲುಙ್ ಸ್ಯಾತ್ ||**

ಏಕಪದ ಸೂತ್ರ. 'ಧಾತೋಃ', 'ಭೂತೇ' ಅಧಿಕಾರಗಳು. ಸೂತ್ರಾರ್ಥ— ಭೂತಕಾಲಾರ್ಥವನ್ನು ಕೊಡುವ ಧಾತುವಿನ ಮೇಲೆ ಲುಙ್ ಬರುತ್ತದೆ. ಭೂತ ಸಾಮಾನ್ಯದಲ್ಲಿ ಈ ಲಕಾರವೆಂದು ತಿಳಿಯಬೇಕು. ಲಿಟ್, ಲಿಙ್‌ಗಳು ಭೂತದ ವಿಶೇಷದಲ್ಲಿ ಬರುತ್ತವೆ. ಲುಙಿಗೆ ಸಂಬಂಧಪಟ್ಟ ಕೆಲವು ಸೂತ್ರಗಳನ್ನು ಸೌಕರ್ಯ ಕ್ಕೋಸ್ಕರ ಲುಙಿನ ಕಾರ್ಯ ಹೇಳುವುದರ ಮೊದಲು ಹೇಳುತ್ತಾನೆ.

ಮಾಙ್ ಪ್ರಯೋಗಿಸುವಾಗ ಲಕಾರ ಹೇಳುವ ಸೂತ್ರ

**೪೩೬. ಮಾಙಿ ಲುಙ್ || ೩-೩-೧೭೫ ||**

**ಸರ್ವಲಕಾರಾಪವಾದಃ ||**

ದ್ವಿಪದ ಸೂತ್ರ. **ಸೂತ್ರಾರ್ಥ**—ಮಾಙ್ ಪ್ರಯೋಗಿಸುವಾಗ ಲುಙ್ ಬರುತ್ತದೆ. 'ಲುಙ್' ಎಂಬ ಸೂತ್ರದಿಂದಲೇ ಲುಙ್ ಬರುತ್ತಿರುವಾಗ ಈ ಸೂತ್ರ ಪುನಃ ಹೇಳಿದುದರಿಂದ ಮಾಙ್ ಪ್ರಯೋಗಿಸಿದಾಗ ಲುಙೇ ಬರುತ್ತದೆ; ಇತರ ಲಕಾರಗಳು ಬರುವುದೇ ಇಲ್ಲವೆಂದೂ ಇತರ ಲಕಾರಗಳಿಗೆ ಅಪವಾದವಾಗಿ ಹೇಳಿದೆಯೆಂದೂ ತಿಳಿಯಬೇಕು. ಲುಙ್ ಪ್ರಕ್ರಿಯೆ ಮುಗಿದ ಮೇಲೆ ಇದಕ್ಕೆ ಉದಾಹರಣೆ ಕೊಡುತ್ತಾನೆ.

ಸ್ಮಸಹಿತ ಮಾಙ್ ಪ್ರಯೋಗಿಸಿದಾಗ ಲಕಾರ ವಿಧಿಸುವ ಸೂತ್ರ.

**೪೩೭. ಸ್ಮೋತ್ತರೇ ಲಙ್ ಚ || ೩-೩-೧೭೬ ||**

**ಸ್ಮೋತ್ತರೇ ಮಾಙಿ ಲಙ್ ಸ್ಯಾತ್ ಚಾಲ್ಲುಙ್ ||**

ತ್ರಿಪದ ಸೂತ್ರ. **ಸೂತ್ರಾರ್ಥ**—ಸ್ಮ ಎಂಬ ಅವ್ಯಯವು ಉತ್ತರವಾಗಿರುವ ಮಾಙ್ ಎಂಬುದನ್ನು ಪ್ರಯೋಗಿಸಿದಾಗ ಲಙ್ ಬರುತ್ತದೆ. ಚಕಾರ ಹೇಳಿರುವುದರಿಂದ ಲುಙ್ ಕೂಡಾ ಬರುತ್ತದೆ. ಮಾ, ಸ್ಮ ಎಂದು ಸಮೀಪದಲ್ಲಿ ಪ್ರಯೋಗಿಸಿದಾಗ ಲುಙ್ ಅಥವಾ ಲಙ್ ಬರುತ್ತದೆಂದು ತಾತ್ಪರ್ಯ. ಇದೂ ಇತರ ಲಕಾರಗಳು ಪ್ರಾಪ್ತವಾದರೆ ಅವುಗಳಿಗೆ ಅಪವಾದವಾಗಿ ಹೇಳಿದೆ. ಇತರ ಲಕಾರಗಳನ್ನು ಪ್ರಯೋಗಿಸಬಾರದೆಂದು ನಿಷೇಧಿಸುತ್ತದೆ. ಇದಕ್ಕೂ ಮುಂದೆ ಉದಾಹರಣೆ ಕೊಡುತ್ತಾನೆ. ಭೂ ಧಾತುವಿಗೆ ಭೂತಕಾಲಾರ್ಥದಲ್ಲಿ ಲುಙ್ ಬಂದಾಗ ಅದಕ್ಕೆ ತಿಬಾದ್ಯಾದೇಶಗಳು ಬರುತ್ತವೆ. ಭೂ+ತಿ ಎಂದಿರುವಾಗ 'ಇತಶ್ಚ' ಸೂತ್ರದಿಂದ ತಿಯ ಇಕಾರಕ್ಕೆ ಲೋಪ. ಭೂ+ತ್ ಎಂದಿರುವಾಗ ಶಪ್ ವಿಕರಣ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಚ್ಲಿ ವಿಕರಣ ಹೇಳುತ್ತಾನೆ.

ಲುಙಿನಲ್ಲಿ ಚ್ಲಿ ವಿಕರಣ ಹೇಳುವ ಸೂತ್ರ.

**೪೩೮. ಚ್ಲಿ ಲುಙಿ || ೩-೧-೪೩ ||**

**ಶಬಾದ್ಯಪವಾದಃ ||**

ದ್ವಿಪದ ಸೂತ್ರ. 'ಧಾತೋಃ' ಅಧಿಕಾರ. ಚ್ಲಿ ಲುಪ್ತಪ್ರಥಮಾಕ. ಲುಙ್ ಪರದಲ್ಲಿರುವಾಗ ಧಾತುವಿಗೆ ಚ್ಲಿ ಪ್ರತ್ಯಯ ಬರುತ್ತದೆ. ಶಪ್, ಶ್ಯನ್ ಮುಂತಾದ ವಿಕರಣಗಳು ಸಾಮಾನ್ಯವಾಗಿ ಬರುತ್ತಿರುವಾಗ ಲುಙಿನಲ್ಲಿ ವಿಶೇಷವಾಗಿ ಚ್ಲಿ ಹೇಳಿರು

ವುದರಿಂದ ಅವುಗಳಿಗೆಲ್ಲಾ ಇದು ಅಪವಾದವೆಂದು ತಿಳಿಯಬೇಕು. ಭೂ + ಚ್ಲಿ + ತ್ ಎಂದಿರುವಾಗ ಚ್ಲಿಗೆ ಸಿಚ್ ಆದೇಶ ಹೇಳುತ್ತಾನೆ.

ಚ್ಲಿಗೆ ಸಿಚ್ ಆದೇಶ ಹೇಳುವ ಸೂತ್ರ.

೪೩೯. ಚ್ಲೇಃ ಸಿಚ್ || ೩-೧-೪೪ ||

ಇಚಾವಿತೌ ||

ದ್ವಿಪದ ಸೂತ್ರ. ಅನುವೃತ್ತಿ ಯಾವುದೂ ಇಲ್ಲ. ಚ್ಲಿಗೆ ಸಿಚ್ ಆದೇಶ ಬರುತ್ತದೆ. ಸಿಚ್ ಪ್ರತ್ಯಯದಲ್ಲಿ 'ಹಲಂತ್ಯಮ್' ಸೂತ್ರದಿಂದ ಚಕಾರವೂ 'ಉಪದೇಶೇಜನುನಾಸಿಕ ಇತ್' ಸೂತ್ರದಿಂದ ಇಕಾರವೂ ಇತ್ ಸಂಜ್ಞೆಯನ್ನು ಹೊಂದಿ ಲೋಪವಾಗುತ್ತದೆ. ಸ್ ಉಳಿಯುತ್ತದೆ. ಭೂ + ಸ್ + ತ್ ಎಂದಿರುವಾಗ ಸಿಚಿಗೆ ಲೋಪ ಹೇಳುತ್ತಾನೆ.

ಸಿಚಿಗೆ ಲುಕ್ ಹೇಳುವ ಸೂತ್ರ.

೪೪೦. ಗಾತಿಸ್ಥಾಘುಪಾಭೂಭ್ಯಃ ಸಿಚಃ ಪರಸ್ಮೈಪದೇಷು ||೨-೪-೭೭||

ಏಭ್ಯಃ ಸಿಚೋ ಲುಕ್ ಸ್ಯಾತ್ | ಗಾಪಾವಿಹೇಣಾದೇಶಪಿಬತೀ ಗೃಹ್ಯೇತೇ ||

ತ್ರಿಪದ ಸೂತ್ರ. ಗಾತಿಶ್ಚ, ಸ್ಥಾಚ, ಘುಚ, ಪಾಚ. ಭೂಚ, ಗಾತಿಸ್ಥಾಘುಪಾಭುವಃ | ತೇಭ್ಯಃ ಗಾತಿಸ್ಥಾಘುಪಾಭೂಭ್ಯಃ || 'ಣ್ಯಕ್ಷತ್ರಿಯಾರ್ಷಞಿತೋ—' ಸೂತ್ರದಿಂದ ಲುಕ್ ಅನುವೃತ್ತಿ. ಸೂತ್ರಾರ್ಥ—ಗಾ, ಸ್ಥಾ, ಘು (ಘು ಸಂಜ್ಞೆಯಿರುವ ಧಾತು), ಪಾ, ಭೂ ಇವುಗಳ ಪರದಲ್ಲಿರುವ ಸಿಚಿಗೆ ಪರಸ್ಮೈಪದ ಪ್ರತ್ಯಯಗಳು ಪರವಾದಾಗ ಲುಕ್ ಬರುತ್ತದೆ. ಇಲ್ಲಿ ವ್ಯಾಖ್ಯಾನದಿಂದ ಗಾ ಎಂದರೆ 'ಇಣೋಗಾ ಲುಙಿ' ಸೂತ್ರದಿಂದ ಬಂದಿರುವ ಇಣ್ ಧಾತುವಿಗೆ ಆದೇಶವಾದ ಗಾ ಎಂಬುದನ್ನೇ ತೆಗೆದುಕೊಳ್ಳಬೇಕು. ಇತರ ಗೈ ಮುಂತಾದುವುಗಳನ್ನು ತೆಗೆದುಕೊಳ್ಳಬಾರದು. ಹಾಗೇ ಪಾ ಧಾತುಗಳು ಅನೇಕಗಳಿವೆ. ಅವುಗಳಲ್ಲಿ ಪಿಬತಿ ಅಂದರೆ 'ಪಾ, ಪಾನೇ' ಎಂಬ ಪಾನಾರ್ಥಕ ಪಾ ಧಾತುವನ್ನೇ ತೆಗೆದುಕೊಳ್ಳಬೇಕು. 'ಪಾ ರಕ್ಷಣೇ' ಎಂದಿರುವ ರಕ್ಷಣಾರ್ಥಕ ಪಾ ಧಾತುವನ್ನು ತೆಗೆದುಕೊಳ್ಳಬಾರದು. 'ದಾಧಾಘ್ವದಾಪ್' ಸೂತ್ರದಿಂದ ದಾರೂಪ ಧಾತುಗಳಿಗೆ 'ಘು' ಸಂಜ್ಞೆಯನ್ನು ಮುಂದೆ ಹೇಳುತ್ತಾನೆ. ಸ್ಥಾ, ಭೂ ಪ್ರಸಿದ್ಧವಾಗಿವೆ. ಪ್ರಕೃತ ಭೂ + ಸ್ + ತ್ ಎಂದಿರುವಾಗ ಭೂವಿನ ಪರದಲ್ಲಿ ಸಿಚ್ ಬಂದು ಆದಕ್ಕೆ ಪರಸ್ಮೈಪದ ಪರದಲ್ಲಿರುವುದರಿಂದ ಸಿಚಿಗೆ (ಲೋಪ) ಲುಕ್. ಲುಕ್ಕಿನಿಂದ ಲುಪ್ತವಾದುದರಿಂದ ಆ ಪ್ರತ್ಯಯ ನಿಮಿತ್ತಕವಾಗಿ ಅಂಗಕ್ಕೆ ಕಾರ್ಯ ಬರುವುದಿಲ್ಲ. ಭೂತ್ ಎಂದಿರುವಾಗ 'ಲುಙ್‌ಲಙ್

ಲೃಙ್ಲ್ವ್ಷ್ವದುದಾತ್ತಃ' ಸೂತ್ರದಿಂದ ಅಂಗಕ್ಕೆ ಅಡಾಗಮ. ಅಭೂ+ಶ್ ಎಂದಾಗುತ್ತದೆ. ಇಲ್ಲಿ ತಿಙನ್ನು ನಿಮಿತ್ತೀಕರಿಸಿ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಭೂವಿನ (ಇಕ್) ಊಕಾರಕ್ಕೆ ಗುಣ ಬರಲಿ ಎಂದರೆ ಲುಙಿನಲ್ಲಿ ಗುಣ ನಿಷೇಧ ಹೇಳುತ್ತಾನೆ.

ಭೂ, ಸೂಗಳಿಗೆ ಗುಣನಿಷೇಧ ಹೇಳುವ ಸೂತ್ರ.

೪೪೧. ಭೂಸುವೋಸ್ತಿಙಿ ॥ ೭-೩-೮೮ ॥

ಭೂ ಸೂ ಏತಯೋಃ ಸಾರ್ವಧಾತುಕೇ ತಿಙಿ ಪರೇ ಗುಣೋ ನ ॥ ಅಭೂತ್ । ಅಭೂತಾಮ್ । ಅಭೂವನ್ । ಅಭೂಃ ॥ ಅಭೂತಮ್ । ಅಭೂತ ॥ ಅಭೂವಮ್ । ಅಭೂವ । ಅಭೂಮ ॥

ಭೂಸುವೋಃ, ತಿಙಿ ॥ ದ್ವಿಪದ ಸೂತ್ರ. 'ಮಿದೇರ್ಗುಣಃ' ಸೂತ್ರದಿಂದ 'ಗುಣ', 'ನಾಭ್ಯಸ್ತಸ್ಯಾಚಿ—' ಸೂತ್ರದಿಂದ 'ನ', 'ಸಾರ್ವಧಾತುಕೇ' ಅನುವೃತ್ತವಾಗುತ್ತವೆ. ಸೂತ್ರಾರ್ಥ—ಸಾರ್ವಧಾತುಕ ತಿಙ್ ಪರವಾದಾಗ ಭೂ ಸೂ ಧಾತುಗಳ ಇಕ್ಕಿಗೆ ಗುಣ ಬರುವುದಿಲ್ಲ. ಪ್ರಕೃತ 'ತಿಙ್ಶಿತ್ ಸಾರ್ವಧಾತುಕಮ್' ಸೂತ್ರದಿಂದ ತಿಙಿಗೆ ಸಾರ್ವಧಾತುಕ ಸಂಜ್ಞೆಯಿರುವುದರಿಂದ ಅದು ಪರವಾದುದರಿಂದ ಭೂವಿನ ಊಕಾರಕ್ಕೆ ಗುಣ ಬರುವುದಿಲ್ಲ. ಅಡಾದಿಗಳಲ್ಲಿ ಶಪನ್ನು ನಿಮಿತ್ತೀಕರಿಸಿ ಗುಣ ಬಂದಿದೆ. ಅಭೂತ್. ತಸಾದಿಗಳಿಗೆ ತಾಮ್ ಮುಂತಾದ ಆದೇಶ. (ಸೂ. ೪೧೫ ನೋಡಿ) ಸಿಚ್ ಬಂದು ಲುಕಾಗುತ್ತದೆ. ಅಭೂತಾಮ್. ಅಭೂ+ಝಿ. ಝಿಗೆ ಅಂತಾದೇಶ. 'ಇತಶ್ಚ' ಸೂತ್ರದಿಂದ ಅಂತ್ಯ ಇಕಾರ ಲೋಪ. ಅನ್ತ್ ಎಂದಿರುವಾಗ ಸಂಯೋಗಾಂತಲೋಪ. ಅಭೂ+ಅನ್ ಎಂದಿರುವಾಗ 'ಭುವೋವುಗ್ಲುಙ್ ಲಿಟೋಃ' ಸೂತ್ರದಿಂದ ಭೂವಿಗೆ ವುಕಾಗಮ. ಕಿತ್ತಾದುದರಿಂದ ಅಂತಾವಯವ. ಅಭೂವ್+ಅನ್—ಅಭೂವನ್. ಮಧ್ಯಮದಲ್ಲಿ ಸಿಪಿನ ಇಕಾರಕ್ಕೆ ಲೋಪ ಬಂದಾಗ ಪದಾಂತ ಸಕಾರವಾಗುವುದರಿಂದ ಅದಕ್ಕೆ ರುತ್ವ, ವಿಸರ್ಗ. ಅಭೂಃ ॥ ಥಸಿಗೆ ತಮಾದೇಶ. ಅಭೂತಮ್. ಥಕ್ಕೆ ತಮಾದೇಶ. ಅಭೂತ. ಉತ್ತಮದಲ್ಲಿ ಮಿಪಿಗೆ ಅಮಾದೇಶ. ಅಭೂ+ಅಮ್ ಎಂದಿರುವಾಗ ಅಜಾದಿಲುಙ್ ಇರುವುದರಿಂದ 'ಭುವೋವುಕ್—' (ಸೂ ೩೯೪) ಸೂತ್ರದಿಂದ ವುಕಾಗಮ. ಅಭೂವಮ್. ವಸ್ ಮಸ್‌ಗಳ ಸಕಾರಕ್ಕೆ 'ನಿತ್ಯಂ ಙಿತಃ' ಸೂತ್ರದಿಂದ ಲೋಪ. ಅಭೂವ, ಅಭೂಮ.

ಅಟ್, ಆಟ್ ನಿಷೇಧಿಸುವ ಸೂತ್ರ

೪೪೨. ನ ಮಾಙ್ಯೋಗೇ ॥ ೬-೪-೭೪ ॥

ಅಡಾಟೌ ನ ಸ್ತಃ । ಮಾ ಭವಾನ್ ಭೂತ್ । ಮಾಸ್ಮ ಭವತ್ । ಮಾಸ್ಮ ಭೂತ್ ॥

ದ್ವಿಪದ ಸೂತ್ರ. 'ಲುಙ್—' (ಸೂ. ೪೨೪) ಸೂತ್ರದಿಂದ 'ಅಟ್', 'ಆಡಜಾದೀನಾಮ್' ಸೂತ್ರದಿಂದ ಆಟ್ ಅನುವೃತ್ತಿ. ಸೂತ್ರಾರ್ಥ—ಮಾಙ್ ಯೋಗವಿರುವಾಗ ಅಂಗಕ್ಕೆ ಅಟ್ ಆಟ್ ಆಗಮಗಳು ಬರುವುದಿಲ್ಲ. 'ಮಾ ಭವಾನ್ ಭೂತ್.' (ತಾವು ಇರಬೇಡಿರಿ.) ಇಲ್ಲಿ ಮಾ ಸಂಬಂಧವಿರುವುದರಿಂದ ಲುಙಿನಲ್ಲಿ ಅಡಾಗಮ ಬರಲಿಲ್ಲ. ಮಾಙ್ ಯೋಗವಿರುವಾಗ ಲುಙೇ ಹೇಳಬೇಕೆಂದು ಹಿಂದೆ ಹೇಳಿದೆ. ಮಾ ಭೂತ್ ಎಂದು ಹೇಳಿದ್ದರೆ ಅಡಾಗಮ ಬಂದಿದೆಯೋ ಇಲ್ಲವೋ ಸಂದೇಹವಾಗುತ್ತದೆ. ಒಂದು ವೇಳೆ ಬಂದಿದ್ದರೂ ಸವರ್ಣದೀರ್ಘ ಬರುತ್ತದೆ. ಸರಿಯಾಗಿ ಭೇದ ತಿಳಿಯಲೆಂದು ಮಧ್ಯೆ ಭವಾನ್ ಪ್ರಯೋಗಿಸಿರುತ್ತಾನೆ. ಅಡಾಗಮ ಬಂದಿದ್ದರೆ ಭವಾನಾಭೂತ್ ಆಗುತ್ತಿತ್ತು. ಮಾಸ್ಮ ಭವತ್. 'ಸ್ಮೋತ್ತರೇ ಲಙ್ ಚ' ಸೂತ್ರದಿಂದ ಸ್ಮ ಸಹಿತವಾದರೆ ಲಙ್ ಮತ್ತು ಲುಙ್ ಬರುತ್ತದೆ ಎಂದು ಹೇಳಿದೆ. ಲಙಿಗೆ ಉದಾಹರಣೆ. ಇಲ್ಲಿ ಮಾಙ್ ಇರುವುದರಿಂದ ಅಡಾಗಮ ಬಂದಿಲ್ಲ. 'ಮಾಸ್ಮಭೂತ್' ಎಂಬಲ್ಲಿಯೂ ಅಡಾಗಮ ಬಂದಿಲ್ಲ.

### ಲೃಙ್ ವಿಧಾನ ಮಾಡುವ ಸೂತ್ರ

೪೪೩. ಲಿಙ್‌ನಿಮಿತ್ತೇ, ಲೃಙ್, ಕ್ರಿಯಾತಿಪತ್ತೌ ॥ ೩-೩-೧೩೯ ॥

ಹೇತುಹೇತುಮದ್ಭಾವಾದಿ ಲಿಙ್‌ನಿಮಿತ್ತಂ ತತ್ರ ಭವಿಷ್ಯತ್ಯರ್ಥೇ ಲೃಙ್ ಸ್ಯಾತ್, ಕ್ರಿಯಾಯಾ ಅನಿಷ್ಪತ್ತೌ ಗಮ್ಯಮಾನಾಯಾಮ್ । ಅಭವಿಷ್ಯತ್ । ಅಭವಿಷ್ಯತಾಮ್ । ಅಭವಿಷ್ಯನ್ ॥ ಅಭವಿಷ್ಯಃ । ಅಭವಿಷ್ಯತಮ್ । ಅಭವಿಷ್ಯತ ॥ ಅಭವಿಷ್ಯಮ್ । ಅಭವಿಷ್ಯಾವ । ಅಭವಿಷ್ಯಾಮ ॥ ಸುವೃಷ್ಟಿಶ್ಚೇದಭವಿಷ್ಯತ್ ತದಾ ಸುಭಿಕ್ಷಮಭವಿಷ್ಯತ್, ಇತ್ಯಾದಿ ಜ್ಞೇಯಮ್ ॥

ತ್ರಿಪದ ಸೂತ್ರ. ಕ್ರಿಯಾಯಾಃ ಅತಿಪತ್ತಿಃ ಕ್ರಿಯಾತಿಪತ್ತಿಃ । ತಸ್ಯಾಮ್ ಕ್ರಿಯಾತಿಪತ್ತೌ । ಕ್ರಿಯಾ ಹುಟ್ಟದಿರುವಾಗ ಎಂದರ್ಥ. ಅತಿಪತ್ತಿಗೆ ಅನಿಷ್ಪತ್ತಿ ಎಂಬರ್ಥವನ್ನು ವೃತ್ತಿಯಲ್ಲಿ ಹೇಳಿದೆ. ಲಿಙಿನ ನಿಮಿತ್ತಗಳು ಲಕಾರಾರ್ಥ ಪ್ರಕರಣದಲ್ಲಿ ಹೇಳಿವೆ. (ಇಚ್ಛಾ, ಕಾರ್ಯಕಾರಣಭಾವ ಮುಂತಾದವುಗಳು.) ಸೂತ್ರಾರ್ಥ—ಕಾರ್ಯಕಾರಣಭಾವ ಮುಂತಾದ ಲಿಙ್ ನಿಮಿತ್ತ ತೋರುವಾಗ ಕ್ರಿಯಾ ಹುಟ್ಟದಿರುವಾಗ ಭವಿಷ್ಯದರ್ಥದಲ್ಲಿ ಧಾತುವಿಗೆ ಲೃಙ್ ಬರುತ್ತದೆ. 'ಭವಿಷ್ಯತಿ ಮರ್ಯಾದಾವಚನೇ' ಸೂತ್ರದಿಂದ ಭವಿಷ್ಯತಿ ಅನುವೃತ್ತವಾಗುತ್ತದೆ. 'ಸುವೃಷ್ಟಿಶ್ಚೇದಭವಿಷ್ಯತ್' ಎಂದು ಮುಂದೆ ಉದಾಹರಣೆ ಕೊಡುತ್ತಾನೆ. ಭೂ + ಲೃಙ್ ಎಂದಿರುವಾಗ ಲೃಙಿಗೆ ತಿಬಾದಿ ಆದೇಶ. ಭೂ + ತಿ. 'ಇತಶ್ಚ' ಇಕಾರಲೋಪ. ಭೂ + ತ್.

ಶಪ್ ಪ್ರಾಪ್ತವಾದರೆ 'ಸ್ಯತಾಸೀ ಲೃಲುಟೋಃ' ಸೂತ್ರದಿಂದ ಸ್ಯ ವಿಕರಣ. ಭೂ + ಸ್ಯ + ತ್. 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ಸ್ಯಕ್ಕೆ ಇಡಾಗಮ. ಭೂ + ಇಸ್ಯ + ತ್. ವಿಕರಣವನ್ನು ನಿಮಿತ್ತೀಕರಿಸಿ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಊಕಾರಕ್ಕೆ ಗುಣ. ಭೋ + ಇಸ್ಯ + ತ್. ಅವಾದೇಶ. ಭವಿಸ್ಯತ್. ಇಕಾರದ ಪರದಲ್ಲಿ ಪ್ರತ್ಯಯ ಸಕಾರವಿರುವುದರಿಂದ 'ಆದೇಶಪ್ರತ್ಯಯಯೋಃ' ಸೂತ್ರದಿಂದ ಅದಕ್ಕೆ ಷತ್ವ. ಭವಿಷ್ಯತ್. 'ಲುಙ್ಲಙ್ಲೃಙ್ಕ್ಷ್ವಡುದಾತ್ತಃ' ಸೂತ್ರದಿಂದ ಭವಿಷ್ಯ ಅಂಗಕ್ಕೆ ಅಡಾಗಮ. ಅಭವಿಷ್ಯತ್. ಇನ್ನು ಮುಂದೆ ಅಭವಿಷ್ಯ ಅಂಗವೆಂದು ತಿಳಿಯಬೇಕು. ಅದಕ್ಕೆ ಪ್ರತ್ಯಯ ಹಚ್ಚುತ್ತಾ ಹೋಗಬೇಕು. ತಸಾದಿಗಳಿಗೆ ತಾಮಾದ್ಯಾದೇಶ ಹಿಂದಿನಂತೇ ಬರುತ್ತವೆ. ಅಭವಿಷ್ಯತಾಮ್. ಝಿಗೆ ಅಂತಾದೇಶ. ಇಕಾರ ಲೋಪ. ಅನ್ತ್ ಎಂದಿರುವಾಗ ಸಂಯೋಗಾಂತ ಲೋಪ. ಅಭವಿಷ್ಯ + ನ್ ಎಂದಿರುವಾಗ 'ಅತೋ ಗುಣೇ' ಸೂತ್ರದಿಂದ ಪರರೂಪ. ಅಭವಿಷ್ಯನ್. ಮಧ್ಯದಲ್ಲಿ ಸಿಪ್ಪಿನ ಇಕಾರಕ್ಕೆ ಲೋಪ ಬಂದಾಗ ಸಕಾರಕ್ಕೆ ರುತ್ವ ವಿಸರ್ಗ. ಅಭವಿಷ್ಯಃ॥ ಥಸಿಗೆ ತಮ್ ಆದೇಶ. ಅಭವಿಷ್ಯತಮ್. ಥಪ್ರತ್ಯಯಕ್ಕೆ ತ ಆದೇಶ. ಅಭವಿಷ್ಯತ. ಉತ್ತಮದಲ್ಲಿ ಮಿಪಿಗೆ ಅಮ್ ಆದೇಶ. ಅಭವಿಷ್ಯ + ಅಮ್ ಎಂದಿರುವಾಗ 'ಅತೋ ಗುಣೇ' ಸೂತ್ರದಿಂದ ಪರರೂಪ. ಅಭವಿಷ್ಯಮ್. ವಸ್ ಮಸ್‌ಗಳ ಸಕಾರಕ್ಕೆ 'ನಿತ್ಯಂ ಙಿತಃ' ಸೂತ್ರದಿಂದ ಲೋಪ. ಅವು ಪರವಾದಾಗ 'ಅತೋ ದೀರ್ಘೋಯಞಿ' ಸೂತ್ರದಿಂದ ಅದಂತಾಂಗಕ್ಕೆ ದೀರ್ಘ. ಅಭವಿಷ್ಯಾವ, ಅಭವಿಷ್ಯಾಮ. 'ಸುವೃಷ್ಟಿಶ್ಚೇದಭವಿಷ್ಯತ್ ತದಾ ಸುಭಿಕ್ಷಮಭವಿಷ್ಯತ್.' ಕಾರ್ಯ ಕಾರಣಭಾವವಿದ್ದು ಕ್ರಿಯೆ ಹುಟ್ಟದಿರುವುದಕ್ಕೆ ಇದು ಉದಾಹರಣೆ. ಚೆನ್ನಾಗಿ ಮಳೆಯಾದರೆ ಸುಭಿಕ್ಷವು ಆದೀತು. ಮಳೆಗೂ ಸುಭಿಕ್ಷಕ್ಕೂ ಕಾರ್ಯಕಾರಣ ಭಾವವಿದೆ. ಇಲ್ಲಿ ಕ್ರಿಯೆಯಾಗಿಲ್ಲವೆಂಬುದು ಸ್ಪಷ್ಟವಾಗಿದೆ. ಹೀಗೆಯೇ ಇತರ ಲಿಙ್ ನಿಮಿತ್ತದಲ್ಲಿಯೂ ಲೃಙ್ ಬರುತ್ತದೆ

ಲಟ್, ಲೋಟ್, ಲಙ್, ವಿಧಿಲಿಙ್ ಈ ನಾಲ್ಕು ಲಕಾರಗಳಲ್ಲಿ ತಿಙಿಗೆ ಸಾರ್ವಧಾತುಕ ಸಂಜ್ಞೆಯಿರುವುದರಿಂದ ಶಪಾದಿ ವಿಕರಣಗಳು ಬರುತ್ತವೆ, ಲಿಟ್, ಆಶೀರ್ಲಿಙ್ ಪ್ರತ್ಯಯಗಳಿಗೆ ಆರ್ಧಧಾತುಕಸಂಜ್ಞೆ ಹೇಳುತ್ತಾನೆ. ಲುಟಿನಲ್ಲಿ ಶಪಿಗೆ ಬದಲಾಗಿ ತಾಸ್ ವಿಕರಣ. ಲೃಟ್, ಲೃಙ್‌ಗಳಲ್ಲಿ ಸ್ಯ ವಿಕರಣ. ಲುಙಿನಲ್ಲಿ ಸಾಮಾನ್ಯವಾಗಿ ಸಿಚ್ ವಿಕರಣ. ಈ ವಿಕರಣಗಳಿಗೆ ಆರ್ಧಧಾತುಕಸಂಜ್ಞೆಯಿದೆ. ಇವುಗಳ ಕಾಲವಿವೇಚನೆಯನ್ನು ಹಿಂದೆ ವಿವರಿಸಿದೆ. ಸಾರ್ವಧಾತುಕ ಪ್ರತ್ಯಯಗಳಲ್ಲಿ ಅಂಗ ಒಂದೇ ರೀತಿಯಾಗಿರುತ್ತದೆ. ಇದನ್ನು ಮೊದಲು ಚೆನ್ನಾಗಿ ತಿಳಿದುಕೊಳ್ಳಬೇಕು.

|| ೨ || ಅತ—ಸಾತತ್ಯಗಮನೇ || (ಯಾವಾಗಲೂ ಹೋಗುವುದು.)

ಅತ ಧಾತು. ಸಾತತ್ಯಗಮನ ಅರ್ಥ. ಅತ ಎಂಬಲ್ಲಿ ಅಕಾರ ಉಚ್ಚಾರಣಾರ್ಥ. ಅತ್ ಇದರ ಸ್ವರೂಪ. ಇದು ಅನುದಾತ್ತೇತ್ ಅಥವಾ ಸ್ವರಿತೇತ್ ಧಾತುವಲ್ಲ. ಆದುದರಿಂದ ಆತ್ಮನೇಪದ ಪ್ರತ್ಯಯವಿಲ್ಲ. ಆತ್ಮನೇಪದ ನಿಮಿತ್ತಹೀನಧಾತು ವಾದುದರಿಂದ ಪರಸ್ಮೈಪದ ಪ್ರತ್ಯಯಗಳು ಬರುತ್ತವೆ. ಲಟಿಗೆ ತಿಬಾದಿಗಳು ಬರುತ್ತವೆ. ಅತ್+ತಿ ಎಂದಿರುವಾಗ 'ಕರ್ತರಿ ಶಪ್' ಸೂತ್ರದಿಂದ ಶಪ್ ವಿಕರಣ. ಅತ್+ಅ+ತಿ—ಅತತಿ. ಅತ ಅಂಗವೆಂದು ತಿಳಿಯಬೇಕು.

ಪ್ರ. ಪು. ಅತತಿ–ಅತತಃ–ಅತಂತಿ || ಮ. ಪು. ಅತಸಿ–ಅತಥಃ–ಅತಥ || ಉ. ಪು. ಅತಾಮಿ–ಅತಾವಃ–ಅತಾಮಃ|| ಭೂ ಧಾತುವಿನ ಲಟ್ ಪ್ರಕ್ರಿಯೆಯನ್ನು ನೋಡಿ ತಿಳಿಯಬೇಕು. (ಭವತಿವತ್)

ಲಿಟ್ || ಅತ್+ಲಿಟ್. 'ಪರಸ್ಮೈಪದಾನಾಂ' (ಸೂ. ೩೯೩) ಸೂತ್ರದಿಂದ ಲಿಟಿನ ತಿಬಾದಿಗಳಿಗೆ ಬದಲಾಗಿ ಣಲ್, ಅತುಸ್. ಉಸಾದಿ ಆದೇಶ ಬರುತ್ತವೆ. ಅತ್+ಅ ಎಂದಿರುವಾಗ 'ಲಿಟಿಧಾತೋರನಭ್ಯಾಸಸ್ಯ' ಸೂತ್ರದಿಂದ ಧಾತುವಿಗೆ ದ್ವಿತ್ವ. ಅತ್‌ಅತ್+ಅ. 'ಹಲಾದಿಃ ಶೇಷಃ' ಸೂತ್ರದಿಂದ ಅಭ್ಯಾಸದ ತಕಾರಕ್ಕೆ ಲೋಪ. ಅಅತ್+ಅ ಎಂದಿರುವಾಗ ಅಭ್ಯಾಸ ಅಕಾರಕ್ಕೂ ಧಾತುವಿನ ಅಕಾರಕ್ಕೂ 'ಅತೋ ಗುಣೇ' ಸೂತ್ರದಿಂದ ಪರರೂಪ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಅಭ್ಯಾಸಕ್ಕೆ ದೀರ್ಘ ಹೇಳುತ್ತಾನೆ.

ಅಭ್ಯಾಸದ ಅಕಾರಕ್ಕೆ ದೀರ್ಘ ಹೇಳುವ ಸೂತ್ರ.

೪೪೪. ಅತ ಆದೇಃ || ೬-೪-೭೦ ||

ಅಭ್ಯಾಸಸ್ಯಾದೇರತೋ ದೀರ್ಘಃಸ್ಯಾತ್ || ಆತ | ಆತತುಃ | ಆತುಃ | ಆತಿಥ | ಆತಥುಃ | ಆತ || ಆತ | ಆತಿವ | ಆತಿಮ ||

ದ್ವಿಪದ ಸೂತ್ರ. 'ಅತ್ರಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ', 'ದೀರ್ಘ ಇಣಃ ಕಿತಿ' ಸೂತ್ರದಂದ 'ದೀರ್ಘಃ' ಪದಗಳು ಅನುವೃತ್ತವಾಗುತ್ತವೆ. ಅತ್ ಎಂದರೆ ಹ್ರಸ್ವಾಕಾರ. ಸೂತ್ರಾರ್ಥ–ಅಭ್ಯಾಸದ ಆದಿಯಾದ ಹ್ರಸ್ವಾಕಾರಕ್ಕೆ ದೀರ್ಘ ಬರುತ್ತದೆ. ಪ್ರಕೃತ ಅಭ್ಯಾಸದಲ್ಲಿಹ್ರಸ್ವಾಕಾರವಿರುವುದರಿಂದ ದೀರ್ಘ ಬಂದರೆ ಆ+ಅತ್+ಅ ಎಂದಾಗುತ್ತದೆ. ಆಗ ಸವರ್ಣದೀರ್ಘ. ಆತ. ದ್ವಿತ್ವಾದಿಗಳು ಬಂದ ಮೇಲೆ ಆತ್ ಎಂದಾಗುತ್ತದೆ. ಇದು ಅಂಗವೆಂದು ತಿಳಿಯಬೇಕು. ಇದರ ಮೇಲೆ ಪ್ರತ್ಯಯ ಸೇರಿಸಬೇಕು. ತಸ್‌ಗೆ ಅತುಸ್ ಆದೇಶ. ಆತತುಸ್. ಸಕಾರಕ್ಕೆ ರುತ್ವ ವಿಸರ್ಗ. ಆತತುಃ|| ಝಿಗೆ ಉಸ್. ಆತುಃ || ಸಿಪಿಗೆ ಥಲ್ ಆದೇಶ. ಲಕಾರ

ಲಕಾರ ಇತ್. 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ಅದಕ್ಕೆ ಇಡಾಗಮ. ಅತ್+ಇಥ–ಅತಿಥ. ಥಸ್‌ಗೆ ಅಥುಸಾದೇಶ. ಅತಥುಃ ॥ ಥಕ್ಕೆ ಅ ಆದೇಶ. ಆತ. ಮಿಪ್‌ಗೆ ಣಲ್. ಆ ಉಳಿಯುತ್ತದೆ. ಆತ. ವಸ್ ಮಸ್‌ಗಳಿಗೆ ವ, ಮ ಆದೇಶ. ಅವುಗಳಿಗೆ ವಲಾದಿಯಾದುದರಿಂದ ಇಡಾಗಮ. ಆತಿವ, ಆತಿಮ.

ಅತಿತಾ ॥ ಅತಿಷ್ಯತಿ ॥ ಅತತು ॥

ಲುಟ್ ॥ ಲುಟಿನಲ್ಲಿ 'ಲುಟಃ ಪ್ರಥಮಸ್ಯ ಡಾ ರೌ ರಸಃ' ಸೂತ್ರದಿಂದ ತಿಬಾದಿಗಳಿಗೆ ಡಾ, ರೌ, ರಸ್ ಆದೇಶಗಳು ಬರುತ್ತವೆ. 'ಸ್ಯತಾಸೀ ಲೃಲುಟೋಃ' ಸೂತ್ರದಿಂದ ತಾಸ್ ವಿಕರಣ. ಅತ್+ತಾಸ್+(ಡ್)ಆ. ತಾಸಿಗೆ ವಲಾದಿಯಾದುದರಿಂದ ಇಡಾಗಮ. ಅತ್+ಇತಾಸ್+ಆ. ಡಿತ್ತಾದುದರಿಂದ ಆ ಪರವಾದಾಗ ತಾಸಿನ ಟಿಗೆ (ಆಸ್) ಲೋಪ. ಅತ್+ಇತ್+ಆ—ಅತಿತಾ. ಅತಿತಾಸ್ ಅಂಗ. ಅದರ ಮೇಲೆ ಪ್ರತ್ಯಯ ಸೇರಿಸಬೇಕು. ಅತಿತಾಸ್+ರೌ. 'ರಿಚ' ಸೂತ್ರದಿಂದ ತಾಸಿನ ಸಕಾರಕ್ಕೆ ಲೋಪ. ಅತಿತಾರೌ. ಅತಿತಾಸ್+ರಸ್. 'ರಿಚ' ಅತಿತಾರಃ ॥ ಅತಿತಾಸ್+ಸಿ–'ತಾಸಸ್ತ್ಯೋರ್ಲೋಪಃ' ಸೂತ್ರದಿಂದ ತಾಸಿನ ಸಕಾರಕ್ಕೆ ಲೋಪ. ಅತಿತಾ+ಸಿ—ಅತಿತಾಸಿ. ಅತಿತಾಸ್+ಥಸ್—ಅತಿತಾಸ್ಥಃ ॥ ಅತಿತಾಸ್+ಥ—ಅತಿತಾಸ್ಥ, ಅತಿತಾಸ್+ಮಿ (ಪ್)—ಅತಿತಾಸ್ಮಿ. ಅತಿತಾಸ್+ವಸ್—ಅತಿತಾಸ್ವಃ ॥ ಅತಿತಾಸ್+ಮಸ್—ಅತಿತಾಸ್ಮಃ ॥

ಲೃಟ್ ॥ 'ಸ್ಯತಾಸೀ' ಸೂತ್ರದಿಂದ ತಿಬಾದಿಗಳು ಪರವಾದಾಗ ಸ್ಯ ವಿಕರಣ. 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ಅದಕ್ಕೆ ಇಡಾಗಮ. ಅತ್+ಇಸ್ಯ+ತಿ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಸ್ಯದ ಸಕಾರಕ್ಕೆ ಷತ್ವ. ಅತಿಷ್ಯತಿ. ಅತಿಷ್ಯ ಅಂಗವಾಗುತ್ತದೆ. ಅದರ ಮೇಲೆ ಪ್ರತ್ಯಯ ಸೇರಿಸಬೇಕು. ಅತಿಷ್ಯ+ತಸ್ — ಅತಿಷ್ಯತಃ ॥ ಅತಿಷ್ಯ+ಝಿ. ಝಿಗೆ ಅಂತಾದೇಶ. ಅತಿಷ್ಯ+ಅಂತಿ. 'ಅತೋಗುಣೇ' ಸೂತ್ರದಿಂದ ಪರರೂಪ. ಅತಿಷ್ಯಂತಿ ॥ ಅತಿಷ್ಯ+ಸಿ(ಪ್)—ಅತಿಷ್ಯಸಿ ॥ ಅತಿಷ್ಯ+ಥಸ್—ಅತಿಷ್ಯಥಃ ॥ ಅತಿಷ್ಯಥ ॥ ಅತಿಷ್ಯ+ಮಿ(ಪ್) 'ಅತೋದೀರ್ಘೋ ಯಞಿ' ಸೂತ್ರದಿಂದ ದೀರ್ಘ. ಅತಿಷ್ಯಾಮಿ । ಅತಿಷ್ಯ+ವಸ್. ದೀರ್ಘ. ಅತಿಷ್ಯಾವಃ । ಅತಿಷ್ಯ+ಮಸ್. ದೀರ್ಘ. ಅತಿಷ್ಯಾಮಃ ॥

ಲೋಟ್ ॥ ತಿಬಾದಿಗಳ ಇಕಾರಕ್ಕೆ ಲೋಟಿನಲ್ಲಿ 'ಏರುಃ' ಸೂತ್ರದಿಂದ ಉತ್ವ ಬರುತ್ತದೆ. ಶಪ್ ವಿಕರಣ. ಅತ್+ಅ+ತು—(೧) ಅತತು. ಆಶೀರರ್ಥದಲ್ಲಿ 'ತುಹ್ಯೋಸ್ತಾ—' (ಸೂ. ೪೧೩) ಸೂತ್ರದಿಂದ ತುವಿಗೆ ತಾತ್ (ಅಙ್, ಇತ್) ಆದೇಶ. ಅತ ಅಂಗ (೨) ಅತತಾತ್ ಲೋಟಿಗೆ ಲಙ್ವದ್ಭಾವ ಹೇಳಿದುದರಿಂದ ತಸ್, ಥಸ್, ಥ, ಮಿಪಿಗೆ ತಾಂ, ತಂ, ತ, ಅಮ್ ಆದೇಶ (ಸೂ ೪೧೫). ಅತ+ತಾಮ್—ಅತತಾಮ್. ಅತ+ಝಿ. ಝಿಗೆ ಅಂತಾದೇಶ ಇಕಾರಕ್ಕೆ ಉಕಾರ.

ಅತ+ಅಂತು. ಪರರೂಪ. ಅತಂತು ‖ ಮಧ್ಯದಲ್ಲಿ ಅತ+ಸಿಪ್. ಸಿಪಿಗೆ ಹಿ ಆದೇಶ (ಸೂ. ೪೧೬). ಅದಂತದ ಪರದಲ್ಲಿರುವುದರಿಂದ ಅದಕ್ಕೆ ಲುಕ್ (ಸೂ. ೪೧೭). (೧) ಅತ । ಆಶೀರರ್ಥದಲ್ಲಿ ಹೀಗೆ ತಾತಙ್ ಆದೇಶ. (೨) ಅತತಾತ್. ಥಸಿಗೆ ತವಾದೇಶ. ಅತತಮ್. ಥಕ್ಕೆ ತ ಆದೇಶ. ಅತತ ‖ ಉತ್ತಮದಲ್ಲಿ ಮಿಪಿಗೆ ಅಮ್ ಪ್ರಾಪ್ತವಾದರೆ 'ಮೇರ್ನಿಃ' ಸೂತ್ರದಿಂದ ನಿ ಆದೇಶ ಅಪವಾದವಾಗಿ ಬರುತ್ತದೆ. 'ಆಡುತ್ತ—' (ಸೂ. ೪೧೯) ಸೂತ್ರದಿಂದ ಉತ್ತಮದ ಪ್ರತ್ಯಯಗಳಿಗೆ ಆಡಾಗಮ. ಅತ+ಆನಿ. ಸವರ್ಣದೀರ್ಘ. ಅತಾನಿ ವಸ್ ಮಸ್‌ಗಳ ಸಕಾರಕ್ಕೆ 'ನಿತ್ಯಂ ಙಿತಃ' ಸೂತ್ರದಿಂದ ಲೋಪ. ಆಡಾಗಮ. ಅತ+ಆವ. ಸವರ್ಣದೀರ್ಘ. ಅತಾವ. ಅತ+ಆಮ—ಅತಾಮ.

ಲಙ್ ‖ ತಿಬಾದಿಗಳು ಬಂದಾಗ 'ಇತಶ್ಚ' ಸೂತ್ರದಿಂದ ಅವುಗಳ ಇಕಾರಕ್ಕೆ ಲೋಪ. ಶಪ್ ವಿಕರಣ. 'ಲುಙ್‌ಲಙ್—' (ಸೂ. ೪೨೪) ಸೂತ್ರದಿಂದ ಅಡಾಗಮ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಆಡಾಗಮ ಹೇಳುತ್ತಾನೆ.

ಅಜಾದಿ ಅಂಗಕ್ಕೆ ಆಡಾಗಮ ಹೇಳುವ ಸೂತ್ರ.

**೪೪೫. ಆಡಜಾದೀನಾಮ್ ‖ ೬-೪-೭೨ ‖**

**ಅಜಾದೇರಂಗಸ್ಯ ಆಟ್ ಲುಙ್‌ಲಙ್‌ಲೃಙ್‌ಕ್ಷು ‖ಆತತ್‖ ಆತೇತ್‖ ಆತ್ಯಾತ್ । ಅತ್ಯಾಸ್ತಾಮ್ ‖ ಲುಙಿ ಸಿಚಿ ಇಡಾಗಮೇ ಕೃತೇ ‖**

ಆಟ್, ಅಜಾದೀನಾಮ್ ‖ ದ್ವಿಪದ ಸೂತ್ರ. 'ಅಂಗಸ್ಯ' ಅಧಿಕಾರ. 'ಅಜಾದೀನಾಮ್' ಅದಕ್ಕೆ ವಿಶೇಷಣ. 'ಲುಙ್‌ಲಙ್‌ಲೃಙ್‌ಕ್ಷು' ಅನುವೃತ್ತಿ. **ಸೂತ್ರಾರ್ಥ**–ಅಚ್ ಆದಿಯಲ್ಲಿರುವ ಅಂಗಕ್ಕೆ ಲುಙ್, ಲಙ್, ಲೃಙ್ ಪರದಲ್ಲಿರುವಾಗ ಆಡಾಗಮ ಬರುತ್ತದೆ ಆಟ್ ಟಿತ್ತಾದುದರಿಂದ ಆಗಮ, ಅಂಗದ ಆದ್ಯವಯವವಾಗಿ ಬರುತ್ತದೆ. ಆ+ಅತ+ತ್. 'ಆಟಶ್ಚ' ಸೂತ್ರದಿಂದ ಆಟಿಗೆ ಅಚ್ ಪರವಾದಾಗ ವೃದ್ಧಿ. ಆತತ್. ಆತ ಅಂಗವಾಗುತ್ತದೆ. ತಸಾದಿಗಳಿಗೆ ತಾಮಾದ್ಯಾದೇಶ. ಆತ+ತಾಮ್—ಆತತಾಮ್. ಆತ+ಝಿ. 'ಝೋಽಂತಃ' ಅನ್ತಾದೇಶ. 'ಇತಶ್ಚ' ಇಕಾರ ಲೋಪ. ಆತ+ಅನ್‌ತ್. 'ಸಂಯೋಗಾಂತಸ್ಯ ಲೋಪಃ.' ತಕಾರ ಲೋಪ. ಆತ+ಅನ್. 'ಅತೋ ಗುಣೇ' ಪರರೂಪ. ಆತನ್ । ಆತ+ಸಿ 'ಇತಶ್ಚ' ಆತ+ಸ್. ಸಕಾರಕ್ಕೆ ರುತ್ವ ವಿಸರ್ಗ. ಆತಃ । ಆತ+ತಮ್—ಆತತಮ್. ಆತ+ತ—ಆತತ. ಆತ+ಅಮ್. 'ಅಮಿಪೂರ್ವಃ' ಪೂರ್ವರೂಪ. ಆತಮ್. ಆತ+ವಸ್. ಆತ+ಮಸ್. 'ನಿತ್ಯಂ ಙಿತಃ' ಸಲೋಪ. 'ಅತೋದೀರ್ಘೋ ಯಞಿ' ಅದಂತಾಂಗಕ್ಕೆ ದೀರ್ಘ. ಆತಾವ, ಆತಾಮ.

**ವಿಧಿಲಿಙ್** ‖ ಅತ್+ತಿ. 'ಇತಶ್ಚ' ಅತ್+ತ್. ಲಿಙಿಗೆ ಯಾಸುಟಾಗಮ.

ಶಪ್ ವಿಕರಣ. ಅತ+ಯಾಸ್ ತ್. 'ಅತೋಯೇಯಃ' ಸೂತ್ರದಿಂದ ಯಾಸು ಟಗೆ ಇಯಾದೇಶ. ಅತ+ಇಯ್‌ತ್. 'ಲೋಪೋವ್ಯೋರ್ವಲಿ' ಸೂತ್ರದಿಂದ ಯಕಾರ ಲೋಪ. ಗುಣ. ಅತೇತ್. ತಸಾದಿಗಳಿಗೆ ತಮಾದ್ಯಾದೇಶ ಅತ+ಇಯ್ ತಾಮ್. ಯ ಲೋಪ. ಅತೇತಾಮ್. ಅತ+ಇಯ್‌ಝಿ. 'ಝೇರ್ಜುಸ್' ಸೂತ್ರದಿಂದ ಝಿಗೆ ಉಸಾದೇಶ. ಅತ+ಇಯ್+ಉಸ್—ಅತೇಯುಃ ‖ ಅತ+ ಇಯ್+ಸ್. ಯ ಲೋಪ. ಸಕಾರಕ್ಕೆ ರುತ್ವ ವಿಸರ್ಗ. ಅತೇಃ | ಅತ+ಇಯ್ ತಮ್—ಅತೇತಮ್. ಅತ+ಇಯ್‌ತ—ಅತೇತ ‖ ಅತ ಇಯ್‌ಅಮ್—ಅತೇ ಯಮ್. ಅತ+ಇಯ್‌ವ—ಅತೇವ. ಅತ+ಇಯ್‌ಮ—ಅತೇಮ ‖

ಆಶೀರ್ಲಿಙ್ ‖ ಇಲ್ಲಿ ಲಿಙಿಗೆ ಬಂದ ಯಾಸುಟಾಗಮ ಆರ್ಧಧಾತುಕ ವಾದುದರಿಂದ ಶಪ್ ವಿಕರಣವಿಲ್ಲ. ಯಾಸುಟಿನ ಸಕಾರಕ್ಕೂ ಲೋಪವಿಲ್ಲ. ಸಾರ್ವ ಧಾತುಕದಲ್ಲಿ ಮಾತ್ರ ಲೋಪ ಆತ್+ಯಾಸ್‌ತ್. 'ಸ್ಕೋಃ ಸಂಯೋಗಾದ್ಯೋ ರಂತೇಚ' ಸೂತ್ರದಿಂದ ಸಕಾರಕ್ಕೆ ಲೋಪ. ಅತ್ಯಾತ್. ಅತ್+ಯಾಸ್‌ತಾಮ್ ಅತ್ಯಾಸ್ತಾಮ್. ಅತ್+ಯಾಸ್ ಉಸ್ (ಝೇರ್ಜುಸ್)—ಅತ್ಯಾಸುಃ ‖ ಅತ್ಯಾ ಸ್‌ಸ್. 'ಸ್ಕೋಸಂ—' ಸೂತ್ರದಿಂದ ಆದಿ ಸಲೋಪ. ಅಂತ್ಯ ಸಕಾರಕ್ಕೆ ರುತ್ವ ವಿಸರ್ಗ. ಅತ್ಯಾಃ-ಅತ್ಯಾಸ್ತಮ್-ಅತ್ಯಾಸ್ತ ‖ ಆತ್+ಯಾಸ್‌ಅಮ್—ಅತ್ಯಾ ಸಮ್. ಆತ್+ಯಾಸ್‌ವ—ಅತ್ಯಾಸ್ವ-ಅತ್ಯಾಸ್ಮ ‖

ಲುಙ್ ‖ ಅತ್+ತಿ 'ಇತಶ್ಚ' ಅತ್+ತ್. ಚ್ಲಿ ವಿಕರಣ. ಅದಕ್ಕೆ ಸಿಚಾದೇಶ. ಅತ್+ಸ್+ತ್. 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ಸಿಚಿಗೆ ಇಡಾಗಮ. ಅತ್+ಇಸ್+ತ್ ಎಂದಿರುವಾಗ ಅಪೃಕ್ತ ಪ್ರತ್ಯಯಕ್ಕೆ ಈಡಾಗಮ ಹೇಳುತ್ತಾನೆ.

ಅಪೃಕ್ತಕ್ಕೆ ಈಡಾಗಮ ಹೇಳುವ ಸೂತ್ರ.

೪೪೬. ಅಸ್ತಿಸಿಚೋಽಪೃಕ್ತೇ ‖ ೭-೩-೯೬ ‖

ವಿದ್ಯಮಾನಾತ್ ಸಿಚೋಽಸ್ತೇಶ್ಚ ಪರಸ್ಯಾಪೃಕ್ತಸ್ಯ ಹಲಃ ಈಡಾಗಮಃ ‖

ಅಸ್ತಿಸಿಚಸ್, ಅಪೃಕ್ತೇ ‖ ದ್ವಿಪದ ಸೂತ್ರ. ಸಿಚ್‌ಚ ಅಸ್‌ಚ ತಯೋಃ ಸಮಾಹಾರಃ | ಸಿಚಸ್ | ಅಸ್ತಿಶ್ಚಾಸೌ ಸಿಚಸ್‌ಚ | ಅಸ್ತಿಸಿಚಸ್ | ಇದರ ಮೇಲೆ ಪಂಚಮೀ ವಿಭಕ್ತಿ ಬಂದು ಲೋಪವಾಗಿದೆ. ಸೌತ್ರಲುಕ್ ಎಂದು ತಿಳಿಯಬೇಕು. ಅಪೃಕ್ತೇ ಸಪ್ತಮೀ ಷಷ್ಠ್ಯಂತವಾಗಿ ಪರಿಣತವಾಗುತ್ತದೆ. ಪಂಚಮೀ ಸಪ್ತಮೀ ನಿರ್ದೇಶಗಳಲ್ಲಿ ಪಂಚಮೀ ನಿರ್ದೇಶಕ್ಕೇ ಪ್ರಾಬಲ್ಯವಿರುವುದರಿಂದ ಹಾಗೆ ಮಾಡ ಬೇಕು. 'ಬ್ರುವ ಈಟ್' ಸೂತ್ರದಿಂದ 'ಈಟ್' 'ಉತೋವೃದ್ಧಿರ್ಲುಕಿ ಹಲಿ'

ಸೂತ್ರದಿಂದ 'ಹಲಿ' ಪದಗಳು ಅನುವೃತ್ತವಾಗುತ್ತವೆ. 'ಹಲಿ' ಎಂಬುದೂ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಸೂತ್ರಾರ್ಥ– ಲೋಪ ಹೊಂದದಿರುವ ಸಿಚಿನ ಮತ್ತು ಅಸ್ ಧಾತುವಿನ ಪರದಲ್ಲಿರುವ ಅಪೃಕ್ತವಾದ ಹಲಿಗೆ ಈಡಾಗಮವು ಬರುತ್ತದೆ. ಅಪೃಕ್ತವೆಂದರೆ ಒಂದು ಅಲ್ ಇರುವ ಪ್ರತ್ಯಯು. ಸೂತ್ರದಲ್ಲಿ ಅಸ್ತಿ ಎಂಬುದು ವಿದ್ಯಮಾನವೆಂದರ್ಥವುಳ್ಳ ಒಂದು ಅವ್ಯಯು. ಈಟ್ ಟಿತ್ತಾದುದರಿಂದ ಆಗಮವು ಅವ್ಯವಯುವವಾಗಿ ಬರುತ್ತದೆ. ಆತ್ + ಇಸ್ + ತ್ ಎಂಬಲ್ಲಿ ಸಿಚ್ ಇದೆ. ಲೋಪವಾಗಿಲ್ಲ. ಅದರ ಪರದಲ್ಲಿ ಅಪೃಕ್ತವಾದ ಹಲ್ ತ್ ಎಂಬುದು. ಅದಕ್ಕೆ ಈಟ್ ಆವ್ಯವಯುವವಾಗಿ ಬಂದರೆ ಆತ್ + ಇಸ್ + ಈತ್ ಎಂದಾಗುತ್ತದೆ. ಇಲ್ಲಿ ಸಿಚಿಗೆ ಲೋಪ ಹೇಳುತ್ತಾನೆ.

ಸಿಚಿಗೆ ಲೋಪ ಹೇಳುವ ಸೂತ್ರ

೪೪೭. ಇಟ ಈಟಿ ॥ ೮–೨–೨೮ ॥

ಇಟಃ ಪರಸ್ಯ ಸಸ್ಯ ಲೋಪಃ ಸ್ಯಾದೀಟಿ ಪರೇ ॥

ವಾ ॥ (ಸಿಜ್‌ಲೋಪ ಏಕಾದೇಶೇ ಸಿದ್ಧೋ ವಾಚ್ಯಃ) ಆತೀತ್ । ಆತಿಷ್ಟಾಮ್ ॥

ಇಟಃ, ಈಟಿ ॥ ದ್ವಿಪದ ಸೂತ್ರ ಇಟಃ ಪಂಚಮೀ. ಇಟಿನ ಪರದಲ್ಲಿರುವ ಎಂದರ್ಥ. 'ರಾತ್ಸಸ್ಯ' ಸೂತ್ರದಿಂದ 'ಸಸ್ಯ', 'ಸಂಯೋಗಾಂತಸ್ಯ ಲೋಪಃ' ಸೂತ್ರದಿಂದ 'ಲೋಪಃ' ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ— ಇಟಿನ ಪರದಲ್ಲಿರುವ ಸಕಾರಕ್ಕೆ ಈಟ್ ಪರದಲ್ಲಿರುವಾಗ ಲೋಪ ಬರುತ್ತದೆ. ಪ್ರಕೃತ ಇಟ್ ಎಂದರೆ ಇಡಾಗಮ. ಆದರ ಪರದಲ್ಲಿ ಸಿಚಿನ ಸಕಾರವಿದೆ. ಅದಕ್ಕೆ ಈಟ್ ಪರವಾದುದರಿಂದ ಲೋಪ. ಆತ್ + ಇ + ಈತ್. ಈಗ ಇಲ್ಲಿ ಇಕಾರ ಈಕಾರಗಳಿಗೆ ಸವರ್ಣದೀರ್ಘ ಬರಬೇಕು. ಆದರೆ ಸಿಚ್ ಲೋಪವು ತ್ರಿಪಾದಿ ಸೂತ್ರದಿಂದ ಹೇಳಿದುದರಿಂದ ಅದು ಸಪಾದಸಪ್ತಾಧ್ಯಾಯಿಯಲ್ಲಿರುವ 'ಅಕಃ ಸವರ್ಣೇ ದೀರ್ಘಃ' ಸೂತ್ರಕ್ಕೆ 'ಪೂರ್ವತ್ರಾಸಿದ್ಧಮ್' ಸೂತ್ರದಿಂದ ಅಸಿದ್ಧವಾಗಿ ಮಧ್ಯೆ ಸಕಾರ ಇದ್ದಂತಾಗುವುದರಿಂದ ಸವರ್ಣಧೀರ್ಘ ಬರಲಾರದು ಅದಕ್ಕೋಸ್ಕರ ವಾರ್ತಿಕಕಾರರು ಸಲೋಪಕ್ಕೆ ಸಿದ್ಧವದ್ಭಾವ ಹೇಳುತ್ತಾರೆ. ವಾರ್ತಿಕಾರ್ಥ—ಏಕಾದೇಶ ಮಾಡುವ ಸಂದರ್ಭದಲ್ಲಿ ಸಿಚ್ ಲೋಪವು ಸಿದ್ಧವಾಗುತ್ತದೆ. ಪ್ರಕೃತ ಸವರ್ಣದೀರ್ಘ ಏಕಾದೇಶವಾದುದರಿಂದ ಸಿಚ್ ಲೋಪವಾದದ್ದು ಅದಕ್ಕೆ ತಿಳಿದಿದೆಯೆಂದು ತಿಳಿಯಬೇಕು. ಆಗ ಸವರ್ಣದೀರ್ಘ ಬಂದರೆ ಆತೀತ್ ಎಂದಾಗುತ್ತದೆ. ಇನ್ನು ಮುಂದೆ ಆತಿಷ್ ಅಂಗವೆಂದು ತಿಳಿಯಬೇಕು. ಆತಿಷ್ + ತಾಮ್. 'ಷ್ಟುನಾಷ್ಟುಃ' ಸೂತ್ರದಿಂದ ಷಕಾರದ ಪರ ತಕಾರಕ್ಕೆ ಷ್ಟುತ್ವ. ಆತಿಷ್ಟಾಮ್. ಆತಿಷ್ + ಝಿ ಎಂದಿರುವಾಗ ಝಿಗೆ ಜುಸಾದೇಶ ಹೇಳುತ್ತಾನೆ.

## ಲುಙಿನಲ್ಲಿ ಝಿಗೆ ಜುಸಾದೇಶ ಹೇಳುವ ಸೂತ್ರ.

## ೪೪೮. ಸಿಜಭ್ಯಸ್ತವಿದಿಭ್ಯಶ್ಚ || ೩-೪-೧೦೯ ||

ಸಿಚೋಽಭ್ಯಸ್ತಾದ್ವಿದೇಶ್ಚ ಪರಸ್ಯ ಙಿತ್ಸಂಬಂಧಿನೋ ಝೇರ್ಜುಸ್ || ಆತಿಷುಃ | ಆತೀಃ | ಆತಿಷ್ಟಮ್ | ಆತಿಷ್ಟ | ಆತಿಷಮ್ | ಆತಿಷ್ವ | ಆತಿಷ್ಮ || ಆತಿಷ್ಯತ್ ||

ಸಿಜಭ್ಯಸ್ತವಿದಿಭ್ಯಃ, ಚ || ದ್ವಿಪದ ಸೂತ್ರ. ಸಿಚ್ ಚ, ಅಭ್ಯಸ್ತಂಚ, ವಿದಿಶ್ಚ ಸಿಜಭ್ಯಸ್ತವಿದಯಃ || ತೇಭ್ಯಃ || 'ಝೇರ್ಜುಸ್' ಸೂತ್ರವು ಅನುವೃತ್ತವಾಗುತ್ತದೆ 'ನಿತ್ಯಂ ಙಿತಃ' ಸೂತ್ರದಿಂದ 'ಙಿತಃ' ಅನುವೃತ್ತಿ. ಸೂತ್ರಾರ್ಥ— ಸಿಚ್, ಅಭ್ಯಸ್ತ, ವಿದಿ ಇವುಗಳ ಪರದಲ್ಲಿರುವ ಙಿತ್ ಲಕಾರಸಂಬಂಧಿಯಾದ ಝಿಗೆ ಜುಸ್ ಆದೇಶ ಬರುತ್ತದೆ. ದ್ವಿತ್ವ ಬಂದಾಗ ಎರಡಕ್ಕೂ ಸೇರಿ ಅಭ್ಯಸ್ತ ಎಂದು ಮುಂದೆ ಸಂಜ್ಞೆ ಹೇಳುತ್ತಾನೆ. ವಿದಿ ಧಾತುವು ಇಕಿನಿಂದ ನಿರ್ದೇಶ ಮಾಡಿದೆ. ಪ್ರಕೃತ ಙಿತ್ ಲುಙ್. ಅದರ ಝಿ ಸಿಚಿನ ಪರದಲ್ಲಿರುವುದರಿಂದ ಅದಕ್ಕೆ ಜುಸಾದೇಶ ಜುಸಿನಲ್ಲಿ 'ಚುಟೂ' ಸೂತ್ರದಿಂದ ಜಕಾರ ಇತ್. ವಿಭಕ್ತಿ ಸಕಾರವಾದುದರಿಂದ ಅಂತ್ಯದ ಸಕಾರಕ್ಕೆ ಇತ್ ಸಂಜ್ಞಾ ಇಲ್ಲ. ಆತಿಷ್+ಉಸ್. ಸಕಾರಕ್ಕೆ ರುತ್ವ ವಿಸರ್ಗ. ಆತಿಷುಃ || ಅತ್+ಇಸ್+ಸ್. ಅಪೃಕ್ತಸ್‌ಗೆ ಈಟಾಗಮ. ಆತ್+ಇಸ್+ಈಸ್. 'ಇಟ ಈಟಿ' ಸಲೋಪ. ಸವರ್ಣದೀರ್ಘ. ಆತೀಸ್. ಸಕಾರಕ್ಕೆ ರುತ್ವ ವಿಸರ್ಗ. ಆತೀಃ || ಆತಿಷ್+ತಮ್. ಷ್ಟುತ್ವ. ಆತಿಷ್ಟಮ್. ಆತಿಷ್+ತ—ಆತಿಷ್ಟ || ಆತಿಷ್+ಅಮ್–ಆತಿಷಮ್. ಆತಿಷ್+ವಸ್, ಆತಿಷ್+ಮಸ್. 'ನಿತ್ಯಂ ಙಿತಃ' ಸಲೋಪ. ಆತಿಷ್ವ, ಆತಿಷ್ಮ ||

ಲೃಙ್ || ಅತ್+ತಿ. 'ಇತಶ್ಚ' ಇಕಾರ ಲೋಪ. 'ಸ್ಯತಾಸೀ ಲೃಲುಟೋಃ' ಸೂತ್ರದಿಂದ ಸ್ಯ ವಿಕರಣ. 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ಅದಕ್ಕೆ ಇಡಾಗಮ. 'ಆಡಜಾದೀನಾಮ್' ಸೂತ್ರದಿಂದ ಅಂಗಕ್ಕೆ ಆಡಾಗಮ. ಆ+ಅತ್+ಇಸ್ಯ+ತ್. ವೃದ್ಧಿ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಸಕಾರಕ್ಕೆ ಷತ್ವ. ಆತಿಷ್ಯತ್. ಆತಿಷ್ಯ ಅಂಗ. ಆತಿಷ್ಯ+ತಾಮ್—ಆತಿಷ್ಯತಾಮ್. ಆತಿಷ್ಯ+ಝಿ. ಝಿಗೆ ಅಂತಾದೇಶ. ಇಕಾರ ಲೋಪ ಸಂಯೋಗಾಂತ ಲೋಪ. ಪರರೂಪ. ಆತಿಷ್ಯನ್ || ಆತಿಷ್ಯ+ಸ್—ಆತಿಷ್ಯಃ || ಆತಿಷ್ಯ+ತಮ್—ಆತಿಷ್ಯತಮ್ || ಆತಿಷ್ಯತ || ಆತಿಷ್ಯ+ಅಮ್. ಪೂರ್ವರೂಪ. ಆತಿಷ್ಯಮ್. ವ, ಮ ಪರವಾದಾಗ 'ಅತೋ ದೀರ್ಘೋಯಞಿ' ಸೂತ್ರದಿಂದ ಅದಂತಾಂಗಕ್ಕೆ ದೀರ್ಘ. ಆತಿಷ್ಯಾವ | ಆತಿಷ್ಯಾಮ ||

|| ೩ || ಷಿಧ—ಗತ್ಯಾಮ್ || (ಗಮನಾರ್ಥ)

ಷಿಧ ಧಾತು. ಅಕಾರ ಉಚ್ಚಾರಣಾರ್ಥ. (ಷಿಧ್) 'ಧಾತ್ವಾದೇಃ ಷಃ ಸಃ' (ಸೂ. ೨೫೬) ಸೂತ್ರದಿಂದ ಧಾತುವಿನ ಆದಿಷಕಾರಕ್ಕೆ ಸಕಾರಾದೇಶ ಸಿಧ್ ಸ್ವರೂಪವಾಯಿತು. ಇದಕ್ಕೆ ಲಡಾದಿಗಳು ಬಂದಾಗ ಇಕಾರಕ್ಕೆ ಗುಣ ಹೇಳಬೇಕು. ಮೊದಲು ಅದಕ್ಕೆ ಉಪಯುಕ್ತವಾದ ಸಂಜ್ಞೆಗಳನ್ನು ಹೇಳುತ್ತಾನೆ.

ಲಘುಸಂಜ್ಞಾ ಹೇಳುವ ಸೂತ್ರ.

**೪೪೯. ಹ್ರಸ್ವಂ ಲಘು || ೧-೪-೧೦ ||**

ದ್ವಿಪದ ಸೂತ್ರ. ಅನುವೃತ್ತ್ಯಾದಿಗಳಿಲ್ಲ. ಸೂತ್ರಾರ್ಥ—ಹ್ರಸ್ವವಾದ ವರ್ಣವು ಲಘು ಎಂಬ ಸಂಜ್ಞೆಯನ್ನು ಹೊಂದುತ್ತದೆ. ಕ, ಚ ಇತ್ಯಾದಿಗಳು ಲಘುವರ್ಣಗಳು.

ಗುರುಸಂಜ್ಞೆ ಹೇಳುವ ಸೂತ್ರ

**೪೫೦. ಸಂಯೋಗೇ ಗುರು || ೧-೪-೧೧ ||**

**ಸಂಯೋಗೇ ಪರೇ ಹ್ರಸ್ವಂ ಗುರು ಸ್ಯಾತ್ ||**

ದ್ವಿಪದ ಸೂತ್ರ ಹಿಂದಿನ ಸೂತ್ರದಿಂದ ಹ್ರಸ್ವಂ ಅನುವೃತ್ತಿ. ಸೂತ್ರಾರ್ಥ—ಸಂಯೋಗ ಪರದಲ್ಲಿರುವಾಗ ಹ್ರಸ್ವವೂ ಗುರುಸಂಜ್ಞೆಯನ್ನು ಹೊಂದುತ್ತದೆ. ರಕ್ತಃ—ಇಲ್ಲಿ ಕ್ತ ಎಂಬ ಸಂಯುಕ್ತಾಕ್ಷರ ಪರದಲ್ಲಿರುವುದರಿಂದ ರ ಗುರುವಾಗುತ್ತದೆ.

ದೀರ್ಘಕ್ಕೆ ಗುರುಸಂಜ್ಞೆ ಹೇಳುವ ಸೂತ್ರ.

**೪೫೧. ದೀರ್ಘಂ ಚ || ೧-೪-೧೨ ||**

**ಗುರು ಸ್ಯಾತ್ ||**

ದ್ವಿಪದ ಸೂತ್ರ. ಸೂತ್ರಾರ್ಥ—ದೀರ್ಘವೂ ಕೂಡಾ ಗುರುಸಂಜ್ಞೆಯನ್ನು ಹೊಂದುತ್ತದೆ ರಾಮಃ—ಇಲ್ಲಿ ರಾ ದೀರ್ಘವಾದುದರಿಂದ ಗುರುವೆಂದು ತಿಳಿಯಬೇಕು ಹೀಗೆ ಗುರು-ಲಘುಸಂಜ್ಞೆಗಳನ್ನು ತಿಳಿಸಿ ಪ್ರಕೃತ ಅದರ ಕಾರ್ಯ ಹೇಳುತ್ತಾನೆ.

ಅಂಗದ ಇಕಿಗೆ ಗುಣ ಹೇಳುವ ಸೂತ್ರ.

**೪೫೨. ಪುಗಂತಲಘೂಪಧಸ್ಯ ಚ || ೭-೩-೮೬ ||**

**ಪುಗಂತಸ್ಯ ಲಘೂಪಧಸ್ಯ ಚಾಙ್ಗಸ್ಯೇಕೋ ಗುಣಃ ಸಾರ್ವಧಾತುಕಾರ್ಧಧಾತುಕಯೋಃ || ಧಾತ್ವಾದೇರಿತಿ ಸಃ || ಸೇಧತಿ || ಷತ್ವಂ | ಸಿಷೇಧ ||**

ದ್ವಿಪದ ಸೂತ್ರ. ಪುಕ್ ಅಂತಃ ಯಸ್ಯ ತತ್ | ಪುಗಂತಮ್ | ಲಘ್ವೀ ಉಪಧಾ ಯಸ್ಯ ತತ್ | ಲಘೂಪಧಮ್ | ಪುಗಂತಂ ಚ ಲಘೂಪಧಂ ಚ ತಯೋಃ ಸಮಾಹಾರಃ ಪುಗಂತಲಘೂಪಧಮ್ | ತಸ್ಯ. ಪುಗಂತಲಘೂಪಧಸ್ಯ. 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರಾನುವೃತ್ತಿ. 'ಮಿದೇರ್ಗುಣಃ' ಸೂತ್ರದಿಂದ 'ಗುಣಃ' ಅನುವೃತ್ತಿ. 'ಅಂಗಸ್ಯ' ಅಧಿಕಾರ. ಗುಣವಿಧಾನ ಮಾಡುವುದರಿಂದ 'ಇಕಃ' ಷಷ್ಠ್ಯಂತ ಪದವು ಉಪಸ್ಥಿತವಾಗುತ್ತದೆ. ಸೂತ್ರಾರ್ಥ—ಸಾರ್ವಧಾತುಕ, ಆರ್ಧಧಾತುಕ ಪ್ರತ್ಯಯಗಳು ಪರವಾದಾಗ ಪುಕ್ ಅಂತವಾದ ಮತ್ತು ಲಘು ಉಪಧೆ ಯಾಗಿರುವ ಅಂಗದ ಇಕಿಗೆ ಗುಣ ಬರುತ್ತದೆ. ಪುಕ್ ಆಗಮ ಚುರಾದಿಯಲ್ಲಿ ಮುಂದೆ ಹೇಳುತ್ತಾನೆ. 'ಅಲೋಂತ್ಯಾತ್ಪೂರ್ವ ಉಪಧಾ' ಸೂತ್ರದಿಂದ ಅಂತ್ಯ ವರ್ಣದ ಪೂರ್ವ ವರ್ಣಕ್ಕೆ ಉಪಧಾಸಂಜ್ಞೆ ಹಿಂದೆ ಹೇಳಿದೆ. ಸಿಧ್ ಎಂಬಲ್ಲಿ ಧಕಾರ ಅಂತ್ಯವರ್ಣ. ಅದರ ಹಿಂದಿನ ವರ್ಣ ಇಕಾರ ಉಪಧೆ, ಲಟನಲ್ಲಿ ಶಪ್ ವಿಕರಣ ಬರುವುದರಿಂದ ಶಪ್ ಸಾರ್ವಧಾತುಕ ಪರದಲ್ಲಿದೆ. ಆದುದರಿಂದ ಇಕಿಗೆ ಗುಣ ಬಂದರೆ (ಇಕಾರಕ್ಕೆ ಏಕಾರ) ಸೇಧ್+ಅ+ತಿ—ಸೇಧತಿ. ಸೇಧ ಅಂಗವೆಂದು ತಿಳಿಯಬೇಕು. ಸೇಧತಿ–ಸೇಧತಃ–ಸೇಧಂತಿ || ಸೇಧಸಿ—ಸೇಧಥಃ–ಸೇಧಥ || ಸೇಧಾಮಿ–ಸೇಧಾವಃ–ಸೇಧಾಮಃ ||

ಲಿಟ್ || 'ಪರಸ್ಮೈಪದಾನಾಂ' ಸೂತ್ರದಿಂದ ತಿಬಾದಿಗಳಿಗೆ ಣಲಾದಿ ಆದೇಶ. ಸಿಧ+ಅ. (ಣ್ ಲ್ ಇತ್) 'ಲಿಟಿಧಾತೋಃ' ಸೂತ್ರದಿಂದ ದ್ವಿತ್ವ. ಸಿಧ್‌ಸಿಧ್ + ಅ 'ಹಲಾದಿಃ ಶೇಷಃ' ಸಿಸಿಧ್+ಅ. 'ಪುಗಂತಲಘೂಪಧಸ್ಯಚ' ಸೂತ್ರದಿಂದ ಲಘೂಪಧಗುಣ ಸಿಸೇಧ್+ಅ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಇಕಾರದ ಪರವಾದ ಸಕಾರಕ್ಕೆ ಷತ್ವ. ಸಿಷೇಧ. ಲಿಟ್ ಆರ್ಧಧಾತುಕವಾದುದರಿಂದ ಶಪ್ ವಿಕರಣವಿಲ್ಲ. ಇನ್ನುಮುಂದೆ ಸಿಸಿಧ್ ಅಂಗ. ಸಿಸಿಧ್+ಅತುಸ್ ಎಂದಿರುವಾಗ 'ಪುಗಂತ' ಸೂತ್ರದಿಂದ ಲಘೂಪಧಗುಣ ಪ್ರಾಪ್ತವಾದರೆ ಅದಕ್ಕೆ ನಿಷೇಧ ಹೇಳಲು ಪ್ರತ್ಯಯಕ್ಕೆ ಕಿತ್ ಭಾವವನ್ನು ಹೇಳುತ್ತಾನೆ.

### ಲಿಟಗೆ ಕಿದ್ಭಾವ ಹೇಳುವ ಸೂತ್ರ

### ೪೫೩. ಅಸಂಯೋಗಾಲ್ಲಿಟ್ ಕಿತ್ || ೧-೨-೫ ||

**ಅಸಂಯೋಗಾತ್ಪರೋಽಪಿಲ್ಲಿಟ್ ಕಿತ್ ಸ್ಯಾತ್ | ಸಿಷಿಧತುಃ–ಷಿಷಿಧುಃ || ಸಿಷೇಧಿಥ–ಸಿಷಿಧಥುಃ–ಸಿಷಿಧ || ಸಿಷೇಧ–ಸಿಷಿಧಿವ–ಸಿಷಿಧಿಮ || ಸೇಧಿತಾ || ಸೇಧಿಷ್ಯತಿ || ಸೇಧತು || ಅಸೇಧತ್ || ಸೇಧೇತ್ || ಸಿಧ್ಯಾತ್ || ಅಸೇಧೀತ್ || ಅಸೇಧಿಷ್ಯತ್ || ಏವಂ-ಚಿತೀ | ಸಂಜ್ಞಾನೇ || ೪ || ಶುಚ ಶೋಕೇ || ೫ || ಗದವ್ಯಕ್ತಾಯಾಂ ವಾಚಿ || ೬ || ಗದತಿ ||**

ಅಸಂಯೋಗಾತ್, ಲಿಟ್, ಕಿತ್ || ತ್ರಿಪದ ಸೂತ್ರ. 'ಸಾರ್ವಧಾತುಕಮಪಿತ್' ಸೂತ್ರದಿಂದ 'ಅಪಿತ್' ಅನುವೃತ್ತಿ ಸೂತ್ರಾರ್ಥ—ಅಸಂಯೋಗದ ಪರದಲ್ಲಿರುವ ಅಪಿತ್ತಾದ ಲಿಟ್ ಕಿತ್ತಾಗುತ್ತದೆ. ಸಂಯುಕ್ತಾಕ್ಷರದಪರದಲ್ಲಿ ಇಲ್ಲದ ಲಿಟ್ ಎಂದರ್ಥ. ಅಪಿತ್ತಾದ ಲಿಟ್ ಎಂದರೆ ದ್ವಿವಚನ ಬಹುವಚನ ಆದೇಶಗಳು. ಏಕವಚನ ಮಾತ್ರ ಪಿತ್ತಾಗಿದೆ. ಪ್ರಕೃತ ಅತುಸ್ ಕಿತ್ತಾದುದರಿಂದ ಸಿಷಿಧ್ ಎಂಬಲ್ಲಿ ಅದನ್ನು ನಿಮಿತ್ತೀಕರಿಸಿ ಲಘೂಪಧಗುಣ ಬರುವುದಿಲ್ಲ. 'ಕ್ಙಿತಿಚ' (ಸೂ. ೪೩೪) ಸೂತ್ರದಿಂದ ಇಕ್ ಲಕ್ಷಣ ಗುಣವೃದ್ಧಿಗಳಿಗೆ ನಿಷೇಧ ಹೇಳಿರುತ್ತಾನೆ. ಸಿಷಿಧತುಃ | ಈ ಸೂತ್ರದಿಂದ ಕಿತ್ತ್ವ ಹೇಳಿರುವುದರಿಂದ ದ್ವಿವಚನ ಬಹುವಚನಗಳಲ್ಲಿ ಗುಣ ಬರುವುದಿಲ್ಲ. ಸಿಷಿಧ್ + ಉಸ್—ಸಿಷಿಧುಃ || ಸಿಪಿಗೆ ಥಲ್ ಆದೇಶ. ಸಿಷಿಧ್ + ಥ. 'ಪುಗಂತಲಘೂಪಧಸ್ಯ ಚ' ಸೂತ್ರದಿಂದ ಉಪಧಾಗುಣ. ಥಕ್ಕೆ ಇಡಾಗಮ. ಸಿಷೇಧಿಥ. ಸಿಷಿಧ್ + ಅತುಸ್—ಸಿಷಿಧಥುಃ | ಸಿಷಿಧ್ + ಅ—ಸಿಷಿಧ || ಸಿಷಿಧ್ + ಅ. ಗುಣ ನಿಷೇಧ. ವ, ಮ ಇವುಗಳು ಕಿತ್ತಾಗುತ್ತವೆ. ವಲಾದಿಯಾದುದರಿಂದ ಇಡಾಗಮ. ಸಿಷಿಧಿವ | ಸಿಷಿಧಿಮ ||

ಲುಟ್ || ತಾಸ್ ವಿಕರಣ. ಪ್ರಥಮಪುರುಷಕ್ಕೆ ಡಾ, ರೌ, ರಸ್ ಆದೇಶ. ತಾಸಿಗೆ ಇಡಾಗಮ. ಧಾತುವಿನ ಲಘೂಪಧಕ್ಕೆ ಗುಣ. ಸೇಧಿತಾ || ಸೇಧಿತಾಸ್ ಅಂಗ. ಸಾದಿ, ರಾದಿ, ಧಾದಿ ಪ್ರತ್ಯಯ ಪರವಾದಾಗ ತಾಸಿನ ಸಕಾರಕ್ಕೆ ಲೋಪ. ಸೇಧಿತಾರೌ—ಸೇಧಿತಾರಃ || ಸೇಧಿತಾಸಿ—ಸೇಧಿತಾಸ್ಥಃ—ಸೇಧಿತಾಸ್ಥ || ಸೇಧಿತಾಸ್ಮಿ—ಸೇಧಿತಾಸ್ವಃ—ಸೇಧಿತಾಸ್ಮಃ ||

ಲೃಟ್ || ಸ್ಯ ವಿಕರಣ. ಅದಕ್ಕೆ ಇಡಾಗಮ. ಷತ್ವ. ಅಂಗದ ಲಘೂಪಧೆಗೆ ಗುಣ. ಸೇಧಿಷ್ಯತಿ—ಸೇಧಿಷ್ಯತಃ—ಸೇಧಿಷ್ಯಂತಿ || ಸೇಧಿಷ್ಯಸಿ—ಸೇಧಿಷ್ಯಥಃ—ಸೇಧಿಷ್ಯಥ || ಸೇಧಿಷ್ಯಾಮಿ—ಸೇಧಿಷ್ಯಾವಃ—ಸೇಧಿಷ್ಯಾಮಃ ||

ಲೋಟ್ || ತಿಬಾದಿಗಳ ಇಕಾರಕ್ಕೆ 'ಏರುಃ' ಸೂತ್ರದಿಂದ ಉತ್ವ. ಶಪ್ ವಿಕರಣ. ಇಕ್ಕಿಗೆ ಗುಣ. ಸೇಧತು || ಆಶೀರರ್ಥದಲ್ಲಿ ತಾತಙ್. ಸೇಧತಾತ್—ಸೇಧತಾಂ—ಸೇಧಂತು || ಸೇಧ || 'ಅತೋಹೇಃ' ಸೂತ್ರದಿಂದ ಹಿಗೆ ಲೋಪ. ಸೇಧತಾತ್—ಸೇಧತಂ—ಸೇಧತ || ಮಿಪಿಗೆ ನಿ ಆದೇಶ. ಆಡಾಗಮ ಸೇಧಾನಿ—ಸೇಧಾವ—ಸೇಧಾಮ ||

ಲಙ್ || ಅಡಾಗಮ 'ಇತಶ್ಚ' ಸೂತ್ರದಿಂದ ತಿಬಾದಿಗಳ ಇಕಾರಕ್ಕೆ ಲೋಪ. ಅಸೇಧತ್—ಅಸೇಧತಾಮ್—ಅಸೇಧನ್ || ಅಸೇಧಃ—ಅಸೇಧತಮ್—ಅಸೇಧತ || ಅಸೇಧಮ್—ಅಸೇಧಾವ—ಅಸೇಧಾಮ ||

ವಿಧಿಲಿಙ್ || ಶಪ್ ಬಂದ ಮೇಲೆ ಲಿಙಿಗೆ ಯಾಸುಟಾಗಮ. ಅದಕ್ಕೆ ಇಯಾದೇಶ. ಗುಣ, ಸೇಧೇಯ್‌ತ್. 'ಲೋಪೋವ್ಯೋರ್ವಲಿ' ಸೂತ್ರದಿಂದ ವಲಾದಿ

ಪ್ರತ್ಯಯ ಪರವಾದಾಗ ಯಕಾರಕ್ಕೆ ಲೋಪ. ಸೇಧೇತ್-ಸೇಧೇತಾಮ್-ಸೇಧೇಯುಃ || (ಝೋರ್ಜುಸ್ |) ಸೇಧೇಃ-ಸೇಧೇತಮ್-ಸೇಧೇತ || ಸೇಧೇಯಮ್ -ಸೇಧೇವ-ಸೇಧೇಮ ||

ಆಶೀರ್ಲಿಙ್ || ಲಿಙಿಗೆ ಯಾಸುಟಾಗಮ. ಯಾಸುಟ್ ಙಿತ್ತಾದುದರಿಂದ ಸಿಧಿನ ಇಕ್ಕಿಗೆ ಗುಣವಿಲ್ಲ. ಪ್ರಥಮ-ಮಧ್ಯಮಗಳ ಏಕವಚನದಲ್ಲಿ 'ಸ್ಕೋಃ ಸಂಯೋಗಾದ್ಯೋರಂತೇ ಚ' ಸೂತ್ರದಿಂದ ಸಕಾರ ಲೋಪ. ಸಿಧ್ಯಾತ್-ಸಿಧ್ಯಾಸ್ತಾಮ್-ಸಿಧ್ಯಾಸುಃ || ಸಿಧ್ಯಾಃ-ಸಿಧ್ಯಾಸ್ತಮ್-ಸಿಧ್ಯಾಸ್ತ || ಸಿಧ್ಯಾಸಮ್- ಸಿಧ್ಯಾಸ್ವ —ಸಿಧ್ಯಾಸ್ಮ ||

ಲುಙ್ || ಸಿಚ್. ಸಿಚಿಗೆ ಇಡಾಗಮ. ಅಪೃಕ್ತಪ್ರತ್ಯಯಕ್ಕೆ ಈಡಾಗಮ. ಝಿಗೆ ಸಿಚಿನ ಪರದಲ್ಲಿರುವುದರಿಂದ ಉಸ್. ಅಡಾಗಮ. ಅಸೇಧೀತ್. 'ಇಟ ಈಟಿ' ಸೂತ್ರದಿಂದ ಸಿಚಿಗೆ ಲೋಪ. ಅಸೇಧಿಷ್ ಅಂಗ. ಅಸೇಧಿಷ್ಟಾಮ್. ಅಸೇಧಿಷುಃ || ಅಸೇಧೀಃ-ಅಸೇಧಿಷ್ಟಮ್-ಅಸೇಧಿಷ್ಟ || ಅಸೇಧಿಷಮ್-ಅಸೇಧಿಷ್ವ-ಅಸೇಧಿಷ್ಮ ||

ಲೃಙ್ || ಅಂಗಕ್ಕೆ ಅಡಾಗಮ. ಸ್ಯ ವಿಕರಣ. ಅದಕ್ಕೆ ಇಡಾಗಮ. ಷತ್ವ. ಗುಣ. ಅಸೇಧಿಷ್ಯತ್-ಅಸೇಧಿಷ್ಯತಾಮ್—ಅಸೇಧಿಷ್ಯನ್ || ಅಸೇಧಿಷ್ಯಃ-ಅಸೇಧಿಷ್ಯತಮ್—ಅಸೇಧಿಷ್ಯತ || ಅಸೇಧಿಷ್ಯಾವ-ಅಸೇಧಿಷ್ಯಾಮ ||

|| ೪ || ಏವಂ ಚಿತೀ-ಸಂಜ್ಞಾನೇ | (ಚೆನ್ನಾಗಿ ತಿಳಿಯುವುದು) || ೫ || ಶುಚ—ಶೋಕೇ || ೬ || ಗದ—ವ್ಯಕ್ತಾಯಾಂ ವಾಚಿ || (ಸ್ಪಷ್ಟವಾಗಿ ಹೇಳುವುದು)

ಚಿತೀ ಧಾತುವಿನಲ್ಲಿ ಈಕಾರ ಇತ್. ಚಿತ್ ಉಳಿಯುವುದರಿಂದ ಷಿಧಿನಂತೇ ಪ್ರಕ್ರಿಯೆ. ಲಟ್—ಚೇತತಿ, ಲಿಟ್—ಚಿಚೇತ, ಲುಟ್—ಚೇತಿತಾ, ಲೃಟ್-ಚೇತಿಷ್ಯತಿ, ಲೋಟ್—ಚೇತತು, ಲಙ್—ಅಚೇತತ್, ಲಿಙ್—ಚೇತೇತ್, ಆಶೀರ್ಲಿಙ್—ಚಿತ್ಯಾತ್, ಲುಙ್—ಅಚೇತೀತ್, ಲೃಙ್—ಅಚೇತಿಷ್ಯತ್ || ಶುಚ ಧಾತುವಿನಲ್ಲಿ ಅಕಾರ ಉಚ್ಚಾರಣಾರ್ಥ. ಶುಚ್ ಉಳಿಯುತ್ತದೆ. ಇದೂ ಷಿಧ್ ಧಾತುವಿನಂತೇ ಆಗುತ್ತದೆ. ಇಲ್ಲಿ ಉಕಾರಕ್ಕೆ ಓಕಾರ ಗುಣ. ಲಟ್—ಶೋಚತಿ, ಲಿಟ್—ಶುಶೋಚ, ಲುಟ್ ಶೋಚಿತಾ. ಲೃಟ್—ಶೋಚಿಷ್ಯತಿ, ಲೋಟ್—ಶೋಚತು, ಲಙ್—ಅಶೋಚತ್, ವಿಧಿಲಿಙ್—ಶೋಚೇತ್, ಆಶೀರ್ಲಿಙ್—ಶುಚ್ಯಾತ್, ಲುಙ್—ಅಶೋಚೀತ್, ಲೃಙ್—ಅಶೋಚಿಷ್ಯತ್ || ಗದ ಧಾತುವಿನಲ್ಲಿ ಅಕಾರ ಉಚ್ಚಾರಣಾರ್ಥ. ಭೂ ಧಾತುವಿನಂತೆ ಇದರ ಪ್ರಕ್ರಿಯೆ. ಗುಣಾದಿಗಳಿಲ್ಲ. ಲಟ್—ಗದತಿ. ಪ್ರ+ನಿ+ಗದತಿ ಎಂದಿರುವಾಗ ನಕಾರಕ್ಕೆ ಣತ್ವ ಹೇಳುತ್ತಾನೆ.

ನಿಯ ನಕಾರಕ್ಕೆ ಣತ್ವ ಹೇಳುವ ಸೂತ್ರ.

**೪೫೪. ನೇರ್ಗದನದಪತಪದಘುಮಾಸ್ಯತಿಹಂತಿಯಾತಿವಾತಿದ್ರಾತಿಪ್ಸಾತಿವಪತಿವಹತಿಶಾಮ್ಯತಿಚಿನೋತಿದೇಗ್ಧಿಷು ಚ । ೮-೪-೧೭ ॥**

**ಉಪಸರ್ಗಸ್ಥಾನ್ನಿಮಿತ್ತಾತ್ಪರಸ್ಯ ನೇರ್ನಸ್ಯ ಣೋ ಗದಾದಿಷು ಪರೇಷು॥ ಪ್ರಣಿಗದತಿ ||**

ತ್ರಿಪದ ಸೂತ್ರ. 'ರಷಾಭ್ಯಾಂ ನೋಣಃ' ಸೂತ್ರ ಅನುವೃತ್ತವಾಗುತ್ತದೆ. 'ಉಪಸರ್ಗಾದಸಮಾಸೇಽಪಿ' ಸೂತ್ರದಿಂದ 'ಉಪಸರ್ಗಾತ್' ಅನುವೃತ್ತಿ. ಅಲ್ಲಿ ಉಪಸರ್ಗ ಎಂಬುದಕ್ಕೆ ಉಪಸರ್ಗಸ್ಥ ಎಂದು ಲಕ್ಷಣೆಯಿಂದ ಅರ್ಥ. ಉಪಸರ್ಗದಲ್ಲಿರುವ ಎಂದರ್ಥ. **ಸೂತ್ರಾರ್ಥ**—ಉಪಸರ್ಗದಲ್ಲಿರುವ ನಿಮಿತ್ತದ ಪರದಲ್ಲಿರುವ ನಿ ಉಪಸರ್ಗದ ನಕಾರಕ್ಕೆ ಗದ ಮುಂತಾದವುಗಳು ಪರವಾದಾಗ ಣ ಆದೇಶ ಬರುತ್ತದೆ. ಗದ ಮುಂತಾದವುಗಳು ಹದಿನೈದು. ಘು ಎಂದರೆ ದಾ ರೂಪ, ಧಾ ರೂಪ ಧಾತುಗಳು (ಸೂ ೯೩೫). ಇಲ್ಲಿ ಕೆಲವು ಧಾತುಗಳನ್ನು ಶ್ತಿಪಿನಿಂದ ನಿರ್ದೇಶಿಸಿರುತ್ತಾನೆ. ಪ್ರ+ನಿ+ಗದತಿ ಎಂದಿರುವಾಗ ಪ್ರ ಉಪಸರ್ಗ. ಅದರಲ್ಲಿ ರೇಫರೂಪ ನಿಮಿತ್ತವಿದೆ. ಅದರ ಪರದಲ್ಲಿ ನಿ ಉಪಸರ್ಗವಿದೆ. ಅದಕ್ಕೆ ಗದ ಧಾತು ಪರದಲ್ಲಿದೆ. ಆದುದರಿಂದ ನಕಾರಕ್ಕೆ ಣತ್ವ ಬಂದರೆ ಪ್ರಣಿಗದತಿ ಎಂದಾಗುತ್ತದೆ.

ಲಿಟ್ || ತಿಬಾದಿಗಳಿಗೆ ಣಲಾದ್ಯಾದೇಶ. ಗದ್+(ಣ್) ಅ(ಲ್) ಎಂದಿರುವಾಗ 'ಲಿಟಿಧಾತೋರನಭ್ಯಾಸಸ್ಯ' ಸೂತ್ರದಿಂದ ದ್ವಿತ್ವ. ಗದ್ ಗದ್+ಅ. 'ಹಲಾದಿಃ ಶೇಷಃ' ಸೂತ್ರದಿಂದ ಅಭ್ಯಾಸದ ಆದಿ ಹಲ್ ಉಳಿಯುತ್ತದೆ. ಗಗದ್+ಅ ಇಲ್ಲಿ ಗಕಾರಕ್ಕೆ ಜಕಾರಾದೇಶ ಹೇಳುತ್ತಾನೆ.

ಕವರ್ಗ ಹಕಾರಗಳಿಗೆ ಚವರ್ಗಾದೇಶ ಹೇಳುವ ಸೂತ್ರ.

**೪೫೫ ಕುಹೋಶ್ಚುಃ || ೭-೪-೬೨ ॥**

**ಅಭ್ಯಾಸಕವರ್ಗಹಕಾರಯೋಶ್ಚವರ್ಗಾದೇಶಃ ||**

ಕುಹೋಃ, ಚುಃ || ದ್ವಿಪದ ಸೂತ್ರ. ಕುಶ್ಚ ಹ್ ಚ ಕುಹೌ || ತಯೋಃ ಕುಹೋಃ || 'ಅತ್ರ ಲೋಪೋಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ' ಅನುವೃತ್ತಿ. ಕು, ಚು ಉದಿತ್ತಾದುದರಿಂದ ವರ್ಗಗ್ರಹಣ. **ಸೂತ್ರಾರ್ಥ**—ಅಭ್ಯಾಸಕವರ್ಗ ಹಕಾರಗಳಿಗೆ ಚವರ್ಗಾದೇಶ ಬರುತ್ತದೆ. ಗಗದ್+ಅ ಎಂಬಲ್ಲಿ ಆದಿಯ ಗಕಾರ ಅಭ್ಯಾಸ. ಅದಕ್ಕೆ ಚವರ್ಗಾದೇಶ. ಸ್ಥಾನಪ್ರಯತ್ನಸಾಮ್ಯದಿಂದ ಗಕಾರಕ್ಕೆ ಜಕಾರ. ಜಗದ್+ಅ ಎಂದಿರುವಾಗ ಉಪಧಾದೀರ್ಘ ಹೇಳುತ್ತಾನೆ.

ಉಪಧಾವೃದ್ಧಿ ಹೇಳುವ ಸೂತ್ರ.

೪೫೬. ಅತ ಉಪಧಾಯಾಃ || ೭-೨-೧೧೬ ||

**ಉಪಧಾಯಾ ಅತೋಽವೃದ್ಧಿಃ ಸ್ಯಾತ್ ಞ್ಣಿತಿ ಣಿತಿ ಚ ಪ್ರತ್ಯಯೇ ಪರೇ || ಜಗಾದ-ಜಗದತುಃ-ಜಗದುಃ || ಜಗದಿಥ-ಜಗದಥುಃ-ಜಗದ ||**

ಅತಃ, ಉಪಧಾಯಾಃ || ದ್ವಿಪದ ಸೂತ್ರ. 'ಅಚೋ ಞ್ಣಿತಿ' ಸೂತ್ರದಿಂದ 'ಞ್ಣಿತಿ', 'ಮೃಜೇರ್ವೃದ್ಧಿಃ' ಸೂತ್ರದಿಂದ 'ವೃದ್ಧಿಃ' ಪದಗಳು ಅನುವೃತ್ತವಾಗುತ್ತವೆ. ಅತಃ ತ ಪರ ಮಾಡಿರುವುದರಿಂದ ಹ್ರಸ್ವಾಕಾರ ಮಾತ್ರ ತೆಗೆದುಕೊಳ್ಳಬೇಕು. **ಸೂತ್ರಾರ್ಥ**—ಅಂಗದ ಉಪಧೆಯಾದ ಹ್ರಸ್ವಾಕಾರಕ್ಕೆ ಞಿತ್, ಣಿತ್ತಾದ ಪ್ರತ್ಯಯ ಪರದಲ್ಲಿರುವಾಗ ವೃದ್ಧಿ ಬರುತ್ತದೆ. ಅಂತ್ಯವಾದ ವರ್ಣದ ಪೂರ್ವ ವರ್ಣಕ್ಕೆ ಉಪಧಾ ಸಂಜ್ಞೆ ಹೇಳಿದೆ. ಪ್ರಕೃತ ಅಂಗ ಜಗದ್. ಇದರ ಉಪಧಾ ಅಕಾರ ಗಕಾರದ ಮೇಲಿರುವ ಅಕಾರ. ಇದಕ್ಕೆ ಣಿತ್ತಾದ ಪ್ರತ್ಯಯ ಪರವಾದುದರಿಂದ ವೃದ್ಧಿ ಬರುತ್ತದೆ. ಅಕಾರಕ್ಕೆ ಆಕಾರ ವೃದ್ಧಿ. ಜಗಾದ್ + ಅ – ಜಗಾದ. ಜಗದ್ ಅಂಗ. ಜಗದ್ + ಅತುಸ್–ಜಗದತುಃ || ಜಗದ್ + ಉಸ್–ಜಗದುಃ || ಜಗದ್ + ಥ. ಥಕ್ಕೆ ಇಡಾಗಮ. ಜಗದಿಥ. ಜಗದ್ + ಅಥುಸ್–ಜಗದಥುಃ || ಜಗದ್ + ಅ–ಜಗದ || ಜಗದ್ + (ಣ್)ಅ(ಲ್) ಣಿತ್ತಾದುದರಿಂದ ನಿತ್ಯವೃದ್ಧಿ ಪ್ರಾಪ್ತವಾದರೆ ಣಿತ್ವ ವಿಕಲ್ಪ ಹೇಳುತ್ತಾನೆ.

ಲಿಟಿನ ಉತ್ತಮ ಣಲಿಗೆ ಣಿತ್ವ ವಿಕಲ್ಪ ಹೇಳುವ ಸೂತ್ರ.

೪೫೭. ಣಲುತ್ತಮೋ ವಾ || ೭-೧-೯೧ ||

**ಉತ್ತಮೋ ಣಲ್ ವಾ ಣಿತ್ ಸ್ಯಾತ್ | ಜಗಾದ, ಜಗದ | ಜಗದಿವ | ಜಗದಿಮ || ಗದಿತಾ | ಗದಿಷ್ಯತಿ | ಗದತು | ಅಗದತ್ | ಗದೇತ್ | ಗದ್ಯಾತ್ |**

ಣಲ್, ಉತ್ತಮಃ, ವಾ || ತ್ರಿಪದ ಸೂತ್ರ. 'ಗೋತೋಣಿತ್' ಸೂತ್ರದಿಂದ 'ಣಿತ್' ಅನುವೃತ್ತಿ. **ಸೂತ್ರಾರ್ಥ**—ಉತ್ತಮಪುರುಷದ ಣಲ್ ವಿಕಲ್ಪವಾಗಿ ಣಿತ್ತಾಗುತ್ತದೆ. ಣಿತ್ವವಿದ್ದರೆ 'ಅತ ಉಪಧಾಯಾಃ' ಸೂತ್ರದಿಂದ ಉಪಧಾವೃದ್ಧಿ. ಜಗಾದ. ಣಿತ್ವವಿಲ್ಲವಾದರೆ ವೃದ್ಧಿಯಿಲ್ಲ. ಜಗದ. ವ, ಮಗಳಿಗೆ ಇಡಾಗಮ. ಜಗದಿವ–ಜಗದಿಮ ||

**ಲುಟ್** || ತಾಸ್ ವಿಕರಣ. ಅದಕ್ಕೆ ಇಡಾಗಮ. ತಿಬಾದಿಗೆ ಡಾದ್ಯಾದೇಶ. ಗದಿತಾ–ಗದಿತಾರೌ–ಗದಿತಾರಃ || ಗದಿತಾಸಿ–ಗದಿತಾಸ್ಥಃ–ಗದಿತಾಸ್ಥ || ಗದಿತಾಸ್ಮಿ–ಗದಿತಾಸ್ವಃ–ಗದಿತಾಸ್ಮಃ || **ಲೃಟ್** || ಸ್ಯ ವಿಕರಣ. ಇಡಾಗಮ. ಗದಿಷ್ಯ ಅಂಗ.

ಗದಿಷ್ಯತಿ–ಗದಿಷ್ಯತಃ-ಗದಿಷ್ಯಂತಿ || ಗದಿಷ್ಯಸಿ-ಗದಿಷ್ಯಥಃ–ಗದಿಷ್ಯಥ || ಗದಿಷ್ಯಾಮಿ—ಗದಿಷ್ಯಾವಃ—ಗದಿಷ್ಯಾಮಃ || ಲೋಟ್ || 'ಏರುಃ' ಸೂತ್ರದಿಂದ ಇಕಾರಕ್ಕೆ ಉಕಾರಾದೇಶ. ಗದತು, ಗದತಾತ್–ಗದತಾಮ್–ಗದಂತು || ಗದ, ಗದತಾತ್—ಗದತಮ್–ಗದತ || ಗದಾನಿ–ಗದಾವ–ಗದಾಮ || ಲಙ್ || ಅಗದತ್–ಅಗದತಾಮ್–ಅಗದನ್ || ಅಗದಃ–ಅಗದತಮ್-ಅಗದತ || ಅಗದಮ್–ಅಗದಾವ–ಅಗದಾಮ || ವಿಧಿಲಿಙ್ || ಗದೇತ್–ಗದೇತಾಮ್–ಗದೇಯುಃ || ಗದೇಃ–ಗದೇತಮ್–ಗದೇತ || ಗದೇಯಮ್–ಗದೇವ–ಗದೇಮ || ಆಶೀರ್ಲಿಙ್ || ಗದ್ಯಾತ್–ಗದ್ಯಾಸ್ತಾಮ್–ಗದ್ಯಾಸುಃ || ಗದ್ಯಾಃ–ಗದ್ಯಾಸ್ತಮ್–ಗದ್ಯಾಸ್ತ || ಗದ್ಯಾಸಮ್–ಗದ್ಯಾಸ್ವ–ಗದ್ಯಾಸ್ಮ || ಲುಙ್ || ಗದ್+ತಿ. 'ಇತಶ್ಚ' ಇಕಾರಲೋಪ. ಸಿಚ್ ವಿಕರಣ. ಅಂಗಕ್ಕೆ ಅಡಾಗಮ. ಅಗದ್+ಸ್+ತ್. ಅಪೃಕ್ತ ತ್‌ಗೆ ಈಡಾಗಮ. ಸಿಚಿಗೆ ಇಡಾಗಮ. ಅಗದ್+ಇಸ್+ಈತ್. ಈಗ ಗದಿನ ಅಕಾರಕ್ಕೆ ವೃದ್ಧಿ ಹೇಳುತ್ತಾನೆ.

ಸಿಚ್ ಪರವಾದಾಗ ಅಕಾರಕ್ಕೆ ವಿಕಲ್ಪ ವೃದ್ಧಿ ಹೇಳುವ ಸೂತ್ರ.

೪೫೪ ಅತೋ ಹಲಾದೇರ್ಲಘೋಃ || ೭-೨-೭ ||

**ಹಲಾದೇರ್ಲಘೋರಕಾರಸ್ಯ ವೃದ್ಧಿರ್ವೇಡಾದೌ ಪರಸ್ಮೈಪದೇ ಸಿಚಿ || ಅಗಾದೀತ್ | ಅಗದೀತ್ || ಅಗದಿಷ್ಯತ್ ||**

ತ್ರಿಪದ ಸೂತ್ರ. 'ಸಿಚಿವೃದ್ಧಿಃ ಪರಸ್ಮೈಪದೇಷು' ಸೂತ್ರಾನುವೃತ್ತಿ. 'ಊರ್ಣೋತೇರ್ವಿಭಾಷಾ' ಸೂತ್ರದಿಂದ 'ವಿಭಾಷಾ', 'ನೇಟಿ' ಸೂತ್ರದಿಂದ 'ಇಟಿ' ಪದಗಳು ಅನುವೃತ್ತವಾಗುತ್ತವೆ. ಹಲಾದೇಃ 'ಅಂಗಸ್ಯ' ಎಂಬುದಕ್ಕೆ ವಿಶೇಷಣ. ಸೂತ್ರಾರ್ಥ—ಹಲ್ ಆದಿಯಾದ ಅಂಗದ ಅವಯವವಾದ ಲಘುವಾದ ಅಕಾರಕ್ಕೆ ಇಡಾದಿಯಾದ ಪರಸ್ಮೈಪದ ಪರವಾದ ಸಿಚ್ ಪರವಾದರೆ ವಿಕಲ್ಪವಾಗಿ ವೃದ್ಧಿ ಬರುತ್ತದೆ. ಪ್ರಕೃತ ಗದ್ ಎಂಬಲ್ಲಿ ಲಘುವಾದ ಅಕಾರವಿದೆ. ಆದಿಯಲ್ಲಿ ಹಲ್ ಇದೆ. ಪರಸ್ಮೈಪದ (ತ್) ಪರವಾದ ಸಿಚ್ ಪರವಾಗಿದೆ. ಇಡಾಗಮ ಅದಕೆ ಬಂದಿದೆ. ವೃದ್ಧಿ ಬಂದರೆ ಅಗಾದ್+ಇಸ್+ಈತ್. 'ಇಟ ಈಟಿ' ಸೂತ್ರದಿಂದ ಸಲೋಪ. ಅಗಾದೀತ್ || ಅಗಾದಿಷ್ ಅಂಗ. ಅಗಾದಿಷ್ಟಾಮ್ | ಅಗಾದಿಷುಃ || ಅಗಾದೀಃ | ಅಗಾದಿಷ್ಟಮ್ | ಅಗಾದಿಷ್ಟ || ಅಗಾದಿಷಮ್ | ಅಗಾದಿಷ್ವ | ಅಗಾದಿಷ್ಮ || ವೃದ್ಧಿ ಬಾರದಿದ್ದರೆ ಅಗದೀತ್. ಅಗದಿಷ್ ಅಂಗ. ಅಗದಿಷ್ಟಾಮ್ | ಅಗದಿಷುಃ || ಅಗದೀಃ | ಅಗದಿಷ್ಟಮ್ | ಅಗದಿಷ್ಟ || ಅಗದಿಷಮ್ | ಅಗದಿಷ್ವ | ಅಗದಿಷ್ಮ ||ಲೃಙ್ || ಅಗದಿಷ್ಯತ್ | ಅಗದಿಷ್ಯತಾಮ್ | ಅಗದಿಷ್ಯನ್ || ಅಗದಿಷ್ಯಃ | ಅಗದಿಷ್ಯತಮ್ | ಅಗದಿಷ್ಯತ || ಅಗದಿಷ್ಯಮ್ | ಅಗದಿಷ್ಯಾವ | ಅಗದಿಷ್ಯಾಮ ||

|| ೭ || ಣದ ಅವ್ಯಕ್ತೇ ಶಬ್ದೇ || (ಅಸ್ಪಷ್ಟ ಉಚ್ಚಾರಣೆ)

ಧಾತ್ವಾದಿ ಣಕಾರಕ್ಕೆ ನಕಾರ ಹೇಳುವ ಸೂತ್ರ.

**೪೫೯. ಣೋ ನಃ || ೬-೧-೬೫ ||**

**ಧಾತ್ವಾದೇರ್ಣಸ್ಯ ನಃ || ಣೋಪದೇಶಾಸ್ತ್ವನರ್ದ್ನಾಟಿನಾಥ್‌ನಾಧ್‌ನಂದ್‌ನಕ್ಕ್‌ನೃನೃತಃ ||**

ದ್ವಿಪದ ಸೂತ್ರ. 'ಧಾತ್ವಾದೇಃ ಷಃ ಸಃ' ಸೂತ್ರದಿಂದ 'ಧಾತ್ವಾದೇಃ' ಅನುವೃತ್ತಿ. ನಃ ಪ್ರಥಮಾ. ಣಃ ಷಷ್ಠೀ. **ಸೂತ್ರಾರ್ಥ**—ಧಾತುವಿನ ಆದಿಯ ಣಕಾರಕ್ಕೆ ನಕಾರಾದೇಶ ಬರುತ್ತದೆ. ಣಕಾರಕ್ಕೆಲ್ಲಾ ನಕಾರಾದೇಶ ಬರುವುದಾದರೆ ಸ್ವಾಭಾವಿಕ ನಕಾರಾದಿ ಧಾತು ಯಾವುದು ? ಣಕಾರಾದಿ ಧಾತು ಯಾವುದು ? ಎಂದು ಭೇದ ತಿಳಿಯುವುದು ಹೇಗೆ ? ಅಂದರೆ ಅದನ್ನು ತಿಳಿಯಲು ಉಪದೇಶಕಾಲದಲ್ಲಿ ಣಕಾರಾದಿ ಧಾತುವನ್ನು ತಿಳಿಯುವ ಕ್ರಮ ವಿವರಿಸುತ್ತಾನೆ. ಣೋಪದೇಶಾಸ್ತ್ವನರ್ದ್‌ನಾಟಿನಾಥ್‌ನಾಧ್‌ನಂದ್‌ನಕ್ಕ್‌ನೃನೃತಃ || ಇಲ್ಲಿ ನರ್ದ್, ನಾಟಿ, ನಾಥ್, ನಾಧ್, ನಂದ್, ನಕ್ಕ್, ನೃ, ನೃತ್ ಎಂದು ಹೇಳಿರುವ ಎಂಟು ಧಾತುಗಳನ್ನು ಬಿಟ್ಟರೆ ಉಳಿದ ನಕಾರಾದಿ ಎಲ್ಲವೂ ಣೋಪದೇಶಧಾತುಗಳು ಎಂದು ತಿಳಿಯಬೇಕು. ಆದಿಯ ಣಕಾರಾಕ್ಕೆ ನಕಾರಾದೇಶ ಬಂದಿದೆಯೆಂದು ತಿಳಿಯಬೇಕು. ನರ್ದ್ ಮುಂತಾದ ಎಂಟು ಧಾತುಗಳು ಸ್ವಾಭಾವಿಕ ನಕಾರಾದಿ ಧಾತುಗಳೆಂದು ತಿಳಿಯಬೇಕು. ಪ್ರಕೃತ ಣದ್ ಧಾತುವಿನ ಆದಿ ಣಕಾರಕ್ಕೆ ನಕಾರಾದೇಶ ಬಂದರೆ ನದ್ ಆಗುತ್ತದೆ. ಲಟಿನಲ್ಲಿ ಭವತಿಯಂತೇ ರೂಪ. ನದತಿ. ನದ ಅಂಗ. ಪ್ರತ್ಯಯ ಸೇರಿಸಬೇಕು. ರೇಫವಿರುವ ಉಪಸರ್ಗದ ಪರದಲ್ಲಿ ಈ ಧಾತು ಬಂದಾಗ ಣತ್ವ ಹೇಳುತ್ತಾನೆ.

ಣೋಪದೇಶ ಧಾತುವಿನ ನಕಾರಕ್ಕೆ ಣತ್ವ ಹೇಳುವ ಸೂತ್ರ

**೪೬೦. ಉಪಸರ್ಗಾದಸಮಾಸೇಽಪಿ ಣೋಪದೇಶಸ್ಯ || ೮-೪-೧೪ ||**

**ಉಪಸರ್ಗಸ್ಥಾನ್ನಿಮಿತ್ತಾತ್ಪರಸ್ಯ ಣೋಪದೇಶಸ್ಯ ಧಾತೋರ್ನಸ್ಯ ಣಃ || ಪ್ರಣದತಿ | ಪ್ರಣಿನದತಿ | ನದತಿ | ನನಾದ ||**

ಉಪಸರ್ಗಾತ್, ಅಸಮಾಸೇ. ಅಪಿ, ಣೋಪದೇಶಸ್ಯ || ನಾಲ್ಕು ಪದಗಳುಳ್ಳ ಸೂತ್ರ. ಉಪಸರ್ಗಪದವು ಉಪಸರ್ಗಸ್ಥವೆಂದು ಲಕ್ಷಣೆಯಿಂದ ಬೋಧಿಸುತ್ತದೆ. 'ರಷಾಭ್ಯಾಂ' ಸೂತ್ರದಿಂದ 'ರಷಾಭ್ಯಾಂ ನೋ, ಣಃ' ಅನುವೃತ್ತಿ. **ಸೂತ್ರಾರ್ಥ**—ಉಪಸರ್ಗದಲ್ಲಿರುವ ನಿಮಿತ್ತದ ಪರದಲ್ಲಿರುವ ಣೋಪದೇಶ ಧಾತುವಿನ ನಕಾರಕ್ಕೆ ಣಕಾರ ಬರುತ್ತದೆ. ಸಮಾನಪದವಾಗವಿರುವುದರಿಂದ ಪುನಃ ಣತ್ವ ಹೇಳಿದೆ 'ಅಟ್

ಕುಪ್ವಾಙ್— ಸೂತ್ರ ಒಂದೇ ಪದದಲ್ಲಿ ನಿಮಿತ್ತ-ನಿಮಿತ್ತಿ ಬಂದಾಗ ಣತ್ವ ಹೇಳುತ್ತದೆ. ಪ್ರ + ನದತಿ ಎಂದಿರುವಾಗ ಪ್ರ ಉಪಸರ್ಗದಲ್ಲಿ ರೇಫರೂಪ ನಿಮಿತ್ತವಿದೆ. ಅವರ ಪರವಲ್ಲಿ ನದ ರೂಪ ಣೋಪದೇಶ ಧಾತುವಿನ ನಕಾರವಿದೆ. ಆಗ ಣತ್ವ ಬಂದರೆ ಪ್ರಣದತಿ ಎಂದಾಗುತ್ತದೆ. ಪ್ರತಿ + ನದತಿ ಎಂದಿರುವಾಗ 'ನೇರ್ಗದನದ-' (ಸೂ. ೪೫೪) ಸೂತ್ರದಿಂದ ನಿಯ ನಕಾರಕ್ಕೆ ಣತ್ವ. ಪ್ರಣಿನದತಿ

ಲಿಟ್ ॥ ಜಗಾದದಂತೇರೂಪವಾಗುತ್ತದೆ. ದ್ವಿತ್ವಾದಿಗಳು ಬಂದಾಗ ಉಪಧಾವೃದ್ಧಿ. ನನಾದ. ನನದ್ + ಅತುಸ್ ಎಂದಿರುವಾಗ ಅಭ್ಯಾಸಲೋಪಾದಿಗಳನ್ನು ಹೇಳುತ್ತಾನೆ.

ಲಿಟ್ ಪರವಾದಾಗ ಏತ್ವಾಭ್ಯಾಸ ಲೋಪ ಹೇಳುವ ಸೂತ್ರ.

೪೬೧. ಅತ ಏಕಹಲ್ಮಧ್ಯೇಽನಾದೇಶಾದೇರ್ಲಿಟಿ ॥ ೬-೪-೧೨೦ ॥

ಲಿಣ್ನಿಮಿತ್ತಾದೇಶಾದಿಕಂ ನ ಭವತಿ ಯದಂಗಂ ತದವಯವಸ್ಯಾಸಂಯುಕ್ತಹಲ್ಮಧ್ಯಸ್ಥಸ್ಯಾತ ಏತ್ವಮಭ್ಯಾಸಲೋಪಶ್ಚ ಕಿತಿ ಲಿಟಿ ॥ ನೇದತುಃ । ನೇದುಃ ॥

ನಾಲ್ಕು ಪದಗಳುಳ್ಳ ಸೂತ್ರ ಆದೇಶಃ ಆದಿಃ ಯಸ್ಯ ಸಃ ಆದೇಶಾದಿಃ । ನ ಆದೇಶಾದಿಃ ಅನಾದೇಶಾದಿಃ । ತಸ್ಯ ಅನಾದೇಶಾದೇಃ ॥ ಅಂಗಕ್ಕೆ ವಿಶೇಷಣ. ಲಿಟಿ ಎಂಬುದು ನಿಮಿತ್ತಸಪ್ತಮೀ. ಆದಕ್ಕೆ ಅನಾದೇಶಾದೇಃ ಎಂಬಲ್ಲಿ ಏಕದೇಶವಾದ ಆದೇಶದಲ್ಲಿ ಮಾತ್ರ ಅನ್ವಯ. ಲಿಣ್ನಿಮಿತ್ತಕವಾದ ಆದೇಶವು ಆದಿಯಲ್ಲಿ ಇಲ್ಲದಿರುವ ಅಂಗ ಎಂದರ್ಥ. ಅಂಗದ ಆದಿಯಲ್ಲಿ ಲಿಟನ್ನು ನಿಮಿತ್ತೀಕರಿಸಿ ಯಾವ ಆದೇಶವೂ ಬಂದಿರಬಾರದೆಂದು ತಾತ್ಪರ್ಯ. ಏಕಹಲ್ಮಧ್ಯೇ ಎಂಬಲ್ಲಿ ಏಕ ಶಬ್ದ ಅಸಹಾಯಾರ್ಥಕವಾಗಿದೆ. ಅಸಂಯುಕ್ತವೆಂದರ್ಥ. ಏಕೌ ಚ ತೌ ಹಲೌ ಚ ಏಕಹಲೌ । ತಯೋಃ ಮಧ್ಯಃ ಏಕಹಲ್ಮಧ್ಯಃ । ಅತಃ ಎಂಬುದಕ್ಕೆ ಅದು ವಿಶೇಷಣ. ಸಂಯುಕ್ತ ಹಲ್ ಮಧ್ಯದಲ್ಲಿ ಇಲ್ಲದಿರುವ ಹ್ರಸ್ವಾಕಾರಕ್ಕೆ ಎಂದರ್ಥ. 'ಘ್ವಸೋರೇದ್ಧಾ—' ಸೂತ್ರದಿಂದ 'ಏತ್', 'ಅಭ್ಯಾಸಲೋಪ', 'ಗಮಹನ—' ಸೂತ್ರದಿಂದ 'ಕಿತಿ' ಪದಗಳು ಅನುವೃತ್ತವಾಗುತ್ತವೆ ಸೂತ್ರಾರ್ಥ-ಲಿಣ್ನಿಮಿತ್ತಾದೇಶವು ಆದಿಯಲ್ಲಿ ಇಲ್ಲದ ಅಂಗದ ಅವಯವವಾದ ಸಂಯುಕ್ತಾಕ್ಷರದ ಮಧ್ಯದಲ್ಲಿ ಇಲ್ಲದ ಹ್ರಸ್ವಾಕಾರಕ್ಕೆ ಏತ್ವವೂ ಅಭ್ಯಾಸಕ್ಕೆ ಲೋಪವೂ ಕಿತ್ತಾದ ಲಿಟ್ ಪರವಾದಾಗ ಬರುತ್ತದೆ. ಲಿಟಿ ಎಂಬುದನ್ನು ಆವೃತ್ತಿ ಮಾಡಿಕೊಂಡು ಒಂದನ್ನು ಆದೇಶದಲ್ಲಿ ನಿಮಿತ್ತವನ್ನಾಗಿಯೂ, ಇನ್ನೊಂದನ್ನು ಪರಸಪ್ತಮಿಯಾಗಿಯೂ ಸ್ವೀಕರಿಸಬೇಕು. ಪ್ರಕೃತ ನನದ್ + ಅತುಸ್ ಎಂಬಲ್ಲಿ 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ ಅತುಸ್

ಕಿತ್ ಲಿಟ್. ಇದು ಪರವಾದಾಗ ನನದ್ ಅಂಗ. ಇದರ ಆದಿಯಲ್ಲಿ ಆದೇಶ ಬಂದಿದ್ದರೂ ಅದು ಲಿಟನ್ನು ನಿಮಿತ್ತೀಕರಿಸಿ ಬಂದಿಲ್ಲ ಇದರ ಅವಯವವಾದ ಹ್ರಸ್ವಾಕಾರ ನದ್ ಎಂಬಲ್ಲಿರುವ ಅಕಾರ. ಇದು ಸಂಯುಕ್ತಾಕ್ಷರಮಧ್ಯದಲ್ಲಿ ಇಲ್ಲ ಇದಕ್ಕೆ ಏತ್ವ. ಅಭ್ಯಾಸ—ಆದಿನಕಾರ. ಇದಕ್ಕೆ ಲೋಪ ಬಂದರೆ ನೇದ್+ ಆತುಸ್ – ನೇದತುಃ ಎಂದು ಆಗುತ್ತದೆ. ದ್ವಿವಚನ ಬಹುವಚನ ಕಿತ್ತಾಗುವುದ ರಿಂದ ಅಲ್ಲಿ ಏತ್ವಾಭ್ಯಾಸಲೋಪಗಳು ಬರುತ್ತವೆ. ನನದ್+ಉಸ್ — ನೇದುಃ || ಮಧ್ಯಮದಲ್ಲಿ ನನದ್+ಥ ಎಂದಿರುವಾಗ 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರ ದಿಂದ ಥಕ್ಕೆ ಇಡಾಗಮ. ನನದ್+ಇಥ. ಇಲ್ಲಿ ಕಿತ್ವ ಇಲ್ಲದಿರುವುದರಿಂದ ಏತ್ವಾ ಭ್ಯಾಸಲೋಪಗಳು ಬಾರದಿರುವಾಗ ಅದಕ್ಕೋಸ್ಕರ ಇತರ ಸೂತ್ರ ಹೇಳುತ್ತಾನೆ.

ಥಲಿನಲ್ಲಿ ಏತ್ವಾಭ್ಯಾಸ ಲೋಪ ಹೇಳುವ ಸೂತ್ರ.

೪೬೨. ಥಲಿ ಚ ಸೇಟಿ || ೬-೪-೧೨೧ ||

ಪ್ರಾಗುಕ್ತಂ ಸ್ಯಾತ್ | ನೇದಿಥ | ನೇದಥುಃ | ನೇದ | ನನಾದ. ನನದ | ನೇದಿವ | ನೇದಿಮ || ನದಿತಾ | ನದಿಷ್ಯತಿ | ನದತು | ಅನದತ್ | ನದೇತ್ | ನದ್ಯಾತ್ | ಅನಾದೀತ್, ಅನದೀತ್ | ಅನದಿಷ್ಯತ್ ||

ತ್ರಿಪದ ಸೂತ್ರ. ಹಿಂದಿನ ಸೂತ್ರ ಅನುವೃತ್ತವಾಗುತ್ತದೆ. ಸೂತ್ರಾರ್ಥ– ಇಟ್‌ಸಹಿತವಾದ ಥಲ್ ಪರದಲ್ಲಿರುವಾಗ ಲಿಣ್ನಿಮಿತ್ತವಾದ ಆದೇಶ ಆದಿಯಲ್ಲಿಲ್ಲದ ಅಂಗದ ಅವಯವವಾದ, ಸಂಯುಕ್ತಾಕ್ಷರದ ಮಧ್ಯದಲ್ಲಿ ಇಲ್ಲದ, ಹ್ರಸ್ವಾಕಾರಕ್ಕೆ, ಏತ್ವವೂ ಅಭ್ಯಾಸಲೋಪವೂ ಬರುತ್ತವೆ ಕಿತ್ವ ಇಲ್ಲದಿರುವುದರಿಂದ ಪುನಃ ಹೇಳಿರು ತ್ತಾನೆ ನನದ್+ಇಥ ಎಂಬಲ್ಲಿ ಸೇಟ್ ಥಲ್ ಪರದಲ್ಲಿದೆ. ಏತ್ವಾಭ್ಯಾಸ ಲೋಪ ಬಂದರೆ ನೇದಿಥ ಎಂದಾಗುತ್ತದೆ ದ್ವಿವಚನ ಬಹುವಚನಗಳಲ್ಲಿ ನೇದ್ ಅಂಗವೆಂದು ತಿಳಿಯಬೇಕು. ನನದ್ + ಅಥುಸ್— ನೇದಥುಃ || ನನದ್+ಅ— ನೇದ || ಉತ್ತಮ ಏಕವಚನದಲ್ಲಿ 'ಣಲುತ್ತಮೋವಾ' ಸೂತ್ರದಿಂದ ಣಲ್ ವಿಕಲ್ಪವಾಗಿ ಣಿತ್ತಾಗುತ್ತದೆಯೆಂದುದರಿಂದ ಣಿತ್ತಾದರೆ 'ಅತ ಉಪಧಾಯಾಃ' ಸೂತ್ರದಿಂದ ವೃದ್ಧಿ. ನನಾದ. ಣಿತ್ವ ಇಲ್ಲವಾದರೆ ನನದ ಎಂದಾಗುತ್ತದೆ. ನನದ್+ಇವ— ನೇದಿವ || ನನದ್+ಇಮ—ನೇದಿಮ || ಲುಟ್ || ತಾಸ್ ವಿಕರಣ ಅದು ಆರ್ಧಧಾತುಕ ವಾದುದರಿಂದ ಅದಕ್ಕೆ ಇಡಾಗಮ. ತಿಬಾದಿಗಳಿಗೆ ಡಾ, ರೌ, ರಸ್ ಆದೇಶಗಳು. ನದಿತಾ | ನದಿತಾರೌ | ನದಿತಾರಃ || ನದಿತಾಸಿ | ನದಿತಾಸ್ಥಃ | ನದಿತಾಸ್ಥ || ನದಿ ತಾಸ್ಮಿ | ನದಿತಾಸ್ವಃ | ನದಿತಾಸ್ಮಃ || ಲೃಟ್ || ಸ್ಯ ವಿಕರಣ. ಇಡಾಗಮ. ನದಿಷ್ಯತಿ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಸಕಾರಕ್ಕೆ ಷತ್ವ. ಲೋಟ್ || ನದತು, ನದತಾತ್ | ಭವತು ಅಂತೆಯೇ ಪ್ರಕ್ರಿಯೆ. ನದ ಅಂಗ. ಪ್ರತ್ಯಯ ಸೇರಿಸಬೇಕು.

ಲಙ್ || ಅನದತ್ ಅಂಗಕ್ಕೆ ಅಡಾಗಮ. ಅನದ ಅಂಗ. ಪ್ರತ್ಯಯ ಸೇರಿಸುವುದು. ತ್–ತಾಮ್–ಅನ್ || ಸ್–ತಮ್–ತ || ಅಮ್–ವ–ಮ || ವಿಧಿಲಿಙ್|| ನದ ಅಂಗ. ಯಾಸುಟಿಗೆ ಇಯಾದೇಶ. ನದೇತ್. (ಭವೇತ್ ಅಂತೆ) ಆಶೀರ್ಲಿಙ್ || ನದ್ ಅಂಗ ಯಾತ್–ಯಾಸ್ತಾಮ್–ಯಾಸುಃ || ಯಾಃ–ಯಾಸ್ತಮ್–ಯಾಸ್ತ || ಯಾಸಮ್–ಯಾಸ್ವ–ಯಾಸ್ಮ || ಈ ಪ್ರತ್ಯಯಗಳನ್ನು ಸೇರಿಸಬೇಕು. ಲುಙ್ || 'ಅಗಾದೀತ್' ಅಂತೆ ಪ್ರಕ್ರಿಯೆ. 'ಅತೋಹಲಾದೇರ್ಲಘೋಃ' ಸೂತ್ರದಿಂದ ವಿಕಲ್ಪವೃದ್ಧಿ. ಅನಾದೀತ್ | ಅನಾದಿಷ್ಟಾಮ್ | ಅನಾದಿಷುಃ || ಅನಾದೀಃ | ಅನಾದಿಷ್ಟಮ್ | ಅನಾದಿಷ್ಟ || ಅನಾದಿಷಮ್ | ಅನಾದಿಷ್ವ | ಅನಾದಿಷ್ಮ || ವೃದ್ಧಿ ಬಾರದಿದ್ದರೆ ಅನದೀತ್—ಇತ್ಯಾದಿ. ಲೃಙ್ || 'ಅಗದಿಷ್ಯತ್' ಅಂತೆ ಪ್ರಕ್ರಿಯೆ. ಅನದಿಷ್ಯತ್ ಇತ್ಯಾದಿ.

## || ೮ || ಟುನದಿ—ಸಮೃದ್ಧೌ (ಧಾನ್ಯಾದಿವೃದ್ಧಿ)

ಧಾತುವಿನ ಆದಿಯಾದ ಟು ಡು ಞಿಗಳಿಗೆ ಲೋಪ ಹೇಳುವ ಸೂತ್ರ.

### ೪೬೩. ಆದಿರ್ಞಿಟುಡವಃ || ೧–೩–೫ ||

**ಉಪದೇಶೇ ಧಾತೋರಾದ್ಯಾ ಏತೇ ಇತಃ ಸ್ಯುಃ ||**

ದ್ವಿಪದ ಸೂತ್ರ 'ಉಪದೇಶೇಜನುನಾಸಿಕ ಇತ್' ಸೂತ್ರದಿಂದ 'ಇತ್' ಅನುವೃತ್ತಿ. 'ಭೂವಾದಯೋ ಧಾತವಃ' ಸೂತ್ರದಿಂದ ಅನುವೃತ್ತವಾದ ಧಾತು ಪದವು ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಸೂತ್ರದ ಆದಿಪದವೂ ಅನುವೃತ್ತವಾದ ಇತ್ ಪದವೂ ಬಹುವಚನಾರ್ಥದಲ್ಲಿ ಏಕವಚನಾಂತವಾಗಿದೆ. ಸೂತ್ರಾರ್ಥ—ಉಪದೇಶ ಕಾಲದಲ್ಲಿ ಧಾತುವಿನ ಆದಿಯಲ್ಲಿರುವ ಞಿ, ಟು, ಡು ಈ ಮೂರು ವರ್ಣಗಳು ಇತ್ ಸಂಜ್ಞೆಯನ್ನು ಹೊಂದುತ್ತವೆ. ಪ್ರಕೃತ ಧಾತು ಉಪದೇಶದಲ್ಲಿಯೇ ಟು ಆದಿಯಲ್ಲಿರುವುದರಿಂದ ಅದು ಇತ್ ಆಗಿ 'ತಸ್ಯ ಲೋಪಃ' ಸೂತ್ರದಿಂದ ಲೋಪ ಹೊಂದುತ್ತದೆ. ಇಕಾರ ಇತ್ತಾದುದರಿಂದ ನುಮಾಗಮ ಹೇಳುತ್ತಾನೆ.

ಇದಿತ್ತಾದ ಧಾತುವಿಗೆ ನುಮಾಗಮ ಹೇಳುವ ಸೂತ್ರ.

### ೪೬೪. ಇದಿತೋ ನುಮ್ ಧಾತೋಃ || ೭–೧–೫೮ ||

ನನ್ದತಿ | ನನನ್ದ | ನನ್ದಿತಾ | ನನ್ದಿಷ್ಯತಿ | ನನ್ದತು | ಅನನ್ದತ್ | ನನ್ದೇತ್ | ನನ್ದ್ಯಾತ್ || ಅನನ್ದೀತ್ | ಅನನ್ದಿಷ್ಯತ್ ||

ತ್ರಿಪದ ಸೂತ್ರ. ಅನುವೃತ್ತ್ಯಾದಿಗಳು ಇಲ್ಲದಿರುವುದರಿಂದ ಸ್ಪಷ್ಟಾರ್ಥಕವಾದುದರಿಂದ ವೃತ್ತಿ ಬರೆಯಲಿಲ್ಲ. ಇತ್ ಇತ್ ಯಸ್ಯ ಸಃ ಇದಿತ್. ಹ್ರಸ್ವ ಇಕಾರ ಇತ್ತಾದ ಧಾತು. ತಸ್ಯ ಇದಿತಃ || ಸೂತ್ರಾರ್ಥ—ಹ್ರಸ್ವ ಇಕಾರ ಇತ್ತಾಗಿರುವ ಧಾತುವಿಗೆ ನುಮಾಗಮ ಬರುತ್ತದೆ. ನದ್ ಧಾತುವಿನಲ್ಲಿ ಹ್ರಸ್ವ ಇಕಾರ ಇತ್ತಾದುದರಿಂದ ನುಮಾಗಮ ಬರುತ್ತದೆ. ನುಮಿನಲ್ಲಿ ಮಕಾರ ಇತ್ತಾದುದರಿಂದ 'ಮಿದಚೋಽಂತ್ಯಾತ್ಪರಃ' ಸೂತ್ರದಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ನನ್ದ್+ಅ+ತಿ. 'ನಶ್ಚಾಪದಾಂತಸ್ಯ ಝಲಿ' ಸೂತ್ರದಿಂದ ನಕಾರಕ್ಕೆ ಅನುಸ್ವಾರ. ನಂದ್+ಅ+ತಿ. 'ಅನುಸ್ವಾರಸ್ಯ ಯಯಿಪರಸವರ್ಣಃ' ಸೂತ್ರದಿಂದ ಅನುಸ್ವಾರಕ್ಕೆ ಪರಸವರ್ಣ. ನನ್ದತಿ | ನನ್ದತಃ | ನನ್ದನ್ತಿ || ಇತ್ಯಾದಿ. ಲಿಟ್ || ದ್ವಿತ್ವ. ನದ್‌ನದ್+ಅ. 'ಹಲಾದಿಃ ಶೇಷಃ' ನನದ್+ಅ. ನುಮ್. ಅನುಸ್ವಾರ. ಪರಸವರ್ಣ. ನನನ್ದ | ನನನ್ದತುಃ | ನನನ್ದುಃ || ನನನ್ದಿಥ | ನದನ್ದಥುಃ | ನನನ್ದ || ನನನ್ದ | ನನನ್ದಿವ | ನನನ್ದಿಮ || ಲುಟ್ || ನನ್ದಿತಾ || ಭವಿತಾವತ್ || ನುಮಾಗಮ ವಿಶೇಷ. ಲೃಟ್ || ನನ್ದಿಷ್ಯತಿ || ಭವಿಷ್ಯತಿವತ್ || ಲೋಟ್ || ನನ್ದತು, ನನ್ದತಾತ್ | ನನ್ದತಾಮ್ | ನನ್ದನ್ತು || ಇತ್ಯಾದಿ. ಲಙ್ || ಅನನ್ದತ್ || ಅಭವತ್‌ಅಂತೆ || ವಿಧಿಲಿಙ್ || ನನ್ದೇತ್ || ಭವೇತ್‌ವತ್ || ಆಶೀರ್ಲಿಙ್ || ನನ್ದ್ಯಾತ್ || ಭೂಯಾತ್‌ವತ್ | ಲುಙ್ || ಅನನ್ದ್+ಇಸ್+ಈತ್ || 'ಇಟ ಈಟಿ' ಸಲೋಪ. ಅನನ್ದೀತ್ | ಅದನ್ದಿಷ್ಟಾಮ್ | ಅನನ್ದಿಷುಃ || ಅನನ್ದೀಃ | ಅನನ್ದಿಷ್ಟಮ್ | ಅನನ್ದಿಷ್ಟ || ಅನನ್ದಿಷಮ್ | ಅನನ್ದಿಷ್ವ | ಅನನ್ದಿಷ್ಮ || ಲೃಙ್ || ಅನನ್ದಿಷ್ಯತ್ || ಅಭವಿಷ್ಯತ್‌ವತ್ ||

|| ೯ || ಅರ್ಚ—ಪೂಜಾಯಾಮ್ || (ಪೂಜಿಸುವುದು) ಅರ್ಚತಿ ||

ಕೊನೆಯ ಅಕಾರ ಇತ್. ಅರ್ಚ್+ಅ+ತಿ—ಅರ್ಚತಿ. ಅರ್ಚ ಅಂಗ. ಲಿಟಿನಲ್ಲಿ ದ್ವಿತ್ವ ಬಂದರೆ ಅರ್ಚ್‌ಅರ್ಚ್+ಅ ಎಂದಿರುವಾಗ 'ಹಲಾದಿಃ ಶೇಷಃ' ಸೂತ್ರದಿಂದ ಅಭ್ಯಾಸದಲ್ಲಿ ಅ ಉಳಿಯುತ್ತದೆ. 'ಅತ ಆದೇಃ' ಸೂತ್ರದಿಂದ ಅಭ್ಯಾಸದ ಅಕಾರಕ್ಕೆ ದೀರ್ಘ. ಆ+ಅರ್ಚ್+ಅ ಎಂದಿರುವಾಗ ಅಭ್ಯಾಸಕ್ಕೆ ನುಟಾಗಮ ಹೇಳುತ್ತಾನೆ.

ಅಭ್ಯಾಸಾಕಾರಕ್ಕೆ ನುಟಾಗಮ ಹೇಳುವ ಸೂತ್ರ.

೪೭೫. ತಸ್ಮಾನ್ನುಟ್ ದ್ವಿಹಲಃ || ೭-೪-೭೧ ||

ದ್ವಿಹಲೋ ಧಾತೋರ್ದೀರ್ಘೀಭೂತಾತ್ಪರಸ್ಯ ನುಟ್ ಸ್ಯಾತ್ | ಆನರ್ಚ | ಆನರ್ಚತುಃ | ಆನರ್ಚುಃ || ಅರ್ಚಿತಾ || ಅರ್ಚಿಷ್ಯತಿ ||

**ಅರ್ಚತು** || **ಆರ್ಚತ್** || **ಅರ್ಚೇತ್** || **ಅರ್ಚ್ಯಾತ್** || **ಆರ್ಚೀತ್** || **ಆರ್ಚಿಷ್ಯತ್** ||

ತಸ್ಮಾತ್, ನುಟ್, ದ್ವಿಹಲಃ || ತ್ರಿಪದ ಸೂತ್ರ. ದ್ವೌ ಹಲೌ ಯಸ್ಯ ಸಃ ದ್ವಿಹಲ್. ತಸ್ಯ. ಎರಡು ವ್ಯಂಜನವುಳ್ಳ ಧಾತುವಿನ ಎಂದರ್ಥ. ತಸ್ಮಾತ್ ಎಂಬುದು 'ಅತ ಆದೇಃ' ಎಂಬ ಸೂತ್ರದಿಂದ ವಿಧಿಸಿದ ದೀರ್ಘವನ್ನು ಪರಾಮರ್ಶಿಸುತ್ತದೆ. **ಸೂತ್ರಾರ್ಥ**—ಎರಡು ವ್ಯಂಜನವುಳ್ಳ ಧಾತುವಿನ ದೀರ್ಘವಾದ ಆಕಾರದ ಪರಕ್ಕೆ ನುಟಾಗವು ಬರುತ್ತದೆ. ಟಿತ್ತಾದುದರಿಂದ ಆಕಾರದ ಅಂತ್ಯಾವಯವವಾಗಿ ಬರುತ್ತದೆ. ನುಟಿನಲ್ಲಿ ಉಕಾರ ಉಚ್ಚಾರಣಾರ್ಥ. ಆನ್ + ಅರ್ಚ್+ಅ —ಆನರ್ಚ. ನುಟ್ ಬರುವುದರಿಂದ ಆನರ್ಚ್ ಅಂಗ. ಪ್ರತ್ಯಯ ಸೇರಿಸಬೇಕು. ಆನರ್ಚ | ಆನರ್ಚತುಃ | ಆನರ್ಚುಃ || ಆನರ್ಚಿಥ | ಆನರ್ಚಥುಃ | ಆನರ್ಚ || ಆನರ್ಚ | ಆನರ್ಚಿವ | ಆನರ್ಚಿಮ || **ಲುಟ್** || ಅರ್ಚಿತಾ || ಅರ್ಚಿತಾಸ್ ಅಂಗ. **ಲೃಟ್** || ಅರ್ಚಿಷ್ಯತಿ || ಅರ್ಚಿಷ್ಯ ಅಂಗ. **ಲೋಟ್** || ಅರ್ಚತು—ಅರ್ಚತಾತ್|| ಅರ್ಚ ಅಂಗ. **ವಿಧಿಲಿಙ್** || ಅರ್ಚೇತ್ || ಅರ್ಚ ಅಂಗ. ಯಾಸುಟಿಗೆ ಇಯಾದೇಶ. ಗುಣ. **ಆಶೀರ್ಲಿಙ್** || ಅರ್ಚ್ಯಾತ್ || ಅರ್ಚ್ ಅಂಗ. ಯಾಸ್ ಇರುತ್ತದೆ. **ಲಙ್** || ಅರ್ಚ್+ಅ+ತ್ 'ಆಡಜಾದೀನಾಮ್' ಸೂತ್ರದಿಂದ ಅಂಗಕ್ಕೆ ಆಡಾಗವು. 'ಆಟಶ್ಚ' ವೃದ್ಧಿ. ಆರ್ಚತ್ | ಆರ್ಚತಾಮ್ | ಆರ್ಚನ್ || ಆರ್ಚ ಅಂಗ. **ಲುಙ್** || ಅ+ಅರ್ಚ್+ಇಸ್+ಈತ್ || 'ಇಟ ಈಟಿ' ಸಲೋಪ. ಆರ್ಚೀತ್ | ಆರ್ಚಿಷ್ಟಾಮ್ | ಆರ್ಚಿಷುಃ || ಇಕಾರದ ಪರದಲ್ಲಿರುವುದರಿಂದ ಸಿಚಿನ ಸಕಾರಕ್ಕೆ ಷತ್ವ. ಆರ್ಚಿಷ್ ಅಂಗ. ಆರ್ಚೀಃ | ಆರ್ಚಿಷ್ಟಮ್ | ಆರ್ಚಿಷ್ಟ || ಆರ್ಚಿಷಮ್ | ಆರ್ಚಿಷ್ವ | ಆರ್ಚಿಷ್ಮ || **ಲೃಙ್** || ಆರ್ಚಿಷ್ಯತ್ || ಆರ್ಚಿಷ್ಯ ಅಂಗ.

## || ೧೦ || ವ್ರಜ—ಗತೌ (ಹೋಗುವುದು)

**ವ್ರಜತಿ** | **ವವ್ರಾಜ** | **ವ್ರಜಿತಾ** | **ವ್ರಜಿಷ್ಯತಿ** | **ವ್ರಜತು** | **ಅವ್ರಜತ್** | **ವ್ರಜೇತ್** | **ವ್ರಜ್ಯಾತ್** ||

**ಲಟ್** || ವ್ರಜ್+ಅ+ತಿ – ವ್ರಜತಿ ಸಾರ್ವಧಾತುಕದಲ್ಲಿ ವ್ರಜ ಅಂಗ. **ಲಿಟ್** || ವವ್ರಾಜ | 'ಅತ ಉಪಧಾಯಾಃ' ಸೂತ್ರದಿಂದ ಧಾತುವಿನ ಆಕಾರಕ್ಕೆ ವೃದ್ಧಿ. **ಲುಟ್** || ವ್ರಜಿತಾ || ತಾಸಿಗೆ ಇಡಾಗವು. ವ್ರಜಿತಾಸ್ ಅಂಗ. **ಲೃಟ್** || ವ್ರಜಿಷ್ಯತಿ || **ಲೋಟ್** || ವ್ರಜತು–ವ್ರಜತಾತ್ || ಇತ್ಯಾದಿ. **ಲಙ್** || ಅವ್ರಜತ್ | ಅಂಗಕ್ಕೆ ಅಡಾಗವು. **ವಿಧಿಲಿಙ್** || ವ್ರಜೇತ್ | ಯಾಸುಟಿಗೆ ಇಯಾದೇಶ. ಗುಣ. **ಆಶೀರ್ಲಿಙ್** || ವ್ರಜ್ಯಾತ್ | ವ್ರಜ್ಯಾಸ್ತಾಮ್ |

ನಲ್ಲಿ ಅವ್ರಜ್ + ಇಸ್ + ಈತ್ ಎಂದಿರುವಾಗ 'ಅತೋ ಹಲಾದೇರ್ಲಘೋಃ' ಸೂತ್ರದಿಂದ ವಿಕಲ್ಪವೃದ್ಧಿ ಪ್ರಾಪ್ತವಾದರೆ ನಿತ್ಯವೃದ್ಧಿ ಹೇಳುತ್ತಾನೆ.

ಸಿಚ್ ಪರವಾದಾಗ ವೃದ್ಧಿ ಹೇಳುವ ಸೂತ್ರ.

**೪೬೬. ವದವ್ರಜಹಲಂತಸ್ಯಾಚಃ || ೭-೨-೩ ||**

**ಏಷಾಮಚೋ ವೃದ್ಧಿಃ ಸಿಚಿ ಪರಸ್ಮೈಪದೇಷು || ಅವ್ರಾಜೀತ್|| ಅವ್ರಜಿಷ್ಯತ್ ||**

ವದವ್ರಜಹಲಂತಸ್ಯ, ಅಚಃ || ದ್ವಿಪದ ಸೂತ್ರ. ವದಶ್ಚ ವ್ರಜಶ್ಚ ಹಲಂತಶ್ಚ ತೇಷಾಂ ಸಮಾಹಾರಃ, ವದವ್ರಜಹಲಂತಮ್. ತಸ್ಯ. 'ಅಂಗಸ್ಯ' ಅಧಿಕಾರ. 'ಸಿಚಿ ವೃದ್ಧಿಃ ಪರಸ್ಮೈಪದೇಷು' ಸೂತ್ರ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ವದ, ವ್ರಜ ಧಾತುಗಳ ಮತ್ತು ಹಲಂತ ಧಾತುವಿನ ಅಚಿಗೆ ಪರಸ್ಮೈಪದ ಪರವಾದ ಸಿಚ್ ಪರದಲ್ಲಿರುವಾಗ ವೃದ್ಧಿ ಬರುತ್ತದೆ. ಯದ್ಯಪಿ ವ್ರಜ್ ಧಾತುವು ಹಲಂತ. ಆದರೂ ವಿಕಲ್ಪವೃದ್ಧಿ ಬಾಧಕಕ್ಕೋಸ್ಕರ ಇಲ್ಲಿ ಪುನಃ ಹೇಳಿರುತ್ತಾನೆ. ಪ್ರಕೃತ ಪರಸ್ಮೈಪದ ಪರವಾದ ಸಿಚ್ ಪರದಲ್ಲಿ ಇದೆ. ವ್ರಜಿನ ಅಚ್ ಅಕಾರ. ಅದಕ್ಕೆ ವೃದ್ಧಿ ಆಕಾರ. ಅವ್ರಾಜೀತ್. (ಇಟ ಈಟ, ಸಲೋಪ) ಅವ್ರಾಜಿಷ್ಟಾಮ್ | ಅವ್ರಾಜಿಷುಃ || ಅವ್ರಾಜೀಃ | ಅವ್ರಾಜಿಷ್ಟಮ್ | ಅವ್ರಾಜಿಷ್ಟ || ಅವ್ರಾಜಿಷಮ್ | ಅವ್ರಾಜಿಷ್ವ || ಅವ್ರಾಜಿಷ್ಮ || **ಲೃಙ್** || ಅವ್ರಜಿಷ್ಯತ್ | (ಅಭವಿಷ್ಯತ್‌ವತ್)

**|| ೧೧ || ಕಟೇ ವರ್ಷಾವರಣಯೋಃ**

**(ಮಳೆ ಮತ್ತು ಮುಚ್ಚುವುದು)**

**|| ಕಟತಿ ||**

**ಚಕಾಟ | ಚಕಟತುಃ || ಕಟಿತಾ || ಕಟಿಷ್ಯತಿ || ಕಟತು ||ಅಕಟತ್ || ಕಟೇತ್ || ಕಟ್ಯಾತ್ ||**

ಕಟೇ ಎಂಬಲ್ಲಿ ಏಕಾರ ಇತ್. ಕಟ್ + ಅ + ತಿ = ಕಟತಿ ಇತ್ಯಾದಿ. ಕಟ ಅಂಗ. **ಲಿಟ್** || ದ್ವಿತ್ವ. ಕಟ್‌ಕಟ್ + ಅ. 'ಹಲಾದಿಃ ಶೇಷಃ' ಕಕಟ್ + ಅ. 'ಕುಹೋಶ್ಚುಃ' ಅಭ್ಯಾಸ ಕಕಾರಕ್ಕೆ ಚಕಾರಾದೇಶ. ಚಕಟ್ + ಅ. 'ಅತ ಉಪಧಾಯಾಃ' ಧಾತು ಅಕಾರಕ್ಕೆ ವೃದ್ಧಿ. ಚಕಾಟ. ಚಕಟ್ ಅಂಗ. ಚಕಟತುಃ || ಇಲ್ಲಿ ಲಿಣ್ಣಿಮಿತ್ತವಾಗಿ ಆದೇಶ ಬಂದು ಆದಿಯಲ್ಲಿರುವುದರಿಂದ 'ಅತ ಏಕಹಲ್ —' (ಸೂ. ೪೬೧) ಸೂತ್ರದಿಂದ ಏತ್ವಾಭ್ಯಾಸ ಲೋಪ ಬರುವುದಿಲ್ಲ. ಚಕಟುಃ || ಚಕಟಿಥ |

ಚಕಟಥುಃ | ಚಕಟ || ಚಕಾಟ, ಚಕಟ || 'ಣಲುತ್ತಮೋವಾ' ಸೂತ್ರದಿಂದ ವಿಕಲ್ಪ ಣಿತ್ತಾದುದರಿಂದ ವೃದ್ಧಿ ವಿಕಲ್ಪ. ಚಕಟಿವ | ಚಕಟಿಮ || **ಲುಟ್**– ಕಟಿತಾ || **ಲೃಟ್**— ಕಟಿಷ್ಯತಿ || **ಲೋಟ್**— ಕಟತು, ಕಟತಾತ್ || **ಲಙ್**— ಅಕಟತ್ || **ವಿಧಿಲಿಙ್**– ಕಟೇತ್ || **ಆಶೀರ್ಲಿಙ್** - ಕಟ್ಯಾತ್ || **ಲುಙ್**ನಲ್ಲಿ – ಅಕಟ್ + ಇಸ್ + ಈತ್ ಎಂದಿರುವಾಗ ಹಲಂತಧಾತುವಾದುದರಿಂದ 'ವದವ್ರಜಹಲಂತಸ್ಯಾಚಃ' ಸೂತ್ರದಿಂದ ವೃದ್ಧಿಪ್ರಾಪ್ತವಾದರೆ ನಿಷೇಧ ಹೇಳುತ್ತಾನೆ.

ಸಿಚ್ ಪರವಾದಾಗ ವೃದ್ಧಿ ನಿಷೇಧ ಹೇಳುವ ಸೂತ್ರ.

**೪೬೭. ಹ್ಮ್ಯನ್ತಕ್ಷಣಶ್ವಸಜಾಗೃಣಿಶ್ವ್ಯೇದಿತಾಮ್ || ೭–೨–೫ ||**

**ಹಮಯಾನ್ತಸ್ಯ ಕ್ಷಣಾದೇರ್ಣ್ಯನ್ತಸ್ಯ ಶ್ವಯತೇರೇದಿತಶ್ಚ ವೃದ್ಧಿರ್ನೇಡಾದೌ ಸಿಚಿ || ಅಕಟೀತ್ | ಅಕಟಿಷ್ಯತ್ ||**

ಏಕಪದ ಸೂತ್ರ. ಹ್ಮ್ಯನ್ತಶ್ಚ, ಕ್ಷಣಶ್ಚ, ಶ್ವಸಶ್ಚ, ಜಾಗೃಶ್ಚ, ಣಿಶ್ಚ, ಶ್ವಿಶ್ಚ, ಏದಿಚ್ಚ, 'ಹ್ಮ್ಯನ್ತ ...ದಿತಃ' ತೇಷಾಮ್ 'ಹ್ಮ್ಯನ್ತ... ದಿತಾಮ್.' ಹ್‌ಚ, ಮ್‌ಚ, ಯ್‌ಚ (ವರ್ಣಾಃ) ಅಂತೇ ಯೇಷಾಂ ತೇ ಹ್ಮ್ಯನ್ತಾಃ || 'ನೇಟಿ' ಸೂತ್ರವೂ 'ಸಿಚಿವೃದ್ಧಿಃ' ಸೂತ್ರದಿಂದ 'ಸಿಚಿ' ಪದವೂ ಅನುವೃತ್ತವಾಗುತ್ತವೆ. **ಸೂತ್ರಾರ್ಥ** — ಹಕಾರ, ಮಕಾರ, ಯಕಾರ ಅಂತವಾದ ಧಾತುಗಳಿಗೂ ಕ್ಷಣ, ಶ್ವಸ, ಜಾಗೃ ಧಾತುಗಳಿಗೂ, ಣಿಜಂತ ಧಾತುಗಳಿಗೂ, ಶ್ವಿ ಧಾತುವಿಗೂ ಏಕಾರಾಂತ ಧಾತುಗಳಿಗೂ ಇಡಾದಿಯಾದ ಸಿಚ್ ಪರದಲ್ಲಿರುವಾಗ ವೃದ್ಧಿ ಬರುವುದಿಲ್ಲ, ಪ್ರಕೃತ ಕಟ ಧಾತುವು ಏದಿತ್ತಾಗಿದೆ. ಆದ್ದರಿಂದ ವೃದ್ಧಿ ಬರುವುದಿಲ್ಲ. ಅಕಟೀತ್ | ಅಕಟಿಷ್ಟಾಮ್ || ಅಕಟಿಷುಃ || ಅಕಟೀಃ | ಅಕಟಿಷ್ಟಮ್ | ಅಕಟಿಷ್ಟ || ಅಕಟಿಷಮ್ | ಅಕಟಿಷ್ವ | ಅಕಟಿಷ್ಮ || **ಲೃಙ್** || ಅಕಟಿಷ್ಯತ್ || (ಅಭವಿಷ್ಯತ್‌ವತ್)

**|| ೧೨ || ಗುಪೂ ರಕ್ಷಣೇ (ಕಾಪಾಡುವುದು)**

ಗುಪೂ ಎಂಬಲ್ಲಿ ಊಕಾರ ಇತ್. ಗುಪ್ ಉಳಿಯುತ್ತದೆ. ಇದಕ್ಕೆ ಸ್ವಾರ್ಥದಲ್ಲಿ ಆಯ ಪ್ರತ್ಯಯ ಹೇಳುತ್ತಾನೆ.

ಆಯ ಪ್ರತ್ಯಯ ವಿಧಿಸುವ ಸೂತ್ರ.

**೪೬೮. ಗುಪೂಧೂಪವಿಚ್ಛಿಪಣಿಪನಿಭ್ಯ ಆಯಃ || ೩–೧–೧೮ ||**

**ಏಭ್ಯ ಆಯಃ ಪ್ರತ್ಯಯಃ ಸ್ಯಾತ್ ಸ್ವಾರ್ಥೇ ||**

ದ್ವಿಪದ ಸೂತ್ರ. ಗುಪೂ ಮುಂತಾದ ಐದು ಧಾತುಗಳು. ಪನಿಭ್ಯಃ ಪಂಚಮೀ. **ಸೂತ್ರಾರ್ಥ** - ಗುಪೂ, ಧೂಪ, ವಿಚ್ಛಿ, ಪಣಿ, ಪನಿ ಧಾತುಗಳ ಮೇಲೆ ಸ್ವಾರ್ಥದಲ್ಲಿ

ಆಯ ಪ್ರತ್ಯಯ ಬರುತ್ತದೆ. ಇತರ ಅರ್ಥ ಎಲ್ಲಿ ಹೇಳುವುದಿಲ್ಲವೋ ಅಲ್ಲಿ ಸ್ವಾರ್ಥದಲ್ಲಿ ಎಂದು ತಿಳಿಯಬೇಕು. ಇಲ್ಲಿ ಯಾವ ಅರ್ಥವನ್ನೂ ನಿರ್ದೇಶಿಸದಿರುವುದರಿಂದ ಸ್ವಾರ್ಥ ದಲ್ಲಿ ಆಯ ಬರುತ್ತದೆ. ಗುಪ್ + ಆಯ. ಆಯ ಆರ್ಧಧಾತುಕವಾದುದರಿಂದ 'ಪುಗಂತಲಘೂಪಧಸ್ಯ' ಸೂತ್ರದಿಂದ ಗುಪಿನ ಉಕಾರಕ್ಕೆ ಗುಣ. ಗೋಪಾಯ. ಇದು ಪ್ರತ್ಯಯಾಂತವಾದುದರಿಂದ ಧಾತುವಾಗದಿರುವುದರಿಂದ ಆಯ ಪ್ರತ್ಯಯಾಂತಕ್ಕೆ ಧಾತುಸಂಜ್ಞೆ ಹೇಳುತ್ತಾನೆ.

ಸನ್ ಆದಿ ಅಂತವಾದವುಗಳಿಗೆ ಧಾತುಸಂಜ್ಞೆ ಹೇಳುವ ಸೂತ್ರ.

**೪೬೯. ಸನಾದ್ಯಂತಾ ಧಾತವಃ || ೩-೧-೩೨ ||**

**ಸನಾದಯಃ ಕಮೇರ್ಣಿಜನ್ತಾಃ ಪ್ರತ್ಯಯಾ ಅನ್ತೇ ಯೇಷಾಂ ತೇ ಧಾತುಸಂಜ್ಞಕಾಃ || ಧಾತುತ್ವಾಲ್ಲಡಾದಯಃ | ಗೋಪಾಯತಿ ||**

ದ್ವಿಪದ ಸೂತ್ರ. ಸನ್ ಆದಿಃ ಯೇಷಾಂ ತೇ ಸನಾದಯಃ || ಸನಾದಯಃ ಅನ್ತೇ ಯೇಷಾಂ ತೇ ಸನಾದ್ಯನ್ತಾಃ | **ಸೂತ್ರಾರ್ಥ**—ಸನ್ ಆರಂಭಿಸಿ ಣಿಜ್ ಪ್ರತ್ಯಯದ ವರೆಗೆ ಹೇಳಿದ ಹನ್ನೆರಡು ಪ್ರತ್ಯಯಾನ್ತಧಾತುಗಳಿಗೆ ಧಾತುಸಂಜ್ಞೆ ಬರುತ್ತದೆ.

**ಸನ್ ಕ್ಯಚ್ ಕಾಮ್ಯಚ್ ಕ್ಯಙ್ ಕ್ಯಷೋಽಥಾಚಾರಕ್ವಿಪ್ ಣಿಜ್ಯಙೌ ತಥಾ |**
**ಯಗಾಯ ಈಯಙ್ ಣಿಙ್ ಚೇತಿ ದ್ವಾದಶಾಮೀ ಸನಾದಯಃ ||**

ಈ ಶ್ಲೋಕದಲ್ಲಿ ಸನ್[1], ಕ್ಯಚ್[2], ಕಾಮ್ಯಚ್[3], ಕ್ಯಙ್[4], ಕ್ಯಷ್[5], ಆಚಾರಾರ್ಥ ದಲ್ಲಿ ಬಂದ ಕ್ವಿಪ್[6], ಣಿಚ್[7], ಯಙ್[8], ಯಕ್[9], ಆಯ[10], ಈಯಙ್[11], ಣಿಙ್[12], ಎಂದು ಹನ್ನೆರಡು ಸನಾದಿ ಪ್ರತ್ಯಯಗಳನ್ನು ಹೇಳಿರುತ್ತಾನೆ. ಇವುಗಳನ್ನು ದಶವಿಕರಣಿ ಯಾದೊಡನೆ ವಿವರಿಸುತ್ತಾನೆ. ಪ್ರಕೃತ ಆಯ ಸನಾದಿಯಲ್ಲಿರುವುದರಿಂದ ಆಯ ಪ್ರತ್ಯಯಾಂತವಾದ ಗೋಪಾಯ ಎಂಬುದಕ್ಕೆ ಧಾತುಸಂಜ್ಞೆ ಬರುತ್ತದೆ. ಧಾತು ಸಂಜ್ಞೆ ಬಂದಮೇಲೆ ಅದರ ಮೇಲೆ ಲಡಾದಿಗಳು ಬರುತ್ತವೆ. ಗೋಪಾಯ + ತಿ. ಶಪ್. ಗೋಪಾಯ + ಅ + ತಿ 'ಅತೋ ಗುಣೇ' ಪರರೂಪ. ಗೋಪಾಯತಿ. ಗೋಪಾಯ ಅಂಗ (ಭವತಿವತ್). ಲಿಟನಲ್ಲಿ ಆಯ ವಿಕಲ್ಪವಾಗಿ ಬರುತ್ತದೆ.

ಆಯಾದಿಗಳನ್ನು ವಿಕಲ್ಪವಿಧಾನ ಮಾಡುವ ಸೂತ್ರ.

**೪೭೦. ಆಯಾದಯ ಆರ್ಧಧಾತುಕೇ ವಾ ॥ ೩-೧-೩೧ ॥**

**ಆರ್ಧಧಾತುಕ ವಿವಕ್ಷಾಯಾಮಾಯಾದಯೋ ವಾ ಸ್ಯುಃ ॥**

**ವಾ ॥ (ಕಾಸ್ಯನೇಕಾಚ ಆಮ್ ವಕ್ತವ್ಯಃ)**

**ಲಿಟಿ ಆಸ್ಕಾಸೋರಾಮ್ ವಿಧಾನಾನ್ಮಸ್ಯ ನೇತ್ತ್ವಮ್ ॥**

ತ್ರಿಪದ ಸೂತ್ರ. ಆಯಃ ಆದಿಃ ಯೇಷಾಂ ತೇ ಆಯಾದಯಃ ॥ ಆಯ, ಈಯಙ್, ಣಿಙ್ ಮೂರು ಆಯಾದಿಗಳು, 'ಆರ್ಧಧಾತುಕೇ' ವಿಷಯ ಸಪ್ತಮೀ. ಆರ್ಧಧಾತುಕ ಮಾಡಬೇಕೆಂದಿರುವಾಗ ಎಂದರ್ಥ. **ಸೂತ್ರಾರ್ಥ**—ಆರ್ಧಧಾತುಕ ವಿವಕ್ಷಾ ಮಾಡಿದಾಗ ಆಯಾದಿಗಳು ವಿಕಲ್ಪವಾಗಿ ಬರುತ್ತವೆ. ಪ್ರಕೃತ ಲಿಟ್ ಆರ್ಧ ಧಾತುಕವೆಂದು ಹೇಳಿದುದರಿಂದ ಲಿಟ್ ಬರುತ್ತದೆಯೆಂದಿರುವಾಗ ಆಯವಿಕಲ್ಪವೆಂದು ತಿಳಿಯಬೇಕು. ಆಯ ಬಂದರೆ ಗೋಪಾಯ + ಲಿಟ್ ಎಂದಾಗುತ್ತದೆ. ಈಗ ವಾರ್ತಿಕಕಾರರು ಈ ಧಾತುವಿಗೆ ಆಮ್ ಪ್ರತ್ಯಯವನ್ನು ಹೇಳುತ್ತಾರೆ. **ವಾರ್ತಿಕಾರ್ಥ** —ಕಾಸ್ ಧಾತುವಿಗೂ ಅನೇಕಾಚುಳ್ಳ ಧಾತುವಿಗೂ ಲಿಟ್ ಪರವಾದಾಗ ಆಮ್ ಪ್ರತ್ಯಯ ಬರುತ್ತದೆ. ಗೋಪಾಯ ಎಂಬುದು ಅನೇಕಾಚುಳ್ಳ ಧಾತುವಾದುದರಿಂದ ಅದಕ್ಕೆ ಆಮ್ ಬಂದರೆ ಗೋಪಾಯ + ಆಮ್ + ಲಿಟ್ ಎಂದಾಗುತ್ತದೆ. ಆಮ್ ಎಂಬಲ್ಲಿ ಮಕಾರಕ್ಕೆ 'ಹಲಂತ್ಯಮ್' ಸೂತ್ರದಿಂದ ಇತ್ ಸಂಜ್ಞಾ ಬಂದು ಲೋಪ ವಾಗುವುದಿಲ್ಲವೇ ಎಂಬ ಶಂಕೆ ಬಂದರೆ ಅದಕ್ಕೆ 'ಲಿಟಿ ಆಸ್ಕಾಸೋ—' ವಾಕ್ಯದಿಂದ ಸಮಾಧಾನ ಹೇಳುತ್ತಾನೆ. ಮಕಾರಕ್ಕೆ ಇತ್ ಸಂಜ್ಞಾ ಬರುವುದಾದರೆ ಆಮ್ ಮಿತ್ತಾಯಿತು. ಮಿತ್ತಾದುದರಿಂದ 'ಮಿದಚೋಂತ್ಯಾತ್ಪರಃ' ಸೂತ್ರದಿಂದ ಅಂತ್ಯಾಚಿನ ಪರವಾಗಿ ಬರಬೇಕು. ಆಗ ಆಸ್, ಕಾಸ್, ಧಾತುಗಳಿಗೆ ಆಮ್ ಹೇಳಿದುದು ವ್ಯರ್ಥ ವಾಗುತ್ತದೆ. ಅಲ್ಲಿ ಅಂತ್ಯಾಚ್ ಆಕಾರ. ಅದರ ಪರಕ್ಕೆ ಆಕಾರ ಬಂದರೆ ಆಆಸ್ ಕಾಆಸ್ ಎಂದಾಗಿ ಸವರ್ಣದೀರ್ಘ ಬಂದು ಆಸ್ ಕಾಸ್ ಎಂದೇ ರೂಪವಾಗುತ್ತವೆ. ಆಗ ಆಮ್ ಹೇಳಿ ಪ್ರಯೋಜನವೇನು ? ಆಸ್ ಕಾಸ್‌ಗಳಿಗೆ ಆಮ್ ವಿಧಾನ ಮಾಡಿ ದುದರಿಂದಲೇ ಮಕಾರಕ್ಕೆ ಇತ್ತ್ವವಿಲ್ಲವೆಂದು ತಿಳಿಯಬೇಕು. ಆಗ ಕಾಸಾಮ್ ಎಂದು ಸಾರ್ಥಕವಾಗುತ್ತದೆ. ಗೋಪಾಯ + ಆಮ್ + ಲಿಟ್ ಎಂದಿರುವಾಗ ಆಯ ಪ್ರತ್ಯಯದ ಅಕಾರಕ್ಕೆ ಲೋಪ ಹೇಳುತ್ತಾನೆ. ಇಲ್ಲಿ ಸವರ್ಣದೀರ್ಘ ಬಂದರೂ ರೂಪ ವ್ಯತ್ಯಾಸವಾಗುವುದಿಲ್ಲ. ಆದರೆ ಇತರ ಕಡೆ ಪ್ರಯೋಜನವಿರುವುದರಿಂದ ಇಲ್ಲಿಯೂ ಪ್ರಾಪ್ತಿ ಇರುವುದರಿಂದ ಲೋಪ ಹೇಳುತ್ತಾನೆ.

ಆರ್ಧಧಾತುಕ ಪರವಾದಾಗ ಅಕಾರಕ್ಕೆ ಲೋಪ ಹೇಳುವ ಸೂತ್ರ.

**೪೭೧. ಅತೋಲೋಪಃ || ೬-೪-೪೮ ||**

**ಆರ್ಧಧಾತುಕೋಪದೇಶೇ ಯದದಂತಂ ತಸ್ಯಾತೋ ಲೋಪ ಆರ್ಧಧಾತುಕೇ ||**

ದ್ವಿಪದ ಸೂತ್ರ. 'ಆರ್ಧಧಾತುಕೇ' ಅಧಿಕಾರ. ಅದು ಆವೃತ್ತವಾಗುತ್ತದೆ. 'ಅನುದಾತ್ತೋಪದೇಶ—' ಸೂತ್ರದಿಂದ 'ಉಪದೇಶೇ' ಅನುವೃತ್ತಿ. ಒಂದು 'ಆರ್ಧಧಾತುಕೇ' ಎಂಬುದಕ್ಕೆ ಉಪದೇಶದಲ್ಲಿ ಅನ್ವಯ. ಇನ್ನೊಂದು ಪರಸಪ್ತಮೀ. ಆರ್ಧಧಾತುಕ ಪರದಲ್ಲಿರುವಾಗ ಎಂದರ್ಥ. **ಸೂತ್ರಾರ್ಥ**—ಆರ್ಧಧಾತುಕೋಪದೇಶ ಕಾಲದಲ್ಲಿ ಯಾವುದು ಅದಂತವಾಗಿದೆಯೋ ಅದರ ಅಕಾರಕ್ಕೆ ಆರ್ಧಧಾತುಕ ಪರದಲ್ಲಿರುವಾಗ ಲೋಪ. ಆಯ ಎಂಬುದು ಆರ್ಧಧಾತುಕೋಪದೇಶಕಾಲದಲ್ಲಿಯೇ ಅಕಾರಾಂತವಾಗಿದೆ. ಈಗ ಲಿಟ್ ರೂಪ ಆರ್ಧಧಾತುಕ ಪರದಲ್ಲಿರುವುದರಿಂದ ಅದಕ್ಕೆ (ಅ) ಲೋಪ. ಗೋಪಾಯ್+ಆಮ್+ಲಿಟ್. ಈಗ ಲಿಟಗೆ ಲೋಪ ಹೇಳುತ್ತಾನೆ.

ಆಮಿನ ಪರ ಲಕಾರಕ್ಕೆ ಲೋಪ ಹೇಳುವ ಸೂತ್ರ.

**೪೭೨. ಆಮಃ || ೨-೪-೮೧ ||**

**ಆಮಃ ಪರಸ್ಯ ಲುಕ್ ||**

ಏಕಪದ ಸೂತ್ರ. 'ಣ್ಯಕ್ಷತ್ರಿಯಾರ್ಷ—' ಸೂತ್ರದಿಂದ 'ಲುಕ್', 'ಮಂತ್ರೇ ಘಸ—' ಸೂತ್ರದಿಂದ 'ಲೇಃ' ಪದಗಳು ಅನುವೃತ್ತವಾಗುತ್ತವೆ. ಆಮ: ಪಂಚಮೀ. **ಸೂತ್ರಾರ್ಥ**—ಆಮಿನ ಪರದಲ್ಲಿರುವ ಲಕಾರಕ್ಕೆ ಲುಕ್ ಬರುತ್ತದೆ. ಇಲ್ಲಿ ಆಮಿನ ಪರ ಲಕಾರವೆಂದರೆ ಲಿಟ್. ಅದಕ್ಕೆ ಲುಕ್ ಬಂದರೆ ಗೋಪಾಯಾಮ್ ಎಂದಾಗುತ್ತದೆ ಇದರ ಮೇಲೆ ಲಿಟ್ ಪರವಾದ ಕೃ, ಭೂ, ಅಸ್ ಧಾತುಗಳನ್ನು ಹೇಳುತ್ತಾನೆ.

ಕೃ, ಭೂ, ಅಸ್ ಅನುಪ್ರಯೋಗ ಹೇಳುವ ಸೂತ್ರ.

**೪೭೩ ಕೃಞ್ ಚಾನುಪ್ರಯುಜ್ಯತೇ ಲಿಟಿ ೩-೧-೪೦ ||**

**ಆಮಂತಾಲ್ಲಿಟ್ ಪರಾಃ ಕೃಭ್ವಸ್ತಯೋಽನುಪ್ರಯುಜ್ಯಂತೇ | ತೇಷಾಂ ದ್ವಿತ್ವಾದಿ ||**

ಕೃಞ್, ಚ, ಅನುಪ್ರಯುಜ್ಯತೇ, ಲಿಟಿ || ನಾಲ್ಕು ಪದಗಳುಳ್ಳ ಸೂತ್ರ. 'ಕಾಸ್ಪ್ರತ್ಯಯಾತ್—' ಸೂತ್ರದಿಂದ 'ಆಮ್ ಅನುವೃತ್ತವಾಗಿ ಪಂಚಮ್ಯಂತವಾಗಿ ಪರಿಣತವಾಗುತ್ತದೆ. ಲಿಟಿ ಎಂಬುದು ಕೃಞಿನಲ್ಲಿ ಅನ್ವಯ. ಲಿಟ್ ಪರವಾದ ಕೃಞ್ ಎಂದರ್ಥ. ಕೃಞ್ ಪ್ರತ್ಯಾಹಾರ. 'ಕೃಭ್ವಸ್ತಿಯೋಗೇ' ಸೂತ್ರವನ್ನು ಆರಂಭಿಸಿ 'ಕೃಞೋ ದ್ವಿತೀಯಾ' ಸೂತ್ರದ ವರೆಗೆ ಹೇಳಿದ ಧಾತುಗಳನ್ನು ತಿಳಿಸು

ತ್ತವೆ. ಮಧ್ಯೇ ಸಂಪದ್ ಎಂದು ಒಂದು ಧಾತುವಿದ್ದರೂ ಇಲ್ಲಿ ಅನ್ವಯಿಸದಿರುವುದರಿಂದ ಅದಕ್ಕೆ ಗ್ರಹಣವಿಲ್ಲ. ಆಗ ಕೃಞ್, ಭೂ, ಅಸ್ ಈ ಮೂರು ಧಾತುಗಳು ಮಾತ್ರ ಸೇರುತ್ತವೆ. **ಸೂತ್ರಾರ್ಥ**—ಆಮ್ ಪ್ರತ್ಯಯಾಂತದ ಮೇಲೆ ಲಿಟ್ ಪರವಾದ ಕೃ, ಭೂ, ಅಸ್ ಈ ಮೂರು ಧಾತುಗಳು ಅನುಪ್ರಯೋಗ ಹೊಂದುತ್ತವೆ. ಅನುಪ್ರಯೋಗವೆಂದರೆ ಅವ್ಯವಹಿತವಾಗಿ ಸಮೀಪದಲ್ಲಿ ಉಚ್ಚರಿಸುವುದು. ಗೋಪಾಯಾಮ್ ಆಮಂತ. ಇದರ ಮೇಲೆ ಕೃಲಿಟ್, ಭೂಲಿಟ್, ಅಸ್‌ಲಿಟ್ ಬರುತ್ತವೆ. ಪ್ರಕೃತ ಗೋಪಾಯಾಮ್ + ಕೃ + ಲಿಟ್ ಎಂದಿರುವಾಗ ಲಿಡಂತವಾದುದರಿಂದ ಕೃಗೆ 'ಲಿಟಿ ಧಾತೋರನಭ್ಯಾಸಸ್ಯ' ಸೂತ್ರದಿಂದ ದ್ವಿತ್ವ. ಗೋಪಾಯಾಮ್ + ಕೃಕೃ + ಲಿಟ್. ಇಲ್ಲಿ ಅಭ್ಯಾಸಕ್ಕೆ ಅತ್ವ ಹೇಳುತ್ತಾನೆ.

ಅಭ್ಯಾಸದ ಋಕಾರಕ್ಕೆ ಅತ್ವ ಹೇಳುವ ಸೂತ್ರ.

**೪೭೪. ಉರತ್ ॥ ೭-೪-೬೬ ॥**

**ಅಭ್ಯಾಸಋವರ್ಣಸ್ಯ ಅತ್ ಪ್ರತ್ಯಯೇ । ರಪರಃ ॥ ಹಲಾದಿಃ ಶೇಷಃ ॥ ವೃದ್ಧಿಃ । ಗೋಪಾಯಾಞ್ಚಕಾರ । ದ್ವಿತ್ವಾತ್ಪರತ್ವಾದ್ಯಣಿ ಪ್ರಾಪ್ತೇ ॥**

ಉಃ, ಅತ್ ॥ ದ್ವಿಪದ ಸೂತ್ರ. 'ಅತ್ರ ಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ' ಅನುವೃತ್ತಿ. ಋಕಾರದ ಷಷ್ಠೀ ಉಃ ಎಂದಾಗುತ್ತದೆ. **ಸೂತ್ರಾರ್ಥ**—ಅಭ್ಯಾಸದ ಋಕಾರಕ್ಕೆ ಪ್ರತ್ಯಯ ಪರವಾದಾಗ ಅಕಾರಾದೇಶ ಬರುತ್ತದೆ. ಅತ್ ತಪರ ಮಾಡಿರುವುದರಿಂದ ಹ್ರಸ್ವ ಅಕಾರವೆಂದು ತಿಳಿಯಬೇಕು. ಋಕಾರದ ಸ್ಥಾನಕ್ಕೆ ಅಣ್ (ಅ, ಇ, ಉ) ಬರುವುದಾದರೆ 'ಉರಣ್ ರಪರಃ' ಸೂತ್ರವು ರಪರವಾಗಿ ಬರುತ್ತದೆಯೆಂದು ತಿಳಿಸುವುದರಿಂದ ಅ ಎಂಬುದು ರಪರವಾಗಿ ಬಂದರೆ ಕರ್‌ಕೃ + ಅ ಎಂದಾಗುತ್ತದೆ. 'ಹಲಾದಿಃ ಶೇಷಃ' ಸೂತ್ರದಿಂದ ರೇಫಕ್ಕೆ ಲೋಪ. ಕಕೃ + ಅ 'ಕುಹೋಶ್ಚುಃ' ಸೂತ್ರದಿಂದ ಅಭ್ಯಾಸಕಕಾರಕ್ಕೆ ಚಕಾರಾದೇಶ. ಚಕೃ + ಅ. 'ಅಚೋಞ್ಣಿತಿ' ಸೂತ್ರದಿಂದ ಅ ಣಿತ್ತಾದ ಪ್ರತ್ಯಯವಾದುದರಿಂದ ಅದನ್ನು ನಿಮಿತ್ತೀಕರಿಸಿ ಋಕಾರಕ್ಕೆ ವೃದ್ಧಿ (ಆರ್). ಚಕಾರ್ + ಅ. ಗೋಪಾಯಾಞ್ಚಕಾರ ಗೋಪಾಯಾಮ್ ಕೃ + ಅತುಸ್ ಎಂದಿರುವಾಗ 'ಲಿಟಿ ಧಾತೋಃ—' ಸೂತ್ರಕ್ಕಿಂತಲೂ 'ಇಕೋಯಣಚಿ' ಸೂತ್ರ ಪರವಾದುದರಿಂದ ಅದರಿಂದ ಋಕಾರಕ್ಕೆ ಯಣ್ ಪ್ರಾಪ್ತವಾದರೆ ದ್ವಿತ್ವ ವಿಷಯದಲ್ಲಿ ಆದೇಶ ನಿಷೇಧ ಹೇಳುತ್ತಾನೆ.

ದ್ವಿತ್ವ ವಿಷಯದಲ್ಲಿ ಅಚಿಗೆ ಆದೇಶ ನಿಷೇಧ ಹೇಳುವ ಸೂತ್ರ.

**೪೭೫. ದ್ವಿರ್ವಚನೇಽಚಿ ॥ ೧-೧-೫೯ ॥**

**ದ್ವಿತ್ವನಿಮಿತ್ತೇಽಚಿ ಪರೇ ಅಚ ಆದೇಶೋ ನ ದ್ವಿತ್ವೇ ಕರ್ತವ್ಯೇ ॥ ಗೋಪಾಯಾಞ್ಚಕ್ರತುಃ ।**

ದ್ವಿರ್ವಚನೇ ಚಿ || ದ್ವಿಪದ ಸೂತ್ರ. 'ಅಚಃ ಪರಸ್ಮಿನ್ ಪೂರ್ವವಿಧೌ' ಸೂ ದಿಂದ 'ಅಚಃ', ಸ್ಥಾನಿವದಾದೇಶಃ' ಸೂತ್ರದಿಂದ 'ಆದೇಶಃ', 'ನಪದಾಂತ... ಸೂತ್ರದಿಂದ 'ನ' ಪದಗಳು ಅನುವೃತ್ತವಾಗುತ್ತವೆ. 'ದ್ವಿರ್ವಚನೇ' ಎಂಬುದು ಆವೃತ್ತವಾಗುತ್ತದೆ. (೧) ದ್ವಿಃ ಉಚ್ಯತೇ ಅನೇನ ದ್ವಿರ್ವಚನಮ್ || ತಸ್ಮಿನ್ ದ್ವಿರ್ವಚನೇ || ದ್ವಿತ್ವ ನಿಮಿತ್ತವಾದುದು ಎಂದರ್ಥ. ಅಚಿ ಎಂಬಲ್ಲಿ ಅದಕ್ಕೆ ಅನ್ವಯ (೨) ದ್ವಿಃ ವಚನಂ ದ್ವಿರ್ವಚನಮ್ || ತಸ್ಮಿನ್ ದ್ವಿರ್ವಚನೇ || ದ್ವಿತ್ವ ಮಾಡುವಾಗ ಎಂದರ್ಥ. ಸೂತ್ರಾರ್ಥ—ದ್ವಿತ್ವನಿಮಿತ್ತಕವಾದ ಅಚ್ ಪರವಾದಾಗ ಪೂರ್ವ ಅಚಿಗೆ ದಿತ್ವಮಾಡುವಾಗ ಯಾವ ಆದೇಶವೂ ಬರುವುದಿಲ್ಲ. ಪ್ರಕೃತ ಅತುಸ್ ದ್ವಿತ್ವ ನಿಮಿತ್ತವಾದ ಅಚ್. ಅದು ಪರವಾದಾಗ ಕೃ ಎಂಬುದಕ್ಕೆ ದ್ವಿತ್ವ ಮಾಡಬೇಕಾಗಿರು ವುದರಿಂದ ಯಾವ ಆದೇಶವೂ ಬರುವುದಿಲ್ಲ. ದ್ವಿತ್ವವೇ ಮೊದಲು ಬರುತ್ತದೆ. ಕೃ + ಅತುಸ್. 'ಉರತ್', 'ಕುಹೋಶ್ಚುಃ' ಹಿಂದಿನಂತೇ ಬಂದರೆ ಚಕೃ + ಅತುಸ್ ಈಗ ಯಣ್ ಚಕ್ರತುಃ || ಗೋಪಾಯಾಞ್ಚಕ್ರತುಃ || ಹೀಗೆಯೇ ಮುಂದೆಯೂ ಮೊದಲು ದ್ವಿತ್ವ, ಆಮೇಲೆ ಇತರ ಕಾರ್ಯಗಳು. ಗೋಪಾಯಾಞ್ಚಕೃ + ಉಸ್ ಯಣ್. ಗೋಪಾಯಾಞ್ಚಕ್ರುಃ || ಗೋಪಾಯಾಞ್ಚಕೃ + ಥ ಎಂದಿರುವಾಗ ಥಲಿ 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ಇಡಾಗಮವು ಪ್ರಾಪ್ತವಾದರೆ ಇಣ್ನಿಷೇಧ ಹೇಳುತ್ತಾನೆ.

ಅನುದಾತ್ತ ಏಕಾಚ್ ಧಾತುಗಳಿಗೆ ಇಣ್ನಿಷೇಧ ಹೇಳುವ ಸೂತ್ರ.

**೪೭೬ ಏಕಾಚ ಉಪದೇಶೇಽನುದಾತ್ತಾತ್ || ೭-೨-೧೦ ||**

**ಉಪದೇಶೇ ಯೋ ಧಾತುರೇಕಾಜನುದಾತ್ತಶ್ಚ ತತ ಆರ್ಧಧಾತುಕ ಸ್ಯೇಣ್ನ || ಗೋಪಾಯಾಞ್ಚಕರ್ಥ | ಗೋಪಾಯಾಞ್ಚಕ್ರಥುಃ | ಗೋಪಾಯಾಞ್ಚಕ್ರ || ಗೋಪಾಯಾಞ್ಚಕಾರ, ಗೋಪಾಯಾಞ್ಚಕರ | ಗೋಪಾಯಾಞ್ಚಕೃವ | ಗೋಪಾಯಾಞ್ಚಕೃಮ || ಗೋಪಾಯಾಮ್ಬಭೂವ | ಗೋಪಾಯಾಮಾಸ ||**

ತ್ರಿಪದ ಸೂತ್ರ. 'ಸೂತ ಇದ್ಧಾತೋಃ' ಸೂತ್ರದಿಂದ 'ಧಾತೋಃ', 'ನೇಡ್ವಶಿಕೃತಿ' ಸೂತ್ರದಿಂದ 'ನೇಟ್' ಪದಗಳು ಅನುವೃತ್ತವಾಗುತ್ತವೆ. ಅರ್ಥಾನ್ವಯ ದಿಂದ 'ಆರ್ಧಧಾತುಕಸ್ಯ' ಎಂದು ಲಬ್ಧವಾಗುತ್ತದೆ. ಏಕಃ ಅಚ್ ಯಸ್ಯ ಏಕಾಚ್ ತಸ್ಮಾತ್ ಏಕಾಚಃ || ಸೂತ್ರಾರ್ಥ—ಉಪದೇಶಕಾಲದಲ್ಲಿ ಯಾವ ಧಾತುವು ಏಕಾಚಾಗಿಯೂ ಅನುದಾತ್ತವಾಗಿಯೂ ಇದೆಯೋ ಅದರ ಪರದಲ್ಲಿರುವ ಆರ್ಧಧಾತುಕಕ್ಕೆ ಇಡಾಗಮ ಬರುವುದಿಲ್ಲ. ಪ್ರಕೃತ ಕೃಞ್ ಧಾತುವು ಉಪದೇಶಕಾಲದಲ್ಲಿ ಏಕಾಚಾಗಿಯೂ ಅನುದಾತ್ತವಾಗಿಯೂ ಇರುವುದರಿಂದ ಅದರ ಪರದಲ್ಲಿರುವ ಥಲ್ ಪ್ರತ್ಯಯಕ್ಕೆ

ಇಡಾಗಮ ಬರುವುದಿಲ್ಲ. ಗೋಪಾಯಾಞ್ಚಕೃ + ಥ ಎಂದಿರುವಾಗ 'ಸಾರ್ವಧಾತು ಕಾರ್ಧಧಾತುಕಯೋಃ' ಸೂತ್ರದಿಂದ ಧಾತುವಿನ ಋಕಾರಕ್ಕೆ ಗುಣ (ಅರ್) ಗೋಪಾಯಾಞ್ಚಕರ್ಥ | ಗೋಪಾಯಾಞ್ಚಕೃ + ಅಥುಸ್. ಅಥುಸಾದಿಗಳು ಕಿತ್ತಾದುದರಿಂದ ಗುಣವಿಲ್ಲ. ಯಣ್. ಗೋಪಾಯಾಞ್ಚಕ್ರಥುಃ | ಗೋಪಾಯಾಞ್ಚಕೃ + ಅ = ಗೋಪಾಯಾಞ್ಚಕ್ರ || ಗೋಪಾಯಾಞ್ಚಕೃ + ಅ. ಇಲ್ಲಿ 'ಣಲುತ್ತಮೋವಾ' ಸೂತ್ರದಿಂದ ಣಲ್ ವಿಕಲ್ಪ ಣಿತ್ತಾಗುವುದರಿಂದ, ಣಿತ್ತಾದರೆ, ವೃದ್ಧಿ (ಆರ್). ಣಿತ್ತಾಗದಿದ್ದರೆ, (ಅರ್) ಗೋಪಾಯಾಞ್ಚಕಾರ, ಗೋಪಾಯಾಞ್ಚಕರ || ಗೋಪಾಯಾಞ್ಚಕೃ + ವ, ಗೋಪಾಯಾಞ್ಚಕೃವ || ಗೋಪಾಯಾಞ್ಚಕೃಮ || ಇಲ್ಲಿ ವ, ಮಗಳಿಗೆ 'ಏಕಾಚ ಉಪದೇಶೇನುದಾತ್ತಾತ್' ಸೂತ್ರದಿಂದ ಇಣ್ನಿಷೇಧ. ಅನುದಾತ್ತವಾದ ಏಕಾಚಾದ ಧಾತು ಕೃಞ್ ಎಂದು ಹಿಂದೆ ಹೇಳಿದೆ. ಅನುದಾತ್ತವನ್ನು ಧಾತುಗಳಲ್ಲಿ ನಾವು ತಿಳಿಯುವುದು ಹೇಗೆ? ಅನುನಾಸಿಕಾದಿಗಳು ಉಪದೇಶಗಮ್ಯವೆಂದು ಹಿಂದೆ ಹೇಳಿದೆ. ಧಾತುಗಳಲ್ಲಿ ಅನುದಾತ್ತವನ್ನೂ ಹಾಗೇ ತಿಳಿಯಬೇಕೆಂದು ತಿಳಿಯುವ ರೀತಿಯನ್ನು ಸುಲಭ ರೀತಿಯಿಂದ ತಿಳಿಸುತ್ತಾನೆ.

**ಊದೃದಂತೈರ್ಯೌತಿ ರುಕ್ಷ್ಣು ಶೀಙ್ ಸ್ನು ನು ಕ್ಷು ಶ್ವಿ ಡೀಙ್ ಶ್ರಿಭಿಃ |**
**ವೃಙ್ ವೃಞ್ ಭ್ಯಾಂ ಚ ವಿನೈಕಾಚೋಽಜಂತೇಷು ನಿಹತಾಃ ಸ್ಮೃತಾಃ ||**

ಇದು ಅಜಂತಧಾತುಗಳಲ್ಲಿ ಅನುದಾತ್ತವನ್ನು ತಿಳಿಸುತ್ತದೆ. ಈ ಶ್ಲೋಕದಲ್ಲಿ ಹೇಳಿದ ಧಾತುಗಳನ್ನು ಬಿಟ್ಟರೆ ಉಳಿದ ಏಕಾಚಾದ ಅಜಂತಧಾತುಗಳೆಲ್ಲಾ ಅನುದಾತ್ತವೆಂದು ತಿಳಿಯಬೇಕು. ಅವುಗಳಿಗೆ ಬಂದ ವಲಾದಿ ಆರ್ಧಧಾತುಕಗಳಿಗೆ ಇಡಾಗಮ ಬರುವುದಿಲ್ಲ. ಇಲ್ಲಿ ಹೇಳಿದವುಗಳು ಉದಾತ್ತಗಳು. ಇವುಗಳ ಪರದಲ್ಲಿರುವ ವಲಾದಿ ಆರ್ಧಧಾತುಕಕ್ಕೆ ಇಡಾಗಮ ಬರುತ್ತದೆ. 'ಏಕಾಚ ಉಪದೇಶೇ—' ಸೂತ್ರದಿಂದ ನಿಷೇಧವಿಲ್ಲ. **ಅರ್ಥ**—ಊಕಾರಾಂತ, ಋೂಕಾರಾಂತ ಧಾತುಗಳು, ಯು, ರು, ಕ್ಷ್ಣು ಶೀಙ್, ಸ್ನು, ನು, ಕ್ಷು, ಶ್ವಿ, ಡೀಙ್, ಶ್ರಿಞ್ ಧಾತುಗಳು, ವೃಙ್, ವೃಞ್ ಧಾತುಗಳು ಉದಾತ್ತಗಳು. ಇವುಗಳನ್ನು ಬಿಟ್ಟು ಉಳಿದ ಅಜಂತವಾದ ಏಕಾಚ್ ಧಾತುಗಳು ಅನುದಾತ್ತ ಧಾತುಗಳು.

ಕಾಂತೇಷು—ಶಕ್ಲೇಕಃ || ಚಾಂತೇಷು—ಪಚ್, ಮುಚ್, ರಿಚ್, ವಚ್, ವಿಚ್, ಸಿಚಃ, ಷಟ್ || ಛಾಂತೇಷು – ಪ್ರಚ್ಛೇಕಃ || ಜಾಂತೇಷು—ತ್ಯಜ್, ನಿಜಿರ್, ಭಜ್, ಭಞ್ಜ್, ಭುಜ್, ಭ್ರಸ್ಜ್, ಮಸ್ಜ್, ಯಜ್, ಯುಜ್, ರುಜ್, ರಂಜ್, ವಿಜಿರ್, ಸ್ವಞ್ಜ್, ಸಞ್ಜ್, ಸೃಜಃ ಪಂಚದಶ || ದಾಂತೇಷು— ಅದ್, ಕ್ಷುದ್, ಖಿದ್, ಛಿದ್, ತುದ್, ನುದ್, ಪದ್ಯ, ಭಿದ್, ವಿದ್ಯತಿ, ವಿನದ್, ವಿಂದ್, ಶದ್, ಸದ್, ಸ್ವಿದ್ಯ, ಸ್ಕನ್ದ್, ಹದಃ ಷೋಡಶ || ಧಾಂತೇಷು — ಕ್ರುಧ್, ಕ್ಷುಧ್, ಬುಧ್ಯ, ಬಂಧ್, ಯುಧ್, ರುಧ್, ರಾಧ್, ವ್ಯಧ್, ಸಾಧ್, ಶುಧ್, ಸಿಧ್ಯ ಏಕಾದಶ ||

ನಾಂತೇಷು – ಮನ್ಯ, ಹನೀ ದ್ವೌ || ಪಾಂತೇಷು – ಆಪ್, ಛುಪ್, ಕ್ಷಿಪ್, ತಪ್, ತಿಪ್, ತೃಪ್ಯ, ದೃಪ್ಯ, ಲಿಪ್, ಲುಪ್, ವಪ್, ಶಪ್, ಸ್ವಪ್, ಸೃಪಸ್ತ್ರಯೋದಶ || ಭಾಂತೇಷು – ಯಭ್, ರಭ್, ಲಭಸ್ತ್ರಯಃ || ಮಾಂತೇಷು – ಗಮ್, ನಮ್, ಯಮ್, ರಮುಶ್ಚತ್ವಾರಃ || ಶಾಂತೇಷು – ಕ್ರುಶ್, ದಂಶ್, ದಿಶ್, ದೃಶ್, ಮೃಶ್, ರಿಶ್, ರುಶ್, ಲಿಶ್, ವಿಶ್, ಸ್ಪೃಶೋದಶ || ಷಾಂತೇಷು – ಕೃಷ್, ತ್ವಿಷ್, ತುಷ್, ದ್ವಿಷ್, ದುಷ್, ಪುಷ್ಯ, ಪಿಷ್, ವಿಷ್, ಶಿಷ್, ಶುಷ್, ಶ್ಲಿಷ್ಯಾ ಏಕಾದಶ || ಸಾಂತೇಷು – ಘಸ್, ವಸತೀ ದ್ವೌ | ಹಾಂತೇಷು – ದಹ್, ದಿಹ್, ದುಹ್, ನಹ್, ಮಿಹ್, ರುಹ್, ಲಿಹ್, ವಹೋಷ್ಟೌ || ಅನುದಾತ್ತಾ ಹಲಂತೇಷು ಧಾತವಸ್ತ್ರಧಿಕಂ ಶತಮ್ ||

ಹಲಂತ ಧಾತುಗಳಲ್ಲಿ ಇಣ್ನಿಷೇಧವನ್ನು ಹೊಂದುವ ಏಕಾಚಾದ, ಅನುದಾತ್ತವಾದ ಧಾತುಗಳನ್ನು ಹೇಳುತ್ತಾನೆ. ಇಲ್ಲಿ ಹೇಳಿರುವ ಧಾತುಗಳು ಅನುದಾತ್ತಗಳು. ಇವುಗಳನ್ನು ಬಿಟ್ಟು ಉಳಿದ ಧಾತುಗಳು ಉದಾತ್ತಗಳೆಂದು ತಿಳಿಯಬೇಕು. ಅಜಂತದಲ್ಲಿ ಇದಕ್ಕೆ ವಿರುದ್ಧವಾಗಿದೆ. ಅಲ್ಲಿ ಹೇಳಿದವುಗಳು ಉದಾತ್ತಗಳು. ಉಳಿದವುಗಳು ಅನುದಾತ್ತಗಳು. ಇಲ್ಲಿ ಕಕಾರಾದಿ ಕ್ರಮಗಳಿಂದ ಹೇಳಿರುತ್ತಾನೆ. ಹೀಗೆ ೧೦೩ ಧಾತುಗಳು ಅನುದಾತ್ತವಾಗಿವೆ. ಇವುಗಳಿಗೆ ಇಣ್ನಿಷೇಧ ಬರುತ್ತದೆ. ಪ್ರಕೃತ ಕೃಞ್ ಧಾತುವು ಅಜಂತವಾಗಿದೆ. ಅಜಂತದಲ್ಲಿ ಋದಂತ ಉದಾತ್ತ. ಋದಂತ ಉದಾತ್ತವಲ್ಲ. ಆದುದರಿಂದ ಇಣ್ನಿಷೇಧ ಬಂದಿದೆ.

ಹೀಗೆ ಗೋಪಾಯಾಮ್ ಎಂಬುದರ ಮೇಲೆ ಕೃಞ್ ಬಂದಾಗ ರೂಪವನ್ನು ತೋರಿಸಿದುದಾಯಿತು. ಇನ್ನು ಲಿಟ್ ಪರವಾದ ಭೂ, ಅಸ್ ಬಂದಾಗ ರೂಪವನ್ನು ತೋರಿಸುತ್ತಾನೆ. ಬಭೂವ ಎಂಬುದು ಲಿಟನಲ್ಲಿ ಭೂ ಧಾತುವಿನ ರೂಪ. ಅದನ್ನು ಸೇರಿಸಿದರೆ ಪ್ರಕೃತರೂಪವಾಗುತ್ತದೆ.

ಗೋಪಾಯಾಮ್ಬಭೂವ | ಗೋಪಾಯಾಮ್ಬಭೂವತುಃ | ಗೋಪಾಯಾಮ್ಬಭೂವುಃ || ಗೋಪಾಯಾಮ್ಬಭೂವಿಥ | ಗೋಪಾಯಾಮ್ಬಭೂವಥುಃ | ಗೋಪಾಯಾಮ್ಬಭೂವ || ಗೋಪಾಯಾಮ್ಬಭೂವ | ಗೋಪಾಯಾಮ್ಬಭೂವಿವ | ಗೋಪಾಯಾಮ್ಬಭೂವಿಮ ||

ಭೂ ಧಾತು ಅಜಂತ. ಇದು ಊದಂತವಾದುದರಿಂದ ಉದಾತ್ತ. ಸೇಟ್. ಇಣ್ನಿಷೇಧವಿಲ್ಲ. ಹಾಗೆಯೇ ಸಾಂತದಲ್ಲಿ ಅಸ್ ಧಾತು ಸೇರದಿರುವುದರಿಂದ ಅದು ಉದಾತ್ತ. ಇಣ್ನಿಷೇಧವಿಲ್ಲ.

ಗೋಪಾಯಾಮಾಸ | ಗೋಪಾಯಾಮಾಸತುಃ | ಗೋಪಾಯಾಮಾಸುಃ || ಗೋಪಾಯಾಮಾಸಿಥ | ಗೋಪಾಯಾಮಾಸಥುಃ | ಗೋಪಾಯಾಮಾಸ || ಗೋಪಾಯಾಮಾಸ | ಗೋಪಾಯಾಮಾಸಿವ | ಗೋಪಾಯಾಮಾಸಿಮ ||

ಆರ್ಧಧಾತುಕದಲ್ಲಿ ಗುಪ್ ಧಾತುವಿಗೆ ಆಯಾದೇಶ ವಿಕಲ್ಪವಾದುದರಿಂದ ಅದು ಬಂದಾಗ ಆಮ್ ಬಂದು ಮೂರು ರೂಪಗಳಾದುವು. ಅದು ಬಾರದಿದ್ದರೆ ಗುಪ್ ಮಾತ್ರ ಉಳಿಯುವುದರಿಂದ ಅದು ಅನೇಕಾಚ್ ಆಗುವುದಿಲ್ಲ. ಆಗ ಆಮ್ ಬರುವುದಿಲ್ಲ. ಕೇವಲ ಗುಪ್ ಧಾತುವಿಗೆ ಮಾತ್ರ ದ್ವಿತ್ವಾದಿ.

**ಜುಗೋಪ । ಜುಗುಪತುಃ । ಜುಗುಪುಃ ॥**

'ಲಿಟಿಧಾತೋರನಭ್ಯಾಸಸ್ಯ' ಸೂತ್ರದಿಂದ ದ್ವಿತ್ವ. ಗುಪ್‌ಗುಪ್+ಅ. 'ಹಲಾದಿಃ ಶೇಷಃ' ಗುಗುಪ್+ಅ. 'ಕುಹೋಶ್ಚುಃ' ಸೂತ್ರದಿಂದ ಗಕಾರಕ್ಕೆ ಜಕಾರಾದೇಶ. ಜುಗುಪ್+ಅ. 'ಪುಗಂತಲಘೂಪಧಸ್ಯಚ' ಸೂತ್ರದಿಂದ ಲಘೂಪಧಗುಣ. ಜುಗೋಪ. ದ್ವಿವಚನ ಬಹುವಚನಗಳಲ್ಲಿ 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ ಲಿಟ್ ಕಿತ್ತಾಗುವುದರಿಂದ ಗುಣವಿಲ್ಲ. ಜುಗುಪ್+ಅತುಸ್=ಜುಗುಪತುಃ ॥ ಜುಗುಪ್+ಉಸ್=ಜುಗುಪುಃ ॥ ಗುಪ್ ಅನುದಾತ್ತವಲ್ಲ. ಆದುದರಿಂದ ಇಣ್ನಿಷೇಧವಿಲ್ಲ. ವಲಾದಿ ಆರ್ಧಧಾತುಕಗಳಿಗೆ ನಿತ್ಯವಾಗಿ ಇಡಾಗಮ ಪ್ರಾಪ್ತವಾದರೆ ವಿಕಲ್ಪ ಹೇಳುತ್ತಾನೆ.

ವಲಾದಿ ಆರ್ಧಧಾತುಕಕ್ಕೆ ಇಡಾಗಮ ವಿಕಲ್ಪ ಹೇಳುವ ಸೂತ್ರ.

**೪೭೭. ಸ್ವರತಿಸೂತಿಸೂಯತಿಧೂಞೂದಿತೋ ವಾ ॥ ೭-೨-೪೪ ॥**

**ಸ್ವರತ್ಯಾದೇರೂದಿತಶ್ಚ ಪರಸ್ಯ ವಲಾದೇರಾರ್ಧಧಾತುಕಸ್ಯೇಡ್ ವಾ ಸ್ಯಾತ್ ॥ ಜುಗೋಪಿಥ, ಜುಗೋಪ್ಥ ॥ ಗೋಪಾಯಿತಾ ಗೋಪಿತಾ, ಗೋಪ್ತಾ ॥ ಗೋಪಾಯಿಷ್ಯತಿ, ಗೋಪಿಷ್ಯತಿ, ಗೋಪ್ಸ್ಯತಿ ॥ ಗೋಪಾಯತು ॥ ಅಗೋಪಾಯತ್ ॥ ಗೋಪಾಯೇತ್ ॥ ಗೋಪಾಯ್ಯಾತ್, ಗುಪ್ಯಾತ್ ॥ ಅಗೋಪಾಯೀತ್ ॥**

ದ್ವಿಪದ ಸೂತ್ರ, ಸ್ವರತಿಶ್ಚ, ಸೂತಿಶ್ಚ, ಸೂಯತಿಶ್ಚ, ಧೂಞ್‌ಚ, ಊದಿತ್‌ಚ ತೇಷಾಂ ಸಮಾಹಾರಃ ಸ್ವರತಿಸೂತಿಸೂಯತಿಧೂಞೂದಿತ್ । ತಸ್ಮಾತ್ । ಸಮಾಹಾರ ದ್ವಂದ್ವದಮೇಲೆ ಪಂಚಮ್ಯೇಕವಚನ. ಸ್ವೃ=ಲುಗ್ವಿಕರಣ, ಶ್ಯನ್‌ವಿಕರಣ ಸೂಧಾತುಗಳಿಗೆ ಶ್ತಿಪ್‌ನಿಂದ ನಿರ್ದೇಶ. 'ಆರ್ಧಧಾತುಕಸ್ಯ ಇಟ್ ವಲಾದೇಃ' ಅನುವೃತ್ತಿ. **ಸೂತ್ರಾರ್ಥ**—ಸ್ವೃ ಧಾತುವಿನ, ಅದಾದಿ ದಿವಾದಿ ಪಠಿತವಾದ ಸೂ ಧಾತುವಿನ, ಊಕಾರ ಇತ್ತಾದ ಧಾತುವಿನ, ಪರದಲ್ಲಿರುವ ವಲಾದಿ ಆರ್ಧಧಾತುಕಕ್ಕೆ ಇಡಾಗಮ ವಿಕಲ್ಪವಾಗಿ ಬರುತ್ತದೆ. ಗುಪ್ ಧಾತುವು ಊದಿತ್ತಾದುದರಿಂದ ಪ್ರಕೃತ ಅದರ ಪರದಲ್ಲಿರುವ ವಲಾದಿಯಾದ ಥಲಿಗೆ ಇಡಾಗಮ ವಿಕಲ್ಪವಾಗಿ ಬಂದರೆ ಜುಗೋಪಿಥ. ಇಡಾಗಮ ಬಾರದಿದ್ದರೆ ಹಾಗೇ ಸೇರಿಸಬೇಕು. ಜುಗೋಪ್+ಥ=ಜುಗೋಪ್ಥ ॥

ಜುಗುಪಥುಃ–ಜುಗುಪು|| ಜುಗೋಪ-ಜುಗುಪಿವ|| ಇಡಾಗಮ ಬಾರದಿದ್ದರೆ ಜುಗುಪ್ವ. ಬಹುವಚನದಲ್ಲಿಯೂ ಹೀಗೇ ಎರಡು ರೂಪ. ಜುಗುಪಿಮ-ಜುಗುಪ್ಮ||

ಲುಟಿನಲ್ಲಿ ತಿಬಾದಿಗಳಿಗೆ ಡಾ, ರೌ, ರಸ್ ಆದೇಶ. ತಾಸ್ ವಿಕರಣ. ತಾಸ್ ವಲಾದಿ ಆರ್ಧಧಾತುಕವಾದುದರಿಂದ 'ಆಯಾದಯ ಆರ್ಧಧಾತುಕೇ ವಾ' ಸೂತ್ರದಿಂದ ಆಯ ಪ್ರತ್ಯಯ ವಿಕಲ್ಪ. ಆಯ ಪ್ರತ್ಯಯ ಬರದರೆ ಗುಪ್ ಆಯ ಬಂದಾಗ 'ಪುಗಂತಲ—' ಸೂತ್ರದಿಂದ ಲಘೂಪಧ ಗುಣ. ಗೋಪಾಯ. ತಾಸಿಗೆ ಇಡಾಗಮ. ಗೋಪಾಯ + ಇತಾ ಎಂದಿರುವಾಗ 'ಅತೋ ಲೋಪಃ' ಸೂತ್ರದಿಂದ ಆಯ ಪ್ರತ್ಯಯದ ಅಕಾರಕ್ಕೆ ಲೋಪ. ಗೋಪಾಯಿತಾಸ್ ಅಂಗ. ಸಕಾರಾದಿ, ರೇಫಾದಿ, ಥಕಾರಾದಿ ಪ್ರತ್ಯಯ ಪರವಾದಾಗ ತಾಸಿನ ಸಕಾರಕ್ಕೆ ಲೋಪ.

ಗೋಪಾಯಿತಾ | ಗೋಪಾಯಿತಾರೌ | ಗೋಪಾಯಿತಾರಃ|| ಗೋಪಾಯಿತಾಸಿ | ಗೋಪಾಯಿತಾಸ್ಥಃ | ಗೋಪಾಯಿತಾಸ್ಥ|| ಗೋಪಾಯಿತಾಸ್ಮಿ | ಗೋಪಾಯಿತಾಸ್ವಃ | ಗೋಪಾಯಿತಾಸ್ಮಃ ||

ಆಯ ಪ್ರತ್ಯಯ ಬಾರದಿದ್ದರೆ ತಾಸ್ ವಿಕರಣ ಬಂದಾಗ ಗುಪಿನ ಲಘೂಪಧಕ್ಕೆ ಗುಣ. 'ಸ್ವರತಿಸೂತಿ—' ಸೂತ್ರದಿಂದ ತಾಸಿಗೆ ಇಡ್ವಿಕಲ್ಪ. ಇಡಾಗಮ ಬಂದರೆ,

ಗೋಪಿತಾ | ಗೋಪಿತಾರೌ | ಗೋಪಿತಾರಃ || ಗೋಪಿತಾಸಿ | ಗೋಪಿತಾಸ್ಥಃ | ಗೋಪಿತಾಸ್ಥ || ಗೋಪಿತಾಸ್ಮಿ | ಗೋಪಿತಾಸ್ವಃ ಗೋಪಿತಾಸ್ಮಃ ||

ಇಡಾಗಮ ಬಾರದಿದ್ದರೆ ಲಘೂಪಧ ಗುಣ ಮಾತ್ರ. ಗೋಪ್ತಾ | ಗೋಪ್ತಾರೌ | ಗೋಪ್ತಾರಃ || ಗೋಪ್ತಾಸಿ | ಗೋಪ್ತಾಸ್ಥಃ | ಗೋಪ್ತಾಸ್ಥ || ಗೋಪ್ತಾಸ್ಮಿ || ಗೋಪ್ತಾಸ್ವಃ | ಗೋಪ್ತಾಸ್ಮಃ ||

ಲೃಟ್ || ಆಯ ಪ್ರತ್ಯಯ ಬಂದರೆ ಗುಣ ಬಂದು ಗೋಪಾಯ ಧಾತುವಾಗುತ್ತದೆ. ಸ್ಯ ವಿಕರಣ. ಅದಕ್ಕೆ ಇಡಾಗಮ. 'ಅತೋ ಲೋಪಃ' ಸೂತ್ರದಿಂದ ಆಯದ ಅಕಾರಕ್ಕೆ ಲೋಪ. ಇಣಿನ ಪರದಲ್ಲಿರುವುದರಿಂದ ಸ್ಯ ಪ್ರತ್ಯಯದ ಸಕಾರಕ್ಕೆ ಷತ್ವ.

ಗೋಪಾಯಿಷ್ಯತಿ | ಗೋಪಾಯಿಷ್ಯತಃ | ಗೋಪಾಯಿಷ್ಯಂತಿ || ಗೋಪಾಯಿಷ್ಯಸಿ | ಗೋಪಾಯಿಷ್ಯಥಃ | ಗೋಪಾಯಿಷ್ಯಥ || ಗೋಪಾಯಿಷ್ಯಾಮಿ | ಗೋಪಾಯಿಷ್ಯಾವಃ | ಗೋಪಾಯಿಷ್ಯಾಮಃ ||

ಆಯ ಪ್ರತ್ಯಯ ಬಾರದಿದ್ದರೆ ಸ್ಯ ವಿಕರಣಕ್ಕೆ ಇಡಾಗಮ, ಷತ್ವ. ಲಘೂಪಧ ಗುಣ. ಗೋಪಿಷ್ಯ ಅಂಗವಾಗುತ್ತದೆ. ಗೋಪಿಷ್ಯತಿ ಇತ್ಯಾದಿ. 'ಸ್ವರತಿಸೂತಿ—' ಸೂತ್ರದಿಂದ ಇಡಾಗಮ ವಿಕಲ್ಪವೆಂದುದರಿಂದ ಇಡಾಗಮ ಬಾರದಿದ್ದರೆ ಲಘೂಪಧ ಗುಣ; ಷತ್ವ ನಿಮಿತ್ತವಿಲ್ಲದುದರಿಂದ ಬರುವುದಿಲ್ಲ. ಗೋಪ್ಸ್ಯ ಅಂಗ. ಗೋಪ್ಸ್ಯತಿ–ಗೋಪ್ಸ್ಯತಃ || ಇತ್ಯಾದಿ.

**ಲೋಟ್** || ಆಯ ಪ್ರತ್ಯಯ ಬಂದಾಗ ಲಘೂಪಧಗುಣ. ಗೋಪಾಯ. ಶಪ್ ವಿಕರಣ. 'ಅತೋ ಗುಣೇ' ಸೂತ್ರದಿಂದ ಪರರೂಪ. 'ಏರುಃ' ಸೂತ್ರದಿಂದ ಪ್ರತ್ಯಯದ ಇಕಾರಕ್ಕೆ ಉಕಾರಾದೇಶ.

ಗೋಪಾಯತು, ಗೋಪಾಯತಾತ್ | ಗೋಪಾಯತಾಮ್ | ಗೋಪಾಯಂತು || ಗೋಪಾಯ, ಗೋಪಾಯತಾತ್ | ಗೋಪಾಯತಮ್ | ಗೋಪಾಯತ | ಗೋಪಾಯಾನಿ | ಗೋಪಾಯಾವ | ಗೋಪಾಯಾಮ ||

**ಲಙ್** || 'ಲುಙ್‌ಲಙ್‌ಲೃಙ್‌ಕ್ಷ್ವಡುದಾತ್ತಃ' ಸೂತ್ರದಿಂದ ಅಂಗಕ್ಕೆ ಅಡಾಗಮ ಅಗೋಪಾಯ ಅಂಗ.

ಅಗೋಪಾಯತ್ | ಅಗೋಪಾಯತಾಮ್ | ಅಗೋಪಾಯನ್ || ಅಗೋಪಾಯಃ | ಅಗೋಪಾಯತಮ್ | ಅಗೋಪಾಯತ || ಅಗೋಪಾಯಮ್ | ಅಗೋಪಾಯಾವ | ಅಗೋಪಾಯಾಮ ||

**ವಿಧಿಲಿಙ್** || ಗೋಪಾಯ ಅಂಗ. ಯಾಸುಟಗೆ ಅದಂತದ ಪರದಲ್ಲಿರುವುದರಿಂದ ಇಯಾದೇಶ. ವಲಾದಿ ಪ್ರತ್ಯಯ ಪರವಾದಾಗ ಇಯ್ ನ ಯಕಾರಕ್ಕೆ ಲೋಪ. ಇತರ ಸ್ಥಳದಲ್ಲಿ ಯ ಇರುತ್ತದೆ.

ಗೋಪಾಯೇತ್ | ಗೋಪಾಯೇತಾಮ್ | ಗೋಪಾಯೇಯುಃ || ಗೋಪಾಯೇಃ | ಗೋಪಾಯೇತಮ್ | ಗೋಪಾಯೇತ || ಗೋಪಾಯೇಯಮ್ | ಗೋಪಾಯೇವ | ಗೋಪಾಯೇಮ ||

**ಆಶೀರ್ಲಿಙ್** || ಆರ್ಧಧಾತುಕವಾದುದರಿಂದ ಆಯ ಪ್ರತ್ಯಯ ವಿಕಲ್ಪ. ಬಂದರೆ ಗೋಪಾಯ + ಯಾಸ್ ತ್ ಎಂದಿರುವಾಗ 'ಅತೋ ಲೋಪಃ' ಸೂತ್ರದಿಂದ ಆಯದ ಅಕಾರಕ್ಕೆ ಲೋಪ. 'ಸ್ಕೋಃ ಸಂಯೋಗಾದ್ಯೋರಂತೇ ಚ' ಸೂತ್ರದಿಂದ ಸಕಾರಲೋಪ.

ಗೋಪಾಯ್ಯಾತ್ | ಗೋಪಾಯ್ಯಾಸ್ತಾಮ್ | ಗೋಪಾಯ್ಯಾಸುಃ || ಗೋಪಾಯ್ಯಾಃ | ಗೋಪಾಯ್ಯಾಸ್ತಮ್ | ಗೋಪಾಯ್ಯಾಸ್ತ || ಗೋಪಾಯ್ಯಾಸಮ್ | ಗೋಪಾಯ್ಯಾಸ್ವ | ಗೋಪಾಯ್ಯಾಸ್ಮ ||

ಆಯಾದೇಶ ಬಾರದಿದ್ದರೆ ಯಾಸುಟ್ ಆಶೀರ್ಲಿಙಿನಲ್ಲಿ ಕಿತ್ತಾದುದರಿಂದ ಗುಪಿನ ಲಘೂಪಧಕ್ಕೆ ಗುಣವಿಲ್ಲ. ಗುಪ್ಯಾತ್ ಇತ್ಯಾದಿ.

**ಲುಙ್** || ಸಿಚ್ ವಿಕರಣ. ಇದು ಆರ್ಧಧಾತುಕವಾದುದರಿಂದ ಆಯ ಪ್ರತ್ಯಯ ವಿಕಲ್ಪ. ಆಯ ಬಂದರೆ ಲಘೂಪಧಗುಣ. ಗೋಪಾಯ ಧಾತುವಾಗುತ್ತದೆ. ಸಿಚಿಗೆ ಇಡಾಗಮ. ಅಂಗಕ್ಕೆ ಅಡಾಗಮ. 'ಅಸ್ತಿಸಿಚೋಽಪೃಕ್ತೇ' ಸೂತ್ರದಿಂದ ಅಪೃಕ್ತವಾದ ತ್ ಪ್ರತ್ಯಯಕ್ಕೆ ಈಡಾಗಮ. ಅಗೋಪಾಯ ಇಸ್ ಈತ್ ಎಂದಿರುವಾಗ

'ಅತೋ ಲೋಪಃ' ಸೂತ್ರದಿಂದ ಆಯದ ಅಕಾರಕ್ಕೆ ಲೋಪ. 'ಇಟ ಈಟಿ' ಸೂತ್ರದಿಂದ ಸಿಚಿಗೆ ಲೋಪ. ॥ ಅಗೋಪಾಯೀತ್ ಎಂದಾಗುತ್ತದೆ. ಅಗೋಪಾಯಿಷ್ ಅಂಗ. ಇದಕ್ಕೆ ಪ್ರತ್ಯಯ ಸೇರಿಸಬೇಕು.

ಅಗೋಪಾಯೀತ್ । ಅಗೋಪಾಯಿಷ್ಟಾಮ್ । ಅಗೋಪಾಯಿಷುಃ ॥
ಅಗೋಪಾಯೀಃ । ಅಗೋಪಾಯಿಷ್ಟಮ್ । ಅಗೋಪಾಯಿಷ್ಟ ॥
ಅಗೋಪಾಯಿಷಮ್ । ಅಗೋಪಾಯಿಷ್ವ । ಅಗೋಪಾಯಿಷ್ಮ ॥

ಆಯಾದೇಶ ಬಾರದಿದ್ದರೆ ಸಿಚಿಗೆ ಇಡಾಗಮ. ಅಂಗಕ್ಕೆ ಅಡಾಗಮ. ಅಪೃಕ್ತಕ್ಕೆ ಈಟ್. ಅಗುಪ್ ಇಸ್ ಈತ್ ಎಂದಿರುವಾಗ 'ಇಟ ಈಟಿ' ಸೂತ್ರದಿಂದ ಸಿಚಿಗೆ ಲೋಪ. ಗುಪ್ ಧಾತು ಹಲಂತವಾದ್ದುದರಿಂದ 'ವದವ್ರಜಹಲಂತಸ್ಯಾಚಃ' ಸೂತ್ರದಿಂದ ಗುಪಿನ ಉಕಾರಕ್ಕೆ ವೃದ್ಧಿ ಪ್ರಾಪ್ತವಾದರೆ ಅದಕ್ಕೆ ನಿಷೇಧ ಹೇಳುತ್ತಾನೆ.

ಹಲಂತ ಧಾತುವಿಗೆ ವೃದ್ಧಿ ನಿಷೇಧ ಹೇಳುವ ಸೂತ್ರ.

೪೭೮ ನೇಟಿ ೭-೨-೪ ॥

**ಇಡಾದೌ ಸಿಚಿ ಹಲಂತಸ್ಯ ವೃದ್ಧಿರ್ನ ॥ ಅಗೋಪೀತ್, ಅಗೌಪ್ಸೀತ್ ॥**

ನ, ಇಟಿ ॥ ದ್ವಿಪದ ಸೂತ್ರ. 'ಸಿಚಿವೃದ್ಧಿಃ ಪರಸ್ಮೈಪದೇಷು' ಸೂತ್ರದಿಂದ ಸಿಚಿ, ವೃದ್ಧಿಃ, 'ವದವ್ರಜಹಲಂತಸ್ಯಾಚಃ' ಸೂತ್ರದಿಂದ 'ಹಲಂತಸ್ಯಾಚಃ' ಅನುವೃತ್ತಿ. 'ಇಟಿ' ಸಪ್ತಮ್ಯಂತವು 'ಸಿಚಿ' ಸಪ್ತಮ್ಯಂತಕ್ಕೆ ವಿಶೇಷಣವಾದುದರಿಂದ 'ಯಸ್ಮಿನ್ ವಿಧಿಸ್ತದಾದಾವಲ್ಗ್ರಹಣೇ' ಪರಿಭಾಷೆಯಿಂದ ಇಡಾದಿ ಸಿಚ್ ಪರವಾದಾಗ ಎಂದರ್ಥವಾಗುತ್ತದೆ. **ಸೂತ್ರಾರ್ಥ**— ಇಡಾದಿಯಾದ ಸಿಚ್ ಪರವಾದಾಗ ಹಲಂತಕ್ಕೆ ವೃದ್ಧಿ ಬರುವುದಿಲ್ಲ. ಪ್ರಕೃತ ಇಡಾದಿ ಸಿಚ್ ಪರವಾದುದರಿಂದ ವೃದ್ಧಿ ಬರುವುದಿಲ್ಲ. 'ಪುಗಂತ' ಸೂತ್ರದಿಂದ ಲಘೂಪಧಗುಣ.

ಅಗೋಪೀತ್ । ಅಗೋಪಿಷ್ಟಾಮ್ । ಅಗೋಪಿಷುಃ ॥ ಅಗೋಪೀಃ । ಅಗೋಪಿಷ್ಟಮ್ । ಅಗೋಪಿಷ್ಟ ॥ ಅಗೋಪಿಷಮ್ । ಅಗೋಪಿಷ್ವ । ಅಗೋಪಿಷ್ಮ ॥

'ಸ್ವರತಿಸೂತಿ—' ಸೂತ್ರದಿಂದ ಊದಿತ್ತಾದ ಗುಪಿನ ಪರವಾದ ವಲಾದ್ಯಾರ್ಧಧಾತುಕಕ್ಕೆ ಇಡಾಗಮ ವಿಕಲ್ಪವೆಂದುದರಿಂದ ಇಡಾಗಮ ಬಂದಾಗ ಅಗೋಪೀತ್ ರೂಪವಾಯಿತು. ಇಡಾಗಮ ಬಾರದಿದ್ದರೆ ಸಿಚ್. ಅಪೃಕ್ತಕ್ಕೆ ಈಡಾಗಮ. ಇಡಾದಿ ಸಿಚ್ ಪರವಾದಾಗ ವೃದ್ಧಿ ನಿಷೇಧಮಾಡಿರುವುದರಿಂದ ಇಟ್ ಬಾರದಿರುವಾಗ ವೃದ್ಧಿ ಬರುತ್ತದೆ. ಅಗೌಪ್ಸೀತ್. ದ್ವಿವಚನದಲ್ಲಿ ತಸಿಗೆ ತಾಮಾದೇಶ ಬಂದಾಗ ಅಗೌಪ್ ಸ್ ತಾಮ್ ಎಂದಿರುವಾಗ ಸಿಚಿಗೆ ಲೋಪ ಹೇಳುತ್ತಾನೆ.

ಸಿಚಿಗೆ ಲೋಪ ಹೇಳುವ ಸೂತ್ರ.

೪೭೯. ಝಲೋ ಝಲಿ || ೮-೨-೨೬ ||

ಝಲಃ ಪರಸ್ಯ ಸಸ್ಯ ಲೋಪಃ ಸ್ಯಾತ್ ಝಲಿ | ಅಗೌಪ್ತಾಮ್ | ಅಗೌಪ್ಸುಃ || ಅಗೌಪ್ಸೀಃ | ಅಗೌಪ್ತಮ್ | ಅಗೌಪ್ತ || ಅಗೌಪ್ಸಮ್ | ಅಗೌಪ್ಸ್ವ | ಅಗೌಪ್ಸ್ಮ || ಅಗೋಪಾಯಿಷ್ಯತ್ | ಅಗೋಪಿಷ್ಯತ್ || ಅಗೋಪ್ಸ್ಯತ್ ||

|| ೧೩ ಕ್ಷಿ ಕ್ಷಯೇ || ಕ್ಷಯತಿ | ಚಿಕ್ಷಾಯ | ಚಿಕ್ಷಿಯತುಃ | ಚಿಕ್ಷಿಯುಃ | ಏಕಾಚ ಇತಿ ಇಣ್ಣಿಷೇಧೇ ಪ್ರಾಪ್ತೇ ||

ದ್ವಿಪದ ಸೂತ್ರ. 'ರಾತ್ಸಸ್ಯ' ಸೂತ್ರದಿಂದ 'ಸಸ್ಯ', 'ಸಂಯೋಗಾಂತಸ್ಯ ಲೋಪಃ' ಸೂತ್ರದಿಂದ 'ಲೋಪಃ' ಪದಗಳು ಅನುವೃತ್ತವಾಗುತ್ತವೆ. ಝಲಃ ಪಂಚಮೀ. **ಸೂತ್ರಾರ್ಥ**– ಝಲಿನ ಪರದಲ್ಲಿರುವ ಸಕಾರಕ್ಕೆ ಝಲ್ ಪರವಾದಾಗ ಲೋಪ ಬರುತ್ತದೆ. ಪ್ರಕೃತ ಝಲ್ ಪಕಾರ. ಇದರ ಪರದಲ್ಲಿ ಸಿಚಿನ ಸಕಾರವಿದೆ. ಅದಕ್ಕೆ ಝಲ್ ತಕಾರ ಪರವಾದುದರಿಂದ ಲೋಪ. ಅಗೌಪ್ತಾಮ್. ಝಿಗೆ ಉಸ್. ಝಲ್ ಪರವಲ್ಲಿಲ್ಲದುದರಿಂದ ಸಲೋಪವಿಲ್ಲ. ಅಗೌಪ್ಸುಃ | ಅಗೌಪ್ಸೀಃ–ಅಗೌಪ್ತಮ್ –ಅಗೌಪ್ತ || ಇಲ್ಲಿ ಎರಡು ವಚನಗಳಲ್ಲಿಯೂ ಝಲ್ ಪರವಾದುದರಿಂದ ಸಲೋಪ ಬಂದಿದೆ. ಅಗೌಪ್ಸಮ್–ಅಗೌಪ್ಸ್ವ– ಅಗೌಪ್ಸ್ಮ ||

**ಲೃಙ್** | ಸ್ಯ ವಿಕರಣ. ಆಯ ಪ್ರತ್ಯಯ ಬಂದಾಗ ಸ್ಯ ವಿಕರಣಕ್ಕೆ ಇಡಾಗಮ. ಅಂಗಕ್ಕೆ ಅಡಾಗಮ. 'ಇತಶ್ಚ' ಸೂತ್ರದಿಂದ ಪ್ರತ್ಯಯಗಳ ಇಕಾರಕ್ಕೆ ಲೋಪ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಸಕಾರಕ್ಕೆ ಷತ್ವ.

ಅಗೋಪಾಯಿಷ್ಯತ್ | ಅಗೋಪಾಯಿಷ್ಯತಾಮ್ | ಅಗೋಪಾಯಿಷ್ಯನ್ ||
ಅಗೋಪಾಯಿಷ್ಯಃ | ಅಗೋಪಾಯಿಷ್ಯತಮ್ | ಅಗೋಪಾಯಿಷ್ಯತ ||
ಅಗೋಪಾಯಿಷ್ಯಮ್ | ಅಗೋಪಾಯಿಷ್ಯಾವ | ಅಗೋಪಾಯಿಷ್ಯಾಮ ||

ಆಯ ಪ್ರತ್ಯಯ ಬಾರದಿದ್ದರೆ 'ಸ್ವರತಿಸೂತಿ–' ಸೂತ್ರದಿಂದ ಸ್ಯಕ್ಕೆ ಇಡಾಗಮ ವಿಕಲ್ಪ. ಇಡಾಗಮ ಬಂದರೆ ಅಗೋಪಿಷ್ಯತ್ ಇತ್ಯಾದಿ ಹಿಂದಿನಂತೇ ರೂಪವಾಗುತ್ತದೆ. ಇಡಾಗಮ ಬಾರದಿದ್ದರೆ ಅಗೋಪ್ಸ್ಯತ್ ಇತ್ಯಾದಿ ರೂಪಗಳನ್ನು ತಿಳಿಯಬೇಕು.

ಕ್ಷಿ ಧಾತು. ಕ್ಷಯ ಅಂದರೆ ನಾಶ (ಅದರ ಅರ್ಥ) ಅನಿಟ್ ಧಾತು ಲಟಿನಲ್ಲಿ ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಧಾತುವಿನ ಇಕಾರಕ್ಕೆ ಗುಣ. ಅಯಾದೇಶ. ಕ್ಷಯತಿ. ಭವತಿಯಂತೇ ರೂಪ. ಕ್ಷಯ ಅಂಗ. ಪ್ರತ್ಯಯ ಸೇರಿಸುತ್ತಾ ಹೋಗಬೇಕು. ಲಿಟಿನಲ್ಲಿ ತಿಬಾದಿಗಳಿಗೆ

ಣಲಾದ್ಯಾದೇಶ. ಧಾತುವಿಗೆ ದ್ವಿತ್ವ. ಕ್ಷಿ ಕ್ಷಿ+ಅ ಎಂದಿರುವಾಗ 'ಹಲಾದಿಃ ಶೇಷಃ' ಸೂತ್ರದಿಂದ ಅಭ್ಯಾಸದಲ್ಲಿ ಕಕಾರ ಉಳಿದಾಗ ಅದಕ್ಕೆ 'ಕುಹೋಶ್ಚುಃ' ಸೂತ್ರದಿಂದ ಚಕಾರಾದೇಶ. ಚಿಕ್ಷಿ+ಅ. 'ಅಚೋಞ್ಣಿತಿ' ಸೂತ್ರದಿಂದ ಧಾತುವಿನ ಇಕಾರಕ್ಕೆ ವೃದ್ಧಿ. ಚಿಕ್ಷೈ+ಅ. 'ಏಚೋಽಯವಾಯಾವಃ' ಸೂತ್ರದಿಂದ ಆಯಾದೇಶ. ಚಿಕ್ಷಾಯ. ಚಿಕ್ಷಿ+ಅತುಸ್ ಎಂದಿರುವಾಗ 'ಅಚಿಶ್ನುಧಾತುಭ್ರುವಾಂ' ಸೂತ್ರದಿಂದ ಧಾತುವಿನ ಇಕಾರಕ್ಕೆ ಇಯಙ್ ಆದೇಶ. ಚಿಕ್ಷಿಯತುಃ || 'ಅಸಂಯೋಗಾತ್ ಲಿಟ್ ಕಿತ್' ಸೂತ್ರದಿಂದ ದ್ವಿವಚನ ಬಹುವಚನ ಕಿತ್ತಾದುದರಿಂದ ಗುಣಾದಿಗಳು ಬರುವುದಿಲ್ಲ. ಅಜಾದಿಪ್ರತ್ಯಯ ಪರವಾದಾಗ ಇಯಙ್ ಬರುತ್ತದೆ. ಚಿಕ್ಷಿಯುಃ || ಚಿಕ್ಷಿ+ಥ ಎಂದಿರುವಾಗ ಧಾತುವು ಏಕಾಚಾಗಿ ಅನುದಾತ್ತವಾದುದರಿಂದ 'ಏಕಾಚ ಉಪ-' ಸೂತ್ರದಿಂದ (ಸೂ. ೪೭೬) ಥಲಿಗೆ ಇಣ್ಣಿಷೇಧ ಪ್ರಾಪ್ತವಾದರೆ ವಿಕಲ್ಪದಿಂದ ಇಟ್ ಬರುವ ಪ್ರಕಾರವನ್ನು ಹೇಳುತ್ತಾನೆ.

ಕ್ರಾದಿ ಧಾತುಗಳಿಗೆ ಲಿಟಿನಲ್ಲಿ ಇಣ್ಣಿಷೇಧ ಹೇಳುವ ಸೂತ್ರ.

**೪೮೦. ಕೃಸೃಭೃವೃಸ್ತುದ್ರುಸ್ರುಶ್ರುವೋ ಲಿಟಿ || ೭-೨-೧೩ ||**

**ಕ್ರಾದಿಭ್ಯ ಏವ ಲಿಟಃ ಇಣ್ನಸ್ಯಾದನ್ಯಸ್ಮಾದನಿಟೋಽಪಿ ಸ್ಯಾತ್ ||**

ದ್ವಿಪದ ಸೂತ್ರ. ಕೃಚ, ಸೃಚ, ಭೃಚ, ವೃಚ ಸ್ತುಚ, ದ್ರುಚ, ಸ್ರುಚ, ಶ್ರುಚ ತೇಷಾಂ ಸಮಾಹಾರಃ ಕೃಸೃಭೃವೃಸ್ತುದ್ರುಸ್ರುಶ್ರು | ತಸ್ಮಾತ್, ಕೃಸೃ...ಶ್ರುವಃ | ಸಮಾಹಾರದ್ವಂದ್ವದಮೇಲೆ ಪಂಚಮೀ. ಲಿಟಿ ಎಂಬಲ್ಲಿ ಷಷ್ಠ್ಯರ್ಥದಲ್ಲಿ ಸಪ್ತಮೀ ಬಂದಿದೆ. 'ನೇಡ್ವಶಿಕೃತಿ' ಸೂತ್ರದಿಂದ ನ, ಇಟ್ ಅನುವೃತ್ತವಾಗುತ್ತವೆ.

**ಸೂತ್ರಾರ್ಥ**—ಕೃ ಮುಂತಾದ ಎಂಟು ಧಾತುಗಳ ಪರದಲ್ಲಿರುವ ಲಿಟಿಗೆ ಇಡಾಗಮ ಬರುವುದಿಲ್ಲ. ಇಲ್ಲಿ ಕೃ ಮುಂತಾದ ಎಂಟು ಧಾತುಗಳು ಹೇಳಲ್ಪಟ್ಟಿವೆ. ಇವು ಏಕಾಚಾಗಿ ಅನುದಾತ್ತವಾದುದರಿಂದ 'ಏಕಾಚ ಉಪದೇಶೇಽನುದಾತ್ತಾತ್' ಸೂತ್ರದಿಂದಲೇ ಇಣ್ಣಿಷೇಧ ಬರುತ್ತಿರುವಾಗ ಪುನಃ ಈ ಸೂತ್ರದಿಂದ ಇಣ್ಣಿಷೇಧ ಹೇಳಿದುದು ವ್ಯರ್ಥವಾಗುತ್ತದೆ. 'ಸಿದ್ಧೇ ಸತ್ಯಾರಭ್ಯಮಾಣೋ ವಿಧಿಃ ನಿಯಮಾಯ' ಎಂದು ಹಿಂದೆ ಹೇಳಿದಂತೆ ಒಂದು ಸೂತ್ರದಿಂದ ಸಿದ್ಧವಾದ ಅರ್ಥವನ್ನೇ ಪುನಃ ಹೇಳುವುದಾದರೆ ಅದು ನಿಯಮವನ್ನು ತಿಳಿಸುತ್ತದೆ. ಆದುದರಿಂದ ನಿಯಮ ಪರವಾಗಿ ಅರ್ಥ ಹೇಳಬೇಕು. ಲಿಟನಲ್ಲಿ 'ಏಕಾಚಃ' ಇತ್ಯಾದಿ ಸೂತ್ರಗಳಿಂದ ಇಣ್ಣಿಷೇಧ ಬರುವುದಾದರೆ ಕ್ರಾದಿ ಎಂಟು ಧಾತುಗಳ ಪರದಲ್ಲಿರುವ ಲಿಟಿಗೆ ಮಾತ್ರ. ಇತರ ಧಾತುಗಳು ಅನಿಟಾದರೂ ಅಂದರೆ 'ಏಕಾಚಃ—' ಇತ್ಯಾದಿ ಸೂತ್ರಗಳಿಂದ ನಿಷೇಧಿಸಲ್ಪಟ್ಟರೂ ಅವುಗಳ ಪರದಲ್ಲಿರುವ ಲಿಟಿಗೆ ಇಡಾಗಮ ಬಂದೇ ಬರುತ್ತದೆ. ಪ್ರಕೃತ ಕ್ಷಿ ಧಾತು ಅನಿಟ್ ಆದುದರಿಂದ ಕ್ರಾದಿಗಳಲ್ಲಿ ಸೇರದಿರುವುದರಿಂದ ಲಿಟನಲ್ಲಿ ಮಾತ್ರ ಇಡಾಗಮ

ಹೊಂದುತ್ತದೆಂದು ಈ ಸೂತ್ರನಿಯಮದಿಂದ ತಿಳಿಯುತ್ತದೆ. ಇಟ್ ಪ್ರಾಪ್ತವಾದರೆ ಥಲಿನಲ್ಲಿ ಪುನಃ ನಿಷೇಧ ಹೇಳುತ್ತಾನೆ.

ಥಲಿನಲ್ಲಿ ಇಡಾಗಮ ನಿಷೇಧ ಹೇಳುವ ಸೂತ್ರ.

**೪೮೧ ಅಚಸ್ತಾಸ್ವತ್ಥಲ್ಯನಿಟೋ ನಿತ್ಯಮ್ ॥ ೭-೨-೬೧ ॥**

**ಉಪದೇಶೇಽಜಂತೋ ಯೋ ಧಾತುಸ್ತಾಸೌ ನಿತ್ಯಾನಿಟ್ ತತಸ್ಥಲ ಇಣ್ ನ ॥**

ಅಚಃ, ತಾಸ್ವತ್, ಥಲಿ, ಅನಿಟಃ, ನಿತ್ಯಮ್ ॥ ಪಂಚಪದ ಸೂತ್ರ. 'ಉಪದೇಶೇಽತ್ವತಃ' ಮುಂದಿನ ಸೂತ್ರದಿಂದ 'ಉಪದೇಶೇ' ಪದವು ಇಲ್ಲಿ ಅಪಕೃಷ್ಟವಾಗುತ್ತದೆ. 'ಗಮೇರಿಟ್' ಸೂತ್ರದಿಂದ 'ಇಟ್', 'ನ ವೃದ್ಭ್ಯಶ್ಚತುರ್ಭ್ಯಃ' ಸೂತ್ರದಿಂದ 'ನ' ಪದಗಳು ಅನುವೃತ್ತವಾಗುತ್ತವೆ. ಥಲ್ ಪ್ರತ್ಯಯ ಧಾತುವಿನ ಮೇಲೇ ಬರುವುದರಿಂದ ಧಾತು ಅಕ್ಷಿಪ್ತವಾಗುತ್ತದೆ. ಅಚಃ ಧಾತುವಿಗೆ ವಿಶೇಷಣ. ಅದು ಪಂಚಮೀ. ಉಪದೇಶಕಾಲದಲ್ಲಿ ಅಜಂತವಾದ ಧಾತುವಿನ ಪರದಲ್ಲಿರುವ ಎಂದರ್ಥವಾಗುತ್ತದೆ. ಅನಿಟಃ ಎಂಬುದು ಅವಕ್ಕೆ ವಿಶೇಷಣ. ನ ವಿದ್ಯತೆ ಇಟ್ ಯಸ್ಮಾತ್ ಅನಿಟ್. ನಿತ್ಯವಾಗಿ ಇಟನ್ನು ಹೊಂದದಿರುವುದು. ತಾಸ್ವತ್ ಎಂಬಲ್ಲಿ ತಾಸಿ ಸಪ್ತಮ್ಯಂತದ ಮೇಲೆ ವತಿ ಪ್ರತ್ಯಯ ಬಂದಿದೆ. 'ತಾಸಿ ಚ ಕ್ಲೃಪಃ' ಸೂತ್ರದಿಂದ 'ತಾಸಿ' ಅನುವೃತ್ತವಾಗುತ್ತದೆ. ಅನಿಟ್ ಎಂಬಲ್ಲಿ ಅದಕ್ಕೆ ಅನ್ವಯ. ತಾಸಿನಲ್ಲಿ ನಿತ್ಯವಾಗಿ ಇಟನ್ನು ಹೊಂದದಿರುವ ಎಂದರ್ಥ. **ಸೂತ್ರಾರ್ಥ**–ಉಪದೇಶಕಾಲದಲ್ಲಿ ಅಜಂತವಾಗಿಯೂ ತಾಸಿನಲ್ಲಿ ಯಾವಾಗಲೂ ಅನಿಟಾಗಿರುವ ಧಾತುವಿನ ಪರದಲ್ಲಿರುವ ಥಲಿಗೆ ಇಡಾಗಮ ಬರುವುದಿಲ್ಲ. ತಾಸಿನಲ್ಲಿ ಹೇಗೆ ನಿತ್ಯವಾಗಿ ಅನಿಟಾಗುತ್ತದೋ ಹಾಗೆಯೇ ಥಲಿನಲ್ಲಿಯೂ ಇಟ್ ಹೊಂದುವುದಿಲ್ಲ. ಹಿಂದಿನ ಸೂತ್ರದ ನಿಯಮದಿಂದ ಲಿಟನಲ್ಲಿ ವಲಾದಿ ಪ್ರತ್ಯಯಗಳಿಗೆಲ್ಲಾ ಪ್ರಾಪ್ತವಾದರೆ ಥಲಿನಲ್ಲಿ ಈ ಸೂತ್ರದ ಪ್ರಕಾರ ಕ್ಷಿ ಧಾತುವು ಅಜಂತವಾದುದರಿಂದಲೂ ತಾಸಿನಲ್ಲಿ ನಿತ್ಯಾನಿಟ್ ಆದುದರಿಂದಲೂ ಇಣ್ಣಿಷೇಧ ಹೊಂದುತ್ತದೆ. ವ, ಮ ದಲ್ಲಿ ಇಟ್ ಹೊಂದಲು ಯಾವ ನಿಷೇಧವೂ ಇಲ್ಲ. ಇಣ್ಣಿಷೇಧ ವಿಷಯ ಬಂದುದರಿಂದ ಅದಕ್ಕೆ ಸಂಬಂಧಿಸಿದ ಇನ್ನೂ ಕೆಲವು ಸೂತ್ರಗಳನ್ನು ಹೇಳುತ್ತಾನೆ.

ಅಕಾರವುಳ್ಳ ಧಾತುವಿನ ಥಲಿಗೆ ಇಣ್ಣಿಷೇಧ ಹೇಳುವ ಸೂತ್ರ.

**೪೮೨. ಉಪದೇಶೇಽತ್ವತಃ ॥ ೭-೨-೬೨ ॥**

**ಉಪದೇಶೇಽಕಾರವತಸ್ತಾಸೌ ನಿತ್ಯಾನಿಟಃ ಪರಸ್ಯ ಥಲಃ ಇಣ್ ನ ಸ್ಯಾತ್॥**

ಉಪದೇಶೇ, ಅತ್ವತಃ ॥ ದ್ವಿಪದ ಸೂತ್ರ. ಪೂರ್ವಸೂತ್ರದಂತೇ ಅನುವೃತ್ತಿ. 'ಅಚಃ' ಒಂದು ಪದವನ್ನು ಬಿಟ್ಟು ಹಿಂದಿನ ಸೂತ್ರವೂ ಅನುವೃತ್ತವಾಗುತ್ತದೆ.

ಅತ್ ಹ್ರಸ್ವಾಕಾರ. ಇದು ಉಳ್ಳದ್ದು ಅತ್ವಾನ್ ಸೂತ್ರಾರ್ಥ—ಉಪದೇಶಕಾಲದಲ್ಲಿ ಹ್ರಸ್ವಾಕಾರವುಳ್ಳ ತಾಸಿನಲ್ಲಿ ನಿತ್ಯವಾಗಿ ಅನಿಟ್ ಆಗಿರುವ ಧಾತುವಿನ ಪರದಲ್ಲಿ ಇರುವ ಥಲ್ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. ಅನಿಟಾದ ಧಾತುಗಳಿಗೆ ಕ್ರಾದಿ ನಿಯಮದಿಂದ ಲಿಟನಲ್ಲಿ ಇಡಾಗಮ ಪ್ರಾಪ್ತವಾದರೆ ಥಲಿನಲ್ಲಿ ಮಾತ್ರ ಈ ಎರಡು ಸೂತ್ರಗಳು ಪುನಃ ನಿಷೇಧಿಸುವುದರಿಂದ ಇಡಾಗಮ ಬರುವುದಿಲ್ಲವೆಂದು ತಿಳಿಯಬೇಕು. ಪಚ್ ಮುಂತಾದ ಧಾತುಗಳು ಇದಕ್ಕೆ ಲಕ್ಷ್ಯ. ಪಚ್ ಉಪದೇಶಕಾಲದಲ್ಲಿ ಅಕಾರ ಹೊಂದಿದೆ. ತಾಸಿನಲ್ಲಿ ನಿತ್ಯಾನಿಟ್. ಆಗ ಥಲಿನಲ್ಲಿ ಪಪಕ್ಥ ಎಂದಾಗುತ್ತದೆ. ಹೀಗೆ ಅಜಂತ, ಅಕಾರವುಳ್ಳ ಧಾತುಗಳ ಪರದ ಥಲಿಗೆ ಇಣ್ನಿಷೇಧ ಪ್ರಾಪ್ತವಾದರೆ ಭಾರದ್ವಾಜರು ಅಲ್ಲಿ ಇಡಾಗಮವನ್ನು ಬಯಸುತ್ತಾರೆ. ಆ ಸೂತ್ರವನ್ನು ಈಗ ಹೇಳುತ್ತಾನೆ.

ಥಲಿನಲ್ಲಿ ಭಾರದ್ವಾಜರ ನಿಯಮ ಹೇಳುವ ಸೂತ್ರ.

**೪೮೩. ಋತೋ ಭಾರದ್ವಾಜಸ್ಯ || ೭-೨-೬೩ ||**

**ತಾಸೌ ನಿತ್ಯಾನಿಟಃ ಋದಂತಾದೇವ ಥಲೋ ನೇಟ್ ಭಾರದ್ವಾಜಸ್ಯ ಮತೇ || ತೇನ ಅನ್ಯಸ್ಯ ಸ್ಯಾದೇವ || ಅಯಮತ್ರ ಸಂಗ್ರಹಃ ||**

**'ಅಜಂತೋಽಕಾರವಾನ್ವಾ ಯಸ್ತಾಸ್ಯನಿಟ್ ಥಲಿ ವೇಡಯಮ್ ||**
**ಋದಂತ ಈದೃಙ್ ನಿತ್ಯಾನಿಟ್ ಕ್ರಾದ್ಯನ್ಯೋ ಲಿಟಿ ಸೇಡ್ ಭವೇತ್ ||**

**ಚಿಕ್ಷಯಿಥ, ಚಿಕ್ಷೇಥ | ಚಿಕ್ಷಿಯಥುಃ | ಚಿಕ್ಷಿಯ | ಚಿಕ್ಷಾಯ, ಚಿಕ್ಷಯ | ಚಿಕ್ಷಿಯಿವ | ಚಿಕ್ಷಿಯಿಮ || ಕ್ಷೇತಾ || ಕ್ಷೇಷ್ಯತಿ || ಕ್ಷಯತು || ಅಕ್ಷಯತ್ ಕ್ಷಯೇತ್ ||**

ಋತಃ, ಭಾರದ್ವಾಜಸ್ಯ || ದ್ವಿಪದ ಸೂತ್ರ. ಹಿಂದಿನಿಂದ ತಾಸೌ, ನಿತ್ಯಾನಿಟಃ, ನ, ಇಟ್, ಥಲಿ ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ತಾಸಿನಲ್ಲಿ ನಿತ್ಯವಾಗಿ ಅನಿಟಾಗಿರುವ ಉಪದೇಶಕಾಲದಲ್ಲಿ ಋದಂತವಾದ ಧಾತುವಿನ ಪರದಲ್ಲಿರುವ ಥಲಿಗೆ ಭಾರದ್ವಾಜರ ಮತದಿಂದ ಇಡಾಗಮ ಬರುವುದಿಲ್ಲ. ಇದೂ ನಿಯಮಸೂತ್ರ. ಋದಂತವಾದ ಧಾತುವಿನ ವಿಷಯದಲ್ಲಿ ನಿಷೇಧವು 'ಅಚಸ್ತಾಸ್ವತ್ ' ಸೂತ್ರದಿಂದಲೇ ಸಿದ್ಧವಾಗಿದೆ. ಉಪದೇಶದಲ್ಲಿ ಅಜಂತವಾದ ಧಾತುವೆಂದಮೇಲೆ ಋಕಾರಾಂತ ಧಾತುವೂ ಅಜಂತವಾದುದೇ. ಅದರಿಂದಲೇ ನಿಷೇಧ ಬರುತ್ತಿರುವಾಗ ಪುನಃ ಭಾರದ್ವಾಜರು ನಿಷೇಧಮಾಡಿರುವುದರಿಂದ ಭಾರದ್ವಾಜರ ಮತದಲ್ಲಿ ಥಲಿನಲ್ಲಿ ಇಣ್ನಿಷೇಧ ಬರುವುದಾದರೆ ಕೇವಲ ಋದಂತಧಾತುಗಳಲ್ಲಿ ಮಾತ್ರ. ಇತರ ಅಜಂತಧಾತುಗಳ ಪರದ ಥಲಿಗೆ ಭಾರದ್ವಾಜರ ಮತದಲ್ಲಿ ಇಡಾಗಮ ಬಂದೇ ಬರುತ್ತದೆ. ಪಾಣಿನಿಮತದಲ್ಲಿ ನಿಷೇಧ, ಭಾರದ್ವಾಜರ ಮತದಲ್ಲಿ ಇಡಾಗಮವೆಂದುದರಿಂದ ಥಲಿನಲ್ಲಿ ಇಡಾಗಮ ವಿಕಲ್ಪವೆಂದಾಗುತ್ತದೆ. ಋದಂತಧಾತುವಿನಲ್ಲಿ ಇಬ್ಬರ ಮತದಲ್ಲಿಯೂ ನಿಷೇಧ. ಈ

ನಾಲ್ಕು ಸೂತ್ರಗಳಲ್ಲಿ ಹೇಳಿರುವ ವಿಷಯವನ್ನು ಸಂಗ್ರಹಿಸಿ ಶ್ಲೋಕವನ್ನು ಮಾಡಿರುತ್ತಾರೆ. 'ಅಜಂತಃ, ಅಕಾರವಾನ್ ವಾ ಯಃ ತಾಸ್ಯನಿಟ್'—ತಾಸಿನಲ್ಲಿ ಅನಿಟಾಗಿ ಇರುವ (ಋದಂತ ಬಿಟ್ಟು) ಅಜಂತಧಾತುವಾಗಲೀ, ಹ್ರಸ್ವಾಕಾರವುಳ್ಳ ಧಾತುವಾಗಲೀ ಅವರ ಪರವಲ್ಲಿರುವ ಥಲಿಗೆ ವಿಕಲ್ಪವಾಗಿ ಇಡಾಗಮ. ತಾಸಿನಲ್ಲಿ ಅನಿಟಾದ ಋದಂತ ಧಾತುವಾದರೆ ಅದರ ಪರದ ಥಲಿಗೆ ಇಡಾಗಮ ಬರುವುದೇ ಇಲ್ಲ. 'ಕ್ರಾದ್ಯಸ್ಯೋ ಲಿಟಿ ಸೇಟ್ ಭವೇತ್—' ಕೃಸೃ ಮುಂತಾದ ಮೊದಲನೇ ಸೂತ್ರದಲ್ಲಿ ಹೇಳಿದ ಎಂಟು ಧಾತುಗಳಿಗೆ ಮಾತ್ರ ಲಿಟಿನಲ್ಲಿ ಇಡಾಗಮ ಬರುವುದೇ ಇಲ್ಲ. ಕ್ರಾದಿ ಎಂಟು ಧಾತುಗಳನ್ನು ಬಿಟ್ಟರೆ ಉಳಿದ ಅನಿಟಾದ ಧಾತುಗಳು ಲಿಟಿನಲ್ಲಿ ಇಡಾಗಮ ಹೊಂದುತ್ತವೆ. ಪ್ರಕೃತ ಕ್ಷಿ ಧಾತು ಅಜಂತವಾಗಿ ತಾಸಿನಲ್ಲಿ ಅನಿಟಾಗಿದೆ. ಇದಕ್ಕೆ 'ಅಜನ್ತಾಸ್ವತ್—' ಸೂತ್ರದಿಂದ ಅಜಂತವಾದುದರಿಂದ ಪಾಣಿನಿಮತದಿಂದ ಇಣ್ನಿಷೇಧ. ಭಾರದ್ವಾಜ ಮತದಿಂದ ಇಡಾಗಮ. ಆದುದರಿಂದ ಥಲಿನಲ್ಲಿ ಇಟ್ ವಿಕಲ್ಪ. ಇಡಾಗಮ ಬಂದರೆ ಚಿಕ್ಷಿ+ಇಥ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ. ಅಯಾದೇಶ. ಚಿಕ್ಷೇ+ಇಥ=ಚಿಕ್ಷಯಿಥ. ಇಡಾಗಮ ಬಾರದಿದ್ದರೆ ಚಿಕ್ಷಿ+ಥ ಎಂದಿರುವಾಗ ಗುಣ ಮಾತ್ರ. ಚಿಕ್ಷೇಥ. ಚಿಕ್ಷಿ+ಅಥುಸ್ ಎಂದಿರುವಾಗ ವಿಭಕ್ತಿ ಕಿತ್ತಾದುದರಿಂದ ಗುಣವಿಲ್ಲ. 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಇಯಜಾದೇಶ, ಚಿಕ್ಷಿಯ್ಥುಃ || ಚಿಕ್ಷಿ+ಅ ಎಂದಿರುವಾಗ ಇಯಙ್. ಚಿಕ್ಷಿಯ | ಉತ್ತಮದಲ್ಲಿ 'ಣಲುತ್ತಮೋವಾ' ಸೂತ್ರದಿಂದ ಣಲ್ ವಿಕಲ್ಪವಾಗಿ ಣಿತ್ತಾಗುವುದರಿಂದ ಣಿತ್ತಾದರೆ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ, ಆಯಾದೇಶ. ಣಿತ್ತಾಗದಿದ್ದರೆ ಗುಣ, ಅಯಾದೇಶ. ಚಿಕ್ಷಾಯ, ಚಿಕ್ಷಯ || ವ, ಮ ಪರವಾದಾಗ ಅನಿಟ್ ಧಾತುವಾದರೂ ಕ್ರಾದಿ ನಿಯಮದಿಂದ ಇಡಾಗಮ ಬರುತ್ತದೆ. ಆಗ ಅಜಾದಿಯಾಗುವುದರಿಂದ ಇಯಜಾದೇಶ. ಚಿಕ್ಷಿಯಿವ | ಚಿಕ್ಷಿಯಿಮ ||

**ಲುಟ್** || ತಿಬಾದಿಗಳಿಗೆ ಡಾ ರೌ ರಸ್ ಆದೇಶ. ಅನಿಟಾದುದರಿಂದ 'ಏಕಾಚ ಉಪದೇಶೇ ಅನುದಾತ್ತಾತ್' ಸೂತ್ರದಿಂದ ತಾಸಿಗೆ ಇಡಾಗಮ ಬರುವುದಿಲ್ಲ. 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಕ್ಷಿಯ ಇಕಾರಕ್ಕೆ ಗುಣ. ಕ್ಷೇತಾ–ಕ್ಷೇತಾರೌ–ಕ್ಷೇತಾರಃ || ಕ್ಷೇತಾಸಿ–ಕ್ಷೇತಾಸ್ಥಃ–ಕ್ಷೇತಾಸ್ಥ || ಕ್ಷೇತಾಸ್ಮಿ–ಕ್ಷೇತಾಸ್ವಃ–ಕ್ಷೇತಾಸ್ಮಃ || **ಲೃಟ್** || ಸ್ಯ ವಿಕರಣ. ಹಿಂದಿನಂತೆ ಇಡಾಗಮವಿಲ್ಲ. ಗುಣ. 'ಆದೇಶ ಪ್ರತ್ಯಯಯೋಃ' ಸೂತ್ರದಿಂದ ಸಕಾರಕ್ಕೆ ಷತ್ವ. ಕ್ಷೇಷ್ಯತಿ–ಕ್ಷೇಷ್ಯತಃ–ಕ್ಷೇಷ್ಯಂತಿ || ಕ್ಷೇಷ್ಯಸಿ–ಕ್ಷೇಷ್ಯಥಃ–ಕ್ಷೇಷ್ಯಥ || ಕ್ಷೇಷ್ಯಾಮಿ–ಕ್ಷೇಷ್ಯಾವಃ–ಕ್ಷೇಷ್ಯಾಮಃ || **ಲೋಟ್** | ಶಪ್ ವಿಕರಣ. 'ಏರುಃ' ಸೂತ್ರದಿಂದ ಇಕಾರಕ್ಕೆ ಉಕಾರಾದೇಶ. ಗುಣ. ಅಯಾದೇಶ. ಕ್ಷಯತು, ಕ್ಷಯತಾತ್–ಕ್ಷಯತಾಂ–ಕ್ಷಯಂತು || ಕ್ಷಯ, ಕ್ಷಯತಾತ್–ಕ್ಷಯತಮ್–ಕ್ಷಯತ || ಕ್ಷಯಾಣಿ ಕ್ಷಯಾವ–ಕ್ಷಯಾಮ || **ಲಙ್** || ಶಪ್, ಗುಣ.

ಅಯಾದೇಶ. ಅಂಗಕ್ಕೆ ಅಡಾಗಮ. 'ಇತಶ್ಚ' ಸೂತ್ರದಿಂದ ಪ್ರತ್ಯಯದ ಇಕಾರಕ್ಕೆ ಲೋಪ. ಅಕ್ಷಯತ್ || ಅಕ್ಷಯ ಅಂಗ. ಪ್ರತ್ಯಯ ಸೇರಿಸಬೇಕು. **ವಿಧಿಲಿಙ್** || ಶಪ್, ಗುಣ. ಕ್ಷಯ ಅಂಗ. ಯಾಸುಟಿಗೆ ಇಯಾದೇಶ. ಕ್ಷಯೇತ್–ಕ್ಷಯೇತಾಮ್–ಕ್ಷಯೇಯುಃ || ಕ್ಷಯೇಃ–ಕ್ಷಯೇತಮ್–ಕ್ಷಯೇತ || ಕ್ಷಯೇಯಮ್–ಕ್ಷಯೇವ–ಕ್ಷಯೇಮ || **ಆಶೀರ್ಲಿಙ್** || ಲಿಙಿಗೆ ಯಾಸುಟಾಗಮ. 'ಕಿದಾಶಿಷಿ' ಸೂತ್ರದಿಂದ ಯಾಸುಟ್ ಕಿತ್ತಾದುದರಿಂದ ಗುಣ ಬರುವುದಿಲ್ಲ. ಕ್ಷಿಯಾಸ್ತ್ ಎಂದಿರುವಾಗ 'ಸ್ಕೋಃ ಸಂಯೋಗಾದ್ಯೋ—' ಸೂತ್ರದಿಂದ ಸಕಾರಲೋಪ. ಯಾಸುಟ್ ನಿಮಿತ್ತೀಕರಿಸಿ ಧಾತುವಿನ ಇಕಾರಕ್ಕೆ ದೀರ್ಘ ಹೇಳುತ್ತಾನೆ.

ಅಜಂತಾಂಗಕ್ಕೆ ದೀರ್ಘ ಹೇಳುವ ಸೂತ್ರ.

**೪೮೪. ಅಕೃತ್ಸಾರ್ವಧಾತುಕಯೋರ್ದೀರ್ಘಃ || ೭–೪–೨೫ ||**

**ಅಜಂತಾಂಗಸ್ಯ ದೀರ್ಘೋ ಯಾದೌ ಪ್ರತ್ಯಯೇ ನತು ಕೃತ್ ಸಾರ್ವಧಾತುಕಯೋಃ || ಕ್ಷೀಯಾತ್ ||**

ದ್ವಿಪದ ಸೂತ್ರ. ಕೃತ್‌ಚ, ಸಾರ್ವಧಾತುಕಂ ಚ ಕೃತ್ಸಾರ್ವಧಾತುಕೇ || ನ ಕೃತ್ಸಾರ್ವಧಾತುಕೇ, ಅಕೃತ್ಸಾರ್ವಧಾತುಕೇ || ತಯೋಃ ಅಕೃತ್ಸಾರ್ವಧಾತುಕಯೋಃ|| ಅಂಗಾಧಿಕಾರದಲ್ಲಿ ಹೇಳಿದುದರಿಂದ ಅಂಗದಿಂದ ಪ್ರತ್ಯಯ ಆಕ್ಷಿಪ್ತವಾಗುತ್ತದೆ. 'ಅಯಙ್ಯಿ ಕ್ಙಿತಿ' ಸೂತ್ರದಿಂದ ಯಿ ಎಂಬ ಸಪ್ತಮ್ಯಂತವು ಪ್ರತ್ಯಯಕ್ಕೆ ವಿಶೇಷಣವಾದುದರಿಂದ ತದಾದಿಲಾಭ. ಯಾಕಾರಾದಿ ಪ್ರತ್ಯಯ ಪರವಾದಾಗ ಎಂದರ್ಥ. ದೀರ್ಘ ವಿಧಿಸುವುದರಿಂದ 'ಅಚಃ' ಷಷ್ಠ್ಯಂತ ಪದವು ಉಪಸ್ಥಿತವಾಗಿ ಅಂಗಕ್ಕೆ ವಿಶೇಷಣವಾಗುವುದರಿಂದ ತದಂತಲಾಭ. **ಸೂತ್ರಾರ್ಥ**–ಯಕಾರಾದಿಪ್ರತ್ಯಯಪರದಲ್ಲಿರುವಾಗ ಅಜಂತವಾದ ಅಂಗಕ್ಕೆ ದೀರ್ಘ ಬರುತ್ತದೆ. ಆದರೆ ಕೃತ್ ಪ್ರತ್ಯಯ, ಸಾರ್ವಧಾತುಕ ಪರವಾದಾಗ ಈ ದೀರ್ಘ ಬರುವುದಿಲ್ಲ. ಪ್ರಕೃತ ಕ್ಷಿ ಅಜಂತವಾದ ಅಂಗ. ಅದಕ್ಕೆ ಯಾದಿಪ್ರತ್ಯಯ (ಯಾಸುಟ್) ಪರವಾಗಿದೆ. ಇದು ಸಾರ್ವಧಾತುಕವಲ್ಲ. 'ಲಿಙಾಶಿಷಿ' ಸೂತ್ರದಿಂದ ಆರ್ಧಧಾತುಕಸಂಜ್ಞೆ ಹೇಳಿರುತ್ತಾನೆ. ದೀರ್ಘ ಬಂದರೆ ಕ್ಷೀಯಾತ್–ಕ್ಷೀಯಾಸ್ತಾಮ್–ಕ್ಷೀಯಾಸುಃ || ಕ್ಷೀಯಾಃ–ಕ್ಷೀಯಾಸ್ತಮ್–ಕ್ಷೀಯಾಸ್ತ || ಕ್ಷೀಯಾಸಮ್–ಕ್ಷೀಯಾಸ್ವ–ಕ್ಷೀಯಾಸ್ಮ ||

**[illegible]** || ಸಿಚ್ ವಿಕರಣ. 'ಅಸ್ತಿಸಿಚೋಽಪೃಕ್ತೇ' ಸೂತ್ರದಿಂದ ಅಪೃಕ್ತಕ್ಕೆ ಈಡಾಗಮ. ಅಂಗಕ್ಕೆ ಅಡಾಗಮ. ಅಕ್ಷಿ+ಸ್+ಈತ್ ಎಂದಿರುವಾಗ ವೃದ್ಧಿ ಹೇಳುತ್ತಾನೆ.

ಸಿಚ್ ಪರವಾದಾಗ ವೃದ್ಧಿ ಹೇಳುವ ಸೂತ್ರ.

**೪೮೫. ಸಿಚಿವೃದ್ಧಿಃ ಪರಸ್ಮೈಪದೇಷು । ೭-೨-೧ ||**

**ಇಗಂತಾಂಗಸ್ಯ ವೃದ್ಧಿಃ ಸ್ಯಾತ್ ಪರಸ್ಮೈಪದೇ ಸಿಚಿ|| ಅಕ್ಷೈಷೀತ್ || ಅಕ್ಷೇಷ್ಯತ್ ||**

ತ್ರಿಪದ ಸೂತ್ರ, 'ಅಂಗಸ್ಯ' ಅಧಿಕಾರ. ವೃದ್ಧಿವಿಧಾನ ಮಾಡುವುದರಿಂದ 'ಇಕ್' ಷಷ್ಠ್ಯಂತ ಪದವು ಉಪಸ್ಥಿತವಾಗಿ ಅಂಗಕ್ಕೆ ವಿಶೇಷಣವಾಗುತ್ತದೆ. **ಸೂತ್ರಾರ್ಥ–** ಪರಸ್ಮೈಪದ ಪರದಲ್ಲಿರುವ ಸಿಚ್ ಪರದಲ್ಲಿರುವಾಗ ಇಗಂತವಾದ ಅಂಗಕ್ಕೆ ವೃದ್ಧಿ ಬರುತ್ತದೆ. ಅಕ್ಷಿ ಇಗಂತಾಂಗ. ಇದಕ್ಕೆ ಸ್ ಈತ್ ಎಂಬ ಪರಸ್ಮೈಪದ ಪರವಾದ ಸಿಚ್ ಪರದಲ್ಲಿದೆ. ಆಗ ಇಕಾರಕ್ಕೆ ವೃದ್ಧಿ ಬಂದರೆ ಅಕ್ಷೈಸೀತ್. 'ಆದೇಶ ಪ್ರತ್ಯಯಯೋಃ' ಸೂತ್ರದಿಂದ ಸಕಾರಕ್ಕೆ ಷತ್ವ. ಅಕ್ಷೈಷೀತ್ || ಅಕ್ಷೈಷ್ ಅಂಗವೆಂದು ತಿಳಿಯಬೇಕು. ಅಕ್ಷೈಷ್ + ತಾಂ ಎಂದಿರುವಾಗ ಷ್ಟುತ್ವ. ಅಕ್ಷೈಷ್ಟಾಂ| ಅಕ್ಷೈಷುಃ || ಅಕ್ಷೈಷೀಸ್ ಎಂದಿರುವಾಗ ಸಕಾರಕ್ಕೆ ರುತ್ವವಿಸರ್ಗ. ಅಕ್ಷೈಷೀಃ– ಅಕ್ಷೈಷ್ಟಂ—ಅಕ್ಷೈಷ್ಟ || ಅಕ್ಷೈಷಂ—ಅಕ್ಷೈಷ್ವ—ಅಕ್ಷೈಷ್ಮ ||

**ಲೃಙ್** ಸ್ಯ ವಿಕರಣ. ಅಂಗಕ್ಕೆ ಆಡಾಗಮ. ಧಾತುವಿನಇಕಾರಕ್ಕೆ ಗುಣ. ಅಕ್ಷೇಷ್ಯತ್–ಅಕ್ಷೇಷ್ಯತಾಂ—ಅಕ್ಷೇಷ್ಯನ್ || ಅಕ್ಷೇಷ್ಯಃ—ಅಕ್ಷೇಷ್ಯತಂ—ಅಕ್ಷೇಷ್ಯತ || ಅಕ್ಷೇಷ್ಯಂ—ಅಕ್ಷೇಷ್ಯಾವ—ಅಕ್ಷೇಷ್ಯಾಮ ||

**||೧೪|| ತಪ— ಸಂತಾಪೇ || (ವ್ಯಥೆಪಡುವುದು.)**

**ತಪತಿ || ತತಾಪ | ತೇಪತುಃ | ತೇಪುಃ || ತೇಪಿಥ, ತತಪ್ಥ || ತೇಪಿವ | ತೇಪಿಮ || ತಪ್ತಾ || ತಪ್ಸ್ಯತಿ || ತಪತು || ಅತಪತ್ || ತಪೇತ್ || ತಪ್ಯಾತ್ || ಅತಾಪ್ಸೀತ್ |ಅತಾಪ್ತಾಮ್ || ಅತಪ್ಸ್ಯತ್ ||**

**ಲಟ್** || ತಪತಿ. ಶಪ್ ವಿಕರಣ. ಇತರ ಯಾವ ವಿಶೇಷ ಕಾರ್ಯವೂ ಇಲ್ಲ. **ಲಿಟ್** || ತಪ್ತಪ್ + ಅ. ತತಪ 'ಅತಉಪಧಾಯಾಃ' ಸೂತ್ರದಿಂದ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ ಬಂದಿದೆ. ತತಪ್ + ಅತುಸ್ ಎಂದಿರುವಾಗ 'ಅತಏಕ ಹಲ್ಮಧ್ಯೇ ' ಸೂತ್ರದಿಂದ (ಸೂ. ೪೬೧) ಏತ್ವ, ಅಭ್ಯಾಸಲೋಪ. ದ್ವಿವಚನ ಬಹುವಚನಗಳಲ್ಲಿ ಕಿತ್ತಾದುದರಿಂದ ಈ ಕಾರ್ಯಗಳು ಬರುತ್ತವೆ. ತೇಪತುಃ–ತೇಪುಃ | ಥಲಿನಲ್ಲಿ ಭಾರದ್ವಾಜ ನಿಯಮದಿಂದ ವಿಕಲ್ಪ ಇಡಾಗಮ. ಇಡಾಗಮ ಬಂದರೆ 'ಥಲಿಚ ಸೇಟಿ' ಸೂತ್ರದಿಂದ ಏತ್ವಾಭ್ಯಾಸಲೋಪ. ತೇಪಿಥ. ಇಡಾಗಮ ಬಾರದಿದ್ದರೆ ತತಪ್ಥ | ತೇಪಥುಃ | ತೇಪ || ಉತ್ತಮದಲ್ಲಿ 'ಣಲುತ್ತಮೋವಾ' ಸೂತ್ರದಿಂದ ಣಲ್ ವಿಕಲ್ಪವಾಗಿ ಣಿತ್ತಾಗುವುದರಿಂದ ಣಿತ್ತಾದರೆ 'ಅತಉಪಧಾಯಾಃ' ವೃದ್ಧಿ. ತತಾಪ

ಣಿತತ್ವಗದಿದ್ದರೆ ತತಪ | ತೇಪಿವ | ತೇಪಿಮ || ಲುಟ್—ಧಾತು ಅನಿಟಾದುದರಿಂದ ತಾಸಿಗೆ ಇಡಾಗಮ ಬರುವುದಿಲ್ಲ. ತಪ್ತಾ | ತಪ್ತಾರೌ | ತಪ್ತಾರಃ || ತಪ್ತಾಸಿ | ತಪ್ತಾಸ್ಥಃ | ತಪ್ತಾಸ್ಥ || ತಪ್ತಾಸ್ಮಿ | ತಪ್ತಾಸ್ವಃ | ತಪ್ತಾಸ್ಮಃ || ಲೃಟ್—ಸ್ಯ ವಿಕರಣ ಇಡಾಗಮವಿಲ್ಲ. ತಪ್ಸ್ಯತಿ | ತಪ್ಸ್ಯತಃ | ತಪ್ಸ್ಯಂತಿ || ತಪ್ಸ್ಯಸಿ | ತಪ್ಸ್ಯಥಃ ತಪ್ಸ್ಯಥ || ತಪ್ಸ್ಯಾಮಿ | ತಪ್ಸ್ಯಾವಃ | ತಪ್ಸ್ಯಾಮಃ || ಲೋಟ್ || ತಪತು, ತಪತಾತ್ | ತಪತಾಮ್ | ತಪಂತು || ತಪ, ತಪತಾತ್ | ತಪತಮ್ | ತಪತ || ತಪಾನಿ | ತಪಾವ | ತಪಾಮ || ಲಙ್ || ಅಂಗಕ್ಕೆ ಅಡಾಗಮ. ಅತಪತ್ | ಅತಪತಾಮ್ | ಅತಪನ್ || ಅತಪಃ | ಅತಪತಮ್ | ಅತಪತ || ಅತಪಮ್ | ಅತಪಾವ | ಅತಪಾಮ || ವಿಧಿಲಿಙ್—ತಪೇತ್ | ತಪೇತಾಂ | ತಪೇಯುಃ || ತಪೇಃ | ತಪೇತಂ | ತಪೇತ | ತಪೇಯಂ | ತಪೇವ | ತಪೇಮ || ಆಶೀರ್ಲಿಙ್ || ಆರ್ಧಧಾತುಕವಾದುದರಿಂದ ಸಲ್ಲೋಪವಿಲ್ಲ. ತಪ್ಯಾತ್ | ತಪ್ಯಾಸ್ತಾಂ | ತಪ್ಯಾಸುಃ || ತಪ್ಯಾಃ | ತಪ್ಯಾಸ್ತಂ | ತಪ್ಯಾಸ್ತ || ತಪ್ಯಾಸಂ | ತಪ್ಯಾಸ್ವ | ತಪ್ಯಾಸ್ಮ || ಲುಙ್—ಅತಪ್+ಸ್+ಈತ್ ಎಂದಿರುವಾಗ 'ಸಿಚಿ ವೃದ್ಧಿಃ ಪರಸ್ಮೈಪದೇಷು' ಸೂತ್ರದಿಂದ ವೃದ್ಧಿ. ಅತಾಪ್ಸೀತ್; ಅತಾಪ್+ಸ್+ತಾಂ ಎಂದಿರುವಾಗ 'ಝಲೋಝಲಿ' ಸೂತ್ರದಿಂದ ಸಲೋಪ. ಅತಾಪ್ತಾಂ | ಅತಾಪ್ಸುಃ | ಅತಾಪ್ಸೀಃ | ಅತಾಪ್ತಂ | ಅತಾಪ್ತ || ಅತಾಪ್ಸಂ | ಅತಾಪ್ಸ್ವ | ಅತಾಪ್ಸ್ಮ || ಲೃಙ್ || ಅತಪ್ಸ್ಯತ್ | ಅತಪ್ಸ್ಯತಾಂ | ಅತಪ್ಸ್ಯನ್ || ಅತಪ್ಸ್ಯಃ | ಅತಪ್ಸ್ಯತಂ | ಅತಪ್ಸ್ಯತ || ಅತಪ್ಸ್ಯಂ | ಅತಪ್ಸ್ಯಾವ | ಅತಪ್ಸ್ಯಾಮ ||

|| ೧೫ || ಕ್ರಮು—ಪಾದವಿಕ್ಷೇಪೇ (ನಡೆಯುವುದು)

ಕ್ರಮುವಿನಲ್ಲಿ ಉಕಾರ ಇತ್. ಕ್ರಂ+ತಿ ಎಂದಿರುವಾಗ ಶಪ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ವಿಕಲ್ಪ ಶ್ಯನ್ ವಿಕರಣ ಹೇಳುತ್ತಾನೆ.

ಭ್ರಾಶಾದಿ ಧಾತುಗಳಿಗೆ ವಿಕಲ್ಪ ಶ್ಯನ್ ಹೇಳುವ ಸೂತ್ರ.

**೪೮೬. ವಾ ಭ್ರಾಶಭ್ಲಾಶಭ್ರಮುಕ್ರಮುಕ್ಲಮುತ್ರಸಿತ್ರುಟಿಲಷಃ || ೩-೧-೭೦ ||**
**ಏಭ್ಯಃ ಶ್ಯನ್ ವಾ ಕರ್ತ್ರರ್ಥೇ ಸಾರ್ವಧಾತುಕೇ ಪರೇ || ಪಕ್ಷೇ ಶಪ್ ||**

ದ್ವಿಪದ ಸೂತ್ರ. ಸಮಾಹಾರದ್ವಂದ್ವದಮೇಲೆ ಪಂಚಮೀ. 'ಸಾರ್ವಧಾತುಕೇ ಯಕ್' ಸೂತ್ರದಿಂದ 'ಸಾರ್ವಧಾತುಕೇ', 'ಕರ್ತರಿ ಶಪ್' ಸೂತ್ರದಿಂದ 'ಕರ್ತರಿ', 'ದಿವಾದಿಭ್ಯಃ ಶ್ಯನ್' ಸೂತ್ರದಿಂದ 'ಶ್ಯನ್' ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಭ್ರಾಶ ಮುಂತಾದ ಏಳು ಧಾತುಗಳಮೇಲೆ ಕರ್ತ್ರರ್ಥಕವಾದ ಸಾರ್ವಧಾತುಕ ಪ್ರತ್ಯಯ ಪರದಲ್ಲಿರುವಾಗ ವಿಕಲ್ಪವಾಗಿ ಶ್ಯನ್ ವಿಕರಣ ಬರುತ್ತದೆ. ಬಾರ

ದಿದ್ದರೆ ಸಾಮಾನ್ಯಪ್ರಾಪ್ತವಾದ ಶಪ್ ವಿಕರಣ ಬರುತ್ತದೆ. ಶ್ಯನ್ ಬಂದರೆ ಅದರಲ್ಲಿ 'ಲಶಕ್ವತದ್ಧಿತೇ' ಸೂತ್ರದಿಂದ ಶಕಾರವೂ 'ಹಲಂತ್ಯಮ್' ಸೂತ್ರದಿಂದ ನಕಾರವೂ ಇತ್ ಸಂಜ್ಞೆಹೊಂದಿ ಲೋಪವಾಗುತ್ತವೆ. ಯ ಉಳಿಯುತ್ತದೆ. ಕ್ರಮ್ + ಯ + ತಿ ಎಂದಿರುವಾಗ ಧಾತುವಿಗೆ ದೀರ್ಘ ಹೇಳುತ್ತಾನೆ.

ಕ್ರಮ್ ಧಾತುವಿಗೆ ದೀರ್ಘ ಹೇಳುವ ಸೂತ್ರ.

**೪೮೭. ಕ್ರಮಃ ಪರಸ್ಮೈಪದೇಷು || ೭-೩-೭೬ ||**

**ಕ್ರಮೋ ದೀರ್ಘಃ ಪರಸ್ಮೈಪದೇ ಶಿತಿ | ಕ್ರಾಮ್ಯತಿ, ಕ್ರಾಮತಿ || ಚಕ್ರಾಮ || ಕ್ರಮಿತಾ | ಕ್ರಮಿಷ್ಯತಿ | ಕ್ರಾಮ್ಯತು, ಕ್ರಾಮತು | ಅಕ್ರಾಮ್ಯತ್, ಅಕ್ರಾಮತ್ | ಕ್ರಾಮ್ಯೇತ್, ಕ್ರಾಮೇತ್ | ಕ್ರಮ್ಯಾತ್ | ಅಕ್ರಮೀತ್ | ಅಕ್ರಮಿಷ್ಯತ್ ||**

ದ್ವಿಪದ ಸೂತ್ರ. 'ಶಮಾಮಷ್ಟಾನಾಂ -' ಸೂತ್ರದಿಂದ 'ದೀರ್ಘಃ', 'ಷ್ಠಿವುಕ್ಲಮ್ವಾಚಮಾಂ -' ಸೂತ್ರದಿಂದ 'ಶಿತಿ' ಪದಗಳು ಅನುವೃತ್ತವಾಗುತ್ತವೆ. ಶಿತಿ ಸಪ್ತಮೀ. ಶಿತ್ತಾದ ಪ್ರತ್ಯಯ ಪರದಲ್ಲಿರುವಾಗ ಎಂದರ್ಥ. **ಸೂತ್ರಾರ್ಥ**— ಪರಸ್ಮೈಪದ ಪರವಾದ ಶಕಾರ ಇತ್ತಾದ ಪ್ರತ್ಯಯ ಪರವಾದಾಗ ಕ್ರಮ್ ಧಾತುವಿಗೆ ದೀರ್ಘ ಬರುತ್ತದೆ. ಪ್ರಕೃತ ಪರಸ್ಮೈಪದಪರವಾದ ಶಿತ್ ಅಂದರೆ ಶ್ಯನ್ ಪ್ರತ್ಯಯ ಅದು ಪರವಾದುದರಿಂದ ಕ್ರಮ್ ಧಾತುವಿಗೆ ದೀರ್ಘ ಬಂದರೆ ಕ್ರಾಮ್ಯತಿ | ಕ್ರಾಮ್ಯತಃ|| ಇತ್ಯಾದಿ. ಕ್ರಾಮ್ಯ ಅಂಗ. ಶ್ಯನ್ ಬಾರದಿದ್ದರೆ ಶಪ್. ಇದೂ ಶಿತ್ತಾದುದರಿಂದ ಹಿಂದಿನ ಸೂತ್ರದಿಂದ ದೀರ್ಘ ಬಂದರೆ ಕ್ರಾಮತಿ | ಕ್ರಾಮತಃ | ಕ್ರಾಮಂತಿ || ಇತ್ಯಾದಿ. ಇಲ್ಲಿ ಕ್ರಾಮ ಅಂಗ.

ಲಿಟಿನಲ್ಲಿ ದ್ವಿತ್ವಾದಿ. ಕ್ರಕ್ರಮ್ + ಅ ಎಂದಿರುವಾಗ 'ಕುಹೋಶ್ಚುಃ' ಸೂತ್ರ ದಿಂದ ಅಭ್ಯಾಸದ ಕಕಾರಕ್ಕೆ ಚಕಾರಾದೇಶ. 'ಅತ ಉಪಧಾಯಾಃ' ಸೂತ್ರದಿಂದ ಧಾತುವಿನ ಅಕಾರಕ್ಕೆ ವೃದ್ಧಿ. ಚಕ್ರಾಮ | ಚಕ್ರಮತುಃ | ಚಕ್ರಮುಃ || ಇತ್ಯಾದಿ. ಚಕ್ರಮ್ ಅಂಗ. **ಲುಟ್** || ಕ್ರಮಿತಾ. ತಾಸಿಗೆ ಇಡಾಗಮ ಬಂದಿದೆ. ಕ್ರಮಿ ತಾಸ್ ಅಂಗ. ಸಾದಿ, ರಾದಿ, ಧಾದಿ ಪ್ರತ್ಯಯಗಳು ಪರವಾದಾಗ ತಾಸಿನ ಸಕಾರಕ್ಕೆ ಲೋಪ. **ಲೃಟ್** || ಸ್ಯ ವಿಕರಣಕ್ಕೆ ಇಡಾಗಮ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಸಕಾರಕ್ಕೆ ಷತ್ವ. ಕ್ರಮಿಷ್ಯತಿ ಇತ್ಯಾದಿ. **ಲೋಟ್** || ಸಾರ್ವಧಾತಕ ವಾದುದರಿಂದ ವಿಕಲ್ಪವಾಗಿ ಶ್ಯನ್. ದೀರ್ಘ. ಕ್ರಾಮ್ಯತು ಇತ್ಯಾದಿ. ಶಪ್ ಬಂದರೆ ಕ್ರಾಮತು ಇತ್ಯಾದಿ. ಕ್ರಾಮ್ಯ, ಕ್ರಾಮ ಅಂಗ **ಲಙ್** || ಅಕ್ರಾಮ್ಯ, ಅಕ್ರಾಮ ಅಂಗ. ಅಕ್ರಾಮ್ಯತ್, ಅಕ್ರಾಮತ್ ಇತ್ಯಾದಿ. **ವಿಧಿಲಿಙ್** || ಕ್ರಾಮ್ಯ, ಕ್ರಾಮ ಅಂಗ. ಯಾಸುಟಿಗೆ ಇಯಾದೇಶ. ಕ್ರಾಮ್ಯೇತ್ | ಕ್ರಾಮ್ಯೇತಾಮ್ |

ಕ್ರಾಮ್ಯೇಯುಃ || ಕ್ರಾಮ್ಯೇಃ | ಕ್ರಾಮ್ಯೇತಮ್ | ಕ್ರಾಮ್ಯೇತ || ಕ್ರಾಮ್ಯೇಯಮ್ | ಕ್ರಾಮ್ಯೇವ | ಕ್ರಾಮ್ಯೇಮ || ಹೀಗೆಯೇ ಕ್ರಾಮೇತ್ ಇತ್ಯಾದಿ. **ಆಶೀರ್ಲಿಙ್** || ಆರ್ಧಧಾತುಕವಾದುದರಿಂದ ಶ್ಯನಾದಿಗಳಿಲ್ಲ. ಯಾಸುಟ್. ಕ್ರಮ್ಯಾತ್ | ಕ್ರಮ್ಯಾಸ್ತಾಮ್ | ಕ್ರಮ್ಯಾಸುಃ || ಕ್ರಮ್ಯಾಃ | ಕ್ರಮ್ಯಾಸ್ತಮ್ | ಕ್ರಮ್ಯಾಸ್ತ || ಕ್ರಮ್ಯಾಸಮ್ | ಕ್ರಮ್ಯಾಸ್ವ | ಕ್ರಮ್ಯಾಸ್ಮ || **ಲುಙ್** || ಅಕ್ರಮ್ × ಇಸ್ + ಈತ್ ಎಂದಿರುವಾಗ 'ಇಟ ಈಟಿ' ಸೂತ್ರದಿಂದ ಸಲೋಪ. ಮಕಾರಾಂತಧಾತುವಾದುದರಿಂದ 'ಹ್ಮ್ಯಂತಕ್ಷಣಶ್ವಸ-' ಸೂತ್ರದಿಂದ (ಸೂ. ೪೬೭] ವೃದ್ಧಿನಿಷೇಧ. ಅಕ್ರಮೀತ್ | ಅಕ್ರಮಿಷ್ಟಾಮ್ | ಅಕ್ರಮಿಷುಃ || ಅಕ್ರಮೀಃ | ಅಕ್ರಮಿಷ್ಟಮ್ | ಅಕ್ರಮಿಷ್ಟ || ಅಕ್ರಮಿಷಮ್ | ಅಕ್ರಮಿಷ್ವ | ಅಕ್ರಮಿಷ್ಮ || **ಲೃಙ್** || ಅಕ್ರಮಿಷ್ಯತ್. ಅಭವಿಷ್ಯತ್ ಎಂಬಂತೆ ರೂಪಸಿದ್ಧಿ. ಅಕ್ರಮಿಷ್ಯ ಅಂಗ.

## || ೧೬ || ಪಾ — ಪಾನೇ || (ಕುಡಿಯುವುದು.]

ಆಕಾರಾಂತ ಧಾತು. ಪಾ+ಅ+ತಿ ಎಂದಿರುವಾಗ ಧಾತುವಿಗೆ ಆದೇಶ ಹೇಳುತ್ತಾನೆ.

ಪಾ ಮುಂತಾದ ಧಾತುಗಳಿಗೆ ಪಿಬಾದಿ ಆದೇಶ ಹೇಳುವ ಸೂತ್ರ.

1 2 3 4 5 9 7 8 9 10 11 1
**೪೮೮. ಪಾಘ್ರಾಧ್ಮಾಸ್ಥಾಮ್ನಾದಾಣ್‌ದೃಶ್ಯರ್ತಿಸರ್ತಿಶದಸದಾಂ, ಪಿಬ**
2 3 4 5 6 7 8 9 10 11
**ಜಿಘ್ರಧಮತಿಷ್ಠಮನಯಚ್ಛಪಶ್ಯರ್ಚ್ಛಧೌಶೀಯಸೀದಾಃ | ೭-೩-೭೮ ||**

**ಪಾದೀನಾಂ ಪಿಬಾದಯಃ ಸ್ಯುರಿತ್ಸಂಜ್ಞಕಶಕಾರಾದೌ ಪ್ರತ್ಯಯೇ ಪರೇ | ಪಿಬಾದೇಶೋಽದಂತಸ್ತೇನ ನ ಗುಣಃ | ಪಿಬತಿ ||**

ಎರಡು ಪದಗಳುಳ್ಳ ಸೂತ್ರ. ಹನ್ನೊಂದು ಧಾತುಗಳಿಗೆ ದ್ವಂದ್ವ ಸಮಾಸ. ಹಾಗೆ ಅವುಗಳ ಹನ್ನೊಂದು ಆದೇಶಗಳಿಗೂ ದ್ವಂದ್ವ. 'ಷ್ಠಿವುಕ್ಲಮ್ವಾ—' ಸೂತ್ರದಿಂದ 'ಶಿತಿ' ಅನುವೃತ್ತಿ. ಅಂಗಾಧಿಕಾರದಲ್ಲಿ ಹೇಳಿದುದರಿಂದ ಪ್ರತ್ಯಯ ಆಕ್ಷಿಪ್ತವಾಗುತ್ತದೆ. ಪ್ರತ್ಯಯೇ ಸಪ್ತಮ್ಯಂತಕ್ಕೆ ಶಿತಿ ಸಪ್ತಮ್ಯಂತ ವಿಶೇಷಣ. 'ಯಸ್ಮಿನ್ ವಿಧಿಸ್ತದಾದಾವಲ್ಗ್ರಹಣೇ' ಪರಿಭಾಷೆಯಿಂದ ತದಾದಿಲಾಭ. ಶ್ ಚಾಸೌ ಇತ್ ಚ ಶಿತ್. ತಸ್ಮಿನ್ ಶಿತಿ. ಇತ್ ಸಂಜ್ಞೆಯುಳ್ಳ ಶಕಾರಾದಿ ಪ್ರತ್ಯಯ ಪರವಾದಾಗ ಎಂದರ್ಥ, **ಸೂತ್ರಾರ್ಥ—** ಇತ್ ಸಂಜ್ಞೆಯುಳ್ಳ ಶಕಾರವೇ ಆದಿಯಾದ ಪ್ರತ್ಯಯ ಪರವಾದಾಗ ಪಾ, ಘ್ರಾ, ಧ್ಮಾ, ಸ್ಥಾ, ಮ್ನಾ, ದಾಣ್, ದೃಶಿ, ಅರ್ತಿ, ಸರ್ತಿ, ಶದ್, ಸದ್ ಎಂಬ ಹನ್ನೊಂದು ಧಾತುಗಳಿಗೆ ಪಿಬ, ಜಿಘ್ರ, ಧಮ, ತಿಷ್ಠ, ಮನ, ಯಚ್ಛ, ಪಶ್ಯ, ಋಚ್ಛ, ಧೌ, ಶೀಯ, ಸೀದ ಎಂಬ ಹನ್ನೊಂದು ಆದೇಶಗಳು ಬರುತ್ತವೆ. ದೃಶಿ ಇಕಿನಿಂದಲೂ, ಅರ್ತಿ ಸರ್ತಿ ಶ್ತಿಪ್‌ನಿಂದಲೂ ನಿರ್ದೇಶಿಸಿರುತ್ತಾನೆ. ದೃಶಿರ್,

ಖು, ಸ್ಸ ಧಾತುಗಳೆಂದು ತಿಳಿಯಬೇಕು. ಶಪ್ ಇತ್‌ಸಂಜ್ಞಕ ಶಕಾರಾದಿ ಪ್ರತ್ಯಯ ವಾದುದರಿಂದ ಅದು ಪರದಲ್ಲಿರುವುದರಿಂದ ಪಾ ಧಾತುವಿಗೆ ಪಿಬ ಎಂಬ ಆದೇಶ ಬರುತ್ತದೆ. ಇದು ಅಕಾರಾಂತವಾದ ಆದೇಶ. ಪಿಬ್ ಹಲಂತವಾಗಿದ್ದರೆ 'ಪುಗಂತ ಲಘೂಪಧಸ್ಯ ಚ' ಸೂತ್ರದಿಂದ ಲಘೂಪಧಗುಣ ಬರುತ್ತಿತ್ತು. ಅದಂತವಾದುದರಿಂದ ಗುಣವಿಲ್ಲ. ಪಿಬ — ಅ — ತಿ ಎಂದಿರುವಾಗ 'ಅತೋ ಗುಣೇ' ಸೂತ್ರದಿಂದ ಪರ ರೂಪ. ಪಿಬತಿ | ಪಿಬತಃ | ಪಿಬಂತಿ || ಇತ್ಯಾದಿ. ಪಿಬ ಅಂಗ.

**ಲಿಟ್** || ತಿಬಾದಿಗಳಿಗೆ ಣಲಾದಿ ಆದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಪಪಾ — ಣಲ್ ಎಂದಿರುವಾಗ ಣಲಿಗೆ ಔ ಆದೇಶ ಹೇಳುತ್ತಾನೆ.

ಲಿಟಿನ ಣಲಿಗೆ ಔ ಆದೇಶ ಹೇಳುವ ಸೂತ್ರ.

**೪೮೯. ಆತ, ಔ, ಣಲಃ || ೭-೧-೩೪ ||**

**ಆದಂತಾದ್ಧಾತೋರ್ಣಲ ಔಕಾರಾದೇಶಃ ಸ್ಯಾತ್ | ಪಪೌ ||**

ತ್ರಿಪದ ಸೂತ್ರ. ಣಲ್, ಧಾತುವಿಗೇ ಬರುವುದರಿಂದ ಧಾತುಪದವು ಲಬ್ಧ ವಾಗುತ್ತದೆ. 'ಅಂಗಸ್ಯ' ಅಧಿಕಾರ. ಪಂಚಮ್ಯಂತವಾಗಿ ವಿಪರಿಣತವಾದ ಅದಕ್ಕೆ 'ಆತಃ' ವಿಶೇಷಣವಾದುದರಿಂದ ತದಂತಲಾಭ. ಔ ಲುಪ್ತಪ್ರಥಮಾವಿಭಕ್ತಿಯುಳ್ಳ ಶಬ್ದ. **ಸೂತ್ರಾರ್ಥ** — ದೀರ್ಘಾಕಾರಾಂತ ಧಾತುರೂಪವಾದ ಅಂಗದ ಪರದಲ್ಲಿರುವ ಣಲ್ ಪ್ರತ್ಯಯಕ್ಕೆ ಔ ಆದೇಶ ಬರುತ್ತದೆ. 'ಆತಃ' ತ ಪರ ಮಾಡಿರುವುದರಿಂದ ದೀರ್ಘಾಕಾರ ಮಾತ್ರ ತೆಗೆದುಕೊಳ್ಳಬೇಕು. ಪಪಾ ದೀರ್ಘಾಕಾರಾಂತವಾದ ಅಂಗ. ಪರದ ಣಲಿಗೆ ಔ ಬಂದರೆ ಪಪಾ + ಔ ಎಂದಿರುವಾಗ 'ವೃದ್ಧಿರೇಚಿ' ಸೂತ್ರದಿಂದ ವೃದ್ಧಿ. ಪಪೌ. ಪಪಾ + ಅತುಸ್ ಎಂದಿರುವಾಗ ಆ ಲೋಪ ಹೇಳುತ್ತಾನೆ.

**೪೯೦. ಆತೋ, ಲೋಪ, ಇಟಿ ಚ || ೬-೪-೬೪ ||**

**ಅಜಾದ್ಯೋರಾರ್ಧಧಾತುಕಯೋಃ ಕ್ಙಿದಿಟೋಃ ಪರಯೋರಾತೋ ಲೋಪಃ | ಪಪತುಃ | ಪಪುಃ | ಪಪಿಥ, ಪಪಾಥ | ಪಪಥುಃ | ಪಪ | ಪಪೌ | ಪಪಿವ | ಪಪಿಮ || ಪಾತಾ || ಪಾಸ್ಯತಿ || ಪಿಬತು || ಅಪಿಬತ್ || ಪಿಬೇತ್||**

ಧಾತುವಿನ ಆಕಾರಕ್ಕೆ ಲೋಪ ಹೇಳುವ ಸೂತ್ರ.

ನಾಲ್ಕು ಪದಗಳುಳ್ಳ ಸೂತ್ರ, 'ಆರ್ಧಧಾತುಕೇ' ಅಧಿಕಾರ. 'ದೀಙೋ ಯುಡಚಿ ಕ್ಙಿತಿ' ಸೂತ್ರದಿಂದ 'ಅಚಿ', 'ಕ್ಙಿತಿ' ಪದಗಳು ಅನುವೃತ್ತವಾಗುತ್ತವೆ. 'ಅಚಿ' ಆರ್ಧಧಾತುಕಕ್ಕೆ ವಿಶೇಷಣ. ವರ್ಣವಾದುದರಿಂದ ಅಜಾದಿ ಆರ್ಧಧಾತುಕ ಎಂದರ್ಥವಾಗುತ್ತದೆ. **ಸೂತ್ರಾರ್ಥ** — ಅಜಾದಿಯಾಗಿ, ಆರ್ಧಧಾತುಕ ಸಂಜ್ಞೆ ಯಿರುವ ಕಿತ್, ಙಿತ್ ಪ್ರತ್ಯಯ ಪರದಲ್ಲಿರುವಾಗಲೂ ಇಟ್ ಪರದಲ್ಲಿರುವಾಗಲೂ

ಅಂಗದ ಆಕಾರಕ್ಕೆ ಲೋಪ ಬರುತ್ತದೆ. ಆರ್ಧಧಾತುಕದ ಅವಯವ ಇಟ್ ಆದುದರಿಂದ ಇಡಾಗಮವೂ ಆರ್ಧಧಾತುಕವೇ. ಪ್ರಕೃತ 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ ಲಿಟನ ದ್ವಿವಚನ, ಬಹುವಚನಗಳು ಕಿತ್ತಾದುದರಿಂದ ಅಜಾದಿಯಾದ ಆರ್ಧಧಾತುಕವೂ ಆದುದರಿಂದ ಆಕಾರಕ್ಕೆ ಲೋಪ. ಪಪ್+ಅತುಸ್. ಸಕಾರಕ್ಕೆ ರುತ್ವವಿಸರ್ಗ. ಪಪತುಃ. ಪಪಾ+ಉಸ್. ಹಿಂದಿನಂತೆ ಆ ಲೋಪ. ಪಪುಃ || ಪಾ ಧಾತು ಅನಿಟ್. ಥಲಿನಲ್ಲಿ ಭಾರದ್ವಾಜಮತದಿಂದ ಇಟ್. ಪಾಣಿನಿಮತದಲ್ಲಿ ಇಡಾಗಮವಿಲ್ಲ. ಇಡಾಗಮ ಬಂದರೆ ಪಪಾ+ಇಥ ಎಂದಿರುವಾಗ ಆರ್ಧಧಾತುಕ ಇಟ್ ಪರವಾದುದರಿಂದ ಹಿಂದಿನ ಸೂತ್ರದಿಂದ ಆಕಾರ ಲೋಪ. ಪಪಿಥ. ಇಡಾಗಮ ಬಾರದಿದ್ದರೆ ಹಾಗೇ ಇರುತ್ತದೆ. ಪಪಾಥ. ಅಥುಸ್ ಆದಿ ಅಜಾದಿ ಪ್ರತ್ಯಯಗಳು ಕಿತ್ತಾದುದರಿಂದ ಆ ಲೋಪ. ಪಪಥುಃ || ಪಪ || ಣಲಿಗೆ 'ಆತಔಣಲಃ' ಸೂತ್ರದಿಂದ ಔ ಆದೇಶ. ವೃದ್ಧಿ. ಪಪೌ. ವ, ಮ ಗಳಿಗೆ ಕ್ರಾದಿ ನಿಯಮದಿಂದ ಇಡಾಗಮ ಬಂದರೆ ಆ ಲೋಪ. ಪಪಿವ | ಪಪಿಮ ||

**ಲುಟ್** || ಅನಿಟಾದುದರಿಂದ ತಾಸಿಗೆ ಇಡಾಗಮ ಬರುವುದಿಲ್ಲ. ಪಾತಾ | ಪಾತಾರೌ | ಪಾತಾರಃ || ಪಾತಾಸಿ | ಪಾತಾಸ್ಥಃ | ಪಾತಾಸ್ಥ || ಪಾತಾಸ್ಮಿ | ಪಾತಾಸ್ವಃ | ಪಾತಾಸ್ಮಃ || **ಲೃಟ್** || ಸ್ಯ ವಿಕರಣ. ಇಡಾಗಮವಿಲ್ಲ. ಪಾಸ್ಯತಿ ಇತ್ಯಾದಿ. ಪಾಸ್ಯ ಅಂಗ. **ಲೋಟ್** || ಶಪ್ ಪರವಾದುದರಿಂದ ಧಾತುವಿಗೆ ಪಿಬ ಆದೇಶ. ಪಿಬತು, ಪಿಬತಾತ್ | ಪಿಬತಾಮ್ | ಪಿಬಂತು || ಪಿಬ, ಪಿಬತಾತ್ | ಪಿಬತಮ್ | ಪಿಬತ || ಪಿಬಾನಿ | ಪಿಬಾವ | ಪಿಬಾಮ || **ಲಙ್** || ಧಾತುವಿಗೆ ಪಿಬಾದೇಶ. ಅಂಗಕ್ಕೆ ಅಡಾಗಮ. ಅಪಿಬತ್ ಇತ್ಯಾದಿ. ಅಪಿಬ ಅಂಗ. **ವಿಧಿಲಿಙ್** || ಪಿಬಾದೇಶ. ಯಾಸುಟಿಗೆ ಇಯಾದೇಶ. ಪಿಬೇತ್ | ಪಿಬೇತಾಮ್ | ಪಿಬೇಯುಃ || ಪಿಬೇಃ | ಪಿಬೇತಮ್ ಪಿಬೇತ ||| ಪಿಬೇಯಮ್ ||| ಪಿಬೇವ | ಪಿಬೇಮ || **ಆಶೀರ್ಲಿಙ್** || ಪಾಯಾತ್ ಎಂದಿರುವಾಗ ಧಾತುವಿನ ಆಕಾರಕ್ಕೆ ಏತ್ವ ಹೇಳುತ್ತಾನೆ.

ಆಶೀರ್ಲಿಙಿನಲ್ಲಿ ಏತ್ವ ಹೇಳುವ ಸೂತ್ರ.

**೪೯೧. ಏರ್ಲಿಙಿ || ೬-೪-೬೭ ||**

**ಘುಸಂಜ್ಞಕಾನಾಂ ಮಾಸ್ಥಾದೀನಾಂಚ ಏತ್ವಂ ಸ್ಯಾದಾರ್ಧಧಾತುಕೇ ಕಿತಿಲಿಙಿ || ಪೇಯಾತ್ || ಗಾತಿಸ್ಥೇತಿ ಸಿಚೋ ಲುಕ್ | ಅಪಾತ್ | ಅಪಾತಾಮ್ ||**

ಏಃ, ಲಿಙಿ || ದ್ವಿಪದ ಸೂತ್ರ. ಏಃ ಪ್ರಥಮಾಂತ. 'ಘುಮಾಸ್ಥಾಗಾಪಾಜಹಾತಿಸಾಂ –' ಹಿಂದಿನ ಸೂತ್ರದಿಂದ ಅನುವೃತ್ತಿ. 'ಆರ್ಧಧಾತುಕೇ' ಅಧಿಕಾರ. 'ದೀಙೋ ಯುಡಚಿ—' ಸೂತ್ರದಿಂದ 'ಕಿತಿ' ಮಾತ್ರ ಅನುವೃತ್ತವಾಗುತ್ತದೆ. ಕಿತಿ

ಎಂಬುದು ಆರ್ಧಧಾತುಕದಲ್ಲಿ ಅನ್ವಯಹೊಂದುತ್ತದೆ. **ಸೂತ್ರಾರ್ಥ—** ಘು ಸಂಜ್ಞೆಯುಳ್ಳ ಧಾತುಗಳಿಗೂ ಮಾ, ಸ್ಥಾ, ಗಾ, ಪಾ, ಹಾ, ಸೋ ಧಾತುಗಳಿಗೂ ಕಿತ್ತಾದ ಆರ್ಧಧಾತುಕಪರದಲ್ಲಿರುವಾಗ ಏತ್ವ ಬರುತ್ತದೆ. ದಾ ರೂಪ, ಧಾ ರೂಪ ಧಾತುಗಳಿಗೆ ಘು ಎಂಬ ಸಂಜ್ಞೆ ಮುಂದೆ ಹೇಳುತ್ತಾನೆ. ಪ್ರಕೃತ ಆಶೀರ್ಲಿಙ್ನ ಯಾಸುಟ್ ಕಿತ್ತಾದ ಆರ್ಧಧಾತುಕವಾದುದರಿಂದ ಪಾ ಧಾತುವಿನ ಆಕಾರಕ್ಕೆ ಏಕಾರಾದೇಶ ಬರುತ್ತದೆ. ಪೇಯಾತ್ | ಪೇಯಾಸ್ತಾಮ್ | ಪೇಯಾಸುಃ || ಪೇಯಾಃ | ಪೇಯಾಸ್ತಮ್ | ಪೇಯಾಸ್ತ || ಪೇಯಾಸಮ್ | ಪೇಯಾಸ್ವ | ಪೇಯಾಸ್ಮ ||

**ಲುಙ್** || ಅಪಾ + ಸ್ + ತ್ ಎಂದಿರುವಾಗ 'ಗಾತಿಸ್ಥಾಘುಪಾಭೂಭ್ಯಃ—' ಸೂತ್ರದಿಂದ ಪಾ ಧಾತುವಿನ ಪರವಾದ ಸಿಚಿಗೆ ಲೋಪ. ಸಿಚ್ ಇಲ್ಲದಿರುವುದರಿಂದ ಅಪೃಕ್ತಕ್ಕೆ ಈಡಾಗಮವಿಲ್ಲ. ಅಪಾತ್ | ಅಪಾತಾಮ್ | ಅಪಾ + ಸ್ + ಝಿ ಎಂದಿರುವಾಗ ಸಿಚಿಗೆ ಹಿಂದಿನಂತೆ ಲುಕ್. ಪ್ರತ್ಯಯಲಕ್ಷಣದಿಂದ ಸಿಚ್ ಇದೆಯೆಂದು ಅದನ್ನು ನಿಮಿತ್ತೀಕರಿಸಿ 'ಸಿಚಭ್ಯಸ್ತವಿದಿಭ್ಯಶ್ಚ' ಸೂತ್ರದಿಂದ ಝಿಗೆ ಜುಸ್ ಬರುತ್ತಿರುವಾಗ ಆದಂತಧಾತುಗಳಲ್ಲಿ ನಿಯಮಕ್ಕೋಸ್ಕರ ಜುಸಾದೇಶವನ್ನು ಇತರ ಸೂತ್ರದಿಂದ ಹೇಳುತ್ತಾನೆ.

ಝಿಗೆ ಜುಸಾದೇಶ ನಿಯಮ ಹೇಳುವ ಸೂತ್ರ.

**೪೯೨ ಆತಃ ॥ ೩–೪–೧೧೦ ||**

**ಸಿಜ್ಲುಕಿ ಆದಂತಾದೇವ ಝೇರ್ಜುಸ್ ॥**

ಏಕಪದ ಸೂತ್ರ. 'ಝೇರ್ಜುಸ್' ಸೂತ್ರ ಅನುವೃತ್ತವಾಗುತ್ತದೆ. 'ಆತಃ ಸಿಜ್ಲುಗಂತಾತ್ ಇಸ ವಕ್ತವ್ಯಮ್' ವಾರ್ತಿಕವಿರುವುದರಿಂದ ಸಿಚ್‌ಲುಕಿ, 'ಆತಃ' ಪದಗಳು ಲಬ್ಧವಾಗುತ್ತವೆ. ಹಿಂದೆ ಹೇಳಿದಂತೆ ಇದು ನಿಯಮಸೂತ್ರ. **ಸೂತ್ರಾರ್ಥ—** ಸಿಚ್ ಲುಕ್ ಆದಾಗ ಝಿಗೆ ಜುಸಾದೇಶ ಬರುವುದಾದರೆ ಆದಂತ ಧಾತುವಿನ ಪರದಲ್ಲಿರುವ ಝಿಗೆ ಮಾತ್ರ ಬರುತ್ತದೆ. ಇತರ ಧಾತುಗಳ ಪರದಲ್ಲಿರುವ ಝಿಗೆ ಜುಸಾದೇಶ ಬರುವುದಿಲ್ಲ. ಪ್ರಕೃತ ಆದಂತಧಾತುವಾದುದರಿಂದ ಝಿಗೆ ಜುಸಾದೇಶ ಬಂದರೆ ಅಪಾ + ಉಸ್ ಎಂದಾಗುತ್ತದೆ. ಗುಣ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಪರರೂಪ ಹೇಳುತ್ತಾನೆ.

ಉಸಿನಲ್ಲಿ ಪರರೂಪ ಹೇಳುವ ಸೂತ್ರ.

**೪೯೩. ಉಸ್ಯಪದಾನ್ತಾತ್ || ೬–೧–೯೬ ||**

**ಅಪದಾಂತಾದಕಾರಾದುಸಿ ಪರರೂಪಮೇಕಾದೇಶಃ | ಅಪುಃ | ಅಪಾಸ್ಯತ್ ||**

ಉಸಿ, ಅಪದಾನ್ತಾತ್ || ದ್ವಿಪದ ಸೂತ್ರ. 'ಅದ್ಗುಣಃ' ಸೂತ್ರದಿಂದ 'ಆತ್', 'ಏಙಿ ಪರರೂಪಮ್' ಸೂತ್ರದಿಂದ 'ಪರರೂಪಮ್', 'ಇಕೋ ಯಣಚಿ' ಸೂತ್ರದಿಂದ 'ಅಚಿ' ಪದಗಳು ಅನುವೃತ್ತವಾಗುತ್ತವೆ. 'ಏಕಃ ಪೂರ್ವ ಪರಯೋಃ' ಅಧಿಕಾರ. **ಸೂತ್ರಾರ್ಥ**—ಅಪದಾನ್ತವಾದ ಅಕಾರದ ಪರದಲ್ಲಿ ಉಸಿನ ಅಚ್ ಪರದಲ್ಲಿರುವಾಗ ಪೂರ್ವಪರಗಳ ಸ್ಥಾನಕ್ಕೆ ಪರರೂಪವು ಏಕಾದೇಶವಾಗಿ ಬರುತ್ತದೆ. ಅಪಾ ಎಂಬಲ್ಲಿರುವ ಆಕಾರ ಅಪದಾಂತವಾಗಿದೆ. ಅದಕ್ಕೆ ಉಸಿನ ಅಚ್ ಉಕಾರ ಪರದಲ್ಲಿದೆ. ಆಕಾರ ಉಕಾರಗಳಿಗೆ ಪರರೂಪ ಬಂದರೆ ಒಂದೇ ಉಕಾರ ಬರುತ್ತದೆ. ಉಸಿನ ಸಕಾರಕ್ಕೆ ರುತ್ವ, ವಿಸರ್ಗ. ಅಪುಃ || ಅಪಾಃ | ಅಪಾತಂ | ಅಪಾತ || ಅಪಾಮ್ | ಅಪಾವ | ಅಪಾಮ || ಲೃಙ್— ಸ್ಯ ವಿಕರಣ. ಇಡಾಗಮವಿಲ್ಲ. ಅಂಗಕ್ಕೆ ಅಡಾಗಮ. ಅಪಾಸ್ಯತ್ | ಇತ್ಯಾದಿ.

**|| ೧೭ || ಗ್ಲೈ = ಹರ್ಷಕ್ಷಯೋಃ (ವ್ಯಥೆಪಡುವುದು.)**
**ಗ್ಲಾಯತಿ ||**

ಗ್ಲೈ+ಅ+ತಿ ಎಂದಿರುವಾಗ 'ಏಚೋಽಯವಾಯಾವಃ' ಸೂತ್ರದಿಂದ ಅಚ್ ಪರವಾದುದರಿಂದ ಐಕಾರಕ್ಕೆ ಆಯಾದೇಶ. ಗ್ಲಾಯತಿ | ಗ್ಲಾಯತಃ || ಇತ್ಯಾದಿ. ಗ್ಲಾಯ ಅಂಗ. ಲಿಟ್ || ತಿಬಾದಿಗಳಿಗೆ ಣಲಾದಿ ಆದೇಶ. ಗ್ಲೈ+ಅ ಎಂದಿರುವಾಗ ಧಾತುವಿಗೆ ಆತ್ವ ಹೇಳುತ್ತಾನೆ.

ಏಜಂತಧಾತುವಿಗೆ ಆತ್ವ ಹೇಳುವ ಸೂತ್ರ.

**೪೯೪. ಆದೇಚ ಉಪದೇಶೇಽಶಿತಿ || ೬-೧-೪೫ ||**

**ಉಪದೇಶೇ ಏಜಂತಸ್ಯ ಧಾತೋರಾತ್ವಂ ನ ತು ಶಿತಿ | ಜಗ್ಲೌ || ಗ್ಲಾತಾ | ಗ್ಲಾಸ್ಯತಿ | ಗ್ಲಾಯತು | ಅಗ್ಲಾಯತ್ | ಗ್ಲಾಯೇತ್ ||**

ಆತ್, ಏಚಃ, ಉಪದೇಶೇ, ಅಶಿತಿ || ನಾಲ್ಕು ಪದಗಳುಳ್ಳ ಸೂತ್ರ. 'ಲಿಟಿ ಧಾತೋರನಭ್ಯಾಸಸ್ಯ' ಸೂತ್ರದಿಂದ 'ಧಾತೋಃ' ಅನುವೃತ್ತಿ. 'ಏಚಃ' ಅದಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ಉಪದೇಶಕಾಲದಲ್ಲಿ ಏಜಂತ ವಾದ ಧಾತುವಿಗೆ ಶಕಾರ ಇತ್ತಾಗದ ಧಾತು ಪರದಲ್ಲಿರುವಾಗ ಆಕಾರಾದೇಶ ಬರುತ್ತದೆ. ಲಿಡಾದಿಗಳಲ್ಲಿ ಶಿತ್ ಪ್ರತ್ಯಯ ಯಾವುದೂ ಇಲ್ಲ. ಅಲ್ಲಿ ಶಪ್ ವಿಕರಣವೂ ಬರುವುದಿಲ್ಲ. ಗ್ಲೈ ಎಂಬುದು ಉಪದೇಶಕಾಲದಲ್ಲಿಯೇ ಏಜಂತವಾಗಿದೆ. ಆಗ ಲಿಟನಲ್ಲಿ ಗ್ಲಾ ಎಂತಾಗುತ್ತದೆ. ದ್ವಿತ್ವಾದಿಗಳು ಬಂದು ಅಭ್ಯಾಸಕ್ಕೆ ಚವರ್ಗಾದೇಶ ಬಂದರೆ ಜಗ್ಲಾ+ಅ ಎಂದಿರುವಾಗ 'ಆತ ಔ ಣಲಃ' ಸೂತ್ರದಿಂದ ಣಲಿಗೆ ಔಕಾರಾದೇಶ. ವೃದ್ಧಿ. ಜಗ್ಲೌ ಜಗ್ಲಾ+ಅತುಸ್ ಎಂದಿರುವಾಗ 'ಆತೋ ಲೋಪ ಇಟಿ ಚ'

ಸೂತ್ರದಿಂದ ಆಕಾರಕ್ಕೆ ಲೋಪ. ದ್ವಿವಚನ, ಬಹುವಚನದಲ್ಲಿ ಈ ಸೂತ್ರದಿಂದ ಲೋಪ. ಜಗ್ಲತುಃ | ಜಗ್ಲುಃ || ಇದು ಅನಿಟ್ ಧಾತುವಾದುದರಿಂದ ಥಲಿನಲ್ಲಿ ಭಾರದ್ವಾಜನಿಯಮದಿಂದ ಇಟ್ ಬಂದರೆ ಆಲೋಪ. ಇಡಾಗಮ ಬಾರದಿದ್ದರೆ ಆಲೋಪವಿಲ್ಲ. ಜಗ್ಲಿಥ, ಜಗ್ಲಾಥ | ಜಗ್ಲಥುಃ | ಜಗ್ಲ || ಜಗ್ಲೌ | ಜಗ್ಲಿವ | ಜಗ್ಲಿಮ || **ಲುಟ್** || ತಾಸ್ ಆಶಿತ್ ಪ್ರತ್ಯಯವಾದುದರಿಂದ ಅದು ಪರವಾದಾಗ ಧಾತುವಿನ ಏಕಾರಕ್ಕೆ ಆತ್ವ. ಇಡಾಗಮವಿಲ್ಲ. ಗ್ಲಾತಾ | ಗ್ಲಾತಾರೌ | ಗ್ಲಾತಾರಃ || ಇತ್ಯಾದಿ. ಗ್ಲಾತಾಸ್ ಅಂಗ. **ಲೃಟ್** || ಸ್ಯ ವಿಕರಣ. ಆತ್ವ. ಗ್ಲಾಸ್ಯತಿ ಇತ್ಯಾದಿ. ಗ್ಲಾಸ್ಯ ಅಂಗ. **ಲೋಟ್** || ಗ್ಲೈ + ಅ + ತು. ಆಯಾದೇಶ. ಗ್ಲಾಯತು–ಗ್ಲಾಯತಾತ್ ಇತ್ಯಾದಿ. ಗ್ಲಾಯ ಅಂಗ. **ಲಙ್** || ಅಗ್ಲಾಯ ಅಂಗ. ಅಗ್ಲಾಯತ್ | ಇತ್ಯಾದಿ. **ವಿಧಿಲಿಙ್** || ಯಾಸುಟಿಗೆ ಇಯಾದೇಶ. ಗ್ಲಾಯ ಅಂಗ. ಗುಣ. ಗ್ಲಾಯೇತ್ | ಗ್ಲಾಯೇತಾಮ್ | ಗ್ಲಾಯೇಯುಃ || ಗ್ಲಾಯೇಃ | ಗ್ಲಾಯೇತಮ್ | ಗ್ಲಾಯೇತ || ಗ್ಲಾಯೇಯಮ್ | ಗ್ಲಾಯೇವ | ಗ್ಲಾಯೇಮ || **ಆಶೀರ್ಲಿಙ್** || ಗ್ಲೈ + ಯಾಸ್ ತ್. 'ಸ್ಕೋಸ್ಸಂಯೋಗಾದ್ಯೋರಂತೇಚ' ಸೂತ್ರದಿಂದ ಸಲೋಪ. 'ಆದೇಚ ಉಪದೇಶೇಽಶಿತಿ' ಸೂತ್ರದಿಂದ ನಿತ್ಯವಾಗಿ ಆತ್ವ ಪ್ರಾಪ್ತವಾದರೆ ವಿಕಲ್ಪದಿಂದ ಅದಕ್ಕೆ ಏತ್ವ ಹೇಳುತ್ತಾನೆ.

ಸಂಯೋಗಾದಿ ಧಾತುವಿಗೆ ಆತ್ವವಿಕಲ್ಪ ಹೇಳುವ ಸೂತ್ರ.

**೪೯೫. ವಾಽನ್ಯಸ್ಯ ಸಂಯೋಗಾದೇಃ || ೬-೪-೬೮ ||**

**ಘುಮಾಸ್ಥಾದೇರನ್ಯಸ್ಯ ಸಂಯೋಗಾದೇರ್ಧಾತೋರಾತ ಏತ್ವಂ ವಾರ್ಧಧಾತುಕೇ ಕಿತಿ ಲಿಙಿ । ಗ್ಲೇಯಾತ್, ಗ್ಲಾಯಾತ್ ॥**

ತ್ರಿಪದ ಸೂತ್ರ. 'ಆರ್ಧಧಾತುಕೇ' ಅಧಿಕಾರ. 'ಏರ್ಲಿಙಿ' ಸೂತ್ರವೇ ಅನುವೃತ್ತವಾಗುತ್ತದೆ. 'ಆತೋ ಲೋಪಃ–' ಸೂತ್ರದಿಂದ 'ಆತಃ', 'ದೀಙೋ ಯುಡಚಿ–' ಸೂತ್ರದಿಂದ 'ಕಿತಿ' ಪದಗಳು ಅನುವೃತ್ತವಾಗುತ್ತವೆ. 'ಅನ್ಯಸ್ಯ' ಅಂದರೆ ಇತರ ಧಾತುಗಳಿಗೆ ಎಂದರ್ಥ. ಯಾವ ಇತರ ಧಾತುಗಳು ? ಎಂದರೆ ಹಿಂದೆ 'ಘುಮಾಸ್ಥಾ–' ಸೂತ್ರವಿರುವುದರಿಂದ ಅವುಗಳಿಂದ ಇತರಗಳು ಎಂದರ್ಥವಾಗುತ್ತದೆ. **ಸೂತ್ರಾರ್ಥ** – ಘು, ಮಾ, ಸ್ಥಾದಿಗಳಿಗಿಂತ (ಎಂಟು) ಇತರ ಸಂಯೋಗಾದಿಯಾಗಿರುವ ಧಾತುವಿನ ಆಕಾರಕ್ಕೆ ಆರ್ಧಧಾತುಕಸಂಜ್ಞೆಯಿರುವ ಕಿತ್ತಾದ ಲಿಙ್ ಪರದಲ್ಲಿರುವಾಗ ಏಕಾರ ವಿಕಲ್ಪವಾಗಿ ಬರುತ್ತದೆ. ಗ್ಲಾ + ಯಾತ್ ಇಲ್ಲಿ ಆಶೀರ್ಲಿಙ್ ಆದುದರಿಂದ ಕಿತ್ತಾದ ಲಿಙ್ ಪರದಲ್ಲಿದೆ. ಮಾಸ್ಥಾದಿಗಿಂತ ಭಿನ್ನವಾಗಿ ಆದಂತ ಧಾತುವಾಗಿದೆ. ಆಕಾರಕ್ಕೆ ಏತ್ವ ಬಂದರೆ ಗ್ಲೇಯಾತ್. ಏತ್ವ ಬಾರದಿದ್ದರೆ ಆಕಾರವಿರುತ್ತದೆ. ಗ್ಲಾಯಾತ್. **ಲುಙ್** || ಅಗ್ಲೈ + ಸ್ + ತ್ ಎಂದಿರುವಾಗ 'ಆದೇಚ ಉಪದೇಶೇಽ

ಶಿತಿ' ಸೂತ್ರದಿಂದ ಆತ್ವ. ಅಗ್ಲಾ+ಸ್‌ತ್. ಅನಿಟ್ ಧಾತುವಾದುದರಿಂದ ಇಡಾಗಮ ಬರುವುದಿಲ್ಲ. ಈಗ ಸಿಚಿಗೆ ಮಾತ್ರ ಇಡಾಗಮವನ್ನೂ ಧಾತುವಿಗೆ ಸಕ್ ಆಗಮವನ್ನೂ ಹೇಳುತ್ತಾನೆ.

ಆದಂತಧಾತುಗಳಿಗೆ ಸಗಾಗಮ ಹೇಳುವ ಸೂತ್ರ.

**೪೯೬. ಯಮರಮನಮಾತಾಂ ಸಕ್ ಚ || ೭-೨-೭೩ ||**

**ಏಷಾಂ ಸಕ್ ಸ್ಯಾದೇಭ್ಯಃ ಸಿಚ ಇಟ್ ಸ್ಯಾತ್ಪರಸ್ಮೈಪದೇಷು | ಅಗ್ಲಾಸೀತ್ | ಅಗ್ಲಾಸ್ಯತ್ ||**

ತ್ರಿಪದ ಸೂತ್ರ. ಯಮಶ್ಚ, ರಮಶ್ಚ, ನಮಶ್ಚ, ಆತ್‌ಚ, ಯಮರಮನಮಾತಃ ತೇಷಾಮ್. 'ಇಡತ್ಯರ್ತಿ—' ಸೂತ್ರದಿಂದ 'ಇಟ್", 'ಸ್ತುಸುಧೂಞ್ಭ್ಯಃ ಪರಸ್ಮೈಪದೇಷು' ಸೂತ್ರದಿಂದ 'ಪರಸ್ಮೈಪದೇಷು', 'ಅಂಜೇಃ ಸಿಚಿ' ಸೂತ್ರದಿಂದ 'ಸಿಚಿ" ಪದಗಳು ಅನುವೃತ್ತವಾಗುತ್ತವೆ. ಸಿಚಿ ಎಂಬುದು ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. **ಸೂತ್ರಾರ್ಥ—** ಯಮ್, ರಮ್, ನಮ್ ಆದಂತಧಾತುಗಳಿಗೆ ಸಕಾಗಮವೂ ಇವುಗಳ ಪರದಲ್ಲಿರುವ ಸಿಚಿಗೆ ಇಡಾಗಮವೂ ಪರಸ್ಮೈಪದ ಪರದಲ್ಲಿರುವಾಗ ಬರುತ್ತದೆ. ಅಗ್ಲಾ+ಸ್+ತ್ ಎಂದಿರುವಾಗ ತ್ ಪರಸ್ಮೈಪದ. ಇದು ಪರದಲ್ಲಿರುವುದರಿಂದ ಆದಂತಧಾತು ಗ್ಲಾ ಇದಕ್ಕೆ ಸಕಾಗಮ. ಸಿಚಿಗೆ ಇಡಾಗಮ ಸಕ್ ಕಿತ್ತಾದುದರಿಂದ ಧಾತುವಿಗೆ ಅಂತಾವಯವವಾಗಿಯೂ, ಇಟ್ ಟಿತ್ತಾದುದರಿಂದ ಸಿಚಿಗೆ ಆದ್ಯವಯವವಾಗಿಯೂ ಬರುತ್ತವೆ. ಅಗ್ಲಾಸ್+ಇಸ್+ತ್. 'ಅಸ್ತಿಸಿಚೋಽಪೃಕ್ತೇ' ಸೂತ್ರದಿಂದ ಅಪೃಕ್ತಕ್ಕೆ ಈಡಾಗಮ. 'ಇಟ ಈಟಿ' ಸೂತ್ರದಿಂದ ಸಿಚಿಗೆ ಲೋಪ. ಸವರ್ಣದೀರ್ಘ. ಅಗ್ಲಾಸೀತ್. ಅಗ್ಲಾಸಿಸ್ ಅಂಗ. ಇಕಾರದ ಪರದಲ್ಲಿರುವುದರಿಂದ ಸಿಚಿನ ಸಕಾರಕ್ಕೆ ಷತ್ವ. ಷಕಾರದ ಯೋಗವಿರುವುದರಿಂದ ಪ್ರತ್ಯಯ ತಕಾರಕ್ಕೆ ಷ್ಟುತ್ವ. ಅಗ್ಲಾಸಿಷ್ಟಾಮ್ | ಅಗ್ಲಾಸಿಷುಃ || ಅಗ್ಲಾಸೀಃ | ಅಗ್ಲಾಸಿಷ್ಟಂ | ಅಗ್ಲಾಸಿಷ್ಟ || ಅಗ್ಲಾಸಿಷಂ | ಅಗ್ಲಾಸಿಷ್ವ | ಅಗ್ಲಾಸಿಷ್ಮ || **ಲೃಙ್** || ಅಗ್ಲಾಸ್ಯತ್ | ಅಗ್ಲಾಸ್ಯತಾಂ | ಅಗ್ಲಾಸ್ಯನ್ ಇತ್ಯಾದಿ. ಸ್ಯ ಆರ್ಧಧಾತುಕವಾದುದರಿಂದ ಧಾತುವಿನ ಐಕಾರಕ್ಕೆ ಆತ್ವ ಬಂದಿದೆ.

|| ೧೮ || **ಹ್ವೃ ಕೌಟಿಲ್ಯೇ** || (ಕುಟಿಲ ನಡತೆ)
**ಹ್ವರತಿ** ||

**ಲಟ್** || ಹ್ವೃ+ಅ+ತಿ ಎಂದಿರುವಾಗ ಧಾತು ಇಗಂತವಾದುದರಿಂದ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಶಪ್ ನಿಮಿತ್ತೀಕರಿಸಿ ಗುಣ. 'ಉರಣ್ರಪರಃ' ಸೂತ್ರದಿಂದ ರಪರವಾಗಿ ಬರುತ್ತದೆ. ಹ್ವರತಿ | ಹ್ವರತಃ | ಹ್ವರಂತಿ || ಇತ್ಯಾದಿ. ಹ್ವರ ಅಂಗ. **ಲಿಟ್** || ಹ್ವೃಹ್ವೃ+ಅ ಎಂದು ದ್ವಿತ್ವ ಬಂದಾಗ

'ಉರತ್' ಸೂತ್ರದಿಂದ ಅಭ್ಯಾಸ ಋಕಾರಕ್ಕೆ ಅಕಾರ ಬಂದರೆ ಹ್ವರ್‌ಹ್ವೃ+ಅ ಎಂದಾಗುತ್ತದೆ. 'ಹಲಾದಿಃ ಶೇಷಃ' ಸೂತ್ರದಿಂದ ಹಹ್ವೃ+ಅ ಎಂದಾಗುತ್ತದೆ. 'ಕುಹೋಶ್ಚುಃ' ಸೂತ್ರದಿಂದ ಅಭ್ಯಾಸ ಹಕಾರಕ್ಕೆ ಜಕಾರಾದೇಶ. ಜಹ್ವೃ+ಅ ಎಂದಿರುವಾಗ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ ಪ್ರಾಪ್ತವಾದರೂ ಅದಕ್ಕೂ ಪರವಾದ ಸೂತ್ರದಿಂದ ಗುಣ ಹೇಳುತ್ತಾನೆ. ಈ ಗುಣವು ಲಿಟ‌ನ ಒಂಬತ್ತು ಪ್ರತ್ಯಯಗಳಲ್ಲಿಯೂ ಬರುತ್ತವೆ.

ಸಂಯೋಗಾದಿ ಋಕಾರಾಂತ ಧಾತುವಿಗೆ ಗುಣ ಹೇಳುವ ಸೂತ್ರ.

**೪೯೭ ಋತಶ್ಚ ಸಂಯೋಗಾದೇರ್ಗುಣಃ ॥ ೭-೪-೧೦ ॥**

**ಋದಂತಸ್ಯ ಸಂಯೋಗಾದೇರಂಗಸ್ಯ ಗುಣೋ ಲಿಟಿ ॥ ಉಪಧಾಯಾ ವೃದ್ಧಿಃ । ಜಹ್ವಾರ-ಜಹ್ವರತುಃ— ಜಹ್ವರುಃ । ಜಹ್ವರ್ಥ—ಜಹ್ವರಥುಃ-ಜಹ್ವರ ॥ ಜಹ್ವಾರ, ಜಹ್ವರ-ಜಹ್ವರಿವ-ಜಹ್ವರಿಮ । ಹ್ವರ್ತಾ ॥**

ಋತಃ, ಚ, ಸಂಯೋಗಾದೇಃ, ಗುಣಃ || ನಾಲ್ಕು ಪದಗಳುಳ್ಳ ಸೂತ್ರ. 'ದಯತೇರ್ದಿಗಿಲಿಟಿ' ಸೂತ್ರದಿಂದ 'ಲಿಟಿ' ಅನುವೃತ್ತಿ. ಋತಃ ಅಧಿಕೃತವಾದ ಅಂಗಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ಸಂಯೋಗವೇ ಆದಿಯಾಗಿಯೂ, ಋಕಾರವೇ ಅಂಗವಾಗಿಯೂ ಇರುವ ಅಂಗಕ್ಕೆ ಲಿಟ್ ಪರವಾದಾಗ ಗುಣ ಬರುತ್ತದೆ. ಜಹ್ವೃ ಅಂಗ. ಇದು ಸಂಯೋಗಾದಿಯಾಗಿಯೂ (ಹ್ವೃ ಹ್ವೃ +ಅ) ಋದಂತವಾಗಿಯೂ ಇರುವುದರಿಂದ ಲಿಟ್ ಪರವಾದುದರಿಂದ ಗುಣ ಬರುತ್ತದೆ, ಋಕಾರದ ಸ್ಥಾನಕ್ಕೆ ಬರುವುದರಿಂದ ರ ಪರವಾಗಿ ಬಂದರೆ ಜಹ್ವರ್ +ಅ ಎಂದಾಗುತ್ತದೆ. ಆಗ 'ಅತ ಉಪಧಾಯಾಃ' ಸೂತ್ರದಿಂದ ಣಲ್ ನಿಮಿತ್ತವಾಗಿ ಉಪಧಾ ಅಕಾರಕ್ಕೆ ವೃದ್ಧಿ. ಜಹ್ವಾರ್ +ಅ=ಜಹ್ವಾರ | ಈ ಸೂತ್ರದಿಂದ ಲಿಟ್ ಸಾಮಾನ್ಯದಲ್ಲಿಯೂ ಗುಣ ಬರುವುದರಿಂದ ಜಹ್ವರ್ ಅಂಗವೆಂದು ತಿಳಿಯಬೇಕು. ಜಹ್ವರತುಃ | ಜಹ್ವರುಃ || ಇದು ಋಕಾರಾಂತವಾಗಿ ಅನಿಟಾದುದರಿಂದ ಭಾರದ್ವಾಜರ ಮತದಲ್ಲಿಯೂ ಥಲಿನಲ್ಲಿ ಇಡಾಗಮ ಬರುವುದಿಲ್ಲ. ಆಗ ಜಹ್ವರ್ಥ ಎಂದಾಗುತ್ತದೆ. ಜಹ್ವರಥುಃ | ಜಹ್ವರ || ಜಹ್ವಾರ, ಜಹ್ವರ || 'ಣಲುತ್ತಮೋ ವಾ' ಸೂತ್ರದಿಂದ ಣಲ್ ವಿಕಲ್ಪ ಣಿತ್ತಾದುದರಿಂದ ವಿಕಲ್ಪವೃದ್ಧಿ. ಜಹ್ವರಿವ | ಜಹ್ವರಿಮ||

**ಲುಟ್** || ತಾಸ್ ಪರವಾದಾಗ ಹ್ವೃ ಧಾತುವಿನ ಋಕಾರಕ್ಕೆ ಗುಣ. ಹ್ವರ್ತಾ| ಹ್ವರ್ತಾರೌ | ಹ್ವರ್ತಾರಃ| ಹ್ವರ್ತಾಸಿ | ಹ್ವರ್ತಾಸ್ಥಃ | ಹ್ವರ್ತಾಸ್ಥ || ಹ್ವರ್ತಾಸ್ಮಿ | ಹ್ವರ್ತಾಸ್ವಃ | ಹ್ವರ್ತಾಸ್ಮಃ || **ಲೃಟ್** || ಹ್ವೃ+ ಸ್ಯತಿ ಎಂದಿರುವಾಗ ಧಾತುವು ಅನಿಟಾದುದರಿಂದ ಸಾಮಾನ್ಯ ಸೂತ್ರದಿಂದ ಇಡಾಗಮ ಬಾರದಿರುವಾಗ ವಿಶೇಷವಾಗಿ ಇಡಾಗಮ ವಿಧಿಸುತ್ತಾನೆ.

ಸ್ಯ ಪ್ರತ್ಯಯಕ್ಕೆ ಇಡಾಗಮ ಹೇಳುವ ಸೂತ್ರ.

**೪೯೮. ಋದ್ಧನೋಃ ಸ್ಯೇ || ೭-೨-೭೦ ||**

**ಋತೋ ಹಂತೇಶ್ಚ ಸ್ಯಸ್ಯೇಟ್ | ಹ್ವರಿಷ್ಯತಿ | ಹ್ವರತು | ಅಹ್ವರತ್ | ಹ್ವರೇತ್ ||**

ದ್ವಿಪದ ಸೂತ್ರ. ಋತ್ ಚ ಹನ್ ಚ ಋದ್ಧನೌ | ತಯೋಃ ಋದ್ಧನೋಃ | ಪಂಚಮ್ಯರ್ಥದಲ್ಲಿ ಷಷ್ಠೀ ಬಂದಿದೆ. ಋದಂತವಾದ ಧಾತು, ಹನ್ ಧಾತುಪರದಲ್ಲಿರುವ ಎಂದರ್ಥ. ಸ್ಯೇ ಎಂಬಲ್ಲಿ ಷಷ್ಠ್ಯರ್ಥದಲ್ಲಿ ಸಪ್ತಮೀ ಬಂದಿದೆ. 'ಆರ್ಧಧಾತುಕಸ್ಯೇಟ್' ಸೂತ್ರದಿಂದ ಇಟ್ ಅನುವೃತ್ತಿ. ಸೂತ್ರಾರ್ಥ—ಋದಂತಗಳಾದ ಧಾತುಗಳ ಪರದಲ್ಲಿರುವ, ಹನ್ ಧಾತುವಿನ ಪರದಲ್ಲಿರುವ, ಸ್ಯವಿಕರಣ ಪ್ರತ್ಯಯಕ್ಕೆ ಇಡಾಗಮ ಬರುತ್ತದೆ. ಪ್ರಕೃತ ಋದಂತಧಾತುವಾದುದರಿಂದ ಪರದ ಸ್ಯಕ್ಕೆ ಇಡಾಗಮ ಬಂದರೆ ಹ್ವೃ + ಇಸ್ಯತಿ ಎಂದಾಗುತ್ತದೆ. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ಋಕಾರದ ಸ್ಥಾನಕ್ಕೆ ಬರುವುದರಿಂದ ರಪರವಾಗಿ ಬರುತ್ತದೆ. ಹ್ವರಿಸ್ಯತಿ | 'ಆದೇಶಪ್ರತ್ಯಯಯೋಃ' ಸೂತ್ರದಿಂದ ಇಕಾರದ ಪರದಲ್ಲಿರುವ ಸಕಾರಕ್ಕೆ ಷತ್ವ. ಹ್ವರಿಷ್ಯತಿ|ಹ್ವರಿಷ್ಯ ಅಂಗ. ಪ್ರತ್ಯಯ ಸೇರಿಸಬೇಕು.

**ಲೋಟ್** || ಶಪ್ ನಿಮಿತ್ತೀಕರಿಸಿ ಗುಣ ಹ್ವರತು, [ತಾತ್] ಇತ್ಯಾದಿ. ಹ್ವರ ಅಂಗ. [ಭವತುವತ್] ಲಙ್|| ಅಹ್ವರತ್ | ಅಹ್ವರ ಅಂಗ. [ಭವೇತ್‌ವತ್] ಆಶೀರ್ಲಿಙ್|| ಹ್ವೃ + ಯಾಸ್ ತ್ ಎಂದಿರುವಾಗ 'ಸ್ಕೋಃ ಸಂ—' ಸೂತ್ರದಿಂದ ಸಲೋಪ. ಹ್ವೃಯಾತ್. ಇಲ್ಲಿ ಯಾಸುಟ್ ಕಿತ್ತಾದುದರಿಂದ ಗುಣ ಬರುವುದಿಲ್ಲ ಅದಕ್ಕೋಸ್ಕರ ಸೂತ್ರ ಹೇಳುತ್ತಾನೆ.

ಯಕ್ ಯಾದಿಲಿಙ್‌ನಲ್ಲಿ ಗುಣ ಹೇಳುವ ಸೂತ್ರ.

**೪೯೯. ಗುಣೋಽರ್ತಿಸಂಯೋಗಾದ್ಯೋಃ || ೭-೪-೨೯ ||**

**ಅರ್ತೇಃ ಸಂಯೋಗಾದೇರ್ಋದಂತಸ್ಯ ಚ ಗುಣಃ ಸ್ಯಾದ್ಯಕಿ ಯಾದಾವಾರ್ಧಧಾತುಕೇ ಲಿಙಿ ಚ || ಹ್ವರ್ಯಾತ್ | ಅಹಾರ್ಷೀತ್ | ಅಹ್ವರಿಷ್ಯತ್ ||**

ಗುಣಃ, ಅರ್ತಿಸಂಯೋಗಾದ್ಯೋಃ || 'ರೀಙ್ ಋತಃ' ಸೂತ್ರದಿಂದ 'ಋತಃ', 'ರಿಙ್ ಶಯಕ್‌ಲಿಙ್ಕ್ಷು' ಸೂತ್ರದಿಂದ 'ಯಕಿ', 'ಲಿಙಿ', 'ಅಯಙ್‌ಯಿ—' ಸೂತ್ರದಿಂದ 'ಯಿ' ಪದಗಳು ಅನುವೃತ್ತವಾಗುತ್ತವೆ. 'ಅಕೃತ್ಸಾರ್ವಧಾತುಕಯೋಃ' ಸೂತ್ರ ಅನುವೃತ್ತವಾಗುವುದರಿಂದ 'ಆರ್ಧಧಾತುಕೇ' ಲಬ್ಧವಾಗುತ್ತದೆ. 'ಯಿ' ಸಪ್ತಮ್ಯಂತ ಅದಕ್ಕೆ ವಿಶೇಷಣವಾದುದರಿಂದ ಯಾದಿ ಆರ್ಧಧಾತುಕ ಪರವಾದಾಗ

ಎಂದು ಅರ್ಥವಾಗುತ್ತದೆ. 'ಅಂಗಸ್ಯ' ಅಧಿಕಾರ. ಋತಃ, ಸಂಯೋಗಾದೇಃ ಎರಡು ಪದಗಳು ಅಂಗಕ್ಕೆ ವಿಶೇಷಣ. ಸಂಯೋಗಾದಿಯಾದ ಋದಂತವಾದ ಅಂಗಕ್ಕೆ ಎಂದರ್ಥವಾಗುತ್ತದೆ. ಅರ್ತಿ ಎಂಬುದು ಋ ಧಾತುವಿಗೆ ಶ್ತಿಪ್ ಸೇರಿಸಿ ನಿರ್ದೇಶಿಸಿರುತ್ತಾನೆ. **ಸೂತ್ರಾರ್ಥ**—ಋ ಧಾತುವಿಗೂ, ಸಂಯೋಗಾದಿಯಾಗಿ ಋದಂತವಾದ ಧಾತುಗಳಿಗೂ ಯಕ್, ಯಕಾರಾದಿಯಾದ ಆರ್ಧಧಾತುಕಸಂಜ್ಞೆಯಿರುವ ಲಿಙ್ ಪರದಲ್ಲಿ ಇರುವಾಗಲೂ ಗುಣ ಬರುತ್ತದೆ. ಪ್ರಕೃತ ಸಂಯೋಗಾದಿಯಾಗಿ ಋದಂತವಾದ ಧಾತು ಹ್ವೃ ಆಗಿದೆ. ಆಶೀರ್ಲಿಙಃಗೆ ಆರ್ಧಧಾತುಕಸಂಜ್ಞೆಯಿರುವುದರಿಂದ ಅದು ಪರವಾದುದರಿಂದ ಗುಣ ಬಂದರೆ ಅದು ಋಕಾರದ ಸ್ಥಾನದಲ್ಲಿ ಬರುವುದರಿಂದ ರ ಪರವಾಗಿ ಬರುತ್ತದೆ. ಹ್ವರ್ + ಯಾತ್ = ಹ್ವರ್ಯಾತ್ | ಹ್ವರ್ಯಾಸ್ತಾಮ್ | ಹ್ವರ್ಯಾಸುಃ || ಹ್ವರ್ಯಾಃ | ಹ್ವರ್ಯಾಸ್ತಮ್ | ಹ್ವರ್ಯಾಸ್ತ || ಹ್ವರ್ಯಾಸಮ್ | ಹ್ವರ್ಯಾಸ್ವ | ಹ್ವರ್ಯಾಸ್ಮ ||

**ಲುಙ್** || ಅಹ್ವೃ + ಸ್ ಈತ್ ಎಂದಿರುವಾಗ 'ಸಿಚಿ ವೃದ್ಧಿಃ ಪರಸ್ಮೈಪದೇಷು' ಸೂತ್ರದಿಂದ ವೃದ್ಧಿ (ಆರ್). ರೇಫದ ಪರದಲ್ಲಿ ಪ್ರತ್ಯಯ ಸಕಾರವಿರುವುದರಿಂದ 'ಆದೇಶಪ್ರತ್ಯಯಯೋಃ' ಸೂತ್ರದಿಂದ ಷತ್ವ. ಅಹ್ವಾರ್ಷೀತ್ | ಅಹ್ವಾರ್ಷ್ಟಾಮ್ | ಅಹ್ವಾರ್ಷುಃ || ಅಹ್ವಾರ್ಷೀಃ | ಅಹ್ವಾರ್ಷ್ಟಮ್ | ಅಹ್ವಾರ್ಷ್ಟ || ಅಹ್ವಾರ್ಷಮ್ | ಅಹ್ವಾರ್ಷ್ವ | ಅಹ್ವಾರ್ಷ್ಮ || **ಲೃಙ್** || ಸ್ಯ ವಿಕರಣ. 'ಋದ್ಧನೋಃಸ್ಯೇ' ಸೂತ್ರದಿಂದ ಅದಕ್ಕೆ ಇಡಾಗಮ. 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ. ಷತ್ವ. ಅಹ್ವರಿಷ್ಯತ್ | ಅಹ್ವರಿಷ್ಯತಾಮ್ | ಅಹ್ವರಿಷ್ಯನ್|| ಅಹ್ವರಿಷ್ಯಃ | ಅಹ್ವರಿಷ್ಯತಮ್ | ಅಹ್ವರಿಷ್ಯತ | ಅಹ್ವರಿಷ್ಯಮ್ | ಅಹ್ವರಿಷ್ಯಾವ | ಅಹರಿಷ್ಯಾಮ ||

### || ೧೯ || ಶ್ರು = ಶ್ರವಣೇ (ಕೇಳುವುದು.)

ಶ್ರು ಧಾತುವಿಗೆ ಲಟನಲ್ಲಿ 'ಕರ್ತರಿ ಶಪ್' ಸೂತ್ರದಿಂದ ಶಪ್ ವಿಕರಣ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಶ್ನು ವಿಕರಣ ಹೇಳುತ್ತಾನೆ.

ಶ್ರು ಧಾತುವಿಗೆ ಶ್ನು ವಿಕರಣ ಹೇಳುವ ಸೂತ್ರ.

### ೫೦೦. ಶ್ರುವಃ ಶೃ ಚ || ೩-೧-೭೪ ||

**ಶ್ರುವಃ ಶೃ ಇತ್ಯಾದೇಶಃ ಸ್ಯಾತ್ ಶ್ನು ಪ್ರತ್ಯಯಶ್ಚ || ಶೃಣೋತಿ ||**

ತ್ರಿಪದ ಸೂತ್ರ. ಚಕಾರದಿಂದ ಹಿಂದಿನ 'ಸ್ವಾದಿಭ್ಯಃಶ್ನುಃ' ಸೂತ್ರದಿಂದ ಶ್ನು ಎಂಬುದು ಸನ್ನಿಹಿತವಾಗುತ್ತದೆ. ಶೃ ಎಂಬುದು ಲುಪ್ತಪ್ರಥಮಾಕ. 'ಶ್ರುವಃ' ಷಷ್ಠೀ. **ಸೂತ್ರಾರ್ಥ**—ಶ್ರು ಧಾತುವಿಗೆ ಶೃ ಎಂಬ ಆದೇಶ ಬರುತ್ತದೆ.; ಇದರ

ಪರಕ್ಕೆ ಶಪಿಗೆ ಬದಲಾಗಿ ಶ್ನು ವಿಕರಣ ಬರುತ್ತದೆ. ಶಪಿಗೆ ಅಪವಾದವೆಂದುದರಿಂದ ಸಾರ್ವಧಾತುಕದಲ್ಲಿ (ಲಟ್, ಲೋಟ್, ಲಙ್, ವಿಧಿಲಿಙ್) ಮಾತ್ರ ಇವುಗಳ ಪ್ರವೃತ್ತಿ. ಇತರ ಲಕಾರಗಳಲ್ಲಿ ಬರುವುದಿಲ್ಲ. ಧಾತುವಿಗೆ ಆದೇಶ, ವಿಕರಣ ಬಂದರೆ ಶೃನು + ತಿ ಎಂದಾಗುತ್ತದೆ. ತಿಪನ್ನು ನಿಮಿತ್ತೀಕರಿಸಿ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಶೃನುವಿನಲ್ಲಿರುವ ಉಕಾರಕ್ಕೆ ಗುಣ. ಶೃನೋತಿ. 'ಋವರ್ಣಾನ್ನಸ್ಯ ಣತ್ವಂ ವಾಚ್ಯಮ್' ವಾರ್ತಿಕದಿಂದ ನಕಾರಕ್ಕೆ ಣತ್ವ. ಶೃಣೋತಿ. ವಿಕರಣಕ್ಕೆ ಙಿದ್ವದ್ಭಾವವಿರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ ಗುಣ ಬರುವುದಿಲ್ಲ. ಶೃನು + ತಸ್ ಎಂದಿರುವಾಗ 'ಸಾರ್ವಧಾತು—' ಸೂತ್ರದಿಂದ ಗುಣ ಪ್ರಾಪ್ತವಾದರೆ ದ್ವಿವಚನ ಬಹುವಚನಗಳಿಗೆ ಙಿತ್ವವನ್ನು ಹೇಳುತ್ತಾನೆ.

ಸಾರ್ವಧಾತುಕ ಪ್ರತ್ಯಯಗಳಿಗೆ ಙಿತ್ವ ಹೇಳುವ ಸೂತ್ರ.

**೫೦೧. ಸಾರ್ವಧಾತುಕಮಪಿತ್ || ೧-೨-೪ ||**

**ಅಪಿತ್ಸಾರ್ವಧಾತುಕಂ ಙಿದ್ವತ್ || ಶೃಣುತಃ ||**

ಸಾರ್ವಧಾತುಕಂ, ಅಪಿತ್ || ದ್ವಿಪದ ಸೂತ್ರ. 'ಗಾಙ್ಕುಟಾದಿಭ್ಯಃ—' ಸೂತ್ರದಿಂದ 'ಙಿತ್' ಅನುವೃತ್ತಿ. **ಸೂತ್ರಾರ್ಥ**—ಅಪಿತ್ತಲ್ಲದ ಸಾರ್ವಧಾತುಕ ಪ್ರತ್ಯಯವು ಙಿತ್ತಾಗುತ್ತದೆ. ತಿಙ್ ಪ್ರತ್ಯಯಗಳಿಗೂ ಶ್ ಇತ್ತಾದ ಪ್ರತ್ಯಯಗಳಿಗೂ ಸಾರ್ವಧಾತುಕ ಸಂಜ್ಞೆ ಹಿಂದೆ ಹೇಳಿದೆ. ಪ್ರಕೃತ ತಿಙಿನಲ್ಲಿ ಏಕವಚನ ಪ್ರತ್ಯಯಗಳು ಮಾತ್ರ ಪಿತ್ತಾದುದರಿಂದ ಉಳಿದ ದ್ವಿವಚನ ಬಹುವಚನ ಪ್ರತ್ಯಯಗಳು ಅಪಿತ್ತಾದುದರಿಂದ ಙಿತ್ತಾಗುತ್ತವೆ. ಅಙಿತ್ತಾದ ಪ್ರತ್ಯಯಗಳು ವಾಸ್ತವವಾಗಿ ಙಿತ್ತಾಗದಿರುವುದರಿಂದ ಙಿದ್ವತ್ ಅಂದರೆ ಙಿತ್ ಆದಂತೆ ಆಗುತ್ತವೆ. ಪ್ರಕೃತ ತಸಾದಿಗಳು ಙಿತ್ತಿನಂತಾದುದರಿಂದ 'ಕ್ಙಿತಿಚ' ಸೂತ್ರದಿಂದ ಗುಣನಿಷೇಧ. ಶೃಣುತಃ ಎಂದೇ ಇರುತ್ತದೆ. ಶೃಣು + ಅಂತಿ ಎಂದಿರುವಾಗ ಪ್ರತ್ಯಯ ಙಿತ್ತಿನಂತಾದುದರಿಂದ ಗುಣ ಬರುವುದಿಲ್ಲ. ಅಜಾದಿಪ್ರತ್ಯಯ ಪರವಾದುದರಿಂದ ಉಕಾರಕ್ಕೆ ಉವಙಾದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಯಣ್ ಹೇಳುತ್ತಾನೆ.

ಹು, ಶ್ನುಗಳ ಉಕಾರಕ್ಕೆ ಯಣ್ ಹೇಳುವ ಸೂತ್ರ.

**೫೦೨. ಹುಶ್ನುವೋಃ ಸಾರ್ವಧಾತುಕೇ || ೬-೪-೮೭ ||**

**ಹುಶ್ನುವೋರನೇಕಾಚೋಽಸಂಯೋಗಪೂರ್ವಸ್ಯೋವರ್ಣಸ್ಯ ಯಣ್ ಸ್ಯಾದಚಿ ಸಾರ್ವಧಾತುಕೇ| ಶೃಣ್ವಂತಿ | ಶೃಣೋಷಿ| ಶೃಣುಥಃ | ಶೃಣುಥ | ಶೃಣೋಮಿ ||**

ದ್ವಿಪದ ಸೂತ್ರ. 'ಇಣೋ ಯಣ್' ಸೂತ್ರದಿಂದ 'ಯಣ್', 'ಅಚಿಶ್ನುಧಾತು

ಘ್ರುವಾಂ—' ಸೂತ್ರದಿಂದ 'ಅಚಿ', 'ಓಃಸುಪಿ' ಸೂತ್ರದಿಂದ 'ಓಃ' ಪದಗಳು ಅನುವೃತ್ತವಾಗುತ್ತವೆ. 'ಏರನೇಕಾಚೋಽಸಂಯೋಗಪೂರ್ವಸ್ಯ' ಸೂತ್ರವು 'ಏಃ' ಒಂದು ಪದವನ್ನು ಬಿಟ್ಟು ಅನುವೃತ್ತವಾಗುತ್ತದೆ. ಅಚಿ 'ಸಾರ್ವಧಾತುಕೇ' ಎಂಬುದಕ್ಕೆ ವಿಶೇಷಣ ತದಾದಿಲಾಭ. ಶ್ನುಪ್ರತ್ಯಯಾಂತವಾದುದರಿಂದ ತದಂತಗ್ರಹಣ
**ಸೂತ್ರಾರ್ಥ**—ಹು ಧಾತುವಿನ, ಶ್ನು ಪ್ರತ್ಯಯಾಂತವಾದ ಅನೇಕಾಚಿರುವ ಅಂಗದ, ಸಂಯೋಗಪೂರ್ವದಲ್ಲಿಲ್ಲದಿರುವ ಉಕಾರಕ್ಕೆ ಅಜಾದಿಯಾದ ಸಾರ್ವಧಾತುಕವು ಪರದಲ್ಲಿರುವಾಗ ಯಣಾದೇಶ ಬರುತ್ತದೆ. ಹು ಧಾತು ಜುಹೋತ್ಯಾದಿಗಣದಲ್ಲಿ ಬರುತ್ತದೆ. ಪ್ರಕೃತ ಶ್ನುಪ್ರತ್ಯಯಾಂತವಾದ ಅಂಗ ಶೃಣು. ಇದು ಅನೇಕಾಚಾಗಿದೆ. ಇದಕ್ಕೆ ಅಂತಿ ಎಂಬ ಅಜಾದಿಪ್ರತ್ಯಯ ಪರದಲ್ಲಿದೆ. ಆದುದರಿಂದ ಯಣ್. ಶೃಣ್ವಂತಿ. ಮಧ್ಯಮಪುರುಷದಲ್ಲಿ ಸಿಪ್ ಬಂದಾಗ ಶೃಣು+ಸಿ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಷತ್ವ. ಶೃಣೋಷಿ. ಶೃಣು+ಥಸ್ ಎಂದಿರುವಾಗ ಪ್ರತ್ಯಯಜಿತ್ತಾದುದರಿಂದ ಗುಣವಿಲ್ಲ. ಶೃಣುಥಃ | ಶೃಣುಥ || ಶೃಣು+ಮಿ ಎಂದಿರುವಾಗ ಮುಂದಿನ ಸೂತ್ರದಿಂದ ಉಕಾರಕ್ಕೆ ಲೋಪ ಪ್ರಾಪ್ತವಾದರೂ ಅದನ್ನು ಬಾಧಿಸಿ ಗುಣವೇ ಬರುತ್ತದೆ. ಶೃಣೋಮಿ. ಶೃಣು+ವಸ್ ಎಂದಿರುವಾಗ ಪ್ರತ್ಯಯ ಜಿತ್ತಾದುದರಿಂದ ಗುಣ ಬರುವುದಿಲ್ಲ. ವ, ಮ ಪರವಾದಾಗ ಉಕಾರಕ್ಕೆ ವಿಕಲ್ಪಲೋಪ ಹೇಳುತ್ತಾನೆ.

ಪ್ರತ್ಯಯದ ಉಕಾರಕ್ಕೆ ವಿಕಲ್ಪವಾಗಿ ಲೋಪ ಹೇಳುವ ಸೂತ್ರ.

**೪೦೩. ಲೋಪಶ್ಚಾಸ್ಯಾನ್ಯತರಸ್ಯಾಂ ಮ್ವೋಃ || ೬–೪–೧೦೭ ||**

**ಅಸಂಯೋಗಪೂರ್ವಸ್ಯ ಪ್ರತ್ಯಯೋಕಾರಸ್ಯ ಲೋಪೋ ವಾ ಮ್ವೋಃ ಪರಯೋಃ। ಶೃಣ್ವಃ, ಶೃಣುವಃ। ಶೃಣ್ಮಃ। ಶೃಣುಮಃ || ಶುಶ್ರಾವ | ಶುಶ್ರುವತುಃ | ಶುಶ್ರುವುಃ || ಶುಶ್ರೋಥ | ಶುಶ್ರುವಥುಃ | ಶುಶ್ರುವ || ಶುಶ್ರಾವ, ಶುಶ್ರವ | ಶುಶ್ರುವ | ಶುಶ್ರುವ || ಶ್ರೋತಾ || ಶ್ರೋಷ್ಯತಿ || ಶೃಣೋತು, ಶೃಣುತಾತ್ | ಶೃಣುತಾಮ್ | ಶೃಣ್ವಂತು ||**

ಲೋಪಃ, ಚ, ಅಸ್ಯ, ಅನ್ಯತರಸ್ಯಾಂ, ಮ್ವೋಃ || ಐದು ಪದಗಳುಳ್ಳ ಸೂತ್ರ. 'ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್' ಸೂತ್ರ ಹಿಂದೆ ಇರುವುದರಿಂದ ಅಸ್ಯ ಎಂಬುದರಿಂದ ಅದು ಉಪಸ್ಥಿತವಾಗುತ್ತದೆ. ಪ್ರತ್ಯಯವೆಂದರೆ ಪ್ರತ್ಯಯಸಂಬಂಧಿ ಎಂದರ್ಥ. ಅಸಂಯೋಗಪೂರ್ವಾತ್ ಎಂಬುದು ಉಕಾರದಲ್ಲಿ ಅನ್ವಯಹೊಂದುತ್ತದೆ.
**ಸೂತ್ರಾರ್ಥ**—ಸಂಯೋಗಪೂರ್ವದಲ್ಲಿ ಇಲ್ಲದಿರುವ ಪ್ರತ್ಯಯ ಸಂಬಂಧಿಯಾದ ಉಕಾರಕ್ಕೆ ಮಕಾರ, ವಕಾರ ಪರದಲ್ಲಿರುವಾಗ ವಿಕಲ್ಪವಾಗಿ ಲೋಪ ಬರುತ್ತದೆ. ಶೃಣು+ವಃ ಎಂದಿರುವಾಗ ಉಕಾರ ಶ್ನು ಪ್ರತ್ಯಯಸಂಬಂಧಿಯಾಗಿದೆ. ಸಂಯೋಗ

ಪೂರ್ವದಲ್ಲಿ ಇಲ್ಲ. ವಕಾರ ಪರದಲ್ಲಿರುವುದರಿಂದ ವಿಕಲ್ಪವಾಗಿ ಲೋಪ ಬಂದರೆ ಶೃಣ್ + ವಃ=ಶೃಣ್ವಃ || ಲೋಪ ಬಾರದಿದ್ದರೆ ಶೃಣುವಃ ಎಂದಾಗುತ್ತದೆ. ಮಸ್ ಪರ ವಲ್ಲಿರುವಾಗಲೂ ಹೀಗೇ ವಿಕಲ್ಪಲೋಪ. ಶೃಣುಮಃ, ಶೃಣ್ಮಃ ||

**ಲಿಟ್** || ಶ್ರುಶ್ರು + ಅ. 'ಹಲಾದಿಃ ಶೇಷಃ' ಶುಶ್ರು + ಅ. 'ಅಚೋಞ್ಣಿತಿ' ಸೂತ್ರದಿಂದ ಉಕಾರಕ್ಕೆ ವೃದ್ಧಿ. ಶುಶ್ರೌ + ಅ. ಆವಾದೇಶ. ಶುಶ್ರಾವ. ಶುಶ್ರು + ಅತುಸ್. 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಉವಙ್. ಅತುಸಾದಿಗಳು ಕಿತ್ತಾದುದರಿಂದ ಗುಣವಿಲ್ಲ. ಶುಶ್ರುವತುಃ | ಶುಶ್ರುವುಃ || ಶುಶ್ರು + ಥ. 'ಕೃಸೃಭೃವೃಸ್ತುದ್ರುಸ್ರುಶ್ರುವೋ ಲಿಟಿ' ಸೂತ್ರದಿಂದ ನಿತ್ಯವಾಗಿ ಇಣ್ನಿಷೇಧ ಮಾಡಿರುವುದರಿಂದ ಇಡಾಗಮ ಬರುವುದಿಲ್ಲ. 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ. ಶುಶ್ರೋಥ | ಶುಶ್ರುವಥುಃ | ಶುಶ್ರುವ || 'ಣಲುತ್ತಮೋವಾ' ಸೂತ್ರದಿಂದ ವಿಕಲ್ಪ ಣಿತ್ತಾಗುವುದರಿಂದ ಣಿತ್ತಾದರೆ ವೃದ್ಧಿ. ಣಿತ್ತಾಗದಿದ್ದರೆ ಗುಣ. ಶುಶ್ರಾವ, ಶುಶ್ರವ | ಶುಶ್ರುವ | ಶುಶ್ರುಮ || ಕ್ರಾದಿ ನಿಯಮದಿಂದ ವ, ಮ ಗಳಿಗೆ ಇಡಾಗಮವಿಲ್ಲ. **ಲುಟ್** || ಶ್ರು + ತಾಸ್ + ಡಾ. ಟಿ ಲೋಪ. ಶ್ರು + ತಾ. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ಶ್ರೋತಾ | ಶ್ರೋತಾರೌ | ಶ್ರೋತಾರಃ || ಶ್ರೋತಾಸಿ | ಶ್ರೋತಾಸ್ಥಃ | ಶ್ರೋತಾಸ್ಥ || ಶ್ರೋತಾಸ್ಮಿ | ಶ್ರೋತಾಸ್ವಃ | ಶ್ರೋತಾಸ್ಮಃ || **ಲೃಟ್** || ಸ್ಯ ವಿಕರಣ. ಇಡಾಗಮವಿಲ್ಲ. ಹಿಂದಿನಂತೆ ಗುಣ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಪ್ರತ್ಯಯಸಕಾರಕ್ಕೆ ಷತ್ವ. ಶ್ರೋಷ್ಯತಿ | ಶ್ರೋಷ್ಯತಃ || ಇತ್ಯಾದಿ. ಶ್ರೋಷ್ಯ ಅಂಗ. **ಲೋಟ್** || ಶಪಿಗೆ ಅಪವಾದವಾಗಿ ಶ್ನು ವಿಕರಣ. ಧಾತುವಿಗೆ ಶೃ ಆದೇಶ. 'ಏರು' ಸೂತ್ರದಿಂದ ಪ್ರತ್ಯಯಗಳ ಇಕಾರಕ್ಕೆ ಉಕಾರಾದೇಶ. ಶೃಣು + ತು, ಗುಣ. ಶೃಣೋತು. ಆಶೀರರ್ಥದಲ್ಲಿ ತಾತಙ್. ಇದು ಙಿತ್ತಾದುದರಿಂದ ಗುಣವಿಲ್ಲ. ಶೃಣುತಾತ್ | ಶೃಣುತಾಂ | ಶೃಣ್ವಂತು || 'ಹುಶ್ನುವೋಃ ಸಾರ್ವಧಾತುಕೇ' ಸೂತ್ರದಿಂದ ಯಣ್ ಬಂದಿದೆ. ಸಿಪಿಗೆ ಹಿ ಆದೇಶ ಬಂದಾಗ ಅದು ಅಪಿತ್ತಾದುದರಿಂದ ಗುಣವಿಲ್ಲ. ಶೃಣು + ಹಿ ಎಂದಿರುವಾಗ ಹಿಗೆ ಲುಕ್ ಹೇಳುತ್ತಾನೆ.

ಪ್ರತ್ಯಯದ ಉಕಾರದ ಪರದಲ್ಲಿರುವ ಹಿಗೆ ಲುಕ್ ಹೇಳುವ ಸೂತ್ರ.

**೫೦೪. ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್ || ೬-೪-೧೦೬ ||**

**ಅಸಂಯೋಗಪೂರ್ವಾತ್ ಪ್ರತ್ಯಯೋತೋ ಹೇರ್ಲುಕ್ || ಶೃಣು, ಶೃಣುತಾತ್ || ಶೃಣುತಮ್ | ಶೃಣುತ | ಗುಣಾವಾದೇಶೌ | ಶೃಣವಾನಿ | ಶೃಣವಾವ | ಶೃಣವಾಮ || ಅಶೃಣೋತ್ | ಅಶೃಣುತಾಮ್ | ಅಶೃಣ್ವನ್ | ಅಶೃಣೋಃ | ಅಶೃಣುತಮ್ | ಅಶೃಣುತ | ಅಶೃಣವಮ್ | ಅಶೃಣ್ವ, ಅಶೃಣುವ | ಅಶೃಣ್ಮ, ಅಶೃಣುಮ | ಶೃಣುಯಾತ್ | ಶೃಣುಯಾತಾಮ್ |**

**ಶೃಣುಯುಃ । ಶೃಣುಯಾಃ । ಶೃಣುಯಾತಮ್ । ಶೃಣುಯಾತ। ಶೃಣುಯಾಂ। ಶೃಣುಯಾವ। ಶೃಣುಯಾಮ ॥ ಶ್ರೂಯಾತ್ ॥ ಅಶ್ರೌಷೀತ್॥ ಅಶ್ರೋಷ್ಯತ್ ॥**

ಉತಃ, ಚ, ಪ್ರತ್ಯಯಾತ್, ಅಸಂಯೋಗಪೂರ್ವಾತ್ ॥ ನಾಲ್ಕು ಪದಗಳುಳ್ಳ ಸೂತ್ರ. 'ಅತೋಹೇಃ' ಸೂತ್ರದಿಂದ 'ಹೇಃ', 'ಚಿಣೋಲುಕ್' ಸೂತ್ರದಿಂದ 'ಲುಕ್' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಸಂಯೋಗಪೂರ್ವದಲ್ಲಿ ಇಲ್ಲದಿರುವ ಪ್ರತ್ಯಯಸಂಬಂಧಿಯಾದ ಉಕಾರದ ಪರದಲ್ಲಿರುವ ಹಿಗೆ ಲುಕ್ ಬರುತ್ತದೆ. ಶೃಣು+ಹಿ ಎಂದಿರುವಾಗ ಪ್ರತ್ಯಯೋಕಾರದ ಹಿಂದೆ ಸಂಯೋಗವಿಲ್ಲ. ಹಿಗೆ ಲುಕ್ ಬಂದರೆ ಶೃಣು ಎಂದಾಗುತ್ತದೆ. ತಾತಙ್ ಬಂದರೆ ಶೃಣುತಾತ್. ಲೋಟಿಗೆ ಲಙ್‌ನ ಭಾವ ಹೇಳಿದುದರಿಂದ ತಸಾದಿಗಳಿಗೆ ತಾಮಾದ್ಯಾದೇಶ. ಶೃಣುತಂ | ಶೃಣುತ || ಮಿಪಿಗೆ ನಿ ಆದೇಶ. ಆಟಾಗಮ. ಆಟ್ ಪಿತ್ತಾದುದರಿಂದ ಉತ್ತಮದ ಮೂರು ವಚನಗಳಲ್ಲಿಯೂ ಗುಣ, ಅವಾದೇಶ ಬರುತ್ತದೆ. ಶೃಣವಾನಿ | ಶೃಣವಾವ | ಶೃಣವಾಮ || **ಲಙ್** || 'ಇತಶ್ಚ' ಸೂತ್ರದಿಂದ ಪ್ರತ್ಯಯಗಳ ಇಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ. ಏಕವಚನಗಳಲ್ಲಿ ಗುಣ. ಅಶೃಣೋತ್. ತಸಾದಿಗಳಿಗೆ ತಾಮಾದ್ಯಾದೇಶ. ಅಶೃಣುತಾಂ | ಅಶೃಣ್ವನ್ || 'ಹುಶ್ನುವೋಃ—' ಸೂತ್ರದಿಂದ ಯಣ್ ಬಂದಿದೆ. ಅಶೃಣೋಃ | ಅಶೃಣುತಂ | ಅಶೃಣುತ || ಅಶೃಣವಂ | ಅಶೃಣ್ವ, ಅಶೃಣುವ | ಅಶೃಣ್ಮ, ಅಶೃಣುಮ || ವ, ಮ ಗಳಲ್ಲಿ ವಿಕಲ್ಪ ಲೋಪ (ಸೂ. ೫೦೩). **ವಿಧಿಲಿಙ್** || ಯಾಸುಟಾಗಮ ಙಿತ್ತಾದುದರಿಂದ ವಿಕರಣದ ಉಕಾರಕ್ಕೆ ಗುಣವಿಲ್ಲ. ಶೃಣುಯಾತ್ | ಶೃಣುಯಾತಾಂ | ಶೃಣುಯುಃ || ಇತ್ಯಾದಿ. ಶೃಣು ಅಂಗ. **ಆಶೀರ್ಲಿಙ್** || ಶ್ರು × ಯಾತ್ ಎಂದಿರುವಾಗ 'ಅಕೃತ್ ಸಾರ್ವಧಾತುಕಯೋರ್ದೀರ್ಘಃ' ಸೂತ್ರದಿಂದ ಧಾತುವಿನ ಅಚಿಗೆ (ಉ) ದೀರ್ಘ. ಶ್ರೂಯಾತ್ | ಶ್ರೂಯಾಸ್ತಾಂ | ಶ್ರೂಯಾಸುಃ || ಶ್ರೂಯಾಃ | ಶ್ರೂಯಾಸ್ತಂ | ಶ್ರೂಯಾಸ್ತ || ಶ್ರೂಯಾಸಂ | ಶ್ರೂಯಾಸ್ವ | ಶ್ರೂಯಾಸ್ಮ || **ಲುಙ್** || ಅಶ್ರು+ಸ್+ಈತ್. 'ಸಿಚಿವೃದ್ಧಿಃ ಪರಸ್ಮೈಪದೇಷು' ಸೂತ್ರದಿಂದ ಉಕಾರಕ್ಕೆ ವೃದ್ಧಿ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಸಿಚಿನ ಸಕಾರಕ್ಕೆ ಷತ್ವ. ಅಶ್ರೌಷೀತ್. ಅಶ್ರೌಷ್ ಅಂಗ. ಅಶ್ರೌಷ್ಟಾಂ | ಅಶ್ರೌಷುಃ || ಅಶ್ರೌಷೀಃ | ಅಶ್ರೌಷ್ಟಂ | ಅಶ್ರೌಷ್ಟ || ಅಶ್ರೌಷಂ | ಅಶ್ರೌಷ್ವ | ಅಶ್ರೌಷ್ಮ || **ಲೃಙ್** || ಅಶ್ರೋಷ್ಯತ್ | ಅಶ್ರೋಷ್ಯತಾಂ | ಅಶ್ರೋಷ್ಯನ್ || ಇತ್ಯಾದಿ.

**|| ೨೦ || ಗಮ್ಲೃ=ಗತೌ (ಹೋಗುವುದು)**

ಇದು ೣದಿತ್ತಾದ ಧಾತು. ಗಮ್+ಅ+ತಿ ಎಂದಿರುವಾಗ ಧಾತುವಿಗೆ **ಛಾದೇಶ ಹೇಳುತ್ತಾನೆ.**

ಇಷ್ವಾದಿಧಾತುಗಳಿಗೆ ಛಾದೇಶ ಹೇಳುವ ಸೂತ್ರ.

**೫೦೫. ಇಷುಗಮಿಯಮಾಂ ಛಃ ॥ ೭-೩-೭೭ ॥**

**ಏಷಾಂ ಛಃ ಸ್ಯಾತ್ ಶಿತಿ ॥ ಗಚ್ಛತಿ । ಜಗಾಮ ॥**

ದ್ವಿಪದ ಸೂತ್ರ. 'ಷ್ಠಿವುಕ್ಲಮುಚಮಾಂ—' ಸೂತ್ರದಿಂದ 'ಶಿತಿ' ಪದವು ಅನುವೃತ್ತವಾಗುತ್ತದೆ. ಇಷುಶ್ಚ, ಗಮಿಶ್ಚ, ಯಮ್‌ಚ ಇಷುಗಮಿಯಮಃ ॥ ತೇಷಾಂ । **ಸೂತ್ರಾರ್ಥ**—ಶಕಾರ ಇತ್ತಾದ ಪ್ರತ್ಯಯ ಪರದಲ್ಲಿರುವಾಗ ಇಷು, ಗಮ್ ಯಮ್ ಈ ಮೂರು ಧಾತುಗಳಿಗೆ ಛಕಾರಾದೇಶ ಬರುತ್ತದೆ. 'ಅಲೋಽಂತ್ಯಸ್ಯ' ಪರಿಭಾಷೆಯಿಂದ ಅಂತ್ಯಕ್ಕೆ ಅಂದರೆ ಪ್ರಕೃತ ಗಮಿನ ಮಕಾರಕ್ಕೆ ಛಕಾರಾದೇಶ ಬರುತ್ತದೆ. ಗಛ್+ಅ+ತಿ ಎಂದಿರುವಾಗ ಹ್ರಸ್ವಕ್ಕೆ ಛಕಾರ ಪರವಾದುದರಿಂದ 'ಛೇಚ' ಸೂತ್ರದಿಂದ ತುಕಾಗಮ. ಗತ್‌ಛ್+ಅ+ತಿ. ಶ್ಚುತ್ವ. ಗಚ್‌ಛ್+ಅತಿ. ಗಚ್ಛತಿ । ಗಚ್ಛತಃ । ಗಚ್ಛಂತಿ ॥ ಇತ್ಯಾದಿ. ಸಾರ್ವಧಾತುಕದಲ್ಲಿ ಗಚ್ಛ ಅಂಗ. **ಲಿಟ್** ॥ ಗಮ್‌ಗಮ್+ಅ. ಗಗಮ್+ಅ. ಜಗಮ್+ಅ. 'ಅತ ಉಪಧಾಯಾಃ' ಸೂತ್ರದಿಂದ ಉಪಧಾದೀರ್ಘ. ಜಗಾಮ. ಜಗಮ್+ಅತುಸ್ ಎಂದಿರುವಾಗ ಉಪಧಾಲೋಪ ಹೇಳುತ್ತಾನೆ.

ಗಮ್ಯಾದಿಗಳ ಉಪಧೆಗೆ ಲೋಪ ಹೇಳುವ ಸೂತ್ರ.

**೫೦೬. ಗಮಹನಜನಖನಘಸಾಂ ಲೋಪಃ ಕ್ಙಿತ್ಯನಙಿ ॥ ೬-೪-೯೮ ॥**

**ಏಷಾಮುಪಧಾಯಾ ಲೋಪೋಽಜಾದೌ ಕ್ಙಿತಿ ನತ್ವಙಿ ॥ ಜಗ್ಮತುಃ । ಜಗ್ಮುಃ । ಜಗಮಿಥ, ಜಗಂಥ । ಜಗ್ಮಥುಃ । ಜಗ್ಮ । ಜಗಾಮ, ಜಗಮ । ಜಗ್ಮಿವ । ಜಗ್ಮಿಮ । ಗಂತಾ ॥**

ಗಮಹನಜನಖನಘಸಾಂ, ಲೋಪಃ, ಕ್ಙಿತಿ, ಅನಙಿ ॥ ನಾಲ್ಕು ಪದಗಳುಳ್ಳ ಸೂತ್ರ. 'ಊದುಪಧಾಯಾಃ' ಸೂತ್ರದಿಂದ 'ಉಪಧಾಯಾಃ' ಅನುವೃತ್ತಿ. ಅಂಗಾಧಿಕಾರದಲ್ಲಿ ಹೇಳಿದುದರಿಂದ 'ಪ್ರತ್ಯಯೇ' ಎಂದು ಆಕ್ಷಿಪ್ತವಾಗುತ್ತದೆ. 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಅನುವೃತ್ತವಾದ 'ಅಚಿ' ಎಂಬ ಪದವು ಅದಕ್ಕೆ ವಿಶೇಷಣ. ಕ್ಙಿತಿ ಎಂಬುದಕ್ಕೂ ಅಲ್ಲಿಯೇ ಅನ್ವಯ. 'ಅಚಿ' ಸಪ್ತಮ್ಯಂತವಾದುದರಿಂದ ತದಾದಿಲಾಭ. **ಸೂತ್ರಾರ್ಥ**—ಗಮ್, ಹನ್, ಜನ್, ಖನ್, ಘಸ್ ಈ ಐದು ಧಾತುಗಳ ಉಪಧೆಗೆ ಅಜಾದಿಯಾದ ಕಿತ್ ಅಥವಾ ಙಿತ್ ಆದ ಪ್ರತ್ಯಯ ಪರದಲ್ಲಿರುವಾಗ ಲೋಪ ಬರುತ್ತದೆ. ಅಙ್ ಪ್ರತ್ಯಯ ಪರವಾದಾಗ ಲೋಪ ಬರುವುದಿಲ್ಲ. 'ಅಸಂಯೋಗಾತ್ ಲಿಟ್ ಕಿತ್' ಸೂತ್ರದಿಂದ ಲಿಟನ ದ್ವಿವಚನ ಬಹುವಚನಗಳು ಕಿತ್ತಾದುದರಿಂದ ಅತುಸಾದಿಗಳು ಅಜಾದಿಯಾದುದರಿಂದ ಗಮಿನ ಉಪಧೆಗೆ

(ಗಕಾರದ ಮೇಲಿರುವ ಅಕಾರ) ಲೋಪ ಬಂದರೆ ಜಗ್ಮ್+ಅತುಸ್ – ಜಗ್ಮತುಃ || ಉಸ್ ಪರವಾದಾಗಲೂ ಹೀಗೇ ಲೋಪ. ಜಗ್ಮುಃ || ಜಗಮ್+ಥ ಎಂದಿರುವಾಗ ಅನಿಟ್ ಧಾತುವಾದರೂ ಭಾರದ್ವಾಜನಿಯಮದಿಂದ ವಿಕಲ್ಪ ಇಟ್. ಇಟ್ ಬಂದರೆ ಜಗಮಿಥ, ಇಟ್ ಬಾರದಿದ್ದರೆ ಜಗಮ್+ಥ ಎಂದಿರುವಾಗ 'ನಶ್ಚಾಪದಾಂತಸ್ಯ ಝಲಿ' ಸೂತ್ರದಿಂದ ಮಕಾರಕ್ಕೆ ಪರಸವರ್ಣ (ನ). ಜಗನ್ಥ | ಜಗ್ಮಥುಃ | ಜಗ್ಮ|| 'ಣಲುತ್ತಮೋವಾ' ಸೂತ್ರದಿಂದ ಣಲ್ ವಿಕಲ್ಪಣಿತ್ತಾಗುವುದರಿಂದ ವೃದ್ಧಿವಿಕಲ್ಪ. 'ಅತ ಉಪಧಾಯಾಃ' ವೃದ್ಧಿ ಬಂದರೆ ಜಗಾಮ. ವೃದ್ಧಿ ಬಾರದಿದ್ದರೆ ಜಗಮ. ವ, ಮ ಗಳಿಗೆ ಇಡಾಗಮ ಬಂದಾಗ ಅಜಾದಿಯಾಗುವುದರಿಂದ ಧಾತುವಿನ ಉಪಧೆಗೆ ಲೋಪ. ಜಗ್ಮಿವ | ಜಗ್ಮಿಮ || **ಲುಟ್** || ಗಮ್+ತಾಸ್+ಡಾ. ಟಿಲೋಪ. ಗಮ್+ತಾ ಎಂದಿರುವಾಗ ಮಕಾರಕ್ಕೆ ಹಿಂದೆ ಹೇಳಿದಂತೆ ಅನುಸ್ವಾರ ಪರಸವರ್ಣ. ಗನ್ತಾ | ಗನ್ತಾರೌ | ಗನ್ತಾರಃ || ಗನ್ತಾಸಿ |ಗನ್ತಾಸ್ಥಃ | ಗನ್ತಾಸ್ಥ || ಗನ್ತಾಸ್ಮಿ | ಗನ್ತಾಸ್ವಃ | ಗನ್ತಾಸ್ಮಃ || **ಲೃಟ್** || ಗಮ್+ಸ್ಯತಿ ಎಂದಿರುವಾಗ ಅನಿಟಾದುದರಿಂದ ಸ್ಯ ಪ್ರತ್ಯಯಕ್ಕೆ ಇಡಾಗಮ ಪ್ರಾಪ್ತಿಯಿಲ್ಲದಿರುವುದರಿಂದ ಇಡಾಗಮ ಹೇಳುತ್ತಾನೆ.

ಗಮ್ ಧಾತುವಿನ ಸ್ಯ ಪ್ರತ್ಯಯಕ್ಕೆ ಇಡಾಗಮ ಹೇಳುವ ಸೂತ್ರ.

**೫೦೭. ಗಮೇರಿಟ್ ಪರಸ್ಮೈಪದೇಷು || ೭-೨-೫೮ ||**

**ಗಮೇಃ ಪರಸ್ಯ ಸಾದೇರಾರ್ಧಧಾತುಕಸ್ಯೇಟ್ ಸ್ಯಾತ್ ಪರಸ್ಮೈಪದೇಷು || ಗಮಿಷ್ಯತಿ | ಗಚ್ಛತು | ಅಗಚ್ಛತ್ | ಗಚ್ಛೇತ್ | ಗಮ್ಯಾತ್ ||**

ತ್ರಿಪದ ಸೂತ್ರ. ಗಮ್ ಧಾತುವನ್ನು ಇಕಿನಿಂದ ನಿರ್ದೇಶ ಮಾಡಿರುತ್ತಾನೆ. 'ಆರ್ಧಧಾತುಕಸ್ಯ' ಅನುವೃತ್ತಿ. 'ಸೇಸಿಚಿ—' ಸೂತ್ರದಿಂದ ಅನುವೃತ್ತವಾದ ಸೇ ಎಂಬ ಸಪ್ತಮ್ಯಂತವು ಆರ್ಧಧಾತುಕಸ್ಯ ಎಂಬುದಕ್ಕೆ ವಿಶೇಷಣವಾದುದರಿಂದ ತದಾದಿ ಲಾಭ. **ಸೂತ್ರಾರ್ಥ—**ಗಮ್ ಧಾತುವಿನ ಪರದಲ್ಲಿರುವ ಸಕಾರಾದಿಯಾದ ಆರ್ಧಧಾತುಕ ಪ್ರತ್ಯಯಕ್ಕೆ ಪರಸ್ಮೈಪದ ಪ್ರತ್ಯಯ ಪರದಲ್ಲಿರುವಾಗ ಇಡಾಗಮ ಬರುತ್ತಿದೆ ಸ್ಯ ಪ್ರತ್ಯಯ ಸಕಾರಾದಿಯಾದ ಆರ್ಧಧಾತುಕವಾಗಿ ಪರಸ್ಮೈಪದ ಪ್ರತ್ಯಯ ಪರದಲ್ಲಿ ಇರುವುದರಿಂದ ಇಡಾಗಮ ಬಂದರೆ ಗಮಿಸ್ಯತಿ ಎಂದಾಗುತ್ತದೆ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಷತ್ವ. ಗಮಿಷ್ಯತಿ | ಗಮಿಷ್ಯತಃ | ಗಮಿಷ್ಯಂತಿ || ಇತ್ಯಾದಿ. ಗಮಿಷ್ಯ ಅಂಗ.

**ಲೋಟ್** || ಗಚ್ಛ ಅಂಗ. (ಭವತು ಆದಂತೆ) ಗಚ್ಛತು, ಗಚ್ಛತಾತ್ || ಇತ್ಯಾದಿ. **ಲಙ್** || ಅಗಚ್ಛ ಅಂಗ. (ಅಭವತ್ ವತ್) ಅಗಚ್ಛತ್ | ಅಗಚ್ಛ

ತಾಮ್ || ಇತ್ಯಾದಿ. **ವಿಧಿಲಿಙ್** || ಗಚ್ಛ ಅಂಗ. ಯಾಸುಟಿಗೆ ಇಯಾದೇಶ. ಗಚ್ಛೇತ್ | ಗಚ್ಛೇತಾಂ | ಗಚ್ಛೇಯುಃ || ಗಚ್ಛೇಃ | ಗಚ್ಛೇತಂ | ಗಚ್ಛೇತ || ಗಚ್ಛೇಯಂ | ಗಚ್ಛೇವ | ಗಚ್ಛೇಮ || **ಆಶೀರ್ಲಿಙ್** || ಗಮ್ಯಾತ್ | ಗಮ್ಯಾಸ್ತಾಂ | ಗಮ್ಯಾಸುಃ || ಗಮ್ಯಾಃ | ಗಮ್ಯಾಸ್ತಂ | ಗಮ್ಯಾಸ್ತ || ಗಮ್ಯಾಸಮ್ | ಗಮ್ಯಾಸ್ವ | ಗಮ್ಯಾಸ್ಮ || **ಲುಙ್** || ಅಗಮ್ + ಚ್ಲಿ + ತ್ ಎಂದಿರುವಾಗ ಚ್ಲಿಗೆ ಸಾಮಾನ್ಯವಾಗಿ ಸಿಚ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಅಙ್ ಆದೇಶವನ್ನು ಹೇಳುತ್ತಾನೆ.

ಪುಷಾದಿಗಳ ಚ್ಲಿಗೆ ಅಙಾದೇಶ ಹೇಳುವ ಸೂತ್ರ.

೫೦೮ **ಪುಷಾದಿದ್ಯುತಾದ್ಯ್ಌದಿತಃ ಪರಸ್ಮೈಪದೇಷು** || ೩-೧-೫೫ ||

**ಶ್ಯನ್ವಿಕರಣಪುಷಾದೇರ್ದ್ಯುತಾದೇರ್ಌದಿತಶ್ಚ ಪರಸ್ಯ ಚ್ಲೇರಙ್ ಪರಸ್ಮೈಪದೇಷು || ಅಗಮತ್ | ಅಗಮಿಷ್ಯತ್ ||**

ದ್ವಿಪದ ಸೂತ್ರ. 'ಚ್ಲೇಃ ಸಿಚ್' ಸೂತ್ರದಿಂದ 'ಚ್ಲೇಃ', 'ಅಸ್ಯತಿವಕ್ತಿ—' ಸೂತ್ರದಿಂದ 'ಅಙ್' ಪದಗಳು ಅನುವೃತ್ತವಾಗುತ್ತವೆ. ಪುಷಾದಿಶ್ಚ, ದ್ಯುತಾದಿಶ್ಚ, ಌದಿತ್ ಚ ತೇಷಾಂ ಸಮಾಹಾರಃ ಪುಷಾದಿದ್ಯುತಾದ್ಯ್ಌದಿತ್. ತಸ್ಮಾತ್. ಪುಷ ಧಾತು ಭ್ವಾದಿ, ಕ್ರ್ಯಾದಿ, ಚುರಾದಿ, ದಿವಾದಿಯಲ್ಲಿ ಪಠಿತವಾಗಿದೆ. ಇಲ್ಲಿ ದಿವಾದಿಪಠಿತ ಪುಷ ಧಾತುವನ್ನೇ ತೆಗೆದುಕೊಳ್ಳಬೇಕು. **ಸೂತ್ರಾರ್ಥ**—ಶ್ಯನ್ ವಿಕರಣಹೊಂದುವ ಪುಷಾದಿಗಳ, ದ್ಯುತ್ ಮುಂತಾದ ಧಾತುಗಳ, ಌದಿತ್ತಾದ ಧಾತುಗಳ ಪರದಲ್ಲಿರುವ ಚ್ಲಿಗೆ ಪರಸ್ಮೈಪದ ಪರದಲ್ಲಿರುವಾಗ ಅಙ್ ಆದೇಶ ಬರುತ್ತದೆ. ಪ್ರಕೃತ ಗಮ್ ಧಾತು ಌದಿತ್ತಾಗಿದೆ. ಇದರ ಪರದಲ್ಲಿರುವ ಚ್ಲಿಗೆ ಪರಸ್ಮೈಪದ ಪರದಲ್ಲಿರುವುದರಿಂದ ಅಙ್ ಆದೇಶ ಬರುತ್ತದೆ. ಅಗಮ್ + ಅ + ತ್ = ಅಗಮತ್. ಅಭವತ್ ರೂಪದಂತೆ ಆಗುತ್ತದೆ. ಅಗಮ ಅಂಗ. **ಲೃಙ್** || ಅಗಮ್ + ಸ್ಯ + ತ್ ಎಂದಿರುವಾಗ ಹಿಂದೆ ಹೇಳಿದ 'ಗಮೇರಿಟ್ ಪರಸ್ಮೈಪದೇಷು' ಸೂತ್ರದಿಂದ ಸ್ಯ ಪ್ರತ್ಯಯಕ್ಕೆ ಇಡಾಗಮ ಬಂದರೆ ಷತ್ವ ಬಂದು ಅಗಮಿಷ್ಯತ್ ಎಂದಾಗುತ್ತದೆ. ಅಗಮಿಷ್ಯ ಅಂಗ- ಅಭವಿಷ್ಯತ್ ರೂಪದಂತೆ ತಿಳಿಯಬೇಕು.

|| ಇತಿ ಪರಸ್ಮೈಪದಿನಃ ||

ಈ ರೀತಿ ಭ್ವಾದಿ ಪರಸ್ಮೈಪದ ಪ್ರತ್ಯಯಗಳನ್ನು ಹೊಂದುವ ಧಾತುಗಳ ಪ್ರಕ್ರಿಯೆಯನ್ನು ಸಾಮಾನ್ಯವಾಗಿ ವಿವರಿಸಿದೆ.

**ಅಥ ಭ್ವಾದೌ ಆತ್ಮನೇಪದಿನಃ ||**

**|| ೨೧ || ಏಧ ವೃದ್ಧೌ (ಬೆಳೆಯುವುದು.)**

'ತಙಾನಾವಾತ್ಮನೇಪದಂ' ಎಂಬ ಸೂತ್ರದಿಂದ 'ತ-ಆತಾಂ-ಝ | ಥಾಸ್-ಆಥಾಂ-ಧ್ವಂ || ಇಟ್ -ವಹಿ-ಮಹಿಙ್ ||' ಈ ಪ್ರತ್ಯಯಗಳಿಗೆ (ತಙ್) ಆತ್ಮನೇಪದ ಸಂಜ್ಞೆ ಹೇಳಿದೆ. ಇವುಗಳನ್ನು ಹೊಂದುವ ಧಾತುಗಳಿಗೆ ಆತ್ಮನೇಪದಿಗಳೆಂದು ಹೆಸರು. ಇವುಗಳಲ್ಲಿ ಇಟ್ ಹೊಂದುವವುಗಳು ಸೇಟ್, ಇಟ್ ಹೊಂದದವುಗಳು ಅನಿಟ್ ಎಂತಲೂ ವಿಭಾಗ ಹೊಂದುತ್ತವೆ. ಸೇಟ್, ಅನಿಟ್ ನಿಯಮ ಹಿಂದೆ ವಿವೃತವಾಗಿದೆ. ಪ್ರಕೃತ ಏಧ ಧಾತುವು ಸೇಟ್ ಆಗಿದೆ. ಲಟ್ ಬಂದಾಗ ಹಿಂದಿನಂತೆ 'ಕರ್ತರಿ ಶಪ್' ಸೂತ್ರದಿಂದ ಶಪ್ ವಿಕರಣ. ಏಧ್ + ಅ + ತ. ಲಡಾದಿಗಳಿಗೆ ತ, ಆತಾಂ ಇತ್ಯಾದಿ ಆದೇಶಗಳನ್ನು ಊಹಿಸಿಕೊಳ್ಳಬೇಕು. ಈಗ ಪ್ರತ್ಯಯಗಳ ಟಿಗೆ ಏತ್ವವನ್ನು ಹೇಳುತ್ತಾನೆ.

ಆತ್ಮನೇಪದಪ್ರತ್ಯಯಗಳ ಟಿಗೆ ಏತ್ವ ಹೇಳುವ ಸೂತ್ರ.

**೫೦೯. ಟಿತ ಆತ್ಮನೇಪದಾನಾಂ ಟೇರೇ || ೩-೪-೭೯ ||**

**ಟಿತೋ ಲಸ್ಯಾತ್ಮನೇಪದಾನಾಂ ಟೇರೇತ್ವಮ್ || ಏಧತೇ ||**

ಟಿತಃ, ಆತ್ಮನೇಪದಾನಾಂ, ಟೇಃ, ಏ || ನಾಲ್ಕು ಪದಗಳುಳ್ಳ ಸೂತ್ರ. 'ಲಸ್ಯ' ಅಧಿಕಾರ. **ಸೂತ್ರಾರ್ಥ**— ಟಿತ್ತಾದ ಲಕಾರಕ್ಕೆ ಆದೇಶವಾಗಿ ಬಂದ ಆತ್ಮನೇಪದ ಪ್ರತ್ಯಯಗಳ ಟಿಗೆ ಏಕಾರಾದೇಶ ಬರುತ್ತದೆ. ಲಟ್, ಲಿಟ್, ಲುಟ್, ಲೃಟ್, ಲೋಟ್ ಇವು ಟಿತ್ತಾದ ಲಕಾರಗಳು. ಪ್ರಕೃತ ಲಟಿನ ತ ಆದೇಶದಲ್ಲಿ ಟಿ ಅಕಾರ. ಅದಕ್ಕೆ ಏತ್ವ ಬಂದರೆ ಏಧತೇ ಎಂದಾಗುತ್ತದೆ. ಏಧ ಅಂಗ. ಏಧ + ಆತಾಂ. ಟಿಗೆ ಏತ್ವ [ಆಂ ಟಿ] ಬಂದರೆ ಏಧ + ಆತೇ ಎಂದಾಗುತ್ತದೆ. ಇಲ್ಲಿ ಆಕಾರಕ್ಕೆ ಇಯ್ ಆದೇಶ ಹೇಳುತ್ತಾನೆ.

ಙಿತ್ತಿನ ಆಕಾರಕ್ಕೆ ಇಯಾದೇಶ ಹೇಳುವ ಸೂತ್ರ.

**೫೧೦. ಆತೋ ಙಿತಃ || ೭-೨-೮೧ ||**

**ಅತಃ ಪರಸ್ಯ ಙಿತಾಮಾಕಾರಸ್ಯ ಇಯ್ ಸ್ಯಾತ್ | ಏಧೇತೇ | ಏಧನ್ತೇ |**

ಆತಃ, ಙಿತಃ || ದ್ವಿಪದ ಸೂತ್ರ. 'ಅತೋಯೇಯಃ' ಸೂತ್ರದಿಂದ 'ಅತಃ' ಎಂಬ ಪಂಚಮ್ಯಂತ ಪದವೂ 'ಇಯಃ' ಎಂಬ ಪ್ರಥಮಾಂತ ಪದವೂ ಅನುವೃತ್ತವಾಗುತ್ತವೆ. ಇಯದಲ್ಲಿ ಅಕಾರ ಉಚ್ಚಾರಣಾರ್ಥ. ಙಿತಃ ಅವಯವಷಷ್ಠೀ. ಆತಃ ಷಷ್ಠೀ. **ಸೂತ್ರಾರ್ಥ**—ಅಕಾರದ ಪರದಲ್ಲಿರುವ ಙಿತ್‌ಸಂಬಂಧಿಯಾದ ಪ್ರತ್ಯಯದ ಆಕಾರಕ್ಕೆ ಇಯ್ ಆದೇಶ ಬರುತ್ತದೆ. ಆತ್ಮನೇಪದಗಳಲ್ಲಿ ಪಿತ್ ಇಲ್ಲದಿರುವುದರಿಂದ

ಸಾರ್ವಧಾತುಕಮಪಿತ್ ' ಸೂತ್ರದಿಂದ ಒಂಬತ್ತು ಪ್ರತ್ಯಯಗಳೂ ಙಿತ್ತೇ ಆಗುತ್ತವೆ. ಪ್ರಕೃತ ಅಕಾರ, ಶಪ್ ಸಂಬಂಧಿ ಅಕಾರ. ಇವರ ಪರದಲ್ಲಿರುವ ಆತಾಮಿನ ಆಕಾರಕ್ಕೆ ಇಯಾದೇಶ ಬಂದರೆ ಏಧ+ ಇಯ್‌ತೆ. 'ಆದ್ಗುಣಃ' ಸೂತ್ರದಿಂದ ಗುಣ. ಏಧೇಯ್‌ತೇ. 'ಲೋಪೋವ್ಯೋರ್ವಲಿ' ಸೂತ್ರದಿಂದ ಯಕಾರಕ್ಕೆ ಲೋಪ ಏಧೇತೇ. ಝ ಪ್ರತ್ಯಯದ ಝಕಾರಕ್ಕೆ 'ಝೋನ್ತಃ' ಸೂತ್ರದಿಂದ ಅನ್ತಾದೇಶ. ಏಧ+ ಅನ್ತ ಎಂದಿರುವಾಗ ಹಿಂದಿನಂತೆ ಟಿಗೆ (ಅ) ಏತ್ವ. 'ಅತೋ ಗುಣೇ' ಸೂತ್ರದಿಂದ ಪರರೂಪ. ಏಧನ್ತೇ. ಏಧ+ಥಾಸ್ ಎಂದಿರುವಾಗ ಪ್ರತ್ಯಯಕ್ಕೆ ಆದೇಶ ಹೇಳುತ್ತಾನೆ.

ಥಾಸಿಗೆ ಆದೇಶ ಹೇಳುವ ಸೂತ್ರ.

**೫೧೧. ಥಾಸಃ ಸೇ || ೩–೪–೮೦ ||**

**ಟಿತೋ ಲಸ್ಯಥಾಸಃ ಸೇ ಸ್ಯಾತ್ | ಏಧಸೇ | ಏಧೇಥೇ | ಏಧಧ್ವೇ || ಅತೋ ಗುಣೇ | ಏಧೇ | ಏಧಾವಹೇ | ಏಧಾಮಹೇ ||**

ದ್ವಿಪದ ಸೂತ್ರ. 'ಲಸ್ಯ' ಅಧಿಕಾರ. 'ಟಿತ ಆತ್ಮನೇಪದಾನಾಂ—' ಸೂತ್ರದಿಂದ 'ಟಿತಃ' ಅನುವೃತ್ತಿ. ಸೇ ಲುಪ್ತಪ್ರಥಮಾಕ. **ಸೂತ್ರಾರ್ಥ**— ಟಿತ್ತಾದ ಲಕಾರದ ಥಾಸಿಗೆ ಸೇ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶವಾಗಿ ಬಂದರೆ ಏಧಸೇ ಎಂದಾಗುತ್ತದೆ. ಆಥಾಂ ಪ್ರತ್ಯಯದ ಟಿಗೆ ಏತ್ವ. ಏಧ+ಆಥೇ. 'ಆತೋಙಿತಃ' ಸೂತ್ರದಿಂದ ಆಕಾರಕ್ಕೆ ಇಯಾದೇಶ. ಏಧ+ ಇಯ್‌ಥೇ. 'ಲೋಪೋವ್ಯೋರ್ವಲಿ' ಸೂತ್ರದಿಂದ ಯಕಾರಕ್ಕೆ ಲೋಪ. ಗುಣ. ಏಧೇಥೇ. ಏಧ +ಧ್ವಂ. ಟಿಗೆ ಏತ್ವ. ಏಧಧ್ವೇ || ಏಧ+ ಇಟ್. ಟಕಾರ ಇತ್ತಾಗಿ ಲೋಪ ಹೊಂದುತ್ತದೆ. ಇಗೆ ಏತ್ವ. ಏಧ+ಏ ಎಂದಿರುವಾಗ ಏ ಗುಣವಾದುದರಿಂದ 'ಅತೋ ಗುಣೇ' ಸೂತ್ರದಿಂದ ಪರರೂಪ. ಏಧೇ. ಏಧ+ವಹಿ. ಟಿಗೆ ಏತ್ವ. ಏಧ+ವಹೇ 'ಅತೋ ದೀರ್ಘೋ ಯಞಿ' ಸೂತ್ರದಿಂದ ದೀರ್ಘ. ಏಧಾವಹೇ. ಮಹಿಙ್ ಪ್ರತ್ಯಯದಲ್ಲಿಯೂ ಹೀಗೇ ಪ್ರಕ್ರಿಯೆ. ಏಧಾಮಹೇ ||

**ಲಿಟ್** || ಏಧ್ + ಲಿಟ್ ಎಂದಿರುವಾಗ ಧಾತುವಿಗೆ ಆಂ ಪ್ರತ್ಯಯಂ ಹೇಳುತ್ತಾನೆ.

ಲಿಟ್ ಪರವಾದಾಗ ಆಂ ಪ್ರತ್ಯಯ ಹೇಳುವ ಸೂತ್ರ.

**೫೧೨. ಇಜಾದೇಶ್ಚ ಗುರುಮತೋಽನೃಚ್ಛಃ || ೩–೧–೩೬ ||**

**ಇಜಾದಿರ್ಯೋ ಧಾತುರ್ಗುರುಮಾನೃಚ್ಛತ್ಯನ್ಯಸ್ತತ ಆಮ್ ಸ್ಯಾಲ್ಲಿಟಿ ||**

ಇಜಾದೇಃ, ಚ, ಗುರುಮತಃ, ಅನೃಚ್ಛಃ || ನಾಲ್ಕು ಪದಗಳುಳ್ಳ ಸೂತ್ರ.

'ಧಾತೋರೇಕಾಚಃ—' ಸೂತ್ರದಿಂದ 'ಧಾತೋಃ', 'ಕಾಸ್ಪ್ರತ್ಯಯಾದಾಮ್—' ಸೂತ್ರದಿಂದ 'ಆಮ್', 'ಲಿಟಿ' ಪದಗಳು ಅನುವೃತ್ತವಾಗುತ್ತವೆ. ನ ಋಚ್ಛಃ ಅನೃಚ್ಛಃ || ಪಂಚಮೀ. **ಸೂತ್ರಾರ್ಥ**—ಇಜಾದಿಯಾಗಿಯೂ, ಗುರುವುಳ್ಳದ್ದಾಗಿಯೂ ಋಚ್ಛ್ ಧಾತುವಿನಿಂದ ಇತರವಾಗಿಯೂ ಇರುವ ಧಾತುವಿಗೆ ಲಿಟ್ ಪರದಲ್ಲಿರುವಾಗ ಆಮ್ ಪ್ರತ್ಯಯ ಬರುತ್ತದೆ. ಏಧ ಧಾತು ಇಜಾದಿಯಾಗಿ ಗುರುವಿನಿಂದ ಕೂಡಿದೆ. ಈಗ ಲಿಟ್ ಪರವಾದುದರಿಂದ ಆಮ್ ಬರುತ್ತದೆ. ಏಧ್ + ಆಮ್ + ಲಿಟ್ ಎಂದಿರುವಾಗ ಲಘುಕೌಮುದಿಯಲ್ಲಿ ಹೇಳದಿದ್ದರೂ 'ಆಮ' (೨-೪-೮೧) ಸೂತ್ರದಿಂದ ಲಿಟಿಗೆ ಲುಕ್ ಬರುತ್ತದೆಂದು ತಿಳಿಯಬೇಕು. ಏಧ್ + ಆಮ್ ಎಂದಿರುವಾಗ ಆಮಿನ ಮೇಲೆ ಲಿಟ್ ಪರವಾದ ಕೃ, ಭೂ, ಅಸ್ ಧಾತುಗಳು 'ಕೃಞ್ಚಾನುಪ್ರಯುಜ್ಯತೇ ಲಿಟಿ' (ಸೂ. ೪೭೩) ಸೂತ್ರದಿಂದ ಅನುಪ್ರಯೋಗವನ್ನು ಹೊಂದುತ್ತವೆ. ಏಧ್ + ಆಮ್ + ಕೃ + ಲಿಟ್ ಎಂದಿರುವಾಗ ಲಿಟಿಗೆ ಆತ್ಮನೇಪದ ಪ್ರತ್ಯಯಗಳು ಬರುತ್ತವೆಯೋ ಪರಸ್ಮೈಪದ ಪ್ರತ್ಯಯಗಳು ಬರುತ್ತವೆಯೋ ಎಂಬ ಸಂಶಯ ಬಂದರೆ (ಕೃಞ್ ಧಾತು ಞಿತ್ತಾದುದರಿಂದ 'ಸ್ವರಿತಞಿತಃ—' ಸೂತ್ರದಿಂದ ಎರಡು ವಿಧ ಪ್ರತ್ಯಯಗಳನ್ನೂ ಹೊಂದಲು ಯೋಗ್ಯವಾಗಿದೆ.) ಆತ್ಮನೇಪದ ಪ್ರತ್ಯಯವೇ ಬರುತ್ತದೆಯೆಂದು ನಿಯಮ ಮಾಡುತ್ತಾನೆ.

ಆಮಿನ ಮೇಲೆ ಬಂದ ಕೃಞಿಗೆ ಪ್ರತ್ಯಯ ನಿಯಮಿಸುವ ಸೂತ್ರ.

**೫೧೩. ಆಮ್ಪ್ರತ್ಯಯವತ್ಕೃಞೋಽನುಪ್ರಯೋಗಸ್ಯ । ೧-೩-೬೩ ॥**

**ಆಮ್ಪ್ರತ್ಯಯೋ ಯಸ್ಮಾದಿತ್ಯತದ್ಗುಣಸಂವಿಜ್ಞಾನೋ ಬಹುವ್ರೀಹಿಃ ॥ ಆಮ್ಪ್ರಕೃತ್ಯಾ ತುಲ್ಯಮನುಪ್ರಯುಜ್ಯಮಾನಾತ್ ಕೃಞೋಽಪ್ಯಾತ್ಮನೇಪದಮ್ ||**

ಆಮ್ಪ್ರತ್ಯಯವತ್, ಕೃಞಃ, ಅನುಪ್ರಯೋಗಸ್ಯ || ತ್ರಿಪದ ಸೂತ್ರ. 'ಅನುದಾತ್ತಙಿತಃ—' ಸೂತ್ರದಿಂದ 'ಆತ್ಮನೇಪದಮ್' ಅನುವೃತ್ತಿ. ಆಮ್ ಪ್ರತ್ಯಯಃ ಯಸ್ಮಾತ್ | ಆಮ್ಪ್ರತ್ಯಯಃ | ಆಮ್ ಪ್ರತ್ಯಯ ಇವ | ಆಮ್ಪ್ರತ್ಯಯವತ್ | ಬಹುವ್ರೀಹಿ ಸಮಾಸ. ಇದು ತದ್ಗುಣಸಂವಿಜ್ಞಾನ, ಅತದ್ಗುಣಸಂವಿಜ್ಞಾನವೆಂದು ಎರಡು ವಿಧವಾಗಿದೆ. ಇದರ ವಿಚಾರ 'ಜಕ್ಷಿತ್ಯಾದಯಃ ಷಟ್' (ಸೂ. ೩೪೮) ಸೂತ್ರದ ವ್ಯಾಖ್ಯಾನದಲ್ಲಿ ಹೇಳಿದೆ. ಪ್ರಕೃತ ಆಮ್ ಪ್ರತ್ಯಯ ಎಂಬುದು ಅತದ್ಗುಣಸಂವಿಜ್ಞಾನ ಬಹುವ್ರೀಹಿಯಾದುದರಿಂದ ಆಮ್ಪ್ರತ್ಯಯ ಎಂದರೆ ಆಮ್ ಬಿಟ್ಟು ಹೇಳಬೇಕು. ಆಮ್ ಯಾವುದರ ಮೇಲೆ ಬಂದಿರುತ್ತದೋ ಅದು ಆಂ ಪ್ರತ್ಯಯ. ಆಂ ಪ್ರತ್ಯಯವುಳ್ಳದ್ದು ಎಂದರೆ ಆಮನ್ನು ಬಿಟ್ಟು ಇರುವ ಏಧಧಾತು ಮಾತ್ರವೆಂದು ತಿಳಿಯಬೇಕು. ಅನುಪ್ರಯುಜ್ಯಮಾನವೆಂದರೆ ಸಮೀಪದಲ್ಲಿ ಪ್ರಯುಕ್ತವಾದ ಧಾತು. ಪ್ರಕೃತ ಕೃಞ್.

ಇದಕ್ಕೆ ಆಮಿನ ಪ್ರಕೃತಿಯು ಯಾವ ಪದವನ್ನು ಹೊಂದಲು ಯೋಗ್ಯವಾಗಿದೆಯೋ ಆ ಪದವು ಬರುತ್ತದೆ. ಆಂ ಪ್ರಕೃತಿ ಏಧ ಧಾತು. ಏಧ ಧಾತುವು ಆತ್ಮನೇಪದ ಪ್ರತ್ಯಯವನ್ನು ಹೊಂದುವುದರಿಂದ ಕೃಞ್ ಧಾತುವಿನಮೇಲೂ ಆತ್ಮನೇಪದ ಪ್ರತ್ಯಯವೇ ಬರುತ್ತದೆ. ವಿಕಲ್ಪದಿಂದ ಪ್ರಾಪ್ತವಾದ ಪರಸ್ಮೈಪದ ಪ್ರತ್ಯಯವು ಬರುವುದಿಲ್ಲ. ಹೀಗೆ ಲಿಟಿಗೆ ತ ಮುಂತಾದ ಆತ್ಮನೇಪದಪ್ರತ್ಯಯಗಳು ಪ್ರಾಪ್ತವಾದರೆ ಏಧಾಂ+ಕೃ+ತ ಎಂದಿರುವಾಗ ತ ಮುಂತಾದವುಗಳಿಗೆ ಆದೇಶ ಹೇಳುತ್ತಾನೆ, ಪರಸ್ಮೈಪದವಲ್ಲದುದರಿಂದ ಣಲಾದ್ಯಾದೇಶಗಳು ಬರುವುದಿಲ್ಲ.

ಲಿಟಿನ ತ, ಝ ಗಳಿಗೆ ಆದೇಶ ಹೇಳುವ ಸೂತ್ರ.

**೫೧೪. ಲಿಟಸ್ತಝಯೋರೇಶಿರೇಚ್ || ೩-೪-೮೧ ||**

**ಲಿಡಾದೇಶಯೋಸ್ತಝಯೋರೇಶ್ ಇರೇಜೇತೌ ಸ್ತಃ || ಏಧಾಞ್ಚಕ್ರೇ। ಏಧಾಞ್ಚಕ್ರಾತೇ। ಏಧಾಞ್ಚಕ್ರಿರೇ। ಏಧಾಞ್ಚಕೃಷೇ। ಏಧಾಞ್ಚಕ್ರಾಥೇ ||**

ಲಿಟಃ, ತಝಯೋಃ, ಏಶ್, ಇರೇಚ್ || ಲಿಟಃ ಸ್ಥಾನಷಷ್ಠೀ. **ಸೂತ್ರಾರ್ಥ**—ಲಿಟಿಗೆ ಆದೇಶವಾಗಿ ಬಂದ ತ ಮತ್ತು ಝ ಪ್ರತ್ಯಯಗಳಿಗೆ ಏಶ್, ಇರೇಚ್ ಆದೇಶಗಳು ಬರುತ್ತವೆ. ಅನೇಕಾಲಾದುದರಿಂದ ಸರ್ವಾದೇಶ. ಕೃಞಿಗೆ ದ್ವಿತ್ವ. ಕೃಕೃ+ಏ (ಶ್) 'ಉರತ್' ಸೂತ್ರದಿಂದ ಅಭ್ಯಾಸಋಕಾರಕ್ಕೆ ಅತ್ವ. ರ ಪರವಾಗಿ ಬಂದರೆ 'ಹಲಾದಿಃ ಶೇಷಃ' ಸೂತ್ರದಿಂದ ರೇಫಕ್ಕೆ ಲೋಪ. 'ಕುಹೋಶ್ಚುಃ' ಸೂತ್ರದಿಂದ ಕಕಾರಕ್ಕೆ ಚಕಾರಾದೇಶ. ಏಧಾಞ್ಚಕೃ+ಏ. ಯಣ್. ಏಧಾಞ್ಚಕ್ರೆ ಲಿಟ್ ಅಪಿತ್ ಆದುದರಿಂದ ಲಿಡಾದೇಶಗಳು ಕಿತ್ ಆಗುತ್ತವೆ. ಆದುದರಿಂದ ಗುಣ ವಿಲ್ಲ. ಏಧಾಞ್ಚಕೃ ಅಂಗ. ಏಧಾಞ್ಚಕೃ+ಆತಾಂ. ಟಿಗೆ ಏತ್ವ. ಯಣ್. ಏಧಾಞ್ಚಕ್ರಾತೇ. ಏಧಾಞ್ಚಕೃ+ಝ. ಝಕ್ಕೆ ಇರೇಚಾದೇಶ. ಏಧಾಞ್ಚಕೃ+ಇರೇ. ಯಣ್. ಏಧಾಞ್ಚಕ್ರಿರೇ || ಏಧಾಞ್ಚಕೃ+ಸೇ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಷತ್ವ. ಏಧಾಞ್ಚಕೃಷೇ. ಅನಿಟಾದುದರಿಂದ ಇಡಾಗಮವಿಲ್ಲ. ಆಥಾಮಿನ ಟಿಗೆ ಏತ್ವ. ಯಣ್. ಏಧಾಞ್ಚಕ್ರಾಥೇ. ಧ್ವಮ್ ಬಂದಾಗ ಅದರ ಟಿಗೆ ಏತ್ವ ಏಧಾಞ್ಚಕೃಧ್ವೇ ಎಂದಿರುವಾಗ ಧ್ವಮಿನ ಧಕಾರಕ್ಕೆ ಢಕಾರಾದೇಶ ಹೇಳುತ್ತಾನೆ.

ಷೀಧ್ವಂ, ಲುಙ್‌ಲಿಟಿನ ಧಕಾರಕ್ಕೆ ಢಕಾರ ಹೇಳುವ ಸೂತ್ರ.

**೫೧೫. ಇಣಃ ಷೀಧ್ವಂಲುಙ್‌ಲಿಟಾಂ ಧೋಽಙ್ಗಾತ್ || ೮-೩-೭೮ ||**

**ಇಣನ್ತಾದಙ್ಗಾತ್ಪರೇಷಾಂ ಷೀಧ್ವಂಲುಙ್‌ಲಿಟಾಂ ಧಸ್ಯ ಢಃ ಸ್ಯಾತ್। ಏಧಾಞ್ಚಕೃಢ್ವೇ। ಏಧಾಞ್ಚಕ್ರೇ। ಏಧಾಞ್ಚಕೃವಹೇ । ಏಧಾಞ್ಚ**

**ಕೃಮಹೇ | ಏಧಾಂಬಭೂವ | ಏಧಾಮಾಸ | ಏಧಿತಾ | ಏಧಿತಾರೌ | ಏಧಿತಾರಃ | ಏಧಿತಾಸೇ | | ಏಧಿತಾಸಾಥೇ ||**

ಇಣಃ, ಷೀಧ್ವಂಲುಙ್‌ಲಿಟಾಂ, ಧಃ, ಅಂಗಾತ್ || ಚತುಷ್ಪದ ಸೂತ್ರ. ಧಃ ಷಷ್ಠ್ಯೇಕವಚನ. 'ಅಪದಾನ್ತಸ್ಯ ಮೂರ್ಧನ್ಯಃ' ಅಧಿಕಾರ. 'ಇಣಃ' ಅಂಗಕ್ಕೆ ವಿಶೇಷಣವಾದುದರಿಂದ ತದಂತಲಾಭ. ಮೂರ್ಧನ್ಯಾದೇಶವೆಂದರೆ ಪ್ರಕೃತ ಢಕಾರಕ್ಕೆ ಢಕಾರಾದೇಶ. **ಸೂತ್ರಾರ್ಥ**— ಇಣ್ಣಂತವಾದ ಅಂಗದ ಪರದಲ್ಲಿರುವ ಷೀಧ್ವಮಿನ, ಲಿಟಿನ, ಲುಙಿನ ಧಕಾರಕ್ಕೆ ಢಕಾರಾದೇಶ ಬರುತ್ತದೆ. ಏಧಾಞ್ಚಕೃ + ಧ್ವೇ ಎಂದಿರುವಾಗ ಇಣ್ಣಂತವಾದ ಅಂಗ. ಏಧಾಞ್ಚಕೃ. ಇದರ ಪರದಲ್ಲಿ ಲಿಟ್‌ಸಂಬಂಧಿ ಧಕಾರವಿರುವುದರಿಂದ ಅದಕ್ಕೆ ಢಕಾರ ಬಂದರೆ ಏಧಾಞ್ಚಕೃಢ್ವೇ ಎಂದಾಗುತ್ತದೆ. ಉತ್ತಮದಲ್ಲಿ ಇಟಿಗೆ ಏತ್ವ. ಏಧಾಞ್ಚಕೃ+ಏ. ಯಣ್. ಏಧಾಞ್ಚಕ್ರೇ. ವಹಿ, ಮಹಿಙ್‌ಗಳ ಟಿಗೆ ಏತ್ವ. ಇಡಾಗಮವಿಲ್ಲ. ಏಧಾಞ್ಚಕೃವಹೇ | ಏಧಾಞ್ಚಕೃಮಹೇ || ಲಿಟ್ ಕಿತ್ತಾದುದರಿಂದ ಗುಣವೂ ಬರುವುದಿಲ್ಲ. ಏಧಾಮಿನ ಮೇಲೆ ಲಿಟ್ ಪರವಾದ ಭೂ ಧಾತು ಬಂದರೆ ಏಧಾಂಬಭೂವ | ಏಧಾಂಬಭೂವತುಃ | ಏಧಾಂಬಭೂವುಃ || ಇತ್ಯಾದಿ ಲಿಟ್ ಪರವಾದ ಅಸ್ ಧಾತು ಬಂದರೆ ಏಧಾಮಾಸ | ಏಧಾಮಾಸತುಃ | ಏಧಾಮಾಸುಃ || ಇತ್ಯಾದಿ.

**ಲುಟ್** || ತಾಸಿಗೆ ಇಡಾಗಮ. ಪ್ರಥಮಪುರುಷದಲ್ಲಿ ಡಾ, ರೌ, ರಸ್ ಆದೇಶ. ಏಧಿತಾ | ಏಧಿತಾರೌ | ಏಧಿತಾರಃ || 'ಥಾಸಃ ಸೇ' ಸೂತ್ರದಿಂದ ಥಾಸಿಗೆ ಸೇ ಆದೇಶ. ಏಧಿತಾಸ್ + ಸೇ ಎಂದಿರುವಾಗ 'ತಾಸಸ್ತ್ಯೋರ್ಲೋಪಃ' ಸೂತ್ರದಿಂದ ತಾಸಿನ ಸಕಾರಕ್ಕೆ ಲೋಪ ಹೇಳುತ್ತಾನೆ.

ಸಕಾರಕ್ಕೆ ಲೋಪ ಹೇಳುವ ಸೂತ್ರ.

**೫೧೬. ಧಿ ಚ || ೮-೨-೨೫ ||**

**ಧಾದೌ ಪ್ರತ್ಯಯೇ ಪರೇ ಸಸ್ಯ ಲೋಪಃ || ಏಧಿತಾಧ್ವೇ ||**

ದ್ವಿಪದ ಸೂತ್ರ. ಧ್ ಎಂಬುದರ ಸಪ್ತಮೀ ಧಿ. 'ಸಃ ಸ್ಯಾರ್ಧಧಾತುಕೇ' ಸೂತ್ರದಿಂದ 'ಸಃ', 'ತಾಸಸ್ತ್ಯೋರ್ಲೋಪಃ' ಸೂತ್ರದಿಂದ 'ಲೋಪಃ' ಪದಗಳು ಅನುವೃತ್ತವಾಗುತ್ತವೆ. ಅಂಗದಿಂದ ಆಕ್ಷಿಪ್ತವಾದ ಪ್ರತ್ಯಯಕ್ಕೆ ಧಿ ಎಂಬ ಸಪ್ತಮ್ಯಂತವು ವಿಶೇಷಣವಾದುದರಿಂದ ತದಾದಿಲಾಭ. **ಸೂತ್ರಾರ್ಥ**–ಧಕಾರಾದಿಯಾದ ಪ್ರತ್ಯಯ ಪರದಲ್ಲಿರುವಾಗ ಸಕಾರಕ್ಕೆ ಲೋಪ ಬರುತ್ತದೆ. ಏಧಿತಾಸ್ + ಧ್ವೇ ಎಂಬಲ್ಲಿ ಧಕಾರಾದಿ ಪ್ರತ್ಯಯ ಪರದಲ್ಲಿರುವುದರಿಂದ ಸಕಾರಕ್ಕೆ ಲೋಪ. ಏಧಿತಾಧ್ವೇ.

ಏಧಿತಾಸ್ + ಇ ಎಂದಿರುವಾಗ ಇಟಿಗೆ ಏತ್ವ. ಏ ಪರವಾದಾಗ ತಾಸಿನ ಸಕಾರಕ್ಕೆ ಹಕಾರಾದೇಶ ಹೇಳುತ್ತಾನೆ.

ಸಕಾರಕ್ಕೆ ಹಕಾರಾದೇಶ ಹೇಳುವ ಸೂತ್ರ.

೫೧೭. ಹ ಏತಿ || ೭-೪-೫೨ ||

**ತಾಸಸ್ತ್ಯೋಃ ಸಸ್ಯ ಹಃ ಸ್ಯಾದೇತಿ ಪರೇ | ಏಧಿತಾಹೇ | ಏಧಿತಾಸ್ವಹೇ | ಏಧಿತಾಸ್ಮಹೇ || ಏಧಿಷ್ಯತೇ | ಏಧಿಷ್ಯೇತೇ | ಏಧಿಷ್ಯಂತೇ | ಏಧಿಷ್ಯಸೇ | ಏಧಿಷ್ಯೇಥೇ | ಏಧಿಷ್ಯಧ್ವೇ | ಏಧಿಷ್ಯೇ | ಏಧಿಷ್ಯಾವಹೇ | ಏಧಿಷ್ಯಾಮಹೇ ||**

ದ್ವಿಪದ ಸೂತ್ರ. 'ಸಃ', 'ತಾಸಸ್ತ್ಯೋಃ' ಪದಗಳು ಹಿಂದಿನಂತೆ ಅನುವೃತ್ತವಾಗುತ್ತವೆ. ಹಃ ಪ್ರಥಮಾ. ಅಲ್ಲಿ ಅಕಾರ ಉಚ್ಚಾರಣಾರ್ಥ. **ಸೂತ್ರಾರ್ಥ**— ತಾಸಿನ ಮತ್ತು ಅಸ್ ಧಾತುವಿನ ಸಕಾರಕ್ಕೆ ಏಕಾರ ಪರದಲ್ಲಿರುವಾಗ ಹಕಾರಾದೇಶ ಬರುತ್ತದೆ. ಇಟಗೆ ಏತ್ವ ಮಾಡಿದಮೇಲೆ ಏಕಾರ ಪರವಾದುದರಿಂದ ತಾಸಿನ ಸಕಾರಕ್ಕೆ ಹಕಾರಾದೇಶ. ಏಧಿತಾಹ್ + ಏ = ಏಧಿತಾಹೇ. ವಹಿ, ಮಹಿಗಳ ಟಿಗೆ ಏತ್ವ. ಏಧಿತಾಸ್ವಹೇ | ಏಧಿತಾಸ್ಮಹೇ || **ಲೃಟ್** || ಸ್ಯ ವಿಕರಣ. ತ ಮುಂತಾದ ಪ್ರತ್ಯಯಗಳ ಟಿಗೆ ಏತ್ವ. ಸ್ಯಕ್ಕೆ ಇಡಾಗಮ. ಇಡಾಗಮ ಬಂದಮೇಲೆ ಇಣಿನ ಪರದಲ್ಲಿರುವುದರಿಂದ ಸಕಾರಕ್ಕೆ ಷತ್ವ. ಏಧಿಷ್ಯತೇ. ಆತಾಮಿನ ಟಿಗೆ ಏತ್ವ. 'ಆತೋಙಿತಃ' ಸೂತ್ರದಿಂದ ಆಕಾರಕ್ಕೆ ಇಯಾದೇಶ. ಏಧಿಷ್ಯ ಅಂಗ. ಏಧಿಷ್ಯ + ಇಯ್ತಾಂ 'ಲೋಪೋವ್ಯೋರ್ವಲಿ' ಸೂತ್ರದಿಂದ ಯಲೋಪ. ಗುಣ. ಏಧಿಷ್ಯೇತೇ. ಝುಕ್ಕೆ ಅಂತಾದೇಶ. ಟಿಗೆ ಏತ್ವ. ಏಧಿಷ್ಯ + ಅಂತೇ. 'ಅತೋ ಗುಣೇ' ಪರರೂಪ. ಏಧಿಷ್ಯಂತೇ. 'ಥಾಸಃ ಸೇ' ಸೂತ್ರದಿಂದ ಥಾಸಿಗೆ ಸೇ ಆದೇಶ. ಏಧಿಷ್ಯಸೇ. ಆಥಾಮಿನಲ್ಲಿ ಆತಾಮಿನಂತೆ ಪ್ರಕ್ರಿಯೆ. ಏಧಿಷ್ಯೇಥೇ | ಏಧಿಷ್ಯಧ್ವೇ || ಏಧಿಷ್ಯ + ಏ. 'ಅತೋ ಗುಣೇ' ಪರರೂಪ. ಏಧಿಷ್ಯೇ + ವಹೇ, ಮಹೇ. 'ಅತೋದೀರ್ಘೋ ಯಞಿ' ದೀರ್ಘ. ಏಧಿಷ್ಯಾವಹೇ | ಏಧಿಷ್ಯಾಮಹೇ ||**ಲೋಟ್** ಏಧ ಅಂಗ. ಏಧ + ತ ಎಂದಿರುವಾಗ ಟಿಗೆ ಏತ್ವ ಪ್ರಾಪ್ತವಾದರೆ ಅದರ ಸ್ಥಾನದಲ್ಲಿ ಆಂ ಆದೇಶ ಹೇಳುತ್ತಾನೆ.

ಲೋಟಿನ ಏಕಾರಕ್ಕೆ ಆಂ ಹೇಳುವ ಸೂತ್ರ.

೫೧೮. ಆಮೇತಃ || ೩-೪-೯೦ ||

**ಲೋಟ ಏಕಾರಸ್ಯಾಮ್ ಸ್ಯಾತ್ || ಏಧತಾಮ್ | ಏಧೇತಾಮ್ | ಏಧನ್ತಾಮ್ ||**

ಆಂ, ಏತಃ || ದ್ವಿಪದ ಸೂತ್ರ. 'ಲೋಟೋ ಲಙ್ವತ್' ಸೂತ್ರದಿಂದ 'ಲೋಟಃ' ಅನುವೃತ್ತಿ. ಏತಃ ಷಷ್ಠೀ. **ಸೂತ್ರಾರ್ಥ**— ಲೋಟಿನ ಏಕಾರಕ್ಕೆ

ಆಮ್ ಆದೇಶ ಬರುತ್ತದೆ. 'ಟಿತಆತ್ಮನೇಪದಾನಾಂ ಟೇರೇ' ಸೂತ್ರದಿಂದ ಎಲ್ಲಾ ಪ್ರತ್ಯಯಗಳ ಟಿಗೆ ಏತ್ವ ಬಂದ ಮೇಲೆ ಈ ಸೂತ್ರದಿಂದ ಆ ಏಕಾರಕ್ಕೆ ಆಮ್ ಆದೇಶ ಬರುತ್ತದೆ. ಏಧ+ತೇ ಎಂದಿರುವಾಗ ಈ ಸೂತ್ರದಿಂದ ಏಕಾರಕ್ಕೆ ಆಮ್ ಬಂದರೆ ಏಧತಾಂ. ಏಧ+ ಆತಾಂ. ಟಿಗೆ ಏತ್ವ. ಅದಕ್ಕೆ ಪುನಃ ಆಂ. ಆಕಾರಕ್ಕೆ ಇಯಾದೇಶ. ಯಲೋಪ ಗುಣ. ಏಧೇತಾಂ. ಝುಕ್ಕೆ ಅನ್ತಾದೇಶ. ಏಕಾರಕ್ಕೆ ಆಂ. ಏಧ+ ಅನ್ತಾಂ. 'ಅತೋ ಗುಣೇ' ಪರರೂಪ. ಏಧನ್ತಾಂ. ಥಾಸಿಗೆ ಸೇ ಆದೇಶ. ಏಧ+ಸೇ ಎಂದಿರುವಾಗ ಏಕಾರಕ್ಕೆ ಆಂ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ವ ಆದೇಶ ಹೇಳುತ್ತಾನೆ.

ಲೋಟಿನ ಏಕಾರಕ್ಕೆ ವ, ಮ ಆದೇಶ ಹೇಳುವ ಸೂತ್ರ.

**೫೧೯. ಸವಾಭ್ಯಾಂ ವಾಮೌ ॥ ೪-೪-೯೧ ॥**

**ಸವಾಭ್ಯಾಂ ಪರಸ್ಯ ಲೋಡೇತಃ ಕ್ರಮಾದ್ವಾವಮೌಸ್ತಃ । ಏಧಸ್ವ । ಏಧೇಥಾಮ್ । ಏಧಧ್ವಮ್ ॥**

ದ್ವಿಪದ ಸೂತ್ರ. ಇದು 'ಆಮೇತಃ' ಸೂತ್ರದ ಮೇಲಿನ ಸೂತ್ರ. 'ಲೋಟಃ' ಏತಃ' ಅನುವೃತ್ತಿ. ನಿಮಿತ್ತಾದೇಶಗಳಿಗೆ ಯಥಾಸಂಖ್ಯ ಇರುವುದರಿಂದ ಕ್ರಮವಾಗಿ ಎಂಬರ್ಥವು ದೊರೆಯುತ್ತದೆ. **ಸೂತ್ರಾರ್ಥ—** ಸಕಾರವಕಾರಗಳ ಪರದಲ್ಲಿರುವ ಲೋಟಿನ ಏಕಾರಕ್ಕೆ ಕ್ರಮವಾಗಿ ವಕಾರ, ಅಂ ಆದೇಶಗಳು ಬರುತ್ತವೆ. ಪ್ರಕೃತ ಏಧಸೇ ಎಂಬಲ್ಲಿ ಸಕಾರದ ಪರದಲ್ಲಿ ಲೋಟಿನ ಏಕಾರ ಇರುವುದರಿಂದ ಅದಕ್ಕೆ ವಕಾರಾದೇಶ (ವ್+ಅ) ಬಂದರೆ ಏಧಸ್ವ ಎಂದಾಗುತ್ತದೆ. ಏಧೇಥಾಂ (ಪ್ರ.ಪು. ದ್ವಿವಚನದಂತೆ), ಏಧ+ಧ್ವೇ ಎಂದಿರುವಾಗ ಇಲ್ಲಿ ವಕಾರದ ಪರದಲ್ಲಿ ಏಕಾರ ಇರುವುದರಿಂದ ಅದಕ್ಕೆ ಅಮಾದೇಶ. ಏಧಧ್ವಂ. ಏಧ+ಇ. ಏತ್ವ ಏಧ+ಏ. 'ಆಮೇತಃ' ಸೂತ್ರದಿಂದ ಆಂ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಐಕಾರಾದೇಶ ಹೇಳುತ್ತಾನೆ.

ಲೋಡುತ್ತಮದ ಏಕಾರಕ್ಕೆ ಐಕಾರ ಹೇಳುವ ಸೂತ್ರ.

**೫೨೦. ಏತ ಐ ॥ ೩-೪-೯೩ ॥**

**ಲೋಡುತ್ತಮಸ್ಯ ಏತ ಐ ಸ್ಯಾತ್ । ಏಧೈ । ಏಧಾವಹೈ । ಏಧಾಮಹೈ ॥ ಆಟಶ್ಚ । ಐಧತ । ಐಧೇತಾಂ । ಐಧನ್ತ । ಐಧಥಾಃ । ಐಧೇಥಾಮ್ । ಐಧಧ್ವಮ್ । ಐಧೇ । ಐಧಾವಹಿ ಐಧಾಮಹಿ ॥**

ದ್ವಿಪದ ಸೂತ್ರ. 'ಲೋಟೋ ಲಙ್ವತ್' ಸೂತ್ರದಿಂದ 'ಲೋಟಃ', 'ಆಡುತ್ತಮಸ್ಯ ಪಿಚ್ಚ' ಸೂತ್ರದಿಂದ 'ಉತ್ತಮಸ್ಯ' ಪದಗಳು ಅನುವೃತ್ತವಾಗುತ್ತವೆ.

**ಸೂತ್ರಾರ್ಥ**—ಲೋಡುತ್ತಮಪುರುಷದ ಏಕಾರಕ್ಕೆ ಐಕಾರಾದೇಶ ಬರುತ್ತದೆ. ಏಧ + ಏ. 'ವೃದ್ಧಿರೇಚಿ' ಸೂತ್ರದಿಂದ ವೃದ್ಧಿ. ಏಧೈ. ಏಧ + ವಹಿ, ಮಹಿ. ಟಿಗೆ ಏತ್ವ. ಏಕಾರಕ್ಕೆ ಈ ಸೂತ್ರದಿಂದ ಐಕಾರಾದೇಶ. ಏಧ + ವಹೈ. 'ಅತೋ ದೀರ್ಘೋ ಯಞಿ' ಸೂತ್ರದಿಂದ ಅಂಗದ ಅಕಾರಕ್ಕೆ ದೀರ್ಘ. ಏಧಾವಹೈ | ಏಧಾಮಹೈ ||

**ಲಙ್** || ಧಾತುವು ಅಜಾದಿಯಾದುದರಿಂದ 'ಆಡಜಾದೀನಾಂ' ಸೂತ್ರದಿಂದ ಅಂಗಕ್ಕೆ ಆಡಾಗಮ. ಆ + ಏಧ್ + ಅ + ತ. 'ಆಟಶ್ಚ' ಸೂತ್ರದಿಂದ ಆಟಿಗೆ ಏಕಾರ ಪರವಾದುದರಿಂದ ವೃದ್ಧಿ. ಐಧತ. ಆತಾಂ ಬಂದಾಗ ಲಙ್ ಟಿತ್ತಾಗ ದಿರುವುದರಿಂದ ಟಿಗೆ ಏತ್ವವಿಲ್ಲ. 'ಆತೋ ಙಿತಃ' ಸೂತ್ರದಿಂದ ಆಕಾರಕ್ಕೆ ಇಯ್ ಆದೇಶ. 'ಲೋಪೋವ್ಯೋರ್ವಲಿ' ಸೂತ್ರದಿಂದ ಇಯ್‌ನ ಯಕಾರಕ್ಕೆ ಲೋಪ. ಐಧ ಅಂಗ. ಐಧ + ಇತಾಂ. ಗುಣ. ಐಧೇಥಾಂ. ಐಧ + ಅನ್ತ. 'ಅತೋ ಗುಣೇ' ಪರರೂಪ. ಐಧನ್ತ || ಟಿತ್ತಲ್ಲವಾದುದರಿಂದ ಥಾಸಿಗೆ ಸೇ ಆದೇಶವಿಲ್ಲ. ಐಧಥಾಸ್. ಸಕಾರಕ್ಕೆ ರುತ್ವವಿಸರ್ಗ. ಐಧಥಾಃ | ಐಧೇಥಾಂ | ಐಧಧ್ವಂ || ಐಧ + ಇ. ಗುಣ. ಐಧೇ | ಐಧ + ವಹಿ. ದೀರ್ಘ. ಐಧಾವಹಿ | ಐಧಾಮಹಿ || **ವಿಧಿಲಿಙ್** || ಏಧ + ತ ಎಂದಿರುವಾಗ ಪರಸ್ಮೈಪದವಲ್ಲವಾದುದರಿಂದ ಯಾಸು ಟಾಗಮವಿಲ್ಲ. ಅದಕ್ಕೆ ಬದಲಾಗಿ ಆತ್ಮನೇಪದದಲ್ಲಿ ಸೀಯುಟಾಗಮ ಹೇಳುತ್ತಾನೆ.

ಲಿಙ್‌ಗೆ ಸೀಯುಟಾಗಮ ಹೇಳುವ ಸೂತ್ರ.

**೫೨೧. ಲಿಙಃ ಸೀಯುಟ್ || ೩-೪-೧೦೨ ||**

**ಸಲೋಪಃ | ಏಧೇತ | ಏಧೇಯಾತಾಮ್ ||**

ದ್ವಿಪದ ಸೂತ್ರ. ಅನುವೃತ್ತ್ಯಾದಿಗಳು ಇಲ್ಲದಿರುವುದರಿಂದ ವೃತ್ತಿ ಬರೆಯಲಿಲ್ಲ. ಪರಸ್ಮೈಪದದಲ್ಲಿ ಯಾಸುಟಾಗಮ ಹೇಳಿರುವುದರಿಂದ ಇದು ಆತ್ಮನೇಪದ ವಿಷಯದಲ್ಲಿ ಎಂದು ತಿಳಿಯಬೇಕು. **ಸೂತ್ರಾರ್ಥ**—ಲಿಙ್‌ಗೆ ಆದೇಶವಾಗಿ ಬಂದ ಆತ್ಮನೇಪದ ಪ್ರತ್ಯಯಗಳಿಗೆ ಸೀಯುಟಾಗಮ ಬರುತ್ತದೆ. ಸೀಯುಟನಲ್ಲಿ ಸೀಯ್ ಉಳಿಯುತ್ತದೆ ಟಿತ್ತಾದುದರಿಂದ ಆದ್ಯವಯವವೆಂದು ತಿಳಿಯಬೇಕು. ಏಧ + ಸೀಯ್‌ತ. 'ಲಿಙಃ ಸಲೋಪೋಽನನ್ತ್ಯಸ್ಯ' ಸೂತ್ರದಿಂದ ವಿಧಿಲಿಙ್ ಸಾರ್ವಧಾತುಕವಾದುದರಿಂದ ಸೀಯು ಟನ ಸಕಾರಕ್ಕೆ ಲೋಪ. ಏಧ + ಈಯ್‌ತ. 'ಲೋಪೋವ್ಯೋರ್ವಲಿ' ಸೂತ್ರದಿಂದ ಯಲೋಪ. ಗುಣ. ಏಧೇತ. ಏಧ + ಈಯ್‌ಆತಾಂ. ಗುಣ. ಏಧೇಯಾ ತಾಂ. ಏಧ + ಈಯ್‌ಝ ಎಂದಿರುವಾಗ ಝಕ್ಕೆ ಅನ್ತಾದೇಶ ಪ್ರಾಪ್ತವಾದರೆ ಅದಕ್ಕೆ ಲಿಙ್‌ನಲ್ಲಿ ರನ್ ಆದೇಶ ಹೇಳುತ್ತಾನೆ.

ಲಿಙ್ಙಿನ ಝುಕ್ಕೆ ರನ್ ಆದೇಶ ಹೇಳುವ ಸೂತ್ರ.

**೫೨೨. ಝಸ್ಯ ರನ್ ॥ ೩-೪-೧೦೫ ॥**

**ಲಿಙೋ ಝಸ್ಯ ರನ್ ಸ್ಯಾತ್ । ಏಧೇರನ್ । ಏಧೇಥಾಃ । ಏಧೇಯಾಥಾಮ್ । ಏಧೇಧ್ವಮ್ ॥**

ದ್ವಿಪದ ಸೂತ್ರ. ಹಿಂದಿನ ಸೂತ್ರದಿಂದ 'ಲಿಙಃ' ಅನುವೃತ್ತಿ. **ಸೂತ್ರಾರ್ಥ** ಲಿಙಾದೇಶವಾದ ಝ ಪ್ರತ್ಯಯಕ್ಕೆ ರನ್ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. ಏಧ+ಈಯ್‌ರನ್. ಯಲೋಪ. ಗುಣ. ಏಧೇರನ್. ಏಧ+ಈಯ್‌ಥಾಸ್. ಹಿಂದಿನಂತೆ ಗುಣ, ಯಲೋಪ. ಸಕಾರಕ್ಕೆ ರುತ್ವವಿಸರ್ಗ. ಏಧೇಥಾಃ ॥ ಏಧ+ ಈಯ್‌ಆಥಾಮ್= ಏಧೇಯಾಥಾಮ್. ಏಧ+ಈಯ್‌ಧ್ವಮ್. ಯಲೋಪ. ಗುಣ. ಏಧೇಧ್ವಮ್. ಏಧ+ಈಯ್‌ಇ ಎಂದಿರುವಾಗ ಇಟಿಗೆ ಆದೇಶ ಹೇಳುತ್ತಾನೆ.

ಲಿಙಿನ ಇಟಿಗೆ ಅಕಾರಾದೇಶ ಹೇಳುವ ಸೂತ್ರ.

**೫೨೩ ಇಟೋಽತ್ ॥೩-೪-೧೦೬॥**

**ಲಿಙಾದೇಶಸ್ಯ ಇಟೋಽತ್ಸ್ಯಾತ್ । ಏಧೇಯ । ಏಧೇವಹಿ । ಏಧೇಮಹಿ ॥**

ಇಟಃ, ಅತ್ । ದ್ವಿಪದ ಸೂತ್ರ. 'ಲಿಙಃ ಸೀಯುಟ್' ಸೂತ್ರದಿಂದ 'ಲಿಙಃ' ಅನುವೃತ್ತಿ. **ಸೂತ್ರಾರ್ಥ**—ಲಿಙಿಗೆ ಆದೇಶವಾಗಿ ಬಂದ ಇಟಿಗೆ ಅತ್ ಆದೇಶ ಬರುತ್ತದೆ. ತಪರಮಾಡಿರುವುದರಿಂದ ಹ್ರಸ್ವಾಕಾರ ಮಾತ್ರ ಬರುತ್ತದೆ. ಏಧೇಯ್ +ಅ=ಏಧೇಯ. ಏಧ+ಈಯ್‌ವಹಿ, ಮಹಿ. ಯಲೋಪ. ಏಧೇವಹಿ। ಏಧೇಮಹಿ ॥**ಆಶೀರ್ಲಿಙ್** ॥ ಏಧ್+ತ ಎಂದಿರುವಾಗ 'ಲಿಙಃ ಸೀಯುಟ್' ಸೂತ್ರದಿಂದ ಪ್ರತ್ಯಯಗಳಿಗೆ ಸೀಯುಟಾಗಮ. ಸೀಯುಟಿಗೆ ವಲಾದಿಯಾದುದರಿಂದ 'ಆರ್ಧಧಾತುಕ—' ಸೂತ್ರದಿಂದ ಇಡಾಗಮ. ಏಧ್+ಇಸೀಯ್‌ತ. ಇಕಾರದ ಪರದಲ್ಲಿರುವುದರಿಂದ ಸಕಾರಕ್ಕೆ ಷತ್ವ. ಏಧಿಷೀಯ್‌ತ ಎಂದಿರುವಾಗ ತಕಾರಕ್ಕೆ ಸುಡಾಗಮ ಹೇಳುತ್ತಾನೆ.

ಲಿಙಿನ ತ, ಥ ಗಳಿಗೆ ಸುಡಾಗಮ ಹೇಳುವ ಸೂತ್ರ.

**೫೨೪. ಸುಟ್ ತಿಥೋಃ ॥ ೩-೪-೧೦೭ ॥**

**ಲಿಙ್‌ಸ್ತಥೋಃ ಸುಟ್ । ಯಲೋಪಃ । ಆರ್ಧಧಾತುಕತ್ವಾತ್ಸಲೋಪೋನ । ಏಧಿಷೀಷ್ಟ । ಏಧಿಷೀಯಾಸ್ತಾಮ್ । ಏಧಿಷೀರನ್ । ಏಧಿ**

**ಷೀಷ್ಠಾಃ । ಏಧಿಷೀಯಾಸ್ಥಾಮ್ । ಏಧಿಷೀಧ್ವಮ್ । ಏಧಿಷೀಯ ಏಧಿಷೀವಹಿ । ಏಧಿಷೀಮಹಿ ॥ ಐಧಿಷ್ಟ । ಐಧಿಷಾತಾಮ್ ॥**

ದ್ವಿಪದ ಸೂತ್ರ. 'ಲಿಙಃ ಸೀಯುಟ್' ಸೂತ್ರದಿಂದ 'ಲಿಙಃ' ಅನುವೃತ್ತಿ. ತಿಶ್ಚ ಥ್ ಚ ತಿಥೌ । ತಯೋಃ । ತಿಥೋಃ । ತಿ ಎಂಬಲ್ಲಿ ಇಕಾರ ಉಚ್ಚಾರಣಾರ್ಥ. **ಸೂತ್ರಾರ್ಥ**—ಲಿಙಿಗೆ ಆದೇಶವಾಗಿ ಬಂದ ಪ್ರತ್ಯಯಗಳ ತಕಾರ ಥಕಾರಗಳಿಗೆ ಸುಡಾಗಮ ಬರುತ್ತದೆ. ಸುಟ್ ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ತಕಾರದ ಆದಿಯಲ್ಲಿ ಬಂದರೆ ಏಧಿಷೀಯ್‌ಸ್‌ತ ಎಂದಾಗುತ್ತದೆ. 'ಲೋಪೋ ವ್ಯೋರ್ವಲಿ' ಸೂತ್ರದಿಂದ ಯಕಾರಲೋಪ. ಏದಿಷೀಸ್‌ತ. ಸಕಾರ ಪ್ರತ್ಯಯದ ಅವಯವವಾದುದರಿಂದ 'ಆದೇಶಪ್ರತ್ಯಯಯೋಃ' ಸೂತ್ರದಿಂದ ಷತ್ವ. ಏಧಿಷೀಷ್ ತ 'ಷ್ಟುನಾಷ್ಟುಃ' ಸೂತ್ರದಿಂದ ತಕಾರಕ್ಕೆ ಟಕಾರ. ಏಧಿಷೀಷ್ಟ. ಏಧಿಷೀಯ್ + ಆತಾಮ್. ಪ್ರತ್ಯಯತಕಾರಕ್ಕೆ ಹಿಂದಿನಂತೆ ಸುಡಾಗಮ. ಏಧಿಷೀಯಾಸ್ತಾಮ್ ಏಧಿಷೀಯ್ + ಝ. 'ಝಸ್ಯ ರನ್' ಸೂತ್ರದಿಂದ ಝಕ್ಕೆ ರನ್ ಆದೇಶ. ಯ ಲೋಪ. ಏಧಿಷೀರನ್. ಏಧಿಷೀಯ್ + ಥಾಸ್. ಯಲೋಪ. ಥಕಾರಕ್ಕೆ ಸುಟ್. ಏಧಿಷೀಸ್‌ಥಾಸ್. ಷತ್ವ, ಷ್ಟುತ್ವ. ಕೊನೆಯ ಸಕಾರಕ್ಕೆ ರುತ್ವ, ವಿಸರ್ಗ. ಏಧಿಷೀಷ್ಠಾಃ ॥ ಏಧಿಷೀಯ್ + ಆಥಾಮ್. ಥಕಾರಕ್ಕೆ ಸುಟ್. ಏಧಿಷೀಯಾಸ್ಥಾಮ್. ಏಧಿಷೀಯ್ + ಧ್ವಮ್. ಯಲೋಪ. ಏಧಿಷೀಧ್ವಮ್. ಏಧಿಷೀಯ್ + ಇ. 'ಇಟೋಽತ್' ಏಧಿಷೀಯ. ವಹಿ, ಮಹಿಙ್ ಗಳಲ್ಲಿ ಯಲೋಪ. ಏಧಿಷೀವಹಿ । ಏಧಿಷೀಮಹಿ ॥

**ಲುಙ್** ॥ 'ಚ್ಲಿಲುಙಿ', 'ಚ್ಲೇಃಸಿಚ್' ಏಧ್ + ಸ್ + ತ. ಅಂಗಕ್ಕೆ ಆಟಾಗಮ, ವೃದ್ಧಿ. ಸಿಚಿಗೆ ಇಡಾಗಮ. ಐಧಿಸ್‌ತ. 'ಆದೇಶಪ್ರತ್ಯಯಯೋಃ' ಷತ್ವ 'ಷ್ಟುನಾಷ್ಟುಃ' ಸೂತ್ರದಿಂದ ತಕಾರಕ್ಕೆ ಟಕಾರ. ಐಧಿಷ್ಟ. ಐಧಿಷ್ ಅಂಗ. ಐಧಿಷ್ + ಆತಾಮ್ = ಐದಿಷಾತಾಮ್. ಐಧಿಷ್ + ಝ ಎಂದಿರುವಾಗ ಝಕ್ಕೆ ಅಂತಾದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಅತಾದೇಶ ಹೇಳುತ್ತಾನೆ.

ಝಕ್ಕೆ ಅತಾದೇಶ ಹೇಳುವ ಸೂತ್ರ

**೫೨೫. ಆತ್ಮನೇಪದೇಷ್ವನತಃ । ೭-೧-೫ ॥**

**ಅನಕಾರಾತ್ಪರಸ್ಯಾತ್ಮನೇಪದೇಷು ಝಸ್ಯ ಅದಿತ್ಯಾದೇಶಃ ಸ್ಯಾತ್ । ಐಧಿಷತ । ಐಧಿಷ್ಠಾಃ । ಐಧಿಷಾಥಾಮ್ । ಐಧಿಢ್ವಮ್ ಐಧಿಷಿ । ಐಧಿಷ್ವಹಿ । ಐಧಿಷ್ಮಹಿ ॥ ಐಧಿಷ್ಯತ । ಐಧಿಷ್ಯೇತಾಮ್ । ಐಧಿಷ್ಯಂತ ॥ ಐಧಿಷ್ಯಥಾಃ । ಐಧಿಷ್ಯೇಥಾಮ್ । ಐಧಿಷ್ಯಧ್ವಮ್ । ಐಧಿಷ್ಯೇ । ಐಧಿಷ್ಯಾವಹಿ । ಐಧಿಷ್ಯಾಮಹಿ ॥**

8

ಆತ್ಮನೇಪದೇಷು, ಅನತಃ || ದ್ವಿಪದ ಸೂತ್ರ. / 'ಝೋನ್ತಃ' ಸೂತ್ರದಿಂದ 'ಝಃ', 'ಅದಭ್ಯಸ್ತಾತ್' ಸೂತ್ರದಿಂದ 'ಅತ್' ಪದಗಳು ಅನುವೃತ್ತವಾಗುತ್ತವೆ. ನ ಅತ್ ಅನತ್. ತಸ್ಮಾತ್. **ಸೂತ್ರಾರ್ಥ**—ಹ್ರಸ್ವಾಕಾರದ ಪರದಲ್ಲಿ ಇಲ್ಲದಿರುವ ಆತ್ಮನೇಪದಾವಯವವಾದ ಝುಕ್ಕೆ ಅತ್ ಆದೇಶ ಬರುತ್ತದೆ. ಅತ್+ಅ. ಅತ ಪ್ರತ್ಯಯವಾಗುತ್ತದೆ. ಐಧಿಷ್+ಅತ=ಐಧಿಷತ | ಐಧಿಷ್+ಥಾಸ್. ಷ್ಟುತ್ವ. ಐಧಿಷ್ಠಾಃ | ಐಧಿಷಾಥಾಂ | ಐಧಿಸ್+ಧ್ವಮ್ 'ಧಿಚ' ಸೂತ್ರದಿಂದ ಸಲೋಪ, ಐಧಿ+ಧ್ವಮ್ ಇಣ್ಣಂತಾಗದ ಪರದಲ್ಲಿ ಲುಙಿನ ಧಕಾರ ಬಂದುದರಿಂದ 'ಇಣಃ ಷೀಧ್ವಂ—' ಸೂತ್ರದಿಂದ ಅದಕ್ಕೆ ಢತ್ವ. ಐಧಿಢ್ವಂ || ಐಧಿಷ್+ಇ=ಐಧಿಷಿ | ಐಧಿಷ್+ವಹಿ=ಐಧಿಷ್ವಹಿ | ಐಧಿಷ್+ಮಹಿ=ಐಧಿಷ್ಮಹಿ ||

**ಲೃಙ್** || ಸ್ಯ ವಿಕರಣ. ಇಡಾಗಮ. ಷತ್ವ. ಅಂಗಕ್ಕೆ ಇಟ್. ವೃದ್ಧಿ. ಐಧಿಷ್ಯ ಅಂಗ. ರೂಪಗಳು ಮೂಲದಲ್ಲಿ ವಿವೃತವಾಗಿವೆ.

**ಕಮು=ಕಾಂತೌ (ಇಚ್ಛೆಪಡುವುದು.)**

ಉಕಾರ ಇತ್. ಸೇಟ್. ಆತ್ಮನೇಪದೀ. ಇದಕ್ಕೆ ಸ್ವಾರ್ಥದಲ್ಲಿ ಣಿಙ್ ಪ್ರತ್ಯಯ ಹೇಳುತ್ತಾನೆ.

ಕಮ್ ಧಾತುವಿಗೆ ಣಿಙ್ ಹೇಳುವ ಸೂತ್ರ.

**೫೨೬. ಕಮೇರ್ಣಿಙ್ ||೩-೧-೩೦ ||**

**ಸ್ವಾರ್ಥೇ | ಙಿತ್ತ್ವಾತ್ತಙ್ | ಕಾಮಯತೇ**

ಕಮೇಃ, ಣಿಙ್ || ದ್ವಿಪದ ಸೂತ್ರ. **ಸೂತ್ರಾರ್ಥ**—ಕಂ ಧಾತುವಿಗೆ ಸ್ವಾರ್ಥದಲ್ಲಿ ಣಿಙ್ ಪ್ರತ್ಯಯ ಬರುತ್ತದೆ. ಪ್ರತ್ಯಾಯಯತಿ=ಬೋಧಯತಿ ಅರ್ಥಂ ಇತಿ ಪ್ರತ್ಯಯಃ || ಪ್ರತ್ಯಯವೆಂದಮೇಲೆ ಯಾವುದಾದರೂ ಒಂದು ಅರ್ಥವನ್ನು ಬೋಧಿಸಲೇಬೇಕು. ಆದರೆ ಇಲ್ಲಿ ಯಾವ ಅರ್ಥವೂ ಹೇಳಿಲ್ಲ. 'ಅನಿರ್ದಿಷ್ಟಾರ್ಥಾಃ ಪ್ರತ್ಯಯಾಃ ಸ್ವಾರ್ಥೇ ಭವಂತಿ' ಯಾವ ಅರ್ಥವೂ ಹೇಳದೆ ಪ್ರತ್ಯಯನಿರ್ದೇಶ ಮಾಡಿದರೆ ಅದು ಸ್ವಾರ್ಥದಲ್ಲಿ ಅಂದರೆ ತನ್ನ ಪ್ರಕೃತ್ಯರ್ಥದಲ್ಲಿ ಬರುತ್ತದೆ ಎಂದು ತಿಳಿಯುಬೇಕು. ಪ್ರಕೃತ ಣಿಙ್ ಕಮಿನ ಅರ್ಥದಲ್ಲಿಯೇ ಬರುತ್ತದೆಂದು ತಿಳಿಯಬೇಕು. ಣಿಙಿನಲ್ಲಿ 'ಚುಟೂ' ಸೂತ್ರದಿಂದ ಣಕಾರವೂ 'ಹಲಂತ್ಯಮ್' ಸೂತ್ರದಿಂದ ಙಕಾರವೂ ಇತ್ತಾಗಿ ಲೋಪವಾದರೆ ಇ ಉಳಿಯುತ್ತದೆ. ಗಮ್+ಇ ಎಂದಿರುವಾಗ 'ಸನಾದ್ಯಂತಾಧಾತವಃ' ಸೂತ್ರದಿಂದ ಣಿಙಂತಕ್ಕೆ ಧಾತುಸಂಜ್ಞಾ. ಙಿತ್ತಾದುದರಿಂದ 'ಅನುದಾತ್ತಙಿತ ಆತ್ಮನೇಪದಮ್' ಸೂತ್ರದಿಂದ ಆತ್ಮನೇಪದಪ್ರತ್ಯಯಗಳು ಬರುತ್ತವೆ. ಕಮಿ+ತ ಎಂದಿರುವಾಗ ಶಪ್ ವಿಕರಣ. ಕಮಿ+ಅ+ತ. 'ಸಾರ್ವ

ಧಾತುಕಾರ್ಧಧಾತುಕಯೋಃ' ಗುಣ. ಕಮೇ+ಅ+ತ. 'ಏಚೋಽಯವಾಯಾವಃ' ಅಯಾದೇಶ. ಪ್ರತ್ಯಯಗಳ ಟಿಗೆ ಏತ್ವ. ಣಿಙ್ ಣಿತ್ತಾದುದರಿಂದ 'ಅತ ಉಪಧಾಯಾಃ' ಸೂತ್ರದಿಂದ ಕಮಿನ ಅಕಾರಕ್ಕೆ ವೃದ್ಧಿ (ಆ) ಕಾಮಯತೇ. ಕಾಮಯ ಅಂಗ. ಕಾಮಯೇತೇ | ಕಾಮಯನ್ತೇ || ಕಾಮಯಸೇ | ಕಾಮಯೇಥೇ ಕಾಮಯಧ್ವೇ || ಕಾಮಯೇ | ಕಾಮಯಾವಹೇ | ಕಾಮಯಾಮಹೇ ||

ಲಿಟ್ || ಕಾಮಿ+ಲಿಟ್. ಅನೇಕಾಚಾಗಿ ಪ್ರತ್ಯಯಾಸ್ತವಾದುದರಿಂದ ಆಮ್. ಕಾಮಿ+ಆಮ್+ಲಿಟ್. 'ಆಮಃ' ಸೂತ್ರದಿಂದ ಲಿಟಿಗೆ ಲುಕ್. ಕಾಮಿ+ಆಮ್. ಇಲ್ಲಿ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣಪ್ರಾಪ್ತವಾದರೆ ಅದಕ್ಕೆ ಬಾಧಕವಾಗಿ 'ಣೇರನಿಟಿ' ಸೂತ್ರದಿಂದ (ಮುಂದೆ ಹೇಳುತ್ತಾನೆ.) ಣಿಗೆ ಲೋಪ ಪ್ರಾಪ್ತದಾದರೆ ಅದಕ್ಕೆ ಅಪವಾದವಾಗಿ ಣಿಗೆ ಅಯಾದೇಶ ಹೇಳುತ್ತಾನೆ.

ಣಿಗೆ ಅಯಾದೇಶ ಹೇಳುವ ಸೂತ್ರ

**೫೨೭. ಅಯಾಮನ್ತಾಲ್ವಾಯ್ಯೇತ್ನ್ವಿಷ್ಣುಷು || ೬-೪-೫೫ ||**

**ಆಮ್ ಅನ್ತ ಆಲು ಆಯ್ಯ ಇತ್ನು ಇಷ್ಣು ಏಷು ಣೇರಯಾದೇಶಃ ಸ್ಯಾತ್ | ಕಾಮಯಾಞ್ಚಕ್ರೇ || ಆಯಾದಯ ಇತಿ ಣಿಙ್ ವಾ | ಚಕಮೇ | ಚಕಮಾತೇ | ಚಕಮಿರೇ | ಚಕಮಿಷೇ | ಚಕಮಾಥೇ | ಚಕಮಿಧ್ವೇ | ಚಕಮೇ | ಚಕಮಿವಹೇ | ಚಕಮಿಮಹೇ || ಕಾಮಯಿತಾ | ಕಾಮಯಿತಾಸೇ | ಕಮಿತಾ || ಕಾಮಯಿಷ್ಯತೇ | ಕಮಿಷ್ಯತೇ || ಕಾಮಯತಾಮ್ || ಅಕಾಮಯತ || ಕಾಮಯೇತ || ಕಾಮಯಿಷೀಷ್ಟ ||**

ಅಯ್, ಆಮನ್ತಾಲ್ವಾಯ್ಯೇತ್ನ್ವಿಷ್ಣುಷು || ದ್ವಿಪದ ಸೂತ್ರ. 'ಣೇರನಿಟಿ' ಸೂತ್ರದಿಂದ 'ಣೇಃ' ಅನುವೃತ್ತಿ. **ಸೂತ್ರಾರ್ಥ** ಆಮ್, ಅನ್ತ, ಆಲು, ಆಯ್ಯ, ಇತ್ನು, ಇಷ್ಣು ಇವು ಪರದಲ್ಲಿರುವಾಗ ಣಿಗೆ ಅಯಾದೇಶ ಬರುತ್ತದೆ. ಣಿಲೋಪಕ್ಕೆ ಅಪವಾದ. ಪ್ರಕೃತ ಆಮ್ ಪರವಾದುದರಿಂದ ಣಿಗೆ ಅಯಾದೇಶ ಬಂದರೆ ಕಾಮಯಾಮ್ ಎಂದಾದಾಗ ಅಮಂತವಾದುದರಿಂದ ಇದರ ಮೇಲೆ ಲಿಟ್ ಪರವಾದ ಕೃಞ್, ಭೂ, ಅಸ್ ಧಾತುಗಳು ಬರುತ್ತವೆ. ಏಧಾಞ್ಚಕ್ರೇ, ಏಧಾಮ್ಬಭೂವ, ಏಧಾಮಾಸ ಇವುಗಳಂತೆ ಪ್ರಕ್ರಿಯೆ ತಿಳಿದುಕೊಳ್ಳಬೇಕು. ಕಾಮಯಾಞ್ಚಕ್ರೇ | ಕಾಮಯಾಞ್ಚಕ್ರಾತೇ | ಕಾಮಯಾಞ್ಚಕ್ರಿರೇ || ಇತ್ಯಾದಿ. ಸನಾದಿಗಳು ಹನ್ನೆರಡು ಪ್ರತ್ಯಯಗಳೆಂದು ಹಿಂದೆ ಹೇಳಿದೆ. ಅದರಲ್ಲಿ ಆಯ, ಈಯಙ್. ಣಿಙ್ ಇವು ಕೊನೆಯಲ್ಲಿವೆ. 'ಅಯಾದಯ ಆರ್ಧಧಾತುಕೇ ವಾ' ಸೂತ್ರದಿಂದ ಆರ್ಧಧಾತುಕ ಪರದಲ್ಲಿರುವಾಗ ಅಯಾದಿಗಳು ವಿಕಲ್ಪವಾಗಿ ಬರುತ್ತವೆಯೆಂದುದರಿಂದ ಲಿಟ್ ಆರ್ಧಧಾತುಕವಾದುದರಿಂದ ಅಯಾದಿಯಲ್ಲಿ ಸೇರಿರುವ ಣಿಙ್ ವಿಕಲ್ಪವಾಗಿ ಬಂದರೆ ಹಿಂದೆ ಹೇಳಿದ ರೂಪ

ಬಾರದಿದ್ದರೆ ಕಮ್ ಧಾತುವಿಗೇ ದ್ವಿತ್ವಾದಿ. ಕಮ್‌ಕಮ್ + ಏ, ಕಕಮ್ + ಏ. ಚಕಮ್ + ಏ = ಚಕಮೇ. ಚಕಮ್ ಅಂಗ. ರೂಪಗಳು ಮೂಲದಲ್ಲಿ ಹೇಳಿವೆ.

**ಲುಟ್** || ಕಾಮಿ + ಇತಾ. ಗುಣ, ಅಯಾದೇಶ. ಕಾಮಯಿತಾ । ಕಾಮಯಿತಾರೌ । ಕಾಮಯಿತಾರಃ || ಕಾಮಯಿತಾಸೇ । ಕಾಮಯಿತಾಸಾಥೇ । ಕಾಮಯಿತಾಧ್ವೇ || ಕಾಮಯಿತಾಹೇ । ಕಾಮಯಿತಾಸ್ವಹೇ । ಕಾಮಯಿತಾಸ್ಮಹೇ || ತಾಸ್ ಆರ್ಧಧಾತುಕವಾದುದರಿಂದ ಣಿಙ್ ವಿಕಲ್ಪವಾದುದರಿಂದ ಬಾರದಿದ್ದರೆ ಕಮಿತಾ | ಕಮಿತಾರೌ | ಕಮಿತಾರಃ || ಕಮಿತಾಸೇ । ಕಮಿತಾಸಾಥೇ । ಕಮಿತಾಧ್ವೇ || ಕಮಿತಾಹೇ | ಕಮಿತಾಸ್ವಹೇ । ಕಮಿತಾಸ್ಮಹೇ || **ಲೃಟ್** || ಣಿಙ್ ಬಂದರೆ ಕಾಮಯಿಷ್ಯತೇ ಇತ್ಯಾದಿ. ಕಾಮಯಿಷ್ಯ ಅಂಗ. ಣಿಙ್ ಬಾರದಿದ್ದರೆ ಕಮಿಷ್ಯತೇ ಇತ್ಯಾದಿ. (ಏಧಿಷ್ಯತೇ ಎಂಬಂತೆ) ಕಮಿಷ್ಯ ಅಂಗ. **ಲೋಟ್** || ಣಿಙ್ ನಿತ್ಯ. ಕಾಮಯ ಅಂಗ. 'ಆಮೇತಃ' ಸೂತ್ರದಿಂದ ಪ್ರತ್ಯಯಗಳ ಟಿಗೆ ಏತ್ವ ಬಂದಾಗ ಅದಕ್ಕೆ ಆಮ್ ಆದೇಶ. ಕಾಮಯತಾಮ್ । ಕಾಮಯೇತಾಮ್ । ಕಾಮಯನ್ತಾಮ್ || (ಏಧತಾಂ ಇದ್ದಂತೆ) ಕಾಮಯಸ್ವ । ಕಾಮಯೇಥಾಮ್ । ಕಾಮಯಧ್ವಮ್ || ಕಾಮಯೈ । ಕಾಮಯಾವಹೈ । ಕಾಮಯಾಮಹೈ || **ಲಙ್** || ಅಕಾಮಯತ । (ಏಧತವಂತೆ) ಅಕಾಮಯೇತಾಮ್ || ಅಕಾಮಯನ್ತ || ಅಕಾಮಯಥಾಃ | ಅಕಾಮಯೇಥಾಮ್ | ಅಕಾಮಯಧ್ವಮ್ || ಅಕಾಮಯೇ | ಅಕಾಮಯಾವಹಿ | ಅಕಾಮಯಾಮಹಿ || **ವಿಧಿಲಿಙ್** || ಕಾಮಯೇತ |(ಏಧೇತವತ್) ಕಾಮಯೇಯಾತಾಮ್ | ಕಾಮಯೇರನ್ || ಕಾಮಯೇಥಾಃ । ಕಾಮಯೇಯಾಥಾಮ್ | ಕಾಮಯೇಧ್ವಮ್ || ಕಾಮಯೇಯ | ಕಾಮಯೇವಹಿ | ಕಾಮಯೇಮಹಿ || **ಆಶೀರ್ಲಿಙ್** || ಇದು ಆರ್ಧಧಾತುಕವಾದುದರಿಂದ ಣಿಙ್ ವಿಕಲ್ಪ. ಕಾಮಿ + ಇಸೀಯ್‌ತ. 'ಸುಟ್ ತಿಥೋಃ' ಸೂತ್ರದಿಂದ ತಕಾರಕ್ಕೆ ಸುಟ್. ಯಲೋಪ. ಸಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ತಕಾರಕ್ಕೆ ಷ್ಟುತ್ವ. ಣಿಙಿನ ಇಕಾರಕ್ಕೆ ಗುಣ, ಅಯಾದೇಶ. ಕಾಮಯಿಷೀಷ್ಟ | ಕಾಮಯಿಷೀಯಾಸ್ತಾಮ್ | ಕಾಮಯಿಷೀರನ್ || (ಏಧಿಷೀಷ್ಟದಂತೆ) ಕಾಮಯಿಷೀಷ್ಠಾಃ । ಕಾಮಯಿಷೀಯಾಸ್ಥಾಮ್ | ಕಾಮಯಿಷೀಧ್ವಮ್ || ಇಣಿನ (ಇ) ಪರದಲ್ಲಿ ಷೀಧ್ವಮ್ ಬಂದುದರಿಂದ ಅದರ ಧಕಾರಕ್ಕೆ ನಿತ್ಯವಾಗಿ ಢಕಾರ ಪ್ರಾಪ್ತವಾದರೆ ಇಲ್ಲಿ ವಿಕಲ್ಪವಾಗಿ ಢತ್ವ ಹೇಳುತ್ತಾನೆ.

ಷೀಧ್ವಮಾದಿಗಳ ಧಕಾರಕ್ಕೆ ವಿಕಲ್ಪ ಢತ್ವ ಹೇಳುವ ಸೂತ್ರ.

**೫೨೮. ವಿಭಾಷೇಟಃ || ೮-೩-೭೯ ||**

**ಇಣಃ ಪರೋ ಯು ಇಟ್ ತತಃ ಪರೇಷಾಂ ಷೀಧ್ವಂಲುಙ್‌ಲಿಟಾಂ ಧಸ್ಯ ವಾಢಃ || ಕಾಮಯಿಷೀಢ್ವಮ್, ಕಾಮಯಿಷೀಧ್ವಮ್ || ಕಮಿಷೀಷ್ಟ || ಕಮಿಷೀಧ್ವಮ್ ||**

ವಿಭಾಷಾ, ಇಟಃ || ದ್ವಿಪದ ಸೂತ್ರ. 'ಇಣಃ ಷೀಧ್ವಂಲುಙ್‌ಲಿಟಾಂ ಧಃ' ಅನುವೃತ್ತಿ. 'ಮೂರ್ಧನ್ಯಃ' ಅಧಿಕಾರ. **ಸೂತ್ರಾರ್ಥ**—ಇಣಿನ ಪರದಲ್ಲಿರುವ ಇಟಿನ ಪರದಲ್ಲಿರುವ ಷೀಧ್ವಂ, ಲುಙ್, ಲಿಟ್ ಸಂಬಂಧಿಯಾದ ಧಕಾರಕ್ಕೆ ವಿಕಲ್ಪ ವಾಗಿ ಢಕಾರಾದೇಶ ಬರುತ್ತದೆ. ಕಾಮಯಿಷೀಧ್ವಂ ಎಂಬಲ್ಲಿ ಇಣ್ ಯಕಾರ. ಅದರ ಪರದಲ್ಲಿ ಇಟ್ ಇದೆ. ಅದರ ಪರದಲ್ಲಿ ಷೀಧ್ವಮಿನ ಧಕಾರವಿರುವುದರಿಂದ ಅದಕ್ಕೆ ವಿಕಲ್ಪ ಢತ್ವ ಬಂದರೆ ಕಾಮಯಿಷೀಢ್ವಮ್, ಕಾಮಯಿಷೀಧ್ವಮ್ ಎಂದು ಎರಡು ರೂಪಗಳಾಗುತ್ತವೆ. ಕಾಮಯಿಷೀಯ | ಕಾಮಯಿಷೀವಹಿ | ಕಾಮಯಿಷೀ ಮಹಿ || ಣಿಙ್ ಬಾರದಿದ್ದರೆ ಕಮಿಷೀಷ್ಟ | ಕಮಿಷೀಯಾಸ್ತಾಮ್ | ಕಮಿಷೀರನ್ || ಕಮಿಷೀಷ್ಠಾಃ | ಕಮಿಷೀಯಾಸ್ಥಾಮ್ | ಕಮಿಷೀಧ್ವಮ್ || ಇಲ್ಲಿ ಇಣ್ಣಂತಾಂಗದ ಪರದಲ್ಲಿ ಷೀಧ್ವಮಿನ ಧಕಾರ ಬಾರದಿರುವುದರಿಂದ ಧಕಾರಕ್ಕೆ ಢತ್ವವಿಲ್ಲ. ಕಮ್ ಅಂಗ, ಇಷೀಧ್ವಮ್ ಪ್ರತ್ಯಯ. ಕಮಿಷೀಯ | ಕಮಿಷೀವಹಿ | ಕಮಿಷೀಮಹಿ ||

**ಲುಙ್** || ಅಕಾಮಿ+ಚ್ಲಿ+ತ ಎಂದಿರುವಾಗ ಚ್ಲಿಗೆ ಸಿಚ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಚಙ್ ಹೇಳುತ್ತಾನೆ. ಚ್ಲಿ ಆರ್ಧಧಾತುಕವಾದುದರಿಂದ ಣಿಙ್ ವಿಕಲ್ಪ. ಣಿಙ್ ಬಂದಾಗ ಈಗ ಹೇಳುವ ಕಾರ್ಯವೆಂದು ತಿಳಿಯಬೇಕು.

ಚ್ಲಿಗೆ ಚಙ್ ಹೇಳುವ ಸೂತ್ರ.

**೫೨೯. ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್** || ೩-೧-೪೮ ||

**ಣ್ಯನ್ತಾತ್ ಶ್ರ್ಯಾದಿಭ್ಯಶ್ಚ ಚ್ಲೇಶ್ಚಙ್ ಸ್ಯಾತ್ ಕರ್ತ್ರರ್ಥೇ ಲುಙ್ ಪರೇ || ಅಕಾಮಿ+ಅ+ತ ಇತಿ ಸ್ಥಿತೇ ||**

ತ್ರಿಪದ ಸೂತ್ರ. 'ಚ್ಲಿಲುಙಿ' ಸೂತ್ರದಿಂದ 'ಲುಙಿ', 'ಚ್ಲೇಃ ಸಿಚ್' ಸೂತ್ರದಿಂದ 'ಚ್ಲೇಃ' ಪದಗಳು ಅನುವೃತ್ತವಾಗುತ್ತವೆ. ಣಿ ಪದದಿಂದ ಣಿಚ್, ಣಿಙ್ ಎರಡೂ ಗೃಹೀತವಾಗುತ್ತವೆ. ಇವು ಪ್ರತ್ಯಯವಾದುದರಿಂದ ತದಂತಗ್ರಹಣ. ಶ್ರಿ, ದ್ರು, ಸ್ರು ಧಾತುಗಳು. ಕರ್ತರಿ ಎಂಬುದು ಲುಙಿನಲ್ಲಿ ಅನ್ವಯ. **ಸೂತ್ರಾರ್ಥ**— ಣ್ಯನ್ತ ಧಾತುಗಳ, ಶ್ರಿ, ದ್ರು, ಸ್ರು ಧಾತುಗಳ ಪರದಲ್ಲಿರುವ ಚ್ಲಿಗೆ ಕರ್ತ್ರರ್ಥದಲ್ಲಿ ಬಂದ ಲುಙ್ ಪರದಲ್ಲಿರುವಾಗ ಚಙ್ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. ಪ್ರಕೃತ ಣ್ಯನ್ತದಮೇಲೆ ಚ್ಲಿ ಇರುವುದರಿಂದ ಚಙ್. ಚಙಿನಲ್ಲಿ ಅ ಉಳಿಯುತ್ತದೆ. ಅಕಾಮಿ+ಅ+ತ ಎಂದಿರುವಾಗ ಣಿಗೆ ಲೋಪ ಹೇಳುತ್ತಾನೆ.

ಣಿ [ಙಿ] ಗೆ ಲೋಪ ಹೇಳುವ ಸೂತ್ರ.

**೫೩೦. ಣೇರನಿಟಿ** || ೬-೪-೫೧ ||

**ಅನಿಡಾದಾವಾರ್ಧಧಾತುಕೇ ಪರೇ ಣೇರ್ಲೋಪಃ ಸ್ಯಾತ್ ||**

ಣೇಃ, ಅನಿಟಿ || ದ್ವಿಪದ ಸೂತ್ರ. 'ಆರ್ಧಧಾತುಕೇ' ಅಧಿಕಾರ. 'ಅತೋ ಲೋಪಃ' ಸೂತ್ರದಿಂದ 'ಲೋಪಃ' ಅನುವೃತ್ತಿ. 'ಅನಿಟಿ', 'ಆರ್ಧಧಾತುಕೇ' ಎಂಬುದಕ್ಕೆ ವಿಶೇಷಣವಾದುದರಿಂದ ತದಾದಿಲಾಭ. **ಸೂತ್ರಾರ್ಥ** — ಅನಿಡಾದಿಯಾದ ಆರ್ಧಧಾತುಕ ಪರದಲ್ಲಿರುವಾಗ ಣಿಗೆ ಲೋಪ ಬರುತ್ತದೆ. ಅಕಾಮಿ+ಅ+ತ ಎಂದಿರುವಾಗ ಣಿಗೆ ಚಙ್ ಪರವಾದುದರಿಂದ ಇಟ್ ಬಂದಿಲ್ಲ. ಆದುದರಿಂದ ಲೋಪ. ಅಕಾಮ್+ಅ+ತ ಎಂದಿರುವಾಗ ಣಿಜ್ ನಿಮಿತ್ತವಾಗಿ ಬಂದ ಉಪಧಾವೃದ್ಧಿಗೆ ಹ್ರಸ್ವ ಹೇಳುತ್ತಾನೆ.

ಚಙ್ ಪರ ಣಿ ಪರವಾದಾಗ ಉಪಧಾಹ್ರಸ್ವ ಹೇಳುವ ಸೂತ್ರ.

**೫೩೧. ಣೌ ಚಙ್ಯುಪಧಾಯಾ ಹ್ರಸ್ವಃ || ೭-೪-೧ ||**

**ಚಙ್‌ಪರೇ ಣೌ ಯದಙ್ಗಂ ತಸ್ಯೋಪಧಾಯಾ ಹ್ರಸ್ವಃ ಸ್ಯಾತ್ ||**

ಣೌ, ಚಙಿ, ಉಪಧಾಯಾಃ, ಹ್ರಸ್ವಃ || ನಾಲ್ಕು ಪದಗಳುಳ್ಳ ಸೂತ್ರ. **ಸೂತ್ರಾರ್ಥ** — ಚಙ್ ಪರದಲ್ಲಿರುವ ಣಿ ಪರದಲ್ಲಿರುವಾಗ ಅಂಗದ ಉಪಧೆಗೆ ಹ್ರಸ್ವ ಬರುತ್ತದೆ. ಚಙ್ ಅಕಾರ. ಇದು ಪರದಲ್ಲಿರುವಾಗ ಅಂಗ ಅಕಾಮ್. ಇದರ ಉಪಧೆ ಆಕಾರ. ಇದಕ್ಕೆ ಹ್ರಸ್ವ ಬಂದರೆ ಅಕಮ್+ಅ+ತ ಎಂದಾಗುತ್ತದೆ. ಈಗ ಧಾತುವಿಗೆ ದ್ವಿತ್ವ ಹೇಳುತ್ತಾನೆ.

ಚಙ್ ಪರವಾದಾಗ ದ್ವಿತ್ವ ಹೇಳುವ ಸೂತ್ರ.

**೫೩೨. ಚಙಿ || ೬-೧-೧೧ ||**

**ಚಙಿ ಪರೇ ಅನಭ್ಯಾಸಸ್ಯ ಧಾತ್ವವಯವಸ್ಯೈಕಾಚಃ ಪ್ರಥಮಸ್ಯ ದ್ವೇ ಸ್ತೋಽಜಾದೇರ್ದ್ವಿತೀಯಸ್ಯ ||**

ಏಕಪದ ಸೂತ್ರ. 'ಏಕಾಚೋ ದ್ವೇ ಪ್ರಥಮಸ್ಯ', 'ಅಜಾದೇರ್ದ್ವಿತೀಯಸ್ಯ' ಅಧಿಕಾರ. 'ಲಿಟಿ ಧಾತೋರನಭ್ಯಾಸಸ್ಯ' ಸೂತ್ರದಿಂದ 'ಧಾತೋರನಭ್ಯಾಸಸ್ಯ' ಅನುವೃತ್ತಿ. **ಸೂತ್ರಾರ್ಥ**—ಚಙ್ ಪರದಲ್ಲಿರುವಾಗ ಅಭ್ಯಾಸವಲ್ಲದ ಧಾತ್ವವಯವವಾದ ಪ್ರಥಮ ಏಕಾಚಿಗೆ ದ್ವಿತ್ವ ಬರುತ್ತದೆ. ಅದು ಅಜಾದಿಯಾದರೆ ದ್ವಿತೀಯ ಏಕಾಚಿಗೆ ದ್ವಿತ್ವ ಬರುತ್ತದೆ. ಅಕಮ್+ಅ+ತ ಎಂದಿರುವಾಗ ಚಙ್ ಅಕಾರ. ಇದು ಪರವಾದಾಗ ಅಜಾದಿಯಾದುದರಿಂದ ದ್ವಿತೀಯೈಕಾಚ್ ಅಂದರೆ ಕಮ್. ಅದಕ್ಕೆ ದ್ವಿತ್ವ ಬಂದರೆ ಅಕಮ್‌ಕಮ್+ಅ+ತ ಎಂದಾಗುತ್ತದೆ. 'ಹಲಾದಿಃ ಶೇಷಃ. ಅಕಕಮ್+ಅ+ತ. 'ಕುಹೋಶ್ಚುಃ' ಸೂತ್ರದಿಂದ ಅಭ್ಯಾಸಕಕಾರಕ್ಕೆ ಚಕಾರ. ಅಚಕಮ್+ಅತ. ಸನ್‌ಪ್ರತ್ಯಯನಿಮಿತ್ತಕವಾಗಿ ಅಭ್ಯಾಸಕ್ಕೆ ಕಾರ್ಯವಿಶೇಷ ಹೇಳಲು ಮೊದಲು ಸನ್ವದ್ಭಾವ ಹೇಳುತ್ತಾನೆ.

ಚಙ್ ಪರವಾದಾಗ ಸನ್ವದ್ಭಾವವನ್ನು ಹೇಳುವ ಸೂತ್ರ.

**೫೩೩, ಸನ್ವಲ್ಲಘುನಿ ಚಙ್‌ಪರೇಽನಗ್ಲೋಪೇ || ೭-೪-೯೩ ||**

**ಚಙ್‌ಪರೇ ಣೌ ಯದಙ್ಗಂ ತಸ್ಯ ಯೋಽಭ್ಯಾಸೋ ಲಘುಪರಃ ತಸ್ಯ ಸನೀವ ಕಾರ್ಯಂ ಸ್ಯಾಣ್ಣಾವಗ್ಲೋಪೇಽಸತಿ ||**

ಸನ್ವತ್ ಲಘುನಿ, ಚಙ್‌ಪರೇ, ಅನಗ್ಲೋಪೇ | ನಾಲ್ಕು ಪದಗಳುಳ್ಳ ಸೂತ್ರ. ಚಙ್‌ಪರೋ ಯಸ್ಮಾತ್ ಸಃ, ಚಙ್‌ಪರಃ || ತಸ್ಮಿನ್ ಚಙ್‌ಪರೇ || ಚಙ್ ಪರವಾಗಿ ಇರುವುದು ಯಾವುದೋ ಅದು ಚಙ್‌ಪರ. ಪ್ರಕೃತದಲ್ಲಿ ಚಙ್‌ಪರವೆಂದರೆ ಣಿ. ಇದು ಪರವಾದಾಗ ಎಂದರ್ಥ. ಇದು ಆವೃತ್ತವಾಗುತ್ತದೆ. ಒಂದು ಚಙ್‌ಪರಕ್ಕೆ ಅಂಗದಲ್ಲಿ ಅನ್ವಯ. ಇನ್ನೊಂದಕ್ಕೆ ಅನಗ್ಲೋಪೇ ಎಂಬಲ್ಲಿ ಅನ್ವಯ. **ಸೂತ್ರಾರ್ಥ—** ಚಙ್‌ಪರವಾದ ಣಿ ಪರದಲ್ಲಿರುವಾಗ ಯಾವ ಅಂಗವಿದೆಯೋ ಅದರ ಅಭ್ಯಾಸಕ್ಕೆ ಲಘು ಪರವಾಗಿರುವಾಗ ಸನ್‌ಪರದಲ್ಲಿದ್ದರೆ ಯಾವ ಕಾರ್ಯ ಬರುತ್ತದೆಯೋ ಆ ಕಾರ್ಯ ಬರುತ್ತವೆ. ಅದರೆ ಣಿ ನಿಮಿತ್ತಕವಾಗಿ ಅಕ್ (ಅ ಇ ಉ ಋ ಌ) ಲೋಪ ಬಂದಿರ ಬಾರದು. ಆಗ ಮಾತ್ರ ಸನಿನ ಕಾರ್ಯ. ಲೋಪಬಂದಿದ್ದರೆ ಸನ್ ನಿಮಿತ್ತಕ ಕಾರ್ಯವಿಲ್ಲ. ಅಚಕಂ+ಅ+ತ ಎಂದಿರುವಾಗ ಚಙ್ ಅಕಾರ. ಇದು ಪರ ವಾದಾಗ ಣಿ ಎಂದರೆ ಲೋಪವಾದ ಅಭ್ಯಾಸ ಎಂದರೆ ಚ. ಇದಕ್ಕೆ ಲಘುವೆಂದರೆ ಕಕಾರೋತ್ತರಾಕಾರ. ಇದು ಪರವಾದುದರಿಂದ ಅಭ್ಯಾಸಕ್ಕೆ ಸನ್ ನಿಮಿತ್ತಕ ಕಾರ್ಯ ಬರುತ್ತದೆ. ಇಲ್ಲಿ ಣಿ ನಿಮಿತ್ತವಾಗಿ ಯಾವ ಅಗ್ಲೋಪವೂ ಬಂದಿಲ್ಲ. ಸನ್ ಪರ ವಾದಾಗ ಯಾವ ಅಭ್ಯಾಸಕಾರ್ಯವೆಂದು ಮುಂದೆ ಹೇಳುತ್ತಾನೆ.

ಸನ್ ಪರವಾದಾಗ ಅಭ್ಯಾಸಕ್ಕೆ ಇತ್ತ್ವ ಹೇಳುವ ಸೂತ್ರ

**೫೩೪. ಸನ್ಯತಃ || ೭-೪-೭೯ ||**

**ಅಭ್ಯಾಸಸ್ಯಾತ ಇತ್ ಸ್ಯಾತ್ ಸನಿ ||**

ಸನಿ, ಅತಃ | ದ್ವಿಪದ ಸೂತ್ರ. 'ಅತ್ರ ಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ', 'ಭೃಞಾಮಿತ್' ಸೂತ್ರದಿಂದ 'ಇತ್' ಪದಗಳು ಅನುವೃತ್ತವಾಗುತ್ತವೆ **ಸೂತ್ರಾರ್ಥ**—ಸನ್ ಪರದಲ್ಲಿರುವಾಗ ಅಭ್ಯಾಸದ ಅಕಾರಕ್ಕೆ ಇಕಾರಾದೇಶ ಬರುತ್ತದೆ ಅಚಕಮ್+ಅತ ಎಂದಿರುವಾಗ ಸನ್ ಪರದಲ್ಲಿರುವಾಗ ಯಾವ ಕಾರ್ಯ ಬರುತ್ತದೆಯೋ ಆ ಕಾರ್ಯ ಚಙ್ ಪರವಾದಾಗ ಬರುತ್ತದೆಯೆಂದುದರಿಂದ ಇಲ್ಲಿ ಅಭ್ಯಾಸದ ಚಕಾರದ ಅಕಾರಕ್ಕೆ ಇಕಾರ ಬರುತ್ತದೆ. ಅಚಿಕಮ್+ಅ+ತ್ ಎಂದಿರುವಾಗ ಅಭ್ಯಾಸಕ್ಕೆ ದೀರ್ಘ ಹೇಳುತ್ತಾನೆ.

ಸನ್ವದ್ಭಾವದಲ್ಲಿ ಅಭ್ಯಾಸಕ್ಕೆ ದೀರ್ಘ ಹೇಳುವ ಸೂತ್ರ

**೫೩೫. ದೀರ್ಘೋ ಲಘೋಃ || ೭-೪-೯೪ ||**

**ಲಘೋರಭ್ಯಾಸಸ್ಯ ದೀರ್ಘಃ ಸ್ಯಾತ್ ಸನ್ವದ್ಭಾವವಿಷಯೇ | ಅಚೀಕಮತ || ಣಿಙಭಾವಪಕ್ಷೇ | (ಕಮೇಶ್ಚ್ಲೇಶ್ಚಙ್ ವಾಚ್ಯಃ) | ಅಚಕಮತ | ಅಕಾಮಯಿಷ್ಯತ, ಅಕಮಿಷ್ಯತ ||**

ದೀರ್ಘಃ, ಲಘೋಃ || ದ್ವಿಪದ ಸೂತ್ರ. ಇದು 'ಸನ್ವಲ್ಲಘುನಿ—' ಸೂತ್ರದ ಮೇಲಿನ ಸೂತ್ರ. 'ಸನ್ವತ್' ಬಿಟ್ಟು ಉಳಿದ ಎಲ್ಲಾ ಪದಗಳೂ ಅನುವೃತ್ತವಾಗುತ್ತವೆ. ಅದನ್ನೇ 'ಸನ್ವದ್ಭಾವವಿಷಯೇ' ಎಂದಿರುತ್ತಾನೆ. 'ಅತ್ರ ಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ' ಅನುವೃತ್ತಿ. **ಸೂತ್ರಾರ್ಥ**—ಚಙ್‌ಪರವಾದ ಣಿ ಪರದಲ್ಲಿರುವಾಗ ಯಾವ ಅಂಗವಿದೆಯೋ ಅದರ ಅಭ್ಯಾಸದ ಲಘುವಿಗೆ ದೀರ್ಘ ಬರುತ್ತದೆ. ಅಚಿಕಮ್+ಅತ ಎಂದಿರುವಾಗ ಚಿ ಅಭ್ಯಾಸದ ಇಗೆ ದೀರ್ಘ ಬಂದರೆ ಅಚೀಕಮತ ಎಂದಾಗುತ್ತದೆ. ಅಚೀಕಮ ಅಂಗ | ಅಚೀಕಮೇತಾಂ || ಅಚೀಕಮಂತ || ಅಚೀಕಮಥಾಃ | ಅಚೀಕಮೇಥಾಂ | ಅಚೀಕಮಧ್ವಮ್ || ಅಚೀಕಮೇ | ಅಚೀಕಮಾವಹಿ | ಅಚೀಕಮಾಮಹಿ || ಣಿಙ್ ವಿಕಲ್ಪವಾದುದರಿಂದ ಬಾರದಿದ್ದರೆ ವಾರ್ತಿಕದಿಂದ ಚ್ಲಿಗೆ ಚಙ್ ಹೇಳುತ್ತಾನೆ.

**ವಾರ್ತಿಕಾರ್ಥ**—ಕಮಿನ ಪರದಲ್ಲಿರುವ ಚ್ಲಿಗೆ ಚಙ್ ಬರುತ್ತದೆಂದು ಹೇಳಬೇಕು. ಅಕಮ್+ಅ+ತ. ಇಲ್ಲಿಯೂ 'ಚಙಿ' ಸೂತ್ರದಿಂದ ದ್ವಿತ್ವಾದಿ. ಅಚಕಮ್‌ಅ+ತ. ಣಿಙ್ ನಿಮಿತ್ತಕವಾದ ಸನ್ವದ್ಭಾವವಿಲ್ಲದಿರುವುದರಿಂದ ಇತ್ವ ದೀರ್ಘವಿಲ್ಲ. ಅಚಕಮತ | ಅಚಕಮೇತಾಮ್ | ಅಚಕಮಂತ || ಅಚಕಮಥಾಃ | ಅಚಕಮೇಥಾಮ್ | ಅಚಕಮಧ್ವಮ್ || ಅಚಕಮೇ | ಅಚಕಮಾವಹಿ | ಅಚಕಮಾಮಹಿ || **ಲೃಙ್** || ಣಿಙ್ ಬಂದರೆ ಅಕಾಮಯಿಷ್ಯ ಅಂಗ. ಬಾರದಿದ್ದರೆ ಅಕಮಿಷ್ಯ ಅಂಗ. ಅಕಾಮಯಿಷ್ಯತ | ಅಕಾಮಯಿಷ್ಯೇತಾಮ್ | ಅಕಾಮಯಿಷ್ಯಂತ || ಅಕಾಮಯಿಷ್ಯಥಾಃ | ಅಕಾಮಯಿಷ್ಯೇಥಾಮ್ | ಅಕಾಮಯಿಷ್ಯಧ್ವಮ್ || ಅಕಾಮಯಿಷ್ಯೇ | ಅಕಾಮಯಿಷ್ಯಾವಹಿ | ಅಕಾಮಯಿಷ್ಯಾಮಹಿ || ಹೀಗೆಯೇ ಅಕಮಿಷ್ಯತ ತಿಳಿಯಬೇಕು.

**|| ೨೩ || ಅಯ = ಗತೌ ||** (ಹೋಗುವುದು)

**ಲಟ್** || ಅಯ್+ಅ+ತೇ. ಅಯತೇ | ಅಯೇತೇ | ಅಯಂತೇ || ಅಯಸೇ | ಅಯೇಥೇ | ಅಯಧ್ವೇ || ಅಯೇ | ಅಯಾವಹೇ | ಅಯಾಮಹೇ || ಪ್ರ, ಪರಾ ಮುಂತಾದ ರೇಫಘಟಿತ ಉಪಸರ್ಗಗಳ ಪರದಲ್ಲಿ ಅಯ ಧಾತು ಬಂದಾಗ ಆ ರೇಫಕ್ಕೆ ಲತ್ವ ಹೇಳುತ್ತಾನೆ.

ಉಪಸರ್ಗರೇಫಕ್ಕೆ ಲತ್ವ ಹೇಳುವ ಸೂತ್ರ

**೫೩೬. ಉಪಸರ್ಗಸ್ಯಾಯತೌ || ೮-೨-೧೯ ||**

**ಅಯತಿಪರಸ್ಯೋಪಸರ್ಗಸ್ಯ ಯೋ ರೇಫಸ್ತಸ್ಯ ಲತ್ವಂ ಸ್ಯಾತ್ । ಪ್ಲಾಯತೇ । ಪಲಾಯತೇ ||**

ಉಪಸರ್ಗಸ್ಯ, ಅಯತೌ || ದ್ವಿಪದ ಸೂತ್ರ. 'ಕೃಪೋ ರೋಲಃ' ಸೂತ್ರದಿಂದ ರಃ, ಲಃ ಅನುವೃತ್ತಿ. ಅಯತೌ ಎಂಬಲ್ಲಿ ಅಯ ಧಾತುವನ್ನು ಶ್ತಿಪಿನಿಂದ ನಿರ್ದೇಶಮಾಡಿರುತ್ತಾನೆ. **ಸೂತ್ರಾರ್ಥ**—ಅಯ ಧಾತುವು ಪರವಾದಾಗ ಉಪಸರ್ಗದಲ್ಲಿ ಯಾವ ರೇಫವಿದೆಯೋ ಅದಕ್ಕೆ ಲಕಾರಾದೇಶ ಬರುತ್ತದೆ. ಪ್ರ+ಅಯತೇ ಎಂದಿರುವಾಗ ಪ್ರ ಉಪಸರ್ಗದ ರೇಫಕ್ಕೆ ಲತ್ವ ಬಂದರೆ ಪ್ಲ+ಅಯತೇ. = ಸವರ್ಣದೀರ್ಘ. ಪ್ಲಾಯತೇ. ಪರಾ+ಅಯತೇ = ಪಲಾಯತೇ. **ಲಿಟ್** || ಅಯ್+ಲಿಟ್ ಎಂದಿರುವಾಗ ಅಮಿಗೆ ನಿಮಿತ್ತವಿಲ್ಲದಿರುವುದರಿಂದ ಸೂತ್ರದಿಂದ ಆಮ್ ವಿಧಿಸುತ್ತಾನೆ.

ದಯ್ ಮುಂತಾದ ಧಾತುಗಳಿಗೆ ಆಮ್ ಹೇಳುವ ಸೂತ್ರ

**೫೩೭. ದಯಾಯಾಸಶ್ಚ || ೩-೧-೩೭ ||**

**ದಯ, ಅಯ, ಆಸ್ ಏಭ್ಯ ಆಮ್ ಸ್ಯಾಲ್ಲಿಟಿ । ಅಯಾಞ್ಚಕ್ರೇ । ಅಯಿತಾ । ಅಯಿಷ್ಯತೇ । ಅಯತಾಮ್ । ಆಯತ । ಅಯೇತ ಅಯಿಷೀಷ್ಟ । ವಿಭಾಷೇಟಃ । ಅಯಿಷೀಢ್ವಮ್, ಅಯಿಷೀಧ್ವಮ್ । ಆಯಿಷ್ಟ । ಆಯಿಢ್ವಮ್, ಆಯಿಧ್ವಮ್ । ಆಯಿಷ್ಯತ ||**

ದ್ವಿಪದ ಸೂತ್ರ. 'ಕಾಸ್ಪ್ರತ್ಯಯಾದಾಮ್ —' ಸೂತ್ರದಿಂದ 'ಆಮ್', 'ಲಿಟಿ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**— ದಯ್, ಅಯ್, ಆಸ್ ಈ ಮೂರು ಧಾತುಗಳಿಗೆ ಲಿಟ್ ಪರದಲ್ಲಿರುವುದರಿಂದ ಆಮ್ ಪ್ರತ್ಯಯ ಬರುತ್ತದೆ. ಪ್ರಕೃತ ಅಯ್ ಧಾತುವಿಗೆ ಲಿಟ್ ಪರದಲ್ಲಿರುವುದರಿಂದ ಆಮ್ ಬಂದರೆ ಅಯಾಮ್ +ಲಿಟ್ ಎಂದಾಗುತ್ತದೆ. 'ಆಮಃ' ಸೂತ್ರದಿಂದ ಲಿಟಗೆ ಲುಕ್. 'ಕೃಞ್ಚಾನು-ಪ್ರಯುಜ್ಯತೇ ಲಿಟಿ' ಸೂತ್ರದಿಂದ ಆಮಂತದಮೇಲೆ ಲಿಟ್ ಪರವಾದ ಕೃಞ್, ಭೂ, ಅಸ್ ಮೂರು ಧಾತುಗಳು ಬರುತ್ತವೆ. ಅಯಾಞ್ಚಕ್ರೇ, (ಏಧಾಞ್ಚಕ್ರೇ ಅಂತೆ ರೂಪ.) ಅಯಾಮ್ಬಭೂವ. ಅಯಾಮಾಸ. ಇವೂ ಹಿಂದಿನಂತೇ ರೂಪಹೊಂದುತ್ತವೆ.

**ಲುಟ್** || ತಾಸಿಗೆ ಇಡಾಗಮ. ಅಯಿತಾ | ಅಯಿತಾರೌ । ಅಯಿತಾರಃ || ಏಧಿತಾವತ್ || **ಲೃಟ್** || ಆಯಿಷ್ಯತೇ || ಏಧಿಷ್ಯತೇವತ್ || **ಲೋಟ್** || ಏಧತಾಮ್ ಅಂತೇ ರೂಪ. ಅಯತಾಮ್ | ಅಯೇತಾಮ್ | ಅಯನ್ತಾಮ್ ||

ಅಯಸ್ವ | ಅಯೇಥಾಮ್ | ಅಯಧ್ವಮ್ || ಅಯೈ | ಅಯಾವಹೈ | ಅಯಾಮಹೈ || **ಲಙ್** || ಅಜಾದಿಯಾದುದರಿಂದ ಆಡಾಗಮ. ಆಯತ | ಆಯೇತಾಮ್ | ಆಯಂತ || ಆಯಥಾಃ | ಆಯೇಥಾಮ್ | ಆಯಧ್ವಮ್ || ಆಯೇ | ಆಯಾವಹಿ | ಆಯಾಮಹಿ || **ವಿಧಿಲಿಙ್** || ಅಯೇತ | ಅಯೇಯಾತಾಮ್ | ಅಯೇರನ್ || ಅಯೇಥಾಃ | ಅಯೇಯಾಥಾಮ್ | ಅಯೇಧ್ವಮ್ || ಅಯೇಯ | ಅಯೇವಹಿ | ಅಯೇಮಹಿ || ಏಧೇತವತ್ || **ಆಶೀರ್ಲಿಙ್** || ಅಯ್+ಇಷೀಷ್ಟ= ಅಯಿಷೀಷ್ಟ | ಅಯಿಷೀಯಾಸ್ತಾಮ್ | ಅಯಿಷೀರನ್ || ಅಯಿಷೀಷ್ಠಾಃ | ಅಯಿಷೀಯಾಸ್ಥಾಮ್ | ಅಯಿಷೀಧ್ವಮ್, ಅಯಿಷೀಢ್ವಮ್ || ಇಲ್ಲಿ ಇಣಿನ ಪರದಲ್ಲಿ (ಅಯಿನ ಯಕಾರ) ಇಟ್ ಬಂದು ಅದರ ಪರದಲ್ಲಿ ಷೀಧ್ವಮಿನ ಧಕಾರ ಬಂದುದರಿಂದ 'ವಿಭಾಷೇಟಃ' ಸೂತ್ರದಿಂದ ವಿಕಲ್ಪವಾಗಿ ಧಕಾರಕ್ಕೆ ಢತ್ವ. ಅಯಿಷೀಯ | ಅಯಿಷೀವಹಿ | ಅಯಿಷೀಮಹಿ | **ಲುಙ್** || ಆ+ಅಯ್+ಇಸ್+ತ =ಆಯಿಷ್ಟ | ಆಯಿಷಾತಾಮ್ | ಆಯಿಷತ || ಆಯಿಷ್ಠಾಃ | ಆಯಿಷಾಥಾಮ್ | ಆಯಿಢ್ವಮ್, ಆಯಿಧ್ವಮ್ || ಇಲ್ಲಿಯೂ 'ವಿಭಾಷೇಟಃ' ಸೂತ್ರದಿಂದ ವಿಕಲ್ಪ ಢತ್ವ. ಆಯಿಷಿ | ಆಯಿಷ್ವಹಿ | ಆಯಿಷ್ಮಹಿ || **ಲೃಙ್** || ಆ+ಅಯ್+ ಇಷ್ಯತ=ಆಯಿಷ್ಯತ | (ಐಧಿಷ್ಯತವತ್)

ದ್ಯುತ್ ಧಾತು. ಶಪ್ ಬಂದಾಗ 'ಪುಗಂತಲಘೂಪಧಸ್ಯ ಚ' ಸೂತ್ರದಿಂದ ಲಘೂಪಧಗುಣ. ದ್ಯೋತತೇ | ದ್ಯೋತೇತೇ | ದ್ಯೋತನ್ತೇ || ದ್ಯೋತಸೇ | ದ್ಯೋತೇಥೇ | ದ್ಯೋತಧ್ವೇ || ದ್ಯೋತೇ | ದ್ಯೋತಾವಹೇ | ದ್ಯೋತಾಮಹೇ || **ಲಿಟ್** || 'ಲಿಟಸ್ತಝಯೋರೇಶಿರೇಚ್.' ದ್ಯುತ್=ಏ. ದ್ವಿತ್ವ. ದ್ಯುತ್‌ದ್ಯುತ್ +ಏ ಎಂದಿರುವಾಗ ಅಭ್ಯಾಸಕ್ಕೆ ಸಂಪ್ರಸಾರಣ ಹೇಳುತ್ತಾನೆ.

ದ್ಯುತ್, ಸ್ವಪಿನ ಅಭ್ಯಾಸಕ್ಕೆ ಸಂಪ್ರಸಾರಣ ಹೇಳುವ ಸೂತ್ರ.

**ದ್ಯುತ=ದೀಪ್ತೌ (ಪ್ರಕಾಶಿಸುವುದು)**

**೫೩೮. ದ್ಯುತಿಸ್ವಾಪ್ಯೋಃ ಸಮ್ಪ್ರಸಾರಣಮ್ || ೭-೪-೬೭ ||**

**ಅನಯೋರಭ್ಯಾಸಸ್ಯ ಸಮ್ಪ್ರಸಾರಣಂ ಸ್ಯಾತ್ || ದಿದ್ಯುತೇ ||**

ದ್ವಿಪದ ಸೂತ್ರ. ಎರಡು ಧಾತುಗಳನ್ನು ಇಕಿನಿಂದ ನಿರ್ದೇಶಮಾಡಿರುತ್ತಾನೆ. 'ಅತ್ರ ಲೋಪೋ—'ಸೂತ್ರದಿಂದ 'ಅಭ್ಯಾಸಸ್ಯ' ಅನುವೃತ್ತಿ. **ಸೂತ್ರಾರ್ಥ—** ದ್ಯುತ್, ಸ್ವಪ್ ಧಾತುಗಳ ಅಭ್ಯಾಸಕ್ಕೆ ಸಮ್ಪ್ರಸಾರಣ ಬರುತ್ತದೆ ( ಸೂ. ೨೫೭). ಯಣಿನ ಸ್ಥಾನಕ್ಕೆ ಬರುವ ಇಕಿಗೆ ಸಮ್ಪ್ರಸಾರಣವೆಂದು ಹಿಂದೆ ಹೇಳಿದೆ. ಪ್ರಕೃತ ಪೂರ್ವಖಂಡ, ದ್ಯುತಿ ನ ಅಭ್ಯಾಸ. ಅದರಲ್ಲಿ ಯಣ್ ಯಕಾರ. ಅದಕ್ಕೆ ಸಂಪ್ರಸಾರಣ

ಇಕಾರ ಬಂದರೆ ನಿಉತ್‌ದ್ಯುತ್+ಏ ಎಂದಾಗುತ್ತದೆ. 'ಸಮ್ಪ್ರಸಾರಣಾಚ್ಚ' ಸೂತ್ರ. ದಿಂದ ಪೂರ್ವರೂಪ, ದಿತ್‌ದ್ಯುತ್+ಏ. 'ಹಲಾದಿಃ ಶೇಷಃ.' ದಿದ್ಯುತ್+ಏ. ಆತ್ಮನೇಪದ ಲಿಟ್ ಪ್ರತ್ಯಯ ಕಿತ್ತಾದುದರಿಂದ ಗುಣವಿಲ್ಲ. ದಿದ್ಯುತೇ | ದಿದ್ಯುತಾತೇ | ದಿದ್ಯುತಿರೇ || ದಿದ್ಯುತಿಷೇ | ದಿದ್ಯುತಾಥೇ | ದಿದ್ಯುತಿಧ್ವೇ || ದಿದ್ಯುತೇ | ದಿದ್ಯುತಿವಹೇ | ದಿದ್ಯುತಿಮಹೇ ||

**ಲುಟ್** || ದ್ಯೋತಿತಾ | **ಲೃಟ್** || ದ್ಯೋತಿಷ್ಯತೇ | **ಲೋಟ್** || ದ್ಯೋತತಾಮ್ | **ಲಙ್** || ಅದ್ಯೋತತ | **ವಿಧಿಲಿಙ್** || ದ್ಯೋತೇತ | **ಆಶೀರ್ಲಿಙ್** || ದ್ಯೋತಿಷೀಷ್ಟ | **ಲುಙ್** || ಅದ್ಯೋತಿಷ್ಟ || ಇಲ್ಲಿ ವಿಕಲ್ಪವಾಗಿ ಪರಸ್ಮೈಪದ ಹೇಳುತ್ತಾನೆ.

ದ್ಯುತಾದಿಗಳಿಗೆ ಪರಸ್ಮೈಪದ ಹೇಳುವ ಸೂತ್ರ.

**೫೩೯. ದ್ಯುದ್ಭ್ಯೋ ಲುಙಿ || ೧-೩-೯೧ ||**

**ದ್ಯುತಾದಿಭ್ಯೋ ಲುಙಃ ಪರಸ್ಮೈಪದಂ ವಾ ಸ್ಯಾತ್ || ಪುಷಾದೀತ್ಯಙ್ | ಅದ್ಯುತತ್ || ಅದ್ಯೋತಿಷ್ಟ ||**

ದ್ವಿಪದ ಸೂತ್ರ. 'ಶೇಷಾತ್ ಕರ್ತರಿ ಪರಸ್ಮೈಪದಮ್' ಸೂತ್ರದಿಂದ 'ಪರಸ್ಮೈಪದಮ್' ಅನುವೃತ್ತಿ. ದ್ಯುದ್ಭ್ಯಃ ಎಂದು ಬಹುವಚನ ಹೇಳಿದುದರಿಂದ ದ್ಯುತಾದಿ ಎಂದರ್ಥ ಲಬ್ಧವಾಗುತ್ತದೆ. ಇದು ಪಂಚಮಿಯಾದುದರಿಂದ ಲುಙಿ ಎಂಬುದನ್ನು ಷಷ್ಠ್ಯಂತವಾಗಿ ಪರಿಣಾಮ ಮಾಡಿಕೊಳ್ಳಬೇಕು. **ಸೂತ್ರಾರ್ಥ** – ದ್ಯುತಾದಿಗಳ ಪರದಲ್ಲಿರುವ ಲುಙಿಗೆ ಪರಸ್ಮೈಪದವು ವಿಕಲ್ಪವಾಗಿ ಬರುತ್ತದೆ. ಅದ್ಯುತ್+ತ್ ಎಂದಿರುವಾಗ ಚ್ಲಿಗೆ 'ಪುಷಾದಿದ್ಯುತಾದಿ—' ಸೂತ್ರದಿಂದ ಅಙ್ ಬರುತ್ತದೆ. ಅಙ್ ಙಿತ್ತಾದುದರಿಂದ ದ್ಯುತಿಗೆ ಗುಣ ಬರುವುದಿಲ್ಲ. ಅದ್ಯುತತ್—ಅದ್ಯುತ ಅಂಗ. (ಅಭವತ್ ಅಂತೆ ರೂಪ.) ಪರಸ್ಮೈಪದ ಬಾರದಿದ್ದರೆ ಚ್ಲಿಗೆ ಸಿಚ್ ಹೇಳಬೇಕು. ಅಙ್ ಪರಸ್ಮೈಪದದಲ್ಲಿ ಮಾತ್ರ ಹೇಳಿದೆ. ಸಿಚಿಗೆ ಇಡಾಗಮ. ಅದನ್ನು ನಿಮಿತ್ತೀಕರಿಸಿ ಲಘೂಪಧಗುಣ. ಅದ್ಯೋತಿಷ್ಟ | ಅದ್ಯೋತಿಷಾತಾಮ್ | ಅದ್ಯೋತಿಷತ || ಅದ್ಯೋತಿಷ್ಠಾಃ | ಅದ್ಯೋತಿಷಾಥಾಮ್ | ಅದ್ಯೋತಿಧ್ವಮ್ || ಅದ್ಯೋತಿಷಿ | ಅದ್ಯೋತಿಷ್ವಹಿ | ಅದ್ಯೋತಿಷ್ಮಹಿ || **ಲೃಙ್** || ಅದ್ಯೋತಿಷ್ಯತ || (ಏಧಿಷ್ಯತವತ್)

|| ೨೩ || **ಏವಂ ಶ್ವಿತಾ=ವರ್ಣೇ** || ೨೬ || **ಞಿಮಿದಾ=ಸ್ನೇಹನೇ** || ೨೭ || **ಞಿಷ್ವಿದಾ=ಸ್ನೇಹನಮೋಚನಯೋಃ | ಮೋಹನಯೋರಿತ್ಯೇಕೇ | ಞಿಕ್ಷ್ವಿದಾ ಚೇತ್ಯೇಕೇ** || ೨೮ || **ರುಚ= ದೀಪ್ತಾವಭಿಪ್ರೀತೌ ಚ** || ೨೯ || **ಘುಟ=ಪರಿವರ್ತನೇ** || ೩೦ || **ಶುಭ=ದೀಪ್ತೌ** || ೩೧ || **ಕ್ಷುಭ=ಸಂಚಲನೇ** || ೩೨-೩೩ || **ಣಭ, ತುಭ ಹಿಂಸಾಯಾಮ್** || ೩೪-೩೫

**–೩೭ || ಸ್ರಂಸು, ಭ್ರಂಸು, ಧ್ವಂಸು–ಅವಸ್ರಂಸನೇ | ಧ್ವಂಸು–ಗತೌ ಚ ||೩೭|| ಸ್ರಂಭು–ವಿಶ್ವಾಸೇ ||೩೮|| ವೃತು–ವರ್ತನೇ | ವರ್ತತೇ | ವವೃತೇ | ವರ್ತಿತಾ ||**

ರೂಪವಿಶೇಷವಿಲ್ಲವಾದುದರಿಂದ ಕೆಲವು ಧಾತುಗಳನ್ನು ಒಟ್ಟಿಗೆ ಹೇಳಿರುತ್ತಾನೆ. ಶ್ವಿತಾ ಧಾತು. (ಬಣ್ಣ ಹಾಕುವುದು ಅರ್ಥ.) ಆಕಾರ ಇತ್. ಶ್ವೇತತೇ | ಶಿಶ್ವಿತೇ | ಶ್ವೇತಿತಾ | ಶ್ವೇತಿಷ್ಯತೇ | ಶ್ವೇತತಾಮ್ | ಅಶ್ವೇತತ | ಶ್ವೇತೇತ | ಶ್ವೇತಿಷೀಷ್ಟ | ಅಶ್ವೇತಿಷ್ಟ | ಅಶ್ವೇತಿಷ್ಯತ || ಞಿಮಿದಾ ಧಾತು. ಞಿ ಇತ್. ಆಕಾರ ಇತ್. (ಸ್ನಿಗ್ಧವಾಗಿ ಮಾಡುವುದು ಅರ್ಥ.) ಮೇದತೇ | ಮಿಮಿದೇ | ಮೇದಿತಾ | ಮೇದಿಷ್ಯತೇ | ಮೇದತಾಮ್ | ಅಮೇದತ | ಮೇದೇತ | ಮೇದಿಷೀಷ್ಟ | ಅಮೇದಿಷ್ಟ | ಅಮೇದಿಷ್ಯತ || ಞಿಷ್ವಿದಾ ಧಾತು. ಇಲ್ಲಿಯೂ ಞಿ ಆ ಇತ್. (ಸ್ನಿಗ್ಧವಾಗಿ ಮಾಡುವುದು ಬಿಡುವುದು ಅರ್ಥ.) ಕೆಲವರು ಮೋಹನ ಅಂದರೆ ವ್ಯಾಕುಲಗೊಳಿಸುವುದು ಅರ್ಥವೆನ್ನುತ್ತಾರೆ. 'ಧಾತ್ವಾದೇಃ ಷಃ ಸಃ' ಸೂತ್ರದಿಂದ ಆದಿಯ ಷಕಾರಕ್ಕೆ ಸತ್ವ. ಸ್ವೇದತೇ | ಸಿಷ್ವಿದೇ | ಸ್ವೇದಿತಾ | ಸ್ವೇದಿಷ್ಯತೇ | ಸ್ವೇದತಾಮ್ | ಅಸ್ವೇದತ | ಸ್ವೇದೇತ | ಸ್ವೇದಿಷೀಷ್ಟ | ಅಸ್ವೇದಿಷ್ಟ | ಅಸ್ವೇದಿಷ್ಯತ || ಇದನ್ನೇ ಕೆಲವರು ಞಿಕ್ಷ್ವಿದಾ ಎಂದು ಪಾಠಮಾಡುತ್ತಾರೆ. ಆಗ ಕ್ಷ್ವೇದತೇ ಇತ್ಯಾದಿ ರೂಪವಾಗುತ್ತದೆ. ರುಚ ಧಾತು. ಅಕಾರ ಇತ್. (ಪ್ರಕಾಶಿಸು, ಇಚ್ಛಿಸುವುದು ಅರ್ಥ.) ರೋಚತೇ | ರುರುಚೇ | ರೋಚಿತಾ | ರೋಚಿಷ್ಯತೇ | ರೋಚತಾಮ್ | ಅರೋಚತ | ರೋಚೇತ | ರೋಚಿಷೀಷ್ಟ | ಅರೋಚಿಷ್ಟ | ಅರೋಚಿಷ್ಯತ || ಘುಟ ಧಾತು. (ತಿರುಗಿಸುವುದು ಅರ್ಥ.) ಘೋಟತೇ | ಜುಘುಟೇ | ಘೋಟಿತಾ | ಘೋಟಿಷ್ಯತೇ | ಘೋಟತಾಮ್ | ಅಘೋಟತ | ಘೋಟೇತ | ಘೋಟಿಷೀಷ್ಟ | ಅಘೋಟಿಷ್ಟ | ಅಘೋಟಿಷ್ಯತ || ಶುಭ ಧಾತು. (ಪ್ರಕಾಶಿಸುವುದು ಅರ್ಥ.) ಶೋಭತೇ | ಶುಶುಭೇ | ಶೋಭಿತಾ | ಶೋಭಿಷ್ಯತೇ | ಶೋಭತಾಮ್ | ಅಶೋಭತ | ಶೋಭೇತ | ಶೋಭಿಷೀಷ್ಟ | ಅಶೋಭಿಷ್ಟ | ಅಶೋಭಿಷ್ಯತ || ಕ್ಷುಭ ಧಾತು. (ಸ್ವಭಾವ ಬಿಟ್ಟಿರುವಿಕೆ, ಚಂಚಲವಾಗುವುದು ಅರ್ಥ.) ಕ್ಷೋಭತೇ | ಚುಕ್ಷುಭೇ | ಕ್ಷೋಭಿತಾ | ಕ್ಷೋಭಿಷ್ಯತೇ | ಅಕ್ಷೋಭಿಷ್ಯತ | ಕ್ಷೋಭೇತ | ಕ್ಷೋಭಿಷೀಷ್ಟ | ಅಕ್ಷೋಭಿಷ್ಟ | ಕ್ಷೋಭಿಷ್ಯತ || ಣಭ, ತುಭ ಧಾತುಗಳಿಗೆ ಹಿಂಸಾರ್ಥ. 'ಣೋನಃ' ಸೂತ್ರದಿಂದ ಆದಿ ಣಕಾರಕ್ಕೆ ನಕಾರಾದೇಶ. ನಭತೇ | ನನಭೇ | ನಭಿತಾ | ನಭಿಷ್ಯತೇ | ನಭತಾಮ್ | ಅನಭತ | ನಭೇತ | ನಭಿಷೀಷ್ಟ | ಅನಭಿಷ್ಟ | ಅನಭಿಷ್ಯತ || ತೋಭತೇ | ತುತುಭೇ | ತೋಭಿತಾ | ತೋಭಿಷ್ಯತೇ | ತೋಭತಾಮ್ | ಅತೋಭತ | ತೋಭೇತ | ತೋಭಿಷೀಷ್ಟ | ಅತೋಭಿಷ್ಟ | ಅತೋಭಿಷ್ಯತ || ಸ್ರಂಸು, ಭ್ರಂಸು, ಧ್ವಂಸು ಮೂರು ಧಾತುಗಳಿಗೂ ಜಾರುವುದು=ಸ್ಖಲನ ಅರ್ಥ. ಧ್ವಂಸು ಧಾತುವಿಗೆ ಗಮನಾರ್ಥವೂ

ಇದೆ. ಸ್ರಂಸತೇ | ಸಸ್ರಂಸೇ | ಸ್ರಂಸಿತಾ | ಸ್ರಂಸಿಷ್ಯತೇ | ಸ್ರಂಸತಾಮ್ | ಅಸ್ರಂಸತ | ಸ್ರಂಸೇತ | ಸ್ರಂಸಿಷೀಷ್ಟ | ಅಸ್ರಂಸಿಷ್ಟ | ಅಸ್ರಂಸಿಷ್ಯತ || ಇದರಂತೇ ಇನ್ನೆರಡು ಧಾತುಗಳ ರೂಪವನ್ನು ಊಹಿಸಿಕೊಳ್ಳಬೇಕು. ಸ್ರಂಭು ಧಾತು. (ವಿಶ್ವಾಸಹೊಂದುವುದು ಅರ್ಥ.) ಸ್ರಂಭತೇ | ಸಸ್ರಮ್ಭೇ | ಸ್ರಮ್ಭಿತಾ | ಸ್ರಮ್ಭಿಷ್ಯತಿ | ಸ್ರಮ್ಭತಾಮ್ | ಅಸ್ರಮ್ಭತ | ಸ್ರಮ್ಭೇತ | ಸ್ರಮ್ಭಿಷೀಷ್ಟ | ಅಸ್ರಮ್ಭಿಷ್ಟ | ಅಸ್ರಮ್ಭಿಷ್ಯತ || ವೃತು ಧಾತು. (ಇರುವುದು ಅರ್ಥ.) ಇದರಲ್ಲಿ ವಿಶೇಷಪ್ರಕ್ರಿಯೆ ಮುಂದೆ ಹೇಳುತ್ತಾನೆ. ಲಟಿನಲ್ಲಿ 'ಪುಗಂತ—' ಸೂತ್ರದಿಂದ ಲಘೂಪಧಗುಣ. ವರ್ತತೇ | ವರ್ತ ಅಂಗ.

**ಲಿಟ್** || ವವೃತೇ ವವೃತಾತೇ | ವವೃತಿರೇ || ವವೃತಿಷೇ | ವವೃತಾಥೇ | ವವೃತಿಧ್ವೇ || ವವೃತೇ | ವವೃತಿವಹೇ | ವವೃತಿಮಹೇ || **ಲುಟ್** || ವರ್ತಿತಾ | ವರ್ತಿತಾರೌ | ವರ್ತಿತಾರಃ || ಇತ್ಯಾದಿ. **ಲೃಟ್** || ಸ್ವಾಭಾವಿಕವಾಗಿ ಆತ್ಮನೇಪದ ಪ್ರಾಪ್ತವಾದರೆ ಇಲ್ಲಿ ಮಾತ್ರ ಪರಸ್ಮೈಪದ ಹೇಳುತ್ತಾನೆ.

ವೃತಾದಿಗಳಿಗೆ ಪರಸ್ಮೈಪದ ಹೇಳುವ ಸೂತ್ರ.

**೫೪೦. ವೃದ್ಭ್ಯಃ ಸ್ಯಸನೋಃ || ೧-೩-೯೨ ||**

**ವೃತಾದಿಭ್ಯಃ ಪಞ್ಚಭ್ಯೋ ವಾ ಪರಸ್ಮೈಪದಂ ಸ್ಯಾತ್ ಸ್ಯೇ ಸನಿ ಚ ||**

ದ್ವಿಪದ ಸೂತ್ರ. ಸ್ಯ, ಸನ್ ಎರಡು ಪ್ರತ್ಯಯಗಳು. 'ವೃದ್ಭ್ಯಃ' ಎಂದು ಬಹುವಚನಾಂತ ನಿರ್ದೇಶಮಾಡಿರುವುದರಿಂದ ವೃತ್ ಮುಂತಾದವುಗಳು ಎಂದರ್ಥವಾಗುತ್ತದೆ. 'ಶೇಷಾತ್ ಕರ್ತರಿ ಪರಸ್ಮೈಪದಮ್' ಸೂತ್ರದಿಂದ 'ಪರಸ್ಮೈಪದಮ್', 'ವಾಕ್ಯಷಃ' ಸೂತ್ರದಿಂದ 'ವಾ' ಪದವು ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ವೃತ್ ಮುಂತಾದ ಐದು ಧಾತುಗಳಿಗೆ ಸ್ಯ, ಸನ್ ಪ್ರತ್ಯಯ ಪರದಲ್ಲಿರುವಾಗ ಪರಸ್ಮೈಪದ ಪ್ರತ್ಯಯಗಳು ಬರುತ್ತವೆ. ಪ್ರಕೃತ ವೃತ್ ಧಾತುವಿಗೆ ಸ್ಯ ಮಾಡಿರುವುದರಿಂದ ಪರಸ್ಮೈಪದ ಪ್ರತ್ಯಯ ಬಂದರೆ ವೃತ್+ಸ್ಯ+ತಿ ಎಂದಾಗುತ್ತದೆ. ಸ್ಯ ಪ್ರತ್ಯಯಕ್ಕೆ ಇಡಾಗಮ ಪ್ರಾಪ್ತವಾದರೆ ಪರಸ್ಮೈಪದದಲ್ಲಿ ನಿಷೇಧ ಹೇಳುತ್ತಾನೆ.

ವೃತಾದಿಗಳಲ್ಲಿ ಇಣ್ನಿಷೇಧ ಹೇಳುವ ಸೂತ್ರ

**೫೪೧. ನ ವೃದ್ಭ್ಯಶ್ಚತುರ್ಭ್ಯಃ || ೭-೨-೫೯ ||**

**ವೃತುವೃಧುಶೃಧುಸ್ಯನ್ದೂಭ್ಯಃ ಸಕಾರಾದೇರಾರ್ಧಧಾತುಕಸ್ಯೇಣ್ ನ ಸ್ಯಾತ್, ತಙಾನಯೋರಭಾವೇ | ವರ್ತ್ಸ್ಯತಿ, ವರ್ತಿಷ್ಯತೇ | ವರ್ತತಾಮ್ | ಅವರ್ತತ | ವರ್ತೇತ | ವರ್ತಿಷೀಷ್ಟ | ಅವರ್ತಿಷ್ಟ | ಅವರ್ತ್ಸ್ಯತ್, ಅವರ್ತಿಷ್ಯತ ||**

ನ, ವೃದ್ಭ್ಯಃ, ಚತುರ್ಭ್ಯಃ || ತ್ರಿಪದ ಸೂತ್ರ. 'ಆರ್ಧಧಾತುಕಸ್ಯೇಟ್—' ಸೂತ್ರದಿಂದ 'ಆರ್ಧಧಾತುಕಸ್ಯ', 'ಇಟ್', 'ಸೇऽಸಿಚಿ—' ಸೂತ್ರದಿಂದ 'ಸೇ' ಎಂಬ ಪದಗಳು ಅನುವೃತ್ತವಾಗುತ್ತವೆ. 'ಸೇ' ಸಪ್ತಮ್ಯಂತವರ್ಣವು 'ಆರ್ಧ ಧಾತುಕಸ್ಯ' ಎಂಬುದಕ್ಕೆ ವಿಶೇಷಣವಾದುದರಿಂದ ತದಾದಿಲಾಭ. ಸಕಾರಾದಿಯಾದ ಆರ್ಧಧಾತುಕಕ್ಕೆ ಎಂದರ್ಥ. 'ಗಮೇರಿಟ್ ಪರಸ್ಮೈಪದೇಷು' ಸೂತ್ರದಿಂದ 'ಪರಸ್ಮೈಪದೇಷು' ಅನುವೃತ್ತವಾಗಿ ಅದು ತಙ್, ಆನ ಪರದಲ್ಲಿ ಇರಬಾರದು ಎಂಬರ್ಥವನ್ನು ತಿಳಿಸಿಕೊಡುತ್ತದೆ. ಆತ್ಮನೇಪದ ಪರದಲ್ಲಿರಬಾರದು ಎಂದು ತಾತ್ಪರ್ಯ. **ಸೂತ್ರಾರ್ಥ**— ವೃತು, ವೃಧು, ಶೃಧು, ಸ್ಯನ್ದು ಈ ನಾಲ್ಕು ಧಾತುಗಳ ಪರದಲ್ಲಿರುವ ಸಕಾರಾದಿ ಆರ್ಧಧಾತುಕ ಪ್ರತ್ಯಯಕ್ಕೆ ತಙ್ (ಆತ್ಮನೇಪದ ಆನ ಪ್ರತ್ಯಯಗಳು ಪರದಲ್ಲಿಲ್ಲದಿರುವಾಗ ಇಡಾಗಮ ಬರುವುದಿಲ್ಲ. ಪ್ರಕೃತ ವೃತ್ ಧಾತುವಿನ ಪರದಲ್ಲಿ ಸಕಾರಾದಿ ಆರ್ಧಧಾತುಕವೆಂದರೆ ಸ್ಯ ಪ್ರತ್ಯಯ, ಇದಕ್ಕೆ ತಙ್ ಆಗಲೀ ಆನವಾಗಲೀ ಪರದಲ್ಲಿಲ್ಲ. ಪರಸ್ಮೈಪದ ಪರದಲ್ಲಿದೆ. ಆದುದರಿಂದ ಇಡಾ ಗಮ ಬರುವುದಿಲ್ಲ. 'ಪುಗಂತಲಘೂಪಧಸ್ಯ ಚ' ಸೂತ್ರದಿಂದ ವೃತಿನ ಋಕಾರಕ್ಕೆ ಗುಣ. ವರ್ತ್+ಸ್ಯ+ತಿ=ವರ್ತ್ಸ್ಯತಿ. ವರ್ತ್ಸ್ಯ ಅಂಗ. ಭವತಿವತ್. ಪರಸ್ಮೈಪದ ವಿಕಲ್ಪವಾದುದರಿಂದ ಅದು ಬಾರದಿದ್ದರೆ ಹಿಂದಿನಂತೆ ಆತ್ಮನೇಪದ ಪ್ರತ್ಯಯ. ಇದು ಪರದಲ್ಲಿರುವಾಗ ಸ್ಯ ಪ್ರತ್ಯಯಕ್ಕೆ ಇಡಾಗಮನಿಷೇಧ ಇಲ್ಲ. ಲಘೂಪಧಗುಣ. ವರ್ತಿಷ್ಯತೇ. ವರ್ತಿಷ್ಯ ಅಂಗ. ಏಧಿಷ್ಯತೇ ಎಂಬಂತೆ ರೂಪ.

**ಲೋಟ್** || ವರ್ತ ಅಂಗ. ವರ್ತತಾಮ್ | ವರ್ತೇತಾಮ್ | ವರ್ತನ್ತಾಮ್ || ಇತ್ಯಾದಿ. **ಲಙ್** || ಅವರ್ತ ಅಂಗ. ಅವರ್ತತ | ಐಧತವತ್ || **ವಿಧಿಲಿಙ್** | ವರ್ತ ಅಂಗ. ಲಿಙ್ ಸೀಯುಟ್. ಸಾರ್ವಧಾತುಕವಾದುದರಿಂದ ಸಲೋಪ. ಗುಣ. ವರ್ತೇತ | ವರ್ತೇಯಾತಾಮ್ | ವರ್ತೇರನ್ || ಇತ್ಯಾದಿ. **ಆಶೀರ್ಲಿಙ್** || ಲಿಙ್‌ಗೆ ಸೀಯುಟ್. ತ, ಥ ಗಳಿಗೆ ಸುಟ್. ಇಡಾಗಮ. ಷತ್ವ, ಷ್ಟುತ್ವ. ವರ್ತಿಷೀಷ್ಟ | ವರ್ತಿಷೀಯಾಸ್ತಾಮ್ | ವರ್ತಿಷೀರನ್ || ವರ್ತಿಷೀಷ್ಠಾಃ | ವರ್ತಿ ಷೀಯಾಸ್ಥಾಮ್ | ವರ್ತಿಷೀಧ್ವಮ್ || ವರ್ತಿಷೀಯ | ವರ್ತಿಷೀವಹಿ | ವರ್ತಿಷೀ ಮಹಿ || **ಲುಙ್** || ಅವೃತ್+ಸ್+ತ. ಇಡಾಗಮ. ಲಘೂಪಧಗುಣ. ಷತ್ವ ಷ್ಟುತ್ವ. ಅವರ್ತಿಷ್ಟ | ಅವರ್ತಿಷಾತಾಮ್ | ಅವರ್ತಿಷತ || ಅವರ್ತಿಷ್ಠಾಃ | ಅವರ್ತಿಷಾಥಾಮ್ | ಅವರ್ತಿಢ್ವಮ್ ಅವರ್ತಿಷಿ | ಅವರ್ತಿಷ್ವಹಿ | ಅವರ್ತಿಷ್ಮಹಿ || **ಲೃಙ್** || ಇಲ್ಲಿಯೂ ಸ್ಯವಿಕರಣವಾದುದರಿಂದ ಪರಸ್ಮೈಪದ ವಿಕಲ್ಪವಾಗಿ ಬಂದರೆ ಇಡಾಗಮ ಬರುವುದಿಲ್ಲ. ಅವರ್ತ್ಸ್ಯತ್. ಆತ್ಮನೇಪದ ಬಂದಾಗ ಇಡಾಗಮ, ಷತ್ವ. ಅವರ್ತಿಷ್ಯತ ಎಂದಾಗುತ್ತದೆ.

## ॥ ೩೯ ॥ ದದ—ದಾನೇ [ದಾನವಮಾಡುವುದು.]

**ದದತೇ ॥**

**ಲಟ್** ॥ ದದ್ + ಅ + ತೇ—ದದತೇ | ದದೇತೇ | ದದನ್ತೇ ॥ ಇತ್ಯಾದಿ. **ಲಿಟ್** ॥ ದದ್ + ದದ್ + ಏ ಎಂದಿರುವಾಗ ಕಿತ್ತಾದ ಲಿಟ್ ಪರದಲ್ಲಿರುವುದರಿಂದ 'ಅತ ಏಕಹಲ್ಮಧ್ಯೇ—' ಸೂತ್ರದಿಂದ ಏತ್ವಾಭ್ಯಾಸಲೋಪಗಳು ಪ್ರಾಪ್ತವಾದರೆ ಇಲ್ಲಿ ನಿಷೇಧ ಹೇಳುತ್ತಾನೆ.

ಶಸಾದಿಗಳಿಗೆ ಏತ್ವಾಭ್ಯಾಸ ಲೋಪ ನಿಷೇಧ ಹೇಳುವ ಸೂತ್ರ.

**೫೪೨. ನ ಶಸದದವಾದಿಗುಣಾನಾಮ್ ॥ ೬-೪-೧೨೬ ॥**

**ಶಸೇರ್ದದೇರ್ವಕಾರಾದೀನಾಂ ಗುಣಶಬ್ದೇನ ವಿಹಿತೋ ಯೋಽಕಾರಸ್ತಸ್ಯ ಏತ್ವಾಭ್ಯಾಸಲೋಪೌ ನ ॥ ದದದೇ–ದದದಾತೇ–ದದದಿರೇ ॥ ದದಿತಾ । ದದಿಷ್ಯತೇ । ದದತಾಮ್ । ಅದದತ । ದದೇತ । ದದಿಷೀಷ್ಟ ಅದದಿಷ್ಟ । ಅದದಿಷ್ಯತ ॥**

ದ್ವಿಪದ ಸೂತ್ರ. ಶಸಶ್ಚ, ದದಶ್ಚ, ವಾದಿಶ್ಚ, ಶಸದದವಾದಿಗುಣಾಃ | ತೇಷಾಮ್ | 'ಅತ ಏಕಹಲ್—' ಸೂತ್ರದಿಂದ 'ಅತಃ' 'ಫಣ್ವಸೋರೇದ್ಧಾವ—' ಸೂತ್ರದಿಂದ, 'ಏತ್', 'ಅಭ್ಯಾಸಲೋಪಃ' ಪದಗಳು ಅನುವೃತ್ತವಾಗುತ್ತವೆ. ಗುಣವೆಂದರೆ ಅ, ಏ, ಓ. ಇವು ಉಳ್ಳವುಗಳೆಂದು ಅರ್ಥಮಾಡಿದರೆ ಶಸಾದಿಗಳನ್ನು ಪುನಃ ಹೇಳಬೇಕಾಗಿಲ್ಲ. ಅಲ್ಲಿಯೂ ಅಕಾರರೂಪಗುಣವಿದೆ. ಆದುದರಿಂದ ಗುಣ ಎಂದು ಹೇಳಿ ಎಲ್ಲಿ ಗುಣವಿಹಿತವಾಗಿದೆಯೋ ಅದನ್ನು ತೆಗೆದುಕೊಳ್ಳಬೇಕು. **ಸೂತ್ರಾರ್ಥ**—ಶಸ, ದದ ಧಾತುಗಳಿಗೂ ವಕಾರಾದಿಧಾತುಗಳಿಗೂ ಗುಣವೆಂದು ಹೇಳಿ ಎಲ್ಲಿ ಗುಣಬಂದಿದೆಯೋ ಆ ಧಾತುಗಳ ಅಕಾರಕ್ಕೆ ಏತ್ವವೂ ಅಭ್ಯಾಸಲೋಪವೂ ಬರುವುದಿಲ್ಲ. ಪಪರತುಃ ॥ ಇಲ್ಲಿ 'ಅರ್ತಿಪಿಪರ್ತ್ಯೋಶ್ಚ' ಸೂತ್ರದಿಂದ ಗುಣ ಬಂದು ಅರ್ ಆಗಿದೆ. ಈ ಅಕಾರಕ್ಕೆ ಏತ್ವವಿಲ್ಲ. ಪ್ರಕೃತ ದದ ಧಾತು ಸೇರಿರುವುದರಿಂದ ಇದರ ಅಕಾರಕ್ಕೆ ಏತ್ವವಾಗಲೀ ಅಭ್ಯಾಸಲೋಪವಾಗಲೀ ಬರುವುದಿಲ್ಲ. 'ಹಲಾದಿಃ ಶೇಷಃ'. ಅಭ್ಯಾಸಹಲ್ಲೋಪ. ದದದೇ. ದದದ್ ಅಂಗ, ದದದಾತೇ | ದದದಿರೇ ॥ ದದದಿಷೇ | ದದದಾಥೇ | ದದದಿಧ್ವೇ ॥ ದದದೇ | ದದದಿವಹೇ | ದದದಿಮಹೇ ॥

**ಲುಟ್** ॥ ದದಿತಾ (ಏಧಿತಾವತ್). **ಲೃಟ್** ॥ ದದಿಷ್ಯತೇ (ಏಧಿಷ್ಯತೇವತ್) **ಲೋಟ್** ॥ ದದತಾಮ್ (ಏಧತಾಮ್ ಎಂಬಂತೆ ರೂಪ). **ಲಙ್** ॥ ಅದದತ (ಐಧತವತ್). **ವಿಧಿಲಿಙ್** ॥ ದದೇತ [ಏಧೇತವತ್]. **ಆಶೀರ್ಲಿಙ್** ॥ ದದಿಷೀಷ್ಟ

(ಏಧಿಷೀಷ್ಟವತ್). **ಲುಙ್** || ಅದದಿಷ್ಟ (ಐಧಿಷ್ಟವತ್). **ಲೃಙ್** || ಅದದಿಷ್ಯತ (ಐಧಿಷ್ಯತವತ್).

**|| ೪೦ || ತ್ರಪೂಷ್—ಲಜ್ಜಾಯಾಮ್ (ನಾಚಿಕೆಪಡುವುದು.)**

**ತ್ರಪತೇ ||**

ಊಕಾರ, ಷಕಾರ ಇತ್. ತ್ರಪ್ ಉಳಿಯುತ್ತದೆ. **ಲಟ್** ||ತ್ರಪ್+ಅ+ತೇ =ತ್ರಪತೇ | ತ್ರಪೇತೇ | ತ್ರಪನ್ತೇ || ಇತ್ಯಾದಿ. **ಲಿಟ್** || ತ್ರಪ್‌ತ್ರಪ್+ಏ. 'ಹಲಾದಿಃ ಶೇಷಃ.' ತತ್ರಪ್+ಏ ಎಂದಿರುವಾಗ ತ್ರಪಿನ ಅಕಾರವು ಸಂಯುಕ್ತಹಲ್ ಮಧ್ಯದಲ್ಲಿರುವುದರಿಂದ ಏತ್ವಾಭ್ಯಾಸಲೋಪವು ಬಾರದಿರುವಾಗ ಇಲ್ಲಿ ವಿಶೇಷವಾಗಿ ಏತ್ವಾಭ್ಯಾಸಲೋಪ ಹೇಳುತ್ತಾನೆ.

ತ್ರಪಾದಿಗಳಿಗೆ ಏತ್ವಾಭ್ಯಾಸಲೋಪ ಹೇಳುವ ಸೂತ್ರ.

**೫೪೩. ತೄಫಲಭಜತ್ರಪಶ್ಚ || ೬-೪-೧೨೨ ||**

**ಏಷಾಮತ ಏತ್ವಮಭ್ಯಾಸಲೋಪಶ್ಚ ಸ್ಯಾತ್ ಕಿತಿ ಲಿಟಿ ಥಲಿ ಚ | ತ್ರೇಪೇ | ತ್ರಪಿತಾ, ತ್ರಪ್ತಾ | ತ್ರಪಿಷ್ಯತೇ, ತ್ರಪ್ಸ್ಯತೇ | ತ್ರಪತಾಮ್ | ಅತ್ರಪತ | ತ್ರಪೇತ | ತ್ರಪಿಷೀಷ್ಟ, ತ್ರಪ್ಸೀಷ್ಟ | ಅತ್ರಪಿಷ್ಟ, ಅತ್ರಪ್ತ | ಅತ್ರಪಿಷ್ಯತ, ಅತ್ರಪ್ಸ್ಯತ ||**

ತೄಫಲಭಜತ್ರಪಃ, ಚ | ದ್ವಿಪದ ಸೂತ್ರ. 'ಅತಏಕಹಲ್—' ಸೂತ್ರದಿಂದ 'ಅತಃ', 'ಲಿಟಿ', 'ಘ್ವಸೋರೇದ್ಧಾ—' ಸೂತ್ರದಿಂದ 'ಏತ್', 'ಅಭ್ಯಾಸಲೋಪಃ', 'ಗಮಹನ—' ಸೂತ್ರದಿಂದ 'ಕಿತಿ' ಪದಗಳು ಅನುವೃತ್ತವಾಗುತ್ತವೆ. 'ಥಲಿ ಚ ಸೇಟಿ' ಸೂತ್ರವೇ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ತೄ, ಫಲ, ಭಜ, ತ್ರಪ್ ಧಾತುಗಳ ಅಕಾರಕ್ಕೆ ಏತ್ವವೂ ಅಭ್ಯಾಸಲೋಪವೂ ಕಿತ್ತಾದ ಲಿಟ್ ಪರದಲ್ಲಿರುವಾಗಲೂ, ಇಟ್ ಸಹಿತವಾದ ಥಲ್ ಪರದಲ್ಲಿರುವಾಗಲೂ ಬರುತ್ತವೆ. ತತ್ರಪ್+ಏ ಎಂದಿರುವಾಗ ಅಪಿತ್ತಾದ ಲಿಟಾದುದರಿಂದ ಕಿತ್ ಲಿಟ್ ಪರದಲ್ಲಿದೆ. ಏತ್ವಾಭ್ಯಾಸಲೋಪಗಳು ಬಂದರೆ ತ್ರೇಪ್+ಏ=ತ್ರೇಪೇ ಎಂದಾಗುತ್ತದೆ. ತ್ರೇಪ್ ಅಂಗ. ತ್ರೇಪಾತೇ | ತ್ರೇಪಿರೇ || ತ್ರೇಪಿಷೇ | ತ್ರೇಪಾಥೇ | ತ್ರೇಪಿಧ್ವೇ || ತ್ರೇಪೇ | ತ್ರೇಪಿವಹೇ | ತ್ರೇಪಿಮಹೇ ||

**ಲುಟ್** || ತ್ರಪ್+ಇತಾ=ತ್ರಪಿತಾ | ತ್ರಪಿತಾರೌ | ತ್ರಪಿತಾರಃ || ಇತ್ಯಾದಿ. ಧಾತು ಊದಿತ್ತಾದುದರಿಂದ 'ಸ್ವರತಿಸೂತಿಸೂಯತಿ—' ಸೂತ್ರದಿಂದ ವಲಾದಿ ಆರ್ಧಧಾತುಕಕ್ಕೆ ಇಡಾಗಮ ವಿಕಲ್ಪ. ಇಲ್ಲಿ ಇಡಾಗಮ ಬಾರದಿದ್ದರೆ ತ್ರಪ್+ತಾ= ತ್ರಪ್ತಾ | ತ್ರಪ್ತಾರೌ | ಇತ್ಯಾದಿ ರೂಪಗಳಾಗುತ್ತವೆ. ಇನ್ನು ಮುಂದಿನ ಲೃಡಾದಿ ಆರ್ಧ

ಧಾತುಕಗಳಲ್ಲಿಯೂ ಹೀಗೇ ಇಡ್ವಿಕಲ್ಪವಾದುದರಿಂದ ಎರಡೆರಡು ರೂಪಗಳಾಗುತ್ತವೆ. **ಲೃಟ್** || ಇಟ್ ಬಂದರೆ ತ್ರಪಿಷ್ಯತೇ | ಇಟ್ ಬಾರದಿದ್ದರೆ ತ್ರಪ್ಸ್ಯತೇ | ಇತ್ಯಾದಿ. **ಲೋಟ್** || ತ್ರಪತಾಮ್ | (ಏಧತಾಮ್ ಎಂಬಂತೆ ರೂಪ.) **ಲಙ್** || ಅತ್ರಪತ| (ಐಧತವತ್) **ವಿಧಿಲಿಙ್** || ತ್ರಪೇತ | (ಏಧೇತವತ್) **ಆಶೀರ್ಲಿಙ್** || ಇಟ್ ಬಂದರೆ ತ್ರಪಿಷೀಷ್ಟ | ಇಟ್ ಬಾರದಿದ್ದರೆ ತ್ರಪ್ಸೀಷ್ಟ | **ಲುಙ್** || ಇಟ್ ಬಂದಾಗ ಅತ್ರಪಿಷ್ಟ | (ಐಧಿಷ್ಟವತ್) ಇಟ್ ಬಾರದಿದ್ದರೆ ಅತ್ರಪ್ ಸ್ + ತ ಎಂದಿರುವಾಗ 'ಝಲೋ ಝಲಿ' ಸೂತ್ರದಿಂದ ಸಲೋಪ. ಅತ್ರಪ್ತ | ಅತ್ರಪ್ಸಾತಾಮ್ | ಅತ್ರಪ್ಸತ || ಅತ್ರಪ್ಥಾಃ | ಅತ್ರಪ್ಸಾಥಾಮ್ | ಅತ್ರಬ್ಧ್ವಮ್ || ಅತ್ರಪ್ಸಿ | ಅತ್ರಪ್ಸ್ವಹಿ| ಅತ್ರಪ್ಸ್ಮಹಿ ॥ **ಲೃಙ್** || ಅತ್ರಪಿಷ್ಯತ | ಇಟ್ ಬಾರದಿದ್ದರೆ ಅತ್ರಪ್ಸ್ಯತ ||

ಹೀಗೆ ಆತ್ಮನೇಪದ ಧಾತುಗಳ ವಿವರಣೆ ಸೂಕ್ಷ್ಮವಾಗಿ ವಿವರಿಸಿದೆ.

ಇದರಂತೆ ಇತರ ಧಾತುಗಳ ರೂಪಗಳನ್ನು ತಿಳಿಯಬೇಕು.

ಞಕಾರ ಇತ್ತಾದ ಧಾತುಗಳು ಅಥವಾ ಸ್ವರಿತೇತ್ತಾದ ಧಾತುಗಳು ಉಭಯ ಪದ ಅಂದರೆ ಪರಸ್ಮೈಪದ, ಆತ್ಮನೇಪದ ಪ್ರತ್ಯಯಗಳನ್ನು ಹೊಂದುತ್ತವೆಯೆಂದು ಹಿಂದೆ ಹೇಳಿದೆ (ಸೂ. ೩೮೧). ಈಗ ಭ್ವಾದಿಯಲ್ಲಿ ಅಂಥವುಗಳ ಕೆಲವು ರೂಪಗಳನ್ನು ವಿವರಿಸುತ್ತಾನೆ.

**|| ೪೧ || ಶ್ರಿಞ್ ಸೇವಾಯಾಮ್ || (ಸೇವಿಸುವುದು, ಹೊಂದುವುದು.)**

**ಶ್ರಯತಿ, ಶ್ರಯತೇ | ಶಿಶ್ರಾಯ, ಶಿಶ್ರಿಯೇ | ಶ್ರಯಿತಾಸಿ ಶ್ರಯಿತಾಸೇ | ಶ್ರಯಿಷ್ಯತಿ, ಶ್ರಯಿಷ್ಯತೇ | ಶ್ರಯತು, ಶ್ರಯತಾಮ್ | ಅಶ್ರಯತ್, ಅಶ್ರಯತ | ಶ್ರಯೇತ್, ಶ್ರಯೇತ | ಶ್ರೀಯಾತ್, ಶ್ರಯಿಷೀಷ್ಟ | ಚಙ್ | ಅಶಿಶ್ರಿಯತ್, ಅಶಿಶ್ರಿಯತ | ಅಶ್ರಯಿಷ್ಯತ್, ಅಶ್ರಯಿಷ್ಯತ ||**

ಞಿತ್ತಾದ ಧಾತು. ಆದುದರಿಂದ ಉಭಯಪದಿ. **ಲಟ್** || ಶ್ರಿ + ಅ + ತಿ. 'ಸಾರ್ವಧಾ—' ಸೂತ್ರದಿಂದ ಗುಣ. ಅಯಾದೇಶ. ಶ್ರಯತಿ. ಶ್ರಯ ಅಂಗ. ಭವತಿವತ್. ಆತ್ಮನೇಪದದಲ್ಲಿಯೂ ಶ್ರಯ ಅಂಗ. ಶ್ರಯತೇ | ಏಧತೇ ರೂಪದಂತೇ ತಿಳಿಯಬೇಕು. **ಲಿಟ್** || **ಪ** —ಶ್ರಿಶ್ರಿ + ಅ. ಶಿಶ್ರಿ + ಅ. 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ. ಆಯಾದೇಶ. ಶಿಶ್ರಾಯ. ಶಿಶ್ರಿ + ಅತುಸ್ ಎಂದಿರುವಾಗ ಕಿತ್ತಾದುದರಿಂದ ಗುಣವಿಲ್ಲ. 'ಅಚಿಶ್ನುಧಾತು—' ಸೂತ್ರದಿಂದ ಧಾತುವಿನ ಇಕಾರಕ್ಕೆ ಅಜಾದಿ ಪ್ರತ್ಯಯ ಪರವಾದುದರಿಂದ ಇಯಙಾದೇಶ. ಶಿಶ್ರಿಯತುಃ || ಶಿಶ್ರಿಯ್ ಅಂಗ. ಶಿಶ್ರಿಯುಃ || ಶಿಶ್ರಿ + ಇಥ. ಗುಣ. ಅಯಾದೇಶ. ಶಿಶ್ರಯಿಥ | ಶಿಶ್ರಿಯಥುಃ | ಶಿಶ್ರಿಯ || ಉತ್ತಮ ಣಲ್ ವಿಕಲ್ಪ ಣಿತ್ತಾದುದರಿಂದ ವೃದ್ಧಿ ವಿಕಲ್ಪ. ವೃದ್ಧಿ ಬಾರ

ದಿದ್ದರೆ ಗುಣ. ಶಿಶ್ರಾಯ, ಶಿಶ್ರಯ | ಶಿಶ್ರಿಯಿವ | ಶಿಶ್ರಿಯಿಮ || ಆ.— ಒಂಬತ್ತು ಪ್ರತ್ಯಯಗಳಲ್ಲಿಯೂ ಇಯಙಾದೇಶ. ಶಿಶ್ರಿಯೇ | ಶಿಶ್ರಿಯಾತೇ | ಶಿಶ್ರಿಯಿರೇ || ಶಿಶ್ರಿಯಿಷೇ | ಶಿಶ್ರಿಯಾಥೇ | ಶಿಶ್ರಿಯಿಧ್ವೇ || ಶಿಶ್ರಿಯೇ | ಶಿಶ್ರಿಯಿವಹೇ | ಶಿಶ್ರಿಯಿಮಹೇ || ಲುಟ್ || ಶ್ರಿ+ಇತಾ. ಗುಣ. ಅಯಾದೇಶ. ಶ್ರಯಿತಾ | ಶ್ರಯಿತಾರೌ | ಶ್ರಯಿತಾರಃ || ಶ್ರಯಿತಾಸಿ | ಶ್ರಯಿತಾಸ್ಥಃ | ಶ್ರಯಿತಾಸ್ಥ || ಶ್ರಯಿತಾಸ್ಮಿ | ಶ್ರಯಿತಾಸ್ವಃ | ಶ್ರಯಿತಾಸ್ಮಃ || ಆತ್ಮನೇಪದಗಳಲ್ಲಿ ಪ್ರಥಮಪುರುಷದಲ್ಲಿ ಹಿಂದಿನ ರೂಪದಂತಾಗುವುದರಿಂದ ಮಧ್ಯಮಪುರುಷದಲ್ಲಿ ವ್ಯತ್ಯಾಸವನ್ನು ತೋರಿಸಿರುತ್ತಾನೆ. ಶ್ರಯಿತಾಸೇ | ಶ್ರಯಿತಾಸಾಥೇ | ಶ್ರಯಿತಾಧ್ವೇ || ಶ್ರಯಿತಾಹೇ | ಶ್ರಯಿತಾಸ್ವಹೇ | ಶ್ರಯಿತಾಸ್ಮಹೇ || ಲೃಟ್ || ಪ.—ಸ್ಯಕ್ಕೆ ಇಡಾಗಮ. ಅದನ್ನು ನಿಮಿತ್ತೀಕರಿಸಿ ಗುಣ., ಅಯಾದೇಶ. ಷತ್ವ. ಶ್ರಯಿಷ್ಯತಿ || ಆ.—ಶ್ರಯಿಷ್ಯತೇ || ಲೋಟ್ || ಶ್ರಯತು, ಶ್ರಯತಾತ್ | ಇತ್ಯಾದಿ. (ಭವತುವತ್). ಆ.—ಶ್ರಯತಾಮ್. ಏಧತಾಮ್ ರೂಪದಂತೆ ಆಗುತ್ತದೆ. ವಿಧಿಲಿಙ್ || ಪ.—ಶ್ರಯೇತ್ (ಭವೇತ್‌ವತ್). ಆ.—ಶ್ರಯೇತ | (ಏಧೇತವತ್) ಆಶೀರ್ಲಿಙ್ || ಶ್ರಿ+ಯಾತ್. 'ಅಕೃತ್ಸಾರ್ವಧಾತುಕಯೋರ್ದೀರ್ಘಃ' ಶ್ರೀಯಾತ್ | ಶ್ರೀಯಾಸ್ತಾಮ್ | ಶ್ರೀಯಾಸುಃ || ಶ್ರೀಯಾಃ | ಶ್ರೀಯಾಸ್ತಮ್ | ಶ್ರೀಯಾಸ್ತ || ಶ್ರೀಯಾಸಮ್ | ಶ್ರೀಯಾಸ್ವ | ಶ್ರೀಯಾಸ್ಮ || ಆ.—ಶ್ರಿ+ಇಷೀಷ್ಟ. ಗುಣ, ಅಯಾದೇಶ. ಶ್ರಯಿಷೀಷ್ಟ || (ಏಧಿಷೀಷ್ಟವತ್) ಲುಙ್ || ಪ.—'ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್' ಸೂತ್ರದಿಂದ ಚ್ಲಿಗೆ ಚಙ್ ಆದೇಶ. ಅಶ್ರಿ+ಅ+ತ್. 'ಚಙಿ' ಸೂತ್ರದಿಂದ ದ್ವಿತ್ವ. ಅಭ್ಯಾಸಕಾರ್ಯ. ಧಾತುವಿನ ಇಕಾರಕ್ಕೆ ಇಯಙಾದೇಶ. ಅಶಿಶ್ರಿಯತ್ || ಅಶಿಶ್ರಿಯತಾಮ್ | ಅಶಿಶ್ರಿಯನ್ || ಅಶಿಶ್ರಿಯಃ | ಅಶಿಶ್ರಿಯತಮ್ | ಅಶಿಶ್ರಿಯತ || ಅಶಿಶ್ರಿಯಮ್ | ಅಶಿಶ್ರಿಯಾವ | ಅಶಿಶ್ರಿಯಾಮ || ಆ.—ಅಶಿಶ್ರಿಯ ಅಂಗ. ಅಶಿಶ್ರಿಯತ | ಅಶಿಶ್ರಿಯೇತಾಮ್ | ಅಶಿಶ್ರಿಯಂತ || ಅಶಿಶ್ರಿಯಥಾಃ | ಅಶಿಶ್ರಿಯೇಥಾಮ್ | ಅಶಿಶ್ರಿಯಧ್ವಮ್ || ಅಶಿಶ್ರಿಯೆ | ಅಶಿಶ್ರಿಯಾವಹಿ | ಅಶಿಶ್ರಿಯಾಮಹಿ || ಲೃಙ್ || ಪ.—ಅಶ್ರಯಿಷ್ಯತ್ | ಆತ್ಮ.—ಅಶ್ರಯಿಷ್ಯತ ||

## ೮೨. ಭೃಞ್ ಭರಣೇ || (ಪೋಷಣೆ, ತುಂಬುವುದು)

**ಭರತಿ, ಭರತೇ | ಬಭಾರ | ಬಭ್ರತುಃ | ಬಭ್ರುಃ | ಬಭರ್ಥ | ಬಭೃವ | ಬಭೃಮ | ಬಭ್ರೇ | ಬಭೃಷೇ | ಭರ್ತಾಸಿ, ಭರ್ತಾಸೇ | ಭರಿಷ್ಯತಿ, ಭರಿಷ್ಯತೇ | ಭರತು, ಭರತಾಮ್ | ಅಭರತ್, ಅಭರತ | ಭರೇತ್, ಭರೇತ ||**

**ಲಟ್** || ಭೃ+ಅ+ತೆ. 'ಸಾರ್ವಧಾತು—' ಸೂತ್ರದಿಂದ ಗುಣ. ಋಕಾರ ಸ್ಥಾನಕ್ಕೆ ರಪರವಾಗಿ ಬರುತ್ತದೆ. ಭರತಿ || ಆ.—ಭರತೇ || **ಲಿಟ್** || ಭೃಭೃ+ಅ. ಬಭೃ+ಅ. 'ಅಚೋಞ್ಣಿತಿ' ವೃದ್ಧಿ. ಬಭಾರ. ಬಭೃ+ಅತುಸ್. ಯಣ್. ಬಭ್ರತುಃ | ಬಭ್ರುಃ || ಬಭೃ+ಥ. 'ಕೃಸೃಭೃ—' ಸೂತ್ರದಿಂದ ಇಣ್ನಿಷೇಧ ಮಾಡಿರುವುದರಿಂದ ಇಡಾಗಮವಿಲ್ಲ. ಗುಣ. ಬಭರ್ಥ | ಬಭ್ರಥುಃ | ಬಭ್ರ । ಬಭಾರ, ಬಭರ । ಬಭೃವ | ಬಭೃಮ || ಆ -- ಬಭೃ+ಏ. ಯಣ್. ಬಭ್ರೇ | ಬಭ್ರಾತೇ । ಬಭ್ರಿರೇ || ಬಭೃಷೇ । ಬಭ್ರಾಥೇ । ಬಭೃಢ್ವೇ || ಬಭ್ರೇ | ಬಭೃವಹೇ | ಬಭೃಮಹೇ || **ಲುಟ್** || ಅನಿಟಾದುದರಿಂದ ತಾಸಿಗೆ ಇಡಾಗಮವಿಲ್ಲ| ಗುಣ. ಭರ್ತಾ । ಭರ್ತಾರೌ | ಭರ್ತಾರಃ || ಭರ್ತಾಸಿ | ಭರ್ತಾಸ್ಥಃ | ಭರ್ತಾಸ್ಥ || ಭರ್ತಾಸ್ಮಿ | ಭರ್ತಾಸ್ವಃ | ಭರ್ತಾಸ್ಮಃ || ಆ.—ಭರ್ತಾ | ಭರ್ತಾರೌ | ಭರ್ತಾರಃ || ಭರ್ತಾಸೇ | ಭರ್ತಾಸಾಥೇ । ಭರ್ತಾಧ್ವೇ || ಭರ್ತಾಹೇ | ಭರ್ತಾಸ್ವಹೇ | ಭರ್ತಾಸ್ಮಹೇ || **ಲೃಟ್** || ಭೃ+ಸ್ಯತಿ. ಋದಂತಧಾತುವಾದುದರಿಂದ 'ಋದ್ಧನೋಃ ಸ್ಯೇ' ಸೂತ್ರದಿಂದ ಸ್ಯ ಪ್ರತ್ಯಯಕ್ಕೆ ಇಡಾಗಮ. ಗುಣ, ಷತ್ವ. ಭರಿಷ್ಯತಿ | ಆ —ಭರಿಷ್ಯತೇ || **ಲೋಟ್** ಭರ ಅಂಗ. ಭರತು, ಭರತಾತ್ | (ಭವತುವತ್) ಆ. — ಭರತಾಮ್ | **ಲಙ್** || ಅಭರ ಅಂಗ. ಅಭರತ್ | **ಆ.** ಅಭರತ । **ವಿಧಿಲಿಙ್** || ಭರೇತ್ (ಭವೇತ್‌ವತ್) ಆ —ಭರೇತ || **ಆಶೀರ್ಲಿಙ್** || ಭೃ+ಯಾತ್ ಎಂದಿರುವಾಗ ಧಾತುವಿನ ಋಕಾರಕ್ಕೆ ರಿಙಾದೇಶ ಹೇಳುತ್ತಾನೆ.

ಋಕಾರಕ್ಕೆ ರಿಙಾದೇಶ ಹೇಳುವ ಸೂತ್ರ.

**೫೪೪. ರಿಙ್ ಶಯಗ್ಲಿಙ್ಕ್ಷು || ೭-೪-೨೮ ||**

**ಶೇ ಯಕಿ ಯಾದಾವಾರ್ಧಧಾತುಕೇ ಲಿಙಿ ಚ ಋತೋ ರಿಙ್ ಆದೇಶಃ ಸ್ಯಾತ್ || ರೀಙಿ ಪ್ರಕೃತೇ ರಿಙ್‌ವಿಧಾನಸಾಮರ್ಥ್ಯಾದ್ದೀರ್ಘೋ ನ | ಭ್ರಿಯಾತ್ ||**

ದ್ವಿಪದ ಸೂತ್ರ. 'ರೀಙ್ ಋತಃ' ಸೂತ್ರದಿಂದ 'ಋತಃ' ಅನುವೃತ್ತಿ. 'ಅಯಿಙ್ ಯಿ --' ಸೂತ್ರದಿಂದ ಅನುವೃತ್ತವಾದ 'ಯಿ' ಎಂಬ ಸಪ್ತಮ್ಯಂತವರ್ಣವು ಲಿಙ್‌ನಲ್ಲಿ ಮಾತ್ರ ಅನ್ವಯಹೊಂದುತ್ತದೆ. ಶದಲ್ಲಿ ಅಸಂಭವ. ಯಕ್ ಯಾದಿಯೇ ಆಗಿದೆ. **ಸೂತ್ರಾರ್ಥ**—ಶ ಪ್ರತ್ಯಯ, ಯಕ್, ಯಕಾರಾದಿಯಾದ ಆರ್ಧಧಾತುಕ ಸಂಜ್ಞೆಯಿರುವ ಲಿಙ್ ಪರದಲ್ಲಿರುವಾಗ ಋಕಾರಕ್ಕೆ ರಿಙ್ ಆದೇಶ ಬರುತ್ತದೆ. ಭೃ+ಯಾತ್ ಎಂದಿರುವಾಗ ಆರ್ಧಧಾತುಕಸಂಜ್ಞೆಯಿರುವ ಯಕಾರಾದಿಯಾದ ಲಿಙ್ ಪರದಲ್ಲಿರುವುದರಿಂದ ಧಾತುವಿನ ಋಕಾರಕ್ಕೆ ರಿಙ್ ಆದೇಶ. ರಿಙಿನಲ್ಲಿ ಙಕಾರ ಇತ್. ಭ್ರಿ+ಯಾತ್ ಇಲ್ಲಿ 'ಅಕೃತ್‌ಸಾರ್ವಧಾತುಕಯೋರ್ದೀರ್ಘಃ' ಸೂತ್ರದಿಂದ ಇಕಾರಕ್ಕೆ

ದೀರ್ಘ ಬರಲಿ ಎಂದು ಆಶಂಕೆ ಬಂದರೆ ಅದಕ್ಕೆ ಸಮಾಧಾನ ಹೇಳುತ್ತಾನೆ. 'ರೀಙ್ ಪ್ರಕೃತೇ—' ಇತಿ. ಭ್ರಿಯಾತ್ ಎಂದಿರುವಾಗ 'ರೀಙ್ ಋತಃ' ಸೂತ್ರದಿಂದ ಋಕಾರಕ್ಕೆ ರೀಙ್ ಬರುತ್ತಿರುವಾಗ ಪುನಃ ಇಲ್ಲಿ ರಿಙ್ ವಿಶೇಷವಾಗಿ ಹೇಳಿರುವುದರಿಂದ ಈ ರಿಙ್‌ಗೆ ದೀರ್ಘ ಬರುವುದಿಲ್ಲವೆಂದು ತಿಳಿಯಬೇಕು. ರಿಙ್ ಹೇಳಿ ದೀರ್ಘ ಹೇಳುವುದಕ್ಕಿಂತಲೂ ರೀಙ್ ಮೊದಲೇ ಹೇಳಿದರೆ ಲಾಘುವವಾಗುತ್ತಿತ್ತು. ಆದುದರಿಂದ ದೀರ್ಘವಿಲ್ಲ ಭ್ರಿಯಾತ್ | ಭ್ರಿಯಾಸ್ತಾಮ್ | ಭ್ರಿಯಾಸುಃ || ಭ್ರಿಯಾಃ | ಭ್ರಿಯಾಸ್ತಮ್ | ಭ್ರಿಯಾಸ್ತ || ಭ್ರಿಯಾಸಮ್ | ಭ್ರಿಯಾಸ್ವ | ಭ್ರಿಯಾಸ್ಮ || ಆತ್ಮನೇಪದದಲ್ಲಿ ಭೃ+ಸೀಷ್ಟ ಎಂದಿರುವಾಗ 'ಸಾರ್ವಧಾತುಕಾ—' ಸೂತ್ರದಿಂದ ಗುಣ ಪ್ರಾಪ್ತವಾದರೆ ಅಲ್ಲಿ ಪ್ರತ್ಯಯಕ್ಕೆ ಕಿತ್ವ ಅತಿದೇಶಮಾಡಿ ನಿಷೇಧ ಹೇಳುತ್ತಾನೆ.

ಲಿಙ್ ಸಿಚ್‌ಗಳಿಗೆ ಕಿತ್ತ್ವ ಹೇಳುವ ಸೂತ್ರ.

**೫೪೫. ಉಶ್ಚ || ೧-೨-೧೨ ||**

**ಋವರ್ಣಾತ್ಪರೌ ಝಲಾದೀ ಲಿಙ್ಸಿಚೌ ಕಿತೌ ಸ್ತಸ್ತಙಿ || ಭೃಷೀಷ್ಟ | ಭೃಷೀಯಾಸ್ತಾಮ್ || ಅಭಾರ್ಷೀತ್ ||**

ಉಃ, ಚ || ದ್ವಿಪದ ಸೂತ್ರ. 'ಲಿಙ್ಸಿಚಾವಾತ್ಮನೇಪದೇಷು' ಸೂತ್ರವೂ, ಇಕೋಝಲ್' ಸೂತ್ರದಿಂದ 'ಝಲ್' ಪದವೂ ಅನುವೃತ್ತವಾಗುತ್ತವೆ. ಉಃ| ಋಕಾರದ ಪಂಚಮೀ. ಝಲ್ ಸಪ್ತಮ್ಯಾಂತಪರಿಣತವಾಗಿ ಲಿಙ್‌ಗೆ ವಿಶೇಷಣ ತದಾದಿಲಾಭ. 'ಆತ್ಮನೇಪದೇಷು' ಪದಕ್ಕೆ ಸಿಚಿನಲ್ಲಿ ಅನ್ವಯ. **ಸೂತ್ರಾರ್ಥ—** ಋಕಾರದ ಪರದಲ್ಲಿರುವ ಝಲಾದಿಯಾದ ಲಿಙ್, ಆತ್ಮನೇಪದಪರದಲ್ಲಿರುವ ಸಿಚ್, ಕಿತ್ತಾಗುತ್ತವೆ. ಪ್ರಕೃತ ಭೃ+ಷೀಷ್ಟ ಎಂಬಲ್ಲಿ ಇಡಾಗಮ ಬಾರದಿರುವುದರಿಂದ ಝಲಾದಿಯಾದ ಲಿಙ್ ಆದುದರಿಂದ ಅದು ಕಿತ್ತಾಗುತ್ತದೆ. ಆಗ "ಕ್ಙಿತಿಚ" ಸೂತ್ರದಿಂದ ಗುಣನಿಷೇಧ. ಭೃಷೀಷ್ಟ | ಭೃಷೀಯಾಸ್ತಾಮ್ | ಭೃಷೀರನ್ || ಭೃಷೀಷ್ಠಾಃ | ಭೃಷೀಯಾಸ್ಥಾಮ್ | ಭೃಷೀಢ್ವಮ್ || "ಇಣಃ ಷೀಧ್ವಂ -" ಸೂತ್ರದಿಂದ ಧಕಾರಕ್ಕೆ ಢಕಾರಾದೇಶ ಬಂದಿದೆ. ಭೃಷೀಯ | ಭೃಷೀವಹಿ | ಭೃಷೀಮಹಿ ||

**ಲುಙ್** || ಅಭೃ+ಸ್ ಈತ್. "ಸಿಚಿ ವೃದ್ಧಿಃ ಪರಸ್ಮೈಪದೇಷು" ಸೂತ್ರದಿಂದ ಋಕಾರಕ್ಕೆ ವೃದ್ಧಿ. "ಆದೇಶಪ್ರತ್ಯಯಯೋಃ" ಸೂತ್ರದಿಂದ ಸಕಾರಕ್ಕೆ ಷತ್ವ. ಅಭಾರ್ಷೀತ್ | ಅಭಾರ್ಷ್ಟಾಮ್ | ಅಭಾರ್ಷುಃ || ಅಭಾರ್ಷೀಃ | ಅಭಾರ್ಷ್ಟಮ್ | ಅಭಾರ್ಷ್ಟ || ಅಭಾರ್ಷಮ್ | ಅಭಾರ್ಷ್ವ | ಅಭಾರ್ಷ್ಮ || ಆತ್ಮನೇಪದದಲ್ಲಿ ಅಭೃ+ಸ್+ತ ಎಂದಿರುವಾಗ ಸಿಚಿಗೆ ಲೋಪ ಹೇಳುತ್ತಾನೆ.

ಸಿಚಿಗೆ ಲೋಪ ಹೇಳುವ ಸೂತ್ರ.

**೫೪೬. ಹ್ರಸ್ವಾದಙ್ಗಾತ್ ॥ ೮-೨-೭೭ ॥**

**ಸಿಚೋ ಲೋಪೋ ಝಲಿ। ಅಭೃತ | ಅಭೃಷಾತಾಮ್ | ಅಭರಿಷ್ಯತ್, ಅಭರಿಷ್ಯತ ||**

ಹ್ರಸ್ವಾತ್, ಅಂಗಾತ್ || ದ್ವಿಪದ ಸೂತ್ರ. 'ಝಲೋ ಝಲಿ' ಸೂತ್ರದಿಂದ 'ಝಲಿ' ಅನುವೃತ್ತಿ. 'ಸಂಯೋಗಾಂತಸ್ಯ ಲೋಪಃ' ಸೂತ್ರದಿಂದ ಲೋಪ ಪದಾನುವೃತ್ತಿ. ಲೋಪ ಸಿಚಿಗೆಂದು ಭಾಷ್ಯದಲ್ಲಿ ಹೇಳಿದೆ. **ಸೂತ್ರಾರ್ಥ**–ಹ್ರಸ್ವಾಂತವಾದ ಅಂಗದ ಪರದಲ್ಲಿರುವ ಸಿಚಿಗೆ ಝಲ್ ಪರದಲ್ಲಿರುವಾಗ ಲೋಪ ಬರುತ್ತದೆ. ಅಭೃ ಹ್ರಸ್ವಾಂತಾಂಗ. ತ ಝಲ್. ಇದು ಪರವಾದುದರಿಂದ ಸಿಚಿಗೆ ಲೋಪ ಬಂದರೆ ಅಭೃತ ಎಂದಾಗುತ್ತದೆ. ಅಭೃಷಾತಾಮ್ | ಝಲ್ ಪರದಲ್ಲಿಲ್ಲದುದರಿಂದ ಸಿಚಿಗೆ ಲೋಪವಿಲ್ಲ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಷತ್ವ. ಅಭೃಷತ. 'ಆತ್ಮನೇಪದೇಷ್ವನತಃ' ಸೂತ್ರದಿಂದ ಅಕಾರದ ಪರದಲ್ಲಿಲ್ಲದುದರಿಂದ ಝಕ್ಕೆ ಅತಾದೇಶ. ಅಭೃಥಾಃ | ಅಭೃಷಾಥಾಮ್ | ಅಭೃಢ್ವಮ್ ॥ ಅಭೃಷಿ | ಅಭೃಷ್ವಹಿ । ಅಭೃಷ್ಮಹಿ ॥ **ಲೃಙ್** || **ಪ.** —'ಋದ್ಧನೋಃ ಸ್ಯೇ' ಸೂತ್ರದಿಂದ ಸ್ಯಪ್ರತ್ಯಯಕ್ಕೆ ಇಡಾಗಮ, ಷತ್ವ. ಅಭರಿಷ್ಯತ್ || **ಆ.** —ಅಭರಿಷ್ಯತ ||

|| **೪೩** || **ಹೃಞ್ — ಹರಣೇ** ॥ (ಒಯ್ಯುವುದು.)

**ಹರತಿ, ಹರತೇ। ಜಹಾರ | ಜಹರ್ಥ | ಜಹ್ರಿವ | ಜಹ್ರಿಮ। ಜಹ್ರೇ | ಜಹ್ರಿಷೇ | ಹರ್ತಾಸಿ, ಹರ್ತಾಸೇ | ಹರಿಷ್ಯತಿ, ಹರಿಷ್ಯತೇ | ಹರತು ಹರತಾಮ್ | ಅಹರತ್, ಅಹರತ | ಹರೇತ್, ಹರೇತ। ಹ್ರಿಯಾತ್, ಹೃಷೀಷ್ಟ। ಅಹಾರ್ಷೀತ್, ಅಹೃತ | ಅಹರಿಷ್ಯತ್, ಅಹರಿಷ್ಯತ ॥**

ಞಕಾರ ಇತ್ತಾದುದರಿಂದ ಉಭಯಪದಿ. **ಲಟ್** || ಹೃ+ಅ+ತಿ. ಗುಣ. ಹರತಿ. **ಆ.** ಹರತೇ || **ಲಿಟ್** || ಹೃಹೃ+ಅ. ಜಹೃ+ಅ. ವೃದ್ಧಿ. ಜಹಾರ | ಜಹ್ರತುಃ। ಜಹ್ರುಃ || ಜಹೃ+ಥ, 'ಋತೋ ಭಾರದ್ವಾಜಸ್ಯ' ಸೂತ್ರದಿಂದ ಥಲಿನಲ್ಲಿ ಭಾರದ್ವಾಜರ ಮತದಲ್ಲಿಯೂ ಇಡಾಗಮವಿಲ್ಲ. ಗುಣ. ಜಹರ್ಥ | ಜಹ್ರಥುಃ | ಜಹ್ರ || ಜಹಾರ, ಜಹರ | ಜಹೃ+ಇವ. ಯಣ್. ಜಹ್ರಿವ | ಜಹ್ರಿಮ | **ಆ** —ಜಹೃ+ಏ. ಯಣ್. ಜಹ್ರೇ | ಜಹ್ರಾತೇ | ಜಹ್ರಿರೇ ॥ ಜಹೃ+ಸೇ. ಇಡಾಗಮ, ಯಣ್. ಜಹ್ರಿಷೇ | ಜಹ್ರಾಥೇ | ಜಹೃಢ್ವೇ || ಜಹ್ರೇ | ಜಹ್ರಿವಹೇ | ಜಹ್ರಿಮಹೇ || **ಲುಟ್** || ಅನಿಟಾದುದರಿಂದ ತಾಸಾದಿಗಳಿಗೆ ಇಡಾಗಮವಿಲ್ಲ. ಗುಣ. ಹರ್ತಾ । ಹರ್ತಾರೌ । ಹರ್ತಾರಃ || ಹರ್ತಾಸಿ | ಹರ್ತಾಸ್ಥಃ | ಹರ್ತಾಸ್ಥ || ಹರ್ತಾಸ್ಮಿ । ಹರ್ತಾಸ್ವಃ | ಹರ್ತಾಸ್ಮಃ || **ಆ.**—(ಪ್ರ.ಪು. ಹಿಂದಿನಂತೆ) ಹರ್ತಾಸೇ |

ಹರ್ತಾಸಾಥೇ | ಹರ್ತಾಧ್ವೇ || ಹರ್ತಾಹೇ | ಹರ್ತಾಸ್ವಹೇ | ಹರ್ತಾಸ್ಮಹೇ || **ಲೃಟ್** || ಧಾತು ಋದಂತವಾದುದರಿಂದ 'ಋದ್ಧನೋಃ ಸ್ಯೇ' ಸೂತ್ರದಿಂದ ಇಡಾಗಮ. ಗುಣ. ಹರಿಷ್ಯತಿ | ಆ.—ಹರಿಷ್ಯತೇ || **ಲೋಟ್** || ಹರ ಅಂಗ. ಹರತು | ಹರತಾತ್ || ಆ —ಹರತಾಮ್ | (ಹಿಂದಿನಂತೇ ರೂಪ.) **ಲಙ್** || ಅಹರತ್ || ಅಹರತ || **ವಿಧಿಲಿಙ್** || ಹರೇತ್, ಹರೇತ || **ಆಶೀರ್ಲಿಙ್** || ಹೃ+ಯಾತ್ ಎಂದಿರುವಾಗ 'ರಿಙ್ ಶಯಗ್ಲಿಙ್ಕ್ಷು' ಸೂತ್ರದಿಂದ ಋಕಾರಕ್ಕೆ ರಿಙ್ ಆದೇಶ. ಹ್ರಿಯಾತ್ | ಹ್ರಿಯಾಸ್ತಾಮ್ | ಹ್ರಿಯಾಸುಃ || ಇತ್ಯಾದಿ. ಆ.—ಹೃಷೀಷ್ಟ. 'ಉಶ್ಚ' ಸೂತ್ರದಿಂದ ಲಿಙ್ ಕಿತ್ತಾಗುವುದರಿಂದ ಗುಣವಿಲ್ಲ. ಹೃಷೀಯಾಸ್ತಾಮ್ | ಹೃಷೀರನ್ || ಹೃಷೀಷ್ಠಾಃ | ಹೃಷೀಯಾಸ್ತಮ್ | ಹೃಷೀಢ್ವಮ್ || ಹೃಷೀಯ | ಹೃಷೀವಹಿ | ಹೃಷೀಮಹಿ || **ಲುಙ್** || ಅಹಾರ್ಷೀತ್ | (ಅಭಾರ್ಷೀತ್‌ವತ್) ಅಹೃತ | (ಅಭೃತವತ್) **ಲೃಙ್** || ಅಹರಿಷ್ಯತ್ | ಅಹರಿಷ್ಯತ ||

|| ೪೪ || **ಧೃಞ್ ಧಾರಣೇ (ಧರಿಸುವುದು) ಧರತಿ—ಧರತೇ** ||
|| ೪೫ || **ಣೀಞ್ ಪ್ರಾಪಣೇ (ಒಯ್ಯುವುದು) ನಯತಿ—ನಯತೇ** ||
|| ೪೬ || **ಡುಪಚಿಷ್ ಪಾಕೇ** || **(ಬೇಯಿಸುವುದು) ಪಚತಿ—ಪಚತೇ** | **ಪಪಾಚ | ಪೇಚಿಥ, ಪಪಕ್ಥ | ಪೇಚೇ | ಪಕ್ತಾಸಿ, ಪಕ್ತಾಸೇ** ||

ಧೃ ಧಾತು. ಭೃಧಾತುವಿನಂತೇ ರೂಪಗಳಾಗುತ್ತವೆ. **ಲಟ್** || ಧರತಿ | ಧರತೇ || **ಲಿಟ್** || ದಧಾರ | ದಧ್ರತುಃ | ದಧ್ರುಃ || ದಧರ್ಥ | ದಧ್ರಥುಃ || ದಧ್ರ || ದಧಾರ, ದಧರ | ದಧ್ರಿವ | ದಧ್ರಿಮ || ದಧ್ರೇ | ದಧ್ರಾತೇ | ದಧ್ರಿರೇ || ದಧ್ರಿಷೇ | ದಧ್ರಾಥೇ | ದಧ್ರಿಧ್ವೇ || ದಧ್ರೇ | ದಧ್ರಿವಹೇ | ದಧ್ರಿಮಹೇ | **ಲುಟ್** || ಧರ್ತಾ | ಆ.—ಧರ್ತಾ–ಧರ್ತಾಸೇ | **ಲೃಟ್** || ಧರಿಷ್ಯತಿ | ಧರಿಷ್ಯತೇ | **ಲೋಟ್** || ಧರತು | ಧರತಾಮ್ | **ಲಙ್** | ಅಧರತ್ | ಅಧರತ || **ವಿಧಿಲಿಙ್** || ಧರೇತ್ | ಧರೇತ || **ಆಶೀರ್ಲಿಙ್** || ಧ್ರಿಯಾತ್ | ಧೃಷೀಷ್ಟ || **ಲುಙ್** || ಅಧಾರ್ಷೀತ್ | ಅಧೃತ || **ಲೃಙ್** || ಅಧರಿಷ್ಯತ್ | ಅಧರಿಷ್ಯತ ||

**ಣೀಞ್** ಧಾತು. 'ಣೋನಃ' ಸೂತ್ರದಿಂದ ಆದಿಗೆ ನಕಾರಾದೇಶ. ನೀ+ಅ+ತಿ. 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ. ಅಯಾದೇಶ ನಯತಿ. ನಯ ಅಂಗ. ಆ —ನಯತೇ || **ಲಿಟ್** || ನಿನಾಯ | ನಿನ್ಯತುಃ | ನಿನ್ಯುಃ | ನಿನಯಿಥ, ನಿನೇಥ | ನಿನ್ಯಥುಃ | ನಿನ್ಯ || ನಿನಾಯ, ನಿನಯ | ನಿನ್ಯಿವ | ನಿನ್ಯಿಮ | ಆ.—ನಿನ್ಯೇ | ನಿನ್ಯಿವಹೇ | ನಿನ್ಯಿಮಹೇ || **ಲುಟ್** || ನೇತಾ | ನೇತಾಸಿ, ನೇತಾಸೇ | **ಲೃಟ್** || ನೇಷ್ಯತಿ, ನೇಷ್ಯತೇ || **ಲೋಟ್** || ನಯತು, ನಯತಾತ್ | ನಯತಾಮ್ || **ಲಙ್** || ಅನಯುತ | ಅನಯುತ | **ವಿಧಿಲಿಙ್** || ನಯೇತ್, ನಯೇತ |

**ಆಶೀರ್ಲಿಙ್** || ನೀಯಾತ್, ನೇಷಿಷ್ಟ | **ಲುಙ್** || ಅನೈಷೀತ್, ಅನೇಷ್ಟ || **ಲೃಙ್** || ಅನೇಷ್ಯತ್, ಅನೇಷ್ಯತ ||

**ಡುಪಚಿಷ್** ಧಾತು. 'ಆದಿರ್ಞಿಟುಡವಃ' ಸೂತ್ರದಿಂದ ಡು ಇತ್. ಕೊನೆಯ ಷಕಾರ ಇತ್. ಇಕಾರ ಉಚ್ಚಾರಣಾರ್ಥವಾಗಿದೆ. (ಪಚ್ ಉಳಿಕೆ.) ಪಚ್+ಅ+ತಿ=ಪಚತಿ, ಪಚತೇ || **ಲಿಟ್** || ಪಪಾಚ | ಪಪಚ್+ಅತುಸ್ ಎಂದಿರುವಾಗ 'ಅತ ಏಕಹಲ್ಮಧ್ಯೇ—' ಸೂತ್ರದಿಂದ ಏತ್ವಾಭ್ಯಾಸಲೋಪ. ಪೇಚತುಃ | ಪೇಚುಃ || ಥಲಿನಲ್ಲಿ ಭಾರದ್ವಾಜನಿಯಮದಿಂದ ಇಟ್ ಬಂದಾಗ 'ಥಲಿ ಚ ಸೇಟಿ' ಸೂತ್ರದಿಂದ ಏತ್ವಾಭ್ಯಾಸಲೋಪ. ಇಟ್ ಬಾರದಿದ್ದರೆ ಆ ಸೂತ್ರದಿಂದ ಕಾರ್ಯವಿಲ್ಲ. ಪೇಚಿಥ, ಪಪಕ್ಥ | 'ಚೋಃ ಕುಃ' ಸೂತ್ರದಿಂದ ಚಕಾರಕ್ಕೆ ಕಕಾರಾದೇಶ ಬಂದಿದೆ. ಪೇಚಥುಃ | ಪೇಚ || ಪಪಾಚ, ಪಪಚ | ಪೇಚಿವ | ಪೇಚಿಮ || **ಆ.**—ಪೇಚೇ | ಪೇಚಾತೇ | ಪೇಚಿರೇ || ಪೇಚಿಷೇ | ಪೇಚಾಥೇ | ಪೇಚಿಧ್ವೇ || ಪೇಚೇ | ಪೇಚಿವಹೇ | ಪೇಚಿಮಹೇ || **ಲುಟ್** || ಪಕ್ತಾ | ಪಕ್ತಾಸಿ, ಪಕ್ತಾಸೇ || **ಲೃಟ್** || ಪಚ್+ಸ್ಯ+ತಿ. 'ಚೋಃ ಕುಃ' ಪಕ್+ಸ್ಯತಿ. 'ಆದೇಶಪ್ರತ್ಯಯಯೋಃ' ಪಕ್+ಷ್ಯತಿ. ಕಷಯೋಗೇ ಕ್ಷಃ || ಪಕ್ಷ್ಯತಿ, ಪಕ್ಷ್ಯತೇ || **ಲೋಟ್** || ಪಚತು, ಪಚತಾಮ್ | **ಲಙ್** || ಅಪಚತ್, ಅಪಚತ | **ವಿಧಿಲಿಙ್** || ಪಚೇತ್, ಪಚೇತ || **ಆಶೀರ್ಲಿಙ್** || ಪಚ್ಯಾತ್ | ಪಚ್+ಸೀಷ್ಟ. ಕುತ್ವ, ಷತ್ವ. ಪಕ್ಷೀಷ್ಟ | **ಲುಙ್** || ಅಪಚ್+ಸ್ಈತ್. ಕುತ್ವ ಷತ್ವ. 'ವದವ್ರಜ—' ಸೂತ್ರದಿಂದ ಉಪಧಾವೃದ್ಧಿ. ಅಪಾಕ್ಷೀತ್ | ಅಪಾಕ್ತಾಮ್ | ಅಪಾಕ್ಷುಃ || ಅಪಾಕ್ಷೀಃ | ಅಪಾಕ್ತಮ್ | ಅಪಾಕ್ತ || ಅಪಾಕ್ಷಮ್ | ಅಪಾಕ್ಷ್ವ | ಅಪಾಕ್ಷ್ಮ || **ಆ.**—ಅಪಚ್+ಸ್+ತ. 'ಝಲೋಝಲಿ' ಸೂತ್ರದಿಂದ ಸಲೋಪ. ಕುತ್ವ. ಅಪಕ್ತ | ಅಪಕ್ಷಾತಾಮ್ | ಅಪಕ್ಷತ || ಅಪಕ್ಥಾಃ | ಅಪಕ್ಷಾಥಾಮ್ | ಅಪಗ್ಧ್ವಮ್ || ಅಪಕ್ಷಿ | ಅಪಕ್ಷ್ವಹಿ | ಅಪಕ್ಷ್ಮಹಿ | **ಲೃಙ್** || ಅಪಕ್ಷ್ಯತ್, ಅಪಕ್ಷ್ಯತ ||

**|| ೪೭ || ಭಜ=ಸೇವಾಯಾಮ್ (ಹೊಂದು, ಸೇವಿಸು.) ಭಜತಿ, ಭಜತೇ | ಬಭಾಜ, ಭೇಜೇ | ಭಕ್ತಾಸಿ, ಭಕ್ತಾಸೇ | ಭಕ್ಷ್ಯತಿ, ಭಕ್ಷ್ಯತೇ | ಅಭಾಕ್ಷೀತ್, ಅಭಕ್ತ | ಅಭಕ್ಷಾತಾಮ್ | || ೪೮ || ಯಜ=ದೇವಪೂಜಾ, ಸಙ್ಗತಿಕರಣ, ದಾನೇಷು | (ಪೂಜಿಸು, ಸೇರಿಸು, ದಾನಮಾಡು.) ಯಜತಿ, ಯಜತೇ ||**

ಭಜ ಧಾತು. ಭಜತಿ, ಭಜತೇ || **ಲಿಟ್** || ಬಭಾಜ. ಬಭಜ್+ಅತುಸ್ ಎಂದಿರುವಾಗ ಆದಿಗೆ ಆದೇಶ ಬಂದಿರುವುದರಿಂದ 'ಅತ ಏಕಹಲ್ಮಧ್ಯೇ—' ಸೂತ್ರದಿಂದ ಏತ್ವಾಭ್ಯಾಸಲೋಪ ಬಾರದಿದ್ದರೂ 'ತೄಫಲಭಜತ್ರಪಶ್ಚ' ಸೂತ್ರದಿಂದ ಕಿತ್

ಲಿಟಿನಲ್ಲಿ ಏತ್ವಾಭ್ಯಾಸಲೋಪಗಳು ಬರುತ್ತವೆ. ಭೇಜತುಃ | ಭೇಜುಃ || ಭೇಜಿಥ, ಬಭಕ್ಥ | ಭೇಜಥುಃ | ಭೇಜ || ಬಭಾಜ, ಬಭಜ | ಭೇಜಿವ | ಭೇಜಿಮ || ಆ. —ಭೇಜೇ | ಭೇಜಾತೇ | ಭೇಜಿರೇ || ಭೇಜಿಷೇ | ಭೇಜಾಥೇ | ಭೇಜಿಧ್ವೇ || ಭೇಜೇ | ಭೇಜಿವಹೇ | ಭೇಜಿಮಹೇ || **ಲುಟ್** || ಭಕ್ತಾ | ಮಧ್ಯಮಪುರುಷದಲ್ಲಿ ಪರಸ್ಮೈಪದಕ್ಕೂ ಆತ್ಮನೇಪದಕ್ಕೂ ಭೇದ ತೋರುವುದರಿಂದ ಅದನ್ನು ಮಾತ್ರ ಬರೆದಿರುತ್ತಾನೆ. ಭಕ್ತಾಸಿ | ಭಕ್ತಾಸೇ || **ಲೃಟ್** || ಭಕ್ಷ್ಯತಿ | ಭಕ್ಷ್ಯತೇ || **ಲೋಟ್** || ಭಜತು, ಭಜತಾಮ್ || **ಲಙ್** || ಅಭಜತ್, ಅಭಜತ || **ವಿಧಿಲಿಙ್** || ಭಜೇತ್, ಭಜೇತ || **ಆಶೀರ್ಲಿಙ್** || ಭಜ್ಯಾತ್, ಭಕ್ಷೀಷ್ಟ || **ಲುಙ್** || ಅಭಾಕ್ಷೀತ್, ಅಭಕ್ತ | ಅಭಕ್ಷಾತಾಮ್ | ಅಭಕ್ಷತ || ಅಭಕ್ಥಾಃ | ಅಭಕ್ಷಾಥಾಮ್ | ಅಭಗ್ಧ್ವಮ್ || ಅಭಕ್ಷಿ | ಅಭಕ್ಷ್ವಹಿ | ಅಭಕ್ಷ್ಮಹಿ || **ಲೃಙ್** || ಅಭಕ್ಷ್ಯತ್' ಅಭಕ್ಷ್ಯತ || ಪಚ ಧಾತುವಿನಂತೇ ರೂಪಗಳನ್ನು ತಿಳಿಯಬೇಕು.

**ಯಜ ಧಾತು. ಲಟ್** || ಯಜತಿ, ಯಜತೇ || ಲಿಟಿನಲ್ಲಿ ಯಜ್‌ಯಜ್ + ಅ ಎಂದಿರುವಾಗ 'ಹಲಾದಿಃ ಶೇಷಃ' ಸೂತ್ರದಿಂದ ಯಯಜ್ + ಅ ಎಂದಾದ ಮೇಲೆ ಅಭ್ಯಾಸಕ್ಕೆ ಸಂಪ್ರಸಾರಣ ಹೇಳುತ್ತಾನೆ.

ವಚ್ಯಾದಿಗಳ ಅಭ್ಯಾಸಕ್ಕೆ ಸಂಪ್ರಸಾರಣ ಹೇಳುವ ಸೂತ್ರ.

**೫೪೭. ಲಿಟ್ಯಭ್ಯಾಸಸ್ಯೋಭಯೇಷಾಮ್ || ೬-೧-೧೭ ||**

**ವಚ್ಯಾದೀನಾಂ ಗ್ರಹ್ಯಾದೀನಾಂ ಚಾಭ್ಯಾಸಸ್ಯ ಸಂಪ್ರಸಾರಣಂ ಲಿಟಿ || ಇಯಾಜ ||**

ಲಿಟಿ, ಅಭ್ಯಾಸಸ್ಯ, ಉಭಯೇಷಾಮ್ || ತ್ರಿಪದ ಸೂತ್ರ. 'ಷ್ಯಙಃ ಸಂಪ್ರಸಾರಣಮ್' ಸೂತ್ರದಿಂದ 'ಸಂಪ್ರಸಾರಣಂ' ಪದವು ಅನುವೃತ್ತವಾಗುತ್ತದೆ. ಇದರ ಹಿಂದೆ 'ವಚಿಸ್ವಪಿ—' (ಸೂ.೫೪೪), 'ಗ್ರಹಿಜ್ಯಾವಯಿ—' (ಸೂ. ೬೩೬) ಈ ಎರಡು ಸೂತ್ರಗಳಿವೆ ಈ ಸೂತ್ರದಲ್ಲಿರುವ ಉಭಯಪದದಿಂದ ಆ ಎರಡು ಸೂತ್ರಗಳಲ್ಲಿ ಹೇಳಿದ ಧಾತುಗಳನ್ನು ತೆಗೆದುಕೊಳ್ಳಬೇಕು. ಸೂತ್ರಾರ್ಥ.— ವಚ್ಯಾದಿಧಾತುಗಳಿಗೂ (೧೧), ಗ್ರಹ್ಯಾತಿದಿಧಾತುಗಳಿಗೂ (೯) (ದ್ವಿತ್ವ ಬಂದಾಗ) ಅಭ್ಯಾಸಕ್ಕೆ ಲಿಟ್ ಪರದಲ್ಲಿರುವಾಗ ಸಂಪ್ರಸಾರಣ ಬರುತ್ತದೆ. ಯಜಾದಿಯಲ್ಲಿ ಯಜ್ ಸೇರಿದೆ. ಯಯಜ್ + ಅ ಎಂದಿರುವಾಗ ಯಜಿಗೆ ಲಿಟ್ ಪರದಲ್ಲಿರುವುದರಿಂದ ಅಭ್ಯಾಸಕ್ಕೆ ಸಂಪ್ರಸಾರಣ ಬಂದರೆ ಇ + ಅಯಜ್ + ಅ. 'ಸಂಪ್ರಸಾರಣಾಚ್ಚ' ಸೂತ್ರದಿಂದ ಪೂರ್ವರೂಪ. ಇ + ಯಜ್ + ಅ. 'ಅತ ಉಪಧಾಯಾಃ ' ಸೂತ್ರದಿಂದ ಣಲ್ ನಿಮಿತ್ತವಾಗಿ ಉಪಧಾವೃದ್ಧಿ. ಇಯಾಜ. ಯಜ್ + ಅತುಸ್ ಎಂದಿರುವಾಗ ಅತುಸ್ ಕಿತ್ತಾದುದರಿಂದ ದ್ವಿತ್ವಕ್ಕಿಂತ ಮೊದಲೇ ಸಂಪ್ರಸಾರಣ ಹೇಳುತ್ತಾನೆ.

ವಚ್ಯಾದಿಗಳಿಗೆ ಸಂಪ್ರಸಾರಣ ಹೇಳುವ ಸೂತ್ರ.

**೫೪೮. ವಚಿಸ್ವಪಿಯಜಾದೀನಾಂ ಕಿತಿ ||೬-೧-೧೫||**

**ವಚಿಸ್ವಪ್ಯೋರ್ಯಜಾದೀನಾಂ ಚ ಸಂಪ್ರಸಾರಣಂ ಸ್ಯಾತ್ ಕಿತಿ | ಈಜತುಃ | ಈಜುಃ | ಇಯಜಿಥ, ಇಯಷ್ಠ | ಈಜೇ | ಯಷ್ಟಾ ||**

ದ್ವಿಪದ ಸೂತ್ರ. 'ಷ್ಯಙಃ ಸಂಪ್ರಸಾರಣಮ್' ಸೂತ್ರದಿಂದ 'ಸಂಪ್ರಸಾರಣಮ್' ಅನುವೃತ್ತಿ. ವಚಿ, ಸ್ವಪಿ ಈ ಎರಡು ಧಾತುಗಳನ್ನು ಇಕಿನಿಂದ ನಿರ್ದೇಶ ಮಾಡಿರುತ್ತಾನೆ. ಯಜಾದಿಗಳು ಒಂಬತ್ತು (ಯಜ್, ವಪ್, ವಹ್, ವಸ್ ವೇಞ್, ವ್ಯೇಞ್, ಹ್ವೇಞ್, ವದ್, ಶ್ವಿ), **ಸೂತ್ರಾರ್ಥ**—ವಚ್, ಸ್ವಪ್, ಯಜಾದಿ ಧಾತುಗಳಿಗೆ ಕಿತ್ ಆದ ಪ್ರತ್ಯಯಪರದಲ್ಲಿರುವಾಗ ಸಂಪ್ರಸಾರಣ ಬರುತ್ತದೆ. ಅತುಸಾದಿ ದ್ವಿವಚನ ಬಹುವಚನ ಪ್ರತ್ಯಯಗಳು 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ ಕಿತ್ತಾಗುತ್ತವೆ. ಸಂಪ್ರಸಾರಣ ಬಂದರೆ ಇ+ಇಜ್+ಅತುಸ್ ಎಂದಿರುವಾಗ 'ಸಂಪ್ರಸಾರಣಾಚ್ಚ' ಸೂತ್ರದಿಂದ ಪೂರ್ವರೂಪ. ಇಜ್+ಅತುಸ್. ಈಗ ದ್ವಿತ್ವ. ಇಜ್ಇಜ್+ಅತುಸ್. 'ಹಲಾದಿಃ ಶೇಷಃ' ಇ+ಇಜ್+ಅತುಸ್. ಸವರ್ಣದೀರ್ಘ. ಈಜತುಃ | ಯಜ್+ಉಸ್. ಹಿಂದಿನಂತೆ ಸಂಪ್ರಸಾರಣ, ಪೂರ್ವರೂಪ. ದ್ವಿತ್ವಾದಿ. ಈಜುಃ || ಥಲಿನಲ್ಲಿ ಭಾರದ್ವಾಜನಿಯಮದಿಂದ ಇಡಾಗಮ ಬಂದರೆ ಯಜ್+ಇಥ. ದ್ವಿತ್ವಾದಿ. ಯಯಜ್+ಇಥ. 'ಲಿಟ್ಯಭ್ಯಾಸಸ್ಯೋಭಯೇಷಾಂ' ಸೂತ್ರದಿಂದ ಸಂಪ್ರಸಾರಣ. ಪೂರ್ವರೂಪ. ಇಯಜಿಥ. ಇಡಾಗಮ ಬಾರದಿದ್ದರೆ ಇಯಜ್+ಥ ಎಂದಿರುವಾಗ 'ವ್ರಶ್ಚಭ್ರಸ್ಜ—' ಸೂತ್ರದಿಂದ ಜಕಾರಕ್ಕೆ ಷಕಾರ, ಇಯಷ್+ಥ. ಷ್ಟುತ್ವ. ಇಯಷ್ಠ. ಈಜಥುಃ | ಈಜ | ಇಯಾಜ ಇಯಜ | ಈಜಿವ | ಈಜಿಮ || ಆತ್ಮನೇಪದದಲ್ಲಿ ಅಪಿತ್ತಾದುದರಿಂದ ಒಂಬತ್ತೂ ಕಿತ್ ಗುವುದರಿಂದ ದ್ವಿತ್ವಕ್ಕಿಂತ ಮೊದಲೇ ಸಂಪ್ರಸಾರಣ ಬರುತ್ತದೆ. ಇಜ್ ಅಂಗ. ಈಜೇ | ಈಜಾತೇ | ಈಜಿರೇ|| ಈಜಿಷೇ | ಈಜಾಥೇ | ಈಜಿಧ್ವೇ || ಈಜೇ | ಈಜಿವಹೇ | ಈಜಿಮಹೇ ||

**ಲುಟ್** || ಅನಿಟ್ ಧಾತು. ಯಜ್+ತಾ ಷತ್ವ, ಷ್ಟುತ್ವ. ಯಷ್ಟಾ, ಯಷ್ಟಾಸಿ ಯಷ್ಟಾಸೇ | ಇತ್ಯಾದಿ. **ಲೃಟಿ**ನಲ್ಲಿ ಯಜ್+ಸ್ಯತಿ ಎಂದಿರುವಾಗ ವ್ರಶ್ಚೇತಿ ಸೂತ್ರದಿಂದ ಷತ್ವ ಬಂದಾಗ ಆ ಷಕಾರಕ್ಕೆ ಕತ್ವ ಹೇಳುತ್ತಾನೆ.

ಷಕಾರ ಢಕಾರಗಳಿಗೆ ಕತ್ವ ಹೇಳುವ ಸೂತ್ರ.

**೫೪೯. ಷಢೋಃ ಕಃ ಸಿ || ೮-೨-೪೧ ||**

**ಯಕ್ಷ್ಯತಿ, ಯಕ್ಷ್ಯತೇ || ಇಜ್ಯಾತ್, ಯಕ್ಷೀಷ್ಟ | ಅಯಾಕ್ಷೀತ್, ಅಯಷ್ಟ ||**

ತ್ರಿಪದ ಸೂತ್ರ. ಸಕಾರ ಪರದಲ್ಲಿರುವಾಗ ಷಕಾರ, ಢಕಾರಗಳಿಗೆ ಕಕಾರಾದೇಶ ಬರುತ್ತದೆ. ಪ್ರಕೃತ ಷಕಾರಕ್ಕೆ ಸಕಾರ ಪರವಾದುದರಿಂದ ಕತ್ವ ಬಂದರೆ ಯಕ್+ಸ್ಯತಿ ಎಂದಾಗುತ್ತದೆ. 'ಆದೇಶಪ್ರತ್ಯಯಯೋಃ' ಷತ್ವ. ಕಷಯೋಗೇ ಕ್ಷಃ । ಯಕ್ಷ್ಯತಿ ॥ ಆ.— ಯಕ್ಷ್ಯತೇ ॥ **ಲೋಟ್** ॥ ಯಜತು, ಯಜತಾಮ್ ॥ **ಲಙ್** ॥ ಅಯಜತ್, ಅಯಜತ ॥ **ವಿಧಿಲಿಙ್** ॥ ಯಜೇತ್, ಯಜೇತ ॥ **ಆಶೀರ್ಲಿಙ್** ॥ ಯಜ್+ಯಾಸ್ತ್ 'ಸ್ಕೋಃ ಸಂಯೋಗಾದ್ಯೋರಂತೇ ಚ' ಸೂತ್ರದಿಂದ ಸಲೋಪ ಆಶೀರ್ಲಿಙಿನಲ್ಲಿ ಯಾಸುಟ್ ಕಿತ್ತಾದುದರಿಂದ 'ವಚಿಸ್ವಪಿ—' ಸೂತ್ರದಿಂದ ಸಂಪ್ರಸಾರಣ. ಪೂರ್ವರೂಪ. ಇಜ್ಯಾತ್ । ಇಜ್ಯಾಸ್ತಾಮ್ । ಇಜ್ಯಾಸುಃ ॥ ಇಜ್ಯಾಃ । ಇಜ್ಯಾಸ್ತಮ್ । ಇಜ್ಯಾಸ್ತ ॥ ಇಜ್ಯಾಸಮ್ । ಇಜ್ಯಾಸ್ವ । ಇಜ್ಯಾಸ್ಮ ॥ ಆ.—ಯಜ್+ಸೀಷ್ಟ । ಲೃಟಿನಂತೆ ಷತ್ವ, ಕುತ್ವ, ಕ್ಷಕಾರ. ಯಕ್ಷೀಷ್ಟ । ಯಕ್ಷೀಯಾಸ್ತಾಮ್ । ಯಕ್ಷೀರನ್ ॥ ಯಕ್ಷೀಷ್ಠಾಃ । ಯಕ್ಷೀಯಾಸ್ಥಾಮ್ । ಯಕ್ಷೀಢ್ವಮ್ ॥ ಯಕ್ಷೀಯ । ಯಕ್ಷೀವಹಿ । ಯಕ್ಷೀಮಹಿ ॥ **ಲುಙ್** ॥ ಅಯಜ್+ಸೀತ್. 'ವದವ್ರಜಹಲಂತಸ್ಯಾಚಃ' ಸೂತ್ರದಿಂದ ವೃದ್ಧಿ. ಅಯಾಜ್+ಸೀತ್. ಷತ್ವ, ಕತ್ವ, ಕ್ಷತ್ವ. ಅಯಾಕ್ಷೀತ್ । ಅಯಾಷ್ಟಾಮ್ । ಅಯಾಕ್ಷುಃ ॥ ಅಯಾಕ್ಷೀಃ । ಅಯಾಷ್ಟಮ್ । ಅಯಾಷ್ಟ ॥ ಅಯಾಕ್ಷಮ್ । ಅಯಾಕ್ಷ್ವ । ಅಯಾಕ್ಷ್ಮ ॥ ಆ.— ಅಯಜ್+ಸ್+ತ. 'ಝಲೋಝಲಿ' ಸೂತ್ರದಿಂದ ಸಲೋಪ. ಷತ್ವ, ಷ್ಟುತ್ವ. ಅಯಷ್ಟ । ಅಯಕ್ಷಾತಾಮ್ । ಅಯಕ್ಷತ ॥ ಅಯಷ್ಠಾಃ । ಅಯಕ್ಷಾಥಾಮ್ । ಅಯಡ್ಢ್ವಮ್ ॥ ಅಯಕ್ಷಿ । ಅಯಕ್ಷ್ವಹಿ । ಅಯಕ್ಷ್ಮಹಿ ॥ **ಲೃಙ್** ॥ ಅಯಕ್ಷ್ಯತ್, ಅಯಕ್ಷ್ಯತ ॥

॥ ೪೯ ॥ ವಹ ಪ್ರಾಪಣೇ ॥ (ಒಯ್ಯುವುದು)

**ವಹತಿ, ವಹತೇ । ಉವಾಹ । ಊಹತುಃ । ಊಹುಃ । ಉವಹಿಥ ।**

ವಹ ಧಾತು. ಸ್ವರಿತೇತ್. ಉಭಯಪದಿ. ಅನಿಟ್. **ಲಟ್** ॥ ವಹತಿ, ವಹತೇ ॥ **ಲಿಟ್** ॥ ವಹ್ವಹ್+ಅ. 'ಹಲಾದಿಃ ಶೇಷಃ' ವವಹ್+ಅ. 'ಲಿಟ್ಯಭ್ಯಾಸಸ್ಯೋಭಯೇಷಾಮ್' ಸೂತ್ರದಿಂದ ಅಭ್ಯಾಸಕ್ಕೆ ಸಂಪ್ರಸಾರಣ. ಪೂರ್ವರೂಪ. ಉವಹ್+ಅ. 'ಅತಉಪಧಾಯಾಃ' ಉಪಧಾವೃದ್ಧಿ. ಉವಾಹ. ಅತುಸಾದಿಗಳಲ್ಲಿ ಕಿತ್ತಾದುದರಿಂದ ಮೊದಲೇ ಸಂಪ್ರಸಾರಣ. ಉಹ್ಉಹ್+ಅತುಸ್ ಉಉಹ್+ಅತುಸ್. ಊಹತುಃ । ಊಹುಃ ॥ ಭಾರದ್ವಾಜನಿಯಮದಿಂದ ಥಲಿಗೆ ಇಡಾಗಮ ಬಂದರೆ ಉವಹಿಥ. ಇಡಾಗಮ ಬಾರದಿದ್ದರೆ ಉವಹ್+ಥ. ಎಂದಿರುವಾಗ ಥಕಾರಕ್ಕೆ ಧಕಾರಾದೇಶ ಹೇಳುತ್ತಾನೆ.

ತ, ಥ ಗಳಿಗೆ ಧಕಾರ ಹೇಳುವ ಸೂತ್ರ.

**೫೫೧. ಝಷಸ್ತಥೋರ್ಧೋಽಧಃ || ೮-೨-೪೦ ||**

**ಝಷಃ ಪರಯೋಸ್ತಥೋಃ ಸ್ಯಾನ್ನತು ದಧಾತೇಃ ||**

ಝಷಃ, ತಥೋಃ, ಧಃ, ಅಧಃ || ನಾಲ್ಕು ಪದಗಳುಳ್ಳ ಸೂತ್ರ. ಝಷಃ ಪಂಚಮೀ. ತಶ್ಚ ಥ್‌ಚ ತಥೌ. ತಯೋಃ। ತಕಾರ ಥಕಾರಗಳಿಗೆ ಎಂದರ್ಥ. ಧಃಪ್ರಥಮಾನ್ತ. ಸೂತ್ರಾರ್ಥ—ಝಷಿನ ಪರದಲ್ಲಿರುವ ತಕಾರ ಥಕಾರಗಳಿಗೆ ಧಕಾರಾದೇಶ ಬರುತ್ತವೆ. ಆದರೆ ಧಾಧಾತುವಿನ ಧಕಾರವಾದರೆ ಅದಕ್ಕೆ ಬರುವುದಿಲ್ಲ. ಪ್ರಕೃತ ಝಷ್ ಹಕಾರಕ್ಕೆ ಬಂದ ಢಕಾರ. ಉವಹ್+ಥ ಎಂದಿರುವಾಗ "ಹೋಢಃ' ಸೂತ್ರದಿಂದ ಧಕಾರಕ್ಕೆ ಢಕಾರ ಬಂದಿದೆ. ಝಷಿನ ಪರದಲ್ಲಿ ಥಕಾರ ಇರುವುದರಿಂದ ಥಕಾರಕ್ಕೆ ಧಕಾರ ಬಂದರೆ ಉವಢ್+ಧ ಎಂದಾಗುತ್ತದೆ. 'ಷ್ಟುನಾಷ್ಟುಃ' ಸೂತ್ರದಿಂದ ಧಕಾರಕ್ಕೆ ಷ್ಟುತ್ವದಿಂದ ಢಕಾರ ಉವಢ್+ಢ. ಇಲ್ಲಿ ಪೂರ್ವದ ಢಕಾರಕ್ಕೆ ಲೋಪ ಹೇಳುತ್ತಾನೆ.

ಢಕಾರಕ್ಕೆ ಲೋಪ ಹೇಳುವ ಸೂತ್ರ.

**೫೫೧. ಢೋ ಢೇ ಲೋಪಃ || ೮-೩-೧೩ ||**

ತ್ರಿಪದ ಸೂತ್ರ. ಸ್ಪಷ್ಟಾರ್ಥಕವಾದುದರಿಂದ ವೃತ್ತಿ ಬರೆಯಲಿಲ್ಲ. ಸೂತ್ರಾರ್ಥ—ಢಕಾರಕ್ಕೆ ಢಕಾರ ಪರದಲ್ಲಿರುವಾಗ ಲೋಪ ಬರುತ್ತದೆ. ಢಃ ಷಷ್ಠೀ. ಪ್ರಕೃತ ಢಕಾರ ಪರದಲ್ಲಿರುವುದರಿಂದ ಮೊದಲನೆಯ ಢಕಾರಕ್ಕೆ ಲೋಪ ಬಂದರೆ ಉವ+ಢ ಎಂದಾಗುತ್ತದೆ. ಈಗ ವಕಾರೋತ್ತರ ಅಕಾರಕ್ಕೆ ಓತ್ವ ಹೇಳುತ್ತಾನೆ.

ಸಹ್, ವಹ್‌ಗಳ ಅಕಾರಕ್ಕೆ ಓತ್ವ ಹೇಳುವ ಸೂತ್ರ.

**೫೫೨. ಸಹಿವಹೋರೋದವರ್ಣಸ್ಯ || ೬-೩-೧೧೨ ।**

**ಅನಯೋರವರ್ಣಸ್ಯ ಓತ್ಸ್ಯಾಡ್ಢಲೋಪೇ । ಉವೋಢ । ಊಹೇ । ವೋಢಾ । ವಕ್ಷ್ಯತಿ । ಅವಾಕ್ಷೀತ್ । ಅವೋಢಾಮ್ । ಅವಾಕ್ಷುಃ । ಅವಾಕ್ಷೀಃ । ಅವೋಢಮ್ । ಅವೋಢ । ಅವಾಕ್ಷಮ್ । ಅವಾಕ್ಷ್ವ । ಅವಾಕ್ಷ್ಮ ॥ ಅವೋಢ । ಅವಕ್ಷಾತಾಮ್ । ಅವಕ್ಷತ । ಅವೋಢಾಃ । ಅವಕ್ಷಾಥಾಮ್ । ಅವೋಢ್ವಮ್ । ಅವಕ್ಷಿ । ಅವಕ್ಷ್ವಹಿ । ಅವಕ್ಷ್ಮಹಿ ||**

ಇತಿ ಭ್ವಾದಯಃ ||

ಸಹಿವಹೋಃ, ಓತ್, ಅವರ್ಣಸ್ಯ || ತ್ರಿಪದ ಸೂತ್ರ. 'ಢ್ರಲೋಪೇದೀ—' ಸೂತ್ರದಿಂದ ಢಲೋಪೇ ಪದಾನುವೃತ್ತಿ. ರಲೋಪಕ್ಕೆ ಸಂಭವವಿಲ್ಲವಾದುದರಿಂದ

ಅನುವೃತ್ತಿಯಿಲ್ಲ. **ಸೂತ್ರಾರ್ಥ—** ಸಹ್, ವಹ್ ಧಾತುಗಳ ಅಕಾರಕ್ಕೆ ಢಲೋಪ ಮಾಡಿರುವ ಢಕಾರ ಪರದಲ್ಲಿರುವಾಗ ಓಕಾರ ಆದೇಶವಾಗಿ ಬರುತ್ತದೆ. ಪ್ರಕೃತ ವಹಿನ ಅಕಾರಕ್ಕೆ ಢಲೋಪಪರದಲ್ಲಿರುವುದರಿಂದ ಓಕಾರ ಬಂದರೆ ಉವೋಢ ಎಂದಾಗುತ್ತದೆ. ಊಹಥುಃ—ಊಹ || ಉವಾಹ, ಉವಹ| ಊಹಿವ | ಊಹಿಮ || ಆ. – ಊಹೇ | ಊಹಾತೇ | ಊಹಿರೇ || ಊಹಿಷೇ | ಊಹಾಥೇ | ಊಹಿಢ್ವೇ || ಊಹೇ | ಊಹಿವಹೇ | ಊಹಿಮಹೇ ||

**ಲುಟ್** || ವಹ್ + ತಾ. 'ಹೋಢಃ' ವಢ್ + ತಾ. 'ಝಷಸ್ತಥೋರ್ಧೋಽಧಃ' ವಢ್ + ಧಾ. 'ಷ್ಟುನಾಷ್ಟುಃ' ವಢ್ + ಢಾ. 'ಢೋಢೇ ಲೋಪಃ' ವಢಾ. 'ಸಹಿವಹೋರೋದವರ್ಣಸ್ಯ' ವೋಢಾ| ವೋಢಾರೌ | ವೋಢಾರಃ || ವೋಢಾಸಿ | ವೋಢಾಸ್ಥಃ | **ವೋಢಾಸ್ಥ** || ವೋಢಾಸ್ಮಿ | ವೋಢಾಸ್ವಃ | ವೋಢಾಸ್ಮಃ || **ಆ.**— ವೋಢಾ | **ಇತ್ಯಾದಿ. ಲೃಟ್** || ವಹ್ + ಸ್ಯತಿ. 'ಹೋಢಃ' ವಢ್ + ಸ್ಯತಿ. 'ಷಢೋಃ ಕಃ ಸಿ' ವಕ್ + ಸ್ಯತಿ. 'ಆದೇಶಪ್ರತ್ಯಯಯೋಃ' ವಕ್ + ಷ್ಯತಿ. 'ಕಷಯೋರ್ಗೇಕ್ಷಃ' ವಕ್ಷ್ಯತಿ | ಇತ್ಯಾದಿ. **ಆ.**— ವಕ್ಷ್ಯತೇ. **ಲೋಟ್** || ವಹತು, ವಹತಾಮ್ || **ಲಙ್** || ಅವಹತ್, ಅವಹತ || **ವಿಧಿಲಿಙ್** || ವಹೇತ್, ವಹೇತ || **ಆಶೀರ್ಲಿಙ್** || ವಹ್ + ಯಾತ್ ಎಂದಿರುವಾಗ 'ವಚಿಸ್ವಪಿಯಜಾದೀನಾಂ ಕಿತಿ' ಸೂತ್ರದಿಂದ ವಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. ಉಹ್ಯಾತ್ | ಉಹ್ಯಾಸ್ತಾಮ್ | ಇತ್ಯಾದಿ. ಆ.— ವಹ್ + ಸೀಷ್ಟ. 'ಹೋಢಃ' ವಢ್ + ಸೀಷ್ಟ | 'ಷಢೋಃ ಕಃ ಸಿ' ವಕ್ + ಸೀಷ್ಟ | ಷತ್ವ. ಕ್ಷತ್ವ. ವಕ್ಷೀಷ್ಟ | ವಕ್ಷೀಯಾಸ್ತಾಮ್ | ವಕ್ಷೀರನ್ || ವಕ್ಷೀಷ್ಠಾಃ | ವಕ್ಷೀಯಾಸ್ಥಾಮ್ | ವಕ್ಷೀಢ್ವಮ್ || ವಕ್ಷೀಯ | ವಕ್ಷೀವಹಿ | ವಕ್ಷೀಮಹಿ || **ಲುಙ್** || ಅವಹ್ + ಸೀತ್. ಢತ್ವ, ಕತ್ವ ಷತ್ವ. 'ವದವ್ರಜ—' ಸೂತ್ರದಿಂದ ವೃದ್ಧಿ. ಅವಾಕ್ಷೀತ್. ಅವಹ್ + ಸ್ + ತಾಮ್. 'ಝಲೋಝಲಿ' ಸಲೋಪ. ಅವಹ್ + ತಾಮ್. 'ಹೋಢಃ' ಅವಢ್ + ತಾಮ್. ಧತ್ವ. ಅವಢ್ + ಧಾಮ್. ಷ್ಟುತ್ವ. ಅವಢ್ + ಢಾಮ್. 'ಢೋಢೇ ಲೋಪಃ' ಅವ + ಢಾಮ್. 'ಸಹಿವಹೋರೋ—' ಓತ್ವ. ಅವೋಢಾಮ್. ಅವಾಕ್ಷುಃ || ಅವಾಕ್ಷೀಃ | ಅವೋಢಂ | ಅವೋಢ || ಹಿಂದಿನಂತೆ ಪ್ರಕ್ರಿಯೆ. ಅವಾಕ್ಷಮ್ | ಅವಾಕ್ಷ್ವ | ಅವಾಕ್ಷ್ಮ || **ಆ.**— ಅವಹ್ + ಸ್ + ತ. ಹಿಂದಿನಂತೆ ಸಲೋಪ, ಢತ್ವ, ಧತ್ವ, ಷ್ಟುತ್ವ, ಢಲೋಪಃ ಓತ್ವ. ಅವೋಢ | ಅವಕ್ಷಾತಾಮ್ | ಅವಕ್ಷತ || ಅವೋಢಾಃ ಅವಕ್ಷಾಥಾಮ್ | ಅವೋಢ್ವಮ್ || ಅವಕ್ಷಿ | ಅವಕ್ಷ್ವಹಿ | ಅವಕ್ಷ್ಮಹಿ || **ಲೃಙ್** || ಲೃಟನಂತೆ ನೋಡಿಕೊಳ್ಳಬೇಕು. ಅವಕ್ಷ್ಯತ್, ಅವಕ್ಷ್ಯತ ||

ಹೀಗೆ ತಿಙಂತದಲ್ಲಿ ಭ್ವಾದಿಗಣಪಠಿತಗಳಾದ ಧಾತುರೂಪಗಳನ್ನು ಊಹಿಸಿ ತಿಳಿದುಕೊಳ್ಳಬೇಕು.

# ೨. ಅಥಾದಾದಯಃ

## ॥ ೫೦ ॥ ಅದ— ಭಕ್ಷಣೆ (ತಿನ್ನುವುದು)

ಎರಡನೇ ಗಣ. ಅದ್ ಮುಂತಾದ ಧಾತುಗಳು ಇಲ್ಲಿ ನಿರ್ದಿಷ್ಟವಾಗಿವೆ. ಇಲ್ಲಿ ಬರುವ ಶಪ್ ವಿಕರಣಕ್ಕೆ ಲುಕ್ ಹೇಳುವುದರಿಂದ ಇದಕ್ಕೆ ಲುಗ್ವಿಕರಣವೆಂದು ಹೆಸರು ಅದ್, ಅನಿಟ್ ಧಾತು. ಪರಸ್ಮೈಪದಿ. ಲಟನಲ್ಲಿ ಶಪ್ ವಿಕರಣ ಬಂದಾಗ ಅದಕ್ಕೆ ಲೋಪ ಹೇಳುತ್ತಾನೆ.

ಶಪಿಗೆ ಲುಕ್ ಹೇಳುವ ಸೂತ್ರ.

**೫೫೩. ಅದಿಪ್ರಭೃತಿಭ್ಯಃ ಶಪಃ ॥ ೨–೪–೭೨ ॥**

**ಲುಕ್ ಸ್ಯಾತ್ । ಅತ್ತಿ–ಅತ್ತಃ–ಅದನ್ತಿ । ಅತ್ಸಿ–ಅತ್ಥಃ–ಅತ್ಥ । ಅದ್ಮಿ–ಅದ್ವಃ– ಅದ್ಮಃ ॥**

ದ್ವಿಪದ ಸೂತ್ರ. 'ಣ್ಯಕ್ಷತ್ರಿಯಾರ್ಷ—' ಸೂತ್ರದಿಂದ 'ಲುಕ್' ಅನುವೃತ್ತ ವಾಗುತ್ತದೆ. **ಸೂತ್ರಾರ್ಥ**—ಅದ್ ಮುಂತಾದ ಧಾತುಗಳ ಪರದಲ್ಲಿರುವ ಶಪಿಗೆ ಲುಕ್ ಬರುತ್ತದೆ. ಲುಕಿನಿಂದ ಲೋಪ ಹೇಳಿರುದರಿಂದ ತನ್ನಿಮಿತ್ತಿಕವಾಗಿ ಅಂಗ ಕಾರ್ಯ ಬರುವುದಿಲ್ಲ. ಅದ್+ತಿ. 'ಖರಿಚ' ಅತ್+ತಿ=ಅತ್ತಿ. ಅದ್+ತಃ =ಅತಃ । ಅದ್+ಅನ್ತಿ=ಅದನ್ತಿ. ಅದ್+ಸಿ=ಅತ್ಸಿ. ಅದ್+ಥಸ್= ಅತ್ಥಃ । ಅತ್ಥ. ಅದ್ಮಿ. ಖರ್ ಪರದಲ್ಲಿಲ್ಲದಿರುವುದರಿಂದ ಚರ್ತ್ವವಿಲ್ಲ. ಅದ್ವಃ । ಅದ್ಮಃ॥ **ಲಿಟ್** ॥ ಅದ್+ಲಿಟ್ ಎಂದಿರುವಾಗ ಅದಿಗೆ ವಿಕಲ್ಪವಾಗಿ ಘಸ್ಲೃ ಆದೇಶ ಹೇಳು ತ್ತಾನೆ.

ಅದಿಗೆ ಘಸ್ಲೃ ಆದೇಶ ಹೇಳುವ ಸೂತ್ರ.

**೫೫೪. ಲಿಟ್ಯನ್ಯತರಸ್ಯಾಮ್ ॥ ೨–೪–೪೦ ॥**

**ಅದೋ ಘಸ್ಲೃ ವಾ ಸ್ಯಾಲ್ಲಿಟಿ । ಜಘಾಸ । ಉಪಧಾಲೋಪಃ ॥**

ಲಿಟಿ, ಅನ್ಯತರಸ್ಯಾಮ್. ದ್ವಿಪದ ಸೂತ್ರ. ಅನ್ಯರತಸ್ಯಾಮ್ ಎಂದರೆ ವಿಕಲ್ಪ. 'ಅದೋ ಜಗ್ಧಿಃ—' ಸೂತ್ರದಿಂದ 'ಅದಃ', ಲುಙ್‌ಸನೋರ್ಘಸ್ಲೃ' ಸೂತ್ರದಿಂದ 'ಘಸ್ಲೃ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಅದ್ ಧಾತುವಿಗೆ ಲಿಟ್ ಪರದಲ್ಲಿರುವಾಗ ಘಸ್ಲೃ ಆದೇಶ ವಿಕಲ್ಪವಾಗಿ ಬರುತ್ತದೆ. ಅನೇಕಾಲಾದುದ ರಿಂದ ಸರ್ವಾದೇಶ. ೣಕಾರ ಇತ್ತಾಗುತ್ತದೆ. ಘಸ್+ಲಿಟ್. ಲಿಟಿಗೆ ಣಲಾದಿ. ದ್ವಿತ್ವ.

ಘಸ್‌ಘಸ್+ಅ. 'ಹಲಾದಿಃ ಶೇಷಃ.' ಘಘಸ್+ಅ. "ಅಭ್ಯಾಸೇ ಚರ್ಚ." ಗಘಸ್+ಅ. 'ಕುಹೋಶ್ಚುಃ |" ಜಘಸ್+ಅ. 'ಅತಉಪಧಾಯಾಃ"ಜಘಾಸ. ಜಘಸ್ ಅಂಗವಾಗುತ್ತದೆ. ಜಘಸ್+ಅತುಸ್ ಎಂದಿರುವಾಗ 'ಗಮಹನ -- (ಸೂ. ೫೦೬) ಸೂತ್ರದಿಂದ ಉಪಧಾಲೋಪ. ಜಘ್ಸ್+ಅತುಸ್. ಘಸಿನ ಸಕಾರ ಆದೇಶವಾಗಲೀ ಪ್ರತ್ಯಯಾವಯವವಾಗಲೀ ಆಗದಿರುವುದರಿಂದ ಕವರ್ಗದ ಪರದಲ್ಲಿ ಇದ್ದರೂ 'ಆದೇಶಪ್ರತ್ಯಯಯೋಃ" ಸೂತ್ರದಿಂದ ಷತ್ವ ಬರುವುದಿಲ್ಲ. ಅದಕ್ಕೋಸ್ಕರ ವಿಶೇಷ ಸೂತ್ರ ಹೇಳುತ್ತಾನೆ.

ಶಾಸ್, ವಸ್, ಘಸ್ ಗಳ ಸಕಾರಕ್ಕೆ ಷತ್ವ ಹೇಳುವ ಸೂತ್ರ.

**೫೫೫. ಶಾಸಿವಸಿಘಸೀನಾಂ ಚ || ೮-೩-೬೦ ||**

**ಇಣ್‌ಕುಭ್ಯಾಂ ಪರಸ್ಯೈಷಾಂ ಸಸ್ಯ ಷಃ ಸ್ಯಾತ್ | ಘಸ್ಯ ಚರ್ತ್ವಮ್ | ಜಕ್ಷತುಃ | ಜಕ್ಷುಃ | ಜಘಸಿಥ | ಜಕ್ಷಥುಃ | ಜಕ್ಷ | ಜಘಾಸ, ಜಘಸ | ಜಕ್ಷಿವ | ಜಕ್ಷಿಮ || ಆದ | ಆದತುಃ | ಆದುಃ ||**

ದ್ವಿಪದ ಸೂತ್ರ. 'ಸಹೇಃ ಸಾಡಃ ಸಃ" ಸೂತ್ರದಿಂದ "ಸಃ" ಪದವು ಅನುವೃತ್ತವಾಗುತ್ತದೆ. "ಇಣ್ಕೋಃ", "ಅಪದಾನ್ತಸ್ಯ ಮೂರ್ಧನ್ಯಃ" ಎರಡು ಅಧಿಕಾರಸೂತ್ರಗಳಿವೆ. **ಸೂತ್ರಾರ್ಥ**—ಇಣ್ ಕವರ್ಗಗಳ ಪರದಲ್ಲಿರುವ ಶಾಸ್ ವಸ್, ಘಸ್ ಧಾತುಗಳ ಸಕಾರಕ್ಕೆ ಮೂರ್ಧನ್ಯಾದೇಶ. ಅಂದರೆ ಷಕಾರವು ಬರುತ್ತದೆ. ಜಘ್ಸ್+ಅತುಸ್ ಎಂದಿರುವಾಗ ಕವರ್ಗದ (ಘ) ಪರದಲ್ಲಿ ಘಸಿನ ಸಕಾರವಿರುವುದರಿಂದ ಷತ್ವ ಬಂದರೆ ಜಘ್ಷ್+ಅತುಸ್ ಎಂದಾಗುತ್ತದೆ. 'ಖರಿಚ' ಸೂತ್ರದಿಂದ ಘಕಾರಕ್ಕೆ ಕಕಾರಾದೇಶ. ಕಷಗಳಿಗೆ ಕ್ಷಕಾರ. ಜಕ್ಷತುಃ || ಜಕ್ಷ ಅಂಗವಾಗುತ್ತದೆ, ಜಕ್ಷುಃ || ಜಘಸ್+ಥ ಎಂದಿರುವಾಗ ಘಸ್ ತಾಸಿನಲ್ಲಿ ಇಲ್ಲದಿರುವುದರಿಂದ ಥ ಪ್ರತ್ಯಯಕ್ಕೆ ನಿತ್ಯವಾಗಿ ಇಡಾಗಮ ಬರುತ್ತದೆ. 'ಉಪದೇಶೇಽತ್ವತಃ' ಸೂತ್ರವು ಇಲ್ಲಿ ಪ್ರವರ್ತಿಸುವುದಿಲ್ಲ. ಜಘಸಿಥ. ಕಿತ್ ಪ್ರತ್ಯಯದಲ್ಲಿ ಮಾತ್ರ ಉಪಧಾಲೋಪ ವಾಗುವುದರಿಂದ ಏಕವಚನಗಳಲ್ಲಿ ಉಪಧಾಲೋಪವಿಲ್ಲ. ಜಕ್ಷಥುಃ | ಜಕ್ಷ || ಜಘಾಸ, ಜಘಸ. ('ಣಲುತ್ತಮೋವಾ') ಜಕ್ಷಿವ | ಜಕ್ಷಿಮ |, ಘಸಾದೇಶ ಬಾರದಿದ್ದರೆ ಅದಿಗೇ ದ್ವಿತ್ವ. ಅದ್‌ಅದ್+ಅ. 'ಹಲಾದಿಃ ಶೇಷಃ' ಅಅದ್+ಅ. 'ಅತ ಆದೇಃ' ಸೂತ್ರದಿಂದ ಅಭ್ಯಾಸಕ್ಕೆ ದೀರ್ಘ. ಆ+ಅದ್+ಅ. ಸವರ್ಣದೀರ್ಘ. ಆದ. ಆದ್ ಅಂಗವಾಗುತ್ತದೆ. ಆದತುಃ—ಆದುಃ || ಆದ್+ಥ ಎಂದಿರುವಾಗ ಧಾತುವು ಅನಿಟಾದುದರಿಂದ ಪಾಣಿನಿಮತದಿಂದ ನಿಷೇಧವೂ ಭಾರದ್ವಾಜಮತದಿಂದ ವಿಕಲ್ಪ ಇಟ್ ಪ್ರಾಪ್ತವಾದರೆ ನಿತ್ಯ ಇಡಾಗಮ ಹೇಳುತ್ತಾನೆ.

ಅದಾದಿಗಳ ಥಲಿಗೆ ಇಡಾಗಮ ಹೇಳುವ ಸೂತ್ರ.

**೫೫೬. ಇಡತ್ತ್ಯರ್ತಿವ್ಯಯತೀನಾಮ್ ॥ ೬-೨-೬೬ ॥**

**ಅದ್, ಋ, ವ್ಯೇಞ್ ಏಭ್ಯಸ್ಥಲೋ ನಿತ್ಯಮಿಟ್ ಸ್ಯಾತ್ । ಆದಿಥ । ಅತ್ತಾ । ಅತ್ಸ್ಯತಿ । ಅತ್ತು, ಅತ್ತಾತ್ । ಅತ್ತಾಮ್ । ಅದನ್ತು ॥**

ಇಟ್, ಅತ್ತ್ಯರ್ತಿವ್ಯಯತೀನಾಮ್ ॥ ದ್ವಿಪದ ಸೂತ್ರ. ಅತ್ತಿ, ಅರ್ತಿ, ವ್ಯಯತಿ ಗಳನ್ನು ಅದ್, ಋ, ವ್ಯೇಞ್‌ಗಳಿಗೆ ಶ್ತಿಪ್ ಪ್ರತ್ಯಯ ಸೇರಿಸಿ ನಿರ್ದೇಶಿಸಿರುತ್ತಾನೆ. ಪಂಚಮ್ಯರ್ಥದಲ್ಲಿ ಷಷ್ಠೀ ಬಂದಿದೆ. 'ಅಚಸ್ತಾಸ್ವತ್—' ಸೂತ್ರದಿಂದ 'ಥಲಿ' ಪದವು ಅನುವೃತ್ತವಾಗಿ ಷಷ್ಠ್ಯನ್ತವಾಗಿ ಪರಿಣತವಾಗುತ್ತದೆ. **ಸೂತ್ರಾರ್ಥ**—ಅದ್, ಋ, ವ್ಯೇಞ್ ಈ ಮೂರು ಧಾತುಗಳ ಪರದಲ್ಲಿರುವ ಥಲಿಗೆ ನಿತ್ಯಾವಾಗಿ ಇಡಾಗಮ ಬರುತ್ತದೆ. ಆದ್+ಥ ಎಂಬಲ್ಲಿ ಇಡಾಗಮ ಬಂದರೆ ಆದಿಥ ಎಂದಾಗುತ್ತದೆ. ಆದಥುಃ । ಆದ ॥ ಆದ । ಆದಿವ । ಆದಿಮ ॥

**ಲುಟ್** ॥ ತಾಸಿಗೆ ಇಡಾಗಮವಿಲ್ಲ. ಅದ್+ತಾ ಎಂದಿರುವಾಗ 'ಖರಿಚ' ಸೂತ್ರದಿಂದ ದಕಾರಕ್ಕೆ ತಕಾರಾದೇಶ. ಅತ್ತಾ । ಅತ್ತಾರೌ । ಅತ್ತಾರಃ ॥ ಅತ್ತಾಸಿ । ಅತ್ತಾಸ್ಥಃ । ಅತಾಸ್ಥ ಅತ್ತಾಸ್ಮಿ । ಅತ್ತಾಸ್ವಃ । ಅತ್ತಾಸ್ಮಃ ॥ **ಲೃಟ್** ॥ ಅದ್+ಸ್ಯತಿ. ಚರ್ತ್ವ. ಅತ್ಸ್ಯತಿ । ಅತ್ಸ್ಯತಃ । ಅತ್ಸ್ಯನ್ತಿ ॥ ಅತ್ಸ್ಯಸಿ । ಅತ್ಸ್ಯಥಃ । ಅತ್ಸ್ಯಥ ॥ ಅತ್ಸ್ಯಾಮಿ । ಅತ್ಸ್ಯಾವಃ । ಅತ್ಸ್ಯಾಮಃ ॥ **ಲೋಟ್** ॥ ಅದ್+ಅ+ತು. ಶಪಿಗೆ ಲುಕ್. ದಕಾರಕ್ಕೆ ಚರ್ತ್ವ. ಅತ್ತು, ಅತ್ತಾತ್ । ಅತ್ತಾಮ್ । ಅದನ್ತು ॥ ಅದ್+ಹಿ ಎಂದಿರುವಾಗ ಹಿಗೆ ಧಿ ಆದೇಶ ಹೇಳುತ್ತಾನೆ.

ಹಿಗೆ ಧಿ ಆದೇಶ ಹೇಳುವ ಸೂತ್ರ.

**೫೫೭. ಹುಝಲ್ಭ್ಯೋ ಹೇರ್ಧಿಃ ॥ ೬-೪-೧೦೧ ॥**

**ಹೋರ್ಝಲನ್ತೇಭ್ಯಶ್ಚ ಹೇರ್ಧಿಃ ಸ್ಯಾತ್ । ಅದ್ಧಿ, ಅತ್ತಾತ್ । ಅತ್ತಮ್ । ಅತ್ತ । ಅದಾನಿ । ಅದಾವ । ಅದಾಮ ॥**

ಹುಝಲ್ಭ್ಯಃ, ಹೇಃ, ಧಿಃ ॥ ತ್ರಿಪದ ಸೂತ್ರ. ಹುಝಲ್ಭ್ಯಃ ಪಂಚಮೀ. 'ಅಂಗಸ್ಯ' ಅಧಿಕಾರ. ಪಂಚಮ್ಯನ್ತವಾಗಿ ವಿಪರಿಣತವಾಗುತ್ತದೆ. ಝಲ್ ಅದಕ್ಕೆ ವಿಶೇಷಣ. **ಸೂತ್ರಾರ್ಥ**—ಹು ಧಾತುವಿನ ಪರದಲ್ಲಿರುವ, ಝಲನ್ತವಾದ ಅಂಗದ ಪರದಲ್ಲಿರುವ ಹಿಗೆ ಧಿ ಆದೇಶ ಬರುತ್ತದೆ. ಪ್ರಕೃತ ಝಲನ್ತವಾದ ಅಂಗ ಅದ್. ಇದರ ಪರದಲ್ಲಿರುವ ಹಿಗೆ ಧಿ ಅದೇಶ ಬಂದರೆ ಅದ್+ಹಿ=ಅದ್+ಧಿ=ಅದ್ಧಿ ಎಂದಾಗುತ್ತದೆ. ಅತ್ತಾತ್ । ಅತ್ತಮ್ । ಅತ್ತ ॥ ಅದಾನಿ । ಅದಾವ । ಅದಾಮ ॥

ಲಙ್ || ಆದ್ + ತ್. 'ಆಡಜಾದೀನಾಮ್' ಆ + ಅದ್ + ತ್. 'ಆಟಶ್ಚ' ಸೂತ್ರದಿಂದ ವೃದ್ಧಿ. ಆದ್ + ತ್ ಎಂದಿರುವಾಗ ತಿಪಿಗೆ ಅಡಾಗಮ ಹೇಳುತ್ತಾನೆ.

ಅದಿನ ಪರದ ತಿಪಿಗೆ ಅಡಾಗಮ ಹೇಳುವ ಸೂತ್ರ.

**೫೫೮. ಅದಃ ಸರ್ವೇಷಾಮ್ || ೭-೩-೧೦೦ ||**

**ಅದಃ ಪರಸ್ಯಾಪೃಕ್ತಸಾರ್ವಧಾತುಕಸ್ಯ ಅಟ್ ಸ್ಯಾತ್ ಸರ್ವಮತೇನ|| ಆದತ್ | ಆತ್ತಾಮ್ | ಆದನ್ || ಆದಃ | ಆತ್ತಮ್ | ಆತ್ತ || ಆದಮ್ | ಆದ್ವ | ಆದ್ಮ || ಅದ್ಯಾತ್ | ಅದ್ಯಾತಾಮ್ | ಅದ್ಯುಃ || ಅದ್ಯಾತ್ | ಅದ್ಯಾಸ್ತಾಮ್ ಅದ್ಯಾಸುಃ ||**

ದ್ವಿಪದ ಸೂತ್ರ. 'ಗುಣೋಽಪೃಕ್ತೇ' ಸೂತ್ರದಿಂದ 'ಅಪೃಕ್ತೇ', 'ತುರುಸ್ತುಶಮ್ಯಮಃ-' ಸೂತ್ರದಿಂದ 'ಸಾರ್ವಧಾತುಕೇ' ಪದಗಳು ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತವೆ. 'ಅಡ್‌ಗಾರ್ಗ್ಯಗಾಲವಯೋಃ' ಸೂತ್ರದಿಂದ 'ಅಟ್' ಅನುವೃತ್ತವಾಗುತ್ತದೆ. 'ಗಾರ್ಗ್ಯಗಾಲವಯೋಃ' ಪದಾನುವೃತ್ತಿಯಿಲ್ಲವೆಂದು ಸೂಚಿಸಲು 'ಸರ್ವೇಷಾಮ್' ಎಂದು ಸೂತ್ರದಲ್ಲಿ ಹೇಳಿದೆ. ಅದಃ ಪಂಚಮೀ. **ಸೂತ್ರಾರ್ಥ**—ಅದ್ ಧಾತುವಿನ ಪರದಲ್ಲಿರುವ ಅಪೃಕ್ತವಾದ ಸಾರ್ವಧಾತುಕ ಪ್ರತ್ಯಯಕ್ಕೆ ಎಲ್ಲಾ ಋಷಿಗಳ ಮತದಲ್ಲಿಯೂ(ನಿತ್ಯ) ಅಡಾಗಮ ಬರುತ್ತದೆ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ತಿಪಿನಲ್ಲಿ 'ಇತಶ್ಚ' ಸೂತ್ರದಿಂದ ಇಕಾರ ಇತ್ತಾದುದರಿಂದ ತ್ ಅಪೃಕ್ತವಾದ ಸಾರ್ವಧಾತುಕವಾಗುತ್ತದೆ. ಆದ್ + ಅತ್ = ಆದತ್. ಆದ್ + ತಾಮ್ = ಆತಾಮ್. ಆದನ್ ಆದ್ + ಸ್. ಇಲ್ಲಿಯೂ ಸಿಪಿಗೆ ಅಡಾಗಮ. ಸಕಾರಕ್ಕೆ ರುತ್ವವಿಸರ್ಗ. ಆದಃ | ಆತ್ತಮ್ | ಆತ್ತ || ಆದಮ್ | ಆದ್ವ | ಆದ್ಮ ||

**ವಿಧಿಲಿಙ್** || ಅದ್ + ಯಾಸ್‌ತ್. 'ಲಿಙಃ ಸಲೋಪೋಽನನ್ತ್ಯಸ್ಯ' ಸೂತ್ರದಿಂದ ಸರ್ವತ್ರ ಸಲೋಪ. ಅದ್ಯಾತ್ | ಅದ್ಯಾತಾಮ್ | ಅದ್ಯುಃ || ಅದ್ಯಾಃ | ಅದ್ಯಾತಮ್ | ಅದ್ಯಾತ || ಅದ್ಯಾಮ್ | ಆದ್ಯಾವ | ಅದ್ಯಾಮ || **ಆಶೀರ್ಲಿಙ್** || ಆರ್ಧಧಾತುಕವಾದುದರಿಂದ ಸಲೋಽಪವಿಲ್ಲ. ಅದ್ + ಯಾಸ್‌ತ್ ಎಂದಿರುವಾಗ 'ಸ್ಕೋಃ ಸಂಯೋಗಾದ್ಯೋರನ್ತೇ ಚ' ಸೂತ್ರದಿಂದ ಸಲೋಪ. ಅದ್ಯಾತ್ | ಅದ್ಯಾಸ್ತಾಮ್ | ಅದ್ಯಾಸುಃ || ಅದ್ಯಾಃ | ಅದ್ಯಾಸ್ತಮ್ | ಅದ್ಯಾಸ್ತ || ಅದ್ಯಾಸಮ್ | ಅದ್ಯಾಸ್ವ | ಅದ್ಯಾಸ್ಮ || **ಲುಙ್** || ಇಲ್ಲಿ ಅದಿಗೆ ಘಸ್ಲಾದೇಶ ಹೇಳುತ್ತಾನೆ.

ಅದಿಗೆ ಘಸ್ಲಾದೇಶ ಹೇಳುವ ಸೂತ್ರ.

**೫೫೯. ಲುಙ್‌ಸನೋರ್ಘಸ್ಲೃ ॥ ೨-೪-೩೭ ॥**

**ಅದೋ ಘಸ್ಲೃ ಸ್ಯಾಲ್ಲುಙಿ ಸನಿ ಚ । ಌದಿತ್ತ್ವಾದಙ್ । ಅಘಸತ್ । ಆತ್ಸ್ಯತ್ ॥**

ಲುಙ್‌ಸನೋಃ, ಘಸ್ಲೃ ॥ ದ್ವಿಪದ ಸೂತ್ರ. 'ಅದೋಜಗ್ಧಿಃ—' ಸೂತ್ರದಿಂದ 'ಅದಃ' ಅನುವೃತ್ತಿ. ಲುಙ್ ಚ ಸನ್ ಚ ಲುಙ್‌ಸನೌ. ತಯೋಃ ಲುಙ್‌ಸನೋಃ । ಸಪ್ತಮೀ. **ಸೂತ್ರಾರ್ಥ**—ಅದ್ ಧಾತುವಿಗೆ ಲುಙ್, ಸನ್ ಪ್ರತ್ಯಯಗಳು ಪರದಲ್ಲಿರುವಾಗ ಘಸ್ಲೃ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. ಪ್ರಕೃತ ಲುಙ್ ಪರವಾದುದರಿಂದ ಆದೇಶ. ಌಕಾರ ಇತ್. ಅಘಸ್ + ತ್ ಎಂದಿರುವಾಗ ಚ್ಲಿ ವಿಕರಣ ಬಂದರೆ ಧಾತು ಌದಿತ್ತಾದುದರಿಂದ 'ಪುಷಾದಿದ್ಯುತಾದಿ—' ಸೂತ್ರದಿಂದ ಚ್ಲಿಗೆ ಅಙಾದೇಶ. ಙಕಾರ ಇತ್. ಅಘಸತ್ । ಅಘಸತಾಮ್ । ಅಘಸನ್ ॥ ಅಘಸಃ । ಅಘಸತಮ್ । ಅಘಸತ ॥ ಅಘಸಮ್ । ಅಘಸಾವ । ಅಘಸಾಮ ॥

**ಲೃಙ್** ॥ ಆತ್ಸ್ಯತ್ । ಆತ್ಸ್ಯತಾಮ್ । ಆತ್ಸ್ಯನ್ ॥ ಇತ್ಯಾದಿ. ಅನಿಟ್ ಧಾತುವಾದುದರಿಂದ ಸ್ಯಕ್ಕೆ ಇಡಾಗಮವಿಲ್ಲ.

**॥ ೫೧ ॥ ಹನ ಹಿಂಸಾಗತ್ಯೋಃ (ಹಿಂಸಿಸು, ಹೋಗು.)**

**ಹನ್ತಿ ॥**

ಹನ ಧಾತು. ಅಕಾರ ಇತ್. ಅನಿಟ್. ಹನ್ + ಅ + ತಿ. 'ಅದಿಪ್ರಭೃತಿಭ್ಯಃ—' ಸೂತ್ರದಿಂದ ಶಪಿಗೆ ಲುಕ್. ಹನ್‌ತಿ. 'ನಶ್ಚಾಪದಾನ್ತಸ್ಯ ಝಲಿ.' ನಕಾರಕ್ಕೆ ಅನುಸ್ವಾರ. 'ಅನುಸ್ವಾರಸ್ಯಯಯಿ ಪರಸವರ್ಣಃ' ಹನ್ತಿ. ಹನ್‌ತಸ್ ಎಂದಿರುವಾಗ ನಕಾರಕ್ಕೆ ಲೋಪ ಹೇಳುತ್ತಾನೆ.

ವನತ್ಯಾದಿಗಳ ನಕಾರಕ್ಕೆ ಲೋಪ ಹೇಳುವ ಸೂತ್ರ.

**೫೬೦. ಅನುದಾತ್ತೋಪದೇಶವನತಿತನೋತ್ಯಾದೀನಾಮನುನಾಸಿಕಲೋಪೋ ಝಲಿ ಕ್ಙಿತಿ ॥ ೬-೪-೩೭ ॥**

**ಅನುನಾಸಿಕಾನ್ತಾನಾಮೇಷಾಂ ವನತೇಶ್ಚ ಲೋಪಃ ಸ್ಯಾಜ್ಝಲಾದೌ ಕಿತಿ ಙಿತಿ ಪರೇ । ಯಮಿರಮಿನಮಿಗಮಿಹನಿಮನ್ಯತಯೋಽನುದಾತ್ತೋಪದೇಶಾಃ ॥ ತನುಕ್ಷಣುಕ್ಷಿಣುಋಣುತೃಣುಘೃಣುವನುಮನುತನೋತ್ಯಾದಯಃ ॥ ಹತಃ । ಘ್ನನ್ತಿ । ಹಂಸಿ । ಹಥಃ । ಹಥ ॥ ಹನ್ಮಿ । ಹನ್ವಃ । ಹನ್ಮಃ ॥ ಜಘಾನ । ಜಘ್ನತುಃ । ಜಘ್ನುಃ ॥**

ಅನುದಾತ್ತೋಪದೇಶವನತಿತನೋತ್ಯಾದೀನಾಂ, /ಅನುನಾಸಿಕ, ಲೋಪಃ, ಝಲಿ, ಕ್ಙಿತಿ || ಐದು ಪದಗಳುಳ್ಳ ಸೂತ್ರ. ಅನುನಾಸಿಕ ಎಂಬುದು ಲುಪ್ತಷಷ್ಠೀಕ ಅದು ಅನುದಾತ್ತೋಪದೇಶಗಳಿಗೆ ಮಾತ್ರ ವಿಶೇಷಣ. ಝಲಿ ಎಂಬುದು ಕ್ಙಿತಿ. ಎಂಬುವಕ್ಕೆ ವಿಶೇಷಣ. ತದಾದಿಲಾಭ. **ಸೂತ್ರಾರ್ಥ**—ಅನುನಾಸಿಕಾನ್ತವಾದ, ಅನುದಾತ್ತೋಪದೇಶಧಾತುಗಳಿಗೂ ವನತಿ, ತನೋತ್ಯಾದಿಗಳಿಗೂ ಝಲಾದಿಯಾದ ಕಿತ್ ಙಿತ್ ಪ್ರತ್ಯಯ ಪರದಲ್ಲಿರುವಾಗ ಲೋಪ ಬರುತ್ತದೆ. 'ಅಲೋಽನ್ತ್ಯಸ್ಯ' ಸೂತ್ರದಿಂದ ಅಂತ್ಯಕ್ಕೆ ಲೋಪ. ಯಮಿ ಮುಂತಾದ ಆರು ಧಾತುಗಳು ಅನುದಾತ್ತೋಪದೇಶಗಳು. ತನು ಮುಂತಾದ ಎಂಟುಧಾತುಗಳು ತನೋತ್ಯಾದಿಗಳು. ಹನ್ ಧಾತು ಅನುನಾಸಿಕಾ (ನ) ನ್ತವಾಗಿ ಅನುದಾತ್ತೋಪದೇಶದಲ್ಲಿ ಸೇರುತ್ತದೆ. 'ಸಾರ್ವಧಾತುಕಮಪಿತ್' ಸೂತ್ರದಿಂದ ಲಡಾದಿಸಾರ್ವಧಾತುಕಗಳಲ್ಲಿ ದ್ವಿವಚನ, ಬಹುವಚನಗಳು ಙಿತ್ತಾಗುತ್ತವೆ. ತಸ್ ಝಲಾದಿ ಙಿತ್ತಾದುದರಿಂದ ಹನಿನ ನಕಾರಕ್ಕೆ ಲೋಪಬಂದರೆ ಹತಃ || ಹನ್ + ಅನ್ತಿ ಎಂದಿರುವಾಗ 'ಗಮಹನಜನ–' (ಸೂ. ೫೦೬) ಸೂತ್ರದಿಂದ ಧಾತುವಿನ ಉಪಧೆಗೆ ಲೋಪ. ಹ್ನ್ + ಅನ್ತಿ. ಹಕಾರಕ್ಕೆ ನಕಾರಪರವಾದುದರಿಂದ 'ಹೋ ಹನ್ತೇರ್ಞ್ಣಿನ್ನೇಷು' ಸೂತ್ರದಿಂದ ಹಕಾರಕ್ಕೆ ಘಕಾರಾದೇಶ. ಘ್ನ್ + ಅನ್ತಿ = ಘ್ನನ್ತಿ । ಹನ್ + ಸಿ. 'ನಶ್ಚಾಪದಾನ್ತಸ್ಯಝಲಿ' ನಕಾರಕ್ಕೆ ಅನುಸ್ವಾರ. ಯಮ್ ಪರದಲ್ಲಿಲ್ಲದಿರುವುದರಿಂದ ಪರಸವರ್ಣವಿಲ್ಲ. ಹಂಸಿ. ಹನ್ + ಥಃ | ನಲೋಪ. ಹಥಃ | ಹಥ || ಹನ್ಮಿ | ಹನ್ವಃ ಹನ್ಮಃ || ಝಲಾದಿ ಙಿತ್ ಪರದಲ್ಲಿಲ್ಲದಿರುವುದರಿಂದ ನಕಾರಕ್ಕೆ ಲೋಪವಿಲ್ಲ.

**ಲಿಟ್** || ಹನ್‌ಹನ್ + ಅ. 'ಹಲಾದಿಃ ಶೇಷಃ' ಹಹನ್ + ಅ. 'ಕುಹೋಶ್ಚುಃ' ಅಭ್ಯಾಸಹಕಾರಕ್ಕೆ ಜಕಾರ. ಜಹನ್ + ಅ. 'ಹೋಹನ್ತೇಃ––' ಸೂತ್ರದಿಂದ ಧಾತುಹಕಾರಕ್ಕೆ ಘಕಾರಾದೇಶ. 'ಅತಉಪಧಾಯಾಃ' ವೃದ್ಧಿ. ಜಘಾನ. ಜಹನ್ + ಅತುಸ್. 'ಗಮಹನ –' ಸೂತ್ರದಿಂದ ಉಪಧಾಲೋಪ. ಜಹ್ನ್ + ಅತುಸ್. 'ಹೋಹನ್ತೇರ್ಞ್ಣಿನ್ನೇಷು' ಸೂತ್ರದಿಂದ ಹಕಾರಕ್ಕೆ ಘಕಾರ. ಜಘ್ನತುಃ । ಜಘ್ನುಃ || ಜಹನ್ + ಥ. ಭಾರದ್ವಾಜನಿಯಮದಿಂದ ಇಟ್ ಬಂದರೆ ಜಹನ್ + ಇಥ ಎಂದಿರುವಾಗ ಹಕಾರಕ್ಕೆ ನಕಾರಾದಿಗಳು ಪರದಲ್ಲಿಲ್ಲದಿರುವುದರಿಂದ ಕುತ್ವವು ಬಾರದಿದ್ದರೆ ಇಲ್ಲಿ ಕುತ್ವ ಹೇಳುತ್ತಾನೆ.

ಹನ್ ಧಾತುವಿನ ಹಕಾರಕ್ಕೆ ಕುತ್ವ ಹೇಳುವ ಸೂತ್ರ.

**೫೭೧. ಅಭ್ಯಾಸಾಚ್ಚ || ೭–೩–೫೫ ||**

**ಅಭ್ಯಾಸಾತ್ಪರಸ್ಯ ಹನ್ತೇರ್ಹಸ್ಯ ಕುತ್ವಂ ಸ್ಯಾತ್ ॥ ಜಘನಿಥ, ಜಘನ್ಥ | ಜಘ್ನಥುಃ । ಜಘ್ನ | ಜಘಾನ, ಜಘನ । ಜಘ್ನಿವ | ಜಘ್ನಿಮ | ಹನ್ತಾ | ಹನಿಷ್ಯತಿ | ಹನ್ತು–ಹತಾತ್ | ಹತಾಮ್ | ಘ್ನನ್ತು ||**

ಅಭ್ಯಾಸಾತ್, ಚ | ದ್ವಿಪದ ಸೂತ್ರ. 'ಹೋ ಹನ್ತೇಃ—' ಸೂತ್ರದಿಂದ 'ಹನ್ತೇಃ', ಚಜೋಃ ಕು ಘಿಣ್ಣ್ಯತೋಃ' ಸೂತ್ರದಿಂದ 'ಕುಃ' ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ—ಅಭ್ಯಾಸದ ಪರದಲ್ಲಿರುವ ಹನ್ ಧಾತುವಿನ ಹಕಾರಕ್ಕೆ ಕುತ್ವ ಬರುತ್ತದೆ. ಪ್ರಕೃತ ಅಭ್ಯಾಸ ಜಕಾರ. ಇದರ ಪರದಲ್ಲಿ ಹನಿನ ಹಕಾರಕ್ಕೆ ಕುತ್ವ ಬಂದರೆ ಘಕಾರ ಜಘನಿಥ. ಥಲಿಗೆ ಇಡಾಗಮ ಬಾರದಿದ್ದರೆ ಹಿಂದಿನಂತೆ ಧಾತುವಿನ ಹಕಾರಕ್ಕೆ ಕುತ್ವ. ಜಘನ್+ಥ. ನಕಾರಕ್ಕೆ ಅನುಸ್ವಾರಪರಸವರ್ಣ. ಜಘನ್ಥ | ಜಘ್ನಥುಃ | ಜಘ್ನ || ಜಘಾನ, ಜಘನ | 'ಣಲುತ್ತಮೋವಾ' ಸೂತ್ರದಿಂದ ವಿಕಲ್ಪಣಿತ್ತಾದಾಗ ಣಿತ್ವವಿದ್ದರೆ ಉಪಧಾವೃದ್ಧಿ. 'ಹೋ ಹನ್ತೇಃ—' ಸೂತ್ರದಿಂದ ಹಕಾರಕ್ಕೆ ಕುತ್ವ. ಣಿತ್ತ್ವವಿಲ್ಲವಾದರೆ 'ಅಭ್ಯಾಸಾಚ್ಚ' ಸೂತ್ರದಿಂದ ಹಕಾರಕ್ಕೆ ಕುತ್ವ. ಜಘ್ನಿವ | ಜಘ್ನಿಮ || ಹಿಂದಿನಂತೆ ಉಪಧಾಲೋಪ, ಕುತ್ವ.

**ಲುಟ್** || ಹನ್+ತಾ. ನಕಾರಕ್ಕೆ ಅನುಸ್ವಾರಪರಸವರ್ಣ. ಹನ್ತಾ | ಹನ್ತಾರೌ | ಹನ್ತಾರಃ || ಹನ್ತಾಸಿ | ಹನ್ತಾಸ್ಥಃ | ಹನ್ತಾಸ್ಥ || ಹನ್ತಾಸ್ಮಿ | ಹನ್ತಾಸ್ವಃ | ಹನ್ತಾಸ್ಮಃ || **ಲೃಟ್** || ಅನಿಟಾದರೂ ಸ್ಯವಿಕರಣಕ್ಕೆ 'ಋದ್ಧನೋಃಸ್ಯೇ' ಸೂತ್ರದಿಂದ ಇಡಾಗುವು. ಷತ್ವ. ಹನಿಷ್ಯತಿ | ಹನಿಷ್ಯತಃ | ಇತ್ಯಾದಿ. **ಲೋಟ್** || ಹನ್+ತು. ಅನುಸ್ವಾರಪರಸವರ್ಣ. ಹನ್ತು. ಹನ್+ತಾತ್ ಎಂದಿರುವಾಗ ತಾತಙ್ ಙಿತಾದುದರಿಂದ 'ಅನುದಾತ್ತೋಪ—' (ಸೂ. ೫೯೧) ಸೂತ್ರದಿಂದ ಧಾತುವಿನ ಅನುನಾಸಿಕ ನಕಾರಕ್ಕೆ ಲೋಪ. ಹತಾತ್. ದ್ವಿವಚನ ಬಹುವಚನಗಳಲ್ಲಿ ಙಿತ್ತಾದುದರಿಂದ ನಲೋಪ. ಹತಾಮ್. ಹನ್+ಅನ್ತು. ಅಜಾದಿಙಿತ್ ಪರದಲ್ಲಿ ಇರುವುದರಿಂದ 'ಗಮಹನ—' ಸೂತ್ರದಿಂದ ಉಪಧಾ ಅಕಾರಕ್ಕೆ ಲೋಪ. ಆಗ ಹಕಾರಕ್ಕೆ ನಕಾರಪರವಾದುದರಿಂದ 'ಹೋಹನ್ತೇ—' ಸೂತ್ರದಿಂದ ಹಕಾರಕ್ಕೆ ಕುತ್ವ. ಘ್ನನ್ತು. ಹನ್+ಸಿಪ್. ಸಿಪಿಗೆ ಹಿ ಆದೇಶ. ಹನ್+ಹಿ ಎಂದಿರುವಾಗ ಧಾತುವಿಗೆ ಆದೇಶ ಹೇಳುತ್ತಾನೆ.

ಹನ್ ಧಾತುವಿಗೆ ಜಾದೇಶ ಹೇಳುವ ಸೂತ್ರ.

೫೬೨. **ಹನ್ತೇರ್ಜಃ** || **೬–೪–೩೬** ||

**ಹೌ ಪರೇ** ||

ಹನ್ತೇಃ, ಜಃ || ದ್ವಿಪದ ಸೂತ್ರ. 'ಶಾಹೌ—' ಸೂತ್ರದಿಂದ 'ಹೌ' ಅನುವೃತ್ತಿ. **ಸೂತ್ರಾರ್ಥ**— ಹನ್ ಧಾತುವಿಗೆ ಹಿ ಪರದಲ್ಲಿರುವಾಗ ಜಾದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. ಜ+ಹಿ ಎಂದಿರುವಾಗ ಅಕಾರದ ಪರದಲ್ಲಿ ಹಿ ಬಂದುದರಿಂದ 'ಅತೋಹೇಃ' ಸೂತ್ರದಿಂದ ಹಿ ಲೋಪ ಬರಲಿ ಎಂದು ಆಶಂಕೆ ಬಂದರೆ ಅದಕ್ಕೆ ಅಸಿದ್ಧಭಾವವನ್ನು ಹೇಳಿ ಲೋಪವನ್ನು ನಿಷೇಧಿಸುತ್ತಾನೆ.

ಸಂಜ್ಞೆಯಲ್ಲಿ ಅಸಿದ್ಧವದ್ಭಾವ ಹೇಳುವ ಸೂತ್ರ.

**೫೬೩. ಅಸಿದ್ಧವದತ್ರಾಭಾತ್ ।೬-೪-೨೨।**

**ಸಮಾನಾಶ್ರಯೇ**
**ಇತ ಊರ್ಧ್ವಮಾಪಾದಸಮಾಪ್ತೇರಾಭೀಯಮ್, ಹೇರ್ಲುಕ್ ।**
**ತಸ್ಮಿನ್ ಕರ್ತವ್ಯೇ ತದಸಿದ್ಧಮ್ । ಇತಿ ಜಸ್ಯಾಸಿದ್ಧತ್ವಾನ್ನ ಹೇರ್ಲುಕ್ । ಅಹನ್।**
**ಜಹಿ, ಹತಾತ್। ಹತಮ್ । ಹತ ॥ ಹನಾನಿ । ಹನಾವ । ಹನಾಮ ॥ ಅಹನ್।**
**ಅಹತಾಮ್ । ಅಘ್ನನ್ ॥ ಅಹನ್ । ಅಹತಮ್ । ಅಹತ । ಅಹನಮ್ ।**
**ಅಹನ್ವ । ಅಹನ್ಮ ॥ ಹನ್ಯಾತ್ । ಹನ್ಯಾತಾಮ್ । ಹನ್ಯುಃ ॥**

ಅಸಿದ್ಧವತ್, ಅತ್ರ, ಆಭಾತ್ ॥ ,ಭಸ್ಯ' ಎಂದೇ ಅಧಿಕಾರಸೂತ್ರ. ಈ ಸೂತ್ರ
ವನ್ನು ಆರಂಭಿಸಿ ಆರನೇ ಅಧ್ಯಾಯ ನಾಲ್ಕನೇ ಪಾದ ಮುಗಿಯುವವರೆಗೂ ಆಭೀಯ
ಕಾರ್ಯ ಅಂದರೆ ಭಸಂಜ್ಞೆಗೆ ಒಳಪಟ್ಟ ಕಾರ್ಯಗಳು ಹೇಳಲ್ಪಡುತ್ತವೆಯಾದುದ
ರಿಂದ ಅವು ಆಭೀಯಗಳು. ಆಭಾತ್=ಭಸಂಜ್ಞಾಧಿಕಾರ ಮುಗಿಯುವ ವರೆಗೆ
ಎಂದರ್ಥ. 'ವಿಹಿತಂ ಕಾರ್ಯಮ್' (ಹೇಳಲ್ಪಟ್ಟ ಕಾರ್ಯವು) ಎಂದು ಅಧ್ಯಾಹಾರ
ಮಾಡಿಕೊಳ್ಳಬೇಕು. ಎಲ್ಲಿ? ಎಂದು ಆಶಂಕೆ ಬಂದರೆ ಈ ಸೂತ್ರದಿಂದ ಆರಂಭಿಸಿ
ಎಂದು ತಿಳಿಯಬೇಕು. ಅತ್ರ ಎಂಬಲ್ಲಿ ನಿಮಿತ್ತಸಪ್ತಮೀ. ಇದರಿಂದ 'ಸಮಾನಾ
ಶ್ರಯೇ ಕಾರ್ಯೇ ಕರ್ತವ್ಯೇ' ಎಂಬ ಅರ್ಥವು ಲಬ್ಧವಾಗುತ್ತದೆ. ಅಸಿದ್ಧವಾಗುವ
ಕಾರ್ಯಕ್ಕೆ ಯಾವುದು ನಿಮಿತ್ತವೋ ಅದೇ ನಿಮಿತ್ತವಾಗಿರುವ ಕಾರ್ಯ ಮಾಡುವಾಗ
ಎಂದರ್ಥ. **ಸೂತ್ರಾರ್ಥ**—ಇಲ್ಲಿಂದ ಮುಂದೆ ಪಾದ ಮುಗಿಯುವವರೆಗೂ ಆಭೀಯ
ಕಾರ್ಯವು (ಹೇಳಲ್ಪಡುತ್ತದೆ) ಸಮಾನ ನಿಮಿತ್ತಕವಾದ ಆಭೀಯಕಾರ್ಯ ಮಾಡು
ವಾಗ ಹಿಂದೆ ಮಾಡಿರುವ ಆಭೀಯ ಕಾರ್ಯವು ಅಸಿದ್ಧವಾಗುತ್ತದೆ. ಒಂದು ಆಭೀಯ
ಕಾರ್ಯಕ್ಕೆ ಇನ್ನೊಂದು ಆಭೀಯಕಾರ್ಯ ಬಂದದ್ದು ತಿಳಿದಿಲ್ಲವೆಂದರ್ಥ. ಭಸಂಜ್ಞಾ
ಧಿಕಾರಕ್ಕೆ ಒಳಪಟ್ಟ ಒಂದು ಕಾರ್ಯವು ಮೊದಲು ಹೇಳಿರುತ್ತದೆ. ಆ ಮೇಲೆ
ಆ ಕಾರ್ಯಕ್ಕೆ ನಿಮಿತ್ತ ಯಾವುದೋ ಆ ನಿಮಿತ್ತವನ್ನೇ ಆಶ್ರಯಿಸಿ ಇನ್ನೊಂದು
ಭಸಂಜ್ಞಾಧಿಕಾರದಲ್ಲಿರುವ ಕಾರ್ಯ ಬರುವುದಾದರೆ ಆಗ ಅದಕ್ಕೆ ಹಿಂದಿನ ಕಾರ್ಯ
ವಾದದ್ದು ತಿಳಿದಿಲ್ಲವೆಂದು ತಾತ್ಪರ್ಯ. ಪ್ರಕೃತ ಹನ್ ಧಾತುವಿಗೆ ಹಿ ಪರದಲ್ಲಿರುವಾಗ
ಜಾದೇಶ ಹೇಳಿದೆ. ಇದು ಆಭೀಯಕಾರ್ಯ. ಭಸಂಜ್ಞಾಧಿಕಾರಕ್ಕೆ ಒಳಪಟ್ಟದೆ.
ಇದಕ್ಕೆ ನಿಮಿತ್ತ ಹಿ ಪರದಲ್ಲಿರುವಿಕೆ. ಜ+ಹಿ ಎಂದಾದಮೇಲೆ 'ಅತೋಹೇಃ'
ಎಂಬುದರಿಂದ ಅಕಾರದ ಪರದಲ್ಲಿರುವ ಹಿಗೆ ಲೋಪ ಬರಲಿ ಎಂಬ ಆಶಂಕೆ. ಈಗ
ಇದೂ ಆಭೀಯಕಾರ್ಯ. ಇದಕ್ಕೆ ನಿಮಿತ್ತ ಹಿಯೇ ಆಗಿದೆ. ಸಮಾನ ನಿಮಿತ್ತಕ
ವಾದುದರಿಂದ ಈ ಸೂತ್ರದಿಂದ ಮೊದಲಿನ ಆಭೀಯಕಾರ್ಯವು ಅಸಿದ್ಧವಾಗುತ್ತದೆ.
ಅಂದರೆ 'ಅತೋಹೇಃ' ಸೂತ್ರಕ್ಕೆ ಜಾದೇಶ ಬಂದುದು ತಿಳಿದಿಲ್ಲವೆಂದರ್ಥ. ಅದರ
ದೃಷ್ಟಿಯಲ್ಲಿ ಹನ್ ಇದೆಯೆಂದೇ ಭಾವನೆ. ಆಗ ಅಕಾರದ ಪರದಲ್ಲಿ ಹಿ ಇಲ್ಲದಿರುವುದ

ರಿಂದ ಅದು ಪ್ರವರ್ತಿಸುವುದಿಲ್ಲ. ಜಹಿ ಎಂದೇ ಇರುತ್ತದೆ. ಹೀಗೆ ತಾತಙ್ ಬಂದರೆ ಙಿತ್ತ್ವಾದುದರಿಂದ ಹನಿನ ನಕಾರಕ್ಕೆ (ಸೂ. ೫೬೧) ಲೋಪ. ಹತಾತ್ | ಹತಮ್ | ಹತ || ಹನ್ + ಮಿ. ಮಿಗೆ ನಿ ಆದೇಶ. 'ಆಡುತ್ತಮಸ್ಯಪಿಚ್ಚ' ಸೂತ್ರದಿಂದ ಅದಕ್ಕೆ ಆಡಾಗಮ. ಹನಾನಿ | ಹನಾವ | ಹನಾಮ || ವ, ಮ ಙಿತ್ತ್ವಾದರೂ ಅದಕ್ಕೆ ಬಂದ ಆಟ್ ಪಿತ್ತ್ವಾದುದರಿಂದ 'ಅನುದಾತ್ತೋಪದೇಶ—' ಸೂತ್ರದಿಂದ ನಲೋಪವಿಲ್ಲ.

ಲಙ್ || ಅಹನ್ + ತ್. 'ಹಲ್ಙ್ಯಾಭ್ಯೋದೀರ್ಘಾತ್—' ಸೂತ್ರದಿಂದ ತಲೋಪ. ಅಹನ್. ಅಹನ್ + ತಾಮ್. ನಲೋಪ (ಸೂ. ೫೬೧). ಅಹತಾಮ್. ಅಹನ್ + ಅನ್, 'ಗಮಹನಜನ–' ಸೂತ್ರದಿಂದ ಉಪಧಾಲೋಪ. 'ಹೋಹನ್ತೇಃ–' ಸೂತ್ರದಿಂದ ಹಕಾರಕ್ಕೆ ಕುತ್ವ. ಅಘ್ನನ್. ಅಹನ್ + ಸ್. 'ಹಲ್ಙ್ಯಾಭ್ಯೋ—' ಸೂತ್ರದಿಂದ ಸಲೋಪ. ಅಹನ್ | ಅಹತಮ್ | ಅಹತ || ಅಹನಮ್ ಅಹನ್ವ | ಅಹನ್ಮ || **ವಿಧಿಲಿಙ್** || ಹನ್ಯಾತ್ | ಹನ್ಯಾತಾಮ್ | ಹನ್ಯುಃ || ಹನ್ಯಾಃ | ಹನ್ಯಾತಮ್ | ಹನ್ಯಾತ || ಹನ್ಯಾಮ್ | ಹನ್ಯಾವ | ಹನ್ಯಾಮ || **ಆಶೀರ್ಲಿಙ್** || ಹನ್ + ಯಾತ್ ಎಂದಿರುವಾಗ ಹನಿಗೆ ವಧಾದೇಶ ಹೇಳುತ್ತಾನೆ. ಮೊದಲು ಅದಕ್ಕೆ ಬೇಕಾಗುವ ಅಧಿಕಾರಸೂತ್ರವನ್ನು ಹೇಳುತ್ತಾನೆ.

**೫೯೪. ಆರ್ಧಧಾತುಕೇ || ೨-೪-೩೫ ||**

**ಇತ್ಯಧಿಕೃತ್ಯ**

ಇದು ಅಧಿಕಾರಸೂತ್ರ. ಇಲ್ಲಿ ಯಾವ ಕಾರ್ಯವನ್ನೂ ಹೇಳುವುದಿಲ್ಲ. ಉತ್ತರ ಸೂತ್ರಗಳಲ್ಲಿ ಹೋಗಿ ಇನ್ನು ಮುಂದೆ ಹೇಳುವ ಕಾರ್ಯಗಳು ಆರ್ಧಧಾತುಕಪರದಲ್ಲಿ ಇರುವಾಗ ಬರುತ್ತದೆ, ಎಂದು ಬೋಧಿಸುತ್ತದೆ. ಪ್ರಕೃತ ಆರ್ಧಧಾತುಕವಾದ ಲಿಙ್‌ನಲ್ಲಿ ವಧಾದೇಶ ಹೇಳುತ್ತಾನೆ.

ಹನಿಗೆ ವಧಾದೇಶ ಹೇಳುವ ಸೂತ್ರಗಳು

**೫೬೫. ಹನೋ ವಧ ಲಿಙಿ || ೨-೪-೪೨ ||**

**೫೬೬. ಲುಙಿ ಚ || ೨-೪-೪೩ ||**

**ವಧಾದೇಶೋಽದನ್ತಃ । ಆರ್ಧಧಾತುಕೇ ಇತಿ ವಿಷಯಸಪ್ತಮೀ, ತೇನ ಆರ್ಧಧಾತುಕೋಪದೇಶೇ ಅಕಾರಾನ್ತತ್ವಾದತೋ ಲೋಪಃ । ವಧ್ಯಾತ್ | ವಧ್ಯಾಸ್ತಾಮ್ || ಆದೇಶಸ್ಯಾನೇಕಾಚ್ತ್ವಾದೇಕಾಚ ಇತೀಣ್ನಿಷೇಧಾಭಾವಾದಿಟ್ | 'ಅತೋ ಹಲಾದೇಃ' ಇತಿ ವೃದ್ಧೌ ಪ್ರಾಪ್ತಾಯಾಮ್ ||**

ಎರಡು ಸೂತ್ರಗಳಿಗೂ ಅರ್ಥ ಸುಲಭವಾದುದರಿಂದ ವೃತ್ತಿ ಬರೆಯಲಿಲ್ಲ. 'ಆರ್ಧ

ಧಾತುಕೇ' ಅಧಿಕಾರವಿದೆ. ಎರಡು ಸೂತ್ರಗಳಿಂದಲೂ ವಧಾದೇಶ ಹೇಳುತ್ತಾನೆ.
**ಸೂತ್ರಾರ್ಥ**–ಆರ್ಧಧಾತುಕವಾದ ಲಿಙ್ ಮತ್ತು ಲುಙ್ ಪರವಾದಾಗ ಹನ್ ಧಾತು ವಿಗೆ ವಧ ಆದೇಶ ಬರುತ್ತದೆ. ಇದು ಅದನ್ತವಾದ ಆದೇಶ. ಅನೇಕಾಲಾದುದರಿಂದ ಸರ್ವಾದೇಶ. ಪ್ರಕೃತ ಲಿಙ್‌ನಲ್ಲಿ ವಧಾದೇಶ ಬಂದರೆ ವಧ + ಯಾತ್ ಎಂದಾಗುತ್ತದೆ. ಇಲ್ಲಿ 'ಅತೋಲೋಪಃ' ಸೂತ್ರದಿಂದ ವಧದ ಕೊನೆಯ ಅಕಾರಕ್ಕೆ ಲೋಪ ಬರ ಬೇಕು. ಆದರೆ ಅದು ಆರ್ಧಧಾತುಕೋಪದೇಶದಲ್ಲಿ ಅದಂತವಾದುದರ ಅಕಾರಕ್ಕೆ ಲೋಪಹೇಳುತ್ತದೆ. ಇಲ್ಲಿ ಉಪದೇಶಕಾಲದಲ್ಲಿ ಅಂದರೆ ಲಿಙ್ ಹೇಳುವಾಗ ಹನ್ ಇದೆ. ಅದನ್ತವಿಲ್ಲ. ಹೇಗೆ ಲೋಪ ಬರುತ್ತದೆ ? ಅದಕ್ಕೋಸ್ಕರ 'ಆರ್ಧಧಾತುಕೇ' ಎಂಬುದು ಪರಸಪ್ತಮಿಯಲ್ಲವೆಂದು ಹೇಳುತ್ತಾನೆ. ಅದು ವಿಷಯಸಪ್ತಮೀ. ಆಗ 'ಹನೋ ವಧ ಲಿಙಿ' ಎಂಬಲ್ಲಿ ಅರ್ಥವ್ಯತ್ಯಾಸವಾಗುತ್ತದೆ. ಲಿಙನ್ನು ಮಾಡಬೇಕು ಎಂದಿರುವಾಗ ಹನಿಗೆ ವಧಾದೇಶ ಬರುತ್ತದೆ. ಲಿಙ್‌ಪರದಲ್ಲಿರುವಾಗ ಎಂದರ್ಥವಲ್ಲ. ಆಗ ಮೊದಲೇ ವಧಾದೇಶ. ಆಮೇಲೆ ಲಿಙ್. ಹೀಗೆ ಹೇಳಿದರೆ ಆರ್ಧಧಾತುಕ ಲಿಙ್ ಉಪದೇಶಕಾಲದಲ್ಲಿಯೇ ಅದನ್ತವಿರುವುದರಿಂದ 'ಅತೋ ಲೋಪಃ' ಸೂತ್ರದಿಂದ ವಧಾದೇಶದ ಅಂತ್ಯದ ಅಕಾರಕ್ಕೆ ಲೋಪ ಬರುತ್ತದೆ. ವಧ್ಯಾತ್ । ವಧ್ಯಾಸ್ತಾಮ್ । ವಧ್ಯಾಸುಃ ॥ ವಧ್ಯಾಃ । ವಧ್ಯಾಸ್ತಮ್ । ವಧ್ಯಾಸ್ತ ॥ ವಧ್ಯಾಸಮ್ । ವಧ್ಯಾಸ್ವ । ವಧ್ಯಾಸ್ಮ ॥

**ಲುಙ್** ॥ ಇಲ್ಲಿಯೂ ಲುಙ್‌ಮಾಡಬೇಕೆಂದಿರುವಾಗಲೇ ವಧಾದೇಶ. ಅವಧ + ಸ್ + ಈತ್ ವಧಾದೇಶ ಅನೇಕಾಚಾದುದರಿಂದ 'ಏಕಾಚ ಉಪದೇಶೇ—' ಸೂತ್ರದಿಂದ ಇಣ್ನಿಷೇಧವು ಏಕಾಚ್ ಧಾತುಗಳಿಗೆ ಮಾತ್ರ ಹೇಳುವುದರಿಂದ ಇಲ್ಲಿ ಇಣ್ನಿಷೇಧ ಬರುವುದಿಲ್ಲ. 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ಇಡಾಗಮ ಬಂದರೆ ಅವಧ + ಇಸ್ + ಈತ್. 'ಅತೋ ಲೋಪಃ' ಅವಧ್ + ಇಸ್ + ಈತ್. ಇಲ್ಲಿ 'ಅತೋ ಹಲಾದೇರ್ಲಘೋಃ' ಸೂತ್ರದಿಂದ ವಧಿನ ಅಕಾರಕ್ಕೆ ವೃದ್ಧಿ ಪ್ರಾಪ್ತ ವಾದರೆ ವಧಿನಲ್ಲಿ ಲೋಪವಾದ ಅಕಾರಕ್ಕೆ ಸ್ಥಾನಿವದ್ಭಾವ ಹೇಳುತ್ತಾನೆ 'ಸ್ಥಾನಿ ವದಾದೇಶೋಽನಲ್ವಿಧೌ' ಸೂತ್ರದಿಂದ ಅಲ್ವಿಧಿಯಲ್ಲಿ ಸ್ಥಾನಿವದ್ಭಾವ ನಿಷೇಧ ಹೇಳಿ ರುವುದರಿಂದ ಇದು ಅಲ್ವಿಧಿಯಾಗುವುದರಿಂದ ಅದರಿಂದ ಬರುವುದಿಲ್ಲ.

ಅಜಾದೇಶಕ್ಕೆ ಸ್ಥಾನಿವದ್ಭಾವ ಹೇಳುವ ಸೂತ್ರ.

**೫೬೭. ಅಚಃ ಪರಸ್ಮಿನ್ ಪೂರ್ವವಿಧೌ ॥ ೧-೧-೫೭ ॥**

**ಪರನಿಮಿತ್ತೋಽಜಾದೇಶಃ ಸ್ಥಾನಿವತ್, ಸ್ಥಾನಿಭೂತಾದಚಃ ಪೂರ್ವ ತ್ವೇನ ದೃಷ್ಟಸ್ಯ ವಿಧೌ ಕರ್ತವ್ಯೇ । ಇತ್ಯಲ್ಲೋಪಸ್ಯ ಸ್ಥಾನಿವತ್ತ್ವಾನ್ನ ವೃದ್ಧಿಃ । ಅವಧೀತ್ । ಅಹನಿಷ್ಯತ್ ॥**

ತ್ರಿಪದ ಸೂತ್ರ. 'ಸ್ಥಾನಿವತ್', 'ಆದೇಶಃ' ಹಿಂದಿನಿಂದ ಅನುವೃತ್ತಿ. ಅಚಃ ಎಂಬುದಕ್ಕೆ 'ಆದೇಶಃ' ಎಂಬುದರೊಡನೆ ಅನ್ವಯ. ಪರಸ್ಮಿನ್ ಎಂಬುದಕ್ಕೆ (ಪರ ನಿಮಿತ್ತವಾದ ಎಂದರ್ಥ.) ಆದೇಶದಲ್ಲಿ ಸಂಬಂಧ. ಪೂರ್ವಸ್ಯ ವಿಧಿಃ ಪೂರ್ವ ವಿಧಿಃ | ಸ್ಥಾನಿಯಾದ ಅಚಿನ ಪೂರ್ವಕ್ಕೆ ಕಾರ್ಯಮಾಡುವಾಗ ಎಂದರ್ಥ. ಸೂತ್ರಾರ್ಥ—ಪರನಿಮಿತ್ತಕವಾದ ಅಚಿನ ಸ್ಥಾನದಲ್ಲಿ ಬಂದ ಆದೇಶ ಸ್ಥಾನಿವದ್ಭಾವ ವನ್ನು ಹೊಂದುತ್ತದೆ. ಸ್ಥಾನಿಯಾದ ಅಚಿನ ಪೂರ್ವದಲ್ಲಿ ಯಾವುದು ದೃಷ್ಟ ವಾಗಿದೆಯೋ ಅದಕ್ಕೆ ಕಾರ್ಯಮಾಡುವಾಗ ಮಾತ್ರ ಈ ಸ್ಥಾನಿವದ್ಭಾವ. ಸ್ಥಾನಿ ಭೂತವಾದ ಅಚ್ ನಷ್ಟವಾದುದರಿಂದ ಅದರ ಪೂರ್ವಕ್ಕೆ ಕಾರ್ಯಮಾಡುವಾಗ ಎಂದು ಹೇಳಲಿಲ್ಲ. ಅದು ಇದ್ದಾಗ ಯಾವುದು ಪೂರ್ವವಾಗಿತ್ತೋ ಅದಕ್ಕೆ (ದೃಷ್ಟ) ಎಂದರೆ ಈ ಸ್ಥಾನಿಭೂತ ಅಚ್ ಇಲ್ಲವಾದರೂ ದೋಷವಿಲ್ಲ. ಪ್ರಕೃತ ಪರನಿಮಿತ್ತಕ ವಾದ ಅಚಿನ ಆದೇಶ ಎಂದರೆ ಇಸ್‌ರೂಪ ಆರ್ಧಧಾತುಕವನ್ನು ನಿಮಿತ್ತೀಕರಿಸಿ ಬಂದ ವಧದ ಕೊನೆಯ ಅಕಾರರೂಪ ಅಚಿಗೆ ಬಂದ ಲೋಪರೂಪ ಆದೇಶ. ಈಗ ಇದರ ಹಿಂದೆ ಇದ್ದ ವಕಾರೋತ್ತರಾಕಾರ ರೂಪ ಲಘುವಿಗೆ ವೃದ್ಧಿರೂಪಕಾರ್ಯ ಮಾಡಲು ಉದ್ಯೋಗಿಸಿದ್ದೇವೆ. ಇದು ಸ್ಥಾನಿಭೂತ ಅಚಿನ ಪೂರ್ವದಲ್ಲಿ ದೃಷ್ಟವಾಗಿದೆ. ಆದುದರಿಂದ ಧಕಾರೋತ್ತರಾಕಾರಲೋಪಕ್ಕೆ ಸ್ಥಾನಿವದ್ಭಾವ ಬಂದರೆ ವಧ ಇದ್ದಂತೆ ಆಗುತ್ತದೆ. ಆಗ ಸಿಚಿನ ಪೂರ್ವದಲ್ಲಿ ಲಘುವು ಸಿಗದಿರುವುದರಿಂದ ವೃದ್ಧಿ ಬರುವುದಿಲ್ಲ. 'ಇಟ ಈಟಿ' ಸೂತ್ರದಿಂದ ಸಲೋಪ. ಸವರ್ಣದೀರ್ಘ. ಅವಧೀತ್ | ಅವಧಿ ಷ್ಟಾಮ್ | ಅವಧಿಷುಃ || ಅವಧೀಃ | ಅವಧಿಷ್ಟಮ್ | ಅವಧಿಷ್ಟ || ಅವಧಿಷಮ್ | ಅವಧಿಷ್ವ | ಅವಧಿಷ್ಮ ||

ಲೃಙ್ || 'ಋದ್ಧನೋಃ ಸ್ಯೇ' ಸೂತ್ರದಿಂದ ಸ್ಯಕ್ಕೆ ಇಡಾಗಮ. ಅಹನಿಷ್ಯತ್ | ಅಹನಿಷ್ಯತಾಮ್ | ಅಹನಿಷ್ಯನ್ || ಇತ್ಯಾದಿ.

**||೫೨|| ಯು = ಮಿಶ್ರಣಾಮಿಶ್ರಣಯೋಃ || (ಸೇರಿಸುವುದು, ಬಿಂಗಡಿಸುವುದು.)**

ಉಕಾರಾನ್ತ ಧಾತು. ಯು+ಅ+ತಿ ಎಂದಿರುವಾಗ ಶಪಿಗೆ ಲುಕ್. ಲುಕ್ ಬಂದಮೇಲೆ ಧಾತುವಿನ ಉಕಾರಕ್ಕೆ ವೃದ್ಧಿ ಹೇಳುತ್ತಾನೆ.

ಉದನ್ತಧಾತುವಿಗೆ ಲುಕಿನಲ್ಲಿ ವೃದ್ಧಿ ಹೇಳುವ ಸೂತ್ರ.

**೫೬೮. ಉತೋ ವೃದ್ಧಿರ್ಲುಕಿ ಹಲಿ || ೭-೩-೮೯ ||**

**ಲುಗ್ವಿಷಯೇ ಉತೋ ವೃದ್ಧಿಃ ಪಿತಿ ಹಲಾದೌ ಸಾರ್ವಧಾತುಕೇ, ನ ತ್ವಭ್ಯಸ್ತಸ್ಯ | ಯೌತಿ | ಯುತಃ | ಯುವನ್ತಿ | ಯೌಷಿ | ಯುಥಃ | ಯುಥ | ಯೌಮಿ | ಯುವಃ | ಯುಮಃ || ಯುಯಾವ | ಯವಿತಾ | ಯವಿಷ್ಯತಿ || ಯೌತು, ಯುತಾತ್ || ಅಯೌತ್ | ಅಯುತಾಮ್ |**

**ಅಯುವನ್ ॥ ಯುಯಾವ | ಇಹ ಉತೋವೃದ್ಧಿರ್ನ, ಭಾಷ್ಯೇ—ಪಿಚ್ಚ ಙಿನ್ನ, ಙಿಚ್ಚ ಪಿನ್ನ, ಇತಿ ವ್ಯಾಖ್ಯಾನಾತ್ | ಯುಯಾತಾಮ್ | ಯುಯುಃ ॥ ಯೂಯಾತ್ | ಯೂಯಾಸ್ತಾಮ್ | ಯೂಯಾಸುಃ ॥ ಅಯಾವೀತ್ ॥ ಅಯವಿಷ್ಯತ್ ॥**

ನಾಲ್ಕು ಪದಗಳುಳ್ಳ ಸೂತ್ರ. 'ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ' ಸೂತ್ರದಿಂದ 'ಅಚಿ' ಬಿಟ್ಟು ಎಲ್ಲಾ ಪದಗಳೂ ಅನುವೃತ್ತವಾಗುತ್ತವೆ. 'ಹಲಿ' ಸಪ್ತಮ್ಯಂತವು 'ಸಾರ್ವಧಾತುಕೇ' ಎಂಬುದಕ್ಕೆ ವಿಶೇಷಣವಾದುದರಿಂದ ತದಾದಿ ಲಾಭ. ಹಲಾದಿಯೂದ ಸಾರ್ವಧಾತುಕಪರವಾದಾಗ ಎಂದರ್ಥ. ಲುಕಿ ವಿಷಯ ಸಪ್ತಮೀ. ಲುಗ್ ವಿಷಯದಲ್ಲಿ ಎಂದರ್ಥ. **ಸೂತ್ರಾರ್ಥ**—ಲುಗ್ವಿಷಯದಲ್ಲಿ ಉದಂತವಾದ ಅಂಗಕ್ಕೆ ಹಲಾದಿಯೂದ ಪಿತ್ತಾದ ಸಾರ್ವಧಾತುಕ ಪರದಲ್ಲಿರುವಾಗ ವೃದ್ಧಿ ಬರುತ್ತದೆ. ಅದು ಅಭ್ಯಸ್ತವಾಗಿದ್ದರೆ ಆಗ ವೃದ್ಧಿ ಬರುವದಿಲ್ಲ. 'ಉಭೇ ಉಭ್ಯಸ್ತಮ್' ಸೂತ್ರದಿಂದ ದ್ವಿತ್ವ ಬಂದಾಗ ಆ ಎರಡು ರೂಪಗಳಿಗೂ ಅಭ್ಯಸ್ತವೆಂಬ ಸಂಜ್ಞೆ ಮುಂದೆ ಹೇಳುತ್ತಾನೆ. ಲಟ್, ಲೋಟ್, ಲಙ್, ವಿಧಿಲಿಙ್ ಇವು ಸಾರ್ವಧಾತುಕವೆಂದು ಹಿಂದೆ ಹೇಳಿದೆ. ಇವುಗಳ ಏಕವಚನಗಳು ಪಿತ್ತಾಗುವದರಿಂದ ಇಲ್ಲಿ ಮಾತ್ರ ವೃದ್ಧಿ. ಯು + ತಿ. ವೃದ್ಧಿ. ಬಂದರೆ ಯೌತಿ | ಯುತಃ | ಯು + ಅನ್ತಿ ಎಂದಿರುವಾಗ 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಅಜಾದಿಪ್ರತ್ಯಯ ಪರವಲ್ಲಿರುವದರಿಂದ ಉವಙಾದೇಶ. ಯುವನ್ತಿ. ಯೌ + ಸಿ. ಷತ್ವ. ಯೌಷಿ | ಯುಥಃ | ಯುಥ ॥ ಯೌಮಿ | ಯುವಃ | ಯುಮಃ ॥

**ಲಿಟ್** ॥ ಯುಯು + ಅ. ಅಚೋಞ್ಣಿತಿ ವೃದ್ಧಿ. ಯುಯೌ + ಅ | ಆವಾದೇಶ. ಯುಯಾವ. ಯುಯು + ಅತುಸ್. ಉವಙ್. ಯುಯುವತುಃ. ಯುಯುವುಃ ॥ ಯುಯು + ಇಥ 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ಅವಾದೇಶ. ಯುಯುವಿಥ | ಯುಯುವಥುಃ | ಯುಯುವ | ಯುಯಾವ, ಯುಯವ | ವೃದ್ಧಿ. ಗುಣ. ಯುಯುವಿವ | ಯುಯುವಿಮ ॥ **ಲುಟ್** ॥ ಯು + ಇತಾ. ಗುಣ. ಅವಾದೇಶ. ಯವಿತಾ | ಯವಿತಾರೌ | ಯವಿತಾರಃ ॥ ಯವಿತಾಸಿ | ಯವಿತಾಸ್ಥಃ | ಯವಿತಾಸ್ಥ ॥ ಯವಿತಾಸ್ಮಿ | ಯವಿತಾಸ್ವಃ | ಯವಿತಾಸ್ಮಃ ॥ **ಲೃಟ್** ॥ ಯು + ಇಸ್ಯತಿ. ಗುಣ, ಅವಾದೇಶ. ಷತ್ವ. ಯವಿಷ್ಯತಿ ಇತ್ಯಾದಿ **ಲೋಟ್** ॥ ಯು + ತು. 'ಉತೋವೃದ್ಧಿಃ—' ಸೂತ್ರದಿಂದ ವೃದ್ಧಿ. ಯೌತು. ತಾತಙ್ ಙಿತ್ತಾದುದರಿಂದ ವೃದ್ಧಿ ಬರುವುದಿಲ್ಲ. ಯುತಾತ್ | ಯುತಾಮ್ | ಯುವನ್ತು ॥ ಯುಹಿ. ಹಿ ಅಪಿತ್ತಾದುದರಿಂದ ವೃದ್ಧಿಯಿಲ್ಲ. ಯುತಾತ್ | ಯುತಮ್ | ಯುತ ॥ ಉತ್ತಮದಲ್ಲಿ ಆಟ್ ಪಿತ್ತಾದರೂ ಹಲಾದಿಯಾಗದಿರುವುದರಿಂದ ವೃದ್ಧಿಯಿಲ್ಲ. ಗುಣ. ಅವಾದೇಶ. ಯವಾನಿ | ಯವಾವ | ಯವಾಮ ॥

**ಲಙ್** || ಅಯೌತ್ | ಅಯುತಾಮ್ | ಅಯುವನ್ || ಅಯೌಃ | ಅಯುತಮ್ | ಅಯುತ || ಅಯುವಮ್ | ಅಯುವ | ಅಯುಮ || **ವಿಧಿಲಿಙ್** || ತಿಪ್ ಪಿತ್ತಾದರೂ ಯಾಸುಟ್ ಙಿತ್ತಾದುದರಿಂದ ವೃದ್ಧಿಯಿಲ್ಲ. ಭಾಷ್ಯಕಾರರು ಪಿತ್ತಾದದ್ದು ಙಿತ್ತಾಗುವುದಿಲ್ಲವೆಂದೂ, ಙಿತ್ತಾದದ್ದು ಪಿತ್ತಾಗುವುದಿಲ್ಲವೆಂದೂ ವ್ಯಾಖ್ಯಾನಮಾಡಿರುತ್ತಾರೆ. ಪ್ರಕೃತ ಪಿತ್ತಿಗೆ ಯಾಸುಟ್ ಬಂದರೂ ಅದು ಙಿತ್ ಎಂದುದರಿಂದ ಪಿತ್ತಾಗುವುದಿಲ್ಲ. ಯುಯಾತ್ | ಯುಯಾತಾಮ್ | ಯುಯುಃ || ಯುಯಾಃ | ಯುಯಾತಮ್ | ಯುಯಾತ || ಯುಯಾಮ್ | ಯುಯಾವ | ಯುಯಾಮ || **ಆಶೀರ್ಲಿಙ್** || ಯು+ಯಾಸ್ತ್. 'ಸ್ಕೋಃ ಸಂಯೋ—' ಸೂತ್ರದಿಂದ ಸಲೋಪ. 'ಅಕೃತ್ಸಾರ್ವಧಾತುಕಯೋರ್ದೀರ್ಘಃ' ಸೂತ್ರದಿಂದ ಉಕಾರಕ್ಕೆ ದೀರ್ಘ. ಯೂಯಾತ್ | ಯೂಯಾಸ್ತಾಮ್ | ಯೂಯಾಸುಃ || ಯೂಯಾಃ | ಯೂಯಾಸ್ತಮ್ | ಯೂಯಾಸ್ತ || ಯೂಯಾಸಮ್ | ಯೂಯಾಸ್ವ | ಯೂಯಾಸ್ಮ || **ಲುಙ್** || ಅಯು+ಇಸ್+ಈತ್. 'ಸಿಚಿ ವೃದ್ಧಿಃ ಪರಸ್ಮೈಪದೇಷು' ಸೂತ್ರದಿಂದ ಇಗಂತಾಂಗಕ್ಕೆ (ಉ) ವೃದ್ಧಿ. ಅಯೌ+ಇಸ್+ಈತ್, 'ಇಟ ಈಟಿ' ಸಲೋಪ. ಆಯಾದೇಶ. ಅಯಾವೀತ್ | ಅಯಾವಿಷ್ಟಾಮ್ | ಅಯಾವಿಷುಃ || ಅಯಾವೀಃ | ಅಯಾವಿಷ್ಟಮ್ | ಅಯಾವಿಷ್ಟ | ಅಯಾವಿಷಮ್ || ಅಯಾವಿಷ್ವ | ಅಯಾವಿಷ್ಮ || **ಲೃಙ್** || ಗುಣ. ಅವಾದೇಶ. ಅಯವಿಷ್ಯತ್ | ಅಯವಿಷ್ಯತಾಮ್ | ಅಯವಿಷ್ಯನ್ || ಇತ್ಯಾದಿ.

|| ೫೪ || ಯಾ= ಪ್ರಾಪಣೇ (ಹೋಗುವುದು)

**ಯಾತಿ | ಯಾತಃ | ಯಾನ್ತಿ || ಯಯೌ | ಯಾತಾ | ಯಾಸ್ಯತಿ | ಯಾತು | ಅಯಾತ್ | ಅಯಾತಾಮ್ ||**

ಆಕಾರಾನ್ತ ಧಾತು. ಅನಿಟ್. ಲಟಿನಲ್ಲಿ ಪ್ರತ್ಯಯ ಸೇರಿಸುವುದು ಮಾತ್ರ. ಯಾತಿ | ಯಾತಃ | ಯಾನ್ತಿ || ಯಾಸಿ | ಯಾಥಃ | ಯಾಥ || ಯಾಮಿ | ಯಾವಃ | ಯಾಮಃ || **ಲಿಟ್** || ಯಾಯಾ+ಣಲ್. 'ಹ್ರಸ್ವಃ'. ಅಭ್ಯಾಸಕ್ಕೆ ಹ್ರಸ್ವ. 'ಆತ ಔಣಲಃ' ಸೂತ್ರದಿಂದ ಣಲಿಗೆ ಔ ಆದೇಶ, ಯಯಾ+ಔ. ವೃದ್ಧಿ. ಯಯೌ. ಯಯಾ+ಅತುಸ್. 'ಆತೋ ಲೋಪ ಇಟಿ ಚ' ಸೂತ್ರದಿಂದ ಆಕಾರ ಲೋಪ. ಯಯತುಃ | ಯಯಾ+ಉಸ್. ಹಿಂದಿನಂತೆ ಆಲೋಪ. ಯಯುಃ | ಭಾರದ್ವಾಜನಿಯಮದಿಂದ ಥಲಿಗೆ ಇಡ್ವಿಕಲ್ಪ. ಇಟ್ ಬಂದರೆ ಯಯಾ+ಇಥ ಎಂದಿರುವಾಗ ಹಿಂದಿನಂತೆ ಆಲೋಪ. ಯಯಿಥ. ಇಟ್ ಬಾರದಿದ್ದರೆ ಯಯಾಥ | ಯಯಥುಃ | ಯಯ || ಯಯೌ | ಯಯಿವ | ಯಯಿಮ || **ಲುಟ್** || ಯಾತಾ | ಯಾತಾರೌ | ಯಾತಾರಃ || ಯಾತಾಸಿ | ಯಾತಾಸ್ಥಃ | ಯಾತಾಸ್ಥ || ಯಾತಾಸ್ಮಿ |

ಯಾತಾಸ್ವಃ | ಯಾತಾಸ್ಮಃ || **ಲೃಟ್** || ಯಾಸ್ಯತಿ | ಯಾಸ್ಯತಃ | ಯಾಸ್ಯನ್ತಿ || ಇತ್ಯಾದಿ. **ಲೋಟ್** || ಯಾತು, ಯಾತಾತ್ | ಯಾತಾಮ್ | ಯಾನ್ತು || ಯಾಹಿ, ಯಾತಾತ್ | ಯಾತಮ್ | ಯಾತ || ಯಾನಿ | ಯಾವ | ಯಾಮ || **ಲಙ್** || ಅಯಾತ್ | ಅಯಾತಾಮ್ | ಅಯಾ + ಝಿ ಎಂದಿರುವಾಗ ವಿಕಲ್ಪವಾಗಿ ಝಿಗೆ ಜುಸ್ ಆದೇಶ ಹೇಳುತ್ತಾನೆ.

ಲಙಿನಲ್ಲಿ ಝಿಗೆ ಜುಸಾದೇಶ ಹೇಳುವ ಸೂತ್ರ.

**೫೭೯. ಲಙಃ ಶಾಕಟಾಯನಸ್ಯೈವ || ೩-೪-೧೧೧ ||**

**ಆದನ್ತಾತ್ಪರಸ್ಯ ಲಙೋ ಝೇರ್ಜುಸ್ ವಾ ಸ್ಯಾತ್ | ಅಯುಃ, ಅಯಾನ್ | ಯಾಯಾತ್ | ಯಾಯಾತಾಮ್ | ಯಾಯುಃ || ಯಾಯಾತ್ | ಯಾಯಾಸ್ತಾಮ್ | ಯಾಯಾಸುಃ || ಅಯಾಸೀತ್ | ಅಯಾಸ್ಯತ್ |**

ತ್ರಿಪದ ಸೂತ್ರ. 'ಅತಃ', 'ಝೇರ್ಜುಸ್' ಎರಡು ಸೂತ್ರಗಳು ಅನುವೃತ್ತವಾಗುತ್ತವೆ. ಶಾಕಟಾಯನರ ಮತದಲ್ಲಿ ಮಾತ್ರವೆಂದುದರಿಂದ ವಿಕಲ್ಪವೆಂದು ತಿಳಿಯುತ್ತದೆ. **ಸೂತ್ರಾರ್ಥ**—ಆದಂತಧಾತುವಿನ ಪರದಲ್ಲಿರುವ ಲಙಿಗೆ ಬಂದ ಝಿಗೆ ಜುಸಾದೇಶ ವಿಕಲ್ಪವಾಗಿ ಬರುತ್ತದೆ. ಜುಸಿನಲ್ಲಿ ಉಸ್ ಉಳಿಯುತ್ತದೆ. ಅಯಾ + ಉಸ್ ಎಂದಿರುವಾಗ 'ಉಸ್ಯಪದಾನ್ತಾತ್' ಸೂತ್ರದಿಂದ ಪರರೂಪ. ಅಯುಃ | ಜುಸಾದೇಶ ಬಾರದಿದ್ದರೆ 'ಝೋನ್ತಃ' ಸೂತ್ರದಿಂದ ಅನ್ತಾದೇಶ. 'ಇತಶ್ಚ' ಸೂತ್ರದಿಂದ ಇಕಾರಲೋಪ. ಅಯಾ + ಅನ್ತ್. 'ಸಂಯೋಗಾನ್ತಸ್ಯ ಲೋಪಃ |' ಸವರ್ಣದೀರ್ಘ. ಅಯಾನ್, ಅಯಾಃ | ಅಯಾತಮ್ | ಅಯಾತ || ಅಯಾಮ್ | ಅಯಾವ | ಅಯಾಮ ||

**ವಿಧಿಲಿಙ್** || 'ಲಿಙಃ ಸಲೋಪೋಽನನ್ತ್ಯಸ್ಯ' ಸೂತ್ರದಿಂದ ಯಾಸಿನ ಸಕಾರಕ್ಕೆ ಲೋಪ. ಯಾಯಾತ್ | ಯಾಯಾತಾಮ್ | ಯಾಯುಃ || ಯಾಯಾಃ | ಯಾಯಾತಮ್ | ಯಾಯಾತ || ಯಾಯಾಮ್ | ಯಾಯಾವ | ಯಾಯಾಮ | **ಆಶೀರ್ಲಿಙ್** || ಆರ್ಧಧಾತುಕವಾದುದರಿಂದ ಸಲೋಪವಿಲ್ಲ. ಯಾಯಾತ್. ಇಲ್ಲಿ 'ಸ್ಕೋಃ ಸಂಯೋ—' ಸೂತ್ರದಿಂದ ಸಂಯೋಗಾದಿ ಸಲೋಪ. ಯಾಯಾಸ್ತಾಮ್ | ಯಾಯಾಸುಃ || ಯಾಯಾಃ | ಯಾಯಾಸ್ತಮ್ | ಯಾಯಾಸ್ತ || ಯಾಯಾಸಮ್ | ಯಾಯಾಸ್ವ | ಯಾಯಾಸ್ಮ || **ಲುಙ್** || ಅಯಾ + ಸ್ + ಸ್ + ಈತ್ ಎಂದಿರುವಾಗ ಆದನ್ತಧಾತುವಾದುದರಿಂದ 'ಯಮರಮನಮಾತಾಂ ಸಕ್ ಚ' ಸೂತ್ರದಿಂದ ಸಿಚಿಗೆ ಇಡಾಗಮ. ಆದನ್ತಕ್ಕೆ ಸಕ್ ಆಗಮ. ಅಯಾಸ್ + ಇಸ್ + ಈತ್. 'ಇಟ ಈಟಿ' ಸಲೋಪ. ಅಯಾಸೀತ್ | ಅಯಾಸಿಷ್ಟಾಮ್ | ಅಯಾಸಿಷುಃ || ಅಯಾಸೀಃ |

ಅಯಾಸಿಷ್ಟವಮ್ | ಅಯಾಸಿಷ್ಟ || ಅಯಾಸಿಷಮ | ಅಯಾಸಿಷ್ವ | ಅಯಾಸಿಷ್ಮ ||
ಲೃಟ್ ||ಅಯಾಸ್ಯತ್ | ಅಯಾಸ್ಯತಾಮ್ | ಅಯಾಸ್ಯನ್ | ಇತ್ಯಾದಿ.

**|| ೫೪ || ವಾ = ಗತಿಗಂಧನಯೋಃ (ಗಮನ, ಗಂಧನವೆಂದರೆ ಹಿಂಸಾ, ಸೂಚನ, ಉತ್ಸಾಹ. ) || ೫೫ || ಭಾ = ದೀಪ್ತೌ (ಪ್ರಕಾಶಿಸುವುದು ) || ೫೬ || ಷ್ಣಾ = ಶೌಚೇ (ಸ್ನಾನವಮಾಡುವುದು.) || ೫೭ || ಶ್ರಾ = ಪಾಕೇ (ಬೇಯಿಸುವುದು.) || ೫೮ || ದ್ರಾ = ಕುತ್ಸಾಯಾಮ್ ಗತೌಚ (ನಿಂದಿಸುವುದು, ಗಮನ. ) || ೫೯ || ಪ್ಸಾ = ಭಕ್ಷಣೇ (ತಿನ್ನುವುದು.) || ೬೦ || ರಾ = ದಾನೇ (ಕೊಡುವುದು.) || ೬೧ || ಲಾ = ಆದಾನೇ (ತೆಗೆದುಕೊಳ್ಳುವುದು.) || ೬೨ || ದಾಪ್ = ಲವನೇ (ಕತ್ತರಿಸುವುದು.) || ೬೩ || ಪಾ = ರಕ್ಷಣೇ (ಕಾಪಾಡುವುದು.) || ೬೪ || ಖ್ಯಾ = ಪ್ರಕಥನೇ (ಪ್ರಸಿದ್ಧಪಡಿಸುವುದು) ಅಯಂ ಸಾರ್ವಧಾತುಕ ಏವ ಪ್ರಯೋಕ್ತವ್ಯಃ | || ೬೫ | ವಿದ = ಜ್ಞಾನೇ (ತಿಳಿಯುವುದು.)**

ವಾ ಧಾತುವಿನಿಂದ ಖ್ಯಾ ಧಾತುವಿನ ವರೆಗೆ ಆದನ್ತ ಧಾತುಗಳು. ಅನಿಟ್. ಯಾ ಧಾತುವಿನಂತೇ ರೂಪ ಹೊಂದುತ್ತವೆ.

ವಾ || ವಾತಿ | ವವೌ | ವಾತಾ | ವಾಸ್ಯತಿ | ವಾತು, ವಾತಾತ್ | ಅವಾತ್ | ವಾಯಾತ್ | |ವಾಯಾತ್ | ವಾಯಾಸ್ತಾಮ್ | ಅವಾಸೀತ್ | ಅವಾಸ್ಯತ್ | || **ಭಾ** || ಭಾತಿ | |ಬಭೌ | ಭಾತಾ | ಭಾಸ್ಯತಿ | ಭಾತು, ಭಾತಾತ್ | ಅಭಾತ್ || | ಭಾಯಾತ್| ಭಾಯಾತ್ | | ಅಭಾಸೀತ್ | ಅಭಾಸ್ಯತ್ , **ಷ್ಣಾ** || 'ಧಾತ್ವಾದೇಃ ಷಃ ಸಃ' ಸ ಬಂದಾಗ ಣಕ್ಕೆ ನ ಬರುತ್ತದೆ. ಸ್ನಾತಿ | ಸಸ್ನೌ | ಸ್ನಾತಾ | ಸ್ನಾಸ್ಯತಿ | ಸ್ನಾತು, ಸ್ನಾತಾತ್ | ಅಸ್ನಾತ್ | ಸ್ನಾಯಾತ್ | ಸ್ನಾಯಾತ್ | ಅಸ್ನಾಸೀತ್ | ಅಸ್ನಾಸ್ಯತ್ || **ಶ್ರಾ** || ಶ್ರಾತಿ | | ಶಶ್ರೌ | ಶ್ರಾತಾ | ಶ್ರಾಸ್ಯತಿ | ಶ್ರಾತು, ಶ್ರಾತಾತ್ | ಅಶ್ರಾತ್ | ಶ್ರಾಯಾತ್ | ಶ್ರಾಯಾತ್ | ಅಶ್ರಾಸೀತ್ | ಅಶ್ರಾಸ್ಯತ್ || **ದ್ರಾ** || ದ್ರಾತಿ | ದದ್ರೌ | ದ್ರಾತಾ | ದ್ರಾಸ್ಯತಿ | ದ್ರಾತು, ದ್ರಾತಾತ್ | ಅದ್ರಾತ್ | ದ್ರಾಯಾತ್ | ದ್ರಾಯಾತ್| ಅದ್ರಾಸೀತ್ | ಅದ್ರಾಸ್ಯತ್ || **ಪ್ಸಾ** || ಪ್ಸಾತಿ | ಪಪ್ಸೌ | ಪ್ಸಾತಾ | ಪ್ಸಾಸ್ಯತಿ | ಪ್ಸಾತು, ಪ್ಸಾತಾತ್ | ಅಪ್ಸಾತ್ | ಪ್ಸಾಯಾತ್ | ಪ್ಸಾಯಾತ್ | ಅಪ್ಸಾಸೀತ್ | ಅಪ್ಸಾಸ್ಯತ್ || **ರಾ** || ರಾತಿ |ರರೌ | ರಾತಾ | ರಾಸ್ಯತಿ | ರಾತು, ರಾತಾತ್ | ಅರಾತ್ | ರಾಯಾತ್ | ರಾಯಾತ್ | ಅರಾಸೀತ್ | ಅರಾಸ್ಯತ್ || **ಲಾ** || ಲಾತಿ | ಲಲೌ | ಲಾತಾ | ಲಾಸ್ಯತಿ | ಲಾತು, ಲಾತಾತ್ | ಅಲಾತ್ | ಲಾಯಾತ್ | ಲಾಯಾತ್ | ಅಲಾಸೀತ್ | ಅಲಾಸ್ಯತ್ || **ದಾಪ್** || ಪಕಾರ ಇತ್. ದಾತಿ | ದದೌ | ದಾತಾ | ದಾಸ್ಯತಿ | ದಾತು, ದಾತಾತ್ | ಅದಾತ್ | ದಾಯಾತ್ | ದಾಯಾತ್ | ಅದಾಸೀತ್ | ಅದಾಸ್ಯತ್ || **ಪಾ** || ಪಾತಿ | ಪಪೌ | ಪಾತಾ | ಪಾಸ್ಯತಿ | ಪಾತು,

ಪಾತಾತ್ | ಅಪಾತ್ | ಪಾಯಾತ್ | ಪಾಯಾತ್ | ಅಪಾಸೀತ್ | ಅಪಾಸ್ಯತ್ || **ಖ್ಯಾ** || ಸಾರ್ವಧಾತುಗಳಲ್ಲಿ ಅಂದರೆ ಲಟ್, ಲೋಟ್, ಲಙ್, ವಿಧಿಲಿಙ್‌ಗಳಲ್ಲಿ ಮಾತ್ರ ಈ ಧಾತುವಿಗೆ ಪ್ರಯೋಗ. ಲಿಡಾದಿಗಳಲ್ಲಿ ಇಲ್ಲ. **ಖ್ಯಾತಿ** || ಖ್ಯಾತು, ಖ್ಯಾತಾತ್ | ಅಖ್ಯಾತ್ ಖ್ಯಾಯಾತ್ || **ವಿದ** || ಅಕಾರ ಇತ್. ಸೇಟ್. ಇದಕ್ಕೆ ಲಟ್ ಬಂದಾಗ ಲಟಿಗೆ ಣಲಾದಿ ಆದೇಶಗಳನ್ನು ಹೇಳುತ್ತಾನೆ.

ವಿದ್ ಧಾತುವಿನ ಲಟಿಗೆ ಣಲಾದ್ಯಾದೇಶ ಹೇಳುವ ಸೂತ್ರ

**೫೨೦. ವಿದೋ ಲಟೋ ವಾ || ೩-೪-೮೩ ||**

**ವೇತ್ತೇರ್ಲಟಃ ಪರಸ್ಮೈಪದಾನಾಂ ಣಲಾದಯೋ ವಾಸ್ಯುಃ | ವೇದ | ವಿದತುಃ | ವಿದುಃ | ವೇತ್ಥ | ವಿದಥುಃ | ವಿದ | ವೇದ | ವಿದ್ವ | ವಿದ್ಮ | ಪಕ್ಷೇ | ವೇತ್ತಿ | ವಿತ್ತಃ | ವಿದನ್ತಿ ||**

ತ್ರಿಪದ ಸೂತ್ರ. ವಿದಃ ಪಂಚಮೀ. ವಿದ್‌ಧಾತುವಿನ ಪರದಲ್ಲಿರುವ ಎಂದರ್ಥ. 'ಪರಸ್ಮೈಪದಾನಾಂ ಣಲತುಸುಸ್ಥ–'ಸೂತ್ರವು ಅನುವೃತ್ತವಾಗುತ್ತದೆ. **ಸೂತ್ರಾರ್ಥ** —ವಿದ್ ಧಾತುವಿನ ಪರದಲ್ಲಿರುವ ಲಟಿಗೆ ಆದೇಶವಾಗಿ ಬಂದ ತಿಬಾದಿ ಪರಸ್ಮೈಪದ ಪ್ರತ್ಯಯಗಳಿಗೆ ವಿಕಲ್ಪವಾಗಿ ಣಲ್ ಮುಂತಾದ ಆದೇಶಗಳು ಬರುತ್ತವೆ. ಣಲ್ ಅತುಸ್, ಉಸ್, ಥ, ಅಥುಸ್, ಅ, ಣಲ್, ವ, ಮ ಆದೇಶಗಳು ಹಿಂದೆ ಹೇಳಿವೆ. ಈಗ ಕ್ರಮವಾಗಿ ಣಲಾದಿಗಳು ಬಂದರೆ ವಿದ್+ಅ ಎಂದಿರುವಾಗ 'ಪುಗನ್ತಲಘೂಪಧಸ್ಯಚ' ಸೂತ್ರದಿಂದ ಲಘೂಪಧಗುಣ. ವೇದ. ವಿದ್+ಅತುಸ್. 'ಸಾರ್ವಧಾತುಕಮಪಿತ್' ಸೂತ್ರದಿಂದ ದ್ವಿಬಹುವಚನಗಳು ಙಿತ್ತಾಗುವುದರಿಂದ ಗುಣವಿಲ್ಲ. ವಿದತುಃ | ವಿದ್ + ಉಸ್ =ವಿದುಃ | ವಿದ್+ಥ. ಗುಣ. 'ಖರಿಚ' ಸೂತ್ರದಿಂದ ಚರ್ತ್ವ. ವೇತ್ಥ | ವಿದಥುಃ | ವಿದ || ವೇದ | ವಿದ್ವ | ವಿದ್ಮ || ಣಲಾದ್ಯಾದೇಶಗಳು ಬಾರದಿದ್ದರೆ ವಿದ್+ತಿ ಎಂದಿರುವಾಗ ಗುಣ, ಚರ್ತ್ವ. ವೇತ್ತಿ | ವಿತ್ತಃ | ವಿದನ್ತಿ || ವೇತ್ಸಿ | ವಿತ್ಥಃ | ವಿತ್ಥ || ವೇದ್ಮಿ | ವಿದ್ವಃ | ವಿದ್ಮಃ || ಎಂದಾಗುತ್ತದೆ. ಲಿಟಿನಲ್ಲಿ ಆಮ್ ವಿಕಲ್ಪವಾಗಿ ಹೇಳುತ್ತಾನೆ.

ಉಷಾದಿಗಳಿಗೆ ಆಮ್ ಹೇಳುವ ಸೂತ್ರ

**೫೨೧. ಉಷವಿದಜಾಗೃಭ್ಯೋಽನ್ಯತರಸ್ಯಾಮ್ || ೩-೧-೩೮ ||**

**ಏಭ್ಯೋ ಲಿಟಿ ಆಮ್ವಾ ಸ್ಯಾತ್ | ವಿದೇರದನ್ತತ್ವಪ್ರತಿಜ್ಞಾನಾದಾಮಿ ನ ಗುಣಃ | ವಿದಾಞ್ಚಕಾರ, ವಿವೇದ | ವೇದಿತಾ | ವೇದಿಷ್ಯತಿ ||**

ಉಷವಿದಜಾಗೃಭ್ಯಃ, ಅನ್ಯತರಸ್ಯಾಮ್ || ದ್ವಿಪದ ಸೂತ್ರ. 'ಕಾಸ್ ಪ್ರತ್ಯಯಾತ್—' ಸೂತ್ರದಿಂದ 'ಆಮ್', 'ಲಿಟಿ' ಪದಗಳು ಅನುವೃತ್ತವಾಗು

ತ್ತವೆ. **ಸೂತ್ರಾರ್ಥ—**ಉಷ, ವಿದ, ಜಾಗೃ ಈ ಮೂರು ಧಾತುಗಳಿಗೆ ಲಿಟ್ ಪರವಲ್ಲಿರುವಾಗ ಆಮ್ ಪ್ರತ್ಯಯ ವಿಕಲ್ಪವಾಗಿ ಬರುತ್ತದೆ. ಪ್ರಕೃತ ವಿದ ಧಾತುವಿಗೆ ಆಮ್ ಬಂದರೆ ವಿದ್+ಆಮ್+ಲಿಟ್ ಎಂದಾಗುತ್ತದೆ. 'ಆಮಃ' ಸೂತ್ರದಿಂದ ಲಿಟಿಗೆ ಲುಕ್. ಇಲ್ಲಿ ಆಮನ್ನು ನಿಮಿತ್ತೀಕರಿಸಿ ವಿದಿಗೆ 'ಪುಗಂತಲಘೂಪಧಸ್ಯಚ' ಸೂತ್ರದಿಂದ ಗುಣ ಏಕೆ ಬರಲಿಲ್ಲವೆಂಬುದಕ್ಕೆ 'ವಿದೇರದನ್ತತ್ವ –' ವಾಕ್ಯದಿಂದ ಸಮಾಧಾನ ಹೇಳುತ್ತಾನೆ. 'ಉಷವಿದ—' ಸೂತ್ರದಲ್ಲಿ ಆಮ್ ಹೇಳುವಾಗ ವಿದ ಎಂದು ಅದನ್ತವಾಗಿ ನಿಪಾತಮಾಡಿರುತ್ತಾನೆ. ಆಗ ಲಘೂಪಧವಿಲ್ಲದಿರುವುದರಿಂದ ಗುಣವಿಲ್ಲ. 'ಅತೋ ಲೋಪಃ' ಸೂತ್ರದಿಂದ ವಿದಿನ ಕೊನೆಯ ಅಕಾರಕ್ಕೆ ಲೋಪ. ವಿದಾಮ್ ಎಂದಿರುವಾಗ 'ಕೃಞ್ಚಾನುಪ್ರಯುಜ್ಯತೇ ಲಿಟಿ' ಸೂತ್ರದಿಂದ ಲಿಟ್ ಪರವಾದ ಕೃ, ಭೂ, ಅಸ್ ಧಾತುಗಳು ಅನುಪ್ರಯೋಗಹೊಂದುತ್ತವೆ. ಆಗ ವಿದಾಞ್ಚಕಾರ, ವಿದಾಮ್ಬಭೂವ, ವಿದಾಮಾಸ ಹೀಗೆ ಮೂರು ರೂಪಗಳು ಆಗುತ್ತವೆ. ಹಿಂದಿನಂತೇ (ಸೂ. ೪೭೩) ಇವುಗಳ ರೂಪವನ್ನು ತಿಳಿಯಬೇಕು. ಆಮ್ ಬಾರದಿದ್ದರೆ ವಿದಿಗೆ ದ್ವಿತ್ವಾದಿ. ವಿದ್‌ವಿದ್+ಅ. ವಿವಿದ್+ಅ. 'ಪುಗನ್ತ—' ಸೂತ್ರದಿಂದ ಗುಣ. ವಿವೇದ। ವಿವಿದತುಃ ವಿವಿದುಃ॥ ವಿವೇದಿಥ। ವಿವಿದಥುಃ। ವಿವಿದ॥ ವಿವೇದ। ವಿವಿದಿವ। ವಿವಿದಿಮ॥

**ಲುಟ್**॥ ವಿದ ಧಾತು ಅನೇಕ ವಿಕರಣಗಳಲ್ಲಿ ಹೇಳಿದೆ. ಅದಾದಿಪಠಿತವಾದ ವಿದ್ ಅನಿಟ್ ಆಗುವುದಿಲ್ಲ. ತಾಸಿಗೆ ಇಟ್. ಲಘೂಪಧಗುಣ. ವೇದಿತಾ। ವೇದಿತಾರೌ। ವೇದಿತಾರಃ॥ ವೇದಿತಾಸಿ। ವೇದಿತಾಸ್ಥಃ। ವೇದಿತಾಸ್ಥ॥ ವೇದಿತಾಸ್ಮಿ। ವೇದಿತಾಸ್ವಃ। ವೇದಿತಾಸ್ಮಃ॥ **ಲೃಟ್**॥ ವೇದಿಷ್ಯತಿ। ವೇದಿಷ್ಯತಃ। ವೇದಿಷ್ಯನ್ತಿ॥ ಇತ್ಯಾದಿ. **ಲೋಟ್**॥ ಇಲ್ಲಿಯೂ ಆಮ್, ಆಮಿನಮೇಲೆ ಕೃಞನ್ನೂ ವಿಕಲ್ಪವಾಗಿ ಹೇಳುತ್ತಾನೆ.

ವಿದ್ ಧಾತುವಿಗೆ ಲೋಟಿನಲ್ಲಿ ಆಮ್ ಹೇಳುವ ಸೂತ್ರ.

**೫೭೨. ವಿದಾಙ್ಕುರ್ವನ್ತ್ವಿತ್ಯನ್ಯತರಸ್ಯಾಮ್॥ ೩–೧–೪೧॥**
**ವೇತ್ತೇರ್ಲೋಟಿ ಆಮ್ ಗುಣಾಭಾವೋ ಲೋಟೋ ಲುಕ್ ಲೋಡನ್ತ ಕರೋತ್ಯನುಪ್ರಯೋಗಶ್ಚ ವಾ ನಿಪಾತ್ಯತೇ ಪುರುಷವಚನೇ ನ ವಿವಕ್ಷಿತೇ॥**

ವಿದಾಙ್ಕುರ್ವನ್ತು, ಇತಿ, ಅನ್ಯತರಸ್ಯಾಮ್॥ ತ್ರಿಪದ ಸೂತ್ರ. 'ಕೃಞ್ಚಾನುಪ್ರಯುಜ್ಯತೇ ಲಿಟಿ' ಸೂತ್ರವಾದಮೇಲೆ ಈ ಸೂತ್ರ ಹೇಳಿದೆ. ಇತಿ ಶಬ್ದದಿಂದ ಲೋಟಿನಲ್ಲಿಯೂ ಹೀಗೆಯೇ ಕೃಞ್ ಧಾತುವಿನ ಅನುಪ್ರಯೋಗ ಹೇಳಬೇಕು ಎಂದರ್ಥವಾಗುತ್ತದೆ. ಇಲ್ಲಿ ಪಾಣಿನಿಗಳೇ ನಿಪಾತಮಾಡಿರುತ್ತಾರೆ. ಸಿದ್ಧವಾದ

ಪ್ರಕ್ರಿಯೆಯುಳ್ಳ ಶಬ್ದವನ್ನು ತೋರಿಸುವುದೇ ನಿಪಾತ. ಯಾವ ಯಾವ ಕಾರ್ಯಗಳು ನಿಪಾತಿತವಾಗಿವೆಯೆಂಬುದನ್ನು ವೃತ್ತಿಯಲ್ಲಿ ವಿವರಿಸಿರುತ್ತಾನೆ. ಅದಾದಿಯ ವಿದ್ ಧಾತುವಿಗೆ ಲೋಟ್ ಪರವಾದಾಗ ಆಮ್ ಪ್ರತ್ಯಯವೂ, ಆಮ್ ಬಂದಮೇಲೆ ಆಮಿನ ಪರವಾದ ಲೋಟಿಗೆ ಲುಕ್, ಆಮಿನಮೇಲೆ ಲೋಡನ್ತವಾದ ಕೃಞ್ ಧಾತುವಿನ ಅನುಪ್ರಯೋಗವೂ ಬರುತ್ತವೆಯೆಂದು 'ವಿದಾಙ್ಕುರ್ವನ್ತು' ಎಂಬುದರಿಂದ ನಿಪಾತ ಮಾಡಿರುತ್ತಾನೆ. ಸೂತ್ರದಲ್ಲಿ ಪ್ರಥಮಪುರುಷಬಹುವಚನವು ನಿರ್ದಿಷ್ಟವಾದರೂ ಇತಿ ಶಬ್ದ ಕೊಟ್ಟಿರುವುದರಿಂದ ಪುರುಷವಚನವಿವಕ್ಷಾ ಇಲ್ಲವೆಂದು ತಿಳಿಯುತ್ತದೆ. ಕಾರ್ಯ ತೋರಿಸಲು ಯಾವುದೋ ಒಂದು ರೂಪವನ್ನು ಹೇಳಿರುತ್ತಾನೆ. ಪ್ರಕೃತ ಆಮ್ ಬಂದು ಅದರಮೇಲೆ ಲೋಡನ್ತವಾದ ಕೃಞ್ ಧಾತು ಬಂದರೆ ವಿದಾಮ್+ಕೃ+ತು ಎಂದಾಗುತ್ತದೆ. ಈಗ ಕೃಞಿಗೆ ಪ್ರಕ್ರಿಯೆ ಹೇಳುತ್ತಾನೆ.

ತನಾದಿಗಳಿಗೂ, ಕೃಞಿಗೂ ಉ ವಿಕರಣ ಹೇಳುವ ಸೂತ್ರ.

೫೭೩. ತನಾದಿಕೃಞ್ಭ್ಯ ಉಃ || ೩-೧-೭೯ ||

ತನಾದೇಃ ಕೃಞಶ್ಚ ಉಃ ಪ್ರತ್ಯಯಃ ಸ್ಯಾತ್ | ಶಪೋಽಪವಾದಃ | ಗುಣೌ | ವಿದಾಙ್ಕರೋತು ||

ತನಾದಿಕೃಞ್ಭ್ಯಃ, ಉಃ || ದ್ವಿಪದ ಸೂತ್ರ. 'ಸಾರ್ವಧಾತುಕೇ ಯಕ್' ಸೂತ್ರದಿಂದ 'ಸಾರ್ವಧಾತುಕೇ', 'ಕರ್ತರಿ ಶಪ್' ಸೂತ್ರದಿಂದ 'ಕರ್ತರಿ' ಪದ ಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ—ತನಾದಿಧಾತುಗಳಿಗೂ, ಕೃಞ್ ಧಾತು ವಿಗೂ, ಕರ್ತ್ರರ್ಥಕವಾದ ಸಾರ್ವಧಾತುಕಗಳು ಪರದಲ್ಲಿರುವಾಗ ಉ ವಿಕರಣಪ್ರತ್ಯಯ ಬರುತ್ತದೆ. ಪ್ರಕೃತ ಲೋಡಾದೇಶಗಳು ಕರ್ತ್ರರ್ಥಕ ಸಾರ್ವಧಾತುಕಗಳಾಗಿವೆ. ಆಗ ಉ ವಿಕರಣ ಬಂದರೆ ವಿದಾಮ್+ಕೃ+ಉ+ತು ಎಂದಾಗುತ್ತದೆ. ಇಲ್ಲಿ 'ಕರ್ತರಿ ಶಪ್' ಸೂತ್ರದಿಂದ ಸಾಮಾನ್ಯವಾಗಿ ಶಪ್ ಬರುತ್ತಿರುವಾಗ ಉ ಹೇಳಿರು ವುದರಿಂದ ಶಪಿಗೆ ಅಪವಾದವೆಂದು ತಿಳಿಯಬೇಕು. ತನಾದಿಧಾತುಗಳನ್ನು ಮುಂದೆ ಹೇಳುತ್ತಾನೆ. ಶಪ್‌ವಿಕರಣ ಭ್ವಾದಿ, ಲುಗ್ವಿಕರಣ ಅದಾದಿ ಹೇಗೋ ಉ ವಿಕರಣ ತನಾದಿಯೆಂದು ತಿಳಿಯಬೇಕು. ಉ ಶಿತ್ತಾಗದಿರುವುದರಿಂದ ಆರ್ಧಧಾತುಕವಾಗ ತ್ತದೆ. ಅದನ್ನು ನಿಮಿತ್ತೀಕರಿಸಿ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಕೃಞಿನ ಋಕಾರಕ್ಕೆ ಗುಣ. ಕರ್+ಉ+ತು. ತು ಸಾರ್ವಧಾತುಕವನ್ನು ನಿಮಿತ್ತೀ ಕರಿಸಿ ಉಕಾರಕ್ಕೆ ಗುಣ. ವಿದಾಙ್ಕರೋತು ಎಂದಾಗುತ್ತದೆ. ತುವಿಗೆ ಆಶೀರರ್ಥದಲ್ಲಿ ತಾತಙ್ ಬಂದಾಗ ಅದು ಙಿತ್ತಾದುದರಿಂದ ಉಕಾರಕ್ಕೆ ಅದನ್ನು ನಿಮಿತ್ತೀಕರಿಸಿ ಗುಣವಿಲ್ಲ. ವಿದಾಮ್+ಕೃ+ಉ+ತಾತ್ ಎಂದಿರುವಾಗ ಉ ಪ್ರತ್ಯಯವನ್ನು ನಿಮಿತ್ತೀಕರಿಸಿ ಮೊದಲು ಕೃಞಿಗೆ ಗುಣಮಾಡಿಕೊಳ್ಳಬೇಕು. ವಿದಾಮ್+ಕರ್ ಉತಾತ್ ಎಂದಿರುವಾಗ ಕರಿನ ಅಕಾರಕ್ಕೆ ಉಕಾರ ಹೇಳುತ್ತಾನೆ.

ಕೃಞ್‌ನ ಅಕಾರಕ್ಕೆ ಉತ್ವ ಹೇಳುವ ಸೂತ್ರ,

**೫೭೪. ಅತ ಉತ್ಸಾರ್ವಧಾತುಕೇ || ೬-೪-೧೧೦ ||**

**ಉಪ್ರತ್ಯಯಾನ್ತಸ್ಯ ಕೃಞೋऽತ ಉತ್ಸಾರ್ವಧಾತುಕೇ ಕ್ಙಿತಿ | ವಿದಾಙ್ಕುರುತಾತ್ | ವಿದಾಙ್ಕುರುತಾಮ್ | ವಿದಾಙ್ಕುರ್ವನ್ತು | ವಿದಾಙ್ಕುರು | ವಿದಾಙ್ಕರವಾಣಿ || ಅವೇತ್ | ಅವಿತ್ತಾಮ್ | ಅವಿದುಃ ||**

ಅತಃ, ಉತ್, ಸಾರ್ವಧಾತುಕೇ || ತ್ರಿಪದ ಸೂತ್ರ, 'ಉತಶ್ಚ ಪ್ರತ್ಯಯಾತ್—' ಸೂತ್ರದಿಂದ 'ಉತಃ', 'ನಿತ್ಯಂ ಕರೋತೇಃ' ಸೂತ್ರದಿಂದ 'ಕರೋತೇಃ' ಪದಗಳು ಅನುವೃತ್ತವಾಗುತ್ತವೆ. ಉತಃ 'ಕರೋತೇಃ' ಎಂಬುದಕ್ಕೆ ವಿಶೇಷಣ. 'ಯೇನವಿಧಿಸ್ತದನ್ತಸ್ಯ' ಪರಿಭಾಷೆಯಿಂದ ತದನ್ತಲಾಭ. 'ಗಮಹನ –' ಸೂತ್ರದಿಂದ 'ಙ್ಕ್ತಿ' ಅನುವೃತ್ತವಾಗುತ್ತದೆ, **ಸೂತ್ರಾರ್ಥ**—ಉಪ್ರತ್ಯಯಾನ್ತವಾದ ಕೃಞ್ ಧಾತುವಿನ ಅಕಾರಕ್ಕೆ ಸಾರ್ವಧಾತುಕವಾದ ಕಿತ್, ಙಿತ್ ಪ್ರತ್ಯಯ ಪರವಾದಾಗ ಉಕಾರಾದೇಶ ಬರುತ್ತದೆ. ಪ್ರಕೃತ ತಾತಙ್ ಸಾರ್ವಧಾತುಕವಾದಙಿತ್ ಆದುದರಿಂದ ಅದು ಪರವಾದಾಗ ಗುಣದಿಂದ ಬಂದ ಕೃಞ್‌ನ ಅಕಾರಕ್ಕೆ ಉಕಾರ ಬಂದರೆ ವಿದಾಂಕುರುತಾತ್ ಎಂದಾಗುತ್ತದೆ. ತಾತಙ್ ಙಿತ್ತಾದುದರಿಂದ ಉಕಾರಕ್ಕೆ ಗುಣವಿಲ್ಲ. ದ್ವಿವಚನಬಹುವಚನಗಳು 'ಸಾರ್ವಧಾತುಕಮಪಿತ್' ಸೂತ್ರದಿಂದ ಙಿತ್ತಾಗುವುದರಿಂದ ಅಲ್ಲಿಯೂ ಈ ಉತ್ವ ಬರುತ್ತದೆ. ಉಕಾರಕ್ಕೆ ಗುಣವೂ ಬರುವುದಿಲ್ಲ. ವಿದಾಂಕುರುತಾಮ್ | ವಿದಾಂಕುರು + ಅನ್ತು. ಯಣ್. ವಿದಾಂಕುರ್ವನ್ತು | ವಿದಾಂಕುರು + ಹಿ ಎಂದಿರುವಾಗ 'ಉತಶ್ಚಪ್ರತ್ಯಯಾದಸಂಯೋಗಪೂರ್ವಾತ್' (ಸೂ. ೫೦೪) ಸೂತ್ರದಿಂದ ಹಿಗೆ ಲುಕ್. ವಿದಾಂಕುರು, ವಿದಾಂಕುರುತಾತ್ | ವಿದಾಂಕುರುತಮ್ | ವಿದಾಂಕುರುತ || ವಿದಾಮ್ + ಕೃ + ಉ + ಆನಿ. ಉ ನಿಮಿತ್ತವಾಗಿ ಋಕಾರಕ್ಕೆ ಗುಣ. ಆಟ್ ಉತ್ತಮಕ್ಕೆ ಬಂದು ಪಿತ್ತಾಗುವುದರಿಂದ ಅದನ್ನು ನಿಮಿತ್ತೀಕರಿಸಿ ಮೂರು ವಚನಗಳಲ್ಲಿಯೂ ಉವಿಗೆ ಗುಣ. ಅದಕ್ಕೆ ಅವಾದೇಶ. ವಿದಾಂಕರವಾಣಿ | ವಿದಾಂಕರವಾವ | ವಿದಾಂಕರವಾಮ ||

ಲಙ್ || ಅವಿದ್ + ತ್. 'ಹಲ್ಙ್ಯಾಭ್ಯೋ—' ಸೂತ್ರದಿಂದ ತಲೋಪ. ಲಘೂಪಧಗುಣ. 'ವಾವಸಾನೇ' ವಿಕಲ್ಪಚರ್ತ್ವ. ಅವೇತ್, ಅವೇದ್. ಅವಿದ್ + ತಾಮ್. 'ಖರಿಚ' ಅವಿತ್ತಾಮ್. ಅವಿದ್ + ಝಿ. 'ಸಿಜಭ್ಯಸ್ತವಿದಿಭ್ಯಶ್ಚ" ಸೂತ್ರದಿಂದ ಝಿಗೆ ಜುಸ್. ಅವಿದುಃ | ಅವೇದ್ + ಸ್. 'ಹಲ್ಙ್ಯಾಭ್ಯೋ—" ಸಲೋಪ. ಅವೇದ್ ಎಂದಿರುವಾಗ ದಕಾರಕ್ಕೆ ವಿಕಲ್ಪವಾಗಿ ರುತ್ವ ಹೇಳುತ್ತಾನೆ.

ಧಾತುವಿನ ದಕಾರಕ್ಕೆ ರುತ್ವ ಹೇಳುವ ಸೂತ್ರ.

**೫೭೫. ದಶ್ಚ ||೮-೨-೭೫||**

**ಧಾತೋರ್ದಸ್ಯ ಪದಾನ್ತಸ್ಯ ಸಿಪಿ ರುರ್ವಾ । ಅವೇಃ, ಅವೇತ್ । ವಿದ್ಯಾತ್ । ವಿದ್ಯಾತಾಮ್ । ವಿದ್ಯುಃ ॥ ವಿದ್ಯಾತ್ । ವಿದ್ಯಾಸ್ತಾಮ್ ॥ ಅವೇದೀತ್ ॥ ಅವೇದಿಷ್ಯತ್ ॥**

ದಃ, ಚ || ದ್ವಿಪದ ಸೂತ್ರ. 'ಸಿಪಿ ಧಾತೋ ರುರ್ವಾ' ಸೂತ್ರವೇ ಅನುವೃತ್ತವಾಗುತ್ತದೆ. ದಃ ಷಷ್ಠ್ಯನ್ತಪದವು ಧಾತುವಿಗೆ ವಿಶೇಷಣ. ತದನ್ತಲಾಭ. 'ಪದಸ್ಯ' ಅಧಿಕಾರ. 'ಅಲೋನ್ತ್ಯಸ್ಯ' ಪರಿಭಾಷೆಯಿಂದ ಲಬ್ಧವಾದ ಅರ್ಥವನ್ನು ಸೇರಿಸಿ ವೃತ್ತಿಯಲ್ಲಿ ವಿವರಿಸಿರುತ್ತಾನೆ. **ಸೂತ್ರಾರ್ಥ** – ಧಾತುವಿನ ಪದಾನ್ತವಾದ ದಕಾರಕ್ಕೆ ಸಿಪ್ ಪರದಲ್ಲಿರುವಾಗ ರುತ್ವವು ವಿಕಲ್ಪವಾಗಿ ಬರುತ್ತದೆ. ಅವೇದ್ ಎಂಬಲ್ಲಿ ಧಾತುವಿನ ಪದಾನ್ತದಕಾರವಿದೆ. ಅದಕ್ಕೆ ರುತ್ವ ಬಂದರೆ ಅವೇರ್ ಎಂದಾಗುತ್ತದೆ. 'ಖರವಸಾನಯೋರ್ವಿಸರ್ಜನೀಯಃ' ಸೂತ್ರದಿಂದ ರೇಫಕ್ಕೆ ವಿಸರ್ಗ. ಅವೇಃ । ರುತ್ವ ಬಾರದಿದ್ದರೆ ಅವೇತ್, ಅವೇದ್ ಎಂದು ಹಿಂದಿನಂತೆ ಎರಡು ರೂಪ. ಅವಿತ್ತಮ್ । ಅವಿತ್ತ । ಅವೇದಂ । ಅವಿದ್ವ । ಅವಿದ್ಮ ॥

**ವಿಧಿಲಿಙ್** || ಸಾರ್ವಧಾತುಕವಾದುದರಿಂದ 'ಲಿಙಃ ಸಲೋಪಃ—' ಸೂತ್ರದಿಂದ ಸಲೋಪ. ಆಶೀರ್ಲಿಙ್‌ನಲ್ಲಿ ಸಲೋಪವಿಲ್ಲ. ವಿದ್ಯಾತ್ । ವಿದ್ಯಾತಾಮ್ । ವಿದ್ಯುಃ || ವಿದ್ಯಾಃ । ವಿದ್ಯಾತಮ್ । ವಿದ್ಯಾತ || ವಿದ್ಯಾಮ್ ವಿದ್ಯಾವ । ವಿದ್ಯಾಮ || **ಆಶೀರ್ಲಿಙ್** || ವಿದ್ಯಾತ್ । ವಿದ್ಯಾಸ್ತಾಮ್ । ವಿದ್ಯಾಸುಃ || ವಿದ್ಯಾಃ । ವಿದ್ಯಾಸ್ತಮ್ । ವಿದ್ಯಾಸ್ತ । ವಿದ್ಯಾಸಮ್ । ವಿದ್ಯಾಸ್ವ । ವಿದ್ಯಾಸ್ಮ || **ಲುಙ್** || ಅವಿದ್ + ಇಸ್ + ಈತ್. ಗುಣ. 'ಇಟ ಈಟಿ' ಸಲೋಪ. ಅವೇದೀತ್ । ಅವೇದಿಷ್ಟಾಮ್ । ಅವೇದಿಷುಃ || ಅವೇದೀಃ । ಅವೇದಿಷ್ಟಮ್ । ಅವೇದಿಷ್ಟ || ಅವೇದಿಷಮ್ । ಅವೇದಿಷ್ವ । ಅವೇದಿಷ್ಮ || **ಲೃಙ್** || ಅವೇದಿಷ್ಯತ್ । ಅವೇದಿಷ್ಯತಾಮ್ । ಇತ್ಯಾದಿ.

**|| ೬೭ || ಅಸ=ಭುವಿ (ಇರುವಿಕೆ) ಅಸ್ತಿ ।**

ಅಸ್ ಧಾತು. ತಿ ಪರವಾದಾಗ ಶಪಿಗೆ ಲುಕ್. ಅಸ್ತಿ. ಅಸ್ + ತಸ್ ಎಂದಿರುವಾಗ ಅಸಿನ ಅಕಾರಕ್ಕೆ ಲೋಪ ಹೇಳುತ್ತಾನೆ.

ಶ್ನ, ಅಸ್ ಧಾತುಗಳ ಅಕಾರಕ್ಕೆ ಲೋಪ ಹೇಳುವ ಸೂತ್ರ.

**೫೭೬. ಶ್ನಸೋರಲ್ಲೋಪಃ ||೬-೪-೧೧೧||**

**ಶ್ನಸ್ಯಾಸ್ತೇಶ್ಚಾತೋ ಲೋಪಃ ಸಾರ್ವಧಾತುಕೇ ಕ್ಙಿತಿ । ಸ್ತಃ । ಸನ್ತಿ । ಅಸಿ । ಸ್ಥಃ । ಸ್ಥ । ಅಸ್ಮಿ । ಸ್ವಃ । ಸ್ಮಃ ॥**

ಶ್ನಸೋಃ, ಅತ್, ಲೋಪಃ || ತ್ರಿಪದ ಸೂತ್ರ. 'ಅತ ಉತ್ಸಾರ್ವಧಾತುಕೇ' ಸೂತ್ರದಿಂದ 'ಸಾರ್ವಧಾತುಕೇ', 'ಗಮಹನ—' ಸೂತ್ರದಿಂದ 'ಕ್ಙಿತಿ' ಪದಗಳು ಅನುವೃತ್ತವಾಗುತ್ತವೆ. 'ಅತ್' ಲುಪ್ತಷಷ್ಠೀಕಪದ. ಹ್ರಸ್ವಾಕಾರಕ್ಕೆ ಎಂದರ್ಥ. ಶ್ನಶ್ಚ ಅಸ್ ಚ ಶ್ನಸೌ. ತಯೋಃ ಶ್ನಸೋಃ | ಶ್ನಮ್ ವಿಕರಣಪ್ರತ್ಯಯವನ್ನು ಶ್ನ ಎಂದು ನಿರ್ದೇಶಿಸಿರುತ್ತಾನೆ. ರುಧಾದಿಗಣಕ್ಕೆ ಮುಂದೆ ಶ್ನಮ್ ವಿಕರಣ ಹೇಳುತ್ತಾನೆ. **ಸೂತ್ರಾರ್ಥ**—ಶ್ನಮ್ ವಿಕರಣ ಮತ್ತು ಅಸ್ ಧಾತುವಿನ ಅಕಾರಕ್ಕೆ ಕಿತ್, ಙಿತ್ ಆದ ಸಾರ್ವಧಾತುಕಪರದಲ್ಲಿರುವಾಗ ಲೋಪಬರುತ್ತದೆ. 'ಸಾರ್ವಧಾತುಕಮಪಿತ್' ಸೂತ್ರದಿಂದ ದ್ವಿವಚನ ಬಹುವಚನಗಳು ಙಿತ್ತಾಗುತ್ತವೆ. ಅಸ್+ತಸ್ ಎಂದಿರುವಾಗ ಅಸಿನ ಅಕಾರಕ್ಕೆ ಲೋಪಬಂದರೆ ಸ್+ತಸ್=ಸ್ತಃ ಎಂದಾಗುತ್ತದೆ. ಅಸ್+ಅನ್ತಿ. ಅಲೋಪ ಬಂದರೆ ಸನ್ತಿ | ಅಸ್+ಸಿ. 'ತಾಸಸ್ತ್ಯೋರ್ಲೋಪಃ' ಸೂತ್ರದಿಂದ ಅಸಿನ ಸಕಾರಕ್ಕೆ ಲೋಪ. ಅಸಿ. ಅಸ್+ಥಸ್. ಸ್+ಥಸ್=ಸ್ಥಃ | ಅಸ್+ಥ=ಸ್ಥ | ಅಸ್+ಮಿ=ಅಸ್ಮಿ. ಅಸ್+ವಸ್. ಸ್+ವಸ್=ಸ್ವಃ | ಅಸ್+ಮಸ್=ಸ್ಮಃ || ಅಸ್ ಧಾತುವಿನ ಸಕಾರ, ಆದೇಶವೂ, ಪ್ರತ್ಯಯಾವಯವವೂ ಅಲ್ಲವಾದುದರಿಂದ ಇಣ್ಕುವಿನ ಪರದಲ್ಲಿದ್ದರೂ ಅದಕ್ಕೆ ಷತ್ವ ಬರುವುದಿಲ್ಲ. ಆದರೆ ಉಪಸರ್ಗದ ಇಣಿನ ಪರದಲ್ಲಿದ್ದರೆ ಅಲ್ಲಿ ವಿಶೇಷವಾಗಿ ಷತ್ವ ಹೇಳುತ್ತಾನೆ.

ಅಸ್ ಧಾತುಸಕಾರಕ್ಕೆ ಷತ್ವ ಹೇಳುವ ಸೂತ್ರ.

**೫೭೭. ಉಪಸರ್ಗೇಣಃ ಪ್ರಾದುರ್ಭ್ಯಾಮಸ್ತಿರ್ಯಚ್‌ಪರಃ || ೮–೩–೮೭ ||**

**ಉಪಸರ್ಗೇಣಃ ಪ್ರಾದುಸಶ್ಚಾಸ್ತೇಃ ಸಸ್ಯ ಷೋ ಯಕಾರೇಽಚಿ ಚ ಪರೇ | ನಿಷ್ಯಾತ್ | ಪ್ರನಿಷನ್ತಿ | ಪ್ರಾದುಃ ಷನ್ತಿ | ಯಚ್‌ಪರಃ ಕಿಮ್ ? ಅಭಿಸ್ತಃ ||**

ಉಪಸರ್ಗಪ್ರಾದುರ್ಭ್ಯಾಮ್, ಅಸ್ತಿಃ, ಯಚ್‌ಪರಃ || ತ್ರಿಪದ ಸೂತ್ರ. 'ಅಸ್ತಿಃ |' ಅಸ್ ಧಾತುವನ್ನು ಶ್ತಿಪಿನಿಂದ ನಿರ್ದೇಶಿಸಿರುತ್ತಾನೆ. ಷಷ್ಠ್ಯರ್ಥದಲ್ಲಿ ಪ್ರಥಮಾ ಹೇಳಿದೆ. ಉಪಸರ್ಗಶ್ಚ, ಪ್ರಾದುಸ್ ಚ ಉಪಸರ್ಗಪ್ರಾದುಸೌ. ತಾಭ್ಯಾಮ್ 'ಇಣ್ಕೋಃ' ಅಧಿಕಾರ. 'ಕೋಃ' ಎಂಬುದಕ್ಕೆ ಅನ್ವಯವಿಲ್ಲವಾದುದರಿಂದ ಇಲ್ಲಿ ಸಂಬಂಧವಿಲ್ಲ. ಇಣಿಗೆ ಉಪಸರ್ಗದಲ್ಲಿ ಮಾತ್ರ ಸಂಬಂಧ. ಪ್ರಾದುಸಿನಲ್ಲಿ ಕೊನೆಯಲ್ಲಿ ಸಕಾರವಿರುವುದರಿಂದ ಸಂಬಂಧವಿಲ್ಲ. ಯ್, ಅಚ್ ಚ ಯಚೌ. ಯಚೌ ಪರೌ ಯಸ್ಮಾತ್ ಸಃ ಯಚ್‌ಪರಃ | ಯಕಾರ, ಅಚ್ ಪರದಲ್ಲಿರುವ ಅಸ್ ಧಾತುವಿಗೆ ಎಂದರ್ಥ. 'ಅಪದಾನ್ತಸ್ಯ ಮೂರ್ಧನ್ಯಃ' ಅಧಿಕಾರ. 'ಸಹೇಃ ಸಾಡಃ ಸಃ' ಸೂತ್ರದಿಂದ 'ಸಃ' ಅನುವೃತ್ತಿ. **ಸೂತ್ರಾರ್ಥ**—ಉಪಸರ್ಗದಲ್ಲಿರುವ ಇಣಿನ ಪರವಾದ ಮತ್ತು ಪ್ರಾದುಸಿನ ಪರದಲ್ಲಿರುವ ಅಸ್ ಧಾತುವಿನ ಸಕಾರಕ್ಕೆ ಯಕಾರವಾಗಲೀ

ಅಜಾಗಲೀ ಪರವಾದರೆ ಷತ್ವ (ಮೂರ್ಧನ್ಯಾದೇಶ) ಬರುತ್ತದೆ. ನಿ+ಸ್ಯಾತ್. ಉಪಸರ್ಗ ನಿ. ಅದರ ಇಣ್ ಇಕಾರ. ಅದರ ಪರದಲ್ಲಿ ಅಸ್ ಧಾತುವಿನ ಸಕಾರ ಬಂದಿದೆ. ಅವಕ್ಕೆ ಯಕಾರ ಪರದಲ್ಲಿರುವುದರಿಂದ ಷತ್ವ ಬಂದರೆ ನಿಷ್ಯಾತ್. ಪ್ರ+ನಿ+ಸನ್ತಿ. ಉಪಸರ್ಗ ನಿ. ಅದರ ಇಣ್ ಇಕಾರ. ಅದರ ಪರದಲ್ಲಿ ಅಸ್ ಧಾತು ಸಕಾರವಿದೆ. ಅದಕ್ಕೆ ಅಚ್ (ಅ) ಪರವಾದುದರಿಂದ ಷತ್ವ. ಪ್ರನಿಷನ್ತಿ. ಪ್ರಾದುಸ್+ಸನ್ತಿ. ಪ್ರಾದುಸಿನ ಪರದಲ್ಲಿರುವ ಅಸಿನ ಸಕಾರಕ್ಕೆ ಷತ್ವ. ಇಲ್ಲಿಯೂ ಅಚ್ ಪರದಲ್ಲಿದೆ ಪ್ರಾದುಸಿನ ಸಕಾರಕ್ಕೆ ರುತ್ವವಿಸರ್ಗ. ಪ್ರಾದುಃ ಷನ್ತಿ. ಯಕಾರ ಅಥವಾ ಅಚ್ ಪರವಾದಾಗ ಮಾತ್ರ ಷತ್ವವೆಂದುದೇಕೆ ? ಅಭಿಸ್ತಃ—ಇಲ್ಲಿ ಷತ್ವ ಬರುವುದಿಲ್ಲ. ಅಧಿ ಉಪಸರ್ಗ. ಅದರ ಇಣ್ ಇಕಾರ ಅದರ ಪರದಲ್ಲಿ ಅಸಿನ ಸಕಾರವಿದೆ. ಆದರೆ ಅದಕ್ಕೆ ತಕಾರ ಪರವಾಗಿದೆ. ಅಚ್ ಅಥವಾ ಯಕಾರವಿಲ್ಲದುದರಿಂದ ಷತ್ವ ಬರುವುದಿಲ್ಲ. ಅಭಿಸ್ತಃ || ಅಸ್ ಧಾತುವಿಗೆ ಸಾರ್ವಧಾತುಕಗಳಲ್ಲಿ ಮಾತ್ರ ವಿಶೇಷರೂಪಗಳು-ಲಿಡಾದ್ಯಾರ್ಧಧಾತುಕಗಳಲ್ಲಿ ಭೂ ಆದೇಶ ಹೇಳುವುದರಿಂದ ಭೂ ಧಾತುವಿನ ರೂಪವೇ ಆಗುತ್ತದೆ.

ಅಸ್ ಧಾತುವಿಗೆ ಭೂ ಆದೇಶ ಹೇಳುವ ಸೂತ್ರ.

೫೩೮. ಅಸ್ತೇರ್ಭೂಃ || ೨-೪-೫೨ ||

**ಆರ್ಧಧಾತುಕೇ || ಬಭೂವ | ಭವಿತಾ | ಭವಿಷ್ಯತಿ | ಅಸ್ತು, ಸ್ತಾತ್ | ಸ್ತಾಮ್ | ಸನ್ತು ||**

ಅಸ್ತೇಃ, ಭೂಃ || ದ್ವಿಪದ ಸೂತ್ರ. ಅಸ್ ಧಾತುವು ಶ್ತಿಪಿನಿಂದ ನಿರ್ದಿಷ್ಟವಾಗಿದೆ. 'ಆರ್ಧಧಾತುಕೇ' ಅಧಿಕಾರ. **ಸೂತ್ರಾರ್ಥ**—ಅಸ್ ಧಾತುವಿಗೆ ಆರ್ಧಧಾತುಕಪರವಾದಾಗ ಭೂ ಆದೇಶ ಬರುತ್ತದೆ. ಲಿಟ್, ಲುಟ್, ಲೃಟ್, ಆಶೀರ್ಲಿಙ್ ಲುಙ್, ಲೃಙ್ ಲಕಾರಗಳಲ್ಲಿ ಭೂ ಆದೇಶವೆಂದು ತಿಳಿಯಬೇಕು. ಆಗ ಆಯಾ ಲಕಾರಗಳಿಂದ ಕೂಡಿದ ಭೂಧಾತುವಿನ ರೂಪಗಳೇ ಅಸ್ ಧಾತುವಿನ ರೂಪಗಳಾಗುತ್ತವೆ.

**ಲಿಟ್** || ಬಭೂವ | **ಲುಟ್** || ಭವಿತಾ | **ಲೃಟ್** || ಭವಿಷ್ಯತಿ || **ಲೋಟ್** || ಅಸ್+ತು=ಅಸ್ತು. ತಾತಙ್ ಬಂದಾಗ 'ಶ್ನಸೋರಲ್ಲೋಪಃ' ಸೂತ್ರದಿಂದ ಅಸಿನ ಅಕಾರಕ್ಕೆ ಲೋಪ. ಸ್ತಾತ್. ಅಸ್+ತಾಮ್. ಅಲೋಪ. ಸ್ತಾಮ್. ಅಸ್+ಅನ್ತು=ಸನ್ತು. ಅಸ್+ಸಿಪ್. ಸಿಪಿಗೆ ಹಿ ಆದೇಶ. ಅಸ್+ಹಿ ಎಂದಿರುವಾಗ ಅಸಿಗೆ ಏತ್ವ ಹೇಳುತ್ತಾನೆ.

ಘು, ಅಸ್‌ಗಳಿಗೆ ಏತ್ವ ಹೇಳುವ ಸೂತ್ರ.

**೫೭೯. ಘ್ವಸೋರೇದ್ಧಾವಭ್ಯಾಸಲೋಪಶ್ಚ || ೬-೪-೧೧೯ ||**

**ಘೋರಸ್ತೇಶ್ಚ ಏತ್ವಂ ಸ್ಯಾದ್ಧೌ ಪರೇ ಅಭ್ಯಾಸಲೋಪಶ್ಚ | ಏತ್ವಸ್ಯಾಸಿದ್ಧತ್ವಾದ್ಧೇರ್ಧಿಃ | ಶ್ನಸೋರಿತ್ಯಲ್ಲೋಪಃ | ತಾತಙ್ ಪಕ್ಷೇ ಏತ್ವಂ ನ, ಪರೇಣ ತಾತಙಾ ಬಾಧಾತ್ | ಏಧಿ, ಸ್ತಾತ್ | ಸ್ತಮ್, ಸ್ತ | ಅಸಾನಿ | ಅಸಾವ | ಅಸಾಮ | ಆಸೀತ್ | ಆಸ್ತಾಮ್ | ಆಸನ್ | ಸ್ಯಾತ್ | ಸ್ಯಾತಾಮ್ | ಸ್ಯುಃ | ಭೂಯಾತ್ | ಅಭೂತ್ | ಅಭವಿಷ್ಯತ್ ||**

ಘ್ವಸೋಃ, ಏತ್, ಹೌ, ಅಭ್ಯಾಸಲೋಪಃ, ಚ | ಐದು ಪದಗಳುಳ್ಳ ಸೂತ್ರ. ಘುಶ್ಚ ಅಸ್‌ಚ ಘ್ವಸೌ. ತಯೋಃ | ದಾರೂಪ ಧಾರೂಪ ಧಾತುಗಳಿಗೆ ಘುಸಂಜ್ಞಾ ಹೇಳಿರುತ್ತಾನೆ. **ಸೂತ್ರಾರ್ಥ—** ಘುಸಂಜ್ಞೆಯುಳ್ಳಧಾತುಗಳಿಗೂ ಅಸ್ ಧಾತುವಿಗೂ ಹಿ ಪರದಲ್ಲಿರುವಾಗ ಏಕಾರ ಆದೇಶವೂ ಅಭ್ಯಾಸಲೋಪವೂ ಬರುತ್ತವೆ. ಅಭ್ಯಾಸ ಲೋಪ, ಘುಸಂಜ್ಞಕ ಧಾತುಗಳಿಗೆ ಜುಹೋತ್ಯಾದಿಯಲ್ಲಿ ದ್ವಿತ್ವಬರುವುದರಿಂದ ಅಲ್ಲಿ ಹೇಳಬೇಕು. ಪ್ರಕೃತ ಅಸ್ ಧಾತುವಿಗೆ ಹಿ ಪರದಲ್ಲಿರುವುದರಿಂದ ಏತ್ವ ಬಂದರೆ ಅಏ+ಹಿ ಎಂದಾಗುತ್ತದೆ. 'ಅಸಿದ್ಧವದತ್ರಾಭಾತ್' ಸೂತ್ರದಿಂದ ಇಲ್ಲಿ ಏತ್ವ ಬಂದಿರುವುದು ಅಸಿದ್ಧವಾಗುವುದರಿಂದ 'ಹುಝುಲ್ಭ್ಯೋಹೇರ್ಧಿಃ' ಸೂತ್ರವು ಸಕಾರವಿದೆಯೆಂದೇ ತಿಳಿದುದರಿಂದ ಝುಲಂತದಪರದಲ್ಲಿ ಹಿ ಬಂದುದರಿಂದ ಅದಕ್ಕೆ ಧಿ ಆದೇಶ ಬರುತ್ತದೆ. ಅಏ+ಧಿ. ಹಿ ಅಪಿತ್ತಾಗಿ ಙಿತ್ತಾದುದರಿಂದ 'ಶ್ನಸ್ತೋರ ಲ್ಲೋಪಃ' ಸೂತ್ರದಿಂದ ಅಸಿನ ಅಕಾರಕ್ಕೆ ಲೋಪ. ಏಧಿ ಎಂದಾಗುತ್ತದೆ. ಹಿಗೆ ತಾತಙ್ ಆದೇಶ ಬಂದಾಗ ಏತ್ವವಿಲ್ಲ. ಹಿ ಪರವಾದಾಗ ಏತ್ವ ಬರುತ್ತದೆಯೋ, ಹಿಗೆ ತಾತಙ್ ಬರುತ್ತದೆಯೋ ಎಂದು ವಿಚಾರ ಬಂದಾಗ 'ವಿಪ್ರತಿಷೇಧೇ ಪರಂ ಕಾರ್ಯಮ್' ಸೂತ್ರದಿಂದ ಪರವಾದ ತಾತಙ್ ಏತ್ವವನ್ನು ಬಾಧಿಸಿ ಬರುತ್ತದೆ. ಸ್ತಾತ್. ಅಸ್+ತಮ್=ಸ್ತಮ್ | ಸ್ತ. ಉತ್ತಮಕ್ಕೆ ಆಟ್ ಬಂದು ಪಿತ್ತಾಗುವುದರಿಂದ ಮೂರುವಚನಗಳಲ್ಲಿಯೂ ಅಲೋಪವಿಲ್ಲ, ಅಸಾನಿ | ಅಸಾವ | ಅಸಾಮ || **ಲಙ್** || ಅಸ್+ತ್. 'ಆಡಜಾದೀನಾಮ್' ಅಂಗಕ್ಕೆ ಆಟ್. 'ಆಟಶ್ಚ' ವೃದ್ಧಿ. ಆಸ್+ತ್ ಎಂದಿರುವಾಗ 'ಅಸ್ತಿಸಿಚೋಽಪೃಕ್ತೇ' ಸೂತ್ರದಿಂದ ತಿಗೆ ಈಡಾಗಮ. ಆಸ್+ಈತ್=ಆಸೀತ್. ಆಅಸ್+ತಾಮ್. ಅಲೋಪ. ಆಸ್ತಾಮ್ | ಆಸನ್ || ಆಸೀಃ (ಈಡಾಗಮ) | ಆಸ್ತಮ್ | ಆಸ್ತ || ಆಸಮ್ | ಆಸ್ವ | ಆಸ್ಮ || **ವಿಧಿಲಿಙ್** || ಯಾಸುಟ್ ಙಿತ್ತಾದುದರಿಂದ ಅಸಿನ ಅಕಾರಕ್ಕೆ ಸರ್ವತ್ರಲೋಪ. ಸ್ಯಾತ್ | ಸ್ಯಾತಾಮ್ | ಸ್ಯುಃ || ಸ್ಯಾಃ | ಸ್ಯಾತಮ್ | ಸ್ಯಾತ || ಸ್ಯಾಮ್ | ಸ್ಯಾವ | ಸ್ಯಾಮ || ಇನ್ನು ಆರ್ಧಧಾತುಕವಾದುದರಿಂದ ಭೂಧಾತುವಿನಂತೆ ರೂಪ. **ಆಶೀರ್ಲಿಙ್** || ಭೂಯಾತ್. **ಲುಙ್** || ಅಭೂತ್. **ಲೃಙ್** || ಅಭವಿಷ್ಯತ್.

ಣಕಾರ ಇತ್. ಇ+ತಿ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ. ಏತಿ. ದ್ವಿವಚನಾದಿಗಳಲ್ಲಿ ಙಿತ್ತಾದುದರಿಂದ ಗುಣವಿಲ್ಲ. ಇತಃ| ಇ+ಅನ್ತಿ ಎಂದಿರುವಾಗ ಧಾತುವಿಗೆ ಯಣಾದೇಶ ಹೇಳುತ್ತಾನೆ.

ಇಣ್ ಧಾತುವಿಗೆ ಯಣಾದೇಶ ಹೇಳುವ ಸೂತ್ರ.

**೫೪೦. ಇಣೋಽಯಣ್ || ೬-೪-೮೧ ||**

**ಅಜಾದೌ ಪ್ರತ್ಯಯೇ ಪರೇ | ಯನ್ತಿ ||**

ಇಣಃ, ಯಣ್ | ದ್ವಿಪದ ಸೂತ್ರ. 'ಅಚಿಶ್ನುಧಾತು—' ಸೂತ್ರದಿಂದ 'ಅಚಿ'| ಅನುವೃತ್ತಿ. ಅಂಗಾಧಿಕಾರದಲ್ಲಿ ಹೇಳಿರುವುದರಿಂದ ಅಂಗದಿಂದ ಆಕ್ಷಿಪ್ತವಾದ ಪ್ರತ್ಯಯಕ್ಕೆ ಅಚಿ ಎಂಬುದು ವಿಶೇಷವಾದುದರಿಂದ ತದಾದಿಲಾಭ. **ಸೂತ್ರಾರ್ಥ—** ಇಣ್ ಧಾತುವಿಗೆ ಅಜಾದಿಪ್ರತ್ಯಯಪರವಾದಾಗ ಯಣಾದೇಶ ಬರುತ್ತದೆ. ಯ್+ಅನ್ತಿ=ಯನ್ತಿ. ಇ+ಸಿ. ಗುಣ. ಏಸಿ. 'ಆದೇಶಪ್ರತ್ಯಯಯೋಃ' ಏಷಿ ಇಥಃ | ಇಥ|| ಇ+ಮಿ. ಏಮಿ | ಇವಃ | ಇಮಃ ||

**ಲಿಟ್** || ಇಇ+ಅ. 'ಅಚೋಞ್ಣಿತಿ' ವೃದ್ಧಿ. ಇಐ+ಅ. ಆಯಾದೇಶ. ಇಆಯ ಎಂದಿರುವಾಗ ಅಭ್ಯಾಸ ಇಕಾರಕ್ಕೆ ಇಯಙಾದೇಶ ಹೇಳುತ್ತಾನೆ.

ಅಭ್ಯಾಸಕ್ಕೆ ಇಯಙ್, ಉವಙ್ ಹೇಳುವ ಸೂತ್ರ.

**೫೪೧. ಅಭ್ಯಾಸಸ್ಯಾಸವರ್ಣೇ || ೬-೪-೭೮ ||**

**ಅಭ್ಯಾಸಸ್ಯ ಇವರ್ಣೋವರ್ಣಯೋರಿಯಙುವಙೌ ಸ್ತೋಽಸವರ್ಣೇಽಚಿ | ಇಯಾಯ |**

ಅಭ್ಯಾಸಸ್ಯ, ಅಸವರ್ಣೇ || ದ್ವಿಪದ ಸೂತ್ರ, 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ 'ಅಚಿ', 'ಯ್ವೋಃ', 'ಇಯಙುವಙೌ' ಪದಗಳು ಅನುವೃತ್ತವಾಗುತ್ತವೆ. ಇಶ್ಚ ಉಶ್ಚ ಯೂ ತಯೋಃ | ಯ್ವೋಃ | **ಸೂತ್ರಾರ್ಥ—**ಅಭ್ಯಾಸದ ಇಕಾರ ಉಕಾರಗಳಿಗೆ ಅಸವರ್ಣವಾದ ಅಚ್‌ಪರದಲ್ಲಿರುವಾಗ ಕ್ರಮವಾಗಿ ಇಯಙ್, ಉವಙ್ ಆದೇಶಗಳು ಬರುತ್ತವೆ. ಪ್ರಕೃತ ಅಭ್ಯಾಸದಲ್ಲಿ ಇಕಾರವಿದೆ. ಅದಕ್ಕೆ ಅಸವರ್ಣವಾದ ಆಕಾರವಿರುವುದರಿಂದ ಇಯಙ್ ಬಂದರೆ ಇಯ್+ಆಯ=ಇಯಾಯ ಎಂದಾಗುತ್ತದೆ. ಇಇ+ಅತುಸ್. ಇಲ್ಲಿ ಲಿಟ್ ಕಿತ್ತಾದುದರಿಂದ ಗುಣವಿಲ್ಲ. 'ಇಣೋ ಯಣ್' ಸೂತ್ರದಿಂದ ಅಜಾದಿಪ್ರತ್ಯಯಪರವಾದುದರಿಂದ ಧಾತುವಿನ ಇಕಾರಕ್ಕೆ ಯಣ್. ಇಯ್+ಅತುಸ್. ಈಗ ಅಭ್ಯಾಸಕ್ಕೆ ದೀರ್ಘ ಹೇಳುತ್ತಾನೆ.

ಇಣಿನ ಅಭ್ಯಾಸಕ್ಕೆ ದೀರ್ಘ ಹೇಳುವ ಸೂತ್ರ.

**೫೮೨. ದೀರ್ಘ ಇಣಃ ಕಿತಿ || ೭-೪-೬೯ ||**

**ಇಣೋಽಭ್ಯಾಸಸ್ಯ ದೀರ್ಘಃ ಸ್ಯಾತ್ ಕಿತಿ ಲಿಟಿ | ಈಯತುಃ | ಈಯುಃ | ಇಯಯಿಥ, ಇಯೇಥ, || ಏತಾ | ಏಷ್ಯತಿ | ಏತು | ಐತ್ | ಐತಾಮ್ | ಆಯನ್ || ಇಯಾತ್**

ತ್ರಿಪದ ಸೂತ್ರ. 'ಅತ್ರ ಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ', 'ವ್ಯಥೋಲಿಟಿ' ಸೂತ್ರದಿಂದ 'ಲಿಟಿ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಇಣ್ ಧಾತುವಿನ ಅಭ್ಯಾಸಕ್ಕೆ ಕಿತ್ತಾದ ಲಿಟ್ ಪರದಲ್ಲಿರುವಾಗ ದೀರ್ಘ ಬರುತ್ತದೆ. 'ಅಸಂಯೋಗಾತ್‌ಲಿಟ್‌ಕಿತ್' ಸೂತ್ರದಿಂದ ಅಪಿತ್ತಾದ ಲಿಟ್ ಕಿತ್ತಾದುದರಿಂದ ಈಗ ಅದು ಪರವಾದುದರಿಂದ ಅಭ್ಯಾಸಕ್ಕೆ ದೀರ್ಘ ಬಂದರೆ ಈಯ್ + ಅತುಸ್ = ಈಯತುಃ ಎಂದಾಗುತ್ತದೆ. ದ್ವಿಬಹುವಚನಗಳಲ್ಲಿ ಹೀಗೆಯೇ ಯಣ್ ದೀರ್ಘ. ಈಯುಃ | ಇಇ + ಇಥ. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ಇಏ + ಇಥ ಹಿಂದಿನಂತೆ ಅಸವರ್ಣ ಅಚ್ ಪರವಾದುದರಿಂದ ಅಭ್ಯಾಸಕ್ಕೆ ಇಯಙ್. ಇಯ್‌ಏ + ಇಥ. ಅಯಾದೇಶ. ಇಯಯಿಥ. ಭಾರದ್ವಾಜನಿಯಮದಿಂದ ಇಡಾಗಮ ಬಂದಾಗ ಈರೂಪ. ಇಡಾಗಮ ಬಾರದಿದ್ದರೆ ಗುಣ. ಇಯಙ್. ಇಯೇಥ | ಈಯಥುಃ | ಈಯ || ಇಯಾಯ, ಇಯಯ | ಈಯಿವ | ಈಯಿಮ ||

**ಲುಟ್** || ಇ + ತಾ. ಗುಣ. ಏತಾ | ಏತಾರೌ | ಏತಾರಃ || ಏತಾಸಿ | ಏತಾಸ್ಥಃ | ಏತಾಸ್ಥ || ಏತಾಸ್ಮಿ | ಏತಾಸ್ವಃ || ಏತಾಸ್ಮಃ || **ಲೃಟ್** || ಅನಿಟಾದುದರಿಂದ ಇಡಾಗಮವಿಲ್ಲ. ಗುಣ. ಷತ್ವ. ಏಷ್ಯತಿ |ಏಷ್ಯತಃ | ಇತ್ಯಾದಿ. **ಲೋಟ್** || ಏತು, ಇತಾತ್ | ಇತಾಮ್ | ಇ + ಅನ್ತು. ಯಣ್. ಯನ್ತು | ಇಹಿ. ಹಿ ಅಪಿತ್ತಾದುದರಿಂದ ಗುಣವಿಲ್ಲ. ಇತಾತ್ | ಇತಮ್ | ಇತ || ಇ + ಆನಿ. ಗುಣ. ಅಯಾದೇಶ. ಅಯಾನಿ | ಅಯಾವ | ಅಯಾಮ || **ಲಙ್** || ಇ + ತ್. ಆಟಾಗಮ. 'ಆಟಶ್ಚ' ವೃದ್ಧಿ ಐತ್ | ಐತಾಮ್ | ಐ + ಅನ್ = ಆಯನ್ || ಐಃ | ಐತಮ್ | ಐತ || ಐ + ಅಮ್ = ಆಯಮ್ | ಐವ | ಐಮ || **ವಿಧಿಲಿಙ್** || ಯಾಸುಟ್ ಙಿತ್ತಾದುದರಿಂದ ಗುಣವಿಲ್ಲ. ಇಯಾತ್ | ಇಯಾತಾಮ್ | ಇಯುಃ || ಇಯಾಃ | ಇಯಾತಮ್ | ಇಯಾತ || ಇಯಾಮ್ | ಇಯಾವ | ಇಯಾಮ || **ಆಶೀರ್ಲಿಙ್** || ಇ + ಯಾತ್ ಎಂದಿರುವಾಗ 'ಅಕೃತ್ಸಾರ್ವಧಾತುಕಯೋರ್ದೀರ್ಘಃ' ಸೂತ್ರದಿಂದ ದೀರ್ಘ. ಈಯಾತ್ | ಈಯಾಸ್ತಾಮ್ | ಈಯಾಸುಃ || ಈಯಾಃ | ಈಯಾಸ್ತಮ್ | ಈಯಾಸ್ತ || ಈಯಾಸಮ್ | ಈಯಾಸ್ವ ಈಯಾಸ್ಮ || ಉಪಸರ್ಗದ ಪರದಲ್ಲಿ ಈ ಲಕಾರ ಬಂದಾಗ ಅಲ್ಲಿ ಹ್ರಸ್ವ ಹೇಳುತ್ತಾನೆ.

ಇಣ್ ಧಾತುವಿಗೆ ಹ್ರಸ್ವ ಹೇಳುವ ಸೂತ್ರ

**೫೮೩. ಏತೇರ್ಲಿಙಿ ॥ ೭-೪-೨೪ ॥**

**ಉಪಸರ್ಗಾತ್ಪರಸ್ಯ ಇಣೋಽಣೋ ಹ್ರಸ್ವ ಆರ್ಧಧಾತುಕೇ ಕಿತಿಲಿಙಿ। ನಿರಿಯಾತ್ । ಉಭಯತ ಆಶ್ರಯಣೇ ನಾನ್ತಾದಿವತ್ । ಅಭೀಯಾತ್ । ಅಣಃ ಕಿಮ್ ? ಸಮೇಯಾತ್ ॥**

ಏತೇಃ, ಲಿಙಿ ॥ ದ್ವಿಪದ ಸೂತ್ರ. 'ಉಪಸರ್ಗಾದ್ಧ್ರಸ್ವ ಊಹತೇಃ' ಸೂತ್ರದಿಂದ 'ಉಪಸರ್ಗಾತ್', 'ಹ್ರಸ್ವಃ', 'ಕೇಽಣಃ' ಸೂತ್ರದಿಂದ 'ಅಣಃ', 'ಅಯಙ್ಯಿ ಕ್ಙಿತಿ' ಸೂತ್ರದಿಂದ 'ಕಿತಿ' ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ–ಉಪಸರ್ಗದ ಪರದಲ್ಲಿರುವ ಇಣ್ ಧಾತುವಿನ ಅಣಿಗೆ ಕಿತ್ ಆದ ಲಿಙ್ ಪರದಲ್ಲಿರುವಾಗ ಹ್ರಸ್ವ ಬರುತ್ತದೆ. ಕಿತ್ ಆದ ಲಿಙ್ ಎಂದುದರಿಂದ ಅದು ಆರ್ಧ ಧಾತುಕವೇ ಆಗಿರುತ್ತದೆ. ಅದನ್ನು ವೃತ್ತಿಯಲ್ಲಿ ಸೇರಿಸಿ ಹೇಳಿರುತ್ತಾನೆ. ಇಣ್ ಧಾತುವಿಗೆ ಶ್ತಿಪ್ ಪ್ರತ್ಯಯ ಸೇರಿಸಿದರೆ ಏತಿಃ ಎಂದಾಗುತ್ತದೆ. ಅದರ ಷಷ್ಠೀ ಏತೇಃ । ನಿರ್ + ಇಯಾತ್ ಎಂದಿರುವಾಗ ಉಪಸರ್ಗ ನಿರ್. ಇದರ ಪರದಲ್ಲಿ ಇಣ್ ಧಾತುವಿದೆ. ಅದಕ್ಕೆ ಕಿತ್ ಆದ ಲಿಙ್ ಪರವಾಗಿದೆ. ಆದುದರಿಂದ ಹ್ರಸ್ವ ಬಂದರೆ ನಿರ್ + ಇಯಾತ್ = ನಿರಿಯಾತ್ ಎಂದಾಗುತ್ತದೆ. ಅಭಿ + ಈಯಾತ್. ಇಲ್ಲಿಯೂ ಹ್ರಸ್ವ ಬಂದರೆ ಅಭಿ + ಇಯಾತ್. ಸವರ್ಣದೀರ್ಘ. ಅಭೀಯಾತ್. ಇಲ್ಲಿ ಅಭಿಯ ಇಕಾರಕ್ಕೂ ಧಾತುವಿನ ಇಕಾರಕ್ಕೂ ದೀರ್ಘ ಏಕಾದೇಶ ಬಂದಿದೆಯಷ್ಟೆ. 'ಅನ್ತಾದಿವಚ್ಚ' ಸೂತ್ರದಿಂದ ಈ ದೀರ್ಘವು ಅಭಿಯ ಇಕಾರವೂ ಆಗಬಹುದು. ಇಣ್ ಧಾತುವಿನ ಇಕಾರವೂ ಆಗಬಹುದು. ಪೂರ್ವಾನ್ತವದ್ಭಾವದಿಂದ ಅಭಿ ಉಪಸರ್ಗವೆಂದು ತಿಳಿದು ಪರಾದಿವದ್ಭಾವದಿಂದಿ ಇಯಾತಿನ ಇಕಾರವೆಂದು ತಿಳಿದು ದೀರ್ಘಕ್ಕೆ ಪುನಃ ಹ್ರಸ್ವ ಬರಲಿ ಎಂದರೆ ಆಗ ಒಂದು ಪರಿಭಾಷೆ ಹೇಳುತ್ತಾನೆ. 'ಉಭಯತ ಆಶ್ರಯಣೇನಾನ್ತಾದಿವತ್.' ಎರಡನ್ನೂ ಆಶ್ರಯಿಸಿ ಕಾರ್ಯಮಾಡುವಾಗ 'ಅನ್ತಾದಿವಚ್ಚ' ಸೂತ್ರವು ಪ್ರವರ್ತಿಸುವುದಿಲ್ಲ. ಯಾವುದಾದರೂ ಒಂದನ್ನು ಆಶ್ರಯಿಸುವಾಗ ಮಾತ್ರ ಈ ಸೂತ್ರ ಪ್ರವರ್ತಿಸುತ್ತದೆ. ಪ್ರಕೃತ ಪೂರ್ವಾನ್ತವದ್ಭಾವವನ್ನು ಆಶ್ರಯಿಸಿದರೆ ಅಭೀ + ಯಾತ್ ಎಂದಾಗುವುದರಿಂದ ಪರದಲ್ಲಿ ಇಣಿನ ಅಣ್ ಸಿಗುವುದಿಲ್ಲ. ಪರಾದಿವದ್ಭಾವ ಆಶ್ರಯಿಸಿದರೆ ಅಭ್ + ಈಯಾತ್ ಎಂದಾಗುವುದರಿಂದ ಉಪಸರ್ಗ ಸಿಗುವುದಿಲ್ಲ. ಆದುದರಿಂದ ಪುನಃ ಹ್ರಸ್ವ ಬರುವುದಿಲ್ಲ. ಇಣ್ ಧಾತುವಿನ ಅಣಿಗೆ ಎಂದು ಏಕೆ ಹೇಳಬೇಕು ? ಇಣ್ ಧಾತುವಿಗೆ ಹ್ರಸ್ವವೆಂದರೂ ಇಲ್ಲಿ ಹ್ರಸ್ವ ಬರುತ್ತದೆಯಷ್ಟೇ, ಅಂದರೆ 'ಸಮೇಯಾತ್' ಇಲ್ಲಿ ಹ್ರಸ್ವವಾರಣೆಗೋಸ್ಕರ ಇಣಿನ ಅಣಿಗೆಂದು ಹೇಳಲೇಬೇಕು. ಸಮ್ + ಆ(ಙ್) + ಈಯಾತ್. ಆಙಿನೊಡನೆ ಗುಣ. ಸಮ್ + ಏಯಾತ್ ಅಣ್ ಎಂದು ಹೇಳದಿದ್ದರೆ ಉಪಸರ್ಗ ಸಮ್. ಅದರ

ಪರದಲ್ಲಿ ಇರುವ ಇಣ್ ಧಾತು ಎಂದರೆ 'ಅನ್ತಾದಿವಚ್ಚ' ಸೂತ್ರದಿಂದ ಏಕಾದೇಶವಾದ ಏಕಾರಕ್ಕೆ ಪರಾದಿವದ್ಭಾವವಿರುವುದರಿಂದ ಏ ಆಗುತ್ತದೆ. ಇದಕ್ಕೆ ಹ್ರಸ್ವ ಬಂದರೆ ಅನಿಷ್ಟರೂಪವಾಗುತ್ತದೆ. ಆದುದರಿಂದ ಅಣ್ ಎಂದು ಹೇಳಿದೆ. ಅಣ್ ಪೂರ್ವ ಣಕಾರದಿಂದ ಎಂದುದರಿಂದ ಏಕಾರ ಅಣಿನಲ್ಲಿ ಸೇರದಿರುವುದರಿಂದ ಹ್ರಸ್ವವಿಲ್ಲ. ಸಮೇಯಾತ್.

**ಲುಙ್** || ಇ+ಲುಙ್ ಎಂದಿರುವಾಗ ಧಾತುವಿಗೆ ಗಾ ಆದೇಶ ಹೇಳುತ್ತಾನೆ.

ಇಣ್ ಧಾತುವಿಗೆ ಗಾ ಆದೇಶ ಹೇಳುವ ಸೂತ್ರ

**೫೮೪. ಇಣೋ ಗಾ ಲುಙಿ || ೨-೪-೪೫ ||**

**ಗಾತಿಸ್ಥೇತಿ ಸಿಚೋ ಲುಕ್ | ಅಗಾತ್ | ಐಷ್ಯತ್ ||**

ತ್ರಿಪದ ಸೂತ್ರ. ಸುಲಭವಾದುದರಿಂದ ವೃತ್ತಿ ಬರೆಯಲಿಲ್ಲ. ಇಣ್ ಧಾತುವಿಗೆ ಲುಙ್ ಪರದಲ್ಲಿರುವಾಗ ಗಾ ಆದೇಶ ಬರುತ್ತದೆ. ಗಾ+ತ್. 'ಚ್ಲಿಲುಙಿ' 'ಚ್ಲೇಃ ಸಿಚ್' ಅಂಗಕ್ಕೆ ಅಡಾಗಮ. ಅಗಾ+ಸ್+ತ್. 'ಗಾತಿಸ್ಥಾಘುಪಾ—' (ಸೂ. ೪೪೦) ಸೂತ್ರದಿಂದ ಸಿಚಿಗೆ ಲೋಪ. ಅಗಾತ್ | ಅಗಾತಾಮ್ | ಅಗುಃ || ಅಗಾಃ | ಅಗಾತಮ್ | ಅಗಾತ || ಅಗಾಮ್ | ಅಗಾವ ಅಗಾಮ || **ಲೃಙ್** || ಇ+ಸ್ಯ+ತ್. ಅಂಗಕ್ಕೆ ಆಡಾಗಮ. 'ಆಟಶ್ಚ' ವೃದ್ಧಿ. ಷತ್ವ. ಐಷ್ಯತ್ | ಐಷ್ಯತಾಮ್ | ಐಷ್ಯನ್ || ಐಷ್ಯಃ | ಐಷ್ಯತಮ್ | ಐಷ್ಯತ || ಐಷ್ಯಮ್ | ಐಷ್ಯಾವ | ಐಷ್ಯಾಮ ||

**|| ೬೮ || ಶೀಙ್—ಸ್ವಪ್ನೇ (ಮಲಗು)**

ಙಿತ್ತಾದುದರಿಂದ 'ಅನುದಾತ್ತಙಿತ ಆತ್ಮನೇಪದಮ್' ಸೂತ್ರದಿಂದ ಆತ್ಮನೇಪದಿಯಾಗುತ್ತದೆ. ಸೇಟ್. ಶೀ+ತೇ ಎಂದಿರುವಾಗ 'ಸಾರ್ವಧಾತುಕಮಪಿತ್' ಸೂತ್ರದಿಂದ ಪ್ರತ್ಯಯಗಳು ಙಿತ್ತಾದುದರಿಂದ ಗುಣ ಬಾರದಿರಲು ವಿಶೇಷವಾಗಿ ಇಲ್ಲಿ ಗುಣ ಹೇಳುತ್ತಾನೆ.

ಶೀಙಿಗೆ ಗುಣ ಹೇಳುವ ಸೂತ್ರ.

**೫೮೫. ಶೀಙಃ ಸಾರ್ವಧಾತುಕೇ ಗುಣಃ || ೭-೪-೨೧ ||**

**ಕ್ಙಿತಿಚೇತ್ಯಸ್ಯಾಪವಾದಃ | ಶೇತೇ | ಶಯಾತೇ ||**

ತ್ರಿಪದ ಸೂತ್ರ. ಶೀಙ್ ಧಾತುವಿಗೆ ಸಾರ್ವಧಾತುಕಪ್ರತ್ಯಯ ಪರದಲ್ಲಿರುವಾಗ ಗುಣ ಬರುತ್ತದೆ. 'ಕ್ಙಿತಿಚ' ಸೂತ್ರಕ್ಕೆ ಇದು ಅಪವಾದ. ಕಿತ್‌ಙಿತ್ ಆದ ಪ್ರತ್ಯಯ ಪರವಾದಾಗ ಗುಣನಿಷೇಧ ಹಿಂದೆ ಹೇಳಿದೆ. ಈಗ ಙಿತ್ತಾದ ಸಾರ್ವಧಾತುಕವಿದ್ದರೂ ಗುಣ ಹೇಳಿರುವುದರಿಂದ ಆ ಸೂತ್ರಕ್ಕೆ ಇದು ಅಪವಾದವಾಗುತ್ತದೆ. ಶೀ+ತೇ

ಗುಣ ಬಂದರೆ ಶೇ + ತೇ = ಶೇತೇ. ಶೀ + ಆತೇ. ಗುಣ. ಶೇ + ಆತೇ. ಅಯಾದೇಶ. ಶಯಾತೇ. ಶೀ + ಝ ಎಂದಿರುವಾಗ 'ಆತ್ಮನೇಪದೇಷ್ವನತಃ' ಸೂತ್ರದಿಂದ ಝಕ್ಕೆ ಅತಾದೇಶ. 'ಟಿತ ಆತ್ಮನೇಪದಾನಾಂ ಟೇರೇ' ಏತ್ವ. ಶೀ + ಅತೇ. ಗುಣ. ಶೇ + ಅತೇ. ಇಲ್ಲಿ ಅಯಾದೇಶ ಬರುತ್ತಿರುವಾಗ ಅತಿನ ಅಕಾರಕ್ಕೆ ರುಡಾಗಮ ಹೇಳುತ್ತಾನೆ. ಆಗ ಅಚ್ ಪರದಲ್ಲಿಲ್ಲದಿರುವುದರಿಂದ ಅಯಾದೇಶವಿಲ್ಲ.

ಝಾದೇಶಕ್ಕೆ ರುಡಾಗಮ ಹೇಳುವ ಸೂತ್ರ.

೫೮೬. **ಶೀಙೋ ರುಟ್** || ೭-೧-೬ ||

**ಶೀಙಃ ಪರಸ್ಯ ಝಾದೇಶಸ್ಯಾತೋ ರುಡಾಗಮಃ ಸ್ಯಾತ್ | ಶೇರತೇ | ಶೇಷೇ | ಶಯಾಥೇ | ಶೇಧ್ವೇ | ಶಯೇ | ಶೇವಹೇ | ಶೇಮಹೇ || ಶಿಶ್ಯೇ | ಶಿಶ್ಯಾತೇ | ಶಿಶ್ಯಿರೇ | ಶಯಿತಾ || ಶಯಿಷ್ಯತೇ || ಶೇತಾಮ್, ಶಯಾತಾಮ್ || ಅಶೇತ | ಅಶಯಾತಾಮ್ | ಅಶೇರತ | ಶಯೀತ | ಶಯೀಯಾತಾಮ್ | ಶಯೀರನ್ || ಶಯಿಷೀಷ್ಟ | ಅಶಯಿಷ್ಟ ||**

ದ್ವಿಪದ ಸೂತ್ರ. 'ಝೋನ್ತಃ' ಸೂತ್ರದಿಂದ 'ಝಃ' ಅನುವೃತ್ತಿ. 'ಅದಭ್ಯಸ್ತಾತ್' ಸೂತ್ರದಿಂದ 'ಅತ್' ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. ಶೀಙಃ ಪಂಚಮೀ. ಝಃ ಷಷ್ಠೀ **ಸೂತ್ರಾರ್ಥ**—ಶೀಙ್‌ನ ಪರದಲ್ಲಿರುವ ಝಕ್ಕೆ ಆದೇಶವಾಗಿ ಬಂದ ಅತಿಗೆ ರುಡಾಗಮ ಬರುತ್ತದೆ. ಟಿತ್ತಾದುದರಿಂದ ಆದ್ಯವಯವವಾಗಿ ಬಂದರೆ ಶೇ + ರ್‌ಅತೇ ಶೇರತೇ | 'ಥಾಸಃ ಸೇ' ಶೇಸೇ. ಷತ್ವ. ಶೇಷೇ. ಶೇ + ಆಥೇ. ಶಯಾಥೇ | ಶೇಧ್ವೇ || ಶೇ + ಎ. ಅಯಾದೇಶ. ಶಯೇ | ಶೇವಹೇ | ಶೇಮಹೇ ||

**ಲಿಟ್** || ಶೀಶೀ + ಎ. 'ಹ್ರಸ್ವಃ' ಸೂತ್ರದಿಂದ ಅಭ್ಯಾಸಕ್ಕೆ ಹ್ರಸ್ವ. ಯಣ್. (ಏರನೇಕಾಚಃ—) ಶಿಶ್ಯೇ | ಶಿಶ್ಯಾತೇ ಶಿಶ್ಯಿರೇ || ಶಿಶ್ಯಿಷೇ | ಶಿಶ್ಯಾಥೇ | ಶಿಶ್ಯಿಢ್ವೇ || ಶಿಶ್ಯೇ | ಶಿಶ್ಯಿವಹೇ | ಶಿಶ್ಯಿಮಹೇ || **ಲುಟ್** || ಶೀ + ಇತಾ. ಗುಣ. ಅಯಾದೇಶ. ಶಯಿತಾ | ಶಯಿತಾರೌ | ಶಯಿತಾರಃ || ಶಯಿತಾಸಿ | ಶಯಿತಾಸ್ಥಃ | ಶಯಿತಾಸ್ಥ || ಶಯಿತಾಸ್ಮಿ | ಶಯಿತಾಸ್ವಃ || ಶಯಿತಾಸ್ಮಃ || **ಲೃಟ್** || ಶೀ + ಇಷ್ಯತೇ. ಗುಣ. ಅಯಾದೇಶ. ಶಯಿಷ್ಯತೇ | ಶಯಿಷ್ಯೇತೇ | ಇತ್ಯಾದಿ. **ಲೋಟ್** || 'ಶೀಙಃ ಸಾರ್ವಧಾತುಕೇ ಗುಣಃ' ಸೂತ್ರದಿಂದ ಸರ್ವತ್ರ ಗುಣ. ಶೇತಾಮ್ | ಶಯಾತಾಮ್ | ಶೇರತಾಮ್ || ಶೇಷ್ವ | ಶಯಾಥಾಮ್ | ಶೇಧ್ವಮ್ || ಶಯೈ | ಶಯಾವಹೈ | ಶಯಾಮಹೈ || **ಲಙ್** || ಹಿಂದಿನಂತೆ ಗುಣ. ಅಂಗಕ್ಕೆ ಅಡಾಗಮ. ಅಶೇತ | ಅಶಯಾತಾಮ್ | ರುಟ್. ಅಶೇರತ ||

ಅಶೇಥಾಃ | ಅಶಯಾಥಾಮ್ | ಅಶೇಧ್ವಮ್ || ಅಶಯಿ | ಅಶೇವಹಿ | ಅಶೇಮಹಿ || ವಿಧಿಲಿಙ್ || ಹಿಂದಿನಂತೆ ಗುಣ. ಶಯೀತ | ಶಯೀಯಾತಾಮ್ | ಶಯೀರನ್ || ಶಯೀಥಾಃ | ಶಯೀಯಾಥಾಮ್ | ಶಯೀಧ್ವಮ್ || ಶಯೀಯ | ಶಯೀವಹಿ | ಶಯೀಮಹಿ || ಆಶೀರ್ಲಿಙ್ || ಶಯಿಷೀಷ್ಟ | ಶಯಿಷೀಯಾಸ್ತಾಮ್ | ಶಯಿಷೀರನ್ || ಶಯಿಷೀಷ್ಠಾಃ | ಶಯಿಷೀಯಾಸ್ಥಾಮ್ | ಶಯಿಷೀಧ್ವಮ್ || ಶಯಿಷೀಯ | ಶಯಿಷೀವಹಿ | ಶಯಿಷೀಮಹಿ || ಲುಙ್ || ಅಶೀ + ಇಸ್ತ. ಗುಣ. ಅಯಾದೇಶ, ಷತ್ವ. ಅಶಯಿಷ್ಟ | ಅಶಯಿಷಾತಾಮ್ | ಅಶಯಿಷತ || ಅಶಯಿಷ್ಠಾಃ | ಅಶಯಿಷಾಥಾಮ್ | ಅಶಯಿಢ್ವಮ್ || ಅಶಯಿಷಿ | ಅಶಯಿಷ್ವಹಿ | ಅಶಯಿಷ್ಮಹಿ || ಲೃಙ್ || ಅಶಯಿಷ್ಯತ | ಅಶಯಿಷ್ಯೇತಾಮ್ | ಇತ್ಯಾದಿ(ಏಧಿಷ್ಯತವತ್).

|| ೬೯ || ಇಙ್—ಅಧ್ಯಯನೇ (ಓದುವುದು.)

ಇಙಿಕಾವಧ್ಯುಪಸರ್ಗತೋ ನ ವ್ಯಭಿಚರತಃ | ಅಧೀತೇ—ಅಧೀಯಾತೇ | ಅಧೀಯತೇ ||

ಇದೂ ಙಕಾರ ಇತ್ತಾದುದರಿಂದ ಆತ್ಮನೇಪದಿ. ಅನಿಟ್. ಈ ಇಙ್ ಧಾತುವೂ ಇಕ್ ಧಾತುವೂ ಯಾವಾಗಲೂ ಅಧಿ ಎಂಬ ಉಪಸರ್ಗವನ್ನು ಬಿಟ್ಟು ಇರುವುದಿಲ್ಲ. ವ್ಯಭಿಚಾರವೆಂದರೆ ಒಂದುವೇಳೆ ಬಿಟ್ಟಿರುವುದು. ಇದು ಯಾವಾಗಲೂ ಕೂಡಿಕೊಂಡಿರುತ್ತದೆ. ಅಧಿ + ಇ + ತೇ. ಸವರ್ಣದೀರ್ಘ, ಅಧೀತೇ. ಅಧಿ = ಇ + ಆತೇ. 'ಅಚಿಶ್ನುಧಾತು—' ಸೂತ್ರದಿಂದ ಇಯಙಾದೇಶ. ಅಧಿ + ಇಯ್ + ಆತೇ | ಸವರ್ಣದೀರ್ಘ. ಅಧೀಯಾತೇ. ಝುಕ್ಕೆ ಅತಾದೇಶ. ಅಧೀಯತೇ. ಅಧೀಷೇ | ಅಧೀಯಾಥೇ | ಅಧೀಧ್ವೇ || ಅಧೀಯೇ | ಅಧೀವಹೇ | ಅಧೀಮಹೇ || ಲಿಟ್ || ಇಲ್ಲಿ ಇಙಿಗೆ ಗಾಙಾದೇಶ ಹೇಳುತ್ತಾನೆ.

ಇಙಿಗೆ ಗಾಙಾದೇಶ ಹೇಳುವ ಸೂತ್ರ.

೫೮೭. ಗಾಙ್ ಲಿಟಿ || ೨-೪-೪೯ ||

ಇಙೋಗಾಙ್ ಸ್ಯಾಲ್ಲಿಟಿ | ಅಧಿಜಗೇ | ಅಧಿಜಗಾತೇ | ಅಧಿಜಗಿರೇ | ಅಧ್ಯೇತಾ || ಅಧ್ಯೇಷ್ಯತೇ || ಅಧೀತಾಮ್—ಅಧೀಯಾತಾಮ್—ಅಧೀಯತಾಮ್ | ಅಧೀಷ್ವ—ಅಧೀಯಾಥಾಮ್—ಅಧೀಧ್ವಮ್ | ಅಧ್ಯಯೈ—ಅಧ್ಯಯಾವಹೈ | ಅಧ್ಯಯಾಮಹೈ || ಅಧ್ಯೈತ | ಅಧ್ಯೈಯಾತಾಮ್ | ಅಧ್ಯೈಯತ | ಅಧ್ಯೈಥಾಃ | ಅಧ್ಯೈಯಾಥಾಮ್ | ಅಧ್ಯೈಧ್ವಮ್ | ಅಧ್ಯೈಯಿ | ಅಧ್ಯೈವಹಿ | ಅಧ್ಯೈಮಹಿ | ಅಧೀಯೀತ | ಅಧೀಯೀಯಾತಾಮ್ | ಅಧೀಯೀರನ್ | ಅಧ್ಯೇಷೀಷ್ಟ ||

ದ್ವಿಪದ ಸೂತ್ರ. 'ಇಣಶ್ಚ' ಸೂತ್ರದಿಂದ 'ಇಣಃ' ಅನುವೃತ್ತಿ. **ಸೂತ್ರಾರ್ಥ**—ಇಙ್ ಧಾತುವಿಗೆ ಲಿಟ್ ಪರದಲ್ಲಿರುವಾಗ ಗಾಙ್ ಆದೇಶ ಬರುತ್ತದೆ. ಙಕಾರ ಇತ್. ಗಾ+ಏ ಎಂದಿರುವಾಗ ದ್ವಿತ್ವ. ಗಾಗಾ+ಏ. ಅಭ್ಯಾಸಕ್ಕೆ ಹ್ರಸ್ವ. ಶ್ಚುತ್ವ. ಜಗಾ+ಏ. 'ಆತೋಲೋಪ ಇಟಿ ಚ' ಸೂತ್ರದಿಂದ ಆಲೋಪ. ಅಧಿಜಗೇ । ಅಧಿಜಗ್ ಅಂಗವೆಂದು ತಿಳಿಯಬೇಕು. ಅಧಿಜಗಾತೇ । ಅಧಿಜಗಿರೇ ॥ ಅಧಿಜಗಿಷೇ । ಅಧಿಜಗಾಥೇ । ಅಧಿಜಗಿಢ್ವೇ ॥ ಅಧಿಜಗೇ । ಅಧಿಜಗಿವಹೇ । ಅಧಿಜಗಿಮಹೇ ॥

**ಲುಟ್** ॥ ಅಧಿ+ಇ+ತಾ. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ಅಧಿ+ಏತಾ. ಯಣ್. ಅಧ್ಯೇತಾ । ಅಧ್ಯೇತಾರೌ । ಅಧ್ಯೇತಾರಃ ॥ ಅಧ್ಯೇತಾಸೇ । ಅಧ್ಯೇತಾಸಾಥೇ । ಅಧ್ಯೇತಾಧ್ವೇ ॥ ಅಧ್ಯೇತಾಹೇ । ಅಧ್ಯೇತಾಸ್ವಹೇ । ಅಧ್ಯೇತಾಸ್ಮಹೇ ॥ **ಲೃಟ್** ॥ ಅಧಿ+ಇ+ಸ್ಯತೇ. ಗುಣ. ಯಣ್. ಷತ್ವ. ಅಧ್ಯೇಷ್ಯತೇ । ಅಧ್ಯೇಷ್ಯೇತೇ । ಅಧ್ಯೇಷ್ಯನ್ತೇ ॥ ಅಧ್ಯೇಷ್ಯಸೇ । ಅಧ್ಯೇಷ್ಯೇಥೇ । ಅಧ್ಯೇಷ್ಯಧ್ವೇ ॥ ಅಧ್ಯೇಷ್ಯೇ । ಅಧ್ಯೇಷ್ಯಾವಹೇ। ಅಧ್ಯೇಷ್ಯಾಮಹೇ ॥ **ಲೋಟ್** ॥ ಅಧಿ+ಇ+ತಾಮ್. ಸವರ್ಣದೀರ್ಘ. ಅಧೀತಾಮ್. ಅಜಾದಿಪ್ರತ್ಯಯಪರವಾದಾಗ 'ಅಚಿಶ್ನುಧಾ—' ಸೂತ್ರದಿಂದ ಇಯಙ್. ಅಧೀಯಾತಾಮ್ । ಅಧೀಯತಾಮ್ । 'ಸವಾಭ್ಯಾಂ ವಾಮೌ' ಅಧೀಷ್ವ । ಅಧೀಯಾಥಾಮ್ । ಅಧೀಧ್ವಮ್ ॥ ಅಧಿ+ಇ+ಇಟ್. 'ಟಿತ ಆತ್ಮನೇಪದಾನಾಂ' ಸೂತ್ರದಿಂದ ಪ್ರತ್ಯಯಕ್ಕೆ ಏತ್ವ ಬಂದಮೇಲೆ 'ಏತ ಐ' ಸೂತ್ರದಿಂದ ಅದಕ್ಕೆ ಐತ್ವ. 'ಆಡುತ್ತಮಸ್ಯ ಪಿಚ್ಚ' ಸೂತ್ರದಿಂದ ಅದಕ್ಕೆ ಆಡಾಗಮ. ಆಐ. ವೃದ್ಧಿ. ಆಟ್ ಪಿತ್ತಾದುದರಿಂದ ಇಙಿಗೆ ಗುಣ, ಅಯಾದೇಶ. ಅಧಿ+ಅಯ್+ಐ. ಯಣ್. ಅಧ್ಯಯೈ । ಅಧ್ಯಯಾವಹೈ । ಅಧ್ಯಯಾಮಹೈ ॥ **ಲಙ್** ॥ ಅಧಿ+ಇ+ತ. 'ಆಡಜಾದೀನಾಮ್' ಸೂತ್ರದಿಂದ ಇಙಿಗೆ ಆಟ್ ಬಂದಾಗ 'ಆಟಶ್ಚ' ಸೂತ್ರದಿಂದ ವೃದ್ಧಿ. ಅಧಿ+ಆ+ಇ+ತ=ಅಧಿ+ಐ+ತ. ಯಣ್. ಅಧ್ಯೈತ. ಅಜಾದಿಗಳಲ್ಲಿ ಇಙಿಗೆ ಇಯಙಾದೇಶ. ಆಮೇಲೆ ವೃದ್ಧಿ. ಅಧಿ+ಆ+ಇ+ಆತಾಮ್ = ಅಧಿ+ಆ+ಇಯ್ + ಆತಾಮ್ = ಅಧಿ+ಐಯಾತಾಮ್=ಅಧ್ಯೈಯಾತಾಮ್ । ಅಧ್ಯೈಯತ ॥ ಅಧ್ಯೈಥಾಃ । ಅಧ್ಯೈಯಾಥಾಮ್ । ಅಧ್ಯೈಧ್ವಮ್ ॥ ಅಧ್ಯೈಯಿ । ಅಧ್ಯೈವಹಿ । ಅಧ್ಯೈಮಹಿ ॥ **ವಿಧಿಲಿಙ್** ॥ ಅಧಿ+ಇ+ಸೀಯುಟ್ (ಉಟ್)ತ. 'ಲಿಙಃ ಸಲೋ—' ಸಲೋಪ. ಅಧಿ+ಇ+ಈಯ್+ತ. 'ಲೋಪೋವ್ಯೋರ್ವಲಿ' ಯಲೋಪ. ಅಜಾದಿ ಪ್ರತ್ಯಯ ಪರವಾದುದರಿಂದ ಇಙಿಗೆ ಇಯಙ್. ಅಧಿ+ಇಯ್+ಈತ. ಸವರ್ಣ ದೀರ್ಘ. ಅಧೀಯೀತ । ಅಧೀಯೀಯಾತಾಮ್ । ಅಧೀಯೀರನ್ ॥ 'ಝಸ್ಯರನ್' ಅಧೀಯೀಥಾಃ । ಅಧೀಯೀಯಾಥಾಮ್ । ಅಧೀಯೀಧ್ವಮ್ ॥ ಅಧೀಯೀಯ । ಅಧೀಯೀವಹಿ । ಅಧೀಯೀಮಹಿ ॥ ಸೀಯುಟಿನ ಯಕಾರಕ್ಕೆ ವಲಾದಿಪ್ರತ್ಯಯ

ಪರವಾದಾಗ ಮಾತ್ರ ಲೋಪ. **ಆಶೀರ್ಲಿಙ್** || ಅಧಿ+ಇ+ಸೀಯುಟ್ (ಲುಟ್) ತ. 'ಸುಟ್‌ತಿಥೋಃ" ಸೂತ್ರದಿಂದ ತಕ್ಕೆ ಸುಟ್. ಯಲೋಪ. ಸಕಾರಕ್ಕೆ ಷತ್ವ. ಅಧಿ+ಇ+ಷೀಷ್ಟ. ಆರ್ಧಧಾತುಕವನ್ನು ನಿಮಿತ್ತೀಕರಿಸಿ ಇಙ್‌ಗೆ ಗುಣ. ಯಣ್. ಅಧ್ಯೇಷೀಷ್ಟ | ಅಧ್ಯೇಷೀಯಾಸ್ತಾಮ್ || ಅಧ್ಯೇಷೀರನ್ || ಅಧ್ಯೇಷೀಷ್ಠಾಃ | ಅಧ್ಯೇಷೀಯಾಸ್ಥಾಮ್ | ಅಧ್ಯೇಷೀಢ್ವಮ್ || ಅಧ್ಯೇಷೀಯ | ಅಧ್ಯೇಷೀವಹಿ | ಅಧ್ಯೇಷೀಮಹಿ || **ಲುಙ್** || ಅಧಿ+ಇ+ತ ಎಂದಿರುವಾಗ ವಿಕಲ್ಪವಾಗಿ ಗಾಙಾದೇಶ ಹೇಳುತ್ತಾನೆ.

ಲುಙ್‌ಲೃಙ್‌ನಲ್ಲಿ ಗಾಙಾದೇಶ ಹೇಳುವ ಸೂತ್ರ.

**೫೮೮. ವಿಭಾಷಾ ಲುಙ್‌ಲೃಙೋಃ || ೨-೪-೫೦ ||**

**ಇಙೋ ಗಾಙ್ ವಾ ಸ್ಯಾತ್ ||**

ಎರಡು ಪದಗಳುಳ್ಳ ಸೂತ್ರ. 'ಇಙಶ್ಚ' ಸೂತ್ರವೂ, 'ಗಾಙ್‌ಲಿಟಿ' ಸೂತ್ರದಿಂದ 'ಗಾಙ್' ಪದವೂ ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಇಙ್ ಧಾತುವಿಗೆ ಲುಙ್‌ಲೃಙ್ ಪರವಾಗಿರುವಾಗ ವಿಕಲ್ಪವಾಗಿ ಗಾಙಾದೇಶ ಬರುತ್ತದೆ. ಗಾಙಾದೇಶ ಬಂದರೆ ಅಧಿ+ಗಾ+ತ ಎಂದಾಗುತ್ತದೆ. ಸಿಚ್. ಅಧಿ+ಗಾ+ಸ್+ತ. ಗಾಙ್‌ನ ಅಕಾರಕ್ಕೆ ಈತ್ವ ಹೇಳಲು ಪ್ರತ್ಯಯಕ್ಕೆ ಙಿತ್ವವನ್ನು ಹೇಳುತ್ತಾನೆ.

ಗಾಙ್, ಕುಟಾದಿಗಳ ಪರದಲ್ಲಿರುವ ಪ್ರತ್ಯಯಗಳಿಗೆ ಙಿತ್ವ ಹೇಳುವ ಸೂತ್ರ.

**೫೮೯. ಗಾಙ್ಕುಟಾದಿಭ್ಯೋಽಞ್ಣಿನ್ಙಿತ್ || ೧-೨-೧ ||**

**ಗಾಙಾದೇಶಾತ್ಕುಟಾದಿಭ್ಯಶ್ಚ ಪರೇಽಞ್ಣಿತಃ ಪ್ರತ್ಯಯಾ ಙಿತಃ ಸ್ಯುಃ ||**

ಗಾಙ್ಕುಟಾದಿಭ್ಯಃ, ಅಞ್ಣಿತ್, ಙಿತ್ || ತ್ರಿಪದ ಸೂತ್ರ. ಞ್ ಚ ಣ್ ಚ ಞ್ಣೌ ತೌ ಇತೌ ಯಸ್ಯ ಸಃ ಞ್ಣಿತ್. ನ ಞ್ಣಿತ್, ಅಞ್ಣಿತ್. ಞಕಾರ, ಣಕಾರ ಇತ್ ಸಂಜ್ಞೆಯಾಗಿ ಇಲ್ಲದಿರುದ ಪ್ರತ್ಯಯಗಳೆಂದರ್ಥ. **ಸೂತ್ರಾರ್ಥ**—ಗಾಙ್ ಆದೇಶದ ಪರದಲ್ಲಿರುವ, ಕುಟಾದಿ ಧಾತುಗಳ ಪರದಲ್ಲಿರುವ ಞಕಾರ, ಣಕಾರ ಇತ್ತಾಗದ ಪ್ರತ್ಯಯಗಳು ಙಿತ್ತಾಗುತ್ತವೆ. ಪ್ರಕೃತ ಇಙ್‌ಗೆ ಗಾಙಾದೇಶ ಬಂದಿದೆ. ಅದರ ಪರದಲ್ಲಿ ಸಿಚ್ ಪ್ರತ್ಯಯವಿದೆ. ಅದು ಞಿತ್ತೂ ಅಲ್ಲ, ಣಿತ್ತೂ ಅಲ್ಲ. ಆದುದರಿಂದ ಙಿತ್ತಿನಂತೆ ಆಗುತ್ತದೆಯೆಂದು ತಿಳಿಯಬೇಕು. ಹೀಗೆ ಸಿಚ್ ಙಿತ್ತಾದಾಗ ಗಾಙ್‌ನ ಆಕಾರಕ್ಕೆ ಈತ್ವ ಹೇಳುತ್ತಾನೆ.

ಮಾ, ಸ್ಥಾ ಮುಂತಾದವುಗಳ ಆಕಾರಕ್ಕೆ ಈತ್ವ ಹೇಳುವ ಸೂತ್ರ.

**೫೯೦. ಘುಮಾಸ್ಥಾಗಾಪಾಜಹಾತಿಸಾಂ ಹಲಿ || ೬-೪-೬೬ ||**

**ಏಷಾಮಾತ ಈತ್ಸ್ಯಾದ್ಧಲಾದೌ ಕ್ಙಿತ್ಯಾರ್ಧಧಾತುಕೇ | ಅಧ್ಯಗೀಷ್ಟ, ಅಧ್ಯೈಷ್ಟ | ಅಧ್ಯಗೀಷ್ಯತ, ಅಧ್ಯೈಷ್ಯತ ||**

ಘುಮಾಸ್ಥಾಗಾಪಾಜಹಾತಿಸಾಂ, ಹಲಿ || ದ್ವಿಪದ ಸೂತ್ರ. 'ಆರ್ಧಧಾತುಕೇ' ಅಧಿಕಾರ. 'ಆತೋ ಲೋಪ ಇಟಿಚ' ಸೂತ್ರದಿಂದ 'ಅತಃ', 'ಈದ್ಯತಿ' ಸೂತ್ರ ದಿಂದ 'ಈತ್', 'ಅನುದಾತ್ತೋಪದೇಶ—' ಸೂತ್ರದಿಂದ 'ಕ್ಙಿತಿ' ಪದಗಳು ಅನು ವೃತ್ತವಾಗುತ್ತವೆ. 'ಹಲಿ' ಸಪ್ತಮ್ಯಂತವು ಆರ್ಧಧಾತುಕಕ್ಕೆ ವಿಶೇಷಣವಾದುದರಿಂದ ತದಾದಿಲಾಭ. **ಸೂತ್ರಾರ್ಥ** — ಘುಸಂಜ್ಞೆಯುಳ್ಳ ಧಾತುಗಳ, ಮಾ, ಸ್ಥಾ, ಗಾ, ಪಾ, ಹಾ, ಷೋ ಧಾತುಗಳ ಆಕಾರಕ್ಕೆ ಹಲಾದಿಯಾದ ಕಿತ್ ಙಿತ್ ಆದ ಆರ್ಧಧಾತುಕ ಪರದಲ್ಲಿರುವಾಗ ಈತ್ವ ಬರುತ್ತದೆ. 'ದಾಧಾಘ್ವದಾಪ್' ಸೂತ್ರದಿಂದ ದಾರೂಪ ಧಾರೂಪಧಾತುಗಳಿಗೆ ಘು ಎಂಬ ಸಂಜ್ಞೆ ಹಿಂದೆ ಹೇಳಿರುತ್ತಾನೆ. ಪ್ರಕೃತ ಗಾ ಇದೆ. ಇದರ ಪರದಲ್ಲಿ ಹಲಾದಿಯಾದ ಙಿತ್ತಾದ ಆರ್ಧಧಾತುಕವೆಂದರೆ ಸಿಚ್. ಇದು ಪರ ವಾದುದರಿಂದ ಗಾದ ಆಕಾರಕ್ಕೆ ಈಕಾರಾದೇಶ ಬಂದರೆ ಅಧಿ+ಅ+ಗೀ+ಸ್+ತ ಎಂದಾಗುತ್ತದೆ. ಇಣಿನ ಪರದಲ್ಲಿ ಪ್ರತ್ಯಯ ಸಕಾರವಿರುವುದರಿಂದ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯತಕಾರಕ್ಕೆ ಷ್ಟುತ್ವ. ಉಪಸರ್ಗದ ಇಕಾರಕ್ಕೆ ಯಣ್. ಅಧ್ಯಗೀಷ್ಟ | ಅಧ್ಯಗೀಷಾತಾಮ್ | ಅಧ್ಯಗೀಷತ || ಅಧ್ಯಗೀಷ್ಠಾಃ | ಅಧ್ಯಗೀಷಾ ಥಾಮ್ | ಅಧ್ಯಗೀಢ್ವಮ್ || ಅಧ್ಯಗೀಷಿ | ಅಧ್ಯಗೀಷ್ವಹಿ | ಅಧ್ಯಗೀಷ್ಮಹಿ || ಗಾಙಾದೇಶ ಬಾರದಿದ್ದರೆ ಅಧಿ+ಅ+ಇ+ಸ್+ತ. 'ಆಟಶ್ಚ' ವೃದ್ಧಿ. ಷತ್ವ. ಷ್ಟುತ್ವ, ಯಣ್. ಅಧ್ಯೈಷ್ಟ | ಅಧ್ಯೈಷಾತಾಮ್ | ಅಧ್ಯೈಷತ || ಅಧ್ಯೈಷ್ಠಾಃ | ಅಧ್ಯೈಷಾಥಾಮ್ | ಅಧ್ಯೈಢ್ವಮ್ || ಅಧ್ಯೈಷಿ | ಅಧ್ಯೈಷ್ವಹಿ | ಅಧ್ಯೈಷ್ಮಹಿ ||

**ಲೃಙ್** || ಇಲ್ಲಿಯೂ ಹಿಂದಿನಂತೆ ಗಾಙಾದೇಶ ಬಂದರೆ ಅಧಿ+ಅ+ಗಾ+ಸ್ಯ+ತ ಎಂದಾಗುತ್ತದೆ. ಸ್ಯಕ್ಕೆ ಹಿಂದಿನಂತೆ ಙಿತ್ವ ಬಂದರೆ ಗಾದ ಆಕಾರಕ್ಕೆ ಈತ್ವ ಷತ್ವ. ಯಣ್. ಅಧ್ಯಗೀಷ್ಯತ | ಅಧ್ಯಗೀಷ್ಯೇತಾಮ್ | ಅಧ್ಯಗೀಷ್ಯಂತ || ಅಧ್ಯ ಗೀಷ್ಯಥಾಃ | ಅಧ್ಯಗೀಷ್ಯೇಥಾಮ್ | ಅಧ್ಯಗೀಷ್ಯಧ್ವಮ್ || ಅಧ್ಯಗೀಷ್ಯೇ | ಅಧ್ಯ ಗೀಷ್ಯಾವಹಿ | ಅಧ್ಯಗೀಷ್ಯಾಮಹಿ || ಗಾಙಾದೇಶ ಬಾರದಿದ್ದರೆ ಅಧಿ+ಆ+ಇ+ಸ್ಯ+ತ ಎಂದಿರುವಾಗ ವೃದ್ಧಿ. ಯಣ್, ಷತ್ವ. ಅಧ್ಯೈಷ್ಯತ | ಅಧ್ಯೈಷ್ಯೇತಾಮ್ | ಅಧ್ಯೈ ಷ್ಯಂತ || ಇತ್ಯಾದಿ ರೂಪಗಳಾಗುತ್ತವೆ.

|| ೭೦ || **ದುಹ — ಪ್ರಪೂರಣೇ** ( ಕರೆಯುವುದು.)

**ದೋಗ್ಧಿ–ದುಗ್ಧಃ–ದುಹಂತಿ | ಧೋಕ್ಷಿ | ದುಗ್ಧೇ–ದುಹಾತೇ–ದುಹತೇ | ಧುಕ್ಷೇ–ದುಹಾಥೇ–ಧುಗ್ಧ್ವೇ | ದುಹೇ–ದುಹ್ವಹೇ–ದುಹ್ಮಹೇ |**

ದುದೋಹ, ದುದುಹೇ | ದೋಗ್ಧಾಸಿ, ದೋಗ್ಧಾಸೇ | ಧೋಕ್ಷ್ಯತಿ, ಧೋಕ್ಷ್ಯತೇ | ದೋಗ್ಧು, ದುಗ್ಧಾತ್,-ದುಗ್ಧಾಮ್-ದುಹಸ್ತು | ದುಗ್ಧಿ, ದುಗ್ಧಾತ್-ದುಗ್ಧಮ್-ದುಗ್ಧ | ದೋಹಾನಿ-ದೋಹಾವ-ದೋಹಾಮ | ದುಗ್ಧಾಮ್-ದುಹಾತಾಮ್-ದುಹತಾಮ್ | ಧುಕ್ಷ್ವ-ದುಹಾಥಾಮ್-ಧುಗ್ಧ್ವಮ್ | ದೋಹೈ-ದೋಹಾವಹೈ-ದೋಹಾಮಹೈ | ಅಧೋಕ್ | ಅದುಗ್ಧಾಮ್-ಅದುಹನ್ | ಅದೋಹಮ್ | ಅದುಗ್ಧ-ಅದುಹಾತಾಮ್-ಅದುಹತ | ಅಧುಗ್ಧ್ವಮ್ | ದುಹ್ಯಾತ್, ದುಹೀಷ ||

ದುಹ ಧಾತು. ಇದು ಸ್ವರಿತೇತಾದುದರಿಂದ ಉಭಯಪದಿ. ಅನಿಟ್. ಪರಸ್ಮೈಪದಿಯಲ್ಲಿ ಲಟ್. ದುಹ್+ತಿ. 'ಪುಗಂತ—' ಗುಣ. ದೋಹ್+ತಿ. 'ದಾದೇರ್ಧಾತೋರ್ಘಃ' ಸೂತ್ರದಿಂದ ಹಕಾರಕ್ಕೆ ಘಕಾರಾದೇಶ ಬಂದಾಗ ಝಷನ್ತವಾದುದರಿಂದ 'ಝಷಸ್ತಥೋರ್ಧೋಽಧಃ' ಸೂತ್ರದಿಂದ ತಕಾರಕ್ಕೆ ಧಕಾರಾದೇಶ. ದೋಘ್+ಧಿ. 'ಝಲಾಂ ಜಶ್ ಝಶಿ' ದೋಗ್ಧಿ | ದುಗ್ಧಃ | ದುಹನ್ತಿ || ನಿಮಿತ್ತವಿಲ್ಲದಿರುವುದರಿಂದ ಯಾವ ಕಾರ್ಯವೂ ಇಲ್ಲ. ದುಹ್+ಸಿ. ಗುಣ. ದೋಹ್+ಸಿ. ಹಕಾರಕ್ಕೆ ಘಕಾರ. ದೋಘ್+ಸಿ. 'ಏಕಾಚೋ ಬಶೋ ಭಷ್ ಝಷನ್ತಸ್ಯ ಸ್ಧ್ವೋಃ' ಸೂತ್ರದಿಂದ ಆದಿಯ ದಕಾರಕ್ಕೆ ಧಕಾರಾದೇಶ. ಧೋಘ್+ಸಿ. 'ಖರಿಚ' ಧೋಕ್+ಸಿ. 'ಆದೇಶಪ್ರತ್ಯಯಯೋಃ', 'ಕಷಯೋರ್ಗೇ ಕ್ಷಃ' ಧೋಕ್+ಷಿ=ಧೋಕ್ಷಿ | ದುಗ್ಧಃ | ದುಗ್ಧ || ದುಹ್+ಮಿ. ಗುಣ. ದೋಹ್ಮಿ | ದುಹ್ವಃ | ದುಹ್ಮಃ || ಆ.— ದುಹ್+ತೇ. ಅಪಿತ್ ಸಾರ್ವಧಾತುಕವಾದುದರಿಂದ ಒಂಬತ್ತೂ ಙಿತ್ತಾಗುವುದರಿಂದ ಗುಣವಿಲ್ಲ. ಹಿಂದಿನಂತೇ ಘತ್ವಾದಿ. ದುಗ್ಧೇ || ದುಹ್+ಆತೇ=ದುಹಾತೇ | ದುಹ್+ಅತೇ (ಆತ್ಮನೇಪದೇಷ್ವನತಃ)+ ದುಹತೇ || ದುಹ್+ಸೇ=ಧುಕ್ಷೇ | (ಧೋಕ್ಷಿವತ್) ದುಹಾಥೇ | ಧುಗ್ಧ್ವೇ || ದುಹೇ | ದುಹ್ವಹೇ | ದುಹ್ಮಹೇ ||

**ಲಿಟ್** || **ಪ.**—ದುದುಹ್+ಅ. 'ಪುಗಂತ—' ಗುಣ. ದುದೋಹ. ದುದುಹ್ ಅಂಗ. ದುದುಹತುಃ | ದುದುಹುಃ || ಭಾರದ್ವಾಜ ನಿಯಮದಿಂದ ಥಲಿಗೆ ಇಡಾಗಮ ಬಂದರೆ ದುದೋಹಿಥ| ಇಡಾಗಮ ಬಾರದಿದ್ದರೆ ದುದೋಹ್+ಥ ಎಂದಿರುವಾಗ ಹಕಾರಕ್ಕೆ ಘತ್ವ. ಥಕ್ಕೆ ಧತ್ವ. ದುದೋಗ್ಧ | ದುದುಹಥುಃ | ದುದುಹ || ದುದೋಹ | ದುದುಹಿವ | ದುದುಹಿಮ || ಆ.—ದುದುಹೇ | ದುದುಹಾತೇ | ದುದುಹಿರೇ || ದುದುಹಿಷೇ|| ದುದುಹಾಥೇ | ದುದುಹಿಧ್ವೇ || ದುದುಹೇ | ದುದುಹಿವಹೇ | ದುದುಹಿಮಹೇ || **ಲುಟ್** || ದುಹ್+ತಾ. ಘತ್ವ, ಧತ್ವ, ಜಶ್ತ್ವ. ದೋಗ್ಧಾ | ದೋಗ್ಧಾರೌ | ದೋಗ್ಧಾರಃ || ದೋಗ್ಧಾಸಿ | ದೋಗ್ಧಾಸ್ಥಃ | ದೋಗ್ಧಾಸ್ಥ || ದೋಗ್ಧಾಸ್ಮಿ | ದೋಗ್ಧಾಸ್ವಃ | ದೋಗ್ಧಾಸ್ಮಃ || ಆ.—ದೋಗ್ಧಾ | ದೋಗ್ಧಾರೌ | ದೋಗ್ಧಾರಃ || ದೋಗ್ಧಾಸೇ | ದೋಗ್ಧಾಸಾಥೇ | ದೋಗ್ಧಾಧ್ವೇ || ದೋಗ್ಧಾಹೇ |

ದೋಗ್ಧಾಸ್ವಹೇ | ದೋಗ್ಧಾಸ್ಮಹೇ || **ಲೃಟ್** || ದುಹ್ + ಸ್ಯ + ತಿ. ಘತ್ವ, ಗುಣ. ದುಘ್ + ಸ್ಯ + ತಿ. 'ಏಕಾಚಃ—' ಸೂತ್ರದಿಂದ ದಕಾರಕ್ಕೆ ಧಕಾರ. ಘಕಾರಕ್ಕೆ ಚರ್ತ್ವ. ಸಕಾರಕ್ಕೆ ಷತ್ವ. ಧೋಕ್ಷ್ಯತಿ | ಧೋಕ್ಷ್ಯತಃ | ಇತ್ಯಾದಿ. **ಆ.**—ಧೋಕ್ಷ್ಯತೇ | ಧೋಕ್ಷ್ಯೇತೇ | ಧೋಕ್ಷ್ಯನ್ತೇ || ಇತ್ಯಾದಿ. **ಲೋಟ್** || ದುಹ್ + ತು. ಘತ್ವ, ಗುಣ. ತಕಾರಕ್ಕೆ ಧತ್ವ, ಜಶ್ತ್ವ. ದೋಗ್ಧು, ದುಗ್ಧಾತ್ | ದುಗ್ಧಾಮ್ | ದುಹನ್ತು || ದುಹ್ + ಹಿ. ಹಿ ಅಪಿತ್ತಾದುದರಿಂದ ಗುಣವಿಲ್ಲ. ಹಕಾರಕ್ಕೆ ಘತ್ವ. ದುಘ್ + ಹಿ 'ಹುಝಲ್ಭ್ಯೋ ಹೇರ್ಧಿಃ' ಸೂತ್ರದಿಂದ ಹಿಗೆ ಧಿತ್ವ. ಜಶ್ತ್ವ. ದುಗ್ಧಿ, ದುಗ್ಧಾತ್ | ದುಗ್ಧಂ | ದುಗ್ಧ || ಆಟ್ ಬಂದಾಗ ಗುಣ. ದೋಹಾನಿ | ದೋಹಾವ | ದೋಹಾಮ || **ಆ.**—ದುಗ್ಧಾಮ್ | ದುಹಾತಾಮ್ | ದುಹತಾಮ್ || ಧುಕ್ಷ್ವ | (ದುಹ್ + ಸ್ವ ಧುಕ್ಷಿವತ್ ಪ್ರಕ್ರಿಯಾ) ದುಹಾಥಾಮ್ | ಧುಗ್ಧ್ವಮ್ || ದೋಹೈ | ದೋಹಾವಹೈ | ದೋಹಾಮಹೈ || **ಲಙ್** || ಅದುಹ್ + ತ್. ಗುಣ, ಅದೋಹ್ + ತ್. 'ಹಲ್ಙ್ಯಾಭ್ಯೋ—' ಸೂತ್ರದಿಂದ ತಲೋಪ. ಹಕಾರಕ್ಕೆ ಘತ್ವ. 'ಏಕಾಚಃ' ಸೂತ್ರದಿಂದ ದಕಾರಕ್ಕೆ ಧತ್ವ. ಅಧೋಘ್. ಜಶ್ತ್ವ, 'ವಾವಸಾನೇ' ವಿಕಲ್ಪ ಚರ್ತ್ವ. ಅಧೋಗ್, ಅಧೋಕ್ | ಅದುಗ್ಧಾಮ್ | ಅದುಹನ್ || ಅಧೋಗ್, ಅಧೋಕ್ | ಅದುಗ್ಧಮ್ | ಅದುಗ್ಧ || ಅಧೋಹಮ್ | ಅದುಹ್ವ | ಅದುಹ್ಮ || **ಆ.** — ಅದುಗ್ಧ || ಅದುಹಾತಾಮ್ | ಅದುಹತ || ಅದುಗ್ಧಾಃ | ಅದುಹಾಥಾಮ್ | ಅಧುಗ್ಧ್ವಮ್ || ಅದುಹಿ | ಅದುಹ್ವಹಿ | ಅದುಹ್ಮಹಿ || **ವಿಧಿಲಿಙ್** || ದುಹ್ಯಾತ್ | ದುಹ್ಯಾತಾಮ್ | ದುಹ್ಯುಃ || ದುಹ್ಯಾಃ ದುಹ್ಯಾತಮ್ | ದುಹ್ಯಾತ || ದುಹ್ಯಾಮ್ | ದುಹ್ಯಾವ | ದುಹ್ಯಾಮ || **ಆ.** — ದುಹೀತ | ದುಹೀಯಾಥಾಮ್ | ದುಹೀರನ್ || ದುಹೀಥಾಃ | ದುಹೀಯಾಥಾಮ್ | ದುಹೀಧ್ವಮ್ || ದುಹೀಯ | ದುಹೀವಹಿ | ದುಹೀಮಹಿ || **ಆಶೀರ್ಲಿಙ್** || ದುಹ್ಯಾತ್ | ದುಹ್ಯಾಸ್ತಾಮ್ | ದುಹ್ಯಾಸುಃ || ದುಹ್ಯಾಃ | ದುಹ್ಯಾಸ್ತಮ್ | ದುಹ್ಯಾಸ್ತ || ದುಹ್ಯಾಸಮ್ | ದುಹ್ಯಾಸ್ವ || ದುಹ್ಯಾಸ್ಮ || ಆತ್ಮನೇಪದಿಯಲ್ಲಿ ಸೀಯುಟಾಗಮ ಬಂದಾಗ ದುಹ್ + ಸೀಯ್‌ತ ಎಂದಿರುವಾಗ 'ಸುಟ್ ತಿಥೋಃ' ಸೂತ್ರದಿಂದ ತಕ್ಕೆ ಸುಟಾಗಮ. ದುಹ್ + ಸೀಯ್‌ಸ್‌ತ. ಲೋಪೋವ್ಯೋರ್ವಲಿ' ಯಲೋಪ. ದುಹ್ + ಸೀಸ್‌ತ. ಷತ್ವ, ಷ್ಟುತ್ವ. ದುಹ್ + ಸೀಷ್ಟ. 'ಪುಗಂತ—' ಸೂತ್ರದಿಂದ ಲಘೂಪಧಗುಣ ಪ್ರಾಪ್ತವಾದರೆ ಲಿಙಿಗೆ ಕಿತ್ತ್ವವನ್ನು ಹೇಳುತ್ತಾನೆ.

ಲಿಙ್ ಸಿಚ್‌ಗಳಿಗೆ ಕಿತ್ತ್ವ ಹೇಳುವ ಸೂತ್ರ.

**೫೯೧. ಲಿಙ್‌ಸಿಚಾವಾತ್ಮನೇಪದೇಷು || ೧–೨–೧೧ ||**

ಇಕ್ಸಮೀಪಾದ್ಧಲಃ ಪರೌ ಝಲಾದೀ ಲಿಙ್‌ಸಿಚೌ ಕಿತೌ ಸ್ತಸ್ತಙಿ ||

**ಧುಕ್ಷೀಷ್ಟ** ||

ಲಿಙ್ಸಿಚೌ, ಆತ್ಮನೇಪದೇಷು || ದ್ವಿಪದ ಸೂತ್ರ. 'ಇಕೋ ಝಲ್', 'ಹಲಂತಾಚ್ಚ' ಎರಡು ಸೂತ್ರಗಳು ಅನುವೃತ್ತವಾಗುತ್ತವೆ. ಇಕಃ ಸಾಮೀಪ್ಯಾರ್ಥದಲ್ಲಿ ಷಷ್ಠೀ ಬಂದಿದೆ. ಹಲಿನಲ್ಲಿ ಅದಕ್ಕೆ ಅನ್ವಯ. ಆತ್ಮನೇಪದೇಷು ಎಂಬುದು ಸಿಚಿನಲ್ಲಿ ಮಾತ್ರ ಅನ್ವಯಿಸುತ್ತದೆ. **ಸೂತ್ರಾರ್ಥ**—ಇಕಿನ ಸಮೀಪದಲ್ಲಿರುವ ಹಲಿನ ಪರದಲ್ಲಿರುವ ಝಲಾದಿಯಾದ ಲಿಙ್, ಆತ್ಮನೇಪದಪರವಾದ ಸಿಚ್, ಕಿತ್ ಆಗುತ್ತವೆ. 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ ಕಿತ್ ಅನುವೃತ್ತವಾಗಿದೆ. ದುಹ್+ಸೀಷ್ಟ ಎಂದಿರುವಾಗ ಇಕ್ ಉಕಾರ. ಅದರ ಸಮೀಪದಲ್ಲಿರುವ ಹಲ್ ಹಕಾರ. ಅದರ ಪರದಲ್ಲಿ ಝಲಾದಿ ಲಿಙ್ ಸೀಷ್ಟ. ಇಡಾಗಮ ಬರದಿರುವುದರಿಂದ ಝಲಾದಿಯಾಗಿದೆ. ಇದು ಕಿತ್ ಆಗುತ್ತದೆಯಾದುದರಿಂದ 'ಕ್ಙಿತಿಚ' ಸೂತ್ರದಿಂದ ಗುಣನಿಷೇಧ. ಹಕಾರಕ್ಕೆ ಹಿಂದಿನಂತೆ ಘತ್ವ. ಅದಕ್ಕೆ ಚರ್ತ್ವ. ದುಕ್+ಸೀಷ್ಟ. 'ಆದೇಶಪ್ರತ್ಯಯಯೋಃ' ಷತ್ವ. ದುಕ್+ಷೀಷ್ಟ. ಘತ್ವ ಬಂದಾಗ 'ಏಕಾಚೋ ಬಶೋ—' ಸೂತ್ರದಿಂದ ದಕಾರಕ್ಕೆ ಧಕಾರಮಾಡಿಕೊಳ್ಳಬೇಕು. ಧುಕ್ಷೀಷ್ಟ | ಧುಕ್ಷೀಯಾಸ್ತಾಮ್ | ಧುಕ್ಷೀರನ್ || ಧುಕ್ಷೀಷ್ಠಾಃ | ಧುಕ್ಷೀಯಾಸ್ಥಾಮ್ | ಧುಕ್ಷೀಧ್ವಮ್ ಧುಕ್ಷೀಯ | ಧುಕ್ಷೀವಹಿ | ಧುಕ್ಷೀಮಹಿ ||

ಲುಙ್ || ಅದುಹ್+ಚ್ಲಿ+ತ್ ಎಂದಿರುವಾಗ ಚ್ಲಿಗೆ ಸಿಚಾದೇಶವನ್ನು ಬಾಧಿಸಿ ಕ್ಸಾದೇಶವನ್ನು ಹೇಳುತ್ತಾನೆ.

ಚ್ಲಿಗೆ ಕ್ಸಾದೇಶ ಹೇಳುವ ಸೂತ್ರ.

**೫೯೨. ಶಲ ಇಗುಪಧಾದನಿಟಃ ಕ್ಸಃ || ೩-೧-೪೫ ||**

**ಇಗುಪಧೋ ಯಃ ಶಲನ್ತಸ್ತಸ್ಮಾದನಿಟಶ್ಚ್ಲೇಃ ಕ್ಸಾದೇಶಃ ಸ್ಯಾತ್ | ಅಧುಕ್ಷತ್ ||**

ಶಲಃ, ಇಗುಪಧಾತ್, ಅನಿಟಃ, ಕ್ಸಃ || ನಾಲ್ಕು ಪದಗಳುಳ್ಳ ಸೂತ್ರ. 'ಚ್ಲೇಃ ಸಿಚ್' ಸೂತ್ರದಿಂದ 'ಚ್ಲೇಃ', 'ಧಾತೋರೇಕಾಚಃ—' ಸೂತ್ರದಿಂದ 'ಧಾತೋಃ' ಪದಗಳಿಗೆ ಅನುವೃತ್ತಿ. ಶಲಃ ಧಾತುವಿಗೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**— ಇಕ್ ಉಪಧೆಯಾಗಿರುವ ಶಲ್ ಕೊನೆಯಲ್ಲಿರುವ ಧಾತುವಿನ ಪರದಲ್ಲಿರುವ ಇಡಾಗಮವನ್ನು ಹೊಂದದಿರುವ ಚ್ಲಿಗೆ ಕ್ಸ ಎಂಬ ಆದೇಶ ಬರುತ್ತದೆ. ದುಹ್ ಅನಿಟ್ ಧಾತುವಾದುದರಿಂದ ಚ್ಲಿಗೆ ಇಡಾಗಮವಿಲ್ಲ. ಇಕ್ ಉಕಾರ. ಅದು ಉಪಧೆಯಾಗಿರುವ (ಶಲ್) ಹಕಾರ ಕೊನೆಯಲ್ಲಿರುವ ಧಾತು ದುಹ್. ಇದರ ಪರದ ಚ್ಲಿಗೆ ಕ್ಸಾದೇಶ ಬಂದರೆ ಅದುಹ್+ಕ್ಸ+ತ್. 'ಲಶಕ್ವತದ್ಧಿತೇ" ಕಕಾರ ಇತ್ ಅದುಹ್+ಸತ್. ಹಿಂದಿನಂತೆ ಹಕಾರಕ್ಕೆ ಘತ್ವ. 'ಏಕಾಚ:—" ಸೂತ್ರದಿಂದ ದಕಾರಕ್ಕೆ ಧತ್ವ. ಅಧುಘ್+ಸತ್. 'ಖರಿಚ", 'ಆದೇಶಪ್ರತ್ಯಯಯೋಃ"

ಅಧುಕ್ಷತ್. ಅಧುಕ್ಷ ಅಂಗವಾಗುತ್ತದೆ. ಅಧುಕ್ಷತಾಮ್ | ಅಧುಕ್ಷನ್ || ಅಧುಕ್ಷಃ | ಅಧುಕ್ಷತಮ್ | ಅಧುಕ್ಷತ || ಅಧುಕ್ಷಮ್ | ಅಧುಕ್ಷಾವ | ಅಧುಕ್ಷಾಮ || ಅ.— ಇಲ್ಲಿಯೂ ಚ್ಲಿಗೆ ಕ್ಸಾದೇಶ ಬಂದರೆ ಅದುಹ್+ಸ+ತ ಎಂದಿರುವಾಗ ಕ್ಸಕ್ಕೆ ವಿಕಲ್ಪವಾಗಿ ಲುಕ್ ಹೇಳುತ್ತಾನೆ.

ಕ್ಸಪ್ರತ್ಯಯಕ್ಕೆ ಲುಕ್ ಹೇಳುವ ಸೂತ್ರ.

**೫೯೩. ಲುಗ್ವಾದುಹದಿಹಲಿಹಗುಹಾಮಾತ್ಮನೇಪದೇ ದನ್ತ್ಯೇ ||೭-೩-೭೩||**

**ಏಷಾಂ ಕ್ಸಸ್ಯ ಲುಗ್ವಾ ಸ್ಯಾದ್ದನ್ತ್ಯೇ ತಙಿ | ಅದುಗ್ಧ, ಅಧುಕ್ಷತ ||**

ಲುಕ್, ವಾ, ದುಹದಿಹಲಿಹಗುಹಾಂ, ಆತ್ಮನೇಪದೇ, ದನ್ತ್ಯೇ || ಐದು ಪದಗಳುಳ್ಳ ಸೂತ್ರ. 'ಕ್ಸಸ್ಯಾಚಿ' ಸೂತ್ರದಿಂದ 'ಕ್ಸಸ್ಯ' ಅನುವೃತ್ತಿ. ದನ್ತೇ ಭವಃ ದನ್ತ್ಯಃ | (ಳ ತು ಸ) ದನ್ತ್ಯಾಕ್ಷರವೇ ಆದಿಯಲ್ಲಿರುವ ಆತ್ಮನೇಪದ ಪರದಲ್ಲಿರುವಾಗ ಎಂದರ್ಥ. **ಸೂತ್ರಾರ್ಥ**—ದುಹ, ದಿಹ, ಲಿಹ, ಗುಹ ಈ ಧಾತುಗಳಿಗೆ ಬಂದಿರುವ ಕ್ಸಪ್ರತ್ಯಯಕ್ಕೆ ದನ್ತ್ಯಾದಿತಙ್ ಪರದಲ್ಲಿರುವಾಗ ವಿಕಲ್ಪವಾಗಿ ಲುಕ್ ಬರುತ್ತಿದೆ. ಅದುಹ್+ಸ+ತ ಎಂದಿರುವಾಗ ತ ದನ್ತ್ಯಾದಿತಙ್ ಆದುದರಿಂದ ಕ್ಸಕ್ಕೆ ಲುಕ್ ಬಂದರೆ ಅದುಹ್+ತ ಎಂದಾಗುತ್ತಿದೆ. 'ದಾದೇರ್ಧಾತೋರ್ಘಃ' ಸೂತ್ರದಿಂದ ಹಕಾರಕ್ಕೆ ಘತ್ವ. ಅದುಘ್+ತ. 'ಝಷಸ್ತಥೋ—' ಸೂತ್ರದಿಂದ ತಕ್ಕೆ ಧತ್ವ. ಘಕ್ಕೆ ಜಶ್ತ್ವ. ಅದುಗ್ಧ. ಕ್ಸಕ್ಕೆ ಲುಕ್ ಬಾರದಿದ್ದರೆ ಅದುಹ್+ಸ+ತ. ಹಿಂದಿನಂತೆ ಘತ್ವ. ಧತ್ವ, ಚರ್ತ್ವ, ಷತ್ವ. ಅಧುಕ್ಷತ ಎಂದಾಗುತ್ತದೆ. ಅಧುಕ್ಷ+ಆತಾಮ್ ಎಂದಿರುವಾಗ 'ಆತೋಙಿತಃ' ಸೂತ್ರದಿಂದ ಆಕಾರಕ್ಕೆ ಇಯಾದೇಶಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಕ್ಸದ ಅಕಾರಕ್ಕೆ ಲೋಪ ಹೇಳುತ್ತಾನೆ.

ಕ್ಸಪ್ರತ್ಯಯಕ್ಕೆ ಲೋಪ ಹೇಳುವ ಸೂತ್ರ.

**೫೯೪. ಕ್ಸಸ್ಯಾಚಿ || ೭-೩-೭೨ ||**

**ಅಜಾದೌ ತಙಿ ಕ್ಸಸ್ಯ ಲೋಪಃ | ಅಧುಕ್ಷಾತಾಮ್–ಅಧುಕ್ಷನ್ತ | ಅದುಗ್ಧಾಃ, ಅಧುಕ್ಷಥಾಃ | ಅಧುಕ್ಷಾಥಾಮ್ | ಅಧುಗ್ಧ್ವಮ್, ಅಧುಕ್ಷಧ್ವಮ್ | ಅಧುಕ್ಷಿ | ಅದುಹ್ವಹಿ, ಅಧುಕ್ಷಾವಹಿ | ಅಧುಕ್ಷಾಮಹಿ || ಅಧೋಕ್ಷ್ಯತ ||**

ಕ್ಸಸ್ಯ, ಅಚಿ || ದ್ವಿಪದ ಸೂತ್ರ. 'ಘೋರ್ಲೋಪಃ—' ಸೂತ್ರದಿಂದ 'ಲೋಪಃ' ಅನುವೃತ್ತವಾಗುತ್ತದೆ. ಮುಂದಿನ ಸೂತ್ರದಿಂದ 'ಆತ್ಮನೇಪದೇ' ಪದವು ಅಪಕೃಷ್ಟವಾಗುತ್ತದೆ. 'ಅಚಿ' ಸಪ್ತಮ್ಯಂತವು ಅದಕ್ಕೆ ವಿಶೇಷಣ. ತದಾದಿ

ಲಾಭ. **ಸೂತ್ರಾರ್ಥ**—ಕ್ಸಪ್ರತ್ಯಯಕ್ಕೆ ಅಜಾದಿಯಾದ ಆತ್ಮನೇಪದ ಪ್ರತ್ಯಯ ಪರವಾದಾಗ ಲೋಪ ಬರುತ್ತದೆ. 'ಅಲೋಂತ್ಯಸ್ಯ' ಪರಿಭಾಷೆಯಿಂದ ಅಂತ್ಯಕ್ಕೆ (ಅ) ಲೋಪ. ಆತಾಮ್ ಅಜಾದಿತಙ್ ಆದುದರಿಂದ ಕ್ಸದ ಅಕಾರಕ್ಕೆ ಲೋಪ ಬಂದರೆ ಅಧುಕ್ಷ್+ಆತಾಮ್=ಅಧುಕ್ಷಾತಾಮ್ ಎಂದಾಗುತ್ತದೆ. ಅಧುಕ್ಷ+ಅನ್ತ. ಇಲ್ಲಿಯೂ ಲೋಪ ಬಂದರೆ ಅಧುಕ್ಷನ್ತ. ಥಾಸ್ ದನ್ತ್ಯಾದಿತಙ್ ಆದುದರಿಂದ ಕ್ಸಕ್ಕೆ ವಿಕಲ್ಪವಾಗಿ ಲುಕ್. ಲುಕ್ ಬಂದರೆ ಅದುಹ್+ಥಾಸ್ ಎಂದಿರುವಾಗ ಘತ್ವ, ಧತ್ವ, ಜಶ್ತ್ವ. ಅದುಗ್ಧಾಃ | ಲುಕ್ ಬಾರದಿದ್ದರೆ ಅಧುಕ್ಷಥಾಃ | ಅಧುಕ್ಷಾಥಾಮ್ | ಅದುಹ್+ಧ್ವಮ್. ಲುಕ್ ಬಂದರೆ ಅಧುಗ್ಧ್ವಮ್. ಲುಕ್ ಬಾರದಿದ್ದರೆ ಅಧುಕ್ಷಧ್ವಮ್ || ಅಧುಕ್ಷ+ಇ. 'ಕ್ಸಸ್ಯಾಚಿ' ಅಧುಕ್ಷಿ. ಅದುಹ್+ಸ್+ವಹಿ. ಲುಕ್ ಬಂದರೆ ಅದುಹ್ವಹಿ. ಲುಕ್ ಬಾರದಿದ್ದರೆ ('ಅತೋದೀರ್ಘೋಯಞಿ' ದೀರ್ಘ) ಅಧುಕ್ಷಾವಹಿ | ಅಧುಕ್ಷಾಮಹಿ ||

ಲೃಙ್ || ಅದುಹ್+ಸ್ಯ+ತ್. ಘತ್ವ, ಧತ್ವ, ಚರ್ತ್ವ, ಷತ್ವ, ಪುಗಂತ ಗುಣ. ಅಧೋಕ್ಷ್ಯತ್ | ಅಧೋಕ್ಷ್ಯತಾಮ್. ಅಧೋಕ್ಷ್ಯನ್ || ಇತ್ಯಾದಿ. ಆ.—ಅಧೋಕ್ಷ್ಯತ | ಅಧೋಕ್ಷ್ಯೇತಾಮ್ | ಅಧೋಕ್ಷ್ಯನ್ತ || ಅಧೋಕ್ಷ್ಯಥಾಃ | ಅಧೋಕ್ಷ್ಯೇಥಾಮ್ | ಅಧೋಕ್ಷ್ಯಧ್ವಮ್ || ಅಧೋಕ್ಷ್ಯೇ | ಅಧೋಕ್ಷ್ಯಾವಹಿ | ಅಧೋಕ್ಷ್ಯಾಮಹಿ ||

|| ೭೦ || ದಿಹ ಉಪಚಯೇ (ವೃದ್ಧಿಯಾಗುವುದು.)

|| ೭೨ || ಲಿಹ ಆಸ್ವಾದನೇ (ರುಚಿನೋಡುವುದು.)

**ಲೇಢಿ-ಲೀಢಃ-ಲಿಹನ್ತಿ | ಲೇಕ್ಷಿ || ಲೀಢೇ-ಲಿಹಾತೇ-ಲಿಹತೇ | ಲಿಕ್ಷೇ-ಲಿಹಾಥೇ-ಲೀಢ್ವೇ | ಲಿಲೇಹ-ಲಿಲಿಹೇ | ಲೇಢಾಸಿ-ಲೇಢಾಸೇ | ಲೇಕ್ಷ್ಯತಿ-ಲೇಕ್ಷ್ಯತೆ | ಲೇಢು-ಲೀಢಾಮ್-ಲಿಹನ್ತು | ಲೀಢಿ | ಲೇಹಾನಿ | ಲೀಢಾಮ್ | ಅಲೇಟ್, ಅಲೇಡ್ | ಅಲಿಕ್ಷತ್, ಅಲೀಢ, ಅಲಿಕ್ಷತ | ಅಲೇಕ್ಷ್ಯತ್, ಅಲೇಕ್ಷ್ಯತ ||**

ದಿಹ ಧಾತು ದಾದಿಯಾಗಿ ಹಾನ್ತವಾದುದರಿಂದ ದುಹ ಧಾತುವಿನಂತೇ ರೂಪ ಹೊಂದುತ್ತದೆ. **ಲಟ್** || ದೇಗ್ಧಿ | ದಿಗ್ಧೇ || **ಲಿಟ್** || ದಿದೇಹ | ದಿದಿಹೇ || **ಲುಟ್** || ದೇಗ್ಧಾ || **ಲೃಟ್** || ಧೇಕ್ಷ್ಯತಿ | ಧೇಕ್ಷ್ಯತೇ || **ಲೋಟ್** || ದೇಗ್ಧು, ದಿಗ್ಧಾತ್ | ದಿಗ್ಧಾಮ್ || **ಲಙ್** || ಅಧೇಕ್, ಅಧೇಗ್ | ಅದಿಗ್ಧ || **ವಿಧಿಲಿಙ್** || ದಿಹ್ಯಾತ್ | ದಿಹೀತ || **ಆಶೀರ್ಲಿಙ್** || ದಿಹ್ಯಾತ್ | ಧಿಕ್ಷೀಷ್ಟ || **ಲುಙ್** || ಅಧಿಕ್ಷತ್ | ಅದಿಗ್ಧ, ಅಧಿಕ್ಷತ || **ಲೃಙ್** || ಅಧೇಕ್ಷ್ಯತ್ | ಅಧೇಕ್ಷ್ಯತ ||

**ಲಿಹ** ಧಾತು ಉಭಯಪದೀ. ಅನಿಟ್. **ಲಟ್** || ಲಿಹ್ + ತಿ. ಪುಗಂತಗುಣ. ಲೇಹ್ + ತಿ. 'ಹೋಢಃ' ಲೇಢ್ + ತಿ. 'ಝಷಸ್ತಥೋ–' ಸೂತ್ರದಿಂದ ತಕಾರಕ್ಕೆ ಧಾದೇಶ. ಲೇಢ್ + ಧಿ. 'ಷ್ಟುನಾಷ್ಟುಃ' ಲೇಢ್ + ಢಿ. 'ಢೋಢೇಲೋಪಃ' ಲೇಢಿ | ಲಿಹ್ + ತಃ | ದ್ವಿಬಹುವಚನಗಳಲ್ಲಿ ಗುಣವಿಲ್ಲ. 'ಸಾರ್ವಧಾತುಕಮಪಿತ್' ಸೂತ್ರದಿಂದ ಪ್ರತ್ಯಯಗಳು ಙಿತ್ತಾಗುತ್ತವೆ. ಇನ್ನು ಹಿಂದಿನಂತೇ ಪ್ರಕ್ರಿಯೆ. ಲಿಢ್ + ಢಸ್. 'ಢೋಢೇಲೋಪಃ' ಲಿ + ಢಸ್. 'ಢ್ರಲೋಪೇ—' ಸೂತ್ರದಿಂದ ಇಕಾರಕ್ಕೆ ದೀರ್ಘ. ಲೀಢಃ | ಲಿಹ್ + ಅನ್ತಿ = ಲಿಹನ್ತಿ | ಲಿಹ್ + ಸಿ. ಗುಣ. ಢತ್ವ. ಲೇಢ್ + ಸಿ. 'ಷಢೋಃ ಕಃ ಸಿ' ಸೂತ್ರದಿಂದ ಢಕಾರಕ್ಕೆ ಕತ್ವ. ಲೇಕ್ + ಸಿ. ಷತ್ವ. ಲೇಕ್ಷಿ | ಲೀಢಃ | ಲೀಢ || ಲಿಹ್ + ಮಿ. ಗುಣ. ಲೇಹ್ಮಿ | ಲಿಹ್ವಃ | ಲಿಹ್ಮಃ || ಆ.—ಲಿಹ್ + ತೇ. ಢತ್ವ, ಷ್ಟುತ್ವ, ಢಲೋಪ, ದೀರ್ಘ. ಲೀಢೇ | ಲಿಹಾತೇ | ಲಿಹತೇ || (ಆತ್ಮನೇಪದೇಷ್ವನತಃ) ಲಿಕ್ಷೇ | ಲಿಹಾಥೇ | ಲೀಢ್ವೇ || ಲಿಹೇ | ಲಿಹ್ವಹೇ | ಲಿಹ್ಮಹೇ ||

**ಲಿಟ್** || ಲಿಲಿಹ್ + ಅ. ಪುಗಂತಗುಣ. ಲಿಲೇಹ | ಲಿಲಿಹತುಃ | ಲಿಲಿಹುಃ || ಲಿಲೇಹಿಥ, ಲಿಲಿಹಥುಃ | ಲಿಲಿಹ || ಲಿಲೇಹ | ಲಿಲಿಹಿವ | ಲಿಲಿಹಿಮ || ಆ.—ಲಿಲಿಹೇ | ಲಿಲಿಹಾತೇ | ಲಿಲಿಹಿರೇ || ಲಿಲಿಹಿಷೇ | ಲಿಲಿಹಾಥೇ || ಲಿಲಿಹಿಢ್ವೇ | ಲಿಲಿಹೇ | ಲಿಲಿಹಿವಹೇ | ಲಿಲಿಹಿಮಹೇ || **ಲುಟ್** || ಲಿಹ್ + ತಾ. ಗುಣ. ಢತ್ವ, ಷ್ಟುತ್ವ, ಢಲೋಪ. ಲೇಢಾ | ಲೇಢಾರೌ | ಲೇಢಾರಃ || ಲೇಢಾಸಿ | ಲೇಢಾಸ್ಥಃ | ಲೇಢಾಸ್ಥ || ಲೇಢಾಸ್ಮಿ | ಲೇಢಾಸ್ವಃ | ಲೇಢಾಸ್ಮಃ || ಆ—ಲೇಢಾ | ಲೇಢಾರೌ | ಲೇಢಾರಃ || ಲೇಢಾಸೇ | ಲೇಢಾಸಾಥೇ | ಲೇಢಾಧ್ವೇ || ಲೇಢಾಹೇ | ಲೇಢಾಸ್ವಹೇ | ಲೇಢಾಸ್ಮಹೇ || **ಲೃಟ್** || ಲಿಹ್ + ಸ್ಯತಿ. ಗುಣ. ಢತ್ವ, ಕತ್ವ, ಷತ್ವ. ಲೇಕ್ಷ್ಯತಿ | ಲೇಕ್ಷ್ಯತಃ | ಇತ್ಯಾದಿ. ಆ.—ಲೇಕ್ಷ್ಯತೇ | ಲೇಕ್ಷ್ಯೇತೇ || ಇತ್ಯಾದಿ. **ಲೋಟ್** || ಲಟಿನಂತೆ ಪ್ರಕ್ರಿಯೆ. ಲೇಢು, ಲೀಢಾತ್ | ಲೀಢಾಮ್ | ಲಹನ್ತು || ಲಿಹ್ + ಧಿ. ಢತ್ವ, ಷ್ಟುತ್ವ, ಢಲೋಪ, ದೀರ್ಘ. ಲೀಢಿ, ಲೀಢಾತ್ | ಲೀಢಂ | ಲೀಢ || ಲೇಹಾನಿ | ಲೇಹಾವ | ಲೇಹಾಮ || ಆ.—ಲೀಢಾಮ್ | ಲೀಹಾತಾಮ್ | ಲಿಹತಾಮ್ || ಲಿಕ್ಷ್ವ | ಲಿಹಾಥಾಮ್ | ಲೀಢ್ವಮ್ || ಲೇಹೈ | ಲೇಹಾವಹೈ | ಲೇಹಾಮಹೈ || **ಲಙ್** || ಅಲಿಹ್ + ತ್. 'ಹಲ್ಙ್ಯಾಭ್ಯೋ—' ಸೂತ್ರದಿಂದ ತಲೋಪ. ಗುಣ. ಢತ್ವ, ಅಲೇಢ್. 'ಝಲಾಂ ಜಶೋನ್ತೇ' ಢಕಾರಕ್ಕೆ ಡತ್ವ. ಅಲೇಡ್. 'ವಾವಸಾನೇ' ಅಲೇಟ್ | ಅಲೀಢಾಮ್ | ಅಲಿಹನ್ || ಅಲೇಟ್, ಅಲೇಡ್ | ಅಲೀಢಮ್ | ಅಲೀಢ || ಅಲೇಹಮ್ | ಅಲಿಹ್ವ | ಅಲಿಹ್ಮ || ಆ.—ಅಲೀಢ | ಅಲಿಹಾತಾಮ್ | ಅಲಿಹತ || ಅಲೀಢಾಃ | ಅಲಿಹಾಥಾಮ್ | ಅಲೀಢ್ವಮ್ || ಅಲಿಹಿ | ಅಲಿಹ್ವಹಿ | ಅಲಿಹ್ಮಹಿ || **ವಿಧಿಲಿಙ್** || ಲಿಹ್ಯಾತ್ | ಲಿಹ್ಯಾತಾಮ್ |

ಲಿಹ್ಯುಃ || ಇತ್ಯಾದಿ. **ಆಶೀರ್ಲಿಙ್** || ಲಿಹ್ಯಾತ್ | ಲಿಹ್ಯಾಸ್ತಾಮ್ | ಲಿಹ್ಯಾಸುಃ || ಇತ್ಯಾದಿ. **ಲುಙ್** || ಇಗುಪಧಶಲಂತವಾದುದರಿಂದ ಚ್ಲಿಗೆ ಕ್ಸಾದೇಶ. ಅಲಿಕ್ಷತ್ | ಅಲಿಕ್ಷತಾಮ್ | ಅಲಿಕ್ಷನ್ || ಆ.—ದನ್ತ್ಯಾದಿತಙ್‌ನಲ್ಲಿ ಕ್ಸಲೋಪವಾಗುವುದರಿಂದ ಎರಡು ರೂಪ. ಅಲೀಢ, ಅಲಿಕ್ಷತ | ಅಲಿಕ್ಷಾತಾಮ್ | ಅಲಿಕ್ಷಂತ || ಅಲೀಢಾಃ, ಅಲಿಕ್ಷಥಾಃ | ಅಲಿಕ್ಷಾಥಾಮ್ | ಅಲೀಢ್ವಮ್, ಅಲಿಕ್ಷಧ್ವಮ್ || ಅಲಿಕ್ಷಿ | ಅಲಿಹ್ವಹಿ, ಅಲಿಕ್ಷಾವಹಿ | ಅಲಿಕ್ಷಾಮಹಿ || **ಲೃಙ್** || ಅಲೇಕ್ಷ್ಯತ್ || ಆ. - ಅಲೇಕ್ಷ್ಯತ ||

## || ೭೩ || ಬ್ರೂಞ್ ವ್ಯಕ್ತಾಯಾಂ ವಾಚಿ (ಮಾತನಾಡುವುದು)

ಬ್ರೂಞ್ ಧಾತು. ಞಕಾರ ಇತ್ತಾದುದರಿಂದ ಉಭಯಪದಿ. ಊದಂತವಾದುದರಿಂದ ಸೇಟ್. ಬ್ರೂ+ತಿ ಎಂದಿರುವಾಗ ಪ್ರಕೃತಿಪ್ರತ್ಯಯಗಳಿಗೆ ಆದೇಶ ಹೇಳುತ್ತಾನೆ.

ಬ್ರೂಧಾತುಪ್ರಕೃತಿಪ್ರತ್ಯಯಗಳಿಗೆ ಆದೇಶ ಹೇಳುವ ಸೂತ್ರ.

**೫೯೫. ಬ್ರುವಃ ಪಞ್ಚಾನಾಮಾದಿತ ಆಹೋ ಬ್ರುವಃ || ೩-೪-೮೪ ||**

**ಬ್ರುವೋಲಟಸ್ತಿಬಾದೀನಾಂ ಪಂಚಾನಾಂ ಣಲಾದಯಃ ಪಂಚ ವಾ ಸ್ಯುರ್ಬ್ರುವಶ್ಚಾಹಾದೇಶಃ | ಆಹ | ಆಹತುಃ | ಆಹುಃ ||**

ಬ್ರುವಃ, ಪಂಚಾನಾಂ, ಆದಿತಃ, ಆಹಃ, ಬ್ರುವಃ || ಐದು ಪದಗಳುಳ್ಳ ಸೂತ್ರ. 'ವಿದೋಲಟೋ ವಾ' ಸೂತ್ರದಿಂದ 'ಲಟಃ' ಅನುವೃತ್ತಿ. 'ಪರಸ್ಮೈಪದಾನಾಂ ಣಲತು—' ಸೂತ್ರ ಹಿಂದಿದೆ. **ಸೂತ್ರಾರ್ಥ**—ಬ್ರೂಞ್ ಧಾತುವಿನ ಲಟಿಗೆ ಆದೇಶವಾಗಿ ಬಂದ ಮೊದಲನೆಯ ತಿಬಾದಿ ಐದು ಪ್ರತ್ಯಯಗಳಿಗೆ ಣಲಾದಿ ಐದು ಆದೇಶಗಳು ವಿಕಲ್ಪವಾಗಿ ಬರುತ್ತವೆ; ಬ್ರೂಞ್ ಧಾತುವಿಗೆ ಆಹ ಎಂಬ ಆದೇಶವೂ ಬರುತ್ತದೆ. ತಿಪ್, ತಸ್, ಝಿ, ಸಿಪ್, ಥಸ್‌ಗಳಿಗೆ ಣಲ್, ಅತುಸ್, ಉಸ್, ಥಲ್, ಅಥುಸ್‌ಗಳು ಆದೇಶವಾಗಿ ಬರುತ್ತವೆ. ಆಹದಲ್ಲಿ ಅಕಾರ ಉಚ್ಚಾರಣಾರ್ಥ. ಬ್ರೂ+ತಿ. ಆಹ್+ಅ=ಆಹ | ಆಹ್+ಅತುಸ್=ಆಹತುಃ | ಆಹ್+ಉಸ್=ಆಹುಃ | ಆಹ್+ಥಲ್. ಇಲ್ಲಿ ಹಕಾರಕ್ಕೆ ಥಕಾರಾದೇಶ ಹೇಳುತ್ತಾನೆ.

ಆಹಿನ ಹಕಾರಕ್ಕೆ ಥಕಾರ ಹೇಳುವ ಸೂತ್ರ.

**೫೯೬. ಆಹಸ್ಥಃ || ೮-೨-೩೫ ||**

**ಝಲಿ ಪರೇ | ಚರ್ತ್ವಮ್ | ಆತ್ಥ | ಆಹಥುಃ ||**

ಆಹಃ, ಥಃ || ದ್ವಿಪದ ಸೂತ್ರ. 'ಝಲೋ ಝಲಿ' ಸೂತ್ರದಿಂದ 'ಝಲಿ' ಅನುವೃತ್ತಿ. ಆಹಃ ಷಷ್ಠೀ. ಆಹಿಗೆ ಝಲ್ ಪರದಲ್ಲಿರುವಾಗ ಥಕಾರಾದೇಶ ಬರುತ್ತದೆ.

'ಅಲೋಂತ್ಯಸ್ಯ' ಅಂತ್ಯಕ್ಕೆ ಥಕಾರಾದೇಶ ಬಂದರೆ ಆಥ್+ಥ ಎಂದಿರುವಾಗ 'ಖರಿಚ' ಸೂತ್ರದಿಂದ ಚರ್ತ್ವ ಬಂದರೆ ಆತ್+ಥ=ಆತ್ಥ ಎಂದಾಗುತ್ತದೆ. ಆಹ್+ಅಥುಸ್=ಆಹಥುಃ | ಹೀಗೆ ಆದೇಶ ಬಂದಾಗ ಐದು ರೂಪಗಳು ಆಗುತ್ತವೆ. ಆದೇಶ ಬಾರದಿರುವಾಗ ಬ್ರೂ+ತಿ ಎಂದಿರುವಾಗ ಪಿತ್ ಪ್ರತ್ಯಯಗಳಿಗೆ ಈಡಾಗಮ ಹೇಳುತ್ತಾನೆ.

**೫೯೭. ಬ್ರುವ ಈಟ್ || ೭-೩-೯೩ ||**

**ಬ್ರುವಃ ಪರಸ್ಯ ಹಲಾದೇಃ ಪಿತಃ ಈಟ್ ಸ್ಯಾತ್ | ಬ್ರವೀತಿ | ಬ್ರೂತಃ | ಬ್ರುವನ್ತಿ | ಬ್ರೂತೇ- ಬ್ರುವಾತೇ- ಬ್ರುವತೇ ||**

ಬ್ರೂಞ್‌ನ ಪಿತ್ ಪ್ರತ್ಯಯಗಳಿಗೆ ಈಡಾಗಮ ಹೇಳುವ ಸೂತ್ರ.

ಬ್ರುವಃ, ಈಟ್ ॥ ದ್ವಿಪದ ಸೂತ್ರ. 'ಉತೋವೃದ್ಧಿರ್ಲುಕಿಹಲಿ' ಸೂತ್ರದಿಂದ 'ಹಲಿ', 'ನಾಭ್ಯಸ್ತಸ್ಯಾಚಿ ಪಿತಿ—' ಸೂತ್ರದಿಂದ 'ಪಿತಿ' ಪದಗಳು ಅನುವೃತ್ತವಾಗುತ್ತವೆ. 'ಹಲಿ' ಸಪ್ತಮ್ಯಂತವು ಪಿತಿಗೆ ವಿಶೇಷಣವಾದುದರಿಂದ ತದಾದಿಲಾಭ. 'ಬ್ರುವಃ' ಪಂಚಮೀ. **ಸೂತ್ರಾರ್ಥ**—ಬ್ರೂಞ್ ಧಾತುವಿನ ಪರದಲ್ಲಿರುವ ಹಲಾದಿಯಾದ ಪಿತ್ತಾದ ಪ್ರತ್ಯಯಕ್ಕೆ ಈಡಾಗಮ ಬರುತ್ತದೆ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಬ್ರು+ಈತಿ. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ಅವಾದೇಶ. ಬ್ರವೀತಿ | ಬ್ರೂತಃ | ಬ್ರು+ಅನ್ತಿ. 'ಅಚಿಶ್ನುಧಾತುಭ್ರುವಾಂ—' ಉವಙ್. ಬ್ರುವನ್ತಿ || ಬ್ರೂ+ಸಿ. ಪಿತ್ತಾದುದರಿಂದ ಈಟ್. ಗುಣ. ಅವಾದೇಶ. ಷತ್ವ. ಬ್ರವೀಷಿ | ಬ್ರೂಥಃ | ಬ್ರೂಥ || ಬ್ರವೀಮಿ | ಬ್ರೂವಃ | ಬ್ರೂಮಃ || ಆ.— ಬ್ರೂತೇ | ಬ್ರೂ+ಆತೇ. ಅಜಾದಿಪ್ರತ್ಯಯ ಪರವಾದಾಗ ಉವಙ್. ಬ್ರುವಾತೇ | ಬ್ರುವತೇ || ಬ್ರೂಷೇ | ಬ್ರುವಾಥೇ | ಬ್ರೂಧ್ವೇ || ಬ್ರುವೇ | ಬ್ರೂವಹೇ | ಬ್ರೂಮಹೇ ||

**ಲಿಟ್** || ಬ್ರೂ+ಲಿಟ್ ಎಂದಿರುವಾಗ ಧಾತುವಿಗೆ ಆರ್ಧಧಾತುಕಸಾಮಾನ್ಯದಲ್ಲಿ ವಚಾದೇಶ ಹೇಳುತ್ತಾನೆ. ಆದುದರಿಂದ ಲಿಟ್, ಲುಟ್, ಲೃಟ್, ಆಶೀರ್ಲಿಙ್, ಲುಙ್, ಲೃಙ್‌ಗಳಲ್ಲಿ ವಚ್ ಧಾತುವಿನ ರೂಪವೇ ಬ್ರೂಞ್ ಧಾತುವಿಗಾಗುತ್ತದೆ.

ಬ್ರೂಞ್‌ಗೆ ವಚಾದೇಶ ಹೇಳುವ ಸೂತ್ರ.

**೫೯೮. ಬ್ರುವೋ ವಚಿಃ ॥ ೨-೪-೫೩ ||**

**ಆರ್ಧಧಾತುಕೇ | ಉವಾಚ | ಊಚತುಃ | ಊಚುಃ | ಉವಚಿಥ, ಉವಕ್ಥ || ಊಚೇ || ವಕ್ತಾಸಿ, ವಕ್ತಾಸೇ || ವಕ್ಷ್ಯತಿ, ವಕ್ಷ್ಯತೇ || ಬ್ರವೀತು, ಬ್ರೂತಾತ್ | ಬ್ರುವನ್ತು | ಬ್ರೂಹಿ | ಬ್ರವಾಣಿ || ಬ್ರೂತಾವ್ ||**

**ಬ್ರವೈ | ಅಬ್ರವೀತ್, ಅಬ್ರೂತ | ಬ್ರೂಯಾತ್, ಬ್ರುವೀತ || ಉಚ್ಯಾತ್, ವಕ್ಷೀಷ್ಟ |**

ಬ್ರುವಃ, ವಚಿಃ || ದ್ವಿಪದ ಸೂತ್ರ. 'ಆರ್ಧಧಾತುಕೇ' ಅಧಿಕಾರ. ಆರ್ಧ ಧಾತುಕ ವಿಷಯದಲ್ಲಿ ಬ್ರೂಞ್ ಧಾತುವಿಗೆ ವಚಿ ಆದೇಶ ಬರುತ್ತದೆ. ವಚಿಯಲ್ಲಿ ಇಕಾರ ಉಚ್ಚಾರಣಾರ್ಥ. ಪ್ರಕೃತ ಲಿಟ್‌ನಲ್ಲಿ ವಚಾದೇಶ ಬಂದರೆ ವಚ್‌ವಚ್ + ಅ. 'ಹಲಾದಿಃ ಶೇಷಃ' ವವಚ್ + ಅ ಎಂದಿರುವಾಗ 'ಲಿಟ್ಯಭ್ಯಾಸಸ್ಯೋಭಯೇಷಾಮ್' ಸೂತ್ರದಿಂದ ಅಭ್ಯಾಸಕ್ಕೆ ಸಂಪ್ರಸಾರಣ. ಉಅವಚ್+ಅ. 'ಸಂಪ್ರಸಾರಣಾಚ್ಚ' ಪೂರ್ವರೂಪ. ಉವಚ್+ಅ. 'ಅತ ಉಪಧಾಯಾಃ' ವೃದ್ಧಿ. ಉವಾಚ್+ಅ =ಉವಾಚ | ವಚ್+ಅತುಸ್ ಎಂದಿರುವಾಗ ದ್ವಿತ್ವಕ್ಕಿಂತಲೂ ಮೊದಲೇ 'ವಚಿ ಸ್ವಪಿಯಜಾದೀನಾಂ ಕಿತಿ' ಸೂತ್ರದಿಂದ ಸಂಪ್ರಸಾರಣ. ಪೂರ್ವರೂಪ. ಉಚ್+ ಅತುಸ್. ದ್ವಿತ್ವ. ಹಲಾದಿಶೇಷ. ದೀರ್ಘ. ಊಚತುಃ | ಊಚುಃ || ಭಾರದ್ವಾಜ ನಿಯಮದಿಂದ ಇಟ್ ಬಂದರೆ ಉವಚಿಥ. ಬಾರದಿದ್ದರೆ ಉವಚ್ + ಥ ಎಂದಿರುವಾಗ 'ಚೋಃ ಕುಃ' ಸೂತ್ರದಿಂದ ಕುತ್ವ. ಉವಕ್ಥ | ಊಚಥುಃ | ಊಚ || 'ಣಲುತ್ತ ಮೋವಾ' ಉವಾಚ, ಉವಚ | ಊಚಿವ | ಊಚಿಮ || ಆ.—ಒಂಬತ್ತು ಪ್ರತ್ಯಯ ಗಳೂ ಕಿತ್ತಾಗುವುದರಿಂದ ಮೊದಲು ಸಂಪ್ರಸಾರಣ, ಆಮೇಲೆ ದ್ವಿತ್ವಾದಿ. ಊಚೇ | ಊಚಾತೇ | ಊಚಿರೇ || ಊಚಿಷೇ | ಊಚಾಥೇ | ಊಚಿಧ್ವೇ || ಊಚೇ | ಊಚಿವಹೇ | ಊಚಿಮಹೇ ||

**ಲುಟ್** || ವಚಾದೇಶ ಬಂದರೆ ವಚ್ + ತಾ ಎಂದಿರುವಾಗ ಕುತ್ವ. ವಕ್ತಾ ವಕ್ತಾರೌ | ವಕ್ತಾರಃ || ವಕ್ತಾಸಿ | ವಕ್ತಾಸ್ಥಃ | ವಕ್ತಾಸ್ಥ || ವಕ್ತಾಸ್ಮಿ | ವಕ್ತಾಸ್ವಃ| ವಕ್ತಾಸ್ಮಃ || ಆ.—ವಕ್ತಾ | ವಕ್ತಾರೌ | ವಕ್ತಾರಃ || ವಕ್ತಾಸೇ | ವಕ್ತಾಸಾಥೇ | ವಕ್ತಾಧ್ವೇ || ವಕ್ತಾಹೇ | ವಕ್ತಾಸ್ವಹೇ || ವಕ್ತಾಸ್ಮಹೇ || **ಲೃಟ್** || ವಚ್+ಸ್ಯತಿ. 'ಚೋಃಕುಃ', ಆದೇಶಪ್ರತ್ಯಯಯೋಃ' ವಕ್ಷ್ಯತಿ ಇತ್ಯಾದಿ. ಆ.—ವಕ್ಷ್ಯತೇ | ವಕ್ಷ್ಯೇತೇ | ವಕ್ಷ್ಯನ್ತೇ || ಇತ್ಯಾದಿ. **ಲೋಟ್** || ಪಿತ್‌ನಲ್ಲಿ 'ಬ್ರುವ ಈಟ್' ಸೂತ್ರದಿಂದ ಈಡಾಗಮ. ಗುಣ. ಅವಾದೇಶ. ಅಜಾದಿಯಲ್ಲಿ ಉವಜಾದೇಶ. ಬ್ರವೀತು, ಬ್ರೂತಾತ್ | ಬ್ರೂತಾಮ್ | ಬ್ರುವನ್ತು || ಬ್ರೂಹಿ, ಬ್ರೂತಾತ್ | ಬ್ರೂತಮ್ | ಬ್ರೂತ || ಬ್ರವಾಣಿ | ಬ್ರವಾವ | ಬ್ರವಾಮ || ಆ.—ಬ್ರೂತಾಮ್ | ಬ್ರುವಾತಾಮ್ | ಬ್ರುವತಾಮ್ || ಬ್ರೂಷ್ವ | ಬ್ರುವಾಥಾಮ್ | ಬ್ರೂಧ್ವಮ್ || ಬ್ರವೈ | ಬ್ರವಾವಹೈ | ಬ್ರವಾಮಹೈ || **ಲಙ್** || ಅಬ್ರೂ + ಈತ್. ಗುಣ, ಅವಾದೇಶ. ಅಬ್ರವೀತ್ | ಅಬ್ರೂತಾಮ್ | ಅಬ್ರುವನ್ || ಅಬ್ರವೀಃ | ಅಬ್ರೂತಮ್ |ಅಬ್ರೂತ || ಅಬ್ರವಮ್ | ಅಬ್ರೂವ | ಅಬ್ರೂಮ || ಆ.—ಅಬ್ರೂತ | ಅಬ್ರುವಾತಾಮ್ | ಅಬ್ರುವತ || ಅಬ್ರೂಥಾಃ | ಅಬ್ರುವಾಥಾಮ್ | ಅಬ್ರೂಧ್ವಮ್ || ಅಬ್ರುವಿ |

ಅಬ್ರೂವಹಿ | ಅಬ್ರೂಮಹಿ || **ವಿಧಿಲಿಙ್** || ಬ್ರೂಯಾತ್ | ಬ್ರೂಯಾತಾಮ್ | ಬ್ರೂಯುಃ || ಬ್ರೂಯಾಃ | ಬ್ರೂಯಾತಮ್ | ಬ್ರೂಯಾತ || ಬ್ರೂಯಾಮ್ | ಬ್ರೂಯಾವ | ಬ್ರೂಯಾಮ || ಆ.—ಬ್ರು + ಈತ. ಉವಙ್. ಬ್ರುವೀತ | ಬ್ರುವೀಯಾತಾಮ್ | ಬ್ರುವೀರನ್ || ಬ್ರುವೀಥಾಃ | ಬ್ರುವೀಯಾಥಾಮ್ | ಬ್ರುವೀಧ್ವಮ್ || ಬ್ರುವೀಯ | ಬ್ರುವೀವಹಿ | ಬ್ರುವೀಮಹಿ || **ಆಶೀರ್ಲಿಙ್** || ವಚಾದೇಶ. ಯಾಸುಟ್ ಆಶೀರ್ಲಿಙ್‌ನಲ್ಲಿ ಕಿತ್ತಾದುದರಿಂದ 'ವಚಿಸ್ವಪಿ—' ಸೂತ್ರದಿಂದ ಸಂಪ್ರಸಾರಣ ಪೂರ್ವರೂಪ. ಉಚ್ಯಾತ್ | ಉಚ್ಯಾಸ್ತಾಮ್ | ಉಚ್ಯಾಸುಃ || ಉಚ್ಯಾಃ | ಉಚ್ಯಾಸ್ತಮ್ | ಉಚ್ಯಾಸ್ತ || ಉಚ್ಯಾಸಮ್ | ಉಚ್ಯಾಸ್ವ | ಉಚ್ಯಾಸ್ಮ || ಆ.—ವಚ್ + ಸೀಸ್‌ತ. 'ಚೋಃಕುಃ' ಕುತ್ವ. ಷತ್ವ. ವಕ್ಷೀಷ್ಟ | ವಕ್ಷೀಯಾಸ್ತಾಮ್ | ವಕ್ಷೀರನ್ || ವಕ್ಷೀಷ್ಠಾಃ | ವಕ್ಷೀಯಾಸ್ಥಾಮ್ | ವಕ್ಷೀಧ್ವಮ್ || ವಕ್ಷೀಯ | ವಕ್ಷೀವಹಿ | ವಕ್ಷೀಮಹಿ || **ಲುಙ್** || ಚ್ಲಿ ಬಂದಾಗ ವಚಾದೇಶ. ಅವಚ್ + ಚ್ಲಿ + ತ್ ಎಂದಿರುವಾಗ ಚ್ಲಿಗೆ ಸಿಚ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಅಙಾದೇಶ ಹೇಳುತ್ತಾನೆ.

ಚ್ಲಿಗೆ ಅಙಾದೇಶ ಹೇಳುವ ಸೂತ್ರ.

**೫೯೯. ಅಸ್ಯತಿವಕ್ತಿಖ್ಯಾತಿಭ್ಯೋಽಙ್ || ೩-೧-೫೨ ||**

**ಏಭ್ಯಶ್ಚ್ಲೇರಙ್ ಸ್ಯಾತ್ ||**

ಅಸ್ಯತಿವಕ್ತಿಖ್ಯಾತಿಭ್ಯಃ, ಅಙ್ || 'ಚ್ಲೇಃ' ಅನುವೃತ್ತಿ. 'ಇಕ್‌ಶ್ತಿಪೌ ಧಾತುನಿರ್ದೇಶೇ' ಎಂಬುದರಿಂದ ಅಸು, ವಚ, ಖ್ಯಾ ಧಾತುಗಳಿಗೆ ಶ್ತಿಪ್ ಬಂದಿದೆ. **ಸೂತ್ರಾರ್ಥ**— ಅಸು, ವಚ, ಖ್ಯಾ ಧಾತುಗಳ ಪರದಲ್ಲಿರುವ ಚ್ಲಿಗೆ ಅಙಾದೇಶ ಬರುತ್ತದೆ. ಆಗ ಅವಚ್ + ಅ + ತ್ ಎಂದಾಗುತ್ತದೆ. ಈಗ ಅಙ್ ಪರವಾದಾಗ ವಚ್ ಧಾತುವಿಗೆ ಉಮಾಗಮ ಹೇಳುತ್ತಾನೆ.

ವಚ್ ದಾತುವಿಗೆ ಉಮಾಗಮ ಹೇಳುವ ಸೂತ್ರ.

**೬೦೦. ವಚ ಉಮ್ || ೭-೪-೨೦ ||**

**ಅಙಿ ಪರೇ | ಅವೋಚತ್, ಅವೋಚತ | ಅವಕ್ಷ್ಯತ್, ಅವಕ್ಷ್ಯತ | (ಗ ಸೂ.) ಚರ್ಕರೀತಂ ಚ | ಚರ್ಕರೀತಮಿತಿ ಯಙ್‌ಲುಗನ್ತಸ್ಯ ಸಂಜ್ಞಾ, ತದದಾದೌ ಬೋಧ್ಯಮ್ ||**

ವಚಃ, ಉಮ್ || ದ್ವಿಪದ ಸೂತ್ರ. 'ಋದೃಶೋಽಙಿ' ಸೂತ್ರದೀದ 'ಅಙಿ' ಅನುವೃತ್ತಿ. **ಸೂತ್ರಾರ್ಥ**— ವಚ್ ಧಾತುವಿಗೆ ಅಙ್ ಪರವಾದಾಗ ಉಮಾಗಮ

ಬರುತ್ತದೆ. ಉಮಿನಲ್ಲಿ ಮಕಾರ ಇತ್ತಾದುದರಿಂದ 'ಮಿದಚೋಽನ್ತ್ಯಾತ್ಪರಃ' ಸೂತ್ರ ದಿಂದ ವಚಿನ ಅಂತ್ಯಾಚಿನ (ಅ) ಪರವಾಗಿ ಬರುತ್ತದೆ. ಅವ=ಉಚ್+ಅತ್. 'ಆದ್ಗುಣಃ' ಅವೋಚತ್. ಅವೋಚ ಅಂಗ. ಅವೋಚತಾಮ್ | ಅವೋಚನ್ || ಅವೋಚಃ | ಅವೋಚತಮ್ | ಅವೋಚತ || ಅವೋಚಮ್ | ಅವೋಚಾವ | ಅವೋಚಾಮ || ಆ.—ಅವೋಚತ | ಅವೋಚೇತಾಮ್ | ಅವೋಚನ್ತ || ಅವೋಚಥಾಃ | ಅವೋಚೇಥಾಮ್ | ಅವೋಚಧ್ವಮ್ || ಅವೋಚೇ | ಅವೋಚಾವಹಿ | ಅವೋಚಾಮಹಿ ||

ಲೃಙ್ || ವಚಾದೇಶ. ಅವಕ್ಷ್ಯತ್ | ಆ.=ಅವಕ್ಷ್ಯತ || ಇತ್ಯಾದಿ.

**ಚರ್ಕರೀತಂ ಚ** | ಇದು ಧಾತುಪಾಠದಲ್ಲಿ ಗಣಸೂತ್ರ. ಯಙ್‌ಪ್ರತ್ಯಯ ಹೇಳಿ ಅದಕ್ಕೆ ಲುಕ್ ಮುಂದೆ ಹೇಳುತ್ತಾನೆ. ಆ ಯಙ್‌ಲುಕಿಗೆ ಪ್ರಾಚೀನರು ಚರ್ಕರೀತವೆಂದು ಕರೆಯುತ್ತಾರೆ. ಯಙ್‌ಲುಕನ್ನು ಅದಾದಿಯಲ್ಲಿ ಸೇರಿಸುವುದರಿಂದ ಅದಕ್ಕೆ ಶಪ್ ಬಂದು ಲುಕ್ ಆಗುತ್ತದೆಂದೂ ಅದಕ್ಕೆ ಇತರ ವಿಕರಣ(ಶ್ಯನಾದಿ) ಗಳಾವುವೂ ಬರುವುದಿಲ್ಲವೆಂದೂ ತಿಳಿಯಬೇಕು. ಯಙ್‌ಲುಕ್ ಯಾವಾಗಲೂ ಪರಸ್ಮೈಪದಿಯಾಗಿಯೇ ಇರುತ್ತದೆ. ಯಥಾ, ಬೋಭವೀತಿ. ಇದನ್ನು ಮುಂದೆ ಹೇಳುತ್ತಾನೆ.

**|| ೭೪ || ಊರ್ಣುಞ್=ಆಚ್ಛಾದನೇ (ಮುಚ್ಚುವುದು.)**

ಇದು ಞಿತ್ತಾದುದರಿಂದ ಉಭಯಪದಿ. ರೇಫವಿರುವುದರಿಂದ ಣ ಬಂದಿದೆ. ಅದರ ಮೂಲಸ್ವರೂಪ ಊರ್ನು. ಅನೇಕಾಚಾದುದರಿಂದ ಸೇಟ್. ಊರ್ಣು+ತಿ ಎಂದಿರುವಾಗ ಪಿತ್ತಿನಲ್ಲಿ ವಿಕಲ್ಪವೃದ್ಧಿ ಹೇಳುತ್ತಾನೆ.

ಊರ್ಣುಞ್ ಧಾತುವಿಗೆ ವೃದ್ಧಿ ಹೇಳುವ ಸೂತ್ರ.

**೯೦೧. ಊರ್ಣೋತೇರ್ವಿಭಾಷಾ || ೭-೩-೯೦ ||**

**ವಾ ವೃದ್ಧಿಃ ಸ್ಯಾದ್ಧಲಾದೌ ಪಿತಿ ಸಾರ್ವಧಾತುಕೇ | ಊರ್ಣೌತಿ, ಊರ್ಣೋತಿ | ಊರ್ಣುತಃ | ಊರ್ಣುವನ್ತಿ | ಊರ್ಣುತೇ | ಊರ್ಣುವಾತೇ | ಊರ್ಣುವತೇ**

ಊರ್ಣೋತೇಃ, ವಿಭಾಷಾ || ದ್ವಿಪದ ಸೂತ್ರ. 'ಉತೋ ವೃದ್ಧಿರ್ಲುಕಿಹಲಿ' ಸೂತ್ರದಿಂದ 'ವೃದ್ಧಿಃ', 'ಹಲಿ', 'ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ' ಸೂತ್ರದಿಂದ 'ಪಿತಿ', 'ಸಾರ್ವಧಾತುಕೇ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ** ಊರ್ಣುಞ್ ಧಾತುವಿಗೆ ಹಲಾದಿಯಾದ ಪಿತ್ತಾದ ಸಾರ್ವಧಾತುಕ ಪರದಲ್ಲಿರುವಾಗ ವಿಕಲ್ಪವಾಗಿ ವೃದ್ಧಿ ಬರುತ್ತದೆ ತಿ, ಸಿ, ಮಿ ಪ್ರತ್ಯಯಗಳು ಹಲಾದಿಯಾದ ಪಿತ್ತಾದ ಸಾರ್ವಧಾತುಕಗಳಾದುದರಿಂದ ಅಲ್ಲಿ ಅಂದರೆ ಏಕವಚನದಲ್ಲಿ ಮಾತ್ರ

ವಿಕಲ್ಪವೃದ್ಧಿಯೆಂದು ತಿಳಿಯಬೇಕು. ಊರ್ಣೌತಿ. ವೃದ್ಧಿ ಬಾರದಿದ್ದರೆ ಗುಣ. ಊರ್ಣೋತಿ | ಊರ್ಣುತಃ | ಊರ್ಣುವನ್ತಿ (ಉವಙ್) || ಊರ್ಣೌಷಿ, ಊರ್ಣೋಷಿ | ಊರ್ಣುಥಃ | ಊರ್ಣುಥ || ಊರ್ಣೌಮಿ, ಊರ್ಣೋಮಿ | ಊರ್ಣುವಃ | ಊರ್ಣುಮಃ || ಆ. — ಙಿತ್ತಾದುದರಿಂದ ಗುಣವೃದ್ಧಿಗಳಿಲ್ಲ. ಊರ್ಣುತೇ | ಊರ್ಣುವಾತೇ | ಊರ್ಣುವತೇ || ಊರ್ಣುಷೇ | ಊರ್ಣುವಾಥೇ | ಊರ್ಣುಧ್ವೇ || ಊರ್ಣುವೇ | ಊರ್ಣುವಹೇ | ಊರ್ಣುಮಹೇ ||

ಲಿಟ್ || ಊರ್ಣು ಅನೇಕಾಚಾದುದರಿಂದ ಇಜಾದಿಯಾದುದರಿಂದ ಆಮ್ ಪ್ರಾಪ್ತವಾದರೆ ವಾರ್ತಿಕದಿಂದ ನಿಷೇಧ ಹೇಳುತ್ತಾನೆ.

**ವಾ || ಊರ್ಣೋತೇರಾಮ್ನೇತಿ ವಾಚ್ಯಮ್ |**

ಊರ್ಣುಞ್ ಧಾತುವಿಗೆ ಆಮ್ ಬರುವುದಿಲ್ಲವೆಂದು ಹೇಳಬೇಕು. ಆಮ್ ಬಾರದಿದ್ದರೆ ಊರ್ಣುವಿಗೇ ದ್ವಿತ್ವ ಬರುತ್ತದೆ. ಅಜಾದಿಯಾದುದರಿಂದ 'ಅಜಾದೇರ್ದ್ವಿತೀಯಸ್ಯ' ಸೂತ್ರದಿಂದ ದ್ವಿತೀಯೈಕಾಚಿಗೆ ದ್ವಿತ್ವ ಹೇಳಬೇಕು. ಅಲ್ಲಿ ರ್, ನ್, ಉ ಹೀಗೆ ಮೂರು ವರ್ಣಗಳಿವೆ. ಅವುಗಳಿಗೆ ದ್ವಿತ್ವ ಪ್ರಾಪ್ತವಾದರೆ ರೇಫಕ್ಕೆ ನಿಷೇಧ ಹೇಳುತ್ತಾನೆ.

ಸಂಯೋಗಾದಿಯ ನದರಗಳಿಗೆ ದ್ವಿತ್ವನಿಷೇಧ ಹೇಳುವ ಸೂತ್ರ.

**೬೦೨. ನನ್ದ್ರಾಃ ಸಂಯೋಗಾದಯಃ || ೬–೧–೩ ||**

**ಅಚಃ ಪರಾಃ ಸಂಯೋಗಾದಯೋ ನದರಾ ದ್ವಿರ್ನ ಭವನ್ತಿ | ಊರ್ಣು ನು ಶಬ್ದಸ್ಯ ದ್ವಿತ್ವಮ್ | ಊರ್ಣುನಾವ | ಊರ್ಣುನುವತುಃ | ಊರ್ಣುನುವುಃ |**

ಮೂರು ಪದಗಳುಳ್ಳ ಸೂತ್ರ. 'ಅಜಾದೇರ್ದ್ವಿತೀಯಸ್ಯ' ಸೂತ್ರದಿಂದ 'ಅಜಾದೇಃ', 'ಏಕಾಚೋ ದ್ವೇ ಪ್ರಥಮಸ್ಯ' ಸೂತ್ರದಿಂದ 'ದ್ವೇ' ಪದಗಳು ಅನುವೃತ್ತವಾಗುತ್ತವೆ. ಅಜಾದಿಯೆಂದರೆ ಆದಿಯಲ್ಲಿರುವ ಅಚ್ ಎಂದರ್ಥ. ಅಚ್ ಚಾಸೌ ಆದಿಶ್ಚ ಅಜಾದಿಃ | ಕರ್ಮಧಾರಯ ಸಮಾಸ. ಅದರ ಮೇಲೆ ಪಂಚಮೀ. ನ್ ಚ, ದ್ ಚ, ರಶ್ಚ=ನನ್ದ್ರಾಃ | **ಸೂತ್ರಾರ್ಥ**—ಅಚಿನ ಪರದಲ್ಲಿರುವ ಸಂಯೋಗಾದಿಭೂತವಾದ ನಕಾರ ದಕಾರ ರೇಫಗಳು ದ್ವಿತ್ವವನ್ನು ಹೊಂದುವುದಿಲ್ಲ. ಪ್ರಕೃತ ಅಚ್ ಉ. ಅದರ ಪರದಲ್ಲಿ ಸಂಯೋಗವೆಂದರೆ ರ್ ನ್. ಅದರ ಆದಿಯಾದ ರೇಫಕ್ಕೆ ದ್ವಿತ್ವವಿಲ್ಲ. ಆಗ ಕೇವಲ ನು ಶಬ್ದಕ್ಕೆ ಮಾತ್ರ ದ್ವಿತ್ವ. ಊ ರ್ ನುನು + ಅ. 'ಅಚೋಞ್ಣಿತಿ' ವೃದ್ಧಿ. ಊರ್ಣುನೌ + ಅ. ಆವಾದೇಶ. ಊರ್ಣುನಾವ | ಊರ್ಣುನು ಅಂಗ. ಅಜಾದಿಪ್ರತ್ಯಯ ಪರವಾದಾಗ ಉವಙ್. ಊರ್ಣುನುವತುಃ |

ಊರ್ಣುನುವುಃ || ಊರ್ಣುನು + ಇಥ ಎಂದಿರುವಾಗ ನಿತ್ಯವಾಗಿ 'ಸಾರ್ವಧಾತು ಕಾರ್ಧಧಾತುಕಯೋಃ' ಸೂತ್ರದಿಂದ ಗುಣ ಪ್ರಾಪ್ತವಾದರೆ ಇಡಾದಿ ಪ್ರತ್ಯಯಕ್ಕೆ ವಿಕಲ್ಪವಾಗಿ ಙಿತ್ವ ಹೇಳುತ್ತಾನೆ. ಙಿತ್ತಾದರೆ ಗುಣವಿಲ್ಲ.

ಇಡಾದಿ ಪ್ರತ್ಯಯಕ್ಕೆ ಙಿತ್ತ್ವ ಹೇಳುವ ಸೂತ್ರ.

**೭೦೩. ವಿಭಾಷೋರ್ಣೋಃ ||೧-೨-೩ ||**

**ಇಡಾದಿಪ್ರತ್ಯಯೋ ವಾ ಙಿತ್ ಸ್ಯಾತ್ | ಊರ್ಣುನುವಿಥ, ಊರ್ಣನವಿಥ | ಊರ್ಣುವಿತಾ, ಊರ್ಣವಿತಾ || ಊರ್ಣುವಿಷ್ಯತಿ, ಊರ್ಣವಿಷ್ಯತಿ | ಊರ್ಣೌತು, ಊರ್ಣೋತು | ಊರ್ಣವಾನಿ | ಊರ್ಣವೈ ||**

ವಿಭಾಷಾ, ಊರ್ಣೋಃ || ದ್ವಿಪದ ಸೂತ್ರ. 'ಗಾಙ್ಕುಟಾದಿಭ್ಯಃ—' ಸೂತ್ರದಿಂದ 'ಙಿತ್', 'ವಿಜ ಇಟ್' ಸೂತ್ರದಿಂದ 'ಇಟ್' ಅನುವೃತ್ತಿ. **ಸೂತ್ರಾರ್ಥ—** ಊರ್ಣುಞ್ ಧಾತುವಿನ ಪರದಲ್ಲಿರುವ ಇಡಾದಿ ಪ್ರತ್ಯಯವು ವಿಕಲ್ಪವಾಗಿ ಙಿತ್ತಾಗುತ್ತದೆ. ಇಟ್ ಆಗಮವಾದುದರಿಂದ ತದಾದಿ ಪ್ರತ್ಯಯವೆಂದು ಲಬ್ಧವಾಗುತ್ತದೆ. ಪ್ರಕೃತ ಇಥ ಙಿತ್ತಾದರೆ 'ಕ್ಙಿತಿಚ' ಸೂತ್ರದಿಂದ ಗುಣನಿಷೇಧ ಬಂದರೆ 'ಅಚಿಶ್ನುಧಾತು' ಸೂತ್ರದಿಂದ ಉವಙ್. ಊರ್ಣುನುವಿಥ. ಙಿತ್ವವಿಲ್ಲದಿದ್ದರೆ ಗುಣ, ಅವಾದೇಶ. ಊರ್ಣನವಿಥ | ಊರ್ಣುನುವಥುಃ | ಊರ್ಣುನುವ || ಊರ್ಣುನಾವ, ಊರ್ಣುನವ | ಊರ್ಣುನುವಿವ | ಊರ್ಣುನುವಿಮ | ಆ.- ಊರ್ಣುನುವೇ | ಊರ್ಣುನುವಾತೇ || ಊರ್ಣುನುವಿರೇ | ಊರ್ಣುನುವಿಷೇ | ಊರ್ಣುನುವಾಥೇ | ಊರ್ಣುನುವಿಧ್ವೇ || ಊರ್ಣುನುವೇ | ಊರ್ಣುನುವಿವಹೇ | ಊರ್ಣುನುವಿಮಹೇ ||

**ಲುಟ್** || ಊರ್ಣು + ಇತಾ. ಇಲ್ಲಿಯೂ ಹಿಂದಿನಂತೆ ಙಿತ್ವವಿಕಲ್ಪ ಬಂದರೆ ಗುಣನಿಷೇಧ. ಉವಙ್. ಙಿತ್ವ ಬಾರದಿದ್ದರೆ ಗುಣ. ಅವಾದೇಶ. ಊರ್ಣುವಿತಾ, ಊರ್ಣವಿತಾ ಇತ್ಯಾದಿ. ಆ.—ಊರ್ಣುವಿತಾಸೇ, ಊರ್ಣವಿತಾಸೇ ಇತ್ಯಾದಿ. **ಲೃಟ್** || ಗುಣವಿಕಲ್ಪ. ಊರ್ಣುವಿಷ್ಯತಿ, ಉರ್ಣವಿಷ್ಯತಿ. ಆ.—ಊರ್ಣುವಿಷ್ಯತೇ, ಊರ್ಣವಿಷ್ಯತೇ ಇತ್ಯಾದಿ. **ಲೋಟ್** || ಲಟಿನಲ್ಲಿ ಹೇಳಿದಂತೆ ವೃದ್ಧಿ ವಿಕಲ್ಪ. ಊರ್ಣೌತು, ಊರ್ಣೋತು, ಊರ್ಣುತಾತ್ | ಊರ್ಣುತಾಮ್ | ಊರ್ಣುವನ್ತು || ಊರ್ಣುಹಿ, ಊರ್ಣುತಾತ್ | ಊರ್ಣುತಮ್ | ಊರ್ಣುತ || ಉತ್ತಮದಲ್ಲಿ ಆಟ್ ಪಿತ್ತಾದರೂ ಹಲಾದಿಯಾಗದಿರುವುದರಿಂದ ವೃದ್ಧಿವಿಕಲ್ಪವಿಲ್ಲ. ಗುಣ, ಅವಾದೇಶ. ಊರ್ಣವಾನಿ | ಊರ್ಣವಾವ | ಊರ್ಣವಾಮ || ಆ.— ಊರ್ಣುತಾಮ್ | ಊರ್ಣುವಾತಾಮ್ | ಊರ್ಣುವತಾಮ್ || ಊರ್ಣುಷ್ವ | ಊರ್ಣುವಾಥಾಮ್ | ಊರ್ಣುಧ್ವಮ್ || ಊರ್ಣವೈ | ಊರ್ಣವಾವಹೈ | ಊರ್ಣವಾಮಹೈ || **ಲಙ್** || ಅಜಾದಿಯಾದುದರಿಂದ ಅಂಗಕ್ಕೆ ಆಡಾಗಮ,

ವೃದ್ಧಿ. ಆ+ಊರ್ಣು+ತ್=ಔರ್ಣು+ತ್ ಎಂದಿರುವಾಗ ಲಟಿನಲ್ಲಿ ಹೇಳಿದಂತೆ ವಿಕಲ್ಪವೃದ್ಧಿಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಗುಣ ಹೇಳುತ್ತಾನೆ.

ಊರ್ಣುಞಾಗೆ ಗುಣ ಹೇಳುವ ಸೂತ್ರ.

೭೦೪. ಗುಣೋಽಪೃಕ್ತೇ ‖ ೭-೩-೯೧ ‖

ಊರ್ಣೋತೇರ್ಗುಣೋಽಪೃಕ್ತೇ ಹಲಾದೌ ಪಿತಿ ಸಾರ್ವಧಾತುಕೇ । ವೃದ್ಧ್ಯಪವಾದಃ । ಊರ್ಣೋತ್ । ಔರ್ಣೋಃ । ಊರ್ಣುಯಾತ್ । ಊರ್ಣುಯಾಃ । ಊರ್ಣುವೀತ । ಊರ್ಣೂಯಾತ್ । ಊರ್ಣುವಿಷೀಷ್ಟ, ಊರ್ಣವಿಷೀಷ್ಟ ‖

ಗುಣಃ, ಅಪೃಕ್ತೇ ‖ ದ್ವಿಪದ ಸೂತ್ರ. 'ಊರ್ಣೋತೇರ್ವಿಭಾಷಾ' ಸೂತ್ರದಿಂದ 'ಊರ್ಣೋತೇಃ', ನಾಭ್ಯಸ್ತಸ್ಯಾಚಿ—' ಸೂತ್ರದಿಂದ 'ಪಿತಿ', 'ಸಾರ್ವಧಾತುಕೇ', 'ಉತೋವೃದ್ಧಿಃ—' ಸೂತ್ರದಿಂದ 'ಹಲಿ' ಪದಗಳು ಅನುವೃತ್ತವಾಗುತ್ತವೆ. ಏಕಾಲ್ ಪ್ರತ್ಯಯಕ್ಕೆ ಅಪೃಕ್ತಸಂಜ್ಞೆಯೆಂದು ಹಿಂದೆ ಹೇಳಿದೆ. **ಸೂತ್ರಾರ್ಥ**—ಊರ್ಣುಞ್ ಧಾತುವಿಗೆ ಅಪೃಕ್ತವಾದ ಹಲಾದಿಯಾದ ಪಿತ್ತಾದ ಸಾರ್ವಧಾತುಕ ಪರವಲ್ಲಿರುವಾಗ ಗುಣ ಬರುತ್ತದೆ. ತ್ ಅಪೃಕ್ತವಾದ ಪಿತ್ತಾದ ಹಲಾದಿಯಾದ ಸಾರ್ವಧಾತುಕ. ಸಾಮಾನ್ಯ ಸೂತ್ರದಿಂದಲೇ ಗುಣ ಬರುತ್ತಿರುವಾಗ ಪುನಃ ಗುಣ ಹೇಳಿರುವುದರಿಂದ ವೃದ್ಧಿಗೆ ಅಪವಾದವೆಂದು ತಿಳಿಯಬೇಕು. ಔರ್ಣು+ತ್. ಗುಣ ಬಂದರೆ ಔರ್ಣೋತ್ । ಔರ್ಣುತಾಮ್ । ಔರ್ಣುವನ್ ‖ ಔರ್ಣೋಃ । ಔರ್ಣುತಮ್ । ಔರ್ಣುತ ‖ ಔರ್ಣವಮ್ । ಔರ್ಣುವ । ಔರ್ಣುಮ ‖ ಆ.— ಔರ್ಣುತ । ಔರ್ಣುವಾತಾಮ್ । ಔರ್ಣುವತ ‖ ಔರ್ಣುಥಾಃ । ಔರ್ಣುವಾಥಾಮ್ । ಔರ್ಣುಧ್ವಮ್ ‖ ಔರ್ಣುವಿ । ಔರ್ಣುವಹಿ । ಔರ್ಣುಮಹಿ ‖

**ವಿಧಿಲಿಙ್** ‖ ಊರ್ಣುಯಾತ್ । ಊರ್ಣುಯಾತಾಮ್ । ಊರ್ಣುಯುಃ ‖ ಊರ್ಣುಯಾಃ । ಊರ್ಣುಯಾತಮ್ । ಊರ್ಣುಯಾತ ‖ ಊರ್ಣುಯಾಮ್ । ಊರ್ಣುಯಾವ । ಊರ್ಣುಯಾಮ ‖ ಆ.—ಊರ್ಣುವೀತ । ಊರ್ಣುವೀಯಾತಾಮ್ । ಊರ್ಣುವೀರನ್ ‖ ಊರ್ಣುವೀಥಾಃ । ಊರ್ಣುವೀಯಾಥಾಮ್ । ಊರ್ಣುವೀಧ್ವಮ್ ‖ ಊರ್ಣುವೀಯ । ಊರ್ಣುವೀವಹಿ । ಊರ್ಣುವೀಮಹಿ ‖ **ಆಶೀರ್ಲಿಙ್**— ಇಡಾಗಮ ಬರುವುದರಿಂದ 'ವಿಭಾಷೋರ್ಣೋಃ' ಸೂತ್ರದಿಂದ ವಿಕಲ್ಪಙಿತ್ತಾದರೆ ಆತ್ಮನೇಪದದಲ್ಲಿ ಎರಡು ರೂಪ. ಗುಣ, ಉವಙ್‌ಗಳಿಂದ ಆ ಎರಡು ರೂಪಗಳು. ಊರ್ಣೂಯಾತ್ । ಊರ್ಣೂಯಾಸ್ತಾಮ್ । ಊರ್ಣೂಯಾಸುಃ ‖ ಇತ್ಯಾದಿ. ಪರಸ್ಮೈಪದಿಯಲ್ಲಿ ಸುಗಮವಾಗಿದೆ. ಆ. ಊರ್ಣುವಿಷೀಷ್ಟ, ಊರ್ಣವಿಷೀಷ್ಟ । ಇತ್ಯಾದಿ. **ಲುಙ್** ‖ ಆಊರ್ಣು+ಇಸ್+ಈತ್. 'ಇಟ ಈಟಿ'

ಸಲೋಪ. ಸವರ್ಣದೀರ್ಘ. 'ಆಟಶ್ಚ' ವೃದ್ಧಿ. ಔರ್ಣು+ಈತ್. 'ವಿಭಾಷೋರ್ಣೋಃ' ಸೂತ್ರದಿಂದ ವಿಕಲ್ಪ ಙಿತ್ತಾದರೆ ಗುಣವಿಲ್ಲ. ಉವಙ್. ಔರ್ಣುವೀತ್ | ಔರ್ಣುವಿಷ್ಟಾಮ್ | ಔರ್ಣುವಿಷುಃ || ಔರ್ಣುವೀಃ | ಔರ್ಣುವಿಷ್ಟಮ್ | ಔರ್ಣುವಿಷ್ಟ || ಔರ್ಣುವಿಷಮ್ | ಔರ್ಣುವಿಷ್ವ | ಔರ್ಣುವಿಷ್ಮ || ಙಿತ್ತ್ವ ಇಲ್ಲದಿರುವಾಗ ನಿತ್ಯವಾದ ಗುಣ ಪ್ರಾಪ್ತವಾದರೆ ವಿಕಲ್ಪವೃದ್ಧಿ ಹೇಳುತ್ತಾನೆ.

ಇಡಾದಿ ಸಿಚಿನಲ್ಲಿ ವಿಕಲ್ಪವೃದ್ಧಿ ಹೇಳುವ ಸೂತ್ರ.

೬೦೫. ಊರ್ಣೋತೇರ್ವಿಭಾಷಾ || ೭-೨-೬ ||

ಇಡಾದೌ ಸಿಚಿ ವಾ ವೃದ್ಧಿಃ ಪರಸ್ಮೈಪದೇ ಪರೇ || ಪಕ್ಷೇ ಗುಣಃ || ಔರ್ಣಾವೀತ್, ಔರ್ಣವೀತ್ | ಔರ್ಣಾವಿಷ್ಟಾಮ್, ಔರ್ಣವಿಷ್ಟಾಮ್ | ಔರ್ಣುವಿಷ್ಟ, ಔರ್ಣವಿಷ್ಟ | ಔರ್ಣುವಿಷ್ಯತ್, ಔರ್ಣವಿಷ್ಯತ್ | ಔರ್ಣುವಿಷ್ಯತ, ಔರ್ಣವಿಷ್ಯತ ||

ಇತ್ಯಾದಯಃ ||

ಊರ್ಣೋತೇಃ, ವಿಭಾಷಾ || ದ್ವಿಪದ ಸೂತ್ರ. 'ಸಿಚಿವೃದ್ಧಿಃ ಪರಸ್ಮೈಪದೇಷು' ಸೂತ್ರವು ಅನುವೃತ್ತವಾಗುತ್ತದೆ. 'ನೇಟಿ' ಸೂತ್ರದಿಂದ 'ಇಟಿ' ಅನುವೃತ್ತವಾಗಿ ಸಿಚಿಗೆ ವಿಶೇಷಣವಾಗುತ್ತದೆ. ತದಾದಿಲಾಭ. **ಸೂತ್ರಾರ್ಥ**— ಊರ್ಣುಞ್ ಧಾತುವಿಗೆ ಪರಸ್ಮೈಪದಪರವಾದ ಇಡಾದಿ ಸಿಚ್ ಪರವಲ್ಲಿರುವಾಗ ವಿಕಲ್ಪವಾಗಿ ವೃದ್ಧಿ ಬರುತ್ತದೆ. ಇದೇ ಆನುಪೂರ್ವಿಯ ಸೂತ್ರ ಹಿಂದೆ ಬಂದಿದೆ. ಅದು ಸಾರ್ವಧಾತುಕದಲ್ಲಿ ವೃದ್ಧಿವಿಕಲ್ಪ ಹೇಳುತ್ತದೆ. ಇದು ಲುಙ್‌ನಲ್ಲಿ ಮಾತ್ರ ವೃದ್ಧಿ ಹೇಳುತ್ತದೆ. ಪ್ರಕೃತ ವೃದ್ಧಿಬಂದರೆ ಔರ್ಣಾವೀತ್ | ಔರ್ಣಾವಿಷ್ಟಾಮ್ | ಔರ್ಣಾವಿಷುಃ || ಔರ್ಣಾವೀಃ | ಔರ್ಣಾವಿಷ್ಟಮ್ | ಔರ್ಣಾವಿಷ್ಟ || ಔರ್ಣಾವಿಷಮ್ | ಔರ್ಣಾವಿಷ್ವ | ಔರ್ಣಾವಿಷ್ಮ || ಎಂದಾಗುತ್ತದೆ. ವೃದ್ಧಿ ಬಾರದಿದ್ದರೆ ಗುಣ. ಔರ್ಣವೀತ್— ಇತ್ಯಾದಿ ಹಿಂದಿನಂತೆ ತಿಳಿಯಬೇಕು.

ಲುಙಿನ ಆತ್ಮನೇಪದದಲ್ಲಿ ಙಿತ್‌ವಿಕಲ್ಪದಿಂದ ಎರಡು ರೂಪಗಳಾಗುತ್ತವೆ. ಔರ್ಣುವಿಷ್ಟ | ಔರ್ಣುವಿಷಾತಾಮ್ | ಔರ್ಣುವಿಷತ || ಔರ್ಣುವಿಷ್ಠಾಃ | ಔರ್ಣುವಿಷಾಥಾಮ್ | ಔರ್ಣುವಿಢ್ವಮ್ || ಔರ್ಣುವಿಷಿ || ಔರ್ಣುವಿಷ್ವಹಿ | ಔರ್ಣುವಿಷ್ಮಹಿ || ಇಡಾದಿಪ್ರತ್ಯಯ ಙಿತ್ತಾಗದಿದ್ದರೆ ಗುಣ, ಅಯಾದೇಶ. ಔರ್ಣವಿಷ್ಟ | ಇತ್ಯಾದಿ. ಲೃಙ್ || ಇಡಾದಿ ಸ್ಯ ಪ್ರತ್ಯಯ ವಿಕಲ್ಪ ಙಿತ್ತಾಗುವುದರಿಂದ, ಙಿತ್ತಾದರೆ ಉವಙ್, ಇಲ್ಲವಾದರೆ ಗುಣ, ಅವಾದೇಶ. ಅಂಗಕ್ಕೆ ಆಟ್, ವೃದ್ಧಿ. ಔರ್ಣುವಿಷ್ಯತ್ | ಔರ್ಣುವಿಷ್ಯತಾಮ್ | ಔರ್ಣುವಿಷ್ಯನ್ || ಇತ್ಯಾದಿ. ಗುಣಬಂದರೆ ಔರ್ಣವಿಷ್ಯತ್

ಇತ್ಯಾದಿ. ಆ.—ಔರ್ಣುವಿಷ್ಯತ | ಔರ್ಣುವಿಷ್ಯೇತಾಮ್ | ಔರ್ಣುವಿಷ್ಯನ್ತ ||
ಇತ್ಯಾದಿ. ಗುಣ ಬಂದರೆ ಔರ್ಣವಿಷ್ಯತ ಇತ್ಯಾದಿ.

ಈ ರೀತಿಯಾಗಿ ಅದಾದಿಗಣದ ಧಾತುಗಳ ಪ್ರಕ್ರಿಯೆಯನ್ನು ತಿಳಿಯಬೇಕು.

# ೭. ಅಥ ಜುಹೋತ್ಯಾದಯಃ

|| ೭೫ || ಹು=ದಾನಾದನಯೋಃ (ಕೊಡುವುದು, ತಿನ್ನುವುದು)

**೬೦೬. ಜುಹೋತ್ಯಾದಿಭ್ಯಃ ಶ್ಲುಃ || ೨-೪-೭೫ ||**

**ಶಪಃ ಶ್ಲುಃ ಸ್ಯಾತ್ ||**

ಹು ಧಾತು. ಪರಸ್ಮೈಪದೀ. ಅನಿಟ್. ಹು + ತಿ ಎಂದಿರುವಾಗ ಸಾಮಾನ್ಯವಾಗಿ 'ಕರ್ತರಿ ಶಪ್' ಸೂತ್ರದಿಂದ ಶಪ್ ವಿಕರಣ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಶ್ಲು ವಿಕರಣ ಹೇಳುತ್ತಾನೆ. ದ್ವಿಪದ ಸೂತ್ರ. ಹು ಧಾತುವಿಗೆ ಶ್ತಿಪ್ ಮಾಡಿದರೆ ಜುಹೋತಿ ಎಂದಾಗುತ್ತದೆ. **ಸೂತ್ರಾರ್ಥ**—ಹು ಮುಂತಾದ ಧಾತುಗಳಿಗೆ ಬಂದ ಶಪಿಗೆ ಶ್ಲು ಆದೇಶ ಬರುತ್ತದೆ. 'ಅದಿಪ್ರಭೃತಿ—' ಸೂತ್ರದಿಂದ 'ಶಪಃ' ಅನುವೃತ್ತಿ. ಶ್ಲು ಬಂದರೆ ಪ್ರತ್ಯಯಾದರ್ಶನವೇ. ಶಪ್ ಹೋಗುತ್ತದೆ ಎಂದು ತಿಳಿಯಬೇಕು. ಆಗ ಹು + ತಿ ಎಂದೇ ಇರುತ್ತದೆ. ಈಗ ಧಾತುವಿಗೆ ದ್ವಿತ್ವ ಹೇಳುತ್ತಾನೆ.

ಧಾತುವಿಗೆ ದ್ವಿತ್ವ ಹೇಳುವ ಸೂತ್ರ.

**೬೦೭. ಶ್ಲೌ || ೬-೧-೧೦ ||**

**ಧಾತೋರ್ದ್ವೇ ಸ್ತಃ | ಜುಹೋತಿ | ಜುಹುತಃ ||**

ಏಕಪದ ಸೂತ್ರ. 'ಲಿಟಿಧಾತೋರನಭ್ಯಾಸಸ್ಯ' ಸೂತ್ರದಿಂದ 'ಧಾತೋಃ', 'ಏಕಾಚೋ ದ್ವೇ—' ಸೂತ್ರದಿಂದ 'ದ್ವೇ' ಅನುವೃತ್ತಿ. **ಸೂತ್ರಾರ್ಥ**—ಶ್ಲು ಪರವಾದಾಗ ಧಾತುವಿಗೆ ದ್ವಿತ್ವ ಬರುತ್ತದೆ. ಪ್ರಕೃತ ಶ್ಲು ಇರುವುದರಿಂದ ಹುವಿಗೆ ದ್ವಿತ್ವ ಬಂದರೆ ಹುಹು + ತಿ ಎಂದಾಗುತ್ತದೆ. 'ಕುಹೋಶ್ಚುಃ' ಅಭ್ಯಾಸಕ್ಕೆ ಏಕಾರಾದೇಶ. ಜುಹು + ತಿ. 'ಸಾರ್ವಧಾ—' ಗುಣ. ಜುಹೋತಿ. ಜುಹು ಅಂಗ. ತಸಾದಿಗಳಲ್ಲಿ ಙಿತ್ತಾದುದರಿಂದ ಗುಣವಿಲ್ಲ. ಜುಹುತಃ | ಜುಹು + ಝಿ ಎಂದಿರುವಾಗ ಝಿಗೆ ಅನ್ತಾದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಅತಾದೇಶ ಹೇಳುತ್ತಾನೆ.

ಋಕ್ಕೆ ಅತ್ ಆದೇಶ ಹೇಳುವ ಸೂತ್ರ.

**೬೦೮. ಅದಭ್ಯಸ್ತಾತ್ ॥ ೭–೧–೪ ॥**

**ಝಸ್ಯಾತ್ಸ್ಯಾತ್ । ಹುಶ್ನುವೋರಿತಿ ಯಣ್ । ಜುಹ್ವತಿ ॥**

ಅತ್, ಅಭ್ಯಸ್ತಾತ್ ॥ ದ್ವಿಪದ ಸೂತ್ರ. 'ಝೋನ್ತಃ' ಸೂತ್ರದಿಂದ 'ಝ' ಅನುವೃತ್ತಿ. **ಸೂತ್ರಾರ್ಥ**–ಅಭ್ಯಸ್ತದ ಪರದಲ್ಲಿರುವ ಝಕ್ಕೆ ಅತ್ ಆದೇಶ ಬರುತ್ತದೆ. 'ಉಭೇ ಅಭ್ಯಸ್ತಮ್' ಸೂತ್ರದಿಂದ ದ್ವಿತ್ವ ಬಂದಾಗ ಎರಡಕ್ಕೂ ಸೇರಿ ಅಭ್ಯಸ್ತ ಎಂಬ ಸಂಜ್ಞೆ ಹಿಂದೆ ಹೇಳಿರುತ್ತಾನೆ. ಪ್ರಕೃತ ಜುಹು ಅಭ್ಯಸ್ತ. ಇದರ ಪರದ ಝಕ್ಕೆ ಅತಾದೇಶ ಬಂದರೆ ಜುಹು+ಅತಿ ಎಂದಾಗುತ್ತದೆ. "ಹುಶ್ನುವೋಃ ಸಾರ್ವಧಾತುಕೇ" ಸೂತ್ರದಿಂದ ಯಣ್. ಜುಹ್ವತಿ. (ಉವಙ್‌ಗೆ ಆಪವಾದವಾಗಿ ಯಣ್ ಬಂದಿದೆ) ಜುಹು+ಸಿ. ಗುಣ, ಷತ್ವ. ಜುಹೋಷಿ | ಜುಹುಥಃ | ಜುಹುಥ || ಜುಹೋಮಿ | ಜುಹುವಃ | ಜುಹುಮಃ ||

**ಲಿಟ್** || ಹು+ಲಿಟ್ ಎಂದಿರುವಾಗ ವಿಕಲ್ಪವಾಗಿ ಆಮ್ ಪ್ರತ್ಯಯ ಹೇಳುತ್ತಾನೆ-

ಭೀ ಮುಂತಾದವುಗಳಿಗೆ ಆಮ್ ಹೇಳುವ ಸೂತ್ರ.

**೬೦೯. ಭೀಹ್ರೀಭೃಹುವಾಂ ಶ್ಲುವಚ್ಚ ॥ ೩–೧–೩೯ ॥**

**ಏಭ್ಯೋ ಲಿಟಿ ಆಮ್, ವಾ ಸ್ಯಾದಾಮಿ ಶ್ಲಾವಿವ ಕಾರ್ಯಂ ಚ । ಜುಹವಾಞ್ಚಕಾರ, ಜುಹಾವ । ಹೋತಾ । ಹೋಷ್ಯತಿ । ಜುಹೋತು, ಜುಹುತಾತ್ । ಜುಹುತಾಂ । ಜುಹ್ವತು । ಜುಹುಧಿ । ಜುಹವಾನಿ । ಅಜುಹೋತ್ । ಅಜುಹುತಾಮ್ ॥**

ಭೀಹ್ರೀಭೃಹುವಾಂ, ಶ್ಲುವತ್, ಚ || ತ್ರಿಪದ ಸೂತ್ರ. "ಕಾಸ್‌ಪ್ರತ್ಯಯಾತ್—' ಸೂತ್ರದಿಂದ "ಆಮ್" "ಲಿಟಿ" ಪದಗಳು ಅನುವೃತ್ತವಾಗುತ್ತವೆ. ಭೀಹ್ರೀಭೃಹುವಾಂ ಎಂಬಲ್ಲಿ ಪಂಚಮ್ಯರ್ಥದಲ್ಲಿ ಷಷ್ಠೀ ಬಂದಿದೆ. ಇಲ್ಲಿ ನಾಲ್ಕು ಧಾತುಗಳಿವೆ. ಶ್ಲಾವಿವ | ಶ್ಲುವತ್ || **ಸೂತ್ರಾರ್ಥ** ಭೀ, ಹ್ರೀ, ಭೃ, ಹು ಧಾತುಗಳಿಗೆ ಲಿಟ್ ಪರದಲ್ಲಿರುವಾಗ ಆಮ್ ಪ್ರತ್ಯಯ ಬರುತ್ತದೆ. ಆಮ್ ಪರವಾದಾಗ ಶ್ಲು ಪರವಾದರೆ ಯಾವ ಕಾರ್ಯ ಬರುತ್ತದೆಯೋ ಆ ಕಾರ್ಯ ಬರುತ್ತದೆ. ಆಮ್ ಬಂದರೆ 'ಅಮಃ' ಸೂತ್ರದಿಂದ ಲಿಟಿಗೆ ಲುಕ್. ಹು+ಆಮ್. ಶ್ಲುವಿನ ಕಾರ್ಯ ದ್ವಿತ್ವ. ಆಮ್ ಪರವಾದಾಗ ದ್ವಿತ್ವ ಬಂದರೆ ಜುಹು+ಆಮ್ ಎಂದಾಗುತ್ತದೆ. "ಸಾರ್ವಧಾತುಕಾರ್ಧಧಾತುಕಯೋಃ" ಗುಣ. ಅವಾದೇಶ. ಜುಹವ್+ಆಮ್= ಜುಹವಾಮ್ ಎಂದಿರುವಾಗ "ಕೃಞ್ಚಾನುಪ್ರಯುಜ್ಯತೇ ಲಿಟಿ" ಸೂತ್ರದಿಂದ ಆಮಿನ

ಮೇಲೆ ಲಿಟ್ ಪರವಾದ ಕೃ, ಭೂ, ಅಸ್ ಧಾತುಗಳು ಬರುತ್ತವೆ. ಕೃ ಬಂದರೆ ಜುಹವಾಮ್+ಚಕಾರ. ಮಕಾರಕ್ಕೆ ಅನುಸ್ವಾರ ಪರಸವರ್ಣ. ಜುಹವಾಞ್ಚಕಾರ | ಜುಹವಾಞ್ಚಕ್ರತುಃ | ಜುಹವಾಞ್ಚಕ್ರುಃ || ಇತ್ಯಾದಿ. ಭೂ ಬಂದರೆ ಜುಹವಾಮ್ಬಭೂವ ಇತ್ಯಾದಿ, ಅಸ್ ಬಂದರೆ ಜುಹವಾಮಾಸ ಇತ್ಯಾದಿ ಹಿಂದಿನಂತೆ ತಿಳಿಯಬೇಕು. ಆಮ್ ವಿಕಲ್ಪವಾದುದರಿಂದ ಬಾರದಿದ್ದರೆ ಹುವಿಗೆ ದ್ವಿತ್ವಾದಿ. ಜುಹು+ಅ. 'ಅಚೋಞ್ಣಿತಿ' ವೃದ್ಧಿ. ಜುಹೌ+ಅ. ಅವಾದೇಶ. ಜುಹಾವ | ಜುಹುವತುಃ | ಜುಹುವುಃ | ಭಾರದ್ವಾಜ ನಿಯಮದಿಂದ ಥಲಿಗೆ ಇಡ್ವಿಕಲ್ಪ. ಜುಹವಿಥ, ಜುಹೋಥ | ಜುಹುವಥುಃ | ಜುಹುವ || 'ಣಲುತ್ತಮೋವಾ' ಜುಹಾವ, ಜುಹವ | ಜುಹುವಿವ | ಜುಹುವಿಮ ||

**ಲುಟ್** || ಹು+ತಾ. 'ಸಾರ್ವಧಾತುಕಾ—' ಗುಣ. ಹೋತಾ | ಹೋತಾರೌ | ಹೋತಾರಃ || ಹೋತಾಸಿ | ಹೋತಾಸ್ಥಃ ಹೋತಾಸ್ಥ || ಹೋತಾಸ್ಮಿ | ಹೋತಾಸ್ವಃ ಹೋತಾಸ್ಮಃ || **ಲೃಟ್** || ಹು+ಸ್ಯತಿ. ಗುಣ, ಹೋಷ್ಯತಿ | ಹೋಷ್ಯತಃ ಇತ್ಯಾದಿ. ಲೋಟ್ || ಲಟಿನಂತೇ ಪ್ರಕ್ರಿಯೆ. ಜುಹೋತು, ಜುಹುತಾತ್ | ಜುಹುತಾಮ್ | ಜುಹ್ವತು || ಜುಹು+ಹಿ. 'ಹುಝಲ್ಭ್ಯೋ ಹೇರ್ಧಿಃ' ಜುಹುಧಿ, ಜುಹುತಾತ್ | ಜುಹುತಮ್ | ಜುಹುತ || ಜುಹವಾನಿ | ಜುಹವಾವ | ಜುಹವಾಮ || **ಲಙ್** || ಅಜುಹು+ತ್. ಗುಣ. ಅಜುಹೋತ್ | ಅಜುಹುತಾಮ್ | ಅಜುಹು+ಝಿ. 'ಇತಶ್ಚ' ಸೂತ್ರದಿಂದ ಇಕಾರಕ್ಕೆ ಲೋಪ ಬಂದ ಮೇಲೆ ಝಿಕ್ಕೆ ಅನ್ತಾದೇಶಾಪವಾದವಾಗಿ ಅತ್ ಪ್ರಾಪ್ತವಾದರೆ ಅದಕ್ಕೆ ಬಾಧಕವಾಗಿ 'ಸಿಜಭ್ಯಸ್ತವಿದಿಭ್ಯಶ್ಚ' ಸೂತ್ರದಿಂದ (ಸೂ. ೪೪೪) ಜುಸಾದೇಶ. ಅಜುಹು+ಉಸ್ ಎಂದು ಇರುವಾಗ 'ಹುಶ್ನುವೋಃ—' (ಸೂ. ೫೦೩) ಸೂತ್ರದಿಂದ ಯಣ್ ಪ್ರಾಪ್ತವಾದರೆ ಅಪವಾದವಾಗಿ ಗುಣ ಹೇಳುತ್ತಾನೆ.

ಜುಸ್ ಪರವಾದಾಗ ಗುಣ ಹೇಳುವ ಸೂತ್ರ.

**೬೧೦. ಜುಸಿ ಚ || ೭–೩–೮೩ ||**

**ಇಗನ್ತಾಙ್ಗಸ್ಯ ಗುಣೋಽಜಾದೌ ಜುಸಿ | ಅಜುಹವುಃ | ಜುಹುಯಾತ್ | ಹೂಯಾತ್ | ಅಹೌಷೀತ್ | ಅಹೋಷ್ಯತ್ ||**

ದ್ವಿಪದ ಸೂತ್ರ. 'ಮಿದೇರ್ಗುಣಃ' ಸೂತ್ರದಿಂದ 'ಗುಣ', 'ಕ್ಸಸ್ಯಾಚಿ' ಸೂತ್ರದಿಂದ 'ಅಚಿ' ಪದಗಳು ಅನುವೃತ್ತವಾಗುತ್ತವೆ. 'ಅಂಗಸ್ಯ' ಅಧಿಕಾರ. ಗುಣ ವಿಧಿಸುವುದರಿಂದ 'ಇಕೋಗುಣವೃದ್ಧೀ' ಪರಿಭಾಷೆಯಿಂದ 'ಇಕಃ' ಪದವು ಉಪಸ್ಥಿತವಾಗಿ ಅಂಗಕ್ಕೆ ವಿಶೇಷಣವಾಗುವುದರಿಂದ ತದಂತಲಾಭ. 'ಅಚಿ' ಸಪ್ತಮ್ಯಂತವು 'ಜುಸಿ' ಸಪ್ತಮ್ಯನ್ತಕ್ಕೆ ವಿಶೇಷಣವಾಗುವುದರಿಂದ ತದಾದಿಲಾಭ.

**ಸೂತ್ರಾರ್ಥ**—ಇಗನ್ತಾಂಗಕ್ಕೆ ಅಜಾದಿಯಾದ ಜುಸ್ ಪರದಲ್ಲಿರುವಾಗ ಗುಣ ಬರುತ್ತದೆ. ಅಜುಹು+ಉಸ್. ಅಜುಹು ಇಗನ್ತಾಂಗ. ಅಜಾದಿ ಜುಸ್, ಉಸ್. ಇದು ಪರವಾದುದರಿಂದ ಗುಣ ಬಂದರೆ ಅಜುಹೋ+ಉಸ್ ಎಂದಾಗುತ್ತದೆ. ಅವಾದೇಶ, ರುತ್ವ, ವಿಸರ್ಗ. ಅಜುಹವುಃ | ಅಜುಹೋಃ | ಅಜುಹುತಮ್ | ಅಜುಹುತ || ಅಜುಹವಮ್ | ಅಜುಹುವ | ಅಜುಹುಮ ||

**ವಿಧಿಲಿಙ್** || ಶ್ಲು. ದ್ವಿತ್ವ. ಯಾಸುಟ್ ಙಿತ್ತಾದುದರಿಂದ ಗುಣವಿಲ್ಲ. ಜುಹುಯಾತ್ | ಜುಹುಯಾತಾಮ್ | ಜುಹುಯುಃ || ಇತ್ಯಾದಿ. **ಆಶೀರ್ಲಿಙ್** || ಹು+ಯಾತ್. 'ಅಕೃತ್ಸಾರ್ವಧಾತುಕಯೋರ್ದೀರ್ಘಃ' ಹೂಯಾತ್ | ಹೂಯಾಸ್ತಾಮ್ | ಹೂಯಾಸುಃ || ಇತ್ಯಾದಿ. **ಲುಙ್** || ಅಹು+ಸ್+ಈತ್. 'ಸಿಚಿ ವೃದ್ಧಿಃ ಪರಸ್ಮೈಪದೇಷು' ವೃದ್ಧಿ. ಷತ್ವ. ಅಹೌಷೀತ್ | ಅಹೌಷ್ಟಾಮ್ | ಅಹೌಷುಃ || ಅಹೌಷೀಃ | ಅಹೌಷ್ಟಮ್ | ಅಹೌಷ್ಟ || ಅಹೌಷಮ್ | ಅಹೌಷ್ವ | ಅಹೌಷ್ಮ || **ಲೃಙ್** || ಅಹೋಷ್ಯತ್ | ಅಹೋಷ್ಯತಾಮ್ | ಅಹೋಷ್ಯನ್ || ಇತ್ಯಾದಿ.

**|| ೭೬ || ಞಿಭೀ— ಭಯೇ (ಹೆದರುವುದು.) ಬಿಭೇತಿ ||**

'ಆದಿರ್ಞಿಟುಡವಃ' ಸೂತ್ರದಿಂದ ಆದಿಯ ಞಿ ಇತ್ತಾಗಿ ಲೋಪಹೊಂದುತ್ತದೆ. ಭೀ+ತಿ ಎಂದಿರುವಾಗ ಶಪಿಗೆ ಶ್ಲು ಆದೇಶ. 'ಶ್ಲೌ' ದ್ವಿತ್ವ. ಭೀಭೀ+ತಿ 'ಹ್ರಸ್ವಃ' ಅಭ್ಯಾಸದ ಅಚಿಗೆ ಹ್ರಸ್ವ. 'ಅಭ್ಯಾಸೇ ಚರ್ಚ' ಅಭ್ಯಾಸದ ಭಕಾರಕ್ಕೆ ಬಕಾರ. ಬಿಭೀ+ತಿ. ಗುಣ. ಬಿಭೇತಿ. ಬಿಭೀ+ತಸ್ ಎಂದಿರುವಾಗ ಧಾತುವಿನ ಈಕಾರಕ್ಕೆ ಇಕಾರ ವಿಕಲ್ಪವಾಗಿ ಹೇಳುತ್ತಾನೆ.

ಭೀ ಧಾತುವಿಗೆ ಇಕಾರ ಹೇಳುವ ಸೂತ್ರ.

**೭೧೧. ಭಿಯೋಽನ್ಯತರಸ್ಯಾಮ್ || ೬-೪-೧೧೫ ||**

**ಇಕಾರೋ ವಾ ಸ್ಯಾದ್ಧಲಾದೌ ಕ್ಙಿತಿ ಸಾರ್ವಧಾತುಕೇ | ಬಿಭಿತಃ | ಬಿಭೀತಃ | ಬಿಭ್ಯತಿ || ಬಿಭಯಾಞ್ಚಕಾರ, ಬಿಭಾಯ | ಭೇತಾ | ಭೇಷ್ಯತಿ | ಬಿಭೇತು, ಬಿಭಿತಾತ್, ಬಿಭೀತಾತ್ | ಅಬಿಭೇತ್ | ಬಿಭೀಯಾತ್ || ಭೀಯಾತ್ | ಅಭೈಷೀತ್ | ಅಭೇಷ್ಯತ್ ||**

**|| ೭೭ || ಹ್ರೀ— ಲಜ್ಜಾಯಾಮ್ (ನಾಚಿಕೆಪ್ಪಡುವುದು.)**

**ಜಿಹ್ರೇತಿ | ಜಿಹ್ರೀತಃ | ಜಿಹ್ರಿಯತಿ | ಜಿಹ್ರಯಾಞ್ಚಕಾರ, ಜಿಹ್ರಾಯ | ಹ್ರೇತಾ | ಹ್ರೇಷ್ಯತಿ | ಜಿಹ್ರೇತು | ಅಜಿಹ್ರೇತ್ | ಜಿಹ್ರೀಯಾತ್ | ಹ್ರೀಯಾತ್ | ಅಹ್ರೈಷೀತ್ | ಅಹ್ರೇಷ್ಯತ್ ||**

ಭಿಯಃ, ಅನ್ಯತರಸ್ಯಾಮ್ || ದ್ವಿಪದ ಸೂತ್ರ. 'ಇದ್ದರಿದ್ರಸ್ಯ' ಸೂತ್ರದಿಂದ 'ಇತ್', 'ಈಹಲ್ಯಘೋಃ' ಸೂತ್ರದಿಂದ 'ಹಲಿ' 'ಅತ ಉತ್‌ಸಾರ್ವಧಾತುಕೇ', 'ಸಾರ್ವಧಾತುಕೇಗಮುಹನ—' ಸೂತ್ರದಿಂದ 'ಕ್ಙಿತಿ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**— ಭೀ ಧಾತುವಿಗೆ ಹಲಾದಿಯಾದ ಕಿತ್ ಙಿತ್ತಾದ ಸಾರ್ವಧಾತುಕ ಪ್ರತ್ಯಯ ಪರವಾದಾಗ ಇಕಾರ ವಿಕಲ್ಪವಾಗಿ ಬರುತ್ತದೆ. 'ಅಲೋಽನ್ತ್ಯಸ್ಯ' ಪರಿಭಾಷೆಯಿಂದ ಅಂತ್ಯಕ್ಕೆ (ಈ) ಬರುತ್ತದೆ. ತಸಾದಿಗಳು ಅಪಿತ್‌ಸಾರ್ವಧಾತುಕವಾದುವರಿಂದ ಙಿತ್ ಆಗುತ್ತವೆ. ಇಕಾರ ವಿಕಲ್ಪವಾಗಿ ಬಂದರೆ ಬಿಭಿತಃ | ಬಾರದಿದ್ದರೆ ಬಿಭೀತಃ | ಬಿಭೀ+ಝ. 'ಅದಭ್ಯಸ್ತಾತ್' ಸೂತ್ರದಿಂದ ಅತಾದೇಶ. ಯಣ್. ಬಿಭ್ಯತಿ || ಬಿಭೇಷಿ | ಬಿಭಿಥಃ, ಬಿಭೀಥಃ | ಬಿಭಿಥ, ಬಿಭೀಥ || ಬಿಭೇಮಿ | ಬಿಭಿವಃ, ಬಿಭೀವಃ | ಬಿಭಿಮಃ, ಬಿಭೀಮಃ ||

**ಲಿಟ್** || 'ಭೀಹ್ರೀಭೃಹುವಾಮ್—' ಸೂತ್ರದಿಂದ ಆಮ್. ಇದು ಪರವಾದಾಗ ದ್ವಿತ್ವಾದಿ. ಬಿಭೀ+ಆಮ್. ಗುಣ, ಅಯಾದೇಶ. ಕೃಞಾದಿ ಅನುಪ್ರಯೋಗ. ಬಿಭಯಾಞ್ಚಕಾರ, ಬಿಭಯಾಮ್ಬಭೂವ, ಬಿಭಯಾಮಾಸ ಇತ್ಯಾದಿ ಹಿಂದಿನಂತೇ ತಿಳಿಯಬೇಕು. ಆಮ್ ಬಾರದಿದ್ದರೆ ಬಿಭೀ+ಅ. 'ಅಚೋಞ್ಣಿತಿ' ವೃದ್ಧಿ. ಆಯಾದೇಶ. ಬಿಭಾಯ | ಬಿಭಿ+ಅತುಸ್. ಅಜಾದಿಗಳಲ್ಲಿ ಯಣ್. ಬಿಭ್ಯತುಃ | ಬಿಭ್ಯುಃ || ಭಾರದ್ವಾಜನಿಯಮದಿಂದ ಇಡ್ವಿಕಲ್ಪ. ಗುಣ. ಬಿಭಯಿಥ, ಬಿಭೇಥ | ಬಿಭ್ಯಥುಃ | ಬಿಭ್ಯ || ಬಿಭಾಯ, ಬಿಭಯ | ಬಿಭ್ಯಿವ | ಬಿಭ್ಯಿಮ || **ಲುಟ್** || ಇಟ್ ಇಲ್ಲ. ಗುಣ. ಭೇತಾ | ಭೇತಾರೌ | ಭೇತಾರಃ || ಭೇತಾಸಿ | ಭೇತಾಸ್ಥಃ | ಭೇತಾಸ್ಥ || ಭೇತಾಸ್ಮಿ | ಭೇತಾಸ್ವಃ | ಭೇತಾಸ್ಮಃ || **ಲೃಟ್** || ಗುಣ. ಷತ್ವ. ಭೇಷ್ಯತಿ | ಭೇಷ್ಯತಃ | ಭೇಷ್ಯನ್ತಿ || ಇತ್ಯಾದಿ. **ಲೋಟ್** || ಬಿಭೇತು | ತಾತಙ್ ಙಿತ್ತಾದ ಹಲಾದಿಯಾದ ಸಾರ್ವಧಾತುಕವಾದುದರಿಂದ ಇತ್ವವಿಕಲ್ಪ. ಬಿಭಿತಾತ್, ಬಿಭೀತಾತ್ | ಬಿಭಿತಾಮ್, ಬಿಭೀತಾಮ್ | ಬಿಭ್ಯತು || ಬಿಭಿಹಿ, ಬಿಭೀಹಿ | ಬಿಭಿತಮ್, ಬಿಭೀತಮ್ | ಬಿಭಿತ, ಬಿಭೀತ || ಬಿಭಯಾನಿ | ಬಿಭಯಾವ | ಬಿಭಯಾಮ || **ಲಙ್** || ಅಬಿಭೇತ್ | ಅಬಿಭಿತಾಮ್, ಅಬಿಭೀತಾಮ್ | ಝಿಯಲ್ಲಿ ಜುಸ್, ಗುಣ, ಅಯಾದೇಶ. ಅಬಿಭಯುಃ || ಅಬಿಭೇಃ | ಅಬಿಭಿತಮ್, ಅಬಿಭೀತಮ್ | ಅಬಿಭಿತ, ಅಬಿಭೀತ || ಅಬಿಭಯಮ್ | ಅಬಿಭಿವ, ಅಬಿಭೀವ | ಅಬಿಭಿಮ, ಅಬಿಭೀಮ || **ವಿಧಿಲಿಙ್** || ಬಿಭಿಯಾತ್, ಬಿಭೀಯಾತ್ | ಬಿಭಿಯಾತಾಮ್, ಬಿಭೀಯಾತಾಮ್ | ಇತ್ಯಾದಿ. **ಆಶೀರ್ಲಿಙ್** || ಭೀಯಾತ್ | ಭೀಯಾಸ್ತಾಮ್ | ಭೀಯಾಸುಃ || ಇತ್ಯಾದಿ, **ಲುಙ್** || ಅಭೀ+ಸ್‌ಈತ್. 'ಸಿಚಿವೃದ್ಧಿಃ—' ವೃದ್ಧಿ. ಷತ್ವ. ಅಭೈಷೀತ್ | ಅಭೈಷ್ಟಾಮ್ | ಅಭೈಷುಃ || ಅಭೈಷೀಃ | ಅಭೈಷ್ಟಮ್ | ಅಭೈಷ್ಟ || ಅಭೈಷಮ್ | ಅಭೈಷ್ವ | ಅಭೈಷ್ಮ || **ಲೃಙ್** || ಅಭೇಷ್ಯತ್ | ಅಭೇಷ್ಯತಾಮ್ | ಅಭೇಷ್ಯನ್ || ಇತ್ಯಾದಿ.

ಹ್ರೀ ಧಾತು ಭೀ ಧಾತುವಿನಂತೇ ರೂಪಹೊಂದುತ್ತದೆ. ಇಲ್ಲಿ ದ್ವಿತ್ವಬಂದಾಗ 'ಕುಹೋಶ್ಚುಃ' ಸೂತ್ರದಿಂದ ಅಭ್ಯಾಸಕ್ಕೆ ಉಕಾರಾದೇಶ. **ಲಟ್** || ಜಿಹ್ರೇತಿ | ಜಿಹ್ರೀತಃ | ಜಿಹ್ರೀ+ಅತಿ ಎಂದಿರುವಾಗ ಸಂಯೋಗಪೂರ್ವವಾದುದರಿಂದ 'ಏರನೇ ಕಾಚಃ—' ಸೂತ್ರದಿಂದ ಯಣ್ ಬರುವುದಿಲ್ಲ. 'ಅಚಿಶ್ನುಧಾತುಭ್ರುವಾಂ—' ಸೂತ್ರ ದಿಂದ ಇಯಙ್. ಜಿಹ್ರಿಯತಿ || ಜಿಹ್ರೇಷಿ | ಜಿಹ್ರೀಥಃ | ಜಿಹ್ರೀಥ || ಜಿಹ್ರೇಮಿ | ಜಿಹ್ರೀವಃ | ಜಿಹ್ರೀಮಃ || **ಲಿಟ್** || ಜಿಹ್ರಯಾಞ್ಚಕಾರ, ಜಿಹ್ರಾಯ || **ಲುಟ್** || ಹ್ರೇತಾ | **ಲೃಟ್** || ಹ್ರೇಷ್ಯತಿ || **ಲೋಟ್** || ಜಿಹ್ರೇತು, ಜಿಹ್ರೀತಾತ್ | **ಲಙ್** || ಅಜಿಹ್ರೇತ್ | **ವಿಧಿಲಿಙ್** || ಜಿಹ್ರೀಯಾತ್ | **ಆಶೀರ್ಲಿಙ್** || ಹ್ರೀಯಾತ್ | **ಲುಙ್** ||ಅಹ್ರೈಷೀತ್ | **ಲೃಙ್** || ಅಹ್ರೇಷ್ಯತ್ ||

|| ೭೮ || **ಪೄ = ಪಾಲನಪೂರಣಯೋಃ (ರಕ್ಷಿಸುವುದು, ತುಂಬುವುದು.)**

ಪೄ ಧಾತುವಿನ ಅಭ್ಯಾಸಕ್ಕೆ ಇಕಾರ ಹೇಳುವ ಸೂತ್ರ.

**೭೧೨. ಅರ್ತಿಪಿಪರ್ತ್ಯೋಶ್ಚ || ೭-೪-೭೭ ||**

**ಅಭ್ಯಾಸಸ್ಯ ಇಕಾರೋಽನ್ತಾದೇಶಃ ಸ್ಯಾತ್ ಶ್ಲೌ | ಪಿಪರ್ತಿ ||**

ೠಕಾರಾಂತಧಾತುವಾದುದರಿಂದ ಸೇಟ್. ಲಟಿನಲ್ಲಿ ಶ್ಲು ಬಂದಾಗ ದ್ವಿತ್ವ. 'ಉರತ್' ಸೂತ್ರದಿಂದ ಅಭ್ಯಾಸ ೠಕಾರಕ್ಕೆ ಅತ್ವ. ರಪರವಾಗಿ ಬಂದಾಗ ಹಲಾದಿಶೇಷ. ಪಪೄ+ತಿ ಎಂದಿರುವಾಗ ಅಭ್ಯಾಸಕ್ಕೆ ಇಕಾರ ಹೇಳುತ್ತಾನೆ. ಅರ್ತಿಪಿಪರ್ತ್ಯೋಃ, ಚ || ದ್ವಿಪದ ಸೂತ್ರ. 'ಅತ್ರಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ', 'ಭೃಞಾಮಿತ್' ಸೂತ್ರದಿಂದ 'ಇತ್', 'ನಿಜಾಂ ತ್ರಯಾಣಾಂ ಶ್ಲೌ' ಸೂತ್ರದಿಂದ 'ಶ್ಲೌ' ಅನುವೃತ್ತಿ. **ಸೂತ್ರಾರ್ಥ**—ಋ ಮತ್ತು ಪೄಧಾತುಗಳ ಅಭ್ಯಾಸಕ್ಕೆ ಶ್ಲುಪರವಾದಾಗ ಇಕಾರಾದೇಶ ಬರುತ್ತದೆ. 'ಅಲೋಽಂತ್ಯಸ್ಯ' ಸೂತ್ರ ದಿಂದ ಅಂತಾದೇಶ. ಶ್ತಿಪ್‌ನಿಂದ ಅರ್ತಿ, ಪಿಪರ್ತಿ ಎಂದು ನಿರ್ದೇಶಿಸಿರುತ್ತಾನೆ. ಅಭ್ಯಾಸಕ್ಕೆ ಇತ್ವ ಬಂದರೆ ಪಿಪೄ+ತಿ ಎಂದಾಗುತ್ತದೆ. ಸಾರ್ವಧಾತುಕನಿಮಿತ್ತಕವಾಗಿ ಗುಣ. ಪಿಪರ್+ತಿ=ಪಿಪರ್ತಿ. ಪಿಪೄ+ತಸ್ ಎಂದಿರುವಾಗ ಪ್ರತ್ಯಯ ಙಿತ್ತಾಗಿರುವಾಗ ಗುಣ ಬರುವುದಿಲ್ಲ. ಅಂಗಕ್ಕೆ ಉತ್ವ ಹೇಳುತ್ತಾನೆ.

ೠಕಾರಕ್ಕೆ ಉತ್ವ ಹೇಳುವ ಸೂತ್ರ.

**೭೧೩. ಉದೋಷ್ಠ್ಯಪೂರ್ವಸ್ಯ || ೭-೧-೧೦೨ ||**

**ಅಂಗಾವಯವೌಷ್ಠ್ಯಪೂರ್ವೋ ಯ ೠತ್ ತದನ್ತಸ್ಯಾಙ್ಗಸ್ಯ ಉತ್ ಸ್ಯಾತ್ ||**

ಉತ್, ಓಷ್ಠ್ಯಪೂರ್ವಸ್ಯ || ದ್ವಿಪದ ಸೂತ್ರ. 'ಋತ ಇದ್ಧಾತೋಃ' ಸೂತ್ರದಿಂದ 'ಋತಃ' ಅನುವೃತ್ತಿ. 'ಅಂಗಸ್ಯ' ಅಧಿಕಾರ. ಇಲ್ಲಿ ಅದನ್ನು ಆವೃತ್ತಿಮಾಡಿಕೊಳ್ಳಬೇಕು. ಒಂದು ಓಷ್ಠ್ಯಪೂರ್ವಸ್ಯ ಎಂಬಲ್ಲಿಯೂ ಇನ್ನೊಂದು 'ಋತಃ' ಎಂಬಲ್ಲಿಯೂ ಅನ್ವಯ ಹೊಂದುತ್ತದೆ. **ಸೂತ್ರಾರ್ಥ**—ಅಂಗದ ಅವಯವವಾದ ಓಷ್ಠ್ಯ ಅಕ್ಷರವೇ ಪೂರ್ವದಲ್ಲಿರುವ ಯಾವ ಋಕಾರವಿದೆಯೋ ಅದೇ ಅಂತವಾದ ಅಂಗಕ್ಕೆ ಉತ್ ಆದೇಶ ಬರುತ್ತದೆ. ಪಿಪೄ ಎಂಬಲ್ಲಿ ಅಂಗದ ಅವಯವ ಪಕಾರ (ಓಷ್ಠ್ಯ) ಇದೇ ಪೂರ್ವದಲ್ಲಿರುವ ಋಕಾರ ಅಂತವಾದ ಅಂಗವೆಂದರೆ ಪಿಪೄ ಇದಕ್ಕೆ ಉತ್ತು ಬಂದರೆ 'ಉರಣ್ರಪರಃ' ಪರಿಭಾಷೆಯಿಂದ ರಪರವಾಗಿ ಬರುತ್ತದೆ. ಪಿಪುರ್+ತಸ್ ಎಂದಾಗುತ್ತದೆ. ಈಗ ಇಲ್ಲಿ ದೀರ್ಘ ಹೇಳುತ್ತಾನೆ.

ಧಾತುವಿನ ಉಪಧೆಗೆ ದೀರ್ಘ ಹೇಳುವ ಸೂತ್ರ.

**೬೧೪. ಹಲಿ ಚ || ೮-೨-೭೭ ||**

ರೇಫವಾನ್ತಸ್ಯ ಧಾತೋರುಪಧಾಯಾ ಇಕೋ ದೀರ್ಘೋ ಹಲಿ | ಪಿಪೂರ್ತಃ | ಪಿಪುರತಿ | ಪಪಾರ ||

ದ್ವಿಪದ ಸೂತ್ರ. 'ರ್ವೋರುಪಧಾಯಾ ದೀರ್ಘ ಇಕಃ' ಸೂತ್ರವೇ ಅನುವೃತ್ತವಾಗುತ್ತದೆ. 'ಸಿಪಿ ಧಾತೋಃ—' ಸೂತ್ರದಿಂದ 'ಧಾತೋಃ' ಅನುವೃತ್ತಿ. 'ರ್ವೋಃ' ಧಾತುವಿಗೆ ವಿಶೇಷಣ. ತದಂತಲಾಭ. **ಸೂತ್ರಾರ್ಥ**—ರೇಫಾಂತ, ವಕಾರಾಂತವಾದ ಧಾತುವಿನ ಉಪಧಾಭೂತವಾದ ಇಕ್ ವರ್ಣಗಳಿಗೆ ಹಲ್ ಪರದಲ್ಲಿರುವಾಗ ದೀರ್ಘ ಬರುತ್ತದೆ. ಪಿಪುರ್+ತಸ್ ಎಂಬಲ್ಲಿ ರೇಫಾನ್ತವಾದ ಧಾತು ಪಿಪುರ್. ಇದಕ್ಕೆ ಹಲ್ ಪರದಲ್ಲಿರುವುದರಿಂದ ಇದರ ಉಪಧೆಯಾದ ಇಕ್, ಅಂದರೆ ಉಕಾರ. (ಅಂತ್ಯವರ್ಣದ ಹಿಂದಿನ ವರ್ಣ ಉಪಧೆ.) ಇದಕ್ಕೆ ದೀರ್ಘ. ಪಿಪೂರ್ತಃ ಎಂದಾಗುತ್ತದೆ. ಪಿಪುರ್+ಝಿ. ಅದಭ್ಯಸ್ತಾತ್' ಸೂತ್ರದಿಂದ ಝಿಗೆ ಅತಾದೇಶ. ಪಿಪುರತಿ. ಪಿಪರ್ಷಿ । ಪಿಪೂರ್ತಃ | ಪಿಪೂರ್ತ || ಪಿಪರ್ಮಿ | ಪಿಪೂರ್ವಃ | ಪಿಪೂರ್ಮಃ ||

**ಲಿಟ್** || ಪೄಪೄ+ಅ. 'ಉರತ್' ಪಪೄ+ಅ. 'ಅಚೋ ಞ್ಣಿತಿ' ವೃದ್ಧಿ. ಪಪಾರ. ಪಪೄ + ಅತುಸ್ ಎಂದಿರುವಾಗ 'ಋಚ್ಛತ್ಯೄತಾಮ್' ಸೂತ್ರದಿಂದ ಮುಂದೆ ಕಿತ್ ಆದ ಲಿಟಿನಲ್ಲಿ ಗುಣ ಹೇಳುತ್ತಾನೆ. ಆದರೆ ಅದಕ್ಕೆ ಅಪವಾದವಾಗಿ ಮೊದಲು ಹ್ರಸ್ವವಿಕಲ್ಪ ಹೇಳುತ್ತಾನೆ.

ಶೄ ಮುಂತಾದವುಗಳಿಗೆ ಲಿಟಿನಲ್ಲಿ ಹ್ರಸ್ವ ಹೇಳುವ ಸೂತ್ರ.

**೬೧೫. ಶೄದೄಪ್ರಾಂ ಹ್ರಸ್ವೋ ವಾ || ೭-೪-೧೨ ||**

**ಏಷಾಂ ಲಿಟಿ ಹ್ರಸ್ವೋ ವಾ ಸ್ಯಾತ್ | ಪಪ್ರತುಃ ||**

ತ್ರಿಪದ ಸೂತ್ರ. 'ಹಯತೇರ್ದಿಗಿಲಿಟಿ' ಸೂತ್ರದಿಂದ 'ಲಿಟಿ' ಅನುವೃತ್ತಿ. ಗುಣಕ್ಕೆ ಅಪವಾದವಾದುದರಿಂದಲೂ ಆ ಗುಣವು ಕಿತ್ತಿನಲ್ಲಿ ಹೇಳುವುದರಿಂದಲೂ 'ಕಿತಿ' ಎಂದು ಲಬ್ಧವಾಗುತ್ತದೆ. **ಸೂತ್ರಾರ್ಥ**—ಶೄ, ದೄ, ಪೄ ಈ ಮೂರು ಧಾತುಗಳಿಗೆ ಕಿತ್ ಆದ ಲಿಟ್ ಪರವಾದಾಗ ವಿಕಲ್ಪವಾಗಿ ಹ್ರಸ್ವ ಬರುತ್ತದೆ. ಗುಣ ಬರುತ್ತಿರುವಾಗ ಹ್ರಸ್ವ ಹೇಳಿದುದರಿಂದ ಅದಕ್ಕೆ ಅಪವಾದವೆಂದು ತಿಳಿಯಬೇಕು. ಪಪೃ+ಅತುಸ್ ಎಂದಾಗುತ್ತದೆ. ಆಗ ಯಣ್. ಪಪ್ರತುಃ | ಇತ್ಯಾದಿ. ಹ್ರಸ್ವ ಬಾರದೇ ಇದ್ದರೆ ಪಪೄ+ಅತುಸ್ ಎಂದಿರುವಾಗ ಗುಣ ಹೇಳುತ್ತಾನೆ.

ಋದಂತಧಾತುವಿಗೆ ಗುಣ ಹೇಳುವ ಸೂತ್ರ.

೭೧೬. **ಋಚ್ಛತ್ಯೄತಾಮ್ || ೭-೪-೧೧ ||**

**ತೌದಾದಿಕಋಚ್ಛೇರ್ಋಧಾತೋರೄತಾಂ ಚ ಗುಣೋ ಲಿಟಿ | ಪಪರತುಃ | ಪಪರುಃ ||**

ಒಂದೇ ಪದವುಳ್ಳ ಸೂತ್ರ. 'ದಯತೇರ್ದಿಗಿಲಿಟಿ' ಸೂತ್ರದಿಂದ 'ಲಿಟಿ', 'ಋತಶ್ಚಸಂಯೋಗಾದೇರ್ಗುಣಃ' ಸೂತ್ರದಿಂದ 'ಗುಣಃ', ಪದಗಳು ಅನುವೃತ್ತವಾಗುತ್ತವೆ. ಋಚ್ಛತಿಶ್ಚ, ಋೂಚ, ಋೂತ್‌ಚ ಋಚ್ಛತ್ಯೄತಃ | ತೇಷಾಮ್. **ಸೂತ್ರಾರ್ಥ**— ತುದಾದಿಯಲ್ಲಿ ಹೇಳಿದ ಋಚ್ಛಧಾತುವಿಗೂ, ಋಧಾತುವಿಗೂ ಋೂದಂತಧಾತುಗಳಿಗೂ ಲಿಟ್ ಪರವಾದಾಗ ಗುಣ ಬರುತ್ತದೆ. ಪ್ರಕೃತ ಋೂದಂತ ಧಾತುವಾದುದರಿಂದ ಈಗ ಲಿಟ್ ಪರವಾದುದರಿಂದ ಗುಣ ಬಂದರೆ ಪಪರ್+ಅತುಸ್ ಸಕಾರಕ್ಕೆ ರುತ್ವವಿಸರ್ಗ. ಪಪರತುಃ | ಕಿತ್ ಆದ ಲಿಟನಲ್ಲಿ ಇದರಿಂದ ಗುಣ. ಪಪೄ +ಉಸ್=ಪಪರುಃ || ಪಪರಿಥ | ಪಪರಥುಃ | ಪಪರ || ಪಪಾರ, ಪಪರ | ಪಪರಿವ | ಪಪರಿಮ || **ಲುಟ್** || ಪೄ+ಇತಾ ಎಂದಿರುವಾಗ ಗುಣ. ಪರ್+ಇತಾ ಎಂದಿರುವಾಗ ಇಟಗೆ ವಿಕಲ್ಪವಾಗಿ ದೀರ್ಘ ಹೇಳುತ್ತಾನೆ.

ಇಡಾಗಮಕ್ಕೆ ವಿಕಲ್ಪ ದೀರ್ಘ ಹೇಳುವ ಸೂತ್ರ.

೭೧೭. **ವೄತೋವಾ || ೭-೨-೩೮ ||**

**ವೃಙ್‌ವೃಞ್ಭ್ಯಾಂವೄದನ್ತಾಚ್ಚೇಟೋ ದೀರ್ಘೋ ವಾ ಸ್ಯಾನ್ನತು ಲಿಟಿ | ಪರೀತಾ, ಪರಿತಾ | ಪರೀಷ್ಯತಿ, ಪರಿಷ್ಯತಿ | ಪಿಪರ್ತು | ಅಪಿಪಃ | ಅಪಿಪೂರ್ತಾಮ್ | ಅಪಿಪರುಃ | ಪಿಪೂರ್ಯಾತ್ | ಪೂರ್ಯಾತ್ | ಅಪಾರೀತ್ ||**

ದ್ವಿಪದ ಸೂತ್ರ. ವೃಚ್, ಋೂತ್ ಚ ತಯೋಃ ಸಮಾಹಾರಃ ವೄತ್. ತಸ್ಮಾತ್. 'ಗ್ರಹೋಽಲಿಟಿ ದೀರ್ಘಃ' ಸೂತ್ರದಿಂದ 'ಅಲಿಟಿ', 'ದೀರ್ಘಃ' ಪದಗಳು ಅನುವೃತ್ತವಾಗುತ್ತವೆ. 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ಅನುವೃತ್ತವಾದ ಇಟ್ ಷಷ್ಠ್ಯನ್ತವಾಗಿ ವಿಪರಿಣತವಾಗುತ್ತದೆ. **ಸೂತ್ರಾರ್ಥ**—ವೃಙ್, ವೃಞ್ ಧಾತುಗಳ ಮತ್ತು ಋೂದಂತ ಧಾತುಗಳ ಪರದಲ್ಲಿರುವ ಇಟಿಗೆ ವಿಕಲ್ಪವಾಗಿ ದೀರ್ಘ ಬರುತ್ತದೆ. ಲಿಟ್ ಪರವಾದಾಗ ಈ ದೀರ್ಘ ಬರುವುದಿಲ್ಲ. ಸೂತ್ರದಿಂದ ವೃ ಸಾಮಾನ್ಯವಾಗಿ ಹೇಳಿರುವುದರಿಂದ ವೃಙ್, ವೃಞ್ ಎರಡು ಧಾತುಗಳನ್ನು ತೆಗೆದುಕೊಳ್ಳಬೇಕು. ಪ್ರಕೃತ ಋೂದಂತಧಾತುವಾದುದರಿಂದ ಲಿಟ್ ಪರದಲ್ಲಿಲ್ಲದಿರುವುದರಿಂದ ದೀರ್ಘವಿಕಲ್ಪ. ಪರೀತಾ | ಪರೀತಾರೌ | ಪರೀತಾರಃ || ಇತ್ಯಾದಿ. ದೀರ್ಘ ಬಾರದಿದ್ದರೆ ಪರಿತಾ | ಪರಿತಾರೌ | ಇತ್ಯಾದಿ. ಇನ್ನು ಮುಂದೆ ಇಡಾಗಮ ಬಂದಾಗ ಹೀಗೆಯೇ ದೀರ್ಘ ವಿಕಲ್ಪ ತಿಳಿಯಬೇಕು.

**ಲೃಟ್** || ಪೄ+ಇಷ್ಯತಿ. ಗುಣ. ಇಟಿಗೆ ದೀರ್ಘವಿಕಲ್ಪ. ಪರೀಷ್ಯತಿ, ಪರಿಷ್ಯತಿ ಇತ್ಯಾದಿ. **ಲೋಟ್** || ಪಿಪರ್ತು, ಪಿಪೂರ್ತಾತ್ | ಪಿಪೂರ್ತಾಮ್ | ಪಿಪುರತು || ಪಿಪೂರ್ಹಿ, ಪಿಪೂರ್ತಾತ್ | ಪಿಪೂರ್ತಮ್ | ಪಿಪೂರ್ತ || ಪಿಪರಾಣಿ | ಪಿಪರಾವ | ಪಿಪರಾಮ || **ಲಙ್** || ಅಪಿಪೄ+ತ್. ಗುಣ. ಅಪಿಪರ್+ತ್. 'ಹಲ್ಙ್ಯಾಭ್ಯೋದೀರ್ಘಾ—' ಸೂತ್ರದಿಂದ ತಲೋಪ. 'ಖರವಸಾನಯೋಃ—' ಸೂತ್ರದಿಂದ ರೇಫಕ್ಕೆ ವಿಸರ್ಗ. ಅಪಿಪಃ | ಅಪಿಪೂರ್ತಾಮ್ | ಅಪಿಪರುಃ || ಅಪಿಪಃ | ಅಪಿಪೂರ್ತಮ್ | ಅಪಿಪೂರ್ತ || ಅಪಿಪರಮ್ | ಅಪಿಪೂರ್ವ | ಅಪಿಪೂರ್ಮ || **ವಿಧಿಲಿಙ್** || ಪಿಪೂರ್ಯಾತ್ | ಪಿಪೂರ್ಯಾತಾಮ್ | ಪಿಪೂರ್ಯುಃ || ಇತ್ಯಾದಿ. **ಆಶೀರ್ಲಿಙ್** || ಪೂರ್ಯಾತ್ | ಪೂರ್ಯಾಸ್ತಾಮ್ | ಪೂರ್ಯಾಸುಃ || ಇತ್ಯಾದಿ. **ಲುಙ್** || ಅಪೄ+ಇಸ್‌ಈತ್. 'ಇಟ ಇಟಿ' ಸಲೋಪ. 'ಸಿಚಿವೃದ್ಧಿಃ ಪರಸ್ಮೈಪದೇಷು' ಸೂತ್ರದಿಂದ ಋಕಾರಕ್ಕೆ ವೃದ್ಧಿ (ಆರ್) ಅಪಾರೀತ್. ಅಪಾರಿಷ್ ಅಂಗ. ಅಪಾರಿಷ್+ತಾಮ್ ಎಂದಿರುವಾಗ 'ವೄತೋವಾ' ಸೂತ್ರದಿಂದ ಇಟಿಗೆ ದೀರ್ಘವಿಕಲ್ಪ ಪ್ರಾಪ್ತವಾದರೆ ಸಿಚ್ ಪರವಾದಾಗ ನಿಷೇಧ ಹೇಳುತ್ತಾನೆ.

ಇಟಿಗೆ ದೀರ್ಘನಿಷೇಧ ಹೇಳುವ ಸೂತ್ರ.

**೬೧೮. ಸಿಚಿ ಚ ಪರಸ್ಮೈಪದೇಷು || ೭-೨-೪೦ ||**

**ಅತ್ರ ಇಟೋ ನ ದೀರ್ಘಃ | ಅಪಾರಿಷ್ಟಾಮ್ | ಅಪರೀಷ್ಯತ್, ಅಪರಿಷ್ಯತ್ ||**

ತ್ರಿಪದ ಸೂತ್ರ. 'ನ ಲಿಙಿ' ಸೂತ್ರದಿಂದ 'ನ' ಅನುವೃತ್ತಿ. **ಸೂತ್ರಾರ್ಥ**—ವೃಙ್, ವೃಞ್ ಧಾತುಗಳ, ಋೂದಂತಧಾತುಗಳ ಪರದಲ್ಲಿರುವ ಇಟಿಗೆ ಪರಸ್ಮೈಪದ

ಪರವಾದ ಸಿಚ್ ಪರದಲ್ಲಿರುವಾಗ ದೀರ್ಘ ಬರುವುದಿಲ್ಲ, ಅಪಾರ್ + ಇಸ್‌ತಾಮ್ ಎಂದಿರುವಾಗ ಪರಸ್ಮೈಪದಪರಕಸಿಚ್ ಪರದಲ್ಲಿರುವುದರಿಂದ ದೀರ್ಘನಿಷೇಧ ಬಂದರೆ ಅಪಾರಿಷ್ಟಾಮ್ | ಅಪಾರಿಷುಃ || ಎಂದಾಗುತ್ತದೆ. ಅಪಾರೀಃ | ಅಪಾರಿಷ್ಟಮ್ | ಅಪಾರಿಷ್ಟ || ಅಪಾರಿಷಮ್ | ಅಪಾರಿಷ್ವ | ಅಪಾರಿಷ್ಮ ||

ಲೃಙ್ || ಇಟಿಗೆ ದೀರ್ಘವಿಕಲ್ಪ. ಅಪರಿಷ್ಯತ್, ಅಪರೀಷ್ಯತ್ | ಇತ್ಯಾದಿ.

## || ೭೯ || ಓಹಾಕ್ ತ್ಯಾಗೇ ||(ಬಿಡುವುದು.) ಜಹಾತಿ ||

ಓಕಾರ ಕಕಾರ ಇತ್. ಹಾ ಧಾತುಸ್ವರೂಪ. ಅನಿಟ್. ಲಟಿನಲ್ಲಿ ಶ್ಲು ಬಂದಾಗ ದ್ವಿತ್ವ. ಹಾಹಾ + ತಿ. ಅಭ್ಯಾಸಕ್ಕೆ ಹ್ರಸ್ವ, 'ಕುಹೋಶ್ಚುಃ' ಹಕಾರಕ್ಕೆ ಜಕಾರ. ಜಹಾತಿ. ಜಹಾ + ತಸ್ ಎಂದಿರುವಾಗ ಧಾತುವಿನ ಆಕಾರಕ್ಕೆ ಇತ್ವವಿಕಲ್ಪ ಹೇಳುತ್ತಾನೆ.

ಹಾ ಧಾತುವಿಗೆ ಇತ್ವ ಹೇಳುವ ಸೂತ್ರ.

### ೬೧೯. ಜಹಾತೇಶ್ಚ || ೬–೪–೧೧೬ ||

**ಇದ್ವಾ ಸ್ಯಾದ್ಧಲಾದೌ ಕ್ಙಿತಿ ಸಾರ್ವಧಾತುಕೇ || ಜಹಿತಃ ||**

ಜಹಾತೇಃ, ಚ || ದ್ವಿಪದ ಸೂತ್ರ. 'ಇದ್ದರಿದ್ರಸ್ಯ' ಸೂತ್ರದಿಂದ 'ಇತ್', 'ಭಿಯೋಽನ್ಯತರಸ್ಯಾಮ್' ಸೂತ್ರದಿಂದ 'ಅನ್ಯತರಸ್ಯಾಮ್', 'ಈ ಹಲ್ಯಘೋಃ' ಸೂತ್ರದಿಂದ 'ಹಲಿ', 'ಗಮುಹನ—' ಸೂತ್ರದಿಂದ 'ಕ್ಙಿತಿ', 'ಅತ ಉತ್‌ಸಾರ್ವಧಾತುಕೇ' ಸೂತ್ರದಿಂದ 'ಸಾರ್ವಧಾತುಕೇ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**— ಹಾ ಧಾತುವಿಗೆ ಹಲಾದಿಯಾದ ಕಿತ್‌ಙಿತ್ತಾದ ಸಾರ್ವಧಾತುಕಪರದಲ್ಲಿರುವಾಗ ಇತ್ವವು ವಿಕಲ್ಪವಾಗಿ ಬರುತ್ತದೆ. ತಸಾದಿಗಳು ಅಪಿತ್‌ಸಾರ್ವಧಾತುಕವಾದುದರಿಂದ ಙಿತ್ತಾಗುತ್ತದೆ. ಪ್ರಕೃತ ಇತ್ವ ಬಂದರೆ ಜಹಿತಃ ಎಂದಾಗುತ್ತದೆ. ಇತ್ವ ಬಾರದಿದ್ದರೆ ಈತ್ವ ಹೇಳುತ್ತಾನೆ.

ಶ್ನಾ, ಅಭ್ಯಸ್ತಗಳ ಆಕಾರಕ್ಕೆ ಈತ್ವ ಹೇಳುವ ಸೂತ್ರ.

### ೬೨೦. ಈ ಹಲ್ಯಘೋಃ || ೬–೪–೧೧೩ ||

**ಶ್ನಾಭ್ಯಸ್ತಯೋರಾತ ಈತ್ ಸ್ಯಾತ್ ಸಾರ್ವಧಾತುಕೇ ಕ್ಙಿತಿ ಹಲಾದೌ ನ ತು ಘೋಃ | ಜಹೀತಃ ||**

ಈ, ಹಲಿ, ಅಘೋಃ || ತ್ರಿಪದ ಸೂತ್ರ. 'ಶ್ನಾಭ್ಯಸ್ತಯೋರಾತಃ' ಸೂತ್ರವೇ ಅನುವೃತ್ತವಾಗುತ್ತದೆ. 'ಗಮುಹನ—' ಸೂತ್ರದಿಂದ 'ಕ್ಙಿತಿ', 'ಅತ ಉತ್‌ಸಾರ್ವ

ಧಾತುಕೇ' ಸೂತ್ರದಿಂದ 'ಸಾರ್ವಧಾತುಕೇ' ಪದಗಳಿಗೆ ಅನುವೃತ್ತಿ. ಈ ಲುಪ್ತ ಪ್ರಥಮಾಕ. **ಸೂತ್ರಾರ್ಥ**–ಶ್ನಾಪ್ರತ್ಯಯದ ಮತ್ತು ಅಭ್ಯಸ್ತದ ಆಕಾರಕ್ಕೆ ಹಲಾದಿಯಾದ ಕಿತ್‌ಙಿತ್ತಾದ ಸಾರ್ವಧಾತುಕ ಪರದಲ್ಲಿರುವಾಗ ಈಕಾರಾದೇಶ ಬರುತ್ತದೆ. ದ್ವಿತ್ವ ಬಂದಾಗ ಎರಡಕ್ಕೂ 'ಉಭೇ ಅಭ್ಯಸ್ತಮ್' ಸೂತ್ರದಿಂದ ಅಭ್ಯಸ್ತ ಎಂಬ ಸಂಜ್ಞೆ ಹಿಂದೆ ಹೇಳಿದೆ. ಇಲ್ಲಿ ಜಹಾ ಅಭ್ಯಸ್ತ. ಹಲಾದಿಯಾದ ಙಿತ್ತಾದ ಸಾರ್ವಧಾತುಕ ಪರವಾದುದರಿಂದ ಆಕಾರಕ್ಕೆ ಈಕಾರ ಬಂದರೆ ಜಹೀತಃ ಎಂದಾಗುತ್ತದೆ. ಜಹಾ+ಝಿ. ಝಿಗೆ ಅತಾದೇಶ. ಜಹಾ+ಅತಿ ಎಂದಿರುವಾಗ ಆಕಾರಕ್ಕೆ ಲೋಪ ಹೇಳುತ್ತಾನೆ.

ಶ್ನಾ, ಅಭ್ಯಸ್ತಗಳ ಆಕಾರಕ್ಕೆ ಲೋಪ ಹೇಳುವ ಸೂತ್ರ.

೬೨೧. ಶ್ನಾಭ್ಯಸ್ತಯೋರಾತಃ ‖ ೬–೪–೧೧೨ ‖

**ಅನಯೋರಾತೋ ಲೋಪಃ ಕ್ಙಿತಿ ಸಾರ್ವಧಾತುಕೇ । ಜಹತಿ । ಜಹೌ । ಹಾತಾ । ಹಾಸ್ಯತಿ । ಜಹಾತು, ಜಹಿತಾತ್, ಜಹೀತಾತ್ ‖**

ಶ್ನಾಭ್ಯಸ್ತಯೋಃ, ಆತಃ ‖ ದ್ವಿಪದ ಸೂತ್ರ. 'ಗಮಹನ—' ಸೂತ್ರದಿಂದ 'ಕ್ಙಿತಿ', 'ಅತ ಉತ್‌ಸಾರ್ವಧಾತುಕೇ' ಸೂತ್ರದಿಂದ 'ಸಾರ್ವಧಾತುಕೇ' ಅನುವೃತ್ತಿ. **ಸೂತ್ರಾರ್ಥ**–ಶ್ನಾಪ್ರತ್ಯಯದ ಮತ್ತು ಅಭ್ಯಸ್ತದ ಆಕಾರಕ್ಕೆ ಕಿತ್‌ಙಿತ್ತಾದ ಸಾರ್ವಧಾತುಕ ಪರವಾದಾಗ ಲೋಪ ಬರುತ್ತದೆ. ಹಲಾದಿಯಲ್ಲಿ ಈತ್ವ ಹೇಳಿರುವುದರಿಂದ ಪರಿಶೇಷದಿಂದ ಇದು ಅಜಾದಿಸಾರ್ವಧಾತುಕದಲ್ಲಿ ಎಂದು ತಿಳಿಯಬೇಕು. ಅಭ್ಯಸ್ತ ಜಹಾ ಇದಕ್ಕೆ ಅಜಾದಿಸಾರ್ವಧಾತುಕ ಪರವಾದುದರಿಂದ ಆಕಾರಕ್ಕೆ ಲೋಪ ಬಂದರೆ ಜಹ್+ಅತಿ=ಜಹತಿ ಎಂದಾಗುತ್ತದೆ. ಜಹಾಸಿ । ಜಹಿಥಃ, ಜಹೀಥಃ । ಜಹಿಥ, ಜಹೀಥ ‖ ಜಹಾಮಿ । ಜಹಿವಃ, ಜಹೀವಃ । ಜಹಿಮಃ, ಜಹೀಮಃ ‖

**ಲಿಟ್** ‖ ಹಾಹಾ+ಅ. ಜಹಾ+ಅ. 'ಆತಔಣಲಃ' ಸೂತ್ರದಿಂದ ಣಲಿಗೆ ಔ ಆದೇಶ. ಜಹಾ+ಔ. ವೃದ್ಧಿ. ಜಹೌ. ಜಹಾ+ಅತುಸ್. 'ಆತೋ ಲೋಪ ಇಟಿ ಚ' ಆಲೋಪ. ಜಹತುಃ । ಜಹುಃ ‖ ಭಾರದ್ವಾಜನಿಯಮದಿಂದ ಇಡ್ವಿಕಲ್ಪ. ಜಹಿಥ, ಜಹಾಥ । ಜಹಥುಃ । ಜಹ ‖ ಜಹೌ । ಜಹಿವ । ಜಹಿಮ ‖ **ಲುಟ್** ‖ ಹಾತಾ । ಹಾತಾರೌ । ಹಾತಾರಃ ‖ ಇತ್ಯಾದಿ. **ಲೃಟ್** ‖ ಹಾಸ್ಯತಿ ‖ **ಲೋಟ್** ‖ ಹಾಲಾದಿ ಙಿತ್ತಿನಲ್ಲಿ ಇತ್ವ, ಈತ್ವ, ಅಜಾದಿಯಲ್ಲಿ ಆಲೋಪ. ಜಹಾತು, ಜಹಿತಾತ್, ಜಹೀತಾತ್ । ಜಹಿತಾಮ್, ಜಹೀತಾಮ್ । ಜಹತು ‖ ಜಹಾ+ಹಿ ಎಂದಿರುವಾಗ ಹಿ ಅಪಿತ್ತಾಗಿ ಙಿತ್ತಾದುದರಿಂದ ಇತ್ವ, ಈತ್ವಗಳು ಬಂದರೆ ಜಹಿಹಿ, ಜಹೀಹಿ ಎಂದು ಎರಡು ರೂಪಗಳಾಗಬೇಕಾದರೆ ಮೊದಲು ಆತ್ವವಿಕಲ್ಪ ಹೇಳುತ್ತಾನೆ.

### ಹಾ ಧಾತುವಿಗೆ ಅತ್ವವಿಕಲ್ಪ ಹೇಳುವ ಸೂತ್ರ.

### ೬೨೨. ಆ ಚ ಹೌ || ೬-೪-೧೧೭ ||

**ಜಹಾತೇರ್ಹೌ ಪರೇ ಆ ಸ್ಯಾಚ್ಚಾದಿದೀತೌ | ಜಹಾಹಿ, ಜಹಿಹಿ, ಜಹೀಹಿ || ಅಜಹಾತ್ | ಅಜಹುಃ ||**

ತ್ರಿಪದ ಸೂತ್ರ. 'ಜಹಾತೇಶ್ಚ' ಸೂತ್ರವು ಅನುವೃತ್ತವಾಗುತ್ತದೆ. **ಸೂತ್ರಾರ್ಥ—** ಹಾ ಧಾತುವಿಗೆ ಹಿ ಪರವಾದಾಗ ಅಕಾರ ಬರುತ್ತದೆ. ಚಕಾರದಿಂದ ಇತ್ವ, ಈತ್ವಗಳೂ ಬರುತ್ತವೆ. ಇತ್ವ, ಈತ್ವಗಳಿಗೆ ಬಾಧಕವಾಗಿ ಆಕಾರ ಹೇಳಿದರೆ ಆಕಾರದ ಒಂದೇ ರೂಪವಾಗುತ್ತದೆ. ಸಮುಚ್ಚಯದಿಂದ ಹೇಳಿದರೆ ಬಾಧಕವಿಲ್ಲ. ಆಗ ಮೂರು ರೂಪಗಳು. ಜಹಾಹಿ, ಜಹಿಹಿ, ಜಹೀಹಿ | ಜಹಿತಮ್, ಜಹೀತಮ್ | ಜಹಿತ, ಜಹೀತ || ಜಹಾನಿ | ಜಹಾವ | ಜಹಾಮ ||

**ಲಙ್** || ಅಜಹಾತ್ | ಅಜಹಿತಾಮ್, ಅಜಹೀತಾಮ್ | ಅಜಹುಃ || ಅಜಹಾಃ || ಅಜಹಿತಮ್, ಅಜಹೀತಮ್ | ಅಜಹಿತ, ಅಜಹೀತ || ಅಜಹಾಮ್ | ಅಜಹಿವ, ಅಜಹೀವ | ಅಜಹಿಮ ಅಜಹೀಮ || **ವಿಧಿಲಿಙ್** || ಜಹಾ + ಯಾತ್ ಎಂದಿರುವಾಗ ಇತ್ವ, ಈತ್ವ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಆಲೋಪ ಹೇಳುತ್ತಾನೆ.

### ಹಾ ಧಾತುವಿನ ಆಕಾರಕ್ಕೆ ಲೋಪ ಹೇಳುವ ಸೂತ್ರ.

### ೬೨೩. ಲೋಪೋಯಿ || ೬-೪-೧೧೮ ||

**ಜಹಾತೇರಾಲೋಪೋ ಯಾದೌ ಸಾರ್ವಧಾತುಕೇ | ಜಹ್ಯಾತ್ | ಏರ್ಲಿಙಿ | ಹೇಯಾತ್ | ಅಹಾಸೀತ್ | ಅಹಾಸ್ಯತ್ ||**

ಲೋಪಃ, ಯಿ || ದ್ವಿಪದ ಸೂತ್ರ. 'ಜಹಾತೇಶ್ಚ' ಸೂತ್ರವೂ, 'ಅತ ಉತ್ ಸಾರ್ವಧಾತುಕೇ' ಸೂತ್ರದಿಂದ 'ಸಾರ್ವಧಾತುಕೇ', 'ಶ್ನಾಭ್ಯಸ್ತಯೋರಾತಃ' ಸೂತ್ರದಿಂದ 'ಆತಃ' ಪದವೂ ಅನುವೃತ್ತವಾಗುತ್ತವೆ. ಯಿ ಸಪ್ತಮ್ಯಂತವು 'ಸಾರ್ವಧಾತುಕೇ' ಎಂಬುದಕ್ಕೆ ವಿಶೇಷಣವಾದುದರಿಂದ ತದಾದಿಲಾಭ. **ಸೂತ್ರಾರ್ಥ—** ಹಾ ಧಾತುವಿನ ಆಕಾರಕ್ಕೆ ಯಕಾರಾದಿ ಸಾರ್ವಧಾತುಕ ಪರದಲ್ಲಿರುವಾಗ ಲೋಪ ಬರುತ್ತದೆ. ಜಹಾ + ಯಾತ್ ಎಂದಿರುವಾಗ ಯಾದಿ ಸಾರ್ವಧಾತುಕ ಪರವಾದುದರಿಂದ ಲೋಪ ಬಂದರೆ ಜಹ್ಯಾತ್ ಎಂದಾಗುತ್ತದೆ. ಜಹ್ಯಾತಾಮ್ | ಜಹ್ಯುಃ || ಜಹ್ಯಾಃ | ಜಹ್ಯಾತಮ್ | ಜಹ್ಯಾತ || ಜಹ್ಯಾಮ್ | ಜಹ್ಯಾವ | ಜಹ್ಯಾಮ ||

**ಆಶೀರ್ಲಿಙ್** || ಹಾ + ಯಾತ್ ಎಂದಿರುವಾಗ 'ಏರ್ಲಿಙಿ' (ಸೂ. ೪೯೧)

ಸೂತ್ರದಿಂದ ಆಕಾರಕ್ಕೆ ಏಕಾರಾದೇಶ. ಹೇಯಾತ್ | ಹೇಯಾಸ್ತಾಮ್ ಹೇಯಾಸುಃ || ಹೇಯಾಃ | ಹೇಯಾಸ್ತಮ್ | ಹೇಯಾಸ್ತ || ಹೇಯಾಸಂ || ಹೇಯಾಸ್ವ | ಹೇಯಾಸ್ಮ || ಲುಙ್ || ಅಹಾ+ಸ್ ಈತ್. 'ಯಮರಮನಮಾತಾಂ—' (ಸೂ. ೪೯೬) ದಿಂದ ಸಕಾಗಮ. ಸಿಚಿಗೆ ಈಟ್. 'ಇಟ ಈಟಿ' ಸಲೋಪ. ಅಹಾಸೀತ್ | ಅಹಾಸಿಷ್ಟಾಮ್ | ಅಹಾಸಿಷುಃ || ಅಹಾಸೀಃ | ಅಹಾಸಿಷ್ಟಮ್ | ಅಹಾಸಿಷ್ಟ || ಅಹಾಸಿಷಮ್ | ಅಹಾಸಿಷ್ವ | ಅಹಾಸಿಷ್ಮ || ಲೃಙ್ || ಅಹಾಸ್ಯತ್ | ಅಹಾಸ್ಯತಾಮ್ | ಅಹಾಸ್ಯನ್ || ಇತ್ಯಾದಿ.

|| ೪೦ || **ಮಾಙ್= ಮಾನೇ ಶಬ್ದೇ ಚ** (ಅಳೆಯುವುದು.)

ಙಕಾರ ಇತ್ತಾದುದರಿಂದ 'ಅನುದಾತ್ತಙಿತ ಆತ್ಮನೇಪದಮ್' ಸೂತ್ರದಿಂದ ಆತ್ಮನೇಪದ ಪ್ರತ್ಯಯಗಳು ಬರುತ್ತವೆ. 'ಟಿತ ಆತ್ಮನೇಪದಾನಾಂ ಟೇರೇ' ಬಂದರೆ ಮಾ+ತೇ. ಶ್ಲು. ದ್ವಿತ್ವಾದಿ. ಮಮಾ+ತೇ ಎಂದಿರುವಾಗ ಅಭ್ಯಾಸಕ್ಕೆ ಇತ್ವ ಹೇಳುತ್ತಾನೆ.

ಭೃಞಾದಿಗಳ ಅಭ್ಯಾಸಕ್ಕೆ ಇತ್ವ ಹೇಳುವ ಸೂತ್ರ.

೬೨೪. ಭೃಞಾಮಿತ್ || ೭-೪-೭೬ ||

**ಭೃಞ್ ಮಾಙ್ ಓಹಾಙ್ ಏಷಾಂ ತ್ರಯಾಣಾಮಭ್ಯಾಸಸ್ಯ ಇತ್ ಸ್ಯಾತ್ ಶ್ಲೌ | ಮಿಮೀತೇ | ಮಿಮಾತೇ | ಮಿಮತೇ || ಮಮೇ || ಮಾತಾ || ಮಾಸ್ಯತೇ || ಮಿಮೀತಾಮ್ || ಅಮಿಮೀತ || ಮಿಮೀತ || ಮಾಸೀಷ್ಟ | ಅಮಾಸ್ತ | ಅಮಾಸ್ಯತ ||**

ಭೃಞಾಮ್, ಇತ್ || ದ್ವಿಪದ ಸೂತ್ರ. 'ಭೃಞಾಮ್' ಎಂದು ಬಹುವಚನ ಹೇಳಿರುವುದರಿಂದ ಭೃಞಾದಿಗಳ ಎಂಬರ್ಥವು ಸಿಗುತ್ತದೆ. 'ನಿಜಾಂ ತ್ರಯಾಣಾಂ —' ಸೂತ್ರದಿಂದ 'ತ್ರಯಾಣಾಂ', 'ಶ್ಲೌ', 'ಅತ್ರ ಲೋಪಃ—' ಸೂತ್ರದಿಂದ 'ಅಭ್ಯಾಸಸ್ಯ' ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ— ಭೃಞ್, ಮಾಙ್, ಓಹಾಙ್ ಈ ಮೂರು ಧಾತುಗಳ ಅಭ್ಯಾಸಕ್ಕೆ ಶ್ಲುಪರವಾದಾಗ ಇತ್ವ ಬರುತ್ತದೆ. 'ಅಲೋಂತ್ಯಸ್ಯ' ಪರಿಭಾಷೆಯಿಂದ ಅಂತ್ಯಕ್ಕೆ ಬಂದರೆ ಮಿಮಾ+ತೇ ಎಂದಾಗುತ್ತದೆ. 'ಈಹಲ್ಯಘೋಃ' ಆಕಾರಕ್ಕೆ ಈತ್ವ. ಮಿಮೀತೇ | ಮಿಮಾ+ಆತೆ. 'ಶ್ನಾಭ್ಯಸ್ತಯೋರಾತಃ' ಆಲೋಪ. ಮಿಮ್+ಆತೇ= ಮಿಮಾತೇ | ಮಿಮಾ+ಝ. ಝಕ್ಕೆ ಅತಾದೇಶ. ಟಿಗೆ ಏತ್ವ. ಹಿಂದಿನಂತೆ ಆಲೋಪ. ಮಿಮತೇ || ಮಿಮೀಷೇ | ಮಿಮಾಥೇ | ಮಿಮೀಧ್ವೇ || ಮಿಮೇ | ಮಿಮೀವಹೇ | ಮಿಮೀಮಹೇ ||

**ಲಿಟ್** || ಮಮಾ+ಏ 'ಆತೋ ಲೋಪ ಇಟಿ ಚ' ಸೂತ್ರದಿಂದ ಆಲೋಪ. ಮಮೇ | ಮಮಾತೇ | ಮಮಿರೇ || ಮಮಿಷೇ | ಮಮಾಥೇ | ಮಮಿಧ್ವೇ || ಮಮೇ | ಮಮಿವಹೇ | ಮಮಿಮಹೇ || **ಲುಟ್** || ಅನಿಟಾದುದರಿಂದ ತಾಸಿಗೆ ಇಡಾಗಮವಿಲ್ಲ. ಮಾತಾ | ಮಾತಾರೌ | ಮಾತಾರಃ || ಮಾತಾಸೇ | ಮಾತಾಸಾಥೇ | ಮಾತಾಧ್ವೇ || ಮಾತಾಹೇ | ಮಾತಾಸ್ವಹೇ | ಮಾತಾಸ್ಮಹೇ || **ಲೃಟ್** || ಮಾಸ್ಯತೇ | ಇತ್ಯಾದಿ, **ಲೋಟ್** || ಲಟನಂತೆ ಪ್ರಕ್ರಿಯೆಯಾದ ಮೇಲೆ 'ಆಮೇತಃ' ಸೂತ್ರದಿಂದ ಟಿಗೆ ಆಮ್. ಮಿಮೀತಾಮ್ | ಮಿಮಾತಾಮ್ | ಮಿಮತಾಮ್ || ಮಿಮೀಷ್ವ | ಮಿಮಾಥಾಮ್ | ಮಿಮೀಧ್ವಮ್ || ಮಿಮೈ | ಮಿಮಾವಹೈ | ಮಿಮಾಮಹೈ || **ಲಙ್** || ಈತ್ವ. ಅಮಿಮೀತ | ಅಮಿಮಾತಾಮ್ | ಅಮಿಮತ || ಅಮಿಮೀಥಾಃ | ಅಮಿಮಾಥಾಮ್ | ಅಮಿಮೀಧ್ವಮ್ || ಅಮಿಮಿ | ಅಮಿಮೀವಹಿ | ಅಮಿಮೀಮಹಿ || **ವಿಧಿಲಿಙ್** || ಮಿಮೀತ | ಮಿಮೀಯಾತಾಮ್ | ಮಿಮೀರನ್ || ಮಿಮೀಥಾಃ | ಮಿಮೀಯಾಥಾಮ್ | ಮಿಮೀಧ್ವಮ್ || ಮಿಮೀಯ | ಮಿಮೀವಹಿ | ಮಿಮೀಮಹಿ || **ಆಶೀರ್ಲಿಙ್** || ಮಾಸೀಷ್ಟ | ಮಾಸೀಯಾಸ್ತಾಮ್ | ಮಾಸೀರನ್ || ಮಾಸೀಷ್ಠಾಃ | ಮಾಸೀಯಾಸ್ಥಾಮ್ | ಮಾಸೀಧ್ವಮ್ || ಮಾಸೀಯ | ಮಾಸೀವಹಿ | ಮಾಸೀಮಹಿ || **ಲುಙ್** || ಅಮಾಸ್ತ | ಅಮಾಸಾತಾಮ್ | ಅಮಾಸತ || ಅಮಾಸ್ಥಾಃ | ಅಮಾಸಾಥಾಮ್ | ಅಮಾಧ್ವಮ್ || ಅಮಾಸಿ | ಅಮಾಸ್ವಹಿ | ಅಮಾಸ್ಮಹಿ || **ಲೃಙ್** || ಅಮಾಸ್ಯತ | ಅಮಾಸ್ಯೇತಾಮ್ | ಅಮಾಸ್ಯಂತ || ಇತ್ಯಾದಿ.

|| ೮೧ || ಓಹಾಙ್—ಗತೌ (ಹೋಗುವುದು)

**ಜಿಹೀತೇ | ಜಿಹಾತೇ | ಜಿಹತೇ || ಜಹೇ || ಹಾತಾ || ಹಾಸ್ಯತೇ || ಜಿಹೀತಾಮ್ || ಅಜಿಹೀತ || ಜಿಹೀತ || ಹಾಸೀಷ್ಟ | ಅಹಾಸ್ತ | ಅಹಾಸ್ಯತ ||**

ಓಕಾರ, ಙಕಾರ ಇತ್ತಾಗುತ್ತವೆ. ಹಾ ಧಾತುಸ್ವರೂಪ. ಮಾ ಧಾತುವಿನಂತೇ ರೂಪವಾಗುತ್ತದೆ. ಅಭ್ಯಾಸದಲ್ಲಿ ಹಕಾರವಿರುವುದರಿಂದ 'ಕುಹೋಶ್ಚುಃ' ಸೂತ್ರದಿಂದ ಹಕಾರಕ್ಕೆ ಜಕಾರಾದೇಶ ವಿಶೇಷ.

**ಲಟ್** || ಜಿಹೀತೇ | ಜಿಹಾತೇ | ಜಿಹತೇ || ಜಿಹೀಷೇ | ಜಿಹಾಥೇ | ಜಿಹೀಧ್ವೇ || ಜಿಹೇ | ಜಿಹೀವಹೇ | ಜಿಹೀಮಹೇ || **ಲಿಟ್** || ಜಹೇ | ಜಹಾತೇ | ಜಹಿರೇ || ಇತ್ಯಾದಿ. **ಲುಟ್** || ಹಾತಾ | ಇತ್ಯಾದಿ. **ಲೃಟ್** || ಹಾಸ್ಯತೇ | ಇತ್ಯಾದಿ. **ಲೋಟ್** || ಜಿಹೀತಾಮ್ | ಜಿಹಾತಾಮ್ | ಜಿಹತಾಮ್ || ಜಿಹೀಷ್ವ | ಜಿಹಾಥಾಮ್ | ಜಿಹೀಧ್ವಮ್ || ಜಿಹೈ | ಜಿಹಾವಹೈ | ಜಿಹಾಮಹೈ ||

**ಲಙ್** || ಅಜಿಹೀತ | ಇತ್ಯಾದಿ. **ವಿಧಿಲಿಙ್** || ಜಿಹೀತ | **ಆಶೀರ್ಲಿಙ್** || ಹಾಸೀಷ್ಟ | **ಲುಙ್** || ಅಹಾಸ್ತ | **ಲೃಙ್** || ಅಹ್ಯಾಸ್ಯತ ||

**|| ೬೨ || ಡುಭೃಞ್—ಧಾರಣಪೋಷಣಯೋಃ ||**

**ಬಿಭರ್ತಿ | ಬಿಭೃತಃ | ಬಿಭ್ರತಿ || ಬಿಭೃತೇ–ಬಿಭ್ರಾತೇ–ಬಿಭ್ರತೇ || ಬಿಭರಾಞ್ಚಕಾರ, ಬಭಾರ | ಬಭರ್ಥ | ಬಭೃವ | ಬಿಭರಾಞ್ಚಕ್ರೇ, ಬಭ್ರೇ ಭರ್ತಾಸಿ, ಭರ್ತಾಸೇ | ಭರಿಷ್ಯತಿ, ಭರಿಷ್ಯತೇ | ಬಿಭರ್ತು | ಬಿಭರಾಣಿ | ಬಿಭೃತಾವಮ್ | ಅಬಿಭಃ | ಅಬಿಭೃತಾವಮ್ | ಅಬಿಭರುಃ | ಅಬಿಭೃತ | ಅಭೃತ | ಅಭರಿಷ್ಯತ್, ಅಭರಿಷ್ಯತ ||**

ಡು, ಞಕಾರ ಇತ್ತಾಗುತ್ತವೆ. ಞಿತ್ತಾದುದರಿಂದ ಉಭಯಪದಿ. **ಲಟ್** || ಭೃ+ತಿ. 'ಶ್ಲೌ' ದ್ವಿತ್ವ. 'ಭೃಞಾಮಿತ್' ಅಭ್ಯಾಸಕ್ಕೆ ಇತ್ವ. ಬಿಭೃ+ತಿ. 'ಸಾರ್ವಧಾತುಕಾ—' ಗುಣ. ಬಿಭರ್ತಿ | ಬಿಭೃತಃ | ಬಿಭೃ+ಅತಿ. ಯಣ್. ಬಿಭ್ರತಿ || ಬಿಭರ್ಷಿ | ಬಿಭೃಥಃ | ಬಿಭೃಥ || ಬಿಭರ್ಮಿ | ಬಿಭೃವಃ | ಬಿಭೃಮಃ || ಆ.—ಬಿಭೃತೇ | ಬಿಭ್ರಾತೇ | ಬಿಭ್ರತೇ || ಬಿಭೃಷೇ | ಬಿಭ್ರಾಥೇ | ಬಿಭೃಧ್ವೇ || ಬಿಭ್ರೇ | ಬಿಭೃವಹೇ | ಬಿಭೃಮಹೇ ||

**ಲಿಟ್** || 'ಭೀಹ್ರೀಭೃಹುವಾಂ—' (ಸೂ. ೬೦೮) ಸೂತ್ರದಿಂದ ವಿಕಲ್ಪವಾಗಿ ಆಮ್. ಆಮ್ ಪರವಾದಾಗ ಶ್ಲುವಿನಂತೆ ಕಾರ್ಯ. ಹು ಧಾತುವಿನಂತೆ ರೂಪ. ಬಿಭರಾಞ್ಚಕಾರ | ಇತ್ಯಾದಿ. ಆಮ್ ಬಾರದಿದ್ದರೆ ಬಭಾರ | ಬಭ್ರತುಃ | ಬಭ್ರುಃ || ಋಕಾರಾಂತವಾದುದರಿಂದ ಭಾರದ್ವಾಜನಿಯಮದಿಂದಲೂ ಥಲಿಗೆ ಇಡಾಗಮವಿಲ್ಲ. 'ಕೃಸೃಭೃ—' ಸೂತ್ರದಿಂದ ಲಿಟಿನಲ್ಲಿ ಇಣ್ನಿಷೇಧ. ಬಭರ್ಥ | ಬಭ್ರಥುಃ | ಬಭ್ರ || ಬಭಾರ, ಬಭರ | ಬಭೃವ | ಬಭೃಮ || ಆ.—ಬಿಭರಾಞ್ಚಕ್ರೇ | ಇತ್ಯಾದಿ. ಆಮ್ ಬಾರದಿದ್ದರೆ ಬಭ್ರೇ | ಬಭ್ರಾತೇ | ಬಭ್ರಿರೇ || ಇತ್ಯಾದಿ. **ಲುಟ್** || ತಾಸ್ ನಿಮಿತ್ತಕವಾಗಿ ಗುಣ. ಭರ್ತಾ | ಭರ್ತಾರೌ | ಭರ್ತಾರಃ || ಇತ್ಯಾದಿ. ಆ.—ಭರ್ತಾ | ಭರ್ತಾರೌ | ಭರ್ತಾರಃ || ಭರ್ತಾಸೇ | ಭರ್ತಾಸಾಥೇ | ಭರ್ತಾಧ್ವೇ || ಇತ್ಯಾದಿ. **ಲೃಟ್** || 'ಋದ್ಧನೋಃ ಸ್ಯೇ' ಸೂತ್ರದಿಂದ ಸ್ಯಕ್ಕೆ ಇಡಾಗಮ. ಗುಣ. ಷತ್ವ. ಭರಿಷ್ಯತಿ | ಆ.— ಭರಿಷ್ಯತೇ | ಇತ್ಯಾದಿ. **ಲೋಟ್** || ಬಿಭರ್ತು, ಬಿಭೃತಾತ್ | ಬಿಭೃತಾವಮ್ | ಬಿಭ್ರತು || ಬಿಭೃಹಿ, ಬಿಭೃತಾತ್ | ಬಿಭೃತಮ್ | ಬಿಭೃತ || ಬಿಭರಾಣಿ | ಬಿಭರಾವ | ಬಿಭರಾಮ || ಆ.—ಬಿಭೃತಾಮ್ | ಬಿಭ್ರಾತಾಮ್ | ಬಿಭ್ರತಾಮ್ || ಬಿಭೃಷ್ವ | ಬಿಭ್ರಾಥಾಮ್ | ಬಿಭೃಧ್ವಮ್ || ಬಿಭರೈ | ಬಿಭರಾವಹೈ | ಬಿಭರಾಮಹೈ || **ಲಙ್** || ಅಬಿಭೃ+ತ್. ಗುಣ.

ಅಬಿಭರ್ + ತ್. 'ಹಲ್ಙ್ಯಾಭ್ಯೋ -' ಸೂತ್ರದಿಂದ ತಲೋಪ. ರೇಫಕ್ಕೆ 'ಖರವಸಾನಯೋಃ—' ಸೂತ್ರದಿಂದ ವಿಸರ್ಗ. ಅಬಿಭಃ| ಅಬಿಭೃತಾಮ್ | ಅಬಿಭೃ+ಝಿ. ಝಿಗೆ ಜುಸ್. 'ಜುಸಿಚ' ಗುಣ. ಅಬಿಭರುಃ || ಅಬಿಭಃ | ಅಬಿಭೃತಮ್ | ಅಬಿಭೃತ || ಅಬಿಭರಮ್|ಅಬಿಭೃವ | ಅಬಿಭೃಮ || **ವಿಧಿಲಿಙ್** || ಬಿಭೃಯಾತ್ | ಬಿಭೃಯಾತಾಮ್ | ಬಿಭೃಯುಃ || ಇತ್ಯಾದಿ. ಆ.— ಬಿಭ್ರೀತ|ಬಿಭ್ರೀಯಾತಾಮ್ | ಬಿಭ್ರೀರನ್ || ಇತ್ಯಾದಿ. **ಆಶೀರ್ಲಿಙ್** || 'ರಿಙ್ಶಯಗ್ಲಿಙ್ಕ್ಷು' ಸೂತ್ರದಿಂದ ಋಕಾರಕ್ಕೆ ರಿಙಾದೇಶ. ಭ್ರಿಯಾತ್|ಭ್ರಿಯಾಸ್ತಾಮ್|ಭ್ರಿಯಾಸುಃ || ಭ್ರಿಯಾಃ | ಭ್ರಿಯಾಸ್ತಮ್ | ಭ್ರಿಯಾಸ್ತ || ಭ್ರಿಯಾಸಮ್ | ಭ್ರಿಯಾಸ್ವ | ಭ್ರಿಯಾಸ್ಮ || ಆ.—ಭೃಷೀಷ್ಟ | ಭೃಷೀಯಾಸ್ತಾಮ್ | ಭೃಷೀರನ್ || ಇತ್ಯಾದಿ. ಇಲ್ಲಿ 'ಉಶ್ಚ' (ಸೂ. ೫೪೩) ಸೂತ್ರದಿಂದ ಝಲಾದಿಲಿಙ್ ಕಿತ್ ಆದುದರಿಂದ ಗುಣ ಬರಲಿಲ್ಲ. **ಲುಙ್** || ಅಭೃ + ಸ್ + ಈತ್. 'ಸಿಚಿವೃದ್ಧಿಃ'— ಸೂತ್ರದಿಂದ ಋಕಾರಕ್ಕೆ ವೃದ್ಧಿ (ಆರ್). ಅಭಾರ್ಷೀತ್ | ಅಭಾರ್ಷ್ಟಾಮ್ | ಅಭಾರ್ಷುಃ || ಅಭಾರ್ಷೀಃ | ಅಭಾರ್ಷ್ಟಮ್ | ಅಭಾರ್ಷ್ಟ || ಅಭಾರ್ಷಮ್ | ಅಭಾರ್ಷ್ವ | ಅಭಾರ್ಷ್ಮ || ಆ.— ಅಭೃ+ಸ್+ತ. 'ಹ್ರಸ್ವಾದಂಗಾತ್' ಸೂತ್ರದಿಂದ ಸಲೋಪ. ಅಭೃತ | ಅಭೃಷಾತಾಮ್ | ಅಭೃಷತ || ಅಭೃಥಾಃ | ಅಭೃಷಾಥಾಮ್ | ಅಭೃಢ್ವಮ್ || ('ಇಣಃ ಷೀಧ್ವಂ—' ಸೂತ್ರದಿಂದ ಧಕ್ಕೆ ಢತ್ವ.) ಅಭೃಷಿ | ಅಭೃಷ್ವಹಿ | ಅಭೃಷ್ಮಹಿ || **ಲೃಙ್** || ಲೃಟಿನಲ್ಲಿ ಹೇಳಿದಂತೆ ಸ್ಯಕ್ಕೆ ಇಡಾಗಮ. ಅಭರಿಷ್ಯತ್ | ಆ.— ಅಭರಿಷ್ಯತ ||

|| ೮೩ || ಡುದಾಙ್ — ದಾನೇ ||

**ದದಾತಿ | ದತ್ತಃ | ದದತಿ || ದತ್ತೇ–ದದಾತೇ–ದದತೇ || ದದೌ, ದದೇ || ದಾತಾಸಿ | ದಾತಾಸೇ || ದಾಸ್ಯತಿ, ದಾಸ್ಯತೇ || ದದಾತು ||**

ಇಲ್ಲಿಯೂ ಡು ಞ್ ಇತ್ತಾಗುತ್ತವೆ. ಡು ಇತ್ತಾದ ಧಾತುಗಳಿಗೆ ಮುಂದೆ ಕ್ತ್ರಿ ಪ್ರತ್ಯಯ ಹೇಳುತ್ತಾನೆ. ಞಿತ್ತಿಗೆ ಉಭಯಪದವೇ ಪ್ರಯೋಜನ. **ಲಟ್** || ದದಾತಿ | ದದಾ + ತಸ್. 'ಶ್ನಾಭ್ಯಸ್ತಯೋರಾತಃ' ಸೂತ್ರದಿಂದ ಆಲೋಪ. 'ಈಹಲ್ಯಘೋಃ' ಸೂತ್ರದಲ್ಲಿ 'ಅಘೋಃ' ಎಂದು ನಿಷೇಧ ಮಾಡಿರುವುದರಿಂದ ಇದು ಘುಸಂಜ್ಞೆಯುಳ್ಳ ಧಾತುವಾದುದರಿಂದ ಈತ್ವ ಬರುವುದಿಲ್ಲ. ದದ್ + ತಸ್. 'ಖರಿಚ' ದತ್ತಃ | ದದತಿ || ದದಾಸಿ | ದತ್ಥಃ | ದತ್ಥ || ದದಾಮಿ | ದದ್ವಃ | ದದ್ಮಃ || ಆ.— ಇಲ್ಲಿಯೂ ಆಲೋಪ. ದತ್ತೇ | ದದಾತೇ ದದತೇ || ದತ್ಸೇ | ದದಾಥೇ | ದಧ್ವೇ || ದದೇ | ದದ್ವಹೇ | ದದ್ಮಹೇ || **ಲಿಟ್** || ದದಾ+ಅ. 'ಆತ ಔ ಣಲಃ' ಸೂತ್ರದಿಂದ ಣಲಿಗೆ ಔ ಬಂದಾಗ ವೃದ್ಧಿ. ದದೌ | ದದಾ+ಅತುಸ್. 'ಆತೋ ಲೋಪ ಇಟಿ ಚ' ಆಲೋಪ. ದದತುಃ | ದದುಃ || ಭಾರದ್ವಾಜನಿಯಮದಿಂದ

ಥಲಿಗೆ ಇಡ್ವಿಕಲ್ಪ. ದದಿಥ, ದದಾಥ | ದದಥುಃ | ದದ || ದದೌ | ದದಿವ | ದದಿಮ || **ಆ.**—ಆಲ್ಲೋಪ. ದದೇ | ದದಾತೇ | ದದಿರೇ || ದದಿಷೇ | ದದಾಥೇ | ದದಿಧ್ವೇ || ದದೇ | ದದಿವಹೇ | ದದಿಮಹೇ || **ಲುಟ್** || ದಾತಾ | ದಾತಾರೌ | ದಾತಾರಃ || ಇತ್ಯಾದಿ. ಆತ್ಮನೇಪದದಲ್ಲಿ ಮಧ್ಯಮಪುರುಷದಿಂದ ವಿಶೇಷ. ದಾತಾಸಿ | ದಾತಾಸೇ | ಇತ್ಯಾದಿ. **ಲೃಟ್** || ದಾಸ್ಯತಿ | **ಆ.**—ದಾಸ್ಯತೇ ಇತ್ಯಾದಿ. **ಲೋಟ್** || ದದಾತು | ದದಾ + ತಾತ್ ಎಂದಿರುವಾಗ 'ಶ್ನಾಭ್ಯಸ್ತಯೋರಾತಃ' ಸೂತ್ರದಿಂದ ಆಲ್ಲೋಪ. ದತ್ತಾತ್ | ದತ್ತಾಮ್ | ದದತು || ದದಾ + ಹಿ ಎಂದಿರುವಾಗ ಘುಸಂಜ್ಞಾನಿಮಿತ್ತವಾಗಿ ಕಾರ್ಯ ಹೇಳುತ್ತಾನೆ. ಅಲ್ಲಿ ಘುಸಂಜ್ಞೆಯ ಜ್ಞಾನವು ಅಪೇಕ್ಷಿತವಾದುದರಿಂದ ಮೊದಲು ಘುಸಂಜ್ಞೆಯನ್ನು ಹೇಳುತ್ತಾನೆ.

ಘುಸಂಜ್ಞೆ ಹೇಳುವ ಸೂತ್ರ

**೬೨೫. ದಾಧಾಘ್ವದಾಪ್** || ೧-೧-೨೦ ||

**ದಾರೂಪಾ ಧಾರೂಪಾಶ್ಚ ಧಾತವೋ ಘುಸಂಜ್ಞಾಃ ಸ್ಯುಃ ದಾಪ್‌ದೈಪೌ ವಿನಾ || ಘ್ವಸೋರಿತ್ಯೇತ್ತ್ವಮ್ | ದೇಹಿ | ದತ್ತಮ್ || ಅದದಾತ್, ಅದತ್ತ || ದದ್ಯಾತ್ | ದದೀತ || ದೇಯಾತ್ | ದಾಸೀಷ್ಟ || ಅದಾತ್—ಅದಾತಾಮ್—ಅದುಃ ||**

ದಾಧಾ, ಘು, ಅದಾಪ್ || ತ್ರಿಪದ ಸೂತ್ರ. **ಸೂತ್ರಾರ್ಥ**—ದಾರೂಪ, ಧಾರೂಪಗಳಾದ ಧಾತುಗಳಿಗೆ 'ಘು' ಎಂಬ ಸಂಜ್ಞೆ ಬರುತ್ತದೆ; ದಾಪ್, ದೈಪ್ ಧಾತುಗಳಿಗೆ ಮಾತ್ರ ಘುಸಂಜ್ಞೆಯಿಲ್ಲ. ದಾರೂಪದಿಂದ ಸ್ವಾಭಾವಿಕ ದಾರೂಪವಾದ ಧಾತುಗಳೂ ದೋ, ದೇಙ್ ಧಾತುಗಳಿಗೆ ಆತ್ವ ಬರುವುದರಿಂದ ಅವುಗಳೂ ಗೃಹೀತವಾಗುತ್ತವೆ. ಹಾಗೇ ಧಾರೂಪ ಧಾತುಗಳೆಂದರೆ ಧಾಙ್, ಧೇಟ್ ಮುಂತಾದವುಗಳು ಗೃಹೀತವಾಗುತ್ತವೆ. ಪ್ರಕೃಲ್ಲಿ ದಾಞಿಗೆ ಘುಸಂಜ್ಞೆ ಬರುವುದರಿಂದ ದದಾ + ಹಿ ಎಂದಿರುವಾಗ 'ಘ್ವಸೋರೇದ್ಧಾವಭ್ಯಾಸಲೋಪಶ್ಚ' ಸೂತ್ರದಿಂದ ಧಾತುವಿನ ಆಕಾರಕ್ಕೆ ಏತ್ವವೂ ಅಭ್ಯಾಸಲೋಪವೂ ಬರುತ್ತದೆ. ದೇಹಿ, ದತ್ತಾತ್ | ದತ್ತಂ | ದತ್ತ || ದದಾನಿ | ದದಾವ | ದದಾಮ || **ಆ.** ದತ್ತಾಮ್ | ದದಾತಾಮ್ | ದದತಾಮ್ || ದತ್ಸ್ವ | ದದಾಥಾಮ್ | ದದ್ಧ್ವಮ್ || ದದೈ | ದದಾವಹೈ | ದದಾಮಹೈ ||

**ಲಙ್** || ಅದದಾತ್ | ಅದತ್ತಾಮ್ | ಅದದುಃ || ಅದದಾಃ | ಅದತ್ತಮ್ | ಅದತ್ತ || ಅದದಾಮ್ | ಅದದ್ವ | ಅದದ್ಮ || ಆ.—ಅದತ್ತ | ಅದದಾತಾಮ್ | ಅದದತ || ಅದತ್ಥಾಃ | ಅದದಾಥಾಮ್ | ಅದದ್ಧ್ವಮ್ || ಅದದಿ | ಅದದ್ವಹಿ | ಅದದ್ಮಹಿ || **ವಿಧಿಲಿಙ್** || ದದ್ಯಾತ್ | ದದ್ಯಾತಾಮ್ | ದದ್ಯುಃ || ದದ್ಯಾಃ | ದದ್ಯಾತಮ್ | ದದ್ಯಾತ || ದದ್ಯಾಮ್ | ದದ್ಯಾವ | ದದ್ಯಾಮ || ಆ.—ದದೀತ |

ದದೀಯಾತಾಮ್ | ದದೀರನ್ || ದದೀಥಾಃ | ದದೀಯಾಥಾಮ್ | ದದೀಧ್ವಮ್ || ದದೀಯ | ದದೀವಹಿ | ದದೀಮಹಿ || **ಆಶೀರ್ಲಿಙ್** || ದಾ + ಯಾತ್. 'ಏರ್ಲಿಙಿ' ಸೂತ್ರದಿಂದ ಏತ್ವ. ದೇಯಾತ್ ದೇಯಾಸ್ತಾಮ್ | ದೇಯಾಸುಃ || ದೇಯಾಃ | ದೇಯಾಸ್ತಮ್ | ದೇಯಾಸ್ತ || ದೇಯಾಸಮ್ | ದೇಯಾಸ್ವ | ದೇಯಾಸ್ಮ || ಆ.— ದಾಸೀಷ್ಟ | ದಾಸೀಯಾಸ್ತಾಮ್ | ದಾಸೀರನ್ || ದಾಸೀಷ್ಠಾಃ | ದಾಸೀಯಾಸ್ಥಾಮ್ | ದಾಸೀಧ್ವಮ್ || ದಾಸೀಯ | ದಾಸೀವಹಿ | ದಾಸೀಮಹಿ || **ಲುಙ್** || ಅದಾ + ಸ್ + ತ್. 'ಗಾತಿಸ್ಥಾ ಸಿಚಾ—' (ಸೂ.೪೪೦) ಸೂತ್ರದಿಂದ ಸಿಚಿಗೆ ಲುಕ್. ಅದಾತ್ | ಅದಾತಾಮ್ | ಅದುಃ || ಅದಾಃ | ಅದಾತಮ್ | ಅದಾತ || ಅದಾಮ್ | ಅದಾವ | ಅದಾಮ || ಆ.—ಅದಾ + ಸ್ + ತ ಎಂದಿರುವಾಗ ಇತ್ವ ಹೇಳುತ್ತಾನೆ.

ಸ್ಥಾ, ಘು ಗಳಿಗೆ ಇತ್ವ ಹೇಳುವ ಸೂತ್ರ.

**೬೨೬ ಸ್ಥಾಘ್ವೋರಿಚ್ಚ || ೧-೨-೧೭ ||**

**ಅನಯೋರಿದನ್ತಾದೇಶಃ ಸಿಚ್ಚ ಕಿತ್ಸ್ಯಾದಾತ್ಮನೇಪದೇ | ಅದಿತ | ಅದಾಸ್ಯತ್, ಅದಾಸ್ಯತ ||**

ಸ್ಥಾಘ್ವೋಃ, ಇತ್, ಚ || ತ್ರಿಪದ ಸೂತ್ರ. 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ 'ಕಿತ್', 'ಹನಃ ಸಿಚ್' ಸೂತ್ರದಿಂದ 'ಸಿಚ್' ಅನುವೃತ್ತವಾಗುತ್ತದೆ. ಪರಸ್ಮೈಪದದಲ್ಲಿ ಸಿಚಿಗೆ ಲೋಪಬರುವುದರಿಂದ ಈ ಕಾರ್ಯ ಆತ್ಮನೇಪದದಲ್ಲಿ ಮಾತ್ರ ಪ್ರವರ್ತಿಸುವುದರಿಂದ 'ಆತ್ಮನೇಪದೇ' ಎಂದು ಲಬ್ಧವಾಗುತ್ತದೆ. **ಸೂತ್ರಾರ್ಥ—** ಸ್ಥಾ ಧಾತುವಿಗೂ ಘುಸಂಜ್ಞೆಯಿರುವ ಧಾತುವಿಗೂ ಇತ್ ಅಂತಾದೇಶವಾಗಿ ಬರುತ್ತದೆ; ಆತ್ಮನೇಪದ ಪರವಾದಾಗ ಸಿಚ್ ಕಿತ್ತಾಗುತ್ತದೆ. ಪ್ರಕೃತ ಘುಸಂಜ್ಞಕಧಾತುವಿಗೆ ಅತ್ಮನೇಪದ ಪರದಲ್ಲಿದೆ. ಇಕಾರ ಅಂತಾದೇಶವಾಗಿ ಬಂದರೆ ಅದಿ + ಸ್ + ತ ಎಂದಾಗುತ್ತದೆ. ಈಗ ಹ್ರಸ್ವದ ಪರದಲ್ಲಿ ಸಿಚ್ ಬಂದು ಅದಕ್ಕೆ ಝಲ್ ಪರವಾದುದರಿಂದ ಅದಕ್ಕೆ 'ಹ್ರಸ್ವಾದಂಗಾತ್' ಸೂತ್ರದಿಂದ ಲುಕ್. ಅದಿತ | ಅದಿಷಾತಾಮ್ | ಅದಿಷತ || ಅದಿಥಾಃ | ಅದಿಷಾಥಾಮ್ | ಅದಿಢ್ವಮ್ || ಅದಿಷಿ | ಅದಿಷ್ವಹಿ | ಅದಿಷ್ಮಹಿ || **ಲೃಙ್** || ಅದಾಸ್ಯತ್ | ಆ.—ಅದಾಸ್ಯತ | ಇತ್ಯಾದಿ.

**|| ೪೪ || ಡುಧಾಞ್ = ಧಾರಣಪೋಷಣಯೋಃ || ದಧಾತಿ ||**

ಇಲ್ಲಿಯೂ ಡು, ಞ್ ಇತ್ತಾಗುತ್ತವೆ. ಞಕಾರ ಇತ್ತಾದುದರಿಂದ ಉಭಯಪದಿ. ಸಾಮಾನ್ಯವಾಗಿ ದಾ ಧಾತುವಿನಂತೇ ರೂಪವಾಗುತ್ತದೆ. ಧಾರೂಪವಾದುದರಿಂದ ಘುಸಂಜ್ಞೆ ಬರುತ್ತದೆ. **ಲಟ್** || ದಧಾತಿ | ದಧಾ + ತಸ್ ಎಂದಿರುವಾಗ 'ಶ್ನಾಭ್ಯ

ಸ್ತ್ರಯೋರಾತಃ' ಸೂತ್ರದಿಂದ ಆಲೋಪ. ದಧ್ + ತಸ್ ಎಂದಿರುವಾಗ ಆದಿಯ ದಕಾರಕ್ಕೆ ಧತ್ವ ಹೇಳುತ್ತಾನೆ.

ಧಾಞ್‌ನ ಬಶಿಗೆ ಭಷ್ ಹೇಳುವ ಸೂತ್ರ.

೬೨೭ ದಧಸ್ತಥೋಶ್ಚ || ೮-೨-೩೮ ||

**ದ್ವಿರುಕ್ತಸ್ಯ ಝಷನ್ತಸ್ಯ ಧಾಞೋ ಬಶೋ ಭಷ್ ಸ್ಯಾತ್ತಥೋಃ ಸ್ಧ್ವೋಶ್ಚ ಪರತಃ || ಧತ್ತಃ | ದಧತಿ | ದಧಾಸಿ | ಧತ್ಥಃ | ಧತ್ಥ | ಧತ್ತೇ | ದಧಾತೇ | ದಧತೇ | ಧತ್ಸೇ | ಧದ್ಧ್ವೇ | ಘ್ವಸೋರೇದ್ಧಾವಭ್ಯಾಸಲೋಪಶ್ಚ | ಧೇಹಿ | ಅದಧಾತ್ | ಅಧತ್ತ | ದಧ್ಯಾತ್, ದಧೀತ | ಧೇಯಾತ್, ಧಾಸೀಷ್ಟ | ಅಧಾತ್, ಅಧಿತ | ಅಧಾಸ್ಯತ್, ಅಧಾಸ್ಯತ ||**

ದಧಃ, ತಥೋಃ, ಚ || ತ್ರಿಪದ ಸೂತ್ರ. 'ಏಕಾಚೋ ಬಶೋ ಭಷ್ —' ಸೂತ್ರದಿಂದ 'ಬಶೋ', 'ಭಷ್', 'ಝಷನ್ತಸ್ಯ' ಪದಗಳು ಅನುವೃತ್ತವಾಗುತ್ತವೆ. ಇಲ್ಲಿಯ ಚಕಾರದಿಂದ 'ಸ್ಧ್ವೋಃ' ಸಮುಚ್ಚಿತವಾಗುತ್ತದೆ. ಧಾತುವಿಗೆ ದ್ವಿತ್ವ ಬಂದು ದಧಾರೂಪವಾದಾಗ ಅದರ ಷಷ್ಠೀರೂಪ ದಧಃ ಎಂದಾಗುತ್ತದೆ. **ಸೂತ್ರಾರ್ಥ**— ದ್ವಿರುಕ್ತವಾದ ಝಷನ್ತವಾದ ಧಾ ಧಾತುವಿನ ಬಶಿಗೆ ತ, ಥಸ್ ಮತ್ತು ಸ, ಧ್ವ ಪರವಾದಾಗ ಭಷ್ ಆದೇಶ ಬರುತ್ತದೆ. ದ್ವಿರುಕ್ತವಾದ ಝಷನ್ತ ಧಾ ಧಾತು ದಧ್, ಇದಕ್ಕೆ ಪ್ರಕೃತ ತಸ್ ಪರವಾಗಿದೆ. ಇದರ ಬಶ್ ಆದಿ ದಕಾರ ಇದಕ್ಕೆ ಭಷ್ ಬಂದರೆ ಧದ್ + ತಸ್ ಎಂದಾಗುತ್ತದೆ. 'ಖರಿಚ' ಧತ್ + ತಸ್ = ಧತ್ತಃ | ದಧತಿ || ದಧಾಸಿ | ಧತ್ಥಃ || ಧತ್ಥ || ದಧಾಮಿ ದಧ್ವಃ | ದಧ್ಮಃ || **ಆ.**— ತ, ಥ ಪರವಾದಾಗ ಧತ್ವ. ಧತ್ತೇ ದಧಾತೇ | ದಧತೇ || ಧತ್ಸೇ ಸ ಪರವಾದುದರಿಂದ ಧತ್ವ. ದಧಾಥೇ | ಧದ್ಧ್ವೇ || ಧ್ವ ಪರವಾದುದರಿಂದ ಧತ್ವ. ದಧೇ ದಧ್ವಹೇ | ದಧ್ಮಹೇ |

**ಲಿಟ್** || ದಧೌ || ದಧತುಃ | ದಧುಃ || ದಾ ಧಾತುವಿನಂತೇ ರೂಪ. **ಆ.**— ದಧೇ | ದಧಾತೇ ದಧಿರೇ || ಇತ್ಯಾದಿ. **ಲುಟ್** || ಧಾತಾ | ಮ ಪು.— ಧಾತಾಸಿ, ಧಾತಾಸೇ ಇತ್ಯಾದಿ. **ಲೃಟ್** || ಧಾಸ್ಯತಿ | ಆ.—ಧಾಸ್ಯತೇ | ಇತ್ಯಾದಿ. **ಲೋಟ್** || ದಧಾತು, ಧತ್ತಾತ್ ಧತ್ತಾಮ್ | ದಧತು || ದಧಾ + ಹಿ ಎಂದಿರುವಾಗ 'ಘ್ವಸೋರೇದ್ಧಾವಭ್ಯಾಸಲೋಪಶ್ಚ' ಸೂತ್ರದಿಂದ ಏತ್ವಾಭ್ಯಾಸಲೋಪ. ಧೇಹಿ, ಧತ್ತಾತ್ | ಧತ್ತಮ್ | ಧತ್ತ || ದಧಾನಿ | ದಧಾವ ದಧಾಮ || **ಆ.**— ಧತ್ತಾಮ್ | ದಧಾತಾಮ್ | ದಧತಾಮ್ || ಧತ್ಸ್ವ | ದಧಾಥಾಮ್ | ಧದ್ಧ್ವಮ್ || ದಧೈ | ದಧಾವಹೈ | ದಧಾಮಹೈ || **ಲಙ್** || ಅದಧಾತ್ |ಅಧತ್ತಾಮ್ | ಅದಧುಃ || ಇತ್ಯಾದಿ. ಆ.—ಅಧತ್ತ | ಅದಧಾತಾಮ್ | ಅದಧತ || ಇತ್ಯಾದಿ. **ವಿಧಿಲಿಙ್** || ದಧ್ಯಾತ್ | **ಆ.**—ದಧೀತ | ಇತ್ಯಾದಿ. **ಆಶೀರ್ಲಿಙ್** || 'ಏರ್ಲಿಙ' ಏತ್ವ.

ಧೇಯಾತ್ | ಧೇಯಾಸ್ತಾಮ್ | ಧೇಯಾಸುಃ || ಇತ್ಯಾದಿ. ಆ.—ಧಾಸೀಷ್ಟ | ಧಾಸೀಯಾಸ್ತಾಮ್ | ಧಾಸೀರನ್ || ಇತ್ಯಾದಿ. **ಲುಙ್** || 'ಗಾತಿಸ್ಥಾ—' ಸೂತ್ರದಿಂದ ಸಿಚಿಗೆ ಲುಕ್. ಅಧಾತ್ | ಅಧಾತಾಮ್ | ಅಧುಃ || ಅಧಾಃ | ಅಧಾತಮ್ | ಅಧಾತ || ಅಧಾಮ್ ಅಧಾವ | ಅಧಾಮ || ಆ.— ಇತ್ವ. ಅಧಿತ | ಅಧಿಸಾತಾಮ್ | ಅಧಿಷತ || ಅಧಿಥಾಃ | ಅಧಿಷಾಥಾಮ್ | ಅಧಿಢ್ವಮ್ || ಅಧಿಷಿ | ಅಧಿಷ್ವಹಿ | ಅಧಿಷ್ಮಹಿ | **ಲೃಙ್** || ಅಧಾಸ್ಯತ್ | ಆ.—ಅಧಾಸ್ಯತ | ಇತ್ಯಾದಿ.

## || ೮೮ || ಣಿಜಿರ್ = ಶೌಚಪೋಷಣಯೋಃ
## (ಬಟ್ಟೆ ತೊಳೆಯುವುದು, ಪೋಷಿಸುವುದು.)

### ವಾ || (ಇರ ಇತ್ಸಂಜ್ಞಾ ವಾಚ್ಯಾ)

'ಣೋನಃ' ಸೂತ್ರದಿಂದ ಆದಿಯ ಣಕಾರಕ್ಕೆ ನಕಾರಾದೇಶ. ರೇಫಕ್ಕೆ ಮಾತ್ರ 'ಹಲಂತ್ಯಮ್' ಸೂತ್ರದಿಂದ ಇತ್ವ ಪ್ರಾಪ್ತವಾದರೆ ವಾರ್ತಿಕಕಾರರು ಇರಿಗೆ ಇತ್ ಸಂಜ್ಞೆ ಹೇಳಬೇಕೆಂದು ಹೇಳುತ್ತಾರೆ. **ವಾರ್ತಿಕಾರ್ಥ**—ಣಿಜಿರ್ ಧಾತುವಿನಲ್ಲಿ ಇರಿಗೆ ಇತ್ಸಂಜ್ಞೆ ಹೇಳಬೇಕು. ಆಗ ನಿಜ್ ಎಂದು ಧಾತುಸ್ವರೂಪವಾಗುತ್ತದೆ. ಶ್ಲು ನಿಮಿತ್ತವಾಗಿ ದ್ವಿತ್ವಾದಿಗಳು ಬಂದಾಗ ನಿನಿಜ್ + ತಿ ಎಂದಾದಾಗ ಅಭ್ಯಾಸಕ್ಕೆ ಗುಣ ಹೇಳುತ್ತಾನೆ.

ನಿಜಾದಿಗಳ ಅಭ್ಯಾಸಕ್ಕೆ ಗುಣ ಹೇಳುವ ಸೂತ್ರ.

### ೬೨೮. ಣಿಜಾಂ ತ್ರಯಾಣಾಂ ಗುಣಃ ಶ್ಲೌ || ೭-೪-೭೫ ||

**ಣಿಜ್ವಿಜ್ವಿಷಾಮಭ್ಯಾಸಸ್ಯ ಗುಣಃ ಸ್ಯಾತ್ । ಶ್ಲೌ । ನೇನೇಕ್ತಿ । ನೇನಿಕ್ತಃ । ನೇನಿಜತಿ || ನೇನಿಕ್ತೇ । ನಿನೇಜ, ನಿನಿಜೇ । ನೇಕ್ತಾ । ನೇಕ್ಷ್ಯತಿ, ನೇಕ್ಷ್ಯತೇ । ನೇನೇಕ್ತು । ನೇನಿಗ್ಧಿ ||**

ನಾಲ್ಕು ಪದಗಳುಳ್ಳ ಸೂತ್ರ. 'ಅತ್ರಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ' ಅನುವೃತ್ತಿ. 'ಣಿಜಾಮ್' ಎಂದು ಬಹುವಚನ ನಿರ್ದೇಶ ಮಾಡಿರುವುದರಿಂದ ಆದಿ ಎಂದು ಲಬ್ಧವಾಗುತ್ತದೆ. **ಸೂತ್ರಾರ್ಥ**—ನಿಜ್, ವಿಜ್, ವಿಷ್ ಈ ಮೂರು ಧಾತುಗಳ ಅಭ್ಯಾಸಕ್ಕೆ ಶ್ಲು ಪರದಲ್ಲಿರುವಾಗ ಗುಣ ಬರುತ್ತದೆ. ನಿನಿಜ್ + ತಿ ಎಂದಿರುವಾಗ ಅಭ್ಯಾಸಕ್ಕೆ ಗುಣ ಬಂದರೆ ನೇನಿಜ್ + ತಿ ಎಂದಾಗುತ್ತದೆ. ಪಿತ್ತಿನಲ್ಲಿ 'ಪುಗಂತ—' ಸೂತ್ರದಿಂದ ಗುಣ ಬಂದರೆ ನೇನೇಜ್ + ತಿ 'ಚೋಃಕುಃ', 'ಖರಿಚ.' ನೇನೇಕ್ + ತಿ = ನೇನೇಕ್ತಿ ಎಂದಾಗುತ್ತದೆ. ತಸಾದಿಗಳು ಙಿತ್ತಾದುದರಿಂದ ಪುಗಂತಗುಣವಿಲ್ಲ. ನೇನಿಕ್ತಃ | ನೇನಿಜತಿ || || ನೇನೇಜ್ + ಸಿ. 'ಚೋಃಕುಃ',

'ಖರಿಚ', 'ಆದೇಶಪ್ರತ್ಯಯಯೋಃ' ನೇನೇಕ್ ಷಿ=ನೇನೇಕ್ಷಿ | ನೇನಿಕ್ಥಃ | ನೇನಿಕ್ಥ || ನೇನೇಜ್ಮಿ | ನೇನಿಜ್ವಃ | ನೇನಿಜ್ಮಃ || ಆ.—ನೇನಿಕ್ತೇ | ನೇನಿಜಾತೇ | ನೇನಿಜತೇ || ನೇನಿಕ್ಷೇ | ನೇನಿಜಾಥೇ | ನೇನಿಗ್ಧ್ವೇ || ನೇನಿಜೇ | ನೇನಿಜ್ವಹೇ || ನೇನಿಜ್ಮಹೇ ||

ಲಿಟ್ || ನಿನಿಜ್+ಅ. ಪುಗಂತಗುಣ. ನಿನೇಜ | ನಿನಿಜತುಃ | ನಿನಿಜುಃ || ನಿನೇಜಿಥ, ನಿನೇಕ್ಥ | ನಿನಿಜಥುಃ | ನಿನಿಜ || ನಿನೇಜ | ನಿನಿಜಿವ | ನಿನಿಜಿಮ || ಆ.—ನಿನಿಜೇ | ನಿನಿಜಾತೇ | ನಿನಿಜಿರೇ || ನಿನಿಜಿಷೇ | ನಿನಿಜಾಥೇ ನಿನಿಜಿಧ್ವೇ || ನಿನಿಜೇ | ನಿನಿಜಿವಹೇ | ನಿನಿಜಿಮಹೇ || ಲುಟ್ || ನಿಜ್+ತಾ. ಪುಗನ್ತಗುಣ. ಕುತ್ವ, ಚರ್ತ್ವ. ನೇಕ್ತಾ | ನೇಕ್ತಾರೌ | ನೇಕ್ತಾರಃ || ನೇಕ್ತಾಸಿ | ನೇಕ್ತಾಸ್ಥಃ | ನೇಕ್ತಾಸ್ಥ || ನೇಕ್ತಾಸ್ಮಿ | ನೇಕ್ತಾಸ್ವಃ | ನೇಕ್ತಾಸ್ಮಃ || ಆ.—ನೇಕ್ತಾ | ನೇಕ್ತಾಸೇ | ಇತ್ಯಾದಿ. ಲೃಟ್ || ನೇಜ್+ಸ್ಯತಿ. ಕುತ್ವ, ಷತ್ವ. ನೇಕ್ಷ್ಯತಿ | ಆ.—ನೇಕ್ಷ್ಯತೇ | ಇತ್ಯಾದಿ. ಲೋಟ್ || ನೇನೇಕ್ತು, ನೇನಿಕ್ತಾತ್ | ನೇನಿಕ್ತಾಮ್ | ನೇನಿಜತು || ನೇನಿಜ್+ಹಿ. ಹಿ ಅಪಿತ್ತಾಗಿ ಙಿತ್ತಾದುದರಿಂದ ಗುಣವಿಲ್ಲ. 'ಹುಝಲ್ಭ್ಯೋ—' ಸೂತ್ರದಿಂದ ಹಿಗೆ ಧಿ ಆದೇಶ. ಕುತ್ವ, ಜಶ್ತ್ವ. ನೇನಿಗ್ಧಿ, ನೇನಿಕ್ತಾತ್ | ನೇನಿಕ್ತಮ್ | ನೇನಿಕ್ತ || ನೇನಿಜ್+ಆ (ಟ್) ನಿ ಎಂದಿರುವಾಗ ಲಘೂಪಧಗುಣ ಪ್ರಾಪ್ತವಾದರೆ ಅದಕ್ಕೆ ನಿಷೇಧ ಹೇಳುತ್ತಾನೆ.

ಲಘೂಪಧಗುಣನಿಷೇಧ ಹೇಳುವ ಸೂತ್ರ.

**೬೨೯. ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ || ೭-೩-೮೭ ||**

**ಲಘೂಪಧಗುಣೋ ನ ಸ್ಯಾತ್ | ನೇನಿಜಾನಿ | ನೇನಿಕ್ತಾಮ್ | ಅನೇನೇಕ್ | ಅನೇನಿಕ್ತಾಮ್ | ಅನೇನಿಜುಃ | ಅನೇನಿಜಮ್ | ಅನೇನಿಕ್ತ | ನೇನಿಜ್ಯಾತ್ | ನೇನಿಜೀತ | ನಿಜ್ಯಾತ್, ನಿಕ್ಷೀಷ್ಟ ||**

ನ, ಅಭ್ಯಸ್ತಸ್ಯ, ಅಚಿ, ಪಿತಿ, ಸಾರ್ವಧಾತುಕೇ || ಐದು ಪದಗಳುಳ್ಳ ಸೂತ್ರ. 'ಮಿದೇರ್ಗುಣಃ' ಸೂತ್ರದಿಂದ 'ಗುಣಃ' 'ಪುಗನ್ತ—' ಸೂತ್ರದಿಂದ 'ಲಘೂಪಧಸ್ಯ' ಪದವೂ ಅನುವೃತ್ತವಾಗುತ್ತವೆ. ಸೂತ್ರಾರ್ಥ—ಅಭ್ಯಸ್ತಕ್ಕೆ ಅಜಾದಿಯಾದ ಪಿತ್ತಾದ ಸಾರ್ವಧಾತುಕ ಪರದಲ್ಲಿರುವಾಗ ಲಘೂಪಧಗುಣವು ಬರುವುದಿಲ್ಲ. ಪ್ರಕೃತ ಅಭ್ಯಸ್ತ ನೇನಿಜ್, ಇದಕ್ಕೆ ಅಜಾದಿ ಪಿತ್ತಾದ ಸಾರ್ವಧಾತುಕ ಆನಿ ಪರವಾದುದರಿಂದ ಲಘೂಪಧಗುಣ ಬರುವುದಿಲ್ಲ. ವ, ಮ ಗಳಲ್ಲಿಯೂ ಪಿತ್ತಾದ ಆಟ್ ಬರುವುದರಿಂದ ಗುಣವಿಲ್ಲ. ನೇನಿಜಾನಿ | ನೇನಿಜಾವ | ನೇನಿಜಾಮ || ಆ.—ನೇನಿಕ್ತಾಮ್ | ನೇನಿಜಾತಾಮ್ | ನೇನಿಜತಾಮ್ || ನೇನಿಕ್ಷ್ವ | ನೇನಿಜಾಥಾಮ್ | ನೇನಿಗ್ಧ್ವಮ್ || ನೇನಿಜೈ | ನೇನಿಜಾವಹೈ | ನೇನಿಜಾಮಹೈ ||

**ಲಙ್** || ಅನೇನಿಜ್+ತ್. ಪುಗನ್ತಗುಣ. 'ಹಲ್ಙ್ಯಾಭ್ಯೋ—' ಸೂತ್ರದಿಂದ ತಲೋಪ. ಜಕಾರಕ್ಕೆ ಕುತ್ವ. 'ವಾವಸಾನೇ' ಚರ್ತ್ವವಿಕಲ್ಪ. ಅನೇನೇಕ್, ಅನೇನೇಗ್ | ಅನೇನಿಕ್ತಾಮ್ | ಅನೇನಿಜುಃ || ಅನೇನೇಕ್, ಅನೇನೇಗ್ | ಅನೇನಿಕ್ತಮ್ | ಅನೇನಿಕ್ತ || ಅನೇನಿಜಮ್ | ಅನೇನಿಜ್ವ | ಅನೇನಿಜ್ಮ || ಆ.— ಅನೇನಿಕ್ತ | ಅನೇನಿಜಾತಾಮ್ | ಅನೇನಿಜತ || ಅನೇನಿಕ್ಥಾಃ | ಅನೇನಿಜಾಥಾಮ್ | ಅನೇನಿಗ್ಧ್ವಮ್ || ಅನೇನಿಜಿ | ಅನೇನಿಜ್ವಹಿ | ಅನೇನಿಜ್ಮಹಿ || **ವಿಧಿಲಿಙ್** || ನೇನಿಜ್ಯಾತ್ | ನೇನಿಜ್ಯಾತಾಮ್ | ಇತ್ಯಾದಿ. ಆ. – ನೇನಿಜೀತ | ನೇನಿಜೀಯಾತಾಮ್ | ನೇನಿಜೀರನ್ || ಇತ್ಯಾದಿ. **ಆಶೀರ್ಲಿಙ್** || ನಿಜ್ಯಾತ್ | ನಿಜ್ಯಾಸ್ತಾಮ್ || ಇತ್ಯಾದಿ. ಆ.— ನಿಜ್+ಸೀಷ್ಟ. 'ಲಿಙ್‌ಸಿಚಾವಾತ್ಮನೇಪದೇಷು' ಸೂತ್ರದಿಂದ ಲಿಙ್ ಕಿತ್ತಾದುದರಿಂದ ಲಘೂಪಧಗುಣವಿಲ್ಲ. ಕುತ್ವ, ಷತ್ವ. ನಿಕ್ಷೀಷ್ಟ | ನಿಕ್ಷೀಯಾಸ್ತಾಮ್ | ನಿಕ್ಷೀರನ್ || ನಿಕ್ಷೀಷ್ಠಾಃ | ನಿಕ್ಷೀಯಾಸ್ಥಾಮ್ | ನಿಕ್ಷೀಢ್ವಮ್ || ನಿಕ್ಷೀಯ | ನಿಕ್ಷೀವಹಿ | ನಿಕ್ಷೀಮಹಿ || **ಲುಙ್** || ಅನಿಜ್+ಚ್ಲಿ+ತ್ ಎಂದಿರುವಾಗ ಚ್ಲಿಗೆ ವಿಕಲ್ಪವಾಗಿ ಅಙ್ ಅದೇಶ ಹೇಳುತ್ತಾನೆ.

ಚ್ಲಿಗೆ ಅಙ್‌ವಿಕಲ್ಪ ಹೇಳುವ ಸೂತ್ರ.

**೬೩೦. ಇರಿತೋ ವಾ || ೩-೧-೫೭ ||**

**ಇರಿತೋ ಧಾತೋಶ್ಚ್ಲೇರಙ್ ವಾ ಪರಸ್ಮೈಪದೇಷು || ಅನಿಜತ್, ಅನೈಕ್ಷೀತ್ | ಅನಿಕ್ತ | ಅನೇಕ್ಷ್ಯತ ||**

ಇತಿ ಜುಹೋತ್ಯಾದಯಃ

ಇರಿತಃ, ವಾ || ದ್ವಿಪದ ಸೂತ್ರ. 'ಧಾತೋರೇಕಾಚಃ—' ಸೂತ್ರದಿಂದ 'ಧಾತೋಃ', 'ಚ್ಲೇಃ ಸಿಚ್', ಸೂತ್ರದಿಂದ 'ಚ್ಲೇಃ', 'ಅಸ್ಯತಿವಕ್ತಿ—' ಸೂತ್ರದಿಂದ 'ಅಙ್', 'ಪುಷಾದಿದ್ಯುತಾದಿ—' ಸೂತ್ರದಿಂದ 'ಪರಸ್ಮೈಪದೇಷು' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**— ಇರ್ ಇತ್ತಾದ ಧಾತುವಿನ ಪರದಲ್ಲಿರುವ ಚ್ಲಿಗೆ ಪರಸ್ಮೈಪದಪರದಲ್ಲಿರುವಾಗ ಅಙ್ ಆದೇಶ ವಿಕಲ್ಪವಾಗಿ ಬರುತ್ತದೆ. ನಿಜ್, ಇರಿತ್ತಾದ ಧಾತು. ತ್ ಪರಸ್ಮೈಪದ. ಅಙ್ ಬಂದರೆ ಅದು ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಅನಿಜತ್ | ಅನಿಜತಾಮ್ | ಅನಿಜನ್ || ಅನಿಜಃ | ಅನಿಜತಮ್ | ಅನಿಜತ || ಅನಿಜಮ್ | ಅನಿಜಾವ | ಅನಿಜಾಮ || ಅಙ್ ಬಾರದಿದ್ದರೆ ಸಿಚ್. ಅನಿಜ್+ಸ್+ಈತ್. 'ವದವ್ರಜ—' ಸೂತ್ರದಿಂದ ಉಪಧೆಗೆ ವೃದ್ಧಿ. ಕುತ್ವ, ಷತ್ವ. ಅನೈಕ್ಷೀತ್ | ಅನೈಜ್+ಸ್+ತಾಮ್. 'ಝಲೋ ಝಲಿ' ಸಲೋಪ, ಕುತ್ವ, ಚರ್ತ್ವ. ಅನೈಕ್ತಾಮ್ | ಅನೈಕ್ಷುಃ || ಅನೈಕ್ಷೀಃ |

ಅನ್ಯೈಕ್ತಮ್ | ಅನ್ಯೈಕ್ತ || ಅನ್ಯೈಕ್ಷಮ್ | ಅನ್ಯೈಕ್ಷ್ವ | ಅನ್ಯೈಕ್ಷ್ಮ || ಆ.—ಅನಿಜ್+ಸ್+ತ. 'ಝಲೋ ಝಲಿ' ಸಲೋಪ. ಅನಿಜ್+ತ. ಕುತ್ವ, ಚರ್ತ್ವ ಅನಿಕ್ತ | ಅನಿಜ್+ಸ್+ಆತಾಮ್. ಕುತ್ವ, ಷತ್ವ. ಅನಿಕ್ಷಾತಾಮ್ | ಅನಿಕ್ಷತ || ಅನಿಕ್ಥಾಃ | ಅನಿಕ್ಷಾಥಾಮ್ | ಅನಿಗ್ಧ್ವಮ್ || ಅನಿಕ್ಷಿ | ಅನಿಕ್ಷ್ವಹಿ | ಅನಿಕ್ಷ್ಮಹಿ || ಲೃಙ್ || ಅನೇಕ್ಷ್ಯತ್ | ಆ.—ಅನೇಕ್ಷ್ಯತ | ಅನೇಕ್ಷ್ಯೇತಾಮ್ | ಇತ್ಯಾದಿ.

ಈ ರೀತಿ ಜುಹೋತ್ಯಾದಿಗಣ ಮುಗಿದಿದೆ.

# ೪. ಅಥ ದಿವಾದಯಃ

**|| ೮೭ || ದಿವು—ಕ್ರೀಡಾ, ವಿಜಿಗೀಷಾ, ವ್ಯವಹಾರ, ದ್ಯುತಿ, ಸ್ತುತಿ ಮೋದ, ಮದ, ಸ್ವಪ್ನ, ಕಾನ್ತಿ. ಗತಿಷು ||**

ಇದು ನಾಲ್ಕನೆಯ ಗಣ. ದಿವ್ ಧಾತುವೇ ಮೊದಲಾದುದರಿಂದ ದಿವಾದಿಗಣ ಎಂದು ಹೇಳಿದೆ. ಇದಕ್ಕೆ ಶ್ಯನ್‌ವಿಕರಣ ಮುಂದೆ ಹೇಳುತ್ತಾನೆ. ದಿವು ಧಾತುವಿಗೆ ಹತ್ತು ಅರ್ಥಗಳಿವೆ. ಕ್ರೀಡಾ—ಆಟವಾಡುವುದು; ವಿಜಿಗೀಷಾ—ಜಯಿಸುವ ಇಚ್ಛೆ; ವ್ಯವಹಾರ—ಲೇವಾದೇವಿ; ದ್ಯುತಿ—ಪ್ರಕಾಶ; ಸ್ತುತಿ—ಸ್ತೋತ್ರಮಾಡುವುದು; ಮೋದ—ಸಂತೋಷಪಡುವುದು; ಮದ—ಗರ್ವ; ಸ್ವಪ್ನ—ಮಲಗುವುದು; ಕಾನ್ತಿ—ಇಚ್ಛೆಪಡುವುದು; ಗತಿ—ಗಮನ; ಈ ಅರ್ಥಗಳಲ್ಲಿ ದಿವು ಧಾತು ಪ್ರಯುಕ್ತವಾಗುತ್ತದೆ. ಈಗ ಲಡಾದಿಗಳಲ್ಲಿ ಶಪಿಗೆ ಬದಲಾಗಿ ಶ್ಯನ್‌ವಿಕರಣ ಹೇಳುತ್ತಾನೆ.

ಶ್ಯನ್‌ವಿಕರಣ ಹೇಳುವ ಸೂತ್ರ.

**೭೩೧. ದಿವಾದಿಭ್ಯಃ ಶ್ಯನ್ ||೩–೧–೬೯ ||**

**ಶಪೋಽಪವಾದಃ | ಹಲಿ ಚೇತಿ ದೀರ್ಘಃ | ದೀವ್ಯತಿ | ದಿದೇವ |**

ದೇವಿತಾ ದೇವಿಷ್ಯತಿ | ದೀವ್ಯತು | ಅದೀವ್ಯತ್ | ದೀವ್ಯೇತ್ | ದೀವ್ಯಾತ್ | ಅದೇವೀತ್ | ಅದೇವಿಷ್ಯತ್ ||

**|| ೮೭ || ಏವಂ ಷಿವು—ತಂತುಸಂತಾನೇ (ಹೊಲಿಯುವುದು.)**

ದ್ವಿಪದ ಸೂತ್ರ. 'ಕರ್ತರಿ ಶಪ್' ಸೂತ್ರದಿಂದ "ಕರ್ತರಿ', "ಸಾರ್ವಧಾತುಕೇ' ಯಕ್' ಸೂತ್ರದಿಂದ 'ಸಾರ್ವಧಾತುಕೇ' ಪದಗಳು ಅನುವೃತ್ತವಾಗುತ್ತವೆ.

**ಸೂತ್ರಾರ್ಥ**— ಕರ್ತ್ರರ್ಥಕವಾದ ಸಾರ್ವಧಾತುಕ ಪ್ರತ್ಯಯಗಳು ಪರವಾದಾಗ ದಿವಾದಿಧಾತುಗಳಿಗೆ ಶ್ಯನ್‌ವಿಕರಣ ಬರುತ್ತದೆ. ಧಾತುಸಾಮಾನ್ಯಕ್ಕೆ ಶಪ್ ಬರುತ್ತಿರುವಾಗ ಶ್ಯನ್ ಹೇಳಿದುದರಿಂದ ಅದಕ್ಕೆ ಇದು ಅಪವಾದ. ಶ್ಯನಿನಲ್ಲಿ 'ಲಶಕ್ವತದ್ಧಿತೇ' ಸೂತ್ರದಿಂದ ಶಕಾರವೂ 'ಹಲಂತ್ಯಮ್' ಸೂತ್ರದಿಂದ ನಕಾರವೂ ಇತ್ತಾಗುತ್ತವೆ. ಆಗ ಯ ಬಂದರೆ ದಿವ್ + ಯ + ತಿ ಎಂದಾಗುತ್ತದೆ. ವಾಂತಧಾತುವಾದುದರಿಂದ 'ಹಲಿ ಚ' ಸೂತ್ರದಿಂದ ಉಪಧಾದೀರ್ಘ. ದೀವ್ಯತಿ | ದೀವ್ಯ ಅಂಗ. ದೀವ್ಯತಃ | ದೀವ್ಯ+ಅನ್ತಿ. 'ಅತೋ ಗುಣೇ' ಪರರೂಪ. ದೀವ್ಯನ್ತಿ || ದೀವ್ಯಸಿ | ದೀವ್ಯಥಃ | ದೀವ್ಯಥ || ದೀವ್ಯಾಮಿ | ದೀವ್ಯಾವಃ | ದೀವ್ಯಾಮಃ || (ಅತೋದೀರ್ಘೋ ಯಞಿ' ಸೂತ್ರದಿಂದ ದೀರ್ಘ ಬಂದಿದೆ.)

**ಲಿಟ್** || ದಿವ್‌ದಿವ್+ಅ. ದಿದಿವ್+ಅ. ಪುಗನ್ತಗುಣ. ದಿದೇವ | ದಿದಿವ್ ಅಂಗ. ದಿದಿವತುಃ | ದಿದಿವುಃ || ದಿದೇವಿಥ | ದಿದಿವಥುಃ | ದಿದಿವ || ದಿದೇವ | ದಿದಿವಿವ | ದಿದಿವಿಮ || **ಲುಟ್** || ತಾಸಿಗೆ ಇಟ್. ಪುಗನ್ತಗುಣ. ದೇವಿತಾ | ದೇವಿತಾರೌ | ದೇವಿತಾರಃ || ದೇವಿತಾಸಿ | ದೇವಿತಾಸ್ಥಃ | ದೇವಿತಾಸ್ಥ || ದೇವಿತಾಸ್ಮಿ | ದೇವಿತಾಸ್ವಃ | ದೇವಿತಾಸ್ಮಃ || **ಲೃಟ್** || ಇಡಾಗಮ, ಷತ್ವ, ಗುಣ. ದೇವಿಷ್ಯತಿ ಇತ್ಯಾದಿ. **ಲೋಟ್** || ದೀವ್ಯ ಅಂಗ. ದೀವ್ಯತು | ದೀವ್ಯತಾತ್ | ದೀವ್ಯತಾಮ್ | ದೀವ್ಯನ್ತು || ದೀವ್ಯ, ದೀವ್ಯತಾತ್ | ದೀವ್ಯತಮ್ | ದೀವ್ಯತ || ದೀವ್ಯಾನಿ | ದೀವ್ಯಾವ | ದೀವ್ಯಾಮ || **ಲಙ್** || ಅದೀವ್ಯ ಅಂಗ. ಅದೀವ್ಯತ್ (ಅಭವತ್‌ವತ್). **ವಿಧಿಲಿಙ್** || ದೀವ್ಯ ಅಂಗ. ಯಾಸುಟಿಗೆ 'ಅತೋ ಯೇಯಃ' ಸೂತ್ರದಿಂದ ಇಯಾದೇಶ. ದೀವ್ಯೇತ್ (ಭವೇತ್‌ವತ್). **ಆಶೀರ್ಲಿಙ್** | ದಿವ್ + ಯಾತ್. 'ಹಲಿ ಚ' ಸೂತ್ರದಿಂದ ಉಪಧಾದೀರ್ಘ. ದೀವ್ಯಾತ್ | ದೀವ್ಯಾಸ್ತಾಮ್ | ದೀವ್ಯಾಸುಃ || ಇತ್ಯಾದಿ (ಭೂಯಾತ್‌ವತ್). **ಲುಙ್** || ಅದಿವ್ + ಇಸ್ ಈತ್. 'ಇಟ ಈಟಿ' ಸಲೋಪ. ಪುಗಂತಗುಣ. ಅದೇವೀತ್ | ಅದೇವಿಷ್ಟಾಮ್ | ಅದೇವಿಷುಃ || ಅದೇವೀಃ | ಅದೇವಿಷ್ಟಮ್ | ಅದೇವಿಷ್ಟ || ಅದೇವಿಷಮ್ | ಅದೇವಿಷ್ವ | ಅದೇವಿಷ್ಮ || **ಲೃಙ್** || ಅದೇವಿಷ್ಯ ಅಂಗ. ಅದೇವಿಷ್ಯತ್ (ಅಭವಿಷ್ಯತ್‌ವತ್).

**ಷಿವು** ಧಾತುವೂ ಹೀಗೆಯೇ ರೂಪಹೊಂದುತ್ತದೆ. 'ಧಾತ್ವಾದೇಃ ಷಃ ಸಃ' ಸೂತ್ರದಿಂದ ಆದಿಯ ಷಕಾರಕ್ಕೆ ಸಕಾರಾದೇಶ ಬರುತ್ತದೆ. ಕ್ರಮವಾಗಿ ಸೀವ್ಯತಿ | ಸಿಷೇವ | ಸೇವಿತಾ | ಸೇವಿಷ್ಯತಿ | ಸೀವ್ಯತು, ಸೀವ್ಯತಾತ್ | ಅಸೀವ್ಯತ್ | ಸೀವ್ಯೇತ್ | ಸೀವ್ಯಾತ್ | ಅಸೇವೀತ್ | ಅಸೇವಿಷ್ಯತ್ | ಹೀಗೆ ರೂಪಗಳಾಗುತ್ತವೆ.

|| ೮೮ || **ನೃತೀ— ಗಾತ್ರವಿಕ್ಷೇಪೇ (ಕುಣಿಯುವುದು.)**

**ನೃತ್ಯತಿ | ನನರ್ತ | ನರ್ತಿತಾ ||**

ಇದರಲ್ಲಿ ಈಕಾರ ಇತ್. ನೃತ್+ಯ+ತಿ. ಶ್ಯನ್ ಸಾರ್ವಧಾತುಕವಾದರೂ ಅನು ಅಪಿತ್ತಾದುದರಿಂದ ಙಿತ್ತಾಗುವುದರಿಂದ ಪುಗನ್ತ ಗುಣ ಬರುವುದಿಲ್ಲ. ನೃತ್ಯತಿ | ನೃತ್ಯತಃ | ಇತ್ಯಾದಿ. ನೃತ್ಯ ಅಂಗ.

**ಲಿಟ್** ॥ ನೃತ್ನೃತ್+ಅ. 'ಉರತ್', 'ಹಲಾದಿಃ ಶೇಷಃ' ನನೃತ್+ಅ. ಪುಗನ್ತಗುಣ. ನನರ್ತ | ನನೃತತುಃ | ನನೃತುಃ ॥ ನನರ್ತಿಥ | ನನೃತಥುಃ | ನನೃತ ॥ ನನರ್ತ | ನನೃತಿವ | ನನೃತಿಮ ॥ **ಲುಟ್** ॥ ಪುಗನ್ತಗುಣ. ನರ್ತಿತಾ | ನರ್ತಿತಾರೌ | ನರ್ತಿತಾರಃ ॥ ಇತ್ಯಾದಿ. **ಲೃಟ್**ನಲ್ಲಿ ಇಟ್ ವಿಕಲ್ಪ ಹೇಳುತ್ತಾನೆ.

ಸಕಾರಾದಿ ಆರ್ಧಧಾತುಕಕ್ಕೆ ಇಡ್ವಿಕಲ್ಪ ಹೇಳುವ ಸೂತ್ರ.

**೬೦೨. ಸೇಽಸಿಚಿ ಕೃತಚೃತಚ್ಛೃದತೃದನೃತಃ ॥ ೭-೨-೫೭ ॥**

**ಏಭ್ಯಃ ಪರಸ್ಯ ಸಿಜ್ಭಿನ್ನಸ್ಯ ಸಾದೇರಾರ್ಧಧಾತುಕಸ್ಯೇಡ್ವಾ । ನರ್ತಿಷ್ಯತಿ । ನರ್ತ್ಸ್ಯತಿ । ನೃತ್ಯತು । ಅನೃತ್ಯತ್ । ನೃತ್ಯೇತ್ । ನೃತ್ಯಾತ್ । ಅನರ್ತೀತ್ । ಅನರ್ತಿಷ್ಯತ್, ಅನರ್ತ್ಸ್ಯತ್ ॥**

ಸೇ. ಅಸಿಚಿ ,ಕೃತಚೃತಚ್ಛೃದತೃದನೃತಃ ॥ ತ್ರಿಪದ ಸೂತ್ರ. ಕೃತಾದಿಗಳು ಐದು ಧಾತುಗಳು ಸಮಾಹಾರ ದ್ವಂದ್ವದ ಮೇಲೆ ಪಂಚಮೀ. ಪಂಚಮಿಗೆ ಪ್ರಾಬಲ್ಯವಿರುವುದರಿಂದ 'ಸೇ', 'ಅಸಿಚಿ' ಸಪ್ತಮ್ಯಂತಗಳಿಗೆ ಷಷ್ಠ್ಯರ್ಥ ಹೇಳಬೇಕು. 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ 'ಆರ್ಧಧಾತುಕಸ್ಯ', 'ಉದಿತೋ ವಾ' ಸೂತ್ರದಿಂದ 'ವಾ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ** – ಕೃತ, ಚೃತ, ಛೃದ, ತೃದ, ನೃತ ಧಾತುಗಳ ಪರದಲ್ಲಿರುವ ಸಿಚ್ ಭಿನ್ನವಾದ ಸಕಾರಾದಿ ಆರ್ಧಧಾತುಕಕ್ಕೆ ಇಡಾಗಮ ವಿಕಲ್ಪವಾಗಿ ಬರುತ್ತದೆ. ಪ್ರಕೃತ ನೃತ್ ಧಾತುವಿನ ಪರದಲ್ಲಿ ಸಕಾರಾದಿಯಾದ ಸ್ಯ ಎಂಬ ಆರ್ಧಧಾತುಕವಿದೆ. ಅದಕ್ಕೆ ಇಟ್ ಬಂದರೆ ನರ್ತಿಷ್ಯತಿ | ನರ್ತಿಷ್ಯತಃ | ಇತ್ಯಾದಿ ರೂಪಗಳಾಗುತ್ತವೆ. ನರ್ತಿಷ್ಯ ಅಂಗ. ಇಡಾಗಮ ಬಾರದಿದ್ದರೆ ನರ್ತ್ಸ್ಯ ಅಂಗ. ನರ್ತ್ಸ್ಯತಿ | ನರ್ತ್ಸ್ಯತಃ | ಇತ್ಯಾದಿ.

**ಲೋಟ್** ॥ ನೃತ್ಯ ಅಂಗ. ನೃತ್ಯತು, ನೃತ್ಯತಾತ್ ಇತ್ಯಾದಿ (ದೀವ್ಯತುವತ್) **ಲಙ್** ॥ ಅನೃತ್ಯ ಅಂಗ. ಅನೃತ್ಯತ್ | ಅನೃತ್ಯತಾಮ್ | ಅನೃತ್ಯನ್ ॥ ಇತ್ಯಾದಿ. (ಅಭವತ್‌ವತ್). **ವಿಧಿಲಿಙ್** ॥ ನೃತ್ಯೇತ್ | ನೃತ್ಯೇತಾಮ್ | ನೃತ್ಯೇಯುಃ ॥ ಇತ್ಯಾದಿ. **ಆಶೀರ್ಲಿಙ್** ॥ ನೃತ್ಯಾತ್ | ನೃತ್ಯಾಸ್ತಾಮ್ | ನೃತ್ಯಾಸುಃ ॥ ಇತ್ಯಾದಿ. **ಲುಙ್** ॥ ಪುಗಂತಗುಣ, 'ಇಟ ಈಟಿ' ಸಲೋಪ. ಅನರ್ತೀತ್ | ಅನರ್ತಿಷ್ಟಾಮ್ | ಅನರ್ತಿಷುಃ ॥ ಅನರ್ತೀಃ | ಅನರ್ತಿಷ್ಟಮ್ | ಅನರ್ತಿಷ್ಟ ॥ ಅನರ್ತಿಷಮ್ | ಅನರ್ತಿಷ್ವ | ಅನರ್ತಿಷ್ಮ ॥ ಸಿಚ್ ಆದುದರಿಂದ ಇಡಾಗಮವಿಕಲ್ಪವಿಲ್ಲ. **ಲೃಙ್** ॥ ಸ್ಯಕ್ಕೆ ಹಿಂದಿನಂತೆ ಇಡ್ವಿಕಲ್ಪ. ಅನರ್ತ್ಸ್ಯತ್ ॥ ಇತ್ಯಾದಿ.

## || ೮೯ || ತ್ರಸೀ—ಉದ್ವೇಗೇ (ಭಯಪಡುವುದು.)

**ವಾ ಭ್ರಾಶೇತಿ ಶ್ಯನ್ವಾ । ತ್ರಸ್ಯತಿ, ತ್ರಸತಿ । ತತ್ರಾಸ ।**

ಈದಿತ್ತಾದ ಧಾತು. ಇದಕ್ಕೆ ಸಾರ್ವಧಾತುಕಗಳಲ್ಲಿ 'ವಾ ಭ್ರಾಶಭ್ಲಾಶ—' (ಸೂ. ೪೮೭) ಸೂತ್ರದಿಂದ ಶ್ಯನ್ ವಿಕಲ್ಪವಾಗಿ ಬರುತ್ತದೆ. ಶ್ಯನ್ ಬಾರದಿದ್ದರೆ ಸಾಮಾನ್ಯವಾದ ಶಪ್ ವಿಕರಣವೇ ಬರುತ್ತದೆ. ಆಗ ಲಟ್, ಲೋಟ್, ಲಙ್, ವಿಧಿಲಿಙ್‌ಗಳಲ್ಲಿ ಎರಡೆರಡು ರೂಪಗಳಾಗುತ್ತದೆ. ಶ್ಯನ್ ಬಂದರೆ ತ್ರಸ್ಯ ಅಂಗ. ಬಾರದಿದ್ದರೆ ತ್ರಸ ಅಂಗ. ತ್ರಸ್ಯತಿ, ತ್ರಸತಿ (ಭವತಿವತ್)

**ಲಿಟ್** || ತ್ರಸ್‌ತ್ರಸ್+ಅ. 'ಹಲಾದಿಃ ಶೇಷಃ' ತತ್ರಸ್+ಅ. 'ಅತ ಉಪಧಾಯಾಃ' ತತ್ರಾಸ. ತತ್ರಸ್ ಅಂಗ. ಇಲ್ಲಿ ಧಾತುವಿನ ಅಕಾರವು ಸಂಯೋಗವುಳ್ಳ ವ್ಯಂಜನಗಳ ಮಧ್ಯದಲ್ಲಿರುವುದರಿಂದ 'ಅತ ಏಕಹಲ್ ..' ಸೂತ್ರದಿಂದ ಏತ್ವಾಭ್ಯಾಸಲೋಪಗಳು ಬರುವುದಿಲ್ಲ. ಅದಕ್ಕೋಸ್ಕರ ವಿಶೇಷ ಸೂತ್ರವನ್ನು ಹೇಳುತ್ತಾನೆ.

ತ್ರಸಾದಿಗಳಿಗೆ ಏತ್ವಾಭ್ಯಾಸಲೋಪ ಹೇಳುವ ಸೂತ್ರ.

**೬೩೩. ವಾ ಜೄಭ್ರಮುತ್ರಸಾಮ್ || ೬-೪-೧೨೪ ||**

**ಏಷಾಂ ಕಿತಿ ಲಿಟಿ ಸೇಟಿ ಥಲಿ ಚ ಏತ್ವಾಭ್ಯಾಸಲೋಪೌ ವಾ । ತ್ರೇಸತುಃ । ತತ್ರಸತುಃ । ತ್ರೇಸಿಥ, ತತ್ರಸಿಥ । ತ್ರಸಿತಾ ||**

ದ್ವಿಪದ ಸೂತ್ರ. 'ಅತ ಏಕಹಲ್ ಮಧ್ಯೇ' ಸೂತ್ರದಿಂದ 'ಲಿಟಿ' ಘ್ವಸೋರೇದ್ಧಾ—' ಸೂತ್ರದಿಂದ 'ಏತ್', 'ಗಮುಹನ—' ಸೂತ್ರದಿಂದ 'ಕಿತಿ' ಪದಗಳು ಅನುವೃತ್ತವಾಗುತ್ತವೆ. 'ಥಲಿ ಚ ಸೇಟಿ' ಸೂತ್ರ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಜೄ, ಭ್ರಮು, ತ್ರಸ್ ಧಾತುಗಳಿಗೆ ಕಿತ್ತಾದ ಲಿಟ್ ಪರದಲ್ಲಿರುವಾಗ, ಇಟ್ ಸಹಿತ ಥಲ್ ಪರವಾದಾಗಲೂ ಅಕಾರಕ್ಕೆ ಏತ್ವವೂ ಅಭ್ಯಾಸಲೋಪವೂ ವಿಕಲ್ಪವಾಗಿ ಬರುತ್ತವೆ. ಪ್ರಕೃತ ತ್ರಸ್ ಧಾತುವಿಗೆ ಕಿತ್ತಾದ ಲಿಟ್ ಪರದಲ್ಲಿದೆ. ಆದುದರಿಂದ ಏತ್ವಾಭ್ಯಾಸಲೋಪ ಬಂದರೆ ತ್ರೇಸತುಃ । ಬಾರದಿದ್ದರೆ ತತ್ರಸತುಃ ಎಂದಾಗುತ್ತದೆ. ಹೀಗೆ ದ್ವಿಬಹುವಚನಗಳಲ್ಲಿ ಎರಡೆರಡು ರೂಪಗಳು. ತ್ರೇಸುಃ, ತತ್ರಸುಃ । ಥಲಿನಲ್ಲಿ ಎರಡು ರೂಪಗಳು. ತ್ರೇಸಿಥ, ತತ್ರಸಿಥ । ತ್ರೇಸಥುಃ, ತತ್ರಸಥುಃ । ತ್ರೇಸ, ತತ್ರಸ || ತತ್ರಾಸ, ತತ್ರಸ । ತ್ರೇಸಿವ, ತತ್ರಸಿವ । ತ್ರೇಸಿಮ, ತತ್ರಸಿಮ ||

**ಲುಟ್** || ತ್ರಸಿತಾ । **ಲೃಟ್** || ತ್ರಸಿಷ್ಯತಿ । **ಲೋಟ್** || ಶ್ಯನ್ ವಿಕಲ್ಪ. ತ್ರಸ್ಯತು, ತ್ರಸ್ಯತಾತ್, ತ್ರಸತು. ತ್ರಸತಾತ್ ಇತ್ಯಾದಿ. **ಲಙ್** || ಅತ್ರಸ್ಯತ್, ಅತ್ರಸತ್ । ಇತ್ಯಾದಿ. **ವಿಧಿಲಿಙ್** || ತ್ರಸ್ಯೇತ್, ತ್ರಸೇತ್ (ಭವೇತ್‌ವತ್)

**ಆಶೀರ್ಲಿಙ್** || ತ್ರಸ್ಯಾತ್ | ತ್ರಸ್ಯಾಸ್ತಾಮ್ | ಇತ್ಯಾದಿ. **ಲುಙ್** || ಅತ್ರಸೀತ್ | ಅತ್ರಸಿಷ್ಟಾಮ್ | ಅತ್ರಸಿಷುಃ || ಅತ್ರಸೀಃ | ಅತ್ರಸಿಷ್ಟಮ್ | ಅತ್ರಸಿಷ್ಟ || ಅತ್ರಸಿಷಮ್ | ಅತ್ರಸಿಷ್ವ | ಅತ್ರಸಿಷ್ಮ || **ಲೃಙ್** || ಅತ್ರಸಿಷ್ಯತ್ ಇತ್ಯಾದಿ.

**|| ೯೦ || ಶೋ = ತನೂಕರಣೇ (ಚಿಕ್ಕದಾಗಿ ಮಾಡುವುದು.)**

ಓಕಾರಕ್ಕೆ ಲೋಪ ಹೇಳುವ ಸೂತ್ರ.

**೭೩೪. ಓತಃ ಶ್ಯನಿ || ೭-೩-೭೧ ||**

ಲೋಪಃ ಸ್ಯಾತ್ | ಶ್ಯತಿ | ಶ್ಯತಃ | ಶ್ಯನ್ತಿ | ಶಶೌ | ಶಶತುಃ | ಶಾತಾ | ಶಾಸ್ಯತಿ ||

ಓದನ್ತವಾದ ಧಾತು. ಅನಿಟ್. ಶೋ + ತಿ ಎಂದಿರುವಾಗ ಶ್ಯನ್. ಶ್ಯನ್ ಪರವಾದಾಗ ಧಾತುವಿನ ಓಕಾರಕ್ಕೆ ಲೋಪ ಹೇಳುತ್ತಾನೆ. ದ್ವಿಪದ ಸೂತ್ರ. 'ಘೋರ್ಲೋಪಃ—' ಸೂತ್ರದಿಂದ 'ಲೋಪಃ' ಪದವು ಅನುವೃತ್ತವಾಗುತ್ತದೆ. **ಸೂತ್ರಾರ್ಥ**— ಓಕಾರಕ್ಕೆ ಶ್ಯನ್ ಪರದಲ್ಲಿರುವಾಗ ಲೋಪಬರುತ್ತದೆ. ಶೋ ಎಂಬಲ್ಲಿ ಓಕಾರಕ್ಕೆ ಲೋಪ ಬಂದರೆ ಶ್ + ಯ + ತಿ = ಶ್ಯತಿ ಎಂದು ರೂಪವಾಗುತ್ತದೆ. ಶ್ಯತಃ | ಶ್ಯನ್ತಿ || ಶ್ಯಸಿ | ಶ್ಯಥಃ | ಶ್ಯಥ || ಶ್ಯಾಮಿ | ಶ್ಯಾವಃ | ಶ್ಯಾಮಃ ||

ಲಿಟ್ || ಏಜನ್ತಧಾತುವಾದುದರಿಂದ 'ಆದೇಚ ಉಪದೇಶೇಽಶಿತಿ' ಸೂತ್ರದಿಂದ ಧಾತುವಿನ ಓಕಾರಕ್ಕೆ ಆತ್ವ. ಶಾ ಧಾತುವಾಗುತ್ತದೆ. ಅದಕ್ಕೆ ದ್ವಿತ್ವಾದಿಗಳು ಬಂದಾಗ ಶಶಾ + ಅ ಎಂದಿರುವಾಗ 'ಆತ ಔ ಣಲಃ' ಸೂತ್ರದಿಂದ ಣಲಿಗೆ ಔ ಆದೇಶ. ವೃದ್ಧಿ. ಶಶಾ + ಔ = ಶಶೌ. ಶಶಾ + ಅತುಸ್. 'ಆತೋ ಲೋಪ ಇಟಿ ಚ' ಸೂತ್ರದಿಂದ ಆಕಾರಲೋಪ. ಶಶತುಃ | ಶಶುಃ || ಭಾರದ್ವಾಜನಿಯಮದಿಂದ ಥಲಿಗೆ ವಿಕಲ್ಪ ಇಡಾಗಮ. ಇಟ್ ಬಂದಾಗ ಆಲೋಪ. ಶಶಿಥ, ಶಶಾಥ | ಶಶಥುಃ | ಶಶ || ಶಶೌ | ಶಶಿವ | ಶಶಿಮ || **ಲುಟ್** || 'ಆದೇಚ—' ಸೂತ್ರದಿಂದ ಆತ್ವ. ಶಾತಾ | ಶಾತಾರೌ | ಇತ್ಯಾದಿ. **ಲೃಟ್** || ಶಾಸ್ಯತಿ || **ಲೋಟ್** || ಶ್ಯತು, ಶ್ಯತಾತ್ | ಶ್ಯತಾಮ್ | ಶ್ಯನ್ತು || ಶ್ಯ, ಶತಾತ್ | ಶ್ಯತಮ್ | ಶ್ಯತ || ಶ್ಯಾನಿ | ಶ್ಯಾವ | ಶ್ಯಾಮ || **ಲಙ್** || ಅಶ್ಯತ್ | ಅಶ್ಯತಾಮ್ | ಅಶ್ಯನ್ || ಇತ್ಯಾದಿ. **ವಿಧಿಲಿಙ್** || ಶ್ಯೇತ್ | ಶ್ಯೇತಾಮ್ | ಶ್ಯುಃ || ಶ್ಯೇಃ | ಶ್ಯೇತಮ್ | ಶ್ಯೇತ || ಶ್ಯೇಯಮ್ | ಶ್ಯೇವ | ಶ್ಯೇಮ || **ಆಶೀರ್ಲಿಙ್** || ಶಾಯಾತ್ | ಶಾಯಾಸ್ತಾಮ್ | ಇತ್ಯಾದಿ. **ಲುಙ್** || ಅಶಿತ್ ಪ್ರತ್ಯಯಗಳಲ್ಲಿ ಆತ್ವ. ಅಶಾ + ಸ್ + ತ್ ಎಂದಿರುವಾಗ ಸಿಚಿಗೆ ವಿಕಲ್ಪವಾಗಿ ಲುಕ್ ಹೇಳುತ್ತಾನೆ.

ಸಿಚಿಗೆ ವಿಕಲ್ಪವಾಗಿ ಲುಕ್ ಹೇಳುವ ಸೂತ್ರ.

೭೩೫. **ವಿಭಾಷಾ ಘ್ರಾಧೇಟ್‌ಶಾಚ್ಛಾಸಃ ॥ ೨-೪-೭೮ ॥**

**ಏಭ್ಯಃ ಸಿಚೋ ಲುಗ್ವಾ ಸ್ಯಾತ್ಪರಸ್ಮೈಪದೇ ಪರೇ । ಅಶಾತ್ । ಅಶಾತಾಮ್ । ಅಶುಃ । ಇಟ್‌ಸಕೌ । ಅಶಾಸೀತ್ । ಅಶಾಸಿಷ್ಟಾಮ್ ॥**

ದ್ವಿಪದ ಸೂತ್ರ. 'ಗಾತಿಸ್ಥಾಸಿಚಾ—' ಸೂತ್ರದಿಂದ 'ಸಿಚಃ', 'ಪರಸ್ಮೈಪದೇಷು', 'ಣ್ಯಕ್ಷತ್ರಿಯಾರ್ಷ—' ಸೂತ್ರದಿಂದ ಲುಕ್ ಪದಗಳೂ ಅನುವೃತ್ತ ವಾಗುತ್ತವೆ. ಸೂತ್ರದಲ್ಲಿ ಶಾ ಛಾ, ಸಾ— ಹೀಗೆ ಮೂರು ರೂಪಗಳು ಶೋ, ಛೋ, ಷೋ ಧಾತುಗಳಿಗೆ ಆತ್ವಮಾಡಿರುವುದರಿಂದ ಆಗಿವೆ. **ಸೂತ್ರಾರ್ಥ**–ಘ್ರಾ, ಧೇಟ್ ಶೋ, ಛೋ, ಷೋ ಧಾತುಗಳ ಪರದಲ್ಲಿರುವ ಸಿಚಿಗೆ ಪರಸ್ಮೈಪದ ಪರದಲ್ಲಿರುವಾಗ ವಿಕಲ್ಪವಾಗಿ ಲೋಪ ಬರುತ್ತವೆ. ಪ್ರಕೃತ ಶೋ ಧಾತುವಿಗೆ ಪರಸ್ಮೈಪದ ಪರದಲ್ಲಿರುವುದರಿಂದ ಸಿಚಿಗೆ ಲೋಪಬಂದರೆ ಅಶಾತ್ ಎಂದಾಗುತ್ತದೆ. ಅಶಾತಾಮ್ । ಅಶುಃ ॥ ಅಶಾಃ । ಅಶಾತಮ್ । ಅಶಾತ ॥ ಅಶಾಮ್ । ಅಶಾವ । ಅಶಾಮ ॥ ಸಿಚಿಗೆ ಲೋಪ ಬಾರದಿದ್ದರೆ 'ಆದೇಚ—' ಸೂತ್ರದಿಂದ ಆತ್ವ ಬಂದಮೇಲೆ, ಆದನ್ತವಾದುದರಿಂದ 'ಯಮರಮನಮಾತಾಂಸಕ್ಚ' ಸೂತ್ರದಿಂದ ಸಕಾಗಮ, ಸಿಚಿಗೆ ಇಡಾಗಮ ಬರುತ್ತವೆ. ಅಶಾಸ್ + ಇಸ್ + ಈತ್. 'ಇಟ ಈಟಿ' ಸಲೋಪ. ಅಶಾಸ್ + ಈತ್= ಅಶಾಸೀತ್ । ಅಶಾಸ್ + ಇಸ್ + ತಾಮ್. ಷತ್ವ, ಷ್ಟುತ್ವ. ಅಶಾಸಿಷ್ಟಾಮ್ । ಅಶಾಸಿಷುಃ ॥ ಅಶಾಸೀಃ । ಅಶಾಸಿಷ್ಟಮ್ । ಅಶಾಸಿಷ್ಟ ॥ ಅಶಾಸಿಷಮ್ । ಅಶಾಸಿಷ್ವ । ಅಶಾಸಿಷ್ಮ ॥

ಲೃಙ್ ॥ ಅಶಾಸ್ಯತ್ । ಅಶಾಸ್ಯತಾಮ್ । ಅಶಾಸ್ಯನ್ ॥ ಇತ್ಯಾದಿ.

॥ ೯೧ ॥ **ಛೋ= ಛೇದನೇ (ಕತ್ತರಿಸುವುದು.) ಛ್ಯತಿ ॥**

॥ ೯೨ ॥ **ಷೋಽನ್ತಕರ್ಮಣಿ (ನಾಶಮಾಡುವುದು.) ಸ್ಯತಿ ॥ ಸಸೌ ॥**

॥ ೯೩ ॥ **ದೋಽವಖಂಡನೇ (ತುಂಡುಮಾಡುವುದು.)**

**ದ್ಯತಿ । ದದೌ । ದೇಯಾತ್ । ಅದಾತ್ ॥**

ಮೂರು ಧಾತುಗಳೂ ಓದನ್ತವಾದುದರಿಂದ ಶೋ ಧಾತುವಿನಂತೇ ರೂಪಗಳಾಗುತ್ತವೆ.

**ಛೋ** ಧಾತುವಿಗೆ ಕ್ರಮವಾಗಿ ಛ್ಯತಿ । ಚಛೌ । ಛಾತಾ । ಛಾಸ್ಯತಿ । ಛ್ಯತು, ಛ್ಯತಾತ್ । ಅಚ್ಛ್ಯತ್ । ಛ್ಯೇತ್ । ಛಾಯಾತ್ । ಅಛಾತ್, ಅಛಾಸೀತ್ । ಅಛಾಸ್ಯತ್ । ರೂಪಗಳಾಗುತ್ತವೆ.

**ಷೋ** ಧಾತು 'ಧಾತ್ವಾದೇಃ ಷಃ ಸಃ' ಸೋ ಆಗುತ್ತದೆ. ಇದೂ ಕ್ರಮವಾಗಿ ಸ್ಯತಿ | ಸಸೌ | ಸಾತಾ | ಸಾಸ್ಯತಿ | ಸ್ಯತು, ಸ್ಯತಾತ್ | ಅಸ್ಯತ್ | ಸ್ಯೇತ್ | ಸಾಯಾತ್ | ಅಸಾತ್, ಅಸಾಸೀತ್ | ಅಸಾಸ್ಯತ್ | ಹೀಗೆ ರೂಪಹೊಂದುತ್ತದೆ.

**ದೋ** ಧಾತು. ಇದು ಅಶಿತ್ತಿನಲ್ಲಿ ದಾರೂಪ ಹೊಂದುವುದರಿಂದ ಘುಸಂಜ್ಞೆ ಹೊಂದುತ್ತದೆ. ಆಗ ಘುಸಂಜ್ಞಾಕಾರ್ಯಗಳು ಹೆಚ್ಚಾಗಿ ಬರುತ್ತವೆ. ದ್ಯತಿ | ದದೌ | ದಾತಾ | ದಾಸ್ಯತಿ | ದ್ಯತು | ಅದ್ಯತ್ | ದ್ಯೇತ್ | ದಾ-ಯಾತ್ ಎಂದಿರುವಾಗ 'ಏರ್ಲಿಙಿ' ಸೂತ್ರದಿಂದ ಏತ್ವ. ದೇಯಾತ್ | ದೇಯಾಸ್ತಾಮ್ | ದೇಯಾಸುಃ || ಇತ್ಯಾದಿ. **ಲುಙ್** || ಅದಾ + ಸ್ + ತ್ ಎಂದಿರುವಾಗ 'ಗಾತಿಸ್ಥಾಸಿಚಾ—' ಸೂತ್ರದಿಂದ ನಿತ್ಯವಾಗಿ ಸಿಚಿಗೆ ಲುಕ್. ಒಂದೇ ರೂಪ. ಅದಾತ್ | ಅದಾತಾಮ್ | ಅದುಃ || ಇತ್ಯಾದಿ. ಅದಾಸ್ಯತ್ ||

**|| ೯೪ || ವ್ಯಧ=ತಾಡನೇ (ಬಾಣ ಹೊಡೆಯುವುದು.)**

ಗ್ರಹಾದಿಗಳಿಗೆ ಸಂಪ್ರಸಾರಣ ಹೇಳುವ ಸೂತ್ರ.

**೬೩೭. ಗ್ರಹಿಜ್ಯಾವಯಿವ್ಯಧಿವಷ್ಟಿವಿಚತಿವೃಶ್ಚತಿಪೃಚ್ಛತಿಭೃಜ್ಜತೀನಾಂ ಙಿತಿ ಚ || ೬-೧-೧೬ ||**

**ಏಷಾಂ ಸಂಪ್ರಸಾರಣಂ ಸ್ಯಾತ್ ಕಿತಿ ಙಿತಿ ಚ | ವಿಧ್ಯತಿ | ವಿವ್ಯಾಧ, ವಿವಿಧತುಃ | ವಿವಿಧುಃ | ವಿವ್ಯಧಿಥ, ವಿವ್ಯದ್ಧ | ವ್ಯದ್ಧಾ | ವ್ಯತ್ಸ್ಯತಿ | ವಿಧ್ಯೇತ್ | ವಿಧ್ಯಾತ್ | ಅವ್ಯಾತ್ಸೀತ್ ||**

**ವ್ಯಧ** ಧಾತು. ಅನಿಟ್. ವ್ಯಧ್ + ಯ + ತಿ ಎಂದಿರುವಾಗ ಶ್ಯನ್ ಅಪಿತ್ತಾಗಿ ಙಿತ್ತಾದುದರಿಂದ ಇದು ಪರವಾದಾಗ ಧಾತುವಿಗೆ ಸಂಪ್ರಸಾರಣ ಹೇಳುತ್ತಾನೆ. ತ್ರಿಪದ ಸೂತ್ರ. "ಷ್ಯಙಃ ಸಂಪ್ರಸಾರಣಮ್" ಸೂತ್ರದಿಂದ 'ಸಂಪ್ರಸಾರಣಮ್' ಅನುವೃತ್ತಿ. ಸೂತ್ರದ ಚಕಾರದಿಂದ ಹಿಂದಿನ ಸೂತ್ರದ 'ಕಿತಿ' ಪದವು ಸಮುಚ್ಚಿತವಾಗುತ್ತದೆ. ಸೂತ್ರದಲ್ಲಿ ಒಂಬತ್ತು ಧಾತುಗಳು ಹೇಳಿವೆ. **ಸೂತ್ರಾರ್ಥ**—ಗ್ರಹ್ಯಾದಿ ಒಂಬತ್ತು ಧಾತುಗಳಿಗೆ ಕಿತ್ ಙಿತ್ತಾದ ಪ್ರತ್ಯಯಗಳು ಪರದಲ್ಲಿರುವಾಗ ಸಂಪ್ರಸಾರಣ ಬರುತ್ತದೆ ಪಕೃತ ಙಿತ್ತಾದ ಶ್ಯನ್ ಪರವಾದುದರಿಂದ ವ್ಯಧಿಗೆ ಸಂಪ್ರಸಾರಣ. ವ್ಯಧಿನಲ್ಲಿ ಸಂಪ್ರಸಾರಣ ಎರಡಕ್ಕೆ ಪ್ರಾಪ್ತವಾದರೆ "ನ ಸಂಪ್ರಸಾರಣೇ ಸಂಪ್ರಸಾರಣಮ್" ಎಂಬುದರಿಂದ ಯಪರವಾದಾಗ ವಕ್ಕೆ ನಿಷೇಧ. ಯಕ್ಕೆ 'ಇ' ರೂಪ ಸಂಪ್ರಸಾರಣ ಬಂದರೆ ವ್ + ಇ + ಅಧ್ + ಯ + ತಿ, 'ಸಂಪ್ರಸಾರಣಾಚ್ಚ' ಪೂರ್ವರೂಪ. ವಿಧ್ + ಯ + ತಿ = ವಿಧ್ಯತಿ | ಇನ್ನು ಮುಂದೆ ಸಾರ್ವಧಾತುಕದಲ್ಲಿ ವಿಧ್ಯ ಅಂಗವೆಂದು ತಿಳಿಯಬೇಕು. ವಿಧ್ಯತಃ | ವಿಧ್ಯನ್ತಿ || ಇತ್ಯಾದಿ.

**ಲಿಟ್** || ವ್ಯಥ್ವ್ಯಥ್+ಅ. ಎಂದಿರುವಾಗ 'ಲಿಟ್ಯಭ್ಯಾಸಸ್ಯೋಭಯೇಷಾಮ್' ಸೂತ್ರದಿಂದ ಅಭ್ಯಾಸಕ್ಕೆ ಸಂಪ್ರಸಾರಣ. ಹಲಾದಿಶೇಷ. ವಿವ್ಯಥ್+ಅ. 'ಅತ ಉಪಧಾಯಾಃ' ಉಪಧಾವೃದ್ಧಿ. ವಿವ್ಯಾಧ | ವ್ಯಥ್+ಅತುಸ್. ದ್ವಿಬಹುವಚನಗಳು 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ ಕಿತ್ತಾಗುವುದರಿಂದ "ಗ್ರಹಿಜ್ಯಾವಯಿ–' ಸೂತ್ರದಿಂದ ದ್ವಿತ್ವಕ್ಕಿಂತ ಮೊದಲೇ ಸಂಪ್ರಸಾರಣ. ವಿಧ್‌ವಿಧ್+ಅತುಸ್ ಹಲಾದಿಶೇಷ. ವಿವಿಧತುಃ | ವಿವಿಧುಃ || ಭಾರದ್ವಾಜನಿಯಮದಿಂದ ಥಲಿಗೆ ವಿಕಲ್ಪ ಇಟ್. ವಿವ್ಯಧಿಥ. ವಿವ್ಯಥ್+ಥ. "ಝಷಸ್ತಥೋ–' ಸೂತ್ರದಿಂದ ಥಕ್ಕೆ ಧಾದೇಶ, ವಿವ್ಯಥ್+ಧ. "ಝಲಾಂ ಜಶ್ ಝಶಿ' ಸೂತ್ರದಿಂದ ಧಕಾರಕ್ಕೆ ದಾದೇಶ. ವಿವ್ಯದ್ಧ | ವಿವಿಧಥುಃ | ವಿವಿಧ || ವಿವ್ಯಾಧ, ವಿವ್ಯಧ | ವಿವಿಧಿವ | ವಿವಿಧಿಮ || **ಲುಟ್** || ವ್ಯಥ್+ತಾ. "ಝಷಸ್ತಥೋಃ–' ಸೂತ್ರದಿಂದ ತಕ್ಕೆ ಧಾದೇಶ, ಪೂರ್ವ ಥಕ್ಕೆ ಜಶ್ತ್ವ. ವ್ಯದ್ಧಾ | ವ್ಯದ್ಧಾರೌ | ವ್ಯದ್ಧಾರಃ || ಇತ್ಯಾದಿ. **ಲೃಟ್** || ವ್ಯಥ್+ಸ್ಯತಿ. "ಖರಿಚ.' ವ್ಯತ್ಸ್ಯತಿ | ವ್ಯತ್ಸ್ಯತಃ | ಇತ್ಯಾದಿ. **ಲೋಟ್** || ವಿಧ್ಯತು, ವಿಧ್ಯತಾತ್ | ಇತ್ಯಾದಿ. **ಲಙ್** || ಅವಿಧ್ಯತ್ | ವಿಧಿಲಿಙ್ || ವಿಧ್ಯೇತ್ | **ಆಶೀರ್ಲಿಙ್** ಯಾಸುಟ್ ಕಿತ್ತಾದುದರಿಂದ ಸಂಪ್ರಸಾರಣ. ವಿಧ್ಯಾತ್ | **ಲುಙ್** || ಅವ್ಯಥ್+ಸ್ ಈತ್. "ವದವ್ರಜ–' ವೃದ್ಧಿ. "ಖರಿಚ.' ಥಕ್ಕೆ ತಕಾರಾದೇಶ. ಅವ್ಯಾತ್ಸೀತ್ | ಅವ್ಯಾಥ್+ಸ್+ತಾಮ್. "ಝಲೋ ಝಲಿ' ಸಲೋಪ. ಅವ್ಯಾದ್ಧಾಮ್ | ಅವ್ಯಾತ್ಸುಃ || ಅವ್ಯಾತ್ಸೀಃ | ಅವ್ಯಾದ್ಧಮ್ | ಅವ್ಯಾದ್ಧ || ಅವ್ಯಾತ್ಸಮ್ | ಅವ್ಯಾತ್ಸ್ವ | ಅವ್ಯಾತ್ಸ್ಮ || **ಲೃಙ್** || ಅವ್ಯತ್ಸ್ಯತ್ | ಇತ್ಯಾದಿ.

|| ೯೫ || **ಪುಷ**=ಪುಷ್ಟೌ (ಪೋಷಣೆ.)

**ಪುಷ್ಯತಿ | ಪುಪೋಷ | ಪುಪೋಷಿಥ | ಪೋಷ್ಟಾ | ಪೋಕ್ಷ್ಯತಿ | ಪುಷಾದೀತ್ಯಙ್ | ಅಪುಷತ್ |**

|| ೯೬ || **ಶುಷ**=ಶೋಷಣೇ (ಒಣಗಿಸುವುದು.)

**ಶುಷ್ಯತಿ | ಶುಶೋಷ | ಅಶುಷತ್ ||**

ಈ ಎರಡು ಧಾತುಗಳೂ ಅನಿಟ್. **ಪುಷ್ಯತಿ** || ಪುಪೋಷ | ಪುಪುಷತುಃ | ಪುಪುಷುಃ || ಅಜಂತ, ಅಥವಾ ಅಕಾರವುಳ್ಳ ಧಾತುವಾಗದಿರುವುದರಿಂದ ಥಲಿನಲ್ಲಿ ಇಣ್ನಿಷೇಧವಿಲ್ಲ. ಕ್ರಾದಿನಿಯಮದಿಂದ ಇಡಾಗಮ ಬರುತ್ತದೆ. ಪುಪೋಷಿಥ | ಪುಪುಷಥುಃ | ಇತ್ಯಾದಿ. **ಪೋಷ್**+ತಾ. ಷ್ಟುತ್ವ. ಪೋಷ್ಟಾ | ಪೋಷ್ಟಾರೌ | ಪೋಷ್ಟಾರಃ || ಇತ್ಯಾದಿ. **ಲೃಟ್** || ಪುಷ್+ಸ್ಯತಿ. ಲಘೂಪಧಗುಣ. "ಷಢೋಃ ಕಃ ಸಿ' ಷಕಾರಕ್ಕೆ ಕಕಾರಾದೇಶ. ಪೋಕ್+ಸ್ಯತಿ. "ಆದೇಶಪ್ರತ್ಯಯಯೋಃ' ಷತ್ವ. ಪೋಕ್ಷ್ಯತಿ | ಇತ್ಯಾದಿ. ಪುಷ್ಯತು, ಪುಷ್ಯತಾತ್ | ಅಪುಷ್ಯತ್ |

ಪುಷ್ಯೇತ್ | ಪುಷ್ಯಾತ್ | ಲುಙಿನಲ್ಲಿ 'ಪುಷಾದಿದ್ಯುತಾದಿ—' (ಸೂ. ೫೦೮) ಸೂತ್ರದಿಂದ ಚ್ಲಿಗೆ ಅಙ್. ಅಙ್ ಙಿತ್ತಾದುದರಿಂದ ಲಘೂಪಧಗುಣವಿಲ್ಲ. ಅಪುಷತ್ | ಅಪುಷತಾಮ್ | ಇತ್ಯಾದಿ. ಲೃಙ್ || ಅಪೋಕ್ಷ್ಯತ್ | ಇತ್ಯಾದಿ. **ಶುಷ** ಧಾತು. ಶುಷ್ಯತಿ | ಶುಶೋಷ | ಶೋಷ್ಟಾ | ಶೋಕ್ಷ್ಯತಿ | ಶುಷ್ಯತು, ಶುಷ್ಯತಾತ್ | ಅಶುಷ್ಯತ್ | ಶುಷ್ಯೇತ್ | ಶುಷ್ಯಾತ್ | ಅಶುಷತ್ | ಅಶೋಕ್ಷ್ಯತ್ ||

**|| ೯೭ || ಣಶ— ಅದರ್ಶನೇ (ನಾಶವಾಗುವುದು.)**

**ನಶ್ಯತಿ | ನನಾಶ | ನೇಶತುಃ ||**

**ನಶ** ಧಾತು ಸೇಟಾದರೂ ಮುಂದೆ ವಲಾದ್ಯಾರ್ಧಧಾತುಕಕ್ಕೆ ವಿಕಲ್ಪ ಇಟ್ ಹೇಳುತ್ತಾನೆ. 'ಣೋನಃ' ಸೂತ್ರದಿಂದ ಆದಿಯ ಣಕಾರಕ್ಕೆ ನಕಾರಾದೇಶ. ನಶ್ಯತಿ | ಇತ್ಯಾದಿ. ಲಿಟ್ || ನನಾಶ | ನನಶ್+ಅತುಸ್ ಎಂದಿರುವಾಗ 'ಅತ ಏಕಹಲ್ ಮಧ್ಯೇ—' ಸೂತ್ರದಿಂದ ಏತ್ವಾಭ್ಯಾಸಲೋಪ. ನೇಶತುಃ | ನೇಶುಃ || ನನಶ್+ಥ ಎಂದಿರುವಾಗ ನಿತ್ಯವಾಗಿ ಇಟ್ ಪ್ರಾಪ್ತವಾದರೆ ವಿಕಲ್ಪ ಇಟ್ ಹೇಳುತ್ತಾನೆ.

ರಧಾದಿಗಳಲ್ಲಿ ವಿಕಲ್ಪ ಇಡಾಗಮ ಹೇಳುವ ಸೂತ್ರ.

**೬೩೭ ರಧಾದಿಭ್ಯಶ್ಚ || ೭-೨-೪೫ ||**

**ರಧ್ ನಶ್ ತೃಪ್ ದೃಪ್ ದ್ರುಹ್ ಮುಹ್ ಷ್ಣುಹ್ ಷ್ಣಿಹ್ ಏಭ್ಯೋ ವಲಾದ್ಯಾರ್ಧಧಾತುಕಸ್ಯ ವೇಟ್ ಸ್ಯಾತ್ || ನೇಶಿಥ ||**

ರಧಾದಿಭ್ಯಃ, ಚ || ದ್ವಿಪದ ಸೂತ್ರ. 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರವು ಅನುವೃತ್ತವಾಗುತ್ತದೆ. 'ಸ್ವರತಿಸೂತಿ—' ಸೂತ್ರದಿಂದ 'ವಾ' ಅನುವೃತ್ತಿ. ರಧಾದಿಗಳು ಎಂಟೆಂದು ಹೇಳಿದೆ. **ಸೂತ್ರಾರ್ಥ**— ರಧ್ ಮುಂತಾದ ಧಾತುಗಳ ಪರದಲ್ಲಿರುವ ವಲಾದಿ ಆರ್ಧಧಾತುಕಕ್ಕೆ ಇಡಾಗಮ ವಿಕಲ್ಪವಾಗಿ ಬರುತ್ತದೆ. ನನಶ್+ಥ. ಇಲ್ಲಿ ಥಪ್ರತ್ಯಯಕ್ಕೆ ಇಡಾಗಮ ಬಂದರೆ 'ಥಲಿ ಚ ಸೇಟಿ' ಸೂತ್ರದಿಂದ ಏತ್ವಾಭ್ಯಾಸಲೋಪ ಬರುತ್ತದೆ. ನೇಶಿಥ. ಇಡಾಗಮ ಬಾರದಿದ್ದರೆ ನನಶ್+ಥ ಎಂದಿರುವಾಗ ಧಾತುವಿಗೆ ನುಮಾಗಮ ಹೇಳುತ್ತಾನೆ.

ಮಸ್ಜ್, ನಶ್ ಧಾತುಗಳಿಗೆ ನುಮ್ ಹೇಳುವ ಸೂತ್ರ.

**೬೩೮. ಮಸ್ಜಿನಶೋರ್ಝಲಿ || ೭-೧-೬೦ ||**

**ನುಮ್ ಸ್ಯಾತ್ | ನನಂಷ್ಠ | ನೇಶಿವ, ನೇಶ್ವ | ನೇಶಿಮ, ನೇಶ್ಮ || ನಶಿತಾ, ನಂಷ್ಟಾ | ನಶಿಷ್ಯತಿ, ನಙ್ಕ್ಷ್ಯತಿ | ನಶ್ಯತು | ಅನಶ್ಯತ್ | ನಶ್ಯೇತ್ | ನಶ್ಯಾತ್ | ಅನಶತ್ ||**

ಮಸ್ಜಿನಶೋಃ ಝಲಿ || ದ್ವಿಪದ ಸೂತ್ರ. 'ಇದಿತೋ ನುಮ್ ಧಾತೋಃ' ಸೂತ್ರದಿಂದ 'ನುಮ್' ಅನುವೃತ್ತಿ. **ಸೂತ್ರಾರ್ಥ**—ಮಸ್ಜ್, ನಶ್ ಧಾತುಗಳಿಗೆ ಝಲ್ ಪರವಾದಾಗ ನುಮಾಗಮ ಬರುತ್ತದೆ. ಮಸ್ಜಿ ಎಂದು ಇಕಿನಿಂದ ನಿರ್ದೇಶ ಮಾಡಿರುತ್ತಾನೆ. ಪ್ರಕೃತ ಥ ಝಲಿನಲ್ಲಿ ಸೇರುವುದರಿಂದ ನಶಿಗೆ ನುಮಾಗಮ. ಮಿತ್ತಾದುದರಿಂದ 'ಮಿದಚೋಽನ್ತ್ಯಾತ್ಪರಃ' ಸೂತ್ರದಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ನನಶ್+ಥ. ನನನ್ಶ್+ಥ. 'ನಶ್ಚಾಪದಾಂತಸ್ಯ ಝಲಿ' ನಕಾರಕ್ಕೆ ಅನುಸ್ವಾರ. 'ವ್ರಶ್ಚಭ್ರಸ್ಜ—' (ಸೂ. ೩೦೯) ಸೂತ್ರದಿಂದ ಶಕಾರಕ್ಕೆ ಷಕಾರಾದೇಶ. ನನಂಷ್+ಥ. 'ಷ್ಟುನಾಷ್ಟುಃ' ನನಂಷ್+ಠ=ನನಂಷ್ಠ | ನೇಶಥುಃ | ನೇಶ || ನನಾಶ, ನನಶ | ನೇಶಿವ, (ಇಡಾಗಮ ವಿಕಲ್ಪ) ನೇಶ್ವ | ನೇಶಿಮ, ನೇಶ್ಮ || **ಲುಟ್** || ತಾಸಿಗೆ ಇಟ್ ವಿಕಲ್ಪ. ಇಟ್ ಬಂದರೆ ನಶಿತಾ | ಇತ್ಯಾದಿ. ಬಾರದಿದ್ದರೆ ನಶ್+ತಾ. 'ಮಸ್ಜಿನಶೋರ್ಝಲಿ' ನುಮ್, 'ವ್ರಶ್ಚಭ್ರಸ್ಜ—' ಸೂತ್ರದಿಂದ ಶಕಾರಕ್ಕೆ ಷತ್ವ. ನನ್ಷ್+ತಾ. ನಕಾರಕ್ಕೆ ಅನುಸ್ವಾರ. ಷ್ಟುತ್ವ. ನಂಷ್ಟಾ | ನಂಷ್ಟಾರೌ | ನಂಷ್ಟಾರಃ || ಇತ್ಯಾದಿ. **ಲೃಟ್** || ಸ್ಯಕ್ಕೆ ಇಟ್ ಬಂದರೆ ನಶಿಷ್ಯತಿ | ಇತ್ಯಾದಿ. ಇಟ್ ಬಾರದಿದ್ದರೆ ನುಮ್. ಷತ್ವ. ಅನುಸ್ವಾರ, ನಂಷ್+ಸ್ಯತಿ. 'ಷಢೋಃ ಕಃ ಸಿ' ಸೂತ್ರದಿಂದ ಷಕಾರಕ್ಕೆ ಕತ್ವ. ಸಕಾರಕ್ಕೆ ಷತ್ವ. ನಂಕ್ಷ್ಯತಿ | ನಂಕ್ಷ್ಯತಃ | ಇತ್ಯಾದಿ. **ಲೋಟ್** || ನಶ್ಯತು, ನಶ್ಯತಾತ್ | ಇತ್ಯಾದಿ. **ಲಙ್** || ಅನಶ್ಯತ್ | ಇತ್ಯಾದಿ. **ವಿಧಿಲಿಙ್** || ನಶ್ಯೇತ್ | ಇತ್ಯಾದಿ. **ಆಶೀರ್ಲಿಙ್** || ನಶ್ಯಾತ್ | ನಶ್ಯಾಸ್ತಾಮ್ | ಇತ್ಯಾದಿ. **ಲುಙ್** || ಚ್ಲಿಗೆ ಅಙ್. ಅನಶತ್ | ಅನಶತಾಮ್ | ಇತ್ಯಾದಿ. **ಲೃಙ್** || ಅನಶಿಷ್ಯತ್ | ಅನಂಕ್ಷ್ಯತ್ | ಇತ್ಯಾದಿ ಎರಡೆರಡು ರೂಪಗಳನ್ನು ಹಿಂದಿನಂತೆ ತಿಳಿಯಬೇಕು.

|| ೯೮ || ಷೂಙ್=ಪ್ರಾಣಿಪ್ರಸವೇ (ಹಡೆಯುವುದು.)

**ಸೂಯತೇ | ಸುಷುವೇ | ಕ್ರಾದಿನಿಯಮಾದಿಟ್ || ಸುಷುವಿಷೇ | ಸುಷುವಿವಹೇ | ಸುಷುವಿಮಹೇ | ಸವಿತಾ, ಸೋತಾ ||**

**ಷೂಙ್** ಧಾತು. ಙಿತ್ತಾದುದರಿಂದ 'ಅನುದಾತ್ತಙಿತ ಆತ್ಮನೇಪದಮ್' ಸೂತ್ರದಿಂದ ಆತ್ಮನೇಪದಿಯಾಗುತ್ತದೆ. 'ಧಾತ್ವಾದೇಃ ಷಃ ಸಃ' ಸೂತ್ರದಿಂದ ಆದಿಯ ಷಕಾರಕ್ಕೆ ಸಕಾರಾದೇಶ. ಸೂಯತೇ | ಸೂಯೇತೇ | ಸೂಯನ್ತೇ || ಸೂಯಸೇ | ಸೂಯೇಥೇ | ಸೂಯಧ್ವೇ || ಸೂಯೇ | ಸೂಯಾವಹೇ | ಸೂಯಾಮಹೇ|| **ಲಿಟ್**|| ಸುಸು+ಏ. 'ಆದೇಶಪ್ರತ್ಯಯಯೋಃ' ದ್ವಿತೀಯ ಸಕಾರಕ್ಕೆ ಷತ್ವ. 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಉವಙಾದೇಶ. ಸುಷುವೇ | ಸುಷುವಾತೇ | ಸುಷುವಿರೇ || ಸುಷುವಿಷೇ | 'ಸ್ವರತಿಸೂ—' ಸೂತ್ರದಿಂದ ಇಟ್ ವಿಕಲ್ಪ ಪ್ರಾಪ್ತವಾದರೆ ಕ್ರಾದಿ

ನಿಯಮದಿಂದಲಿಟಿನಲ್ಲಿ ನಿತ್ಯ ಇಡಾಗಮ ಬರುತ್ತದೆ. ಸುಷುವಾಥೇ | ಸುಷುವಿಧ್ವೇ || ಸುಷುವೇ | ಸುಷುವಿವಹೇ | ಸುಷುವಿಮಹೇ || **ಲುಟ್** || ಸು+ತಾ. 'ಸ್ವರತಿಸೂತಿ ಸೂಯತಿ—' (ಸೂ. ೪೭೭) ಸೂತ್ರದಿಂದ ವಲಾದಿ ಆರ್ಧಧಾತುಕಕ್ಕೆ ಇಡ್ವಿಕಲ್ಪ ಹೇಳಿರುವುದರಿಂದ ತಾಸಿಗೆ ಇಡ್ವಿಕಲ್ಪ. ಉಕಾರಕ್ಕೆ ಗುಣ. ಅವಾದೇಶ. ಸವಿತಾ | ಸವಿತಾರೌ | ಸವಿತಾರಃ || ಸವಿತಾಸೇ | ಸವಿತಾಸಾಥೇ | ಸವಿತಾಧ್ವೇ || ಸವಿತಾಹೇ | ಸವಿತಾಸ್ವಹೇ | ಸವಿತಾಸ್ಮಹೇ || ಇಟ್ ಬಾರದಿದ್ದರೆ ಸೋತಾ | ಇತ್ಯಾದಿ. **ಲೃಟ್** || ಸವಿಷ್ಯತೇ | ಸೋಷ್ಯತೇ | ಇತ್ಯಾದಿ. **ಲೋಟ್** || ಸೂಯತಾಮ್ | ಇತ್ಯಾದಿ (ಏಧತಾಮ್‌ವತ್). **ಲಙ್** || ಅಸೂಯತ (ಐಧತವತ್) | **ವಿಧಿಲಿಙ್** || ಸೂಯೇತ (ಏಧೇತವತ್) | **ಆಶೀರ್ಲಿಙ್** || ಇಡಾಗಮ ವಿಕಲ್ಪ. ಸವಿಷೀಷ್ಟ (ಏಧಿಷೀಷ್ಟ ವತ್) ಇಡಾಗಮ ಬಾರದಿದ್ದರೆ ಸೋಷೀಷ್ಟ | ಸೋಷೀಯಾಸ್ತಾಮ್ | ಸೋಷೀರನ್ || ಇತ್ಯಾದಿ. **ಲುಙ್** || ಸಿಚಿಗೆ ಇಡಾಗಮ ಬಂದರೆ ಗುಣ, ಅವಾದೇಶ. ಅಸವಿಷ್ಟ | ಅಸವಿಷಾತಾಮ್ | ಅಸವಿಷತ || ಅಸವಿಷ್ಠಾಃ | ಅಸವಿಷಾಥಾಮ್ | ಅಸವಿಢ್ವಮ್ || ಅಸವಿಷಿ | ಅಸವಿಷ್ವಹಿ | ಅಸವಿಷ್ಮಹಿ || ಇಟ್ ಬಾರದಿದ್ದರೆ ಅಸೋಷ್ಟ | ಅಸೋಷಾತಾಮ್ | ಅಸೋಷತ || ಇತ್ಯಾದಿ. **ಲೃಙ್** || ಅಸವಿಷ್ಯತ | ಅಸೋಷ್ಯತ | ಇತ್ಯಾದಿ.

**|| ೯೯ || ದೂಙ್— ಪರಿತಾಪೇ (ವ್ಯಥೆಪಡುವುದು) ದೂಯತೇ ||**

**|| ೧೦೦ || ದೀಙ್— ಕ್ಷಯೇ (ನಾಶವಾಗುವುದು.) ದೀಯತೇ ||**

ಇವೂ ಙಿತ್ತಾದುದರಿಂದ ಆತ್ಮನೇಪದಿಗಳಾಗುತ್ತವೆ. **ದೂ** ಊಕಾರಾಂತ ವಾದುದರಿಂದ ಸೇಟ್. ಕ್ರಮವಾಗಿ ದೂಯತೇ | ದುದುವೇ | ದವಿತಾ | ದವಿಷ್ಯತೇ | ದೂಯತಾಮ್ | ಅದೂಯತ | ದೂಯೇತ | ದವಿಷೀಷ್ಟ | ಅದವಿಷ್ಟ | ಅದವಿಷ್ಯತ | ಹೀಗೆ ರೂಪಗಳಾಗುತ್ತವೆ. **ದೀಙ್**— ಇದು ಅನಿಟ್. ದೀಯತೇ | **ಲಿಟ್** || ದಿದೀ+ಏ ಎಂದಿರುವಾಗ ಪ್ರತ್ಯಯಕ್ಕೆ ಯುಡಾಗಮ ಹೇಳುತ್ತಾನೆ.

ದೀಙ್ ಧಾತುವಿನಲ್ಲಿ ಯುಡಾಗಮ ಹೇಳುವ ಸೂತ್ರ.

**೬೩೯. ದೀಙೋಯುಡಚಿ ಕ್ಙಿತಿ || ೬-೪-೬೩ ||**

**ದೀಙಃ ಪರಸ್ಯ ಅಜಾದೇಃ ಕ್ಙಿತಃ ಆರ್ಧಧಾತುಕಸ್ಯ ಯುಟ್ |**

**ವಾ || (ವುಗ್ಯುಟಾವುವಙ್‌ಯಣೋಃ ಸಿದ್ಧೌವಕ್ತವ್ಯೌ) ದಿದೀಯೇ ||**

ದೀಙಃ, ಯುಟ್, ಅಚಿ, ಕ್ಙಿತಿ || ನಾಲ್ಕು ಪದಗಳುಳ್ಳ ಸೂತ್ರ. ದೀಙಃ ಪಂಚಮೀ. 'ಆರ್ಧಧಾತುಕೇ' ಅಧಿಕಾರ. 'ಅಚಿ' ಸಪ್ತಮ್ಯಂತವು ಅದಕ್ಕೆ ವಿಶೇಷಣ ವಾದುದರಿಂದ ತದಾದಿಲಾಭ. ಷಷ್ಠ್ಯಂತವಾಗಿ ವಿಪರಿಣಾಮ ಹೊಂದುತ್ತದೆ.

**ಸೂತ್ರಾರ್ಥ**—ದೀಙ್ ಧಾತುವಿನ ಪರದಲ್ಲಿರುವ ಅಜಾದಿಯಾದ ಕಿತ್ ಅಥವಾ ಙಿತ್ತಾದ ಆರ್ಧಧಾತುಕಕ್ಕೆ ಯುಡಾಗಮ ಬರುತ್ತದೆ. ಆತ್ಮನೇಪದದಲ್ಲಿ ಒಂಬತ್ತು ಪ್ರತ್ಯಯಗಳೂ ಅಪಿತ್ತಾದುದರಿಂದ 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ ಕಿತ್ತಾಗುತ್ತವೆ. ಏ ಎಂಬುದಕ್ಕೆ ಯುಡಾಗಮ ಟಿತ್ತಾದುದರಿಂದ ಆದಿಗೆ ಬಂದರೆ ದಿದೀ+ಯ್‌ಏ=ದಿದೀಯೇ ಎಂದಾಗುತ್ತದೆ. ಇಲ್ಲಿ ಯುಡಾಗಮ ಬಂದರೂ ಇದು ಆಭೀಯಕಾರ್ಯ (ಭಸಂಜ್ಞಾಕ್ಕೆ ಒಳಪಟ್ಟ) ವಾದುದರಿಂದ, 'ಏರನೇಕಾಚೋಽ ಸಂಯೋಗಪೂರ್ವಸ್ಯ' ಸೂತ್ರವೂ ಆಭೀಯವಾದುದರಿಂದ ಆ ಸೂತ್ರಕ್ಕೆ ಇದು (ಯುಡಾಗಮ ಬಂದುದು) 'ಅಸಿದ್ಧವದತ್ರಾಭಾತ್' ಸೂತ್ರದಿಂದ ಅಸಿದ್ಧವಾಗುವುದರಿಂದ (ಯಕಾರವಿಲ್ಲವೆಂದು ತಿಳಿದಿರುವುದರಿಂದ) ಯಣ್ ಬರಲಿ ಎಂದು ಆಶಂಕೆ ಬರುತ್ತದೆ. ಅದಕ್ಕೆ ವಾರ್ತಿಕಕಾರರು ಸಮಾಧಾನ ಹೇಳುತ್ತಾರೆ. **ವಾರ್ತಿಕಾರ್ಥ** ವುಕ್, ಯುಟಾಗಮಗಳು ಉವಙ್, ಯಣಾದೇಶ ಮಾಡುವಾಗ ಸಿದ್ಧವಾಗಿವೆ ಎಂದು ಹೇಳಬೇಕು. ಪ್ರಕೃತ ಯಣಾದೇಶ ಮಾಡುವಾಗ ಯಟಾಗಮ ಬಂದಿದೆಯೆಂದು ತಿಳಿದುದರಿಂದ ಅಚ್ ಪರದಲ್ಲಿಲ್ಲದಿರುವುದರಿಂದ ಪುನಃ ಯಣ್ ಬರುವುದಿಲ್ಲ. ದೀದೀಯೇ | ದಿದೀಯಾತೇ | ದಿದೀಯಿರೇ || ದಿದೀಯಿಷೇ | ದಿದಿಯಾಥೇ | ದಿದೀಯಿಧ್ವೇ || ದಿದೀಯೇ | ದಿದೀಯಿವಹೇ | ದಿದೀಯಿಮಹೇ || **ಲುಟ್** || ದೀ+ತಾ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ ಪ್ರಾಪ್ತವಾದರೆ ಇಲ್ಲಿ ಆತ್ವ ಹೇಳುತ್ತಾನೆ.

ಮೀಮುಂತಾದ ಧಾತುಗಳಿಗೆ ಆತ್ವ ಹೇಳುವ ಸೂತ್ರ.

**೬೪೦. ಮೀನಾತಿಮಿನೋತಿದೀಙಾಂ ಲ್ಯಪಿ ಚ || ೬–೧–೧೦ ||**

**ಏಷಾಮಾತ್ವಂ ಸ್ಯಾಲ್ಲ್ಯಪಿ ಚಾದಶಿತ್ಯೇಜ್‌ನಿಮಿತ್ತೇ | ದಾತಾ | ದಾಸ್ಯತೇ | ವಾ || (ಸ್ಥಾಘ್ವೋರಿತ್ವೇ ದೀಙಃ ಪ್ರತಿಷೇಧಃ |) ಅದಾಸ್ತ ||**

ತ್ರಿಪದ ಸೂತ್ರ. 'ಆದೇಚ ಉಪದೇಶೇಽಶಿತಿ' ಸೂತ್ರದಿಂದ 'ಆತ್' ಅನುವೃತ್ತಿ. ಚಕಾರದಿಂದ 'ಏಚಃ', 'ಅಶಿತಿ' ಎಂಬ ಪದಗಳು ಲಬ್ಧವಾಗುತ್ತವೆ. ಏಚಃ ಎಂಬಲ್ಲಿ ನಿಮಿತ್ತೇ ಎಂದು ಸೇರಿಸಿಕೊಳ್ಳಬೇಕು. **ಸೂತ್ರಾರ್ಥ**—ಮೀ ಮುಂತಾದ ಮೂರು ಧಾತುಗಳಿಗೆ ಲ್ಯಪ್ ಪರವಾದಾಗಲೂ, ಶಿತ್ತಲ್ಲದ ಏಚಿಗೆ ನಿಮಿತ್ತವಾದ ಪ್ರತ್ಯಯ ಪರದಲ್ಲಿರುವಾಗಲೂ ಆತ್ವ ಬರುತ್ತದೆ. ಪ್ರಕೃತ ದೀಙಿಗೆ ಅಶಿತ್ತಾದ ತಾಸ್ ಪರದಲ್ಲಿದೆ. ಇದು ಗುಣಕ್ಕೆ ನಿಮಿತ್ತವಾದುದರಿಂದ ಏಚ್ ನಿಮಿತ್ತವಾಗಿದೆ. ಆಗ ಆತ್ವ ಬಂದರೆ ದಾತಾ ಎಂದಾಗುತ್ತದೆ. ದಾತಾ | ದಾತಾರೌ | ದಾತಾರಃ || ದಾತಾಸೇ | ದಾತಾಸಾಥೇ | ದಾತಾಧ್ವೇ || ದಾತಾಹೇ | ದಾತಾಸ್ವಹೇ | ದಾತಾಸ್ಮಹೇ ||

**ಲೃಟ್** || ಇಲ್ಲಿಯೂ, ಸ್ಯಪ್ರತ್ಯಯ ಅಶಿತ್ತಾಗಿ ಏಜ್ನಿಮಿತ್ತವಾಗಿರುವುದರಿಂದ ಆತ್ವ ಬಂದರೆ ದಾಸ್ಯತೇ ಎಂದಾಗುತ್ತದೆ. | ದಾಸ್ಯೇತೇ | ದಾಸ್ಯನ್ತೇ || ಇತ್ಯಾದಿ. **ಲೋಟ್** || ದೀಯತಾಮ್ | ಇತ್ಯಾದಿ. **ಲಙ್** || ಅದೀಯತ | **ವಿಧಿಲಿಙ್** || ದೀಯೇತ | **ಆಶೀರ್ಲಿಙ್** || ಸೀಯುಟಿನಲ್ಲಿಯೂ ಆತ್ವ. ದಾಸೀಷ್ಟ | ದಾಸೀಯಾಸ್ತಾಮ್ | ಇತ್ಯಾದಿ. **ಲುಙ್** || ಸಿಚ್‌ಪರನಾದಾಗ ಆತ್ವ. ಅದಾಸ್ತ. ದೀಙ್‌ಗೆ ಆತ್ವಬಂದಾಗ ದಾರೂಪವಾಗುವುದರಿಂದ 'ದಾಧಾಘ್ವದಾಪ್' ಸೂತ್ರದಿಂದ ಘುಸಂಜ್ಞೆ ಬರುತ್ತದೆ. ಆಗ 'ಸ್ಥಾಘ್ವೋರಿಚ್ಚ' ಸೂತ್ರದಿಂದ ಇತ್ವ ಬರಲಿ ಎಂದರೆ ವಾರ್ತಿಕಕಾರರು ನಿಷೇಧ ಹೇಳುತ್ತಾರೆ. **ವಾರ್ತಿಕಾರ್ಥ** ದೀಙ್ ಧಾತುವಿಗೆ 'ಸ್ಥಾಘ್ವೋರಿಚ್ಚ' ಸೂತ್ರದಿಂದ ಬರುವ ಇತ್ವಕ್ಕೆ ನಿಷೇಧ ಹೇಳಬೇಕು. ಇದರಿಂದ ಅದಾಸ್ತ ಎಂದೇ ರೂಪವಾಗುತ್ತದೆ. ಅದಾಸಾತಾಮ್ | ಅದಾಸತ || ಅದಾಸ್ಥಾಃ | ಅದಾಸಾಥಾಮ್ | ಅದಾಧ್ವಮ್ || ಅದಾಸಿ | ಅದಾಸ್ವಹಿ | ಅದಾಸ್ಮಹಿ || **ಲೃಙ್** || ಅದಾಸ್ಯತ— ಇತ್ಯಾದಿ.

|| ೧೦೧ || **ಡೀಙ್**—ವಿಹಾಯಸಾ ಗತೌ (ಹಾರುವುದು.)

ಡೀಯತೇ | ಡಿಡ್ಯೇ | ಡಯಿತಾ |

|| ೧೦೨ || **ಪೀಙ್**—ಪಾನೇ (ಕುಡಿಯುವುದು.)

ಪೀಯತೇ | ಪೇತಾ | ಅಪೇಷ್ಟ |

|| ೧೦೩ || **ಮಾಙ್**—ಮಾನೇ (ಅಳೆಯುವುದು.)

ಮಾಯತೇ | ಮಮೇ |

|| ೧೦೪ || **ಜನೀ**—ಪ್ರಾದುರ್ಭಾವೇ (ಹುಟ್ಟುವುದು.)

**ಡೀಙ್** ಧಾತು. ಙಿತ್. ಆತ್ಮನೇಪದೀ. ಸೇಟ್. ಡೀಯತೆ || ಡಿಡ್ಯೇ | ಡಿಡ್ಯಾತೇ | ಡಿಡ್ಯಿರೇ || **ಲುಟ್** || ಡೀ+ಇತಾ. ಗುಣ, ಅಯಾದೇಶ. ಡಯಿತಾ | ಇತ್ಯಾದಿ. ಡಯಿಷ್ಯತೇ | ಡಯತಾಮ್ | ಅಡಯತ | ಡಯೇತ | ಡಯಿಷೀಷ್ಟ | ಅಡಯಿಷ್ಟ | ಅಡಯಿಷ್ಯತ ||

**ಪೀಙ್** ಧಾತು. ಙಿತ್. ಆತ್ಮನೇಪದೀ. ಅನಿಟ್. ಪೀಯತೇ | ಪಿಪ್ಯೇ | ಪೇತಾ | ಪೇಷ್ಯತೇ | ಪೀಯತಾಮ್ | ಅಪೀಯತ | ಪೀಯೇತ | ಅಪೇಷೀಷ್ಟ | ಅಪೇಷ್ಟ | ಅಪೇಷ್ಯತ ||

**ಮಾಙ್** ಧಾತು. ಙಿತ್. ಆತ್ಮನೇಪದೀ. ಅನಿಟ್. ಮಾಯತೇ | ಮಮಾ+ಏ. 'ಆತೋ ಲೋಪ ಇಟಿ ಚ' ಆಲೋಪ. ಮಮೇ | ಮಮಾತೇ | ಮಮಿರೇ || ಇತ್ಯಾದಿ. ಮಾತಾ | ಮಾಸ್ಯತೇ | ಮಾಯತಾಮ್ | ಅಮಾಯತ | ಮಾಯೇತ | ಮಾಸೀಷ್ಟ | ಅಮಾಸ್ತ | ಅಮಾಸ್ಯತ ||

ಜನೀ ಧಾತು. ಈಕಾರ ಇತ್. ಆತ್ಮನೇಪದೀ. ಜನ್+ಯ+ತೇ ಎಂದಿರುವಾಗ ಧಾತುವಿಗೆ ಜಾದೇಶ ಹೇಳುತ್ತಾನೆ.

ಜ್ಞಾ, ಜನ್ ಧಾತುಗಳಿಗೆ ಜಾದೇಶ ಹೇಳುವ ಸೂತ್ರ.

**೬೪೧ ಜ್ಞಾಜನೋರ್ಜಾ ॥ ೭-೩-೭೯ ॥**

**ಅನಯೋರ್ಜಾದೇಶಃ ಸ್ಯಾಚ್ಛಿತಿ । ಜಾಯತೇ । ಜಜ್ಞೇ । ಜನಿತಾ । ಜನಿಷ್ಯತೇ ॥**

ಜ್ಞಾಜನೋಃ, ಜಾ ॥ ದ್ವಿಪದ ಸೂತ್ರ. 'ಷ್ಠಿವುಕ್ಲಮುಚಮಾಂ—' ಸೂತ್ರದಿಂದ "ಶಿತಿ' ಅನುವೃತ್ತಿ. **ಸೂತ್ರಾರ್ಥ—**ಜ್ಞಾ, ಜನ್ ಧಾತುಗಳಿಗೆ ಶಕಾರ ಇತ್ತಾದ ಪ್ರತ್ಯಯಪರವಾದಾಗ ಜಾ ಆದೇಶ ಬರುತ್ತದೆ. ಶ್ಯನ್ ಶಿತ್ತಾದ ಪ್ರತ್ಯಯವಾದುದರಿಂದ ಜನಿಗೆ ಜಾದೇಶ ಬಂದರೆ ಜಾಯತೇ ರೂಪವಾಗುತ್ತದೆ. ಜಾಯೇತೇ. ಜಾಯನ್ತೇ ॥ ಜಾಯಸೇ । ಜಾಯೇಥೇ । ಜಾಯಧ್ವೇ ॥ ಜಾಯೇ । ಜಾಯಾವಹೇ । ಜಾಯಾಮಹೇ ॥

**ಲಿಟ್** ॥ ಜನ್‌ಜನ್+ಏ. 'ಗಮಹನಜನ—' (ಸೂ. ೫೦೭) ಸೂತ್ರದಿಂದ ಧಾತುವಿನ ಉಪಧೆಗೆ ಲೋಪ. ಜಜ್‌ನ್+ಏ. 'ಸ್ತೋಃಶ್ಚುನಾಶ್ಚುಃ' ಜಜ್‌ಞ್+ಏ =ಜಜ್ಞೇ । ಜಜ್ಞಾತೇ । ಜಜ್ಞಿರೇ ॥ ಇತ್ಯಾದಿ. **ಲುಟ್** ॥ ಜನಿತಾ । ಇತ್ಯಾದಿ. **ಲೃಟ್** ॥ ಜನಿಷ್ಯತೇ । ಇತ್ಯಾದಿ. **ಲೋಟ್** ॥ ಜಾಯತಾಮ್ । ಇತ್ಯಾದಿ. **ಲಙ್** ॥ ಅಜಾಯತ । **ವಿಧಿಲಿಙ್** ॥ ಜಾಯೇತ । ಜಾಯೇಯಾತಾಮ್ । ಜಾಯೇರನ್ ॥ ಇತ್ಯಾದಿ. **ಆಶೀರ್ಲಿಙ್** ॥ ಜನಿಷೀಷ್ಟ । ಇತ್ಯಾದಿ. **ಲುಙ್** ॥ ಅಜನ್+ಚ್ಲಿ+ತ ಎಂದಿರುವಾಗ ಚ್ಲಿಗೆ ವಿಕಲ್ಪವಾಗಿ ಚಿಣ್ ಆದೇಶ ಹೇಳುತ್ತಾನೆ.

ಚ್ಲಿಗೆ ಚಿಣ್ ವಿಕಲ್ಪವಾಗಿ ಹೇಳುವ ಸೂತ್ರ.

**೬೪೨. ದೀಪಜನಬುಧಪೂರಿತಾಯಿಪ್ಯಾಯಿಭ್ಯೋಽನ್ಯತರಸ್ಯಾಮ್ ॥ ॥ ೩-೧-೬೧ ॥**

**ಏಭ್ಯಶ್ಚ್ಲೇಶ್ಚಿಣ್ ವಾ ಸ್ಯಾದೇಕವಚನೇ ತಶಬ್ದೇ ಪರೇ ॥**

ದೀಪ....ಯಿಭ್ಯಃ, ಅನ್ಯತರಸ್ಯಾಮ್ ॥ ದ್ವಿಪದ ಸೂತ್ರ. 'ಚ್ಲೇಃ ಸಿಚ್' ಸೂತ್ರದಿಂದ 'ಚ್ಲೇಃ' 'ಚಿಣ್ ತೇ ಪದಃ' ಸೂತ್ರದಿಂದ 'ಚಿಣ್', 'ತೇ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ—**ದೀಪ, ಜನ, ಬುಧ, ಪೂರಿ, ತಾಯಿ, ಪ್ಯಾಯಿ ಧಾತುಗಳ ಪರದಲ್ಲಿರುವ ಚ್ಲಿಗೆ ಏಕವಚನವಾದ ತ ಶಬ್ದ ಪರದಲ್ಲಿರುವಾಗ ಚಿಣ್ ಆದೇಶವಿಕಲ್ಪವಾಗಿ ಬರುತ್ತದೆ. ದೀಪಾದಿಗಳು ಆತ್ಮನೇಪದಿಗಳಾದುದರಿಂದ

ತ ಎಂದರೆ ಏಕವಚನವೇ ಆಗಿರುತ್ತದೆ. ಚಿಣಿನಲ್ಲಿ 'ಚುಟೂ' ಸೂತ್ರದಿಂದ ಚಕಾರ ಇತ್. 'ಹಲಂತ್ಯಮ್'/ ಸೂತ್ರದಿಂದ ಣಕಾರ ಇತ್. ಇಕಾರ ಉಳಿಯುತ್ತದೆ. ಅಜನ್+ಇ+ತ ಎಂದಿರುವಾಗ ತ ಪ್ರತ್ಯಯಕ್ಕೆ ಲುಕ್ ಹೇಳುತ್ತಾನೆ.

ಚಿಣಿನ ಪರಕ್ಕೆ ಲುಕ್ ಹೇಳುವ ಸೂತ್ರ.

೭೪೩. ಚಿಣೋ ಲುಕ್ || ೬-೪-೧೦೪ ||

ಚಿಣಃ ಪರಸ್ಯ ಲುಕ್ ಸ್ಯಾತ್ ||

ಚಿಣಃ ಲುಕ್ || ದ್ವಿಪದ ಸೂತ್ರ. ಚಿಣಃ ಪಂಚಮೀ. **ಸೂತ್ರಾರ್ಥ**—ಚಿಣಿನ ಪರಕ್ಕೆ ಲುಕ್ ಬರುತ್ತದೆ. ಪ್ರಕೃತ ಚಿಣಿನ ಪರದಲ್ಲಿ ತ ಇರುವುದರಿಂದ ಅದಕ್ಕೆ ಲುಕ್ ಬಂದರೆ ಅಜನ್+ಇ ಎಂದು ಉಳಿಯುತ್ತದೆ. ಚಿಣ್ ಣಿತ್ತಾದುದರಿಂದ ಇದು ಪರವಾದಾಗ 'ಅತ ಉಪಧಾಯಾಃ' ಸೂತ್ರದಿಂದ ವೃದ್ಧಿ ಬರಬೇಕಾಗುತ್ತದೆ. ಆದಕ್ಕೋಸ್ಕರ ಇಲ್ಲಿ ವೃದ್ಧಿನಿಷೇಧ ಹೇಳುತ್ತಾನೆ.

ಜನ್ ವಧ್‌ಧಾತುಗಳ ಉಪಧೆಗೆ ವೃದ್ಧಿನಿಷೇಧ ಹೇಳುವ ಸೂತ್ರ.

೭೪೪. ಜನಿವಧ್ಯೋಶ್ಚ || ೭-೩-೩೫ ||

**ಅನಯೋರುಪಧಾಯಾ ವೃದ್ಧಿರ್ನ ಸ್ಯಾಚ್ಚಿಣಿ ಞ್ಣಿತಿ ಕೃತಿ ಚ | ಅಜನಿ | ಅಜನಿಷ್ಟ ||**

ಜನಿವಧ್ಯೋಃ, ಚ || 'ಅತ ಉಪಧಾಯಾಃ' ಸೂತ್ರದಿಂದ 'ಉಪಧಾಯಾಃ', 'ಮೃಜೇರ್ವೃದ್ಧಿಃ' ಸೂತ್ರದಿಂದ 'ವೃದ್ಧಿಃ', 'ನೋದಾತ್ತೋಪದೇಶಸ್ಯ—' ಸೂತ್ರದಿಂದ 'ನ' 'ಅಚೋಞ್ಣಿತಿ' ಸೂತ್ರದಿಂದ 'ಞ್ಣಿತಿ' 'ಆತೋ ಯುಕ್ ಚಿಣ್ ಕೃತೋಃ' ಸೂತ್ರದಿಂದ 'ಚಿಣ್‌ಕೃತೋಃ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಜನ್, ವಧ್ ಧಾತುಗಳ ಉಪಧೆಗೆ ಚಿಣ್, ಞಿತ್ ಣಿತ್ ಆದ ಕೃತ್ ಪ್ರತ್ಯಯ ಪರವಾದಾಗ ವೃದ್ಧಿ ಬರುವುದಿಲ್ಲ. ಪ್ರಕೃತ ಜನಿಗೆ ಚಿಣ್ ಪರದಲ್ಲಿರುವುದರಿಂದ ಉಪಧಾವೃದ್ಧಿ ಬರುವುದಿಲ್ಲ. ಅಜನಿ. ಚ್ಲಿಗೆ ಚಿಣ್ ಬಾರದಿದ್ದರೆ ಅಜನ್+ಇಸ್+ತ. ಷತ್ವ, ಷ್ಟುತ್ವ. ಅಜನಿಷ್ಟ | ಅಜನಿಷಾತಾಮ್ | ಅಜನಿಷತ || ಅಜನಿಷ್ಠಾಃ | ಅಜನಿಷಾಥಾಮ್ | ಅಜನಿಢ್ವಮ್, ಅಜನಿಧ್ವಮ್ || ಅಜನಿಷಿ | ಅಜನಿಷ್ವಹಿ | ಅಜನಿಷ್ಮಹಿ ||

**ಲೃಙ್** || ಅಜನಿಷ್ಯತ | ಇತ್ಯಾದಿ.

|| ೧೦೫ || **ದೀಪೀ— ದೀಪ್ತೌ** (ಪ್ರಕಾಶಿಸುವುದು.)

**ದೀಪ್ಯತೇ | ದಿದೀಪೇ | ಅದೀಪಿ, ಅದೀಪಿಷ್ಟ |**

|| ೧೦೬ || ಪದ—ಗತೌ (ಹೋಗುವುದು.)
ಪದ್ಯತೇ | ಪೇದೇ | ಪತ್ತಾ | ಪತ್ಸೀಷ್ಟ |

**ದೀಪೀ** ಈದಿತ್ತಾದ ಧಾತು. ಸೇಟ್. ದೀಪ್ಯತೇ | ದಿದೀಪೇ | ದೀಪಿತಾ | ದೀಪಿಷ್ಯತೇ | ದೀಪ್ಯತಾಮ್ | ಅದೀಪ್ಯತ | ದೀಪ್ಯೇತ | ದೀಪಿಷೀಷ್ಟ | **ಲುಙ್**ನಲ್ಲಿ "ದೀಪಜನಬುಧ—' ಸೂತ್ರದಿಂದ ಹಿಂದಿನಂತೆ ಚ್ಲಿಗೆ ಚಿಣ್ ವಿಕಲ್ಪ ಬಂದು ತ ಲುಕ್ಕಾದರೆ ಅದೀಪಿ; ಬಾರದಿದ್ದರೆ, ಅದೀಪಿಷ್ಟ ಎಂದು ಎರಡು ರೂಪಗಳಾಗುತ್ತವೆ. ಅದೀಪಿಷಾತಾಮ್ | ಇತ್ಯಾದಿ. **ಲೃಙ್** || ಅದೀಪಿಷ್ಯತ | ಇತ್ಯಾದಿ.

**ಪದ** ಧಾತು. ಅಕಾರ ಇತ್. ಅನಿಟ್. ಪದ್ಯತೇ | **ಲಿಟ**ನಲ್ಲಿ 'ಅತ ಏಕಹಲ್ ಮಧ್ಯೇಽನಾದೇಶಾದೇರ್ಲಿಟಿ' ಸೂತ್ರದಿಂದ ಏತ್ವಾಭ್ಯಾಸಲೋಪ. ಪೇದೇ | ಪೇದಾತೇ | ಪೇದಿರೆ || ಪೇದಿಷೇ | ಪೇದಾಥೇ | ಪೇದಿಧ್ವೇ || ಪೇದೇ | ಪೇದಿವಹೇ | ಪೇದಿಮಹೇ || **ಲುಟ್** || ಪದ್+ತಾ. 'ಖರಿಚ' ಪತ್ತಾ ಪತ್ತಾರೌ | ಪತ್ತಾರಃ || ಇತ್ಯಾದಿ. ಪತ್ಸ್ಯತೇ | ಪದ್ಯತಾಮ್ | ಅಪದ್ಯತ | ಪದ್ಯೇತ | ಪತ್ಸೀಷ್ಟ | **ಲುಙ್** ನಲ್ಲಿ ಅಪದ್+ಚ್ಲಿ+ತ ಎಂದಿರುವಾಗ ಚ್ಲಿಗೆ ಚಿಣ್ ಹೇಳುತ್ತಾನೆ.

ಪದಿನ ಚ್ಲಿಗೆ ಚಿಣ್ ಹೇಳುವ ಸೂತ್ರ.

**೬೪೫. ಚಿಣ್ ತೇ ಪದಃ || ೩-೧-೬೦ ||**

**ಪದಶ್ಚ್ಲೇಶ್ಚಿಣ್ ಸ್ಯಾತ್ತಶಬ್ದೇ ಪರೇ | ಅಪಾದಿ | ಅಪತ್ಸಾತಾಮ್ | ಅಪತ್ಸತ ||**

ತ್ರಿಪದ ಸೂತ್ರ. ಚ್ಲೇಃ ಸಿಜ್' ಸೂತ್ರದಿಂದ "ಚ್ಲೇಃ' ಅನುವೃತ್ತಿ. **ಸೂತ್ರಾರ್ಥ**— ಪದ್ ಧಾತುವಿನ ಪರದಲ್ಲಿರುವ ಚ್ಲಿಗೆ ತ ಶಬ್ದ ಪರದಲ್ಲಿರುವಾಗ ಚಿಣ್ ಆದೇಶ ಬರುತ್ತದೆ. ಚ್ಲಿಗೆ ಚಿಣ್ ಬಂದರೆ ಅಪದ್+ಇ+ತ ಎಂದಾಗುತ್ತದೆ. "ಚಿಣೋ ಲುಕ್" ಸೂತ್ರದಿಂದ ತಕ್ಕೆ ಲುಕ್. "ಅತ ಉಪಧಾಯಾಃ' ಸೂತ್ರದಿಂದ ಉಪಧಾವೃದ್ಧಿ. ಅಪಾದಿ. ಅಪದ್+ಸ್+ಆತಾಮ್. 'ಖರಿಚ' ಅಪತ್ಸಾತಾಮ್ | ಅಪತ್ಸತ || ಅಪದ್+ಸ್+ಥಾಸ್. "ಝಲೋ ಝಲಿ' ಸಲೋಪ. "ಖರಿಚ" ಅಪತ್ಥಾಃ | ಅಪತ್ಸಾಥಾಮ್ | ಅಪದ್+ಸ್+ಧ್ವಮ್. 'ಧಿಚ' ಸಲೋಪ. ಅಪದ್ಧ್ವಮ್ || ಅಪತ್ಸಿ | ಅಪತ್ಸ್ವಹಿ | ಅಪತ್ಸ್ಮಹಿ ||
**ಲೃಙ್** || ಅಪತ್ಸ್ಯತ | ಇತ್ಯಾದಿ.

|| ೧೦೭ || ಬುಧ—ಅವಗಮನೇ (ತಿಳಿಯುವುದು.)

**ಬುಧ್ಯತೇ | ಬೋದ್ಧಾ | ಭೋತ್ಸ್ಯತೇ | ಭುತ್ಸೀಷ್ಟ | ಅಬೋಧಿ, ಅಬುದ್ಧ | ಅಭುತ್ಸಾತಾಮ್ ||**

15

|| ೧೦೮ || ಯುಧ—ಸಂಪ್ರಹಾರೇ (ಯುದ್ಧಮಾಡುವುದು.)

ಯುಧ್ಯತೇ | ಯುಯುಧೇ | ಯೋದ್ಧಾ | ಅಯುದ್ಧ |

|| ೧೦೯ || ಸೃಜ—ವಿಸರ್ಗೇ (ಸೃಷ್ಟಿಸುವುದು)

ಸೃಜ್ಯತೇ | ಸಸೃಜೇ | ಸಸೃಜಿಷೇ ||

**ಬುಧ** ಧಾತು. ಅನಿಟ್. ಶ್ಯನ್ ಙಿತ್ತಾದುದರಿಂದ ಲಘೂಪಧಗುಣವಿಲ್ಲ. ಬುಧ್ಯತೇ | ಬುಬುಧೇ | **ಲುಟ್** || ಬುಧ್ + ತಾ ಪುಗಂತಗುಣ. ಬೋಧ್ + ತಾ 'ಝಷಸ್ತಥೋರ್ಧೋಽಧಃ' ಸೂತ್ರದಿಂದ ತಕ್ಕೆ ಧಾದೇಶ. 'ಝಲಾಂ ಜಶ್ ಝಶಿ' ಪೂರ್ವಧಕಾರಕ್ಕೆ ದಕಾರ. ಬೋದ್ಧಾ | ಬೋದ್ಧಾರೌ | ಇತ್ಯಾದಿ. **ಲೃಟ್** || ಬುಧ್ + ಸ್ಯತೇ. ಪುಗಂತಗುಣ. 'ಖರಿಚ' ಬೋಧ್ + ಸ್ಯತೇ. 'ಏಕಾಚೋ ಬಶೋ ಭಷ್—' ಸೂತ್ರದಿಂದ ಸಕಾರಪರವಾದುದದರಿಂದ ಬಕ್ಕೆ ಭಾದೇಶ. ಭೋತ್ಸ್ಯತೇ | ಭೋತ್ಸ್ಯೇತೇ | ಇತ್ಯಾದಿ. ಬುಧ್ಯತಾಮ್ | ಅಬುಧ್ಯತ | ಬುಧ್ಯೇತ | **ಆಶೀರ್ಲಿಙ್** || ಬುಧ್ + ಸೀಷ್ಟ. ಸೀಯುಟ್ ಕಿತ್ತಾದುದರಿಂದ ಗುಣವಿಲ್ಲ. 'ಖರಿಚ' ಧಕಾರಕ್ಕೆ ಚರ್ತ್ವ. 'ಏಕಾಚಃ—' ಸೂತ್ರದಿಂದ ಆದಿಗೆ ಭತ್ವ. ಭುತ್ಸೀಷ್ಟ | ಭುತ್ಸೀಯಾಸ್ತಾಮ್ | ಭುತ್ಸೀರನ್ || ಭುತ್ಸೀಷ್ಠಾಃ | ಭುತ್ಸೀಯಾಸ್ಥಾಮ್ | ಭುತ್ಸೀಧ್ವಮ್ || ಭುತ್ಸೀಯ | ಭುತ್ಸೀವಹಿ | ಭುತ್ಸೀಮಹಿ || **ಲುಙ್** || ಏಕವಚನದಲ್ಲಿ 'ದೀಪಜನಬುಧ—' ಸೂತ್ರದಿಂದ ವಿಕಲ್ಪ ಚಿಣ್ ಬರುವುದರಿಂದ ಎರಡು ರೂಪ. ಅಬೋಧಿ. ಚಿಣ್ ಬಾರದಿರುವಾಗ ಅಬುಧ್ + ಸ್ + ತ ಎಂದಿರುವಾಗ 'ಝಲೋ ಝಲಿ' ಸೂತ್ರದಿಂದ ಸಲೋಪ. 'ಝಷಸ್ತಥೋಃ—' ಸೂತ್ರದಿಂದ ತಕ್ಕೆ ಧತ್ವ. ಜಶ್ತ್ವ. ಅಬುದ್ಧ | ಅಭುತ್ಸಾತಾಮ್ | ಅಭುತ್ಸತ || ಅಬುದ್ಧಾಃ | ಅಭುತ್ಸಾಥಾಮ್ | ಅಬುಧ್ವಮ್ || ಅಭುತ್ಸಿ | ಅಭುತ್ಸ್ವಹಿ | ಅಭುತ್ಸ್ಮಹಿ || **ಲೃಙ್** || ಅಭೋತ್ಸ್ಯತ | ಇತ್ಯಾದಿ.

**ಯುಧ** ಧಾತು. ಅನಿಟ್. ಯುಧ್ಯತೇ | ಯುಯುಧೇ | ಯೋದ್ಧಾ | ಯೋತ್ಸ್ಯತೇ | ಯುಧ್ಯತಾಮ್ | ಅಯುಧ್ಯತ | ಯುಧ್ಯೇತ | ಯುತ್ಸೀಷ್ಟ | **ಲುಙ್** || ಅಯುದ್ಧ | ಅಯುತ್ಸಾತಾಮ್ | ಅಯುತ್ಸತ || ಅಯುದ್ಧಾಃ | ಅಯುತ್ಸಾಥಾಮ್ | ಅಯುದ್ಧ್ವಮ್ || ಅಯುತ್ಸಿ | ಅಯುತ್ಸ್ವಹಿ | ಅಯುತ್ಸ್ಮಹಿ || **ಲೃಙ್** || ಅಯೋತ್ಸ್ಯತ | ಇತ್ಯಾದಿ.

**ಸೃಜ** ಧಾತು. ಅನಿಟ್. ಇದಕ್ಕೆ ತ್ಯಾಗರೂಪಾರ್ಥ ಹೇಳಿದರೂ ವಿ ಉಪಸರ್ಗವಿರುವಾಗ ಮಾತ್ರ ತ್ಯಾಗಾರ್ಥ ತೋರುತ್ತದೆ. ಕೇವಲ ಧಾತುವು ಧರ್ಮಾರ್ಜನಾರ್ಥದಲ್ಲಿ ಉಪಯುಕ್ತವಾಗುತ್ತದೆ. ಸೃಜ್ಯತೇ || ಸಸೃಜೇ | ಸಸೃಜಾತೇ | ಸಸೃಜಿರೆ || ಸಸೃಜಿಷೇ | ಸಸೃಜಾಥೇ | ಸಸೃಜಿಧ್ವೇ || ಸಸೃಜೇ | ಸಸೃಜಿವಹೇ | ಸಸೃಜಿಮಹೇ || **ಲುಟ್** || ಸೃಜ್ + ತಾ ಎಂದಿರುವಾಗ ಅಮಾಗಮ ಹೇಳುತ್ತಾನೆ.

ಸ್ಪೃಜ್. ದೃಶ್ ಧಾತುಗಳಿಗೆ ಅಮಾಗಮ ಹೇಳುವ ಸೂತ್ರ.

೬೪೬. ಸೃಜಿದೃಶೋರ್ಝಲ್ಯಮಕಿತಿ || ೬-೧-೫೮ ||

ಅನಯೋರಮಾಗಮಃ ಸ್ಯಾಜ್ಝಲಾದಾವಕಿತಿ | ಸ್ರಷ್ಟಾ | ಸ್ರಕ್ಷ್ಯತೇ | ಸೃಕ್ಷೀಷ್ಟ | ಅಸೃಷ್ಟ | ಅಸೃಕ್ಷಾತಾಮ್ ||

ಸೃಜಿದೃಶೋಃ ಝಲಿ, ಅಮ್, ಅಕಿತಿ || ನಾಲ್ಕು ಪದಗಳುಳ್ಳ ಸೂತ್ರ. **ಸೂತ್ರಾರ್ಥ**—ಸೃಜ್, ದೃಶ್ ಧಾತುಗಳಿಗೆ ಝಲಾದಿಯಾದ ಅಕಿತ್ತಾದ ಪ್ರತ್ಯಯ ಪರದಲ್ಲಿರುವಾಗ ಅಮಾಗಮ ಬರುತ್ತದೆ. ಅಮ್ ಮಿತ್ತಾದುದರಿಂದ 'ಮಿದಚೋಂತ್ಯಾತ್ಪರಃ' ಸೂತ್ರದಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ತಾಸ್ ಝಲಾದಿ ಅಕಿತ್ತಾದುದರಿಂದ ಸೃಜಿಗೆ ಅಮಾಗಮ. ಋಕಾರದ ಪರಕ್ಕೆ ಅ ಬಂದರೆ ಸೃ + ಅ + ಜ್ + ತಾ. ಯಣ್. ಸ್ರಜ್ + ತಾ. 'ವ್ರಶ್ಚಭ್ರಸ್ಜ—' ಸೂತ್ರದಿಂದ ಜಕಾರಕ್ಕೆ ಷಕಾರಾದೇಶ. ಷ್ಟುತ್ವ. ಸ್ರಷ್ಟಾ | ಸ್ರಷ್ಟಾರೌ | ಸ್ರಷ್ಟಾರಃ || ಇತ್ಯಾದಿ.

ಲೃಟ್ || ಸೃಜ್ + ಸ್ಯ + ತೇ. ಹಿಂದಿನ ಸೂತ್ರದಿಂದ ಅಮ್. ಯಣ್. ಷ್ಟುತ್ವ. ಸ್ರಷ್ + ಸ್ಯತೇ. 'ಷಢೋಃ ಕಃ ಸಿ' ಸೂತ್ರದಿಂದ ಷಕ್ಕೆ ಕತ್ವ. ಸ್ರಕ್ + ಸ್ಯತೇ. 'ಆದೇಶಪ್ರತ್ಯಯಯೋಃ' ಸ್ರಕ್ + ಷ್ಯತೇ=ಸ್ರಕ್ಷ್ಯತೇ | ಇತ್ಯಾದಿ. ಸೃಜ್ಯತಾಮ್ | ಅಸೃಜ್ಯತ | ಸೃಜ್ಯೇತ | **ಆಶೀರ್ಲಿಙ್** || ಸೃಜ್ + ಸೀಷ್ಟ. ಝಲಾದಿ ಪ್ರತ್ಯಯವಿದ್ದರೂ ಕಿತ್ತಾದುದರಿಂದ ಅಮಾಗಮವಿಲ್ಲ. ಷತ್ವ, ಕತ್ವ. ಸೃಕ್ಷೀಷ್ಟ | ಸೃಕ್ಷೀಯಾಸ್ತಾಮ್ | ಸೃಕ್ಷೀರನ್ || ಸೃಕ್ಷೀಷ್ಠಾಃ | ಸೃಕ್ಷೀಯಾಸ್ಥಾಮ್ | ಸೃಕ್ಷೀಧ್ವಮ್ || ಸೃಕ್ಷೀಯ | ಸೃಕ್ಷೀವಹಿ | ಸೃಕ್ಷೀಮಹಿ || **ಲುಙ್** || ಅಸೃಜ್ + ಸ್ + ತ. 'ಝಲೋ ಝಲಿ' ಸಲೋಪ. ಅಸೃಜ್ + ತ. 'ವ್ರಶ್ಚೇತಿ' ಸೂತ್ರದಿಂದ ಜಕ್ಕೆ ಷತ್ವ. ಷ್ಟುತ್ವ. ಅಸೃಷ್ಟ | ಅಸೃಕ್ಷಾತಾಮ್ | ಅಸೃಕ್ಷತ || ಅಸೃಷ್ಠಾಃ | ಅಸೃಕ್ಷಾಥಾಮ್ | ಅಸೃಢ್ವಮ್ || ಅಸೃಕ್ಷಿ | ಅಸೃಕ್ಷ್ವಹಿ | ಅಸೃಕ್ಷ್ಮಹಿ || **ಲೃಙ್** || ಅಸ್ರಕ್ಷ್ಯತ | ಇತ್ಯಾದಿ.

|| ೧೧೦ || **ಮೃಷ = ತಿತಿಕ್ಷಾಯಾಮ್ (ಸಹಿಸುವುದು.)**

**ಮೃಷ್ಯತಿ, ಮೃಷ್ಯತೇ || ಮಮರ್ಷ | ಮಮರ್ಷಿಥ | ಮಮೃಷಿಷೇ | ಮರ್ಷಿತಾಸಿ | ಮರ್ಷಿಷ್ಯತಿ, ಮರ್ಷಿಷ್ಯತೇ ||**

|| ೧೧೧ || **ಣಹ ಬಂಧನೇ (ಕಟ್ಟುವುದು.)**

ನಹ್ಯತಿ. ನಹ್ಯತೇ | **ನನಾಹ | ನೇಹಿಥ, ನನದ್ಧ | ನೇಹೇ | ನದ್ಧಾ ನತ್ಸ್ಯತಿ | ಅನಾತ್ಸೀತ್, ಅನದ್ಧ ||**

ಇತಿ ದಿವಾದಯಃ

**ಮೃಷ** ಧಾತು. ಸ್ವರಿತೇತ್ತ್ವಾದುದರಿಂದ ಉಭಯಪದಿ. ಸೇಟ್. **ಲಟ್** || ಮೃಷ್ಯತೇ, ಮೃಷ್ಯತಿ | ಇತ್ಯಾದಿ. **ಲಿಟ್** || ಮೃಷ್‌ಮೃಷ್+ಅ. ಲಘೂಪಧ ಗುಣ. ಉರತ್. ಹಲಾದಿಶೇಷ. ಮಮರ್ಷ | ಮಮೃಷತುಃ | ಮಮೃಷುಃ || ಮಮರ್ಷಿಥ | ಮಮೃಷಥುಃ | ಮಮೃಷ || ಮಮರ್ಷ | ಮಮೃಷಿವ | ಮಮೃಷಿಮ | **ಆ.**—ಮಮೃಷೇ | ಮಮೃಷಾತೇ | ಮಮೃಷಿರೇ || ಮಮೃಷಿಷೇ | ಮಮೃಷಾಥೇ, ಮಮೃಷಿಧ್ವೇ || ಮಮೃಷೇ | ಮಮೃಷಿವಹೇ | ಮಮೃಷಿಮಹೇ || **ಲುಟ್** || ಮರ್ಷಿತಾ | ಮರ್ಷಿತಾಸಿ, ಮರ್ಷಿತಾಸೇ | ಇತ್ಯಾದಿ. **ಲೃಟ್** || ಮರ್ಷಿಷ್ಯತಿ, ಮರ್ಷಿಷ್ಯತೇ | ಇತ್ಯಾದಿ. **ಲೋಟ್** || ಮೃಷ್ಯತು, ಮೃಷ್ಯತಾತ್ | ಮೃಷ್ಯತಾಮ್ || **ಲಙ್** || ಅಮೃಷ್ಯತ್, ಅಮೃಷ್ಯತ | **ವಿಧಿಲಿಙ್** || ಮೃಷ್ಯೇತ್, ಮೃಷ್ಯೇತ | **ಆಶೀರ್ಲಿಙ್** || ಮೃಷ್ಯಾತ್, ಮರ್ಷಿಷೀಷ್ಟ | ಇತ್ಯಾದಿ. **ಲುಙ್** || ಅಮರ್ಷೀತ್ | ಅಮರ್ಷಿಷ್ಟಾಮ್ | ಅಮರ್ಷಿಷುಃ || ಅಮರ್ಷೀಃ | ಅಮರ್ಷಿಷ್ಟಮ್ | ಅಮರ್ಷಿಷ್ಟ || ಅಮರ್ಷಿಷಮ್ | ಅಮರ್ಷಿಷ್ವ | ಅಮರ್ಷಿಷ್ಮ || **ಆ.**—ಅಮರ್ಷಿಷ್ಟ | ಅಮರ್ಷಿಷಾತಾಮ್ | ಅಮರ್ಷಿಷತ || ಇತ್ಯಾದಿ. **ಲೃಙ್** || ಅಮರ್ಷಿಷ್ಯತ್, ಅಮರ್ಷಿಷ್ಯತ | ಇತ್ಯಾದಿ.

**ಣಹ** ಧಾತು. ಅನಿಟ್. ಉಭಯಪದೀ. 'ಣೋ ನಃ' ಸೂತ್ರದಿಂದ ಆದಿಗೆ ನಕಾರಾದೇಶ. ನಹ್ಯತಿ, ನಹ್ಯತೇ || ನನಾಹ | ನೇಹತುಃ | ನೇಹುಃ || ಭಾರದ್ವಾಜ ನಿಯಮದಿಂದ ವಿಕಲ್ಪ ಇಟ್. ನೇಹಿಥ, ನನದ್ಧ | 'ನಹೋಧಃ' ಸೂತ್ರದಿಂದ ಹಕ್ಕೆ ಧಕಾರಾದೇಶ. ಥಕ್ಕೆ ಧತ್ವ. ನೇಹಥುಃ | ನೇಹ || ನನಾಹ, ನನಹ | ನೇಹಿವ | ನೇಹಿಮ || **ಆ.**—ನೇಹೇ | ನೇಹಾತೇ | ನೇಹಿರೇ || ಇತ್ಯಾದಿ. **ಲುಟ್** || 'ನಹೋಧಃ' ಸೂತ್ರದಿಂದ ಹಕ್ಕೆ ಧತ್ವ. ನದ್ಧಾ | ನದ್ಧಾಸಿ, ನದ್ಧಾಸೇ | ಇತ್ಯಾದಿ. **ಲೃಟ್** || 'ನಹೋಧಃ' ಹಕ್ಕೆ ಧತ್ವ. 'ಖರಿಚ.' ನತ್ಸ್ಯತಿ, ನತ್ಸ್ಯತೇ | **ಲೋಟ್** || ನಹ್ಯತು, ನಹ್ಯತಾಮ್ | **ಲಙ್** || ಅನಹ್ಯತ್, ಅನಹ್ಯತ | **ವಿಧಿಲಿಙ್** || ನಹ್ಯೇತ್, ನಹ್ಯೇತ | **ಆಶೀರ್ಲಿಙ್** || ನಹ್ಯಾತ್ || **ಆ.**—ನಹ್+ಸೀಷ್ಟ. 'ನಹೋಧಃ' ನಧ್+ಸೀಷ್ಟ. 'ಖರಿಚ'. ನತ್ಸೀಷ್ಟ | ನತ್ಸೀಯಾಸ್ತಾಮ್ | ನತ್ಸೀರನ್ || ನತ್ಸೀಷ್ಠಾಃ | ನತ್ಸೀಯಾಸ್ಥಾಮ್ | ನತ್ಸೀಧ್ವಮ್ || ನತ್ಸೀಯ | ನತ್ಸೀವಹಿ | ನತ್ಸೀಮಹಿ || **ಲುಙ್** || ಅನಹ್+ಸೀತ್. 'ನಹೋಧಃ' ಹಕ್ಕೆ ಧತ್ವ. 'ವದವ್ರಜಹಲಂತಸ್ಯಾಚಃ' ವೃದ್ಧಿ. ಅನಾತ್ಸೀತ್ | ಅನಾಧ್+ಸ್+ತಾಮ್. 'ಝಲೋಝಲಿ' ಸಲೋಪ. 'ಝಷಸ್ತಥೋಃ—' ಸೂತ್ರದಿಂದ ತಕ್ಕೆ ಧಾದೇಶ. ಜಶ್ತ್ವ. ಅನಾದ್ಧಾಮ್ | ಅನಾತ್ಸುಃ || ಅನಾತ್ಸೀಃ | ಅನಾದ್ಧಮ್ | ಅನಾದ್ಧ || ಅನಾತ್ಸಮ್ | ಅನಾತ್ಸ್ವ | ಅನಾತ್ಸ್ಮ || **ಆ.**—ಅನಹ್+ಸ್+ತ. ಸಲೋಪ, ಧತ್ವ, ಜಶ್ತ್ವ. ಅನದ್ಧ | ಅನತ್ಸಾತಾಮ್ | ಅನತ್ಸತ || ಅನದ್ಧಾಃ | ಅನತ್ಸಾಥಾಮ್ | ಅನದ್ಧ್ವಮ್ || ಅನತ್ಸಿ | ಅನತ್ಸ್ವಹಿ || ಅನತ್ಸ್ಮಹಿ || **ಲೃಙ್** || ಅನತ್ಸ್ಯತ್, ಅನತ್ಸ್ಯತ | ಇತ್ಯಾದಿ.

# ೫. ಅಥ ಸ್ವಾದಯಃ

## || ೧೧೨ || ಷುಞ್— ಅಭಿಷವೇ (ಹಿಂಡುವುದು, ಸ್ವಾ. ಸ.)

### ೬೪೭. ಸ್ವಾದಿಭ್ಯಃ ಶ್ನುಃ || ೩-೧-೭೩ ||

**ಶಪೋಽಪವಾದಃ | ಸುನೋತಿ | ಸುನುತಃ | ಹುಶ್ನುವೋರಿತಿ ಯಣ್ | ಸುನ್ವನ್ತಿ | ಸುನ್ವಃ, ಸುನುವಃ | ಸುನುತೇ | ಸುನ್ವಾತೇ | ಸುನ್ವತೇ | ಸುನ್ವಹೇ, ಸುನುವಹೇ | ಸುಷಾವ, ಸುಷುವೇ | ಸೋತಾ | ಸುನು | ಸುನವಾನಿ || ಸುನವೈ | ಸುನುಯಾತ್ | ಸೂಯಾತ್ ||**

ಷುಞ್ ಅದಿಯಾದ ಧಾತುಸಮುದಾಯಕ್ಕೆ ಸ್ವಾದಿಗಣವೆಂದು ಹೆಸರು. ಷುಞ್ ಧಾತು ಞಿತ್ತಾದುದರಿಂದ "ಸ್ವರಿತಞಿತಃ—' ಸೂತ್ರದಿಂದ ಉಭಯಪದಿ. ಅನಿಟ್. 'ಧಾತ್ವಾದೇಃ ಷಃ ಸಃ' ಸೂತ್ರದಿಂದ ಆದಿಗೆ ಸತ್ವ. ಸು ಧಾತುಸ್ವರೂಪ. ಸು + ತಿ ಎಂದಿರುವಾಗ ಶಪ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಶ್ನುವಿಕರಣ ಹೇಳುತ್ತಾನೆ.

ದ್ವಿಪದ ಸೂತ್ರ. **ಸೂತ್ರಾರ್ಥ—** ಕರ್ತ್ರರ್ಥಕ ಸಾರ್ವಧಾತುಕಪರವಾದಾಗ ಸು ಮುಂತಾದ ಧಾತುಗಳಿಗೆ ಶ್ನುವಿಕರಣಪ್ರತ್ಯಯ ಬರುತ್ತದೆ. ಶ್ನುವಿನಲ್ಲಿ 'ಲಶಕ್ವತದ್ಧಿತೇ' ಸೂತ್ರದಿಂದ ಶಕಾರ ಇತ್. ಶ್ನು ಸಾರ್ವಧಾತುಕವಾದರೂ ಅಪಿತ್ತಾದುದರಿಂದ ಙಿತ್ತಾಗುವುದರಿಂದ ಇದನ್ನು ನಿಮಿತ್ತೀಕರಿಸಿ ಗುಣಬರುವುದಿಲ್ಲ. ಸುನು + ತಿ. 'ಸಾರ್ವಧಾತುಕಾರ್ಧಧಾತುಕಯೋಃ' ಉಕಾರಕ್ಕೆ ಗುಣ. ಸುನೋತಿ | ಸುನುತಃ | ಸುನು + ಅನ್ತಿ. ಉವಙ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ 'ಹುಶ್ನುವೋಃ ಸಾರ್ವಧಾತುಕೇ' ಸೂತ್ರದಿಂದ ಯಣ್. ಸುನ್ವನ್ತಿ || ಸುನೋಷಿ | ಸುನುಥಃ | ಸುನುಥ || ಸುನೋಮಿ | ವಸ್ ಮಸ್ ಪರವಾದಾಗ 'ಲೋಪಶ್ಚಾಸ್ಯಾನ್ಯತರಸ್ಯಾಂ ಮ್ವೋಃ' ಸೂತ್ರದಿಂದ ವಿಕಲ್ಪವಾಗಿ ಉಕಾರಕ್ಕೆ ಲೋಪ. ಆಗ ಎರಡೆರಡು ರೂಪಗಳು. ಸುನುವಃ, ಸುನ್ವಃ | ಸುನುಮಃ, ಸುನ್ಮಃ || ಆ –ಸುನುತೇ | ಸುನ್ವಾತೇ | ಸುನ್ವತೇ || ಸುನುಷೇ | ಸುನ್ವಾಥೇ | ಸುನುಧ್ವೇ || ಸುನ್ವೇ | ಸುನುವಹೇ, ಸುನ್ವಹೇ | ಸುನುಮಹೇ, ಸುನ್ಮಹೇ ||

**ಲಿಟ್** || ಸುನು + ಅ. 'ಆದೇಶಪ್ರತ್ಯಯಯೋಃ' ಷತ್ವ. 'ಅಚೋಞ್ಣಿತಿ' ವೃದ್ಧಿ. ಅವಾದೇಶ. ಸುಷಾವ | ಸುಷು + ಅತುಸ್. 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಉವಙ್. ಸುಷುವತುಃ | ಸುಷುವುಃ || ಸುಷವಿಥ, ಸುಷೋಥ | ಸುಷುವಥುಃ | ಸುಷುವ || ಸುಷಾವ, ಸುಷವ | ಸುಷುವಿವ | ಸುಷುವಿಮ || ಆ.— ಸುಷುವೇ | ಸುಷುವಾತೇ | ಸುಷುವಿರೇ || ಸುಷುವಿಷೇ | ಸುಷುವಾಥೇ | ಸುಷುವಿಢ್ವೇ ||

ಸುಷುವೇ । ಸುಷುವಿವಹೇ । ಸುಷುವಿಮಹೇ ॥ **ಲುಟ್** ॥ ಆರ್ಧಧಾತುಕನಿಮಿತ್ತಕ ಗುಣ. ಸೋತಾ । ಸೋತಾಸಿ, ಸೋತಾಸೇ । ಇತ್ಯಾದಿ. **ಲೃಟ್** ॥ ಸೋಷ್ಯತಿ, ಸೋಷ್ಯತೇ । ಇತ್ಯಾದಿ. **ಲೋಟ್** ॥ ಸುನೋತು, ಸುನುತಾತ್ । ಸುನುತಾಮ್ । ಸುನ್ವನ್ತು ॥ ಸುನು+ಹಿ. 'ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್' ಸೂತ್ರದಿಂದ ಹಿಲೋಪ. ಸುನು, ಸುನುತಾತ್ । ಸುನುತಮ್ । ಸುನುತ ॥ ಸುನವಾನಿ । ಸುನವಾವ । ಸುನವಾಮ ॥ ಆ.–ಸುನುತಾಮ್ । ಸುನ್ವಾತಾಮ್ । ಸುನ್ವತಾಮ್ ॥ ಸುನುಷ್ವ । ಸುನ್ವಾಥಾಮ್ । ಸುನುಧ್ವಮ್ ॥ ಸುನವೈ । ಸುನವಾವಹೈ । ಸುನವಾಮಹೈ ॥ **ಲಙ್** ॥ ಅಸುನೋತ್ । ಅಸುನುತಾಮ್ । ಅಸುನ್ವನ್ ॥ ಅಸುನೋಃ । ಅಸುನುತಮ್ । ಅಸುನುತ ॥ ಅಸುನವಮ್ । ಅಸುನ್ವ, ಅಸುನುವ । ಅಸುನ್ಮ, ಅಸುನುಮ ॥ ಆ.—ಅಸುನುತ । ಅಸುನ್ವಾತಾಮ್ । ಅಸುನ್ವತ ॥ ಅಸುನುಥಾಃ । ಅಸುನ್ವಾಥಾಮ್ । ಅಸುನುಧ್ವಮ್ ॥ ಅಸುನ್ವಿ । ಅಸುನ್ವಹಿ, ಅಸುನುವಹಿ । ಅಸುನ್ಮಹಿ, ಅಸುನುಮಹಿ ॥ ಅಸುನು ಅಂಗ. **ವಿಧಿಲಿಙ್** ॥ ಸುನು ಅಂಗ. ಸುನುಯಾತ್ ।ಸುನುಯಾತಾಮ್ । ಸುನುಯುಃ ॥ ಸುನುಯಾಃ । ಸುನುಯಾತಮ್ । ಸುನುಯಾತ ॥ ಸುನುಯಾಮ್ । ಸುನುಯಾವ । ಸುನುಯಾಮ ॥ ಆ: — ಸುನ್ವೀತ । ಸುನ್ವೀಯಾತಾಮ್ । ಸುನ್ವೀರನ್ ॥ ಸುನ್ವೀಥಾಃ । ಸುನ್ವೀಯಾಥಾಮ್ । ಸುನ್ವೀಧ್ವಮ್ ॥ ಸುನ್ವೀಯ । ಸುನ್ವೀವಹಿ । ಸುನ್ವೀಮಹಿ ॥ **ಆಶೀರ್ಲಿಙ್** ॥ ಸು+ಯಾತ್. 'ಅಕೃತ್ಸಾರ್ವಧಾತುಕಯೋರ್ದೀರ್ಘಃ' ಸೂಯಾತ್ । ಸೂಯಾಸ್ತಾಮ್ । ಸೂಯಾಸುಃ ॥ ಸೂಯಾಃ । ಸೂಯಾಸ್ತಮ್ । ಸೂಯಾಸ್ತ ॥ ಸೂಯಾಸಮ್ । ಸೂಯಾಸ್ವ । ಸೂಯಾಸ್ಮ ॥ ಆ.—ಸೋಷೀಷ್ಟ । ಸೋಷೀಯಾಸ್ತಾಮ್ । ಸೋಷೀರನ್ ॥ ಸೋಷೀಷ್ಠಾಃ । ಸೋಷೀಯಾಸ್ಥಾಮ್ । ಸೋಷೀಧ್ವಮ್ ॥ ಸೋಷೀಯ । ಸೋಷೀವಹಿ ಸೋಷೀಮಹಿ ॥ **ಲುಙ್** ॥ ಅಸು+ಸ್+ಈತ್ ಎಂದಿರುವಾಗ ಸಿಚಿಗೆ ಇಡಾಗಮ ಹೇಳುತ್ತಾನೆ.

ಸಿಚಿಗೆ ಇಡಾಗಮ ಹೇಳುವ ಸೂತ್ರ.

೬೪೮. **ಸ್ತುಸುಧೂಞ್ಭ್ಯಃ ಪರಸ್ಮೈಪದೇಷು** ॥ ೭-೨-೭೨ ॥

**ಏಭ್ಯಃ ಸಿಚ ಇಟ್ ಸ್ಯಾತ್ಪರಸ್ಮೈಪದೇಷು । ಅಸಾವೀತ್, ಅಸೋಷ್ಟ ।**

ದ್ವಿಪದ ಸೂತ್ರ. 'ಇಡತ್ಯರ್ತ—' ಸೂತ್ರದಿಂದ 'ಇಟ್,' 'ಅಜ್ಝನ್ತೇಃ ಸಿಚಿ' ಸೂತ್ರದಿಂದ 'ಸಿಚಿ' ಪದಗಳು ಅನುವೃತ್ತವಾಗುತ್ತವೆ. ಸಿಚಿ ಎಂಬುದು ಷಷ್ಠ್ಯನ್ತವಾಗಿ ವಿಪರಿಣತವಾಗುತ್ತದೆ. **ಸೂತ್ರಾರ್ಥ**—ಸ್ತು, ಸು, ಧೂಞ್ ಈ ಧಾತುಗಳ ಪರದಲ್ಲಿರುವ ಸಿಚಿಗೆ ಪರಸ್ಮೈಪದ ಪರದಲ್ಲಿರುವಾಗ 'ಇಡಾಗಮ ಬರುತ್ತದೆ. ಪ್ರಕೃತ ಸು ಧಾತುವಿನ ಸಿಚಿಗೆ ಪರಸ್ಮೈಪದ ಪರದಲ್ಲಿರುವುದರಿಂದ ಇಡಾಗಮ ಬಂದರೆ

ಅಸು + ಇಸ್ + ಈತ್. 'ಸಿಚಿ ವೃದ್ಧಿಃ ಪರಸ್ಮೈಪದೇಷು' ಸೂತ್ರದಿಂದ ವೃದ್ಧಿ ಅಸೌ + ಇಸ್ + ಈತ್. ಆವಾದೇಶ. 'ಇಟ ಈಟಿ' ಸಲೋಪ. ಸವರ್ಣದೀರ್ಘ. ಅಸಾವೀತ್ | ಅಸಾವಿಷ್ಟಾಮ್ | ಅಸಾವಿಷುಃ || ಅಸಾವೀಃ | ಅಸಾವಿಷ್ಟಮ್ | ಅಸಾವಿಷ್ಟ || ಅಸಾವಿಷ್ವ | ಅಸಾವಿಷ್ಮ || ಆ.— ಅಸು + ಸ್ + ತ. ಗುಣ. ಷತ್ವ. ಷ್ಟುತ್ವ. ಅಸೋಷ್ಟ | ಅಸೋಷಾತಾಮ್ | ಅಸೋಷತ || ಅಸೋಷ್ಠಾಃ | ಅಸೋಷಾಥಾಮ್ | ಅಸೋಢ್ವಮ್ || ಅಸೋಷಿ | ಅಸೋಷ್ವಹಿ | ಅಸೋಷ್ಮಹಿ || ಲೃಙ್ || ಅಸೋಷ್ಯತ್, ಅಸೋಷ್ಯತ | ಇತ್ಯಾದಿ.

|| ೧೧೩ || **ಚಿಞ್ = ಚಯನೇ (ರಾಶಿಮಾಡುವುದು.)**

**ಚಿನೋತಿ, ಚಿನುತೇ |**

ಚಿ ಧಾತುವಿಗೆ ಕುತ್ವ ಹೇಳುವ ಸೂತ್ರ.

೯೪೭. **ವಿಭಾಷಾ ಚೇಃ || ೭-೩-೫೮ ||**

ಅಭ್ಯಾಸಾತ್ಪರಸ್ಯ ಕುತ್ವಂ ವಾ ಸ್ಯಾತ್ಸನಿ ಲಿಟಿ ಚ | **ಚಿಕಾಯ, ಚಿಚಾಯ | ಚಿಕ್ಯೇ, ಚಿಚ್ಯೇ | ಅಚೈಷೀತ್, ಅಚೇಷ್ಟ ||**

ಚಿಞ್ ಞಿತ್ತಾಗಿರುವುದರಿಂದ ಉಭಯಪದಿ. ಅನಿಟ್. ಸುವಿನಂತೇ ರೂಪವಾಗುತ್ತದೆ. **ಲಟ್** || ಚಿನೋತಿ. ಆ.— ಚಿನುತೇ ಇತ್ಯಾದಿ. **ಲಿಟ್** || ಚಿಚಿ + ಅ ಎಂದಿರುವಾಗ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ. ಚಿಚೈ + ಅ. 'ಏಚೋಯವಾಯಾವಃ' ಆಯಾದೇಶ. ಚಿಚಾಯ. ಇಲ್ಲಿ ಧಾತುಚಕಾರಕ್ಕೆ ಕುತ್ವ ಹೇಳುತ್ತಾನೆ.

ದ್ವಿಪದ ಸೂತ್ರ. 'ಚಜೋಃ ಕುಘಿಣ್ಣ್ಯತೋಃ' ಸೂತ್ರದಿಂದ 'ಕು', 'ಅಭ್ಯಾಸಾಚ್ಚ' ಸೂತ್ರದಿಂದ 'ಅಭ್ಯಾಸಾತ್', 'ಸನ್‌ಲಿಟೋರ್ಜೇಃ' ಸೂತ್ರದಿಂದ 'ಸನ್‌ಲಿಟೋಃ' ಪದಗಳು ಅನುವೃತ್ತವಾಗುತ್ತವೆ. ವಿಭಾಷಾ ಎಂದರೆ ವಿಕಲ್ಪ. **ಸೂತ್ರಾರ್ಥ**— ಅಭ್ಯಾಸದ ಪರದಲ್ಲಿರುವ ಚಿಞ್ ಧಾತುವಿನ ಚಕಾರಕ್ಕೆ ಸನ್, ಲಿಟ್ ಪರವಾದಾಗ ವಿಕಲ್ಪವಾಗಿ ಕುತ್ವ ಬರುತ್ತದೆ. ಪ್ರಕೃತ ಲಿಟ್ ಪರವಾದುದರಿಂದ ಅಭ್ಯಾಸದ ಪರವಾದ ಚಕಾರಕ್ಕೆ ಕುತ್ವ ಬಂದರೆ ಚಿಕಾಯ ಎಂದಾಗುತ್ತದೆ. ಹೀಗೆ ಎರಡೆರಡು ರೂಪ. ಚಿಕ್ಯತುಃ | ಚಿಕ್ಯುಃ || ಚಿಕಯಿಥ, ಚಿಕೇಥ | ಚಿಕ್ಯಥುಃ | ಚಿಕ್ಯ || ಚಿಕಾಯ, ಚಿಕಯ | ಚಿಕ್ಯಿವ | ಚಿಕ್ಯಿಮ || ಹೀಗೆಯೇ ಚಿಚಾಯ ಇತ್ಯಾದಿ. ಆತ್ಮನೇಪದದಲ್ಲಿಯೂ ಎರಡು ರೂಪ. ಚಿಕ್ಯೇ | ಚಿಕ್ಯಾತೇ | ಚಿಕ್ಯಿರೇ || ಚಿಕ್ಯಿಷೇ | ಚಿಕ್ಯಾಥೇ | ಚಿಕ್ಯಿಧ್ವೇ || ಚಿಕ್ಯೇ | ಚಿಕ್ಯಿವಹೇ | ಚಿಕ್ಯಿಮಹೇ || ಹೀಗೇ ಚಿಚ್ಯೇ ಇತ್ಯಾದಿ. **ಲುಟ್** || ಚೇತಾ | **ಲೃಟ್** || ಚೇಷ್ಯತಿ, ಚೇಷ್ಯತೇ | **ಲೋಟ್** || ಚಿನೋತು,

ಚಿನುತಾತ್ | ಇತ್ಯಾದಿ. **ಆ.**—ಚಿನ್ವತಾಮ್, ಚಿನ್ವಾತಾಮ್ | ಇತ್ಯಾದಿ. **ಲಙ್** | ಅಚಿನೋತ್, ಅಚಿನುತ | ಇತ್ಯಾದಿ. **ವಿಧಿಲಿಙ್** || ಚಿನುಯಾತ್, ಚಿನ್ವೀತ | **ಆಶೀರ್ಲಿಙ್** || ಚೀಯಾತ್, ಚೇಷೀಷ್ಟ | **ಲುಙ್** || ಅಚಿ+ಸ್+ಈತ್. 'ಸಿಚಿ ವೃದ್ಧಿಃ ಪರಸ್ಮೈಪದೇಷು' ವೃದ್ಧಿ. ಷತ್ವ. ಅಚೈಷೀತ್ | ಅಚೈಷ್ಟಾಮ್ | ಅಚೈಷುಃ || ಅಚೈಷೀಃ | ಅಚೈಷ್ಟಮ್ | ಅಚೈಷ್ಟ || ಅಚೈಷಮ್ | ಅಚೈಷ್ವ | ಅಚೈಷ್ಮ || **ಆ**—ಅಚೇಷ್ಟ | ಅಚೇಷಾತಾಮ್ | ಅಚೇಷತ || ಇತ್ಯಾದಿ. **ಲೃಙ್** || ಅಚೇಷ್ಯತ್- ಅಚೇಷ್ಯತ ಇತ್ಯಾದಿ.

**|| ೧೧೪ || ಸ್ತೃಞ್= ಆಚ್ಛಾದನೇ (ಮುಚ್ಚುವುದು.)**

**ಸ್ತೃಣೋತಿ, ಸ್ತೃಣುತೇ ||**

ಅಭ್ಯಾಸದಲ್ಲಿ ಖಯಿಗೆ ಶೇಷ ಹೇಳುವ ಸೂತ್ರ.

**೬೫೦. ಶರ್ಪೂರ್ವಾಃ ಖಯಃ || ೭-೪-೬೧ ||**

**ಅಭ್ಯಾಸಸ್ಯ ಶರ್ಪೂರ್ವಾಃ ಖಯಃ ಶಿಷ್ಯನ್ತೇಽನ್ಯೇ ಹಲೋ ಲುಪ್ಯನ್ತೇ | ತಸ್ತಾರ | ತಸ್ತರತುಃ | ತಸ್ತರೇ | ಗುಣೋರ್ತಿರ್ಽತಿ ಗುಣಃ | ಸ್ತರ್ಯಾತ್ ||**

**ಸ್ತೃಞ್** ಉಭಯಪದೀ. ಅನಿಟ್. ಸಾಮಾನ್ಯ ಚಿಞ್ನಂತೆ ರೂಪಹೊಂದುತ್ತದೆ. **ಲಟ್** || ಸ್ತೃಣೋತಿ | (ಋವರ್ಣದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ) ಸ್ತೃಣುತಃ | ಸ್ತೃಣ್ವನ್ತಿ || ಇತ್ಯಾದಿ. **ಆ.**—ಸ್ತೃಣುತೇ | **ಲಿಟ್** || ದ್ವಿತ್ವಬಂದಾಗ ಸ್ತೃಸ್ತೃ+ಅ ಎಂದಿರುವಾಗ 'ಹಲಾದಿಃ ಶೇಷಃ' ಸೂತ್ರದಿಂದ ಆದಿಹಲ್ ಸಕಾರ ಉಳಿಯಬೇಕಾದರೆ ಇಲ್ಲಿ ತಕಾರಕ್ಕೆ ಶೇಷ ಹೇಳುತ್ತಾನೆ.

ದ್ವಿಪದ ಸೂತ್ರ. ಶರ್ ಪೂರ್ವಃ ಯೇಭ್ಯಃ ಶರ್ಪೂರ್ವಾಃ | 'ಅತ್ರಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ', 'ಹಲಾದಿಃ ಶೇಷಃ' ಸೂತ್ರದಿಂದ 'ಶೇಷಃ' ಪದಗಳು ಅನುವೃತ್ತವಾಗುತ್ತವೆ. ಶಿಷ್ಯತೇ ಇತಿ ಶೇಷಃ | ಇಲ್ಲಿ ಬಹುವಚನಾಂತವಾಗಿ ವಿಪರಿಣತವಾಗುತ್ತದೆ. **ಸೂತ್ರಾರ್ಥ**— ಅಭ್ಯಾಸದ ಶರ್ಪೂರ್ವದಲ್ಲಿರುವ ಖಯ್ ವರ್ಣಗಳು ಉಳಿಯುತ್ತವೆ. ಉಳಿದ ಹಲ್ ಲೋಪವಾಗುತ್ತದೆ. ಪ್ರಕೃತ ಸ್ತೃ ಅಭ್ಯಾಸ. ಶರ್ ಸಕಾರ. ಇದೇ ಪೂರ್ವವಾಗಿರುವ ಖಯ್ ತಕಾರ. ಇದು ಉಳಿದರೆ ಸಲೋಪವಾಗುತ್ತದೆ. ತೃ ಉಳಿದರೆ 'ಉರತ್' ಸೂತ್ರದಿಂದ ಋಕಾರಕ್ಕೆ ಅತ್ ರಪರವಾಗಿ ಬಂದರೆ ಹಲಾದಿಶೇಷದಿಂದ ರೇಫಲೋಪವಾದರೆ ತಸ್ತೃ+ಅ. 'ಅಚೋಞ್ಣಿತಿ' ವೃದ್ಧಿ (ಆರ್). ತಸ್ತಾರ | ತಸ್ತೃ+ಅತುಸ್. 'ಋತಶ್ಚ ಸಂಯೋಗಾದೇರ್ಗುಣಃ' ಸೂತ್ರದಿಂದ ಕಿತ್ತಾದ ಲಿಟಿನಲ್ಲಿ ಗುಣ (ಅರ್). ತಸ್ತರತುಃ | ತಸ್ತರುಃ || ಥಲಿನಲ್ಲಿ ಭಾರದ್ವಾಜನಿಯಮದಿಂದ ವಿಕಲ್ಪ ಇಟ್. ತಸ್ತರಿಥ, ತಸ್ತರ್ಥ | ತಸ್ತರಥುಃ|

ತಸ್ತರ || ತಸ್ತಾರ, ತಸ್ತರ | ತಸ್ತರಿವ | ತಸ್ತರಿಮ || ಆ.— ಒಂಬತ್ತು ಪ್ರತ್ಯಯಗಳೂ ಕಿತ್ತಾದುದರಿಂದ 'ಗುಣೋರ್ತಿ—' ಸೂತ್ರದಿಂದ ಗುಣ. ತಸ್ತರೇ | ತಸ್ತರಾತೇ | ತಸ್ತರಿರೇ || ತಸ್ತರಿಷೇ | ತಸ್ತರಾಥೇ | ತಸ್ತರಿಧ್ವೇ || ತಸ್ತರೇ | ತಸ್ತರಿವಹೇ | ತಸ್ತರಿಮಹೇ ||

**ಲುಟ್** || ಸ್ತರ್ತಾ | **ಲೃಟ್** || ಸ್ತೃ+ಸ್ಯತಿ. 'ಋದ್ಧನೋಃ ಸ್ಯೇ' ಸೂತ್ರದಿಂದ ಸ್ಯಕ್ಕೆ ಇಟ್. ಗುಣ, ಷತ್ವ. ಸ್ತರಿಷ್ಯತಿ | ಸ್ತರಿಷ್ಯತೇ | **ಲೋಟ್** || ಸ್ತೃಣೋತು, ಸ್ತೃಣುತಾತ್ | ಸ್ತೃಣುತಾಮ್ | **ಲಙ್** || ಅಸ್ತೃಣೋತ್ | ಅಸ್ತೃಣುತ | **ವಿಧಿಲಿಙ್** || ಸ್ತೃಣುಯಾತ್ | ಸ್ತೃಣ್ವೀತ | **ಆಶೀರ್ಲಿಙ್** || ಸ್ತೃ+ಯಾತ್. ಯಾಸುಟ್ ಕಿತ್ತಾಗಿ ಆರ್ಧಧಾತುಕವಾದುದರಿಂದ 'ಗುಣೋರ್ತಿಸಂಯೋಗಾದ್ಯೋಃ' ಸೂತ್ರದಿಂದ ಗುಣ. ಸ್ತರ್ಯಾತ್ | ಸ್ತರ್ಯಾಸ್ತಾಮ್ | ಸ್ತರ್ಯಾಸುಃ || ಇತ್ಯಾದಿ. ಆ.—ಸ್ತೃ+ಸೀಷ್ಟ ಎಂದಿರುವಾಗ ಇಡಾಗಮವಿಕಲ್ಪ ಹೇಳುತ್ತಾನೆ.

ಲಿಙ್ ಸಿಚ್ ಗಳಿಗೆ ಇಡಾಗಮವಿಕಲ್ಪ ಹೇಳುವ ಸೂತ್ರ.

**೭೫೧. ಋತಶ್ಚ ಸಂಯೋಗಾದೇಃ || ೭-೨-೪೩ ||**

**ಋದನ್ತಾತ್ಸಂಯೋಗಾದೇಃ ಪರಯೋರ್ಲಿಙ್ಸಿಚೋರಿಡ್ವಾಸ್ಯಾತ್ತಙಿ |**

**ಸ್ತರಿಷೀಷ್ಟ | ಸ್ತೃಷೀಷ್ಟ | ಅಸ್ತರಿಷ್ಟ, ಅಸ್ತೃತ ||**

ಋತಃ, ಚ, ಸಂಯೋಗಾದೇಃ || ತ್ರಿಪದಸೂತ್ರ. 'ಇಟ್ ಸನಿ ವಾ' ಸೂತ್ರದಿಂದ 'ಇಟ್, ವಾ' ಪದಗಳು ಅನುವೃತ್ತವಾಗುತ್ತವೆ. 'ಲಿಙ್ಸಿಚೋರಾತ್ಮನೇಪದೇಷು' ಸೂತ್ರ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಸಂಯೋಗವೇ ಆದಿಯಲ್ಲಿರುವ ಋದನ್ತದ ಪರದಲ್ಲಿರುವ ಲಿಙ್ ಸಿಚ್‌ಗಳಿಗೆ ತಙ್ (ಆತ್ಮನೇಪದ) ಪರವಲ್ಲಿರುವಾಗ ಇಡಾಗಮ ವಿಕಲ್ಪವಾಗಿ ಬರುತ್ತದೆ. ಪ್ರಕೃತ ಸಂಯೋಗಾದಿ ಋದನ್ತವಾದ ಧಾತು ಸ್ತೃ, ಇದರ ಪರದಲ್ಲಿ ಲಿಙ್ ಇದೆ. ಇಡಾಗಮ ಬಂದರೆ ಸ್ತೃ+ಇಸೀಷ್ಟ. ಗುಣ. ಸೀಯುಟಿನ ಸಕಾರಕ್ಕೆ ಷತ್ವ. ಸ್ತರಿಷೀಷ್ಟ | ಸ್ತರಿಷೀಯಾಸ್ತಾಮ್ | ಸ್ತರಿಷೀರನ್ || ಇತ್ಯಾದಿ. ಇಡಾಗಮ ಬಾರದಿದ್ದರೆ ಲಿಙ್ ಝಲಾದಿಯಾದುದರಿಂದ 'ಉಶ್ಚ' ಸೂತ್ರದಿಂದ ಕಿತ್ ಆಗುವುದರಿಂದ ಗುಣಬರುವುದಿಲ್ಲ. ಸ್ತೃಷೀಷ್ಟ | ಸ್ತೃಷೀಯಾಸ್ತಾಮ್ | ಸ್ತೃಷೀರನ್ || ಇತ್ಯಾದಿ. **ಲುಙ್** || ಅಸ್ತಾರ್ಷೀತ್ | ಅಸ್ತಾರ್ಷ್ಟಾಮ್ | ಅಸ್ತಾರ್ಷುಃ || ಅಸ್ತಾರ್ಷೀಃ | ಅಸ್ತಾರ್ಷ್ಟಮ್ | ಅಸ್ತಾರ್ಷ್ಟ || ಅಸ್ತಾರ್ಷಮ್ | ಅಸ್ತಾರ್ಷ್ವ | ಅಸ್ತಾರ್ಷ್ಮ || ಆ.— ಹಿಂದೆ ಹೇಳಿದ ಸೂತ್ರದಿಂದ ಸಿಚಿಗೆ ಇಡ್ವಿಕಲ್ಪ. ಇಡಾಗಮ ಬಂದರೆ ಗುಣ. ಅಸ್ತರಿಷ್ಟ | ಅಸ್ತರಿಷಾತಾಮ್ | ಅಸ್ತರಿಷತ || ಇತ್ಯಾದಿ. ಇಡಾಗಮ ಬಾರದಿದ್ದರೆ. ಅಸ್ತೃ+ಸ್+ತ ಎಂದಿರುವಾಗ 'ಹ್ರಸ್ವಾದಂಗಾತ್'

ಸೂತ್ರದಿಂದ ಸಲೋಪ. ಅಸ್ತೃತ | ಅಸ್ತೃಷಾತಾಮ್ | ಅಸ್ತೃಷತ || ಅಸ್ತೃಥಾಃ | ಅಸ್ತೃಷಾಥಾಮ್ | ಅಸ್ತೃಢ್ವಮ್ || ಅಸ್ತೃಷಿ | ಅಸ್ತೃಷ್ವಹಿ | ಅಸ್ತೃಷ್ಮಹಿ || ಲೃಙ್ || ಅಸ್ತರಿಷ್ಯತ್, ಅಸ್ತರಿಷ್ಯತ ||

|| ೧೧೫ || ಧೂಞ್ ಕಂಪನೇ

ಧೂನೋತಿ, ಧೂನುತೇ | ದುಧಾವ | 'ಸ್ವರತೀತಿ' ವೇಟ್ | ದುಧವಿಥ, ದುಧೋಥ |

ಧೂಞ್ ಧಾತು. ಞಿತ್ತ್ವದುದರಿಂದ ಉಭಯಪದಿ. ಧೂನೋತಿ | ಧೂನುತಃ | ಇತ್ಯಾದಿ ಸು ಧಾತುವಿನಂತೇ ರೂಪ ಹೊಂದುತ್ತದೆ. ಆ —ಧೂನುತೇ | ಧೂನ್ವಾತೇ | ಧೂನ್ವತೇ || ಇತ್ಯಾದಿ. ಲಿಟ್ || ಧೂಧೂ+ಅ. 'ಅಭ್ಯಾಸೇಚರ್ಚ' ಸೂತ್ರದಿಂದ ಅಭ್ಯಾಸಕ್ಕೆ ದಕಾರ. 'ಹ್ರಸ್ವಃ' ಸೂತ್ರದಿಂದ ಹ್ರಸ್ವ. ದುಧೂ+ಅ. 'ಅಚೋ ಞ್ಣಿತಿ' ವೃದ್ಧಿ. ಆವಾದೇಶ. ದುಧಾವ | ದುಧೂ+ಅತುಸ್. 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಉವಙ್. ದುಧುವತುಃ | ದುಧುವುಃ || ದುಧೂ+ಥ ಎಂದಿರುವಾಗ "ಸ್ವರತಿಸೂತಿ—' (ಸೂ. ೪೭೭) ಸೂತ್ರದಿಂದ ಥಕ್ಕೆ ವಿಕಲ್ಪ ಇಟ್. ಇಡಾಗಮಬಂದರೆ ಗುಣ, ಅವಾದೇಶ. ದುಧವಿಥ | ಇಡಾಗನು ಬಾರದಿದ್ದರೆ ಧುಧೋಥ | ದುಧುವಥುಃ | ದುಧುವ || 'ಣಲುತ್ತಮೋವಾ' ವೃದ್ಧಿ, ಗುಣ. ದುಧಾವ, ದುಧವ | ದುಧೂ+ವ, ದುಧೂ+ಮ ಎಂದಿರುವಾಗ 'ಸ್ವರತಿಸೂತಿ—' ಸೂತ್ರದಿಂದ ವಿಕಲ್ಪ ಇಟ್ ಪ್ರಾಪ್ತವಾದರೆ ಅದಕ್ಕೆ ಬಾಧಕವಾಗಿ ನಿತ್ಯನಿಷೇಧ ಹೇಳುತ್ತಾನೆ.

ಉಗಂತಕ್ಕೆ ಇಣ್ನಿಷೇಧ ಹೇಳುವ ಸೂತ್ರ.

೬೫೨. ಶ್ರ್ಯುಕಃ ಕ್ಕಿತಿ || ೭–೨–೧೧ ||

ಶ್ರಿಞಃ ಏಕಾಚಃ ಉಗನ್ತಾಚ್ಚ ಗಿತ್‌ಕಿತೋರಿಣ್ ನ | ಪರಮಪಿ ಸ್ವರತ್ಯಾದಿವಿಕಲ್ಪಂಬಾಧಿತ್ವಾ ಪುರಸ್ತಾತ್ಪ್ರತಿಷೇಧಕಾಂಡಾರಂಭಸಾಮರ್ಥ್ಯಾದನೇನ ನಿಷೇಧೇ ಪ್ರಾಪ್ತೇ ಕ್ರಾದಿನಿಯಮಾನ್ನಿತ್ಯಮಿಟ್ | ದುಧುವಿವ | ದುಧುವೇ | ಅಧಾವೀತ್, ಅಧವಿಷ್ಟ, ಅಧೋಷ್ಟ | ಅಧವಿಷ್ಯತ್, ಅಧೋಷ್ಯತ್ | ಅಧವಿಷ್ಯತ, ಅಧೋಷ್ಯತ ||

ಇತಿ ಸ್ವಾದಯಃ

ದ್ವಿಪದ ಸೂತ್ರ. ಶ್ರಿಶ್ಚ, ಉಕ್ ಚ ತಯೋಃ ಸಮಾಹಾರಃ ಶ್ರ್ಯುಕ್ | ತಸ್ಯ. ಉಕ್ ಪ್ರತ್ಯಾಹಾರ. (ಉ, ಋ, ಌ) 'ಏಕಾಚ ಉಪದೇಶೇ—' ಸೂತ್ರದಿಂದ "ಏಕಾಚಃ" ಅನುವೃತ್ತ. ಅಂಗಸ್ಯ ಅಧಿಕಾರ. ಉಕ್ ಅದಕ್ಕೆ ವಿಶೇಷಣ. ತದನ್ತ

ಲಾಭ. **ಸೂತ್ರಾರ್ಥ**—ಶ್ರಿ ಞ್ ಧಾತುವಿನ ಪರದಲ್ಲಿರುವ, ಏಕಾಚಾದ ಉಗನ್ತದ ಪರದಲ್ಲಿರುವ ಗಿತ್ ಕಿತ್ ಪ್ರತ್ಯಯಗಳಿಗೆ ಇಡಾಗಮ ಬರುವುದಿಲ್ಲ. "ನೇಡ್ವಶಿಕೃತಿ' ಸೂತ್ರದಿಂದ ನೇಟ್ ಅನುವೃತ್ತವಾಗಿದೆ. ಗ್ + ಕಿತಿ ಎಂದಿರುವಾಗ "ಖರಿಚ' ಸೂತ್ರದಿಂದ ಚರ್ತ್ವ ಬಂದ ಕ್ಕಿತಿ ಎಂಬಾಗಿದೆ. ಷಷ್ಠ್ಯರ್ಥದಲ್ಲಿ ಸಪ್ತಮೀ. ಪ್ರಕೃತ ಧೂ ಏಕಾಚಾಗಿ ಉಗನ್ತವಾದುದರಿಂದ ಇದರ ಪರದಲ್ಲಿರುವ ವ, ಮ ಗಳು ಕಿತ್ತಾದುದರಿಂದ ಇಣ್ನಿಷೇಧ ಬರುತ್ತವೆ. ಹೀಗೆ ಇಣ್ನಿಷೇಧ ಪ್ರಾಪ್ತವಾದರೆ ನಿತ್ಯ ಇಟ್ ಬರುವ ರೀತಿಯನ್ನು ತೋರಿಸುತ್ತಾನೆ. "ಶ್ರ್ಯು ಕಃ ಕಿತಿ' ಎಂಬ ಇಣ್ನಿಷೇಧಸೂತ್ರವು ಪೂರ್ವದಲ್ಲಿ ಆರಬ್ಧವಾದುದರಿಂದ ಇದು 'ಸ್ವರತಿಸೂತಿ—' ಸೂತ್ರಕ್ಕೆ ಮಾತ್ರ ಅಪವಾದವಾಗುವುದರಿಂದ ನಿಷೇಧ ಬಂದರೂ ಕ್ರಾದಿನಿಯಮದಿಂದ ನಿತ್ಯವಾಗಿ ಇಡಾಗಮ. ಲಿಟಿನಲ್ಲಿ ಇಣ್ನಿಷೇಧ ಬರುವುದಾದರೆ ಕೃ, ಸೃ, ಭೃ, ಮುಂತಾದವುಗಳಿಗೆ ಮಾತ್ರವೆಂದುದರಿಂದ ಇದಕ್ಕೆ ನಿತ್ಯವಾಗಿ ಬರುತ್ತದೆ. ದುಧುವಿವ | ದುಧುವಿಮ || ಆ.— ದುಧುವೇ | ದುಧುವಾತೇ | ದುಧುವಿರೇ || ದುಧುವಿಷೇ | ದುಧುವಾಥೇ | ದುಧುವಿಧ್ವೇ || ದುಧುವೇ | ದುಧುವಿವಹೇ | ದುಧುವಿಮಹೇ ||

**ಲುಟ್** || ಆರ್ಧಧಾತುಕಗಳಲ್ಲಿ "ಸ್ವರತಿಸೂತಿ—" ಸೂತ್ರದಿಂದ ಇಡ್ವಿಕಲ್ಪ ಬರುವುದರಿಂದ ಎರಡೆರಡು ರೂಪಗಳು. ಧೂ + ಇತಾ. ಗುಣ, ಅವಾದೇಶ. ಧವಿತಾ | ಧೂ + ತಾ. ಗುಣ. ಧೋತಾ | ಆತ್ಮನೇಪದಿಯಲ್ಲಿಯೂ ಹೀಗೆ ಎರಡು ರೂಪಗಳು. **ಲೃಟ್** || ಧವಿಷ್ಯತಿ, ಧೋಷ್ಯತಿ | ಧವಿಷ್ಯತೇ, ಧೋಷ್ಯತೇ | **ಲೋಟ್** || ಧೂನೋತು, ಧೂನುತಾತ್ | ಧೂನುತಾಮ್, ಧೂನುವಾತಾಮ್ | ಇತ್ಯಾದಿ. **ಲಙ್** || ಅಧೂನೋತ್ | ಅಧೂನುತ || **ವಿಧಿಲಿಙ್** || ಧೂನುಯಾತ್ | ಧೂನ್ವೀತ | **ಆಶೀರ್ಲಿಙ್** || ಧೂಯಾತ್ | ಸೀಯುಟಿನಲ್ಲಿ ಇಡ್ವಿಕಲ್ಪ. ಧವಿಷೀಷ್ಟ, ಧೋಷೀಷ್ಟ | **ಲುಙ್** || ಅಧೂ + ಇಸ್ + ಈತ್. 'ಸಿಚಿ ವೃದ್ಧಿಃ—' ವೃದ್ಧಿ ಆವಾದೇಶ. 'ಇಟ ಈಟಿ' ಸಲೋಪ. ಅಧಾವೀತ್ | ಅಧಾವಿಷ್ಟಾಮ್ | ಅಧಾವಿಷುಃ || ಅಧಾವೀಃ | ಅಧಾವಿಷ್ಟಮ್ | ಅಧಾವಿಷ್ಟ || ಅಧಾವಿಷಮ್ | ಅಧಾವಿಷ್ವ | ಅಧಾವಿಷ್ಮ || ಇಲ್ಲಿ 'ಸ್ವರತಿಸೂತಿ—' ಸೂತ್ರದಿಂದ ಸಿಚಿಗೆ ಇಡ್ವಿಕಲ್ಪವಿಲ್ಲ. 'ಸ್ತುಸುಧೂಞ್ಭ್ಯಃ ಪರಸ್ಮೈಪದೇಷು' ಸೂತ್ರದಿಂದ ನಿತ್ಯವಾಗಿ ಇಟ್ ಬರುತ್ತದೆ. ಆತ್ಮನೇಪದದಲ್ಲಿ ಸಿಚಿಗೆ ಇಟ್ ವಿಕಲ್ಪ. ಇಡಾಗಮ ಬಂದರೆ ಗುಣ, ಅವಾದೇಶ. ಅಧವಿಷ್ಟ | ಅಧವಿಷಾತಾಮ್ | ಅಧವಿಷತ || ಇತ್ಯಾದಿ. **ಲೃಙ್** || ಸ್ಯಕ್ಕೆ ಇಡ್ವಿಕಲ್ಪದಿಂದ ನಾಲ್ಕು ರೂಪಗಳು. ಅಧವಿಷ್ಯತ್ | ಅಧವಿಷ್ಯತಾಮ್ | ಅಧವಿಷ್ಯನ್ || ಇತ್ಯಾದಿ. ಅಧೋಷ್ಯತ್ | ಅಧೋಷ್ಯತಾಮ್ | ಇತ್ಯಾದಿ. ಆ.—ಅಧವಿಷ್ಯತ | ಅಧವಿಷ್ಯೇತಾಮ್ | ಅಧವಿಷ್ಯನ್ತ || ಇತ್ಯಾದಿ. ಅಧೋಷ್ಯತ | ಅಧೋಷ್ಯೇತಾಮ್ | ಇತ್ಯಾದಿ.

# ೬. ಅಥ ತುದಾದಯಃ

## || ೧೧೩ || ತುದ = ವ್ಯಥನೇ (ದುಃಖ ಕೊಡುವುದು.)

ಶವಿಕರಣ ಹೇಳುವ ಸೂತ್ರ.

**೬೫೩. ತುದಾದಿಭ್ಯಃ ಶಃ || ೩-೧-೭೭ ||**

**ಶಪೋಽಪವಾದಃ | ತುದತಿ, ತುದತೇ | ತುತೋದ | ತುತೋದಿಥ | ತುತುದೇ | ತೋತ್ತಾ | ಅತೌತ್ಸೀತ್, ಅತುತ್ತ ||**

## || ೧೧೪ || ಣುದ ಪ್ರೇರಣೇ (ಪ್ರೇರೇಪಿಸುವುದು.)

**ನುದತಿ, ನುದತೇ | ನುನೋದ | ನೋತ್ತಾ ||**

ತುದ ಧಾತುವೇ ಮೊದಲಾಗಿರುವ ಗಣ ತುದಾದಿಗಣ. ಮೊದಲು ಉಭಯಪದಿ ಧಾತುಗಳನ್ನು ಹೇಳುತ್ತಾನೆ. **ತುದ** ಧಾತು ಸ್ವರಿತೇತ್. ಅನಿಟ್. ಸಾರ್ವಧಾತುಕ ಗಳಲ್ಲಿ ಸಾಮಾನ್ಯ ಸೂತ್ರದಿಂದ ಶಪ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಶವಿ ಕರಣ ಹೇಳುತ್ತಾನೆ.

ದ್ವಿಪದ ಸೂತ್ರ. **ಸೂತ್ರಾರ್ಥ**—ಕರ್ತ್ರರ್ಥಕಸಾರ್ವಧಾತುಕಪರವಾದಾಗ ತುದಾದಿಧಾತುಗಳಿಗೆ ಶವಿಕರಣ ಬರುತ್ತದೆ. ಶದಲ್ಲಿ 'ಲಶಕ್ವತದ್ಧಿತೇ' ಸೂತ್ರದಿಂದ ಶ ಇತ್. ತುದ್+ಅ+ತಿ. ಶ ಅಪಿತ್ತಾದ ಸಾರ್ವಧಾತುಕವಾದುದರಿಂದ 'ಸಾರ್ವ ಧಾತುಕಮಪಿತ್' ಸೂತ್ರದಿಂದ ಙಿತ್ತಾಗುವುದರಿಂದ ಅದನ್ನು ನಿಮಿತ್ತೀಕರಿಸಿ ಪುಗನ್ತಲಘೂಪಧಗುಣ ಬರುವುದಿಲ್ಲ. ತುದತಿ | ತುದತಃ | ತುದನ್ತಿ || ತುದಸಿ | ತುದಥಃ | ತುದಥ || ತುದಾಮಿ | ತುದಾವಃ | ತುದಾಮಃ || **ಆ.**—ತುದತೇ | ತುದೇತೇ | ತುದನ್ತೇ || ತುದಸೇ | ತುದೇಥೇ | ತುದಧ್ವೇ || ತುದೇ | ತುದಾವಹೇ | ತುದಾಮಹೆ ||

**ಲಿಟ್** || ತುತುದ್+ಅ. ಲಘೂಪಧಗುಣ. ತುತೋದ | ತುತುದ್+ಅತುಸ್. 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ ಪ್ರತ್ಯಯ ಕಿತ್ತಾದುದರಿಂದ ಗುಣವಿಲ್ಲ. ತುತುದತುಃ | ತುತುದುಃ || 'ಕೃಸೃಭೃ—' ಸೂತ್ರದ ನಿಯಮದಿಂದ ಲಿಟನಲ್ಲಿ ನಿತ್ಯವಾಗಿ ಇಟ್. ತುತೋದಿಥ | ತುತುದಥುಃ | ತುತುದ || ತುತೋದ | ತುತುದಿವ | ತುತುದಿಮ || **ಆ.**—ತುತುದೇ | ತುತುದಾತೇ | ತುತುದಿರೇ || ತುತು ದಿಷೇ | ತುತುದಾಥೇ | ತುತುದಿಧ್ವೇ || ತುತುದೇ | ತುತುದಿವಹೇ | ತುತುದಿಮಹೇ ||

**ಲುಟ್** || ತುದ್+ತಾ. "ಖರಿಚ", 'ಪುಗನ್ತಲಘೂಪಧಸ್ಯಚ' ಸೂತ್ರಗಳಿಂದ ಚರ್ತ್ವ, ಗುಣ. ತೋತ್ತಾ | ತೋತ್ತಾರೌ | ತೋತ್ತಾರಃ || ತೋತ್ತಾಸಿ | ತೋತ್ತಾಸ್ಥಃ ತೋತ್ತಾಸ್ಥ || ತೋತ್ತಾಸ್ಮಿ | ತೋತ್ತಾಸ್ವಃ | ತೋತ್ತಾಸ್ಮಃ || **ಆ.**—ತೋತ್ತಾ ||

ತೋತ್ತಾಸೇ | ತೋತ್ತಾಸಾಥೇ | ತೋತ್ತಾಧ್ವೇ || ತೋತ್ತಾಹೇ | ತೋತ್ತಾಸ್ವಹೇ | ತೋತ್ತಾಸ್ಮಹೇ || **ಲೃಟ್** || ಹಿಂದಿನಂತೆ ಚರ್ತ್ವ, ಗುಣ. ತೋತ್ಸ್ಯತಿ | ಆ.— ತೋತ್ಸ್ಯತೇ || ಇತ್ಯಾದಿ. **ಲೋಟ್** || ತುದ ಅಂಗ. ತುದತು, ತುದತಾತ್ (ಭವತುವತ್) || ಆ.–ತುದತಾಮ್ | ತುದೇತಾಮ್ | ತುದನ್ತಾಮ್ | (ಏಧತಾಮ್ವತ್) || **ಲಙ್** || ಅತುದ ಅಂಗ. ಅತುದತ್ (ಅಭವತ್ವತ್) || ಆ.—ಅತುದತ (ಐಧತವತ್) || **ವಿಧಿಲಿಙ್** || ತುದೇತ್ (ಭವೇತ್ವತ್) || ಆ.— ತುದೇತ (ಏಧೇತವತ್) || **ಆಶೀರ್ಲಿಙ್** || ತುದ್ಯಾತ್ (ಭೂಯಾತ್ವತ್) || ಆ.— ತುದ್ + ಸೀಷ್ಟ. 'ಖರಿಚ' ತುತ್ಸೀಷ್ಟ | ತುತ್ಸೀಯಾಸ್ತಾಮ್ | ತುತ್ಸೀರನ್ || ತುತ್ಸೀಷ್ಠಾಃ | ತುತ್ಸೀಯಾಸ್ಥಾಮ್ | ತುತ್ಸೀಧ್ವಮ್ || ತುತ್ಸೀಯ | ತುತ್ಸೀವಹಿ | ತುತ್ಸೀಮಹಿ || **ಲುಙ್** || ಅತುದ್ + ಸ್ + ಈತ್. 'ವದವ್ರಜಹಲನ್ತಸ್ಯಾಚಃ' ವೃದ್ಧಿ. 'ಖರಿಚ' ಚರ್ತ್ವ. ಅತೌತ್ಸೀತ್ | ಅತೌದ್ + ಸ್ + ತಾಮ್. 'ಝಲೋ ಝಲಿ' ಸಲೋಪ. ಅತೌತ್ತಾಮ್ | ಅತೌತ್ಸುಃ || ಅತೌತ್ಸೀಃ | ಅತೌತ್ಸಮ್ | ಅತೌತ್ಸ || ಅತೌತ್ಸಮ್ | ಅತೌತ್ಸ್ವ ಅತೌತ್ಸ್ಮ || ಆ.—ಅತುದ್ + ಸ್ + ತ. "ಝಲೋಝಲಿ", "ಖರಿಚ" ಅತುತ್ತ | ಅತುತ್ಸಾತಾಮ್ | ಅತುತ್ಸತ || ಅತುತ್ಥಾಃ | ಅತುತ್ಸಾಥಾಮ್ | ಅತುದ್ಧ್ವಮ್ || ಅತುತ್ಸಿ | ಅತುತ್ಸ್ವಹಿ | ಅತುತ್ಸ್ಮಹಿ || **ಲೃಙ್** || ಅತೋತ್ಸ್ಯತ್ | ಆ.— ಅತೋತ್ಸ್ಯತ | ಇತ್ಯಾದಿ.

**ಣುದ** ಧಾತು. ಉಭಯಪದೀ. ಅನಿಟ್. 'ಣೋನಃ' ಆದಿಗೆ ನತ್ವ. ನುದತಿ | ನುದತೇ | ತುದತಿಯಂತೇ ರೂಪಗಳಾಗುತ್ತವೆ. ನುನೋದ, ನುನುದೇ || ನೋತ್ತಾ | ನೋತ್ಸ್ಯತಿ, ನೋತ್ಸ್ಯತೇ | ನುದತು, ನುದತಾಮ್ | ಅನುದತ್, ಅನುದತ | ನುದೇತ್, ನುದೇತ | ನುದ್ಯಾತ್, ನುತ್ಸೀಷ್ಟ | ಅನೌತ್ಸೀತ್, ಅನುತ್ತ | ಅನೋತ್ಸ್ಯತ್ ಅನೋತ್ಸ್ಯತ ||

## || ೧೧೮ || ಭ್ರಸ್ಜ=ಪಾಕೇ (ಹುರಿಯುವುದು.)

**ಗ್ರಹಿಜ್ಯೇತಿ ಸಂಪ್ರಸಾರಣಮ್ | ಸಸ್ಯ ಶ್ಚುತ್ವೇನ ಶಃ | ಶಸ್ಯ ಜಶ್ತ್ವೇನ ಜಃ | ಭೃಜ್ಜತಿ, ಭೃಜ್ಜತೇ ||**

ಭ್ರಸ್ಜ ಧಾತು. ಅನಿಟ್. ಭ್ರಸ್ಜ್ + ಅ + ತಿ ಎಂದಿರುವಾಗ ಶ ಙಿತ್ತಾದುದರಿಂದ 'ಗ್ರಹಿಜ್ಯಾವಯಿ—' (ಸೂ. ೬೩೮) ಸೂತ್ರದಿಂದ ಧಾತುವಿನ ರೇಫಕ್ಕೆ ಸಂಪ್ರಸಾರಣ (ಋ). ಭೃಸ್ಜ್ + ಅ + ತಿ. 'ಸ್ತೋಃಶ್ಚುನಾಶ್ಚುಃ' ಸಕಾರಕ್ಕೆ ಶಕಾರಾದೇಶ. ಭೃಶ್ಜ್ + ಅತಿ. 'ಝಲಾಂ ಜಶ್ ಝಶಿ' ಸೂತ್ರದಿಂದ ಶಕಾರಕ್ಕೆ ಜಕಾರಾದೇಶ. ಭೃಜ್ಜ್ + ಅ + ತಿ = ಭೃಜ್ಜತಿ. ಸಾರ್ವಧಾತುಕಗಳಲ್ಲಿ ಭೃಜ್ಜ ಅಂಗ. ಆ.— ಭೃಜ್ಜತೇ, ಭೃಜ್ಜೇತೇ | ಇತ್ಯಾದಿ. **ಲಿಟ್** || ಭ್ರಸ್ಜ್ + ಲಿಟ್. ಲಿಟಗೆ ಣಲಾದಿ.

ಇವು ಆರ್ಧಧಾತುಕಪ್ರತ್ಯಯಗಳಾದುದರಿಂದ ಇವು ಪರವಾದಾಗ ರಮಾಗಮ ವಿಕಲ್ಪವಾಗಿ ಹೇಳುತ್ತಾನೆ.

ಭ್ರಸ್ಜ್ ಧಾತುವಿಗೆ ರಮಾಗಮ ಹೇಳುವ ಸೂತ್ರ.

೬೫೪. ಭ್ರಸ್ಜೋ ರೋಪಧಯೋರಮನ್ಯತರಸ್ಯಾಮ್ ॥ ೬-೪-೪೭ ॥

ಭ್ರಸ್ಜೋ ರೇಫಸ್ಯೋಪಧಾಯಾಶ್ಚ ಸ್ಥಾನೇ ರಮಾಗಮೋ ವಾ ಸ್ಯಾದಾರ್ಧಧಾತುಕೇ॥ ಮಿತ್ತ್ವಾದಂತ್ಯಾದಚಃ ಪರಃ। ಸ್ಥಾನಷಷ್ಠೀನಿರ್ದೇಶಾದ್ರೋಪಧಯೋರ್ನಿವೃತ್ತಿಃ। ಬಭರ್ಜ। ಬಭರ್ಜತುಃ। ಬಭರ್ಜಿಥ ಬಭರ್ಷ್ಠ। ಬಭ್ರಜ್ಜ। ಬಭ್ರಜ್ಜತುಃ। ಬಭ್ರಜ್ಜಿಥ। ಸ್ಕೋರಿತಿ ಸಲೋಪಃ। ವ್ರಶ್ಚೇತಿ ಷಃ। ಬಭ್ರಷ್ಠ। ಬಭರ್ಜೇ, ಬಭ್ರಜ್ಜೇ। ಭರ್ಷ್ಟಾ, ಭ್ರಷ್ಟಾ। ಭರ್ಕ್ಷ್ಯತಿ, ಭ್ರಕ್ಷ್ಯತಿ। ಕ್ಙಿತಿ ರಮಾಗಮಂ ಬಾಧಿತ್ವಾ ಸಂಪ್ರಸಾರಣಂ ಪೂರ್ವವಿಪ್ರತಿಷೇಧೇನ। ಭೃಜ್ಜ್ಯಾತ್। ಭೃಜ್ಜ್ಯಾಸ್ತಾಮ್। ಭೃಜ್ಜ್ಯಾಸುಃ। ಭರ್ಕ್ಷೀಷ್ಟ। ಭ್ರಕ್ಷೀಷ್ಟ। ಅಭಾರ್ಕ್ಷೀತ್, ಅಭ್ರಾಕ್ಷೀತ್। ಅಭರ್ಷ್ಟ, ಅಭ್ರಷ್ಟ ॥

ಭ್ರಸ್ಜಃ, ರೋಪಧಯೋಃ, ರಮ್, ಅನ್ಯತರಸ್ಯಾಮ್ ॥ ನಾಲ್ಕು ಪದಗಳುಳ್ಳ ಸೂತ್ರ. ಭ್ರಸ್ಜ. ಅವಯವಾರ್ಥದಲ್ಲಿ ಷಷ್ಠೀ ಬಂದಿದೆ. ರಶ್ಚ ಉಪಧಾಚ ರೋಪಧೇ, ತಯೋಃ। 'ಆರ್ಧಧಾತುಕೇ' ಅಧಿಕಾರ. **ಸೂತ್ರಾರ್ಥ**— ಭ್ರಸ್ಜ್ ಧಾತುವಿನ ಅವಯವಗಳಾದ ರೇಫ ಮತ್ತು ಉಪಧೆಯ ಸ್ಥಾನಗಳಲ್ಲಿ ಆರ್ಧಧಾತುಕಪರದಲ್ಲಿರುವಾಗ ರಮಾಗಮ ವಿಕಲ್ಪವಾಗಿ ಬರುತ್ತದೆ. ಲಿಟ್ ಆದೇಶ ಆರ್ಧಧಾತುಕವಾಗಿದೆ. ಭ್ರಸ್ಜ್‌ನ ಉಪಧೆ ಸಕಾರ. ರೇಫಸಕಾರಗಳ ಸ್ಥಾನಗಳಲ್ಲಿ ರಮ್ ಬಂದರೆ ಭರ್ಜ್ ಎಂದಾಗುತ್ತದೆ. ರಮ್ ಮಿತ್ತಾದುದರಿಂದ ಅಕಾರದ ಪರದಲ್ಲಿ ಬಂದಿದೆ. ಭರ್ಜ್‌ವಿಗೆ ದ್ವಿತ್ವಾದಿಗಳು ಬಂದರೆ ಬಭರ್ಜ್+ಅ=ಬಭರ್ಜ। ಬಭರ್ಜತುಃ। ಬಭರ್ಜುಃ॥ ಎಂದಾಗುತ್ತದೆ. ಥಲಿನಲ್ಲಿ ಭಾರದ್ವಾಜನಿಯಮದಿಂದ ಇಡ್ವಿಕಲ್ಪ. ಇಡಾಗಮ ಬಂದರೆ ಬಭರ್ಜಿಥ। ಬಾರದಿದ್ದರೆ ಬಭರ್ಜ್+ಥ. 'ವ್ರಶ್ಚಭ್ರಸ್ಜ—' ಸೂತ್ರದಿಂದ ಜಕಾರಕ್ಕೆ ಷಕಾರ. "ಷ್ಟುನಾಷ್ಟುಃ' ಥಕಾರಕ್ಕೆ ಠಕಾರ. ಬಭರ್ಷ್ಠ। ಬಭರ್ಜಥುಃ। ಬಭರ್ಜ॥ ಭಭರ್ಜ। ಬಭರ್ಜಿವ। ಬಭರ್ಜಿಮ॥ ರಮಾಗಮ ಬಾರದಿದ್ದರೆ ಬಭ್ರಸ್ಜ್+ಅ ಎಂದಿರುವಾಗ ಲಟಿನಲ್ಲಿ ಹೇಳಿದಂತೆ ಸಕಾರಕ್ಕೆ ಶ್ಚುತ್ವದಿಂದ ಶಕಾರ. ಆ ಶಕಾರಕ್ಕೆ ಜಶ್ತ್ವದಿಂದ ಜಕಾರ, ಬಭ್ರಜ್ಜ। ಬಭ್ರಜ್ಜತುಃ। ಬಭ್ರಜ್ಜುಃ॥ ಇಡಾಗಮ ಬಂದರೆ ಬಭ್ರಜ್ಜಿಥ. ಇಡಾಗಮ ಬಾರದಿದ್ದರೆ ಬಭ್ರಸ್ಜ್+ಥ ಎಂದಿರುವಾಗ 'ಸ್ಕೋಃ ಸಂಯೋಗಾ—' ಸೂತ್ರದಿಂದ ಸಲೋಪ. 'ವ್ರಶ್ಚಭ್ರಸ್ಜ—' ಸೂತ್ರದಿಂದ ಜಕಾರಕ್ಕೆ ಷಕಾರ. ಷ್ಟುತ್ವ. ಬಭ್ರಷ್ಠ। ಬಭ್ರಜ್ಜಥುಃ। ಬಭ್ರಜ್ಜ॥

ಬಭ್ರಜ್ಜ | ಬಭ್ರಜ್ಜಿವ ಬಭ್ರಜ್ಜಿವ || ಆ.—ಇಲ್ಲಿಯೂ ರಮಾಗಮವಿಕಲ್ಪದಿಂದ ಎರಡೆರಡು ರೂಪಗಳು. ಬಭರ್ಜೆ | ಬಭರ್ಜಾತೇ | ಬಭರ್ಜಿರೇ || ಬಭರ್ಜಿಷೇ | ಬಭರ್ಜಾಥೇ | ಬಭರ್ಜಿಧ್ವೇ || ಬಭರ್ಜೇ | ಬಭರ್ಜಿವಹೇ | ಬಭರ್ಜಿಮಹೇ || ಬಭ್ರಜ್ಜೇ | ಬಭ್ರಜ್ಜಾತೇ ಬಭ್ರಜ್ಜಿರೇ || ಇತ್ಯಾದಿ.

ಲುಟ್ || ತಾಸಿನಲ್ಲಿಯೂ ರಮಾಗಮವಿಕಲ್ಪ. ರಮಾಗಮ ಬಂದರೆ ಭರ್ಜ್ + ತಾ. ಷತ್ವ, ಷ್ಟುತ್ವ. ಭರ್ಷ್ಟಾ | ಭರ್ಷ್ಟಾರೌ | ಭರ್ಷ್ಟಾರಃ || ಇತ್ಯಾದಿ. ರಮಾಗಮ ಬಾರದಿದ್ದರೆ ಭ್ರಷ್ಟಾ | ಭ್ರಷ್ಟಾರೌ | ಭ್ರಷ್ಟಾರಃ || ಇತ್ಯಾದಿ. ಆ.—ಭರ್ಷ್ಟಾಸೇ, ಭ್ರಷ್ಟಾಸೇ | ಇತ್ಯಾದಿ. ಲೃಟ್ || ರಮಾಗಮ ಬಂದರೆ ಭರ್ಜ್ + ಸ್ಯತಿ. 'ವ್ರಶ್ಚಭ್ರಸ್ಜ—' ಜಕಾರಕ್ಕೆ ಷತ್ವ. ಭರ್ಷ್ + ಸ್ಯತಿ. 'ಷಢೋಃ ಕಃ ಸಿ' ಷಕ್ಕೆ ಕಕಾರ. ಭರ್ಕ್ + ಸ್ಯತಿ. 'ಆದೇಶಪ್ರತ್ಯಯಯೋಃ' ಸಕ್ಕೆ ಷಾದೇಶ. ಭರ್ಕ್ಷ್ಯತಿ | ಇತ್ಯಾದಿ. ರಮಾಗಮ ಬಾರದಿದ್ದರೆ ಭ್ರಸ್ಜ್ + ಸ್ಯತಿ. 'ಸ್ಕೋಃ—' ಸಲೋಪ. ಜಕ್ಕೆ ಹಿಂದಿನಂತೆ ಷತ್ವ. ಭ್ರಕ್ + ಸ್ಯತಿ. ಸಕ್ಕೆ ಷತ್ವ. ಭ್ರಕ್ಷ್ಯತಿ | ಇತ್ಯಾದಿ. ಆತ್ಮನೇಪದದಲ್ಲಿಯೂ ಹೀಗೇ ಎರಡು ರೂಪ. ಭರ್ಕ್ಷ್ಯತೇ, ಭ್ರಕ್ಷ್ಯತೇ | ಇತ್ಯಾದಿ. ಲೋಟ್ || ಭೃಜ್ಜ ಅಂಗ. ಭೃಜ್ಜತು, ಭೃಜ್ಜತಾತ್ | ಇತ್ಯಾದಿ (ಭವತುವತ್). ಆ.—ಭೃಜ್ಜತಾಮ್ | ಭೃಜ್ಜೇತಾಮ್ | ಭೃಜ್ಜನ್ತಾಮ್ || ಇತ್ಯಾದಿ. ಲಙ್ || ಅಭೃಜ್ಜ ಅಂಗ ಅಭೃಜ್ಜತ್ | ಆ.—ಅಭೃಜ್ಜತ | ಇತ್ಯಾದಿ. ವಿಧಿಲಿಙ್ || ಭೃಜ್ಜೇತ್ | ಆ.—ಭೃಜ್ಜೇತ | ಇತ್ಯಾದಿ. ಆಶೀರ್ಲಿಙ್ || ಭ್ರಸ್ಜ್ + ಯಾಸ್ ತ್. 'ಸ್ಕೋಃ ಸಂ—' ಸೂತ್ರದಿಂದ ಸಲೋಪ. ಲಿಙ್ ಆರ್ಧಧಾತುಕವಾದುದರಿಂದ ರಮಾಗಮ ಪ್ರಾಪ್ತವಾದರೆ 'ಗ್ರಹಿಜ್ಯಾವಯಿ—' ಸೂತ್ರದಿಂದ ಮೊದಲೇ ಸಂಪ್ರಸಾರಣ ಬರುತ್ತದೆ. 'ಗ್ರಹಿಜ್ಯಾ—' ಪೂರ್ವಸೂತ್ರವಾದರೂ 'ವಿಪ್ರತಿಷೇಧೇ ಪೂರ್ವಂ ಕಾರ್ಯಮ್' ಎಂದು ಪೂರ್ವಕ್ಕೇ ಪ್ರಾಬಲ್ಯ ಬರುತ್ತದೆ. ಭೃಸ್ಜ್ + ಯಾತ್. ಸಕಾರಕ್ಕೆ ಶ್ಚುತ್ವದಿಂದ ಶಕಾರ ಬಂದಮೇಲೆ ಜಶ್ತ್ವದಿಂದ ಅದಕ್ಕೆ ಜಕಾರ. ಭೃಜ್ಜ್ಯಾತ್ | ಭೃಜ್ಜ್ಯಾಸ್ತಾಮ್ | ಭೃಜ್ಜ್ಯಾಸುಃ || ಇತ್ಯಾದಿ. ಆ.—ರಮಾಗಮವಿಕಲ್ಪ. ರಮ್ ಬಂದರೆ ಭರ್ಜ್ + ಸೀಷ್ಟ. ಜಕ್ಕೆ ಹಿಂದಿನಂತೆ ಷತ್ವ, ಕತ್ವ. ಭರ್ಕ್ಷೀಷ್ಟ | ಭರ್ಕ್ಷೀಯಾಸ್ತಾಮ್ | ಭರ್ಕ್ಷೀರನ್ || ಭರ್ಕ್ಷೀಷ್ಠಾಃ | ಭರ್ಕ್ಷೀಯಾಸ್ಥಾಮ್ | ಭರ್ಕ್ಷೀಧ್ವಮ್ || ಭರ್ಕ್ಷೀಯ | ಭರ್ಕ್ಷೀವಹಿ ಭರ್ಕ್ಷೀಮಹಿ || ರಮ್ ಬಾರದಿದ್ದರೆ ಭ್ರಕ್ಷೀಷ್ಟ | ಭ್ರಕ್ಷೀಯಾಸ್ತಾಮ್ | ಇತ್ಯಾದಿ. ಲುಙ್ || ಅಭ್ರಸ್ಜ್ + ಸೀತ್. ರಮಾಗಮ. ಅಭರ್ಜ್ + ಸೀತ್. 'ವದವ್ರಜಹಲನ್ತಸ್ಯಾಚಃ' ವೃದ್ಧಿ. ಅಭಾರ್ಜ್ + ಸೀತ್. ಷತ್ವ, ಕತ್ವ. ಅಭಾರ್ಕ್ಷೀತ್ | ಅಭಾರ್ಷ್ಟಾಮ್ | ಅಭಾರ್ಕ್ಷುಃ || ಅಭಾರ್ಕ್ಷೀಃ | ಅಭಾರ್ಷ್ಟಮ್ | ಅಭಾರ್ಷ್ಟ || ಅಭಾರ್ಕ್ಷಮ್ | ಅಭಾರ್ಕ್ಷ್ವ | ಅಭಾರ್ಕ್ಷ್ಮ || ರಮ್ ಬಾರದಿದ್ದರೆ ಅಭ್ರಾಕ್ಷೀತ್ | ಅಭ್ರಾಷ್ಟಾಮ್ | ಅಭ್ರಾಕ್ಷುಃ || ಅಭ್ರಾಕ್ಷೀಃ | ಅಭ್ರಾಷ್ಟಮ್ | ಅಭ್ರಾಷ್ಟ || ಅಭ್ರಾಕ್ಷಮ್ | ಅಭ್ರಾಕ್ಷ್ವ | ಅಭ್ರಾಕ್ಷ್ಮ || ಆ.—

ಅಭ್ರಸ್ಜ್+ಸ್+ತ. ರಮಾಗಮ. "ಝಲೋ ಝಲಿ' ಸಲೋಪ. ಷತ್ವಾದಿ. ಅಭರ್ಷ್ಟ | ಅಭರ್ಕ್ಷಾತಾಮ್ | ಅಭರ್ಕ್ಷತ || ಅಭರ್ಷ್ಠಾಃ | ಅಭರ್ಕ್ಷಾಥಾಮ್ | ಅಭರ್ಡ್ಢ್ವಮ್ || ಅಭರ್ಕ್ಷಿ | ಅಭರ್ಕ್ಷ್ವಹಿ | ಅಭರ್ಕ್ಷ್ಮಹಿ || ರಮ್ ಬಾರದಿದ್ದರೆ ಅಭ್ರಷ್ಟ | ಅಭ್ರಕ್ಷಾತಾಮ್ | ಅಭ್ರಕ್ಷತ || ಅಭ್ರಷ್ಠಾಃ | ಅಭ್ರಕ್ಷಾಥಾಮ್ | ಅಭ್ರಡ್ಢ್ವಮ್ || ಅಭ್ರಕ್ಷಿ | ಅಭ್ರಕ್ಷ್ವಹಿ | ಅಭ್ರಕ್ಷ್ಮಹಿ || ಲೃಙ್ || ಅಭರ್ಕ್ಷ್ಯತ್, ಅಭ್ರಕ್ಷ್ಯತ್ || ಆ.—ಅಭರ್ಕ್ಷ್ಯತ, ಅಭ್ರಕ್ಷ್ಯತ | ಇತ್ಯಾದಿ.

|| ೧೧೯ || ಕೃಷ=ವಿಲೇಖನೇ (ಉಳುವುದು.)

**ಕೃಷತಿ, ಕೃಷತೇ | ಚಕರ್ಷ, ಚಕೃಷೇ ||**

ಇದೂ ಖುದುಪಧ ಧಾತು. ಅನಿಟ್. ಶವಿಕರಣ ಙಿತಾದುದರಿಂದ ಲಘೂಪಧ ಗುಣವಿಲ್ಲ. ಕೃಷತಿ, ಕೃಷತೇ || **ಲಿಟ್** || ಚಕೃಷ್+ಅ. 'ಪುಗನ್ತಲಘೂಪಧಸ್ಯ ಚ' ಚಕರ್ಷ | ಚಕೃಷತುಃ | ಚಕೃಷುಃ || ಚಕರ್ಷಿಥ | ಚಕೃಷಥುಃ | ಚಕೃಷ || ಚಕರ್ಷ | ಚಕೃಷಿವ | ಚಕೃಷಿಮ || ಆ. – ಚಕೃಷೇ | ಚಕೃಷಾತೇ | ಚಕೃಷಿರೇ || ಚಕೃಷಿಷೇ | ಚಕೃಷಾಥೇ | ಚಕೃಷಿಧ್ವೇ || ಚಕೃಷೇ | ಚಕೃಷಿವಹೇ | ಚಕೃಷಿಮಹೇ || **ಲುಟ್** || ಕೃಷ್+ತಾ ಎಂದಿರುವಾಗ ಅಮಾಗಮ ವಿಕಲ್ಪವಾಗಿ ಹೇಳುತ್ತಾನೆ.

ಖುದುಪಧಧಾತುವಿಗೆ ಅಮ್ ವಿಕಲ್ಪ ಹೇಳುವ ಸೂತ್ರ.

**೬೫೫. ಅನುದಾತ್ತಸ್ಯ ಚರ್ದುಪಧಸ್ಯಾನ್ಯತರಸ್ಯಾಮ್ || ೬–೧–೫೯ ||**

**ಉಪದೇಶೇಽನುದಾತ್ತೋ ಯ ಖುದುಪಧಸ್ತಸ್ಯಾಮ್ವಾ ಸ್ಯಾಜ್ಝಲಾದಾವಕಿತಿ | ಕ್ರಷ್ಟಾ, ಕರ್ಷ್ಟಾ | ಕೃಕ್ಷೀಷ್ಟ |**

**ವಾ || (ಸ್ಪೃಶಮೃಶಕೃಷತೃಪದೃಪಾಂ ಚ್ಲೇಃ ಸಿಜ್ವಾ ವಾಚ್ಯಃ)**

**ಅಕ್ರಾಕ್ಷೀತ್, ಅಕಾರ್ಕ್ಷೀತ್, ಅಕೃಕ್ಷತ್ | ಅಕೃಷ್ಟ | ಅಕೃಕ್ಷಾತಾಮ್ | ಅಕೃಕ್ಷತ | ಕ್ಸ ಪಕ್ಷೇ ಅಕೃಕ್ಷತ | ಅಕೃಕ್ಷಾತಾಮ್ | ಅಕೃಕ್ಷನ್ತ ||**

|| ೧೨೦ || ಮಿಲ=ಸಂಗಮೇ (ಸೇರುವುದು.)

**ಮಿಲತಿ, ಮಿಲತೇ | ಮಿಮೇಲ | ಮೇಲಿತಾ ||**

ಅನುದಾತ್ತಸ್ಯ, ಚ, ಖುದುಪಧಸ್ಯ, ಅನ್ಯತರಸ್ಯಾಮ್ || ನಾಲ್ಕು ಪದಗಳುಳ್ಳ ಸೂತ್ರ. 'ಸೃಜಿದೃಶೋರ್ಝಲ್ಯಮಕಿತಿ' ಸೂತ್ರದಿಂದ 'ಅಮ್', 'ಝಲಿ', 'ಅಕಿತಿ', 'ಆದೇಚ ಉಪದೇಶೇ—' ಸೂತ್ರದಿಂದ 'ಉಪದೇಶೇ' ಪದಗಳು

ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಉಪದೇಶಕಾಲದಲ್ಲಿ ಅನುದಾತ್ತವಾಗಿ ಋಕಾರವೇ ಉಪಧೆಯಾಗಿರುವ ಧಾತುವಿಗೆ ಝಲಾದಿಯಾದ ಅಕಿತ್ತಾದ ಪ್ರತ್ಯಯ ಪರದಲ್ಲಿರುವಾಗ ಅಮಾಗಮ ವಿಕಲ್ಪವಾಗ ಬರುತ್ತದೆ. ಅಮ್ ಮಿತ್ತಾದುದರಿಂದ 'ಮಿದಚೋಽನ್ತ್ಯಾತ್ಪರಃ' ಸೂತ್ರದಿಂದ ಅಂತ್ಯಾಚಿನಪರವಾಗಿ ಬಂದರೆ ಕೃ+ಅಷ್+ತಾ ಎಂದಾಗುತ್ತದೆ. ಯಣ್. ಕ್ರಷ್+ತಾ. ಷ್ಟುತ್ವ. ಕ್ರಷ್ಟಾ | ಕ್ರಷ್ಟಾರೌ | ಕ್ರಷ್ಟಾರಃ || ಇತ್ಯಾದಿ. ಅಮಾಗಮ ಬಾರದಿದ್ದರೆ 'ಪುಗನ್ತಲಘೂಪಧಸ್ಯ ಚ' ಸೂತ್ರದಿಂದ ಲಘೂಪಧಗುಣ. ಕರ್ಷ್ಟಾ | ಇತ್ಯಾದಿ. ಆತ್ಮನೇಪದದಲ್ಲಿಯೂ ಹೀಗೆ ಎರಡು ರೂಪಗಳು. ಮಧ್ಯಮಪುರುಷದಿಂದ ವಿಶೇಷ.

**ಲೃಟ್** || ಸ್ಯದಲ್ಲಿಯೂ ಅಮಾಗಮವಿಕಲ್ಪದಿಂದ ಎರಡು ರೂಪಗಳು. ಷಕಾರಕ್ಕೆ 'ಷಢೋಃ ಕಃ ಸಿ' ಸೂತ್ರದಿಂದ ಕಕಾರಾದೇಶ. ಸ್ಯದ ಸಕಾರಕ್ಕೆ ಷತ್ವ. ಕ್ರಕ್ಷ್ಯತಿ, ಕರ್ಕ್ಷ್ಯತಿ || ಇತ್ಯಾದಿ. ಆ.—ಕ್ರಕ್ಷ್ಯತೇ, ಕರ್ಕ್ಷ್ಯತೇ || ಇತ್ಯಾದಿ. **ಲೋಟ್** || ಕೃಷತು, ಕೃಷತಾತ್ || ಆ.—ಕೃಷತಾಮ್ || **ಲಙ್** || ಅಕೃಷತ್ | ಆ.—ಅಕೃಷತ || **ವಿಧಿಲಿಙ್** || ಕೃಷೇತ್ | ಆ.—ಕೃಷೇತ || **ಆಶೀರ್ಲಿಙ್** || ಕೃಷ್ಯಾತ್ | ಆ.—ಕೃಷ್+ಸೀತ. ಸೀಯುಟ್ ಝಲಾದಿಯಾದರೂ ಕಿತ್ತಾದುದರಿಂದ ಅಮಾಗಮವಿಕಲ್ಪವಿಲ್ಲ. ಕತ್ವ, ಷತ್ವ. ಕೃಕ್ಷೀಷ್ಟ | ಕೃಕ್ಷೀಯಾಸ್ತಾಮ್ | ಕೃಕ್ಷೀರನ್ || ಕೃಕ್ಷೀಷ್ಠಾಃ | ಕೃಕ್ಷೀಯಾಸ್ಥಾಮ್ | ಕೃಕ್ಷೀಢ್ವಮ್ || ಕೃಕ್ಷೀಯ | ಕೃಕ್ಷೀವಹಿ || ಕೃಕ್ಷೀಮಹಿ || **ಲುಙ್** || ಕೃಷ್ ಧಾತುವು ಇಕ್ (ಋ) ಉಪಧೆಯಾಗಿ ಶಲನ್ತವಾದುದರಿಂದ 'ಶಲ ಇಗುಪಧಾದನಿಟಃ ಕ್ಸಃ' ಸೂತ್ರದಿಂದ ಚ್ಲಿಗೆ ಕ್ಸಾದೇಶ ಪ್ರಾಪ್ತವಾದರೆ ವಾರ್ತಿಕಕಾರರು ವಿಕಲ್ಪವಾಗಿ ಸಿಚಾದೇಶ ಹೇಳುತ್ತಾರೆ **ವಾರ್ತಿಕಾರ್ಥ**—ಸ್ಪೃ, ಮೃಶ, ಕೃಷ, ತೃಪ, ದೃಪ ಧಾತುಗಳ ಚ್ಲಿಗೆ ವಿಕಲ್ಪವಾಗಿ ಸಿಚ್ ಬರುತ್ತದೆ. ಸಿಚ್ ಬಂದರೆ ಅಕೃಷ್+ಸ್ ಈತ್. ಸಿಚ್ ಝಲಾದಿ ಅಕಿತ್ತಾದುದರಿಂದ ಅಮಾಗಮವಿಕಲ್ಪ. ಅಮ್ ಬಂದರೆ ಅಕ್ರಷ್+ಸೀತ್ 'ವದವ್ರಜಹಲನ್ತಸ್ಯಾಚಃ' ಉಪಧಾವೃದ್ಧಿ. ಷಕ್ಕೆ ಕತ್ವ. ಸಕ್ಕೆ ಷತ್ವ ಅಕ್ರಾಕ್ಷೀತ್ | ಅಕ್ರಾಷ್+ಸ್+ತಾಮ್. 'ಝಲೋ ಝಲಿ' ಸಲೋಪ. ಅಕ್ರಾಷ್+ತಾಮ್. ಷ್ಟುತ್ವ. ಅಕ್ರಾಷ್ಟಾಮ್ | ಅಕ್ರಾಕ್ಷುಃ || ಅಕ್ರಾಕ್ಷೀಃ | ಅಕ್ರಾಷ್ಟಮ್ | ಅಕ್ರಾಷ್ಟ || ಅಕ್ರಾಕ್ಷಮ್ | ಅಕ್ರಾಕ್ಷ್ವ | ಅಕ್ರಾಕ್ಷ್ಮ || ಅಮಾಗಮ ಬಾರದಿದ್ದರೆ ಋಕಾರಕ್ಕೆ ವೃದ್ಧಿ (ಆರ್). ಅಕಾರ್ಕ್ಷೀತ್ | ಅಕಾರ್ಷ್ಟಾಮ್ | ಅಕಾರ್ಕ್ಷುಃ || ಇತ್ಯಾದಿ. ಸಿಚ್ ಬಾರದಿದ್ದರೆ 'ಶಲ ಇಗುಪಧಾತ್–' ಸೂತ್ರದಿಂದ ಚ್ಲಿಗೆ ಕ್ಸಾದೇಶ. ಕ್ಸ ಕಿತ್ತಾದುದರಿಂದ ಅಮಾಗಮವಿಕಲ್ಪವಿಲ್ಲ. ಅಕೃಕ್ಷತ್ | ಅಕೃಕ್ಷತಾಮ್ | ಅಕೃಕ್ಷನ್ || ಅಕೃಕ್ಷಃ | ಅಕೃಕ್ಷತಮ್ | ಅಕೃಕ್ಷತ || ಅಕೃಕ್ಷಮ್ | ಅಕೃಕ್ಷಾವ | ಅಕೃಕ್ಷಾಮ || **ಆ.**—ಅಕೃಷ್+ಸ್+ತ. 'ಝಲೋ ಝಲಿ' ಸಲೋಪ, ಷ್ಟುತ್ವ. ಅಕೃಷ್ಟ | ಇಲ್ಲಿ 'ಲಿಙ್‌ಸಿಚಾವಾತ್ಮನೇಪದೇಷು' ಸೂತ್ರದಿಂದ ಸಿಚ್ ಕಿತ್ತಾದುದರಿಂದ ಅಮಾಗಮವಿಕಲ್ಪವಿಲ್ಲ. ಅಕೃಕ್ಷಾತಾಮ್ |

ಅಕೃಕ್ಷತ || ಅಕೃಷ್ಟಾಃ | ಅಕೃಷ್ಟಾಥಾಮ್ | ಅಕೃಢ್ವಮ್ | ಅಕೃಕ್ಷಿ | ಅಕೃಕ್ಷ್ವಹಿ | ಅಕೃಕ್ಷ್ಮಹಿ || ಕ್ಸ ಬಂದಾಗ ಅಕೃಕ್ಷತ | ಅಕೃಕ್ಷ+ಆತಾಮ್ ಎಂದಿರುವಾಗ 'ಕ್ಸಸ್ಯಾಚಿ' ಸೂತ್ರದಿಂದ ಕ್ಸದ ಅಕಾರಕ್ಕೆ ಲೋಪ. ಅಕೃಕ್ಷಾತಾಮ್ | ಅಕೃಕ್ಷನ್ತ || ಅಕೃಕ್ಷಥಾಃ | ಅಕೃಕ್ಷಾಥಾಮ್ | ಅಕೃಕ್ಷಧ್ವಮ್ || ಅಕೃಕ್ಷಿ | ಅಕೃಕ್ಷಾವಹಿ | ಅಕೃಕ್ಷಾಮಹಿ || ಲೃಙ್ || ಅಕೃಕ್ಷ್ಯತ್, ಅಕ್ರೃಕ್ಷ್ಯತ್ | ಆ.—ಅಕರ್ಕ್ಷ್ಯತ, ಅಕ್ರೃಕ್ಷ್ಯತ | ಇತ್ಯಾದಿ.

ಮಿಲ ಧಾತು. ಉಭಯಪದಿ. ಸೇಟ್. ಮಿಲತಿ, ಮಿಲತೇ | ಮಿಮೇಲ, ಮಿಮಿಲೇ | ಮೇಲಿತಾ | ಮೇಲಿಷ್ಯತಿ, ಮೇಲಿಷ್ಯತೇ | ಮಿಲತು, ಮಿಲತಾಮ್ | ಅಮಿಲತ್, ಅಮಿಲತ | ಮಿಲೇತ್ | ಮಿಲೇತ | ಮಿಲ್ಯಾತ್, ಮೇಲಿಷೀಷ್ಟ | ಅಮೇಲೀತ್, ಅಮೇಲಿಷ್ಟ | ಅಮೇಲಿಷ್ಯತ್, ಅಮೇಲಿಷ್ಯತ ||

|| ೧೨೧ || ಮುಚ್ಲೃ=ಮೋಚನೇ (ಬಿಡುವುದು.)

ಮುಚಾದಿಗಳಿಗೆ ನುಮಾಗಮ ಹೇಳುವ ಸೂತ್ರ.

೬೫೬. ಶೇ ಮುಚಾದೀನಾಮ್ || ೭-೧-೫೯ ||

ಮುಚ್, ಲಿಪ್, ವಿದ್, ಲುಪ್, ಸಿಚ್, ಕೃತ್, ಖಿದ್, ಪಿಶಾಂ ನುಮ್ ಸ್ಯಾತ್ ಶೇ ಪರೇ || ಮುಞ್ಚತಿ, ಮುಞ್ಚತೇ | ಮೋಕ್ತಾ | ಮುಚ್ಯಾತ್, ಮುಕ್ಷೀಷ್ಟ | ಅಮುಚತ್, ಅಮುಕ್ತ | ಅಮುಕ್ಷಾತಾಮ್ ||

|| ೧೨೨ || ಲುಪ್ಲೃ=ಛೇದನೇ (ಕತ್ತರಿಸುವುದು.)

ಲುಮ್ಪತಿ, ಲುಮ್ಪತೇ | ಲೋಪ್ತಾ | ಅಲುಪತ್, ಅಲುಪ್ತ ||

|| ೧೨೩ || ವಿದ್ಲೃ=ಲಾಭೇ (ಹೊಂದುವುದು.)

ವಿನ್ದತಿ, ವಿನ್ದತೇ | ವಿವೇದ, ವಿವಿದೇ | ವ್ಯಾಘ್ರಭೂತಿಮತೇ ಸೇಟ್ | ವೇದಿತಾ | ಭಾಷ್ಯಮತೇಽನಿಟ್ | ಪರಿವೇತ್ತಾ ||

|| ೧೨೪ || ಷಿಚ=ಕ್ಷರಣೇ (ಸುರಿಯುವುದು.) ಸಿಞ್ಚತಿ, ಸಿಞ್ಚತೇ ||

ಮುಚ್ ಧಾತು. ೡದಿತ್. ಉಭಯಪದಿ. ಅನಿಟ್. ಇದಕ್ಕೆ ಶವಿಕರಣ ಪರವಾದಾಗ ನುಮಾಗಮ ಹೇಳುತ್ತಾನೆ.

ದ್ವಿಪದ ಸೂತ್ರ. 'ಇದಿತೋ ನುಮ್ ಧಾತೋಃ' ಸೂತ್ರದಿಂದ ನುಮ್ ಅನುವೃತ್ತಿ. ಮುಚಾದಿಗಳು ಎಂಟು ಎಂದು ಭಾಷ್ಯದಲ್ಲಿ ಹೇಳಿದೆ. **ಸೂತ್ರಾರ್ಥ**— ಮುಚ್ ಮುಂತಾದ ಎಂಟು ಧಾತುಗಳಿಗೆ ಶವಿಕರಣಪರವಾದಾಗ ನುಮಾಗಮ

ಬರುತ್ತದೆ. ನುಮ್ ಮಿತ್ತಾದುದರಿಂದ ಅಂತ್ಯಾಚಿನ (ಉ) ಪರವಾಗಿ ಬರುತ್ತದೆ. ಮುನ್‌ಚ್+ಅ+ತಿ. 'ನಶ್ಚಾಪದಾಂತಸ್ಯ ಝಲಿ' ಸೂತ್ರದಿಂದ ನಕಾರಕ್ಕೆ ಅನುಸ್ವಾರ. 'ಅನುಸ್ವಾರಸ್ಯ ಯಯಿ ಪರಸವರ್ಣಃ' ಸೂತ್ರದಿಂದ ಅದಕ್ಕೆ ಪರಸವರ್ಣ. ಮುಞ್ಚತಿ | ಇತ್ಯಾದಿ. ಆ —ಮುಞ್ಚತೇ | ಇತ್ಯಾದಿ.

**ಲಿಟ್** || ಮುಮೋಚ | ಆ.—ಮುಮುಚೇ | **ಲುಟ್** || ಮುಚ್+ತಾ. 'ಪುಗನ್ತಲಘೂಪಧಸ್ಯಚ' ಗುಣ. 'ಚೋಃ ಕುಃ' ಚಕಾರಕ್ಕೆ ಕಾದೇಶ. ಮೋಕ್ತಾ | **ಲೃಟ್** || ಮುಚ್+ಸ್ಯತಿ. ಗುಣ. ಕುತ್ವ, ಷತ್ವ. ಮೋಕ್ಷ್ಯತಿ, ಮೋಕ್ಷ್ಯತೇ | **ಲೋಟ್** || ಮುಞ್ಚತು | ಆ.—ಮುಞ್ಚತಾಮ್ | **ಲಙ್** || ಅಮುಞ್ಚತ್ | ಆ.—ಅಮುಞ್ಚತ | **ವಿಧಿಲಿಙ್** || ಮುಞ್ಚೇತ್ | ಆ.—ಮುಞ್ಚೇತ | **ಆಶೀರ್ಲಿಙ್** || ಮುಚ್ಯಾತ್ | ಆ.—ಮುಚ್+ಸೀಷ್ಟ. 'ಲಿಙ್‌ಸಿಚಾವಾತ್ಮನೇಪದೇಷು' ಸೂತ್ರದಿಂದ ಲಿಙ್ ಕಿತ್ತಾದುದರಿಂದ ಗುಣವಿಲ್ಲ. ಕುತ್ವ, ಷತ್ವ. ಮುಕ್ಷೀಷ್ಟ | ಮುಕ್ಷೀಯಾಸ್ತಾಮ್ | ಮುಕ್ಷೀರನ್ || ಇತ್ಯಾದಿ. **ಲುಙ್** || ಧಾತು ಌದಿತ್ತಾದುದರಿಂದ 'ಪುಷಾದಿದ್ಯುತಾದಿ—' ಸೂತ್ರದಿಂದ ಚ್ಲಿಗೆ ಅಙಾದೇಶ. ಇದು ಙಿತ್ತಾದುದರಿಂದ ಗುಣವಿಲ್ಲ. ಅಮುಚತ್ | ಅಮುಚತಾಮ್ | ಅಮುಚನ್ || ಆ.—ಅಮುಚ್+ಸ್+ತ. 'ಝಲೋ ಝಲಿ' ಸಲೋಪ. ಚಕಾರಕ್ಕೆ ಕುತ್ವ. ಅಮುಕ್ತ | ಅಮುಚ್+ಸ್+ಆತಾಮ್. ಕುತ್ವ, ಷತ್ವ. ಅಮುಕ್ಷಾತಾಮ್ | ಅಮುಕ್ಷತ || ಅಮುಕ್ಥಾಃ | ಅಮುಕ್ಷಾಥಾಮ್ | ಅಮುಗ್ಧ್ವಮ್ || ಅಮುಕ್ಷಿ | ಅಮುಕ್ಷ್ವಹಿ | ಅಮುಕ್ಷ್ಮಹಿ || **ಲೃಙ್** || ಅಮೋಕ್ಷ್ಯತ್, ಅಮೋಕ್ಷ್ಯತ ||

**ಲುಪ್** ಧಾತು. ಇದೂ ಌದಿತ್ತಾದುದರಿಂದ ಮುಚಿನಂತೇ ರೂಪಹೊಂದುತ್ತದೆ. ಲುಮ್ಪತಿ, ಲುಮ್ಪತೇ ಲುಲೋಪ, ಲುಲುಪೇ | ಲೋಪ್ತಾ (೨) | ಲೋಪ್ಸ್ಯತಿ, ಲೋಪ್ಸ್ಯತೇ | ಲುಮ್ಪತು, ಲುಮ್ಪತಾಮ್ | ಅಲುಮ್ಪತ್, ಅಲುಮ್ಪತ | ಲುಮ್ಪೇತ್, ಲುಮ್ಪೇತ | ಲುಪ್ಯಾತ್, ಲುಪ್ಸೀಷ್ಟ | ಅಲುಪತ್, ಅಲುಪ್ತ | ಅಲೋಪ್ಸ್ಯತ್, ಅಲೋಪ್ಸ್ಯತ ||

**ವಿದ್** ಧಾತು. ಇದೂ ಌದಿತ್. ವ್ಯಾಘ್ರಭೂತಿಯೆಂಬ ವೈಯಾಕರಣರ ಮತದಲ್ಲಿ ಇದು ಸೇಟ್. ಭಾಷ್ಯಕಾರರ ಮತದಲ್ಲಿ ಅನಿಟ್. ಆಗ ವಲಾದಿ ಆರ್ಧಧಾತುಕಗಳಲ್ಲಿ ಇಡಾಗಮ, ಇಡಾಗಮವಿಲ್ಲದಿರುವುದು ಹೀಗೆ ಎರಡೆರಡು ರೂಪಗಳಾಗುತ್ತವೆ. ಇನ್ನುಳಿದೆಡೆ ಮುಚಿನಂತೇ ರೂಪ. ಇಡಾಗಮವಿಲ್ಲವೆಂದು ಭಾಷ್ಯಕಾರರ ಮತವೇ ಸಾಧುವಾದುದು. ಪರಿವೇತ್ತಾ ಎಂಬ ರೂಪ ಲೋಕದಲ್ಲಿ ಪ್ರಸಿದ್ಧವಾಗಿದೆ. ಅಣ್ಣನು ಮದುವೆಯಾಗದೆ ಮೊದಲು ಮದುವೆಯಾದ ತಮ್ಮನು ಎಂದರ್ಥ. ಇಡಾಗಮ ಬಂದಿದ್ದರೆ ಪರಿವೇದಿತಾ ಎಂದಾಗಬೇಕಿತ್ತು. ಆದ್ದರಿಂದ ಭಾಷ್ಯಕಾರರು ಹೇಳಿದಂತೆ ಅನಿಟಾದುದರಿಂದ ಪರಿವೇತ್ತಾ ಎಂದಾಗಿದೆ. ವಿನ್ದತಿ, ವಿನ್ದತೇ | ವಿವೇದ, ವಿವಿದೇ ||

ವೇತ್ತಾ, ವೇದಿತಾ (೨) || ವೇತ್ಸ್ಯತೇ, ವೇದಿಷ್ಯತೇ, ವೇತ್ಸ್ಯತಿ, ವೇದಿಷ್ಯತಿ || ವಿನ್ದತು, ವಿನ್ದತಾಮ್ | ಅವಿನ್ದತ್, ಅವಿನ್ದತ | ವಿನ್ದೇತ್, ವಿನ್ದೇತ | ವಿದ್ಯಾತ್, ವಿತ್ಸೀಷ್ಟ, ವೇದಿಷೀಷ್ಟ | ಅವಿದತ್, ಅವಿತ್ತ, ಅವೇದಿಷ್ಟ | ಅವೇತ್ಸ್ಯತ್, ಅವೇತ್ಸ್ಯತ ||

**ಷಿಚ** ಧಾತು. ಉಭಯಪದಿ. ಅನಿಟ್. 'ಧಾತ್ವಾದೇಃ ಷಃ ಸಃ' ಆದಿಗೆ ಸತ್ವ. ಮುಚಿನಂತೇ ರೂಪವಾಗುತ್ತದೆ. ಸಿಞ್ಚತಿ, ಸಿಞ್ಚತೇ ಸಿಷೇಚ, ಸಿಷಿಚೇ | ಸೇಕ್ತಾ (೨) | ಸೇಕ್ಷ್ಯತಿ, ಸೇಕ್ಷ್ಯತೇ | ಸಿಞ್ಚತು, ಸಿಞ್ಚತಾಮ್ | ಅಸಿಞ್ಚತ್, ಅಸಿಞ್ಚತ | ಸಿಞ್ಚೇತ್, ಸಿಞ್ಚೇತ | ಸಿಚ್ಯಾತ್, ಸಿಕ್ಷೀಷ್ಟ | ಲುಙ್‌ನಲ್ಲಿ ಇದಿತ್ತಾಗದಿದ್ದುದರಿಂದ ಅಙ್ ಬಾರದಿದ್ದರೆ ಸೂತ್ರದಿಂದ ಹೇಳುತ್ತಾನೆ.

ಲಿಪ್, ಸಿಚ್ ಗಳ ಚ್ಲಿಗೆ ಅಙ್ ಹೇಳುವ ಸೂತ್ರ.

**೬೫೭. ಲಿಪಿಸಿಚಿಹ್ವಶ್ಚ** || ೩-೧-೫೩ ||

**ಏಭ್ಯಶ್ಚ್ಲೇರಙ್ ಸ್ಯಾತ್** | ಅಸಿಚತ್ ||

ಲಿಪಿಸಿಚಿಹ್ವಃ, ಚ || ದ್ವಿಪದ ಸೂತ್ರ. ''ಚ್ಲೇಃ ಸಿಚ್' ಸೂತ್ರದಿಂದ 'ಚ್ಲೇಃ', 'ಅಸ್ಯತಿವಕ್ತಿಖ್ಯಾ—' ಸೂತ್ರದಿಂದ 'ಅಙ್' ಅನುವೃತ್ತಿ. **ಸೂತ್ರಾರ್ಥ**—ಲಿಪ, ಸಿಚ, ಹ್ವಾ ಧಾತುಗಳ ಪರದಲ್ಲಿರುವ ಚ್ಲಿಗೆ ಅಙ್ ಆದೇಶ ಬರುತ್ತದೆ. ಪ್ರಕೃತ ಸಿಚಿನ ಚ್ಲಿಗೆ ಅಙ್ ಬಂದರೆ ಅಸಿಚತ್ ರೂಪವಾಗುತ್ತದೆ. ಆತ್ಮನೇಪದದಲ್ಲಿ ವಿಕಲ್ಪವಾಗಿ ಅಙ್ ಹೇಳುತ್ತಾನೆ.

ಚ್ಲಿಗೆ ಅಙ್ ವಿಕಲ್ಪ ಹೇಳುವ ಸೂತ್ರ.

**೬೫೮. ಆತ್ಮನೇಪದೇಷ್ವನ್ಯತರಸ್ಯಾಮ್** || ೩-೧-೫೪ ||

**ಲಿಪಿಸಿಚಿಹ್ವಃ ಪರಸ್ಯ ಚ್ಲೇರಙ್ ವಾ** | ಅಸಿಚತ, ಅಸಿಕ್ತ ||

|| ೧೨೫ || **ಲಿಪ ಉಪದೇಹೇ** (ಬಳಿಯುವುದು.)

**ಉಪದೇಹೋವೃದ್ಧಿಃ** | ಲಿಮ್ಪತಿ, ಲಿಮ್ಪತೇ | **ಲೇಪ್ತಾ** | **ಅಲಿಪತ್, ಅಲಿಪತ, ಅಲಿಪ್ತ** ||

ಆತ್ಮನೇಪದೇಷು, ಅನ್ಯತರಸ್ಯಾಮ್ || ದ್ವಿಪದ ಸೂತ್ರ. ಹಿಂದಿನ ಸೂತ್ರ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಲಿಪ, ಸಿಚ, ಹ್ವಾ ಧಾತುಗಳ ಚ್ಲಿಗೆ ಆತ್ಮನೇಪದ ಪ್ರತ್ಯಯ ಪರದಲ್ಲಿರುವಾಗ ವಿಕಲ್ಪವಾಗಿ ಅಙ್ ಬರುತ್ತದೆ. ಅಙ್ ಬಂದರೆ ಅಸಿಚತ | ಅಸಿಚೇತಾಮ್ | ಅಸಿಚನ್ತ || ಇತ್ಯಾದಿ ರೂಪಗಳಾಗುತ್ತವೆ. ಬಾರದಿದ್ದರೆ

ಟ್ಲಿಗೆ ಸಿಚ್. ಅಸಿಚ್+ಸ್+ತ. 'ಝಲೋ ಝಲಿ' ಸಲೋಪ. 'ಚೋಕುಃ' ಕುತ್ವ. ಅಸಿಕ್ತ | ಅಸಿಚ್+ಸ್+ಆತಾಮ್. ಕುತ್ವ, ಷತ್ವ. ಅಸಿಕ್ಷಾತಾಮ್ | ಅಸಿಕ್ಷತ || ಅಸಿಕ್ಥಾಃ | ಅಸಿಕ್ಷಾಥಾಮ್ | ಅಸಿಗ್ಧ್ವಮ್ || ಅಸಿಕ್ಷಿ | ಅಸಿಕ್ಷ್ವಹಿ ಅಸಿಕ್ಷ್ಮಹಿ || ಲೃಙ್ || ಅಸೇಕ್ಷ್ಯತ್, ಅಸೇಕ್ಷ್ಯತ ||

ಲಿಪ ಧಾತು. ಹಚ್ಚುವುದು ಅರ್ಥ. ಅನಿಟ್. ಹಿಂದಿನಂತೇ ರೂಪ. ಲಿಮ್ಪತಿ, ಲಿಮ್ಪತೇ | ಲಿಲೇಪ, ಲಿಲಿಪೇ | ಲೇಪ್ತಾ (೨) | ಲೇಪ್ಸ್ಯತಿ, ಲೇಪ್ಸ್ಯತೇ | ಲಿಮ್ಪತು, ಲಿಮ್ಪತಾಮ್ | ಅಲಿಮ್ಪತ್, ಅಲಿಮ್ಪತ | ಲಿಮ್ಪೇತ್, ಲಿಮ್ಪೇತ | ಲಿಪ್ಯಾತ್, ಲಿಪ್ಸೀಷ್ಟ | ಲುಙ್‌ನಲ್ಲಿ ಸಿಚಿನಂತೇ ರೂಪ. ಅಲಿಪತ್ || ಆ.—ಅಲಿಪತ, ಅಲಿಪ್ತ | ಅಲೇಪ್ಸ್ಯತ್, ಅಲೇಪ್ಸ್ಯತ || ಈ ರೀತಿ ತುದಾದಿಯಲ್ಲಿ ಉಭಯಪದಿಧಾತುಗಳ ರೂಪನಿಷ್ಪತ್ತಿಯನ್ನು ಮೊದಲು ಹೇಳಿ ಇನ್ನು ಪರಸ್ಮೈಪದಿಧಾತುಗಳ ಪ್ರಕ್ರಿಯೆ ತೋರಿಸುತ್ತಾನೆ.

|| ೧೨೬ || ಕೃತೀ=ಛೇದನೇ (ಕತ್ತರಿಸುವುದು.)

ಕೃನ್ತತಿ | ಚಕರ್ತ | ಕರ್ತಿತಾ | ಕರ್ತಿಷ್ಯತಿ, ಕರ್ತ್ಸ್ಯತಿ | ಅಕರ್ತೀತ್ ||

|| ೧೨೭ || ಖಿದ ಪರಿಘಾತೇ (ದೈನ್ಯ ತೋರಿಸುವುದು.)

ಖಿನ್ದತಿ | ಚಿಖೇದ | ಖೇತ್ತಾ ||

|| ೧೨೮ || ಪಿಶ=ಅವಯವೇ (ಬೇರ್ಪಡಿಸುವುದು.) ಪಿಂಶತಿ | ಪೇಶಿತಾ ||

|| ೧೨೯ || ಓವ್ರಶ್ಚೂ=ಛೇದನೇ (ಕತ್ತರಿಸುವುದು.)

ವೃಶ್ಚತಿ | ವವ್ರಶ್ಚ | ವವ್ರಶ್ಚಿಥ, ವವ್ರಷ್ಠ | ವ್ರಶ್ಚಿತಾ, ವ್ರಷ್ಟಾ | ವ್ರಶ್ಚಿಷ್ಯತಿ, ವ್ರಕ್ಷ್ಯತಿ | ವೃಶ್ಚ್ಯಾತ್ | ಅವ್ರಶ್ಚೀತ್ | ಅವ್ರಾಕ್ಷೀತ್ ||

|| ೧೩೦ || ವ್ಯಚ=ವ್ಯಾಜೀಕರಣೇ (ಕಪಟಮಾಡುವುದು.)

**ವಿಚತಿ | ವಿವ್ಯಾಚ | ವಿವಿಚತುಃ | ವ್ಯಚಿತಾ | ವ್ಯಚಿಷ್ಯತಿ | ವಿಚ್ಯಾತ್ | ಅವ್ಯಾಚೀತ್, ಅವ್ಯಚೀತ್ || ವ್ಯಚೇಃ ಕುಟಾದಿತ್ವಮನಸೀತಿ ತು ನೇಹ ಪ್ರವರ್ತತೇ, ಅನಸೀತಿ ಪರ್ಯುದಾಸೇನ ಕೃನ್ಮಾತ್ರವಿಷಯತ್ವಾತ್ |**

ಕೃತೀ ಧಾತು. ಈಕಾರ, ಇತ್. ಸೇಟ್. ಮುಚಾದಿಯಲ್ಲಿ ಸೇರಿರುವುದರಿಂದ 'ಶೇ ಮುಚಾದೀನಾಮ್' ಸೂತ್ರದಿಂದ ಸಾರ್ವಧಾತುಕಗಳಲ್ಲಿ ನುಮಾಗಮ. ಕೃನ್ತತಿ. ನಕಾರಕ್ಕೆ ಅನುಸ್ವಾರ ಪರಸವರ್ಣ ಬಂದಿದೆ. ಲಿಟ್ || ಚಕರ್ತ | ಚಕೃತತುಃ || ಚಕೃತುಃ || ಚಕರ್ತಿಥ | ಚಕೃತಥುಃ | ಚಕೃತ || ಚಕರ್ತ | ಚಕೃತಿವ | ಚಕೃತಿಮ || ಲುಟ್ || ಪುಗನ್ತಗುಣ. ಕರ್ತಿತಾ | ಲೃಟ್ || ಕೃತ್+ಸ್ಯತಿ ಎಂದಿರುವಾಗ 'ಪುಗನ್ತ—' ಸೂತ್ರದಿಂದ ಗುಣ. 'ಸೇಸಿಚಿಕೃತ—' (ಸೂ. ೬೩೪) ಸೂತ್ರದಿಂದ

ಸ್ಯಕ್ಕೆ ಇಡಾಗಮವಿಕಲ್ಪ. ಇಟ್ ಬಂದರೆ ಸಕ್ಕೆ ಷತ್ವ/ ಬಂದು ಕರ್ತಿಷ್ಯತಿ, ಇಟ್ ಬಾರದಿದ್ದರೆ ಕರ್ತ್ಸ್ಯತಿ ಎಂದಾಗುತ್ತದೆ. **ಲೋಟ್** || ಕೃನ್ತತು | **ಲಙ್** || ಅಕೃನ್ತತ್ | **ವಿಧಿಲಿಙ್** || ಕೃನ್ತೇತ್ | **ಆಶೀರ್ಲಿಙ್** || ಕೃತ್ಯಾತ್ | **ಲುಙ್** || ಅಕೃತ್ + ಇಸ್ + ಈತ್. 'ಇಟ ಈಟಿ' ಸಲೋಪ. ಲಘೂಪಧಗುಣ. ಅಕರ್ತೀತ್| ಅಕರ್ತಿಷ್ಟಾಮ್ | ಅಕರ್ತಿಷುಃ || ಅಕರ್ತೀಃ | ಅಕರ್ತಿಷ್ಟಮ್ | ಅಕರ್ತಿಷ್ಟ || ಅಕರ್ತಿಷಮ್ | ಅಕರ್ತಿಷ್ವ | ಅಕರ್ತಿಷ್ಮ || **ಲೃಙ್** || ಅಕರ್ತಿಷ್ಯತ್, ಅಕರ್ತ್ಸ್ಯತ್||

**ಖಿದ** ಧಾತು. ಅನಿಟ್. ಮುಚಾದಿಯಲ್ಲಿ ಸೇರಿರುವುದರಿಂದ ನುಮ್, ಖಿನ್ದತಿ| ಇತ್ಯಾದಿ. ಚಿಖೇದ | ಖೇತ್ತಾ | ಖೇತ್ಸ್ಯತಿ | ಖಿನ್ದತು | ಅಖಿನ್ದತ್ | ಖಿನ್ದೇತ್ | ಖಿದ್ಯಾತ್ | **ಲುಙ್** || ಅಖೈತ್ಸೀತ್ | ಅಖೈತ್ತಾಮ್ | ಅಖೈತ್ಸುಃ || ಅಖೈತ್ಸೀಃ | ಅಖೈತ್ತಮ್ | ಅಖೈತ್ತ || ಅಖೈತ್ಸಮ್ | ಅಖೈತ್ಸ್ವ | ಅಖೈತ್ಸ್ಮ || **ಲೃಙ್** || ಅಖೇತ್ಸ್ಯತ ||

**ಓವ್ರಶ್ಚೂ** ಧಾತು. ಓಕಾರ, ಊಕಾರ ಇತ್. ಊದಿತ್ತಾದುದರಿಂದ ವಲಾದಿ ಆರ್ಧಧಾತುಕಗಳಲ್ಲಿ ಇಡ್ವಿಕಲ್ಪ. ಓದಿತ್ತಿಗೆ ಕೃತ್ತಿನಲ್ಲಿ ಪ್ರಯೋಜನವಿದೆ. ವ್ರಶ್ಚ್+ ಅ+ತಿ. ಶವಿಕರಣ ಙಿತ್ತಾದುದರಿಂದ 'ಗ್ರಹಿಜ್ಯಾವಯಿ—' ಸೂತ್ರದಿಂದ ಸಂಪ್ರಸಾರಣ. ರೇಫಕ್ಕೆ ಋರೂಪ ಸಂಪ್ರಸಾರಣ ಬಂದರೆ ವೃಶ್ಚತಿ||ವೃಶ್ಚತಃ| ವೃಶ್ಚನ್ತಿ|| ಇತ್ಯಾದಿ ರೂಪಗಳಾಗುತ್ತವೆ. **ಲಿಟ್** || ದ್ವಿತ್ವ ಬಂದಾಗ 'ಲಿಟ್ಯಭ್ಯಾಸಸ್ಯೋಭಯೇಷಾಮ್' ಸೂತ್ರದಿಂದ ಅಭ್ಯಾಸಕ್ಕೆ ಸಂಪ್ರಸಾರಣ. ವೃವ್ರಶ್ಚ್+ಅ- 'ಉರತ್' ಅಭ್ಯಾಸದಋಕಾರಕ್ಕೆ ಅತ್ವ. ವವ್ರಶ್ಚ | ವವ್ರಶ್ಚತುಃ | ವವ್ರಶ್ಚುಃ || ಥಲಿಗೆ 'ಸ್ವರತಿಸೂತಿಸೂಯತಿ—' ಸೂತ್ರದಿಂದ ವಿಕಲ್ಪವಾಗಿ ಇಟ್. ಇಟ್ ಬಂದರೆ ವವ್ರಶ್ಚಿಥ. ಬಾರದಿದ್ದರೆ ವವ್ರಶ್ಚ್+ಥ ಎಂದಿರುವಾಗ 'ವ್ರಶ್ಚಭ್ರಸ್ಜ—' ಸೂತ್ರದಿಂದ ಚಕಾರಕ್ಕೆ ಷಕಾರ. ಅಲ್ಲಿ ಶಕಾರ, ಚಕಾರ ಸಂಬಂಧದಿಂದ ಬಂದಿದೆ. ಮೂಲಸ್ವರೂಪ ಸಕಾರವಾದುದರಿಂದ ಅದಕ್ಕೆ 'ಸ್ಕೋಃ ಸಂಯೋಗಾದ್ಯೋಃ—' ಸೂತ್ರದಿಂದ ಲೋಪ. ವವ್ರಷ್+ಥ. **'ಷ್ಟುನಾಷ್ಟುಃ'** ವವ್ರಷ್ಠ | ವವ್ರಶ್ಚಥುಃ | ವವ್ರಶ್ಚ || ವವ್ರಶ್ಚ | ವವ್ರಶ್ಚಿವ | ವವ್ರಶ್ಚಿಮ || **ಲುಟ್** || ವ್ರಶ್ಚಿತಾ | 'ಸ್ವರತಿಸೂತಿ—' ಸೂತ್ರದಿಂದ ಇಡ್ವಿಕಲ್ಪವಾದುದರಿಂದ ಇಡಾಗಮ ಬಾರದಿದ್ದರೆ ವ್ರಶ್ಚ್+ತಾ ಎಂದಿರುವಾಗ ಶ್ಚುತ್ವ ಅಸಿದ್ಧವಾದುದರಿಂದ ಸಕಾರವಿದೆಯೆಂದು ಅದಕ್ಕೆ ಲೋಪ. ಚಕಾರಕ್ಕೆ ಷತ್ವ, ತಕಾರಕ್ಕೆ ಷ್ಟುತ್ವ. ವ್ರಷ್ಟಾ | **ಲೃಟ್** || ಇಡಾಗಮ ಬಂದರೆ ವ್ರಶ್ಚಿಷ್ಯತಿ ಇಡಾಗಮ ಬಾರದಿದ್ದರೆ ವ್ರಶ್ಚ್+ಸ್ಯತಿ ಎಂದಿರುವಾಗ ಸ(ಶ) ಲೋಪ. ಷತ್ವ. ಅದಕ್ಕೆ 'ಷಢೋಃ ಕಃ ಸಿ' ಸೂತ್ರದಿಂದ ಕತ್ವ. ಸಕಾರಕ್ಕೆ ಷತ್ವ. ವ್ರಕ್ಷ್ಯತಿ | **ಲೋಟ್** || ವೃಶ್ಚತು, ವೃಶ್ಚತಾತ್ | ಇತ್ಯಾದಿ. **ವಿಧಿಲಿಙ್** || ವೃಶ್ಚೇತ್ | **ಆಶೀರ್ಲಿಙ್** || ಯಾಸುಟ್ ಙಿತ್ತಾದುದರಿಂದ ಧಾತುವಿನ ರೇಫಕ್ಕೆ ಸಂಪ್ರಸಾರಣ. ವೃಶ್ಚ್ಯಾತ್ | ವೃಶ್ಚ್ಯಾ

ಸ್ತಾಮ್ | ವ್ರಶ್ಚ್ಯಾಸುಃ || ಇತ್ಯಾದಿ. **ಲುಙ್‌**ನಲ್ಲಿ ಸಿಚಿಗೆ ಇಡಾಗಮ ಬಂದರೆ ಅವ್ರಶ್ಚ್+ಇಸ್+ಈತ್ ಎಂದಿರುವಾಗ 'ಇಟ ಈಟಿ' ಸಲೋಪ. ಅವ್ರಶ್ಚೀತ್ | ಅವ್ರಶ್ಚಿಷ್ಟಾಮ್ | ಅವ್ರಶ್ಚಿಷುಃ || ಅವ್ರಶ್ಚೀಃ | ಅವ್ರಶ್ಚಿಷ್ಟಮ್ | ಅವ್ರಶ್ಚಿಷ್ಟ || ಅವ್ರಶ್ಚಿಷಮ್ | ಅವ್ರಶ್ಚಿಷ್ವ | ಅವ್ರಶ್ಚಿಷ್ಮ || ಇಡಾಗಮ ಬಾರದಿದ್ದರೆ, 'ನೇಟಿ' ಸೂತ್ರದಿಂದ ವೃದ್ಧಿನಿಷೇಧವಿಲ್ಲದಿರುವುದರಿಂದ 'ವದವ್ರಜಹಲಂತಸ್ಯಾಚಃ' ಸೂತ್ರದಿಂದ ವೃದ್ಧಿ. ಅವ್ರಾಶ್ಚ್+ಸೀತ್. ಸಲೋಪ (ಶ) ಚಕ್ಕೆ ಷತ್ವ, ಕತ್ವ. ಅವ್ರಾಕ್ಷೀತ್ | ಅವ್ರಾಷ್ಟಾಮ್ | ಅವ್ರಾಕ್ಷುಃ || ಅವ್ರಾಕ್ಷೀಃ | ಅವ್ರಾಷ್ಟಮ್ | ಅವ್ರಾಷ್ಟ || ಅವ್ರಾಕ್ಷಮ್ | ಅವ್ರಾಕ್ಷ್ವ | ಅವ್ರಾಕ್ಷ್ಮ || **ಲೃಙ್** || ಅವ್ರಶ್ಚಿಷ್ಯತ್, ಅವ್ರಕ್ಷ್ಯತ್ | ಹೀಗೆ ಇಡಾಗಮವಿಕಲ್ಪದಿಂದ ಎರಡು ರೂಪಗಳಾಗುತ್ತವೆ.

**ವ್ಯಚ** ಧಾತು. ಇದು ಸೇಟ್. ಗ್ರಹಿಜ್ಯಾ ಸೂತ್ರದಲ್ಲಿ ಸೇರಿರುವುದರಿಂದ ಶವಿಕರಣದಲ್ಲಿ ಸಂಪ್ರಸಾರಣ ಬರುತ್ತದೆ. ವ್ಯಚ್+ಅ+ತಿ. ವ್ಯಚಿನಲ್ಲಿ ಸಂಪ್ರಸಾರಣಹೊಂದಲು ಯೋಗ್ಯವಾದವುಗಳು ಎರಡು ವರ್ಣಗಳಿವೆ. ಆಗ 'ನ ಸಂಪ್ರಸಾರಣೇ ಸಂಪ್ರಸಾರಣಮ್' ಸೂತ್ರನಿಷೇಧದಿಂದ ವಕಾರಕ್ಕೆ ಬರುವುದಿಲ್ಲ. ಯಕಾರಕ್ಕೆ ಇ ಸಂಪ್ರಸಾರಣ. ವ್+ಇ+ಅಚ್+ಅ+ತಿ. 'ಸಂಪ್ರಸಾರಣಾಚ್ಚ' ಪೂರ್ವರೂಪ. ವಿಚ್+ಅ+ತಿ=ವಿಚತಿ | ವಿಚತಃ | ಇತ್ಯಾದಿ. **ಲಿಟ್** || ವಿವ್ಯಚ್+ಅ. 'ಲಿಟ್ಯಭ್ಯಾಸಸ್ಯ—' ಸೂತ್ರದಿಂದ ಅಭ್ಯಾಸಕ್ಕೆ ಸಂಪ್ರಸಾರಣ ಬಂದಿದೆ. 'ಅತ ಉಪಧಾಯಾಃ' ಉಪಧಾವೃದ್ಧಿ. ವಿವ್ಯಾಚ | ವ್ಯಚ್+ಅತುಸ್ ಎಂದಿರುವಾಗ ದ್ವಿತ್ವಬರಬೇಕಾದರೆ ಮೊದಲು ಪ್ರತ್ಯಯಗಳು ಕಿತ್ ಆದುದರಿಂದ 'ಗ್ರಹಿಜ್ಯಾವಯಿ—' ಸೂತ್ರದಿಂದ ಸಂಪ್ರಸಾರಣ. ಪೂರ್ವರೂಪ. ವಿಚ್+ಅತುಸ್. ದ್ವಿತ್ವಾದಿ. ವಿವಿಚತುಃ | ವಿವಿಚುಃ || ವಿವ್ಯಚಿಥ | ವಿವಿಚಥುಃ | ವಿವಿಚ || ವಿವ್ಯಾಚ, ವಿವ್ಯಚ | ವಿವಿಚಿವ | ವಿವಿಚಿಮ || **ಲುಟ್** || ವ್ಯಚಿತಾ | **ಲೃಟ್** || ವ್ಯಚಿಷ್ಯತಿ | **ಲೋಟ್** || ವಿಚತು, ವಿಚತಾತ್ | **ಲಙ್** || ಅವಿಚತ್ | **ವಿಧಿಲಿಙ್** || ವಿಚೇತ್ | **ಆಶೀರ್ಲಿಙ್** | ವಿಚ್ಯಾತ್. ಯಾಸುಟ್ ಲಿಙ್ ಕಿತ್ತಾದುದರಿಂದ ಸಂಪ್ರಸಾರಣ. **ಲುಙ್** || ಅವ್ಯಚ್+ಇಸ್+ಈತ್. 'ಇಟ ಈಟಿ' ಸಲೋಪ. 'ಅತೋ ಹಲಾದೇರ್ಲಘೋಃ' ಸೂತ್ರದಿಂದ ವಿಕಲ್ಪವೃದ್ಧಿ. ಅವ್ಯಾಚೀತ್ | ಅವ್ಯಾಚಿಷ್ಟಾಮ್ | ಅವ್ಯಾಚಿಷುಃ || ಇತ್ಯಾದಿ. ವೃದ್ಧಿ ಬಾರದಿದ್ದರೆ ಅವ್ಯಚೀತ್ | ಇತ್ಯಾದಿ. **ಲೃಙ್** || ಅವ್ಯಚಿಷ್ಯತ್ || ಇಲ್ಲಿ ಲುಡಾದಿಗಳಲ್ಲಿಯೂ ಸಂಪ್ರಸಾರಣ ಬರಲಿ ಎಂದು ಆಶಂಕಿಸಿ ನಿಷೇಧಿಸುತ್ತಾನೆ. ಸಂಪ್ರಸಾರಣ ಬರಬೇಕಾದರೆ ಕಿತ್ ಅಥವಾ ಙಿತ್ ಪ್ರತ್ಯಯವಿರಬೇಕು. ತಾಸಾದಿಗಳು ಙಿತ್ತಾಗುವುದು ಹೇಗೆ? ಅಂದರೆ 'ವ್ಯಚೇಃ ಕುಟಾದಿತ್ವಮನಸಿ' ಎಂಬ ವಚನದಿಂದ ಙಿತ್ತಾಗುತ್ತದೆ ಎನ್ನಬೇಕು. 'ಗಾಙ್‌ಕುಟಾದಿಭ್ಯೋಽಞ್ಣಿನ್ಙಿತ್' ಸೂತ್ರದಿಂದ ಕುಟಾದಿ ಧಾತುಗಳ ಪರದಲ್ಲಿರುವ ಞಿತ್, ಣಿತ್ ಆಗದ ಪ್ರತ್ಯಯಗಳು ಙಿತ್ತಾಗುತ್ತವೆ ಎಂದು

ಹೇಳಿದೆ. ಈಗ ವ್ಯಚ್ ಧಾತುವೂ ಕುಟಾದಿಯಲ್ಲಿ ಸೇರುತ್ತದೆಯೆಂದು ಈ ವಚನ ಹೇಳುವುದರಿಂದ ವ್ಯಚ್ + ಇತಾ ಇತ್ಯಾದಿ ಸ್ಥಳದಲ್ಲಿ ತಾಸಾದಿಗಳು ಙಿತ್ತಾಗಬೇಕಾಗುತ್ತದೆ. ಆಗ ಸಂಪ್ರಸಾರಣ ಬರಲಿ ಎಂದು ಆಶಂಕಿಸಬಹುದು. ಆದರೆ 'ವ್ಯಚೇಃ ಕುಟಾದಿತ್ವಮ್, ಅನಸಿ' ಎಂಬಲ್ಲಿ 'ಅನಸಿ' ಎಂದು ಪರ್ಯುದಾಸವಮಾಡಿರುತ್ತಾನೆ. 'ಅನಸಿ' ಪರ್ಯುದಾಸವೆಂದರೆ ಅದು ಅಲ್ಲದೆ ಅದರಂತೆ ಇರುವುದು ಎಂದರ್ಥ. ಕುಟಾದಿ ಎಂಬುದಕ್ಕೆ ಅಸ್ ಭಿನ್ನವಾಗಿ ಅಸ್ ಸಮಾನವಾದವುಗಳು ಪರವಾದಾಗ ಗಣದಲ್ಲಿ ವ್ಯಚ್ ಸೇರುತ್ತದೆ ಎಂದರ್ಥವಾಗುತ್ತದೆ. ಇಲ್ಲಿ ಅಸ್ ಸಾದೃಶ್ಯ ಪ್ರತ್ಯಯತ್ವದಿಂದ ತೆಗೆದುಕೊಂಡರೆ ತಾಸಾದಿಗಳಲ್ಲಿ ಙಿತ್ವ ಇರುವುದರಿಂದ ಸಂಪ್ರಸಾರಣ ಬರಬೇಕಾಗುತ್ತದೆ. ಅಸ್, ಕೃತ್‌ಪ್ರತ್ಯಯವಾದುದರಿಂದ ಕೃತ್ಪ್ರತ್ಯಯತ್ವಸಾಮ್ಯ ಇಲ್ಲಿ ವಿವಕ್ಷಿತವಾದುದರಿಂದ ಕೃತ್‌ಪ್ರತ್ಯಯಗಳು ಪರವಾದಾಗ ಮಾತ್ರ ಕುಟಾದಿತ್ವ ಹೇಳಬೇಕು. ತಾಸಾದಿಗಳು ಕೃತ್ ಅಲ್ಲವಾದುದರಿಂದ ಅವುಗಳಿಗೆ ಙಿತ್ವ ಬರುವುದಿಲ್ಲ ಆದುದರಿಂದ ಅವು ಪರವಾದಾಗ ಸಂಪ್ರಸಾರಣ ಬರುವುದಿಲ್ಲ.

**|| ೧೩೧ || ಉಛಿ = ಉಞ್ಛೇ ( ಕಾಳು ಆರಿಸುವುದು. ) ಉಞ್ಛತಿ || 'ಉಞ್ಛಃ ಕಣಶ ಆದಾನಂ ಕಣಿಶಾದ್ಯಾರ್ಜನಂ ಶಿಲಮ್' ಇತಿ ಯಾದವಃ ||**

**|| ೧೩೨ || ಋಚ್ಛ = ಗತೀಂದ್ರಿಯಪ್ರಲಯಮೂರ್ತಿ ಭಾವೇಷು ಋಚ್ಛತಿ | ಋಚ್ಛತ್ಯೃತಾಮಿತಿ ಗುಣಃ | ದ್ವಿಹಲ್‌ಗ್ರಹಣಸ್ಯಾನೇಕ ಹಲುಪಲಕ್ಷಣತ್ವಾತ್ ನುಟ್ | ಆನರ್ಛ | ಆನರ್ಛತುಃ || ಋಚ್ಛಿತಾ ||**

**|| ೧೩೩ || ಉಜ್ಝ = ಉತ್ಸರ್ಗೇ ( ಬಿಡುವುದು. ) ಉಜ್ಝತಿ ||**

**|| ೧೩೪ || ಲುಭ = ವಿಮೋಹನೇ ( ವ್ಯಾಕುಲಗೊಳಿಸುವುದು. ) ಲುಭತಿ ||**

**ಉಛಿ** ಧಾತು. ಹ್ರಸ್ವ ಇಕಾರ ಇತ್. 'ಇದಿತೋ ನುಮ್ ಧಾತೋಃ' ಸೂತ್ರದಿಂದ ನುಮಾಗಮ ಬರುತ್ತದೆ. ಉಂಛೇ ಎಂದು ಅರ್ಥನಿರ್ದೇಶಮಾಡಿರುತ್ತಾನೆ. ಅದಕ್ಕೆ ಯಾದವವೆಂಬ ಕೋಶದಲ್ಲಿ ವಿವರಿಸಿದ ಅರ್ಥವನ್ನು ತೋರಿಸುತ್ತಾನೆ. ಭತ್ತದ ತೆನೆಯಿಂದ ಉದುರಿದ ಒಂದೊಂದು ಭತ್ತವನ್ನು ಆರಿಸುವುದು ಉಂಛವೆಂದೂ ಭತ್ತದ ತೆನೆಯನ್ನೇ ಅರಿಸುವ ವೃತ್ತಿಗೆ ಶಿಲವೆಂದೂ ಹೆಸರು. ನುಮ್ ಬಂದರೆ ಉನ್‌ಛ್ + ಅ + ತಿ ಎಂದಿರುವಾಗ ನಕಾರಕ್ಕೆ ಅನುಸ್ವಾರಪರಸವರ್ಣಗಳು ಬಂದರೆ ಉಞ್ಛತಿ ಎಂದಾಗುತ್ತದೆ. ಲಿಟಿನಲ್ಲಿ ನುಮ್ ಬಂದಾಗ ಉಕಾರ ಗುರುವಾಗುವುದರಿಂದ ಇಜಾದಿ ಗುರುಮತ್ತಾದ ಧಾತುವಾಗುತ್ತದೆ. 'ಇಜಾದೇಶ್ಚ ಗುರುಮತೋಽನೃಚ್ಛಃ' ಸೂತ್ರದಿಂದ ಆಮ್ ಬಂದು ಅದರ ಮೇಲೆ ಕೃ, ಭೂ, ಅಸ್‌ಗಳು ಬರುತ್ತವೆ. ಉಞ್ಛಾ

ಞ್ಚಕಾರ, ಉಞ್ಛಾಮ್ಬಭೂವ, ಉಞ್ಛಾಮಾಸ ಇತ್ಯಾದಿ. ಉಞ್ಛಿತಾ । ಉಞ್ಛಿಷ್ಯತಿ । ಉಞ್ಛತು । ಔಞ್ಛತ್ । ಉಞ್ಛೇತ್ । ಉಞ್ಛ್ಯಾತ್ । ಔಞ್ಛೀತ್ । ಔಞ್ಛಿಷ್ಯತ್ ॥

**ಋಚ್ಛ** ಧಾತು. ಇದಕ್ಕೆ ಮೂರು ಅರ್ಥಗಳಿವೆ. ಗತಿ=ಗಮನ; ಇಂದ್ರಿಯ ಪ್ರಲಯ=ಮಲಗುವುದು; ಮೂರ್ತಿಭಾವ=ಗಟ್ಟಿಯಾಗುವುದು. ಋಚ್ಛತಿ । ಲಿಟಿನಲ್ಲಿ ದ್ವಿತ್ವಾದಿಗಳು ಬಂದು ಋ+ಋಚ್ಛ್+ಅ ಎಂದಿರುವಾಗ ಲಘೂಪಧವಿಲ್ಲದಿದ್ದರೂ 'ಋಚ್ಛತ್ಯೄತಾಮ್' ಸೂತ್ರದಿಂದ ಗುಣ (ಅರ್). ಅಭ್ಯಾಸಕ್ಕೆ 'ಉರತ್' ಅತ್ವ ಬಂದರೆ 'ಅತ ಆದೇಃ' ಸೂತ್ರದಿಂದ ಅದಕ್ಕೆ ದೀರ್ಘ. ಆಅರ್ಚ್ಛ್+ಅ ಎಂದಿರುವಾಗ 'ತಸ್ಮಾನ್ನುಟ್ ದ್ವಿಹಲಃ' ಸೂತ್ರದಿಂದ ನುಟ್ ಬರಬೇಕು. ಇಲ್ಲಿ ದ್ವಿಹಲ್ ಇಲ್ಲ. ರ್, ಚ್, ಛ್ ಹೀಗೆ ಮೂರು ಹಲ್‌ಗಳಿವೆ. ಆದುದರಿಂದ ಹೇಗೆ ಬರುತ್ತದೆ ? ಎಂದರೆ ಸೂತ್ರದಲ್ಲಿ ದ್ವಿಹಲ್ ಎಂದರೆ ಒಂದು ಹಲ್ ಇಲ್ಲದಿರುವುದು ಅಂದರೆ ಅನೇಕ ಹಲ್ ಇರುವ ಧಾತುವೆಂದರ್ಥ. ಆಗ ಎರಡು ಅಥವಾ ಹೆಚ್ಚು ಹಲ್ ಇರುವವುಗಳಿಗೆ ಬರುತ್ತದೆಯೆಂದಾಗುವುದರಿಂದ ಇಲ್ಲಿಯೂ ನುಟ್ ಬರುತ್ತದೆ. ಋಚ್ಛತು । 'ಆಡಜಾದೀನಾಮ್' ಆಟ್. 'ಆಟಶ್ಚ' ವೃದ್ಧಿ. ಆರ್ಚ್ಛತ್ ॥ ಆನರ್ಚ್ಛ । ಆನರ್ಚ್ಛತುಃ । ಆನರ್ಚ್ಛುಃ ॥ ಇತ್ಯಾದಿ. ಋಚ್ಛಿತಾ । ಋಚ್ಛಿಷ್ಯತಿ ಋಚ್ಛೇತ್ । ಋಚ್ಛ್ಯಾತ್ । ಆರ್ಚ್ಛೀತ್ । ಆರ್ಚ್ಛಿಷ್ಯತ್ ॥

**ಉಜ್ಝ** ಧಾತು. ಸೇಟ್. ಉಜ್ಝತಿ । ಉಜ್ಝಾಞ್ಚಕಾರ । ಉಜ್ಝಿತಾ । ಉಜ್ಝಿಷ್ಯತಿ । ಉಜ್ಝತು । ಔಜ್ಝತ್ । ಉಜ್ಝೇತ್ । ಉಜ್ಝ್ಯಾತ್ । ಔಜ್ಝೀತ್ । ಔಜ್ಝಿಷ್ಯತ್ ॥

**ಲುಭ** ಧಾತು. ಸೇಟ್. ಲುಭತಿ । ಲುಲೋಭ । ಲುಟಿನಲ್ಲಿ ತಾಸಿಗೆ ಇಡಾಗಮ ನಿತ್ಯವಾಗಿ ಪ್ರಾಪ್ತವಾದರೆ ವಿಕಲ್ಪ ಹೇಳುತ್ತಾನೆ.

ತಾದಿ ಆರ್ಧಧಾತುಕಕ್ಕೆ ವಿಕಲ್ಪ ಇಡಾಗಮ ಹೇಳುವ ಸೂತ್ರ.

**೬೫೯. ತೀಷಸಹಲುಭರುಷರಿಷಃ ॥ ೭-೨-೪೮ ॥**

**ಇಚ್ಛತ್ಯಾದೇಃ ಪರಸ್ಯ ತಾದೇರಾರ್ಧಧಾತುಕಸ್ಯೇಡ್ವಾ ಸ್ಯಾತ್ । ಲೋಭಿತಾ, ಲೋಬ್ಧಾ । ಲೋಭಿಷ್ಯತಿ ॥**

**॥ ೧೩೫-೧೩೬ ॥ ತೃಪ, ತೃಮ್ಫ=ತೃಪ್ತೌ (ಸಂತೋಷಪಡುವುದು.)**

**ತೃಪತಿ । ತತರ್ಪ । ತರ್ಪಿತಾ । ಅತರ್ಪೀತ್ ॥ ತೃಮ್ಫತಿ ॥**

**ವಾ ॥ (ಶೇ ತೃಮ್ಫಾದೀನಾಂ ನುಮ್ ವಾಚ್ಯಃ)**

**ಆದಿಶಬ್ದಃ ಪ್ರಕಾರೇ, ತೇನ ಯೇಽತ್ರ ನಕಾರಾನುಷಕ್ತಾಸ್ತೇ ತೃಮ್ಫಾದಯಃ । ತತೃಮ್ಫ । ತೃಫ್ಯಾತ್ ॥**

ತಿ, ಇಷಸಹಲುಭರುಷರಿಷಃ || ದ್ವಿಪದ ಸೂತ್ರ. 'ಆರ್ಧಧಾತುಕಸ್ಯೇಡ ಲಾದೇಃ' ಸೂತ್ರದಿಂದ 'ಆರ್ಧಧಾತುಕಸ್ಯ', 'ಇಟ್' ಅನುವೃತ್ತಿ. 'ಸ್ವರತಿ ಸೂತಿ—' ಸೂತ್ರದಿಂದ 'ವಾ' ಬರುತ್ತದೆ. ತಿ ಸಪ್ತಮ್ಯಂತ ವರ್ಣವು ಆರ್ಧಧಾತುಕಕ್ಕೆ ವಿಶೇಷಣವಾದುದರಿಂದ ತದಾದಿಲಾಭ. **ಸೂತ್ರಾರ್ಥ**—ಇಷ, ಸಹ, ಲುಭ, ರುಷ, ರಿಷ ಧಾತುಗಳ ಪರದಲ್ಲಿರುವ ತಕಾರಾದಿ ಆರ್ಧಧಾತುಕಕ್ಕೆ ಇಡಾಗಮ ವಿಕಲ್ಪವಾಗಿ ಬರುತ್ತದೆ. ಇಡಾಗಮ ಬಂದರೆ ಲೋಭಿತಾ | ಬಾರದಿದ್ದರೆ ಲೋಭ್+ತಾ ಎಂದಿರುವಾಗ 'ಝಷಸ್ತಥೋಃ—' ಸೂತ್ರದಿಂದ ತಕಾರಕ್ಕೆ ಧಕಾರಾದೇಶ. ಭಕಾರಕ್ಕೆ ಜಶ್ತ್ವದಿಂದ ಬಕಾರ. ಲೋಬ್ಧಾ | ಲೋಬ್ಧಾರೌ | ಲೋಬ್ಧಾರಃ || ಇತ್ಯಾದಿ. ಲೋಭಿಷ್ಯತಿ | ಲುಭತು | ಅಲುಭತ್ | ಲುಭೇತ್ | ಲುಭ್ಯಾತ್ | ಅಲೋಭೀತ್ | ಅಲೋಭಿಷ್ಯತ್ |

ತೃಪ, ತೃಮ್ಫ ಎರಡು ಧಾತುಗಳಿಗೂ ತೃಪ್ತಿ ಅರ್ಥ. ಎರಡೂ ಸೇಟ್. ತೃಪ ಧಾತು. ತೃಪತಿ | ತತರ್ಪ | ತರ್ಪಿತಾ | ತರ್ಪಿಷ್ಯತಿ | ತೃಪತು | ಅತೃಪತ್ | ತೃಪೇತ್ | ತೃಪ್ಯಾತ್ | ಅತರ್ಪೀತ್ | ಅತರ್ಪಿಷ್ಯತ್ || ತೃಮ್ಫ ಧಾತು. ಇಲ್ಲಿ ಸ್ವಾಭಾವಿಕವಾಗಿ ನಕಾರವಿರುವುದು. ಅದಕ್ಕೆ ಅನುಸ್ವಾರ ಪರಸವರ್ಣ ಬಂದು ಮಕಾರ ಬಂದಿದೆ. ತೃನ್ಫ್+ಅ+ತಿ ಎಂದಿರುವಾಗ ಶ ಙಿತ್ತಾದುದರಿಂದ 'ಅನಿದಿತಾಂ ಹಲ ಉಪಧಾಯಾಃ ಕ್ಙಿತಿ' ಸೂತ್ರದಿಂದ ನಕಾರಲೋಪ. ತೃ+ಅ+ತಿ ಎಂದಿರುವಾಗ ವಾರ್ತಿಕಕಾರರು ಶ ಪರವಾದಾಗ ನುಮಾಗಮ ಹೇಳುತ್ತಾರೆ. **ವಾರ್ತಿಕಾರ್ಥ**—ಶ ಪರವಾದಾಗ ತೃಮ್ಫ ಮುಂತಾದ ಧಾತುಗಳಿಗೆ ನುಮಾಗಮ ಬರುತ್ತದೆ. ಇಲ್ಲಿ ತೃಮ್ಫ ಆದಿಯೆಂದರೆ ಇತರ ಧಾತುಗಳು ಸಾಮಾನ್ಯ ಗೃಹೀತವಾದರೂ ಇದರಂತಿರುವ ಅಂದರೆ ನಕಾರದಿಂದ ಕೂಡಿದ ಧಾತುಗಳನ್ನೇ ತೆಗೆದುಕೊಳ್ಳಬೇಕು. ಪ್ರಕೃತ ನುಮಾಗಮ ಬಂದರೆ ಅದಕ್ಕೆ ಅನುಸ್ವಾರಪರಸವರ್ಣ ಬಂದು ಮೊದಲಿನಂತೆಯೇ ಆಗುತ್ತದೆ. ತೃಮ್ಫತಿ | ತತೃಮ್ಫ | ತೃಮ್ಫಿತಾ | ತೃಮ್ಫಿಷ್ಯತಿ | ತೃಮ್ಫತು | ಅತೃಮ್ಫತ್ | ತೃಮ್ಫೇತ್ | ತೃಫ್ಯಾತ್ | 'ಅನಿದಿತಾಂ—' ಸೂತ್ರದಿಂದ ನಲೋಪ ಬಂದಿದೆ. ಅತೃಮ್ಫೀತ್ | ಅತೃಮ್ಫಿಷ್ಯತ್ ||

**||೧೩೭-೧೩೮|| ಮೃಡ, ಪೃಡ=ಸುಖನೇ (ಸುಖಕೊಡುವುದು.)**

**ಮೃಡತಿ | ಪೃಡತಿ ||**

**||೧೩೯|| ಶುನ=ಗತೌ (ಹೋಗುವುದು.) ಶುನತಿ ||**

**||೧೪೦|| ಇಷು=ಇಚ್ಛಾಯಾಮ್ (ಬಯಸುವುದು.)**

**ಇಚ್ಛತಿ | ಏಷಿತಾ, ಏಷ್ಟಾ | ಏಷಿಷ್ಯತಿ | ಇಷ್ಯಾತ್ | ಐಷೀತ್ ||**

|| ೧೪೧ || ಕುಟ=ಕೌಟಿಲ್ಯೇ (ಕುಟಿಲತನ.)
ಗಾಙ್ಕುಟಾದೀತಿ ಙಿತ್ವಮ್ | ಚುಕುಟಿಥ | ಚುಕೋಟ, ಚುಕುಟ | ಕುಟಿತಾ ||

|| ೧೪೨ || ಪುಟ=ಸಂಶ್ಲೇಷಣೇ (ಸೇರುವುದು.) ಪುಟತಿ, ಪುಟಿತಾ |

|| ೧೪೩ || ಸ್ಫುಟ=ವಿಕಸನೇ (ಅರಳುವುದು.) ಸ್ಫುಟತಿ, ಸ್ಫುಟಿತಾ |

|| ೧೪೪-೧೪೫ || ಸ್ಫುರ, ಸ್ಫುಲ=ಸಂಚಲನೇ (ಚಲಿಸುವುದು,) ಸ್ಫುರತಿ, | ಸ್ಫುಲತಿ ||

ಮೃಡ, ಪೃಡ ಧಾತುಗಳು ಸೇಟ್. ಮೃಡತಿ | ಮಮರ್ಡ | ಮರ್ಡಿತಾ | ಮರ್ಡಿಷ್ಯತಿ | ಮೃಡತು | ಅಮೃಡತ್ | ಮೃಡೇತ್ | ಮೃಡ್ಯಾತ್ | ಅಮರ್ಡೀತ್ | ಅಮರ್ಡಿಷ್ಯತ್ || ಹೀಗೆಯೇ ಪೃಡ ಧಾತುವೂ ರೂಪಹೊಂದುತ್ತದೆ.

ಶುನ ಧಾತು. ಸೇಟ್. ಶುನತಿ | ಶುಶೋನ | ಶೋನಿತಾ | ಶೋನಿಷ್ಯತಿ | ಶುನತು | ಅಶುನತ್ | ಶುನೇತ್ | ಶುನ್ಯಾತ್ | ಅಶೋನೀತ್ | ಅಶೋನಿಷ್ಯತ್ ||

ಇಷ್ ಧಾತು. ಉಕಾರ ಇತ್. ಸೇಟ್. ಇಷ್+ಅ+ತಿ ಎಂದಿರುವಾಗ 'ಇಷುಗಮಿಯಮಾಂ ಛಃ' ಸೂತ್ರದಿಂದ ಛಾದೇಶ. ಇಛ್+ಅ+ತಿ. ಹ್ರಸ್ವಕ್ಕೆ ಛ ಪರವಾದುದರಿಂದ 'ಛೇ ಚ' ಸೂತ್ರದಿಂದ ತುಕಾಗಮ. ಅದಕ್ಕೆ ಶ್ಚುತ್ವದಿಂದ ಚಕಾರಾದೇಶ. ಇಚ್ಛತಿ || ಇಯೇಷ | ಇಷ್+ತಾ ಎಂದಿರುವಾಗ 'ತೀಷಸಹಲುಭರುಷರಿಷಃ' ಸೂತ್ರದಿಂದ ತಾದಿ ಅರ್ಧಧಾತುಕಕ್ಕೆ ವಿಕಲ್ಪ ಇಡಾಗಮ. ಇಟ್ ಬಂದರೆ ಲಘೂಪಧಗುಣ ಬಂದು ಏಷಿತಾ | ಎಂದಾಗುತ್ತದೆ. ಇಡಾಗಮ ಬಾರದಿದ್ದರೆ ಏಷ್+ತಾ ಎಂದಿರುವಾಗ ಷ್ಟುತ್ವ. ಏಷ್ಟಾ | ಇತ್ಯಾದಿ. ಏಷಿಷ್ಯತಿ | ಇಚ್ಛತು | ಐಚ್ಛತ್ | ಇಚ್ಛೇತ್ | ಇಷ್ಯಾತ್ | ಆಇಷ್+ಇಸ್ಈತ್ | 'ಆಟಶ್ಚ' ವೃದ್ಧಿ 'ಇಟ ಈಟಿ' ಸಲೋಪ. ಐಷೀತ್ | ಐಷಿಷ್ಟಾಮ್ | ಐಷಿಷುಃ || ಐಷೀಃ | ಐಷಿಷ್ಟಮ್ | ಐಷಿಷ್ಟ || ಐಷಿಷಮ್ | ಐಷಿಷ್ವ || ಐಷಿಷ್ಮ || ಐಷಿಷ್ಯತ್ ||

ಕುಟ ಧಾತು. ಸೇಟ್. ಕುಟಾದಿಗಳ ಪರದಲ್ಲಿರುವ ಞಿತ್, ಣಿತ್ತಾಗದ ಪ್ರತ್ಯಯಗಳು 'ಗಾಙ್ಕುಟಾದಿಭ್ಯೋ—' ಸೂತ್ರದಿಂದ ಙಿತ್ತಾಗುತ್ತವೆ. ಕುಟತಿ. ಚುಕೋಟ | ಚುಕುಟತುಃ | ಚುಕುಟುಃ || ಚುಕುಟ್+ಇಥ. ಹಿಂದೆ ಹೇಳಿದಂತೆ ಇದು ಙಿತ್ತಾಗುವುದರಿಂದ ಗುಣಬರುವುದಿಲ್ಲ. ಚುಕುಟಿಥ | ಚುಕುಟಥುಃ | ಚುಕುಟ || 'ಣಲುತ್ತಮೋ ವಾ' ಸೂತ್ರದಿಂದ ಣಲ್ ವಿಕಲ್ಪ ಣಿತ್ತೆಂದುದರಿಂದ ಣಿತ್ತಾದರೆ ಙಿತ್ವ ಇಲ್ಲದುದರಿಂದ ಗುಣ. ಣಿತ್ವವಿಲ್ಲವಾದರೆ ಙಿತ್ವ ಬರುವುದರಿಂದ ಗುಣವಿಲ್ಲ. ಚುಕೋಟ, ಚುಕುಟ | ಚುಕುಟಿವ | ಚುಕುಟಿಮ || ಕುಟಿತಾ. ಇಲ್ಲಿ ಙಿತ್ವ ಇರುವುದರಿಂದ ಗುಣ ವಿಲ್ಲ. ಕುಟಿಷ್ಯತಿ | ಕುಟತು | ಅಕುಟತ್ | ಕುಟೇತ್ | ಕುಟ್ಯಾತ್ | ಅಕುಟೀತ್ | ಅಕುಟಿಷ್ಯತ್ ||

**ಪುಟ** ಧಾತು. ಸೇಟ್. ಕುಟನಂತೇ ರೂಪಹೊಂದುತ್ತದೆ. ಹಾಗೇ ಸೇಟಾದ ಸ್ಫುಟ ಧಾತುವೂ ಆಗುತ್ತದೆ. ಲಿಟನಲ್ಲಿ 'ಶರ್ಪೂರ್ವಾಃ ಖಯಃ' ಸೂತ್ರದಿಂದ ಆದಿಯಲ್ಲಿ ಫಕಾರ ಉಳಿದು ಚರ್ತ್ವದಿಂದ ಪ ಬಂದು ಪುಸ್ಫೋಟ ಎಂದಾಗುತ್ತದೆ.

**ಸ್ಫುರ, ಸ್ಫುಲ** ಧಾತುಗಳು ಸೇಟ್ ಆಗುತ್ತವೆ. ಸ್ಫುರತಿ | ಪುಸ್ಫೋರ | ಸ್ಫುರಿತಾ | ಸ್ಫುರಿಷ್ಯತಿ | ಅಸ್ಫುರತ್ | ಸ್ಫುರೇತ್ | ಸ್ಫುರ್ಯಾತ್ | ಅಸ್ಫುರೀತ್ | ಅಸ್ಫುರಿಷ್ಯತ್ || ಸ್ಫುಲ ಧಾತುವೂ ಹೀಗೆಯೇ ಆಗುತ್ತದೆ. ನಿ, ನಿರ್, ವಿ ಉಪಸರ್ಗಗಳ ಪರದಲ್ಲಿರುವಾಗ ಧಾತುಗಳ ಸಕಾರಕ್ಕೆ ವಿಕಲ್ಪ ಷತ್ವ ಹೇಳುತ್ತಾನೆ.

ಸ್ಫುರ, ಸ್ಫುಲ ಧಾತುಸಕಾರಕ್ಕೆ ಷತ್ವ ಹೇಳುವ ಸೂತ್ರ.

**೬೭೦. ಸ್ಫುರತಿಸ್ಫುಲತ್ಯೋರ್ನಿರ್ನಿವಿಭ್ಯಃ || ೮-೩-೭೬ ||**

**ಷತ್ವಂ ವಾ ಸ್ಯಾತ್ | ನಿಃಷ್ಫುರತಿ, ನಿಃಸ್ಫುರತಿ |**

ಸ್ಫುರತಿಸ್ಫುಲತ್ಯೋಃ. ನಿರ್ನಿವಿಭ್ಯಃ || ದ್ವಿಪದ ಸೂತ್ರ. 'ಸಿವಾದೀನಾಂ ವಾ—' ಸೂತ್ರದಿಂದ 'ವಾ' ಅನುವೃತ್ತಿ. 'ಮೂರ್ಧನ್ಯಃ' ಅಧಿಕಾರದಿಂದ ಬರುತ್ತದೆ. **ಸೂತ್ರಾರ್ಥ**—ನಿರ್, ನಿ, ವಿ ಉಪಸರ್ಗಗಳ ಪರದಲ್ಲಿರುವ ಸ್ಫುರತಿ, ಸ್ಫುಲತಿ ಧಾತುಗಳ ಸಕಾರಕ್ಕೆ ವಿಕಲ್ಪವಾಗಿ ಷತ್ವ ಬರುತ್ತದೆ. ನಿರ್+ಸ್ಫುರತಿ ಎಂದಿರುವಾಗ ಷತ್ವ ಬಂದರೆ ನಿರ್+ಷ್ಫುರತಿ. 'ಖರವಸಾನಯೋರ್ವಿಸರ್ಜನೀಯಃ' ನಿಃ+ಷ್ಫುರತಿ. 'ಖರ್ಪರೇ ಶರಿ ವಾ ವಿಸರ್ಗಲೋಪೋ ವಕ್ತವ್ಯಃ' ವಾರ್ತಿಕದಿಂದ ವಿಸರ್ಗಲೋಪ ಬಂದರೆ ನಿಷ್ಫುರತಿ. ಬಾರದಿದ್ದರೆ 'ವಾ ಶರಿ' ಸೂತ್ರದಿಂದ ವಿಸರ್ಗಕ್ಕೆ ವಿಸರ್ಗವೇ ವಿಕಲ್ಪವಾಗಿ ಬಂದರೆ ನಿಃಷ್ಫುರತಿ, 'ವಿಸರ್ಜನೀಯಸ್ಯ ಸಃ' ಸೂತ್ರದಿಂದ ಸತ್ವ ಬಂದರೆ ನಿಸ್‌ಷ್ಫುರತಿ ಎಂದಿರುವಾಗ 'ಷ್ಟುನಾಷ್ಟುಃ' ಬಂದರೆ ನಿಷ್‌ಷ್ಫುರತಿ. ಹೀಗೆ ಮೂರು ರೂಪಗಳಾಗುತ್ತವೆ. ಸ್ಫುಲತಿಗೂ ಹೀಗೆ ಮೂರು ರೂಪಗಳು. ನಿಃಷ್ಫುಲತಿ, ನಿಷ್ಫುಲತಿ, ನಿಷ್‌ಷ್ಫುಲತಿ || ನಿ, ವಿ ಗಳ ಪರವಾದಾಗಲೂ ಹೀಗೇ ಷತ್ವ ವಿಕಲ್ಪ. ನಿಸ್ಫುರತಿ, ನಿಷ್ಫುರತಿ ಇತ್ಯಾದಿ.

|| ೧೪೬ || ಣೂ=ಸ್ತವನೇ (ಸ್ತೋತ್ರಮಾಡುವುದು.)

**ಪರಿಣೂತಗುಣೋದಯಃ | ನುವತಿ | ನುನಾವ | ನುವಿತಾ ||**

|| ೧೪೭ || ಟುಮಸ್ಜೋ=ಶುದ್ಧೌ (ಸ್ನಾನ, ತೊಳೆಯುವುದು.)

**ಮಜ್ಜತಿ | ಮಮಜ್ಜ | ಮಮಜ್ಜಿಥ | ಮಸ್ಜಿನಶೋರಿತಿ ನುಮ್ | ವಾ || (ಮಸ್ಜೇರಂತ್ಯಾತ್ಪೂರ್ವೋ ನುಮ್ವಾಚ್ಯಃ) ಸಂಯೋಗಾದಿಲೋಪಃ | ಮಮಙ್ಕ್ಥ | ಮಙ್ಕ್ತಾ | ಮಙ್‌ಕ್ಷ್ಯತಿ | ಅಮಾಙ್‌ಕ್ಷೀತ್ | ಅಮಾಙ್ಕ್ತಾಮ್ | ಅಮಾಙ್‌ಕ್ಷುಃ |**

**ಣೂ** ಧಾತು. ಸೇಟ್. ಊಕಾರಾಂತವಾದುದು ಎನ್ನಲು ಪ್ರಮಾಣ ತೋರಿಸುತ್ತಾನೆ. 'ಪರಿಣೂತಗುಣೋದಯಃ' ಉಕಾರಾಂತವಾಗಿದ್ದರೆ ಪರಿಣುತ ಎಂದಾಗುತ್ತಿತ್ತು. 'ಣೋ ನಃ' ಸೂತ್ರದಿಂದ ಆದಿಗೆ ನಕಾರ. ನು + ಅ + ತಿ. 'ಅಚಿಶ್ನುಧಾತುಭ್ರುವಾಂ–' ಸೂತ್ರದಿಂದ ಉವಙ್. ನುವತಿ | ನುನು + ಅ. 'ಅಚೋಞ್ಣಿತಿ' ವೃದ್ಧಿ. ಅವಾದೇಶ. ನುನಾವ | ನು + ಇತಾ ಕುಟಾದಿನಿಮಿತ್ತ ಙಿತ್ವ ಇರುವುದರಿಂದ ಗುಣವಿಲ್ಲ. ಉವಙ್. ನುವಿತಾ | ನುವಿಷ್ಯತಿ | ನುವತು | ಅನುವತ್ | ನುವೇತ್ | ನೂಯಾತ್ | ಅನುವೀತ್ | ಅನುವಿಷ್ಯತ್ ||

**ಟುಮಸ್ಜೋ** ಧಾತು. 'ಆದಿರ್ಞಿಟುಡವಃ' ಸೂತ್ರದಿಂದ ಟು ಇತ್ತಾಗುತ್ತದೆ. ಓಕಾರ ಇತ್. ಮಸ್ಜ್ ಧಾತುಸ್ವರೂಪ. ಮಸ್ + ಅ + ತಿ ಎಂದಿರುವಾಗ 'ಝಲಾಂ ಜಶ್ ಝಶಿ' ಸೂತ್ರದಿಂದ ಸಕಾರಕ್ಕೆ ಜಕಾರ. ಮಜ್ಜತಿ | ಮಮಸ್ಜ್ + ಅ. ಜಶ್ತ್ವ. ಮಮಜ್ಜ | ಮಮಜ್ಜತುಃ | ಮಮಜ್ಜುಃ || ಮಮಜ್ಜಿಥ | ಮಮಜ್ಜಥುಃ || ಮಮಜ್ಜ || ಮಮಜ್ಜ | ಮಮಜ್ಜಿವ | ಮಮಜ್ಜಿಮ || ಅನಿಟ್ ಧಾತುವಾದುದರಿಂದ ಥಲಿನಲ್ಲಿ ಭಾರದ್ವಾಜನಿಯಮದಿಂದ ಇಡ್ವಿಕಲ್ಪ. ಇಡಾಗಮ ಬಾರದಿದ್ದರೆ ಮಮಸ್ಜ್ + ಥ ಎಂದಿರುವಾಗ 'ಮಸ್ಜಿನಶೋರ್ಝಲಿ' ಸೂತ್ರದಿಂದ ನುಮಾಗಮ. ನುಮ್ 'ಮಿದಚೋನ್ತ್ಯಾತ್ಪರಃ' ಸೂತ್ರದಿಂದ ಅಂತ್ಯಾಚಿನ ಪರವಾಗಿ ಬರಬೇಕು. ಆದರೆ ವಾರ್ತಿಕಕಾರರು ಅದಕ್ಕೆ ಅಪವಾದವಾಗಿ ಹೇಳುತ್ತಾರೆ. **ವಾರ್ತಿಕಾರ್ಥ**—ಮಸ್ಜ್ ಧಾತುವಿನ ಅಂತ್ಯಾಕ್ಷರದ ಪೂರ್ವಕ್ಕೆ ನುಮ್ ಹೇಳಬೇಕು. ಅಂತ್ಯಾಚ್ ಜಕಾರ. ಅದರ ಪೂರ್ವಕ್ಕೆ ಬಂದರೆ ಮಮಸ್ನ್ಜ್ + ಥ. 'ಸ್ಕೋಸಂಯೋಗಾದ್ಯೋಃ—' ಸೂತ್ರದಿಂದ ಸಲೋಪ. 'ಚೋಃ ಕುಃ' ಸೂತ್ರದಿಂದ ಜಕಾರಕ್ಕೆ ಕುತ್ವ. ನಕಾರಕ್ಕೆ ಅನುಸ್ವಾರಪರಸವರ್ಣ. ಮಮಙ್ಕ್ಥ ಎಂದಾಗುತ್ತದೆ. **ಲುಟ್** || ಇಲ್ಲಿಯೂ ಹಿಂದಿನಂತೇ ಪ್ರಕ್ರಿಯೆ. ಮಙ್ಕ್ತಾ | ಮಙ್ಕ್ತಾರೌ | ಇತ್ಯಾದಿ. **ಲೃಟ್** || ಮಙ್ಕ್ಷ್ಯತಿ | **ಲೋಟ್** || ಮಜ್ಜತು | **ಲಙ್** || ಅಮಜ್ಜತ್ | **ವಿಧಿಲಿಙ್** || ಮಜ್ಜೇತ್ | **ಆಶೀರ್ಲಿಙ್** || ಮಜ್ಜ್ಯಾತ್ | **ಲುಙ್** || ಅಮಾಙ್ಕ್ಷೀತ್ | ಅಮಾಙ್ಕ್ತಾಮ್ | 'ಝಲೋ ಝಲಿ' ಸಲೋಪ ಬಂದಿದೆ. ಅಮಾಙ್ಕ್ಷುಃ || ಅಮಾಙ್ಕ್ಷೀಃ | ಅಮಾಙ್ಕ್ತಮ್ | ಅಮಾಙ್ಕ್ತ || ಅಮಾಙ್ಕ್ಷಮ್ | ಅಮಾಙ್ಕ್ಷ್ವ | ಅಮಾಙ್ಕ್ಷ್ಮ || ಅಮಙ್ಕ್ಷ್ಯತ್ ||

**|| ೧೪೮ || ರುಜೋ— ಭಙ್ಗೇ (ಮುರಿಯುವುದು.)**

**ರುಜತಿ | ರೋಕ್ತಾ | ರೋಕ್ಷ್ಯತಿ | ಅರೌಕ್ಷೀತ್ ||**

**|| ೧೪೯ || ಭುಜೋ— ಕೌಟಿಲ್ಯೇ (ಕುಟಿಲತನ ತೋರುವುದು.)**

**ರುಜಿವತ್ ||**

|| ೧೫೦ || ವಿಶ = ಪ್ರವೇಶನೇ || ವಿಶತಿ ||

|| ೧೫೧ || ಮೃಶ=ಆಮರ್ಶನೇ | (ಮುಟ್ಟುವುದು.)

ಆಮರ್ಶನಂ ಸ್ಪರ್ಶಃ | ಅನುದಾತ್ತಸ್ಯ ಚರ್ದುಪಧಸ್ಯಾನ್ಯತರಸ್ಯಾಮ್ | ಅಮ್ರಾಕ್ಷೀತ್, ಅಮಾರ್ಕ್ಷೀತ್, ಅಮೃಕ್ಷತ್ |

|| ೧೫೧ || ಷದ್ಲ್ = ವಿಶರಣಗತ್ಯವಸಾದನೇಷು |

(ಅವಯವ ವಿಭಾಗ, ಗಮನ, ದುಃಖ.) ಸೀದತೀತ್ಯಾದಿ ||

|| ೧೫೩ || ಶದ್ಲ್=ಶಾತನೇ (ಅವಯವ ವಿಭಾಗ.)

**ರುಜೋ** ಧಾತು. ಓಕಾರ ಇತ್. ಅನಿಟ್. ರುಜತಿ | ರುರೋಜ | ರೋಕ್ತಾ | (ಚೋಃ ಕುಃ) ರೋಕ್ಷ್ಯತಿ | ರುಜತು | ಅರುಜತ್ | ರುಜೇತ್ | ರುಜ್ಯಾತ್ || ಅರೌಕ್ಷೀತ್ | ಅರೌಕ್ತಾಮ್ | ಅರೌಕ್ಷುಃ || ಅರೌಕ್ಷೀಃ | ಅರೌಕ್ತಮ್ | ಅರೌಕ್ತ || ಅರೌಕ್ಷಮ್ | ಅರೌಕ್ಷ್ವ | ಅರೌಕ್ಷ್ಮ || ಅರೋಕ್ಷ್ಯತ್ || ಹೀಗೆಯೇ **ಭುಜೋ** ಧಾತುವೂ ಓದಿತ್ತಾಗಿ ಅನಿಟಾದುದರಿಂದ ರುಜಿನಂತೇ ರೂಪ ಹೊಂದುತ್ತದೆ. ಭುಜತಿ | ಬುಭೋಜ | ಭೋಕ್ತಾ | ಭೋಕ್ಷ್ಯತಿ | ಭುಜತು | ಅಭುಜತ್ | ಭುಜೇತ್ | ಭುಜ್ಯಾತ್ | ಅಭೌಕ್ಷೀತ್ | ಅಭೋಕ್ಷ್ಯತ್ ||

**ವಿಶ** ಧಾತು. ಅನಿಟ್. ವಿಶತಿ | ವಿವೇಶ | ವೇಷ್ಟಾ | ವಿಶ್+ತಾ ಎಂದಿರುವಾಗ 'ವ್ರಶ್ಚಭ್ರಸ್ಜ—ಸೂತ್ರದಿಂದ ಶಕಾರಕ್ಕೆ ಷಕಾರ. ಷ್ಟುತ್ವ ಬಂದಿದೆ. ವೇಶ್+ಸ್ಯತಿ. ಹಿಂದಿನಂತೆ ಶಕಾರಕ್ಕೆ ಷತ್ವ ಬಂದಾಗ 'ಷಢೋಃ ಕಃ ಸಿ' ಸೂತ್ರದಿಂದ ಅದಕ್ಕೆ ಕತ್ವ. ಅದನ್ನು ನಿಮಿತ್ತೀಕರಿಸಿ ಸ್ಯದ ಸಕಾರಕ್ಕೆ ಷತ್ವ. ವೇಕ್ಷ್ಯತಿ | ವಿಶತು | ಅವಿಶತ್ | ವಿಶೇತ್ ವಿಶ್ಯಾತ್ | **ಲುಙಿ**ನಲ್ಲಿ 'ಶಲ ಇಗುಪಧಾದನಿಟಃ ಕ್ಸಃ' ಸೂತ್ರದಿಂದ ಚ್ಲಿಗೆ ಕ್ಸಾದೇಶ. ಅವಿಕ್ಷತ್ | ಅವಿಕ್ಷತಾಮ್ | ಇತ್ಯಾದಿ. ಅವೇಕ್ಷ್ಯತ್||

**ಮೃಶ** ಧಾತು. ಅನಿಟ್. ವಿಶಿನಂತೇ ಆಗುತ್ತದೆ. ಮೃಶತಿ | ಮಮರ್ಶ | ಮೃಶ್+ತಾ ಎಂದಿರುವಾಗ 'ಅನುದಾತ್ತಸ್ಯ—' (ಸೂ ೬೫೭) ಸೂತ್ರದಿಂದ ವಿಕಲ್ಪ ಅಮಾಗಮ. ಬಂದರೆ ಮ್ರಷ್ಟಾ | ಬಾರದಿದ್ದರೆ ಮರ್ಷ್ಟಾ (ಪುಗನ್ತಗುಣ). ಝಲಾದಿ ಅಕಿತ್ತಿನಲ್ಲಿ ಹೀಗೇ ಎರಡು ರೂಪ. ಮರ್ಕ್ಷ್ಯತಿ, ಮ್ರಕ್ಷ್ಯತಿ | ಮೃಶತು | ಅಮೃಶತ್ | ಮೃಶೇತ್ | ಮೃಶ್ಯಾತ್ | **ಲುಙಿ**ನಲ್ಲಿ ಅಮಾಗಮ ಬಂದರೆ ಅಮ್ರಶ್+ಸೀತ್. 'ವದವ್ರಜಹಲನ್ತಸ್ಯಾಚಃ' ವೃದ್ಧಿ. ಷತ್ವ, ಕತ್ವ, ಷತ್ವ. ಅಮ್ರಾಕ್ಷೀತ್ | ಅಮ್ರಾಷ್ಟಾಮ್ | ಅಮ್ರಾಕ್ಷುಃ || ಅಮ್ರಾಕ್ಷೀಃ | ಅಮ್ರಾಷ್ಟಮ್ | ಅಮ್ರಾಷ್ಟ || ಅಮ್ರಾಕ್ಷಮ್ | ಅಮ್ರಾಕ್ಷ್ವ | ಅಮ್ರಾಕ್ಷ್ಮ || ಅಮಾಗಮ ಬಾರದಿದ್ದರೆ 'ಶಲ ಇಗುಪಧಾತ್—' ಸೂತ್ರದಿಂದ ಚ್ಲಿಗೆ ಕ್ಸ ಪ್ರಾಪ್ತವಾದರೆ 'ಸ್ಪೃಶಮೃಶಕೃಷತೃಪದೃಪಾಂ ಚ್ಲೇಃ ಸಿಚ್ವಾ ವಾಚ್ಯಃ' ವಾರ್ತಿಕದಿಂದ ವಿಕಲ್ಪವಾಗಿ ಸಿಚ್. ಅಮೃಶ್+ಸೀತ್.

ಹಿಂದಿನಂತೆ ವೃದ್ಧ್ಯಾದಿ. ಅಮಾರ್ಕ್ಷೀತ್ | ಅಮಾರ್ಷ್ಟಾಮ್ | ಅಮಾರ್ಕ್ಷುಃ || ಇತ್ಯಾದಿ. ಚ್ಲಿಗೆ ಕ್ಸ ಬಂದರೆ ಅದು ಕಿತ್ತಾದುದರಿಂದ ಗುಣಾದಿಗಳು ಇಲ್ಲ. ಅಮೃಕ್ಷತ್ + ಸತ್. ಷತ್ವಾದಿ. ಅಮೃಕ್ಷತ್ (ಅಭವತ್‌ವತ್) | ಲೃಙ್ || ಅಮ್ರಕ್ಷ್ಯತ್, ಅಮರ್ಕ್ಷ್ಯತ್ ||

**ಷದ್ಲೃ** ಧಾತು. ಲೃದಿತ್. 'ಧಾತ್ವಾದೇಃ ಷಃ ಸಃ' ಸದ್ ಉಳಿಯುತ್ತದೆ. ಇದಕ್ಕೆ ಶಪರವಾದಾಗ 'ಪಾಘ್ರಾಧ್ಮಾ—' (ಸೂ. ೪೮೮) ಸೂತ್ರದಿಂದ ಸೀದಾದೇಶ. ಸೀದತಿ || ಸಸಾದ | ಸೇದತುಃ (ಏತ್ವಾಭ್ಯಾಸಲೋಪ) | ಸೇದುಃ || ಸೇದಿಥ, ಸಸತ್ಥ | ಸೇದಥುಃ | ಸೇದ || ಸಸಾದ, ಸಸದ | ಸೇದಿವ | ಸೇದಿಮ || ಸತ್ತಾ | ಸತ್ಸ್ಯತಿ | ಸೀದತು | ಅಸೀದತ್ | ಸೀದೇತ್ | ಸದ್ಯಾತ್ | ಲುಙಿನಲ್ಲಿದು ಲೃದಿತ್ತಾದುದರಿಂದ 'ಪುಷಾದಿದ್ಯುತಾದಿ—' ಸೂತ್ರದಿಂದ ಚ್ಲಿಗೆ ಅಙ್. ಅಸದತ್ (ಅಭವತ್‌ವತ್) | ಅಸತ್ಸ್ಯತ್ ||

**ಶದ್** ಧಾತುವೂ ಹಿಂದಿನಂತೇ ಲೃದಿತ್. ಅನಿಟ್. ಇದು ಪರಸ್ಮೈಪದಿಯಾದರೆ ಸಾರ್ವಧಾತುಕದಲ್ಲಿ ಮಾತ್ರ ಆತ್ಮನೇಪದಪ್ರತ್ಯಯಗಳನ್ನು ಹೇಳುತ್ತಾನೆ.

ಶದ್ ಧಾತುವಿಗೆ ತಙ್ ಹೇಳುವ ಸೂತ್ರ.

೬೭೧. **ಶದೇಃ ಶಿತಃ** ||೧-೩-೬೦ ||

ಶಿದ್ಭಾವಿನೋಽಸ್ಮಾತ್ತಙಾನೌ ಸ್ತಃ **ಶೀಯತೇ** | **ಶೀಯತಾಮ್** | **ಅಶೀಯತ** | **ಶೀಯೇತ** || **ಶಶಾದ** | **ಶತ್ತಾ** | **ಶತ್ಸ್ಯತಿ** | **ಅಶದತ್** | **ಅಶತ್ಸ್ಯತ್** ||

## || ೧೫೪ || ಕ್ಷಿಪ = ವಿಕ್ಷೇಪೇ (ಚೆಲ್ಲುವುದು.)

ದ್ವಿಪದ ಸೂತ್ರ. 'ಅನುದಾತ್ತಙಿತ ಆತ್ಮನೇಪದಮ್' ಸೂತ್ರದಿಂದ 'ಆತ್ಮನೇಪದಮ್' ಅನುವೃತ್ತಿ. ಶ್ ಇತ್ ಯಸ್ಯ ಸಃ ಶಿತ್. ತಸ್ಮಾತ್. **ಸೂತ್ರಾರ್ಥ—** ಶಿತ್ ಪ್ರತ್ಯಯವನ್ನು ಹೊಂದತಕ್ಕ ಶದ್ ಧಾತುವಿನ ಮೇಲೆ ಆತ್ಮನೇಪದಪ್ರತ್ಯಯಗಳು ಬರುತ್ತವೆ. ತಙ್ (೯) ಆನ ಇವು ಆತ್ಮನೇಪದಪ್ರತ್ಯಯಗಳೆಂದು ಹಿಂದೆ ಹೇಳಿದೆ. ಶಿತ್ತನ್ನು ಹೊಂದುವುದು ಲಟ್, ಲೋಟ್, ಲಙ್, ವಿಧಿಲಿಙ್ ನಾಲ್ಕು ಲಕಾರಗಳಲ್ಲಿ ಮಾತ್ರವಾದುದರಿಂದ ಅಲ್ಲಿ ಇದು ಆತ್ಮನೇಪದಿಯಾಗುತ್ತದೆ. 'ಪಾಘ್ರಾಧ್ಮಾಸ್ಥಾ—' ಸೂತ್ರದಿಂದ ಧಾತುವಿಗೆ ಶೀಯ ಆದೇಶ. ಶೀಯತೇ | ಶೀಯೇತೇ | ಶೀಯಂತೇ (ಏಧತೇವತ್) ||

**ಲೋಟ್** || ಶೀಯತಾಮ್ (ಏಧತಾಮ್‌ವತ್) | **ಲಙ್** || ಅಶೀಯತ | **ವಿಧಿಲಿಙ್** || ಶೀಯೇತ | **ಲಿಟ್** || ಶಶಾದ | **ಲುಟ್** || ಶತ್ತಾ (ಖರಿಚ

ಲೃಟ್ || ಶತ್ಸ್ಯತಿ | ಲೃಙ್ || ಅಶತ್ಸ್ಯತ್ || ಲುಙಿನಲ್ಲಿ ಇದಿತ್ತಾದುದರಿಂದ ಚ್ಲಿಗೆ ಅಙ್. ಅಶದತ್ | ಇತ್ಯಾದಿ.

ಕೄ ಧಾತು. ಋೂಕಾರಾಂತ. ಸೇಟ್. ಋೂ+ಅ+ತಿ ಎಂದಿರುವಾಗ ಇತ್ವ ಹೇಳುತ್ತಾನೆ.

ಋೂದನ್ತಧಾತುವಿಗೆ ಇತ್ವ ಹೇಳುವ ಸೂತ್ರ.

**೬೬೨. ಋೂತ ಇದ್ಧಾತೋಃ || ೭-೧-೧೦೦ ||**

**ಋೂದನ್ತಸ್ಯ ಧಾತೋರಂಗಸ್ಯ ಇತ್ ಸ್ಯಾತ್ | ಕಿರತಿ | ಚಕಾರ | ಚಕರತುಃ | ಚಕರುಃ || ಕರೀತಾ, ಕರಿತಾ | ಕೀರ್ಯಾತ್ ||**

ಋೂತಃ, ತ್, ಧಾತೋಃ || ಋೂತಃ ಧಾತುವಿಗೆ ವಿಶೇಷಣವಾದುದರಿಂದ ತದಂತಲಾಭ. 'ಅಂಗಸ್ಯ' ಅಧಿಕಾರ. **ಸೂತ್ರಾರ್ಥ**—ಋೂಕಾರಾಂತಧಾತುವಿನ ಅಂಗಕ್ಕೆ ಇತ್ವ ಬರುತ್ತದೆ. 'ಉರಣ್ರಪರಃ' ಸೂತ್ರದಿಂದ ರಪರವಾಗಿ ಬಂದರೆ ಇರ್ ಬಂದು ಕಿರ್+ಅ+ತಿ=ಕಿರತಿ ಎಂದಾಗುತ್ತದೆ. ಕಿರತಃ | ಕಿರಂತಿ || ಇತ್ಯಾದಿ.

**ಲಿಟ್** || ಚಕೄ+ಅ. ವೃದ್ಧಿ, ಚಕಾರ. ಚಕೄ+ಅತುಸ್ ಎಂದಿರುವಾಗ 'ಋಚ್ಛತ್ಯೄತಾಮ್' ಸೂತ್ರದಿಂದ ಗುಣ. ಚಕರತುಃ | ಚಕರುಃ || ಚಕರಿಥ | ಚಕರಥುಃ | ಚಕರ || ಚಕಾರ, ಚಕರ | ಚಕರಿವ | ಚಕರಿಮ || **ಲುಟ್** || ತಾಸಿಗೆ ಇಡಾಗಮ ಬಂದು ಗುಣಬಂದಾಗ ಕರಿತಾ ಎಂದು ಒಂದು ರೂಪ. 'ವೄತೋ ವಾ' (ಸೂ. ೬೧೮) ಸೂತ್ರದಿಂದ ಇಟಿಗೆ ವಿಕಲ್ಪದೀರ್ಘ. ಕರೀತಾ ಎಂದು ಇನ್ನೊಂದು ರೂಪವಾಗುತ್ತದೆ. **ಲೃಟ್** || ಕರಿಷ್ಯತಿ, ಕರೀಷ್ಯತಿ | **ಲೋಟ್** || ಕಿರತು | **ಲಙ್** || ಅಕಿರತ್ | **ವಿಧಿಲಿಙ್** || ಕಿರೇತ್ | **ಆಶೀರ್ಲಿಙ್** || ಕೄ+ಯಾತ್. ಇತ್ವ ಬಂದು ಅದಕ್ಕೆ **'ಹಲಿಚ'** ಸೂತ್ರದಿಂದ ದೀರ್ಘ. ಕೀರ್ಯಾತ್ | **ಲುಙ್** || ಅಕಾರೀತ್ | ಉಪಸರ್ಗದ ಪರದಲ್ಲಿ ಈ ಧಾತು ಬಂದಾಗ ಸುಡಾಗಮ ಹೇಳುತ್ತಾನೆ.

ಕೄ ಧಾತುವಿಗೆ ಸುಟ್ ಹೇಳುವ ಸೂತ್ರ.

**೬೬೩. ಕಿರತೌ ಲವನೇ || ೬-೧-೧೪೦ ||**

**ಉಪಾತ್ಕಿರತೇಃ ಸುಟ್ ಛೇದನೇ | ಉಪಸ್ಕಿರತಿ ||**

**ವಾ || (ಅಡಭ್ಯಾಸವ್ಯವಾಯೇಽಪಿ ಸುಟ್ ಕಾತ್ ಪೂರ್ವ ಇತಿ ವಕ್ತವ್ಯಮ್) ಉಪಾಸ್ಕಿರತ್ | ಉಪಚಸ್ಕಾರ ||**

ದ್ವಿಪದ ಸೂತ್ರ. 'ಉಪಾತ್ ಪ್ರತಿಯತ್ನೇ' ಸೂತ್ರದಿಂದ 'ಉಪಾತ್' ಅನುವೃತ್ತಿ. 'ಸುಟ್ ಕಾತ್ ಪೂರ್ವಃ' ಸೂತ್ರಾನುವೃತ್ತಿ. **ಸೂತ್ರಾರ್ಥ**—ಉಪ

ಉಪಸರ್ಗದಪರದಲ್ಲಿರುವ ಕೄ ಧಾತುವಿಗೆ ಛೇದರೂಪಾರ್ಥ ತೋರುವಾಗ ಸುಡಾಗಮ ಬರುತ್ತದೆ. ಉಪ+ಕಿರತಿ ಎಂದಿರುವಾಗ ಛೇದರೂಪಾರ್ಥ ತೋರುವುದರಿಂದ ಸುಡಾಗಮ. ಟಿತ್ತಾದುದರಿಂದ ಆದ್ಯವಯುವವಾಗಿ ಬಂದರೆ ಉಪಸ್ಕಿರತಿ. ಉಪಸರ್ಗದ ಪರದಲ್ಲಿರುವಾಗ ವ್ಯವಧಾನವಿದ್ದರೂ ಬರುತ್ತದೆಯೆಂದು ವಾರ್ತಿಕಕಾರರು ಹೇಳುತ್ತಾರೆ. **ವಾರ್ತಿಕಾರ್ಥ**— ಅಡಾಗಮ, ಅಭ್ಯಾಸ ಇವುಗಳ ವ್ಯವಧಾನವಿದ್ದರೂ ಸುಡಾಗಮ ಕೄ ಧಾತುವಿನ ಕಕಾರದ ಪೂರ್ವಕ್ಕೇ ಬರುತ್ತದೆಯೆಂದು ಹೇಳಬೇಕು. ಅಡಾಗಮ ವ್ಯವಧಾನಕ್ಕೆ ಉಪ+ಅಕಿರತ್. ಇಲ್ಲಿ ಅಕಾರದ ಹಿಂದೆ ಪ್ರಾಪ್ತವಾದರೆ ಕಕಾರದ ಹಿಂದೆ ಬರುತ್ತದೆ ಎಂದುದರಿಂದ, ಉಪಾಸ್ಕಿರತ್. ಅಭ್ಯಾಸವ್ಯವಧಾನಕ್ಕೆ ಉಪ+ಚಕಾರ. ಇಲ್ಲಿ ಚಕಾರದ ಹಿಂದೆ ಪ್ರಾಪ್ತವಾದರೆ ಕಕಾರದ ಹಿಂದೇ ಬರುತ್ತದೆ. ಉಪಚಸ್ಕಾರ || ಎಂದಾಗುತ್ತದೆ. ಇನ್ನು ಇತರ ಉಪಸರ್ಗಗಳ ಪರದಲ್ಲಿರುವಾಗಲೂ ಅರ್ಥವಿಶೇಷದಲ್ಲಿಯೂ ಸುಡಾಗಮ ಹೇಳುತ್ತಾನೆ.

ಕೄ ಧಾತುವಿಗೆ ಸುಡಾಗಮ ಹೇಳುವ ಸೂತ್ರ.

**೬೬೪. ಹಿಂಸಾಯಾಂ ಪ್ರತೇಶ್ಚ || ೬–೧–೧೪೧ ||**

**ಉಪಾತ್ಪ್ರತೇಶ್ಚ ಕಿರತೇಃ ಸುಟ್ ಸ್ಯಾತ್ ಹಿಂಸಾಯಾಮ್ | ಉಪಸ್ಕಿರತಿ | ಪ್ರತಿಸ್ಕಿರತಿ ||**

**|| ೧೫೫ || ಗೄ= ನಿಗರಣೇ (ನುಂಗುವುದು)**

ಹಿಂಸಾಯಾಂ, ಪ್ರತೇಃ, ಚ || ತ್ರಿಪದ ಸೂತ್ರ 'ಉಪಾತ್' ಎಂಬುದು ಸೂತ್ರದ ಚಕಾರದಿಂದ ಲಬ್ಧವಾಗುತ್ತದೆ. 'ಕಿರತೌ ಲವನೇ' ಸೂತ್ರದಿಂದ 'ಕಿರತೌ' ಅನುವೃತ್ತಿ. 'ಸುಟ್ ಕಾತ್ ಪೂರ್ವಃ' ಅನುವೃತ್ತಿ. **ಸೂತ್ರಾರ್ಥ**— ಉಪ ಪ್ರತಿ, ಉಪಸರ್ಗಗಳ ಪರದಲ್ಲಿರುವ ಕೄ ಧಾತುವಿಗೆ ಹಿಂಸಾರೂಪ ಅರ್ಥ ತೋರುವಾಗ ಸುಡಾಗಮ ಬರುತ್ತದೆ. ಸುಟ್ ಟಿತ್ತಾದುದರಿಂದ ಕಿರತಿಗೆ ಆದ್ಯವಯುವವಾಗಿ ಬರುತ್ತದೆ. ಉಪ+ಸ್+ಕಿರತಿ=ಉಪಸ್ಕಿರತಿ. ಪ್ರತಿಸ್ಕಿರತಿ ||

**ಗೄ** ಧಾತು. ಇದೂ ಋೂಕಾರಾಂತವಾಗಿದೆ. ಹಿಂದಿನಂತೆ 'ಋೂತ ಇದ್ಧಾತೋಃ' ಸೂತ್ರದಿಂದ ಇತ್ವ ಬಂದರೆ ಗಿರತಿ ಎಂದಾಗುತ್ತದೆ. ಇಲ್ಲಿ ರೇಫಕ್ಕೆ ಲತ್ವ ವಿಕಲ್ಪ ಹೇಳುತ್ತಾನೆ.

ಗೄ ಧಾತುವಿನ ರೇಫಕ್ಕೆ ಲತ್ವ ಹೇಳುವ ಸೂತ್ರ.

**೬೬೫. ಅಚಿ ವಿಭಾಷಾ || ೮–೨–೨೧ ||**

**ಗಿರತೇ ರೇಫಸ್ಯ ಲೋ ವಾಽಜಾದೌ ಪ್ರತ್ಯಯೇ | ಗಿರತಿ, ಗಿಲತಿ | ಜಗಾರ, ಜಗಾಲ | ಜಗರಿಥ, ಜಗಲಿಥ | ಗರೀತಾ, ಗರಿತಾ | ಗಲೀತಾ, ಗಲಿತಾ ||**

ದ್ವಿಪದ ಸೂತ್ರ. 'ಗ್ರೋ ಯಙಿ' ಸೂತ್ರದಿಂದ 'ಗ್ರಃ', 'ಕೃಪೋರೋಲಃ' ಸೂತ್ರದಿಂದ 'ರಃ ಲಃ' ಅನುವೃತ್ತಿ. ಧಾತೋಃ ಉಚ್ಯಮಾನಂ ಕಾರ್ಯಂ ತತ್ಪ್ರತ್ಯಯೇ ಭವತಿ' ಎಂಬ ಪರಿಭಾಷೆಯಿಂದ 'ಪ್ರತ್ಯಯೇ' ಎಂದು ಲಬ್ಧವಾಗುತ್ತದೆ. ಧಾತುವಿಗೆ ಕಾರ್ಯ ಹೇಳುವುದಾದರೆ ಅದು ಅದಕ್ಕೆ ವಿಹಿತವಾದ ಪ್ರತ್ಯಯ ಪರದಲ್ಲಿರುವಾಗ ಎಂದು ಅದರ ಅರ್ಥ. **ಸೂತ್ರಾರ್ಥ**—ಅಜಾದಿಪ್ರತ್ಯಯಪರದಲ್ಲಿರುವಾಗ ಗೄ ಧಾತುವಿನ ರೇಫಕ್ಕೆ ವಿಕಲ್ಪವಾಗಿ ಲಕಾರಾದೇಶ ಬರುತ್ತದೆ. ಶ ಅಜಾದಿಯಾಗಿ ಇರುವುದರಿಂದ ಲತ್ವ ಬಂದರೆ ಗಿಲತಿ ಎಂದಾಗುತ್ತದೆ. ಹೀಗೆ ಅಜಾದಿ ಪ್ರತ್ಯಯದಲ್ಲಿ ಎರಡೆರಡು ರೂಪಗಳು. ಕೄ ಧಾತುವಿನಂತೇ ರೂಪಹೊಂದುತ್ತದೆ.

**ಲಿಟ್** || ಜಗಾರ, ಜಗಾಲ | **ಲುಟಿ**ನಲ್ಲಿ ಇಟಗೆ ದೀರ್ಘವಿಕಲ್ಪದಿಂದ ನಾಲ್ಕು ರೂಪಗಳು. ಗರೀತಾ, ಗರಿತಾ, ಗಲೀತಾ, ಗಲಿತಾ | **ಲೃಟಿ**ನಲ್ಲಿಯೂ ಹೀಗೆ ನಾಲ್ಕು ರೂಪಗಳು. ಗರೀಷ್ಯತಿ, ಗರಿಷ್ಯತಿ | ಗಲೀಷ್ಯತಿ || ಗಲಿಷ್ಯತಿ || **ಲೋಟ್** || ಗಿರತು, ಗಿಲತು | **ಲಙ್** || ಅಗಿರತ್, ಅಗಿಲತ್ | **ವಿಧಿಲಿಙ್** || ಗಿರೇತ್, ಗಿಲೇತ್ | **ಆಶೀರ್ಲಿಙ್** || ಗೀರ್ಯಾತ್ | **ಲುಙ್** || ಅಗಾರೀತ್, ಅಗಾಲೀತ್ | **ಲೃಙ್** || ಅಗರೀಷ್ಯತ್, ಅಗರಿಷ್ಯತ್, ಅಗಲಿಷ್ಯತ್, ಅಗಲೀಷ್ಯತ್ ||

## || ೧೫೬ || ಪ್ರಚ್ಛ= ಜ್ಞೀಪ್ಸಾಯಾಮ್ (ಪ್ರಶ್ನೆ ಕೇಳುವುದು.)

**'ಗ್ರಹಿಜ್ಯಾ—' ಇತಿ ಸಂಪ್ರಸಾರಣಮ್ । ಪೃಚ್ಛತಿ । ಪಪ್ರಚ್ಛ । ಪಪ್ರಚ್ಛತುಃ । ಪಪ್ರಚ್ಛುಃ । ಪ್ರಷ್ಟಾ । ಪ್ರಕ್ಷ್ಯತಿ । ಅಪ್ರಾಕ್ಷೀತ್ ||**

## || ೧೫೭ || ಮೃಙ್= ಪ್ರಾಣತ್ಯಾಗೇ (ಸಾಯುವುದು.)

**ಪ್ರಚ್ಛ** ಧಾತು. ಅನಿಟ್. ಹ್ರಸ್ವದ ಪರದಲ್ಲಿ ಛ ಇರುವುದರಿಂದ ತುಗಾಗಮ ಬಂದು ಶ್ಚುತ್ವ ಬಂದಿದೆ. ಇದಕ್ಕೆ ಶವಿಕರಣ ಙಿತ್ತಾದುದರಿಂದ ಅದು ಪರವಾದಾಗ 'ಗ್ರಹಿಜ್ಯಾವಯಿ—' ಸೂತ್ರದಿಂದ ಸಂಪ್ರಸಾರಣ ಬರುತ್ತದೆ. ರೇಫಕ್ಕೆ ಋ ಸಂಪ್ರಸಾರಣ. ಪೃಚ್ಛತಿ || **ಲಿಟ್** || ಪಪ್ರಚ್ಛ || ಪಪ್ರಚ್ಛತುಃ | ಪಪ್ರಚ್ಛುಃ || ಪಪ್ರಚ್ಛಿಥ, ಪಪ್ರಷ್ಠ | ಪಪ್ರಚ್ಛಥುಃ | ಪಪ್ರಚ್ಛ || ಪಪ್ರಚ್ಛ | ಪಪ್ರಚ್ಛಿವ | ಪಪ್ರಚ್ಛಿಮ || ದ್ವಿವಚನ ಬಹುವಚನಗಳಲ್ಲಿ ಸಂಯೋಗದ ಪರದಲ್ಲಿ ಪ್ರತ್ಯಯವಿರುವುದರಿಂದ ಕಿತ್ವವಿಲ್ಲ. ಆದುದರಿಂದ ಸಂಪ್ರಸಾರಣವೂ ಬರಲಿಲ್ಲ. **ಲುಟ್** || ಪ್ರಚ್ಛ್+ತಾ. 'ವ್ರಶ್ಚಭ್ರಸ್ಜ—' ಸೂತ್ರದಿಂದ ಛಕ್ಕೆ ಷಕಾರ. ಛ ಹೋದರೆ ಅದನ್ನು ನಿಮಿತ್ತೀಕರಿಸಿಕೊಂಡು ಬಂದ ಚಕಾರ (ತುಕ್) ವೂ ಹೋಗುತ್ತದೆ. ಪ್ರಷ್+ತಾ. 'ಷ್ಟುನಾಷ್ಟುಃ' ಪ್ರಷ್ಟಾ | ಪ್ರಷ್ಟಾರಃ | ಇತ್ಯಾದಿ. **ಲೃಟ್** || ಪ್ರಚ್ಛ್+ಸ್ಯತಿ. ಹಿಂದಿನಂತೆ ಷತ್ವ. 'ಷಢೋಃ ಕಃ ಸಿ' ಪ್ರಕ್+ಸ್ಯತಿ. 'ಆದೇಶಪ್ರತ್ಯಯಯೋಃ' ಪ್ರಕ್ಷ್ಯತಿ | ಪ್ರಕ್ಷ್ಯತಃ | ಇತ್ಯಾದಿ. **ಲೋಟ್** || ಪೃಚ್ಛತು || **ಲಙ್** || ಅಪೃಚ್ಛತ್ | **ವಿಧಿಲಿಙ್** || ಪೃಚ್ಛೇತ್

**ಆಶೀರ್ಲಿಙ್** || ಪೃಚ್ಛ್ಯಾತ್ | **ಲುಙ್** || ಅಪ್ರಚ್ಛ್+ಸ್ ಈತ್. ಛಂದಿನಂತೆ ಷತ್ವ. 'ವದವ್ರಜಹಲಂತಸ್ಯಾಚಃ' ವೃದ್ಧಿ. ಷಕಾರಕ್ಕೆ ಕತ್ವ. ಷತ್ವ. ಅಪ್ರಾಕ್ಷೀತ್ | ಅಪ್ರಾಷ್ಟಾಮ್ | ಅಪ್ರಾಕ್ಷುಃ || ಅಪ್ರಾಕ್ಷೀಃ | ಅಪ್ರಾಷ್ಟಮ್ | ಅಪ್ರಾಷ್ಟ || ಅಪ್ರಾಕ್ಷಮ್ | ಅಪ್ರಾಕ್ಷ್ವ | ಅಪ್ರಾಕ್ಷ್ಮ || **ಲೃಙ್** || ಅಪ್ರಕ್ಷ್ಯತ್ |

**ಮೃಙ್** ಧಾತು. ಙಿತ್ತಾದುದರಿಂದ 'ಅನುದಾತ್ತಙಿತ್ ಆತ್ಮನೇಪದಮ್' ಸೂತ್ರದಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಆದರೆ ಇದಕ್ಕೆ ಕೆಲವು ಲಕಾರಗಳಲ್ಲಿ ಮಾತ್ರ ಆತ್ಮನೇಪದವೆಂದು ನಿಯಮ ಮಾಡುತ್ತಾನೆ.

ಮೃಙ್ ಧಾತುವಿಗೆ ತಙ್ ನಿಯಮ ಮಾಡುವ ಸೂತ್ರ.

**೬೬೬. ಮ್ರಿಯತೇರ್ಲುಙ್‌ಲಿಙೋಶ್ಚ || ೧-೩-೬೧ ||**

**ಲುಙ್‌ಲಿಙೋಃ ಶಿತಶ್ಚ ಪ್ರಕೃತಿಭೂತಾನ್ಮೃಙಸ್ತಙ್ ನಾನ್ಯತ್ರ | ರಿಙ್ | ಇಯಙ್ | ಮ್ರಿಯತೇ | ಮಮಾರ | ಮರ್ತಾ | ಮರಿಷ್ಯತಿ | ಮೃಷೀಷ್ಟ | ಅಮೃತ ||**

ಮ್ರಿಯತೇಃ, ಲುಙ್‌ಲಿಙೋಃ, ಚ || ತ್ರಿಪದ ಸೂತ್ರ. 'ಅನುದಾತ್ತಙಿತಃ—' ಸೂತ್ರದಿಂದ 'ಆತ್ಮನೇಪದಮ್' ಅನುವೃತ್ತಿ. ಸೂತ್ರದ ಚಕಾರದಿಂದ 'ಶದೇಃ ಶಿತಃ' ಸೂತ್ರದಿಂದ 'ಶಿತಃ' ಎಂಬುದಕ್ಕೆ ಅನುಕರ್ಷ. 'ಪ್ರಕೃತಿಭೂತಾತ್' ಅಧ್ಯಾಹಾರ ಮಾಡಿಕೊಳ್ಳಬೇಕು. **ಸೂತ್ರಾರ್ಥ**—ಲುಙ್, ಲಿಙ್, ಶಿತ್ ಪ್ರತ್ಯಯಗಳಿಗೆ ಪ್ರಕೃತಿಯಾದ ಮೃಙ್ ಧಾತುವಿಗೆ ತಙ್ ಪ್ರತ್ಯಯ ಬರುತ್ತದೆ. ಇತರ ಕಡೆಯಲ್ಲಿ ಬರುವುದಿಲ್ಲ. ಸ್ವಾಭಾವಿಕವಾಗಿ ತಙ್ ಬರುತ್ತಿರುವಾಗ ಪುನಃ ಹೇಳಿದುದರಿಂದ ಇಲ್ಲಿ ಮಾತ್ರ ತಙ್, ಇತರ ಕಡೆಯಲ್ಲಿ ಇಲ್ಲವೆಂದು ನಿಯಮ ಮಾಡಿದಂತಾಗುತ್ತದೆ.

**ಲಟ್** || ಶ ಇರುವುದರಿಂದ ತಙ್. ಮೃ+ಅ+ತೇ. 'ರಿಙ್ ಶಯಗ್ಲಿಙ್ಕ್ಷು' ಸೂತ್ರದಿಂದ ರಿಙಾದೇಶ. ಮ್ರಿ+ಅ+ತೇ. 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಇಕಾರಕ್ಕೆ ಇಯಙ್. ಮ್ರಿಯತೇ | ಮ್ರಿಯೇತೇ | ಮ್ರಿಯನ್ತೇ || ಮ್ರಿಯಸೇ | ಮ್ರಿಯೇಥೇ | ಮ್ರಿಯಧ್ವೇ || ಮ್ರಿಯೇ | ಮ್ರಿಯಾವಹೇ | ಮ್ರಿಯಾಮಹೇ || ಲಿಟ್, ಲುಟ್, ಲೃಟ್‌ಗಳಲ್ಲಿ ಪರಸ್ಮೈಪದಿಯಾಗುತ್ತದೆ. ಮೃಮೃ+ಅ. 'ಉರತ್' ಮಮೃ+ಅ. 'ಅಚೋಞ್ಣಿತಿ' ಮಮಾರ | ಮಮ್ರತುಃ | ಮಮ್ರುಃ || ಮಮರ್ಥ | ಋದನ್ತವಾದುದರಿಂದ ಭಾರದ್ವಾಜಮತದಲ್ಲಿಯೂ ಇಡಾಗಮವಿಲ್ಲ. ಮಮ್ರಥುಃ | ಮಮ್ರ || ಮಮಾರ. ಮಮರ | ಮಮ್ರಿವ | ಮಮ್ರಿಮ || **ಲುಟ್** || ಮರ್ತಾ | **ಲೃಟ್** || 'ಋದ್ಧನೋಃ ಸ್ಯೇ' ಸೂತ್ರದಿಂದ ಇಟ್. ಮರಿಷ್ಯತಿ | **ಲೋಟ್** || ಮ್ರಿಯತಾಮ್ | **ಲಙ್** || ಅಮ್ರಿಯತ | **ವಿಧಿಲಿಙ್** || ಮ್ರಿಯೇತ | **ಆಶೀರ್ಲಿಙ್** || ಮ್ರಿಯಾತ್ | ರಿಙ್ ಬಂದಿದೆ. **ಲುಙ್** || ಅಮೃ+ಸ್+ತ. 'ಹ್ರಸ್ವಾದಂಗಾತ್'

ಸಲೋಪ. ಅಮೃತ | ಅಮೃಷಾತಾಮ್ | ಅಮೃಷತ || ಅಮೃಥಾಃ | ಅಮೃಷಾಥಾಮ್ | ಅಮೃಢ್ವಮ್ || ಅಮೃಷಿ | ಅಮೃಷ್ವಹಿ | ಅಮೃಷ್ಮಹಿ || ಲೃಙ್ || ಅಮರಿಷ್ಯತ್ ||

|| ೧೫೮ || ಪೃಙ್=ವ್ಯಾಯಾಮೇ (ಧೀರ್ಘವಾಗುವುದು.)

ಪ್ರಾಯೇಣಾಯಂ ವ್ಯಾಙ್‌ಪೂರ್ವಃ | ವ್ಯಾಪ್ರಿಯತೇ | ವ್ಯಾಪಪ್ರೇ | ವ್ಯಾಪಪ್ರಾತೇ | ವ್ಯಾಪರಿಷ್ಯತೇ | ವ್ಯಾಪೃತ | ವ್ಯಾಪೃಷಾತಾಮ್ |

|| ೧೫೯ || ಜುಷೀ=ಪ್ರೀತಿಸೇವನಯೋಃ

(ಪ್ರೀತಿಸುವುದು, ಸೇವಿಸುವುದು.) ಜುಷತೇ | ಜುಜುಷೇ ||

|| ೧೬೦ || ಓವಿಜೀ=ಭಯಚಲನಯೋಃ (ಹೆದರುವುದು, ಹೋಗುವುದು.) ಪ್ರಾಯೇಣಾಯಮುತ್ಪೂರ್ವಃ | ಉದ್ವಿಜತೇ ||

೬೬೭ ವಿಜ ಇಟ್ || ೧-೨-೨ ||

ವಿಜೇಃ ಪರಃ ಇಡಾದಿಪ್ರತ್ಯಯೋ ಙಿದ್ವತ್ | ಉದ್ವಿಜಿತಾ ||

ಇತಿ ತುದಾದಯಃ

**ಪೃಙ್** ಧಾತು. ಆತ್ಮನೇಪದೀ. ಇದು ಯಾವಾಗಲೂ ವಿಆಙ್ (ವ್ಯಾಙ್) ಉಪಸರ್ಗಪೂರ್ವವಾಗಿಯೇ ಇರುತ್ತದೆ. ಹಿಂದಿನಂತೆ ರಿಙ್, ಇಯಙ್. ವ್ಯಾಪ್ರಿಯತೇ| ವ್ಯಾಪಪ್ರೇ | ವ್ಯಾಪಪ್ರಾತೇ | ವ್ಯಾಪಪ್ರಿರೇ || ವ್ಯಾಪಪೃಷೇ | ವ್ಯಾಪಪ್ರಾಥೇ | ವ್ಯಾಪಪೃಢ್ವೇ || ವ್ಯಾಪಪ್ರೇ | ವ್ಯಾಪಪೃವಹೇ | ವ್ಯಾಪಪೃಮಹೇ || ವ್ಯಾಪರ್ತಾ | ವ್ಯಾಪರಿಷ್ಯತಿ | ವ್ಯಾಪ್ರಿಯತಾಮ್ | ವ್ಯಾ+ಅಪ್ರಿಯತ=ವ್ಯಾಪ್ರಿಯತ | ವ್ಯಾಪ್ರಿಯೇತ | ವ್ಯಾಪ್ರಿಯಾತ್ | ವ್ಯಾಪೃತ (ಅಮೃತವತ್) | ವ್ಯಾಪರಿಷ್ಯತ ||

**ಜುಷೀ** ಧಾತು. ಸೇಟ್. ಈಕಾರ ಇತ್. ಆತ್ಮನೇಪದೀ. ಜುಷತೇ | ಜುಜುಷೇ | ಜೋಷಿತಾ | ಜೋಷಿಷ್ಯತಿ | ಜುಷತಾಮ್ | ಅಜುಷತ | ಜುಷೇತ | ಜುಷೀತ | ಅಜುಷಿಷ್ಟ | ಅಜೋಷಿಷ್ಯತ ||

**ಓವಿಜೀ** ಧಾತು. ಸೇಟ್. ಓಕಾರ ಈಕಾರ ಇತ್. ಇದು ಸಾಮಾನ್ಯವಾಗಿ 'ಉತ್' ಉಪಸರ್ಗದಿಂದ ಕೂಡಿರುತ್ತದೆ. ಉದ್ವಿಜತೇ | ಉದ್ವಿವಿಜೇ | ಲುಟಿನಲ್ಲಿ ಪುಗನ್ತಸೂತ್ರದಿಂದ ಗುಣಪ್ರಾಪ್ತವಾದರೆ ಇಡಾದಿಪ್ರತ್ಯಯಕ್ಕೆ ಙಿತ್ತ್ವ ಹೇಳುತ್ತಾನೆ.

ವಿಜಃ, ಇಟ್ || ದ್ವಿಪದ ಸೂತ್ರ. 'ಗಾಙ್‌ಕುಟಾದಿಭ್ಯಃ—' ಸೂತ್ರದಿಂದ 'ಙಿತ್' ಅನುವೃತ್ತಿ. **ಸೂತ್ರಾರ್ಥ**—ವಿಜ್ ಧಾತುವಿನ ಪರದಲ್ಲಿರುವ ಇಡಾದಿ ಪ್ರತ್ಯಯವು ಙಿತ್ತಾಗುತ್ತದೆ. 'ಇತಾ' ಙಿತ್ತಾದುದರಿಂದ ಘೂಪಧಗುಣ ಬರುವುದಿಲ್ಲ. ಉದ್ವಿಜಿತಾ | ಉದ್ವಿಜಿಷ್ಯತಿ | ಉದ್ವಿಜತಾಮ್ | ಉತ್+ಅವಿಜತ=ಉದವಿಜತ | ಉದ್ವಿಜೇತ | ಉದ್ವಿಜಿಷೀಷ್ಟ | ಉದವಿಜಿಷ್ಟ | ಉದವಿಜಿಷ್ಯತ ||

# ೭. ಅಥ ರುಧಾದಯಃ

## ॥ ೧೬೧ ॥ ರುಧಿರ್ — ಆವರಣೇ (ಮುಚ್ಚುವುದು.)

ರುಧಾದಿಗೆ ಶ್ನಮ್ ವಿಕರಣ ಹೇಳುವ ಸೂತ್ರ.

### ೬೬೮. ರುಧಾದಿಭ್ಯಃ ಶ್ನಮ್ ॥ ೩–೧–೭೮ ॥

**ಶಪೋಽಪವಾದಃ ॥ ರುಣದ್ಧಿ | ಶ್ನಸೋರಲ್ಲೋಪಃ | ರುನ್ಧಃ | ರುನ್ಧನ್ತಿ | ರುಣತ್ಸಿ | ರುನ್ಧಃ | ರುನ್ಧ | ರುಣಧ್ಮಿ | ರುನ್ಧ್ವಃ | ರುನ್ಧ್ಮಃ | ರುನ್ಧೇ | ರುನ್ಧಾತೇ | ರುನ್ಧತೇ | ರುನ್ತ್ಸೇ | ರುನ್ಧಾಥೇ | ರುನ್ಧ್ವೇ | ರುನ್ಧೇ | ರುನ್ಧ್ವಹೇ | ರುನ್ಧ್ಮಹೇ | ರುರೋಧ, ರುರುಧೇ | ರೋದ್ಧಾಸಿ, ರೋದ್ಧಾಸೇ ರೋತ್ಸ್ಯತಿ, ರೋತ್ಸ್ಯತೇ | ರುಣದ್ಧು, ರುನ್ಧಾತ್ | ರುನ್ಧಾಮ್ | ರುನ್ಧನ್ತು | ರುನ್ಧಿ | ರುಣಧಾನಿ | ರುಣಧಾವ | ರುಣಧಾಮ | ರುನ್ಧಾಮ್ | ರುನ್ಧಾತಾಮ್ | ರುನ್ಧತಾಮ್ | ರುನ್ತ್ಸ್ವ | ರುಣಧೈ | ರುಣಧಾವಹೈ | ರುಣಧಾಮಹೈ | ಅರುಣತ್, ಅರುಣದ್ | ಅರುನ್ಧಾಮ್ | ಅರುನ್ಧನ್ | ಅರುಣಃ, ಅರುಣತ್, ಅರುಣದ್ | ಅರುನ್ಧ | ಅರುನ್ಧಾತಾಮ್ | ಅರುನ್ಧತ | ಅರುನ್ಧಾಃ | ರುನ್ಧ್ಯಾತ್, ರುನ್ಧೀತ | ರುಧ್ಯಾತ್, ರುತ್ಸೀಷ್ಟ | ಅರುಧತ್, ಅರೌತ್ಸೀತ್ | ಅರುದ್ಧ | ಅರುತ್ಸಾತಾಮ್ | ಅರುತ್ಸತ | ಅರೋತ್ಸ್ಯತ್, ಅರೋತ್ಸ್ಯತ ॥**

ರುಧ್ ಧಾತುವೇ ಆದಿಯಾಗಿರುವ ಗಣಕ್ಕೆ ರುಧಾದಿಗಣವೆಂದು ಹೆಸರು. ಇದು ಸ್ವರಿತೇತ್ತಾದುದರಿಂದ ಉಭಯಪದೀ. ಅನಿಟ್. ಇರ್ ಇತ್ತಾದರೆ ರುಧ್ ಧಾತು ಸ್ವರೂಪ. ಲಟನಲ್ಲಿ ಸಾಮಾನ್ಯ ಸೂತ್ರದಿಂದ ಶಪ್ ಪ್ರಾಪ್ತವಾದರೆ ಅದಕ್ಕೆ ಅಪವಾದ ವಾಗಿ 'ಶ್ನಮ್' ವಿಕರಣ ಹೇಳುತ್ತಾನೆ.

ದ್ವಿಪದ ಸೂತ್ರ. **ಸೂತ್ರಾರ್ಥ**— ಕರ್ತ್ರರ್ಥಕ ಸಾರ್ವಧಾತುಕ ಪ್ರತ್ಯಯಗಳು ಪರದಲ್ಲಿರುವಾಗ ರುಧಾದಿಧಾತುಗಳಿಗೆ ಶ್ನಮ್ ಬರುತ್ತದೆ. ಶ್ನಮಿನಲ್ಲಿ 'ಲಶಕ್ವತದ್ಧಿತೇ' ಸೂತ್ರದಿಂದ ಶಕಾರವೂ 'ಹಲಂತ್ಯಮ್' ಸೂತ್ರದಿಂದ ಮಕಾರವೂ ಇತ್ತಾಗಿ ಲೋಪ ವಾದರೆ ನ ಉಳಿಯುತ್ತದೆ. ಇದು ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬಂದರೆ ರುನಧ್ + ತಿ ಎಂದಾಗುತ್ತದೆ. 'ಅಟ್ ಕುಪ್ವಾಙ್ ನುಮ್ ವ್ಯವಾಯೇಽಪಿ' ನಕಾರಕ್ಕೆ ಣತ್ವ. 'ಝಷಸ್ತಥೋರ್ಧೋಽಧಃ' ಸೂತ್ರದಿಂದ ತಕಾರಕ್ಕೆ ಧಕಾರ. ರುಣಧ್ + ಧಿ. 'ಝಲಾಂ ಜಶ್ ಝಶಿ' ಪೂರ್ವಧಕಾರಕ್ಕೆ ದಕಾರಾದೇಶ. ರುಣದ್ಧಿ | ರುಣಧ್ + ತಸ್. 'ಶ್ನಸೋರಲ್ಲೋಪಃ' ಸೂತ್ರದಿಂದ ಶ್ನ ವಿಕರಣದ ಅಕಾರಕ್ಕೆ ಲೋಪ;

ರುನ್ಧ್+ತಸ್. ಹಿಂದಿನಂತೆ ತಕ್ಕೆ ಧ, ಧಕ್ಕೆ ದ ಆದೇಶ. ನಕಾರಕ್ಕೆ ಅನುಸ್ವಾರ ಪರಸವರ್ಣ. ರುನ್ದ್ಧಃ | 'ಝರೋ ಝರಿ ಸವರ್ಣೇ' ಸೂತ್ರದಿಂದ ದಕಾರಕ್ಕೆ ವಿಕಲ್ಪ ಲೋಪ. (ದಕಾರಕ್ಕೆ ವಿಕಲ್ಪಲೋಪ ಹೇಳಿದರೂ, ಲುಪ್ತರೂಪವೇ ರೂಢಿಯಲ್ಲಿದೆ.) ರುನ್ಧಃ | ರುಣಧ್+ಥಸ್. ಅಲೋಪ. ರುನ್ಧನ್ತಿ | ರುಣಧ್+ಸಿ. 'ಖರಿಚ' ರುಣತ್+ಸಿ=ರುಣತ್ಸಿ. ರುಣಧ್+ಥಸ್. ಅಲೋಪ. ಥಕ್ಕೆ ಧ. ಧಕ್ಕೆ ದ. ನಕಾರಕ್ಕೆ ಅನುಸ್ವಾರ ಪರಸವರ್ಣ. ದಕಾರಕ್ಕೆ ವಿಕಲ್ಪ ಲೋಪ. ಹಲಾದಿ ಪ್ರತ್ಯಯ ಪರವಾದಾಗ ಹೀಗೇ ರೂಪವಾಗುತ್ತದೆ. ರುನ್ಧಃ | ರುನ್ಧ || ರುಣಧ್ಮಿ | ರುನ್ಧ್ವಃ | ರುನ್ಧ್ಮಃ || ಆ.—ರುಣಧ್+ತೇ. ಧತ್ವ, ದತ್ವ, ಅಲೋಪ. ದಲೋಪ ವಿಕಲ್ಪ, ಅನುಸ್ವಾರಪರಸವರ್ಣ. ರುನ್ಧೇ | ರುನ್ಧಾತೇ | ರುನ್ಧತೇ || 'ಆತ್ಮನೇಪದೇಷ್ವನತಃ' ಸೂತ್ರದಿಂದ ಝಕ್ಕೆ ಅತಾದೇಶ ಬಂದಿದೆ. ರುನ್ತ್ಸೇ | ರುನ್ಧಾಥೇ | ರುನ್ಧ್ವೇ || ರುನ್ಧ್ವೇ | ರುನ್ಧ್ವಹೇ | ರುನ್ಧ್ಮಹೇ ||

**ಲಿಟ್** || ರುಧ್‌ರುಧ್+ಅ. 'ಪುಗನ್ತಲಘೂಪಧಸ್ಯ ಚ' ಲಘೂಪಧಗುಣ. ಅಭ್ಯಾಸಕಾರ್ಯ. ರುರೋಧ | ರುರುಧತುಃ | ರುರುಧುಃ || ಭಾರದ್ವಾಜನಿಯಮದಿಂದ ಥಲಿಗೆ ವಿಕಲ್ಪ ಇಟ್. ರುರೋಧಿಥ, ರುರೋದ್ಧ | ರುರುಧಥುಃ | ರುರುಧ || ರುರೋಧ | ರುರುಧಿವ | ರುರುಧಿಮ || ಆ.— ರುರುಧೇ | ರುರುಧಾತೇ | ರುರುಧಿರೇ || ರುರುಧಿಷೇ | ರುರುಧಾಥೇ | ರುರುಧಿಧ್ವೇ || ರುರುಧೇ | ರುರುಧಿವಹೇ | ರುರುಧಿಮಹೇ || **ಲುಟ್** || ರುಧ್+ತಾ. ಲಘೂಪದಗುಣ. ತಕ್ಕೆ ಧ, ಧಕ್ಕೆ ದ. ವಿಕಲ್ಪ ದಲೋಪ. ರೋದ್ಧಾ | ರೋದ್ಧಾರೌ | ರೋದ್ಧಾರಃ || ರೋದ್ಧಾಸಿ | ರೋದ್ಧಾಸ್ಥಃ | ರೋದ್ಧಾಸ್ಥ || ರೋದ್ಧಾಸ್ಮಿ | ರೋದ್ಧಾಸ್ವಃ | ರೋದ್ಧಾಸ್ಮಃ | ಆ.—ರೊದ್ಧಾ | ರೋದ್ಧಾರೌ | ರೋದ್ಧಾರಃ || ರೋದ್ಧಾಸೇ | ರೋದ್ಧಾಸಾಥೇ || ರೋದ್ಧಾಧ್ವೇ || ರೋದ್ಧಾಹೇ | ರೋದ್ಧಾಸ್ವಹೇ | ರೋದ್ಧಾಸ್ಮಹೇ || **ಲೃಟ್** || ರುಧ್+ಸ್ಯತಿ. ಲಘೂಪಧಗುಣ. 'ಖರಿಚ' ಧಕ್ಕೆ ತಕಾರ. ರೋತ್ಸ್ಯತಿ | ಇತ್ಯಾದಿ. ಆ.—ರೋತ್ಸ್ಯತೇ ಇತ್ಯಾದಿ. **ಲೋಟ್** || ಲಟನಂತೇ ಸಾಮಾನ್ಯ ರೂಪ. ರುಣಧ್+ತು=ರುಣದ್ಧು. ರುಣಧ್+ತಾತ್. ಇದು ಙಿತ್ತಾದುದರಿಂದ ಶ್ನದ ಅಕಾರಕ್ಕೆ ಲೋಪ. ರುನ್ಧಾತ್ | ರುಣಧ್+ತಾಮ್=ರುನ್ಧಾಮ್ | ರುಣಧ್+ಅನ್ತು=ರುನ್ಧನ್ತು || ರುಣಧ್+ಹಿ. ಹಿ ಙಿತ್ತಾದುದರಿಂದ ಶ್ನದ ಅಕಾರಕ್ಕೆ ಲೋಪ. 'ಹುಝಲ್ಭ್ಯೋ ಹೇರ್ಧಿಃ' ಸೂತ್ರದಿಂದ ಹಿಗೆ ಧಿ ಆದೇಶ. ರುನ್ಧಿ, ರುನ್ಧಾತ್ | ರುನ್ಧಮ್ | ರುನ್ಧ || ಆಟ್ ಪಿತ್ತಾದುದರಿಂದ ಉತ್ತಮದಲ್ಲಿ ಅಲೋಪವಿಲ್ಲ. ರುಣಧಾನಿ | ರುಣಧಾವ | ರುಣಧಾಮ || ಆ.—ರುನ್ಧಾಮ್ | ರುನ್ಧಾತಾಮ್ | ರುನ್ಧತಾಮ್ || ರುನ್ತ್ಸ್ವ | ರುನ್ಧಾಥಾಮ್ | ರುನ್ಧ್ವಮ್ || ರುಣಧೈ | ರುಣಧಾವಹೈ || ರುಣಧಾಮಹೈ || **ಲಙ್** || ಅರುಣಧ್+ತ್.

'ಹಲ್ಙ್ಯಾಬ್ಭ್ಯೋ ದೀರ್ಘಾತ್—' ಸೂತ್ರದಿಂದ ತಿ(ಸಿಗೂ) ಲೋಪ. 'ಝಲಾಂ ಜಶೋಽನ್ತೇ' ಧಕ್ಕೆ ದಾದೇಶ. 'ವಾಽವಸಾನೇ' ಸೂತ್ರದಿಂದ ಅದಕ್ಕೆ ವಿಕಲ್ಪವಾಗಿ ತಕಾರ. ಅರುಣತ್, ಅರುಣದ್ | ಅರುನ್ಧಾಮ್ | ಅರುನ್ಧನ್ || ಅರುಣತ್, ಅರುಣದ್ | ಅರುನ್ಧಮ್ | ಅರುನ್ಧ || ಅರುಣಧಮ್ | ಅರುನ್ಧ್ವ | ಅರುನ್ಧ್ಮ || ಮಧ್ಯಮ ಏಕವಚನದಲ್ಲಿ ಅರುಣದ್ ಎಂದಿರುವಾಗ 'ದಶ್ಚ' ಸೂತ್ರದಿಂದ ರುತ್ವ ವಿಕಲ್ಪ. ರುತ್ವ ಬಂದರೆ ಅದಕ್ಕೆ ವಿಸರ್ಗ ಬಂದು ಅರುಣಃ ಎಂದೂ ಮೂರನೇ ರೂಪ ವಾಗುತ್ತದೆ. ಆ.— ಅರುಣಧ್ + ತ = ಅರುನ್ಧ | ಅರುನ್ಧಾತಾಮ್ | ಅರುನ್ಧತ || ಅರುನ್ಧಾಃ | ಅರುನ್ಧಾಥಾಮ್ | ಅರುನ್ಧ್ವಮ್ || ಅರುನ್ಧಿ | ಅರುನ್ಧ್ವಹಿ | ಅರುನ್ಧ್ಮಹಿ || ವಿಧಿಲಿಙ್ || ರುಣಧ್ + ಯಾತ್. ಯಾಸುಟ್ ಙಿತ್ತಾದುದರಿಂದ ಎಲ್ಲಾ ಕಡೆಯಲ್ಲಿಯೂ ಅಲೋಪ. ರುನ್ಧ್ಯಾತ್ | ರುನ್ಧ್ಯಾತಾಮ್ | ರುನ್ಧ್ಯುಃ | ರುನ್ಧ್ಯಾಃ | ರುನ್ಧ್ಯಾತಮ್ | ರುನ್ಧ್ಯಾತ || ರುನ್ಧ್ಯಾಮ್ | ರುನ್ಧ್ಯಾವ | ರುನ್ಧ್ಯಾಮ || ಸಲೋಪಾದಿಗಳನ್ನು ಹಿಂದಿನಂತೆ ತಿಳಿಯಬೇಕು. ಆ.— ರುನ್ಧೀತ | ರುನ್ಧೀಯಾತಾಮ್ | ರುನ್ಧೀರನ್ || ರುನ್ಧೀಥಾಃ | ರುನ್ಧೀಯಾಥಾಮ್ | ರುನ್ಧೀಧ್ವಮ್ || ರುನ್ಧೀಯ | ರುನ್ಧೀವಹಿ | ರುನ್ಧೀಮಹಿ || ಆಶೀರ್ಲಿಙ್ || ರುಧ್ಯಾತ್ | ರುಧ್ಯಾಸ್ತಾಮ್ | ರುಧ್ಯಾಸುಃ || ರುಧ್ಯಾಃ | ರುಧ್ಯಾಸ್ತಮ್ | ರುಧ್ಯಾಸ್ತ || ರುಧ್ಯಾಸಮ್ | ರುಧ್ಯಾಸ್ವ | ರುಧ್ಯಾಸ್ಮ || ಆ.— ರುಧ್ + ಸೀಷ್ಟ. 'ಖರಿಚ' ರುತ್ಸೀಷ್ಟ | ರುತ್ಸೀಯಾಸ್ತಾಮ್ | ರುತ್ಸೀರನ್ || ರುತ್ಸೀಷ್ಠಾಃ | ರುತ್ಸೀಯಾಸ್ಥಾಮ್ | ರುತ್ಸೀಧ್ವಮ್ || ರುತ್ಸೀಯ | ರುತ್ಸೀವಹಿ | ರುತ್ಸೀಮಹಿ || ಲುಙ್ || ಧಾತು ಇರಿತ್ತಾದುದರಿಂದ 'ಇರಿತೋ ವಾ' ಸೂತ್ರದಿಂದ ಚ್ಲಿಗೆ ವಿಕಲ್ಪವಾಗಿ ಅಙ್. ಅರುಧತ್ | ಅರುಧತಾಮ್ | ಅರುಧನ್ || ಅರುಧಃ | ಅರುಧತಮ್ | ಅರುಧತ || ಅರುಧಮ್ | ಅರುಧಾವ | ಅರುಧಾಮ || ಅಙ್ ಬಾರದಿದ್ದರೆ ಚ್ಲಿಗೆ ಸಿಚ್. ಅರುಧ್ + ಸ್ + ಈತ್. 'ವದವ್ರಜಹಲನ್ತಸ್ಯಾಚಃ' ವೃದ್ಧಿ. 'ಖರಿಚ'. ಧಕ್ಕೆ ತಕಾರ. ಅರೌತ್ಸೀತ್ | ಅರೌಧ್ + ಸ್ + ತಾಮ್. 'ಝಲೋ ಝಲಿ' ಸಲೋಪ. ತಕ್ಕೆ ಧಕಾರಾದಿ. ಅರೌದ್ಧಾಮ್ | ಅರೌತ್ಸುಃ || ಅರೌತ್ಸೀಃ | ಅರೌದ್ಧಮ್ | ಅರೌದ್ಧ || ಅರೌತ್ಸಮ್ | ಅರೌತ್ಸ್ವ | ಅರೌತ್ಸ್ಮ || ಆ. - ಅರುಧ್ + ಸ್ + ತ. 'ಝಲೋ ಝಲಿ' ಸಲೋಪ. ತಕ್ಕೆ ಧಕಾರಾದಿ. ಅರುದ್ಧ | ಅರುತ್ಸಾತಾಮ್ | ಅರುತ್ಸತ || ಅರುದ್ಧಾಃ | ಅರುತ್ಸಾಥಾಮ್ | ಅರುದ್ಧ್ವಮ್ || ಅರುತ್ಸಿ | ಅರುತ್ಸ್ವಹಿ | ಅರುತ್ಸ್ಮಹಿ || ಲೃಙ್ || ಅರೋತ್ಸ್ಯತ್ | ಆ.— ಅರೋತ್ಸ್ಯತ | ಇತ್ಯಾದಿ.

|| ೧೬೨ || ಭಿದಿರ್ = ವಿದಾರಣೇ (ಸೀಳುವುದು.)

|| ೧೬೩ || ಛಿದಿರ್ = ದ್ವೈಧೀಕರಣೇ (ಎರಡು ಭಾಗ ಮಾಡುವುದು.)

|| ೧೬೪ || ಯುಜಿರ್ = ಯೋಗೇ (ಸೇರಿಸುವುದು.)

||೧೬೫|| ರಿಚಿರ್ = ವಿರೇಚನೇ (ಬೇರ್ಪಡಿಸುವುದು.)

ರಿಣಕ್ತಿ, ರಿಙ್ಕ್ತೇ | ರಿರೇಚ | ರೇಕ್ತಾ | ರೇಕ್ಷ್ಯತಿ | ಅರಿಣಕ್ |
ಅರಿಚತ್, ಅರೈಕ್ಷೀತ್, ಅರಿಕ್ತ ||

||೧೬೬|| ವಿಚಿರ್ = ಪೃಥಗ್ಭಾವೇ (ಬೇರ್ಪಡಿಸುವುದು.)

ವಿನಕ್ತಿ, ವಿಙ್ಕ್ತೇ ||

||೧೬೭|| ಕ್ಷುದಿರ್ = ಸಂಪೇಷಣೇ (ಪುಡಿಮಾಡುವುದು.)

ಕ್ಷುಣತ್ತಿ, ಕ್ಷುನ್ತೇ ಕ್ಷೋತ್ತಾ | ಅಕ್ಷುದತ್, ಅಕ್ಷೌತ್ಸೀತ್, ಅಕ್ಷೌತ್ತ ||

||೧೬೮|| ಉಚ್ಛೃದಿರ್ = ದೀಪ್ತಿದೇವನಯೋಃ (ಪ್ರಕಾಶಿಸುವುದು, ದುಃಖಿಸುವುದು.)

ಛೃಣತ್ತಿ, ಛೃನ್ತೇ | ಚಚ್ಛರ್ದ | ಸೇಽಸಿಚೀತಿ ವೇಟ್ | ಚಚ್ಛೃದಿಷೇ, ಚಚ್ಛೃತ್ಸೇ | ಛರ್ದಿತಾ | ಛರ್ದಿಷ್ಯತಿ, ಛರ್ತ್ಸ್ಯತಿ | ಅಚ್ಛೃದತ್, ಅಚ್ಛರ್ದೀತ್, ಅಚ್ಛರ್ದಿಷ್ಟ ||

||೧೬೯|| ಉತೃದಿರ್ = ಹಿಂಸಾನಾದರಯೋಃ (ಹಿಂಸೆ, ಅಪಮಾನ ಮಾಡುವುದು.) ತೃಣತ್ತಿ, ತೃನ್ತೇ ||

ಇಲ್ಲಿ ಹೇಳಿದ ಧಾತುಗಳೆಲ್ಲಾ ಇರಿತ್ತಾದುದರಿಂದ ರುಧಿರಿನಂತೇ ಸಾಮಾನ್ಯವಾಗಿ ರೂಪಹೊಂದುತ್ತವೆ.

ಭಿದಿರ್ ಧಾತು. ಅನಿಟ್. ಭಿನತ್ತಿ | ಭಿನ್ತಃ | ಭಿನ್ದನ್ತಿ || ಭಿನತ್ಸಿ | ಭಿನ್ಥಃ | ಭಿನ್ಥ || ಭಿನದ್ಮಿ | ಭಿನ್ದ್ವಃ | ಭಿನ್ದ್ಮಃ || ಆ.—ಭಿನ್ತೇ | ಭಿನ್ದಾತೇ || ಭಿನ್ದತೇ || ಇತ್ಯಾದಿ. ಅಲೋಪ. ಅನುಸ್ವಾರಪರಸವರ್ಣ ಮಾತ್ರ ಇಲ್ಲಿ ಬಂದಿದೆ. ಲಿಟ್ || ಬಿಭೇದ | ಬಿಭಿದತುಃ | ಇತ್ಯಾದಿ. ಆ.—ಬಿಭಿದೇ ಇತ್ಯಾದಿ. ಲುಟ್ || ಭೇತ್ತಾ (೨) | ಲೃಟ್ || ಭೇತ್ಸ್ಯತಿ, ಭೇತ್ಸ್ಯತೇ | ಲೋಟ್ || ಭಿನತ್ತು, ಭಿನ್ತಾತ್ | ಆ.—ಭಿನ್ತಾಮ್ | ಲಙ್ || ಅಭಿನದ್, ಅಭಿನತ್ | ಆ.—ಅಭಿನ್ತ | ವಿಧಿಲಿಙ್ || ಭಿನ್ದ್ಯಾತ್ | ಆ.—ಭಿನ್ದೀತ | ಆಶೀರ್ಲಿಙ್ || ಭಿದ್ಯಾತ್ | ಆ.—ಭಿತ್ಸೀಷ್ಟ | ಲುಙ್ || ಅಙ್ ಬಂದರೆ ಅಭಿದತ್. ಸಿಚ್ ಬಂದಾಗ ಅಭೈತ್ಸೀತ್ | ಆ.—ಅಭಿತ್ತ | ಲೃಙ್ || ಅಭೇತ್ಸ್ಯತ್ || ಆ.—ಅಭೇತ್ಸ್ಯತ ||

ಛಿದಿರ್ ಧಾತು. ಅನಿಟ್. ಛಿನತ್ತಿ, ಛಿನ್ತೇ | ಚಿಚ್ಛೇದ, ಚಿಚ್ಛಿದೇ | ಛೇತ್ತಾ (೨) | ಛೇತ್ಸ್ಯತಿ | ಛೇತ್ಸ್ಯತೇ ಛಿನತ್ತು, ಛಿನ್ತಾಮ್ | ಅಚ್ಛಿನದ್, ಅಛಿನತ್, ಅಚ್ಛಿನ್ತ | ಛಿನ್ದ್ಯಾತ್, ಛಿನ್ದೀತ | ಅಚ್ಛಿದತ್, ಅಚ್ಛೈತ್ಸೀತ್, ಅಚ್ಛಿತ್ತ |

ಅಚ್ಛೈತ್ಸ್ಯತ್, ಅಚ್ಛೈತ್ಸ್ಯತ ॥ ಇಲ್ಲಿ ಹ್ರಸ್ವದ ಪರದಲ್ಲಿ ಛ ಬಂದಾಗ 'ಛೇ ಚ' ಸೂತ್ರದಿಂದ ತುಕ್ ಬಂದು ಅದಕ್ಕೆ ಶ್ಚುತ್ವದಿಂದ ಚಕಾರ ಬರುತ್ತದೆ.

**ಯುಜಿರ್** ಧಾತು. ಅನಿಟ್. ಯುನಕ್ತಿ, ಯುಙ್ಕ್ತೇ | ಯುಯೋಜ, ಯುಯುಜೇ | ಯೋಕ್ತಾ | ಯೋಕ್ಷ್ಯತೇ, ಯೋಕ್ಷ್ಯತಿ | ಯುನಕ್ತು, ಯುಙ್ಕ್ತಾಮ್ | ಅಯುನಕ್, ಅಯುನಗ್, ಅಯುಙ್ಕ್ತ | ಯುಞ್ಜ್ಯಾತ್, ಯುಞ್ಜೀತ | ಯುಜ್ಯಾತ್, ಯುಕ್ಷೀಷ್ಟ. (ಚೋಃ ಕುಃ) | ಅಯುಜತ್, ಅಯೌಕ್ಷೀತ್, ಅಯುಕ್ತ | ಅಯೋಕ್ಷ್ಯತ್, ಅಯೋಕ್ಷ್ಯತ ||

**ರಿಚಿರ್** ಧಾತು. ಅನಿಟ್. ರೇಫವಿರುವುದರಿಂದ 'ಅಟ್‌ಕುಪ್ವಾಙ್—' ಸೂತ್ರದಿಂದ ನಕ್ಕೆ ಣತ್ವ. ರಿಣಕ್ತಿ, ರಿಙ್ಕ್ತೇ | ರಿರೇಚ, ರಿರಿಚೇ | ರೇಕ್ತಾ (೨) ರೇಕ್ಷ್ಯತಿ, ರೇಕ್ಷ್ಯತೇ | ರಿಣಕ್ತು, ರಿಙ್ಕ್ತಾಮ್ | ಅರಿಣಕ್, ಅರಿಣಗ್, ಅರಿಙ್ಕ್ತ | ರಿಞ್ಚ್ಯಾತ್, ರಿಞ್ಚೀತ | ರಿಚ್ಯಾತ್, ರಿಕ್ಷೀಷ್ಟ | ಅರಿಚತ್, ಅರೈಕ್ಷೀತ್, ಅರಿಕ್ತ | ಅರೇಕ್ಷ್ಯತ್, ಅರೇಕ್ಷ್ಯತ ||

**ವಿಚಿರ್** ಧಾತು. ಅನಿಟ್. ವಿನಕ್ತಿ, ವಿಙ್ಕ್ತೇ | ವಿವೇಚ, ವಿವಿಚೇ | ವೇಕ್ತಾ | ವೇಕ್ಷ್ಯತಿ, ವೇಕ್ಷ್ಯತೇ | ವಿನಕ್ತು, ವಿಙ್ಕ್ತಾಮ್ | ಅವಿನಕ್, ಅವಿನಗ್, ಅವಿಙ್ಕ್ತ | ವಿಞ್ಚ್ಯಾತ್, ವಿಞ್ಚೀತ | ವಿಚ್ಯಾತ್, ವಿಕ್ಷೀಷ್ಟ | ಅವಿಚತ್, ಅವೈಕ್ಷೀತ್, ಅವಿಕ್ತ | ಅವೇಕ್ಷ್ಯತ್, ಅವೇಕ್ಷ್ಯತ ||

**ಕ್ಷುದಿರ್** ಧಾತು. ಅನಿಟ್. ಷ(ಕರ್ಷ) ಇರುವುದರಿಂದ ಣತ್ವ. ಕ್ಷುಣತ್ತಿ., ಕ್ಷುನ್ತೇ | ಚುಕ್ಷೋದ, ಚುಕ್ಷುದೇ | ಕ್ಷೋತ್ತಾ (೨) | ಕ್ಷೋತ್ಸ್ಯತಿ, ಕ್ಷೋತ್ಸ್ಯತೇ | ಕ್ಷುಣತ್ತು, ಕ್ಷುನ್ತಾಮ್ | ಅಕ್ಷುಣತ್, ಅಕ್ಷುಣದ್, ಅಕ್ಷುನ್ತ | ಕ್ಷುನ್ದ್ಯಾತ್, ಕ್ಷುನ್ದೀತ | ಕ್ಷುದ್ಯಾತ್, ಕ್ಷುತ್ಸೀಷ್ಟ | ಅಕ್ಷುದತ್, ಅಕ್ಷೌತ್ಸೀತ್, ಅಕ್ಷುತ್ತ | ಅಕ್ಷೋತ್ಸ್ಯತ್, ಅಕ್ಷೋತ್ಸ್ಯತ ||

**ಉಛೃದಿರ್** ಧಾತು. ಸೇಟ್. ಉಕಾರ ಇತ್. ಅದು ಹೋದರೆ ಅದನ್ನು ನಿಮಿತ್ತೀಕರಿಸಿ ಬಂದ ತುಕ್ ಹೋಗಿ ಛೃದ್ ಧಾತುಸ್ವರೂಪ. ಋಕಾರ ಇರುವುದರಿಂದ ಣತ್ವ. ಛೃಣತ್ತಿ, ಛೃನ್ತೇ || ಚಚ್ಛರ್ದ | ಚಚ್ಛೃದತುಃ | ಚಚ್ಛೃದುಃ || ಚಚ್ಛರ್ದಿಥ | ಇತ್ಯಾದಿ. **ಆ—**ಚಚ್ಛೃದೇ | ಚಚ್ಛೃದಾತೇ | ಚಚ್ಛೃದಿರೇ || ಥಾಸಿಗೆ ಸೇ ಬಂದಾಗ 'ಸೇಸಿಚಿಕೃತ—' (ಸೂ. ೬೩೩) ದಿಂದ ವಿಕಲ್ಪ ಇಡಾಗಮ. ಚಚ್ಛೃದಿಷೇ, ಚಚ್ಛೃತ್ಸೇ | ಚಚ್ಛೃದಾಥೇ | ಚಚ್ಛೃದಿಧ್ವೇ || ಚಚ್ಛೃದೇ | ಚಚ್ಛೃದಿವಹೇ | ಚಚ್ಛೃದಿಮಹೇ || ಛರ್ದಿತಾ | ಛರ್ದಿಷ್ಯತಿ, ಛರ್ದಿಷ್ಯತೇ | ಛೃಣತ್ತು, ಛೃನ್ತಾಮ್ | ಅಚ್ಛೃಣತ್, ಅಚ್ಛೃಣದ್, ಅಚ್ಛೃನ್ತ | ಛೃನ್ದ್ಯಾತ್ | ಛೃನ್ದೀತ | ಛೃದ್ಯಾತ್ | ಛರ್ದಿಷೀಷ್ಟ | ಅಚ್ಛೃದತ್, ಅಚ್ಛರ್ದೀತ್ |

ಅಚ್ಛರ್ದಿಷ್ಯಾವಮ್ | ಅಚ್ಛರ್ದಿಷುಃ || ಇತ್ಯಾದಿ. ಅಚ್ಛರ್ದಿಷ್ಟ | ಅಚ್ಛರ್ದಿಷಾತಾಮ್ | ಅಚ್ಛರ್ದಿಷತ || ಇತ್ಯಾದಿ. ಅಚ್ಛರ್ದಿಷ್ಯತ್, ಅಚ್ಛರ್ದಿಷ್ಯತ ||

**ಉತೃದಿರ್** ಧಾತು. ಸೇಟ್. ಇಲ್ಲಿಯೂ ಉಕಾರ ಇತ್. ತೃದ್ ಉಳಿಯು ತ್ತದೆ. ತೃಣತ್ತಿ, ತೃನ್ತೇ | ತತರ್ದ, ತತೃದೇ | ತರ್ದಿತಾ (೨) | ತರ್ದಿಷ್ಯತಿ ತರ್ದಿಷ್ಯತೇ | ತೃಣತ್ತು, ತೃನ್ತಾಮ್ | ಅತೃಣತ್, ಅತೃಣದ್, ಅತೃನ್ತ | ತೃನ್ದ್ಯಾತ್, ತೃನ್ದೀತ | ತೃದ್ಯಾತ್, ತರ್ದಿಷೀಷ್ಟ | ಅತೃದತ್, ಅತರ್ದೀತ್ | ಅತರ್ದಿಷ್ಟ | ಅತರ್ದಿಷ್ಯತ್, ಅತರ್ದಿಷ್ಯತ || ಉಭಯಪದಿ ಮುಗಿಯಿತು.

|| ೧೬೦ || ಕೃತೀ—ವೇಷ್ಟನೇ (ಸುತ್ತುವುದು.) ಕೃಣತ್ತಿ |

|| ೧೬೧-೧೬೨ || ತೃಹ, ಹಿಸಿ—ಹಿಂಸಾಯಾಮ್

**ಕೃತೀ** ಧಾತು. ಈಕಾರ ಇತ್. ಸೇಟ್. ಪರಸ್ಮೈಪದೀ. ಋಕಾರವಿರುವುದರಿಂದ ಣತ್ವ ಬರುತ್ತದೆ. ಕೃಣತ್ತಿ | ಚಕರ್ತ | ಕರ್ತಿತಾ | ಕರ್ತಿಷ್ಯತಿ | ಕೃಣತ್ತು | ಅಕೃಣತ್, ಅಕೃಣದ್ | ಕೃನ್ತ್ಯಾತ್ | ಕೃತ್ಯಾತ್ | ಅಕರ್ತೀತ್ | ಅಕರ್ತಿಷ್ಯತ್ || ಇನ್ನುಮುಂದೆ ಹೇಳುವ ಧಾತುಗಳು ಪರಸ್ಮೈಪದಿಗಳೆಂದು ತಿಳಿಯಬೇಕು.

**ತೃಹ** ಧಾತು. ಸೇಟ್. ಋಕಾರವಿರುವುದರಿಂದ ಶ್ನಮಿನ ನಕಾರಕ್ಕೆ ಣತ್ವ. ತೃಣಹ್ + ತಿ ಎಂದಿರುವಾಗ ಇಮಾಗಮ ಹೇಳುತ್ತಾನೆ.

ತೃಹ್ ಧಾತುವಿಗೆ ಇಮಾಗಮ ಹೇಳುವ ಸೂತ್ರ.

**೬೭೯. ತೃಣಹ ಇಮ್ || ೭-೩-೯೨ ||**

**ತೃಹಃ ಶ್ನಮಿ ಕೃತೇ ಇಮಾಗಮೋ ಹಲಾದೌ ಪಿತಿ ಸಾರ್ವಧಾತುಕೇ | ತೃಣೇಢಿ | ತೃಣ್ಢಃ | ತತರ್ಹ | ತರ್ಹಿತಾ | ಅತೃಣೇಟ್ ||**

ದ್ವಿಪದ ಸೂತ್ರ. 'ನಾಭ್ಯಸ್ತಸ್ಯಾಚಿ—' ಸೂತ್ರದಿಂದ 'ಪಿತಿ', 'ಸಾರ್ವಧಾತುಕೇ', 'ಉತೋವೃದ್ಧಿಃ—' ಸೂತ್ರದಿಂದ 'ಹಲಿ' ಪದಗಳು ಅನುವೃತ್ತವಾಗುತ್ತವೆ. 'ತೃಣಹಃ' ಷಷ್ಠೀ. ಶ್ನಮ್ ವಿಕರಣವಾಡಿ ನಿರ್ದೇಶ ಮಾಡಿರುತ್ತಾನೆ. ಆದುದರಿಂದ ಶ್ನಮ್ ಮಾಡಿದ ಮೇಲೇ ಈ ಸೂತ್ರದ ಕಾರ್ಯವೆಂದು ತಿಳಿಯುತ್ತದೆ. **ಸೂತ್ರಾರ್ಥ**—ತೃಹ್ ಧಾತುವಿಗೆ ಶ್ನಮ್ ಮಾಡಿದಮೇಲೆ ಹಲಾದಿಯಾದ ಪಿತ್ತಾದ ಸಾರ್ವಧಾತುಕ ಪರದಲ್ಲಿರುವಾಗ ಇಮಾಗಮ ಬರುತ್ತದೆ. ಪ್ರಕೃತ ತಿಯಲ್ಲಿ ಇಮ್ ಬಂದರೆ ಅದು ಮಿತ್ತಾದುದರಿಂದ ಅಂತ್ಯಾಚಿನಪರವಾಗಿ ಬರುತ್ತದೆ. ತೃಣ + ಇಹ್ + ತಿ. ಗುಣ. ತೃಣೇಹ್ + ತಿ. 'ಹೋಢಃ' ಹಕಾರಕ್ಕೆ ಢಕಾರ. ತೃಣೇಢ್ + ತಿ. 'ಝಷಸ್ತಥೋಃ—' ಸೂತ್ರದಿಂದ ತಕಾರಕ್ಕೆ ಧಕಾರ ಬಂದಾಗ ಅದಕ್ಕೆ ಷ್ಟುತ್ವದಿಂದ ಢಕಾರ. ತೃಣೇಢ್ + ಢಿ. 'ಢೋಢೇ ಲೋಪಃ' ತೃಣೇಢಿ. ತೃಣಹ್ + ತಸ್. 'ಶ್ನಸೋ

ರಲ್ಲೋಪಃ' ತೃಣ್ಹ್ + ತಸ್. ಹಕಾರಕ್ಕೆ ಢತ್ವ. ತಕ್ಕೆ ಧ ಬಂದು ಷ್ಟುತ್ವ. ಢಲೋಪ ಹಿಂದಿನಂತೆ. ತೃಣ್ಢಃ | ತೃಣಹ್ + ಅಂತಿ. ಅಲೋಪ. ತೃನ್‌ಹ್ + ಅಂತಿ. ನಕಾರಕ್ಕೆ ಅನುಸ್ವಾರ. ಪರಸವರ್ಣಕ್ಕೆ ನಿಮಿತ್ತ (ಯಯ್) ಇಲ್ಲ. ತೃಂಹಂತಿ || ತೃಣಹ್ + ಸಿ. ಇಮಾಗಮ. ಢತ್ವ, ತೃಣೇಢ್ + ಸಿ. 'ಷಢೋಃ ಕಃ ಸಿ' ಸೂತ್ರದಿಂದ ಢಕ್ಕೆ ಕಾದೇಶ. ಸಕ್ಕೆ ಷತ್ವ. ತೃಣೇಕ್ಷಿ | ತೃಣ್ಢಃ|ತೃಣ್ಢ|| ತೃಣೇಹ್ಮಿ | ತೃಂಹ್ವಃ | ತೃಂಹ್ಮಃ ||

**ಲಿಟ್** || ತತರ್ಹ | ತತೃಹತುಃ | ತತೃಹುಃ || ತತರ್ಹಿಥ | ತತೃಹಥುಃ | ತತೃಹ || ತತರ್ಹ | ತತೃಹಿವ | ತತೃಹಿಮ || **ಲುಟ್** || ಲಘೂಪಧಗುಣ. ತರ್ಹಿತಾ | ಇತ್ಯಾದಿ. **ಲೃಟ್** ||ತರ್ಹಿಷ್ಯತಿ | ಇತ್ಯಾದಿ. **ಲೋಟ್** || ತೃಣೇಢು, (ಲಟನಂತೆ ಪ್ರಕ್ರಿಯೆ) ತೃಣ್ಢಾತ್ | ತೃಣ್ಢಾಮ್ | ತೃಂಹಂತು || ತೃಣಹ್ + ಹಿ ಎಂದಿರುವಾಗ ಅಲೋಪ. ಹಕಾರಕ್ಕೆ ಢತ್ವ. 'ಹುಝಲ್ಭ್ಯೋ ಹೇರ್ಧಿಃ' ಹಿಗೆ ಧಿ. ಅದಕ್ಕೆ ಷ್ಟುತ್ವ ಬಂದರೆ ಢಿ ಆಗುತ್ತದೆ. ಢಲೋಪ. ತೃಣ್ಢಿ, ತೃಣ್ಢಾತ್ | ತೃಣ್ಢಮ್ | ತೃಣ್ಢ || ತೃಣಹಾನಿ | ತೃಣಹಾವ | ತೃಣಹಾಮ || **ಲಙ್** || ಅತೃಣೇಹ್ + ತ್. 'ಹಲ್ ಙ್ಯಾಭ್ಯೋ—' ಸೂತ್ರದಿಂದ ತಕ್ಕೆ ಲೋಪ. ಹಕ್ಕೆ ಢತ್ವ. ಅತೃಣಣೇಢ್. 'ಝಲಾಂ ಜಶೋಽನ್ತೇ' ಅತೃಣೇಡ್. 'ವಾವಸಾನೇ' ಚರ್ತ್ವವಿಕಲ್ಪ. ಅತೃಣೇಟ್ | ಅತೃಣ್ಢಾಮ್ | ಅತೃಂಹನ್ || ಅತೃಣೇಟ್, ಅತೃಣೇಡ್ | ಅತೃಣ್ಢಮ್ | ಅತೃಣ್ಢ || ಅತೃಣಹಮ್ | ಅತೃಂಹ್ವ | ಅತೃಂಹ್ಮ|| **ವಿಧಿಲಿಙ್** || ತೃಂಹ್ಯಾತ್ | **ಆಶೀರ್ಲಿಙ್**|| ತೃಹ್ಯಾತ್ | **ಲುಙ್** || ಅತರ್ಹೀತ್ | ಅತರ್ಹಿಷ್ಟಾಮ್ | ಅತರ್ಹಿಷುಃ || ಇತ್ಯಾದಿ. **ಲೃಙ್** || ಅತರ್ಹಿಷ್ಯತ್ | ಇತ್ಯಾದಿ.

**ಹಿಸಿ** ಧಾತು. ಸೇಟ್- ಇಕಾರ ಇತ್. ಹಿನಸ್ + ತಿ ಎಂದಿರುವಾಗ'ಇದಿತೋ ನುಮ್ ಧಾತೋಃ' ಸೂತ್ರದಿಂದ ನುಮಾಗಮ. ಹಿನಸ್ + ತಿ ಎಂದಾಗುತ್ತದೆ. ಇಲ್ಲಿ ನುಮಿನ ನಕಾರಕ್ಕೆ ಲೋಪ ಹೇಳುತ್ತಾನೆ.

ಶ್ನಮಿನ ಪರದ ನಕಾರಕ್ಕೆ ಲೋಪ ಹೇಳುವ ಸೂತ್ರ.

**೬೭೦. ಶ್ನಾನ್ನಲೋಪಃ || ೬-೪-೨೩||**

**ಶ್ನಮಃ ಪರಸ್ಯ ನಸ್ಯ ಲೋಪಃ ಸ್ಯಾತ್ | ಹಿನಸ್ತಿ | ಜಿಹಿಂಸ | ಹಿಂಸಿತಾ ||**

ಶ್ನಾತ್, ನ, ಲೋಪಃ || ತ್ರಿಪದ ಸೂತ್ರ. ನ ಲುಪ್ತಷಷ್ಠೀಕ. **ಸೂತ್ರಾರ್ಥ**– ಶ್ನಮಿನ ಪರದಲ್ಲಿರುವ ನಕಾರಕ್ಕೆ ಲೋಪಬರುತ್ತದೆ. ನುಮಿನ ನಕಾರ ಶ್ನಮಿನ ಪರದಲ್ಲಿರುವುದರಿಂದ ಅದಕ್ಕೆ ಲೋಪಬಂದರೆ ಹಿನಸ್ತಿ ಎಂದಾಗುತ್ತದೆ. ಹಿಂಸ್ತಃ | ಹಿಂಸಂತಿ || ಹಿನಸ್ಸಿ | ಹಿಂಸ್ಥಃ | ಹಿಂಸ್ಥ || ಹಿನಸ್ಮಿ | ಹಿಂಸ್ವಃ | ಹಿಂಸ್ಮಃ || **ಲಿಟ್** || ಇದಿತ್ತಾದುದರಿಂದ ಎಲ್ಲಾ ಕಡೆಗಳಲ್ಲಿಯೂ ನುಮ್. ಜಿಹಿಂಸ | ಜಿಹಿಂಸತುಃ | ಜಿಹಿಂಸುಃ || ಇತ್ಯಾದಿ. **ಲುಟ್** || ಹಿಂಸಿತಾ | ಇತ್ಯಾದಿ. **ಲೃಟ್**||

ಹಿಂಸಿಷ್ಯತಿ | **ಲೋಟ್** || ಹಿನಸ್ತು, ಹಿಂಸ್ತಾತ್ | ಹಿಂಸ್ತಾಮ್ | ಹಿಂಸಂತು || ಹಿನಸ್‌ಸ್ + ಹಿ. ಶ್ನಮಿನ ಅಕಾರಕ್ಕೆ ಲೋಪ. ನುಮಿಗೆ ಲೋಪ. ಸ್ ಝಲ್ಲಾದುದ ರಿಂದ ಹಿಗೆ ಧಿ ಆದೇಶ. 'ಧಿ ಚ' ಸೂತ್ರದಿಂದ ಸಕಾರಕ್ಕೆ ಲೋಪ. ಹಿನ್ಧಿ, ಹಿಂಸ್ತಾತ್ | ಹಿಂಸ್ತಮ್ | ಹಿಂಸ್ತ || ಹಿನಸಾನಿ | ಹಿನಸಾವ | ಹಿನಸಾಮ || **ಲಙ್** || ಅಹಿನಸ್‌ಸ್ + ತ್ ಎಂದಿರುವಾಗ 'ಹಲ್‌ಙ್ಯಾಭ್ಯೋ—' ಸೂತ್ರದಿಂದ ತಲೋಪ. ನಲೋಪ ಅಹಿನಸ್ ಎಂದಿರುವಾಗ ಸಕಾರಕ್ಕೆ ರುತ್ವವಿಸರ್ಗ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ದತ್ವ ಹೇಳುತ್ತಾನೆ.

ಸಕಾರಕ್ಕೆ ದಕಾರ ಹೇಳುವ ಸೂತ್ರ.

**೬೭೧. ತಿಪ್ಯನಸ್ತೇಃ || ೮-೨-೭೩ ||**

**ಪದಾನ್ತಸ್ಯ ಸಸ್ಯ ದಃ ಸ್ಯಾತ್ತಿಪಿ ನ ತ್ವಸ್ತೇಃ | ಸಸಜುಷೋರಿತ್ಯಸ್ಯಾಪ ವಾದಃ | ಅಹಿನತ್, ಅಹಿನದ್ | ಅಹಿಂಸ್ತಾಮ್ | ಅಹಿಂಸನ್ ||**

ತಿಪಿ, ಅನಸ್ತೇಃ || ದ್ವಿಪದ ಸೂತ್ರ. 'ಪದಸ್ಯ' ಅಧಿಕಾರ. 'ಝಲಾಂ ಜಶೋಽನ್ತೇ' ಸೂತ್ರದಿಂದ 'ಅನ್ತೇ', 'ಸಸಜುಷೋರುಃ' ಸೂತ್ರದಿಂದ 'ಸ' ಎಂಬ ಲುಪ್ತಷಷ್ಠೀಕಪದವೂ ಅನುವೃತ್ತವಾಗುತ್ತದೆ. 'ವಸುಸ್ರಂಸು—' ಸೂತ್ರದಿಂದ 'ದಃ' ಅನುವೃತ್ತಿ. ನ ಅಸ್ತಿಃ ಅನಸ್ತಿಃ | ತಸ್ಯ. **ಸೂತ್ರಾರ್ಥ**—ಪದಾನ್ತವಾದ ಸಕಾರಕ್ಕೆ ದಕಾರ ಬರುತ್ತದೆ. ಅಸ್ ಧಾತುಸಕಾರಕ್ಕೆ ಈ ಕಾರ್ಯವಿಲ್ಲ. 'ಸಸಜು ಷೋರುಃ' ಸೂತ್ರದಿಂದ ರುತ್ವ ಬರುತ್ತಿರುವಾಗ ಈ ಸೂತ್ರದಿಂದ ದತ್ವ ಹೇಳಿದುದ ರಿಂದ ಅದಕ್ಕೆ ಅಪವಾದವೆಂದು ತಿಳಿಯಬೇಕು. ಪ್ರಕೃತ ಸಕಾರಕ್ಕೆ ದತ್ವ ಬಂದರೆ 'ವಾವಸಾನೇ' ಸೂತ್ರದಿಂದ ಅದಕ್ಕೆ ವಿಕಲ್ಪವಾಗಿ ಚರ್ತ್ವ. ಅಹಿನತ್, ಅಹಿನದ್ | ಅಹಿಂಸ್ತಾಮ್ | ಅಹಿಂಸನ್ || ಸಿಪಿನಲ್ಲಿಯೂ ಹೀಗೆ ದತ್ವ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ವಿಕಲ್ಪರುತ್ವ ಹೇಳುತ್ತಾನೆ.

ಧಾತುಸಕಾರಕ್ಕೆ ರುತ್ವ ಹೇಳುವ ಸೂತ್ರ.

**೬೭೨. ಸಿಪಿ ಧಾತೋ ರುರ್ವಾ || ೮-೨-೭೪ ||**

**ಪದಾನ್ತಸ್ಯ ಧಾತೋಃ ಸಸ್ಯ ರುಃ ಸ್ಯಾದ್ವಾ, ಪಕ್ಷೇ ದಃ | ಅಹಿನಃ, ಅಹಿನತ್, ಅಹಿನದ್ ||**

ಸಿಪಿ, ಧಾತೋಃ, ರುಃ, ವಾ || ನಾಲ್ಕು ಪದಗಳುಳ್ಳ ಸೂತ್ರ. ಹಿಂದಿನಂತೆ 'ಅಂತೇ' ಅನುವೃತ್ತಿ. 'ಪದಸ್ಯ' ಅಧಿಕಾರ. **ಸೂತ್ರಾರ್ಥ**—ಪದಾನ್ತವಾದ ಧಾತುವಿನ ಸಕಾರಕ್ಕೆ ರುತ್ವವು ವಿಕಲ್ಪವಾಗಿ ಬರುತ್ತದೆ. ರುತ್ವ ಬಾರದಿದ್ದರೆ ಹಿಂದಿನ

ಸೂತ್ರದಿಂದ ದತ್ವ. ರುತ್ವ ಬಂದರೆ ಅಹಿನರ್ ಎಂದಾದಾಗ ರೇಫಕ್ಕೆ 'ಖರವಸಾನ ಯೋರ್ವಿಸರ್ಜನೀಯಃ' ಸೂತ್ರದಿಂದ ವಿಸರ್ಗ. ಅಹಿನಃ | ದತ್ವ ಬಂದರೆ ಅಹಿನತ್, ಅಹಿನದ್—ಹೀಗೆ ಸಿಪಿನಲ್ಲಿ ಮೂರು ರೂಪ. ಅಹಿಂಸ್ತಮ್ | ಅಹಿಂಸ್ತ || ಅಹಿನ ಸಮ್ | ಅಹಿಂಸ್ವ | ಅಹಿಂಸ್ಮ ||

**ವಿಧಿಲಿಙ್** || ಹಿಂಸ್ಯಾತ್ | **ಆಶೀರ್ಲಿಙ್** || 'ಇದಿತೋ ನುಮ್—' ಸೂತ್ರ ದಿಂದ ಸುಮ್. ಹಿಂಸ್ಯಾತ್ | ಹಿಂಸ್ಯಾಸ್ತಾಮ್ | ಹಿಂಸ್ಯಾಸುಃ || ಇತ್ಯಾದಿ. **ಲುಙ್** || ಅಹಿಂಸೀತ್ | **ಲೃಙ್** || ಅಹಿಂಸಿಷ್ಯತ್ ||

**|| ೧೭೩ || ಉನ್ದೀ=ಕ್ಲೇದನೇ (ಒದ್ದೆಮಾಡುವುದು.)**

**ಉನತ್ತಿ | ಉನ್ತಃ | ಉನ್ದನ್ತಿ || ಉನ್ದಾಞ್ಚಕಾರ | ಔನತ್, ಔನದ್ | ಔನ್ತಾಮ್ | ಔನ್ದನ್ | ಔನಃ, ಔನತ್, ಔನದ್ || ಔನದಮ್ ||**

**|| ೧೭೪ || ಅಞ್ಜೂ=ವ್ಯಕ್ತಿ, ಮ್ರಕ್ಷಣ, ಕಾಂತಿ, ಗತಿಷು (ವಿವೇಚನ, ಅಭ್ಯಂಗಲೇಪನ, ಕಾಂತಿ, ಗಮನ.)**

**ಅನಕ್ತಿ | ಅಙ್ಕ್ತಃ | ಅಞ್ಜನ್ತಿ | ಆನಞ್ಜ | ಆನಞ್ಜಿಥ, ಆನಙ್ಕ್ಥ | ಅಞ್ಜಿತಾ, ಅಙ್ಕ್ತಾ | ಅಙ್ಗ್ಧಿ | ಅನಜಾನಿ || ಆನಕ್ ||**

**ಉನ್ದೀ** ಧಾತು. ಈಕಾರ ಇತ್. ಸೇಟ್. ಶ್ನಮ್ ಬಂದಾಗ 'ಶ್ನಾನ್ನ ಲೋಪಃ' ಸೂತ್ರದಿಂದ ಧಾತುನಕಾರಕ್ಕೆ ಲೋಪ. ಉನದ್+ತಿ. 'ಖರಿಚ' ಉನತ್ತಿ | ಉನ್ತಃ | ಉನ್ದನ್ತಿ || ಉನತ್ಸಿ | ಉನ್ಥಃ | ಉನ್ಥ || ಉನದ್ಮಿ | ಉನ್ದ್ವಃ | ಉನ್ದ್ಮಃ || **ಲಿಟಿ**ನಲ್ಲಿ ಇಜಾದಿಯಾಗಿ ಗುರುಮತ್ತಾದುದರಿಂದ 'ಇಜಾದೇಶ್ಚ ಗುರು ಮತೋಽನೃಚ್ಛಃ' ಸೂತ್ರದಿಂದ 'ಆಮ್', ಆಮಿನಮೇಲೆ ಕೃಞಾದಿ ಹಿಂದಿನಂತೆ ತಿಳಿಯಬೇಕು. ಉನ್ದಾಞ್ಚಕಾರ | **ಲುಟ್** || ಉನ್ದಿತಾ | **ಲೃಟ್** || ಉನ್ದಿಷ್ಯತಿ | **ಲೋಟ್** || ಉನತ್ತು, ಉನ್ತಾತ್ ಉನ್ತಾಮ್ | ಉನ್ದನ್ತು || ಉನ್ದ್ಧಿ, ಉನ್ತಾತ್ | ಉನ್ತಮ್ | ಉನ್ತ || ಉನದಾನಿ | ಉನದಾವ | ಉನದಾಮ || **ಲಙ್** || ಆ+ಉನದ್+ತ್. ಔನತ್, ಔನದ್ | ಔನ್ತಾಮ್ | ಔನ್ದನ್ || ಸಿಪಿನಲ್ಲಿ 'ಸಿಪಿ ಧಾತೋ ರುರ್ವಾ' ಸೂತ್ರದಿಂದ ವಿಕಲ್ಪರುತ್ವ. ಔನಃ, ಔನತ್, ಔನದ್ | ಔನ್ತಮ್ | ಔನ್ತ || ಔನದಮ್ | ಔನ್ದ್ವ | ಔನ್ದ್ಮ || **ವಿಧಿಲಿಙ್** || ಉನ್ದ್ಯಾತ್ | **ಆಶೀರ್ಲಿಙ್** || 'ಅನಿದಿತಾಂ ಹಲ ಉಪಧಾಯಾಃ ಕ್ಙಿತಿ' ಸೂತ್ರ ದಿಂದ ಧಾತುನಕಾರಕ್ಕೆ ಲೋಪ. ಉದ್ಯಾತ್ | **ಲುಙ್** || ಔನ್ದೀತ್ | ಔನ್ದಿ ಷ್ಟಾಮ್ | ಔನ್ದಿಷುಃ || ಇತ್ಯಾದಿ. **ಲೃಙ್** || ಔನ್ದಿಷ್ಯತ್ ||

**ಅಞ್ಜೂ** ಧಾತು. ಊಕಾರ ಇತ್. 'ಸ್ವರತಿಸೂತಿಸೂಯತಿ—' ಸೂತ್ರದಿಂದ ವಿಕಲ್ಪ ಇಟ್. ಅನ್‌ಜ್ ಧಾತುಸ್ವರೂಪ. ಶ್ನಮ್ ಬಂದಾಗ ನಲೋಪ. ಅನಜ್

+ತಿ: 'ಚೋಃ ಕುಃ' ಅನಕ್ತಿ | ಅಙ್ಕ್ತಃ (ನಕಾರಕ್ಕೆ ಅನುಸ್ವಾರಪರಸವರ್ಣ) | ಅಞ್ಜನ್ತಿ || ಅನಕ್ಷಿ | ಅಙ್ಕ್ಥಃ | ಅಙ್ಕ್ಥ || ಅನಜ್ಮಿ | ಅಞ್ಜ್ವಃ | ಅಞ್ಜ್ಮಃ || **ಲಿಟ್** || 'ತಸ್ಮಾನ್ನುಟ್ ದ್ವಿಹಲಃ' ಸೂತ್ರದಿಂದ ಅಭ್ಯಾಸಕಾರ್ಯವಾದ ಮೇಲೆ ನುಟಾಗಮ. ಆನಞ್ಜ | ಆನಞ್ಜತುಃ | ಆನಞ್ಜುಃ || ಥಲಿನಲ್ಲಿ ಹಿಂದೆ ಹೇಳಿದಂತೆ ಇಡ್ವಿಕಲ್ಪ. ಇಟ್ ಬಂದರೆ ಆನಞ್ಜಿಥ. ಬಾರದಿದ್ದರೆ ಆನಙ್ಕ್ಥ | ಆನಞ್ಜಥುಃ | ಆನಞ್ಜ || ಆನಞ್ಜ | ಆನಞ್ಜಿವ | ಆನಞ್ಜಿಮ || **ಲುಟ್** || ಇಟ್ ವಿಕಲ್ಪ. ಅಞ್ಜಿತಾ, ಅಙ್ಕ್ತಾ | **ಲೃಟ್** || ಅಞ್ಜಿಷ್ಯತಿ, ಅಙ್ಕ್ಷ್ಯತಿ | **ಲೋಟ್** || ಅನಕ್ತು, ಅಙ್ಕ್ತಾತ್ | ಅಙ್ಕ್ತಾಮ್ | ಅಞ್ಜನ್ತು || ಅನಜ್+ಹಿ. ಅಲ್ಲೋಪ. ಹಿಗೆ ಧಿ. ಕುತ್ವ. ಅಙ್ಗ್ಧಿ, ಅಙ್ಕ್ತಾತ್ | ಅಙ್ಕ್ತಮ್ | ಅಙ್ಕ್ತ || ಅನಜಾನಿ | ಅನಜಾವ | ಅನಜಾಮ || **ಲಙ್** || ಆನಕ್, ಆನಗ್ | ಆಙ್ಕ್ತಾಮ್ | ಆಞ್ಜನ್ || ಆನಕ್, ಆನಗ್ | ಆಙ್ಕ್ತಮ್ | ಆಙ್ಕ್ತ || ಆನಜಮ್ | ಆಞ್ಜ್ವ | ಆಞ್ಜ್ಮ || **ವಿಧಿಲಿಙ್** || ಅಞ್ಜ್ಯಾತ್ | **ಆಶೀರ್ಲಿಙ್** || 'ಅನಿದಿತಾಂ—' ನಲೋಪ. ಅಜ್ಯಾತ್ || ಲುಙ್‌ನಲ್ಲಿಯೂ ಸಿಚಿಗೆ ವಿಕಲ್ಪ ಇಟ್ ಪ್ರಾಪ್ತವಾದರೆ ನಿತ್ಯ ಇಡಾಗಮ ಹೇಳುತ್ತಾನೆ.

ಅಞ್ಜ್ ಧಾತುವಿನ ಸಿಚಿಗೆ ನಿತ್ಯೇಡಾಗಮ ಹೇಳುವ ಸೂತ್ರ.

**೬೭೩. ಅಞ್ಜೇಃ ಸಿಚಿ || ೭–೨–೭೧ ||**

**ಅಞ್ಜೇಃ ಸಿಚೋ ನಿತ್ಯಮಿಟ್ ಸ್ಯಾತ್ । ಆಞ್ಜೀತ್ ।**

ದ್ವಿಪದ ಸೂತ್ರ. 'ಇಡತ್ಯರ್ತಿವ್ಯಯತೀನಾಮ್' ಸೂತ್ರದಿಂದ 'ಇಟ್' ಅನುವೃತ್ತಿ. 'ಸಿಚಿ' ಸಪ್ತಮ್ಯಂತವು ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. **ಸೂತ್ರಾರ್ಥ**—ಅಞ್ಜ್ ಧಾತುವಿನ ಪರದಲ್ಲಿರುವ ಸಿಚಿಗೆ ನಿತ್ಯವಾಗಿ ಇಡಾಗಮ ಬರುತ್ತದೆ. 'ಸ್ವರತಿಸೂತಿ—' ಸೂತ್ರದಿಂದ ಇಡಾಗಮ ಬರುತ್ತಿರುವಾಗ ಪುನಃ ಇಟ್ ಹೇಳಿದುದರಿಂದ ನಿತ್ಯವೆಂದು ಲಬ್ಧವಾಗುತ್ತದೆ. ಆಞ್ಜೀತ್ | ಆಞ್ಜಿಷ್ಟಾಮ್ | ಆಞ್ಜಿಷುಃ || ಆಞ್ಜೀಃ | ಆಞ್ಜಿಷ್ಟಮ್ | ಆಞ್ಜಿಷ್ಟ || ಆಞ್ಜಿಷಮ್ | ಆಞ್ಜಿಷ್ವ | ಆಞ್ಜಿಷ್ಮ || **ಲೃಙ್** || ಆಞ್ಜಿಷ್ಯತ್, ಆಙ್ಕ್ಷ್ಯತ್ ||

**|| ೧೭೫ || ತಞ್ಚೂ=ಸಂಕೋಚನೇ (ಸಣ್ಣದಾಗಿ ಮಾಡುವುದು.**

**ತನಕ್ತಿ | ತಞ್ಚಿತಾ ತಙ್ಕ್ತಾ ||**

**|| ೧೭೬ || ಓ ವಿಜೀ = ಭಯಚಲನಯೋಃ | (ಭಯ, ಚಲನ)**

**ವಿನಕ್ತಿ | ವಿಙ್ಕ್ತಃ | 'ವಿಜ ಇಟ್' ಇತಿ ಙಿತ್ವಮ್ || ವಿವಿಜಿಥ | ವಿಜಿತಾ | ಅವಿನಕ್ | ಅವಿಜೀತ್ ||**

ತಞ್ಚೂ ಧಾತು. ಇದೂ ಊದಿತ್ತಾದುದರಿಂದ ವಿಕಲ್ಪವಾಗಿ ಇಟ್ ಹೊಂದುತ್ತದೆ. ಇದೂ ಅಞ್ಚುವಿನಂತೆ ರೂಪಹೊಂದುತ್ತದೆ. ಸ್ವಾಭಾವಿಕ ಚಕಾರವಿರುವುದು ವಿಶೇಷ. ತನಕ್ತಿ | ತಙ್ಕ್ತಃ | ತಞ್ಚಂತಿ || ಇತ್ಯಾದಿ. ತತಞ್ಚ | ತಞ್ಚಿತಾ, ತಙ್ಕ್ತಾ | ತಞ್ಚಿಷ್ಯತಿ, ತಙ್ಕ್ಷ್ಯತಿ || ತನಕ್ತು | ಅತನಕ್, ಅತನಗ್ | ತಞ್ಚ್ಯಾತ್ | ತಚ್ಯಾತ್ | ಅತಞ್ಚೀತ್ | ಇಡಾಗಮ ಬಾರದಿದ್ದರೆ ಅತಾಙ್ಕ್ಷೀತ್ | ಅತಾಙ್ಕ್ತಾಮ್ | ಅತಾಙ್ಕ್ಷುಃ || ಅತಾಙ್ಕ್ಷೀಃ | ಅತಾಙ್ಕ್ತಮ್ | ಅತಾಙ್ಕ್ತ || ಅತಾಙ್ಕ್ಷಮ್ | ಅತಾಙ್ಕ್ಷ್ವ | ಅತಾಙ್ಕ್ಷ್ಮ || ಅತಞ್ಚಿಷ್ಯತ್, ಅತಙ್ಕ್ಷ್ಯತ್ |

ಓ ವಿಜೀ ಧಾತು. ಓಕಾರ, ಈಕಾರ ಇತ್. ವಿಜ್ ಧಾತುಸ್ವರೂಪ. ಸೇಟ್. ವಿಜಿರ್ ಎಂದು ತುದಾದಿಯಲ್ಲಿ ಬಂದಿದೆ. ಅದು ಅನಿಟ್. ವಿನಕ್ತಿ | ವಿಙ್ಕ್ತಃ | ವಿಞ್ಜನ್ತಿ || ಇತ್ಯಾದಿ. ವಿವೇಜ | ವಿವಿಜತುಃ | ವಿವಿಜುಃ || ವಿವಿಜ್ + ಇಥ ಎಂದಿರುವಾಗ ಗುಣಪ್ರಾಪ್ತವಾದರೆ 'ವಿಜ ಇಟ್' ಸೂತ್ರದಿಂದ ಇಡಾದಿಪ್ರತ್ಯಯ ಙಿತ್ತಾಗುವುದರಿಂದ ಗುಣನಿಷೇಧ ಬರುತ್ತದೆ. ವಿವಿಜಿಥ | ವಿವಿಜಥುಃ | ವಿವಿಜ || ವಿವೇಜ | ವಿವಿಜಿವ | ವಿವಿಜಿಮ || ಇಡಾದಿಯಲ್ಲಿ ಎಲ್ಲಾ ಙಿತ್ತಾಗುವುದರಿಂದ ಲಘೂಪಧಗುಣವಿಲ್ಲ. ವಿಜಿತಾ | ವಿಜಿಷ್ಯತಿ | ವಿನಕ್ತು | ಅವಿನಕ್, ಅವಿನಗ್ | ವಿಞ್ಜ್ಯಾತ್ | ವಿಜ್ಯಾತ್ || ಅವಿಜೀತ್ | ಅವಿಜಿಷ್ಟಾಮ್ | ಅವಿಜಿಷುಃ || ಇತ್ಯಾದಿ. ಅವಿಜಿಷ್ಯತ್ |

**|| ೧೭೭ || ಶಿಷ್ಲೃ = ವಿಶೇಷಣೇ (ಉಳಿಯುವಿಕೆ.)**

**ವಿ ಉಪಸರ್ಗ ಕೂಡಿದಾಗ ಇತರ ವ್ಯಾವೃತ್ತಿ ಅರ್ಥ.**

**ಶಿನಷ್ಟಿ | ಶಿಂಷ್ಟಃ | ಶಿಂಷಂತಿ | ಶಿನಕ್ಷಿ | ಶಿಶೇಷ | ಶಿಶೇಷಿಥ | ಶೇಷ್ಟಾ | ಶೇಕ್ಷ್ಯತಿ | ಹೇರ್ಧಿಃ | ಶಿಣ್ಢಿ | ಶಿನಷಾಣಿ | ಅಶಿನಟ್ | ಶಿಂಷ್ಯಾತ್ | ಶಿಷ್ಯಾತ್ | ಅಶಿಷತ್ | ಏವಮ್.**

**೧೭೮ || ಪಿಷ್ಲೃ = ಸಂಚೂರ್ಣನೇ (ಪುಡಿಮಾಡುವುದು.)**

**|| ೧೭೯ || ಭಞ್ಜೋ = ಆಮರ್ದನೇ (ಮುರಿಯುವುದು)**

**ಭನಕ್ತಿ || ಬಭಞ್ಜಿಥ, ಬಭಙ್ಕ್ಥ | ಭಙ್ಕ್ತಾ | ಭಙ್ಗ್ಧಿ | ಅಭಾಙ್ಕ್ಷೀತ್ ||**

ಶಿಷ್ ಧಾತು. ಲೃಕಾರ ಇತ್. ಇದಕ್ಕೆ ಲುಙ್ನಲ್ಲಿ ಅಙ್ ಬರುವುದು ಪ್ರಯೋಜನ. ಅನಿಟ್. ಪ್ರತ್ಯಯತಕಾರಕ್ಕೆ ಷ್ಟುತ್ವ. ಶಿನಷ್ಟಿ | ಶಿಂಷ್ಟಃ | ಶಿಂಷನ್ತಿ || ಸಿಪಿನಲ್ಲಿ ಷಕಾರಕ್ಕೆ ಕತ್ವ. ಸಿಪಿನ ಸಕಾರಕ್ಕೆ ಷತ್ವ. ಶಿನಕ್ಷಿ | ಶಿಂಷ್ಠಃ | ಶಿಂಷ್ಠ || ಶಿನಷ್ಮಿ | ಶಿಂಷ್ವಃ | ಶಿಂಷ್ಮಃ || ಶಿಶೇಷ | ಶಿಶಿಷತುಃ | ಶಿಶಿಷುಃ || ಅಜಂತವಾಗಲೀ ಅಕಾರವುಳ್ಳದ್ದಾಗಲೀ ಆಗದಿರುವುದರಿಂದ ಥಲಿನಲ್ಲಿ ವಿಕಲ್ಪ ಇಟ್ ಇಲ್ಲ. ಶಿಶೇಷಿಥ | ಶಿಶಿಷಥುಃ | ಶಿಶಿಷ || ಶಿಶೇಷ | ಶಿಶಿಷಿವ | ಶಿಶಿಷಿಮ || ಶೇಷ್ಟಾ | ಶೇಕ್ಷ್ಯತಿ || ಶಿನಷ್ಟು, ಶಿಂಷ್ಟಾತ್ | ಶಿಂಷ್ಟಾಮ್ | ಶಿಂಷನ್ತು || ಶಿನಷ್ + ಹಿ ಎಂದಿರುವಾಗ

'ಹುಝುಲ್ಭ್ಯೋ—' ಸೂತ್ರದಿಂದ ಹಿಗೆ ಧಿ ಆದೇಶ. ಅದಕ್ಕೆ ಷ್ಟುತ್ವ. ಶಿನಷ್+ಢಿ. ಅಲೋಪ ಬಂದಾಗ ನಕಾರಕ್ಕೆ ಅನುಸ್ವಾರ. 'ಝಲಾಂ ಜಶ್ ಝಶಿ' ಸೂತ್ರದಿಂದ ಷಕಾರಕ್ಕೆ ಡಕಾರ. ಶಿಂಡ್+ಢಿ. 'ಅನುಸ್ವಾರಸ್ಯ ಯಯಿ—' ಸೂತ್ರದಿಂದ ಅನುಸ್ವಾರಕ್ಕೆ ಪರಸವರ್ಣ. 'ಝರೋ ಝರಿ ಸವರ್ಣೇ' ಸೂತ್ರದಿಂದ ಡಕಾರಕ್ಕೆ ವಿಕಲ್ಪಲೋಪ. ಲೋಪ ಬಂದರೆ ಶಿಣ್ಢಿ. ಬಾರದಿದ್ದರೆ ಶಿಣ್ಡ್ಢಿ, ಶಿಂಷ್ಟಾತ್ | ಶಿಂಷ್ಟಮ್ ಶಿಂಷ್ಟ || ಶಿನಷಾಣಿ | ಶಿನಷಾವ | ಶಿನಷಾಮ || ಅಶಿನಷ್+ತ್. 'ಹಲ್ಙ್ಯಾಭ್ಯೋ—' ಸೂತ್ರದಿಂದ ತಲೋಪ. ಷಕಾರಕ್ಕೆ ಜಶ್ತ್ವ. 'ವಾವಸಾನೇ' ಚರ್ತ್ವವಿಕಲ್ಪ. ಅಶಿನಟ್, ಅಶಿನಡ್ | ಅಶಿಂಷ್ಟಾಮ್ | ಅಶಿಂಷನ್ || ಅಶಿನಟ್, ಅಶಿನಡ್, ಅಶಿಂಷ್ಟಮ್ | ಅಶಿಂಷ್ಟ || ಅಶಿನಷಮ್ | ಅಶಿಂಷ್ವ | ಅಶಿಂಷ್ಮ || ಶಿಂಷ್ಯಾತ್ | ಶಿಷ್ಯಾತ್ | ಲುಙಿನಲ್ಲಿ 'ಪುಷಾದಿದ್ಯುತಾದಿ—' ಸೂತ್ರದಿಂದ ಚ್ಲಿಗೆ ಅಙ್. ಅಶಿಷತ್ | ಅಶಿಷತಾಮ್ | ಅಶಿಷನ್ || ಇತ್ಯಾದಿ. ಅಶೇಕ್ಷ್ಯತ್ ||

**ಪಿಷ್** ಧಾತು. ಇದೂ್ದಿತ್ತಾದುದರಿಂದ ಶಿಷಿನಂತೇ ಆಗುತ್ತದೆ. ಪಿನಷ್ಟಿ | ಪಿಪೇಷ | ಪೇಷ್ಟಾ | ಪೇಕ್ಷ್ಯತಿ | ಪಿನಷ್ಟು | ಅಪಿನಟ್, ಅಪಿನಡ್ | ಪಿಂಷ್ಯಾತ್ | ಪಿಷ್ಯಾತ್ | ಅಪಿಷತ್ | ಅಪೇಕ್ಷ್ಯತ್ ||

**ಭಞ್ಜ್** ಧಾತು. ಓಕಾರ ಇತ್. ಅನಿಟ್. ಧಾತುನಕಾರಕ್ಕೆ 'ಶ್ನಾನ್ನಲೋಪಃ' ಸೂತ್ರದಿಂದ ಲೋಪ. ಭನಕ್ತಿ | ಭಙ್ಕ್ತಃ | ಭಞ್ಜನ್ತಿ || ಇತ್ಯಾದಿ. ಬಭಞ್ಜ | ಬಭಞ್ಜತುಃ | ಬಭಞ್ಜುಃ || ಭಾರದ್ವಾಜನಿಯಮದಿಂದ ಥಲಿನಲ್ಲಿ ವಿಕಲ್ಪ ಇಟ್. ಬಭಞ್ಜಿಥ, ಬಭಙ್ಕ್ಥ | ಬಭಞ್ಜಥುಃ | ಬಭಞ್ಜ || ಬಭಞ್ಜ | ಬಭಞ್ಜಿವ | ಬಭಞ್ಜಿಮ || ಭಙ್ಕ್ತಾ | ಭಙ್ಕ್ಷ್ಯತಿ || ಭನಕ್ತು. ಭಙ್ಕ್ತಾತ್ | ಭಙ್ಕ್ತಾಮ್ | ಭಞ್ಜನ್ತು || ಭಙ್ಗ್ಧಿ, ಭಙ್ಕ್ತಾತ್ | ಭಙ್ಕ್ತಮ್ | ಭಙ್ಕ್ತ || ಭನಜಾನಿ | ಭನಜಾವ ಭನಜಾಮ || ಅಭನಕ್, ಅಭನಗ್ | ಭಞ್ಜ್ಯತ್ | ಭಜ್ಯಾತ್ || ಅಭಾಙ್ಕ್ಷೀತ್ ಅಭಾಙ್ಕ್ತಾಮ್ | ಅಭಾಙ್ಕ್ಷುಃ || ಅಭಾಙ್ಕ್ಷೀಃ | ಅಭಾಙ್ಕ್ತಮ್ | ಅಭಾಙ್ಕ್ತ || ಅಭಾಙ್ಕ್ಷಮ್ | ಅಭಾಙ್ಕ್ಷ್ವ | ಅಭಾಙ್ಕ್ಷ್ಮ || ಅಭಙ್ಕ್ಷ್ಯತ್ ||

## || ೧೮೦ || ಭುಜ— ಪಾಲನಾಭ್ಯವಹಾರಯೋಃ

**(ರಕ್ಷಿಸುವುದು, ತಿನ್ನುವುದು.)**

**ಭುನಕ್ತಿ | ಭೋಕ್ತಾ | ಭೋಕ್ಷ್ಯತಿ | ಅಭುನಕ್ |**

ಭುಜ ಧಾತು. ಅನಿಟ್. ಭುನಕ್ತಿ | ಭುಙ್ಕ್ತಃ | ಭುಞ್ಜನ್ತಿ || ಇತ್ಯಾದಿ. ಬುಭೋಜ | ಬುಭುಜತುಃ | ಬುಭುಜುಃ || ಬುಭೋಜಿಥ | ಬುಭುಜಥುಃ | ಬುಭುಜ || ಬುಭೋಜ, ಬುಭುಜಿವ | ಬುಭುಜಿಮ || ಭೋಕ್ತಾ | ಭೋಕ್ಷ್ಯತಿ | ಭುನಕ್ತು | ಅಭುನಕ್, ಅಭುನಗ್ | ಭುಞ್ಜ್ಯತ್ | ಭುಜ್ಯಾತ್ ಅಭೌಕ್ಷೀತ್ | ಅಭೋಕ್ಷ್ಯತ್ || ಇದಕ್ಕೆ ಪಾಲನ ಭಿನ್ನಾರ್ಥದಲ್ಲಿ ಆತ್ಮನೇಪದ ಹೇಳುತ್ತಾನೆ.

ಭುಜ್ ಧಾತುವಿಗೆ ತಙ್ ಹೇಳುವ ಸೂತ್ರ.

೬೭೪. ಭುಜೋಽನವನೇ || ೧-೩-೬೬ ||

ತಙಾನೌ ಸ್ತಃ | ಓದನಂ ಭುಙ್ಕ್ತೇ | ಅನವನೇ ಕಿಮ್ ? ಮಹೀಂ ಭುನಕ್ತಿ |

|| ೧೮೧ || ಞಿಇನ್ಧೀ— ದೀಪ್ತೌ (ಪ್ರಕಾಶಿಸುವುದು.)

ಇನ್ಧೇ | ಇನ್ಧಾತೇ | ಇನ್ಧತೇ | ಇನ್ತ್ಸೇ | ಇನ್ಧ್ವೇ | ಇನ್ಧಾಞ್ಚಕ್ರೇ | ಇನ್ಧಿತಾ | ಇನ್ಧಾಮ್ | ಇನ್ಧಾತಾಮ್ | ಇನಧೈ | ಐನ್ಧ | ಐನ್ಧಾತಾಮ್ | ಐನ್ಧಾಃ |

|| ೧೮೨ || ವಿದ— ವಿಚಾರಣೇ || ವಿನ್ತೇ | ವೇತ್ತಾ ||

ಇತಿ ರುಧಾದಯಃ

ಭುಜಃ, ಅನವನೇ || ದ್ವಿಪದ ಸೂತ್ರ. 'ಅನುದಾತ್ತಙಿತಃ—' ಸೂತ್ರದಿಂದ 'ಆತ್ಮನೇಪದಮ್' ಅನುವೃತ್ತಿ. **ಸೂತ್ರಾರ್ಥ**—ಭುಜ ಧಾತುವಿಗೆ ಅನವನ ಅಂದರೆ ರಕ್ಷಣಾಭಿನ್ನಾರ್ಥದಲ್ಲಿ ಆತ್ಮನೇಪದಪ್ರತ್ಯಯ ಬರುತ್ತದೆ. ಆಗ ಅಭ್ಯವಹಾರ (ತಿನ್ನುವುದು) ಅರ್ಥದಲ್ಲಿ ಆತ್ಮನೇಪದವೆಂದಾಗುತ್ತದೆ. ಉದಾಹರಣೆ ತೋರಿಸುತ್ತಾನೆ. ಓದನಂ ಭುಙ್ಕ್ತೇ || ಅನ್ನವನ್ನು ತಿನ್ನುತ್ತಾನೆ. ಇಲ್ಲಿ ರಕ್ಷಣಾಭಿನ್ನಾರ್ಥವಾದುದರಿಂದ ಆತ್ಮನೇಪದ ಬಂದಿದೆ. ಅನವನೇ ಎಂದು ಏಕೆ ಹೇಳಬೇಕು ? ಮಹೀಂ ಭುನಕ್ತಿ || ಭೂಮಿಯನ್ನು ರಕ್ಷಿಸುತ್ತಾನೆ. ರಕ್ಷಣಾರ್ಥವಿರುವುದರಿಂದ ಪರಸ್ಮೈಪದೀ. ಆತ್ಮನೇಪದದಲ್ಲಿ ಕ್ರಮವಾಗಿ ಹೀಗೆ ರೂಪಗಳನ್ನು ಹೊಂದುತ್ತದೆ. ಭುಙ್ಕ್ತೇ | ಬುಭುಜೇ | ಭೋಕ್ತಾ | ಭೋಕ್ಷ್ಯತೇ | ಭುಙ್ಕ್ತಾಮ್ | ಅಭುಙ್ಕ್ತ | ಭುಞ್ಜೀತ ಭುಕ್ಷೀಷ್ಟ | ಅಭುಕ್ತ | ಅಭೋಕ್ಷ್ಯತ ||

**ಞಿಇನ್ಧೀ** ಧಾತು. 'ಆದಿರ್ಞಿಟುಡವಃ' ಞಿ ಇತ್ತಾಗಿ ಲೋಪವಾಗುತ್ತದೆ. ಈಕಾರ ಇತ್. ಇನ್‌ಧ್ ಧಾತುಸ್ವರೂಪ. ಆತ್ಮನೇಪದೀ. ಸೇಟ್. ಆತ್ಮನೇಪದದಲ್ಲಿ ಒಂಬತ್ತೂ ಙಿತ್ತಾದುದರಿಂದ ಶ್ನದ ಅಕಾರಕ್ಕೆ ಲೋಪಃ 'ಶ್ನಾನ್ನಲೋಪಃ' ಸೂತ್ರದಿಂದ ಧಾತುನಕಾರಕ್ಕೆ ಲೋಪ. ಇನ್‌ಧ್ + ತೇ. 'ಝಷಸ್ತಥೋಃ—' ಸೂತ್ರದಿಂದ ತಕಾರಕ್ಕೆ ಧಕಾರಾದೇಶ. ಪೂರ್ವಕ್ಕೆ ಜಶ್ತ್ವ. ಇನ್ಧೇ | ಇನ್ಧಾತೇ | ಇನ್ಧತೇ (ಝುಕ್ಕೆ ಅತ್) || ಇನ್‌ಧ್ + ಸೇ. 'ಖರಿಚ' ಇನ್ತ್ಸೇ | ಇನ್ಧಾಥೇ | ಇನ್ಧ್ವೇ || ಇನ್ಧೇ | ಇನ್ಧ್ವಹೇ | ಇನ್ಧ್ಮಹೇ || ಇಜಾದಿಯಾಗಿ ಗುರುಮತ್ತಾದುದರಿಂದ ಆಮ್. ಅದರ ಮೇಲೆ ಕೃಞಾದಿ. 'ಇನ್ಧಾಞ್ಚಕ್ರೇ | ಇನ್ಧಿತಾ | ಇನ್ಧಿಷ್ಯತೇ | ಇನ್‌ಧ್ + ತಾಮ್= ಇನ್ಧಾಮ್ | ಇನ್ಧಾತಾಮ್ | ಇನ್ಧತಾಮ್ || ಇನ್ತ್ಸ್ವ | ಇನ್ಧಾಥಾಮ್ | ಇನ್ಧ್ವಮ್ || ಇನಧೈ | ಇನಧಾವಹೈ | ಇನಧಾಮಹೈ || ಅ + ಇನ್‌ಧ್ + ತ=

ಐನ್ಧ | ಐನ್ಧಾತಾಮ್ | ಐನ್ಧತ || ಐನ್ಧಾಃ | ಐನ್ಧಾಥಾಮ್ | ಐನ್ಧ್ವಮ್ || ಐನ್ಧಿ | ಐನ್ಧ್ವಹಿ | ಐನ್ಧ್ಮಹಿ || ಇನ್ಧೀತ | ಇನ್ಧಿಷೀಷ್ಟ || ಐನ್ಧಿಷ್ಟ | ಐನ್ಧಿಷಾತಾಮ್ | ಐನ್ಧಿಷತ || ಇತ್ಯಾದಿ. ಐನ್ಧಿಷ್ಯತ ||

**ವಿದ** ಧಾತು. ಅನಿಟ್. ವಿನ್ತೇ | ವಿನ್ದಾತೇ | ವಿನ್ದತೇ || ವಿನ್ತ್ಸೇ | ವಿನ್ದಾಥೇ | ವಿನ್ಧ್ವೇ || ವಿನ್ದೇ | ವಿನ್ದ್ವಹೇ | ವಿನ್ದ್ಮಹೇ | ವಿವಿದೇ | ವೇತ್ತಾ | ವೇತ್ಸ್ಯತೇ || ವಿನ್ತ್ತಾಮ್ | ವಿನ್ದಾತಾಮ್ | ವಿನ್ದತಾಮ್ || ಇತ್ಯಾದಿ. ಅವಿನ್ತ | ವಿನ್ದೀತ | ವಿತ್ಸೀಷ್ಟ | ಅವಿದ್+ಸ್+ತ. 'ಝಲೋ ಝಲಿ' ಸಲೋಪ. 'ಖರಿಚ' ಅವಿತ್ತ | ಅವಿತ್ಸಾತಾಮ್ | ಅವಿತ್ಸತ || ಅವಿತ್ಥಾಃ | ಅವಿತ್ಸಾಥಾಮ್ | ಅವಿಧ್ವಮ್ || ಅವಿತ್ಸಿ | ಅವಿತ್ಸ್ವಹಿ | ಅವಿತ್ಸ್ಮಹಿ || ಅವೇತ್ಸ್ಯತ ||

## ೮. ಅಥ ತನಾದಯಃ

||೧೮೩|| ತನು=ವಿಸ್ತಾರೇ

ತನಾದಿಗಳಿಗೆ ಉ ವಿಕರಣ ಹೇಳುವ ಸೂತ್ರ.

೬೭೫. ತನಾದಿಕೃಞ್ಭ್ಯ ಉಃ ||೩-೧-೭೯||

**ಶಪೋಽಪವಾದಃ** | ತನೋತಿ, ತನುತೇ | ತತಾನ, ತೇನೇ | ತನಿತಾಸಿ, ತನಿತಾಸೇ | ತನಿಷ್ಯತಿ, ತನಿಷ್ಯತೇ, | ತನೋತು, ತನುತಾಮ್ | ಅತನೋತ್, ಅತನುತ | ತನುಯಾತ್, ತನ್ವೀತ | ತನ್ಯಾತ್, ತನಿಷೀಷ್ಟ | ಅತಾನೀತ್, ಅತನೀತ್ |

ತನ್ ಮುಂತಾದ ಧಾತುಗಳ ಸಮುದಾಯ ತನಾದಿಗಣವೆನಿಸುತ್ತದೆ. ಮೊದಲು ಉಭಯಪದಿಯನ್ನು ಹೇಳುತ್ತಾನೆ. **ತನು** ಧಾತು. ಸ್ವರಿತೇತ್. ಸೇಟ್. ತನ್+ತಿ ಎಂದಿರುವಾಗ ಶಪ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಉ ವಿಕರಣ ಹೇಳುತ್ತಾನೆ **ಸೂತ್ರಾರ್ಥ**–ತನಾದಿಧಾತುಗಳಿಗೂ ಕೃಞ್ಧಾತುವಿಗೂ ಕರ್ತ್ರರ್ಥಕಸಾರ್ವಧಾತುಕ ಪದವಾದಾಗ ಉ ಪ್ರತ್ಯಯ ಬರುತ್ತದೆ. ತನ್+ಉ+ತಿ. ತನು+ತಿ ಎಂದಿರುವಾಗ ತಿಪ್ ನಿಮಿತ್ತವಾಗಿ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಉಕಾರಕ್ಕೆ ಗುಣ. ತಸಾದಿಗಳು ಙಿತ್ತಾದುದರಿಂದ ಗುಣವಿಲ್ಲ. ತನೋತಿ | ತನುತಃ | ತನು+ಅನ್ತಿ. ಯಣ್. ತನ್ವನ್ತಿ || ತನೋಷಿ | ತನುಥಃ | ತನುಥ | ತನೋಮಿ | ತನು+ವಃ | 'ಲೋಪಶ್ಚಾಸ್ಯಾನ್ಯತರಸ್ಯಾಂ ಮ್ವೋಃ' ಸೂತ್ರದಿಂದ ವಿಕಲ್ಪವಾಗಿ ಉಕಾರಕ್ಕೆ ಲೋಪ. ತನ್ವಃ, ತನುವಃ | ತನ್ಮಃ, ತನುಮಃ ||

**ಲಿಟ್** || ತನ್‌ತನ್ + ಅ. ಅಭ್ಯಾಸಕಾರ್ಯಮ್. 'ಅತ ಉಪಧಾಯಾಃ' ವೃದ್ಧಿ. ತತಾನ | ತತನ್ + ಅತುಸ್ ಎಂದಿರುವಾಗ 'ಅತ ಏಕಹಲ್ ಮಧ್ಯೇ—' ಸೂತ್ರ ದಿಂದ ಏತ್ವಾಭ್ಯಾಸಲೋಪ. ತೇನತುಃ | ತೇನುಃ || 'ಥಲಿ ಚ ಸೇಟಿ' ಏತ್ವಾಭ್ಯಾಸ ಲೋಪ. ತೇನಿಥ | ತೇನಥುಃ | ತೇನ || ತತಾನ, ತತನ | ತೇನಿವ | ತೇನಿಮ || **ಲುಟ್** || ತನಿತಾ || ಇತ್ಯಾದಿ. **ಲೃಟ್** || ತನಿಷ್ಯತಿ || ಇತ್ಯಾದಿ. **ಲೋಟ್** || ತನೋತು, ತನುತಾತ್ | ತನುತಾಮ್ | ತನ್ವಂತು || ತನು + ಹಿ. 'ಉತಶ್ಚ ಪ್ರತ್ಯಯಾತ್—' ಸೂತ್ರದಿಂದ ಹಿಲೋಪ. ತನು, ತನುತಾತ್ | ತನುತಮ್ | ತನುತ || ತನವಾನಿ | ತನವಾವ | ತನವಾಮ || ಆಟ್ ಪಿತ್ತಾದುದರಿಂದ ಗುಣ, ಅವಾದೇಶ ಬಂದಿದೆ. **ಲಙ್** || ಅತನೋತ್ | ಅತನುತಾಮ್ | ಅತನ್ವನ್ || ಅತನೋಃ | ಅತನುತಮ್ | ಅತನುತ || ಅತನವಮ್ | ಅತನುವ, ಅತನ್ವ | ಅತನುಮ, ಅತನ್ಮ || **ವಿಧಿಲಿಙ್** || ತನುಯಾತ್ | ತನುಯಾತಾಮ್ | ತನುಯುಃ || ಇತ್ಯಾದಿ. **ಆಶೀರ್ಲಿಙ್** || ತನ್ಯಾತ್ | ತನ್ಯಾಸ್ತಾಮ್ | ತನ್ಯಾಸುಃ|| ಇತ್ಯಾದಿ. **ಲುಙ್** || 'ಅತೋಃ ಹಲಾದೇರ್ಲಘೋಃ' ಸೂತ್ರದಿಂದ ಸಿಚಿನಲ್ಲಿ ವಿಕಲ್ಪ ವೃದ್ಧಿ. ಅತಾನೀತ್ | ಅತಾನಿಷ್ಟಾಮ್ | ಅತಾನಿಷುಃ || ಅತಾನೀಃ | ಅತಾನಿಷ್ಟಮ್ | ಅತಾನಿಷ್ಟ || ಅತಾನಿಷಮ್ | ಅತಾನಿಷ್ವ | ಅತಾನಿಷ್ಮ || ಹೀಗೆಯೇ ಅತನೀತ್ || ಇತ್ಯಾದಿ. **ಲೃಙ್** || ಅತನಿಷ್ಯತ್ || ಇತ್ಯಾದಿ. **ಆತ್ಮನೇಪದ ಲಟ್** || ತನುತೇ | ತನ್ವಾತೇ | ತನ್ವತೇ || ತನುಷೇ | ತನ್ವಾಥೇ | ತನುಧ್ವೇ|| ತನ್ವೇ | ತನುವಹೆ, ತನ್ವಹೇ | ತನುಮಹೇ, ತನ್ಮಹೇ || **ಲಿಟ್** || ಏತ್ವಾಭ್ಯಾಸಲೋಪ. ತೇನೇ | ತೇನಾತೇ | ತೇನಿರೇ || ತೇನಿಷೇ | ತೇನಾಥೇ | ತೇನಿಧ್ವೇ || ತೇನೇ | ತೇನಿವಹೇ | ತೇನಿಮಹೇ || **ಲುಟ್** || ತನಿತಾ | ತನಿತಾಸೇ || ಇತ್ಯಾದಿ. **ಲೃಟ್** || ತನಿಷ್ಯತೇ || **ಲೋಟ್** || ತನುತಾಮ್ || **ಲಙ್** || ಅತನುತ || **ವಿಧಿಲಿಙ್** || ತನ್ವೀತ || **ಆಶೀರ್ಲಿಙ್** || ತನಿಷೀಷ್ಟ || **ಲುಙ್** || ಅತನ್ + ಸ್ + ತ ಎಂದಿರುವಾಗ ಸಿಚಿಗೆ ವಿಕಲ್ಪಲೋಪ ಹೇಳುತ್ತಾನೆ.

ಸಿಚಿಗೆ ವಿಕಲ್ಪ ಲುಕ್ ಹೇಳುವ ಸೂತ್ರ.

೬೭೬. **ತನಾದಿಭ್ಯಸ್ತಥಾಸೋಃ** || ೨-೪-೭೯ ||

**ತನಾದೇಃ ಸಿಚೋ ವಾ ಲುಕ್ ಸ್ಯಾತ್ತಥಾಸೋಃ | ಅತತ, ಅತನಿಷ್ಟ | ಅತಥಾಃ, ಅತನಿಷ್ಠಾಃ | ಅತನಿಷ್ಯತ್, ಅತನಿಷ್ಯತ |**

೧೮೪೪ || **ಷಣು=ದಾನೇ || ಸನೋತಿ, ಸನುತೇ ||**

ತನಾದಿಭ್ಯಃ, ತಥಾಸೋಃ || ದ್ವಿಪದ ಸೂತ್ರ. 'ಗಾತಿಸ್ಥಾ—' ಸೂತ್ರದಿಂದ 'ಸಿಚಃ', ವಿಭಾಷಾಘ್ರಾ—' ಸೂತ್ರದಿಂದ 'ವಿಭಾಷಾ', 'ಣ್ಯಕ್ಷತ್ರಿಯಾರ್ಷ—'

ಸೂತ್ರದಿಂದ 'ಲುಕ್' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ತನಾದಿಗಳ ಪರದಲ್ಲಿರುವ ಸಿಚಿಗೆ ತ, ಥಾಸ್ ಪ್ರತ್ಯಯಗಳು ಪರವಾದಾಗ ವಿಕಲ್ಪವಾಗಿ ಲುಕ್ ಬರುತ್ತದೆ. ಪ್ರಕೃತ ತ ಪರದಲ್ಲಿರುವುದರಿಂದ ಸಿಚಿಗೆ ಲುಕ್ ಬಂದರೆ ಅತಸ್+ತ ಎಂದಾಗುತ್ತದೆ. 'ಅನುದಾತ್ತೋಪದೇಶ—' (ಸೂ. ೫೬೦) ಸೂತ್ರದಿಂದ ನಕಾರಕ್ಕೆ ಲೋಪ. ಹೀಗೇ ಥಾಸಿನಲ್ಲಿಯೂ ಆಗುತ್ತದೆ. ಅತತ. ಲೋಪ ಬಾರದಿದ್ದರೆ ಸಿಚಿಗೆ ಇಡಾಗಮ. ಅತನಿಷ್ಟ | ಅತನಿಷಾತಾಮ್ | ಅತನಿಷತ ॥ ಅತಥಾಃ, ಅತನಿಷ್ಠಾಃ | ಅತನಿಷಾಥಾಮ್ | ಅತನಿಢ್ವಮ್ ॥ ಅತನಿಷಿ | ಅತನಿಷ್ವಹಿ ॥ **ಲೃಙ್** ॥ ಅತನಿಷ್ಯತ್, ಅತನಿಷ್ಯತ ॥ ಇತ್ಯಾದಿ.

**ಷಣು** ಧಾತು. ಸೇಟ್. 'ಧಾತ್ವಾದೇಃ ಷಃ ಸಃ' ಆದಿಗೆ ಸತ್ವ ಬಂದರೆ ಣಕಾರವೂ ಹೋಗಿ ನ ಉಳಿಯುತ್ತದೆ. ಸನೋತಿ, ಸನುತೇ ॥ ಸಸಾನ | ಸೇನತುಃ | ಸೇನುಃ ॥ ಸೇನೇ | ಸನಿತಾ (೨) | ಸನಿಷ್ಯತಿ, ಸನಿಷ್ಯತೇ | ಸನೋತು, ಸನುತಾಮ್ | ಅಸನೋತ್, ಅಸುನುತ | ಸನುಯಾತ್, ಸನ್ವೀತ | **ಆಶೀರ್ಲಿಙಿ**ನಲ್ಲಿ ಸನ್+ಯಾತ್ ಎಂದಿರುವಾಗ ಆತ್ವವಿಕಲ್ಪ ಹೇಳುತ್ತಾನೆ.

ಜನ್, ಸನ್, ಖನ್ ಧಾತುಗಳಿಗೆ ಆತ್ವವಿಕಲ್ಪ ಹೇಳುವ ಸೂತ್ರ.

**೬೭೭, ಯೇ ವಿಭಾಷಾ ॥ ೬-೪-೪೩ ॥**

**ಜನಸನಖನಾಮಾತ್ವಂ ವಾ ಯಾದೌ ಕ್ಙಿತಿ | ಸಾಯಾತ್, ಸನ್ಯಾತ್ |**

ದ್ವಿಪದ ಸೂತ್ರ. 'ಜನಸನಖನಾಂ ಸನ್ ಝಲೋಃ' ಸೂತ್ರದಿಂದ 'ಜನಸನಖನಾಂ', 'ವಿಡ್ವನೋರನುನಾಸಿಕಸ್ಯಾತ್' ಸೂತ್ರದಿಂದ 'ಆತ್', 'ಅನುದಾತ್ತೋಪದೇಶ ' ಸೂತ್ರದಿಂದ 'ಕ್ಙಿತಿ' ಪದಗಳು ಅನುವೃತ್ತವಾಗುತ್ತವೆ. 'ಯೇ' ಕ್ಙಿತಿಗೆ ವಿಶೇಷಣವಾದುದರಿಂದ ತದಾದಿಲಾಭ. **ಸೂತ್ರಾರ್ಥ**—ಜನ್, ಸನ್, ಖನ್ ಧಾತುಗಳಿಗೆ ಯಕಾರಾದಿಯಾದ ಕಿತ್, ಙಿತ್ತಾದ ಪ್ರತ್ಯಯಗಳು ಪರದಲ್ಲಿರುವಾಗ ಆತ್ವವಿಕಲ್ಪವಾಗಿ ಬರುತ್ತದೆ. ಯಾಸುಟ್ ಲಿಙ್ ಙಿತ್ತಾದುದರಿಂದ ಆತ್ವ ಬಂದರೆ ಸಾಯಾತ್ | ಸಾಯಾಸ್ತಾಮ್ | ಸಾಯಾಸುಃ ॥ ಇತ್ಯಾದಿ ರೂಪಗಳಾಗುತ್ತವೆ. ಆತ್ವ ಬಾರದಿದ್ದರೆ ಸನ್ಯಾತ್ | ಸನ್ಯಾಸ್ತಾಮ್ | ಸನ್ಯಾಸುಃ ॥ ಇತ್ಯಾದಿ ರೂಪಗಳಾಗುತ್ತವೆ.

**ಲುಙಿ**ನಲ್ಲಿ ಅಸನ್+ಸ್+ತ ಎಂದಿರುವಾಗ ಹಿಂದಿನಂತೆ 'ತನಾದಿಭ್ಯಸ್ತಥಾಸೋಃ' ಸೂತ್ರದಿಂಡ ವಿಕಲ್ಪವಾಗಿ ಸಿಚಿಗೆ ಲೋಪ. ಅಸನ್+ತ ಎಂದಿರುವಾಗ ಆತ್ವ ಹೇಳುತ್ತಾನೆ.

ಜನಾದಿಗಳಿಗೆ ಆತ್ವ ಹೇಳುವ ಸೂತ್ರ.

**೬೭೮. ಜನಸನಖನಾಂ ಸನ್ಝಲೋಃ ॥ ೬-೪-೪೨ ॥**

**ಏಷಾಮಾಕಾರೋಽನ್ತಾದೇಶಃ ಸ್ಯಾತ್, ಸನಿ ಝಲಾದೌ ಕ್ಙಿತಿ। ಅಸಾತ, ಅಸನಿಷ್ಟ । ಅಸಾಥಾಃ, ಅಸನಿಷ್ಠಾಃ ॥**

ದ್ವಿಪದ ಸೂತ್ರ. 'ವಿಡ್ವನೋಃ—' ಸೂತ್ರದಿಂದ 'ಆತ್', 'ಅನುದಾತ್ತೋಪದೇಶ—' ಸೂತ್ರದಿಂದ 'ಕ್ಙಿತಿ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ—** ಜನ್, ಸನ್, ಖನ್, ಧಾತುಗಳಿಗೆ ಸನ್ ಮತ್ತು ಝಲಾದಿಯಾದ ಕಿತ್ ಙಿತ್ ಪ್ರತ್ಯಯುಪರವಲ್ಲಿರುವಾಗ ಆತ್ವ ಬರುತ್ತದೆ. ತ ಅಪಿತ್ತಾದುದರಿಂದ ಙಿತ್ತಾಗಿದೆ. ಆದುದರಿಂದ ಸನಿಗೆ ಆತ್ವ ಬಂದರೆ ಅಸಾತ ಎಂದಾಗುತ್ತದೆ. ಸಿಚ್ ಲೋಪವಾಗದಿದ್ದರೆ ಇಡಾಗಮ ಬಂದು ಅಸನಿಷ್ಟ ಎಂದಾಗುತ್ತದೆ. ಸಿಚ್ ಕಿತ್ ಅಥವಾ ಙಿತ್ತಾಗದಿದ್ದುದರಿಂದ ಆತ್ವಾದಿಗಳಿಲ್ಲ. ಅಸನಿಷಾತಾಮ್ । ಅಸನಿಷತ ॥ ಅಸನಿಷ್ಠಾಃ, ಅಸಾಥಾಃ । ಅಸನಿಷಾಥಾಮ್ । ಅಸನಿಢ್ವಮ್ ॥ ಅಸನಿಷಿ । ಅಸನಿಷ್ವಹಿ । ಅಸನಿಷ್ಮಹಿ ॥ ಲೃಙ್ ॥ ಅಸನಿಷ್ಯತ್, ಅಸನಿಷ್ಯತ ॥

॥ ೧೮೫ ॥ ಕ್ಷಣು—ಹಿಂಸಾಯಾಮ್

**ಕ್ಷಣೋತಿ, ಕ್ಷಣುತೇ ॥ ಹ್ಮ್ಯನ್ತೇತಿ ನ ವೃದ್ಧಿಃ । ಅಕ್ಷಣೀತ್, ಅಕ್ಷತ, ಅಕ್ಷಣಿಷ್ಟ । ಅಕ್ಷಥಾಃ, ಅಕ್ಷಣಿಷ್ಠಾಃ ॥**

॥ ೧೮೬ ॥ ಕ್ಷಿಣು—ಚ

**'ಉಪ್ರತ್ಯಯೇ ಲಘೂಪಧಸ್ಯ ಗುಣೋ ವಾ', ಕ್ಷೇಣೋತಿ, ಕ್ಷಿಣೋತಿ । ಕ್ಷೇಣಿತಾ । ಅಕ್ಷೇಣೀತ್, ಅಕ್ಷಿತ, ಅಕ್ಷೇಣಿಷ್ಟ ॥**

॥ ೧೮೭ ॥ ತೃಣು—ಅದನೇ (ತಿನ್ನುವುದು.)

**ತೃಣೋತಿ, ತರ್ಣೋತಿ. ತೃಣುತೇ, ತರ್ಣುತೇ ।**

**ಕ್ಷಣು** ಧಾತು. ಇದೂ ಹಿಂದಿನಂತೇ ರೂಪ ಹೊಂದುತ್ತದೆ. ಸೇಟ್. ಕ್ಷಣೋತಿ, ಕ್ಷಣುತೇ । ಚಕ್ಷಾಣ, ಚಕ್ಷಣೇ ॥ ಕ್ಷಣಿತಾ (೨) । ಕ್ಷಣಿಷ್ಯತಿ, ಕ್ಷಣಿಷ್ಯತೇ । ಕ್ಷಣೋತು, ಕ್ಷಣುತಾಮ್ । ಅಕ್ಷಣೋತ್, ಅಕ್ಷಣುತ । ಕ್ಷಣುಯಾತ್, ಕ್ಷಣ್ವೀತ । ಕ್ಷಣ್ಯಾತ್, ಕ್ಷಣಿಷೀಷ್ಟ ॥ **ಲುಙಿ**ನಲ್ಲಿ ವೃದ್ಧಿ ಪ್ರಾಪ್ತವಾದರೆ 'ಹ್ಮ್ಯನ್ತಕ್ಷಣಶ್ವಸಜಾಗೃಣಿಶ್ವ್ಯೇದಿತಾಮ್' ಸೂತ್ರದಿಂದ ನಿಷೇಧ ಬಂದು ಅಕ್ಷಣೀತ್ ಎಂದಾಗುತ್ತದೆ. ಅಕ್ಷಣಿಷ್ಟಾಮ್ । ಅಕ್ಷಣಿಷುಃ ॥ ಇತ್ಯಾದಿ. ಅಕ್ಷಣಿಷ್ಯತ್, ಅಕ್ಷಣಿಷ್ಯತ ॥

**ಕ್ಷಿಣು** ಧಾತುವೂ ಹೀಗೆಯೇ ರೂಪ ಹೊಂದುತ್ತದೆ. ಆರ್ಧಧಾತುಕದಲ್ಲಿ ಲಘೂಪಧಗುಣವಿಶೇಷ. ಕ್ಷೇಣಿತಾ ಇತ್ಯಾದಿ. ಲುಙಿನಲ್ಲಿ 'ನೇಟಿ' ವೃದ್ಧಿನಿಷೇಧ

ಬರುವುದರಿಂದ ಅಕ್ಷ್ಣೇಣೀತ್ ಎಂದಾಗುತ್ತದೆ. ಕೆಲವರು ಉ ವಿಕರಣ ಪರವಾದಾಗ ಲಘೂಪಧಗುಣವನ್ನು ವಿಕಲ್ಪವಾಗಿ ಹೇಳುತ್ತಾರೆ. ಆಗ ನಾಲ್ಕು ರೂಪಗಳಾಗುತ್ತವೆ. **ಲಟ್** || ಕ್ಷೇಣೋತಿ, ಕ್ಷಿಣೋತಿ, ಕ್ಷೇಣುತೇ, ಕ್ಷಿಣುತೇ || ಆರ್ಧಧಾತುಕದಲ್ಲಿ ಗುಣದಿಂದ ಒಂದೇ ರೂಪ. **ಲುಙ್**ನಲ್ಲಿ ಅಕ್ಷೇಣೀತ್, ಅಕ್ಷಿತ, ಅಕ್ಷೇಣಿಷ್ಟ ಎಂದು ಮೂರು ರೂಪಗಳಾಗುತ್ತವೆ.

ತೃಣು ಧಾತು. ಇತಯೂ ಉಪ್ರತ್ಯಯವನ್ನು ನಿಮಿತ್ತೀಕರಿಸಿ ಲಘೂಪಧ ಗುಣ ವಿಕಲ್ಪವಾಗಿ ಬಂದರೆ ಸಾರ್ವಧಾತುಕಗಳಲ್ಲಿ ನಾಲ್ಕು ರೂಪಗಳಾಗುತ್ತವೆ. ತೃಣೋತಿ, ತರ್ಣೋತಿ, ತೃಣುತೇ, ತರ್ಣುತೇ || ತತರ್ಣ, ತತೃಣೇ || ತರ್ಣಿತಾ(೨) | ತರ್ಣಿಷ್ಯತಿ, ತರ್ಣಿಷ್ಯತೇ|| ತರ್ಣೋತು, ತೃಣೋತು, ತರ್ಣುತಾಮ್, ತೃಣುತಾಮ್| ಅತೃಣೋತ್, ಅತರ್ಣೋತ್, ಅತೃಣುತ, ಅತರ್ಣುತ || ತೃಣುಯಾತ್, ತರ್ಣುಯಾತ್, ತೃಣ್ವೀತ, ತರ್ಣ್ವೀತ || ತೃಣ್ಯಾತ್, ತರ್ಣಿಷೀಷ್ಟ || ಅತರ್ಣೀತ್, ಅತೃತ, ಅತರ್ಣಿಷ್ಟ || ಅತರ್ಣಿಷ್ಯತ್, ಅತರ್ಣಿಷ್ಯತ ||

|| ೧೮೮ || ಡುಕೃಞ್ = ಕರಣೇ (ಮಾಡುವುದು.) ಕರೋತಿ ||

ಕೃಞ್‌ನ ಅಕಾರಕ್ಕೆ ಉಕಾರ ಹೇಳುವ ಸೂತ್ರ.

**೬೭೯, ಅತ ಉತ್ ಸಾರ್ವಧಾತುಕೇ || ೬-೪-೧೧೦ ||**

**ಉಪ್ರತ್ಯಯಾನ್ತಸ್ಯ ಕೃಞೋಽಕಾರಸ್ಯ ಉಃ ಸ್ಯಾತ್ ಸಾರ್ವಧಾತುಕೇ ಕ್ಙಿತಿ। ಕುರುತಃ ||**

ಕೃಞ್ ಧಾತು. 'ಆದಿರ್ಞಿಟುಡವಃ' ಸೂತ್ರದಿಂದ 'ಡು' ಇತ್ತಾಗುತ್ತದೆ. ಕೃ+ಉ+ತಿ. ಉ ನಿಮಿತ್ತವಾಗಿ ಋಕಾರಕ್ಕೆ ತಿ ನಿಮಿತ್ತವಾಗಿ ಉಕಾರಕ್ಕೆ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ. ಕರ್+ಓ+ತಿ=ಕರೋತಿ. ಕೃ+ಉ+ತಸ್. ಉ ನಿಮಿತ್ತವಾಗಿ ಗುಣಬಂದಾಗ ಕರ್+ಉ+ತಸ್ ಎಂದಿರುವಾಗ ಧಾತುವಿನ ಅಕಾರಕ್ಕೆ ಉತ್ವ ಹೇಳುತ್ತಾನೆ.

ತ್ರಿಪದ ಸೂತ್ರ. 'ನಿತ್ಯಂ ಕರೋತೇಃ' ಸೂತ್ರದಿಂದ 'ಕರೋತೇಃ', 'ಉತಶ್ಚ ಪ್ರತ್ಯಯಾದಸಂಯೋಗಪೂರ್ವಾತ್' ಸೂತ್ರದಿಂದ 'ಉತಃ' ಪದಗಳು ಅನುವೃತ್ತವಾಗುತ್ತವೆ. 'ಉತಃ' ಕರೋತೇಃ ಎಂಬುದಕ್ಕೆ ವಿಶೇಷಣವಾದುದರಿಂದ ತದಂತ ಲಾಭ. 'ಗಮಹನ—' ಸೂತ್ರದಿಂದ ಅನುವೃತ್ತವಾದ 'ಕ್ಙಿತಿ' ಎಂಬುದು ಸಾರ್ವಧಾತುಕದಲ್ಲಿ ಅನ್ವಯಹೊಂದುತ್ತದೆ. **ಸೂತ್ರಾರ್ಥ**— ಉಪ್ರತ್ಯಯಾಂತವಾದ ಕೃಞ್ ಧಾತುವಿನ ಅಕಾರಕ್ಕೆ ಕಿತ್ ಅಥವಾ ಙಿತ್ತಾದ ಸಾರ್ವಧಾತುಕಪರದಲ್ಲಿರುವಾಗ ಉಕಾರಾದೇಶ ಬರುತ್ತದೆ. ಕರು+ತಸ್ ಎಂದಿರುವಾಗ 'ಸಾರ್ವಧಾತುಕಮಪಿತ್'

ಸೂತ್ರದಿಂದ ತಸಾದಿಗಳು ಙಿತ್ತಾದುದರಿಂದ ಅಕಾರಕ್ಕೆ ಉಕಾರ ಬಂದರೆ ಕುರುತಃ —ಕುರುತಃ ಎಂದಾಗುತ್ತದೆ. ದ್ವಿಬಹುವಚನಗಳು ಙಿತ್ತಾಗುವುದರಿಂದ ಉಕ ಕುರು+ಅನ್ತಿ ಎಂದಿರುವಾಗ 'ಇಕೋ ಯಣಚಿ' ಸೂತ್ರದಿಂದ ಯಣ್ ಬಂದು ಕುರ್ವ್+ಅನ್ತಿ ಬಂದು ರೂಪವಾದಾಗ ಅಲ್ಲಿ 'ಹಲಿ ಚ' ಸೂತ್ರದಿಂದ ದೀರ್ಘ ಪ್ರಾಪ್ತವಾದರೆ ನಿಷೇಧ ಹೇಳುತ್ತಾನೆ.

### ಉಪಧಾದೀರ್ಘನಿಷೇಧ ಹೇಳುವ ಸೂತ್ರ.

### ೬೮೦. ನ ಭಕುರ್ಛುರಾಮ್ || ೮-೨-೭೯ ||

ಭಸ್ಯ ಕುರ್ಛುರೋರುಪಧಾಯಾ ನ ದೀರ್ಘಃ || ಕುರ್ವನ್ತಿ ||

ದ್ವಿಪದ ಸೂತ್ರ. 'ಭಸ್ಯ' ಅಧಿಕಾರ. 'ರ್ವೋರುಪಧಾಯಾಃ—' ಸೂತ್ರದಿಂದ 'ಉಪಧಾಯಾಃ', 'ದೀರ್ಘಃ' ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ— ಭಸಂಜ್ಞೆಯುಳ್ಳ ಕುರ್, ಛುರ್‌ಗಳ ಉಪಧೆಗೆ ದೀರ್ಘ ಬರುವುದಿಲ್ಲ. ಪ್ರಕೃತ ಕುರ್ ಇರುವುದರಿಂದ ಇದರ ಉಪಧೆಗೆ ದೀರ್ಘನಿಷೇಧ ಬಂದರೆ ಕುರ್ವನ್ತಿ ಎಂದು ರೂಪವಾಗುತ್ತದೆ. ಕೃ+ಉ+ಸಿ. ಹಿಂದಿನಂತೆ ಎರಡು ಸಲ ಗುಣ. 'ಆದೇಶಪ್ರತ್ಯಯಯೋಃ' ಷತ್ವ. ಕರೋಷಿ | ಕುರುಥಃ | ಕುರುಥ || ಕರೋಮಿ | ಕುರು+ವಸ್, ಕುರು+ಮಸ್ ಎಂದಿರುವಾಗ 'ಲೋಪಶ್ಚಾನ್ಯತರಸ್ಯಾಂ—' ಸೂತ್ರದಿಂದ ವಿಕಲ್ಪಲೋಪ ಪ್ರಾಪ್ತವಾದರೆ ನಿತ್ಯಲೋಪ ಹೇಳುತ್ತಾನೆ.

### ಕೃಞಿನ ಉಕಾರಕ್ಕೆ ಲೋಪ ಹೇಳುವ ಸೂತ್ರ.

### ೬೮೧. ನಿತ್ಯಂ ಕರೋತೇಃ || ೬-೪-೧೦೮ ||

**ಕರೋತೇಃ ಪ್ರತ್ಯಯೋಕಾರಸ್ಯ ನಿತ್ಯಂ ಲೋಪೋ ಮ್ವೋಃ ಪರಯೋಃ | ಕುರ್ವಃ | ಕುರ್ಮಃ | ಕುರುತೇ | ಚಕಾರ, ಚಕ್ರೇ | ಕರ್ತಾಸಿ, ಕರ್ತಾಸೇ | ಕರಿಷ್ಯತಿ, ಕರಿಷ್ಯತೇ | ಕರೋತು, ಕುರುತಾಮ್ | ಅಕರೋತ್, ಅಕುರುತ ||**

ದ್ವಿಪದ ಸೂತ್ರ. 'ಉತಶ್ಚ ಪ್ರತ್ಯಯಾತ್—' ಸೂತ್ರದಿಂದ 'ಉತಶ್ಚ ಪ್ರತ್ಯಯಾತ್', 'ಲೋಪಶ್ಚಾಸ್ಯಾ—' ಸೂತ್ರದಿಂದ 'ಲೋಪಃ', ಮ್ವೋಃ' ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ–ಕೃಞ್ ಧಾತುವಿನ ಪ್ರತ್ಯಯವಾದ ಉಕಾರಕ್ಕೆ ಮ, ವ ಪರವಾದಾಗ ನಿತ್ಯವಾಗಿ ಲೋಪ ಬರುತ್ತದೆ. ಹೀಗೆ ನಿತ್ಯವಾಗಿ ಲೋಪ ಬಂದರೆ ಕುರ್ವಃ, ಕುರ್ಮಃ ಎಂದಾಗುತ್ತದೆ. ಆತ್ಮನೇಪದದಲ್ಲಿ ಕುರುತೇ | ಕುರ್ವಾತೇ | ಕುರ್ವತೇ || ಕುರುಷೇ | ಕುರ್ವಾಥೇ | ಕುರುಧ್ವೇ || ಕುರ್ವೇ |

ಕುರ್ವಹೇ । ಕುರ್ಮಹೇ ॥ ಎಂದಾಗುತ್ತದೆ. ಹಿಂದಿನಂತೆ ಉತ್ತ್ವಾದಿಗಳನ್ನು ತಿಳಿಯಬೇಕು.

**ಲಿಟ್** ॥ ಚಕಾರ । ಚಕ್ರೇ ॥ (ಹಿಂದೆ ಬಂದಿದೆ.) **ಲುಟ್** ॥ ಕೃ + ತಾ. ಗುಣ. ಕರ್ತಾ (೨) ॥ ಕರ್ತಾಸಿ, ಕರ್ತಾಸೇ ॥ ಇತ್ಯಾದಿ. **ಲೃಟ್** ॥ 'ಋದ್ಧನೋಃ ಸ್ಯೇ' ಸೂತ್ರದಿಂದ ಸ್ಯಕ್ಕೆ ಇಡಾಗಮ. ಗುಣ ಕರಿಷ್ಯತಿ, ಕರಿಷ್ಯತೇ ॥ **ಲೋಟ್** ॥ ಕರೋತು, ಕುರುತಾತ್ । ಕುರುತಾಮ್ । ಕುರ್ವನ್ತು ॥ ಕುರು, ಕುರುತಾತ್ । ಕುರುತಮ್ । ಕುರುತ, ॥ ಕರವಾಣಿ । ಕರವಾವ । ಕರವಾಮ ॥ ಆ.— ಕುರುತಾಮ್ । ಕುರ್ವಾತಾಮ್ । ಕುರ್ವತಾಮ್ ॥ ಕುರುಷ್ವ । ಕುರ್ವಾಥಾಮ್ । ಕುರುಧ್ವಮ್ ॥ ಕರವೈ । ಕರವಾವಹೈ ॥ ಕರವಾಮಹೈ । **ಲಙ್** ॥ ಅಕರೋತ್ । ಅಕುರುತಾಮ್ । ಅಕುರ್ವನ್ ॥ ಅಕರೋಃ । ಅಕುರುತಮ್ । ಅಕುರುತ ॥ ಅಕರವಮ್ । ಅಕುರ್ವ । ಅಕುರ್ಮ ॥ ಆ.—ಅಕುರುತ । ಅಕುರ್ವಾತಾಮ್ । ಅಕುರ್ವತ ॥ ಅಕುರುಥಾಃ । ಅಕುರ್ವಾಥಾಮ್ । ಅಕುರುಧ್ವಮ್ ॥ ಅಕುರ್ವಿ । ಅಕುರ್ವಹಿ । ಅಕುರ್ಮಹಿ ॥ **ವಿಧಿಲಿಙ್** ॥ ಕುರು + ಯಾತ್ ಎಂದಿರುವಾಗ ಉಪ್ರತ್ಯಯಕ್ಕೆ ಲೋಪ ಹೇಳುತ್ತಾನೆ.

ಯಾದಿ ಪ್ರತ್ಯಯ ಪರವಾದಾಗ ಉಪ್ರತ್ಯಯಕ್ಕೆ ಲೋಪ ಹೇಳುವ ಸೂತ್ರ.

**೬೮೨. ಯೇ ಚ ॥ ೬–೪–೧೦೯ ॥**

ಕೃಞಃ **ಉಲೋಪೋ ಯಾದೌ** ಪ್ರತ್ಯಯೇ ಪರೇ । ಕುರ್ಯಾತ್, ಕುರ್ವೀತ । ಕ್ರಿಯಾತ್, ಕೃಷೀಷ್ಟ । ಅಕಾರ್ಷೀತ್, ಅಕೃತ । ಅಕರಿಷ್ಯತ್, ಅಕರಿಷ್ಯತ ॥

ದ್ವಿಪದ ಸೂತ್ರ. 'ನಿತ್ಯಂ ಕರೋತೇಃ' ಸೂತ್ರದಿಂದ 'ಕರೋತೇಃ', 'ಲೋಪಶ್ಚಾಸ್ಯ—' ಸೂತ್ರದಿಂದ 'ಲೋಪಃ', 'ಅಸ್ಯ' ಪದಗಳು ಅನುವೃತ್ತವಾಗುತ್ತವೆ. 'ಅಸ್ಯ' ಪದದಿಂದ 'ಉತಃ' ಎಂದು ಪರಾಮೃಷ್ಟವಾಗುತ್ತದೆ. **ಸೂತ್ರಾರ್ಥ—** ಯಕಾರಾದಿ ಪ್ರತ್ಯಯ ಪರದಲ್ಲಿರುವಾಗ ಕೃಞ್ ಧಾತುವಿನ ಉಕಾರಕ್ಕೆ ಲೋಪ ಬರುತ್ತದೆ. ಕುರು + ಯಾತ್. ಉಲೋಪವಾದರೆ ಕುರ್ಯಾತ್ ಎಂದಾಗುತ್ತದೆ. 'ಲಿಙಃ ಸಲೋಪೋಽನಂತ್ಯಸ್ಯ' ಸೂತ್ರದಿಂದ ಸಲೋಪ. ಕುರ್ಯಾತಾಮ್ । ಕುರ್ಯುಃ ॥ ಕುರ್ಯಾಃ । ಕುರ್ಯಾತಮ್ । ಕುರ್ಯಾತ ॥ ಕುರ್ಯಾಮ್ । ಕುರ್ಯಾವ । ಕುರ್ಯಾಮ ॥ ಆ.– ಕುರು + ಸೀಯುಟ್ ತ. ಸಲೋಪ, ಯಲೋಪ. ಕುರ್ವೀತ । ಕುರ್ವೀಯಾತಾಮ್ । ಕುರ್ವೀರನ್ ॥ ಕುರ್ವೀಥಾಃ । ಕುರ್ವೀಯಾಥಾಮ್ । ಕುರ್ವೀಧ್ವಮ್ ॥ ಕುರ್ವೀಯ । ಕುರ್ವೀವಹಿ । ಕುರ್ವೀಮಹಿ ॥

ಆಶೀರ್ಲಿಙ್ || ಕೃ+ಯಾತ್. 'ರಿಙ್ಶಯಗ್ಲಿಙ್ಕ್ಷು' ಋಕಾರಕ್ಕೆ ರಿಙಾದೇಶ. ಕ್ರಿಯಾತ್ | ಕ್ರಿಯಾಸ್ತಾಮ್ | ಇತ್ಯಾದಿ. ಆ.—ಕೃಷೀಷ್ಟ | ಕೃಷೀಯಾಸ್ತಾಮ್ | ಕೃಷೀರನ್ || ಇತ್ಯಾದಿ. ಲುಙ್ || ಅಕೃ+ಸ್+ಈತ್. 'ಸಿಚಿವೃದ್ಧಿಃ ಪರಸ್ಮೈಪದೇಷು' ವೃದ್ಧಿ. ಅಕಾರ್ಷೀತ್ | ಅಕಾರ್ಷ್ಟಾಮ್ | ಅಕಾರ್ಷುಃ || ಅಕಾರ್ಷೀಃ | ಅಕಾರ್ಷ್ಟಮ್ | ಅಕಾರ್ಷ್ಟ || ಅಕಾರ್ಷಮ್ | ಅಕಾರ್ಷ್ವ | ಅಕಾರ್ಷ್ಮ | ಆ.—ಅಕೃ+ಸ್+ತ. 'ಹ್ರಸ್ವಾದಂಗಾತ್' ಸಲೋಪ. ಅಕೃತ | ಅಕೃಷಾತಾಮ್ | ಅಕೃಷತ || ಅಕೃಥಾಃ | ಅಕೃಷಾಥಾಮ್ | ಅಕೃಢ್ವಮ್ || ಅಕೃಷಿ | ಅಕೃಷ್ವಹಿ | ಅಕೃಷ್ಮಹಿ || ಲೃಙ್ || ಅಕರಿಷ್ಯತ್. ಅಕರಿಷ್ಯತ || ಈಗ ಈ ಧಾತುವು ಕೆಲವು ಉಪಸರ್ಗದ ಪರದಲ್ಲಿರುವಾಗ ಸುಡಾಗಮ ಹೇಳುತ್ತಾನೆ.

ಸಮ್, ಪರಿಗಳ ಪರದಲ್ಲಿರುವಾಗ ಕೃಞ್‌ಗೆ ಸುಟ್ ಹೇಳುವ ಸೂತ್ರ.

**೭೮೩. ಸಮ್ಪರಿಭ್ಯಾಂ ಕರೋತೌ ಭೂಷಣೇ || ೬–೧–೧೩೭ ||**

**೭೮೪. ಸಮವಾಯೇ ಚ ||೬–೧–೧೩೮ ||**

**ಸಮ್ಪರಿಪೂರ್ವಸ್ಯ ಕರೋತೇಃ ಸುಟ್ ಸ್ಯಾತ್‌ಭೂಷಣೇ, ಸಂಘಾತೇ ಚಾರ್ಥೇ || ಸಂಸ್ಕರೋತಿ | ಅಲಂಕರೋತೀತ್ಯರ್ಥಃ | ಸಂಸ್ಕುರ್ವನ್ತಿ | ಸಙ್ಘೀಭವನ್ತೀತ್ಯರ್ಥಃ | ಸಮ್ಪೂರ್ವಸ್ಯ ಕ್ವಚಿದಭೂಷಣೇಽಪಿ ಸುಟ್ | ಸಂಸ್ಕೃತಂ ಭಕ್ಷಾ ಇತಿ ಜ್ಞಾಪಕಾತ್ ||**

ಎರಡು ಸೂತ್ರಗಳಿಗೂ ಕಾರ್ಯ ಒಂದೇ ಆದುದರಿಂದ ಎರಡಕ್ಕೂ ಒಂದೇ ವೃತ್ತಿ ಬರೆದಿರುತ್ತಾನೆ. 'ಸುಟ್ ಕಾತ್ ಪೂರ್ವಃ' 'ಕರೋತೇಃ' ಅನುವೃತ್ತಿ. **ಸೂತ್ರಾರ್ಥ**—ಸಮ್, ಪರಿ ಉಪಸರ್ಗಗಳ ಪರದಲ್ಲಿರುವ ಕೃಞ್ ಧಾತುವಿಗೆ ಅಲಂಕಾರ, ಮತ್ತು ಸಂಘಾತ ಎಂಬ ಅರ್ಥ ತೋರುವಾಗ ಸುಡಾಗಮ ಬರುತ್ತದೆ. ಧಾತುವಿಗೆ ಉಪಸರ್ಗ ಸೇರಿದರೆ ನಾನಾರ್ಥ ತೋರುತ್ತದೆ. ಕೃಞ್ ಧಾತುವಿಗೆ ಕರಣಾರ್ಥವಿದ್ದರೂ ಈ ಉಪಸರ್ಗಗಳು ಸೇರಿದಾಗ ಭೂಷಣಾದಿ ಅರ್ಥಗಳು ತೋರುತ್ತವೆ. ಸಮ್+ಕರೋತಿ ಎಂದಿರುವಾಗ ಸುಡಾಗಮ ಬಂದರೆ ಸಮ್+ಸ್ಕರೋತಿ= ಸಂಸ್ಕರೋತಿ. ಅಲಂಕರಿಸುತ್ತಾನೆ. ಒಟ್ಟಿಗೆ ಸೇರುತ್ತಾರೆ ಎಂಬ ಅರ್ಥದಲ್ಲಿಯೂ ಸುಡಾಗಮ ಬಂದರೆ ಸಂಸ್ಕುರ್ವನ್ತಿ ಎಂದಾಗುತ್ತದೆ. ಹೀಗೆ ಪರಿ ಪರದಲ್ಲಿರುವಾಗಲೂ ಸುಟ್ ಬಂದರೆ ಪರಿಷ್ಕರೋತಿ ಎಂದಾಗುತ್ತದೆ. ಸಮ್ ಉಪಸರ್ಗದಿಂದ ಕೂಡಿರುವಾಗ ಭೂಷಣಾರ್ಥ ತೋರದಿದ್ದರೂ ಕೆಲವು ಕಡೆ ಸುಟ್ ಪ್ರಯೋಗದಲ್ಲಿ ದೃಷ್ಟವಾಗಿದೆ. ಇದಕ್ಕೆ 'ಸಂಸ್ಕೃತಂ ಭಕ್ಷಾಃ' ಎಂಬ ಪಾಣಿನಿಯ ಸೂತ್ರವೇ ಜ್ಞಾಪಕ. 'ಸಂಸ್ಕರಿಸಲ್ಪಟ್ಟದ್ದು' ಎಂದು ಅದಕ್ಕರ್ಥ. ಅದರಿಂದ ಇತರ ಕಡೆಯಲ್ಲಿಯೂ ಸುಟ್ ಬರುತ್ತದೆಯೆಂದು ತಿಳಿಯಬೇಕು.

ಉಪ ಉಪಸರ್ಗದ ಪರದಲ್ಲಿರುವಾಗ ಸುಟ್ ಹೇಳುವ ಸೂತ್ರ.

**೬೮೫. ಉಪಾತ್ಪ್ರತಿಯತ್ನವೈಕೃತವಾಕ್ಯಾಧ್ಯಾಹಾರೇಷು ಚ ||೬-೧-೧೩೯||**

**ಉಪಾತ್ ಕೃಞಃ ಸುಟ್ ಸ್ಯಾದೇಷ್ವರ್ಥೇಷು ಚಾತ್ ಪ್ರಾಗುಕ್ತಯೋರರ್ಥಯೋಃ | ಪ್ರತಿಯತ್ನೋ ಗುಣಾಧಾನಮ್ | ವಿಕೃತಮೇವ ವೈಕೃತಂ ವಿಕಾರಃ | ವಾಕ್ಯಾಧ್ಯಾಹಾರ ಆಕಾಙ್ಕ್ಷಿತೈಕದೇಶಪೂರಣಮ್ | ಉಪಸ್ಕೃತಾ ಕನ್ಯಾ | ಉಪಸ್ಕೃತಾ ಬ್ರಾಹ್ಮಣಾಃ | ಏಧೋ ದಕಸ್ಯೋಪಸ್ಕುರುತೇ | ಉಪಸ್ಕೃತಂ ಭುಙ್ಕ್ತೇ | ಉಪಸ್ಕೃತಂ ತೇ ||**

|| ೧೮೯ || **ವನು— ಯಾಚನೇ (ಬೇಡುವುದು.) ವನುತೇ | ವವನೇ |**

|| ೧೯೦ || **ಮನು— ಅವಬೋಧನೇ (ತಿಳಿಯುವುದು.)**

**ಮನುತೇ | ಮೇನೇ | ಮನಿತಾ | ಮನಿಷ್ಯತೇ | ಮನುತಾಮ್ | ಅಮನುತ | ಮನ್ವೀತ | ಮನಿಷೀಷ್ಟ | ಅಮತ, ಅಮನಿಷ್ಟ | ಅಮನಿಷ್ಯತ ||**

ಇತಿ ತನಾದಯಃ

ತ್ರಿಪದ ಸೂತ್ರ. **ಸೂತ್ರಾರ್ಥ**—ಉಪ ಉಪಸರ್ಗದ ಪರದಲ್ಲಿರುದ ಕೃಞ್ ಧಾತುವಿಗೆ, ಪ್ರತಿಯತ್ನ, ವೈಕೃತ, ವಾಕ್ಯಾಧ್ಯಾಹಾರ ಈ ಮೂರು ಅರ್ಥಗಳಲ್ಲಿ ಸುಡಾಗಮ, ಅಲ್ಲದೆ ಚಕಾರದಿಂದ ಹಿಂದಿನ ಎರಡು ಅರ್ಥಗಳಲ್ಲಿಯೂ ಸುಟ್ ಬರುತ್ತದೆ ಪ್ರತಿಯತ್ನವೆಂದರೆ ಗುಣಾಧಾನ; ಇಲ್ಲದೇ ಇರುವ ಒಂದು ಗುಣವನ್ನುಂಟುಮಾಡುವುದು. ವಿಕೃತವೇ ವೈಕೃತ, ಅಂದರೆ ವಿಕಾರ. ವಾಕ್ಯಾಧ್ಯಾಹಾರವೆಂದರೆ ಆಕಾಂಕ್ಷೆ ಇರುವಾಗ ಅದನ್ನು ಪೂರೈಸುವುದು. ಉಪಸ್ಕೃತಾ ಕನ್ಯಾ || ಭೂಷಣಕ್ಕೆ ಇದು ಉದಾಹರಣೆ. ಅಲಂಕರಿಸಲ್ಪಟ್ಟ ಹುಡುಗಿ. ಸಂಘಾತಕ್ಕೆ, ಉಪಸ್ಕೃತಾ ಬ್ರಾಹ್ಮಣಾಃ || ಒಟ್ಟಿಗೆ ಸೇರಿರುವ ಬ್ರಾಹ್ಮಣರು. ಗುಣಾಧಾನಕ್ಕೆ, ಏಧಃ ದಕಸ್ಯ ಉಪಸ್ಕುರುತೇ || ಕಟ್ಟಿಗೆ ನೀರಿಗೆ ಗುಣವನ್ನು ತಂದುಕೊಡುತ್ತದೆ. ಬಿಸಿ ಮಾಡುತ್ತದೆ ಎಂದರ್ಥ. ವಿಕಾರಕ್ಕೆ, ಉ ಪಸ್ಕೃತಂ ಭುಂಕ್ತೇ || ಸಾರು ಮುಂತಾದವುಗಳಿಂದ ಸೇರಿದ ಅನ್ನಾದಿಗಳನ್ನು ತಿನ್ನುತ್ತಾನೆ ಎಂದರ್ಥ. ವಾಕ್ಯಾಧ್ಯಾಹಾರಕ್ಕೆ, ಉಪಸ್ಕೃತಂ ಬ್ರೂತೇ || ಯಾವ ಆಕಾಂಕ್ಷೆ ಇಲ್ಲದೆ ಹೇಳುತ್ತಾನೆ ಎಂದರ್ಥ.

**ವನು** ಧಾತು. ಆತ್ಮನೇಪದೀ. ಸೇಟ್. ವನುತೇ | ವವನೇ | ವಾದಿಯಾದುದರಿಂದ ಏತ್ವಾಭ್ಯಾಸಲೋಪ ಬಂದಿಲ್ಲ. ವನಿತಾ | ವನಿಷ್ಯತೇ | ವನುತಾಮ್ | ಅವನುತ | ವನ್ವೀತ | ವನಿಷೀಷ್ಟ | ಅವನತ, ಅವನಿಷ್ಟ | ಅವನಿಷ್ಯತ ||

**ಮನು** ಧಾತು. ಆತ್ಮನೇಪದೀ. ಸೇಟ್. ತನುವಿನಂತೇ ರೂಪವಾಗುತ್ತದೆ. ಮನುತೇ | ಮೇನೇ | ಮನಿತಾ | ಮನಿಷ್ಯತೇ | ಮನುತಾಮ್ | ಅಮನುತ | ಮನ್ವೀತ | ಮನಿಷೀಷ್ಟ | ಅಮತ, ಅಮನಿಷ್ಟ | ಅಮನಿಷ್ಯತ ||

# ೯. ಅಥ ಕ್ರ್ಯಾದಯಃ

॥ ೧೯೧ ॥ ಡುಕ್ರೀಞ್=ದ್ರವ್ಯವಿನಿಮಯೇ
(ಒಂದು ಕೊಟ್ಟು ಇನ್ನೊಂದು ತೆಗೆದುಕೊಳ್ಳುವುದು.)

ಶ್ನಾ ವಿಕರಣ ಹೇಳುವ ಸೂತ್ರ.

೭೮೬. ಕ್ರ್ಯಾದಿಭ್ಯಃ ಶ್ನಾ ॥ ೩-೧-೮೧ ॥

ಶಪೋಽಪವಾದಃ । ಕ್ರೀಣಾತಿ । ಈ ಹಲ್ಯಘೋಃ । ಕ್ರೀಣೀತಃ । ಶ್ನಾಭ್ಯಸ್ತಯೋರಾತಃ । ಕ್ರೀಣನ್ತಿ । ಕ್ರೀಣಾಸಿ । ಕ್ರೀಣೀಥಃ । ಕ್ರೀಣೀಥ । ಕ್ರೀಣಾಮಿ । ಕ್ರೀಣೀವಃ । ಕ್ರೀಣೀಮಃ । ಕ್ರೀಣೀತೇ-ಕ್ರೀಣಾತೇ-ಕ್ರೀಣತೇ । ಕ್ರೀಣೀಷೇ । ಕ್ರೀಣಾಥೇ । ಕ್ರೀಣೀಧ್ವೇ । ಕ್ರೀಣೇ । ಕ್ರೀಣೀವಹೇ । ಕ್ರೀಣೀಮಹೇ । ಚಿಕ್ರಾಯ । ಚಿಕ್ರಿಯತುಃ । ಚಿಕ್ರಿಯುಃ । ಚಿಕ್ರಯಿಥ, ಚಿಕ್ರೇಥ । ಚಿಕ್ರಿಯ । ಚಿಕ್ರಿಯೇ । ಕ್ರೇತಾ । ಕ್ರೇಷ್ಯತಿ, ಕ್ರೇಷ್ಯತೇ । ಕ್ರೀಣಾತು, ಕ್ರೀಣೀತಾತ್ । ಕ್ರೀಣೀತಾಮ್ । ಅಕ್ರೀಣಾತ್, ಅಕ್ರೀಣೀತ । ಕ್ರೀಣೀಯಾತ್, ಕ್ರೀಣೀತ । ಕ್ರೀಯಾತ್, ಕ್ರೇಷೀಷ್ಟ । ಅಕ್ರೈಷೀತ್, ಅಕ್ರೇಷ್ಟ । ಅಕ್ರೇಷ್ಯತ್, ಅಕ್ರೇಷ್ಯತ ॥

ಕ್ರೀಞ್ ಧಾತುವೇ ಮೊದಲಾದ ಧಾತುಸಮುದಾಯಕ್ಕೆ ಕ್ರ್ಯಾದಿಗಣವೆಂದು ಹೆಸರು. 'ಆದಿರ್ಞಿಟುಡವಃ' ಸೂತ್ರದಿಂದ ಡು ಇತ್ತಾಗುತ್ತದೆ. ಞಕಾರ ಇತ್ತಾದುದರಿಂದ 'ಸ್ವರಿತಞಿತಃ-..' ಸೂತ್ರದಿಂದ ಉಭಯಪದಿಯಾಗುತ್ತದೆ. ಕ್ರೀ+ತಿ ಎಂದಿರುವಾಗ ಶಪ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಶ್ನಾ ವಿಕರಣ ಹೇಳುತ್ತಾನೆ. **ಸೂತ್ರಾರ್ಥ**–ಕರ್ತ್ರರ್ಥಸಾರ್ವಧಾತುಕ ಪರವಾದಾಗ ಕ್ರ್ಯಾದಿಧಾತುಗಳಿಗೆ ಶ್ನಾ ವಿಕರಣ ಬರುತ್ತದೆ. 'ಲಶಕ್ವತದ್ಧಿತೇ' ಸೂತ್ರದಿಂದ ಶ್ನಾದಲ್ಲಿ ಶಕಾರ ಇತ್ತಾಗಿ ಲೋಪವಾದರೆ ನಾ ಉಳಿಯುತ್ತದೆ. ಕ್ರೀ+ನಾ+ತಿ. ಅಪಿತ್ತಾಗಿ ಸಾರ್ವಧಾತುಕವಾದುದರಿಂದ ಶ್ನಾ ಙಿತ್ತಾದುದರಿಂದ ಗುಣವಿಲ್ಲ. 'ಅಟ್ ಕುಪ್ವಾಙ್-' ಸೂತ್ರದಿಂದ ಣತ್ವ ಬಂದರೆ ಕ್ರೀಣಾತಿ ಎಂದಾಗುತ್ತದೆ. ಕ್ರೀ+ಣಾ+ತಸ್. 'ಈ ಹಲ್ಯಘೋಃ' ಸೂತ್ರದಿಂದ ಶ್ನಾದ ಆಕಾರಕ್ಕೆ ಈತ್ವ. ಕ್ರೀಣೀತಃ । ಕ್ರೀ+ಣಾ+ಅನ್ತಿ । 'ಶ್ನಾಭ್ಯಸ್ತಯೋರಾತಃ' (ಸೂ. ೭೨೧) ಸೂತ್ರದಿಂದ ಆಕಾರಲೋಪ. ಕ್ರೀಣ್+ಅನ್ತಿ=ಕ್ರೀಣನ್ತಿ ॥ ಕ್ರೀಣಾಸಿ । ಕ್ರೀಣೀಥಃ । ಕ್ರೀಣೀಥ ॥ ಕ್ರೀಣಾಮಿ । ಕ್ರೀಣೀವಃ । ಕ್ರೀಣೀಮಃ ॥ ಹಲಾದಿ ಙಿತ್ತಿನಲ್ಲಿ ಈತ್ವ, ಅಜಾದಿ ಙಿತ್ತಿನಲ್ಲಿ ಆಲೋಪವೆಂದು ತಿಳಿಯಬೇಕು. ಆ.—ಕ್ರೀಣೀತೇ । ಕ್ರೀಣಾತೇ । ಕ್ರೀಣತೇ ॥ ಕ್ರೀಣೀಷೇ । ಕ್ರೀಣಾಥೇ । ಕ್ರೀಣೀಧ್ವೇ ॥ ಕ್ರೀಣೇ । ಕ್ರೀಣೀವಹೇ । ಕ್ರೀಣೀಮಹೇ ॥

**ಲಿಟ್** || ಕ್ರೀಕ್ರೀ+ಅ=ಚಿಕ್ರೀ+ಅ. 'ಅಚೋಞ್ಣಿತಿ' ವೃದ್ಧಿ. ಆಯಾ
ದೇಶ. ಚಿಕ್ರಾಯ | ಚಿಕ್ರೀ+ಅತುಸ್. 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ
ಇಯಙಾದೇಶ. ಚಿಕ್ರಿಯತುಃ | ಚಿಕ್ರಿಯುಃ || ಥಲಿನಲ್ಲಿ ಭಾರದ್ವಾಜನಿಯಮದಿಂದ
ವಿಕಲ್ಪ ಇಡಾಗಮ. ಚಿಕ್ರಯಿಥ, ಚಿಕ್ರೇಥ | ಚಿಕ್ರಿಯಥುಃ | ಚಿಕ್ರಿಯ || ಚಿಕ್ರಾಯ,
ಚಿಕ್ರಯ | ಚಿಕ್ರಿಯಿವ | ಚಿಕ್ರಿಯಿಮ || ಆ.—ಚಿಕ್ರಿಯೇ | ಚಿಕ್ರಿಯಾತೇ |
ಚಿಕ್ರಿಯಿರೇ || ಚಿಕ್ರಿಯಿಷೇ | ಚಿಕ್ರಿಯಾಥೇ | ಚಿಕ್ರಿಯಿಢ್ವೇ || ಚಿಕ್ರಿಯೇ | ಚಿಕ್ರಿ
ಯಿವಹೇ | ಚಿಕ್ರಿಯಿಮಹೇ || **ಲುಟ್** || ಅನಿಟಾದುದರಿಂದ ತಾಸಿಗೆ ಇಡಾಗಮ
ವಿಲ್ಲ. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ಕ್ರೇತಾ | ಕ್ರೇತಾರೌ |
ಕ್ರೇತಾರಃ || ಕ್ರೇತಾಸಿ | ಕ್ರೇತಾಸ್ಥಃ | ಕ್ರೇತಾಸ್ಥ || ಕ್ರೇತಾಸ್ಮಿ | ಕ್ರೇತಾಸ್ವಃ |
ಕ್ರೇತಾಸ್ಮಃ || ಆ.—ಕ್ರೇತಾಸೇ | ಇತ್ಯಾದಿ. **ಲೃಟ್** || ಗುಣ. ಷತ್ವ. ಕ್ರೇಷ್ಯತಿ |
ಕ್ರೇಷ್ಯತಃ | ಕ್ರೇಷ್ಯನ್ತಿ || ಇತ್ಯಾದಿ. ಆ.—ಕ್ರೇಷ್ಯತೇ | ಇತ್ಯಾದಿ. **ಲೋಟ್** ||
ಸಾಮಾನ್ಯ ಲಟನಂತೇ ಪ್ರಕ್ರಿಯಾ. ಕ್ರೀಣಾತು, ಕ್ರೀಣೀತಾತ್ | ಕ್ರೀಣೀತಾಮ್ |
ಕ್ರೀಣನ್ತು || ಕ್ರೀಣೀಹಿ, ಕ್ರೀಣೀತಾತ್ | ಕ್ರೀಣೀತಮ್ | ಕ್ರೀಣೀತ || ಕ್ರೀಣಾನಿ |
ಕ್ರೀಣಾವ | ಕ್ರೀಣಾಮ || ಆ. ಕ್ರೀಣೀತಾಮ್ | ಕ್ರೀಣಾತಾಮ್ | ಕ್ರೀಣ
ತಾಮ್ || ಕ್ರೀಣೀಷ್ವ | ಕ್ರೀಣಾಥಾಮ್ | ಕ್ರೀಣೀಧ್ವಮ್ || ಕ್ರೀಣೈ | ಕ್ರೀಣಾ
ವಹೈ | ಕ್ರೀಣಾಮಹೈ || **ಲಙ್** || ಅಕ್ರೀಣಾತ್ | ಅಕ್ರೀಣೀತಾಮ್ | ಅಕ್ರೀ
ಣನ್ || ಅಕ್ರೀಣಾಃ | ಅಕ್ರೀಣೀತಮ್ | ಅಕ್ರೀಣೀತ || ಅಕ್ರೀಣಾಮ್ | ಅಕ್ರೀ
ಣೀವ | ಅಕ್ರೀಣೀಮ || ಆ.—ಅಕ್ರೀಣೀತ | ಅಕ್ರೀಣಾತಾಮ್ | ಅಕ್ರೀಣತ ||
ಅಕ್ರೀಣೀಥಾಃ | ಅಕ್ರೀಣಾಥಾಮ್ | ಅಕ್ರೀಣೀಧ್ವಮ್ || ಅಕ್ರೀಣಿ | ಅಕ್ರೀಣೀ
ವಹಿ | ಅಕ್ರೀಣೀಮಹಿ || **ವಿಧಿಲಿಙ್** || ಕ್ರೀಣೀಯಾತ್ | ಇತ್ಯಾದಿ. ಆ.—
ಕ್ರೀಣೀತ | ಕ್ರೀಣೀಯಾತಾಮ್ | ಕ್ರೀಣೀರನ್ || ಕ್ರೀಣೀಥಾಃ | ಕ್ರೀಣೀಯಾ
ಥಾಮ್ | ಕ್ರೀಣೀಧ್ವಮ್ || ಕ್ರೀಣೀಯ | ಕ್ರೀಣೀವಹಿ | ಕ್ರೀಣೀಮಹಿ ||
**ಆಶೀರ್ಲಿಙ್** || ಕ್ರೀಯಾತ್ | ಕ್ರೀಯಾಸ್ತಾಮ್ | ಕ್ರೀಯಾಸುಃ || ಇತ್ಯಾದಿ.
ಕ್ರೀ+ಸೀಷ್ಟ. ಗುಣ, ಷತ್ವ. ಕ್ರೇಷೀಷ್ಟ | ಕ್ರೇಷೀಯಾಸ್ತಾಮ್ | ಕ್ರೇಷೀರನ್ ||
ಕ್ರೇಷೀಷ್ಠಾಃ | ಕ್ರೇಷೀಯಾಸ್ಥಾಮ್ | ಕ್ರೇಷೀಢ್ವಮ್ || ಕ್ರೇಷೀಯ | ಕ್ರೇಷೀ
ವಹಿ | ಕ್ರೇಷೀಮಹಿ || **ಲುಙ್** || ಅಕ್ರೀ+ಸ್+ಈತ್. 'ಸಿಚಿವೃದ್ಧಿಃ—' ಸೂತ್ರ
ದಿಂದ ವೃದ್ಧಿ. ಷತ್ವ. ಅಕ್ರೈಷೀತ್ | ಅಕ್ರೈಷ್ಟಾಮ್ | ಅಕ್ರೈಷುಃ || ಅಕ್ರೈಷೀಃ |
ಅಕ್ರೈಷ್ಟಮ್ | ಅಕ್ರೈಷ್ಟ || ಅಕ್ರೈಷಮ್ | ಅಕ್ರೈಷ್ವ | ಅಕ್ರೈಷ್ಮ || ಆ.—
ಅಕ್ರೀ+ಸ್+ತ. ಗುಣ, ಷತ್ವ, ಷ್ಟುತ್ವ. ಅಕ್ರೇಷ್ಟ | ಅಕ್ರೇಷಾತಾಮ್ |
ಅಕ್ರೇಷತ || ಅಕ್ರೇಷ್ಠಾಃ | ಅಕ್ರೇಷಾಥಾಮ್ | ಅಕ್ರೇಢ್ವಮ್ | ಅಕ್ರೇಷಿ |
ಅಕ್ರೇಷ್ವಹಿ | ಅಕ್ರೇಷ್ಮಹಿ || **ಲೃಙ್** || ಅಕ್ರೇಷ್ಯತ್ | ಆ.—ಅಕ್ರೇಷ್ಯತ |
**ಇತ್ಯಾದಿ.**

|| ೧೮೨ || ಪ್ರೀಞ್—ತರ್ಪಣೇ (ಸಂತುಷ್ಟಿ.) || ಕಾನ್ತೌ ಚ (ಇಚ್ಛೆ)
ಪ್ರೀಣಾತಿ, ಪ್ರೀಣೀತೇ ||

|| ೧೮೩ || ಶ್ರೀಞ್—ಪಾಕೇ (ಬೇಯಿಸುವುದು.) ಶ್ರೀಣಾತಿ, ಶ್ರೀಣೀತೇ ||

|| ೧೮೪ || ಮೀಞ್—ಹಿಂಸಾಯಾಮ್

ಪ್ರೀಞ್ ಧಾತು ಕ್ರೀಞ್‌ನಂತೇ ರೂಪಹೊಂದುತ್ತದೆ. ಅನಿಟ್. ಪ್ರೀಣಾತಿ, ಪ್ರೀಣೀತೇ । ಪಿಪ್ರಾಯ, ಪಿಪ್ರಿಯೇ | ಪ್ರೇತಾ (೨) | ಪ್ರೇಷ್ಯತಿ, ಪ್ರೇಷ್ಯತೇ | ಪ್ರೀಣಾತು, ಪ್ರೀಣೀತಾಮ್ | ಅಪ್ರೀಣಾತ್, ಅಪ್ರೀಣೀತ । ಪ್ರೀಣೀಯಾತ್, ಪ್ರೀಣೀತ | ಪ್ರೀಯಾತ್, ಪ್ರೇಷೀಷ್ಟ | ಅಪ್ರೈಷೀತ್, ಅಪ್ರೇಷ್ಟ | ಅಪ್ರೇಷ್ಯತ್, ಅಪ್ರೇಷ್ಯತ ||

ಶ್ರೀಞ್ ಧಾತು. ಸೇಟ್. ಶ್ರೀಣಾತಿ, ಶ್ರೀಣೀತೇ | ಶಿಶ್ರಾಯ, ಶಿಶ್ರಿಯೇ | ಶ್ರಯಿತಾ | ಶ್ರಯಿಷ್ಯತಿ, ಶ್ರಯಿಷ್ಯತೇ | ಶ್ರೀಣಾತು, ಶ್ರೀಣೀತಾಮ್ | ಅಶ್ರೀಣಾತ್, ಅಶ್ರೀಣೀತ | ಶ್ರೀಣೀಯಾತ್, ಶ್ರೀಣೀತ | ಶ್ರೀಯಾತ್, ಶ್ರಯಿಷೀಷ್ಟ | ಅಶ್ರಯೀತ್, ಅಶ್ರಯಿಷ್ಟ | ಅಶ್ರಯಿಷ್ಯತ್, ಅಶ್ರಯಿಷ್ಯತ ||

ಮೀಞ್ ಧಾತು. ಅನಿಟ್. ಣತ್ವಕ್ಕೆ ನಿಮಿತ್ತವಿಲ್ಲ. ಮೀನಾತಿ, ಮೀನೀತೇ || ಪ್ರಾದಿ ಉಪಸರ್ಗಗಳ ಪರದಲ್ಲಿ ಈ ಧಾತು ಬಂದಾಗ ಣತ್ವ ಹೇಳುತ್ತಾನೆ. ಭಿನ್ನಪದವಾದುದರಿಂದ 'ಅಟ್ ಕುಪ್ವಾಙ್—' ಸೂತ್ರದಿಂದ ಣತ್ವ ಬರುವುದಿಲ್ಲ.

ಹಿನು, ಮೀ ಧಾತುಗಳ ನಕಾರಕ್ಕೆ ಣತ್ವ ಹೇಳುವ ಸೂತ್ರ.

೬೮೭. ಹಿನುಮೀನಾ || ೮-೪-೧೫ ||

**ಉಪಸರ್ಗಸ್ಥಾನ್ನಿಮಿತ್ತಾತ್ಪರಸ್ಯೈತಯೋರ್ನಸ್ಯ ಣಃ ಸ್ಯಾತ್ | ಪ್ರಮೀಣಾತಿ, ಪ್ರಮೀಣೀತೇ | ಮೀನಾತೀತ್ಯಾತ್ವಮ್ | ಮಮೌ | ಮಿಮ್ಯತುಃ । ಮಮಿಥ, ಮಮಾಥ | ಮಿಮ್ಯೇ | ಮಾತಾ । ಮಾಸ್ಯತಿ | ಮೀಯಾತ್, ಮಾಸೀಷ್ಟ | ಅಮಾಸೀತ್ | ಅಮಾಸಿಷ್ಟಾಮ್ । ಅಮಾಸ್ತ**

|| ೧೮೫ || ಷಿಞ್—ಬಂಧನೇ

ಸಿನಾತಿ, ಸಿನೀತೇ | ಸಿಷಾಯ, ಸಿಷ್ಯೇ | ಸೇತಾ ||

|| ೧೮೬ || ಸ್ಕುಞ್—ಆಪ್ಲವನೇ (ಗಮನವಿಶೇಷ.)

ಏಕಪದ ಸೂತ್ರ. ಹಿನು, ಮೀನಾ ಇವುಗಳಿಗೆ ದ್ವಂದ್ವಸಮಾಸ ಬಂದು ಅದರ ಮೇಲೆ ಬಂದಿರುವ ಷಷ್ಠೀದ್ವಿವಚನಕ್ಕೆ ಆರ್ಷವಾಗಿ ಲುಕ್ ಬಂದಿದೆ. 'ಉಪಸರ್ಗಾತ್ ಅಸಮಾಸೇ—' ಸೂತ್ರದಿಂದ 'ಉಪಸರ್ಗಾತ್' ಪದಾನುವೃತ್ತಿ. 'ರಷಾಭ್ಯಾಂ ಣೋ ನಃ' ಅನುವೃತ್ತಿ. ಉಪಸರ್ಗಪದ ಉಪಸರ್ಗಸ್ಥ ಎಂಬರ್ಥ ತಿಳಿಸುತ್ತದೆ.

**ಸೂತ್ರಾರ್ಥ**— ಉಪಸರ್ಗದಲ್ಲಿರುವ ನಿಮಿತ್ತದ (ರ, ಷ) ಪರದಲ್ಲಿರುವ ಹಿನು, ಮೀನಾ ಸಂಬಂಧಿ ನಕಾರಕ್ಕೆ ಣತ್ವ ಬರುತ್ತದೆ. ಪ್ರ+ಮೀನಾತಿ ಎಂದಿರುವಾಗ ಪ್ರ ಉಪಸರ್ಗ ದಲ್ಲಿ ರೇಫರೂಪನಿಮಿತ್ತವಿದೆ. ಅದರ ಪರದಲ್ಲಿರುವ ಮೀನಾ ನಕಾರಕ್ಕೆ ಣತ್ವ ಬಂದರೆ ಪ್ರಮೀಣಾತಿ ಎಂದಾಗುತ್ತದೆ. ಹೀಗೆಯೇ ಆತ್ಮನೇಪದದಲ್ಲಿಯೂ ಪ್ರಮೀಣೀತೇ ಎಂದು ಣತ್ವ ಬರುತ್ತದೆ. ಮೀನಾತಿ | ಮೀನೀತಃ | ಮೀನನ್ತಿ || ಮೀನಾಸಿ | ಮೀನೀಥಃ | ಮೀನೀಥ || ಮೀನಾಮಿ | ಮೀನೀವಃ | ಮೀನೀಮಃ || ಮೀನೀತೇ | ಮೀನಾತೇ | ಮೀನತೇ || ಮೀನೀಷೇ | ಮೀನಾಥೇ | ಮೀನೀಧ್ವೇ || ಮೀನೇ | ಮೀನೀವಹೇ | ಮೀನೀಮಹೇ ||

**ಲಿಟ್** || ಮೀ+ಅ ಎಂದಿರುವಾಗ ಏಚ್ ನಿಮಿತ್ತವಾದ ಪ್ರತ್ಯಯ ಪರದಲ್ಲಿರುವ ವುದರಿಂದ 'ಮಿನಾತಿ ಮಿನೋತಿ—' (ಸೂ.೬೪೦) ಸೂತ್ರದಿಂದ ಆತ್ವ ಬಂದರೆ ಮಾ+ಅ ಎಂದಾಗುತ್ತದೆ. ದ್ವಿತ್ವಾದಿ. ಮಮಾ+ಅ. 'ಆತ ಔ ಣಲಃ' ಣಲಿಗೆ ಔತ್ವ. ಮಮಾ+ಔ. ವೃದ್ಧಿ. ಮಮೌ | ಮೀ+ಅತುಸ್. ಇಲ್ಲಿ ಪ್ರತ್ಯಯ ಕಿತ್ತಾದುದರಿಂದ ಆತ್ವ ಬರುವುದಿಲ್ಲ. ಮಿಮೀ+ಅತುಸ್. ಯಣ್. ಮಿಮ್ಯತುಃ | ಮಿಮ್ಯುಃ || ಥಲಿನಲ್ಲಿ ಆತ್ವ. ಇಡ್ವಿಕಲ್ಪ. ಇಟ್ ಬಂದರೆ ಮಮಾ+ಇಥ ಎಂದಿರು ವಾಗ 'ಆತೋ ಲೋಪ ಇಟಿಚ' ಸೂತ್ರದಿಂದ ಆಕಾರಕ್ಕೆ ಲೋಪ. ಮಮಿಥ | ಇಟ್ ಬಾರದಿದ್ದರೆ ಮಮಾಥ | ಮಿಮ್ಯಥುಃ | ಮಿಮ್ಯ || ಮಮೌ ಮಿಮ್ಯಿವ | ಮಿಮ್ಯಿಮ || ಆ.— ಮಿಮ್ಯೇ | ಮಿಮ್ಯಾತೇ | ಮಿಮ್ಯಿರೇ | ಮಿಮ್ಯಿಷೇ | ಮಿಮ್ಯಾಥೇ | ಮಿಮ್ಯಿಧ್ವೇ || ಮಿಮ್ಯೇ | ಮಿಮ್ಯಿವಹೇ | ಮಿಮ್ಯಿಮಹೇ || **ಲುಟ್** || ಇಲ್ಲಿ ಏಜ್ ನಿಮಿತ್ತ ಪ್ರತ್ಯಯವಿರುವುದರಿಂದ ಆತ್ವ. ಮಾತಾ | ಮಾತಾರೌ | ಮಾತಾರಃ || ಇತ್ಯಾದಿ. **ಲೃಟ್** || ಮಾಸ್ಯತಿ || ಆ.— ಮಾಸ್ಯತೇ || **ಲೋಟ್** || ಮೀನಾತು, ಮೀನೀತಾಮ್ | **ವಿಧಿಲಿಙ್** | ಮೀನೀಯಾತ್, ಮೀನೀತ || **ಆಶೀರ್ಲಿಙ್** || ಮೀಯಾತ್ || ಆತ್ಮನೇಪದದಲ್ಲಿ ಏಜ್ನಿಮಿತ್ತ ಪ್ರತ್ಯಯವಿರುವುದರಿಂದ ಆತ್ವ. ಮಾಸೀಷ್ಟ | ಮಾಸೀಯಾಸ್ತಾಮ್ | ಮಾಸೀರನ್ || ಮಾಸೀಷ್ಠಾಃ | ಮಾಸೀಯಾಸ್ಥಾಮ್ | ಮಾಸೀಧ್ವಮ್ || ಮಾಸೀಯ | ಮಾಸೀವಹಿ | ಮಾಸೀಮಹಿ || **ಲುಙ್** || ಸಿಚ್ ಗುಣನಿಮಿತ್ತವಾದುದರಿಂದ ಅದು ಪರವಾದಾಗ ಧಾತುವಿಗೆ ಆತ್ವ. ಅಮಾ+ಸ್+ಈತ್ ಎಂದಿರುವಾಗ 'ಯಮರಮನಮಾತಾಂ ಸಕ್ ಚ' ಸೂತ್ರ ದಿಂದ ಧಾತುವಿಗೆ ಸಕ್ ಆಗಮ. ಸಿಚಿಗೆ ಇಡಾಗಮ. ಅಮಾಸ್+ಇಸ್+ಈತ್. 'ಇಟ ಈಟಿ' ಸಲೋಪ. ಅಮಾಸೀತ್ | ಅಮಾಸಿಷ್ಟಾಮ್ | ಅಮಾಸಿಷುಃ || ಅಮಾಸೀಃ | ಅಮಾಸಿಷ್ಟಮ್ | ಅಮಾಸಿಷ್ಟ || ಅಮಾಸಿಷಮ್ | ಅಮಾಸಿಷ್ವ | ಅಮಾಸಿಷ್ಮ || ಆ.— ಅಮಾಸ್ತ | ಅಮಾಸಾತಾಮ್ | ಅಮಾಸತ || ಅಮಾಸ್ಥಾಃ | ಅಮಾಸಾಥಾಮ್ | ಅಮಾಧ್ವಮ್ || ಅಮಾಸಿ | ಅಮಾಸ್ವಹಿ | ಅಮಾಸ್ಮಹಿ || **ಲೃಙ್** || ಅಮಾಸ್ಯತ್, ಅಮಾಸ್ಯತ ||

ಷಿಞ್ ಧಾತು: ಅನಿಟ್. 'ಧಾತ್ವಾದೇಃ ಷಃ ಸಃ' ಆದಿಗೆ ಸತ್ವ. ಸಿನಾತಿ, ಸಿನೀತೇ | ಸಿಷಾಯ, ಸಿಷ್ಯೇ | ಸೇತಾ | ಸೇಷ್ಯತಿ, ಸೇಷ್ಯತೇ | ಸಿನಾತು, ಸಿನೀತಾಮ್ | ಅಸಿನಾತ್, ಅಸಿನೀತ | ಸಿನೀಯಾತ್, ಸಿನೀತ | ಸೀಯಾತ್, ಸೇಷೀಷ್ಟ | ಅಸೈಷೀತ್, ಅಸೇಷ್ಟ | ಅಸೇಷ್ಯತ್, ಅಸೇಷ್ಯತ ||

ಸ್ಕುಞ್ ಧಾತು. ಅನಿಟ್. ಇದಕ್ಕೆ ಲಡಾದಿಗಳಲ್ಲಿ ಶ್ನುವಿಕರಣವನ್ನು ಹೇಳುತ್ತಾನೆ.

ಸ್ತಮ್ಭ್ವಾದಿಗಳಿಗೆ ಶ್ನುವಿಕರಣ ಹೇಳುವ ಸೂತ್ರ.

**೬೮೮. ಸ್ತನ್ಭುಸ್ತುನ್ಭುಸ್ಕನ್ಭುಸ್ಕುನ್ಭುಸ್ಕುಞ್ಭ್ಯಃ ಶ್ನುಶ್ಚ || ೩–೧–೮೨ ||**

**ಚಾತ್ ಶ್ನಾ | ಸ್ಕುನೋತಿ, ಸ್ಕುನಾತಿ | ಸ್ಕುನುತೇ, ಸ್ಕುನೀತೇ | ಚುಸ್ಕಾವ, ಚುಸ್ಕುವೇ | ಸ್ಕೋತಾ | ಅಸ್ಕಾಷೀತ್, ಅಸ್ಕೋಷ್ಟ | ಸ್ತನ್ಭ್ವಾದಯಶ್ಚತ್ವಾರಃ ಸೌತ್ರಾಃ || ಸರ್ವೇ ರೋಧನಾರ್ಥಾಃ ಪರಸ್ಮೈಪದಿನಃ ||**

ತ್ರಿಪದ ಸೂತ್ರ. **ಸೂತ್ರಾರ್ಥ**—ಸ್ತನ್ಭು, ಸ್ತುನ್ಭು, ಸ್ಕನ್ಭು, ಸ್ಕುನ್ಭು, ಸ್ಕುಞ್ ಈ ಐದು ಧಾತುಗಳಿಗೆ ಶ್ನುವಿಕರಣ ಬರುತ್ತದೆ. ಚಕಾರದಿಂದ ಶ್ನಾ ವಿಕರಣವೂ ಬರುತ್ತದೆ. ಆಗ ನಾಲ್ಕುರೂಪಗಳಾಗುತ್ತವೆ. ಶ್ನು ಬಂದರೆ ಸ್ಕುನು + ತಿ. 'ಸಾರ್ವಧಾ—' ಗುಣ. ಸ್ಕುನೋತಿ. ಶ್ನಾ ಬಂದರೆ ಸ್ಕುನಾತಿ. ಆತ್ಮನೇಪದಿಯಲ್ಲಿ ಸ್ಕುನುತೇ. ಸ್ಕುನಾ + ತೇ ಎಂದಿರುವಾಗ 'ಈ ಹಲ್ಯಘೋಃ' ಸೂತ್ರದಿಂದ ಶ್ನಾದ ಆಕಾರಕ್ಕೆ ಈತ್ವ. ಸ್ಕುನೀತೇ | ಸ್ಕುನಾತೇ | ಸ್ಕುನತೇ || ಇತ್ಯಾದಿ. ಕ್ರೀಞ್ ಧಾತುವಿನಂತೆ ಆಗುತ್ತದೆ.

**ಲಿಟ್** || ಚುಸ್ಕಾವ. 'ಶರ್ಪೂರ್ವಾಃ ಖಯಃ' ಸೂತ್ರದಿಂದ ಸಕಾರಲೋಪವಾಗಿ ಕಕಾರ ಉಳಿದು ಅದಕ್ಕೆ ಶ್ಚುತ್ವ ಬಂದಿದೆ. ಚುಸ್ಕುವೇ. ಉವಙ್. **ಲುಟ್** || ಸ್ಕೋತಾ (೨) || **ಲೃಟ್** || ಸ್ಕೋಷ್ಯತಿ, ಸ್ಕೋಷ್ಯತೇ || **ಲೋಟ್** || ಸ್ಕುನೋತು, ಸ್ಕುನಾತು | ಸ್ಕುನುತಾಮ್, ಸ್ಕುನೀತಾಮ್ || **ಲಙ್** || ಅಸ್ಕುನೋತ್, ಅಸ್ಕುನಾತ್ | ಅಸ್ಕುನುತ | ಅಸ್ಕುನೀತ || **ವಿಧಿಲಿಙ್** || ಸ್ಕುನುಯಾತ್, ಸ್ಕುನೀಯಾತ್ | ಸ್ಕುನುವೀತ, ಸ್ಕುನೀತ || **ಆಶೀರ್ಲಿಙ್** || ಸ್ಕೂಯಾತ್, ಸ್ಕೋಷೀಷ್ಟ || **ಲುಙ್** || ಅಸ್ಕಾಷೀತ್, ಅಸ್ಕೋಷ್ಟ || **ಲೃಙ್** || ಅಸ್ಕೋಷ್ಯತ್, ಅಸ್ಕೋಷ್ಯತ ||

**೧೯೭, ೧೯೮, ೧೯೯, ೨೦೦**—ಸ್ತನ್ಭು, ಸ್ತುನ್ಭು, ಸ್ಕನ್ಭು, ಸ್ಕುನ್ಭು—ಈ ನಾಲ್ಕು ಧಾತುಗಳು ಸೂತ್ರದಲ್ಲಿ ಮಾತ್ರ ನಿರ್ದಿಷ್ಟವಾದುದರಿಂದ ಇವುಗಳಿಗೆ ಸೌತ್ರಧಾತುಗಳೆಂದು ಹೆಸರು. ಇವು ನಾಲ್ಕು ಧಾತುಗಳಿಗೂ ರೋಧನ ಅಂದರೆ ತಡೆಯುವುದು ಎಂದರ್ಥ. ಉಕಾರ ಇತ್ತಾಗುತ್ತದೆ.

**ಸ್ತನ್ಭು** ಧಾತು. ಸ್ತನ್ಭ್ + ನು + ತಿ. ಶ್ನು ಙಿತ್ತಾದುದರಿಂದ 'ಅನಿದಿತಾಂ ಹಲಃ—' ಸೂತ್ರದಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಸ್ತುಭ್ + ನು + ತಿ.

ಗುಣ. ಸ್ತಭ್ನೋತಿ | ಸ್ತಭ್ನುತಃ | ಸ್ತಭ್ನುವನ್ತಿ || ಸ್ತಭ್ನೋಷಿ | ಸ್ತಭ್ನುಥಃ | ಸ್ತಭ್ನುಥ || ಸ್ತಭ್ನೋಮಿ | ಸ್ತಭ್ನುವಃ | ಸ್ತಭ್ನುಮಃ || ಶ್ನಾ ಬಂದರೆ ಸ್ತಭ್ನಾತಿ | ಸ್ತಭ್ನೀತಃ | ಇತ್ಯಾದಿ ಕ್ರೀಣಾತಿಯಂತೆ ರೂಪ. ತಸ್ತನ್ಭ || ಸ್ತನ್ಭಿತಾ | ಸ್ತನ್ಭಿಷ್ಯತಿ || **ಲೋಟ್** || ಸ್ತಭ್ನೋತು, ಸ್ತಭ್ನುತಾತ್ | ಸ್ತಭ್ನುತಾಮ್ | ಸ್ತಭುವನ್ತು || ಸ್ತಭ್ನು, ಸ್ತಭ್ನುತಾತ್ | ಸ್ತಭ್ನುತಮ್ | ಸ್ತಭ್ನುತ || ಸ್ತಭ್ನವಾನಿ | ಸ್ತಭ್ನವಾವ | ಸ್ತಭ್ನವಾಮ || **ಶ್ನಾ** || ಸ್ತಭ್ನಾತು, ಸ್ತಭ್ನೀತಾತ್ | ಸ್ತಭ್ನೀತಾಮ್ | ಸ್ತಭ್ನನ್ತು || ಸ್ತಭ್ನಾ + ಹಿ ಎಂದಿರುವಾಗ ಶ್ನಾವಿಕರಣಕ್ಕೆ ಶಾನಚಾದೇಶ ಹೇಳುತ್ತಾನೆ.

ಶ್ನಾವಿಕರಣಕ್ಕೆ ಶಾನಚ್ ಹೇಳುವ ಸೂತ್ರ.

**೬೮೯. ಹಲಃ ಶ್ನಃ ಶಾನಜ್ಝೌ || ೩-೧-೮೩ ||**

**ಹಲಃ ಪರಸ್ಯ ಶ್ನಃ ಶಾನಜಾದೇಶಃ ಸ್ಯಾದ್ಧೌ ಪರೇ | ಸ್ತಭಾನ ||**

ಹಲಃ, ಶ್ನಃ, ಶಾನಚ್, ಹೌ || ನಾಲ್ಕು ಪದಗಳುಳ್ಳ ಸೂತ್ರ. ಶ್ನಾ ಎಂಬುದರ ಷಷ್ಠೀ ಏಕವಚನ 'ಶ್ನಃ' ಎಂದಾಗಿದೆ. **ಸೂತ್ರಾರ್ಥ**—ಹಲಿನ ಪರದಲ್ಲಿರುವ ಶ್ನಾ ಪ್ರತ್ಯಯಕ್ಕೆ ಹಿ ಪರದಲ್ಲಿರುವಾಗ ಶಾನಚ್ ಆದೇಶ ಬರುತ್ತದೆ. ಸ್ತಭ್ + ನಾ + ಹಿ ಎಂದಿರುವಾಗ ನಾಕ್ಕೆ ಶಾನಚ್. ಶಾನಚಿನಲ್ಲಿ ಆನ ಉಳಿಯುತ್ತದೆ. ಸ್ತಭ್ + ಆನ + ಹಿ. 'ಅತೋ ಹೇಃ' ಹಿಗೆ ಲೋಪ. ಸ್ತಭಾನ ಸ್ತಭ್ನೀತಾತ್ | ಸ್ತಭ್ನೀತಮ್ | ಸ್ತಭ್ನೀತ || ಸ್ತಭ್ನಾನಿ | ಸ್ತಭ್ನಾವ | ಸ್ತಭ್ನಾಮ ||

**ಲಙ್** || ಅಸ್ತಭ್ನೋತ್, ಅಸ್ತಭ್ನಾತ್ || **ವಿಧಿಲಿಙ್** || ಸ್ತಭ್ನುಯಾತ್, ಸ್ತಭ್ನೀಯಾತ್ || **ಆಶೀರ್ಲಿಙ್** || ಸ್ತಭ್ಯಾತ್ || **ಲುಙ್** || ಅಸ್ತನ್ಭ್ + ಚ್ಲಿ + ತ್ ಎಂದಿರುವಾಗ ವಿಕಲ್ಪವಾಗಿ ಚ್ಲಿಗೆ ಅಙಾದೇಶ ಹೇಳುತ್ತಾನೆ.

ಚ್ಲಿಗೆ ಅಙಾದೇಶ ಹೇಳುವ ಸೂತ್ರ.

**೬೯೦. ಜೃಸ್ತನ್ಭುಮ್ರುಚುಮ್ಲುಚುಗ್ರುಚುಗ್ಲುಚುಗ್ಲುಞ್ಚುಶ್ವಿಭ್ಯಶ್ಚ || ೩-೧-೫೮ ||**

**ಚ್ಲೇರಙ್ ವಾ ಸ್ಯಾತ್ ||**

ದ್ವಿಪದ ಸೂತ್ರ. 'ಚ್ಲೇಃ ಸಿಚ್' ಸೂತ್ರದಿಂದ 'ಚ್ಲೇಃ', 'ಅಸ್ಯತಿವಕ್ತಿ—' ಸೂತ್ರದಿಂದ 'ಅಙ್', 'ಇರಿತೋ ವಾ' ಸೂತ್ರದಿಂದ 'ವಾ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಜೃ, ಸ್ತನ್ಭು, ಮ್ರುಚು, ಮ್ಲುಚು, ಗ್ರುಚು, ಗ್ಲುಚು, ಗ್ಲುಞ್ಚು, ಶ್ವಿ ಧಾತುಗಳ ಪರದಲ್ಲಿರುವ ಚ್ಲಿಗೆ ಅಙ್ ವಿಕಲ್ಪವಾಗಿ ಬರುತ್ತದೆ. ಪ್ರಕೃತ ಸ್ತಮ್ಭಿನ ಪರದ ಚ್ಲಿಗೆ ಅಙ್ ಬಂದರೆ 'ಅನಿದಿತಾಂ ಹಲಃ—' ಸೂತ್ರದಿಂದ ಉಪಧಾ ನಕಾರಕ್ಕೆ ಲೋಪ. ಅಸ್ತಭ್ + ಅ + ತ್ = ಅಸ್ತಭತ್ | ಅಸ್ತಭತಾಮ್ | ಅಸ್ತಭನ್ || ಇತ್ಯಾದಿ ರೂಪವಾಗುತ್ತದೆ. ಅಙ್ ಬಾರದಿದ್ದರೆ ಸಿಚ್. ಇದು ಜಿತ್ತಾಗದಿದ್ದುದರಿಂದ

ನಲೋಪವಿಲ್ಲ. ಅಸ್ತಮ್ನೀತ್ । ಅಸ್ತಮ್ನೀಷ್ಟಾಮ್ | ಅಸ್ತಮ್ನೀಷುಃ || ಅಸ್ತಮ್ನೀಃ | ಅಸ್ತಮ್ನೀಷ್ಟಮ್ | ಅಸ್ತಮ್ನೀಷ್ಟ || ಅಸ್ತಮ್ನೀಷಮ್ | ಅಸ್ತಮ್ನೀಷ್ವ | ಅಸ್ತಮ್ನೀಷ್ಮ || ನಕಾರಕ್ಕೆ ಅನುಸ್ವಾರಪರಸವರ್ಣ ಬಂದರೆ ಮಕಾರ ಬರುತ್ತದೆ. ಲೃಙ್ || ಅಸ್ತ ಮ್ಭಿಷ್ಯತ್ ||

ಹೀಗೆಯೇ ಸ್ತುನ್ಭು, ಸ್ಕನ್ಭು, ಸ್ಕುನ್ಭು ಮೂರು ಧಾತುಗಳು ಸಾರ್ವಧಾತುಕ ಗಳಲ್ಲಿ ಎರಡೆರಡು ರೂಪಗಳನ್ನು ಹೊಂದುತ್ತವೆ. ಉಪಸರ್ಗದ ಪರದಲ್ಲಿರುವ ಸ್ತನ್ಭಿನ ಸಕಾರಕ್ಕೆ ಷತ್ವ ಹೇಳುತ್ತಾನೆ.

ಸ್ತನ್ಭಿನ ಸಕಾರಕ್ಕೆ ಷತ್ವ ಹೇಳುವ ಸೂತ್ರ.

೬೯೧. **ಸ್ತನ್ಭೇಃ || ೮-೩-೬೭ ||**

**ಸ್ತನ್ಭೇಃ ಸೌತ್ರಸ್ಯ ಸಸ್ಯ ಷಃ ಸ್ಯಾತ್ । ವ್ಯಷ್ಟಭತ್ | ಅಸ್ತಮ್ನೀತ್ ||**

ಏಕಪದ ಸೂತ್ರ. 'ಉಪಸರ್ಗಾತ್—' ಸೂತ್ರದಿಂದ 'ಉಪಸರ್ಗಾತ್' ಅನುವೃತ್ತಿ. 'ಇಣ್ಕೋಃ' ಅಧಿಕಾರ. 'ಸಹೇಃ ಸಾಡಃ ಸಃ' ಸೂತ್ರದಿಂದ 'ಸಃ' ಅನುವೃತ್ತಿ. 'ಮೂರ್ಧನ್ಯಃ' (ಷ) ಅಧಿಕಾರ. **ಸೂತ್ರಾರ್ಥ**—ಉಪಸರ್ಗದ ಇಣಿನ ಪರದಲ್ಲಿರುವ ಸ್ತನ್ಭ್ ಧಾತುವಿನ ಸಕಾರಕ್ಕೆ ಷಕಾರಾದೇಶ ಬರುತ್ತದೆ. ಉಪಸರ್ಗ, ಧಾತು ಬೇರೆ ಬೇರೆ ಪದಗಳಾದುದರಿಂದ 'ಸಾತ್ಪದಾದ್ಯೋಃ' ಸೂತ್ರದಿಂದ ಪದಾದಿ ಸಕಾರಕ್ಕೆ ಷತ್ವನಿಷೇಧ ಹೇಳಿದುದರಿಂದ ಪುನಃ ಷತ್ವ ಹೇಳಿದೆ. ವಿ+ಅಸ್ತಭತ್ ಇಲ್ಲಿ ಇಣ್ ವಿ ಉಪಸರ್ಗದಲ್ಲಿದೆ. ಅದರ ಪರದಲ್ಲಿ ಸ್ತನ್ಭಿನ ಸಕಾರವಿದೆ. ಮಧ್ಯೆ ಅಟ್ ವ್ಯವಧಾನವಿದ್ದರೂ 'ಪ್ರಾಕ್ ಸಿತಾದಡ್ ವ್ಯವಾಯೇಽಪಿ' ಸೂತ್ರದಿಂದ ಬರುತ್ತದೆ. ಎಂದುದರಿಂದ ಷತ್ವ ಬಂದರೆ ಅದನ್ನು ನಿಮಿತ್ತೀಕರಿಸಿ ತಕಾರಕ್ಕೆ ಷ್ಟುತ್ವ, ಯಣ್. ವ್ಯಷ್ಟಭತ್ ಎಂದಾಗುತ್ತದೆ. ವಿ+ಸ್ತಭ್ನಾತಿ=ವಿಷ್ಟಭ್ನಾತಿ ಇತ್ಯಾದಿ.

**||೨೦೧ || ಯುಞ್= ಬಂಧನೇ || ಯುನಾತಿ, ಯುನೀತೇ | ಯೋತಾ |**

**|| ೨೦೨ || ಕ್ನೂಞ್= ಶಬ್ದೇ || ಕ್ನೂನಾತಿ, ಕ್ನೂನೀತೇ | ಕ್ನವಿತಾ ||**

**|| ೨೦೩ || ದ್ರೂಞ್= ಹಿಂಸಾಯಾಮ್ || ದ್ರೂಣಾತಿ, ದ್ರೂಣೀತೇ ||**

**|| ೨೦೪ || ಪೂಞ್= ಪವನೇ**

**ಯುಞ್** ಧಾತು. ಉಭಯಪದೀ. ಅನಿಟ್. ಕ್ರೀಞ್‌ನಂತೇ ರೂಪವಾಗುತ್ತದೆ. ಯುನಾತಿ, ಯುನೀತೇ । ಯುಯಾವ, । ಯುಯುವೇ | ಯೋತಾ (೨) । ಯೋಷ್ಯತಿ, ಯೋಷ್ಯತೇ | ಯುನಾತು, ಯುನೀತಾಮ್ | ಅಯುನಾತ್, ಅಯುನೀತ | ಯುನೀಯಾತ್, ಯುನೀತ | ಯೂಯಾತ್, ಯೋಷೀಷ್ಟ | ಅಯೌಷೀತ್, ಅಯುತ | ಅಯುಷಾತಾಮ್ । ಅಯೋಷ್ಯತ್, ಅಯೋಷ್ಯತ ಇತ್ಯಾದಿ.

ಕ್ನೂಞ್ ಧಾತು. ಊದಂತವಾದುದರಿಂದ ಸೇಟ್. ಕ್ನೂನಾತಿ, ಕ್ನೂನೀತೇ | ಚುಕ್ನಾವ, ಚುಕ್ನುವೇ | ಕ್ನವಿತಾ (೨) | ಕ್ನವಿಷ್ಯತಿ, ಕ್ನವಿಷ್ಯತೇ | ಕ್ನೂನಾತು, ಕ್ನೂನೀತಾಮ್ | ಅಕ್ನೂನಾತ್, ಅಕ್ನೂನೀತ | ಕ್ನೂನೀಯಾತ್, ಕ್ನೂನೀತ | ಕ್ನೂಯಾತ್, ಕ್ನವಿಷೀಷ್ಟ | ಅಕ್ನವೀತ್, ಅಕ್ನವಿಷ್ಟ | ಅಕ್ನವಿಷ್ಯತ್, ಅಕ್ನವಿಷ್ಯತ |

ದ್ರೂಞ್ ಧಾತು. ಸೇಟ್. ದ್ರೂಣಾತಿ, ದ್ರೂಣೀತೇ | ಕ್ನೂಞ್‌ನಂತಾಗುತ್ತದೆ, 'ಅಟ್ ಕುಪ್ವಾಙ್—' ಸೂತ್ರದಿಂದ ಣತ್ವ ಬಂದಿದೆ.

ಪೂಞ್ ಧಾತು. ಸೇಟ್. ಪೂನಾತಿ ಎಂದಿರುವಾಗ ಹ್ರಸ್ವ ಹೇಳುತ್ತಾನೆ.

ಪ್ವಾದಿಗೆ ಹ್ರಸ್ವ ಹೇಳುವ ಸೂತ್ರ.

**೬೯೨. ಪ್ವಾದೀನಾಂ ಹ್ರಸ್ವಃ || ೭-೩-೮೦ ||**

**ಪೂಞ್ ಲೂಞ್ ಸ್ತೄಞ್ ಕೄಞ್ ವೄಞ್ ಧೂಞ್ ಶೄ ಪೄ ವೄ ಭೄ ಮೄ ದೄ ಜೄ ಝೄ ಧೄ ನೄ ಕೄ ಋ ಗೄ ಜ್ಯಾ ರೀ ಲೀ ವ್ಲೀ ಪ್ಲೀನಾಂ ಚತುರ್ವಿಂಶತೇಃ ಶಿತಿ ಹ್ರಸ್ವಃ | ಪುನಾತಿ, ಪುನೀತೇ | ಪವಿತಾ |**

|| ೩೦೫ || ದೄ=ವಿದಾರಣೇ (ಸೀಳುವುದು.) ದೃಣಾತಿ, ದೃಣೀತೇ ||

|| ೨೦೬ || ಲೂಞ್=ಛೇದನೇ || ಲುನಾತಿ, ಲುನೀತೇ ||

|| ೨೦೭ || ಸ್ತೄಞ್=ಆಚ್ಛಾದನೇ (ಮುಚ್ಚುವುದು.)

ಸ್ತೃಣಾತಿ | ಶರ್ಪೂರ್ವಾಃ ಖಯಃ | ತಸ್ತಾರ | ತಸ್ತರತುಃ | ತಸ್ತರೇ | ಸ್ತರೀತಾ, ಸ್ತರಿತಾ | ಸ್ತೃಣೀತ | ಸ್ತೀರ್ಯಾತ್ ||

ದ್ವಿಪದ ಸೂತ್ರ. 'ಷ್ಠಿವುಕ್ಲಮ್ವಾಚಮಾಂ—' ಸೂತ್ರದಿಂದ 'ಶಿತಿ' ಅನುವೃತ್ತಿ. ಸೂತ್ರಾರ್ಥ— ಪೂಞ್ ಮುಂತಾದ (೨) ಧಾತುಗಳಿಗೆ ಶಕಾರ ಇತ್ತಾದ ಪ್ರತ್ಯಯ ಪರವಾದಾಗ ಹ್ರಸ್ವ ಬರುತ್ತದೆ. ಇಪ್ಪತ್ತುನಾಲ್ಕು ಧಾತುಗಳು ವೃತ್ತಿಯಲ್ಲಿ ಹೇಳಿವೆ. ಆಗ ಪುನಾತಿ ಎಂದಾಗುತ್ತದೆ. ಪುನಾತಿ, ಪುನೀತೇ | ಪುಪಾವ, ಪುಪುವೇ | ಪವಿತಾ (೨) |ಪವಿಷ್ಯತಿ, ಪವಿಷ್ಯತೇ | ಪುನಾತು, ಪುನೀತಾಮ್ | ಅಪುನಾತ್, ಅಪುನೀತ | ಪುನೀಯಾತ್, ಪುನೀತ | ಪೂಯಾತ್, ಪವಿಷೀಷ್ಟ | ಅಪಾವೀತ್, ಅಪವಿಷ್ಟ | ಅಪವಿಷ್ಯತ್, ಅಪವಿಷ್ಯತ || ಹೀಗೆ ದೀರ್ಘವಾದ ಧಾತುಗಳಿಗೆಲ್ಲಾ ಶ್ನಾ ಪರವಾದಾಗ ಹ್ರಸ್ವ ತಿಳಿಯಬೇಕು.

ದೄ ಧಾತು. ಋಕಾರಾಂತವಾದುದರಿಂದ ಸೇಟ್. ದೃಣಾತಿ, ದೃಣೀತೇ | ದದಾರ | ದದೄ+ಅತುಸ್ ಎಂದಿರುವಾಗ 'ಶೄದೄಪ್ರಾಂ ಹ್ರಸ್ವೋ ವಾ' ಸೂತ್ರದಿಂದ ವಿಕಲ್ಪಹ್ರಸ್ವ ಬಂದರೆ ಯಣ್. ದದ್ರತುಃ | ದದ್ರುಃ ||ಇತ್ಯಾದಿ. ಹ್ರಸ್ವ ಬಾರದಿದ್ದರೆ 'ಋಚ್ಛತ್ಯೄತಾಮ್' ಸೂತ್ರದಿಂದ ಗುಣ. ದದರತುಃ | ದದರುಃ || ಇತ್ಯಾದಿ.

ದದ್ರೇ, ದದರೇ || ದರಿತಾ, ದರೀತಾ || 'ವೃತೋ ವಾ' ಸೂತ್ರದಿಂದ ಇಟಿಗೆ ದೀರ್ಘ ವಿಕಲ್ಪ. ದರಿಷ್ಯತಿ, ದರೀಷ್ಯತಿ | ದರಿಷ್ಯತೇ, ದರೀಷ್ಯತೇ || ದೃಣಾತು, ದೃಣೀತಾಮ್ | ಅದೃಣಾತ್, ಅದೃಣೀತ | ದೃಣೀಯಾತ್, ದೃಣೀತ | ದೀರ್ಯಾತ್ | 'ಋತ ಇದ್ಧಾತೋಃ' ಇತ್ವ ಬಂದು ದೀರ್ಘ ಬಂದಿದೆ. ದರಿಷೀಷ್ಟ, ದರೀಷೀಷ್ಟ | ಅದಾರೀತ್ | 'ಸಿಚಿ ಚ ಪರಸ್ಮೈಪದೇಷು' ಸೂತ್ರದಿಂದ ಇಟಿಗೆ ದೀರ್ಘವಿಲ್ಲ. ಅದಾರಿಷ್ಟಾಂ || ಅದರಿಷ್ಟ, ಅದರೀಷ್ಟ | ಅದರಿಷ್ಯತ್, ಅದರೀಷ್ಯತ್; ಅದರೀಷ್ಯತ (೨) ||

**ಲೂಙ್** ಧಾತು. ಸೇಟ್, ಲುನಾತಿ, ಲುನೀತೇ | ಲುಲಾವ, ಲುಲುವೇ | ಲವಿತಾ (೨) | ಲವಿಷ್ಯತಿ, ಲವಿಷ್ಯತೇ | ಲುನಾತು, ಲುನೀತಾಮ್ | ಅಲುನಾತ್, ಅಲುನೀತ ಲುನೀಯಾತ್, ಲುನೀತ | ಲೂಯಾತ್, ಲವಿಷೀಷ್ಟ | ಅಲಾವೀತ್, ಅಲವಿಷ್ಟ | ಅಲವಿಷ್ಯತ್, ಅಲವಿಷ್ಯತ ||

**ಸ್ತೄ** ಧಾತು. ಸೇಟ್. ಸ್ತೃಣಾತಿ, ಸ್ತೃಣೀತೇ | ತಸ್ತಾರ. ಅಭ್ಯಾಸದಲ್ಲಿ 'ಶರ್ಪೂರ್ವಾಃ ಖಯಃ' ಸೂತ್ರದಿಂದ ತಕಾರ ಉಳಿದು ಸಕಾರಲೋಪವಾಗಿದೆ. ತಸ್ತರತುಃ | ತಸ್ತರುಃ || 'ಋಚ್ಛತ್ಯೄತಾಮ್' ಸೂತ್ರದಿಂದ ಗುಣಬಂದಿದೆ. ತಸ್ತರೇ | ತಸ್ತರಾತೇ | ತಸ್ತರಿರೇ || ಇತ್ಯಾದಿ. 'ವೃತೋ ವಾ' ಇಟಿಗೆ ವಿಕಲ್ಪ ದೀರ್ಘ. ಸ್ತರೀತಾ, ಸ್ತರಿತಾ (೪) | ಸ್ತರೀಷ್ಯತಿ, ಸ್ತರಿಷ್ಯತಿ, ಸ್ತರೀಷ್ಯತೇ, ಸ್ತರಿಷ್ಯತೇ || ಸ್ತೃಣಾತು, ಸ್ತೃಣೀತಾಮ್ | ಅಸ್ತೃಣಾತ್, ಅಸ್ತೃಣೀತ | ಸ್ತೃಣೀಯಾತ್, ಸ್ತೃಣೀತ | ಸ್ತೀರ್ಯಾತ್ | 'ಋತ ಇದ್ಧಾತೋಃ' ಇತ್ವ ಬಂದು 'ಹಲಿ ಚ' ಸೂತ್ರದಿಂದ ದೀರ್ಘಬಂದಿದೆ. ಆತ್ಮನೇಪದದಲ್ಲಿ ಇಡ್ವಿಕಲ್ಪ ಹೇಳುತ್ತಾನೆ.

ಲಿಙ್, ಸಿಚ್ ಗಳಿಗೆ ಇಡ್ವಿಕಲ್ಪ ಹೇಳುವ ಸೂತ್ರ.

**೭೯೩. ಲಿಙ್ಸಿಚೋರಾತ್ಮನೇಪದೇಷು || ೭-೨-೪೨ ||**

**ವೃಙ್ವೃಞ್ಭ್ಯಾಮೄದನ್ತಾಚ್ಚ ಪರಯೋರ್ಲಿಙ್ಸಿಚೋರಿಡ್ ವಾ ಸ್ಯಾತ್ತಙಿ ||**

ಲಿಙ್ಸಿಚೋಃ, ಆತ್ಮನೇಪದೇಷು || ದ್ವಿಪದ ಸೂತ್ರ. 'ವೃತೋ ವಾ' ಸೂತ್ರದಿಂದ 'ವೃತ', 'ಇಟ್ ಸನಿ ವಾ' ಸೂತ್ರದಿಂದ 'ಇಟ್', 'ವಾ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ವೃಙ್, ವೃಞ್ ಧಾತುಗಳ ಮತ್ತು ೠಕಾರಾಂತ ಧಾತುಗಳ ಪರದಲ್ಲಿರುವ ಲಿಙ್ ಮತ್ತು ಸಿಚಿಗೆ ತಙ್ ಪರವಾದಾಗ ಇಡಾಗಮ ವಿಕಲ್ಪವಾಗಿ ಬರುತ್ತದೆ. ಪ್ರಕೃತ ೠದಂತಕ್ಕೆ ಲಿಙ್ ಪರವಾದುದರಿಂದ ಅದಕ್ಕೆ ಇಡಾಗಮವಿಕಲ್ಪಬಂದರೆ ಸ್ತೄ + ಇಷೀಷ್ಟ ಎಂದಿರುವಾಗ ಗುಣ. ಸ್ತರಿಷೀಷ್ಟ. ಇಲ್ಲಿ 'ವೃತೋ ವಾ' ಸೂತ್ರದಿಂದ ವಿಕಲ್ಪವಾಗಿ ದೀರ್ಘ ಬರಲಿ ಎಂದರೆ ಅದಕ್ಕೆ ನಿಷೇಧ ಹೇಳುತ್ತಾನೆ.

ಇಟಿಗೆ ದೀರ್ಘನಿಷೇಧ ಹೇಳುವ ಸೂತ್ರ.

**೬೯೪. ನ ಲಿಙಿ || ೭-೨-೩೯ ||**

**ವೄತ ಇಟೋ ಲಿಙಿ ನ ದೀರ್ಘಃ || ಸ್ತರಿಷೀಷ್ಟ | ಉಶ್ಚೇತಿ ಕಿತ್ತ್ವಮ್ || ಸ್ತೀರ್ಷೀಷ್ಟ | ಸಿಚಿ ಚ ಪರಸ್ಮೈಪದೇಷು | ಅಸ್ತಾರೀತ್ | ಅಸ್ತಾರಿಷ್ಟಾಮ್ | ಅಸ್ತಾರಿಷುಃ | ಅಸ್ತರೀಷ್ಟ, ಅಸ್ತರಿಷ್ಟ, ಅಸ್ತೀರ್ಷ್ಟ ||**

ದ್ವಿಪದ ಸೂತ್ರ. 'ವೄತೋ ವಾ' ಸೂತ್ರದಿಂದ 'ವೄತಃ', 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ 'ಇಟ್', 'ಗ್ರಹೋಲಿಟಿ ದೀರ್ಘಃ' ಸೂತ್ರದಿಂದ 'ದೀರ್ಘಃ' ಪದಗಳು ಅನುವೃತ್ತವಾಗುತ್ತವೆ. ಲಿಙ್ ಎಂಬುದು ಷಷ್ಠ್ಯಂತವಾಗಿಯೂ, ಇಟ್ ಪ್ರಥಮಾಂತವು ಷಷ್ಠ್ಯಂತವಾಗಿಯೂ ಪರಿಣತವಾಗುತ್ತವೆ. **ಸೂತ್ರಾರ್ಥ—** ವೃಙ್, ವೃಞ್, ೠದಂತಧಾತುಗಳ ಪರದಲ್ಲಿರುವ ಲಿಙ್‌ಸಂಬಂಧವಾದ ಇಟಿಗೆ ದೀರ್ಘಬರುವುದಿಲ್ಲ. ಸ್ತರಿಷೀಷ್ಟ ಎಂಬಲ್ಲಿ ೠದಂತದ ಪರದ ಲಿಙಿನ ಇಟ್ ಆದುದರಿಂದ ದೀರ್ಘನಿಷೇಧಬಂದರೆ ಸ್ತರಿಷೀಷ್ಟ ಎಂದೇ ರೂಪವಾಗುತ್ತದೆ. ಇಡಾಗಮ ಬಾರದಿದ್ದರೆ 'ಉಶ್ಚ' (ಸೂ. ೫೫೫) ಸೂತ್ರದಿಂದ ಲಿಙ್ ಕಿತ್ತಾದುದರಿಂದ ಗುಣ ಬರುವುದಿಲ್ಲ. ಸ್ತೄ+ಸೀಷ್ಟ ಎಂದಿರುವಾಗ 'ೠತ ಇದ್ಧಾತೋಃ' ಸೂತ್ರದಿಂದ ೠಕಾರಕ್ಕೆ ಇತ್ವ. ರಪರವಾಗಿ ಬಂದರೆ ಸ್ತಿರ್+ಷೀಷ್ಟ. 'ಹಲಿ ಚ' ಸೂತ್ರದಿಂದ ದೀರ್ಘ. ಸ್ತೀರ್ಷೀಷ್ಟ | ಸ್ತೀರ್ಷೀಯಾಸ್ತಾಮ್ | ಸ್ತೀರ್ಷೀರನ್ || ಇತ್ಯಾದಿ.

**ಲುಙ್** || ಅಸ್ತೄ+ಸ್+ತ. ಇಟ್. 'ಸಿಚಿ ವೃದ್ಧಿಃ ಪರಸ್ಮೈಪದೇಷು' ವೃದ್ಧಿ (ಆರ್). ಅಸ್ತಾರಿಸ್+ಈತ್. 'ಇಟ ಈಟಿ' ಸಲೋಪ. ಅಸ್ತಾರೀತ್ | ಅಸ್ತಾರಿಷ್ಟಾಮ್ | ಇಲ್ಲಿಯೂ 'ಸಿಚಿ ಚ ಪರಸ್ಮೈಪದೇಷು' ಸೂತ್ರದಿಂದ ಇಟಿಗೆ ದೀರ್ಘನಿಷೇಧ ಬರುತ್ತದೆ. ಅಸ್ತಾರಿಷುಃ || ಅಸ್ತಾರೀಃ | ಅಸ್ತಾರಿಷ್ಟಮ್ | ಅಸ್ತಾರಿಷ್ಟ || ಅಸ್ತಾರಿಷಮ್ | ಅಸ್ತಾರಿಷ್ವ | ಅಸ್ತಾರಿಷ್ಮ || ಆ.—ಅಸ್ತೄ+ಇಸ್+ತ. ಗುಣ, ಷತ್ವ, ಷ್ಟುತ್ವ ಅಸ್ತರಿಷ್ಟ. 'ವೄತೋ ವಾ' ಸೂತ್ರದಿಂದ ವಿಕಲ್ಪವಾಗಿ ಇಟಿಗೆ ದೀರ್ಘ. ಅಸ್ತರೀಷ್ಟ. 'ಲಿಙ್‌ಸಿಚೋರಾತ್ಮನೇಪದೇಷು' ಸೂತ್ರದಿಂದ ಇಡಾಗಮ ವಿಕಲ್ಪವಾದುದರಿಂದ ಇಟ್ ಬಂದರೆ ಹಿಂದೆ ಹೇಳಿದ ರೂಪಗಳು, ಬಾರದಿದ್ದರೆ ಅಸ್ತೄ+ಸ್+ತ ಎಂದಿರುವಾಗ 'ಉಶ್ಚ' ಸೂತ್ರದಿಂದ ಸಿಜ್ ಕಿತ್ತಾಗುವುದರಿಂದ ಗುಣವಿಲ್ಲ. ಇತ್ವ, ದೀರ್ಘ. ಅಸ್ತೀರ್ಷ್ಟ | ಅಸ್ತೀರ್ಷಾತಾಮ್ | ಅಸ್ತೀರ್ಷತ || ಇತ್ಯಾದಿ. **ಲೃಙ್** || ಅಸ್ತರಿಷ್ಯತ್, ಅಸ್ತರೀಷ್ಯತ್ | ಅಸ್ತರಿಷ್ಯತ, ಅಸ್ತರೀಷ್ಯತ ||

**|| ೨೦೮ || ಕೄಞ್ = ಹಿಂಸಾಯಾಮ್**

**ಕೃಣಾತಿ, ಕೃಣೀತೇ | ಚಕಾರ, ಚಕರೇ ||**

|| ೨೦೯ || ವೃಾಞ್—ವರಣೇ (ಸ್ವೀಕರಿಸುವುದು.)

ವೃಣಾತಿ, ವೃಣೀತೇ | ವವಾರ, ವವರೇ | ವರಿತಾ, ವರೀತಾ | ಉದೋಷ್ಠ್ಯೇತ್ಯುತ್ವಮ್ | ವೂರ್ಯಾತ್ | ವರಿಷೀಷ್ಟ, ವೂರ್ಷೀಷ್ಟ | ಅವಾರೀತ್ | ಅವಾರಿಷ್ಟಾಮ್ | ಅವರಿಷ್ಟ, ಅವರೀಷ್ಟ | ಅವೂರ್ಷ್ಟ |

|| ೨೧೦ || ಧೂಞ್—ಕಮ್ಪನೇ || (ನಡುಗುವುದು.)

ಧುನಾತಿ, ಧುನೀತೇ | ಧವಿತಾ, ಧೋತಾ | ಅಧಾವೀತ್ | ಅಧವಿಷ್ಟ, ಅಧೋಷ್ಟ |

|| ೨೧೧ || ಗ್ರಹ—ಉಪಾದಾನೇ (ತೆಗೆದುಕೊಳ್ಳುವುದು.)

ಗೃಹ್ಣಾತಿ, ಗೃಹ್ಣೀತೇ | ಜಗ್ರಾಹ, ಜಗೃಹೇ ||

ಕೃಾಞ್ ಧಾತು. ಋಕಾರಾಂತ. ಸೇಟ್. ಋವರ್ಣದ ಪರದಲ್ಲಿರುವ ನಕಾರಕ್ಕೆ ಣತ್ವ. ಕೃಣಾತಿ | ಕೃಣೀತಃ | ಕೃಣನ್ತಿ || ಇತ್ಯಾದಿ. ಆ.—ಕೃಣೀತೇ | ಕೃಣಾತೇ | ಕೃಣತೇ || ಇತ್ಯಾದಿ. ಚಕಾರ | ಚಕರತುಃ | ಚಕರುಃ || ಚಕರಿಥ | ಚಕರಥುಃ | ಚಕರ || ಚಕಾರ, ಚಕರ | ಚಕರಿವ | ಚಕರಿಮ || ಚಕರೇ | ಚಕರಾತೇ | ಚಕರಿರೇ || ಇತ್ಯಾದಿ. ಕರಿತಾ, ಕರೀತಾ (೨) || ಕರಿಷ್ಯತಿ, ಕರೀಷ್ಯತಿ, ಕರಿಷ್ಯತೇ, ಕರೀಷ್ಯತೇ || ಕೃಣಾತು, ಕೃಣೀತಾಮ್ | ಅಕೃಣಾತ್, ಅಕೃಣೀತ | ಕೃಣೀಯಾತ್, ಕೃಣೀತ | ಕೀರ್ಯಾತ್, ಕರಿಷೀಷ್ಟ, ಕೀರ್ಷೀಷ್ಟ | ಅಕಾರೀತ್ ಅಕರೀಷ್ಟ, ಅಕರಿಷ್ಟ, ಅಕೀರ್ಷ್ಟ || ಅಕರಿಷ್ಯತ್ (೨) | ಅಕರಿಷ್ಯತ (೨) ||

ವೃಾಞ್ ಧಾತು. ಸೇಟ್. ವೃಣಾತಿ, ವೃಣೀತೇ | ವವಾರ, ವವರೇ | ವರಿತಾ, ವರೀತಾ (೨) || ವರಿಷ್ಯತಿ, ವರೀಷ್ಯತಿ, ವರಿಷ್ಯತೇ, ವರೀಷ್ಯತೇ | ವೃಣಾತು, ವೃಣೀತಾಮ್ | ಅವೃಣಾತ್, ಅವೃಣೀತ | ವೃಣೀಯಾತ್, ವೃಣೀತ | ವೄ+ಯಾತ್. 'ಉದೋಷ್ಠ್ಯಪೂರ್ವಸ್ಯ' (ಸೂತ್ರ ೬೧೩) ಉತ್ವ. 'ಹಲಿ ಚ' ದೀರ್ಘ. ವೂರ್ಯಾತ್ | ವೂರ್ಯಾಸ್ತಾಮ್ | ಇತ್ಯಾದಿ. ಆ—ವರಿಷೀಷ್ಟ, ವೂರ್ಷೀಷ್ಟ || ಅವಾರೀತ್ | ಅವರಿಷ್ಟ, ಅವರೀಷ್ಟ ಅವೂರ್ಷ್ಟ ||

ಧೂಞ್ ಧಾತು. ಧುನಾತಿ, ಧುನೀತೇ | ದುಧಾವ, ದುಧುವೇ | 'ಸ್ವರತಿಸೂತಿ—' ಸೂತ್ರದಿಂದ ಊದಂತವಾದುದರಿಂದ ಇಡ್ವಿಕಲ್ಪ. ಧವಿತಾ, ಧೋತಾ | ಧವಿಷ್ಯತಿ, ಧೋಷ್ಯತಿ | ಧವಿಷ್ಯತೇ ಧೋಷ್ಯತೇ | ಧುನಾತು, ಧುನೀತಾಮ್ | ಅಧುನಾತ್, ಅಧುನೀತ | ಧುನೀಯಾತ್, ಧುನೀತ | ಧೂಯಾತ್ ಧವಿಷೀಷ್ಟ, ಧೋಷೀಷ್ಟ | ಅಧಾವೀತ್. ಇಲ್ಲಿ 'ಸ್ತುಸುಧೂಞ್ಭ್ಯಃ ಪರಸ್ಮೈಪದೇಷು' ಸೂತ್ರದಿಂದ ನಿತ್ಯವಾಗಿ ಇಡಾಗಮ. ಆ.—ಅಧವಿಷ್ಟ, ಅಧೋಷ್ಟ || ಅಧವಿಷ್ಯತ್, ಅಧೋಷ್ಯತ್, ಅಧವಿಷ್ಯತ, ಅಧೋಷ್ಯತ ||

ಗ್ರಹ ಧಾತು. ಸೇಟ್. ಸ್ವರಿತೇತ್ತಾದುದರಿಂದ ಉಭಯಪದಿ. ಗ್ರಹ್ + ನಾ + ತಿ. ಶ್ನಾ ಙಿತ್ತಾದುದರಿಂದ 'ಗ್ರಹಿಜ್ಯಾವಯಿ—' ಸೂತ್ರದಿಂದ ಸಂಪ್ರಸಾರಣ. (ರೇಫಕ್ಕೆ ಋಕಾರ) ಣತ್ವ. ಗೃಹ್ಣಾತಿ | ಗೃಹ್ಣೀತಃ | ಗೃಹ್ಣನ್ತಿ || ಗೃಹ್ಣಾಸಿ | ಗೃಹ್ಣೀಥಃ | ಗೃಹ್ಣೀಥ || ಗೃಹ್ಣಾಮಿ | ಗೃಹ್ಣೀವಃ | ಗೃಹ್ಣೀಮಃ || ಆ.— ಗೃಹ್ಣೀತೇ | ಗೃಹ್ಣಾತೇ | ಗೃಹ್ಣತೇ || ಇತ್ಯಾದಿ.

ಲಿಟ್ || ಜಗ್ರಾಹ | ಜಗೃಹತುಃ | ಜಗೃಹುಃ || ಜಗ್ರಹಿಥ | ಜಗೃಹಥುಃ | ಜಗೃಹ || ಜಗ್ರಾಹ, ಜಗ್ರಹ | ಜಗೃಹಿವ | ಜಗೃಹಿಮ || ದ್ವಿವಚನಾದಿಗಳು ಕಿತ್ತಾದುದರಿಂದ ಸಂಪ್ರಸಾರಣ ಬಂಧಿದೆ. ಆ.—ಜಗೃಹೇ | ಜಗೃಹಾತೇ | ಜಗೃಹಿರೇ || ಜಗೃಹಿಷೇ | ಜಗೃಹಾಥೇ | ಜಗೃಹಿಢ್ವೇ || ಜಗೃಹೇ ಜಗೃಹಿವಹೇ | ಜಗೃಹಿಮಹೇ || ಲುಟ್ || ಗ್ರಹ್ + ಇತಾ = ಗ್ರಹಿತಾ ಎಂದಿರುವಾಗ ಇಟಿಗೆ ದೀರ್ಘ ಹೇಳುತ್ತಾನೆ.

ಗ್ರಹಿನ ಪರದ ಇಟಿಗೆ ದೀರ್ಘ ಹೇಳುವ ಸೂತ್ರ.

**೬೯೫. ಗ್ರಹೋಽಲಿಟಿ ದೀರ್ಘಃ || ೭-೨-೩೭ ||**

**ಏಕಾಚೋ ಗ್ರಹೇರ್ವಿಹಿತಸ್ಯೇಟೋ ದೀರ್ಘಃ, ನತು ಲಿಟಿ | ಗ್ರಹೀತಾ | ಗೃಹ್ಣಾತು | ಹಲಃ ಶ್ನಃ ಶಾನಜ್ಝಾವಿತಿ ಶ್ನಃ ಶಾನಜಾದೇಶಃ | ಗೃಹಾಣ | ಗೃಹ್ಯಾತ್ | ಗ್ರಹೀಷೀಷ್ಟ | ಹ್ಮ್ಯನ್ತೇತಿ ನ ವೃದ್ಧಿಃ | ಅಗ್ರಹೀತ್ | ಅಗ್ರಹೀಷ್ಟಾವ್ ಅಗ್ರಹೀಷ್ಟ | ಅಗ್ರಹೀಷಾತಾಮ್ ||**

ಗ್ರಹಃ, ಅಲಿಟಿ, ದೀರ್ಘಃ || ತ್ರಿಪದ ಸೂತ್ರ. 'ಏಕಾಚ ಉಪದೇಶೇಽನುದಾತ್ತಾತ್' ಸೂತ್ರದಿಂದ 'ಏಕಾಚಃ', 'ಆರ್ಧಧಾತುಕಸ್ಯೇಟ್—' ಸೂತ್ರದಿಂದ 'ಇಟ್' ಅನುವೃತ್ತವಾಗುತ್ತವೆ. ಇಟ್ ಷಷ್ಠ್ಯನ್ತವಾಗಿ ವಿಪರಿಣತವಾಗುತ್ತದೆ. ವಿಹಿತ ವಿಶೇಷಣ ಮಾಡಿಕೊಳ್ಳಬೇಕು. ಗ್ರಹಃ ಪಂಚಮೀ. **ಸೂತ್ರಾರ್ಥ**—ಏಕಾಚಾದ ಗ್ರಹ್ ಧಾತುವಿನ ಪರದಲ್ಲಿ ವಿಹಿತವಾದ ಇಟಿಗೆ ದೀರ್ಘ ಬರುತ್ತದೆ. ಆದರೆ ಲಿಟಿನಲ್ಲಿ ಈ ದೀರ್ಘವಿಲ್ಲ. ಪ್ರಕೃತ ಗ್ರಹಿನ ಪರದಲ್ಲಿ ವಿಹಿತವಾದುದರಿಂದ ದೀರ್ಘ ಬಂದರೆ ಗ್ರಹೀತಾ ಎಂದಾಗುತ್ತದೆ. ಹೀಗೇ ಇಡಾಗಮ ಮುಂದೆ ಬಂದಾಗ ಎಲ್ಲಾ ಕಡೆಯಲ್ಲಿಯೂ ದೀರ್ಘ.

ಲೃಟ್ || ಗ್ರಹೀಷ್ಯತಿ, ಗ್ರಹೀಷ್ಯತೇ || ಇತ್ಯಾದಿ. **ಲೋಟ್** || ಗೃಹ್ಣಾತು. ಗೃಹ್ಣೀತಾತ್ | ಗೃಹ್ಣೀತಾಮ್ | ಗೃಹ್ಣನ್ತು || ಗೃಹ್ + ಶ್ನಾ + ಹಿ ಎಂದಿರುವಾಗ, 'ಹಲಃ ಶ್ನಃ ಶಾನಜ್ಝೌ' ಸೂತ್ರದಿಂದ ಶ್ನಾ ಪ್ರತ್ಯಯಕ್ಕೆ ಶಾನಚ್ ಆದೇಶ. 'ಅತೋ ಹೇಃ' ಹಿಗೆ ಲೋಪ. ಗೃಹಾಣ, ಗೃಹ್ಣೀತಾತ್ | ಗೃಹ್ಣೀತಮ್ | ಗೃಹ್ಣೀತ || ಗೃಹ್ಣಾನಿ | ಗೃಹ್ಣಾವ | ಗೃಹ್ಣಾಮ || ಆ.— ಗೃಹ್ಣೀತಾಮ್ | ಗೃಹ್ಣಾತಾಮ್ | ಗೃಹ್ಣತಾಮ್ || ಗೃಹ್ಣೀಷ್ವ | ಗೃಹ್ಣಾಥಾಮ್ | ಗೃಹ್ಣೀಧ್ವಮ್ || ಗೃಹ್ಣೈ | ಗೃಹ್ಣಾ

ವಹೈ । ಗೃಹ್ಣಾಮಹೈ ॥ ಲಙ್ ॥ ಅಗೃಹ್ಣಾತ್ । ಅಗೃಹ್ಣೀತ ॥ ವಿಧಿಲಿಙ್ ॥ ಗೃಹ್ಣೀಯಾತ್, ಗೃಹ್ಣೀತ । ಆಶೀರ್ಲಿಙ್ ॥ ಗೃಹ್ಯಾತ್, ಗ್ರಹೀಷೀಷ್ಟ । ಲುಙ್ ನಲ್ಲಿ 'ವದವ್ರಜಹಲಂತಸ್ಯಾಚಃ' ಸೂತ್ರದಿಂದ ವೃದ್ಧಿ ಪ್ರಾಪ್ತವಾದರೆ 'ಹ್ಮ್ಯಂತಕ್ಷಣ ಶ್ವಸ—' ಸೂತ್ರದಿಂದ ಹಾನ್ತವಾದುದರಿಂದ ವೃದ್ಧಿನಿಷೇಧ. ಅಗ್ರಹೀತ್ । ಅಗ್ರಹೀಷ್ಟಾಮ್ । ಅಗ್ರಹೀಷುಃ ॥ ಅಗ್ರಹೀಃ । ಅಗ್ರಹೀಷ್ಟಮ್ । ಅಗ್ರಹೀಷ್ಟ ॥ ಅಗ್ರಹೀಷಮ್ । ಅಗ್ರಹೀಷ್ವ । ಅಗ್ರಹೀಷ್ಮ । ಆ.—ಅಗ್ರಹೀಷ್ಟ । ಅಗ್ರಹೀಷಾತಾಮ್ । ಅಗ್ರಹೀಷತ ॥ ಇತ್ಯಾದಿ. ಲೃಙ್ ॥ ಅಗ್ರಹೀಷ್ಯತ್ । ಅಗ್ರಹೀಷ್ಯತ ॥

॥ ೨೧೨ ॥ ಕುಷ = ನಿಷ್ಕರ್ಷೇ

(ಒಳಗಿರುವುದನ್ನು ಹೊರಗೆ ತೆಗೆಯುವುದು)

ಕುಷ್ಣಾತಿ । ಕೋಷಿತಾ ।

॥ ೨೧೩ ॥ ಅಶ = ಬೋಜನೇ

ಅಶ್ನಾತಿ । ಆಶ । ಅಶಿತಾ । ಅಶಿಷ್ಯತಿ । ಅಶ್ನಾತು । ಅಶಾನ ।

॥ ೨೧೪ ॥ ಮುಷ = ಸ್ತೇಯೇ (ಕದಿಯುವುದು)

ಮೋಷಿತಾ । ಮುಷಾಣ ।

॥ ೨೧೫ ॥ ಜ್ಞಾ = ಅವಬೋಧನೇ (ತಿಳಿಯುವುದು) ಜಜ್ಞಾ

॥ ೨೧೬ ॥ ವೃಙ್ = ಸಂಭಕ್ತೌ (ಪೂಜಿಸುವುದು)

ವೃಣೀತೇ । ವವೃಷೇ । ವವೃಢ್ವೇ । ವರಿತಾ, ವರೀತಾ । ಅವರಿಷ್ಟ, ಅವರೀಷ್ಟ, ಅವೃತ ॥

ಇತಿ ಕ್ರ್ಯಾದಯಃ

ಇನ್ನುಮುಂದೆ ಕೇವಲ ಪರಸ್ಮೈಪದಿಧಾತುಗಳನ್ನು ಹೇಳುತ್ತಾನೆ. ಕುಷ ಧಾತು. ಸೇಟ್. ಕುಷ್ಣಾತಿ । ಚುಕೋಷ । ಕೋಷಿತಾ । ಕೋಷಿಷ್ಯತಿ ॥ ಕುಷ್ಣಾತು, ಕುಷ್ಣೀತಾತ್ । ಕುಷ್ಣೀತಾಮ್ । ಕುಷ್ಣನ್ತು ॥ ಕುಷಾಣ (ಶಾನಚ್), ಕುಷ್ಣೀತಾತ್ । ಕುಷ್ಣೀತಮ್ । ಕುಷ್ಣೀತ ॥ ಕುಷ್ಣಾನಿ । ಕುಷ್ಣಾವ । ಕುಷ್ಣಾಮ ॥ ಅಕುಷ್ಣಾತ್ । ಕುಷ್ಣೀಯಾತ್ । ಕುಷ್ಯಾತ್ । ಅಕೋಷೀತ್ । ಅಕೋಷಿಷ್ಯತ್ ।

ಅಶ ಧಾತು. ಸೇಟ್. ಅಶ್ನಾತಿ । ಅಶ್‌ಅಶ್ + ಅ = ಆಶ । ಆಶತುಃ । ಇತ್ಯಾದಿ. ಅಶಿತಾ । ಅಶಿಷ್ಯತಿ । ಅಶ್ನಾತು । ಮಧ್ಯಮ ಏಕವಚನದಲ್ಲಿ ಶಾನಚ್. ಅಶಾನ । ಅಶ್ನೀತಾತ್ । ಇತ್ಯಾದಿ. ಆಶ್ನಾತ್ । ಅಶ್ನೀಯಾತ್ । ಅಶ್ಯಾತ್ । ಆಶೀತ್ । ಆಶಿಷ್ಯತ್ ॥

**ಮುಷ** ಧಾತು. ಸೇಟ್। ಮುಷ್ಣಾತಿ। ಮುಮೋಷ। ಮೋಷಿತಾ। ಮೋಷಿಷ್ಯತಿ। ಮುಷ್ಣಾತು। ಮ—. ಏಕವಚನದಲ್ಲಿ ಮುಷಾಣ. ಅಮುಷ್ಣಾತ್। ಮುಷ್ಣೀಯಾತ್। ಮುಷ್ಯಾತ್। ಅಮೋಷೀತ್। ಅಮೋಷಿಷ್ಯತ್ ॥

**ಜ್ಞಾ** ಧಾತು. ಅನಿಟ್, 'ಜ್ಞಾಜನೋರ್ಜಾ' ಸೂತ್ರದಿಂದ ಶ್ನಾಪರವಾದಾಗ ಜಾ ಆದೇಶ. ಜಾನಾತಿ। ಜಾನೀತಃ। ಜಾನನ್ತಿ ॥ ಇತ್ಯಾದಿ. ಜಜ್ಞೌ। ಜ್ಞಾತಾ। ಜ್ಞಾಸ್ಯತಿ। ಜಾನಾತು। ಮ.—ಏಕವಚನದಲ್ಲಿ ಹಲಿನ ಪರದಲ್ಲಿಲ್ಲದಿರುವುದರಿಂದ ಶಾನಚ್ ಬರುವುದಿಲ್ಲ. ಜಾನೀಹಿ ॥ ಅಜಾನಾತ್। ಜಾನೀಯಾತ್। ಜ್ಞೇಯಾತ್. 'ವಾನ್ಯಸ್ಯ ಸಂಯೋಗಾದೇಃ' ಏತ್ವ ಬಂದಿದೆ. ಅಜ್ಞಾಸೀತ್. 'ಯಮರಮನಮಾತಾಂ ಸಕ್ ಚ' ಅಜ್ಞಾಸ್ಯತ್ ॥

**ವೃಞ್** ಧಾತು. ಸೇಟ್. ಇದು ಞಿತ್ತಾಗಿರುವುದರಿಂದ ಆತ್ಮನೇಪದೀ. ವೃಣೀತೇ। ವೃಣಾತೇ। ವೃಣತೇ ॥ ಇತ್ಯಾದಿ. ವವ್ರೇ। ವವ್ರಾತೇ। ವವ್ರಿರೇ ॥ ವವೃಷೇ। ವವ್ರಾಥೇ। ವವೃಢ್ವೇ ॥ ವವ್ರೇ। ವವೃವಹೇ। ವವೃಮಹೇ ॥ 'ಕೃಸೃಭೃ—' ಸೂತ್ರದಲ್ಲಿ ಸೇರಿರುವುದರಿಂದ ಇಡಾಗಮಕ್ಕೆ ನಿಷೇಧ. ವರಿತಾ, ವರೀತಾ ॥ 'ವೄತೋ ವಾ' ದೀರ್ಘವಿಕಲ್ಪ. ವರಿಷ್ಯತೇ, ವರೀಷ್ಯತೇ। ವೃಣೀತಾಮ್। ಅವೃಣಾತ್। ವೃಣೀತ। ವರಿಷೀಷ್ಟ 'ನ ಲಿಙಿ' ಸೂತ್ರದಿಂದ ದೀರ್ಘವಿಲ್ಲ. ಅವರಿಷ್ಟ, ಅವರೀಷ್ಟ। ಅವೃತ। 'ಲಿಙ್ಸಿಚೋಃ—' ಸೂತ್ರದಿಂದ ಇಡ್ವಿಕಲ್ಪ ಬಂದಿದೆ. ಅವರಿಷ್ಯತ, ಅವರೀಷ್ಯತ ॥

## ೧೦. ಅಥ ಚುರಾದಯಃ

### ॥ ೨೨೭ ॥ ಚುರ= ಸ್ತೇಯೇ (ಕದಿಯುವುದು.)

ಚುರಾದಿಗಳಿಗೆ ಣಿಚ್ ಹೇಳುವ ಸೂತ್ರ.

**೬೯೭. ಸತ್ಯಾಪಪಾಶರೂಪವೀಣಾತೂಲಶ್ಲೋಕಸೇನಾಲೋಮತ್ವಚವರ್ಮವರ್ಣಚೂರ್ಣಚುರಾದಿಭ್ಯೋ ಣಿಚ್ ॥ ೩-೧-೨೫ ॥**

**ಏಭ್ಯೋ ಣಿಚ್ ಸ್ಯಾತ್। ಚೂರ್ಣಾನ್ತೇಭ್ಯಃ 'ಪ್ರಾತಿಪದಿಕಾದ್ಧಾತ್ವರ್ಥೇ' ಇತ್ಯೇವ ಸಿದ್ಧೇ ತೇಷಾಮಿಹ ಗ್ರಹಣಂ ಪ್ರಪಂಚಾರ್ಥಮ್। ಚುರಾದಿಭ್ಯಸ್ತು ಸ್ವಾರ್ಥೇ। ಪುಗನ್ತೇತಿ ಗುಣಃ। ಸನಾದ್ಯನ್ತಾ ಇತಿ ಧಾತುತ್ವಮ್। ತಿಪ್ ಶಪಾದಿ। ಗುಣಾಯಾದೇಶೌ। ಚೋರಯತಿ ॥.**

**ಚುರ್** ಧಾತುವೇ ಮೊದಲಾದ ಧಾತುಸಮುದಾಯಕ್ಕೆ ಚುರಾದಿಗಣವೆಂದು ಹೆಸರು. ಇವುಗಳಿಗೆ ಸ್ವಾರ್ಥದಲ್ಲಿ ಣಿಚ್ ಪ್ರತ್ಯಯ ಹೇಳುತಾನೆ. ಣಿಚಿಗೆ ಪ್ರೇರ

ಣಾರ್ಥವೂ ಇದೆ. ಆದರೆ ಚುರಾದಿಗೆ ಬರುವ ಣಿಚಿಗೆ ಯಾವ ಅರ್ಥವೂ ಇಲ್ಲ. ಅದು ಯಾವ ಧಾತುವಿನಮೇಲೆ ವಿಹಿತವಾಗುವುದೋ ಆ ಧಾತುವಿನ ಅರ್ಥವೇ ಅದಕ್ಕೆ ಅರ್ಥವೆಂದು ತಿಳಿಯಬೇಕು.

ದ್ವಿಪದ ಸೂತ್ರ. **ಸೂತ್ರಾರ್ಥ**—ಸತ್ಯಾಪ, ಪಾಶ, ರೂಪ ವೀಣಾ, ತೂಲ ಶ್ಲೋಕ, ಸೇನಾ, ಲೋಮ, ತ್ವಚ, ವರ್ಮ, ವರ್ಣ, ಚೂರ್ಣ ಇವುಗಳಿಗೂ ಚುರಾದಿ ಧಾತುಗಳಿಗೂ ಣಿಚ್ ಪ್ರತ್ಯಯ ಬರುತ್ತದೆ. ಇದು ಯಾವ ಅರ್ಥದಲ್ಲಿ ಬರುತ್ತದೆ ಯೆಂಬುದನ್ನು ವಿವರಿಸುತ್ತಾನೆ. ಸತ್ಯಾಪದಿಂದ ಚೂರ್ಣ ಶಬ್ದದವರೆಗೆ ಣಿಚ್ ಇತರ ಶಾಸ್ತ್ರದಿಂದ ಬರುತ್ತಿರುವಾಗ ಇಲ್ಲಿ ಹೇಳಬೇಕಾಗಿಲ್ಲ. 'ಪ್ರಾತಿಪದಿಕಾದ್ಧಾತ್ವರ್ಥೇ ಬಹುಲಮಿಷ್ಠವಚ್ಚ' ಎಂದು ನಾಮಧಾತುಪ್ರಕರಣದಲ್ಲಿ ಹೇಳುತ್ತಾನೆ. ಪ್ರಾತಿಪದಿಕಗಳ ಮೇಲೆ ಧಾತ್ವರ್ಥ ವಿವಕ್ಷಾಮಾಡಿದಾಗ ಣಿಚ್ ಬರುತ್ತದೆ ಎಂದು ಹೇಳುತ್ತಾನೆ. ಸತ್ಯಾಪ, ಪಾಶಾದಿಗಳು ಪ್ರಾತಿಪದಿಕಗಳಾದುದರಿಂದ ಅವುಗಳಿಗೆ ಆ ವಾರ್ತಿಕದಿಂದಲೇ ಸಿದ್ಧವಾಗುವುದರಿಂದ ಪುನಃ ಇಲ್ಲಿ ಹೇಳಿರುವುದು (ಪ್ರಪಂಚಾರ್ಥಮ್) ಸ್ಪಷ್ಟವಾಗಿ ತಿಳಿಯಲೆಂದು ಹೇಳಿರುತ್ತಾನೆ. ಚುರಾದಿಧಾತುಗಳಿಗೆ ಸ್ವಾರ್ಥದಲ್ಲಿ ಣಿಚ್ ಬರುತ್ತದೆಂದು ತಿಳಿಯಬೇಕು. ಚುರ ಎಂಬಲ್ಲಿ ಅಕಾರ ಉಚ್ಚಾರಣಾರ್ಥ. ಅದಕ್ಕೆ ಣಿಚ್ ಬಂದರೆ ಚುರ್+ಣಿಚ್ ಎಂದಾಗುತ್ತದೆ. ಣಿಚಿನಲ್ಲಿ 'ಚುಟೂ' ಸೂತ್ರದಿಂದ ಣಕಾರವೂ, 'ಹಲಂತ್ಯಮ್' ಸೂತ್ರದಿಂದ ಚಕಾರವೂ ಇತ್ತಾಗಿ ಲೋಪವಾದರೆ ಇ ಉಳಿಯುತ್ತದೆ. ಚುರ್+ಇ. 'ಪುಗಂತಲಘೂಪಧಸ್ಯ ಚ' ಸೂತ್ರದಿಂದ ಲಘೂಪಧ ಗುಣ. ಚೋರಿ. ಣಿಚ್ ಸನಾದಿ ಹನ್ನೆರಡರಲ್ಲಿ ಸೇರಿರುವುದರಿಂದ 'ಸನಾದ್ಯಂತಾ ಧಾತವಃ' ಸೂತ್ರದಿಂದ ಚೋರಿ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಚೋರಿ ಧಾತುವಿನಮೇಲೆ ಲಡಾದಿ. ಲಟಿಗೆ ತಿಬಾದಿಗಳು ಬಂದಾಗ ಶಪ್. ಚೋರಿ+ಅ+ತಿ. 'ಸಾರ್ವಧಾತುಕಾರ್ಧಧಾತುಕಯೋಃ' ಇಕಾರಕ್ಕೆ ಗುಣ. ಚೋರೇ+ಅ+ತಿ. 'ಏಚೋಽಯವಾಯಾವಃ' ಅಯಾದೇಶ. ಚೋರಯತಿ । ಚೋರಯಂಗ. ಚೋರಯತಃ । ಚೋರಯಂತಿ ॥ ಚೋರಯಸಿ । ಚೋರಯಥಃ । ಚೋರಯಥ ॥ ಚೋರಯಾಮಿ । ಚೋರಯಾವಃ । ಚೋರಯಾಮಃ ॥ ಚೋರಿ ಣಿಜಂತದ ಮೇಲೆ ಆತ್ಮನೇಪದ ಹೇಳುತ್ತಾನೆ.

ಣಿಜಂತದ ಮೇಲೆ ಆತ್ಮನೇಪದ ಹೇಳುವ ಸೂತ್ರ.

೬೯೭. **ಣಿಚಶ್ಚ** ॥ ೧-೩-೭೪ ॥

**ಣಿಜಂತಾದಾತ್ಮನೇಪದಂ ಸ್ಯಾತ್ ಕರ್ತೃಗಾಮಿನಿ ಕ್ರಿಯಾಫಲೇ । ಚೋರಯತೇ । ಚೋರಯಾಮಾಸ । ಚೋರಯಿತಾ । ಚೋರಯತಾತ್, ಚೋರಯಿಷೀಷ್ಟ । ಣಿಶ್ರೀತಿ ಚಙ್ । ಣೌ ಚಙೀತಿ ಹ್ರಸ್ವಃ । ಚಙೀತಿ**

**ದ್ವಿತ್ವಮ್ । ಹಲಾದಿಃ ಶೇಷಃ । ದೀರ್ಘೋ ಲಘೋರಿತ್ಯಭ್ಯಾಸಸ್ಯ ದೀರ್ಘಃ । ಅಚೂಚುರತ್, ಅಚೂಚುರತ ॥**

**॥ ೨೧೮ ॥ ಕಥ= ವಾಕ್ಯಪ್ರಬಂಧೇ (ಹೇಳುವುದು.) ಅಲ್ಲೋಪಃ ॥**

ಣಿಚಃ, ಚ ॥ ದ್ವಿಪದ ಸೂತ್ರ. 'ಅನುದಾತ್ತಙಿತಃ—' ಸೂತ್ರದಿಂದ 'ಆತ್ಮನೇಪದಮ್', 'ಸ್ವರಿತಞಿತಃ—' ಸೂತ್ರದಿಂದ 'ಕರ್ತ್ರಭಿಪ್ರಾಯೇ ಕ್ರಿಯಾಫಲೇ' ಪದಗಳು ಅನುವೃತ್ತವಾಗುತ್ತವೆ. ಣಿಚ್ ಪ್ರತ್ಯಯವಾದುದರಿಂದ ತದಂತ ತೆಗೆದುಕೊಳ್ಳಬೇಕು. **ಸೂತ್ರಾರ್ಥ**—ಕ್ರಿಯಾಫಲವು ಕರ್ತೃವನ್ನು ಹೊಂದುತ್ತಿರುವಾಗ ಣಿಜಂತದಮೇಲೆ ಆತ್ಮನೇಪದಪ್ರತ್ಯಯಗಳು ಬರುತ್ತವೆ. ಇದರಿಂದ ಕ್ರಿಯಾಫಲವು ಪರಗಾಮಿಯಾದಾಗ ಪರಸ್ಮೈಪದ ಬರುತ್ತದೆಂದು ತಿಳಿಯುತ್ತದೆ. ಆಗ ಣಿಜಂತ ಧಾತು ಉಭಯಪದಿಯೆಂದು ಸಿದ್ಧವಾಗುತ್ತದೆ. ಚೋರಿ ಎಂಬುದರ ಮೇಲೆ ಆತ್ಮನೇಪದಪ್ರತ್ಯಯ ಬಂದರೆ ಹಿಂದಿನಂತೆ ಶಪ್, ಗುಣ, ಅಯಾದೇಶ ಬಂದು ಚೋರಯತೇ ಎಂದಾಗುತ್ತದೆ. ಏಧತೇ ಎಂಬಂತೇ ರೂಪಸಿದ್ಧಿ. ಚೋರಯ ಅಂಗ.

**ಲಿಟ್** ॥ ಪ್ರತ್ಯಯಾಂತವಾದುದರಿಂದ 'ಕಾಸ್ಪ್ರತ್ಯಯಾದಾಮಮಂತ್ರೇ ಲಿಟಿ' ಸೂತ್ರದಿಂದ ಲಿಟಿನಲ್ಲಿ ಆಮ್. ಆಮಂತದಮೇಲೆ ಕೃ, ಭೂ, ಅಸ್ ಧಾತುಗಳು ಲಿಟ್ ಪರವಾಗಿ ಬರುತ್ತವೆ. ಇಲ್ಲಿ ಆಸನ್ನು ಮಾತ್ರ ಹೇಳಿರುತ್ತಾನೆ. ಚೋರಯಾಮಾಸ । ಚೋರಯಾಮಾಸತುಃ । ಇತ್ಯಾದಿ. **ಲುಟ್** ॥ ಚೋರಿ+ಇತಾ. ಗುಣ, ಅಯಾದೇಶ. ಚೋರಯಿತಾ । ಚೋರಯಿತಾರೌ । ಚೋರಯಿತಾರಃ ॥ ಚೋರಯಿತಾಸ್ ಅಂಗ. ಆತ್ಮನೇಪದದ ಮಧ್ಯಮಪುರುಷದಲ್ಲಿ ಚೋರಯಿತಾಸೇ । ಚೋರಯಿತಾಸಾಥೇ । ಚೋರಯಿತಾಧ್ವೇ ॥ ಇತ್ಯಾದಿ. **ಲೃಟ್** ॥ ಚೋರಯಿಷ್ಯತಿ, ಚೋರಯಿಷ್ಯತೇ ॥ ಇತ್ಯಾದಿ. **ಲೋಟ್** ॥ ಚೋರಯತು, ಚೋರಯತಾತ್ । ಚೋರತಾಮ್ । ಇತ್ಯಾದಿ. **ಲಙ್** ॥ ಅಚೋರಯತ್, ಅಚೋರಯತ ॥ **ವಿಧಿಲಿಙ್** ॥ ಚೋರಯೇತ್, ಚೋರಯೇತ ॥ **ಆಶೀರ್ಲಿಙ್** । ಚೋರಿ+ಯಾತ್, 'ಣೇರನಿಟಿ' (ಸೂ. ೫೩೦) ಸೂತ್ರದಿಂದ ಣಿಗೆ ಲೋಪ. ಚೋರ್ಯಾತ್ । ಚೋರ್ಯಾಸ್ತಾಮ್ । ಚೋರ್ಯಾಸುಃ ॥ ಇತ್ಯಾದಿ. ಇಲ್ಲಿ ಗುಣಕ್ಕೆ ನಿಮಿತ್ತವಾದ ಣಿಚ್ ಹೋದಮೇಲೆ ಗುಣವೂ ಹೋಗಲಿ ಎಂಬ ಶಂಕೆ ಬರಬಹುದು. ಆದರೆ ಣಿಚಿಗೆ 'ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್' ಎಂಬುದರಿಂದ ಸ್ಥಾನಿವದ್ಭಾವ ಇರುವುದರಿಂದ ಗುಣ ಇದ್ದೇ ಇರುತ್ತದೆ. ಆ.. ಚೋರಯಿಷೀಷ್ಟ । ಚೋರಯಿಷೀಯಾಸ್ತಾಮ್ ॥ ಇತ್ಯಾದಿ. **ಲುಙ್** ॥ ಅಚೋರಿ+ತ್. ಚ್ಲಿ ಬಂದಾಗ ಅದಕ್ಕೆ 'ಣಿಶ್ರಿದ್ರುಸ್ರುಭ್ಯಃ—' (ಸೂ. ೫೨೯) ಸೂತ್ರದಿಂದ ಚಙ್ ಆದೇಶ. ಅಚೋರಿ+ಅ+ತ್. 'ಣೇರನಿಟಿ' ಣಿಲೋಪ. ಅಚೋರ್+ಅ+ತ್. '**ಣೌ ಚಙ್ಯುಪಧಾಯಾ ಹ್ರಸ್ವಃ**' (ಸೂ. ೫೩೧) ಸೂತ್ರದಿಂದ ಉಪಧಾಹ್ರಸ್ವ. ಅಚುರ್+ಅ+ತ್. 'ಚಙಿ'

(ಸೂ. ೫೩೨) ಸೂತ್ರದಿಂದ ದ್ವಿತ್ವ. ಅಚುರ್‌ಚುರ್ + ಅ + ತ್. 'ಹಲಾದಿಃ ಶೇಷಃ' ಅಚುಚುರ್ + ಅ + ತ್, 'ದೀರ್ಘೋ ಲಘೋಃ' ಸೂತ್ರದಿಂದ ಅಭ್ಯಾಸಕ್ಕೆ ದೀರ್ಘ. ಅಚೂಚುರುತ್. ಅಚೂಚುರ ಅಂಗ. ಅಭವತ್ ಅಂತೆಯೇ ರೂಪ. ಆತ್ಮನೇ ಪದದಲ್ಲಿ ಅಚೂಚುರತ | ಅಚೂಚುರೇತಾಮ್ | ಅಚೂಚುರಂತ || ಇತ್ಯಾದಿ (ಏಧತ ವತ್). ಲೃಙ್ || ಅಚೋರಯಿಷ್ಯತ್, ಅಚೋರಯಿಷ್ಯತ || ಇತ್ಯಾದಿ.

ಕಥ ಧಾತು. ಇದು ಅಕಾರಾಂತವಾದ ಧಾತು. ಥಕಾರದ ಮೇಲಿರುವ ಅಕಾರಕ್ಕೆ ಇತ್ ಸಂಜ್ಞೆಯೂ ಇಲ್ಲ, ಉಚ್ಚಾರಣಾರ್ಥವೂ ಅಲ್ಲ. ಸೇಟ್. ಕಥ + ಇ ಎಂದಿರುವಾಗ 'ಅತೋಲೋಪಃ' (ಸೂ. ೪೭೧) ಸೂತ್ರದಿಂದ ಣಿಚ್‌ನಿಮಿತ್ತವಾಗಿ ಅಕಾರಕ್ಕೆ ಲೋಪ. ಕಥ್ + ಇ. ಇದರ ಮೇಲೆ ಲಡಾದಿ. ಕಥ್ + ಇ ಎಂದಿರುವಾಗ ಣಿಚ್ ಣಿತ್ತಾದುದರಿಂದ 'ಅತ ಉಪಧಾಯಾಃ' ಸೂತ್ರದಿಂದ ಕಥಿನ ಉಪಧಾ ಅಕಾರಕ್ಕೆ ವೃದ್ಧಿ ಬರಲಿ ಎಂಬ ಆಶಂಕೆ ಬಂದರೆ ಥಕಾರದ ಮೇಲಿನ ಅಕಾರಕ್ಕೆ ಸ್ಥಾನಿ ವದ್ಭಾವ ಹೇಳುತ್ತಾನೆ. ಇದು ಅಲ್ವಿಧಿಯಾದುದರಿಂದ 'ಸ್ಥಾನಿವದಾದೇಶೋಽ ನಲ್ವಿಧೌ' ಸೂತ್ರದಿಂದ ಸ್ಥಾನಿವದ್ಭಾವ ಬರುವುದಿಲ್ಲ.

ಅಜಾದೇಶಕ್ಕೆ ಸ್ಥಾನಿವದ್ಭಾವ ಹೇಳುವ ಸೂತ್ರ.

**೬೯೮. ಅಚಃ ಪರಸ್ಮಿನ್ ಪೂರ್ವವಿಧೌ || ೧-೧-೫೭ ||**

**ಅಲ್ವಿಧ್ಯರ್ಥಮಿದಮ್ | ಪರನಿಮಿತ್ತೋಽಜಾದೇಶಃ ಸ್ಥಾನಿವತ್ ಸ್ಯಾತ್, ಸ್ಥಾನಿಭೂತಾದಚಃ ಪೂರ್ವತ್ವೇನ ದೃಷ್ಟಸ್ಯ ವಿಧೌ ಕರ್ತವ್ಯೇ | ಇತಿ ಸ್ಥಾನಿವತ್ವಾನ್ನೋಪಧಾವೃದ್ಧಿಃ | ಕಥಯತಿ | ಅಗ್ಲೋಪಿತ್ವಾದ್ದೀರ್ಘ ಸನ್ವದ್ಭಾವೌ ನ | ಅಚಕಥತ್ |**

**|| ೨೧೯ || ಗಣ = ಸಂಖ್ಯಾನೇ (ಎಣಿಸುವುದು.) ಗಣಯತಿ ||**

ತ್ರಿಪದ ಸೂತ್ರ. 'ಸ್ಥಾನಿವದಾದೇಶಃ—' ಸೂತ್ರದಿಂದ ಸಿದ್ಧವಾಗುವಾಗ ಈ ಸೂತ್ರವೇಕೆ ಎಂಬ ಆಶಂಕೆಗೆ ಮೊದಲು ಉತ್ತರ ಹೇಳುತ್ತಾನೆ. 'ಅಲ್ವಿಧ್ಯರ್ಥ ಮಿದಮ್' ಅಲ್ವಿಧಿಯಲ್ಲಿಯೂ ಸ್ಥಾನಿವದ್ಭಾವ ಹೇಳಲು ಈ ಸೂತ್ರ ಆರಬ್ಧ ವಾಗಿದೆ. 'ಸ್ಥಾನಿವತ್, ಆದೇಶಃ' ಪದಗಳು ಹಿಂದಿನ ಸೂತ್ರದಿಂದ ಅನುವೃತ್ತ ವಾಗುತ್ತವೆ. ಅಚಃ ಎಂಬುದಕ್ಕೆ ಆದೇಶಃ ಎಂಬಲ್ಲಿ ಅನ್ವಯ. ಅಚ್ ಸ್ಥಾನಿಕ (ಸ್ಥಾನದಲ್ಲಿ ಬಂದ) ಆದೇಶ ಎಂದರ್ಥ. ಪರಸ್ಮಿನ್ ನಿಮಿತ್ತಸಪ್ತಮೀ. ಪರನಿಮಿತ್ತಕ ವಾದ ಆದೇಶ ಎಂದರ್ಥ. **ಸೂತ್ರಾರ್ಥ**— ಪರವನ್ನು ನಿಮಿತ್ತೀಕರಿಸಿ ಬಂದ ಅಚಿನ ಸ್ಥಾನದಲ್ಲಿ ಬಂದ ಆದೇಶವು ಆ ಅಚಿನ ಪೂರ್ವಕ್ಕೆ ಕಾರ್ಯಮಾಡುವಾಗ ಸ್ಥಾನಿವ ದ್ಭಾವವನ್ನು ಹೊಂದುತ್ತದೆ. ಅಚಿಗೆ ಆದೇಶ ಬಂದು ಇಲ್ಲದಿರುವಾಗ ಅದರ ಪೂರ್ವ ಎಲ್ಲಿಂದ ಬರಬೇಕು ? ಅದಕ್ಕೋಸ್ಕರ ಭೂತಪೂರ್ವಗತಿ (ಹಿಂದೆ ಇದ್ದುದರ ಪೂರ್ವ) ಆಶ್ರಯಣ ಮಾಡಬೇಕು. ಅದನ್ನೇ 'ಸ್ಥಾನಿಭೂತಾದಚಃ—' ಎಂದು ಹೇಳಿರು

ತ್ತಾನೆ. ಸ್ಥಾನಿಯಾದ ಅಚಿನ ಪೂರ್ವದಲ್ಲಿ ಯಾವುದು ಹಿಂದೆ ತೋರಿದೆಯೋ ಅದಕ್ಕೆ ಕಾರ್ಯಮಾಡುವಾಗ ಎಂದರ್ಥ. ಪ್ರಕೃತ ಥಕಾರದ ಮೇಲಿರುವ ಅಕಾರ ಸ್ಥಾನಿಯಾದ ಅಚ್. ಅದಕ್ಕೆ ಈಗ ಲೋಪರೂಪ ಆದೇಶ ಬಂದಿದೆ. ಈ ಆದೇಶಕ್ಕೆ ಸ್ಥಾನಿವದ್ಭಾವ ಬರುತ್ತದೆ. ಸ್ಥಾನಿಭೂತವಾದ ಅಚಿನ ಹಿಂದೆ ಕಥ್ ಎಂಬಲ್ಲಿ ಉಪಧಾ ದೀರ್ಘರೂಪಕಾರ್ಯ ಮಾಡಬೇಕೆಂದಿರುವುದರಿಂದ ನಿಮಿತ್ತವೂ ಇದೆ. ಲೋಪರೂಪ ಆದೇಶವು ಪರನಿಮಿತ್ತಕವೂ ಆಗಿದೆ. ಣಿಚ್ ನಿಮಿತ್ತವಾಗಿ ಲೋಪ ಹೇಳಿದೆ. ಹೀಗೆ ಥಕಾರದ ಮೇಲಿರುವ ಅಕಾರಕ್ಕೆ ಸ್ಥಾನಿವದ್ಭಾವ ಬಂದರೆ ಅಕಾರವಿದ್ದಂತಾಯಿತು. ಆಗ ಉಪಧಾ ಥಕಾರವಾಗುವುದರಿಂದ ಅಕಾರ ಇಲ್ಲದಿರುವುದರಿಂದ ವೃದ್ಧಿಯಿಲ್ಲ. ಕಥಿ ಣಿಜಂತದಮೇಲೆ ಲಡಾದಿ. ಕಥಯತಿ | ಕಥಯಾಮಾಸ | ಕಥಯಿತಾ ಕಥಯಿಷ್ಯತಿ | ಕಥಯತು | ಅಕಥಯತ್ | ಕಥಯೇತ್ | ಕಥ್ಯಾತ್ || ಲುಙಃನಲ್ಲಿ ಚಙ್ ಬಂದು ದ್ವಿತ್ವಾದಿಗಳು ಬಂದಾಗ ಅಚಕಥತ್ ಎಂದಾಗುತ್ತದೆ. ಇಲ್ಲಿ ಸನ್ವದ್ಭಾವವಿಲ್ಲದಿರುವುದರಿಂದ ಅಭ್ಯಾಸಕ್ಕೆ ಇತ್ವದೀರ್ಘಗಳು ಇಲ್ಲ. 'ಸನ್ವಲ್ಲಘುನಿ—' ಸೂತ್ರದಲ್ಲಿ 'ಅನಗ್ಲೋಪೇ' ಎಂದಿದೆ. ಣಿನಿಮಿತ್ತವಾಗಿ ಅಗ್ಲೋಪ ಎಲ್ಲಿ ಬಂದಿಲ್ಲವೋ ಅಲ್ಲಿಯೇ ಸನ್ವದ್ಭಾವ ಎಂದರ್ಥ. ಇಲ್ಲಿ 'ಅತೋ ಲೋಪಃ' ಎಂದು ಣಿನಿಮಿತ್ತವಾಗಿ ಧಾತುವಿನ ಅಕಾರಕ್ಕೆ ಲೋಪಬಂದಿದೆ. ಆಗ ಅಕ್ಕಿಗೆ ಲೋಪ ಹೇಳಿದಂತಾಯಿತು. ಅಚಕಥತ್ | ಅಚಕಥತಾಮ್ | ಅಚಕಥನ್ || ಇತ್ಯಾದಿ. ಅಕಥಯಿಷ್ಯತ್ | ಇತ್ಯಾದಿ.

**ಗಣ** ಧಾತು. ಚುರಾದಿಗಳಲ್ಲಿ ಣಿಚ್ ಬಂದು ಅನೇಕಾಚಾಗುವುದರಿಂದ ಎಲ್ಲಾ ಧಾತುಗಳೂ ಸೇಟ್ ಎಂದು ತಿಳಿಯಬೇಕು. ಇದೂ ಅದಂತಧಾತುವಾದುದರಿಂದ ಣಿಚ್ ಬಂದಾಗ 'ಅತೋ ಲೋಪಃ' ಸೂತ್ರದಿಂದ ಅಕಾರಕ್ಕೆ ಲೋಪ. ಅದಕ್ಕೆ ಹಿಂದೆ ಹೇಳಿದ ಸೂತ್ರದಿಂದ ಸ್ಥಾನಿವದ್ಭಾವ ಬರುವುದರಿಂದ ಉಪಧಾವೃದ್ಧಿ ಇಲ್ಲ. ಗಣಯತಿ | ಗಣಯಾಮಾಸ | ಗಣಯಿತಾ | ಗಣಯಿಷ್ಯತಿ | ಗಣಯತು | ಅಗಣಯತ್ | ಗಣಯೇತ್ | ಗಣ್ಯಾತ್ || ಲುಙಃನಲ್ಲಿ ಚಙ್ ಬಂದು ದ್ವಿತ್ವಾದಿಗಳು ಬಂದಾಗ ಅಜಗಣತ್ ಎಂದಾಗುತ್ತದೆ. ಇಲ್ಲಿ ಅಗ್ಲೋಪಿಯಾದುದರಿಂದ ಸನ್ವದ್ಭಾವವಿಲ್ಲ. ಆಗ ಅಭ್ಯಾಸಕ್ಕೆ ಇತ್ವದೀರ್ಘಗಳೂ ಬಾರದಿದ್ದರೆ ಈ ಧಾತುವಿನ ಅಭ್ಯಾಸಕ್ಕೆ ಮಾತ್ರ ಈತ್ವ ಹೇಳುತ್ತಾನೆ.

ಗಣ್ ಧಾತುವಿನ ಅಭ್ಯಾಸಕ್ಕೆ ಈತ್ವ ಹೇಳುವ ಸೂತ್ರ.

**೬೯೯. ಈ ಚ ಗಣಃ || ೭-೪-೭೭ ||**

**ಗಣಯತೇರಭ್ಯಾಸಸ್ಯ ಈ ಸ್ಯಾಚ್ಚಙ್ಪರೇಣೌ, ಚಾದತ್ || ಅಜೀಗಣತ್, ಅಜಗಣತ್ ||**

ಇತಿ ಚುರಾದಯಃ

ತ್ರಿಪದ ಸೂತ್ರ. 'ಸನ್ವಲ್ಲಘುನಿ ಚಙ್—' ಸೂತ್ರದಿಂದ 'ಚಙ್‌ಪರೇ', 'ಅತ್ರಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ' ಪದಗಳು ಅನುವೃತ್ತವಾಗುತ್ತವೆ. ಸೂತ್ರದಲ್ಲಿರುವ ಚಕಾರದಿಂದ 'ಅತ್ ಸ್ಮೃದೃತ್ವರ—' ಸೂತ್ರದಿಂದ 'ಅತ್' ಸಮುಚ್ಚಿತವಾಗುತ್ತದೆ. ಚಙ್ ಪರೋ ಯಸ್ಮಾತ್ ಸಃ, ಚಙ್‌ಪರಃ | ಅಂದರೆ ಣಿಚ್ ಎಂದು ಹಿಂದೆ ಹೇಳಿದೆ. **ಸೂತ್ರಾರ್ಥ**—ಗಣ್ ಧಾತುವಿನ ಅಭ್ಯಾಸಕ್ಕೆ ಚಙ್ ಪರವಾದ ಣಿ ಪರದಲ್ಲಿರುವಾಗ ಈಕಾರಾದೇಶ ಬರುತ್ತದೆ. ಚಕಾರದಿಂದ ಅಕಾರವೂ ಬರುತ್ತದೆ. ಇದರಿಂದ ಈತ್ವ ವಿಕಲ್ಪವೆಂದು ಹೇಳಿದಂತಾಗುತ್ತದೆ. ಣಿಲೋಪವಾದರೂ ಅದಕ್ಕೆ ಸ್ಥಾನಿವದ್ಭಾವವಿರುವುದರಿಂದ ಚಙ್ ಪರವಾದ ಣಿ ಪರದಲ್ಲಿರುವುದರಿಂದ ಈತ್ ಬಂದರೆ ಅಜೀಗಣತ್, ಅತ್ವ ಬಂದರೆ ಅಜಗಣತ್ ಎಂದಾಗುತ್ತದೆ. ಅಗಣಯಿಷ್ಯತ್||

ಹೀಗೆ ಚುರಾದಿಗಣ ಮುಗಿಯಿತು. ಭ್ವಾದಿ ಮುಂತಾದ ಹತ್ತು ಗಣಗಳೂ ಇಲ್ಲಿ ವಿವೃತವಾಗಿವೆ. ಸಾಮಾನ್ಯ ಎರಡು ಸಾವಿರ ಧಾತುಗಳು ಇದ್ದರೂ ಸಾಮಾನ್ಯವಾಗಿ ಪ್ರಯೋಗದಲ್ಲಿ ಇರುವ ಪ್ರಸಿದ್ಧಗಳಾದ ಧಾತುಗಳ ಪ್ರಕ್ರಿಯೆ ಇಲ್ಲಿ ವಿವೃತವಾಗಿದೆ. ಈ ಹತ್ತು ಗಣಗಳಿಗೆ 'ದಶವಿಕರಣೀ' ಎಂದು ಹೆಸರು. ಧಾತುಗಳು ಸಾಮಾನ್ಯವಾಗಿ ಎರಡು ವಿಧಗಳಾಗಿವೆ. 'ಭೂವಾದಯೋ ಧಾತವಃ' ಸೂತ್ರದಿಂದ ಭೂ ಮುಂತಾದವುಗಳು ಒಂದು ಗುಂಪು. ಇವು ಗಣಪಠಿತವಾದವುಗಳು. 'ಸನಾದ್ಯನ್ತಾ ಧಾತವಃ' ಸೂತ್ರದಿಂದ ಸನ್, ಕ್ಯಜಾದಿ ಹನ್ನೆರಡು ಪ್ರತ್ಯಯಾನ್ತವಾದವುಗಳಿಗೂ ಧಾತುಸಂಜ್ಞೆ ಹೇಳಿದೆ. ಈ ಪ್ರತ್ಯಯಗಳು ಧಾತುಗಳ ಮೇಲೂ (ನಾಮ) ಪ್ರಾತಿಪದಿಕಗಳ ಮೇಲೂ ವಿಹಿತವಾಗುತ್ತವೆ. ಈ ಧಾತುಗಳ ಸಮುದಾಯ ಒಂದು ಗುಂಪು. ಇವುಗಳಲ್ಲಿ ಣಿಜಂತ, ಸನಂತ, ಯಙನ್ತ, ಯಙ್‌ಲುಗನ್ತ, ನಾಮಧಾತು, ಕಣ್ಡ್ವಾದಿ—ಹೀಗೆ ಆಯಾಯ ಪ್ರಕರಣಗಳಿಂದ ಅವುಗಳ ರೂಪಗಳಿನ್ನು ಮುಂದೆ ವಿವರಿಸುತ್ತಾನೆ.

'ದಶವಿಕರಣೀ' ಮುಗಿದಿದೆ.

ಶ್ರೀಃ

|| ಶ್ರೀಃ ||

# ಪಾಣಿನೀಯ ಪ್ರವೇಶಿಕಾ

(ಮೂರನೆಯ ಭಾಗ)

## ೧. ಅಥ ಣ್ಯನ್ತಪ್ರಕ್ರಿಯಾ

ಕರ್ತೃಸಂಜ್ಞೆಯನ್ನು ಹೇಳುವ ಸೂತ್ರ.

೭೦೦. ಸ್ವತನ್ತ್ರಃ ಕರ್ತಾ || ೧-೪-೫೪ ||

ಕ್ರಿಯಾಯಾಂ ಸ್ವಾತಂತ್ರ್ಯೇಣ ವಿವಕ್ಷಿತೋಽರ್ಥಃ ಕರ್ತಾ ಸ್ಯಾತ್ ||

ದ್ವಿಪದ ಸೂತ್ರ. 'ಕಾರಕೇ' ಎಂಬ ಅಧಿಕಾರದಲ್ಲಿ ಈ ಸೂತ್ರ ಹೇಳಿದೆ. ಆದುದರಿಂದ ಕ್ರಿಯೆಯಲ್ಲಿ ಸ್ವಾತಂತ್ರ್ಯವೆಂದು ಲಬ್ಧವಾಗುತ್ತದೆ. **ಸೂತ್ರಾರ್ಥ**— ಕ್ರಿಯೆಯಲ್ಲಿ ಸ್ವಾತಂತ್ರ್ಯದಿಂದ ವಿವಕ್ಷಿತವಾದುದಕ್ಕೆ ಕರ್ತೃ ಎಂಬ ಸಂಜ್ಞೆ ಬರುತ್ತದೆ. ಕ್ರಿಯೆಯುಂಟಾಗಲು ಪ್ರಧಾನನು ಯಾರೋ ಆತನೇ ಕರ್ತೃವು. ಇದಕ್ಕೆ ಕರ್ತೃ ಕಾರಕವೆಂದು ಹೆಸರು. 'ದೇವದತ್ತಃ ಪಚತಿ.' ಇಲ್ಲಿ ಪಾಕಕ್ರಿಯೆಯಲ್ಲಿ ಪ್ರಧಾನ ದೇವದತ್ತ. ಅವನ ಅಧೀನವಾಗಿ ಇತರ ಕಾರಕಗಳ ಕ್ರಿಯೆಯುಂಟಾಗುತ್ತದೆ. ಕರ್ಮಾದಿಕಾರಕಗಳಿಗೂ ಪ್ರಾಧಾನ್ಯವಿವಕ್ಷಾಮಾಡಿ ಕರ್ತೃಸಂಜ್ಞೆ ಹೇಳುವುದಿದೆ. ಅದಕ್ಕೋಸ್ಕರ 'ವಿವಕ್ಷಿತೋಽರ್ಥಃ' ಎಂದಿದೆ. ಕಟ್ಟಿಗೆ ಬೇಯುತ್ತಿದೆ ಎಂದೂ ಪ್ರಯೋಗವಿದೆ. ಚೆನ್ನಾಗಿ ಒಣಗಿ ಹತ್ತಿಸಿದ ಕೂಡಲೇ ಚೆನ್ನಾಗಿ ಉರಿಯುವುದಾದರೆ ಅದರಿಂದ ಬೇಗ ಅಡಿಗೆಯಾಗುವುದಾದರೆ ಅದಕ್ಕೆ ಕರ್ತೃವಿವಕ್ಷಾ ಮಾಡುವುದಿದೆ. ಕೆಲವು ಕಡೆ ಮಾತ್ರ ಹೀಗೆ ವಿವಕ್ಷಾಮಾಡುತ್ತಾರೆ. ಕ್ರಿಯೆಯುಂಟಾಗಲು ಪ್ರಧಾನನು ಯಾರೋ, ಯಾರ ವ್ಯಾಪಾರದಿಂದ ಆ ಕ್ರಿಯೆಯು ಪೂರ್ತಿಯಾಗುವುದೋ ಅವನೇ ಕರ್ತೃ. 'ದೇವದತ್ತಃ ಭವತಿ.' ಇಲ್ಲಿ ಭವನ (ಇರುವಿಕೆ) ಕ್ರಿಯೆಯಲ್ಲಿ ಪ್ರಧಾನ ದೇವದತ್ತನಾದುದರಿಂದ ದೇವದತ್ತನು ಕರ್ತೃಸಂಜ್ಞೆ ಹೊಂದುತ್ತಾನೆ. ಕರ್ತೃಕಾರಕಕ್ಕೆ ತೃತೀಯಾವಿಭಕ್ತಿ ನಿಯತವಾದರೂ ಇಲ್ಲಿ ಭವತಿ ಎಂಬಲ್ಲಿರುವ ತಿಙ್ನಿಂದ ಅಭಿಹಿತವಾದುದರಿಂದ (ಹೇಳಲ್ಪಟ್ಟಿದ್ದರಿಂದ) ಪ್ರಥಮಾವಿಭಕ್ತಿ ಬಂದಿದೆ. ಈವಿಷಯ ಕಾರಕ ಪ್ರಕರಣದಲ್ಲಿ ವಿವೃತವಾಗುತ್ತದೆ.

ಹೇತುಸಂಜ್ಞೆಯನ್ನು ಹೇಳುವ ಸೂತ್ರ.

**೭೦೧. ತತ್ಪ್ರಯೋಜಕೋ ಹೇತುಶ್ಚ ||೧-೪-೫೫||**

**ಕರ್ತುಃ ಪ್ರಯೋಜಕೋ ಹೇತುಸಂಜ್ಞಃ ಕರ್ತೃಸಂಜ್ಞಶ್ಚ ಸ್ಯಾತ್||**

ತ್ರಿಪದ ಸೂತ್ರ. ಇಲ್ಲಿನ ತತ್ ಪದದಿಂದ ಹಿಂದಿನ ಸೂತ್ರದಲ್ಲಿ ಹೇಳಿದ ಕರ್ತೃ ಪರಾಮೃಷ್ಟವಾಗುತ್ತದೆ. ತಸ್ಯ ಪ್ರಯೋಜಕಃ ತತ್ಪ್ರಯೋಜಕಃ|| ಆ ಕರ್ತೃವಿಗೆ ಪ್ರಯೋಜಕನಾದವನು ಎಂದರ್ಥ. ಪ್ರಯೋಜಕ ಎಂದರೆ ಪ್ರೇರೇಪಿಸುವವನು ಪ್ರೇರಕ. ಪ್ರವೃತ್ತಿ ಹುಟ್ಟಿಸುವವನು. ಸೂತ್ರದಲ್ಲಿರುವ ಚಕಾರದಿಂದ ಕರ್ತೃಸಂಜ್ಞೆ ಸಮುಚ್ಚಿತವಾಗುತ್ತದೆ. **ಸೂತ್ರಾರ್ಥ**—ಕರ್ತೃವಿಗೆ ಪ್ರೇರಕನಾದವನು ಹೇತು ಎಂಬ ಸಂಜ್ಞೆಯನ್ನು ಹೊಂದುವುದಲ್ಲದೆ ಕರ್ತೃ ಎಂಬ ಸಂಜ್ಞೆಯನ್ನೂ ಹೊಂದುತ್ತಾನೆ. ಪ್ರಯೋಜಕನಿಗೆ ಎರಡು ಸಂಜ್ಞೆ. ಹೇತು, ಕರ್ತೃ ಎಂದು ಅವುಗಳ ಸ್ವರೂಪ. ದೇವದತ್ತಃ ಗಚ್ಛತಿ || ಇಲ್ಲಿ ಗಮನಕ್ರಿಯೆಯಲ್ಲಿ ದೇವದತ್ತ ಕರ್ತೃ. ಯಜ್ಞದತ್ತಃ ದೇವದತ್ತಂ ಗಮಯತಿ || ಯಜ್ಞದತ್ತನು ದೇವದತ್ತನನ್ನು ಹೋಗುವಂತೆ ಮಾಡು ತ್ತಾನೆ. ದೇವದತ್ತನಿಗೆ ಪ್ರೇರಕನಾಗುತ್ತಾನೆ ಆಗ ಯಜ್ಞದತ್ತನು ಪ್ರಯೋ ಜಕನಾದುದರಿಂದ ಹೇತು, ಕರ್ತೃ ಎಂಬ ಸಂಜ್ಞೆಯನ್ನು ಹೊಂದುತ್ತಾನೆ.

ಪ್ರೇರಣೆಯಲ್ಲಿ ಧಾತುವಿಗೆ ಣಿಚ್ ಹೇಳುವ ಸೂತ್ರ,

**೭೦೨. ಹೇತುಮತಿ ಚ || ೩-೧-೨೬ ||**

**ಪ್ರಯೋಜಕವ್ಯಾಪಾರೇ ಪ್ರೇಷಣಾದೌ ವಾಚ್ಯೇ ಧಾತೋರ್ಣಿಚ್ ಸ್ಯಾತ್|| ಭವನ್ತಂ ಪ್ರೇರಯತಿ ಭಾವಯತಿ||**

ದ್ವಿಪದ ಸೂತ್ರ. 'ಸತ್ಯಾಪಪಾಶ—' ಸೂತ್ರದಿಂದ 'ಣಿಚ್' 'ಧಾತೋ ರೇಕಾಚಃ—' ಸೂತ್ರದಿಂದ 'ಧಾತೋಃ' ಪದಗಳು ಅನುವೃತ್ತವಾಗುತ್ತವೆ. ಹೇತುಃ ಅಸ್ಯ ಅಸ್ತಿ ಇತಿ ಹೇತುಮಾನ್ || ಆಧಾರತಾಸಂಬಂಧದಿಂದ ಹೇತುವಿನಿಂದ ಕೂಡಿರು ವುದು ಪ್ರಯೋಜಕನ ವ್ಯಾಪಾರ. ಪ್ರೇಷಣಾದಿ ವ್ಯಾಪಾರ ಇಲ್ಲಿ ಹೇತುಮತ್ತಾಗು ತ್ತದೆ. ಹೇತುವಿನಲ್ಲಿ ವ್ಯಾಪಾರವಿದೆ. ವ್ಯಾಪಾರವುಳ್ಳವ ಹೇತು. ಆಧಾರತಾಸಂಬಂಧ ದಿಂದ ಹೇತು ವ್ಯಾಪಾರದಲ್ಲಿದೆ. ತಾನಾಗಿ ಮಾಡುವವ ಪ್ರಯೋಜ್ಯಕರ್ತೃ. ಮಾಡಿಸು ವವ ಪ್ರಯೋಜಕಕರ್ತೃ. **ಸೂತ್ರಾರ್ಥ**—ಪ್ರಯೋಜಕಕರ್ತೃವಿನ ಪ್ರೇಷಣಾದಿ ವ್ಯಾಪಾರ ತೋರುವಾಗ ಧಾತುವಿಗೆ ಣಿಚ್ ಪ್ರತ್ಯಯ ಬರುತ್ತದೆ. ಣಿಚ್ ಪ್ರತ್ಯಯಕ್ಕೆ ಸ್ವಾರ್ಥವೆಂದು ಹಿಂದಿನ ಪ್ರಕರಣದಲ್ಲಿ ಹೇಳಿದೆ. ಇಲ್ಲಿ ಪ್ರಯೋಜಕನ ವ್ಯಾಪಾರವೇ ಅರ್ಥ. ಇದಕ್ಕೆ ಹೇತುಮಣ್ಣಿಚ್ ಎಂದು ಹೆಸರು. ಕನ್ನಡದಲ್ಲಿ ಣಿಚಿಗೆ ಇಸು ಪ್ರತ್ಯಯ ಬರುತ್ತದೆ. ಭಾವಯತಿ ಇದು ಣಿಚಿಗೆ ಉದಾಹರಣೆ. ರಾಮಃ ಭವತಿ || ರಾಮನು

ಆಗುತ್ತಾನೆ. ಭವನ್ತಂ ರಾಮಂ ಪ್ರೇರಯತಿ ಕೃಷ್ಣಃ ॥ ಸ್ವತಃ ಇರುವ (ಆಗುವ) ರಾಮನನ್ನು ಇರುವಂತೆ ಕೃಷ್ಣನು ಪ್ರೇರೇಪಿಸುತ್ತಾನೆ (ಇರಿಸುತ್ತಾನೆ, ಆಗಿಸುತ್ತಾನೆ). ಆಗ ಭೂ ಧಾತುವಿಗೆ ಣಿಚ್ ಬರುತ್ತದೆ. ಭೂ + ಣಿಚ್. ಣಿಚ್‌ನಲ್ಲಿ ಇಕಾರ ಉಳಿಯುತ್ತದೆ. ಣಿತ್ತಾದುದರಿಂದ 'ಅಚೋಽಞ್ಣಿತಿ' ಸೂತ್ರದಿಂದ ವೃದ್ಧಿ. ಭೌ + ಇ. ಆವಾದೇಶ. ಭಾವಿ. 'ಸನಾದ್ಯಂತಾ ಧಾತವಃ' ಸೂತ್ರದಿಂದ ಭಾವಿ ಎಂಬ ಣಿಜಂತಕ್ಕೆ ಧಾತುಸಂಜ್ಞಾ. ಅದರ ಮೇಲೆ ಲಡಾದಿಗಳು ಬರುತ್ತವೆ. ಚೋರಯತಿ ಅಂತೆಯೇ ಪ್ರಕ್ರಿಯೆ. ಅಲ್ಲಿ ಣಿಚ್ಚಿಗೆ ಅರ್ಥವಿಲ್ಲ. ಇಲ್ಲಿ ಪ್ರೇರಣಾರ್ಥವಿದೆ. ಭಾವಿ + ಅ + ತಿ. ಗುಣ, ಅಯಾದೇಶ. ಭಾವಯತಿ ಇತ್ಯಾದಿ. ಕ್ರಿಯಾಫಲ ಕರ್ತೃಗಾಮಿಯಾದಾಗ 'ಣಿಚಶ್ಚ' ಸೂತ್ರದಿಂದ ಆತ್ಮನೇಪದ. ಭಾವಯತೇ । ಇತ್ಯಾದಿ. ಭಾವಯಾಞ್ಚಕಾರ, ಭಾವಯಾಞ್ಚಕ್ರೇ । ಭಾವಯಾಮ್ಬಭೂವ, ಭಾವಯಾಮಾಸ ॥ ಭಾವಯಿತಾ (೨) ಭಾವಯಿಷ್ಯತಿ, ಭಾವಯಿಷ್ಯತೇ । ಭಾವಯತು, ಭಾವಯತಾಮ್ । ಅಭಾವಯತ್, ಅಭಾವಯತ । ಭಾವಯೇತ್, ಭಾವಯೇತ । ಭಾವ್ಯಾತ್, ಭಾವಯಿಷೀಷ್ಟ ಲುಙಿನಲ್ಲಿ ಣಿಜಂತವಾದುದರಿಂದ 'ಣಿಶ್ರಿದ್ರುಸ್ರು—' ಸೂತ್ರದಿಂದ ಚ್ಲಿಗೆ ಚಙ್ ಆದೇಶ. ಭೂ + ಇ + ಅ + ತ್. 'ಚಙಿ' ದ್ವಿತ್ವ. ಭೂಭೂ + ಇ + ಅ + ತ್. ಅಂಗಕ್ಕೆ ಅಡಾಗನು. ಅಭೂಭೂ + ಇ + ಅತ್. 'ಅಚೋಽಞ್ಣಿತಿ' ಣಿಚ್ ನಿಮಿತ್ತೀಕರಿಸಿ ವೃದ್ಧಿ. ಅಭೂಭಾವ್ + ಇ + ಅತ್. 'ಣೇರನಿಟಿ' ಣಿಲೋಪ. 'ಣೌ ಚಙ್ಯುಪಧಾಯಾಃಹ್ರಸ್ವಃ' ಉಪಧಾಹ್ರಸ್ವ. ಅಭ್ಯಾಸಕ್ಕೆ ಜಶ್ತ್ವ. ಅಬುಭವ್ + ಅ + ತ್ ಎಂದಿರುವಾಗ ಅಭ್ಯಾಸ ಉಕಾರಕ್ಕೆ ಇತ್ವ ಹೇಳುತ್ತಾನೆ.

ಅಭ್ಯಾಸ ಉಕಾರಕ್ಕೆ ಇತ್ವ ಹೇಳುವ ಸೂತ್ರ.

### ೭೦೩. ಓಃ ಪುಯಣ್‌ಜ್ಯಪರೇ ॥೭-೪-೮೦॥

**ಸನಿ ಪರೇ ಯದಙ್ಗಂ ತದವಯವಾಭ್ಯಾಸೋಕಾರಸ್ಯ ಇತ್ ಸ್ಯಾತ್ ಪವರ್ಗಯಣ್‌ಜಕಾರೇಷ್ವವರ್ಣಪರೇಷು ಪರತಃ । ಅಬೀಭವತ್ ॥**

ಓಃ, ಪುಯಣ್‌ಜಿ, ಅಪರೇ ॥ ತ್ರಿಪದ ಸೂತ್ರ. ಉಕಾರದ ಷಷ್ಠೀ ಓಃ ಆಗುತ್ತದೆ. ಪುಶ್ಚ ಯಣ್ ಚ ಜ್ ಚ ತೇಷಾಂ ಸಮಾಹಾರಃ ಪುಯಣ್‌ಜ್ । ತಸ್ಮಿನ್. ಪವರ್ಗ, ಯಣ್, ಜಕಾರ ಪರದಲ್ಲಿರುವಾಗ ಎಂದರ್ಥ. ಅಃ ಪರೋ ಯಸ್ಮಾತ್ ಅಪರಃ । ತಸ್ಮಿನ್. ಆಕಾರ ಪರದಲ್ಲಿರುವುದು ಎಂದರ್ಥ. 'ಸನ್ಯತಃ' ಸೂತ್ರದಿಂದ 'ಸನಿ', 'ಭೃಞಾಮಿತ್' ಸೂತ್ರದಿಂದ 'ಇತ್', 'ಅತ್ರ ಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ' ಪದಗಳು ಅನುವೃತ್ತವಾಗುತ್ತವೆ. 'ಅಂಗಸ್ಯ' ಅಧಿಕಾರ. **ಸೂತ್ರಾರ್ಥ**—ಸನ್ ಪ್ರತ್ಯಯ ಪರವಾದಾಗ ಯಾವ ಅಂಗವಿದೆಯೋ ಅದರ ಅವಯವವಾದ ಅಭ್ಯಾಸದ ಉಕಾರಕ್ಕೆ ಅಕಾರ ಪರದಲ್ಲಿರುವ ಪವರ್ಗ, ಯಣ್,

ಜಕಾರಪರದಲ್ಲಿರುವಾಗ ಉಕಾರ ಬರುತ್ತದೆ. ಅಬುಭವ್ + ಅ + ತ್ ಎಂದಿರುವಾಗ 'ಸನ್ವಲ್ಲಘುನಿ ಚಙ್ ಪರೇ—' (ಸೂ. ೫೩೩) ಸೂತ್ರದಿಂದ ಸನ್ವದ್ಭಾವ ಬರುವುದರಿಂದ ಸನ್ ಪರದಲ್ಲಿದೆಯೆಂದೇ ತಿಳಿಯಬೇಕು. ಅಂಗ ಅಬುಭವ್. ಇದರ ಅವಯವವಾದ ಅಭ್ಯಾಸ ಅಂದರೆ ಬು. ಇದರ ಉಕಾರಕ್ಕೆ ಅಕಾರವೇ ಪರದಲ್ಲಿರುವ ಪವರ್ಗವಾದ ಭಕಾರವಿದೆ. ಆದುದರಿಂದ ಇದಕ್ಕೆ ಇಕಾರ ಬಂದರೆ ಅಬಿಭವ್ + ಅ + ತ್ ಎಂದಾಗುತ್ತದೆ. 'ದೀರ್ಘೋ ಲಘೋಃ' ಸೂತ್ರದಿಂದ ಆ ಇಕಾರಕ್ಕೆ ದೀರ್ಘ. ಅಬೀಭವತ್ । ಅಬೀಭವತಾಮ್ । ಅಬೀಭವನ್ ॥ ಅಬೀಭವಃ । ಅಬೀಭವತಮ್ । ಅಬೀಭವತ ॥ ಅಬೀಭವಮ್ । ಅಬೀಭವಾವ । ಅಬೀಭವಾಮ ॥ ಆ.—ಅಬೀಭವತ । ಇತ್ಯಾದಿ ಅಭಾವಯಿಷ್ಯತ್, ಅಭಾವಯಿಷ್ಯತ ॥

॥ ೨೧೦ ॥ ಷ್ಠಾ = ಗತಿನಿವೃತ್ತೌ (ನಿಲ್ಲುವುದು.)

೭೦೪. ಅರ್ತಿಹ್ರೀವ್ಲೀರೀಕ್ನೂಯೀಕ್ಷ್ಮಾಯ್ಯಾತಾಂ ಪುಙ್ ಣೌ ॥ ೭-೩-೩೬ ॥

ಸ್ಥಾಪಯತಿ ॥

ಅರ್ತಿ........ತಾಂ, ಪುಕ್, ಣೌ ॥ ತ್ರಿಪದ ಸೂತ್ರ. ಅನುವೃತ್ತ್ಯಾದಿಗಳಿಲ್ಲ. **ಸೂತ್ರಾರ್ಥ**—ಋ, ಹ್ರೀ, ವ್ಲೀ, ರೀ, ಕ್ನೂಯೀ, ಕ್ಷ್ಮಾಯೀ ಧಾತುಗಳಿಗೂ ಆದಂತವಾದ ಧಾತುಗಳಿಗೂ ಣಿಚ್ ಪರದಲ್ಲಿರುವಾಗ ಪುಕ್ ಆಗಮ ಬರುತ್ತದೆ. ಪ್ರಕೃತ ಷ್ಠಾ ಧಾತು. ತಿಷ್ಠತಿ ಎಂಬ ರೂಪ ಣಿಚ್ ಬಾರದಿರುವಾಗ ಆಗುತ್ತದೆ. ಣಿಚ್ ಬಂದರೆ ಷ್ಠಾ + ಇ ಎಂದಿರುವಾಗ 'ಧಾತ್ವಾದೇಃ ಷಃ ಸಃ' ಸೂತ್ರದಿಂದ ಆದಿಗೆ ಸತ್ವ. ಆಗ ಷತ್ವವನ್ನು ನಿಮಿತ್ತೀಕರಿಸಿ ಬಂದ ಠತ್ವವೂ ಹೋಗಿ ಥಕಾರ ಇರುತ್ತದೆ. ಸ್ಥಾ + ಇ ಎಂದಿರುವಾಗ ಆದಂತವಾದುದರಿಂದ ಪುಕಾಗಮ (ಪ್ ಉಳಿಕೆ). ಕಿತ್ತಾದುದರಿಂದ ಆಕಾರಕ್ಕೆ ಅಂತಾವಯವವಾಗಿ ಬಂದರೆ ಸ್ಥಾಪ್ + ಇ = ಸ್ಥಾಪಿ ಎಂದಾಗುತ್ತದೆ. ಇದರ ಮೇಲೆ ಲಡಾದಿ. ಸ್ಥಾಪಯತಿ । ಸ್ಥಾಪಯಾಞ್ಚಕಾರ । ಸ್ಥಾಪಯಿತಾ । ಸ್ಥಾಪಯಿಷ್ಯತಿ । ಸ್ಥಾಪಯತು । ಅಸ್ಥಾಪಯತ್ । ಸ್ಥಾಪಯೇತ್ । ಸ್ಥಾಪ್ಯಾತ್ । ಲುಙಿನಲ್ಲಿ ಚಙ್ ಬಂದಾಗ ದ್ವಿತ್ವ ಬಂದರೆ ಅಸ್ಥಾಸ್ಥಾ + ಇ + ಅತ್. ಪುಕ್. ಣಿಲೋಪ. 'ಶರ್ಪೂರ್ವಾಃ ಖಯಃ' ಸೂತ್ರದಿಂದ ಅಭ್ಯಾಸದಲ್ಲಿ ಥಕಾರಕ್ಕೆ ಶೇಷ. 'ಅಭ್ಯಾಸೇ ಚರ್ಚ'ದಿಂದ ಅದಕ್ಕೆ ತಕಾರಾದೇಶ. 'ಹ್ರಸ್ವಃ' ಅತಸ್ಥಾಪ್ + ಅ + ತ್. 'ಣೌ ಚಙಿ—' ಸೂತ್ರದಿಂದ ಉಪಧಾಹ್ರಸ್ವ. ಅತಸ್ಥಪ್ + ಅ + ತ್. 'ಸನ್ಯತಃ' ಸೂತ್ರದಿಂದ ಅಭ್ಯಾಸಕ್ಕೆ ಇತ್ವ. ಅತಿಸ್ಥಪ್ + ಅ + ತ್. ಲಘುವಲ್ಲವಾದುದರಿಂದ (ಸಂಯುಕ್ತಪರವಾದುದರಿಂದ ಗುರು) ಇಕಾರಕ್ಕೆ ದೀರ್ಘವಿಲ್ಲ. ಈಗ ಧಾತುವಿನ ಉಪಧೆಗೆ ಇತ್ವ ಹೇಳುತ್ತಾನೆ.

ಸ್ಥಾ ಧಾತುವಿಗೆ ಇತ್ವ ಹೇಳುವ ಸೂತ್ರ.

೭೦೫. ತಿಷ್ಠತೇರಿತ್ || ೭-೪-೫ ||

**ಉಪಧಾಯಾ ಇದಾದೇಶಃ ಸ್ಯಾಚ್ಚಙ್ಪರೇ ಣೌ || ಅತಿಷ್ಠಿಪತ್ ||**

**|| ೨೨೧ || ಘಟ=ಚೇಷ್ಟಾಯಾಮ್ ( ಏನಾದರೂ ಮಾಡುವುದು )**

ತಿಷ್ಠತೇಃ, ಇತ್ || ದ್ವಿಪದ ಸೂತ್ರ. 'ಣೌ ಚಙ್ಯುಪಧಾಯಾಃ—'ಅನುವೃತ್ತಿ. **ಸೂತ್ರಾರ್ಥ**—ಸ್ಥಾ ಧಾತುವಿನ ಉಪಧೆಗೆ ಚಙ್ಪರವಾದ ಣಿ ಪರದಲ್ಲಿರುವಾಗ ಇತ್ ಆದೇಶ ಬರುತ್ತದೆ. ತಪರಕರಣದಿಂದ ಹ್ರಸ್ವ ಇಕಾರವೆಂದು ತಿಳಿಯುತ್ತದೆ. ಅತಿಸ್ಥಪ್ + ಅ + ತ್ ಎಂದಿರುವಾಗ ಧಾತುವಿನ ಉಪಧೆಗೆ ಇತ್ವ ಬಂದರೆ ಅತಿಸ್ಥಿಪ್ + ಅತ್ ಎಂದಾಗುತ್ತದೆ. 'ಆದೇಶಪ್ರತ್ಯಯಯೋಃ' ಸಕಾರಕ್ಕೆ ಷತ್ವ. ಆಗ ಅದನ್ನು ನಿಮಿತ್ತೀಕರಿಸಿ ಥಕಾರಕ್ಕೆ ಷ್ಟುತ್ವ ( ಠಕಾರ ). ಅತಿಷ್ಠಿಪತ್ ಎಂದಾಗುತ್ತದೆ. ಅತಿಷ್ಠಿಪ ಅಂಗ. ಅಭವತ್ ಅಂತೆ ಪ್ರಕ್ರಿಯೆ. ಲೃಙ್ || ಅಸ್ಥಾಪಯಿಷ್ಯತ್||

ಘಟ ಧಾತು. ಇದಕ್ಕೆ ಪ್ರೇಷಣಾರ್ಥದಲ್ಲಿ ಣಿಚ್ ಬಂದರೆ ಘಟ್ + ಇ ಎಂದಿರುವಾಗ 'ಅತ ಉಪಧಾಯಾಃ' ಸೂತ್ರದಿಂದ ಉಪಧಾವೃದ್ಧಿ. ಘಾಟಿ. ಇದರ ಮೇಲೆ ಲಡಾದಿ. ಘಾಟ್ + ಇ + ಅ + ತಿ ಎಂದಿರುವಾಗ ಉಪಧಾಹ್ರಸ್ವ ಹೇಳುತ್ತಾನೆ.

ಘಟಾದಿಗಳ ಉಪಧೆಗೆ ಹ್ರಸ್ವ ಹೇಳುವ ಸೂತ್ರ.

೭೦೬. ಮಿತಾಂ ಹ್ರಸ್ವಃ || ೬-೪-೯೨ ||

**ಘಟಾದೀನಾಂ ಜ್ಞಪಾದೀನಾಂ ಚೋಪಧಾಯಾ ಹ್ರಸ್ವಃ ಸ್ಯಾಣ್ಣೌ । ಘಟಯತಿ||**

**||೨೨೨|| ಜ್ಞಪ=ಜ್ಞಾನೇ ಜ್ಞಾಪನೇ ಚ ( ತಿಳಿಯುವುದು, ತಿಳಿಸುವುದು. )**

**ಜ್ಞಪಯತಿ । ಅಜಿಜ್ಞಪತ್ ||**

ಇತಿ ಣ್ಯನ್ತಪ್ರಕ್ರಿಯಾ

ದ್ವಿಪದ ಸೂತ್ರ. 'ಊದುಪಧಾಯಾ ಗೋಹಃ' ಸೂತ್ರದಿಂದ 'ಉಪಧಾಯಾಃ', 'ದೋಷೋಣೌ' ಸೂತ್ರದಿಂದ 'ಣೌ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಮಿತ್ ಆದ ಧಾತುಗಳ ಉಪಧೆಗೆ ಣಿಚ್ ಪರದಲ್ಲಿರುವಾಗ ಹ್ರಸ್ವ ಬರುತ್ತದೆ. ಮಿತ್ ಎಂಬುದು ಕೆಲವು ಧಾತುಗಳಿಗೆ ಸಂಜ್ಞೆ. 'ಘಟಾದಯೋ ಮಿತಃ' ಎಂಬ ಅಂತರ್ಗಣ ಸೂತ್ರದಿಂದ ಘಟಾದಿಧಾತುಗಳಿಗೂ, 'ಜ್ಞಪ ಮಿಚ್ಚ' ಎಂಬ ಸೂತ್ರದಿಂದ ಜ್ಞಪ ಧಾತುವಿಗೂ ಮಿತ್ ಸಂಜ್ಞೆ ಹೇಳಿರುತ್ತಾನೆ. ಪ್ರಕೃತ ಘಟ ಧಾತುವಿಗೆ ಮಿತ್ ಸಂಜ್ಞೆ ಇರುವುದರಿಂದ ಅದಕ್ಕೆ ಣಿಚ್ ಪರವಾದುದರಿಂದ ಉಪಧೆಗೆ ಹ್ರಸ್ವ ಬಂದರೆ ಘಟಯತಿ

ಎಂದಾಗುತ್ತದೆ. ಘಟಯಾಞ್ಚಕಾರ । ಘಟಯಿತಾ । ಘಟಯಿಷ್ಯತಿ । ಘಟಯತು । ಅಘಟಯತ್ । ಘಟಯೇತ್ । ಘಟ್ಯಾತ್ । ಅಜೀಘಟತ್ । ಅಘಟಯಿಷ್ಯತ್॥

ಜ್ಞಪ ಧಾತು. ಇದಕ್ಕೂ ಹಿಂದೆ ಹೇಳಿರುವಂತೆ ಮಿತ್ ಸಂಜ್ಞೆ ಇರುವುದರಿಂದ ಉಪಧಾಹ್ರಸ್ವ ಬಂದು ಜ್ಞಪಯತಿ ಎಂದಾಗುತ್ತದೆ. ಘಟ ಧಾತುವಿನಂತೇ ರೂಪ ಲುಙ್‌ನಲ್ಲಿ ಅಭ್ಯಾಸದ ಇಕಾರಕ್ಕೆ ಲಘುತ್ವ ಇಲ್ಲದಿರುವುದರಿಂದ ದೀರ್ಘ ಬರುವುದಿಲ್ಲ. ಅಜಿಜ್ಞಪತ್ ಇತ್ಯಾದಿ. ಹೀಗೆ ಪ್ರೇರಣಾರ್ಥದಲ್ಲಿ ಬಂದ ಣಿಜಂತಪ್ರಕ್ರಿಯೆ ಮುಗಿದಿದೆ. ಎಲ್ಲಾ ಧಾತುಗಳಿಗೂ 'ಹೇತುಮಣ್ಣಿಚ್' ಬಂದರೆ ಅಜಂತವಾದರೆ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ; ಹಲಂತವಾಗಿ ಉಪಧೆಯಲ್ಲಿ ಅಕಾರವಿದ್ದರೆ 'ಅತಉಪಧಾಯಾಃ। ವೃದ್ಧಿ. ಇಕ್ ಇದ್ದರೆ 'ಪುಗನ್ತಲಘೂಪಧಸ್ಯ ಚ' ಸೂತ್ರದಿಂದ ಗುಣ. ಕ್ರಮವಾಗಿ ಉದಾ.—ಚಿ+ಇ+ಅ+ತಿ=ಚೈ+ಇ+ಅತಿ=ಚಾಯಯತಿ । ಭಾವಯತಿ । ವಿಶ್+ಇ+ಅ+ತಿ=ವೇಶಯತಿ ॥ ಕ್ನಪ್+ಇ+ಅ+ತಿ=ಕ್ನೋಪಯತಿ ॥ ಇತ್ಯಾದಿ. ಹೀಗೆ ಎಲ್ಲಾ ಧಾತುಗಳ ಮೇಲೆ ಣಿಚ್ ಬಂದಾಗ ರೂಪಗಳನ್ನು ಊಹಿಸಿ ತಿಳಿದುಕೊಳ್ಳಬೇಕು.

## ೨. ಅಥ ಸನ್ನಂತಪ್ರಕ್ರಿಯಾ

ಧಾತುಗಳಿಗೆ ಸನ್ ವಿಧಾನಮಾಡುವ ಸೂತ್ರ.

**೭೦೭. ಧಾತೋಃ ಕರ್ಮಣಃ ಸಮಾನಕರ್ತೃಕಾದಿಚ್ಛಾಯಾಂ ವಾ ॥ ೩-೧-೭ ॥**

ಇಷಿಕರ್ಮಣಿ ಇಷಿಣೈಕಕರ್ತೃಕಾದ್ಧಾತೋಃ ಸನ್ ಪ್ರತ್ಯಯೋ ವಾ ಸ್ಯಾತ್ ಇಚ್ಛಾಯಾಮ್ ।

॥೨೨೩॥ ಪಠ=ವ್ಯಕ್ತಾಯಾಂ ವಾಚಿ ( ಓದುವುದು )

ಸನ್ನಂತಪ್ರಕ್ರಿಯೆ ತೋರಿಸುತ್ತಾನೆ. ಕನ್ನಡದಲ್ಲಿ ನಾವು ಇಚ್ಛಾರ್ಥವನ್ನು ತಿಳಿಸಬೇಕಾದರೆ ಎರಡು ಪದಗಳನ್ನು ಪ್ರಯೋಗಿಸಬೇಕು. ಮಾಡಲು ಬಯಸುತ್ತಾನೆ. ಓದಲು ಬಯಸುತ್ತಾನೆ. ಸಂಸ್ಕೃತದಲ್ಲಿ ಆಯಾಯ ಧಾತುವಿನ ಮೇಲೆ ಇಚ್ಛಾರ್ಥದಲ್ಲಿ ಸನ್ ಎಂಬ ಪ್ರತ್ಯಯ ಬಂದು ಒಂದೇ ರೂಪವಾಗುತ್ತದೆ.

ಧಾತೋಃ, ಕರ್ಮಣಃ, ಸಮಾನಕರ್ತೃಕಾತ್, ಇಚ್ಛಾಯಾಂ, ವಾ ॥ ಪಂಚ ಪದ ಸೂತ್ರ. 'ಗುಪ್‌ತಿಜ್‌ಕಿದ್ಭ್ಯಃ ಸನ್' ಸೂತ್ರದಿಂದ 'ಸನ್' ಅನುವೃತ್ತವಾಗುತ್ತದೆ. ಸೂತ್ರದಲ್ಲಿ 'ಇಚ್ಛಾಯಾಂ' ಎಂದಿರುವುದರಿಂದ ಕರ್ಮವೆಂದರೆ ಇಚ್ಛೆಯಲ್ಲಿ ಕರ್ಮವಾದುದೆಂದರ್ಥ. ಸಮಾನಕರ್ತೃವೆಂದರೂ ಆ ಇಚ್ಛೆಯಲ್ಲಿ ಯಾರು ಕರ್ತೃವೋ

ಅದೇ ಕರ್ತೃವು ಇಚ್ಛೆಯಲ್ಲಿ ಕರ್ಮವಾದ ಧಾತುವಿಗೂ ಇರಬೇಕೆಂದು ತಿಳಿಯಬೇಕು. **ಸೂತ್ರಾರ್ಥ**—ಇಚ್ಛೆಯಲ್ಲಿ ಕರ್ಮವಾದ, ಇಚ್ಛೆಯಲ್ಲಿ ಕರ್ತೃ ಯಾರೋ ಅದೇ ಕರ್ತೃವುಳ್ಳ ವ್ಯಾಪಾರವಾಚಕ ಧಾತುವಿನ ಮೇಲೆ ಇಚ್ಛಾರ್ಥ ತೋರುವಾಗ ಸನ್ ಪ್ರತ್ಯಯ ಬರುತ್ತದೆ. ಪಠ ಧಾತುವಿನ ಮೇಲೆ ಸನ್ ಹೇಳುತ್ತಾನೆ. ಪಠಿತುಂ ಇಚ್ಛತಿ ಎಂದು ಅರ್ಥವಿವಕ್ಷಾಮಾಡಿದಾಗ (ಪಠನವನ್ನು ಬಯಸುತ್ತಾನೆ.) ಇಚ್ಛೆಯಲ್ಲಿ ಕರ್ಮವಾದುದು ಪಠನ. ಇಚ್ಛೆಯಲ್ಲಿ ಕರ್ತೃವಾದವನೇ ಪಠನದಲ್ಲಿಯೂ ಕರ್ತೃವಾಗಿ ಇದ್ದಾನೆ. ಇಚ್ಛಿಸುವವನೇ ಓದುವವನು. ಇಚ್ಛಾ ತೋರುವುದರಿಂದ ಪಠನ ಕ್ರಿಯಾವಾಚಕ. ಪಠ ಧಾತುವಿನ ಮೇಲೆ ಸನ್ ಬರುತ್ತದೆ. ಸನಿನಲ್ಲಿ ನಕಾರ ಇತ್ ಪಠ್+ಸ ಎಂದಿರುವಾಗ ಧಾತುವಿಗೆ ದ್ವಿತ್ವ ಹೇಳುತ್ತಾನೆ.

ಸನ್ ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಹೇಳುವ ಸೂತ್ರ.

**೭೦೮. ಸನ್ಯಙೋಃ ॥೬-೧-೯॥**

**ಸನ್ನಂತಸ್ಯ ಯಙನ್ತಸ್ಯ ಚ ಧಾತೋರನಭ್ಯಾಸಸ್ಯ ಪ್ರಥಮಸ್ಯೈಕಾಚೋ ದ್ವೇ ಸ್ತೋಽಜಾದೇಸ್ತು ದ್ವಿತೀಯಸ್ಯ । ಸನ್ಯತಃ॥ ಪಠಿತುಮಿಚ್ಛತಿ ಪಿಪಠಿಷತಿ । ಕರ್ಮಣಃ ಕಿಮ್? ಗಮನೇನ ಇಚ್ಛತಿ । ಸಮಾನ ಕರ್ತೃಕಾತ್ ಕಿಮ್ ? ಶಿಷ್ಯಾಃ ಪಠನ್ತ್ವಿತೀಚ್ಛತಿ ಗುರುಃ ॥ ವಾ ಗ್ರಹಣಾದ್ವಾಕ್ಯಮಪಿ ॥ ಲುಙ್ಸನೋರ್ಘಸ್ಲೃ ॥**

ಏಕಪದ ಸೂತ್ರ. ಅನ್ವಯವಾರ್ಥಕಷಷ್ಠೀದ್ವಿವಚನ. ಸನ್ ಚ ಯಙ್ ಚ ಸನ್ಯಙೌ । ತಯೋಃ ಸನ್ಯಙೋಃ ಎರಡೂ ಪ್ರತ್ಯಯಗಳಾದುದರಿಂದ ತದಂತಲಾಭ. 'ಏಕಾಚೋ ದ್ವೇ ಪ್ರಥಮಸ್ಯ','ಅಜಾದೇರ್ದ್ವಿತೀಯಸ್ಯ' ಅಧಿಕಾರ, **ಸೂತ್ರಾರ್ಥ**—ಸನಂತ, ಯಙಂತವಾದ ಧಾತುವಿನ ಅಭ್ಯಾಸವಲ್ಲದ ಮೊದಲಿನ ಏಕಾಚಿಗೆ ದ್ವಿತ್ವ ಬರುತ್ತದೆ; ಅಜಾದಿಯಾಗಿದ್ದರೆ ಎರಡನೇ ಏಕಾಚಿಗೆ ದ್ವಿತ್ವ ಬರುತ್ತದೆ. ಪ್ರಕೃತ ಸನ್ನಂತ ಪಠ್+ಸ. ಇಲ್ಲಿ ಅಭ್ಯಾಸವಿಲ್ಲ. ಇದರ ಮೊದಲಿನ ಏಕಾಚ್ ಎಂದರೆ ಪಠ್ ಅದಕ್ಕೆ ದ್ವಿತ್ವ ಬಂದರೆ ಪಠ್‌ಪಠ್+ಸ ಎಂದಾಗುತ್ತದೆ. 'ಹಲಾದಿಃ ಶೇಷಃ' ಪಪಠ್+ಸ. 'ಆರ್ಧಧಾತುಕಸ್ಯೇಡ್ವಲಾದೇಃ' ಸನಿಗೆ ಇಡಾಗಮ. ಪಪಠ್+ಇಸ. 'ಸನ್ಯತಃ' ಅಭ್ಯಾಸ ಅಕಾರಕ್ಕೆ ಇತ್ವ. ಪಿಪಠ್+ಇಸ. 'ಆದೇಶಪ್ರತ್ಯಯಯೋಃ' ಷತ್ವ. ಪಿಪಠಿಷ। ಇದು ಸನ್ನಂತವಾದುದರಿಂದ 'ಸನಾದ್ಯಂತಾಧಾತವಃ' ಸೂತ್ರದಿಂದ ಧಾತುಸಂಜ್ಞಾ ಬಂದರೆ ಇದರ ಮೇಲೆ ಲಡಾದಿ. ಪಿಪಠಿಷ+ಅ+ತಿ. 'ಅತೋ ಗುಣೇ' ಪರರೂಪ. ಪಿಪಠಿಷತಿ । ಪಿಪಠಿಷಾಞ್ಚಕಾರ । ಪಿಪಠಿಷಿತಾ । ಪಿಪಠಿಷಿಷ್ಯತಿ । ಪಿಪಠಿಷತು । ಅಪಿಪಠಿಷತ್ । ಪಿಪಠಿಷೇತ್ । ಪಿಪಠಿಷ್ಯಾತ್ । ಅಪಿಪಠಿಷೀತ್। ಅಪಿಪಠಿಷಿಷ್ಯತ್ ॥

ಸನ್ ವಿಧಾಯಕ ಸೂತ್ರಸ್ಥ ಪದಪ್ರಯೋಜನವನ್ನು ಹೇಳುತ್ತಾನೆ. ಕರ್ಮಣಃ ಕಿಮ್ ? ಇಚ್ಛೆಯಲ್ಲಿ ಕರ್ಮವಾದ ಎಂದುದೇಕೆ ? ಗಮನೇನ ಇಚ್ಛತಿ ॥ ಹೋಗುವುದರಿಂದ ಬಯಸುತ್ತಾನೆ. ಇಲ್ಲಿ ಸನ್ ಬರುವುದಿಲ್ಲ. ಗಮನಕ್ರಿಯಾ ಇಚ್ಛೆಯಲ್ಲಿ ಕರಣವಾಗಿದೆ ; ಕರ್ಮವಾಗಿಲ್ಲ. ಒಂದೇ ಕರ್ತೃವಾಗಿರಬೇಕೆಂದು ಏಕೆ ಹೇಳಬೇಕು ? ಶಿಷ್ಯರು ಓದಲಿ ಎಂದು ಗುರುವು ಬಯಸುತ್ತಾನೆ. ಇಲ್ಲಿ ಇಚ್ಛೆಯಲ್ಲಿ ಗುರು ಕರ್ತೃ. ಪಠನಕ್ರಿಯೆ ಕರ್ಮವಾದರೂ ಅದರಲ್ಲಿ ಶಿಷ್ಯರು ಕರ್ತೃಗಳು. ಹೀಗೆ ಭಿನ್ನಕರ್ತೃವಾದುದರಿಂದ ಇಲ್ಲಿ ಪಠಿನಮೇಲೆ ಸನ್ ಬರುವುದಿಲ್ಲ. ಸೂತ್ರದಲ್ಲಿ ವಾ ಎಂದುದರಿಂದ ಸನ್ ವಿಕಲ್ಪ. ಸನ್ ಬಾರದಿರುವಾಗ ವಾಕ್ಯವೇ ಇರುತ್ತದೆ. ಪಠನಂ ಇಚ್ಛತಿ ॥ ಪಠಿತುಂ ಇಚ್ಛತಿ ॥ ಇತ್ಯಾದಿ.

ಅತ್ತುಂ ಇಚ್ಛತಿ ॥ ತಿನ್ನಲು ಬಯಸುತ್ತಾನೆ. ಅದ್ ಧಾತುವಿಗೆ ಇಚ್ಛಾರ್ಥದಲ್ಲಿ ಸನ್. ಅದ್ + ಸನ್ ಎಂದಿರುವಾಗ 'ಲುಙ್‌ಸನೋರ್ಘಸ್ಲೃ' (ಸೂ. ೫೫೫) ಸೂತ್ರದಿಂದ ಅದಿಗೆ ಘಸ್ಲೃ ಆದೇಶ. ಲೃಕಾರ ಇತ್. ಘಸ್ + ಸ ಎಂದಾಗುತ್ತದೆ. ಇಲ್ಲಿ ಪೂರ್ವಸಕಾರಕ್ಕೆ ತಕಾರಾದೇಶ ಹೇಳುತ್ತಾನೆ.

ಸಕಾರಕ್ಕೆ ತಕಾರ ಹೇಳುವ ಸೂತ್ರ.

## ೭೦೯. ಸಃ ಸ್ಯಾರ್ಧಧಾತುಕೇ ॥ ೭-೪-೪೯ ॥

**ಸಸ್ಯ ತಃ ಸ್ಯಾತ್ಸಾದಾವಾರ್ಧಧಾತುಕೇ । ಅತ್ತುಮಿಚ್ಛತಿ ಜಿಘತ್ಸತಿ । ಏಕಾಚ ಇತಿ ನೇಟ್ ॥**

ಸಃ, ಸಿ, ಅರ್ಧಧಾತುಕೇ ॥ ತ್ರಿಪದ ಸೂತ್ರ. ಸಿ, ಆರ್ಧಧಾತುಕೇ ಎಂಬ ಸಪ್ತಮ್ಯಂತಕ್ಕೆ ವಿಶೇಷಣವಾದುದರಿಂದ ತದಾದಿಲಾಭ 'ಅಚ ಉಪಸರ್ಗಾತ್ತಃ' ಸೂತ್ರದಿಂದ ತಃ ಅನುವೃತ್ತಿ. ಅಕಾರ ಉಚ್ಚಾರಣಾರ್ಥವಾದುದರಿಂದ ತ್ ಉಳಿಯುತ್ತದೆ. **ಸೂತ್ರಾರ್ಥ**—ಸಕಾರಕ್ಕೆ ಸಕಾರಾದಿಯಾದ ಆರ್ಧಧಾತುಕ ಪರದಲ್ಲಿರುವಾಗ ತಕಾರಾದೇಶ ಬರುತ್ತದೆ. ಪ್ರಕೃತ ಸಕಾರಾದಿಯಾದ ಆರ್ಧಧಾತುಕ ಸನ್ ಪರದಲ್ಲಿರುವುದರಿಂದ ತ ಬಂದರೆ ಘತ್ + ಸ ಎಂದಾಗುತ್ತದೆ. 'ಏಕಾಚ ಉಪದೇಶೇಽನುದಾತ್ತಾತ್' ಸೂತ್ರದಿಂದ ನಿಷೇಧವಿರುವುದರಿಂದ ಸನಿಗೆ ಇಡಾಗಮ ಬರುವುದಿಲ್ಲ. ದ್ವಿತ್ವಾದಿ. 'ಕುಹೋಶ್ಚುಃ', 'ಸನ್ಯತಃ' ಜಿಘತ್ಸತಿ । ಹೀಗೇ ಹತ್ತು ಲಕಾರಗಳಲ್ಲಿಯೂ ರೂಪ ತಿಳಿಯಬೇಕು.

ಕರ್ತುಂ ಇಚ್ಛತಿ ॥ ಮಾಡಲು ಬಯಸುತ್ತಾನೆ. ಕೃಞ್‌ನ ಮೇಲೆ ಇಚ್ಛಾರ್ಥದಲ್ಲಿ ಸನ್. ಕೃ + ಸ ಎಂದಿರುವಾಗ 'ಏಕಾಚಃ—' ಸೂತ್ರದಿಂದ ಇಡಾಗಮನಿಷೇಧದಿಂದ ಸನಿಗೆ ಇಡಾಗಮ ಬರುವುದಿಲ್ಲ. ಸನ್ ನಿಮಿತ್ತೀಕರಿಸಿ ದೀರ್ಘ ಹೇಳುತ್ತಾನೆ.

ಸನ್ ಪರವಾದಾಗ ದೀರ್ಘ ಹೇಳುವ ಸೂತ್ರ.

೭೧೦. ಅಜ್ಝನಗಮಾಂ ಸನಿ || ೬-೪-೧೬ ||

ಅಜನ್ತಾನಾಂ ಹನ್ತೇರಜಾದೇಶಗಮೇಶ್ಚ ದೀರ್ಘೋ ಹಲಾದೌ ಸನಿ ||

ದ್ವಿಪದ ಸೂತ್ರ. ಅಚ್ ಚ, ಹನ್ ಚ, ಗಮ್ ಚ ಅಜ್ಝನಗಮಃ | ತೇಷಾಮ್ | 'ಅಂಗಸ್ಯ' ಅಧಿಕಾರ. 'ಢ್ರಲೋಪೇ ಪೂರ್ವಸ್ಯ—' ಸೂತ್ರದಿಂದ 'ದೀರ್ಘಃ' ಪದಾನುವೃತ್ತಿ. ಸನ್ ಹಲಾದಿಯಾಗಿರಬೇಕೆಂದೂ, ಗಮ್ ಅಜಾದೇಶವಾದುದೇ ಆಗಬೇಕೆಂದೂ ಭಾಷ್ಯದಿಂದ ಲಬ್ಧವಾಗಿದೆ. ಸೂತ್ರಾರ್ಥ—ಅಜನ್ತವಾದ ಧಾತುಗಳಿಗೂ ಹನ್ ಧಾತುವಿಗೂ ಅಜಾದೇಶವಾದ ಗಮ್ ಧಾತುವಿಗೂ ಹಲಾದಿಯಾದ ಸನ್ ಪರವಲ್ಲಿರುವಾಗ ದೀರ್ಘ ಬರುತ್ತದೆ. ಇಲ್ಲಿ ಕೃ+ಸ ಎಂದಿರುವಾಗ ಅಜನ್ತವಾದುದರಿಂದ ಅದಕ್ಕೆ ಹಲಾದಿಯಾದ ಸನ್ (ಇಟ್ ಬಾರದಿರಬಾರದು) ಪರದಲ್ಲಿರುವುದರಿಂದ ದೀರ್ಘ ಬಂದರೆ ಕ್ರೂ+ಸ ಎಂದಾಗುತ್ತದೆ. ಸನ್ ನಿಮಿತ್ತೀಕರಿಸಿ ಗುಣ ಬರಲಿ ಎಂಬ ಆಶಂಕೆ ಬಂದರೆ ಸನಿಗೆ ಕಿತ್ತ್ವ ಹೇಳುತ್ತಾನೆ.

ಸನಿಗೆ ಕಿತ್ ಭಾವವನ್ನು ಹೇಳುವ ಸೂತ್ರ.

೭೧೧. ಇಕೋ ಝಲ್ || ೧-೨-೯ ||

ಇಗನ್ತಾಜ್ಝಲಾದಿಃ ಸನ್ ಕಿತ್ ಸ್ಯಾತ್ | 'ಋತ ಇದ್ಧಾತೋಃ' | ಕರ್ತುಮಿಚ್ಛತಿ ಚಿಕೀರ್ಷತಿ ||

ಇಕಃ, ಝಲ್ || ದ್ವಿಪದ ಸೂತ್ರ. 'ರುದವಿದ—' ಸೂತ್ರದಿಂದ 'ಸನ್', 'ಅಸಂಯೋಗಾತ್—' ಸೂತ್ರದಿಂದ 'ಕಿತ್' ಪದಗಳು ಅನುವೃತ್ತವಾಗುತ್ತವೆ. ಸನ್ ಧಾತುವಿನ ಮೇಲೆ ಬರುವುದಾದುದರಿಂದ ಧಾತುವು ಆಕ್ಷಿಪ್ತವಾಗಿ ಇಕ್ ಅದಕ್ಕೆ ವಿಶೇಷಣವಾಗಿ ತದಂತವೆಂಬ ಅರ್ಥ ಬರುತ್ತದೆ. ಸೂತ್ರಾರ್ಥ—ಇಗನ್ತವಾದ ಧಾತುವಿನ ಪರದಲ್ಲಿರುವ ಝಲಾದಿಯಾದ ಸನ್ ಕಿತ್ ಆಗುತ್ತದೆ. ಕ್ರೂ ಇಗನ್ತ ಧಾತು. ಅದರ ಪರದಲ್ಲಿರುವ ಸನಿಗೆ ಕಿದ್ವದ್ಭಾವ ಬಂದರೆ 'ಕ್ಙಿತಿ ಚ' ಸೂತ್ರದಿಂದ ಗುಣನಿಷೇಧ ಬರುತ್ತದೆ. 'ಋತ ಇತ್ ಧಾತೋಃ' (ಸೂ ೬೬೫) ಸೂತ್ರದಿಂದ ಇತ್ತ್ವ ಋಕಾರಕ್ಕೆ ಬರುವುದರಿಂದ ರಪರ (ಇರ್)ವಾಗಿ ಬಂದರೆ ಕಿರ್+ಸ ಎಂದಾಗುತ್ತದೆ. 'ಹಲಿ ಚ' ಸೂತ್ರದಿಂದ ದೀರ್ಘ. ಕೀರ್+ಸ. ಇಣ್ಣಿನ ಪರದಲ್ಲಿ ಸಕಾರವಿರುವುದರಿಂದ 'ಆದೇಶಪ್ರತ್ಯಯಯೋಃ' ಸೂತ್ರದಿಂದ ಷತ್ವ. ಕೀರ್ಷ | ಲಡಾದಿಗಳು ಬಂದಾಗ ದ್ವಿತ್ವಾದಿ. 'ಕುಹೋಶ್ಚುಃ' ಅಭ್ಯಾಸಕ್ಕೆ ಚಕಾರ. ಕೀರ್, ಕೀರ್+ಸ =ಚಿಕೀರ್+ಸ. ಚಿಕೀರ್ಷತಿ || ಹಿಂದಿನಂತೇ ಲಿಡಾದಿಗಳಲ್ಲಿ ರೂಪ ತಿಳಿಯಬೇಕು. ಚಿಕೀರ್ಷಾಞ್ಚಕಾರ | ಚಿಕೀರ್ಷಿತಾ | ಚಿಕೀರ್ಷಿಷ್ಯತಿ | ಚಿಕೀರ್ಷತು | ಅಚಿಕೀರ್ಷತ್ | ಚಿಕೀರ್ಷೇತ್ | ಚಿಕೀರ್ಷ್ಯಾತ್ | ಅಚಿಕೀರ್ಷೀತ್ | ಅಚಿಕೀರ್ಷಿಷ್ಯತ್ ||

ಭವಿತುಂ ಇಚ್ಛತಿ || ಇರಲು ಬಯಸುತ್ತಾನೆ. ಇಚ್ಛಾರ್ಥದಲ್ಲಿ ಭೂ ಧಾತುವಿಗೆ ಸನ್. ಭೂ+ಸ ಎಂದಿರುವಾಗ ಸನಿಗೆ ಇಡಾಗಮ ಪ್ರಾಪ್ತವಾದರೆ ಸನಿನಲ್ಲಿ ನಿಷೇಧ ಹೇಳುತ್ತಾನೆ.

ಗ್ರಹಾದಿಗಳ ಸನಿಗೆ ಇಡಾಗಮ ನಿಷೇಧ ಹೇಳುವ ಸೂತ್ರ.

೭೧೨. ಸನಿ ಗ್ರಹಗುಹೋಶ್ಚ || ೭-೨-೧೨ ||

ಗ್ರಹೇರ್ಗುಹೇರುಗನ್ತಾಚ್ಚ ಸನ ಇಣ್ ನ ಸ್ಯಾತ್ || ಬುಭೂಷತಿ ||

ಇತಿ ಸನ್ನನ್ತಪ್ರಕ್ರಿಯಾ

ಸನಿ, ಗ್ರಹಗುಹೋಃ, ಚ || ತ್ರಿಪದ ಸೂತ್ರ. ಸೂತ್ರದಲ್ಲಿರುವ ಚಕಾರದಿಂದ 'ಶ್ರ್ಯುಕಃ ಕಿತಿ' ಸೂತ್ರದಿಂದ 'ಉಕಃ' ಎಂಬುದು ಸಮುಚ್ಚಿತವಾಗುತ್ತದೆ. 'ನೇಡ್ವಶಿ ಕೃತಿ' ಸೂತ್ರದಿಂದ 'ನ, ಇಟ್' ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಗ್ರಹ, ಗುಹ ಧಾತುಗಳ, ಉಗನ್ತಧಾತುಗಳ ಪರದಲ್ಲಿರುವ ಸನಿಗೆ ಇಡಾಗಮ ಬರುವುದಿಲ್ಲ. ಸಪ್ತಮೀ ಪಂಚಮಿಗಳಲ್ಲಿ ಪಂಚಮ್ಯಂತಾರ್ಥಕ್ಕೆ ಪ್ರಾಧಾನ್ಯವಿರುವುದರಿಂದ 'ಸನಿ' ಸಪ್ತಮ್ಯನ್ತವು ಷಷ್ಠ್ಯನ್ತವಾಗಿ ವಿಪರಿಣತವಾಗಿದೆ. ಉಕ್ ಪ್ರತ್ಯಾಹಾರ. ಪ್ರಕೃತ ಭೂ+ಸ. ಇಡಾಗಮ ಬರದಿರುವುದರಿಂದ ಇಗನ್ತದ ಪರದಲ್ಲಿ ಝಲಾದಿ ಸನ್ ಇರುವುದರಿಂದ ಅದಕ್ಕೆ 'ಇಕೋ ಝಲ್' ಸೂತ್ರದಿಂದ ಕಿತ್ವ ಬರುವುದರಿಂದ ಗುಣವಿಲ್ಲ. ದ್ವಿತ್ವಾದಿ. ಭೂಭೂ+ಸ. 'ಹ್ರಸ್ವಃ' ಭುಭೂ+ಸ. ಜಶ್. ಬುಭೂ+ಸ. ಷತ್ವ. ಬುಭೂಷ | ಲಡಾದಿ. ಬುಭೂಷತಿ || ಬುಭೂಷಾಞ್ಚಕಾರ | ಬುಭೂಷಿತಾ | ಬುಭೂಷಿಷ್ಯತಿ | ಬುಭೂಷತು ಅಬುಭೂಷತ್ | ಬುಭೂಷೇತ್ | ಬುಭೂಷ್ಯಾತ್ | ಅಬುಭೂಷೀತ್ | ಅಬುಭೂಷಿಷ್ಯತ್ || ಹೀಗೆಯೇ ಇಚ್ಛಾರ್ಥದಲ್ಲಿ ಪ್ರತಿಯೊಂದು ಧಾತುವಿನ ಮೇಲೂ ಸನ್ ಬಂದು ವಿಶೇಷರೂಪವಾಗುತ್ತದೆ. ಸನಿಗೆ ಇಡಾಗಮ, ಕಿತ್ವಾದಿಗಳನ್ನು ಆಯಾಯ ಸೂತ್ರಗಳಿಂದ ತಿಳಿದು ರೂಪ ಮಾಡಬೇಕು. ಲಿಖಿತುಂ ಇಚ್ಛತಿ ಲಿಲೇಖಿಷತಿ || ರೋದಿತುಂ ಇಚ್ಛತಿ ರುರುದಿಷತಿ || ಗ್ರಹೀತುಂ ಇಚ್ಛತಿ ಜಿಘೃಕ್ಷತಿ || ಇತ್ಯಾದಿ.

# ೩. ಅಥ ಯಙನ್ತಪ್ರಕ್ರಿಯಾ

ಯಙ್ ವಿಧಾನಮಾಡುವ ಸೂತ್ರ.

೭೧೩. ಧಾತೋರೇಕಾಚೋ ಹಲಾದೇಃ ಕ್ರಿಯಾಸಮಭಿಹಾರೇ ಯಙ್ ||೩-೧.೨೨ ||

**ಪೌನಃ ಪುನ್ಯೇ ಭೃಶಾರ್ಥೇ ಚ ದ್ಯೋತ್ಯೇ ಧಾತೋರೇಕಾಚೋ ಹಲಾದೇಃ ಯಙ್ ಸ್ಯಾತ್ ||**

ಸನಾದಿಗಳಲ್ಲಿ ಹೇಳಿದ ಯಙ್ ಪ್ರತ್ಯಯಾನ್ತಧಾತುಗಳ ಪ್ರಕ್ರಿಯೆಯನ್ನು ಹೇಳಲು ಆರಂಭಿಸುತ್ತಾನೆ. ಕ್ರಿಯೆ ಪುನಃ ಪುನಃ ಆಗುತ್ತದೆ ಅಥವಾ ಹೆಚ್ಚಾಗಿ ಆಗುತ್ತದೆ ಎಂಬ ಅರ್ಥ ತೋರುವಾಗ ಧಾತುಗಳ ಮೇಲೆ ಈ ಯಙ್ ಪ್ರತ್ಯಯ ಬರುತ್ತದೆ.

ಧಾತೋಃ, ಏಕಾಚಃ, ಹಲಾದೇಃ, ಕ್ರಿಯಾಸಮಭಿಹಾರೇ, ಯಙ್ || ಐದು ಪದಗಳುಳ್ಳ ಸೂತ್ರ. ಪೌನಃ ಪುನ್ಯ, ಭೃಶಾರ್ಥ, (ಅಧಿಕ) ಕ್ರಿಯಾಸಮಭಿಹಾರದ ಅರ್ಥ. ಸೂತ್ರಾರ್ಥ—ಪೌನಃ ಪುನ್ಯ, ಭೃಶಾರ್ಥ ತೋರುವಾಗ ಏಕಾಚಾಗಿ ಹಲಾದಿಯಾಗಿರುವ ಧಾತುವಿಗೆ ಯಙ್ ಪ್ರತ್ಯಯ ಬರುತ್ತದೆ. ಪುನಃ ಪುನಃ ಆಗುತ್ತಾನೆ ಅಥವಾ ಅಧಿಕವಾಗಿ ಆಗುತ್ತಾನೆ, ಎಂಬರ್ಥ ತೋರುವಾಗ ಭೂ ಧಾತುವಿನ ಮೇಲೆ ಯಙ್. ಭೂ ಹಲಾದಿಯಾಗಿ ಏಕಾಚಾಗಿದೆ. ಭೂ+ಯ. (ಯಙಿನಲ್ಲಿ ಙಕಾರ ಇತ್.) 'ಸನ್ಯಙೋಃ' ಸೂತ್ರದಿಂದ ಯಙ್ ಪರವಾದುದರಿಂದ ದ್ವಿತ್ವ. ಭೂಭೂ+ಯ. 'ಅಭ್ಯಾಸೇ ಚರ್ಚ' ಸೂತ್ರದಿಂದ ಅಭ್ಯಾಸದ ಭಕಾರಕ್ಕೆ ಬಕಾರ. ಬುಭೂ+ಯ ಎಂದಿರುವಾಗ ಅಭ್ಯಾಸಕ್ಕೆ ಗುಣ ಹೇಳುತ್ತಾನೆ.

ಯಙ್ ಪರವಾದಾಗ ಅಭ್ಯಾಸಕ್ಕೆ ಗುಣ ಹೇಳುವ ಸೂತ್ರ.

೭೧೪. ಗುಣೋ ಯಙ್‌ಲುಕೋಃ ||೭-೪-೮೨ ||

**ಅಭ್ಯಾಸಸ್ಯ ಗುಣೋ ಯಙಿ ಯಙ್‌ಲುಕಿ ಚ ಪರತಃ । ಙಿದನ್ತತ್ವಾದಾತ್ಮನೇಪದಮ್ । ಪುನಃ ಪುನರತಿಶಯೇನ ವಾ ಭವತಿ ಬೋಭೂಯತೇ ಬೋಭೂಯಾಞ್ಚಕ್ರೇ । ಅಬೋಭೂಯಿಷ್ಟ ||**

ಯಙ್ ಪರವಾದಾಗ ಅಭ್ಯಾಸಕ್ಕೆ ಗುಣ ಹೇಳುವ ಸೂತ್ರ.

ಗುಣಃ, ಯಙ್‌ಲುಕೋಃ || ಯಙ್ ಚ ಲುಕ್ ಚ ಯಙ್‌ಲುಕೌ । ತಯೋಃ । ಲುಕ್ ಅಂದರೆ ಸನ್ನಿಹಿತವಾದುದರಿಂದ ಯಙ್‌ಲುಕನ್ನೇ ತೆಗೆದುಕೊಳ್ಳಬೇಕು. 'ಅತ್ರಲೋಪೋಽಭ್ಯಾಸಸ್ಯ' ಸೂತ್ರದಿಂದ, 'ಅಭ್ಯಾಸಸ್ಯ' ಅನುವೃತ್ತಿ. ಸೂತ್ರಾರ್ಥ—ಅಭ್ಯಾಸಕ್ಕೆ ಯಙ್, ಯಙ್‌ಲುಕ್ ಪರವಾದಾಗ ಗುಣ ಬರುತ್ತದೆ. ಯಙಿನ

ಲುಕ್ ಬರುತ್ತದೆಯೆಂದು ಮುಂದೆ ಹೇಳುತ್ತಾನೆ, ಲುಕಿನಿಂದ ಲುಪ್ತವಾದುದರಿಂದ ಪ್ರತ್ಯಯಲಕ್ಷಣವಿಲ್ಲವಾದುದರಿಂದ ಯಙ್‌ಲುಕಿನಲ್ಲೂ ಗುಣ ಹೇಳಿರುತ್ತಾನೆ. ಅಭ್ಯಾಸಕ್ಕೆ ಗುಣ ಬಂದರೆ ಬೋಭೂಯ ಎಂದಾಗುತ್ತದೆ. ಯಙ್ ಙಿತ್ತಾದುದರಿಂದ ಧಾತುವಿನ ಉಕಾರಕ್ಕೆ ಗುಣವಿಲ್ಲ. 'ಸನಾದ್ಯಂತಾಧಾತವಃ' ಸೂತ್ರದಿಂದ ಬೋಭೂಯ ಧಾತುವಾದುದರಿಂದ ಇದರಮೇಲೆ ಲಡಾದಿ. 'ಅನುದಾತ್ತಙಿತ ಆತ್ಮನೇಪದಮ್' ಸೂತ್ರದಿಂದ ಙಿತ್ತಾದುದರಿಂದ ಆತ್ಮನೇಪದಪ್ರತ್ಯಯಗಳು ಬರುತ್ತವೆ. ಬೋಭೂಯ+ಅ+ತೇ. 'ಅತೋಗುಣೇ' ಬೋಭೂಯತೇ। ಬೋಭೂಯೇತೇ। ಬೋಭೂಯನ್ತೇ॥ ಇತ್ಯಾದಿ. ಪ್ರತ್ಯಯಾನ್ತವಾದುದರಿಂದ ಲಿಟಿನಲ್ಲಿ ಆಮ್. ಆಮಿನ ಪ್ರಕೃತಿ ಆತ್ಮನೇಪದಿಯಾದುದರಿಂದ ಅನುಪ್ರಯುಕ್ತವಾದ ಲಿಟ್‌ಪರ ಕೃಙಿಗೂ ಆತ್ಮನೇಪದ ಪ್ರತ್ಯಯಗಳು ಬರುತ್ತವೆ. ಬೋಭೂಯಾಞ್ಚಕ್ರೇ। ಬೋಭೂಯಿತಾ। ಬೋಭೂಯಿಷ್ಯತೇ। ಬೋಭೂಯತಾಮ್। ಅಬೋಭೂಯತ॥ ಬೋಭೂಯೇತ। ಬೋಭೂಯಿಷೀಷ್ಟ। ಅಬೋಭೂಯಿಷ್ಟ। ಅಬೋಭೂಯಿಷ್ಯತ॥ ಕೆಲವು ಧಾತುಗಳಿಗೆ ಅರ್ಥಾಂತರದಲ್ಲಿಯೂ ಯಙ್‌ಪ್ರತ್ಯಯ ಬರುತ್ತದೆಂಬುದನ್ನು ತೋರಿಸುತ್ತಾನೆ.

ಕೌಟಿಲ್ಯಾರ್ಥದಲ್ಲಿ ಯಙ್ ವಿಧಿಸುವ ಸೂತ್ರ.

೭೧೫. ನಿತ್ಯಂ ಕೌಟಿಲ್ಯೇ ಗತೌ ॥೩-೧-೨೩॥

**ಗತ್ಯರ್ಥಾತ್ ಕೌಟಿಲ್ಯ ಏವ ಯಙ್ ಸ್ಯಾತ್ ನತು ಕ್ರಿಯಾಸಮಭಿಹಾರೇ ।**

ತ್ರಿಪದ ಸೂತ್ರ. ನಿತ್ಯಂ ಎಂಬುದಕ್ಕೆ ಏವಕಾರಾರ್ಥ. ಕೌಟಿಲ್ಯೇ ಎಂಬುದರ ಮೇಲೆ ಪಾಠಮಾಡಿಕೊಳ್ಳಬೇಕು. (ಕೌಟಿಲ್ಯೇ ನಿತ್ಯಂ।) 'ಧಾತೋರೇಕಾಚಃ—' ಸೂತ್ರದಿಂದ 'ಧಾತೋಃ ಯಙ್' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಗತ್ಯರ್ಥಕವಾದ ಧಾತುಗಳ ಮೇಲೆ ಕೌಟಿಲ್ಯಾರ್ಥದಲ್ಲಿ ಮಾತ್ರ ಯಙ್ ಬರುತ್ತದೆ. ಕ್ರಿಯಾಸಮಭಿಹಾರದಲ್ಲಿ ಬರುವುದಿಲ್ಲ. ಕುಟಿಲವಾಗಿ ಹೋಗುತ್ತಾನೆ ಎಂಬರ್ಥದಲ್ಲಿ ಮಾತ್ರ ಯಙ್. ಪುನಃ ಪುನಃ, ಅಥವಾ ಅತಿಶಯವಾಗಿ ಹೋಗುತ್ತಾನೆ ಎಂದರೆ ಆಗ ವಾಕ್ಯವೇ. ಯಙ್ ಬರುವುದಿಲ್ಲ. ವ್ರಜ=ಗತೌ, ಗತ್ಯರ್ಥಕವಾದ ವ್ರಜ ಧಾತುವಿಗೆ ಕುಟಿಲವಾಗಿ ಹೋಗುತ್ತಾನೆ ಎಂಬರ್ಥದಲ್ಲಿ ಯಙ್ ಬಂದರೆ ವ್ರಜ್+ಯ ಎಂದಿರುವಾಗ ದ್ವಿತ್ವಾದಿ. ವ್ರಜ್‌ವ್ರಜ್+ಯ=ವವ್ರಜ್+ಯ ಎಂದಿರುವಾಗ ಅಭ್ಯಾಸಕ್ಕೆ ದೀರ್ಘ ಹೇಳುತ್ತಾನೆ.

ಯಙಿನಲ್ಲಿ ಅಭ್ಯಾಸಕ್ಕೆ ದೀರ್ಘ ಹೇಳುವ ಸೂತ್ರ.

೭೧೬. ದೀರ್ಘೋಽಕಿತಃ || ೭-೪-೮೩ ||

**ಅಕಿತೋಽಭ್ಯಾಸಸ್ಯ ದೀರ್ಘೋ ಯಙಿ ಯಙ್ಲುಕೋಃ । ಕುಟಿಲಂ ವ್ರಜತಿ ವಾವ್ರಜ್ಯತೇ ॥**

ದೀರ್ಘಃ, ಅಕಿತಃ ॥ ದ್ವಿಪದ ಸೂತ್ರ. 'ಗುಣೋ ಯಙ್ಲುಕೋಃ' ಸೂತ್ರದಿಂದ 'ಯಙ್ಲುಕೋಃ', 'ಅತ್ರ ಲೋಪೋಽಭ್ಯಾಸಸ್ಯ' ಸೂತ್ರದಿಂದ 'ಅಭ್ಯಾಸಸ್ಯ' ಅನುವೃತ್ತಿ. **ಸೂತ್ರಾರ್ಥ**—ಅಕಿತ್ತಾದ ಅಭ್ಯಾಸಕ್ಕೆ ಯಙ್, ಯಙ್ಲುಕ್ ಪರವಾದಾಗ ದೀರ್ಘ ಬರುತ್ತದೆ. ಕೆಲವು ಅಭ್ಯಾಸಗಳಿಗೆ ನೀಕ್ ರೀಕ್ ಆದಿ ಆಗಮ ಗಳು ಬರುವುದರಿಂದ ಅವು ಕಿತ್ತಾಗುತ್ತವೆ. ಪ್ರಕೃತ ವವ್ರಜ್+ಯ ಎಂಬಲ್ಲಿ ಅಕಿತ್ತಾದ ಅಭ್ಯಾಸವಾದುದರಿಂದ ದೀರ್ಘ ಬಂದರೆ ವಾವ್ರಜ್ಯ ಎಂದಾಗುತ್ತದೆ, ಇದರ ಮೇಲೆ ಲಡಾದಿ. ಕುಟಿಲವಾಗಿ ಹೋಗುತ್ತಾನೆ. ವಾವ್ರಜ್ಯತೇ । ಲಿಟಿನಲ್ಲಿ ಆಮ್ ಬಂದಾಗ ಆರ್ಧಧಾತುಕ ಪರವಾದುದರಿಂದ ಯಙಿಗೆ ಲೋಪ ಹೇಳುತ್ತಾನೆ.

ಯಕಾರಕ್ಕೆ ಲೋಪ ಹೇಳುವ ಸೂತ್ರ.

೭೧೭. ಯಸ್ಯ ಹಲಃ ||೬-೪-೪೯ ||

**ಯಸ್ಯೇತಿ ಸಂಘಾತಗ್ರಹಣಮ್ । ಹಲಃ ಪರಸ್ಯ ಯಶಬ್ದಸ್ಯ ಲೋಪ ಆರ್ಧಧಾತುಕೇ । ಆದೇಃ ಪರಸ್ಯ । ಅತೋ ಲೋಪಃ । ವಾವ್ರಜಾಞ್ಚಕ್ರೇ । ವಾವ್ರಜಿತಾ ।**

ದ್ವಿಪದ ಸೂತ್ರ. 'ಆರ್ಧಧಾತುಕೇ' ಅಧಿಕಾರ. 'ಅತೋ ಲೋಪಃ' ಸೂತ್ರದಿಂದ 'ಲೋಪಃ' ಅನುವೃತ್ತಿ. ಯಸ್ಯ ಎಂಬಲ್ಲಿ ಯಕಾರೋತ್ತರಾಕಾರ ಉಚ್ಚಾರಣಾರ್ಥವೆಂಬ ಭ್ರಮೆಯನ್ನು ಹೋಗಲಾಡಿಸಲು 'ಸಂಘಾತಗ್ರಹಣಮ್' ಎಂದಿರುತ್ತಾನೆ. ಯ್+ಅ ಎರಡಕ್ಕೂ ಇಲ್ಲಿ ಗ್ರಹಣವಿದೆ. ಯ ವಿಶಿಷ್ಟವನ್ನು ತೆಗೆದುಕೊಳ್ಳಬೇಕು ಎಂದರ್ಥ. ಹಲಃ ಪಂಚಮೀ. **ಸೂತ್ರಾರ್ಥ**—ಹಲಿನ ಪರದಲ್ಲಿರುವ ಯ ಎಂಬುದಕ್ಕೆ ಆರ್ಧಧಾತುಕಪರದಲ್ಲಿರುವಾಗ ಲೋಪ ಬರುತ್ತದೆ. ವಾವ್ರಜ್+ಯ +ಆಮ್. ಇಲ್ಲಿ ಜಕಾರ ಹಲ್. ಆಮ್ ಆರ್ಧಧಾತುಕ. ಯಕಾರಕ್ಕೆ ಲೋಪ. ಆಗ 'ಆದೇಃ ಪರಸ್ಯ' ಪರಿಭಾಷೆಯಿಂದ ಪರಕ್ಕೆ ವಿಹಿತವಾದ ಲೋಪರೂಪಕಾರ್ಯವು ಅದರ ಆದಿ ಅಂದರೆ (ಯ್+ಅ) ಯಕಾರಕ್ಕೆ ಬಂದರೆ ವಾವ್ರಜ್+ಅ+ಆಮ್. 'ಅತೋ ಲೋಪಃ' ಸೂತ್ರದಿಂದ ಉಳಿದ ಅಕಾರಕ್ಕೂ ಲೋಪ. ವಾವ್ರಜ್+ಆಮ್. ಇದರ ಮೇಲೆ ಲಿಟ್ ಪರವಾದ ಕೃಞಾದಿಗಳ ಅನುಪ್ರಯೋಗ. ವಾವ್ರಜಾಞ್ಚಕ್ರೇ । ಇತ್ಯಾದಿ. ಹೀಗೆ ಆರ್ಧಧಾತುಕಗಳಲ್ಲೆಲ್ಲಾ ಯಲೋಪ. ವಾವ್ರಜಿತಾ । ವಾವ್ರಜಿ

ಷ್ಯತಿ । ವಾವೃಜ್ಯತಾಮ್ । ಅವಾವೃಜ್ಯತ । ವಾವೃಜ್ಯೇತ । ವಾವೃಜಿಷೀಷ್ಟ । ಅವಾವೃಜಿಷ್ಟ । ಅವಾವೃಜಿಷ್ಯತ

ಪುನಃಪುನಃ ವರ್ತತೇ । ಅತಿಶಯೇನ ವರ್ತತೇ ಎಂಬರ್ಥತೋರುವಾಗ ವೃತು (ವರ್ತನೇ) ಧಾತುವಿನ ಮೇಲೆ ಯಙ್. ವೃತ್ + ಯ. ದ್ವಿತ್ವಾದಿ. ವೃತ್‌ವೃತ್ + ಯ. 'ಉರತ್' ವರ್‌ತ್‌ವೃತ್ + ಯ. 'ಹಲಾದಿಃ ಶೇಷಃ' ವವೃತ್ + ಯ ಎಂದಿರುವಾಗ ಅಭ್ಯಾಸಕ್ಕೆ ರೀಕ್ ಆಗಮ ಹೇಳುತ್ತಾನೆ.

ಅಭ್ಯಾಸಕ್ಕೆ ರೀಕಾಗಮ ಹೇಳುವ ಸೂತ್ರ.

**೭೧೮. ರೀಗೃದುಪಧಸ್ಯ ಚ ॥ ೭-೪-೯೦ ॥**

**ಋದುಪಧಸ್ಯ ಧಾತೋರಭ್ಯಾಸಸ್ಯ ರೀಗಾಗಮೋ ಯಙ್‌ಯಙ್‌ಲುಕೋಃ । ವರೀವೃತ್ಯತೇ । ವರೀವೃತಾಞ್ಚಕ್ರೇ । ವರೀವೃತಿತಾ ॥**

ರೀಕ್, ಋದುಪಧಸ್ಯ, ಚ ॥ ತ್ರಿಪದ ಸೂತ್ರ. 'ಅತ್ರ ಲೋಪೋ—' ಸೂತ್ರದಿಂದ 'ಅಭ್ಯಾಸಸ್ಯ,' 'ಗುಣೋ ಯಙ್‌ಲುಕೋಃ' ಸೂತ್ರದಿಂದ "ಯಙ್‌ಲುಕೋಃ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಋಕಾರ ಉಪಧೆಯಾಗಿರುವ ಧಾತುವಿನ ಅಭ್ಯಾಸಕ್ಕೆ ಯಙ್‌ಯಙ್‌ಲುಕ್ ಪರದಲ್ಲಿರುವಾಗ ರೀಗಾಗಮ ಬರುತ್ತದೆ. ರೀಕ್ ಕಿತ್ತಾದುದರಿಂದ ಅಭ್ಯಾಸದ ಅಂತಾವಯವವಾಗಿ ಬರುತ್ತದೆ. ವೃತ್ ಧಾತುವಿನಲ್ಲಿ ಋಕಾರ ಉಪಧೆಯಾಗಿದೆ. ರೀಕ್ ಬಂದರೆ ವರೀವೃತ್ಯ ಎಂದಾಗುತ್ತದೆ. ಲಡಾದಿ. ವರೀವೃತ್ಯತೇ । ಲಿಡಾದ್ಯಾರ್ಧಧಾತುಕದಲ್ಲಿ ಹಿಂದಿನಂತೆ ಯಲೋಪ. ವರೀವೃತಾಞ್ಚಕ್ರೇ । ವರೀವೃತಿತಾ । ಯಙ್‌ಲೋಪವಾದಮೇಲೆ ಲಘೂಪಧಗುಣವಿಲ್ಲ. ವರೀವೃತಿಷ್ಯತೇ । ವರೀವೃತ್ಯತಾಮ್ । ಅವರೀವೃತ್ಯತ । ವರೀವೃತ್ಯೇತ । ವರೀವೃತಿಷೀಷ್ಟ । ಅವರೀವೃತಿಷ್ಟ । ಅವರೀವೃತಿಷ್ಯತೇ ॥

ಪುನಃಪುನಃ, ಅತಿಶಯೇನ ವಾ ನೃತ್ಯತಿ ಎಂಬರ್ಥ ತೋರುವಾಗ ನೃತ್ ಧಾತುವಿಗೆ ಯಙ್. ಇಲ್ಲಿಯೂ ಋದುಪಧವಾದುದರಿಂದ ಅಭ್ಯಾಸಕ್ಕೆ ರೀಗಾಗಮ. ನರೀನೃತ್ಯ ಎಂದಾಗುತ್ತದೆ. ಲಡಾದಿ. ನರೀನೃತ್ಯತೇ । 'ಅಟ್ ಕುಪ್ವಾಙ್ ನುಮ್ ವ್ಯವಾಯೇಽಪಿ' ಸೂತ್ರದಿಂದ ಧಾತುನಕಾರಕ್ಕೆ ಣತ್ವ ಪ್ರಾಪ್ತವಾದರೆ ನಿಷೇಧ ಹೇಳುತ್ತಾನೆ.

ಣತ್ವನಿಷೇಧ ಹೇಳುವ ಸೂತ್ರ.

**೭೧೯. ಕ್ಷುಭ್ನಾದಿಷು ಚ ॥ ೮.೪-೩೯ ॥**

**ಣತ್ವಂ ನ । ನರೀನೃತ್ಯತೇ । ಜರೀಗೃಹ್ಯತೇ ॥**

ಇತಿ ಯಙನ್ತಪ್ರಕ್ರಿಯಾ

ದ್ವಿಪದ ಸೂತ್ರ. 'ರಷಾಭ್ಯಾಂ—' ಸೂತ್ರದಿಂದ 'ಣಃ', 'ನಭಾಭೂ—' ಸೂತ್ರದಿಂದ 'ನ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಕ್ಷುಭ್ನಾ ಗಣಪಠಿತವಾದ ಶಬ್ದಗಳಲ್ಲಿ ಣತ್ವ ಬರುವುದಿಲ್ಲ. ಪ್ರಕೃತ ನರೀನೃತ್ಯತೇ । ಎಂಬುದು ಆ ಗಣದಲ್ಲಿ ಸೇರಿರುವುದರಿಂದ ಣತ್ವ ಬರುವುದಿಲ್ಲ. ನರೀನೃತ್ಯತೇ । ನರೀನೃತಾಞ್ಚಕಾರ । ನರೀನೃತಿತಾ । ನರೀನೃತಿಷ್ಯತಿ । ನರೀನೃತ್ಯತಾಮ್ । ಅನರೀನೃತ್ಯತ ನರೀನೃತ್ಯೇತ । ನರೀನೃತಿಷೀಷ್ಟ । ಅನರೀನೃತಿಷ್ಟ । ಅನರೀನೃತಿಷ್ಯತ ॥ ಗ್ರಹ ಉಪಾದಾನೇ ॥ ಪುನಃ ಪುನಃ ಗೃಹ್ಣಾತಿ, ಅತಿಶಯೇನ ವಾ ಗೃಹ್ಣಾತಿ ಎಂಬರ್ಥ ತೋರುವಾಗ ಗ್ರಹ ಧಾತುವಿನ ಮೇಲೆ ಯಙ್. ಇದು ಙಿತ್ತಾದುದರಿಂದ 'ಗ್ರಹಿಜ್ಯಾ ವಯಿ—' ಸೂತ್ರದಿಂದ ಸಂಪ್ರಸಾರಣ. ಗೃಹ್ + ಯ. ದ್ವಿತ್ವಾದಿ. ಸಂಪ್ರಸಾರಣ ಬಂದಮೇಲೆ ಋದುಪಧವಾದುದರಿಂದ ಅಭ್ಯಾಸಕ್ಕೆ ರೀಗಾಗಮ. ಜರೀಗೃಹ್ಯತೇ 'ಕುಹೋಶ್ಚುಃ' ಅಭ್ಯಾಸಗಕಾರಕ್ಕೆ ಜಕಾರ ಬಂದಿದೆ. ನೃತಿನಂತೇ ರೂಪವಾಗುತ್ತದೆ.

## ೪. ಅಥ ಯಙ್ ಲುಕ್ ಪ್ರಕ್ರಿಯಾ

ಯಙಿಗೆ ಲುಕ್ ಹೇಳುವ ಸೂತ್ರ.

**೭೨೦. ಯಙೋಽಚಿ ಚ ॥ ೨.೪-೭೪ ॥**

**ಯಙೋಽಚಿ ಪ್ರತ್ಯಯೇ ಲುಕ್ ಸ್ಯಾತ್, ಚಕಾರಾತ್ತಂ ವಿನಾಪಿ ಕ್ವಚಿತ್ । ಅನೈಮಿತ್ತಿಕೋಽಯಮಂತರಂಗತ್ವಾದಾದೌ ಭವತಿ । ತತಃ ಪ್ರತ್ಯಯಲಕ್ಷಣೇನ ಯಙನ್ತತ್ವಾತ್ ದ್ವಿತ್ವಮ್ । ಅಭ್ಯಾಸಕಾರ್ಯಮ್ ಧಾತುತ್ವಾಲ್ಲಡಾದಯಃ । ಶೇಷಾತ್ಕರ್ತರೀತಿ ಪರಸ್ಮೈಪದಮ್ । ಚರ್ಕರೀತಂ ಚೇತ್ಯದಾದೌ ಪಾಠಾಚ್ಛಪೋ ಲುಕ್ ॥**

ಹಿಂದೆ ಹೇಳಿದ ಯಙ್ ಪ್ರತ್ಯಯಕ್ಕೆ ಲುಕ್ ಹೇಳುತ್ತಾನೆ. ಯಙಃ, ಅಚಿ, ಚ ॥ ತ್ರಿಪದ ಸೂತ್ರ. 'ಣ್ಯಕ್ಷತ್ರಿಯಾರ್ಷ—' ಸೂತ್ರದಿಂದ 'ಲುಕ್' ಅನುವೃತ್ತಿ. **ಸೂತ್ರಾರ್ಥ**—ಯಙ್ ಪ್ರತ್ಯಯಕ್ಕೆ ಅಚ್ ಪ್ರತ್ಯಯ ಪರದಲ್ಲಿರುವಾಗ ಲುಕ್ ಬರು ಬರುತ್ತದೆ. (ಯಙ್ ಪ್ರತ್ಯಯಸಾಹಚರ್ಯದಿಂದ ಇಲ್ಲಿ ಅಚ್ ಎಂದರೆ ಪ್ರತ್ಯಾಹಾರವಲ್ಲ, ಪ್ರತ್ಯಯ.) ಚಕಾರದಿಂದ ಹಿಂದಿನ 'ಬಹುಲಂ ಛಂದಸಿ' ಸೂತ್ರದಿಂದ 'ಬಹುಲಂ' ಪದವು ಅನುವೃತ್ತವಾಗುವುದರಿಂದ ಕೆಲವು ಕಡೆ ಅಚ್ ಪ್ರತ್ಯಯ ಇಲ್ಲದಿರುವಾಗಲೂ ಲೋಪಬರುತ್ತದೆ. ಆಗ ಅಚ್ ಪ್ರತ್ಯಯ ಇದ್ದರೂ ಇಲ್ಲವಾದರೂ ವಿಕಲ್ಪವಾಗಿ ಯಙಿಗೆ ಲುಕ್ ಎಂದು ಸಿದ್ಧವಾಗುತ್ತದೆ. ಯಙ್ ಬಂದಾಗ ಅದನ್ನು ನಿಮಿತ್ತೀಕರಿಸಿ ದ್ವಿತ್ವಾದಿಗಳು ಬರುತ್ತವೆಯೋ ಅಥವಾ ಯಙಿಗೆ ಲುಕೇ ಮೊದಲು ಬರುತ್ತದೆಯೋ

ಎಂದು ಆಶಂಕೆಯುಂಟಾದರೆ ಅದಕ್ಕೆ 'ಅನ್ಯನಿಮಿತ್ತಕೋ ಯಙ್ಲುಕ್' ಎಂಬ ವಾಕ್ಯದಿಂದ ಸಮಾಧಾನ ಹೇಳುತ್ತಾನೆ. ಯಙ್ ಲುಕ್ ಎರಡು ವಿಧವಾಗಿದೆ. 'ಪಾಪಚಃ' ಇತ್ಯಾದಿ ಸ್ಥಳದಲ್ಲಿ ಬಂದ ಅಚ್ ಪ್ರತ್ಯಯನಿಮಿತ್ತಕವಾದುದು ಒಂದು; ಯಾವ ನಿಮಿತ್ತವೂ ಇಲ್ಲದೆ ಬರುವುದು ಇನ್ನೊಂದು. ಇದು ಅನ್ಯನಿಮಿತ್ತಕವಾದುದರಿಂದ ಅಂತರಂಗ. ಅಂದರೆ ಅಲ್ಪಾಪೇಕ್ಷಿ. ದ್ವಿತ್ವಾದಿಕಾರ್ಯಗಳು ಪರನಿಮಿತ್ತಗಳನ್ನು ಬಯಸುತ್ತವೆ. ಬಹ್ವಪೇಕ್ಷಿತವಾದುದರಿಂದ ಅವು ಬಹಿರಂಗಗಳಾಗುತ್ತವೆ. 'ಅಸಿದ್ಧಂ ಬಹಿರಂಗಮಂತರಂಗೇ' ಅಂತರಂಗಕಾರ್ಯ ಮಾಡುವಾಗ ಬಹಿರಂಗವು ಅಸಿದ್ಧವಾಗುತ್ತದೆ ಎಂಬ ಪರಿಭಾಷೆಯಿಂದ ಇಲ್ಲಿ ಲುಕ್ ರೂಪ ಅಂತರಂಗಕಾರ್ಯ ಮಾಡುವಾಗ ಬಹಿರಂಗವಾದ ದ್ವಿತ್ವಾದಿಗಳು ಅಸಿದ್ಧವಾಗುವುದರಿಂದ ಮೊದಲೇ ಲುಕ್ ಬರುತ್ತದೆ. ಆಮೇಲೆ 'ಪ್ರತ್ಯಯಲೋಪೇ ಪ್ರತ್ಯಯಲಕ್ಷಣಮ್' ಎಂಬ ಸೂತ್ರದಿಂದ ಯಙ್ ಲುಕ್ಕಾದರೂ ಆ ಪ್ರತ್ಯಯ ಇದೆಯೆಂದು 'ಸನ್ಯಙೋಃ' ಸೂತ್ರದಿಂದ ದ್ವಿತ್ವ. ಭೂಭೂ. 'ಹ್ರಸ್ವಃ,' 'ಅಭ್ಯಾಸೇ ಚರ್ಚ' ಸೂತ್ರಗಳಿಂದ ಅಭ್ಯಾಸಕ್ಕೆ ಹ್ರಸ್ವಾದಿ ಕಾರ್ಯ. ಬುಭೂ. 'ಗುಣೋ ಯಙ್ಲುಕೋಃ' ಅಭ್ಯಾಸಕ್ಕೆ ಗುಣ. ಬೋಭೂ. ಯಙಂತವಾದುದರಿಂದ ಹಿಂದಿನಂತೆ 'ಸನಾದ್ಯಂತಾ ಧಾತವಃ' ಸೂತ್ರದಿಂದ ಧಾತು ಸಂಜ್ಞಾ. ಅದರಮೇಲೆ ಲಡಾದಿ. ಇಲ್ಲಿ ಆತ್ಮನೇಪದಕ್ಕೆ ನಿಮಿತ್ತವಿಲ್ಲದಿರುವುದರಿಂದ 'ಶೇಷಾತ್ಕರ್ತರಿ ಪರಸ್ಮೈಪದಮ್' ಸೂತ್ರದಿಂದ ಪರಸ್ಮೈಪದಪ್ರತ್ಯಯ ಬರುತ್ತದೆ. ಬೋಭೂ + ತಿ. 'ಕರ್ತರಿ ಶಪ್' ಸೂತ್ರದಿಂದ 'ಶಪ್' ವಿಕರಣ ಪ್ರಾಪ್ತವಾದರೆ 'ಚರ್ಕರೀತಂ ಚ' ಎಂಬುದರಿಂದ ಯಙ್ಲುಗಂತವನ್ನು ಅದಾದಿಗಣದಲ್ಲಿ ಪಾಠಮಾಡಿರುವುದರಿಂದ 'ಅದಿಪ್ರಭೃತಿಭ್ಯಃ ಶಪಃ' ಸೂತ್ರದಿಂದ ಆ ಶಪಿಗೆ ಲುಕ್ (ಲೋಪ), 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ತಿಪ್ ನಿಮಿತ್ತವಾಗಿ ಗುಣ. ಬೋಭೋತಿ ಎಂದಾಗುತ್ತದೆ. ಇಲ್ಲಿ ಪಿತ್ತಾದ ಸಾರ್ವಧಾತುಕಕ್ಕೆ ಇಡಾಗಮವು ವಿಕಲ್ಪವಾಗಿ ಹೇಳುತ್ತಾನೆ.

ಪಿತ್ ಸಾರ್ವಧಾತುಕಕ್ಕೆ ಇಡಾಗಮವು ಹೇಳುವ ಸೂತ್ರ.

### ೭೨೧. ಯಙೋ ವಾ ||೭-೩-೯೪

**ಯಙ್ಲುಗನ್ತಾತ್ಪರಸ್ಯ ಹಲಾದೇಃ ಪಿತಃ ಸಾರ್ವಧಾತುಕಸ್ಯೇಡ್ವಾ ಸ್ಯಾತ್ । ಭೂಸುವೋರಿತಿ ಗುಣನಿಷೇಧೋ ಯಙ್ಲುಕಿ ಭಾಷಾಯಾಂ ನ, ಬೋಭೋತು (ಬೋಭೂತು), ತೇತಿಕ್ತೇ ಇತಿ ಛಂದಸಿ ನಿಪಾತನಾತ್ । ಬೋಭವೀತಿ, ಬೋಭೋತಿ । ಬೋಭೂತಃ । ಅದಭ್ಯಸ್ತಾತ್ । ಬೋಭುವತಿ । ಬೋಭವಾಞ್ಚಕಾರ, ಬೋಭವಾಮಾಸ । ಬೋಭವಿತಾ । ಬೋಭವಿಷ್ಯತಿ । ಬೋಭವೀತು, ಬೋಭೋತು, ಬೋಭೂತಾತ್ । ಬೋಭೂತಾಮ್ । ಬೋಭುವತು । ಬೋಭೂಹಿ । ಬೋಭವಾನಿ । ಅಬೋಭವೀತ್,**

ಅಬೋಭೋತ್ । ಅಬೋಭೂತಾಮ್। ಅಬೋಭವುಃ । ಬೋಭೂಯಾತ್ । ಬೋಭೂಯಾತಾಮ್ । ಬೋಭೂಯಾಸುಃ । ಬೋಭೂಯಾತ್ । ಬೋಭೂಯಾಸ್ತಾಮ್ । ಬೋಭೂಯಾಸುಃ । ಗಾತಿಸ್ಥೇತಿ ಸಿಚೋಲುಕ್ ಯಙೋ ವೇತೀಟ್‌ಪಕ್ಷೇ ಗುಣಂ ಬಾಧಿತ್ವಾ ನಿತ್ಯತ್ವಾದ್‌ವುಕ್ । ಅಬೋಭೂವೀತ್, ಅಬೋಭೋತ್ । ಅಬೋಭೂತಾಮ್ । ಅಬೋಭೂವುಃ । ಅಬೋಭವಿಷ್ಯತ್॥

ಇತಿ ಯಙ್‌ಲುಕ್ ಪ್ರಕ್ರಿಯಾ

ಯಙಃ, ವಾ ॥ ದ್ವಿಪದ ಸೂತ್ರ. 'ಉತೋವೃದ್ಧಿಃ—' ಸೂತ್ರದಿಂದ 'ಹಲಿ', 'ನಾಭ್ಯಸ್ತಸ್ಯಾಚಿ—' ಸೂತ್ರದಿಂದ, 'ಪಿತಿ' 'ಸಾರ್ವಧಾತುಕೇ', 'ಬ್ರುವ ಈಟ್' ಸೂತ್ರದಿಂದ 'ಈಟ್' ಪದಗಳು ಅನುವೃತ್ತವಾಗುತ್ತವೆ. ಯಙಃ ಪಂಚಮಿಯಾದುದರಿಂದ ಸಪ್ತಮ್ಯಂತಗಳು ಷಷ್ಠ್ಯಂತ್ಯವಾಗಿ ವಿಪರಿಣತಗಳಾಗುತ್ತವೆ. **ಸೂತ್ರಾರ್ಥ**—ಯಙನ್ತದ ಪರದಲ್ಲಿರುವ ಹಲಾದಿಯಾದ ಪಿತ್ತಾದ ಸಾರ್ವಧಾತುಕಕ್ಕೆ ಈಡಾಗಮ ವಿಕಲ್ಪವಾಗಿ ಬರುತ್ತದೆ. ಬೋಭೋ+ತಿ ಎಂದಿರುವಾಗ ಪ್ರತ್ಯಯ ಲಕ್ಷಣದಿಂದ ಅದು ಯಙನ್ತವಾದುದರಿಂದ ಅದರ ಪರದಲ್ಲಿರುವ ಹಲಾದಿಯಾದ ಪಿತ್ತಾದ ಸಾರ್ವಧಾತುಕವಾದ ತಿಪಿಗೆ ಈಡಾಗಮ ಬಂದರೆ ಬೋಭೋ+ಈತಿ ಎಂದಾಗುತ್ತದೆ. 'ಏಚೋಽಯವಾಯಾವಃ' ಅವಾದೇಶ. ಬೋಭವ್+ಈತಿ= ಬೋಭವೀತಿ । ಈಡಾಗಮ ಬಾರದೆ ಇದ್ದರೆ ಬೋಭೋತಿ ಎಂದಾಗುತ್ತದೆ. ಬೋಭೂ+ತಿ ಎಂದಿರುವಾಗ ಸಾರ್ವಧಾತುಕನಿಮಿತ್ತವಾಗಿ ಗುಣಮಾಡಿದೆ. ಇಲ್ಲಿ 'ಭೂಸುವೋಸ್ತಿಙಿ' (ಸೂ. ೪೪೪೧) ಸೂತ್ರದಿಂದ ಗುಣನಿಷೇಧ ಏಕೆ ಬರಲಿಲ್ಲ ? ಅದಕ್ಕೆ 'ಭೂಸುವೋರಿ—' ಎಂಬ ವಾಕ್ಯದಿಂದ ಸಮಾಧಾನ ಹೇಳುತ್ತಾನೆ. 'ದಾಧರ್ತಿ ದರ್ಧತಿ—' ಎಂಬ ಸೂತ್ರದಲ್ಲಿ ಬೋಭೂತು, ತೇತಿಕ್ತೇ ಇತ್ಯಾದಿ ಕೆಲವು ಶಬ್ದಗಳಲ್ಲಿ ಗುಣಬರುವುದಿಲ್ಲವೆಂದು ನಿಪಾತಮಾಡಿರುತ್ತಾನೆ. ಇದು ಛಂದಸ್ಸಿನಲ್ಲಿ ಮಾತ್ರ. 'ಭೂಸುವೋಸ್ತಿಙಿ' ಸಾಮಾನ್ಯ ಸೂತ್ರದಿಂದ ನಿಷೇಧ ಬರುತ್ತಿರುವಾಗ ಛಂದಸ್ಸಿನಲ್ಲಿ ಪುನಃ ನಿಪಾತಮಾಡಿದುದು ವ್ಯರ್ಥವಾಗುತ್ತದೆ. ಇದರಿಂದ ಲೋಕದಲ್ಲಿ ಯಙಲುಕಿನಲ್ಲಿ ಗುಣನಿಷೇಧ ಬರುವುದಿಲ್ಲವೆಂದು ಜ್ಞಾಪಿತವಾಗುತ್ತದೆ. ಆದುದರಿಂದ ಇಲ್ಲಿ ಗುಣ ಬಂದಿದೆ. ತಸಾದಿಗಳಲ್ಲಿ ಅವು ಸ್ವಾಭಾವಿಕವಾಗಿ ಅಪಿತ್ತಾದುದರಿಂದ ಙಿತ್ತಾದುದರಿಂದ ಗುಣಕ್ಕೆ ಅವಕಾಶವಿಲ್ಲ. ಬೋಭೂತಃ । ಬೋಭೂ+ಝಿ. ಅಭ್ಯಸ್ತದ ಪರದಲ್ಲಿ ಝಿ ಇರುವುದರಿಂದ 'ಅದಭ್ಯಸ್ತಾತ್' ಸೂತ್ರದಿಂದ ಝಿಗೆ ಅತಾದೇಶ. ಬೋಭೂ+ಅತಿ. 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಉವಙಾದೇಶ. ಬೋಭುವತಿ ॥ ಬೋಭವೀಷಿ, ಬೋಭೋಷಿ । ಬೋಭೂಥಃ । ಬೋಭೂಥ ॥ ಬೋಭವೀಮಿ, ಬೋಭೋಮಿ । ಬೋಭೂವಃ । ಬೋಭೂಮಃ ॥

ಲಿಟ್ || ಪ್ರತ್ಯಯಾನ್ತವಾಗಿ ಅನೇಕಾಚಾದುದರಿಂದ ಆಮ್. ಅದರ ಮೇಲೆ ಲಿಟ್ ಪರವಾದ ಕೃ, ಭೂ, ಅಸ್ ಅನುಪ್ರಯೋಗ. ಬೋಭವಾಞ್ಚಕಾರ, ಬೋಭವಾಮ್ಬಭೂವ, ಬೋಭವಾಮಾಸ | ಇತ್ಯಾದಿ. ಲುಟ್ || ಬೋಭೂ+ಇತಾ, ಗುಣ, ಅವಾದೇಶ. ಬೋಭವಿತಾ | ಬೋಭವಿತಾರೌ | ಬೋಭವಿತಾರಃ || ಬೋಭವಿತಾಸಿ | ಬೋಭವಿತಾಸ್ಥಃ | ಬೋಭವಿತಾಸ್ಥ || ಬೋಭವಿತಾಸ್ಮಿ || ಬೋಭವಿತಾಸ್ವಃ || ಬೋಭವಿತಾಸ್ಮಃ || ಲೃಟ್ || ಸ್ಯಕ್ಕೆ ಇಡಾಗಮ. ಗುಣ, ಅವಾದೇಶ. ಬೋಭವಿಷ್ಯತಿ | ಇತ್ಯಾದಿ. ಬೋಭವಿಷ್ಯ ಅಂಗ. ಲೋಟ್ || ಪಿತ್ತಿನಲ್ಲಿ ಈಡಾಗಮವಿಕಲ್ಪ. ಲೋಟ್ ಕಾರ್ಯ. ಬೋಭವೀತು, ಬೋಭೋತು, ಬೋಭೂತಾತ್ | ಬೋಭೂತಾಮ್ | ಬೋಭುವತು || ಬೋಭೂಹಿ, ಬೋಭೂತಾತ್ | ಬೋಭೂತಮ್ | ಬೋಭೂತ || ಬೋಭವಾನಿ | ಬೋಭವಾವ | ಬೋಭವಾಮ || ಲಙ್ || ಅಬೋಭವೀತ್, ಅಬೋಭೋತ್ | ಅಬೋಭೂತಾಮ್ | ಅಬೋಭವುಃ || ಝಿಗೆ ಜುಸ್ ಆದೇಶ ಬಂದು 'ಜುಸಿ ಚ' ಸೂತ್ರದಿಂದ ಗುಣ ಬಂದು ಅವಾದೇಶ ಬಂದಿದೆ. ಅಬೋಭವೀಃ, ಅಬೋಭೋಃ | ಅಬೋಭೂತಮ್ | ಅಬೋಭೂತ || ಅಬೋಭವಮ್ | ಅಬೋಭೂವ | ಅಬೋಭೂಮ || ವಿಧಿಲಿಙ್ || ಬೋಭೂಯಾತ್ | ಬೋಭೂಯಾತಾಮ್ | ಬೋಭೂಯುಃ || ಬೋಭೂಯಾಃ | ಬೋಭೂಯಾತಮ್ | ಬೋಭೂಯಾತ || ಬೋಭೂಯಾಂ | ಬೋಭೂಯಾವ | ಬೋಭೂಯಾಮ || ಆಶೀರ್ಲಿಙ್ || ಬೋಭೂಯಾತ್ | ಬೋಭೂಯಾಸ್ತಾಮ್ | ಬೋಭೂಯಾಸುಃ || ಇತ್ಯಾದಿ. ಲುಙ್ || ಅಬೋಭೂ+ಸ್+ತ್. 'ಗಾತಿಸ್ಥಾಘುಪಾಭೂಭ್ಯಃ—' ಸೂತ್ರದಿಂದ ಸಿಚಿಗೆ ಲುಕ್. ಅಲ್ಲಿ ಕೇವಲ ಭೂವಿನ ಪರದ ಸಿಚಿಗೆ ಲುಕ್ ಹೇಳಿದ್ದರೂ 'ಪ್ರಕೃತಿಗ್ರಹಣೇ ಯಙ್ಲುಗನ್ತಸ್ಯಾಪಿ ಗ್ರಹಣಮ್' ಎಂಬ ಪರಿಭಾಷೆಯಿಂದ ಯಙ್ಲುಗನ್ತಭೂವಿಗೂ ಗ್ರಹಣವಿರುವುದರಿಂದ ಸಿಚಿಗೆ ಲುಕ್ ಬರುತ್ತದೆ. ಅಬೋಭೂ+ತ್ ಎಂದಿರುವಾಗ 'ಯಙೋ ವಾ' ಸೂತ್ರದಿಂದ ವಿಕಲ್ಪವಾಗಿ ಈಡಾಗಮ. ಬಂದರೆ ಅಬೋಭೂ+ಈತ್ ಎಂದಿರುವಾಗ ಗುಣಪ್ರಾಪ್ತವಾದರೆ ಅದನ್ನು ಬಾಧಿಸಿ ನಿತ್ಯಸೂತ್ರವಾದುದರಿಂದ 'ಭುವೋವುಗ್ಲುಙ್ಲಿಟೋಃ' ಸೂತ್ರದಿಂದ ವುಕಾಗಮ. ಅಬೋಭೂವ್+ಈತ್=ಅಬೋಭೂವೀತ್ | ಈಡಾಗಮ ಬಾರದಿದ್ದರೆ ಅಜಾದಿ ಲುಙ್ ಇಲ್ಲದಿರುವುದರಿಂದ ವುಗಾಗಮವಿಲ್ಲ. ಗುಣ. ಅಬೋಭೋತ್ | ಅಬೋಭೂತಾಮ್ | ಅಬೋಭೂವುಃ || ಝಿಗೆ ಜುಸ್. ವುಗಾಗಮ. ಅಬೋಭೂವೀಃ, ಅಬೋಭೋಃ | ಅಬೋಭೂತಮ್ | ಅಬೋಭೂತ || ಅಬೋಭೂವಮ್ | ಅಬೋಭೂವ | ಅಬೋಭೂಮ || ಲೃಟ್ || ಅಬೋಭವಿಷ್ಯತ್ || ಅಬೋಭವಿಷ್ಯತಾಮ್ | ಅಬೋಭವಿಷ್ಯನ್ || ಇತ್ಯಾದಿ.

# ೫೬. ಅಥ ನಾಮಧಾತವಃ

ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ ಹೇಳುವ ಸೂತ್ರ.

**೭೨೨. ಸುಪ ಆತ್ಮನಃ ಕ್ಯಚ್ || ೩-೧-೮ ||**

**ಇಷಿಕರ್ಮಣಃ ಏಷಿತುಃ ಸಂಬಂಧಿನಃ ಸುಬನ್ತಾದಿಚ್ಛಾಯಾಮರ್ಥೇ ಕ್ಯಚ್ ಪ್ರತ್ಯಯೋ ವಾ ಸ್ಯಾತ್ ||**

ತ್ರಿಪದ ಸೂತ್ರ. 'ಧಾತೋಃ ಕರ್ಮಣಃ—' ಸೂತ್ರದಿಂದ 'ಕರ್ಮಣಃ'' 'ಇಚ್ಛಾಯಾಮ್', 'ವಾ' ಪದಗಳು ಅನುವೃತ್ತವಾಗುತ್ತವೆ. 'ಕರ್ಮಣಃ' ಪಂಚಮೀ. ಕರ್ಮಕಾರಕದ ಮೇಲೆ ಎಂದರ್ಥ. ಸಾಮೀಪ್ಯದಿಂದ ಇಚ್ಛಾಕ್ರಿಯೆಯಲ್ಲಿ ಕರ್ಮೀಭೂತವಾದುದರ ಮೇಲೆ ಎಂದರ್ಥ. ಸುಪಃ ಪ್ರತ್ಯಯವಾದುದರಿಂದ 'ಪ್ರತ್ಯಯ ಗ್ರಹಣೇ ತದಂತಸ್ಯಾಪಿ ಗ್ರಹಣಮ್' ಪರಿಭಾಷೆಯಿಂದ ತದನ್ತಲಾಭ. ಆತ್ಮನಃ ಎಂಬಲ್ಲಿಯೂ ಸಾಮೀಪ್ಯದಿಂದ ಇಚ್ಛಾಕ್ರಿಯಾ ಕರ್ತೃಸಂಬಂಧಿಯ ಎಂದರ್ಥವಾಗುತ್ತದೆ. **ಸೂತ್ರಾರ್ಥ**—ಇಚ್ಛಾಕ್ರಿಯಾ ಕರ್ತೃಸಂಬಂಧಿಯಾದ, ಇಚ್ಛಾಕ್ರಿಯೆಯಲ್ಲಿ ಕರ್ಮವಾದ ಸುಬನ್ತದ ಮೇಲೆ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ ವಿಕಲ್ಪವಾಗಿ ಬರುತ್ತದೆ. ಪುತ್ರಂ ಆತ್ಮನಃ ಇಚ್ಛತಿ || ಮಗನನ್ನು ತನಗೆ ಬಯಸುತ್ತಾನೆ. ಇದು ವಿಗ್ರಹವಾಕ್ಯ. ಇಲ್ಲಿ ಪುತ್ರಂ ಎಂಬುದು ಸುಬನ್ತ. ಇದು ಇಚ್ಛಾಕರ್ತೃಸಂಬಂಧಿಯಾಗಿಯೂ, ಇಚ್ಛಾಕ್ರಿಯೆಯಲ್ಲಿ ಕರ್ಮವಾಗಿಯೂ ಇದೆ. ಆದುದರಿಂದ ಪುತ್ರಂ ಎಂಬ ಕರ್ಮಕಾರಕವಾದ ದ್ವಿತೀಯಾನ್ತದ ಮೇಲೆ ಕ್ಯಚ್ ಪ್ರತ್ಯಯ ಬಂದರೆ ಪುತ್ರಂ + ಕ್ಯ ಎಂದಾಗುತ್ತದೆ. ಕ್ಯಚಿನಲ್ಲಿ ಚಕಾರ 'ಹಲನ್ತ್ಯಮ್' ಸೂತ್ರದಿಂದಲೂ, ಕಕಾರ 'ಲಶಕ್ವತದ್ಧಿತೇ' ಸೂತ್ರದಿಂದಲೂ ಇತ್ ಸಂಜ್ಞೆಹೊಂದಿ ಲೋಪವಾಗುತ್ತದೆ. ಯ ಉಳಿಯುತ್ತದೆ. ಇಲ್ಲಿ ಪ್ರಕೃತಿಪ್ರತ್ಯಯಗಳನ್ನು ಬೇರ್ಪಡಿಸಿ ಹೇಳಿದರೆ ಅದಕ್ಕೆ ಅಲೌಕಿಕವಿಗ್ರಹವಾಕ್ಯವೆನ್ನುತ್ತಾರೆ. ಪುತ್ರ + ಅಮ್ + ಯ. ಇದು ಅಲೌಕಿಕ ವಿಗ್ರಹವಾಕ್ಯ. ಈಗ ಇಲ್ಲಿರುವ ಅಮಿಗೆ ಲೋಪ ಹೇಳುತ್ತಾನೆ.

ಸುಪಿಗೆ ಲೋಪ ಹೇಳುವ ಸೂತ್ರ.

**೭೨೩. ಸುಪೋ ಧಾತುಪ್ರಾತಿಪದಿಕಯೋಃ || ೨-೪-೭೧ ||**

**ಏತಯೋರವಯವಸ್ಯ ಸುಪೋ ಲುಕ್ ||**

ಸುಪಃ, ಧಾತುಪ್ರಾತಿಪದಿಕಯೋಃ || ದ್ವಿಪದ ಸೂತ್ರ. 'ಣ್ಯಕ್ಷತ್ರಿಯಾರ್ಷಞಿತಃ—' ಸೂತ್ರದಿಂದ 'ಲುಕ್' ಅನುವೃತ್ತಿ. 'ಧಾತುಪ್ರಾತಿಪದಿಕಯೋಃ' ಎಂಬಲ್ಲಿ ಅವಯವಾರ್ಥದಲ್ಲಿ ಷಷ್ಠೀ ಬಂದಿದೆ. **ಸೂತ್ರಾರ್ಥ**—ಧಾತು ಮತ್ತು ಪ್ರಾತಿಪದಿಕಗಳ ಅವಯುವವಾದ ಸುಪಿಗೆ ( ೨೧ ವಿಭಕ್ತಿ ) ಲುಕ್ ಬರುತ್ತದೆ. ಪ್ರಾತಿಪದಿಕಗಳ ಅವಯುವವಾದ ಸುಪಿಗೆ ಲೋಪ ಸಮಾಸಪ್ರಕರಣದಲ್ಲಿ ಬರುತ್ತದೆ. ಪ್ರಕೃತ

ಪುತ್ರ+ಅಮ್+ಯ ಎಂಬುದು ಕ್ಯಜಂತವಾದುದರಿಂದ 'ಸನಾದ್ಯನ್ತಾ ಧಾತವಃ' ಸೂತ್ರದಿಂದ ಧಾತುಸಂಜ್ಞೆಯನ್ನು ಹೊಂದಿದೆ. ಧಾತ್ವವಯವವಾದ ಸುಪ್ ಇಲ್ಲಿ ಅಮ್. ಅದಕ್ಕೆ ಲುಕ್ ಬಂದರೆ ಪುತ್ರ+ಯ ಎಂದಾಗುತ್ತದೆ. ಈಗ ಕ್ಯಚ್ ಪರವಾದಾಗ ಪೂರ್ವಕ್ಕೆ ಈತ್ವ ಹೇಳುತ್ತಾನೆ.

ಕ್ಯಚ್ ಪರವಾದಾಗ ಈತ್ವ ಹೇಳುವ ಸೂತ್ರ.

**೭೨೪. ಕ್ಯಚಿ ಚ ||೭-೪-೩೩ ||**

ಅವರ್ಣಸ್ಯ ಈಃ । ಆತ್ಮನಃ ಪುತ್ರಮಿಚ್ಛತಿ ಪುತ್ರೀಯತಿ ||

ದ್ವಿಪದ ಸೂತ್ರ. 'ಅಸ್ಯ ಚ್ವೌ' ಸೂತ್ರದಿಂದ 'ಅಸ್ಯ', 'ಈಘ್ರಾಧ್ಮೋಃ' ಸೂತ್ರದಿಂದ 'ಈ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಕ್ಯಚ್ ಪ್ರತ್ಯಯ ಪರದಲ್ಲಿರುವಾಗ ಪೂರ್ವದಲ್ಲಿರುವ ಅಕಾರಕ್ಕೆ ಈಕಾರದೇಶ ಬರುತ್ತದೆ. ಪುತ್ರ+ಯ ಎಂದಿರುವಾಗ ಪುತ್ರ ಶಬ್ದದ ಅಕಾರಕ್ಕೆ ಕ್ಯಚ್ ಪರವಾದುದರಿಂದ ಈತ್ವ ಬಂದರೆ ಪುತ್ರೀಯ ಎಂದಾಗುತ್ತದೆ. ಕ್ಯಜನ್ತವಾದುದರಿಂದ ಇದು ಧಾತು. ಇದರ ಮೇಲೆ ಲಡಾದಿ. ಲಟಿಗೆ ತಿಬಾದಿ. ಶಪ್. ಪೂರ್ವರೂಪ. ಪುತ್ರೀಯತಿ=ಮಗನನ್ನು ತನಗೆ ಬಯಸುತ್ತಾನೆ ಎಂದರ್ಥ. ಇನ್ನೊಬ್ಬನಿಗೆ ಮಗನನ್ನು ಬಯಸುವುದಾದರೆ ಆಗ ಪುತ್ರನು ಪರಸಂಬಂಧಿಯಾಗುವುದರಿಂದ ಕ್ಯಚ್ ಬರುವುದಿಲ್ಲ. ಹಾಗೇ, ಪುತ್ರೇಣ ಇಚ್ಛತಿ || ಮಗನಿಂದ ಯಾವುದನ್ನಾದರೂ ಬಯಸುತ್ತಾನೆ ಎಂದಿದ್ದರೆ ಆಗಲೂ ಕ್ಯಚ್ ಬರುವುದಿಲ್ಲ. ಪುತ್ರನು ಇಚ್ಛೆಯಲ್ಲಿ ಕರ್ಮವಾಗುವುದಿಲ್ಲ; ಕರಣನಾಗುತ್ತಾನೆ. ಹೀಗೆ ಎಲ್ಲಾ ಸುಬನ್ತಗಳ ಮೇಲೆ ಆಯಾಯ ಕ್ರಿಯಾರ್ಥವನ್ನು ಬಯಸಿದಾಗ ಆಯಾಯ ಪ್ರತ್ಯಯಗಳು ಬಂದು ಅವು ಧಾತುಗಳಾಗುತ್ತವೆ. ಇವುಗಳಿಗೆ ನಾಮಧಾತುಗಳೆಂದು ಹೆಸರು. ಸಂಸ್ಕೃತದಲ್ಲಿ ಮೂಲಧಾತುಗಳೇ ಅಪಾರವಾಗಿದ್ದರೂ ಹೀಗೆ ನಾಮಧಾತುಗಳಿಂದ ಅವು ಅಸಂಖ್ಯಾತಗಳಾಗುತ್ತವೆ. ಕನ್ನಡ ಅಥವಾ ಇತರ ಭಾಷೆಗಳಲ್ಲಿ ನಾವು ಎರಡು ಪದಗಳನ್ನು ಈ ನಾಮಧಾತ್ವರ್ಥದಲ್ಲಿ ಪ್ರಯೋಗಿಸಬೇಕು. ಪುತ್ರನನ್ನು (ತನಗೆ) ಬಯಸುತ್ತಾನೆ. ಸಂಸ್ಕೃತದಲ್ಲಿ ಪುತ್ರೀಯತಿ ಎಂಬ ಒಂದು ಪದದಿಂದಲೇ ಈ ಅರ್ಥ ತೋರುತ್ತದೆ. ಆದುದರಿಂದ ಇವುಗಳ ಅರ್ಥವನ್ನು ವಿವರಿಸಲು ವಿಗ್ರಹವಾಕ್ಯವಿರುತ್ತದೆ. ಸನಾದ್ಯಂತಧಾತುಗಳು ವೃತ್ತಿಯೆನಿಸುತ್ತವೆ. ವೃತ್ತಿಯ ಅರ್ಥವನ್ನು ತಿಳಿಸುವ ವಾಕ್ಯಕ್ಕೆ ವಿಗ್ರಹವಾಕ್ಯವೆಂದು ಹೆಸರು. ಪುತ್ರೀಯ ಎಂಬ ನಾಮಧಾತುವಿನ ಮೇಲೆ ಹತ್ತು ಲಕಾರಗಳ ರೂಪಗಳನ್ನೂ ಊಹಿಸಿಕೊಳ್ಳಬೇಕು.

ಲಟ್ || ಪುತ್ರೀಯತಿ । ಲಿಟ್ || ಪುತ್ರೀಯಾಞ್ಚಕಾರ || ಲುಟ್ || ಪುತ್ರೀಯ+ಇತಾ. 'ಅತೋ ಲೋಪಃ' ಪುತ್ರೀಯಿತಾ । ಲೃಟ್ || ಪುತ್ರೀ

ಯಿಷ್ಯತಿ । **ಲೋಟ್** ॥ ಪುತ್ರೀಯತು । **ಲಙ್** ॥ ಅಪುತ್ರೀಯತ್ । **ವಿಧಿಲಿಙ್** ॥ ಪುತ್ರೀಯೇತ್ । **ಆಶೀರ್ಲಿಙ್** ॥ ಪುತ್ರೀಯ್ಯಾತ್ । **ಲುಙ್** ॥ ಅಪುತ್ರೀಯೀತ್ । **ಲೃಙ್** ॥ ಅಪುತ್ರೀಯಿಷ್ಯತ್ ॥

ಹೀಗೆಯೆ, ರಾಜಾನಂ ಆತ್ಮನಃ ಇಚ್ಛತಿ ॥ (ರಾಜನನ್ನು ತನಗೆ ಬಯಸುತ್ತಾನೆ.) ಎಂಬ ಅರ್ಥವಿವಕ್ಷೆಮಾಡಿದಾಗ ಕ್ಯಚ್ ಬಂದರೆ ರಾಜನ್+ಅಮ್+ಯ ಎಂದಾಗುತ್ತದೆ. 'ಸುಪೋ ಧಾತುಪ್ರಾತಿಪದಿಕಯೋಃ' ಸುಪಿಗೆ ಲುಕ್ ಬಂದರೆ ರಾಜನ್+ಯ ಉಳಿಯುತ್ತದೆ. ಇಲ್ಲಿ ನಾಂತವಾದ ಶಬ್ದಕ್ಕೆ ಪದಸಂಜ್ಞೆ ಹೇಳುತ್ತಾನೆ.

ಕ್ಯಚ್ ಪರವಾದಾಗ ಪದಸಂಜ್ಞೆ ಹೇಳುವ ಸೂತ್ರ.

೭೨೫. ನಃ ಕ್ಯೇ ॥ ೧-೪-೧೫ ॥

ಕ್ಯಚಿ ಕ್ಯಙಿ ಚ ನಾಂತಮೇವ ಪದಂ ನಾನ್ಯತ್ । ನಲೋಪಃ । **ರಾಜೀಯತಿ । ನಾಂತಮೇವೇತಿ ಕಿಮ್ ? ವಾಚ್ಯತಿ । ಹಲಿ ಚ । ಗೀರ್ಯತಿ । ಪೂರ್ಯತಿ । ಧಾತೋರಿತ್ಯೇವ । ನೇಹ—ದಿವಮಿಚ್ಛತಿ ದಿವ್ಯತಿ ॥**

ದ್ವಿಪದ ಸೂತ್ರ. 'ಸುಪ್ತಿಙನ್ತಂ ಪದಮ್' ಸೂತ್ರದಿಂದ 'ಸುಬನ್ತಂ', 'ಪದಮ್' ಪದಗಳು ಅನುವೃತ್ತವಾಗುತ್ತವೆ. ನಃ ಎಂಬಲ್ಲಿ ಅಕಾರ ಉಚ್ಚಾರಣಾರ್ಥ. ನಕಾರ ಸುಬನ್ತಕ್ಕೆ ವಿಶೇಷಣ. ತದನ್ತಲಾಭ. ಕ್ಯ ಎಂಬುದರಿಂದ ಕ್ಯಚ್, ಕ್ಯಙ್ ಎರಡೂ ಗೃಹೀತವಾಗುತ್ತವೆ. ಸೂತ್ರಾರ್ಥ—ಕ್ಯಚ್, ಕ್ಯಙ್ ಪರವಾದಾಗ ನಕಾರಾಂತವಾದ ಸುಬನ್ತವೇ ಪದಸಂಜ್ಞೆಯನ್ನು ಹೊಂದುತ್ತದೆ. ರಾಜನ್ ಎಂಬುದು ಕ್ಯಚ್ ಪರವಾದಾಗ ನಾಂತವಾದ ಸುಬನ್ತವಾದುದರಿಂದ ಪದಸಂಜ್ಞೆಯನ್ನು ಹೊಂದುತ್ತದೆ. ಇಲ್ಲಿ ರಾಜನ್ ಸುಬನ್ತವಾದುದರಿಂದ 'ಸುಪ್ತಿಙನ್ತಂ ಪದಮ್' ಸೂತ್ರದಿಂದಲೇ ಪದಸಂಜ್ಞೆಯನ್ನು ಹೊಂದುತ್ತಿರುವಾಗ ಈ ಸೂತ್ರದಿಂದ ಪುನಃ ಪದಸಂಜ್ಞೆ ಹೇಳಿದುದು ವ್ಯರ್ಥವಲ್ಲವೆ ? ಅಂದರೆ ಆಗ ಇದು ನಿಯಮಸೂತ್ರವೆನ್ನಬೇಕು. ಕ್ಯಚ್, ಕ್ಯಙ್ ಪರವಾದಾಗ ನಕಾರಾಂತವಾದ ಸುಬನ್ತ ಮಾತ್ರ ಪದಸಂಜ್ಞೆಯನ್ನು ಹೊಂದುತ್ತದೆ. ಇತರ ಸುಬನ್ತಗಳು ಪದಸಂಜ್ಞೆಯನ್ನು ಹೊಂದುವುದಿಲ್ಲ. ಇದಕ್ಕೆ ಪ್ರಯೋಜನವನ್ನು 'ನಾಂತಮೇವೇತಿ ಕಿಮ್ ? ವಾಚ್ಯತಿ' ಎಂಬ ವಾಕ್ಯದಿಂದ ತೋರಿಸುತ್ತಾನೆ. ವಾಚಂ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷೆ ಮಾಡಿದಾಗ ಕ್ಯಚ್ ಬಂದರೆ ವಾಚ್+ಅಮ್+ಯ ಎಂದಾಗುತ್ತದೆ. ಸುಪಿಗೆ ಲುಕ್. ವಾಚ್+ಯ. ಇಲ್ಲಿ ವಾಚ್ ಸುಬನ್ತವಾದುದರಿಂದ ಪದಸಂಜ್ಞೆ ಬರುವುದಾದರೆ 'ಝಲಾಂ ಜಶೋಽನ್ತೇ' ಸೂತ್ರದಿಂದ ಚಕಾರಕ್ಕೆ ಜಕಾರ ಬರಬೇಕಾಗುತ್ತದೆ. ಈಗ ನಾಂತಕ್ಕೆ ಮಾತ್ರ ಪದಸಂಜ್ಞೆ ಹೇಳಿದುದರಿಂದ ವಾಚ್+ಯ ಎಂಬಲ್ಲಿ ಪದಸಂಜ್ಞೆ ಇಲ್ಲದಿರುವುದರಿಂದ ಜಶ್ತ್ವ ಬರುವುದಿಲ್ಲ. ವಾಚ್ಯ ಎಂಬ ಕ್ಯಜನ್ತಧಾತುವಿನ ಮೇಲೆ ಲಡಾದಿಗಳು ಬಂದರೆ

ವಾಚ್ಯತಿ ಎಂದಾಗುತ್ತದೆ. ಪ್ರಕೃತ ರಾಜನ್ + ಯ ಎಂದಿರುವಾಗ ಪದಸಂಜ್ಞೆ ಬಂದರೆ 'ನ ಲೋಪಃ ಪ್ರಾತಿಪದಿಕಾನ್ತಸ್ಯ' ಸೂತ್ರದಿಂದ ನಲೋಪ. ರಾಜ + ಯ ಅದನ್ತವಾದುದರಿಂದ 'ಕ್ಯಚಿ ಚ' ಸೂತ್ರದಿಂದ ಈತ್ವ. ರಾಜೀಯ । ಇದರಮೇಲೆ ಲಡಾದಿಗಳು ಬಂದರೆ ರಾಜೀಯತಿ ಎಂದಾಗುತ್ತದೆ. ಈತ್ವವು ಸುಬ್ವಿಧಿಯಾಗದಿದ್ದುದರಿಂದ 'ನ ಲೋಪಃ ಸುಪ್—' (ಸೂ. ೨೮೪) ಸೂತ್ರದಿಂದ ನಲೋಪಕ್ಕೆ ಅಸಿದ್ಧತ್ವವಿಲ್ಲ. ರಾಜೀಯ ಎಂಬ ಕ್ಯಜನ್ತನಾಮಧಾತುವಿಗೆ ಕ್ರಮವಾಗಿ ಹೀಗೆ ರೂಪಗಳಾಗುತ್ತವೆ. ರಾಜೀಯತಿ । ರಾಜೀಯಾಞ್ಚಕಾರ । ರಾಜೀಯಿತಾ । ರಾಜೀಯಿಷ್ಯತಿ । ರಾಜೀಯತು । ಅರಾಜೀಯತ್ । ರಾಜೀಯೇತ್ । ರಾಜೀಯ್ಯಾತ್ । ಅರಾಜೀಯೀತ್ । ಅರಾಜೀಯಿಷ್ಯತ್ ॥ ಗಿರಂ ಆತ್ಮನಃ ಇಚ್ಛತಿ, ಗೀರ್ಯತಿ. ಗಿರ್ + ಯ ಎಂದಿರುವಾಗ 'ಹಲಿ ಚ' (ಸೂ. ೬೧೬) ಸೂತ್ರದಿಂದ ಉಪಧಾದೀರ್ಘ. ಗ್ೞ ಧಾತುವಿಗೆ ಕ್ವಿಪ್ ಬಂದು ಗಿರ್ ಎಂದಾಗಿದೆ. ಹಾಗೆಯೇ, ಪುರಂ ಆತ್ಮನಃ ಇಚ್ಛತಿ, ಪೂರ್ಯತಿ. ಪೄಧಾತುವಿಗೆ ಕ್ವಿಪ್ ಬಂದಾಗ ಪುರ್ ಎಂದಿರುವಾಗ ಹಿಂದಿನಂತೆ ಉಪಧಾದೀರ್ಘ ಬಂದರೆ ಪೂರ್ಯತಿ ಎಂದಾಗುತ್ತದೆ. 'ಕ್ವಿಬ್ವಿಜನ್ತಾ ಧಾತುತ್ವಂ ನ ಜಹತಿ' ಕ್ವಿಬನ್ತ, ವಿಜನ್ತಗಳು ಧಾತುಭಾವವನ್ನು ಬಿಡುವುದಿಲ್ಲ ಎಂಬಂತೆ ಇಲ್ಲಿ ಕ್ವಿಬನ್ತಗಳಾದ ಗಿರ್, ಪುರ್ ಎಂಬವುಗಳು ಧಾತುಗಳಾದುದರಿಂದ 'ಹಲಿ ಚ' ಸೂತ್ರದಿಂದ ದೀರ್ಘ ಬಂದಿದೆ. ಧಾತುವಾಗದಿದ್ದರೆ ಆ ಸೂತ್ರದಿಂದ ದೀರ್ಘ ಬರುವುದಿಲ್ಲ. ದಿವಂ ಇಚ್ಛತಿ, ದಿವ್ಯತಿ. ಇಲ್ಲಿ ದೀರ್ಘ ಬರುವುದಿಲ್ಲ ದಿವ್ ಎಂಬುದು ಅವ್ಯುತ್ಪನ್ನವಾದ ಪ್ರಾತಿಪದಿಕ. ದಿವ್ ಧಾತುವಿಗೆ ಕ್ವಿಬ್ ಬಂದರೆ 'ದ್ಯೂಃ' ಎಂದೂ ವಿಚ್ ಬಂದರೆ 'ದೇ' ಎಂದೂ ರೂಪವಾಗುತ್ತದೆ. ದಿವ್ ಪ್ರಾತಿಪದಿಕವಾದುದರಿಂದ ಉಪಧಾದೀರ್ಘ ಬರಲಿಲ್ಲ. ಗೀರ್ಯತಿ, ಗೀರ್ಯಾಞ್ಚಕಾರ ಇತ್ಯಾದಿ ಹತ್ತು ಲಕಾರಗಳಲ್ಲಿಯೂ ಹಿಂದಿನಂತೇ ರೂಪಗಳನ್ನು ತಿಳಿಯಬೇಕು. ಸಮಿಧಂ ಆತ್ಮನಃ ಇಚ್ಛತಿ ॥ ಸಮಿತ್ತನ್ನು ಬಯಸುತ್ತಾನೆ. ಸಮಿಧ್ಯತಿ. ಸಮಿಧ್ + ಯ ಎಂದಿರುವಾಗ 'ನಃ ಕ್ಯೇ' ಸೂತ್ರದಿಂದ ಪದಸಂಜ್ಞೆಯನ್ನು ನಿಯಮಮಾಡಿರುವುದರಿಂದ ಇಲ್ಲಿ ಧಕಾರಕ್ಕೆ 'ಝಲಾಂ ಜಶೋನ್ತೇ' ಸೂತ್ರದಿಂದ ಪದಸಂಜ್ಞೆ ಇಲ್ಲದಿರುವುದರಿಂದ ಜಶ್ತ್ವ ಬರುವುದಿಲ್ಲ. ಲುಟಿನಲ್ಲಿ ತಾಸ್ ಬಂದು ಅದಕ್ಕೆ ಇಡಾಗಮ ಬಂದಾಗ ಸಮಿಧ್ಯ + ಇತಾ ಎಂದಿರುವಾಗ ಕ್ಯಚಿಗೆ ಲೋಪ ಹೇಳುತ್ತಾನೆ.

ಹಲಿನ ಪರದಲ್ಲಿರುವ ಕ್ಯಚ್ ಕ್ಯಙ್‌ಗಳಿಗೆ ಲೋಪ ಹೇಳುವ ಸೂತ್ರ.

೭೨೬. ಕ್ಯಸ್ಯ ವಿಭಾಷಾ ॥ ೬-೪-೫೦ ॥

**ಹಲಃ ಪರಯೋಃ ಕ್ಯಚ್‌ಕ್ಯಙೋರ್ಲೋಪೋ ವಾರ್ಧಧಾತುಕೇ । ಆದೇಃ ಪರಸ್ಯ । ಅತೋ ಲೋಪಃ । ತಸ್ಯ ಸ್ಥಾನಿವತ್ತ್ವಾಲ್ಲಘೂಪಧಗುಣೋ ನ । ಸಮಿಧಿತಾ, ॥ ಸಮಿಧ್ಯಿತಾ ॥**

ದ್ವಿಪದ ಸೂತ್ರ. 'ಯಸ್ಯ ಹಲಃ' ಸೂತ್ರದಿಂದ 'ಹಲಃ' ಅನುವೃತ್ತಿ. ಹಲಃ ಎಂಬುದು ಪಂಚಮ್ಯಂತ. 'ಆರ್ಧಧಾತುಕೇ' ಅಧಿಕಾರ. ಕ್ಯ ಎಂಬುದರಿಂದ ಕ್ಯಚ್, ಕ್ಯಙ್ ಎರಡೂ ಗೃಹೀತವಾಗುತ್ತವೆ. ಸೂತ್ರಾರ್ಥ—ಹಲಿನ ಪರದಲ್ಲಿರುವ ಕ್ಯಚ್, ಕ್ಯಙ್‌ಗಳಿಗೆ ಆರ್ಧಧಾತುಕಪರದಲ್ಲಿರುವಾಗ ವಿಕಲ್ಪವಾಗಿ ಲೋಪಬರುತ್ತದೆ. ಸಮಿಧ್ + ಯ + ಇತಾ ಎಂದಿರುವಾಗ ಹಲ್ ಧಕಾರ. ಇದರ ಪರದ ಕ್ಯಚಿಗೆ ಇತಾ ಆರ್ಧಧಾತುಕ ಪರದಲ್ಲಿರುವುದರಿಂದ ಲೋಪ. ಪರದಲ್ಲಿರುವ ಕ್ಯಚಿಗೆ ಲೋಪವೆಂದುದರಿಂದ 'ಆದೇಃ ಪರಸ್ಯ' ಸೂತ್ರದಿಂದ ಕ್ಯಚಿನ ಆದಿಗೆ ಅಂದರೆ ಯ್ ಎಂಬುದಕ್ಕೆ ಲೋಪ. ಸಮಿಧ್ + ಅ + ಇತಾ. 'ಅತೋ ಲೋಪಃ' ಸೂತ್ರದಿಂದ ಉಳಿದ ಕ್ಯಚಿನ ಅಕಾರಕ್ಕೆ ಲೋಪ. ಸಮಿಧ್ + ಇತಾ = ಸಮಿಧಿತಾ. ಇಲ್ಲಿ 'ಪುಗನ್ತಲಘೂಪಧಸ್ಯ ಚ' ಸೂತ್ರದಿಂದ ಲಘೂಪಧಗುಣ ಬರಲಿ ಎಂಬ ಶಂಕೆ ಬಂದರೆ ಸ್ಥಾನಿವದ್ಭಾವದಿಂದ ಬರುವುದಿಲ್ಲವೆನ್ನುತ್ತಾನೆ. 'ಅಚಃ ಪರಸ್ಮಿನ್ ಪೂರ್ವವಿಧೌ' ಸೂತ್ರದಿಂದ ಪರನಿಮಿತ್ತನಾಗಿ ಬಂದ ಲೋಪರೂಪ ಅಜಾದೇಶಕ್ಕೆ ಸ್ಥಾನಿವದ್ಭಾವ ಬಂದರೆ ಲಘೂಪಧವಾದ ಅಂಗವಿಲ್ಲದಿರುವುದರಿಂದ ಗುಣ ಬರುವುದಿಲ್ಲ. ಕ್ಯಚಿಗೆ ಲೋಪ ಬಾರದಿದ್ದರೆ 'ಅತೋ ಲೋಪಃ' ಸೂತ್ರದಿಂದ ಕ್ಯಚಿನ ಅಕಾರಕ್ಕೆ ಲೋಪ ಬಂದರೆ ಸಮಿಧ್ಯಿತಾ ಎಂದಾಗುತ್ತದೆ. ಹೀಗೆಯೇ ಆರ್ಧಧಾತುಕಗಳಲ್ಲಿ ಕ್ಯಚ್ ಲೋಪವೂ, ಲೋಪ ಬಾರದಿರುವುದರಿಂದಲೂ, ಎರಡೆರಡು ರೂಪಗಳಾಗುತ್ತವೆ. ಸಮಿಧಿಷ್ಯತಿ, ಸಮಿಧ್ಯಿಷ್ಯತಿ ॥ ಸಮಿಧ್ಯತು । ಅಸಮಿಧ್ಯತ್ । ಸಮಿಧ್ಯೇತ್ । ಸಮಿಧ್ಯಾತ್ । ಅಸಮಿಧೀತ್, ಅಸಮಿಧ್ಯೀತ್ । ಅಸಮಿಧಿಷ್ಯತ್, ಅಸಮಿಧ್ಯಿಷ್ಯತ್ ॥

ಇಚ್ಛಾರ್ಥದಲ್ಲಿ ಕಾಮ್ಯಚ್ ವಿಧಾನ ಮಾಡುವ ಸೂತ್ರ.

೬೨೭. ಕಾಮ್ಯಚ್ಚ ॥ ೩-೧-೯ ॥

**ಉಕ್ತವಿಷಯೇ ಕಾಮ್ಯಚ್ ಸ್ಯಾತ್ । ಪುತ್ರಮಾತ್ಮನ ಇಚ್ಛತಿ ಪುತ್ರಕಾಮ್ಯತಿ । ಪುತ್ರಕಾಮ್ಯಿತಾ ॥**

ಕಾಮ್ಯಚ್, ಚ ॥ ದ್ವಿಪದ ಸೂತ್ರ. 'ಸುಪ ಆತ್ಮನಃ ಕ್ಯಚ್' ಸೂತ್ರದ ಮುಂದಿನ ಸೂತ್ರವಾದುದರಿಂದ ಉಕ್ತವಿಷಯದಲ್ಲಿ ಎಂದಿರುತ್ತಾನೆ. ಸೂತ್ರಾರ್ಥ—ಹಿಂದೆ ಹೇಳಿದ ಅರ್ಥದಲ್ಲಿ ಕಾಮ್ಯಚ್ ಪ್ರತ್ಯಯ ಬರುತ್ತದೆ. ಅಂದರೆ ಇಚ್ಛಾಕ್ರಿಯಾ ಕರ್ತೃಸಂಬಂಧಿಯಾದ, ಇಚ್ಛಾಕ್ರಿಯಾಕರ್ಮವಾದ ಸುಬಂತದ ಮೇಲೆ ಇಚ್ಛಾರ್ಥದಲ್ಲಿ ಕಾಮ್ಯಚ್ ಬರುತ್ತದೆ ಎಂದರ್ಥ. ಪುತ್ರಂ ಆತ್ಮನಃ ಇಚ್ಛತಿ ॥ ಮಗನನ್ನು ತನಗೆ ಬಯಸುತ್ತಾನೆ. ಹಿಂದಿನಂತೆ ಪುತ್ರಂ ಎಂಬ ಸುಬಂತದ ಮೇಲೆ ಕಾಮ್ಯಚ್ ಬಂದರೆ ಪುತ್ರ + ಅಮ್ + ಕಾಮ್ಯಚ್ ಎಂದಾಗುತ್ತದೆ. ಕಾಮ್ಯಚಿನಲ್ಲಿ 'ಹಲಂತ್ಯಮ್' ಸೂತ್ರದಿಂದ ಚಕಾರ ಇತ್‌ಸಂಜ್ಞೆ ಹೊಂದಿ ಲೋಪವಾಗುತ್ತದೆ. 'ಸುಪೋ ಧಾತು

ಪ್ರಾತಿಪದಿಕಯೋಃ' ಸೂತ್ರದಿಂದ ಅಮಿಗೆ ಲುಕ್. ಪುತ್ರಕಾಮ್ಯ. ಕಾಮ್ಯಚ್ ಸನಾದಿಯಲ್ಲಿ ಸೇರಿರುವುದರಿಂದ ಪುತ್ರಕಾಮ್ಯ ಎಂಬುದಕ್ಕೆ ಧಾತುಸಂಜ್ಞೆ ಬರುತ್ತದೆ. ಅದರ ಮೇಲೆ ಲಡಾದಿಗಳು ಬಂದರೆ ಪುತ್ರಕಾಮ್ಯತಿ ಎಂದಾಗುತ್ತದೆ. ಪುತ್ರಕಾಮ್ಯಾಞ್ಚಕಾರ । ಪುತ್ರಕಾಮ್ಯಿತಾ ॥ 'ಅತೋ ಲೋಪಃ' ಸೂತ್ರದಿಂದ ಕಾಮ್ಯಚನ ಅಕಾರಕ್ಕೆ ಲೋಪ ಬಂದಿದೆ. ಪುತ್ರಕಾಮ್ಯಿಷ್ಯತಿ । ಪುತ್ರಕಾಮ್ಯತು । ಅಪುತ್ರಕಾಮ್ಯತ್ । ಪುತ್ರಕಾಮ್ಯೇತ್ । ಪುತ್ರಕಾಮ್ಯಾತ್ । ಅಪುತ್ರಕಾಮ್ಯೀತ್ । ಅಪುತ್ರಕಾಮ್ಯಿಷ್ಯತ್ ॥

ಆಚಾರಾರ್ಥದಲ್ಲಿ ಕ್ಯಚ್ ಹೇಳುವ ಸೂತ್ರ.

**೭೨೮. ಉಪಮಾನಾದಾಚಾರೇ ॥೩-೧-೧೦ ॥**

**ಉಪಮಾನಾತ್ಕರ್ಮಣಃ ಸುಬನ್ತಾದಾಚಾರಾರ್ಥೇ ಕ್ಯಚ್ । ಪುತ್ರಮಿವಾಚರತಿ ಪುತ್ರೀಯತಿ ಛಾತ್ರಮ್ । ವಿಷ್ಣೂಯತಿ ದ್ವಿಜಮ್ ।**

**ವಾ ॥ (ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಾ ವಕ್ತವ್ಯಃ) 'ಅತೋ ಗುಣೇ' ಕೃಷ್ಣ ಇವಾಚರತಿ ಕೃಷ್ಣತಿ । ಸ್ವ ಇವಾಚರತಿ ಸ್ವತಿ । ಸಸೌ ।**

ಉಪಮಾನಾತ್, ಆಚಾರೇ ॥ ದ್ವಿಪದ ಸೂತ್ರ. 'ಸುಪ ಆತ್ಮನಃ ಕ್ಯಚ್' ಸೂತ್ರದಿಂದ 'ಸುಪಃ', 'ಧಾತೋಃ ಕರ್ಮಣಃ—' ಸೂತ್ರದಿಂದ 'ಕರ್ಮಣಃ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**-ಉಪಮಾನವಾಚಕವಾಗಿ ಕರ್ಮಕಾರಕವಾದ ಸುಬನ್ತದ ಮೇಲೆ ಆಚಾರಾರ್ಥದಲ್ಲಿ ಕ್ಯಚ್ ಪ್ರತ್ಯಯ ಬರುತ್ತದೆ. ಯಾವುದರ ಸಾದೃಶ್ಯ (ಹೋಲಿಕೆ)ವು ಇನ್ನೊಂದರಲ್ಲಿ ಹೇಳುತ್ತಿರುವುದೋ ಅದು ಉಪಮಾನ. ಸೂರ್ಯನಂತೆ ರಾಜನು ಶೋಭಿಸುತ್ತಾನೆ. 'ರವಿರಿವ ರಾಜತೇ ರಾಜಾ ॥' ಇಲ್ಲಿ ರವಿ ಉಪಮಾನ. ಪುತ್ರಮಿವ ಆಚರತಿ ॥ ಇಲ್ಲಿ ಪುತ್ರಂ ಎಂಬುದು ಉಪಮಾನ. ಕರ್ಮಕಾರಕವಾಗಿದೆ. ಆಚಾರಾರ್ಥ ತೋರುತ್ತದೆ. ಶಿಷ್ಯನನ್ನು ಮಗನಂತೆ ಆಚರಿಸುತ್ತಾನೆ (ನೋಡಿಕೊಳ್ಳುತ್ತಾನೆ). ಪುತ್ರಂ ಎಂಬುದರ ಮೇಲೆ ಕ್ಯಚ್. ಪುತ್ರ+ಅಮ್+ಕ್ಯಚ್. ಹಿಂದಿನಂತೆ ಸುಪಿಗೆ ಲುಕ್. ಅಕಾರಕ್ಕೆ ಈತ್ವ. ಪುತ್ರೀಯತಿ. (ಛಾತ್ರಮ್) ದ್ವಿಜಂ ವಿಷ್ಣುಮಿವ ಆಚರತಿ ॥ ಇಲ್ಲಿ ವಿಷ್ಣುಂ ಉಪಮಾನ, ಕರ್ಮಕಾರಕ. ಕ್ಯಚ್ ಬಂದು ಸುಪ್ ಲೋಪವಾದರೆ ವಿಷ್ಣು+ಯ ಎಂದಿರುವಾಗ 'ಅಕೃತ್ಸಾರ್ವಧಾತುಕಯೋಃ' ಸೂತ್ರದಿಂದ ದೀರ್ಘ ಬಂದರೆ ವಿಷ್ಣೂಯ ಎಂದಾಗುತ್ತದೆ. ಲಡಾದಿಗಳು ಬಂದರೆ ವಿಷ್ಣೂಯತಿ ಎಂದಾಗುತ್ತದೆ. ಬ್ರಾಹ್ಮಣನನ್ನು ವಿಷ್ಣುವನ್ನೆಂಬಂತೆ ಭಕ್ತಿಭಾವದಿಂದ ನೋಡುತ್ತಾನೆ ಎಂದರ್ಥ. 'ಸರ್ವಪ್ರಾತಿಪದಿಕೇಭ್ಯಃ—' ಎಂಬುದು ವಾರ್ತಿಕ. ಎಲ್ಲಾ ಪ್ರಾತಿಪದಿಕಗಳ ಮೇಲೂ ಆಚಾರಾರ್ಥದಲ್ಲಿ ಕ್ವಿಪ್ ಪ್ರತ್ಯಯ ಬರುತ್ತದೆ ಎಂದು ಅದರ ಅರ್ಥ. ಇದರಿಂದ ಆಚಾರಾರ್ಥದಲ್ಲಿ ಅಸಂಖ್ಯಾತ ಧಾತು

ಗಳನ್ನು ಮಾಡಬಹುದು. ಕೃಷ್ಣಃ ಇವ ಆಚರತಿ ॥ ಕೃಷ್ಣನಂತೆ ಆಚರಿಸುತ್ತಾನೆ. ಕೃಷ್ಣನೆಂಬ ಪ್ರಾತಿಪದಿಕದ ಮೇಲೆ ಕ್ವಿಪ್ ಪ್ರತ್ಯಯ. ಕ್ವಿಪಿನಲ್ಲಿ ಸರ್ವವೂ ಲೋಪ ವಾಗುತ್ತವೆ. ಕಕಾರ 'ಲಶಕ್ವತದ್ಧಿತೇ' ಸೂತ್ರದಿಂದಲೂ, ಪಕಾರ 'ಹಲಂತ್ಯಮ್' ಸೂತ್ರದಿಂದಲೂ ಇತ್‌ಸಂಜ್ಞೆ ಹೊಂದುತ್ತವೆ. ಇಕಾರ ಉಚ್ಚಾರಣಾರ್ಥವಾಗಿದೆ. 'ವೇರಪೃಕ್ತಸ್ಯ' ಸೂತ್ರದಿಂದ ವಕಾರಲೋಪ. ಈಗ ಕೃಷ್ಣ ಎಂಬುದು ಆಚಾರ ಕ್ವಿಬಂತ ಧಾತು. ಸನಾದಿಯಲ್ಲಿ ಆಚಾರಕ್ವಿಪ್ ಸೇರಿದೆ. ಇದರ ಮೇಲೆ ಲಡಾದಿ. ಕೃಷ್ಣ+ಅ+ತಿ ಎಂದಿರುವಾಗ 'ಅತೋ ಗುಣೇ' ಸೂತ್ರದಿಂದ ಪರರೂಪ ಬಂದರೆ ಕೃಷ್ಣತಿ ಎಂದಾಗುತ್ತದೆ. ಕೃಷ್ಣ ಎಂಬುವೇ ಧಾತು. ಕೃಷ್ಣಾಞ್ಚಕಾರ, ಕೃಷ್ಣಿತಾ। ಇತ್ಯಾದಿ. ಸ್ವ ಇವಾಚರತಿ ॥ ತನ್ನಂತೆ ಆಚರಿಸುತ್ತಾನೆ. ಸ್ವ+ಕ್ವಿಪ್. ಕ್ವಿಪ್ ಸರ್ವಲೋಪ. ಸ್ವತಿ. ಲಿಟಿನಲ್ಲಿ ಅನೇಕಾಚಾಗದಿದ್ದುದರಿಂದ ಆಮ್ ಬರುವುದಿಲ್ಲ. ಸ್ವಶಬ್ದಕ್ಕೇ ದ್ವಿತ್ವ. ಸ್ವಸ್ವ+ಅ. 'ಹಲಾದಿಶೇಷ' ಸಸ್ವ+ಅ. 'ಅಚೋಞ್ಣಿತಿ' ವೃದ್ಧಿ. ಸಸ್ವಾ+ಅ. 'ಆತ ಔ ಣಲಃ' ಸೂತ್ರದಿಂದ ಣಲಿಗೆ ಔ ಆದೇಶ. ಸಸ್ವಾ +ಔ. ವೃದ್ಧಿ. ಸಸ್ವೌ. ಸಸ್ವ+ಅತುಸ್ ಎಂದಿರುವಾಗ 'ಅತೋಲೋಪಃ' ಸೂತ್ರ ದಿಂದ ಸ್ವದ ಅಕಾರಕ್ಕೆ ಲೋಪ. ಸಸ್ವತುಃ। ಸಸ್ವುಃ ॥ ಸಸ್ವಿಥ। ಸಸ್ವಥುಃ। ಸಸ್ವ ॥ ಸಸ್ವೌ। ಸಸ್ವಿವ। ಸಸ್ವಿಮ ॥ ಸ್ವಿತಾ। ಇತ್ಯಾದಿ. ಸ್ವಿಷ್ಯತಿ। ಸ್ವತು। ಅಸ್ವತ್। ಸ್ವೇತ್। ಸ್ವ್ಯಾತ್। ಅಸ್ವೀತ್। ಅಸ್ವಿಷ್ಯತ್ ॥ ಇದಮಿವ ಆಚರತಿ ॥ ಇದರಂತೆ ಆಚರಿಸುತ್ತಾನೆ. ಇದಮ್ ಶಬ್ದದಮೇಲೆ ಕ್ವಿಪ್, ಇದಮ್+ಕ್ವಿಪ್ ಎಂದಿರು ವಾಗ ಉಪಧಾದೀರ್ಘ ಹೇಳುತ್ತಾನೆ.

ಅನುನಾಸಿಕಾಂತಕ್ಕೆ ಉಪಧಾದೀರ್ಘ ಹೇಳುವ ಸೂತ್ರ.

**೭೨೯. ಅನುನಾಸಿಕಸ್ಯ ಕ್ವಿಝಲೋಃ ಕ್ಙಿತಿ ॥ ೬-೪-೧೫ ॥**

**ಅನುನಾಸಿಕಾನ್ತಸ್ಯೋಪಧಾಯಾ ದೀರ್ಘಃ ಸ್ಯಾತ್ ಕ್ವೌ ಝಲಾದೌ ಚ ಕ್ಙಿತಿ। ಇದಮಿವಾಚರತಿ ಇದಾಮತಿ। ರಾಜೇವ ರಾಜಾನತಿ। ಪನ್ಥಾ ಇವ ಪಥೀನತಿ ॥**

ತ್ರಿಪದ ಸೂತ್ರ. 'ಅಂಗಸ್ಯ' ಅಧಿಕಾರ. 'ಅನುನಾಸಿಕಸ್ಯ' ಎಂಬುದೂ ಅದಕ್ಕೆ ವಿಶೇಷಣವಾದುದರಿಂದ ತದಂತಲಾಭ. 'ನೋಪಧಾಯಾಃ' ಸೂತ್ರದಿಂದ 'ಉಪಧಾಯಾಃ', 'ಢ್ರಲೋಪೇ ದೀರ್ಘಃ—' ಸೂತ್ರದಿಂದ 'ದೀರ್ಘಃ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಕ್ವಿಪ್ ಪರವಾದಾಗ, ಝಲಾದಿಯಾದ ಕಿತ್‌ಙಿತ್ತಾದ ಪ್ರತ್ಯಯು ಪರದಲ್ಲಿರುವಾಗ ಅನುನಾಸಿಕಾನ್ತವಾದ ಅಂಗದ ಉಪಧೆಗೆ ದೀರ್ಘ ಬರುತ್ತದೆ. ಇದಮ್, ಅನುನಾಸಿಕಾನ್ತವಾದ ಅಂಗ. ಅದಕ್ಕೆ ಕ್ವಿಪ್ ಪರ ವಾದುದರಿಂದ ಉಪಧೆಗೆ ದೀರ್ಘ ಬಂದರೆ ಇದಾಮ್ ಎಂದಾಗುತ್ತದೆ. ಇದರಮೇಲೆ

ಲಡಾದಿ. ಇದಾಮತಿ, ಇದಾಮಾಞ್ಚಕಾರ। ಇತ್ಯಾದಿ. ರಾಜೇವ ಆಚರತಿ ॥ ರಾಜನ್ ಶಬ್ದದಮೇಲೆ ಕ್ವಿಪ್. ಇಲ್ಲಿಯೂ ಅನುನಾಸಿಕಾನ್ತವಾದುದರಿಂದ ಉಪಧಾ ದೀರ್ಘ ಬಂದರೆ ರಾಜಾನತಿ ಎಂದಾಗುತ್ತದೆ. ಪನ್ಥಾ ಇವಾಚರತಿ ॥ ಪಥಿನ್ ಶಬ್ದದ ಮೇಲೆ ಕ್ವಿಪ್. ಉಪಧಾದೀರ್ಘ. ಪಥೀನತಿ. ಇಲ್ಲಿ ಮೊದಲೇ ದೀರ್ಘ ಬಂದುದರಿಂದ ಶಪ್ ನಿಮಿತ್ತವಾಗಿ ಲಘೂಪಧಗುಣ ಬಂದಿಲ್ಲ.

ಉತ್ಸಾಹಾರ್ಥದಲ್ಲಿ ಕ್ಯಙ್ ವಿಧಾನಮಾಡುವ ಸೂತ್ರ.

೭೩೦. ಕಷ್ಟಾಯ ಕ್ರಮಣೇ ॥೩-೧-೧೪॥

ಚತುರ್ಥ್ಯನ್ತಾತ್ಕಷ್ಟಶಬ್ದಾದುತ್ಸಾಹೇಽರ್ಥೇ ಕ್ಯಙ್ ಸ್ಯಾತ್ । ಕಷ್ಟಾಯ ಕ್ರಮತೇ । ಕಷ್ಟಾಯತೇ । ಪಾಪಂ ಕರ್ತುಮುತ್ಸಹತೇ ಇತ್ಯರ್ಥಃ ॥

ದ್ವಿಪದ ಸೂತ್ರ. 'ಕರ್ತುಃ ಕ್ಯಙ್—'ಸೂತ್ರದಿಂದ 'ಕ್ಯಙ್' ಅನುವೃತ್ತಿ. ಕ್ರಮಣ ಪದಕ್ಕೆ ಉತ್ಸಾಹವೆಂದರ್ಥ. ಸೂತ್ರಾರ್ಥ—ಚತುರ್ಥ್ಯನ್ತವಾದ ಕಷ್ಟ ಶಬ್ದದ ಮೇಲೆ ಉತ್ಸಾಹಾರ್ಥದಲ್ಲಿ ಕ್ಯಙ್ ಪ್ರತ್ಯಯ ಬರುತ್ತದೆ. ಕಷ್ಟಾಯ ಕ್ರಮತೇ ॥ ಕಷ್ಟ ಸಾಧನಪಾಪಕ್ಕೋಸ್ಕರ ಉತ್ಸಾಹಪಡುತ್ತಾನೆ. ಎಂದರ್ಥ. ಕಷ್ಟ + ಙೇ + ಕ್ಯಙ್. ಕ್ಯಙ್‌ನಲ್ಲಿ ಯ ಉಳಿಯುತ್ತದೆ. 'ಸುಪೋ ಧಾತುಪ್ರಾತಿಪದಿಕಯೋಃ' ಚತುರ್ಥಿಗೆ ಲುಕ್. ಕಷ್ಟ + ಯ. 'ಅಕೃತ್ಸಾರ್ವಧಾತುಕಯೋರ್ದೀರ್ಘಃ'ಸೂತ್ರದಿಂದ ಯಾದಿ ಪ್ರತ್ಯಯ ಪರವಾದುದರಿಂದ ದೀರ್ಘ. ಕಷ್ಟಾಯ. 'ಸನಾದ್ಯಂತಾಧಾತವಃ' ಸೂತ್ರ ದಿಂದ ಧಾತುಸಂಜ್ಞೆ ಬಂದು ಲಡಾದಿಗಳು ಬರುತ್ತವೆ. ಕ್ಯಙ್ ಙಿತ್ತಾದುದರಿಂದ ಆತ್ಮನೇಪದಪ್ರತ್ಯಯಗಳು ಬರುತ್ತವೆ. ಕಷ್ಟಾಯತೇ। ಕಷ್ಟಾಯಾಞ್ಚಕ್ರೇ । ಕಷ್ಟಾಯಿತಾ । ಕಷ್ಟಾಯಿಷ್ಯತೇ ಇತ್ಯಾದಿ. ಪಾಪಮಾಡಲು ಉತ್ಸಾಹಪಡುತ್ತಾನೆ ಎಂದರ್ಥ. ಕಷ್ಟಕ್ಕೋಸ್ಕರ ಉತ್ಸಾಹವೆಂದರೆ ಅಸಂಗತವಾಗುತ್ತದೆ. ಕಷ್ಟ ಪದಕ್ಕೆ ಕಷ್ಟಸಾಧನ ಪಾಪವೆಂದರ್ಥಮಾಡಬೇಕು. ಆಗ ಸಮಂಜಸವಾಗುತ್ತದೆ.

ಕರಣಾರ್ಥದಲ್ಲಿ ಕ್ಯಙ್ ವಿಧಾನಮಾಡುವ ಸೂತ್ರ.

೭೩೧. ಶಬ್ದವೈರಕಲಹಾಭ್ರಕಣ್ವಮೇಘೇಭ್ಯಃ ಕರಣೇ ॥೩-೧-೧೭॥

ಏಭ್ಯಃ ಕರ್ಮಭ್ಯಃ ಕರೋತ್ಯರ್ಥೇ ಕ್ಯಙ್ ಸ್ಯಾತ್ । ಶಬ್ದಂ ಕರೋತಿ ಶಬ್ದಾಯತೇ ॥ ( ಗುಣ ಸೂತ್ರ ) ತತ್ಕರೋತಿ ತದಾಚಷ್ಟೇ । ಇತಿ ಣಿಚ್ ॥ ( ಗ. ಸೂ. ) ಪ್ರಾತಿಪದಿಕಾದ್ಧಾತ್ವರ್ಥೇ ಬಹುಲಮಿಷ್ಠವಚ್ಚ । ಪ್ರಾತಿಪದಿಕಾದ್ಧಾತ್ವರ್ಥೇ ಣಿಚ್ ಸ್ಯಾತ್ ; ಇಷ್ಠೇ ಯಥಾ ಪ್ರಾತಿಪದಿಕಸ್ಯ ಪುಂವದ್ಭಾವ, ರಭಾವ, ಟಿಲೋಪ, ವಿನ್ಮತುಬ್ಲೋಪ, ಯಣಾದಿಲೋಪ, ಪ್ರಸ್ಥ

ಸ್ಫಾದ್ಯಾದೇಶ, ಭಸಂಜ್ಞಾಸ್ತದ್ವಣ್ಣಾವಪಿ ಸ್ಯುಃ । ಇತ್ಯಲ್ಲೋಪಃ । ಘಟಂ ಕರೋತಿ ಆಚಷ್ಟೇ ವಾ ಘಟಯತಿ ॥

ಇತಿ ನಾಮಧಾತವಃ

ದ್ವಿಪದ ಸೂತ್ರ, ಕರಣವೆಂದರೆ ಇಲ್ಲಿ ಕ್ರಿಯಾ ಎಂದರ್ಥ. 'ಕರ್ಮಣೋ ರೋಮನ್ಥ—' ಸೂತ್ರದಿಂದ 'ಕರ್ಮಣಃ' ಅನುವೃತ್ತಿ. ಅದಕ್ಕೆ ಶಬ್ದಾದಿಗಳಲ್ಲಿ ಅನ್ವಯ. **ಸೂತ್ರಾರ್ಥ**—ಕರ್ಮವಾಚಕಗಳಾದ ಶಬ್ದ, ವೈರ, ಕಲಹ, ಅಭ್ರ, ಕಣ್ವ ಮೇಘ ಶಬ್ದಗಳ ಮೇಲೆ ಮಾಡುತ್ತಾನೆ ಎಂಬರ್ಥದಲ್ಲಿ ಕ್ಯಙ್ ಪ್ರತ್ಯಯ ಬರುತ್ತದೆ. ಶಬ್ದಂ ಕರೋತಿ ॥ ಇಲ್ಲಿ ಶಬ್ದಂ ಎಂಬ ಕರ್ಮವಾಚಕದ ಮೇಲೆ ಕ್ಯಙ್. ಶಬ್ದ + ಅಮ್ + ಯ. ಸುಬ್ಲೋಪ. ಶಬ್ದ + ಯ. 'ಅಕೃತ್ಸಾರ್ವಧಾತುಕಯೋಃ–' ಸೂತ್ರದಿಂದ ದೀರ್ಘ. ಶಬ್ದಾಯ । ಲಡಾದಿ. ಶಬ್ದಾಯತೇ । ಹೀಗೆಯೇ ವೈರಾಯತೇ । ಕಲಹಾಯತೇ । ಅಭ್ರಾಯತೇ । ಕಣ್ವಾಯತೇ । ಮೇಘಾಯತೇ । ಎಂದು ಕ್ರಿಯಾರ್ಥದಲ್ಲಿ ಆಗುತ್ತವೆ.

'ತತ್ಕರೋತಿ—' ಇದು ಚುರಾದಿಗಣಸೂತ್ರ. 'ಪ್ರಾತಿಪದಿಕಾತ್' ಅನುವೃತ್ತಿ. 'ತತ್ಕರೋತಿ, ತದಾಚಷ್ಟೇ.' ಅದನ್ನು ಮಾಡುತ್ತಾನೆ, ಅದನ್ನು ಹೇಳುತ್ತಾನೆ ಈ ಎರಡು ಅರ್ಥಗಳಲ್ಲಿ ಪ್ರಾತಿಪದಿಕದ ಮೇಲೆ ಣಿಚ್ ಬರುತ್ತದೆ. ಘಟಂ ಕರೋತಿ ಎಂದು ಅರ್ಥವಿವಕ್ಷಾಮಾಡಿದಾಗ ಘಟ ಪ್ರಾತಿಪದಿಕದಮೇಲೆ ಣಿಚ್. ಘಟ + ಇ. ಟಿಲೋಪ. ಘಟಿ. ಣಿಜನ್ತವಾದುದರಿಂದ ಧಾತುಸಂಜ್ಞಾ. ಲಡಾದಿ. ಘಟಯತಿ । ಘಟಯಾಞ್ಚಕಾರ । ಘಟಯಿತಾ । ಘಟಯಿಷ್ಯತಿ । ಘಟಯತು । ಅಘಟಯತ್ । ಘಟಯೇತ್ । ಘಟ್ಯಾತ್ । ಅಜಘಟತ್. ಅಕಾರ ಲೋಪವಾದುದರಿಂದ ಸನ್ವದ್ಭಾವವಿಲ್ಲ. ಅದರಿಂದ ಇತ್ವಾದಿಗಳಿಲ್ಲ. ಅಘಟಯಿಷ್ಯತ್ ॥

'ಪ್ರಾತಿಪದಿಕಾತ್—' ಇದೂ ಚುರಾದಿಗಣಸೂತ್ರ. ಪ್ರಾತಿಪದಿಕದ ಮೇಲೆ ಧಾತ್ವರ್ಥವಿವಕ್ಷಾಮಾಡಿದಾಗ ಣಿಚ್ ಬರುತ್ತದೆ. ಇಷ್ಠನ್ ಪ್ರತ್ಯಯ ಪರವಾದಾಗ ಯಾವ ಕಾರ್ಯ ಬರುತ್ತದೆಯೋ ಆ ಕಾರ್ಯ ಣಿಚ್ ಪರವಾದಾಗಲೂ ಬರುತ್ತದೆ. ಪುಂವದ್ಭಾವ, ರಭಾವ, ಟಿಲೋಪ, ವಿನ್‌ಮತುಪ್ ಲೋಪಗಳು, ಯಣಾದಿಲೋಪ, ಪ್ರಸ್ಥಸ್ಫಾದ್ಯಾದೇಶಗಳು, ಭಸಂಜ್ಞಾ ಹೀಗೆ ಈ ಎಂಟು ಕಾರ್ಯಗಳು ಇಷ್ಠನಿನಲ್ಲಿ ಬರುವುದರಿಂದ ಅವು ಣಿಚಿನಲ್ಲಿಯೂ ಬರುತ್ತವೆ. ಇದನ್ನು ಅನುಸರಿಸಿಯೇ ಘಟ + ಣಿಚ್ ಎಂದಿರುವಾಗ ಟಿಲೋಪ (ಅ) ಬಂದಿದೆ. ವಾಸ್ತವವಾಗಿಯೂ ಇದು ಮೊದಲನೆ (ಗಣ) ಸೂತ್ರವಾಗಿಯೂ, 'ತತ್ಕರೋತಿ—' ಎರಡನೆಯ (ಗಣ) ಸೂತ್ರವಾಗಿಯೂ ಹೇಳಬೇಕು. 'ತತ್ಕರೋತಿ—' ಎಂಬುದು ವೊದಲನೇ (ಗಣ) ಸೂತ್ರದ ವಿವರಣೇ. ಪುಂವದ್ಭಾವಕ್ಕೆ ಉದಾಹರಣೆ. ಪಟ್ವೀಂ ಆಚಷ್ಟೇ ॥ ಪಟಯತಿ. ಪಟ್ವೀ + ಣಿಚ್. ಪುಂವದ್ಭಾವ ಬಂದರೆ ಪಟು + ಣಿಚ್ ಎಂದಾಗುತ್ತದೆ. ಇದರಿಂದಲೇ ಭಸಂಜ್ಞೆಯೂ

ಬರುತ್ತವೆ. ''ಅಚೋಽಞ್ಣಿತಿ' ವೃದ್ಧಿ. ಪಟೌ+ಇ. ಟಿಲೋಪ. ಪಟಿ. ಇದರ ಮೇಲೆ ಲಡಾದಿ. ಪಟಯತಿ. ರಭಾವಕ್ಕೆ, ದೃಢಂ ಕರೋತಿ ದ್ರಢಯತಿ ॥ 'ರ ಋತಃ ಸೂತ್ರದಿಂದ ದೃಢದಲ್ಲಿರುವ ಋಕಾರಕ್ಕೆ ರಭಾವ ಬಂದಿದೆ. ಟಿಲೋಪಕ್ಕೆ ಪಟು, ಆಚಷ್ಟೇ ಪಟಯತಿ ॥ ಉಕಾರಕ್ಕೆ ಲೋಪಬಂದಿದೆ. ವಿನ್ ಲುಕಿಗೆ, ಸ್ರಗ್ವಿಣಂ ಆಚಷ್ಟೇ ಸ್ರಜಯತಿ ॥ ಸ್ರಕ್ ಶಬ್ದದಮೇಲೆ ಬಂದ ವಿನ್ ಪ್ರತ್ಯಯಕ್ಕೆ 'ವಿನ್ಮತೋರ್ಲುಕ್' ಸೂತ್ರದಿಂದ ಲುಕ್. ಸ್ರಜ್ ಉಳಿಯುತ್ತದೆ. ಸ್ರಜಿ+ಅ+ತಿ—ಸ್ರಜಯತಿ। ಮತುಪ್‌ಲುಕಿಗೆ, ಶ್ರೀಮನ್ತಂ ಕರೋತಿ ಶ್ರಾಯಯತಿ ॥ ಶ್ರೀ ಶಬ್ದದಮೇಲೆ ಬಂದ ಮತುಪಿಗೆ ಹಿಂದಿನಂತೆ ಲೋಪ. ಶ್ರೀ+ಇ+ಅ+ತಿ. ಣಿಚ್‌ನಿಮಿತ್ತವಾಗಿ ವೃದ್ಧಿ. ಆಯಾದೇಶ. ಶ್ರಾಯಿ+ಅ+ತಿ. ಗುಣ, ಆಯಾದೇಶ. ಶ್ರಾಯಯತಿ. ಯಣಾದಿ ಲೋಪಕ್ಕೆ, ಸ್ಥೂಲಮಾಚಷ್ಟೇ ಸ್ಥವಯತಿ, ದೂರಂ ಕರೋತಿ ದವಯತಿ. ಸ್ಥೂಲ+ಇ ದೂರ+ಇ ಎಂದಿರುವಾಗ ಯಣ್ (ಲ್,ರ್) ಇವೇ ಆದಿ ಆಗಿರುವುದಕ್ಕೆ ಲೋಪ. ರ, ಲ ಲೋಪವಾದರೆ ಸ್ಥೂ+ಇ; ದೂ+ಇ ಗುಣ, ಅಯಾದೇಶ. ಸ್ಥವಯತಿ, ದವಯತಿ, ಆದೇಶಕ್ಕೆ, ಪ್ರಿಯಂ ಆಚಷ್ಟೇ ಪ್ರಾಪಯತಿ ॥ ಪ್ರಿಯಶಬ್ದಕ್ಕೆ ಪ್ರ ಆದೇಶ. ಪ್ರ+ಇ. ವೃದ್ಧಿ. ಪ್ರಾ+ಇ. ಆದಂತವಾದುದರಿಂದ ಪುಕ್. ಪ್ರಾಪಿ+ಅ+ತಿ— ಪ್ರಾಪಯತಿ. ಸ್ಥಿರಂ ಕರೋತಿ ಸ್ಥಾಪಯತಿ ॥ ಸ್ಥಿರಶಬ್ದಕ್ಕೆ ಸ್ಥ ಆದೇಶ ಬಂದಿದೆ. ಸ್ಫಿರಂ ಆಚಷ್ಟೇ ಸ್ಫಾಪಯತಿ ॥ಸ್ಫಿರ ಶಬ್ದಕ್ಕೆ ಸ್ಫ ಆದೇಶ ಬಂದಿದೆ. ಹೀಗೆ ಇಷ್ಠನ್ ಪ್ರತ್ಯಯ ಪರವಾದಾಗ ಬರುವ ಕಾರ್ಯಗಳು ಈ ಣಿಚ್ ಬಂದಾಗಲೂ ಬರುತ್ತವೆ.

## ೬. ಅಥ ಕಣ್ಡ್ವಾದಯಃ

ಕಂಡ್ವಾದಿಗಳಿಗೆ ಯಕ್ ವಿಧಾನ ಮಾಡುವ ಸೂತ್ರ.

### ೭೩೨. ಕಣ್ಡ್ವಾದಿಭ್ಯೋ ಯಕ್ ॥ ೩-೧-೨೭ ॥

**ಏಭ್ಯೋ ಧಾತುಭ್ಯೋ ನಿತ್ಯಂ ಯಕ್‌ಸ್ಯಾತ್ ಸ್ವಾರ್ಥೇ । ಕಣ್ಡೂಞ್ —ಗಾತ್ರವಿಘರ್ಷಣೇ ( ಕೆರೆಯುವುದು, ತುರಿಸುವುದು. ) ಕಣ್ಡೂಯತಿ । ಕಣ್ಡೂಯತೇ ಇತ್ಯಾದಿ. ॥**

ಇತಿ ಕಣ್ಡ್ವಾದಯಃ

ಕಂಡ್ವಾದಿ ಗಣ. ಇದರಲ್ಲಿ ಎರಡು ವಿಧವಿದೆ. ಧಾತುಗಳು ಕೆಲವು. ಪ್ರಾತಿ ಪದಿಕಗಳು ಕೆಲವು. ಇವುಗಳಿಗೆ ಯಕ್ ಪ್ರತ್ಯಯ ಹೇಳುತ್ತಾನೆ. 'ಧಾತೋ ರೇಕಾಚಃ—' ಸೂತ್ರದಿಂದ 'ಧಾತೋಃ' ಅನುವೃತ್ತಿ. ಅರ್ಥನಿರ್ದೇಶಮಾಡದಿರು

ವುದರಿಂದ ಸ್ವಾರ್ಥದಲ್ಲಿ ಎಂದು ತಿಳಿಯುತ್ತದೆ. ಸೂತ್ರಾರ್ಥ—ಕಂಡ್ವಾದಿಗಳಿಗೆ ನಿತ್ಯವಾಗಿ ಸ್ವಾರ್ಥದಲ್ಲಿ ಯಕ್ ಪ್ರತ್ಯಯ ಬರುತ್ತದೆ. ಹಿಂದಿನ ಸೂತ್ರದಿಂದ 'ವಾ' ಗ್ರಹಣಾನುವೃತ್ತಿ ಇಲ್ಲವೆಂದು ಸೂಚಿಸಲು ನಿತ್ಯಂ ಎಂದಿರುತ್ತಾನೆ. ಕಣ್ಡೂಞ್ ಧಾತು. ಞಕಾರ ಇತ್. 'ಸ್ವರಿತ ಞಿತಃ—' ಸೂತ್ರದಿಂದ ಉಭಯಪದಿಯಾಗುತ್ತದೆ. ಯಕ್ ಬಂದರೆ ಕಣ್ಡೂಯ ಎಂದಾಗುತ್ತದೆ. ಸನಾದಿಗಳಲ್ಲಿ ಯಕ್ ಸೇರಿರುವುದರಿಂದ ಧಾತುಸಂಜ್ಞಾ. ಕಣ್ಡೂಯತಿ, ಕಣ್ಡೂಯತೇ। ಇತ್ಯಾದಿ. ಕಣ್ಡೂಯಾಞ್ಚಕಾರ, ಕಣ್ಡೂಯಾಞ್ಚಕ್ರೇ। ಕಣ್ಡೂಯಿತಾ ಕಣ್ಡೂಯಿಷ್ಯತಿ, ಕಣ್ಡೂಯಿಷ್ಯತೇ। ಕಣ್ಡೂಯತು, ಕಣ್ಡೂಯತಾಮ್। ಕಣ್ಡೂಯೇತ್, ಕಣ್ಡೂಯೇತ। ಕಣ್ಡೂಯ್ಯಾತ್, ಕಣ್ಡೂಯಿಷೀಷ್ಟ। ಅಕಣ್ಡೂಯೀತ್ ಅಕಣ್ಡೂಯಿಷ್ಟ। ಅಕಣ್ಡೂಯಿಷ್ಯತ್, ಅಕಣ್ಡೂಯಿಷ್ಯತ॥ ಹೀಗೇ, ಮನ್ತು=ಅಪರಾಧೇ. ಮನ್ತೂಯತಿ ಇತ್ಯಾದಿ ರೂಪಗಳಾಗುತ್ತವೆ.

# ೭. ಅಥಾತ್ಮನೇಪದಪ್ರಕ್ರಿಯಾ

ಕರ್ಮವ್ಯತಿಹಾರದಲ್ಲಿ ಆತ್ಮನೇಪದ ಹೇಳುವ ಸೂತ್ರ.

**೭೩೩. ಕರ್ತರಿ ಕರ್ಮವ್ಯತಿಹಾರೇ ॥೧-೩-೧೪॥**

ಕ್ರಿಯಾವಿನಿಮಯೇ ದ್ಯೋತ್ಯೇ ಕರ್ತರ್ಯಾತ್ಮನೇಪದಮ್। ವ್ಯತಿಲುನೀತೇ। ಅನ್ಯಸ್ಯ ಯೋಗ್ಯಂ ಲವನಂ ಕರೋತೀತ್ಯರ್ಥಃ॥

'ಅನುದಾತ್ತಙಿತ ಆತ್ಮನೇಪದಮ್' ಸೂತ್ರದಿಂದ ಅನುದಾತ್ತೇತ್ತಾದಧಾತುಗಳಿಗೂ ಙಿತ್ತಾದ ಧಾತುಗಳಿಗೂ ಆತ್ಮನೇಪದ ಪ್ರತ್ಯಯಗಳು ಬರುತ್ತವೆಯೆಂದು ಹಿಂದೆ ಹೇಳಿದೆ. ಈಗ ಆಯಾಯ ವಿಶೇಷಾರ್ಥಗಳಲ್ಲಿ ಆ ಪ್ರತ್ಯಯಗಳನ್ನು ಹೇಳುತ್ತಾನೆ.

ದ್ವಿಪದ ಸೂತ್ರ. 'ಅನುದಾತ್ತಙಿತಃ—' ಸೂತ್ರದಿಂದ 'ಆತ್ಮನೇಪದಮ್' ಅನುವೃತ್ತಿ. ಕರ್ಮವ್ಯತಿಹಾರಪದಕ್ಕೆ ಕ್ರಿಯಾವಿನಿಮಯ ಎಂದರ್ಥ. ಸೂತ್ರಾರ್ಥ— ಕ್ರಿಯಾವಿನಿಮಯ ತೋರುವಾಗ ಕರ್ತ್ರರ್ಥದಲ್ಲಿ ಆತ್ಮನೇಪದ ಬರುತ್ತದೆ. ವ್ಯತಿಲುನೀತೇ ಉದಾಹರಣೆ. ಲೂಞ್ ಧಾತುವಿಗೆ ಕತ್ತರಿಸುವುದು ಅರ್ಥ. ವಿ, ಅತಿ ಉಪಸರ್ಗಬಲದಿಂದ ಕ್ರಿಯಾವಿನಿಮಯ ತೋರುತ್ತದೆ. ಉಪಸರ್ಗದಿಂದ ಒಂದು ಧಾತುವಿಗೆ ನಾನಾರ್ಥಗಳು ತೋರುತ್ತವೆ. ಯದ್ಯಪಿ ಞಿತ್ತಾದುದರಿಂದ ಉಭಯಪದಿಯಾದರೂ ಕ್ರಿಯಾವಿನಿಮಯ ತೋರುವಾಗ ಕೇವಲ ಆತ್ಮನೇಪದವೇ, ಪರಸ್ಮೈಪದ

ಬರುವುದೇ ಇಲ್ಲವೆಂದು ತಿಳಿಸಲು ಈ ಸೂತ್ರ ಆರಂಭಿಸಿದೆ. ಶೂದ್ರನು ಕತ್ತರಿಸುವ ಕೆಲಸವನ್ನು ಬ್ರಾಹ್ಮಣನು ಮಾಡುತ್ತಾನೆ ಎಂದರ್ಥ. ಒಬ್ಬನು ಮಾಡುವ ಕೆಲಸವನ್ನು ಇನ್ನೊಬ್ಬನು ಮಾಡುವುದೇ ಕ್ರಿಯಾವಿನಿಮಯ. ಹೀಗೆಯೇ ಹತ್ತು ಲಕಾರಗಳಲ್ಲಿಯೂ ಆತ್ಮನೇಪದಪ್ರತ್ಯಯಗಳೇ ಬರುತ್ತವೆ. ಲಙಾದಿಗಳಲ್ಲಿ ಅಡಾದಿಗಳು ಧಾತುವಿನ ಹಿಂದೇ ಬರುತ್ತವೆ. ವ್ಯತಿ+ಅಲುನೀತ=ವ್ಯತ್ಯಲುನೀತ ಇತ್ಯಾದಿ. ವ್ಯತಿಲುಲುವೇ । ವ್ಯತಿಲವಿತಾ । ವ್ಯತಿಲವಿಷ್ಯತೇ । ವ್ಯತಿಲುನೀತಾಮ್ । ವ್ಯತ್ಯಲುನೀತ । ವ್ಯತಿಲುನೀತ । ವ್ಯತಿಲವಿಷೀಷ್ಟ । ವ್ಯತ್ಯಲವಿಷ್ಟ । ವ್ಯತ್ಯಲವಿಷ್ಯತ ॥

ಕರ್ಮವ್ಯತಿಹಾರದಲ್ಲಿ ಆತ್ಮನೇಪದ ನಿಷೇಧ ಹೇಳುವ ಸೂತ್ರ.

**೭೩೪. ನ ಗತಿಹಿಂಸಾರ್ಥೇಭ್ಯಃ ॥ ೧-೩-೧೫ ॥**

**ವ್ಯತಿಗಚ್ಛತಿ । ವ್ಯತಿಘ್ನನ್ತಿ ॥**

ದ್ವಿಪದ ಸೂತ್ರ. ಸೂತ್ರಾರ್ಥ—ಗತಿ ಮತ್ತು ಹಿಂಸಾರ್ಥವನ್ನು ಹೇಳುವ ಧಾತುಗಳ ಮೇಲೆ ಕರ್ಮವ್ಯತಿಹಾರ ತೋರುತ್ತಿದ್ದರೂ ಆತ್ಮನೇಪದಪ್ರತ್ಯಯ ಬರುವುದಿಲ್ಲ. ಪೂರ್ವಸೂತ್ರದಿಂದ ಪ್ರಾಪ್ತವಾದರೆ ಅದಕ್ಕೆ ಇದು ನಿಷೇಧ. ವ್ಯತಿಗಚ್ಛತಿ. ಗತ್ಯರ್ಥಕ ಧಾತು. ಒಬ್ಬನು ಹೋಗಬೇಕಾದಾಗ ಅವನ ಬದಲಾಗಿ ಇನ್ನೊಬ್ಬನು ಹೋಗುತ್ತಾನೆ ಎಂದರ್ಥ. ವ್ಯತಿಘ್ನನ್ತಿ. ಹನ ಧಾತು. ಹಿಂಸಾರ್ಥಕವಾದುದರಿಂದ ಕ್ರಿಯಾವಿನಿಮಯ ತೋರುತ್ತಿದ್ದರೂ ಆತ್ಮನೇಪದ ಬರುವುದಿಲ್ಲ.

ವಿಶ್ ಧಾತುವಿಗೆ ಆತ್ಮನೇಪದ ಹೇಳುವ ಸೂತ್ರ.

**೭೩೫. ನೇರ್ವಿಶಃ ॥ ೧-೩-೧೭ ॥ ನಿವಿಶತೇ ॥**

ನೇಃ, ವಿಶಃ ॥ ದ್ವಿಪದ ಸೂತ್ರ. ನೇಃ ಪಂಚಮೀ. ನಿ ಉಪಸರ್ಗದ ಪರದಲ್ಲಿರುವ ವಿಶ್ ಧಾತುವಿಗೆ ಆತ್ಮನೇಪದ ಪ್ರತ್ಯಯ ಬರುತ್ತದೆ. ವಿಶ ಧಾತು ಪರಸ್ಮೈಪದೀ. ನಿ ಇರುವಾಗ ಆತ್ಮನೇಪದಿಯಾಗುತ್ತದೆ. ನಿವಿಶತೇ ಉದಾಹರಣೆ. ಲಙ್ ॥ ನ್ಯವಿಶತ ಇತ್ಯಾದಿ.

ಕ್ರೀಞ್‌ಗೆ ಆತ್ಮನೇಪದ ಹೇಳುವ ಸೂತ್ರ.

**೭೩೬. ಪರಿವ್ಯವೇಭ್ಯಃ ಕ್ರಿಯಃ ॥ ೧-೩-೧೮ ॥**

**ಪರಿಕ್ರೀಣೀತೇ । ವಿಕ್ರೀಣೀತೇ । ಅವಕ್ರೀಣೀತೇ ॥**

ದ್ವಿಪದ ಸೂತ್ರ. ಆತ್ಮನೇಪದಪ್ರಕರಣವಾದುದರಿಂದ 'ಶೇಷಾತ್ ಕರ್ತರಿ ಪರಸ್ಮೈಪದಮ್' ಸೂತ್ರದವರೆಗೆ 'ಆತ್ಮನೇಪದಮ್' ಎಂಬುದಕ್ಕೆ ಅನುವೃತ್ತಿ.

ಸೂತ್ರಾರ್ಥ—ಸುಲಭವಾದುದರಿಂದ ವೃತ್ತಿ ಬರೆದಿಲ್ಲ. ಪರಿ, ವಿ ಅವ ಈ ಮೂರು ಉಪಸರ್ಗಗಳ ಪರದಲ್ಲಿರುವ ಕ್ರೀಞ್ ಧಾತುವಿಗೆ ಆತ್ಮನೇಪದಪ್ರತ್ಯಯ ಬರುತ್ತದೆ. ಇಲ್ಲಿಯೂ ಞಿತ್ತಾದುದರಿಂದ ಆತ್ಮನೇಪದ ಪ್ರಾಪ್ತವಾದರೂ ಈ ಉಪಸರ್ಗಗಳು ಇರುವಾಗ ಪಾಕ್ಷಿಕವಾದ ಪರಸ್ಮೈಪದವೂ ಬರುವುದಿಲ್ಲವೆಂದರ್ಥ. ಪರಿಕ್ರೀಣೀತೇ । ವಿಕ್ರೀಣೀತೇ । ಅವಕ್ರೀಣೀತೇ । ಇತ್ಯಾದಿ ಉದಾಹರಣೆಗಳು. ದಶಲಕಾರಗಳಲ್ಲಿಯೂ ಆತ್ಮನೇಪದಿಯ ರೂಪಗಳನ್ನು ಊಹಿಸಿ ತಿಳಿದುಕೊಳ್ಳಬೇಕು.

ಜಿ ಧಾತುವಿಗೆ ಆತ್ಮನೇಪದ ಹೇಳುವ ಸೂತ್ರ.

**೭೩೭. ವಿಪರಾಭ್ಯಾಂ ಜೇಃ ॥೧-೩-೧೯॥**

**ವಿಜಯತೇ । ಪರಾಜಯತೇ ॥**

ದ್ವಿಪದ ಸೂತ್ರ. ವಿ, ಪರಾ ಉಪಸರ್ಗಗಳ ಪರದಲ್ಲಿರುವ ಜಿ ಧಾತುವಿಗೆ ಆತ್ಮನೇಪದ ಬರುತ್ತದೆ. ಜಿ ಜಯೇ ಧಾತು. ವಿಜಯತೇ, ಪರಾಜಯತೇ ॥ ಉತ್ಕೃಷ್ಟನಾಗುತ್ತಾನೆ, ನಿಕೃಷ್ಟನಾಗುತ್ತಾನೆ ಎಂದರ್ಥ.

ಸ್ಥಾ ಧಾತುವಿಗೆ ಆತ್ಮನೇಪದ ಹೇಳುವ ಸೂತ್ರ.

**೭೩೮. ಸಮವಪ್ರವಿಭ್ಯಃ ಸ್ಥಃ ॥೧-೧-೨೨॥**

**ಸಂತಿಷ್ಠತೇ । ಅವತಿಷ್ಠತೇ । ಪ್ರತಿಷ್ಠತೇ । ವಿತಿಷ್ಠತೇ ॥**

ದ್ವಿಪದ ಸೂತ್ರ. ಸಮ್, ಅವ, ಪ್ರ, ವಿ ಈ ನಾಲ್ಕು ಉಪಸರ್ಗಗಳ ಪರದಲ್ಲಿರುವ ಸ್ಥಾ ಧಾತುವಿಗೆ ಆತ್ಮನೇಪದ ಬರುತ್ತದೆ. ಉದಾಹರಣೆಗೆ—ಸಂತಿಷ್ಠತೇ । ಅವತಿಷ್ಠತೇ, ಪ್ರತಿಷ್ಠತೇ । ವಿತಿಷ್ಠತೇ । 'ಪಾಘ್ರಾಧ್ಮಾ—' ಸೂತ್ರದಿಂದ ಸ್ಥಾ ಧಾತುವಿಗೆ ಸಾರ್ವಧಾತುಕದಲ್ಲಿ ತಿಷ್ಠ ಆದೇಶ ಹೇಳಿದೆ.

ಜ್ಞಾ ಧಾತುವಿಗೆ ಆತ್ಮನೇಪದ ಹೇಳುವ ಸೂತ್ರ.

**೭೧೯. ಅಪಹ್ನವೇ ಜ್ಞಃ ॥೧-೧-೪೪॥**

**ಶತಮುಪಜಾನೀತೇ । ಅಪಲಪತೀತ್ಯರ್ಥಃ॥**

ದ್ವಿಪದ ಸೂತ್ರ. ಜ್ಞಾ ಧಾತುವಿನ ಪಂಚಮೀ ಜ್ಞಃ ಎಂದಾಗಿದೆ. **ಸೂತ್ರಾರ್ಥ**—ಅಪಲಾಪ ಎಂಬ ಅರ್ಥ ತೋರುವಾಗ ಜ್ಞಾ ಧಾತುವಿಗೆ ಆತ್ಮನೇಪದ ಬರುತ್ತದೆ. ಉದಾ.—ಶತಮುಪಜಾನೀತೇ ॥ ನೂರನ್ನು ಮರೆಮಾಚುತ್ತಾನೆ. ಅಪ ಉಪಸರ್ಗ ಸಂಬಂಧವಿರುವಾಗ ಜ್ಞಾಧಾತುವಿಗೆ ಅಪಲಾಪ ಅರ್ಥ ತೋರುತ್ತದೆ. ಉಭಯಪದಿ

ಗಳಾದ ಧಾತುಗಳಿಗೆ ಆತ್ಮನೇಪದವಿಧಾನದಿಂದ ಪರಸ್ಮೈಪದವ್ಯಾವೃತ್ತಿಯೇ ಪ್ರಯೋಜನವೆಂದು ತಿಳಿಯಬೇಕು.

ಅಕರ್ಮಕವಾದಾಗ ಜ್ಞಾ ಧಾತುವಿಗೆ ಆತ್ಮನೇಪದ ಹೇಳುವ ಸೂತ್ರ.

೭೪೦. ಅಕರ್ಮಕಾಚ್ಚ ||೧-೧-೪೫ ||

ಸರ್ಪಿಷೋ ಜಾನೀತೇ । ಸರ್ಪಿಷೋಪಾಯೇನ ಪ್ರವರ್ತತ ಇತ್ಯರ್ಥಃ ||

ಅಕರ್ಮಕಾತ್, ಚ || ದ್ವಿಪದ ಸೂತ್ರ. 'ಜ್ಞ'ಃ, 'ಆತ್ಮನೇಪದಮ್' ಅನುವೃತ್ತಿ. ಅಕರ್ಮಕವಾದ ಜ್ಞಾ ಧಾತುವಿಗೆ ಆತ್ಮನೇಪದ ಬರುತ್ತದೆ. ಸರ್ಪಿಷೋ ಜಾನೀತೇ || ತುಪ್ಪದ ನೆಪದಿಂದ ಪ್ರವರ್ತಿಸುತ್ತಾನೆ. ಜ್ಞಾ ಧಾತುವಿಗೆ ಪ್ರವೃತ್ತಿ ಅರ್ಥ ಇಲ್ಲಿ ತೋರುವುದರಿಂದ ಅಕರ್ಮಕವಾಗಿದೆ. ಸಕರ್ಮಕವಾದ ಧಾತುವು ಅರ್ಥಾಂತರದಲ್ಲಿ ಅಕರ್ಮಕವಾಗುವುದೆಂದು ಹೇಳಿದೆ.

ಚರ್ ಧಾತುವಿಗೆ ಆತ್ಮನೇಪದ ಹೇಳುವ ಸೂತ್ರ.

೭೪೧. ಉದಶ್ಚರಃ ಸಕರ್ಮಕಾತ್ ||೧-೧-೬೧ ||

ಧರ್ಮಮುಚ್ಚರತೇ । ಉಲ್ಲಙ್ಘ್ಯ ಗಚ್ಛತೀತ್ಯರ್ಥಃ ||

ಉದಃ, ಚರಃ, ಸಕರ್ಮಕಾತ್ || ತ್ರಿಪದ ಸೂತ್ರ. ಉತ್ ಉಪಸರ್ಗದಿಂದ ಕೂಡಿದ ಚರ್ ಧಾತುವು ಸಕರ್ಮಕವಾಗಿರುವಾಗ ಆತ್ಮನೇಪದವನ್ನು ಹೊಂದುತ್ತದೆ. ಧರ್ಮಂ ಉಚ್ಚರತೇ || ಸಕರ್ಮಕವೆಂದು ಸ್ಪಷ್ಟಪಡಿಸಲು ಧರ್ಮಂ ಎಂದಿರುತ್ತಾನೆ. ಧರ್ಮವನ್ನು ಮೀರಿ ನಡೆಯುತ್ತಾನೆ. ಎಂದರ್ಥ. ಬಾಷ್ಪಮುಚ್ಚರತಿ || ಹವೆಯು ಮೇಲಕ್ಕೆ ಹೋಗುತ್ತದೆ. ಇಲ್ಲಿ ಅಕರ್ಮಕವಾದುದರಿಂದ ಆತ್ಮನೇಪದ ಬರುವುದಿಲ್ಲ.

ಅರ್ಥವಿಶೇಷದಲ್ಲಿ ಚರಿಗೆ ಆತ್ಮನೇಪದ ಹೇಳುವ ಸೂತ್ರ.

೭೪೨. ಸಮಸ್ತೃತೀಯಾಯುಕ್ತಾತ್ ||೧-೩-೫೪ ||

ರಥೇನ ಸಞ್ಚರತೇ ||

ಸಮಃ, ತೃತೀಯಾಯುಕ್ತಾತ್ || ದ್ವಿಪದ ಸೂತ್ರ. ಸಮ್ ಉಪಸರ್ಗ ಪೂರ್ವಕವಾದ ಚರ್ ಧಾತುವು ತೃತೀಯಾಂತಪದದಿಂದ ಕೂಡಿರುವಾಗ ಆತ್ಮನೇಪದವನ್ನು ಹೊಂದುತ್ತದೆ. ರಥೇನ ಸಂಚರತೇ || ಇಲ್ಲಿ ತೃತೀಯಾಂತಪದಸಮಭಿವ್ಯಾಹಾರ ಇದೆ. ಆದುದರಿಂದ ಆತ್ಮನೇಪದ ಬಂದಿದೆ. ಹಾಗಿಲ್ಲವಾದರೆ ಆತ್ಮನೇಪದ ಬರುವುದಿಲ್ಲ. ರಥಿಕಾಃ ಸಂಚರಂತಿ || ಪ್ರಥಮಾಂತವಿರುವುದರಿಂದ ಪರಸ್ಮೈಪದ ಬಂದಿದೆ.

ದಾಣ್ ಧಾತುವಿಗೆ ಆತ್ಮನೇಪದ ಹೇಳುವ ಸೂತ್ರ.

**೭೪೩. ದಾಣಶ್ಚ ಸಾ ಚೇಚ್ಚತುರ್ಥ್ಯರ್ಥೇ || ೧.೩-೫೫ ||**

**ಸಮುಪೂರ್ವಾದ್ದಾಣಸ್ತೃತೀಯಾನ್ತೇನ ಯುಕ್ತಾದುಕ್ತಂ ಸ್ಯಾತ್, ತೃತೀಯಾ ಚೇಚ್ಚತುರ್ಥ್ಯರ್ಥೇ || ದಾಸ್ಯಾ ಸಂಯಚ್ಛತೇ ಕಾಮೀ ||**

ದಾಣಃ, ಚ, ಸಾ, ಚೇತ್, ಚತುರ್ಥ್ಯರ್ಥೇ || ಪಂಚಪದ ಸೂತ್ರ. ಸಮ್ ಉಪಸರ್ಗಪೂರ್ವಕವಾದ ದಾಣ್ ಧಾತುವಿಗೆ ತೃತೀಯಾನ್ತಪದಸಮಭಿವ್ಯಾಹಾರ ಇರುವಾಗ ಆತ್ಮನೇಪದ ಬರುತ್ತದೆ; ಆ ತೃತೀಯಾವಿಭಕ್ತಿಯು ಚತುರ್ಥ್ಯರ್ಥದಲ್ಲಿ ಬಂದಿರಬೇಕು. ಇಲ್ಲವಾದರೆ ಸ್ವಾಭಾವಿಕವಾದರೆ ಇಲ್ಲ. ದಾಸ್ಯಾ ಸಂಯಚ್ಛತೇ ಕಾಮೀ || 'ಪಾಘ್ರಾಧ್ಮಾ—' ಸೂತ್ರದಿಂದ ದಾಣಿಗೆ ಯಚ್ಛ ಆದೇಶ ಬಂದಿದೆ. ಇಲ್ಲಿ ದಾಸ್ಯಾಯ್ಯೈ (ದಾಸಿಗೋಸ್ಕರ) ಎಂಬ ಚತುರ್ಥ್ಯರ್ಥದಲ್ಲಿ 'ಅಶಿಷ್ಟವ್ಯವಹಾರೇ ದಾಣಃ ಪ್ರಯೋಗೇ ಚತುರ್ಥ್ಯರ್ಥೇ ತೃತೀಯಾ ವಾಚ್ಯಾ' ಎಂಬ ವಾರ್ತಿಕದಿಂದ ತೃತೀಯಾ ಬಂದಿದೆ. ದುಷ್ಟರ ವ್ಯವಹಾರ ತೋರುವಾಗ ದಾಣ್ ಧಾತು ಪ್ರಯೋಗ ವಿರುವಾಗ ಚತುರ್ಥ್ಯರ್ಥದಲ್ಲಿ ತೃತೀಯಾವಿಭಕ್ತಿ ಬರುತ್ತದೆ ಎಂದರ್ಥ.

ಸನ್ನಂತಕ್ಕೆ ಆತ್ಮನೇಪದ ಹೇಳುವ ಸೂತ್ರ.

**೭೪೪. ಪೂರ್ವವತ್ಸನಃ || ೧.೩-೬೨ ||**

**ಸನಃ ಪೂರ್ವೋ ಯೋ ಧಾತುಸ್ತೇನ ತುಲ್ಯಂ ಸನ್ನನ್ತಾದಪಿ ಆತ್ಮನೇ ಪದಂ ಸ್ಯಾತ್ । ಏದಿಧಿಷತೇ ||**

ಪೂರ್ವವತ್, ಸನಃ || ದ್ವಿಪದ ಸೂತ್ರ. ಪೂರ್ವೇಣ ಇವ ಪೂರ್ವವತ್ । ಸನಿನ ಪೂರ್ವವೆಂದರೆ ಸನ್ ಪ್ರಕೃತಿಭೂತವಾದ ಧಾತುವೆಂದರ್ಥ. **ಸೂತ್ರಾರ್ಥ**—ಸನಿನ ಪೂರ್ವದಲ್ಲಿ ಯಾವ ಧಾತುವಿವೆಯೋ ಅದು ಯಾವ ಪದವನ್ನು ಹೊಂದುತ್ತದೆಯೋ ಅದರಂತೇ ಸನ್ನಂತವೂ ಹೊಂದುತ್ತದೆ. ಸನ್ ಪ್ರಕೃತಿ ಆತ್ಮನೇಪದಿಯಾದರೆ ಸನ್ನಂತವೂ ಆತ್ಮನೇಪದಿಯಾಗುತ್ತದೆ. ಏದಿಧಿಷತೇ । ಏಧ ಧಾತುವಿನ ಮೇಲೆ ಸನ್ ಬಂದರೆ ಏದಿಧಿಷ ಎಂದಾಗುತ್ತದೆ. ಸನ್ ಪ್ರಕೃತಿಯಾದ ಏಧ ಧಾತುವು ಆತ್ಮನೇಪದವನ್ನು ಹೊಂದುವುದರಿಂದ ಏದಿಧಿಷ ಎಂಬ ಸನ್ನಂತವೂ ಆತ್ಮನೇಪದವನ್ನು ಹೊಂದುತ್ತದೆ. ವಿಶ್ ಧಾತು. ಪರಸ್ಮೈಪದೀ. ನಿ ಉಪಸರ್ಗ ಸೇರಿದರೆ 'ನೇರ್ವಿಶಃ' ಸೂತ್ರದಿಂದ ಆತ್ಮನೇಪದಿಯಾಗುತ್ತದೆ. ನಿವಿಶ್ ಎಂಬುದರ ಮೇಲೆ ಸನ್ ಬಂದರೆ ನಿವಿವಿಕ್ಷ ಎಂದಾಗುತ್ತದೆ. ನಿವಿವಿಕ್ಷ ಎಂಬುದರ ಮೇಲೆ ಆತ್ಮನೇಪದ ಪ್ರತ್ಯಯವೇ ಬರುತ್ತದೆ. ವಿಶ್ ಪರಸ್ಮೈಪದಿಯಾದರೂ ನಿವಿಶ್ ಆತ್ಮನೇಪದಿಯಾದುದರಿಂದ ಅದರ ಮೇಲೆ ಸನ್ ಬಂದುದರಿಂದ ಆತ್ಮನೇಪದವೇ ಬರುತ್ತದೆ. ಇಲ್ಲಿ ನಿವಿವಿಶ್ + ಸ ಎಂದಿರುವಾಗ

ಸನ್ ನಿಮಿತ್ತೀಕರಿಸಿ ಲಘೂಪಧಗುಣ ಏಕೆ ಬರಲಿಲ್ಲ/ಎಂಬ ಶಂಕೆ ಬಂದರೆ 'ಕ್ಙಿತಿ ಚ' ಸೂತ್ರದಿಂದ ನಿಷೇಧ ಬಂದಿದೆ ಎಂದು ಸೂಚಿಸಲು ಸನಿಗೆ ಕಿತ್ತ್ವ ಹೇಳುತ್ತಾನೆ.

ಸನಿಗೆ ಕಿದ್ವದ್ಭಾವವನ್ನು ಹೇಳುವ ಸೂತ್ರ.

೭೪೫. ಹಲನ್ತಾಚ್ಚ || ೧-೨-೧೦ ||

ಇಕ್ಸಮೀಪಾದ್ಧಲಃ ಪರೋ ಝಲಾದಿಃ ಸನ್ ಕಿತ್ || ನಿವಿವಿಕ್ಷತೇ ||

ಹಲನ್ತಾತ್, ಚ || ದ್ವಿಪದ ಸೂತ್ರ. 'ಅಸಂಯೋಗಾತ್—' ಸೂತ್ರದಿಂದ 'ಕಿತ್', 'ರುದವಿದ—' ಸೂತ್ರದಿಂದ 'ಸನ್' ಪದಗಳು ಅನುವೃತ್ತವಾಗುತ್ತವೆ. 'ಇಕೋ ಝಲ್' ಸೂತ್ರಾನುವೃತ್ತಿ. ಹಲ್ ಲುಪ್ತ ಪಂಚಮೀಕಪದ. ಅನ್ತಶಬ್ದಕ್ಕೆ ಸಮೀಪ ಎಂದರ್ಥ. ಸೂತ್ರಾರ್ಥ—ಇಕಿನ ಸಮೀಪದಲ್ಲಿರುವ ಹಲಿನ ಪರದಲ್ಲಿರುವ ಝಲಾದಿಯಾದ ಸನ್ ಕಿತ್ತಾಗುತ್ತದೆ. ನಿವಿವಿಶ್ + ಸ ಎಂದಿರುವಾಗ ಇಕ್ ಕೊನೆಯ ವಕಾರದ ಮೇಲಿರುವ ಇಕಾರ. ಅದರ ಪರದಲ್ಲಿರುವ ಹಲ್ ಶಕಾರ. ಅದರ ಪರದಲ್ಲಿ ಸನ್ ಇರುವುದರಿಂದ ಅದು ಕಿತ್. ಆದುದರಿಂದ ವಿಶ್ ಎಂಬಲ್ಲಿ ಗುಣ ಬಂದಿಲ್ಲ. 'ವ್ರಶ್ಚಭ್ರಸ್ಜ...' ಸೂತ್ರದಿಂದ ಶಕಾರಕ್ಕೆ ಷತ್ವ. ನಿವಿವಿಷ್ + ಸ. 'ಷಢೋಃ ಕಃ ಸಿ' ಸೂತ್ರದಿಂದ ಷಕಾರಕ್ಕೆ ಕಕಾರಾದೇಶ. 'ಆದೇಶಪ್ರತ್ಯಯಯೋಃ' ಸೂತ್ರದಿಂದ ಷತ್ವ. 'ಕಷಯೋಗೇ ಕ್ಷಃ' ನಿವಿವಿಕ್ಷತೇ ರೂಪಸಿದ್ಧಿಯಾಗುತ್ತದೆ.

ಕೃಞ್ ಧಾತುವಿಗೆ ಆತ್ಮನೇಪದ ಹೇಳುವ ಸೂತ್ರ.

೭೪೬. ಗಂಧನಾವಕ್ಷೇಪಣಸೇವನಸಾಹಸಿಕ್ಯಪ್ರತಿಯತ್ನಪ್ರಕಥನೋಪ- ಯೋಗೇಷು ಕೃಞಃ || ೧-೩-೩೨ ||

ಗಂಧನಂ ಸೂಚನಮ್ | ಉತ್ಕುರುತೇ | ಸೂಚಯತೀತ್ಯರ್ಥಃ | ಅವಕ್ಷೇಪಣಂ ಭರ್ತ್ಸನಮ್ | ಶ್ಯೇನೋ ವರ್ತಿಕಾಮುತ್ಕುರುತೇ | ಭರ್ತ್ಸಯತೀತ್ಯರ್ಥಃ | ಹರಿಮುಪಕುರುತೇ | ಸೇವತ ಇತ್ಯರ್ಥಃ ಪರದಾರಾನ್ ಪ್ರಕುರುತೇ | ತೇಷು ಸಹಸಾ ಪ್ರವರ್ತತೇ ಏಧೋ ದಕಸ್ಯೋಪಸ್ಕುರುತೇ | ಗುಣಮಾಧತ್ತೇ | ಕಥಾಃ ಪ್ರಕುರುತೇ | ಪ್ರಕಥಯತೀತ್ಯರ್ಥಃ | ಶತಂ ಪ್ರಕುರುತೇ | ಧರ್ಮಾರ್ಥಂ ವಿನಿಯುಙ್ಕ್ತೇ | ಏಷು ಕಿಮ್ ? ಕಟಂ ಕರೋತಿ ||

ದ್ವಿಪದ ಸೂತ್ರ. ಗಂಧನ, ಅವಕ್ಷೇಪಣ, ಸೇವನ, ಸಾಹಸಿಕ್ಯ, ಪ್ರತಿಯತ್ನ, ಪ್ರಕಥನ, ಉಪಯೋಗ—ಈ ಏಳು ಅರ್ಥಗಳಲ್ಲಿ ಕೃಞ್ ಧಾತುವಿಗೆ ಆತ್ಮನೇಪದ ಬರುತ್ತದೆ. ಪ್ರತಿಯೊಂದು ಪದಕ್ಕೂ ಅರ್ಥವನ್ನು ವೃತ್ತಿಯಲ್ಲಿ ಬರೆದಿರುತ್ತಾನೆ. ಧಾತುಗಳಿಗೆ ಅನೇಕಾರ್ಥವಿದ್ದರೂ ಉಪಸರ್ಗಗಳಿಂದ ಅವು ಸ್ಪಷ್ಟವಾಗಿ ತೋರುತ್ತವೆ. ಅದಕ್ಕೋಸ್ಕರ ಉಪಸರ್ಗ ಸೇರಿಸಿ ಉದಾಹರಿಸಿರುತ್ತಾನೆ. ಗಂಧನ ಎಂದರೆ ಸೂಚನ. ಸೂಚನವೆಂದರೆ ಇನ್ನೊಬ್ಬರ ದೋಷವನ್ನು ಹೊರಗೆ ಹಾಕುವುದು. ಉತ್ಕುರುತೇ || (=ಇನ್ನೊಬ್ಬರ ದೋಷವನ್ನು ಎತ್ತಿ ತೋರಿಸುತ್ತಾನೆ.) ಅವಕ್ಷೇಪಣವೆಂದರೆ ಗದರಿಸುವುದು. ಶ್ಯೇನಃ ವರ್ತಿಕಾಮುತ್ಕುರುತೇ || (—ಗಿಡುಗವು ಪಾರಿವಾಳವನ್ನು ಹೆದರಿಸುತ್ತದೆ.) ಸೇವನ ಪ್ರಸಿದ್ಧವಾಗಿದೆ. ಹರಿಮುಪಕುರುತೇ || (=ಹರಿಯನ್ನು ಸೇವಿಸುತ್ತಾನೆ.)ಸಾಹಸಿಕ್ಯವೆಂದರೆ ಬಲಾತ್ಕಾರದಿಂದ ವಶಮಾಡಿಕೊಳ್ಳುವುದು. ಪರದಾರಾನ್ ಪ್ರಕುರುತೇ || (=ಇನ್ನೊಬ್ಬರ ಹೆಂಡರನ್ನು ಬಲಾತ್ಕಾರದಿಂದ ತನ್ನ ವಶಮಾಡಿಕೊಳ್ಳುತ್ತಾನೆ.) ಪ್ರತಿಯತ್ನವೆಂದರೆ ಇಲ್ಲದಿರುವ ಗುಣವನ್ನುಂಟುಮಾಡುವುದು. ಏಧಃ ದಕಸ್ಯ ಉಪಸ್ಕುರುತೇ || (ಕಟ್ಟಿಗೆಯು ನೀರಿಗೆ ಬಿಸಿಗುಣವನ್ನುಂಟುಮಾಡುತ್ತದೆ.) ಪ್ರಕಥನ—ಚೆನ್ನಾಗಿ ಹೇಳುವುದು. ಕಥಾಃ ಪ್ರಕುರುತೇ || (—ಕಥೆಗಳನ್ನು ಚನ್ನಾಗಿ ಹೇಳುತ್ತಾನೆ.) ಉಪಯೋಗವೆಂದರೆ ಧರ್ಮ ಮುಂತಾದವುಗಳಿಗೆ ಮಾಡುವ ಹಣದ ವಿನಿಯೋಗ. ಶತಂ ಪ್ರಕುರುತೇ|| (—ಧರ್ಮಕಾರ್ಯಕ್ಕೋಸ್ಕರ ನೂರು ರೂಪಾಯಿಗಳನ್ನು ವಿನಿಯೋಗಿಸುತ್ತಾನೆ.) ಇನ್ನು ಇತರಾರ್ಥದಲ್ಲಿ ಆತ್ಮನೇಪದ ನಿಯಮವಿಲ್ಲ. ಕಟಂ ಕರೋತಿ || (—ಚಾಪೆ ಮಾಡುತ್ತಾನೆ.) ಕೇವಲ ಧಾತ್ವರ್ಥ ತೋರುತ್ತದೆ. ಆದುದರಿಂದ ಪರಸ್ಮೈಪದ ಬಂದಿದೆ. ವಿಕಲ್ಪವಾಗಿ ಆತ್ಮನೇಪದವೂ ಞಿತ್ತಾದುದರಿಂದ ಬರಬಹುದು; ಆದರೆ ನಿಯಮವಿಲ್ಲ.

ಭುಜ್ ಧಾತುವಿಗೆ ಆತ್ಮನೇಪದ ಹೇಳುವ ಸೂತ್ರ.

**೭೪೭. ಭುಜೋಽನವನೇ || ೧-೩-೬೬||**

**ಓದನಂ ಭುಙ್ಕ್ತೇ | ಅನವನೇ ಕಿಮ್ ? ಮಹೀಂ ಭುನಕ್ತಿ ||**

ಇತ್ಯಾತ್ಮನೇಪದಪ್ರಕ್ರಿಯಾ

ಈ ಸೂತ್ರವು ರುಧಾದಿಗಣದಲ್ಲಿ ವ್ಯಾಖ್ಯಾತವಾಗಿದೆ (ಸೂ. ೬೭೪). ಆತ್ಮನೇಪದಪ್ರಕರಣವಾದುದರಿಂದ ಇಲ್ಲಿ ಪುನಃ ಹೇಳಿರುತ್ತಾನೆ. ಭುಜ್ ಧಾತುವಿಗೆ ಎರಡರ್ಥವಿದೆ: ರಕ್ಷಣೆ, ತಿನ್ನುವುದು. ರಕ್ಷಣೆಯಲ್ಲಿ ಆತ್ಮನೇಪದವಿಲ್ಲ. ತಿನ್ನುವುದೆಂಬರ್ಥದಲ್ಲಿ ಮಾತ್ರ ಆತ್ಮನೇಪದವನ್ನು ಹೇಳಬೇಕು.

# ೮. ಅಥಪರಸ್ಮೈಪದಪ್ರಕ್ರಿಯಾ

ಕೃಞಿಗೆ ಪರಸ್ಮೈಪದ ಹೇಳುವ ಸೂತ್ರ.

**೭೪೮. ಅನುಪರಾಭ್ಯಾಂ ಕೃಞಃ ||೧-೩-೭೯||**

**ಕರ್ತೃಗೇ ಚ ಫಲೇ ಗನ್ಧನಾದೌ ಚ ಪರಸ್ಮೈಪದಂ ಸ್ಯಾತ್ || ಅನುಕರೋತಿ । ಪರಾಕರೋತಿ ||**

ಪರಸ್ಮೈಪದ ಪ್ರತ್ಯಯಗಳನ್ನು ಧಾತುಗಳಿಗೆ ನಿಯಮಿಸಲು ಈ ಪ್ರಕರಣ ಆರಂಭಿಸಿವೆ. 'ಶೇಷಾತ್ ಕರ್ತರಿ ಪರಸ್ಮೈಪದಮ್' ಎಂಬುದೇ ಮೊದಲನೆಯ ಸೂತ್ರ. ಆತ್ಮನೇಪದನಿಮಿತ್ತವಿಲ್ಲದಿರುವಾಗ ಪರಸ್ಮೈಪದ ಬರುತ್ತದೆಯೆಂದು ಸಾಮಾನ್ಯವಾಗಿ ಹೇಳಿದೆ. ಈಗ ವಿಶೇಷ ನಿಯಮವನ್ನು ಹೇಳುತ್ತಾನೆ. ಕೃಞ್ ಧಾತುವು ಞಿತ್ತಾದುದರಿಂದ ಉಭಯಪದಿಯಾಗಿರುತ್ತದೆ. ಈ ಸೂತ್ರದಿಂದ ಕೇವಲ ಪರಸ್ಮೈಪದವನ್ನು ಹೇಳುತ್ತಾನೆ. ದ್ವಿಪದ ಸೂತ್ರ. 'ಪರಸ್ಮೈಪದಮ್' ಅನುವೃತ್ತಿ. **ಸೂತ್ರಾರ್ಥ—** ಅನು, ಪರಾ, ಉಪಸರ್ಗಗಳ ಪರದಲ್ಲಿರುವ ಕೃಞ್ ಧಾತುವಿಗೆ ಫಲವು ಕರ್ತೃಗಾಮಿಯಾದರೂ, ಗಂಧನಾದಿ ಅರ್ಥತೋರಿದರೂ ಪರಸ್ಮೈಪದವೇ ಬರುತ್ತದೆ. ಗಂಧನಾದ್ಯರ್ಥದಲ್ಲಿ 'ಗನ್ಧನಾವಕ್ಷೇಪಣ—' ಸೂತ್ರದಿಂದ ಆತ್ಮನೇಪದ ಹೇಳಿದೆ. ಧಾತ್ವರ್ಥಫಲ ಕರ್ತೃಗಾಮಿಯಾದಾಗಲೂ ಆತ್ಮನೇಪದ ಹೇಳಿದೆ. ಈ ಎರಡು ಉಪಸರ್ಗವಿರುವಾಗ ಆನೆರಡು ವಿಷಯಗಳಲ್ಲಿಯೂ ಪರಸ್ಮೈಪದವೇ ಬರುತ್ತದೆ. ಅನುಕರೋತಿ । ಪರಾಕರೋತಿ । ಇಲ್ಲಿ ಫಲ ಕರ್ತೃಗಾಮಿಯಾದರೂ ಪರಸ್ಮೈಪದ ಬಂದಿದೆ.

ಕ್ಷಿಪ್ ಧಾತುವಿಗೆ ಪರಸ್ಮೈಪದ ಹೇಳುವ ಸೂತ್ರ.

**೭೪೯. ಅಭಿಪ್ರತ್ಯತಿಭ್ಯಃ ಕ್ಷಿಪಃ || ೧-೩-೮೦ ||**

**ಕ್ಷಿಪ— ಪ್ರೇರಣೇ । ಸ್ವರಿತೇತ್ । ಅಭಿಕ್ಷಿಪತಿ ||**

ದ್ವಿಪದ ಸೂತ್ರ ಅಭಿ, ಪ್ರತಿ, ಅತಿ—ಈ ಮೂರು ಉಪಸರ್ಗಗಳ ಪರದಲ್ಲಿ ಇರುವ ಕ್ಷಿಪ್ ಧಾತುವಿಗೆ ಪರಸ್ಮೈಪದ ಬರುತ್ತದೆ. ಕ್ಷಿಪ ಧಾತು ಸ್ವರಿತೇತ್ತಾದುದರಿಂದ ಫಲ ಪರಿಗಾಮಿಯಾದಾಗ ಮಾತ್ರ ಪರಸ್ಮೈಪದ ಹೊಂದುತ್ತಿತ್ತು. ಈಗ ಈ ಉಪಸರ್ಗಗಳಿರುವಾಗ ಫಲ ಆತ್ಮಗಾಮಿಯಾದರೂ ಪರಸ್ಮೈಪದವೇ ಬರುತ್ತದೆ. ಅಭಿಕ್ಷಿಪತಿ । ಪ್ರತಿಕ್ಷಿಪತಿ, ಅತಿಕ್ಷಿಪತಿ ।

ವಹ್ ಧಾತುವಿಗೆ ಪರಸ್ಮೈಪದ ಹೇಳುವ ಸೂತ್ರ.

೭೫೦. ಪ್ರಾದ್ವಹಃ || ೧-೩-೮೧ || ಪ್ರವಹತಿ ||

ಪ್ರಾತ್, ವಹಃ || ದ್ವಿಪದ ಸೂತ್ರ. ಪ್ರ ಉಪಸರ್ಗದ ಪರದಲ್ಲಿರುವ ವಹ್ ಧಾತುವಿಗೆ ಪರಸ್ಮೈಪದ ಬರುತ್ತದೆ. ವಹ್ ಧಾತುವೂ ಸ್ವರಿತೇತ್ತಾದುದರಿಂದ ಹಿಂದಿನಂತೇ ಹೇಳಬೇಕು. ಪ್ರವಹತಿ |

ಮೃಷ್ ಧಾತುವಿಗೆ ಪರಸ್ಮೈಪದ ಹೇಳುವ ಸೂತ್ರ.

೭೫೧. ಪರೇರ್ಮೃಷಃ || ೧-೩-೮೨ || ಪರಿಮೃಷ್ಯತಿ ||

ಪರೇಃ, ಮೃಷಃ || ದ್ವಿಪದ ಸೂತ್ರ. ಪರಿ ಉಪಸರ್ಗದ ಪರದಲ್ಲಿರುವ ಮೃಷ್ ಧಾತುವಿಗೆ ಪರಸ್ಮೈಪದ ಬರುತ್ತದೆ. ಮೃಷ—ತಿತಿಕ್ಷಾಯಾಮ್, ಧಾತು. ದಿವಾದಿಯಲ್ಲಿ ಹೇಳಿದ ಈ ಧಾತುವು ಸ್ವರಿತೇತ್ತಾದುದರಿಂದ ಉಭಯಪದಿಯಾಗುವಾಗ ಇಲ್ಲಿ ನಿಯಮಮಾಡಿದೆ. ಪರಿಮೃಷ್ಯತಿ |

ರಮ್ ಧಾತುವಿಗೆ ಪರಸ್ಮೈಪದ ಹೇಳುವ ಸೂತ್ರ.

೭೫೨. ವ್ಯಾಙ್ಪರಿಭ್ಯೋ ರಮಃ ||೧-೩-೮೩ ||

ರಮು—ಕ್ರೀಡಾಯಾಮ್ | ವಿರಮತಿ ||

ದ್ವಿಪದ ಸೂತ್ರ. ವಿ, ಆಙ್, ಪರಿ ಈ ಮೂರು ಉಪಸರ್ಗಗಳ ಪರದಲ್ಲಿರುವ ರಮ್ ಧಾತುವಿಗೆ ಪರಸ್ಮೈಪದ ಬರುತ್ತದೆ. ರಮ್ ಧಾತು ಅನುದಾತ್ತೇತ್ತಾದುದರಿಂದ ಯಾವಾಗಲೂ ಆತ್ಮನೇಪದಿಯಾದರೆ ಈ ಉಪಸರ್ಗಗಳಿರುವಾಗ ಪರಸ್ಮೈಪದಿಯಾಗುತ್ತದೆ. ವಿರಮತಿ | ಆರಮತಿ || ಪರಿರಮತಿ |

ಉಪಸರ್ಗಾಂತರದಲ್ಲಿ ರಮಿಗೆ ಪರಸ್ಮೈಪದ ಹೇಳುವ ಸೂತ್ರ.

೭೫೩. ಉಪಾಚ್ಚ || ೧-೨-೮೪ ||

ಯಜ್ಞದತ್ತಮುಪರಮತಿ | ಉಪರಮಯತೀತ್ಯರ್ಥಃ | ಅಂತರ್ಭಾವಿತಣ್ಯರ್ಥೋಽಯಮ್ |

ಇತಿ ಪರಸ್ಮೈಪದಪ್ರಕ್ರಿಯಾ

ಉಪಾತ್, ಚ || ದ್ವಿಪದ ಸೂತ್ರ. ಉಪ ಉಪಸರ್ಗದ ಪರದಲ್ಲಿರುವ ರಮ್ ಧಾತುವಿಗೆ ಪರಸ್ಮೈಪದ ಬರುತ್ತದೆ. ಹಿಂದಿನ ಸೂತ್ರದಲ್ಲೇ ಇದನ್ನು ಸೇರಿಸಬಹುದಾಗಿತ್ತು. ಆದರೆ ಇದರ ಮುಂದಿನ ಸೂತ್ರದಲ್ಲಿ ಕೇವಲ ಉಪ ಎಂಬುದಕ್ಕೆ ಮಾತ್ರ

ಅನುವೃತ್ತಿ ಸೂಚಿಸಲು ಪ್ರತ್ಯೇಕವಾಗಿ ಹೇಳಿದೆ. ಯಜ್ಞದತ್ತಂ ಉಪರಮತಿ || ಉಪ ಪೂರ್ವಕ ರಮ್ ಧಾತುವಿಗೆ ನಿವೃತ್ತಿ ಅರ್ಥವಾಗುವುದರಿಂದ ಅಕರ್ಮಕವಾಗುತ್ತದೆ. ಅಕರ್ಮಕವಾದಾಗ ಮುಂದಿನ ಸೂತ್ರದಿಂದ (ವಿಭಾಷಾ ಅಕರ್ಮಕಾತ್) ವಿಕಲ್ಪ ಹೇಳುತ್ತಾನೆ. ಆದುದರಿಂದ ಸಕರ್ಮಕದಲ್ಲಿ ಇದಕ್ಕೆ ಉದಾಹರಣೆ ಎಂದು ಸೂಚಿಸಲು ಯಜ್ಞದತ್ತಂ ಎಂದು ಹೇಳಿರುತ್ತಾನೆ. ಅಂತರ್ಭಾವಿತಣ್ಯರ್ಥಕವಾದ ಧಾತುವೆಂದು ಇಲ್ಲಿ ಹೇಳಬೇಕು. 'ಅಂತರ್ಭಾವಿತಃ ಸ್ವಾರ್ಥತ್ವೇನಾಙ್ಗೀಕೃತೋಣ್ಯರ್ಥಃ ಪ್ರಯೋಜಕವ್ಯಾಪಾರೋ ಯೇನ ಸ ಇತ್ಯರ್ಥಃ' ಣಿಚ್ ಬಾರದಿದ್ದರೂ ಣಿಜರ್ಥವನ್ನು (ಪ್ರೇರಣಾ) ತನ್ನ ಧಾತ್ವರ್ಥದಲ್ಲಿಯೇ ಗರ್ಭೀಕರಿಸಿದೆ. ಸಂತೋಷಪಡಿಸುತ್ತಾನೆ. ಎಂದರ್ಥ. ಆಗ ಸಕರ್ಮಕವಾಗುವುದರಿಂದ ಈ ಸೂತ್ರಕ್ಕೆ ಉದಾಹರಣೆಯಾಗುತ್ತದೆ. ಹೀಗೆ ಆಯಾಯ ಧಾತುಗಳಿಗೆ ಆತ್ಮನೇಪದ, ಪರಸ್ಮೈಪದ ವ್ಯವಸ್ಥೆಯನ್ನು ತಿಳಿಯಬೇಕು.

## ೯. ಅಥ ಭಾವಕರ್ಮಪ್ರಕ್ರಿಯಾ

'ಲಃ ಕರ್ಮಣಿ—'(ಸೂ. ೩೭೪) ಸೂತ್ರದಿಂದ ಲಕಾರಕ್ಕೆ ಭಾವ' ಕರ್ಮ, ಕರ್ತೃರೂಪ ಮೂರು ಅರ್ಥಗಳು ಹೇಳಿವೆ. ಇದುವರೆಗೆ ಧಾತುಗಳಮೇಲೆ ಕರ್ತ್ರರ್ಥದಲ್ಲಿ ಲಕಾರಗಳನ್ನು ಹೇಳಿದ್ದಾಯಿತು. ಈಗ ಅಕರ್ಮಕ ಧಾತುಗಳಮೇಲೆ ಭಾವಾರ್ಥದಲ್ಲಿಯೂ, ಸಕರ್ಮಕ ಧಾತುಗಳಮೇಲೆ ಕರ್ಮಾರ್ಥದಲ್ಲಿಯೂ ಲಕಾರವನ್ನು ಹೇಳಲು ಈ ಪ್ರಕರಣ ಆರಂಭವಾಗಿದೆ.

ಭಾವಕರ್ಮಾರ್ಥಗಳಲ್ಲಿ ಲಕಾರಕ್ಕೆ ಆತ್ಮನೇಪದ ಹೇಳುವ ಸೂತ್ರ.

**೭೫೪. ಭಾವಕರ್ಮಣೋಃ || ೧-೩-೧೩ ||**

**ಲಸ್ಯಾತ್ಮನೇಪದಮ್ ||**

ಏಕಪದ ಸೂತ್ರ —'ಆತ್ಮನೇಪದಮ್' ಅನುವೃತ್ತಿ. **ಸೂತ್ರಾರ್ಥ—** ಭಾವಾರ್ಥದಲ್ಲಿಯೂ, ಕರ್ಮಾರ್ಥದಲ್ಲಿಯೂ ಯಾವ ಲಕಾರ ಬಂದಿದೆಯೋ ಅದಕ್ಕೆ ಆತ್ಮನೇಪದಪ್ರತ್ಯಯ ಬರುತ್ತದೆ. ಭಾವವೆಂದರೆ ಕ್ರಿಯೆಯೆಂದು ಮುಂದೆ ಹೇಳುತ್ತಾನೆ. ಕರ್ಮವೆಂದರೆ ಕರ್ಮಕಾರಕ. ಆತ್ಮನೇಪದಪ್ರಕ್ರಿಯೆಯಲ್ಲಿ ಹೇಳಲು ಯೋಗ್ಯವಾದರೂ ಪ್ರಕರಣಸಂಬಂಧಿಯಾದುದರಿಂದ ಈ ಸೂತ್ರವನ್ನು ಇಲ್ಲಿ ಹೇಳಿರುತ್ತಾನೆ. ಭಾವಾರ್ಥದಲ್ಲಿ ಲಕಾರ ಬಂದರೆ ಭೂ+ಲಟ್ ಎಂದಿರುವಾಗ ಲಟಿಗೆ ಆತ್ಮನೇಪದ ಪ್ರತ್ಯಯ ಬಂದರೆ ಭೂ+ತೇ ಎಂದಿರುವಾಗ ಯಕ್ ಪ್ರತ್ಯಯ ಹೇಳುತ್ತಾನೆ.

೭೫೫. ಸಾರ್ವಧಾತುಕೇ ಯಕ್ ॥ ೩.೧.೬೭ ॥

ಧಾತೋರ್ಯಕ್ ಭಾವಕರ್ಮವಾಚಿನಿ ಸಾರ್ವಧಾತುಕೇ ॥ ಭಾವಃ ಕ್ರಿಯಾ ॥ ಸಾ ಚ ಭಾವಾರ್ಥಲಕಾರೇಣಾನೂದ್ಯತೇ । ಯುಷ್ಮದಸ್ಮದ್ಭ್ಯಾಂ ಸಾಮಾನಾಧಿಕರಣ್ಯಾಭಾವಾತ್ ಪ್ರಥಮಃ ಪುರುಷಃ । ತಿಙ್ವಾಚ್ಯ ಕ್ರಿಯಾಯಾ ಅದ್ರವ್ಯರೂಪತ್ವೇನ ದ್ವಿತ್ವಾದ್ಯಪ್ರತೀತೇರ್ನ ದ್ವಿವಚನಾದಿ ಕಿಂತು ಏಕವಚನಮೇವೋತ್ಸರ್ಗತಃ । ತ್ವಯಾ, ಮಯಾ, ಅನ್ಯೈಶ್ಚ ಭೂಯತೇ । ಬಭೂವೇ ॥

ದ್ವಿಪದ ಸೂತ್ರ. ' ಧಾತೋರೇಕಾಚಃ—' ಸೂತ್ರದಿಂದ 'ಧಾತೋಃ', 'ಚಿಣ್ ಭಾವಕರ್ಮಣೋಃ' ಸೂತ್ರದಿಂದ 'ಭಾವಕರ್ಮಣೋಃ' ಪದಗಳು ಅನುವೃತ್ತ ವಾಗುತ್ತವೆ. **ಸೂತ್ರಾರ್ಥ**—ಭಾವಕರ್ಮವಾಚಕವಾದ ಸಾರ್ವಧಾತುಕ ಪ್ರತ್ಯಯ ಪರದಲ್ಲಿರುವಾಗ ಧಾತುವಿಗೆ ಯಕ್ ಪ್ರತ್ಯಯ ಬರುತ್ತದೆ. ಭೂಯತೇ ಎಂದಾಗುತ್ತದೆ. ಇಲ್ಲಿ ಪುರುಷವ್ಯವಸ್ಥೆಯನ್ನು ವಿವರಿಸುತ್ತಾನೆ. ಭಾವಪದಕ್ಕೆ ನಾನಾರ್ಥಗಳಿವೆ. "ಭಾವಃ ಸತ್ತಾ, ಸ್ವಭಾವ, ಅಭಿಪ್ರಾಯ, ಚೇಷ್ಟಾ, ಆತ್ಮ, ಜಂತುಷು" ಎಂದು ಅಮರಕೋಶದಲ್ಲಿ ಸತ್ತಾದಿ ಆರು ಅರ್ಥಗಳು ಹೇಳಿವೆ. ಆದರೆ ಇಲ್ಲಿ ಯೌಗಿಕವಾದ ಅರ್ಥ ಸ್ವೀಕರಿಸಬೇಕು. ಭಾವ, ಕ್ರಿಯಾ, ಭಾವನಾ, ವ್ಯಾಪಾರ ಇವೆಲ್ಲಾ ಪರ್ಯಾಯ ಶಬ್ದಗಳು. ಭಾವಕ್ಕೆ ಕ್ರಿಯೆಯೆಂದು ಅರ್ಥ ಹೇಳುವುದಾದರೆ ಅದು ಧಾತುವಿನಿಂದಲೇ ತಿಳಿಯುತ್ತದೆ. ಕ್ರಿಯಾವಾಚಕವಾದುದೇ ಧಾತು. ಪುನಃ ಅದೇ ಅರ್ಥದಲ್ಲಿ ಲಕಾರ ವನ್ನು ಏಕೆ ಹೇಳಬೇಕು ? ಅಂದರೆ ಯಾವ ಕ್ರಿಯೆಯು ಧಾತುವಿನಿಂದ ಅಭಿಹಿತ ವಾಗುತ್ತದೆಯೋ ಲಕಾರವೂ ಅದನ್ನೇ ಅನುವಾದ ಮಾಡುತ್ತದೆ. ಅದಕ್ಕಿಂತಲೂ ಅತಿರಿಕ್ತವಾದ ಇನ್ನೊಂದು ವ್ಯಾಪಾರವನ್ನು ಅದು ಹೇಳುವುದಿಲ್ಲ. "ಸಾಚ—" ಎಂಬ ವಾಕ್ಯದಿಂದ ಈ ಅರ್ಥವನ್ನೆ ಹೇಳುತ್ತಾನೆ. ಧಾತುವಿನಿಂದ ವಾಚ್ಯವಾದ ಕ್ರಿಯೆಯೂ ಭಾವಾರ್ಥದಲ್ಲಿ ಬಂದ ಲಕಾರದಿಂದ ಅನುವಾದಮಾಡಲ್ಪಡುತ್ತದೆ. ಧಾತ್ವರ್ಥ ವ್ಯಾಪಾರವನ್ನೇ ಲಕಾರ ಹೇಳುತ್ತದೆ ಎಂದರ್ಥ. ಲಕಾರ ಕ್ರಿಯೆಯನ್ನು ಹೇಳುವುದಾದರೆ ಪುರುಷವ್ಯವಸ್ಥೆ ಹೇಗೆಂಬುದನ್ನು "ಯುಷ್ಮದಸ್ಮದ್ಭ್ಯಾಂ—" ಎಂಬ ವಾಕ್ಯದಿಂದ ವಿವರಿಸುತ್ತಾನೆ. ಯುಷ್ಮದಸ್ಮದರ್ಥಕ್ಕೂ ಲಕಾರಾರ್ಥಕ್ಕೂ ಸಮಾನಾಧಿ ಕರಣ್ಯ ಇಲ್ಲದಿರುವುದರಿಂದ ಉತ್ತಮ, ಮಧ್ಯಮ ಪುರುಷಗಳು ಬರುವುದಿಲ್ಲ. "ಶೇಷೇ ಪ್ರಥಮಃ" ಎಂಬುದರಿಂದ ಅವೆರಡಕ್ಕಿಂತ ಶೇಷಾರ್ಥ ತೋರುವುದರಿಂದ ಪ್ರಥಮ ಪುರುಷ ಬರುತ್ತದೆ. ತಿಙ್ ಯಾವ ಕಾರಕವನ್ನು ಹೇಳುವುದೋ ಆ ಕಾರಕವನ್ನೇ ಯುಷ್ಮದಸ್ಮದ್ ಶಬ್ದಗಳು ಹೇಳುವುದಾದರೆ ಆಗ ಸಾಮಾನಾಧಿಕರಣ್ಯ ಇರುವುದರಿಂದ (ಒಂದೇ ಅರ್ಥವನ್ನು ಹೇಳುವುದೇ ಸಾಮಾನಾಧಿಕರಣ್ಯ) ಮಧ್ಯಮ, ಉತ್ತಮ

ಪುರುಷಗಳು ಬರುತ್ತವೆ. ಯುಷ್ಮದ್ ಅಸ್ಮದ್ ಶಬ್ದಗಳು (ನೀನು, ನಾನು) ಯುಷ್ಮದ್
ಅಸ್ಮದ್ ರೂಪ ಕರ್ತೃ, ಕರ್ಮಕಾರಕವನ್ನು ಹೇಳುತ್ತವೆ. ಲಕಾರವೂ ಭಾವಾರ್ಥವನ್ನು
ಹೇಳುತ್ತದೆ. ಭಿನ್ನ ಭಿನ್ನಾರ್ಥಗಳಾದುದರಿಂದ ಸಾಮಾನಾಧಿಕರಣ್ಯವಿಲ್ಲ. ಇದ
ರಿಂದಲೇ ಮಧ್ಯಮ, ಉತ್ತಮಪುರುಷಗಳು ಬರುವುದಿಲ್ಲ. ಪರಿಶೇಷದಿಂದ ಪ್ರಥಮ
ಪುರುಷವೆಂದು ತಿಳಿಯಬೇಕು. ಪ್ರಥಮಪುರುಷದಲ್ಲಿಯೂ ಮೂರು ವಚನಗಳು
ಬರುತ್ತವೆಯೇ ಎಂದರೆ ಅದಕ್ಕೂ "ತಿಙ್‌ವಾಚ್ಯಕ್ರಿಯಾಯಾ—" ವಾಕ್ಯದಿಂದ
ಸಮಾಧಾನ ಹೇಳುತ್ತಾನೆ. ತಿಙಿನಿಂದ ಉಕ್ತವಾದ ಕ್ರಿಯೆಯು ಅದ್ರವ್ಯರೂಪ
ವಾದುದರಿಂದ, ದ್ರವ್ಯದಲ್ಲಿ ಮಾತ್ರ ದ್ವಿತ್ವಾದಿಗಳು ತೋರುವುದರಿಂದ, ಇಲ್ಲಿ
ದ್ವಿತ್ವಾದಿಗಳು ತೋರದಿರುವುದರಿಂದ, ದ್ವಿವಚನ ಬಹುವಚನಪ್ರತ್ಯಯಗಳು ಬರುವು
ದಿಲ್ಲ. ದ್ವಿತ್ವಬಹುತ್ವಕ್ಕೆ ನಿಮಿತ್ತವಿಲ್ಲದಿರುವಾಗ ಉತ್ಸರ್ಗದಿಂದ (ಸಾಮಾನ್ಯ) ಏಕ
ವಚನವೆಂದುದರಿಂದ ಏಕವಚನಪ್ರತ್ಯಯ ಮಾತ್ರ ಬರುತ್ತದೆ. ನಿಷ್ಕೃಷ್ಟಾರ್ಥ—ಇಲ್ಲಿ
ಲಕಾರವು ಕ್ರಿಯೆಯನ್ನು ಹೇಳುತ್ತದೆ. ಕ್ರಿಯಾದ್ರವ್ಯವಲ್ಲ. ಲಿಂಗಸಂಖ್ಯಾಯೋಗವು
ಸತ್ವಪ್ರಧಾನವಾದ ದ್ರವ್ಯಕ್ಕೆ ಮಾತ್ರ ಬರುತ್ತದೆ. ವ್ಯಾಪಾರಕ್ಕೆ ಇಲ್ಲ. ಕ್ರಿಯೆಯಿಂದ
ದ್ವಿತ್ವಾದಿಗಳು ತೋರದಿರುವುದರಿಂದ ದ್ವಿವಚನ, ಬಹುವಚನ ಬರುವುದಿಲ್ಲ.
ಹಾಗಾದರೆ ಪ್ರಥಮಪುರುಷದ ಏಕವಚನವಾದರೂ ಹೇಗೆ ಬರುತ್ತದೆ? ಏಕತ್ವಸಂಖ್ಯಾ
ತೋರುವಾಗ ಏಕವಚನ ಹೇಳಬೇಕು. ಕ್ರಿಯೆಯಿಂದ ಲಿಂಗಸಂಖ್ಯಾದಿಗಳು ತೋರ
ದಿದ್ದಮೇಲೆ ಏಕವಚನವೂ ಬರಲಾರದು ಎಂದರೆ ಅದಕ್ಕೆ "ಉತ್ಸರ್ಗತಃ ಏಕ
ವಚನಮ್" ಎಂಬುದರಿಂದ ಸಮಾಧಾನ ಹೇಳುತ್ತಾನೆ. ಭಾಷ್ಯದಲ್ಲಿ "ದ್ವ್ಯೇಕಯೋ
ರ್ದ್ವಿವಚನೈಕವಚನೇ", "ಬಹುಷು ಬಹುವಚನಮ್" ಎಂಬ ಎರಡು ಸೂತ್ರಗಳನ್ನು
ವ್ಯತ್ಯಾಸಮಾಡಿ ವ್ಯಾಖ್ಯಾನಮಾಡಿರುತ್ತಾರೆ. "ದ್ವಿಬಹು ದ್ವಿಬಹುವಚನೇ",
"ಏಕವಚನಮ್" ಹೀಗೆ ಪಾಠಮಾಡಿ ದ್ವಿತ್ವ, ಬಹುತ್ವತೋರುವಾಗ ದ್ವಿವಚನ
ಬಹುವಚನಗಳೂ, ದ್ವಿತ್ವಬಹುತ್ವಗಳು ತೋರದಿರುವಾಗ ಏಕವಚನವೂ ಬರುತ್ತದೆ.
ಎಂದು ವಿವರಿಸಿರುತ್ತಾರೆ. ಆಗ ಏಕವಚನ ಬರಬೇಕಾದರೆ ಏಕತ್ವಸಂಖ್ಯಾ ತೋರ
ಬೇಕಾಗಿಲ್ಲ. ಪ್ರಕೃತ ಕ್ರಿಯೆಯಿಂದ ಏಕತ್ವಸಂಖ್ಯಾ ತೋರದಿದ್ದರೂ ದ್ವಿತ್ವಬಹುತ್ವ
ತೋರದಿರುವುದರಿಂದ ಏಕವಚನಪ್ರತ್ಯಯ ಬರುತ್ತದೆ. ಇನ್ನು ಕೆಲವರು "ಕ್ರಿಯೆಯಲ್ಲಿ
ಏಕತ್ವಸಂಖ್ಯಾ ತೋರಿಯೇ ತೋರುತ್ತದೆ. ಆದುದರಿಂದ ಭಾಷ್ಯಕಾರರು "ಏಕಾ,
ಕ್ರಿಯಾ" ಎಂದು ಉದಾಹರಿಸಿರುತ್ತಾರೆ. ಆಗ ಪ್ರಕೃತ್ಯರ್ಥದಲ್ಲಿರುವ (ಧಾತ್ವರ್ಥ)
ಏಕತ್ವದಲ್ಲಿ ಪ್ರತ್ಯಯಕ್ಕೆ ಅನ್ವಯವಿರುವುದರಿಂದ ಏಕವಚನಪ್ರತ್ಯಯ ಬರುತ್ತದೆ"
ಎನ್ನುತ್ತಾರೆ. ಕ್ರಿಯೆಯು ಕರ್ತೃ, ಕರ್ಮಗಳಲ್ಲಿರುವ ದ್ವಿತ್ವಾದಿಗಳು ಕ್ರಿಯೆಯಲ್ಲಿ
ಆರೋಪಿತವಾಗುವುದರಿಂದ ಕರ್ತೃ ಕರ್ಮತಿಙ್‌ಪ್ರತ್ಯಯಗಳಲ್ಲಿ ದ್ವಿವಚನಾದಿಗಳು ಸಿದ್ಧ
ವಾಗುತ್ತವೆ. ಈಗ ಭಾವಾರ್ಥದಲ್ಲಿ ಲಕಾರ ಬಂದುದರಿಂದ ಕರ್ತೃ ಯಾವುದರಿಂದಲೂ
ಉಕ್ತವಾಗದಿರುವುದರಿಂದ "ಕರ್ತೃ ಕರಣಯೋಸ್ತೃತೀಯಾ" ಸೂತ್ರದಿಂದ ಕರ್ತೃವಿಗೆ

ತೃತೀಯಾವಿಭಕ್ತಿಯು ಬರುತ್ತದೆ. ಹೀಗೆ ಎಲ್ಲಾ ಲಕಾರಗಳಲ್ಲಿಯೂ ಪ್ರಥಮಪುರುಷ ಏಕವಚನ ಮಾತ್ರ ಬರುತ್ತದೆ. ತ್ವಯಾ, ಮಯಾ, ಅನ್ಯೈಶ್ಚ ಭೂಯತೇ ॥ (ನಿನ್ನಿಂದಲೂ, ನನ್ನಿಂದಲೂ, ಇತರರಿಂದಲೂ ಇರೋಣವಾಗುತ್ತದೆ.) ಬಹುವಚನದಲ್ಲಿಯೂ ಭೂಯತೇ ಎಂದೇ ಆಗುತ್ತದೆ. ಹೀಗೆ ಭಾವೇಪ್ರಯೋಗದಲ್ಲಿ ಎಲ್ಲಾ ಲಕಾರಗಳಲ್ಲಿಯೂ ಒಂದೊಂದೇ ರೂಪವೆಂದು ತಿಳಿಯಬೇಕು. ಕರ್ಮಣಿಪ್ರಯೋಗದಲ್ಲಿಯೂ ಲಕಾರದಿಂದ ಕರ್ತೃ ಉಕ್ತವಾಗದಿರುವುದರಿಂದ ಕರ್ತೃವಿಗೆ ತೃತೀಯಾ ವಿಭಕ್ತಿಯೇ ಬರುತ್ತದೆ. ಕರ್ಮವು ಲಕಾರದಿಂದ ಉಕ್ತವಾದುದರಿಂದ ಅದಕ್ಕೆ ಪ್ರಥಮಾ ವಿಭಕ್ತಿ ಬರುತ್ತದೆ. ಕರ್ಮಣಿಯಲ್ಲಿ ಕರ್ಮಾನುಸಾರವಾಗಿ ಪುರುಷವಚನಗಳು ಬರುತ್ತವೆ. 'ಚೈತ್ರಃ ಆನಂದಂ ಅನುಭವತಿ.' ಇದು ಕರ್ತರಿ ಪ್ರಯೋಗ. ಇಲ್ಲಿ ಲಕಾರ ಕರ್ತೃವನ್ನು ಹೇಳಿದುದರಿಂದ ಕರ್ತೃವಿಗೆ ಪ್ರಥಮಾವಿಭಕ್ತಿ ಬಂದಿದೆ. ಕರ್ಮ (ಆನಂದ) ಅಭಿಹಿತವಾಗದಿರುವುದರಿಂದ 'ಕರ್ಮಣಿ ದ್ವಿತೀಯಾ' ಸೂತ್ರದಿಂದ ದ್ವಿತೀಯಾವಿಭಕ್ತಿ ಬಂದಿದೆ. 'ಚೈತ್ರೇಣ ಆನಂದಃ ಅನುಭೂಯತೇ.' ಚೈತ್ರನಿಂದ ಆನಂದವು ಅನುಭವಿಸಲ್ಪಡುತ್ತದೆ. ಇದು ಕರ್ಮಣಿ ಪ್ರಯೋಗ. ಕರ್ಮವು ಲಕಾರದಿಂದ ಅಭಿಹಿತವಾದುದರಿಂದ ಅದಕ್ಕೆ ಪ್ರಥಮಾವಿಭಕ್ತಿ ಬಂದಿದೆ. ಕರ್ತೃ ಅಭಿಹಿತವಾಗದಿರುವುದರಿಂದ ಅದಕ್ಕೆ ತೃತೀಯಾವಿಭಕ್ತಿ ಬಂದಿದೆ. ಕರ್ಮವನ್ನು ಅನುಸರಿಸಿ ಪುರುಷವಚನವ್ಯವಸ್ಥೆ ತಿಳಿಯಬೇಕು. ಚೈತ್ರಃ ತ್ವಾಂ ಅನುಭವತಿ ॥ ಚೈತ್ರೇಣ ತ್ವಂ ಅನುಭೂಯಸೇ ॥ ಚೈತ್ರಃ ಮಾಂ ಅನುಭವತಿ ॥ ಚೈತ್ರೇಣ ಅಹಂ ಅನುಭೂಯೇ ॥ ಹೀಗೆ ಅಕರ್ಮಕ ಧಾತುಗಳಮೇಲೆ ಕರ್ತರಿಯಲ್ಲಿಯೂ ಭಾವದಲ್ಲಿಯೂ, ಸಕರ್ಮಕ ಧಾತುಗಳಮೇಲೆ ಕರ್ತರಿಯಲ್ಲಿಯೂ ಕರ್ಮಣಿಯಲ್ಲಿಯೂ ಲಕಾರಗಳು ಬರುತ್ತವೆ. ಸಾಮಾನ್ಯ ಧಾತುವಿಗೆ ಫಲ, ವ್ಯಾಪಾರವೆಂದು ಎರಡು ಅರ್ಥಗಳಿವೆ. ಈ ಎರಡೂ ಒಂದೇ ಕರ್ತೃವಿನಲ್ಲಿ ಇರುವುದಾದರೆ ಆಗ ಆ ಧಾತುವು ಅಕರ್ಮಕವೆಂದು ತಿಳಿಯಬೇಕು. ಉದಾಹರಣೆ: ಭವತಿ. ಇಲ್ಲಿ ಭೂ ಧಾತುವಿಗೆ ಆತ್ಮಧಾರಣೆ, ಅದಕ್ಕನುಗುಣವಾದ ವ್ಯಾಪಾರ ಅರ್ಥ. ಆತ್ಮಧಾರಣರೂಪಫಲವೂ, ವ್ಯಾಪಾರವೂ ಒಂದೇ ಕರ್ತೃವಿನಲ್ಲಿ ಬರುವುದರಿಂದ ಭೂ ಧಾತು ಅಕರ್ಮಕ. ಈ ಫಲ, ವ್ಯಾಪಾರಗಳು ಭಿನ್ನಭಿನ್ನ ದೇಶದಲ್ಲಿ ಬರುವುದಾದರೆ ಆಗ ಆ ಧಾತುವು ಸಕರ್ಮಕವಾಗುತ್ತದೆ. ಪಚತಿ. ಇಲ್ಲಿ ಪಚ್ ಧಾತುವಿಗೆ ವಿಕ್ಲಿತ್ತಿಯೂ(ಮೆತ್ತಗಾಗುವಿಕೆ), ಫೂತ್ಕಾರಾದಿ ವ್ಯಾಪಾರವೂ ಧಾತ್ವರ್ಥ. ವಿಕ್ಲಿತ್ತಿರೂಪಫಲವು ಅಕ್ಕಿಯಲ್ಲಿಯೂ, ವ್ಯಾಪಾರವು ದೇವದತ್ತಾದಿ ಕರ್ತೃವಿನಲ್ಲಿಯೂ ಬರುವುದರಿಂದ ಪಚ್ ಧಾತು ಸಕರ್ಮಕ. ಫಲವಿದ್ದಲ್ಲಿ ವ್ಯಾಪಾರವಿರುವುದಾದರೆ ಅಕರ್ಮಕವೆಂದೂ, ಫಲಾಶ್ರಯಕ್ಕಿಂತ ಭಿನ್ನವಾದುದರಲ್ಲಿ ವ್ಯಾಪಾರವಿರುವುದಾದರೆ ಸಕರ್ಮಕವೆಂದೂ ತಿಳಿಯಬೇಕು. ಸಕರ್ಮಕಾಕರ್ಮಕಕ್ಕೆ ಪ್ರಾಚೀನರು ಸಂಗ್ರಹಶ್ಲೋಕವನ್ನು ಹೇಳಿರುತ್ತಾರೆ.

**ವೃದ್ಧಿಕ್ಷಯಭಯಜೀವಿತಮರಣಮ್ ಲಜ್ಜಾಸತ್ತಾಸ್ಥಿತಿಜಾಗರಣಂ ।**
**ಶಯನಕ್ರೀಡಾರುಚಿದೀಪ್ತ್ಯರ್ಥಂ ಧಾತುಗಣಂತಮಕರ್ಮಕಮಾಹುಃ ॥**

ಲಜ್ಜಾ, ಸತ್ತಾ (ಇರುವುದು), ಸ್ಥಿತಿ, ಜಾಗರಣ, ವೃದ್ಧಿ, ಕ್ಷಯ, ಭಯ, ಜೀವಿತ, ಮರಣ, ಶಯನ, ಕ್ರೀಡಾ, ರುಚಿ, ದೀಪ್ತಿ ಈ ಅರ್ಥಗಳನ್ನು ಕೊಡುವ ಧಾತುಗಳು ಅಕರ್ಮಕವೆಂದೂ, ಇತರ ಅರ್ಥವನ್ನು ಕೊಡುವ ಧಾತುಗಳು ಸಕರ್ಮಕವೆಂದೂ ತಿಳಿಯಬೇಕು.

ಹೀಗೆ ಭಾವಾರ್ಥದಲ್ಲಿ ಎಲ್ಲಾ ಪುರುಷವಚನಗಳಲ್ಲಿಯೂ ಲಟಿನಲ್ಲಿ ಭೂಯತೇ ಎಂದು ಒಂದೇ ರೂಪವಾಗುತ್ತದೆ. ಲಿಟ್ ॥ ದ್ವಿತ್ವಾದಿ. ತಕ್ಕೆ ಏಶಾದೇಶ. ಬಭೂವೇ । ಲುಟಿನಲ್ಲಿ ತಾಸ್. ತಾಸಿಗೆ ಇಟ್. ಆರ್ಧಧಾತುಕನಿಮಿತ್ತವಾಗಿ ಗುಣ ಪ್ರಾಪ್ತವಾದರೆ ವಿಕಲ್ಪವಾಗಿ ಚಿಣ್ವದ್ಭಾವ ಹೇಳುತ್ತಾನೆ.

ಭಾವಕರ್ಮಾರ್ಥದಲ್ಲಿ ಚಿಣ್ವದ್ಭಾವ ಹೇಳುವ ಸೂತ್ರ.

**೭೫೬. ಸ್ಯಸಿಚ್‌ಸೀಯುಟ್‌ತಾಸಿಷು ಭಾವಕರ್ಮಣೋ-**
**ರುಪದೇಶೇಽಜ್ಝನಗ್ರಹದೃಶಾಂ ವಾ ಚಿಣ್ವದಿಟ್ ಚ ॥ ೬-೪-೬೨ ॥**

**ಉಪದೇಶೇ ಯೋಽಚ್ ತದನ್ತಾನಾಂ ಹನಾದೀನಾಂ ಚ ಚಿಣೀವಾಙ್ಗಕಾರ್ಯಂ ವಾ ಸ್ಯಾತ್ ಸ್ಯಾದಿಷು ಭಾವಕರ್ಮಣೋರ್ಗಮ್ಯಮಾನಯೋಃ ಸ್ಯಾದೀನಾಮಿಡಾಗಮಶ್ಚ । ಚಿಣ್ವದ್ಭಾವಪಕ್ಷೇಽಯಮಿಟ್ । ಚಿಣ್ವದ್ಭಾವಾತ್ ವೃದ್ಧಿಃ । ಭಾವಿತಾ, ಭವಿತಾ । ಭಾವಿಷ್ಯತೇ, ಭವಿಷ್ಯತೇ । ಭೂಯತಾಮ್ । ಅಭೂಯತ । ಭಾವಿಷೀಷ್ಟ, ಭವಿಷೀಷ್ಟ ॥**

ಸ್ಯಸಿಚ್‌ಸೀಯುಟ್‌ತಾಸಿಷು, ಭಾವಕರ್ಮಣೋಃ, ಉಪದೇಶೇ, ಅಜ್ಝನಗ್ರಹದೃಶಾಂ, ವಾ, ಚಿಣ್ವತ್, ಇಟ್, ಚ ॥ ಎಂಟು ಪದಗಳುಳ್ಳ ಸೂತ್ರ. 'ಅಜ್ಝನಗ್ರಹದೃಶಾಂ' ಎಂಬಲ್ಲಿರುವ 'ಅಚ್' ಪದಕ್ಕೆ 'ಉಪದೇಶೇ' ಎಂಬಲ್ಲಿ ಅನ್ವಯ. ಉಪದೇಶಕಾಲದಲ್ಲಿ ಅಜನ್ತವಾದ ಧಾತುಗಳಿಗೆ ಎಂದರ್ಥ. ಚಿಣಿ ಇವ ಚಿಣ್ವತ್. ಚಿಣ್ ಪ್ರತ್ಯಯ ಪರದಲ್ಲಿರುವಾಗ ಅಂಗಕ್ಕೆ ಹೇಗೆ ವೃದ್ಧ್ಯಾದಿಕಾರ್ಯಗಳು ಬರುತ್ತವೆಯೋ ಅದರಂತೆ ಸ್ಯಾದಿಗಳು ಪರವಾದಾಗಲೂ ಬರುತ್ತವೆ ಎಂದರ್ಥ. **ಸೂತ್ರಾರ್ಥ**—ಉಪದೇಶದಲ್ಲಿ ಅಜನ್ತವಾದ ಧಾತುಗಳಿಗೂ, ಹನ್, ಗ್ರಹ್, ದೃಶ್ ಧಾತುಗಳಿಗೂ ಭಾವಕರ್ಮಾರ್ಥ ತೋರುತ್ತಿರುವಾಗ ಸ್ಯ, ಸಿಚ್, ಸೀಯುಟ್, ತಾಸ್ ಈ ನಾಲ್ಕು ಪ್ರತ್ಯಯಗಳು ಪರದಲ್ಲಿರುವಾಗ, ಚಿಣ್ ಪ್ರತ್ಯಯ ಪರದಲ್ಲಿರುವಾಗ ಬರುವ ಅಂಗಕಾರ್ಯಗಳು ವಿಕಲ್ಪವಾಗಿ ಬರುತ್ತವೆ. ಸ್ಯಾದಿಗಳಿಗೆ ಇಡಾಗಮವೂ ಬರುತ್ತದೆ. ಚಿಣ್ವದ್ಭಾವ ಬರುತ್ತಿರುವಾಗ ಮಾತ್ರ ಇಲ್ಲಿ ಹೇಳಿದ ಇಡಾಗಮ ಬರುತ್ತದೆ. ಚಿಣ್ವದ್ಭಾವ ಬಾರದಿರುವಾಗ ಇಡಾಗಮವೂ ಬರುವುದಿಲ್ಲ. ಅನಿಟ್ ಧಾತುಗಳಲ್ಲಿ ಈ

ನಿಯಮ ಸೇಟ್ ಧಾತುವಾದರೆ ಇಡಾಗಮ ನಿತ್ಯವಾಗಿ ಬರುತ್ತದೆ. ಪ್ರಕೃತ ಭೂ ಎಂಬುದು ಉಪದೇಶದಲ್ಲಿ ಅಜನ್ತವಾಗಿದೆ. ಇದಕ್ಕೆ ತಾಸ್ ಪ್ರತ್ಯಯ ಪರದಲ್ಲಿದೆ. ಆದುದರಿಂದ ಚಿಣ್ವದ್ಭಾವ ಬರುತ್ತದೆ. ಚಿಣ್ ಪರದಲ್ಲಿದ್ದರೆ ಣಿತ್ತಾದುದರಿಂದ ವೃದ್ಧಿ ಬರುತ್ತಿತ್ತು. ಈಗ ಆ ವೃದ್ಧಿ, ತಾಸ್ ಪರವಾದಾಗಲೂ ಬರುತ್ತದೆ. ಭೌ+ಇತಾ. ಆವಾದೇಶ. ಭಾವಿತಾ. ಚಿಣ್ವದ್ಭಾವ ಬಾರದಿದ್ದರೆ ಗುಣ, ಅವಾದೇಶ. ಭವಿತಾ.

ಲೃಟ್|| ಸ್ಯ ಪರದಲ್ಲಿರುವುದರಿಂದ ಚಿಣ್ವದ್ಭಾವವಿಕಲ್ಪ. ಬಂದರೆ ವೃದ್ಧಿ, ಬಾರದಿದ್ದರೆ ಗುಣ. ಭಾವಿಷ್ಯತೇ, ಭವಿಷ್ಯತೇ । **ಲೋಟ್** || ಭೂಯತಾಮ್ । **ಲಙ್** || ಅಭೂಯತ । **ವಿಧಿಲಿಙ್** || ಭೂಯೇತ । **ಆಶೀರ್ಲಿಙ್** || ಸೀಯುಟ್ ಪರದಲ್ಲಿರುವುದರಿಂದ ಚಿಣ್ವದ್ಭಾವವಿಕಲ್ಪ. ಇದರಿಂದ ವೃದ್ಧಿವಿಕಲ್ಪ. ಭಾವಿಷೀಷ್ಟ, ಭವಿಷೀಷ್ಟ ।**ಲುಙ್**ನಲ್ಲಿ ಅಭೂ+ತ ಎಂದಿರುವಾಗ ಚ್ಲಿ ಬಂದರೆ ಅದಕ್ಕೆ ಭಾವ ಕರ್ಮದಲ್ಲಿ ಚಿಣ್ ಆದೇಶ ಹೇಳುತ್ತಾನೆ.

ಭಾವಕರ್ಮದಲ್ಲಿ ಚ್ಲಿಗೆ ಚಿಣ್ ಹೇಳುವ ಸೂತ್ರ

೭೫೭. ಚಿಣ್ ಭಾವಕರ್ಮಣೋಃ ||೩-೧-೬೬||

ಚ್ಲೇಶ್ಚಿಣ್ ಸ್ಯಾದ್ಭಾವಕರ್ಮವಾಚಿನಿ ತಶಬ್ದೇ ಪರೇ । **ಅಭಾವಿ** || ಅಭಾವಿಷ್ಯತ, ಅಭವಿಷ್ಯತ ||

ದ್ವಿಪದ ಸೂತ್ರ. 'ಚ್ಲೇಃ ಸಿಚ್' ಸೂತ್ರದಿಂದ 'ಚ್ಲೇಃ', 'ಚಿಣ್ ತೇ ಪದಃ' ಸೂತ್ರದಿಂದ 'ತೇ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಭಾವಕರ್ಮ ವಾಚಕವಾದ ತ ಶಬ್ದ ಪರದಲ್ಲಿರುವಾಗ ಚ್ಲಿಗೆ ಚಿಣ್ ಆದೇಶ ಬರುತ್ತದೆ. ಪ್ರಕೃತ ಭಾವಾರ್ಥಕ ತ ಶಬ್ದ ಇರುವುದರಿಂದ ಚ್ಲಿಗೆ ಚಿಣ್. ಚಿಣಿನಲ್ಲಿ ಇಕಾರ ಉಳಿಯುತ್ತದೆ. ಅಭೂ+ಇ+ತ. 'ಚಿಣೋ ಲುಕ್' ಸೂತ್ರದಿಂದ ಚಿಣಿನ ಪರದಲ್ಲಿರುವ ತ ಶಬ್ದಕ್ಕೆ ಲುಕ್. ಅಭೂ+ಇ ಎಂದಿರುವಾಗ ವೃದ್ಧಿ, ಆವಾದೇಶ. ಅಭಾವಿ. **ಲೃಙ್** || ಸ್ಯಪರವಾದುದರಿಂದ ಚಿಣ್ವದ್ಭಾವವಿಕಲ್ಪದಿಂದ ಎರಡು ರೂಪಗಳು. ಅಭಾವಿಷ್ಯತ, ಅಭವಿಷ್ಯತ । ಇನ್ನು ಮುಂದೆ ಕರ್ಮಾರ್ಥದಲ್ಲಿ ಲಕಾರ ಹೇಳುತ್ತಾನೆ. ಕರ್ಮಣಿ ಪ್ರಯೋಗ ಹೇಳಬೇಕಾದರೆ ಧಾತುವು ಸಕರ್ಮಕವಾಗಿರಬೇಕೆಂದು ಹಿಂದೆ ಹೇಳಿದೆ. ಕೆಲವು ಧಾತುಗಳು ಅಕರ್ಮಕಗಳಾದರೂ ಉಪಸರ್ಗ ಸೇರಿದಾಗ ಸಕರ್ಮಕವಾಗುತ್ತವೆ ಯೆಂದು ತೋರಿಸುತ್ತಾನೆ.

ಅಕರ್ಮಕೋಽಪ್ಯುಪಸರ್ಗವಶಾತ್ಸಕರ್ಮಕಃ || **ಅನುಭೂಯತೇ ಆನಂದಃ ಚೈತ್ರೇಣ, ತ್ವಯಾ, ಮಯಾ ಚ । ಅನುಭೂಯೇತೇ । ಅನುಭೂಯನ್ತೇ । ತ್ವಮನುಭೂಯಸೇ । ಅಹಮನುಭೂಯೇ । ಅನ್ವಭಾವಿ– ಅನ್ವಭಾವಿಷಾತಾಮ್, ಅನ್ವಭವಿಷಾತಾಮ್** ||

ಧಾತುಗಳು ಅಕರ್ಮಕಗಳಾಗಿದ್ದರೂ ಉಪಸರ್ಗಸಮಭಿವ್ಯಾಹಾರದಿಂದ ಅರ್ಥಾಂತರವನ್ನು ಹೊಂದುವುದರಿಂದ ಅವು ಸಕರ್ಮಕಗಳಾಗುತ್ತವೆ. ಭೂ ಧಾತು ಅಕರ್ಮಕ. ಇದು ಅನು ಎಂಬ ಉಪಸರ್ಗದಿಂದ ಕೂಡಿದಾಗ ಅನುಭವ ಎಂಬ ಅರ್ಥಕೊಡುವುದರಿಂದ ಅನುಭೂ ಸಕರ್ಮಕವಾಗುತ್ತದೆ. ಅನುಭೂ ಎಂಬುದರಮೇಲೆ ಕರ್ಮಾರ್ಥದಲ್ಲಿ ಲಕಾರ ಬಂದಾಗ ಯುಷ್ಮದ್, ಅಸ್ಮದ್ ಶಬ್ದಾರ್ಥಗಳಿಗೂ ಲಕಾರವಾಚ್ಯಕರ್ಮಾರ್ಥಕ್ಕೂ ಸಾಮಾನಾಧಿಕರಣ್ಯ (ಏಕಾರ್ಥವಾಚಕತ್ವ) ಇರುವುದರಿಂದ ಪುರುಷವಚನ ವ್ಯವಸ್ಥೆಯು ಬರುತ್ತದೆ. 'ಚೈತ್ರಃ ಆನಂದಂ ಅನುಭವತಿ'. 'ಅಹಂ ಆನಂದಂ ಅನುಭವಾಮಿ.' 'ತ್ವಂ ಆನಂದಂ ಅನುಭವಸಿ'. ಇಲ್ಲಿ ಎಲ್ಲಾ ಕಡೆಯಲ್ಲಿಯೂ ಆನಂದವು ಕರ್ಮ. ಕರ್ಮಣಿಪ್ರಯೋಗದಲ್ಲಿ ಲಕಾರವು ಕರ್ಮಭೂತವಾದ ಆನಂದವನ್ನು ಹೇಳುವುದರಿಂದ ಆನಂದ ಶಬ್ದದಮೇಲೆ ಪ್ರಥಮಾ ಕರ್ತೃ ಅಭಿಹಿತವಾಗದಿರುವುದರಿಂದ ತೃತೀಯಾ. 'ಚೈತ್ರೇಣ, ತ್ವಯಾ, ಮಯಾ ಚ ಆನಂದಃ ಅನುಭೂಯತೇ.' ಆನಂದವು ಎರಡಾದರೆ 'ಚೈತ್ರೇಣ ಆನನ್ದೌ ಅನುಭೂಯೇತೇ' ಎಂದಾಗುತ್ತದೆ. ಆನಂದವು ಬಹುವಾದರೆ 'ಚೈತ್ರೇಣ ಆನನ್ದಾಃ ಅನುಭೂಯನ್ತೇ' ಎಂದಾಗುತ್ತದೆ. ಯುಷ್ಮದರ್ಥವೇ ಕರ್ಮವಾದರೆ ಕರ್ಮಣಿಯಲ್ಲಿ ಮಧ್ಯಮಪುರುಷಪ್ರತ್ಯಯ ಬರುತ್ತದೆ. 'ಚೈತ್ರಃ ತ್ವಾಂ, ಯುವಾಂ, ಯುಷ್ಮಾನ್ ಅನುಭವತಿ.' ಇದು ಕರ್ತರಿ ಪ್ರಯೋಗ. ಕರ್ಮ ಅಭಿಹಿತವಾಗದಿರುವುದರಿಂದ ಆಯಾಯ ವಿವಕ್ಷಿತ ವಿಭಕ್ತಿ ಬರುತ್ತದೆ. ಕರ್ಮಣಿಪ್ರಯೋಗದಲ್ಲಿ 'ಚೈತ್ರೇಣ ತ್ವಂ ಅನುಭೂಯಸೇ.' ಇಲ್ಲಿ ಯುಷ್ಮದರ್ಥಕರ್ಮವು ಲಕಾರದಿಂದ ಅಭಿಹಿತವಾದುದರಿಂದ ಯುಷ್ಮಚ್ಛಬ್ದಕ್ಕೆ ಪ್ರಥಮಾ ವಿಭಕ್ತಿ ಬಂದಿದೆ. ಕರ್ತೃ ಅಭಿಹಿತವಾಗದಿರುವುದರಿಂದ ತೃತೀಯಾ ಬಂದಿದೆ. ಹೀಗೇ ದ್ವಿಬಹುವಚನಗಳಲ್ಲಿ ತಿಳಿಯಬೇಕು. "ಚೈತ್ರೇಣ ಯುವಾಂ ಅನುಭೂಯೇಥೇ." "ಚೈತ್ರೇಣ ಯೂಯಂ ಅನುಭೂಯಧ್ವೇ." ಅಸ್ಮದರ್ಥ ಕರ್ಮವಾದಾಗ ಲಕಾರ ಅಸ್ಮದರ್ಥ ಹೇಳುವುದರಿಂದ ಉತ್ತಮಪುರುಷಪ್ರತ್ಯಯಗಳು ಬರುತ್ತವೆ. "ಚೈತ್ರಃ ಮಾಂ, ಆವಾಂ, ಅಸ್ಮಾನ್ ಅನುಭವತಿ." "ಚೈತ್ರೇಣ ಅಹಂ ಅನುಭೂಯೇ." "ಚೈತ್ರೇಣ ಆವಾಂ ಅನುಭೂಯಾವಹೇ." "ಚೈತ್ರೇಣ ವಯಂ ಅನುಭೂಯಾಮಹೇ' ಇತ್ಯಾದಿ. ಹೀಗೇ ಪ್ರತಿ ಲಕಾರಗಳಲ್ಲಿಯೂ ಅರ್ಥವ್ಯತ್ಯಾಸವನ್ನು ತಿಳಿದುಕೊಳ್ಳಬೇಕು.

**ಲಿಟ್** ॥ ಅನುಬಭೂವೇ । ಅನುಬಭೂವಾತೇ । ಅನುಬಭೂವಿರೇ ॥ ಇತ್ಯಾದಿ. **ಲುಟ್** ॥ ಚಿಣ್ವದ್ಭಾವವಿಕಲ್ಪ. ಅನುಭಾವಿತಾ । ಅನುಭಾವಿತಾರೌ । ಅನುಭಾವಿತಾರಃ ॥ ಇತ್ಯಾದಿ. ಚಿಣ್ವದ್ಭಾವ ಬಾರದಿದ್ದರೆ ಅನುಭವಿತಾ । ಇತ್ಯಾದಿ. **ಲೃಟ್** ॥ ಚಿಣ್ವದ್ಭಾವ ಬಂದರೆ ಅನುಭಾವಿಷ್ಯತೇ । ಅನುಭಾವಿಷ್ಯೇತೇ । ಅನುಭಾವಿಷ್ಯನ್ತೇ ॥ ಇತ್ಯಾದಿ. ಬಾರದಿದ್ದರೆ ಅನುಭವಿಷ್ಯತೇ । ಇತ್ಯಾದಿ. **ಲೋಟ್** ॥ ಅನುಭೂಯ

ತಾವ್ | ಅನುಭೂಯೇತಾಮ್ | ಅನುಭೂಯನ್ತಾಮ್ || ಅನುಭೂಯಸ್ವ | ಅನುಭೂಯೇಥಾಮ್ | ಅನುಭೂಯಧ್ವಮ್ || ಅನುಭೂಯೈ | ಅನುಭೂಯಾವಹೈ | ಅನುಭೂಯಾಮಹೈ || ಲಙ್ || ಅನ್ವಭೂಯತ | ಅನ್ವಭೂಯೇತಾಮ್ | ಅನ್ವಭೂಯನ್ತ || ಇತ್ಯಾದಿ. ವಿಧಿಲಿಙ್ || ಅನುಭೂಯೇತ | ಅನುಭೂಯೇಯಾತಾಮ್ | ಅನುಭೂಯೇರನ್ || ಇತ್ಯಾದಿ. ಆಶೀರ್ಲಿಙ್ || ಚಿಣ್ವದ್ಭಾವ ವಿಕಲ್ಪ. ಅನುಭಾವಿಷೀಷ್ಟ | ಅನುಭಾವಿಷೀಯಾಸ್ತಾಮ್ | ಅನುಭಾವಿಷೀರನ್ || ಇತ್ಯಾದಿ. ಅನುಭವಿಷೀಷ್ಟ | ಇತ್ಯಾದಿ. ಲುಙ್ || ಚ್ಲಿಗೆ ಚಿಣ್ ಬಂದಾಗ ಅನು+ ಅಭೂ+ಇ+ತ ಎಂದಿರುವಾಗ 'ಚಿಣೋ ಲುಕ್' ಸೂತ್ರದಿಂದ ತ ಶಬ್ದಕ್ಕೆ ಲುಕ್. ಚಿಣ್‌ನಿಮಿತ್ತವಾಗಿ ವೃದ್ಧಿ. ಆವಾದೇಶ. ಅನ್ವಭಾವಿ. ದ್ವಿವಚನಾದಿಗಳಲ್ಲಿ ಚ್ಲಿಗೆ ಸಿಚ್. ಅದಕ್ಕೆ ಇಡಾಗಮ. 'ಸ್ಯಸಿಚ್‌ಸೀಯುಟ್—' ಸೂತ್ರದಿಂದ ಚಿಣ್ವದ್ಭಾವ ವಿಕಲ್ಪ. ಅನ್ವಭಾವಿಷಾತಾಮ್, ಅನ್ವಭವಿಷಾತಾಮ್ | ಅನ್ವಭಾವಿಷತ, ಅನ್ವಭವಿಷತ | ಅನ್ವಭಾವಿಷ್ಠಾಃ, | ಅನ್ವಭವಿಷ್ಠಾಃ | ಅನ್ವಭಾವಿಷಾಥಾಮ್, ಅನ್ವಭವಿಷಾಥಾಮ್ | ಅನ್ವಭಾವಿಢ್ವಮ್, ಅನ್ವಭವಿಢ್ವಮ್ || ಅನ್ವಭಾವಿಷಿ, ಅನ್ವಭವಿಷಿ | ಅನ್ವಭಾವಿಷ್ವಹಿ, ಅನ್ವಭವಿಷ್ವಹಿ | ಅನ್ವಭಾವಿಷ್ಮಹಿ, ಅನ್ವಭವಿಷ್ಮಹಿ || ಲೃಙ್ || ಅನ್ವಭಾವಿಷ್ಯತ, ಅನ್ವಭವಿಷ್ಯತ | ಇತ್ಯಾದಿ.

ಣಿಲೋಪಃ | ಭಾವ್ಯತೇ | ಭಾವಯಾಞ್ಚಕ್ರೇ, ಭಾವಯಾಮ್ಬಭೂವೇ, ಭಾವಯಾಮಾಸೇ | ಚಿಣ್ವದಿಟ್ | ಆಭೀಯತ್ವೇನಾಸಿದ್ಧತ್ವಾಣ್ಣಿಲೋಪಃ || ಭಾವಿತಾ, ಭಾವಯಿತಾ | ಭವಿಷ್ಯತೇ, ಭಾವಯಿಷ್ಯತೇ | ಅಭಾವ್ಯತ | ಭಾವ್ಯೇತ | ಭಾವಿಷೀಷ್ಟ, ಭಾವಯಿಷೀಷ್ಟ | ಅಭಾವಿ | ಅಭಾವಿಷಾತಾಮ್, ಅಭಾವಯಿಷಾತಾಮ್ ||

ಅಕರ್ಮಕಧಾತುಗಳಿಗೆ ಹೇತುಮಣ್ಣಿಚ್ ಬಂದರೆ ಅವು ಸಕರ್ಮಕವಾಗುತ್ತವೆ. 'ದೇವದತ್ತಃ ಭವತಿ.' ಇಲ್ಲಿ ದೇವದತ್ತನು ಪ್ರಯೋಜ್ಯಕರ್ತೃವಾಗಿರುತ್ತಾನೆ. 'ಯಜ್ಞದತ್ತಃ ದೇವದತ್ತಂ ಭಾವಯತಿ.' ಇದು ಣಿಚ್ ಪ್ರಯೋಗ. ಯಜ್ಞದತ್ತ ಪ್ರಯೋಜಕಕರ್ತೃ. 'ಗತಿಬುದ್ಧಿ ಪ್ರತ್ಯವಸಾನಾರ್ಥ—' ಸೂತ್ರದಿಂದ ಪ್ರಯೋಜ್ಯ ಕರ್ತೃವಾದ ದೇವದತ್ತನಿಗೆ ಕರ್ಮಸಂಜ್ಞೆ ಬರುತ್ತದೆ. ಪ್ರಯೋಜ್ಯಕರ್ಮ ಲಕಾರದಿಂದ ಅಭಿಹಿತವಾಗುವಾಗ ಅದಕ್ಕೆ ಪ್ರಥಮಾವಿಭಕ್ತಿ ಬರುತ್ತದೆ. ಯಜ್ಞದತ್ತೇನ ದೇವದತ್ತಃ ಭಾವ್ಯತೇ || ಪ್ರಯೋಜಕಕರ್ತೃ ಅಭಿಹಿತವಾಗದಿರುವುದರಿಂದ ತೃತೀಯಾ ಬಂದಿದೆ. ಇಲ್ಲಿ ಭಾವಿ ಎಂಬ ಣಿಜನ್ತದಮೇಲೆ ಕರ್ಮಣಿಯಲ್ಲಿ ಲಕಾರ ಬಂದರೆ ಭಾವಿ+ತೆ ಎಂದಿರುವಾಗ ಯಕ್. ಭಾವಿ+ಯ+ತೇ. 'ಣೇರನಿಟಿ' ಸೂತ್ರದಿಂದ ಣಿಚಿಗೆ ಲೋಪ. ಭಾವ್+ಯತೇ=ಭಾವ್ಯತೇ ಎಂದಾಗುತ್ತದೆ. ಹೀಗೆಯೇ ಮಧ್ಯಮ ಉತ್ತಮಪುರುಷಗಳಲ್ಲಿಯೂ ತಿಳಿಯಬೇಕು. 'ಚೈತ್ರಃ ತ್ವಾಂ ಭಾವಯತಿ.'

'ಚೈತ್ರೇಣ ತ್ವಂ ಭಾವ್ಯಸೇ'. 'ಚೈತ್ರಃ ಮಾಂ ಭಾವಯತಿ'. 'ಚೈತ್ರೇಣ ಅಹಂ ಭಾವ್ಯೇ.' ಇದೇ ರೀತಿ ದ್ವಿಬಹುವಚನಗಳ ರೂಪಗಳನ್ನು ಊಹಿಸಿಕೊಳ್ಳಬೇಕು.

ಲಿಟ್ ॥ ಭಾವಿ ಪ್ರತ್ಯಯಾನ್ತವಾದುದರಿಂದ ಆಮ್. ಆಮ್ ಪ್ರಕೃತಿ ಆತ್ಮನೇಪದಿಯಾದುದರಿಂದ ಅನುಪ್ರಯೋಗಹೊಂದುವ ಕೃ, ಭೂ, ಅಸ್‌ಗಳ ಮೇಲೂ ಆತ್ಮನೇಪದಪ್ರತ್ಯಯಗಳು ಬರುತ್ತವೆ. ಭಾವಿ+ಆಮ್. ಗುಣ, ಅಯಾದೇಶ. ಭಾವಯಾಞ್ಚಕ್ರೇ । ಭಾವಯಾಞ್ಚಕ್ರಾತೇ । ಭಾವಯಾಞ್ಚಕ್ರಿರೇ ॥ ಇತ್ಯಾದಿ. ಭಾವಯಾಮ್ಬಭೂವೇ, ಭಾವಯಾಮಾಸೇ । ಇತ್ಯಾದಿ. ಲುಟ್ ॥ ಭಾವಿ + ಲುಟ್. ಲುಟಿಗೆ ತಾದ್ಯಾದೇಶ. ತಾಸ್ ವಿಕರಣ. 'ಸ್ಯಸಿಚ್‌ಸೀಯುಟ್—' ಸೂತ್ರದಿಂದ ಚಿಣ್ವದ್ಭಾವ, ತಾಸಿಗೆ ಇಡಾಗಮ. ಭಾವಿ + ಇತಾಸ್ + ಅ. ಟಿಲೋಪ. ಭಾವಿ + ಇತಾ. ಇಲ್ಲಿ ಣಿಲೋಪ ಬರಬೇಕು. ಆದರೆ 'ಣೇರನಿಟಿ' ಸೂತ್ರದಿಂದ ಅನಿಡಾದಿ ಪ್ರತ್ಯಯ ಪರದಲ್ಲಿರಬೇಕೆಂದು ಹೇಳಿದೆ. ಇಲ್ಲಿ ಇಟ್ ಆದಿಯಲ್ಲಿದೆ. ಅದಕ್ಕೋಸ್ಕರ 'ಆಭೀಯತ್ವೇನಾಸಿದ್ಧತ್ವಾಣ್ಣಿಲೋಪಃ' ಎಂದಿರುತ್ತಾನೆ. 'ಣೇರನಿಟಿ' ಸೂತ್ರ ಕಾರ್ಯವೂ ಆಭೀಯಕಾರ್ಯ (ಭಸಂಜ್ಞಾಕ್ಕೆ ಒಳಪಟ್ಟಿದೆ). 'ಸ್ಯಸಿಚ್‌ಸೀಯುಟ್—' ಸೂತ್ರಕಾರ್ಯವೂ ಆಭೀಯವಾದುದರಿಂದ 'ಅಸಿದ್ಧವದತ್ರಾಭಾತ್' ಸೂತ್ರದಿಂದ 'ಣೇರನಿಟಿ' ಸೂತ್ರದಿಂದ ಣಿಲೋಪಮಾಡುವಾಗ 'ಸ್ಯಸಿಚ್‌ಸೀಯುಟ್—' ಸೂತ್ರದಿಂದ ಬಂದ ಇಡಾಗಮ ಅಸಿದ್ಧವಾಗುವುದರಿಂದ ಇಡಾದಿಪ್ರತ್ಯಯವಿಲ್ಲದಿರುವುದರಿಂದ ಣಿಲೋಪ ಬರುತ್ತದೆ. ಭಾವ್ + ಇತಾ = ಭಾವಿತಾ । ಭಾವಿತಾರೌ । ಭಾವಿತಾರಃ ॥ ಇತ್ಯಾದಿ. 'ಸ್ಯಸಿಚ್‌ಸೀಯುಟ್—' ಸೂತ್ರದಿಂದ ಚಿಣ್ವದ್ಭಾವ, ಇಡಾಗಮ ಬಾರದಿದ್ದರೆ ಭಾವಿ + ತಾ ಎಂದಿರುವಾಗ 'ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ತಾಸಿಗೆ ಇಡಾಗಮ. ಇದು ಆಭೀಯಕಾರ್ಯವಾಗದಿರುವುದರಿಂದ ಅಸಿದ್ಧವಾಗುವುದಿಲ್ಲ. ಆಗ ಇಡಾದಿಪ್ರತ್ಯಯ ಪರದಲ್ಲಿರುವುದರಿಂದ ಣಿಲೋಪ ಬರುವುದಿಲ್ಲ. 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಣಿಚಿಗೆ ಗುಣ' ಅಯಾದೇಶ. ಭಾವಿ + ಇತಾ = ಭಾವೇ + ಇತಾ = ಭಾವಯಿತಾ । ಭಾವಯಿತಾರೌ । ಇತ್ಯಾದಿ. ಲೃಟ್ ॥ ಇಲ್ಲಿಯೂ ಹಿಂದಿನಂತೆ ಸ್ಯಕ್ಕೆ 'ಸ್ಯಸಿಚ್‌ಸೀಯುಟ್—, ಸೂತ್ರದಿಂದ ಇಡಾಗಮ ಬಂದಾಗ ಅದು ಅಸಿದ್ಧವಾಗುವುದರಿಂದ ಣಿಲೋಪ ಬಂದರೆ ಭಾವಿಷ್ಯತೇ । ಅದು ಬಾರದಿದ್ದರೆ ಭಾವಯಿಷ್ಯತೇ । ಇತ್ಯಾದಿ ಎರಡೆರಡು ರೂಪಗಳಾಗುತ್ತವೆ. ಲೋಟ್ ॥ ಭಾವ್ಯತಾಮ್ । ಲಙ್ ॥ ಅಭಾವ್ಯತ । ವಿಧಿಲಿಙ್ ॥ ಭಾವ್ಯೇತ । ಆಶೀರ್ಲಿಙ್ ॥ ತಾಸಿನಂತೆ ಎರಡೆರಡು ರೂಪ. ಭವಿಷೀಷ್ಟ, ಭಾವಯಿಷೀಷ್ಟ । ಲುಙ್ ॥ ಅಭಾವಿ + ಚ್ಲಿ + ತ. ಚ್ಲಿಗೆ ಚಿಣ್. ತಕ್ಕೆ ಲುಕ್. ಚಿಣ್ ನಿಮಿತ್ತವಾಗಿ ಣಿಚಿಗೆ ಲೋಪ. ಅಭಾವ್ + ಇ = ಅಭಾವಿ. ದ್ವಿವಚನಾದಿಗಳಲ್ಲಿ ಸಿಚ್ ಬಂದಾಗ ಲುಡಂತದಂತೆ ಎರಡೆರಡು ರೂಪ. ಅಭಾವಿಷಾತಾಮ್, ಅಭಾವಯಿಷಾ

ತಾಮ್ । ಅಭಾವಿಷತ, ಅಭಾವಯಿಷತ ॥ ಇತ್ಯಾದಿ. ಲೃಙ್ ॥ ಅಭಾವಿಷ್ಯತ, ಅಭಾವಯಿಷ್ಯತ ॥ ಇತ್ಯಾದಿ.

**ಬುಭೂಷ್ಯತೇ । ಬುಭೂಷಾಞ್ಚಕ್ರೇ । ಬುಭೂಷಿತಾ । ಬುಭೂಷಿಷ್ಯತೇ । ಬೋಭೂಯ್ಯತೇ ॥ ಬೋಭೂಯತೇ ॥**

ಣಿಜನ್ತದಮೇಲೆ ಕರ್ಮಣಿಪ್ರಯೋಗದ ರೂಪಗಳನ್ನು ವಿವರಿಸಿದ್ದಾಯಿತು. ಈಗ ಸನ್ನಂತದಮೇಲೆ ಕರ್ಮಣಿ ಲಕಾರ ಹೇಳುತ್ತಾನೆ. ಭವಿತುಂ ಇಚ್ಛತಿ, ಬುಭೂಷತಿ ಎಂದು ಇಚ್ಛಾರ್ಥದಲ್ಲಿ ಸನ್ ರೂಪ ಹೇಳಿದೆ. ಅಕರ್ಮಕಧಾತುವೇ (ಭೂ) ಪ್ರಕೃತಿಯಾಗಿರುವ ಸನ್ನಂತರೂಪ ಬುಭೂಷ. ಇದರಮೇಲೆ ಭಾವೇಪ್ರಯೋಗ ಬಭೂಷ್ಯತೇ ಎಂದಾಗುತ್ತದೆ. ಬುಭೂಷ ಎಂಬ ಸನ್ನಂತದಮೇಲೆ ಭಾವಾರ್ಥದಲ್ಲಿ ಲಕಾರ ಬಂದರೆ ಬುಭೂಷ+ತೇ ಎಂದಿರುವಾಗ ಯಕ್. ಬುಭೂಷ+ಯ+ತೇ. 'ಅತೋ ಲೋಪಃ' ಸೂತ್ರದಿಂದ ಯಕ್ ನಿಮಿತ್ತವಾಗಿ ಸನಿನ ಅಕಾರಕ್ಕೆ ಲೋಪ. ಬುಭೂಷ್ಯತೇ. ಎಲ್ಲಾ ವಚನಪುರುಷಗಳಲ್ಲಿಯೂ ಒಂದೇ ರೂಪ. ಬುಭೂಷಾಞ್ಚಕ್ರೇ । ಬುಭೂಷಿತಾ । ಬುಭೂಷಿಷ್ಯತೇ । ಬುಭೂಷ್ಯತಾಮ್ । ಅಬುಭೂಷ್ಯತ ॥ ಬುಭೂಷ್ಯೇತ । ಬುಭೂಷಿಷೀಷ್ಟ । (ಚಿಣ್) ಅಬುಭೂಷಿ । ಅಬುಭೂಷಿಷ್ಯತ ॥ ಹೀಗೆ ಹತ್ತು ಲಕಾರಗಳಲ್ಲಿಯೂ ರೂಪವನ್ನು ತಿಳಿಯಬೇಕು. ಪಿಪಠಿಷ ಇತ್ಯಾದಿ ಸನ್ನಂತಗಳು ಸಕರ್ಮಕವಾದುದರಿಂದ ಇವುಗಳಮೇಲೆ ಕರ್ಮಣಿಯಲ್ಲಿ ಲಕಾರ ಹೇಳಬೇಕು. ಅಮರಕೋಷಂ ಪಿಪಠಿಷತಿ ॥ ಅಮರಕೋಷಃ ಪಿಪಠಿಷ್ಯತೇ ॥ ಇತ್ಯಾದಿ.

ಬೋಭೂಯ್ಯತೇ ॥ ಯಙನ್ತದಮೇಲೆ ಭಾವಾರ್ಥದಲ್ಲಿ ಲಕಾರ ಹೇಳುತ್ತಾನೆ. ಬೋಭೂಯ ಯಙನ್ತ. ಇದರಮೇಲೆ ಭಾವಾರ್ಥದಲ್ಲಿ ಲಕಾರ ಬಂದರೆ ಬೋಭೂಯ +ತೇ ಎಂದಿರುವಾಗ ಯಕ್ ಬಂದು ಅದನ್ನು ನಿಮಿತ್ತೀಕರಿಸಿ 'ಅತೋ ಲೋಪಃ' ಸೂತ್ರದಿಂದ ಯಙಿನ ಅಕಾರಕ್ಕೆ ಲೋಪ. ಬೋಭೂಯ್ಯತೇ ಭಾವೇಪ್ರಯೋಗವಾದುದರಿಂದ ಒಂದೇ ರೂಪ. ಬೋಭೂಯಾಞ್ಚಕ್ರೇ । ಬೋಭೂಯಿತಾ । ಬೋಭೂಯಿಷ್ಯತೇ । ಬೋಭೂಯ್ಯತಾಮ್ । ಅಬೋಭೂಯ್ಯತ । ಬೋಭೂಯ್ಯೇತ । ಬೋಭೂಯಿಷೀಷ್ಟ । ಅಬೋಭೂಯಿ । ಅಬೋಭೂಯಿಷ್ಯತ । ಹೀಗೆ ಹತ್ತು ಲಕಾರಗಳಲ್ಲಿ ರೂಪಗಳನ್ನು ತಿಳಿಯಬೇಕು.

ಬೋಭೂಯತೇ ॥ ಯಙ್‌ಲುಗನ್ತದಮೇಲೆ ಭಾವೇಪ್ರಯೋಗ ತೋರಿಸುತ್ತಾನೆ. ಬೋಭೂ ಯಙ್‌ಲುಗನ್ತ. ಇದರಮೇಲೆ ಭಾವೇಲಕಾರ ಬಂದರೆ, ಬೋಭೂ +ತೇ ಎಂದಿರುವಾಗ ಯಕ್. ಬೋಭೂಯತೇ. ಬೋಭೂ+ಆಮ್ ಎಂದಿರುವಾಗ ಗುಣ, ಅವಾದೇಶ. ಬೋಭವಾಞ್ಚಕ್ರೇ । ಬೋಭವಿತಾ । 'ಸ್ಯಸಿಚ್ ಸೀಯುಟ್—' ಸೂತ್ರ ಬಂದರೆ ಬೋಭಾವಿತಾ ಎಂದಾಗುತ್ತದೆ. ಬೋಭಾವಿಷ್ಯತೇ, ಬೋಭವಿಷ್ಯತೇ । ಬೋಭೂಯತಾಮ್ । ಅಬೋಭೂಯತ । ಬೋಭೂಯೇತ । ಬೋಭಾವಿಷೀಷ್ಟ,

ಬೋಭವಿಷೀಷ್ಟ । ಅಬೋಭಾವಿ । ಅಬೋಭಾವಿಷ್ಯತ, ಅಬೋಭವಿಷ್ಯತ ॥ ಇತ್ಯಾದಿ ರೂಪಗಳನ್ನು ತಿಳಿಯಬೇಕು. ಯಜನ್ತ, ಯಙ್‌ಲುಗನ್ತಗಳು ಸಕರ್ಮಕಗಳಾದರೆ ಕರ್ಮಣಿಯಲ್ಲಿ ಲಕಾರ ಬರುತ್ತವೆ. ಹೀಗೆ ಪ್ರತ್ಯಯಾನ್ತಗಳ ಮೇಲೂ ಭಾವೇ ಪ್ರಯೋಗ, ಕರ್ಮಣಿಪ್ರಯೋಗ ರೂಪಗಳನ್ನು ತೋರಿಸಿ ಇನ್ನುಮುಂದೆ ಕೆಲವು ವಿಶೇಷ ಧಾತುಗಳಮೇಲೆ ಆ ಪ್ರಯೋಗದ ರೂಪಗಳನ್ನು ತೋರಿಸುತ್ತಾನೆ.

ಅಕೃತ್ಸಾರ್ವಧಾತುಕಯೋರ್ದೀರ್ಘಃ । ಸ್ತೂಯತೇ ವಿಷ್ಣುಃ । ಸ್ತಾವಿತಾ, ಸ್ತೋತಾ । ಸ್ತಾವಿಷ್ಯತೇ, ಸ್ತೋಷ್ಯತೇ । ಅಸ್ತಾವಿ । ಅಸ್ತಾವಿಷಾತಾಮ್ । ಅಸ್ತೋಷಾತಾಮ್ ॥

ಋ=ಗತೌ ॥ ಗುಣೋಽರ್ತಿಸಂಯೋಗಾದ್ಯೋಃ । ಅರ್ಯತೇ । ಸ್ಮೃ=ಸ್ಮರಣೇ ॥ ಸ್ಮರ್ಯತೇ । ಸಸ್ಮರೇ । ಉಪದೇಶಗ್ರಹಣಾಚ್ಚಿಣ್ವದಿಟ್ । ಆರಿತಾ, ಅರ್ತಾ । ಸ್ಮಾರಿತಾ, ಸ್ಮರ್ತಾ ॥ ಅನಿದಿತಾಮಿತಿ ನಲೋಪಃ । ಸ್ರಸ್ಯತೇ । ಇದಿತಸ್ತು ನನ್ದ್ಯತೇ ॥ ಸಂಪ್ರಸಾರಣಮ್ । ಇಜ್ಯತೇ ॥

ಷ್ಟುಞ್=ಸ್ತುತೌ. ಧಾತು. ಕರ್ಮಣಿಯಲ್ಲಿ ಲಕಾರ ಬಂದರೆ ಸ್ತು+ತೇ ಎಂದಿರುವಾಗ ಯಕ್. 'ಅಕೃತ್ಸಾರ್ವಧಾತುಕಯೋರ್ದೀರ್ಘಃ' ಸೂತ್ರದಿಂದ ಯಕ್ ನಿಮಿತ್ತವಾಗಿ ದೀರ್ಘ. ಸ್ತೂಯತೇ । ಸ್ತೂಯೇತೇ । ಸ್ತೂಯನ್ತೇ ॥ ಇತ್ಯಾದಿ. ತುಷ್ಟುವೇ ॥ ಲುಟ್ ಲೃಟ್‌ಗಳಲ್ಲಿ ಚಿಣ್ವದ್ಭಾವವಿಕಲ್ಪದಿಂದ ವೃದ್ಧಿ ವಿಕಲ್ಪ. ಸ್ತಾವಿತಾ. ಅನಿಟಾದರೂ 'ಸ್ಯಸಿಚ್—' ಸೂತ್ರದಿಂದಲೇ ಇಡಾಗಮ. ಚಿಣ್ವದ್ಭಾವ ಬಾರದಿರುವಾಗ ಅದರೊಡನೆ ಹೇಳಿದ ಇಡಾಗಮವೂ ಬರುವುದಿಲ್ಲ. ಸ್ತೋತಾ । ಸ್ತಾವಿಷ್ಯತೇ, ಸ್ತೋಷ್ಯತೇ । ಸ್ತೂಯತಾಮ್ । ಅಸ್ತೂಯತ । ಸ್ತೂಯೇತ । ಸ್ತಾವಿಷೀಷ್ಟ, ಸ್ತೋಷೀಷ್ಟ । ಅಸ್ತಾವಿ । ಅಸ್ತಾವಿಷ್ಯತ, ಅಸ್ತೋಷ್ಯತ ॥

ಋ=ಗತೌ ಧಾತು. ಋ+ಯ+ತೇ ಎಂದಿರುವಾಗ "ಗುಣೋಽರ್ತಿಸಂಯೋಗಾದ್ಯೋಃ" ಸೂತ್ರದಿಂದ ಋವಿಗೆ ಗುಣ. ರಪರವಾಗಿ ಗುಣ ಬಂದರೆ ಅರ್ಯತೇ ಎಂದಾಗುತ್ತದೆ. ಹೊಂದಲ್ಪಡುತ್ತದೆ ಎಂದರ್ಥ. ಲುಟಿನಲ್ಲಿ ಗುಣ ಬರುವುದರಿಂದ ಅರ್ ಎಂದಾಡಾಗ ಹಲನ್ತವಾದುದರಿಂದ "ಸ್ಯಸಿಚ್—"ಸೂತ್ರ ಪ್ರವೃತ್ತಿ ಹೇಗೆ ಬರುತ್ತದೆಯೆಂಬುದಕ್ಕೆ "ಉಪದೇಶೇ—" ಎಂಬ ವಾಕ್ಯದಿಂದ ಸಮಾಧಾನ ಹೇಳುತ್ತಾನೆ. ಉಪದೇಶಕಾಲದಲ್ಲಿ ಯಾವ ಅಚ್ ಇದೆಯೋ ಆ ಅಜನ್ತವಾದ ಧಾತುವಿಗೆ ಚಿಣಿನಂತೆ ಅಂಗಕಾರ್ಯ ಹೇಳಿದೆ' ಋ ಉಪದೇಶಕಾಲದಲ್ಲಿ ಅಜನ್ತವಾದುದರಿಂದ ಚಿಣ್ವದ್ಭಾವ ಇಡಾಗಮ ಬರುತ್ತದೆ. ಚಿಣ್ವದ್ಭಾವದಿಂದ ವೃದ್ಧಿ. ಆರಿತಾ । ಆರಿತಾರೌ । ಆರಿತಾರಃ ॥ ಇತ್ಯಾದಿ. ಚಿಣ್ವದ್ಭಾವ ಇಡಾಗಮ ಬಾರದಿದ್ದರೆ ಧಾತು ಅನಿಟ್ ಆದುದರಿಂದ ಗುಣ ಬಂದು ಅರ್ತಾ ಎಂದಾಗುತ್ತದೆ.

ಲೃಟಿನಲ್ಲಿ ಅರಿಷ್ಯತೇ । ಚಿಣ್ವದ್ಭಾವ ಇಡಾಗಮ ಬಾರದಿರುವಾಗ 'ಋದ್ಧನೋಃ ಸ್ಯೇ' ಸೂತ್ರದಿಂದ ಇಡಾಗಮ, ಗುಣ. ಅರಿಷ್ಯತೇ । ಇತ್ಯಾದಿ. ಅರ್ಯತಾಮ್ ಇತ್ಯಾದಿ ರೂಪಗಳನ್ನು ಊಹಿಸಿಕೊಳ್ಳಬೇಕು.

ಸ್ಮೃಧಾತುವಿಗೂ ಋವಿನಂತೇ ಕರ್ಮಣಿಯಲ್ಲಿ ರೂಪವಾಗುತ್ತದೆ. ಸ್ಮರ್ಯತೇ । ಸಸ್ಮರೇ ॥ ಸ್ಮಾರಿತಾ, ಸ್ಮರ್ತಾ । ಸ್ಮಾರಿಷ್ಯತೇ, ಸ್ಮರಿಷ್ಯತೇ । ಸ್ಮರ್ಯತಾಮ್ । ಅಸ್ಮರ್ಯತ । ಸ್ಮರ್ಯೇತ । ಸ್ಮಾರಿಷೀಷ್ಟ । ಸ್ಮೃಷೀಷ್ಟ । ಅಸ್ಮಾರಿ । ಅಸ್ಮಾರಿಷ್ಯತ, ಅಸ್ಮರಿಷ್ಯತ ॥

**ಸ್ರಂಸು**=ಅವಸ್ರಂಸನೇ. ಧಾತು. ಸನ್ಸ್+ಯ+ತೇ ಎಂದಿರುವಾಗ ಯಕ್ ಕಿತ್ತಾದುದರಿಂದ 'ಅನಿದಿತಾಂ ಹಲ ಉಪಧಾಯಾಃ ಕ್ಜಿತಿ' ಸೂತ್ರದಿಂದ ಧಾತುವಿನ ಉಪಧೆಯಾದ ನಕಾರಕ್ಕೆ ಲೋಪ. ಸ್ರಸ್ಯತೇ । ಇತ್ಯಾದಿ. **ಟುನದಿ**=ಸಮೃದ್ಧೌ. ಧಾತು. ಇದು ಇದಿತ್ತಾದುದರಿಂದ 'ಇದಿತೋ ನುಮ್ ಧಾತೋಃ' ಸೂತ್ರದಿಂದ ನುಮಾಗಮ ಹೊಂದುತ್ತದೆ. ನನ್ದ್+ಯ+ತೇ. ಇದಿತ್ತಾದುದರಿಂದ 'ಅನಿದಿತಾಂ—' ಸೂತ್ರದಿಂದ ನಲೋಪ ಬರುವುದಿಲ್ಲ. ನನ್ದ್ಯತೇ । ಇತ್ಯಾದಿ. ಸಂತೋಷಿಸಲ್ಪಡುವುದು.

**ಯಜ** ಧಾತು. ಕರ್ಮಣಿಯಲ್ಲಿ ಲಕಾರ ಬಂದಾಗ ಯಜ್+ಯ+ತೇ ಎಂದಿರುವಾಗ ಯಕ್ ಕಿತ್ತಾದುದರಿಂದ 'ವಚಿಸ್ವಪಿಯಜಾದೀನಾಂ ಕಿತಿ' ಸೂತ್ರದಿಂದ ಸಂಪ್ರಸಾರಣ ಬರುತ್ತದೆ. ಯಕಾರಕ್ಕೆ ಇಕಾರ ಸಂಪ್ರಸಾರಣ. ಇಅಜ್+ಯ+ತೇ. ಪೂರ್ವರೂಪ. ಇಜ್ಯತೇ, ಇಜ್ಯತಾಮ್, ಐಜ್ಯತ, ಇಜ್ಯೇತ । ಇತ್ಯಾದಿ. ಪೂಜಿಸಲ್ಪಡುವುದು ಎಂಧರ್ಥ.

**ತನು**=ವಿಸ್ತಾರೇ. ಧಾತು. ತನ್+ಯ+ತೇ ಎಂದಿರುವಾಗ ಆತ್ವವಿಕಲ್ಪ ಹೇಳುತ್ತಾನೆ.

ತನ್ ಧಾತುವಿಗೆ ಯಕಿನಲ್ಲಿ ಆತ್ವ ಹೇಳುವ ಸೂತ್ರ.

**೭೫೮. ತನೋತೇರ್ಯಕಿ ॥ ೭-೪-೪೪ ॥**

ಆಕಾರೋಽನ್ತಾದೇಶೋ ವಾ ಸ್ಯಾತ್ । ತಾಯತೇ, ತನ್ಯತೇ ॥

ತನೋತೇಃ, ಯಕಿ ॥ ದ್ವಿಪದ ಸೂತ್ರ. 'ವಿಡ್ವನೋರ—' ಸೂತ್ರದಿಂದ 'ಆತ್', 'ಯೇ ವಿಭಾಷಾ' ಸೂತ್ರದಿಂದ 'ವಿಭಾಷಾ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ತನು ಧಾತುವಿಗೆ ಯಕ್ ಪರದಲ್ಲಿರುವಾಗ ಆಕಾರವು ಅನ್ತಾದೇಶವಾಗಿ ಬರುತ್ತದೆ. ತಆ+ಯ+ತೇ ಸವರ್ಣದೀರ್ಘ. ತಾಯತೇ. ಆತ್ವ ಬಾರದಿದ್ದರೆ ತನ್ಯತೇ । ತೇನೇ । (ತಾನಿತಾ) ತನಿತಾ । (ತಾನಿಷ್ಯತೇ) ತನಿಷ್ಯತೇ । ಇತ್ಯಾದಿ. ವಿಸ್ತರಿಸಲ್ಪಡುತ್ತದೆ ಎಂದರ್ಥ.

**ತಪ**—ಸಂತಾಪೇ. ಧಾತು. ಕರ್ಮಣಿಯಲ್ಲಿ ಲಕಾರ. 'ಪಾಪಂ (ನಪುಂಸಕ ಪ್ರ.ಏ.) ಪುರುಷಂ ತಪತಿ.' 'ಪಾಪೇನ ಪುರುಷಃ ತಪ್ಯತೇ.' **ಲಿಟ್** ॥ ತೇಪೇ । **ಲುಟ್** ॥ (ತಾಪಿತಾ) ತಪ್ತಾ ॥ **ಲೃಟ್** ॥ (ತಾಪಿಷ್ಯತೇ) ತಪ್ಸ್ಯತೇ । ಇತ್ಯಾದಿ. **ಲುಙಿ**ನಲ್ಲಿ ಸ್ವಾಭಾವಿಕವಾಗಿ ಚ್ಲಿಗೆ ಚಿಣ್ ಬರುತ್ತಿದ್ದರೆ ಇಲ್ಲಿ ನಿಷೇಧ ಹೇಳುತ್ತಾನೆ.

ತಪ್ ಧಾತುವಿನ ಚ್ಲಿಗೆ ಚಿಣ್ ನಿಷೇಧ ಹೇಳುವ ಸೂತ್ರ.

೭೫೯. ತಪೋಽನುತಾಪೇ ಚ ॥ ೩-೧-೬೫ ॥

**ತಪಶ್ಚ್ಲೇಶ್ಚಿಣ್ ನ ಸ್ಯಾತ್ ಕರ್ಮಕರ್ತರಿ ಅನುತಾಪೇ ಚ। ಅನ್ವತಪ್ತ ಪಾಪೇನ ।**

ತಪಃ, ಅನುತಾಪೇ, ಚ ॥ ತ್ರಿಪದ ಸೂತ್ರ. 'ಚ್ಲೇಃ ಸಿಚ್' ಸೂತ್ರದಿಂದ 'ಚ್ಲೇಃ', 'ಚಿಣ್ ತೇ ಪದಃ' ಸೂತ್ರದಿಂದ 'ಚಿಣ್', 'ನ ರುಧಃ—' ಸೂತ್ರದಿಂದ 'ನ' ಪದಗಳು ಅನುವೃತ್ತವಾಗುತ್ತವೆ. ಚಕಾರದಿಂದ 'ಅಚಃ ಕರ್ಮಕರ್ತರಿ—' ಸೂತ್ರದಿಂದ 'ಕರ್ಮಕರ್ತರಿ' ಪದವು ಸಮುಚ್ಚಿತವಾಗುತ್ತದೆ. **ಸೂತ್ರಾರ್ಥ**— ತಪ್ ಧಾತುವಿಗೆ ಬಂದ ಚ್ಲಿಗೆ ಕರ್ಮಕರ್ತರಿ ಪ್ರಯೋಗದಲ್ಲಿಯೂ, ಅನುತಾಪ ರೂಪಾರ್ಥ ತೋರುವಾಗಲೂ ಚಿಣ್ ಬರುವುದಿಲ್ಲ. ಪ್ರಕೃತ ಅನುತಾಪ ಅರ್ಥ ತೋರುವುದರಿಂದ ಚಿಣ್ ಬರುವುದಿಲ್ಲ. ಸಾಮಾನ್ಯ ಸೂತ್ರದಿಂದ ಸಿಚ್. ಅನು+ಅತಪ್+ಸ್+ತ. 'ಝಲೋ ಝಲಿ' ಸಲೋಪ. ಅನ್ವತಪ್ತ. ಅನುತಾಪಾರ್ಥ ಸ್ಪಷ್ಟವಾಗಿ ತೋರಲು ಅನು ಉಪಸರ್ಗ ಸೇರಿಸಿರುತ್ತಾನೆ; ಚಿಣ್ವದ್ಭಾವವಿಲ್ಲ. (ಅನ್ವತಾಪಿಷಾತಾಮ್) ಅನ್ವತಪ್ಸಾತಾಮ್ । (ಅನ್ವತಾಪಿಷತ) ಅನ್ವತಪ್ಸತ । ಇತ್ಯಾದಿ. ಪಾಪವು ಪುರುಷನನ್ನು ಅನುತಾಪಗೊಳಿಸಿತು. ಪಾಪಂ (ಕರ್ತೃ) ಪುರುಷಂ (ಕರ್ಮ) ಅನ್ವತಾಪ್ಸೀತ್ ॥ ಪಾಪದಿಂದ ಪುರುಷನು ಅನುತಾಪಗೊಂಡನು. ಪಾಪೇನ ಪುರುಷಃ ಅನ್ವತಪ್ತ ॥ ಇತ್ಯಾದಿ ಪ್ರಯೋಗವಿಶೇಷವನ್ನು ತಿಳಿಯಬೇಕು.

**ಘುಮಾಸ್ಥೇತೀತ್ವಮ್ । ದೀಯತೇ । ಧೀಯತೇ । ದದೇ ॥**

**ಡುದಾಞ್**—ದಾನೇ. ಧಾತು. ಕರ್ಮಣಿಯಲ್ಲಿ ಲಕಾರ. ದಾ+ಯ+ತೇ ಎಂದಿರುವಾಗ 'ಘುಮಾಸ್ಥಾಗಾಪಾಜಹಾತಿಸಾಂ ಹಲಿ' ಸೂತ್ರದಿಂದ ದಾ ಧಾತುವಿನ ಆಕಾರಕ್ಕೆ ಈತ್ವ. ದೀಯತೇ. ಧಾಞ್ ಧಾತುವಿಗೂ ಹೀಗೆ ಈತ್ವ ಬಂದರೆ ಧೀಯತೇ । ಇತ್ಯಾದಿ. **ಲಿಟ್** ॥ ದದೇ ಕರ್ಮಣಿಯಲ್ಲಿಯೂ ಕರ್ತರಿಯಂತೇ ರೂಪ. ಕಾರ್ಯವ್ಯತ್ಯಾಸವಿಲ್ಲ. **ಲುಟಿ**ನಲ್ಲಿ ಅಜನ್ತವಾದುದರಿಂದ 'ಸ್ಯಸಿಚ್—' ಸೂತ್ರದಿಂದ ತಾಸಿಗೆ ಇಡಾಗಮ. ಚಿಣ್ವದ್ಭಾವ ಬಂದರೆ ದಾ+ಇತಾ ಎಂದಿರುವಾಗ ಯುಕಾಗಮ ಹೇಳುತ್ತಾನೆ.

ಆದನ್ತಧಾತುಗಳಿಗೆ ಯುಕಾಗಮ ಹೇಳುವ ಸೂತ್ರ.

**೭೬೦. ಆತೋ ಯುಕ್ ಚಿಣ್ಕೃತೋಃ || ೭-೩-೩೩ ||**

**ಆದನ್ತಾನಾಂ ಯುಗಾಗಮಃ ಸ್ಯಾಚ್ಚಿಣಿ ಞ್ಣಿತಿ ಕೃತಿ ಚ । ದಾಯಿತಾ, ದಾತಾ । ದಾಯಿಷೀಷ್ಟ, ದಾಸೀಷ್ಟ । ಅದಾಯಿ । ಅದಾಯಿಷಾತಾಮ್ || ಭಜ್ಯತೇ ||**

ಆತಃ, ಯುಕ್, ಚಿಣ್ಕೃತೋಃ || ತ್ರಿಪದ ಸೂತ್ರ. 'ಅಂಗಸ್ಯ' ಅಧಿಕಾರ. 'ಆತಃ' ಅದಕ್ಕೆ ವಿಶೇಷಣವಾದುದರಿಂದ ತದನ್ತಲಾಭ. 'ಅಚೋಞ್ಣಿತಿ' ಸೂತ್ರದಿಂದ ಅನುವೃತ್ತವಾದ 'ಞ್ಣಿತಿ' ಎಂಬುದು ಕೃತ್ತಿನಲ್ಲಿ ಅನ್ವಯಹೊಂದುತ್ತದೆ. ಞಿತ್, ಣಿತ್ತಾದ ಕೃತ್ ಪರವಾದಾಗ ಎಂದರ್ಥ. **ಸೂತ್ರಾರ್ಥ**—ಆಕಾರಾಂತವಾದ ಅಂಗಕ್ಕೆ ಚಿಣ್ ಮತ್ತು ಞಿತ್, ಣಿತ್ತಾದ ಕೃತ್ ಪ್ರತ್ಯಯ ಪರದಲ್ಲಿರುವಾಗ ಯುಕ್ ಆಗಮ ಬರುತ್ತದೆ. ಯುಕಿನಲ್ಲಿ ಯ್ ಉಳಿಯುತ್ತದೆ. ಕಿತ್ತಾದುದರಿಂದ ಆದನ್ತಕ್ಕೆ ಅನ್ತಾವಯವವಾಗಿ ಬರುತ್ತದೆ. ದಾ+ಇತಾ, ಎಂದಿರುವಾಗ ಚಿಣ್ವದ್ಭಾವವಿರುವುದರಿಂದ ಚಿಣ್ ಪರದಲ್ಲಿದೆಯೆಂದು ಯುಕ್ ಬಂದರೆ ದಾಯ್+ಇತಾ=ದಾಯಿತಾ ಎಂದಾಗುತ್ತದೆ. ಚಿಣ್ವದ್ಭಾವವಿಲ್ಲದಿದ್ದರೆ ದಾತಾ ಎಂದಾಗುತ್ತದೆ. ಹೀಗೆ ಚಿಣ್ವದ್ಭಾವದಲ್ಲಿ ಎರಡೆರಡು ರೂಪ.

ಲೃಟ್ || ದಾಯಿಷ್ಯತೇ, ದಾಸ್ಯತೇ । ದೀಯತಾಮ್ । ಅದೀಯತ । ದೀಯೇತ । ಆಶೀರ್ಲಿಙ್ || ದಾಯಿಷೀಷ್ಟ, ದಾಸೀಷ್ಟ । ಲುಙ್ || ಅದಾಯಿ । ಇಲ್ಲಿ ಸಾಕ್ಷಾತ್ ಚಿಣ್ ಪರವಾದುದರಿಂದ ಯುಕ್. ದ್ವಿವಚನಾದಿಗಳಲ್ಲಿ ಎರಡೆರಡು ರೂಪಗಳು. ಅದಾಯಿಷಾತಾಮ್ | ಚಿಣ್ವದ್ಭಾವವಿಲ್ಲದಿರುವಾಗ 'ಅದಾಸಾತಾಮ್' ಎಂದಿರುವಾಗ 'ಸ್ಥಾಘ್ವೋರಿಚ್ಚ' ಸೂತ್ರದಿಂದ ಆಕಾರಕ್ಕೆ ಇತ್ವ. ಅದಿಷಾತಾಮ್, ಅದಾಯಿಷತ, ಅದಿಷತ || ಇತ್ಯಾದಿ. ದಾಞ್ ಧಾತುವಿಗೂ ಹೀಗೆ ಎರಡೆರಡು ರೂಪಗಳು. ಅಧಾಯಿ । ಅಧಾಯಿಷಾತಾಮ್, ಅಧಿಷಾತಾಮ್ । ಅದಾಯಿಷತ, ಅಧಿಷತ || ಇತ್ಯಾದಿ.

ಭಞ್ಜೋ=ಆಮರ್ದನೇ. ಧಾತು. ಕರ್ಮಣಿಯಲ್ಲಿ ಲಕಾರ. ಭನ್ಜ್+ಯ+ತೇ ಎಂದಿರುವಾಗ 'ಅನಿದಿತಾಂ ಹಲಃ—' ಸೂತ್ರದಿಂದ ಉಪಧಾನಕಾರ ಲೋಪ. ಭಜ್ಯತೇ । ಭಜ್ಯೇತೇ । ಭಜ್ಯನ್ತೇ || ಇತ್ಯಾದಿ. ಲುಙಿನಲ್ಲಿ ನಲೋಪ ವಿಕಲ್ಪ ಹೇಳುತ್ತಾನೆ.

ಭಞ್ಜ ಧಾತುವಿಗೆ ನಲೋಪವಿಕಲ್ಪ ಹೇಳುವ ಸೂತ್ರ.

**೭೬೧. ಭಞ್ಜೇಶ್ಚ ಚಿಣಿ || ೬-೪-೩೩ ||**

**ನಲೋಪೋ ವಾ ಸ್ಯಾತ್ । ಅಭಾಜಿ, ಅಭಞ್ಜಿ || ಲಭ್ಯತೇ ||**

ಭಞ್ಜೇಃ, ಚ, ಚಿಣಿ ||ತ್ರಿಪದ ಸೂತ್ರ. ' ಶ್ನಾನ್ನಲೋಪಃ ' ಸೂತ್ರದಿಂದ 'ನ' ಎಂಬ ಲುಪ್ತಷಷ್ಠ್ಯೇಕಪದವೂ 'ಲೋಪಃ' ಪದವೂ, 'ಜಾನ್ತನಶಾಂ ವಿಭಾಷಾ ' ಸೂತ್ರದಿಂದ 'ವಿಭಾಷಾ' ಪದವೂ ಅನುವೃತ್ತವಾಗುತ್ತವೆ. **ಸೂತ್ರಾರ್ಥ** —ಭಞ್ಜ್ ಧಾತುವಿಗೆ ಚಿಣ್‌ಪರದಲ್ಲಿರುವಾಗ ವಿಕಲ್ಪವಾಗಿ ನಲೋಪ ಬರುತ್ತದೆ. ಅಭಞ್ಜ್ + ಚ್ಲಿ + ತ ಎಂದಿರುವಾಗ ' ಚಿಣ್ ಭಾವಕರ್ಮಣೋಃ ' ಸೂತ್ರದಿಂದ ಚ್ಲಿಗೆ ಚಿಣ್. 'ಚಿಣೋ ಲುಕ್' ಸೂತ್ರದಿಂದ ತಕ್ಕೆ ಲುಕ್. ಅಭಞ್ಜ್ + ಇ ಎಂದಿರುವಾಗ ನಲೋಪ ಈ ಸೂತ್ರದಿಂದ ಬಂದರೆ ಅಭಜ್ + ಇ ಎಂದಿರುವಾಗ 'ಅತ ಉಪಧಾಯಾಃ' ಸೂತ್ರದಿಂದ ಉಪಧಾವೃದ್ಧಿ. ಅಭಾಜಿ। ನಲೋಪ ಬಾರದಿದ್ದರೆ ಅಭಞ್ಜಿ ಎಂದಾಗುತ್ತದೆ. ಅಭಂಕ್ಷಾತಾಮ್ । ಇತ್ಯಾದಿ.

**ಡುಲಭ್ ಷ್**= ಪ್ರಾಪ್ತೌ. ಧಾತು. ಕರ್ಮಣಿಯಲ್ಲಿ ಲಕಾರ ಬಂದರೆ ಲಭ್ಯತೇ ಎಂದಾಗುತ್ತದೆ. ಲುಙನಲ್ಲಿ ಚ್ಲಿಗೆ ಚಿಣ್ ಬಂದಾಗ ಅಲಭ್ + ಇ ಎಂದಿರುವಾಗ ವಿಕಲ್ಪವಾಗಿ ನುಮಾಗಮ ಹೇಳುತ್ತಾನೆ.

ಲಭ್ ಧಾತುವಿಗೆ ನುಮಾಗಮ ಹೇಳುವ ಸೂತ್ರ.

**೭೬೨. ವಿಭಾಷಾ ಚಿಣ್ಣಮುಲೋಃ || ೭-೧-೬೯ ||**

**ಲಭೇರ್ನುಮಾಗಮೋ ವಾ ಸ್ಯಾತ್ || ಅಲಮ್ಭಿ, ಅಲಾಭಿ ||**

ಇತಿ ಭಾವಕರ್ಮಪ್ರಕ್ರಿಯಾ

ದ್ವಿಪದ ಸೂತ್ರ. ' ಲಭೇಶ್ಚ ' ಸೂತ್ರದಿಂದ ' ಲಭೇಃ ', ' ಇದಿತೋ ನುಮ್ ಧಾತೋಃ ' ಸೂತ್ರದಿಂದ ' ನುಮ್ ' ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಲಭ್ ಧಾತುವಿಗೆ ಚಿಣ್, ಣಮುಲ್ ಪ್ರತ್ಯಯ ಪರವಾದಾಗ ವಿಕಲ್ಪವಾಗಿ ನುಮಾಗಮ ಬರುತ್ತದೆ. ಪ್ರಕೃತ ಚಿಣ್ ಪರವಾದುದರಿಂದ ನುಮಾಗಮ ಬಂದರೆ ಅಲನ್‌ಭ್ + ಇ ನಕಾರಕ್ಕೆ ಅನುಸ್ವಾರಪರಸವರ್ಣ. ಅಲಮ್ಭಿ । ನುಮಾಗಮ ಬಾರದಿದ್ದರೆ ' ಅತ ಉಪಧಾಯಾಃ ' ವೃದ್ಧಿ. ಅಲಾಭಿ ಎಂದಾಗುತ್ತದೆ. ಅಲಪ್ಸಾತಾಮ್ । ಅಲಪ್ಸತ|| ಇತ್ಯಾದಿ.

# ೧೦. ಅಥ ಕರ್ಮಕರ್ತೃಪ್ರಕ್ರಿಯಾ

**ಯದಾ ಕರ್ಮೈವ ಕರ್ತೃತ್ವೇನ ವಿವಕ್ಷಿತಂ ತದಾ ಸಕರ್ಮಕಾಣಾಮಪ್ಯಕರ್ಮಕತ್ವಾತ್ ಕರ್ತರಿ ಭಾವೇ ಚ ಲಕಾರಃ ||**

ಕಾರಕಗಳು ಆರು ವಿಧವಾಗಿ ಮುಂದೆ ಕಾರಕ ಪ್ರಕರಣದಲ್ಲಿ ವಿವರಿಸುತ್ತಾನೆ. ಇವುಗಳಲ್ಲಿ ಕರ್ತೃಕಾರಕವೇ ಪ್ರಧಾನವಾಗಿದೆ. ಕರ್ತೃಕಾರಕದ ವ್ಯಾಪಾರಾಧೀನವಾಗಿ

ಇತರ ಕಾರಕಗಳ ವ್ಯಾಪಾರವುಂಟಾಗುತ್ತದೆ. 'ಚೈತ್ರಃ ವಹ್ನಿನಾ ಸ್ಥಾಲ್ಯಾಂ ತಂಡುಲಂ ಪಚತಿ.' ಚೈತ್ರನು ಬೆಂಕಿಯಿಂದ ತಪ್ಪಲೆಯಲ್ಲಿ ಅಕ್ಕಿಯನ್ನು ಬೇಯಿಸುತ್ತಾನೆ. ಇಲ್ಲಿ ಒಂದು ಪಾಕಕ್ರಿಯೆಯಲ್ಲಿ ಕರ್ತೃ, ಕರಣ, ಅಧಿಕರಣ, ಕರ್ಮಕಾರಕಗಳ ವ್ಯಾಪಾರ ತೋರುತ್ತದೆ. ಚೈತ್ರನ ವ್ಯಾಪಾರ ಪ್ರಧಾನವಾಗಿ ವಹ್ನ್ಯಾದಿಗಳ ವ್ಯಾಪಾರ ಚನ್ನಾಗಿ ನಡೆಯುತ್ತದೆಯೆಂದು ಸೂಚಿಸಲು ಅವುಗಳಿಗೂ ಕರ್ತೃತ್ವವಿವಕ್ಷಾ ಮಾಡುವುದಿದೆ. ಬೆಂಕಿ ಚನ್ನಾಗಿ ಉರಿದು ಅಡಿಗೆಯಾಗುವುದಾದರೆ ಆಗ ಅದರ ವ್ಯಾಪಾರಕ್ಕೆ ಪ್ರಾಧಾನ್ಯ ಕೊಟ್ಟು ಕರಣವಾದ ಅದಕ್ಕೇ ಕರ್ತೃತ್ವವಿವಕ್ಷಾ ಮಾಡುತ್ತಾರೆ. ಆವಾಗ 'ವಹ್ನಿಃ ಪಚತಿ' ಎಂದಾಗುತ್ತದೆ. ಹಾಗೇ ತಪ್ಪಲೆಯ ಪ್ರಾಶಸ್ತ್ಯ ಹೇಳಲು ಅದಕ್ಕೆ ಕರ್ತೃತ್ವವಿವಕ್ಷಾ ಮಾಡುತ್ತಾರೆ. 'ಸ್ಥಾಲೀ ಪಚತಿ.' ಕೆಲವು ಕಡೆ ಅಕ್ಕಿಯೇ ಚನ್ನಾಗಿದ್ದು ಬೇಗ ಅನ್ನವಾಗುವುದಾದರೆ. ಕರ್ಮವಾದ ತಂಡುಲಕ್ಕೇ ಕರ್ತೃತ್ವವಿವಕ್ಷಾಮಾಡುತ್ತಾರೆ. ಆಗ 'ತಂಡುಲಃ ಪಚ್ಯತೇ' (ಸ್ವಯಮೇವ) ಎಂದಾಗುತ್ತದೆ. 'ಚೈತ್ರಃ ತಂಡುಲಂ ಪಚತಿ.' ಇದು ಕರ್ತರಿ ಪ್ರಯೋಗ. ಸಕರ್ಮಕ ಧಾತು. ಇಲ್ಲಿ ಕರ್ಮಕ್ಕೆ ಕರ್ತೃತ್ವ ವಿವಕ್ಷಾ ಮಾಡಿದಾಗ ಲಕಾರವು ಕರ್ತೃಭೂತವಾದ ಕರ್ಮವನ್ನು ಹೇಳುತ್ತದೆ. ಆಗ ಕರ್ಮವಿಲ್ಲದಿರುವುದರಿಂದ ಧಾತು ಅಕರ್ಮಕವಾಗುತ್ತದೆ. ಅಕರ್ಮಕ ಧಾತುವಿನ ಮೇಲೆ ಕರ್ತರಿಯಲ್ಲಿಯೂ ಭಾವದಲ್ಲಿಯೂ ಲಕಾರ ಬರುತ್ತದೆ. ಇದನ್ನೇ 'ಯದಾ ಕರ್ಮೈವ—' ಎಂಬ ವಾಕ್ಯದಿಂದ ವಿವರಿಸುತ್ತಾನೆ. ಯಾವಾಗ ಕರ್ಮವೇ ಕರ್ತೃವೆಂದು ಎಣಿಸಲ್ಪಡುವುದೋ ಆಗ ಸಕರ್ಮಕ ಧಾತುಗಳೂ ಅಕರ್ಮಕ ಧಾತುಗಳಾಗುವುದರಿಂದ ಅದಕ್ಕೆ ಕರ್ತರಿಯಲ್ಲಿಯೂ, ಭಾವದಲ್ಲಿಯೂ ಲಕಾರ ಬರುತ್ತವೆ. ಪ್ರಕೃತ ತಂಡುಲವೇ ಕರ್ತೃವೆಂದು ವಿವಕ್ಷಾ ಮಾಡಿದುದರಿಂದ ಪಚ್ ಧಾತು ಅಕರ್ಮಕವಾಯಿತು. ಆಗ ಅದರ ಮೇಲೆ ಕರ್ತೃರಿಯಲ್ಲಿಯೂ, ಭಾವದಲ್ಲಿಯೂ ಲಕಾರಗಳು ಬರುತ್ತವೆ. ಕರ್ತರಿಯಲ್ಲಿ ಲಕಾರ ಬಂದರೆ ಪಚ್ + ಲಟ್ ಎಂದಿರುವಾಗ ಕರ್ತೃವಿಗೆ ಕರ್ಮವದ್ಭಾವ ಹೇಳುತ್ತಾನೆ.

### ಕರ್ತೃವಿಗೆ ಕರ್ಮವದ್ಭಾವ ಹೇಳುವ ಸೂತ್ರ.

### ೭೬೩. ಕರ್ಮವತ್ಕರ್ಮಣಾ ತುಲ್ಯಕ್ರಿಯಃ ॥ ೩–೧–೮೭ ॥

ಕರ್ಮಸ್ಥಯಾ ಕ್ರಿಯಯಾ ತುಲ್ಯಕ್ರಿಯಃ ಕರ್ತಾ ಕರ್ಮವತ್ ಸ್ಯಾತ್ । ಕಾರ್ಯಾತಿದೇಶೋಽಯಮ್ । ತೇನ ಯಗಾತ್ಮನೇಪದಚಿಣ್ ಚಿಣ್ವದಿಟಃ ಸ್ಯುಃ । ಪಚ್ಯತೇ ಫಲಮ್ । ಭಿದ್ಯತೇ ಕಾಷ್ಠಮ್ । ಅಪಾಚಿ । ಅಭೇದಿ । ಭಾವೇ, ಭಿದ್ಯತೇ ಕಾಷ್ಠೇನ ॥

ಇತಿ ಕರ್ಮಕರ್ತೃಪ್ರಕ್ರಿಯಾ

ಕರ್ಮವತ್, ಕರ್ಮಣಾ, ತುಲ್ಯಕ್ರಿಯಃ ॥ ತ್ರಿಪದ ಸೂತ್ರ. 'ಕರ್ತರಿ ಶಪ್' ಸೂತ್ರದಿಂದ 'ಕರ್ತರಿ' ಪದವು ಅನುವೃತ್ತವಾಗಿ ಪ್ರಥಮಾಂತವಾಗಿ ವಿಪರಿಣತವಾಗುತ್ತದೆ. 'ಕರ್ಮಣಾ' ಎಂಬುದಕ್ಕೆ 'ಕರ್ಮಸ್ಥ ಕ್ರಿಯಯಾ' (ಕರ್ಮದಲ್ಲಿರುವ ಕ್ರಿಯೆಯಿಂದ) ಎಂದರ್ಥ. ಸೂತ್ರಾರ್ಥ—ಕರ್ಮಕಾರಕದಲ್ಲಿರುವ ಕ್ರಿಯೆಯಿಂದ ಸಮಾನವಾದ ಕ್ರಿಯೆಯಿರುವ ಕರ್ತೃವು ಕರ್ಮದಂತೇ ಆಗುತ್ತಾನೆ. ಇದು ಅತಿದೇಶ ಸೂತ್ರ. ಅತಿದೇಶದಲ್ಲಿ ಎರಡು ವಿಧವಿದೆ—ಶಾಸ್ತ್ರಾತಿದೇಶ, ಕಾರ್ಯಾತಿದೇಶ. ಇಲ್ಲಿ ಕಾರ್ಯಾತಿದೇಶವೆಂದು ತಿಳಿಯಬೇಕು. ಕರ್ಮವದ್ಭಾವ ಅತಿದೇಶದಿಂದ ಕರ್ಮಣಿ ಪ್ರಯೋಗದಲ್ಲಿ ಬರುವ ಕಾರ್ಯಗಳು ಬರುತ್ತವೆ ಎಂದು ತಿಳಿಯಬೇಕು. ಕರ್ಮಣಿ ಲಕಾರದಂತೆ ಆಗುತ್ತದೆ ಎಂದು ತಾತ್ಪರ್ಯ. 'ಚೈತ್ರಃ ತಂಡುಲಂ ಪಚತಿ.' ಇಲ್ಲಿ ಕರ್ಮ ತಂಡುಲ. ಇವರಲ್ಲಿರುವ ಕ್ರಿಯೆಯೆಂದರೆ ವಿಕ್ಲತ್ತಿ (ಮೆತ್ತಗಾಗುವಿಗೆ). ಕರ್ಮಕರ್ತರಿ ಪ್ರಯೋಗದಲ್ಲಿಯೂ ಕರ್ಮದಲ್ಲಿರುವ ವಿಕ್ಲತ್ತಿಕ್ರಿಯೆಗೇ ಪ್ರಾಧಾನ್ಯವಿವಕ್ಷಾ ಮಾಡಿರುವುದರಿಂದ ಕರ್ಮವೇ ಕರ್ತೃವಾಗಿದೆ. ಆಗ ಕರ್ಮದಲ್ಲಿರುವ ಕ್ರಿಯೆಯೂ ಕರ್ಮರೂಪಕರ್ತೃವಿನಲ್ಲಿರುವ ಕ್ರಿಯೆಯೂ ಒಂದೇ ಆದುದರಿಂದ ಕರ್ಮವದ್ಭಾವ ಬರುತ್ತದೆ. ಇದರಿಂದ ಕರ್ಮಣಿ ಪ್ರಯೋಗದಲ್ಲಿ ಬರುವ ಯಕ್, ಆತ್ಮನೇಪದ, ಲುಙಿನಲ್ಲಿ ಚಿಣ್, ಸ್ಯಸಿಚ್‌ಸೀಯುಟ್‌ತಾಸ್‌ಗಳಲ್ಲಿ ವಿಕಲ್ಪವಾಗಿ ಚಿಣ್ವದ್ಭಾವ ಕಾರ್ಯಗಳು ಬರುತ್ತವೆ. (ಚೈತ್ರೇಣ) 'ತಂಡುಲಃ ಪಚ್ಯತೇ' (ಸ್ವಯಮೇವ) ಅಕ್ಕಿ ತಾನಾಗಿ ಬೇಯುತ್ತದೆ. 'ಪಚ್ಯತೇ ಫಲಮ್'. ಹಣ್ಣು ತಾನಾಗಿ ಮಾಗುತ್ತದೆ. ಇಲ್ಲಿ ಕರ್ಮಗತಪುರುಷವಚನಾದಿಗಳು ಬರುತ್ತವೆ. ಫಲೇ ಪಚ್ಯೇತೇ ॥ ಫಲಾನಿ ಪಚ್ಯಂತೇ ॥ ತ್ವಂ ಪಚ್ಯಸೇ ॥ ಅಹಂ ಪಚ್ಯೇ ॥ ಇತ್ಯಾದಿ. ಭಿದ್ಯತೇ ಕಾಷ್ಠಮ್ ॥ ಸೌದೆ ತಾನಾಗಿ ಸೀಳಾಗುತ್ತದೆ. ಲುಙಿನಲ್ಲಿ ಚ್ಲಿಗೆ ಚಿಣ್ ಬಂದರೆ ಅಪಾಚಿ ಎಂದಾಗುತ್ತದೆ. ಚಿಣ್ ಣಿತ್ತಾದುದರಿಂದ 'ಅತ ಉಪಧಾಯಾಃ' ಸೂತ್ರದಿಂದ ಉಪಧಾವೃದ್ಧಿ. 'ಚಿಣೋ ಲುಕ್' ಸೂತ್ರದಿಂದ ತ ಶಬ್ದಕ್ಕೆ ಲುಕ್. ಅಭಿದ್+ಇ+ತ. ತಕ್ಕೆ ಲುಕ್. ಲಘೂಪಧಗುಣ. ಹೀಗೆ ಕರ್ಮಕರ್ತರಿಯಲ್ಲಿ ಲಕಾರ ಬಂದಾಗ ಕರ್ಮಣಿಪ್ರಯೋಗದಂತೆಯೇ ರೂಪವಾಗುತ್ತವೆ. ಕರ್ಮಕ್ಕೆ ಮಾತ್ರ ಪ್ರಥಮಾವಿಭಕ್ತಿ. ಕರ್ಮಕರ್ತರಿಯಲ್ಲಿ ಎಲ್ಲಾ ಧಾತುಗಳೂ ಅಕರ್ಮಕಗಳಾದುದರಿಂದ ಅವುಗಳಿಗೆ ಕರ್ತರಿಯಲ್ಲಿ ಲಕಾರ ಬಂದಾಗ ಹಿಂದೆ ತೋರಿಸಿದ ರೂಪಗಳಾಗುತ್ತವೆ. ಇನ್ನು ಭಾವೇಪ್ರಯೋಗದಲ್ಲಿ ಲಕಾರ ಬಂದರೆ ಭಿದ್ಯತೇ ಕಾಷ್ಠೇನ, ಪಚ್ಯತೇ ಫಲೇನ ಎಂದಾಗುತ್ತದೆ. ಇಲ್ಲಿ ಲಕಾರ ಕರ್ಮಕರ್ತೃವಿನ ಕ್ರಿಯೆಯನ್ನು ಹೇಳುವುದರಿಂದ ಕರ್ಮರೂಪ ಕರ್ತೃ ಅಭಿಹಿತವಾಗದಿರುವುದರಿಂದ ಕರ್ತೃವಿಗೆ ತೃತೀಯಾವಿಭಕ್ತಿ ಬರುತ್ತದೆ. ಯುಗಾದಿಗಳನ್ನು ಹಿಂದಿನಂತೇ ತಿಳಿಯಬೇಕು. ಕ್ರಿಯಾ ಅಭಿಹಿತವಾಗುವುದರಿಂದ ದ್ವಿವಚನಾದಿಗಳಿಲ್ಲ. ಹತ್ತು ಲಕಾರಗಳಲ್ಲಿಯೂ ಒಂದೊಂದೇ ರೂಪ. ಹೀಗೆ ಇತರ ಧಾತುಗಳ ಕರ್ಮಕರ್ತರಿ ಪ್ರಯೋಗವನ್ನು ತಿಳಿದುಕೊಳ್ಳಬೇಕು.

# ೧೧. ಅಥ ಲಕಾರಾರ್ಥಪ್ರಕ್ರಿಯಾ

ವಿಶೇಷಾರ್ಥದಲ್ಲಿ ಲೃಟ್ ಹೇಳುವ ಸೂತ್ರ.

**೭೬೪. ಅಭಿಜ್ಞಾವಚನೇ ಲೃಟ್ ॥ ೩-೨-೧೧೨ ॥**

ಸ್ಮೃತಿಬೋಧಿನ್ಯುಪಪದೇ ಭೂತಾನದ್ಯತನೇ ಧಾತೋರ್ಲೃಟ್ । ಲಙೋಽಪವಾದಃ ॥ ವಸ=ನಿವಾಸೇ । ಸ್ಮರಸಿ ಕೃಷ್ಣ ಗೋಕುಲೇ ವತ್ಸ್ಯಾಮಃ । ಏವಂ ಬುಧ್ಯಸೇ, ಚೇತಯಸೇ ಇತ್ಯಾದಿಪ್ರಯೋಗೇಽಪಿ ॥

ಲಕಾರಗಳಿಗೆ ಸಾಮಾನ್ಯವಾಗಿ ವಿಧಿ, ಭೂತ, ಭವಿಷ್ಯತ್, ವರ್ತಮಾನಕಾಲ ವಿಶೇಷಗಳನ್ನು ಹಿಂದೆ ಹೇಳಿದೆ. ಈಗ ಆ ಲಕಾರಗಳಿಗೆ ವಿಶೇಷಾರ್ಥವನ್ನು ಹೇಳುತ್ತಾನೆ. ಅಭಿಜ್ಞಾ ಎಂದರೆ ಸ್ಮೃತಿ. ಅಭಿಜ್ಞಾ ಉಚ್ಯತೇ ಬೋಧ್ಯತೇ ಅನೇನ ಇತಿ ಅಭಿಜ್ಞಾ ವಚನಂ ॥ ತಸ್ಮಿನ್. 'ಭೂತೇ' ಅಧಿಕಾರ. 'ಅನದ್ಯತನೇ ಲಙ್' ಸೂತ್ರದಿಂದ 'ಅನದ್ಯತನೇ' ಅನುವೃತ್ತಿ. **ಸೂತ್ರಾರ್ಥ**—ಸ್ಮೃತಿಬೋಧಕಪದವು ಉಪಪದವಾಗಿ ಇರುವಾಗ (ಸಮೀಪದಲ್ಲಿರುವಾಗ) ಭೂತಾನದ್ಯತನಕಾಲಾರ್ಥದಲ್ಲಿ ಧಾತುವಿಗೆ ಲೃಟ್ ಬರುತ್ತದೆ. ಲೃಟಿಗೆ ಭವಿಷ್ಯದರ್ಥ ಹಿಂದೆ ಹೇಳಿದೆ. ಈಗ ಅದಕ್ಕೆ ಅಪವಾದವಾಗಿ ಭೂತಾರ್ಥದಲ್ಲಿ ಹೇಳುತ್ತಾನೆ. ಕಳೆದ ಅರ್ಧರಾತ್ರಿಯಿಂದ ಬರುವ ಅರ್ಧರಾತ್ರಿಯವರೆಗಿನ ಕಾಲ ಅದ್ಯತನವೆಂದೂ ಅದಕ್ಕಿಂತ ಭಿನ್ನವಾದುದು ಅನದ್ಯತನವೆಂದೂ ಹಿಂದೆ ಹೇಳಿದೆ. ಭೂತಾನದ್ಯತನ ಕಾಲದಲ್ಲಿ ಲಙ್ ಹೇಳಿದುದಕ್ಕೆ ಅಪವಾದ. ವಸ ಧಾತು. ವಾಸಮಾಡುವುದು ಅರ್ಥ. ಉದಾಹರಣೆ: ಸ್ಮರಸಿ ಕೃಷ್ಣ ಗೋಕುಲೇ ವತ್ಸ್ಯಾಮಃ ॥ ಗೋಕುಲದಲ್ಲಿ ವಾಸಮಾಡಿದೆವಷ್ಟೆ, ಕೃಷ್ಣ ಜ್ಞಾಪಕವಿದೆಯೇ ? ಇಲ್ಲಿ ಅಭಿಜ್ಞಾವಚನ ಸ್ಮರಸಿ ಎಂಬ ಪದ. ಇದು ಉಪಪದವಾಗಿರುವುದರಿಂದ ಲಙಿಗೆ ಬದಲಾಗಿ ಲೃಟ್ ಬಂದಿದೆ. ವಸ್+ಸ್ಯ+ಮಸ್ ಎಂದಿರುವಾಗ 'ಸಃ ಸ್ಯಾರ್ಧಧಾತುಕೇ' ಸೂತ್ರದಿಂದ ಧಾತುವಿನ ಸಕಾರಕ್ಕೆ ತಕಾರಾದೇಶ. 'ಅತೋ ದೀರ್ಘೋ ಯಞಿ' ದೀರ್ಘ. ವತ್ಸ್ಯಾಮಃ । ಎಂದಾಗಿದೆ. ಹೀಗೆಯೇ ಬುಧ್ಯಸೇ, ಚೇತಯಸೇ ಇತ್ಯಾದಿ ಪದಗಳು ಸ್ಮೃತಿವಾಚಕಗಳಾದುದರಿಂದ ಅವು ಉಪಪದವಾಗಿರುವಾಗ ಭೂತಾನದ್ಯತನಕಾಲದಲ್ಲಿ ಲೃಟ್ ಬರುತ್ತದೆ.

ಹಿಂದಿನ ಸೂತ್ರಕ್ಕೆ ಅಪವಾದ ಸೂತ್ರ.

**೭೬೫. ನ ಯದಿ ॥ ೩-೨-೧೧೩ ॥**

ಯದ್ಯೋಗೇ ಉಕ್ತಂ ನ । ಅಭಿಜಾನಾಸಿ ಕೃಷ್ಣ ಯದ್ವನೇ ಅಭುಞ್ಜ್ಮಹಿ ॥

ದ್ವಿಪದ ಸೂತ್ರ. ಯದಿ ಸಪ್ತಮೀ. ಯಚ್ಛಬ್ದದ ಸಂಬಂಧವಿರುವಾಗ ಅಭಿಜ್ಞಾವಚನದಲ್ಲಿ ಹೇಳಿದ ಲೃಟ್ ಬರುವುದಿಲ್ಲ. ಆಗ ಅನದ್ಯತನಭೂತದಲ್ಲಿ ಬರುವ ಲಙ್ ಲಕಾರವೇ ಬರುತ್ತದೆ. 'ಅಭಿಜಾನಾಸಿ—' ಉದಾಹರಣೆ. ಯಚ್ಛಬ್ದಯೋಗವಿರುವುದರಿಂದ ಲೃಟ್ ಬರಲಿಲ್ಲ. ವನದಲ್ಲಿ ಏನು ಊಟಮಾಡಿದೆವೋ ಅದನ್ನು ಜ್ಞಾಪಿಸಿಕೊಳ್ಳುವಿಯಷ್ಟೆ, ಎಂದರ್ಥ.

ಸ್ಮ ಯೋಗವಿರುವಾಗ ಲಟ್ ಹೇಳುವ ಸೂತ್ರ.

**೭೬೬. ಲಟ್ ಸ್ಮೇ ||೩-೨-೧೧೮||**

**ಲಿಟೋಽಪವಾದಃ । ಯಜತಿ ಸ್ಮ ಯುಧಿಷ್ಠಿರಃ ||**

ದ್ವಿಪದ ಸೂತ್ರ. ಸ್ಮ ಎಂಬುದು ಭೂತಕಾಲದ್ಯೋತಕ ಅವ್ಯಯ. ಸೂತ್ರಾರ್ಥ—ಸ್ಮಶಬ್ದಯೋಗವಿರುವಾಗ ಲಿಟ್ ವಿಷಯದಲ್ಲಿ ಲಟ್ ಬರುತ್ತದೆ. ಅನದ್ಯತನ ಪರೋಕ್ಷಭೂತದಲ್ಲಿ ಲಿಟ್ ಹೇಳಿದೆ. ಸ್ಮ ಶಬ್ದವಿದ್ದರೆ ಅದೇ ಅರ್ಥದಲ್ಲಿ ಲಟ್ ಬರುತ್ತದೆ. ಯಜತಿ ಸ್ಮ ಯುಧಿಷ್ಠಿರಃ|| ಯುಧಿಷ್ಠಿರನು ಯಾಗ ಮಾಡಿದ್ದನಂತೆ ಎಂದರ್ಥ. ಸಾಮಾನ್ಯಭೂತಕಾಲಿಕಲಕಾರ ತಿಳಿಯದಿದ್ದಾಗ ಲಟ್ ಪ್ರಯೋಗದೊಡನೆ ಸ್ಮ ಸೇರಿಸಿದರೆ ಭೂತಕಾಲಾರ್ಥ ಬರುತ್ತದೆ.

ವರ್ತಮಾನಸಾಮೀಪ್ಯದಲ್ಲಿ ಲಕಾರ ವಿಧಿಸುವ ಸೂತ್ರ.

**೭೬೭. ವರ್ತಮಾನಸಾಮೀಪ್ಯೇ ವರ್ತಮಾನವದ್ವಾ ||೩-೩-೧೩೧||**

**ವರ್ತಮಾನೇ ಯೇ ಪ್ರತ್ಯಯಾ ಉಕ್ತಾಸ್ತೇ ವರ್ತಮಾನಸಾಮೀಪ್ಯೇ ಭೂತೇ ಭವಿಷ್ಯತಿ ಚ ವಾ ಸ್ಯುಃ । ಕದಾಗತೋಽಸಿ । ಅಯಮಾಗಚ್ಛಾಮಿ, ಅಯಮಾಗಮಂ ವಾ । ಕದಾ ಗಮಿಷ್ಯಸಿ । ಏಷ ಗಚ್ಛಾಮಿ, ಗಮಿಷ್ಯಾಮಿ ವಾ ||**

ತ್ರಿಪದ ಸೂತ್ರ. ಸಮೀಪಮೇವ ಸಾಮೀಪ್ಯಂ|| ಸಮೀಪ, ಸಾಮೀಪ್ಯ ಎಲ್ಲಾ ಒಂದೇ ಅರ್ಥವನ್ನು ಕೊಡುತ್ತದೆ. ಸೂತ್ರಾರ್ಥ—'ವರ್ತಮಾನೇ ಲಟ್' ಈ ಸೂತ್ರವನ್ನಾರಂಭಿಸಿ 'ಉಣಾದಯೋ ಬಹುಲಮ್' ಈ ಸೂತ್ರದವರೆಗೆ ಯಾವ ಅರ್ಥ ವಿಶೇಷದಲ್ಲಿ ಯಾವ ಪ್ರಕೃತಿಯ ಮೇಲೆ ವರ್ತಮಾನಕಾಲದಲ್ಲಿ ಪ್ರತ್ಯಯಗಳನ್ನು ಹೇಳಿರುತ್ತಾನೋ ಅವೆಲ್ಲವೂ ಆಯಾಯ ಅರ್ಥವಿಶೇಷಗಳಲ್ಲಿ ಆಯಾಯ ಪ್ರಕೃತಿಗಳ ಮೇಲೆ ವರ್ತಮಾನಸಮೀಪಕಾಲವಾಚಕವಾದ ಭೂತಕಾಲದಲ್ಲಿಯೂ ಭವಿಷ್ಯತ್ಕಾಲದಲ್ಲಿಯೂ ವಿಕಲ್ಪವಾಗಿ ಬರುತ್ತವೆ. ಕದಾ ಆಗತೋಽಸಿ ? ಬಂದಿರುವವನನ್ನು ಕುರಿತು ಪ್ರಶ್ನವಾಕ್ಯ. ಯಾವಾಗ ಬಂದಿರುವಿ ? ಅದಕ್ಕೆ ಉತ್ತರ. ಅಯಮಾಗಚ್ಛಾಮಿ,

ಅಯಮಾಗಮಂ ವಾ || ಈ ನಾನು ಈಗತಾನೇ ಬಂದೆನು. ವರ್ತಮಾನಸಮೀಪವಾದ ಭೂತಕಾಲಾರ್ಥದಲ್ಲಿ ಲಟ್ ಬಂದಿದೆ. ಇದು ವಿಕಲ್ಪವೆಂದುದರಿಂದ ಆಗಮಂ ಎಂದು ಭೂತಾರ್ಥದಲ್ಲಿ ಲುಙ್ ಹೇಳಿದ್ದಾನೆ. ಹೀಗೆ ವರ್ತಮಾನಸಮೀಪವಾದ ಭೂತಕಾಲದಲ್ಲಿ ವರ್ತಮಾನ ಪ್ರತ್ಯಯವಾದ ಲಟನ್ನು ಹೇಳಿ ವರ್ತಮಾನಸಮೀಪವಾದ ಭವಿಷ್ಯತ್ಕಾಲದಲ್ಲಿ ಲಟ್ ಹೇಳುತ್ತಾನೆ. ಕದಾ ಗಮಿಷ್ಯಸಿ ? ಯಾವಾಗ ಹೋಗುತ್ತೀಯೆಂದು ಭವಿಷ್ಯತ್ತಿನ ಪ್ರಶ್ನೆ. ಏಷ ಗಚ್ಛಾಮಿ, ಗಮಿಷ್ಯಾಮಿ ವಾ || ಇದು ಉತ್ತರ. ಈ ನಾನು ಹೋಗುತ್ತೇನೆ. ವರ್ತಮಾನಸಮೀಪ ಭವಿಷ್ಯತ್ಕಾಲಾರ್ಥದಲ್ಲಿ ವರ್ತಮಾನಕಾಲವಾಚಕ ಲಟ್ ಬಂದಿದೆ. ಇದು ಬಾರದಿದ್ದರೆ ಭವಿಷ್ಯತ್ತಿನಲ್ಲಿ ಲೃಟೇ ಬಂದರೆ ಗಮಿಷ್ಯಾಮಿ ಎಂದಾಗುತ್ತದೆ. ಹೀಗೆ ಭೂತಭವಿಷ್ಯತ್ಕಾಲಗಳಲ್ಲಿಯೂ ಅತಿಸಾಮೀಪ್ಯ ಸೂಚಿಸಲು ವರ್ತಮಾನಕಾಲವಾಚಕ ಪ್ರತ್ಯಯಗಳು ವಿಕಲ್ಪವಾಗಿ ಬರುತ್ತವೆ.

ಕಾರ್ಯಕಾರಣಭಾವದಲ್ಲಿ ಲಿಙ್ ಹೇಳುವ ಸೂತ್ರ.

೭೬೮. ಹೇತುಹೇತುಮತೋರ್ಲಿಙ್ || ೩–೩–೧೫೬ ||

ವಾ ಸ್ಯಾತ್ । ಕೃಷ್ಣಂ ನಮೇಚ್ಚೇತ್ಸುಖಂ ಯಾಯಾತ್ । ಕೃಷ್ಣಂ ನಂಸ್ಯತಿ ಚೇತ್ಸುಖಂ ಯಾಸ್ಯತಿ । (ಭವಿಷ್ಯತ್ಯೇವೇಷ್ಯತೇ) ನೇಹ । ಹನ್ತೀತಿ ಪಲಾಯತೇ || ವಿಧಿನಿಮನ್ತ್ರಣೇತಿ ಲಿಙ್ || ವಿಧಿಃ ಪ್ರೇರಣಂ, ಭೃತ್ಯಾದೇರ್ನಿಕೃಷ್ಟಸ್ಯ ಪ್ರವರ್ತನಮ್ । ಯಜೇತ|| ನಿಮನ್ತ್ರಣಂ ನಿಯೋಗಕರಣಮ್, ಆವಶ್ಯಕೇ ಶ್ರಾದ್ಧಭೋಜನಾದೌ ದೌಹಿತ್ರಾದೇಃ ಪ್ರವರ್ತನಮ್ । ಇಹ ಭುಞ್ಜೀತ || ಆಮನ್ತ್ರಣಂ ಕಾಮಚಾರಾನುಜ್ಞಾ । ಇಹಾಸೀತ || ಅಧೀಷ್ಟಂ ಸತ್ಕಾರಪೂರ್ವಕೋವ್ಯಾಪಾರಃ । ಪುತ್ರಮಧ್ಯಾಪಯೇದ್ಭವಾನ್ || ಸಂಪ್ರಶ್ನಃ ಸಂಪ್ರಧಾರಣಮ್ । ಕಿಂ ಭೋ ವೇದಮಧೀಯೀಯ ಉತ ತರ್ಕಮ್ । ಪ್ರಾರ್ಥನಂ ಯಾಚ್ಞಾ । ಭೋ ಭೋಜನಂ ಲಭೇಯ । ಏವಂ ಲೋಟ್ ||

ಇತಿ ಲಕಾರಾರ್ಥಪ್ರಕ್ರಿಯಾ

ಹೇತುಹೇತುಮತೋಃ, ಲಿಙ್ || ದ್ವಿಪದ ಸೂತ್ರ. ಹೇತು, ಹೇತುಮತ್ತಾದ ಕಾರ್ಯವು ತೋರುತ್ತಿರುವಾಗ ಧಾತುವಿಗೆ ಲಿಙ್ ವಿಕಲ್ಪವಾಗಿ ಬರುತ್ತದೆ. ಹೇತುವೆಂದರೆ ಕಾರಣ. ಹೇತುಮತ್ ಅಂದರೆ ಕಾರಣವುಳ್ಳದ್ದು ಕಾರ್ಯ. ಕಾರ್ಯಕಾರಣಭಾವ ತೋರುವಾಗ ಲಿಙ್ ವಿಕಲ್ಪವೆಂದರ್ಥ. ಬಾರದಿದ್ದರೆ ಪೂರ್ವಪ್ರಾಪ್ತವಾದ ಲೃಟ್ ಬರುತ್ತದೆ 'ಕೃಷ್ಣಂ ನಮೇತ್ ಚೇತ್ ಸುಖಂ ಯಾಯಾತ್.' ಇದು ಉದಾಹರಣೆ. ಕೃಷ್ಣನನ್ನು ನಮಸ್ಕರಿಸಿದರೆ ಸುಖವನ್ನು ಹೊಂದಿಯಾನು ಇಲ್ಲಿ ಕೃಷ್ಣನ ನಮಸ್ಕಾರ ಸುಖಪ್ರಾಪ್ತಿಗೆ ಕಾರಣ (ಹೇತು). ಕೃಷ್ಣನಮಸ್ಕಾರದಿಂದ ಸುಖಪ್ರಾಪ್ತಿಯಾಗುವುದರಿಂದ ಅದು ಕಾರ್ಯ (ಹೇತುಮತ್). ಆದುದರಿಂದ ಲಿಙ್ ಬಂದಿದೆ. ಇದು ಬಾರದಿ

ದ್ದಾಗ ಲೃಟ್ ಎಂದುದರಿಂದ ಅದಕ್ಕೆ ಉದಾಹರಣೆ ತೋರಿಸುತ್ತಾನೆ. 'ಕೃಷ್ಣಂ ನಂಸ್ಯತಿ—' ಇತ್ಯಾದಿ. ಇಲ್ಲಿ ವಾರ್ತಿಕಕಾರರು ನಿಯಮಮಾಡುತ್ತಾರೆ. ಹೀಗೆ ಲಿಙ್ ಬರಬೇಕಾದರೆ ಭವಿಷ್ಯದರ್ಥವೇ ತೋರುತ್ತಿರಬೇಕು. ಇಲ್ಲವಾದರೆ ಲಿಙ್ ಬರುವುದಿಲ್ಲ. ನೇಹ. 'ಹನ್ತೀತಿ ಪಲಾಯತೇ.' ಕೊಲ್ಲುತ್ತಾನೆಂದು ಓಡುತ್ತಾನೆ. ಇಲ್ಲಿ ಕಾರ್ಯಕಾರಣಭಾವ ತೋರಿದರೂ ವರ್ತಮಾನಾರ್ಥ ತೋರುವುದರಿಂದ ಲಿಙ್ ಬರುವುದಿಲ್ಲ. ಭವಿಷ್ಯತ್ ತೋರದಿರುವುದರಿಂದ ಲೃಟ್ ಕೂಡಾ ಬರುವುದಿಲ್ಲ.

ವಿಧಿನಿಮನ್ತ್ರಣೇತಿ ಲಿಙ್ || ವಿಧಿನಿಮನ್ತ್ರಣಾಮನ್ತ್ರಣಾಧೀಷ್ಟಸಂಪ್ರಶ್ನ ಪ್ರಾರ್ಥನೇಷು ಲಿಙ್ || ಇದು ಹಿಂದೆ ವ್ಯಾಖ್ಯಾತವಾಗಿದೆ. (ಸೂ. ೪೩೬) ಪ್ರಕರಣವನ್ನು ಅನುಸರಿಸಿ ಇಲ್ಲಿ ಪುನಃ ಹೇಳಿರುತ್ತಾನೆ. ವಿಧ್ಯಾದಿಗಳ ಅರ್ಥಗಳು ಹಿಂದೆ ವಿವೃತವಾಗದಿರುವುದರಿಂದ ಈಗ ವಿವರಿಸುತ್ತಾನೆ. ವಿಧಿಯೆಂದರೆ ಪ್ರೇರಣೆ ; ಅಂದರೆ ತನಗಿಂತ ಕಡಿಮೆಯಾಗಿರುವವನನ್ನು (ಸೇವಕ) ಯಾವುದಾದರೂ ಕಾರ್ಯದಲ್ಲಿ ಪ್ರೇರೇಪಿಸುವುದು. ಉದಾ.—ಯಜೇತ | ಯಾಗಮಾಡು. ಶ್ರುತಿಹೇಳುವ ಮಾತೆಂದು ತಿಳಿದರೆ ಅದು ನಮಗೆ ಬೋಧಿಸುತ್ತದೆ. ನಿಮನ್ತ್ರಣಂ = ನಿಯೋಗಕರಣಮ್. ಆವಶ್ಯಕವಾಗಿ ಮಾಡಬೇಕಾದ ಶ್ರಾದ್ಧಭೋಜನಾದಿಗಳಲ್ಲಿ ಮೊಮ್ಮಗ ಮುಂತಾದವರ ಪ್ರವರ್ತನೆ. ಶ್ರಾದ್ಧಭೋಜನಕ್ಕೆ ಮೊಮ್ಮಗನು ಶ್ರೇಷ್ಠನೆಂದು ಸ್ಮೃತಿಯಲ್ಲಿ ಹೇಳಿದೆ. ಇಹ ಭುಞ್ಜೀತ || ಉದಾಹರಣೆ. ಶ್ರಾದ್ಧ ಊಟಮಾಡಿ ಎಂದರ್ಥ. ಆಮನ್ತ್ರಣವೆಂದರೆ ಇಷ್ಟಬಂದಂತೆ ಒಪ್ಪುವುದು. ಅಭಿಲಾಷಾವಿಷಯದಲ್ಲಿ ಅನುಮತಿ ಕೊಡುವುದು. 'ಇಹ ಆಸೀತ.' ಇಲ್ಲಿ ಕುಳಿತುಕೊಳ್ಳಿರಿ. ಅಧೀಷ್ಟವೆಂದರೆ ಸತ್ಕಾರಪೂರ್ವಕವಾದ ವ್ಯಾಪಾರ. 'ಪುತ್ರಂ ಅಧ್ಯಾಪಯೇತ್ ಭವಾನ್.' ಉಪಾಧ್ಯಾಯರ ಸಮೀಪ ಮಗನನ್ನು ಕರೆದುಕೊಂಡು ಹೋಗಿ ಗೌರವದಿಂದ ಹೇಳುವ ಮಾತು. ತಾವು ಮಗನನ್ನು ಓದಿಸಬೇಕು. ಸಂಪ್ರಶ್ನವೆಂದರೆ ನಿಶ್ಚಯಮಾಡುವುದು. 'ಕಿಂ ಭೋ ವೇದಮಧೀಯೀಯ ಉತ ತರ್ಕಮ್ ?' ವೇದವನ್ನು ಓದಲೇ ಅಥವಾ ತರ್ಕವನ್ನು ಓದಲೇ ? ಇಲ್ಲಿ ನಿಶ್ಚಯವಿಷಯಕ ಪ್ರಶ್ನೆ ತೋರುತ್ತದೆ. ಪ್ರಾರ್ಥನೆಯೆಂದರೆ ಬೇಡುವುದು. 'ಭೋ ಭೋಜನಂ ಲಭೇಯ.' ಸ್ವಾಮಿ, (ತಮ್ಮಿಂದ) ಊಟ ಸಿಗುತ್ತದೆಯೇ ? ಎಂದರ್ಥ. ಪ್ರಾರ್ಥನಾ ತೋರುತ್ತದೆ. ಈ ಎಲ್ಲಾ ಅರ್ಥಗಳನ್ನು ಸಂಗ್ರಹಿಸಲು ಪ್ರವರ್ತನೆಯಲ್ಲಿ ಲಿಙ್ ಹೇಳುವುದುಚಿತವೆಂದು ವ್ಯಾಖ್ಯಾಕಾರರು ನಿರ್ಧರಿಸಿರುತ್ತಾರೆ. ಹೀಗೆ ವಿಧ್ಯಾದಿಗಳಲ್ಲಿ ಲಿಙ್ ಬರುವುದಲ್ಲದೇ ಲೋಟ್ ಲಕಾರವೂ ಬರುತ್ತದೆಂದು ತಿಳಿಯಬೇಕು.

ಹೀಗೆ ತಿಙನ್ತಪ್ರಕ್ರಿಯೆ ಸಮಾಪ್ತವಾಗಿದೆ.

# ೧೨. ಅಥ ಕೃದನ್ತೇ ಕೃತ್ಯಪ್ರಕ್ರಿಯಾ

ಅಧಿಕಾರಸೂತ್ರ.

### ೭೬೯. ಧಾತೋಃ || ೩-೧-೯೧ ||

ಆ ತೃತೀಯಾಧ್ಯಾಯಸಮಾಪ್ತೇರ್ಯೇ ಪ್ರತ್ಯಯಾಸ್ತೇ ಧಾತೋಃ ಪರೇ ಸ್ಯುಃ ! 'ಕೃದತಿಙ್' ಇತಿ ಕೃತ್ಸಂಜ್ಞಾ ||

ಇದುವರೆಗೆ ಕ್ರಿಯಾಪದಗಳನ್ನೂ ಆಖ್ಯಾತಪ್ರತ್ಯಯಗಳನ್ನೂ ವಿವರಿಸಿ ಇನ್ನು ಮುಂದೆ ಕೃದನ್ತಶಬ್ದಗಳ ವಿವರವನ್ನು ತೋರಿಸುತ್ತಾನೆ. 'ಸುಪ್ತಿಙನ್ತಂ ಪದಮ್' ಸೂತ್ರದಲ್ಲಿ ಸುಬನ್ತ, ತಿಙನ್ತ ಪದಗಳಿಗೆ ಪದಸಂಜ್ಞೆ ಹೇಳಿದೆ. ಸಾಮಾನ್ಯವಾಗಿ ಸುಬನ್ತ ಪದಗಳನ್ನು ಮೊದಲು ಹೇಳಿ, ಆಮೇಲೆ ತಿಙನ್ತಪದಸ್ವರೂಪ ವಿವರಿಸಿ ಈಗ 'ಕೃತ್ತದ್ಧಿತಸಮಾಸಾಶ್ಚ' ಸೂತ್ರಾರ್ಥದ ವಿವರಣೆಗೋಸ್ಕರ ಮೊದಲು ಕೃದನ್ತವನ್ನು ತಿಳಿಸಲು ಈ ಪ್ರಕರಣ ಆರಬ್ಧವಾಗಿದೆ. ಕೃದನ್ತವೆಂದರೇನೆಂಬುದನ್ನು ಮೂಲದಿಂದಲೇ ತಿಳಿಯಬಹುದು. 'ಧಾತೋಃ' ಎಂಬುದು ಅಧಿಕಾರಸೂತ್ರ. ಅಧಿಕಾರಸೂತ್ರಕ್ಕೆ ತನ್ನ ಸ್ಥಳದಲ್ಲಿ ಅರ್ಥವಿಲ್ಲವೆಂದು ಹಿಂದೆ ಹೇಳಿದೆ. ತನ್ನ ಅರ್ಥವನ್ನು ಉತ್ತರಸೂತ್ರಾರ್ಥದೊಡನೆ ಸೇರಿಸಿ ಒಂದೇ ವಾಕ್ಯಾರ್ಥಜ್ಞಾನವನ್ನುಂಟುಮಾಡುತ್ತದೆ. ಮೂರನೇ ಅಧ್ಯಾಯದ ಒಂದನೇ ಪಾದದಲ್ಲಿ ಈ ಸೂತ್ರ ಹೇಳಿದೆ. ಮೂರನೇ ಅಧ್ಯಾಯ ಮುಗಿಯುವವರೆಗೂ ಇದಕ್ಕೆ ಸಂಬಂಧವಿದೆ. ಮುಂದಿನ ಸೂತ್ರಾರ್ಥವನ್ನು ಸೇರಿಸಿ ಅರ್ಥವನ್ನು ವೃತ್ತಿಯಲ್ಲಿ ತೋರಿಸಿರುತ್ತಾನೆ. ಇಲ್ಲಿಂದ ಮುಂದೆ ಮೂರನೇ ಅಧ್ಯಾಯ ಮುಗಿಯುವವರೆಗೂ ಯಾವ ಯಾವ ಪ್ರತ್ಯಯಗಳನ್ನು ಹೇಳುತ್ತಾನೋ ಅವು ಧಾತುವಿನ ಪರಕ್ಕೆ ಬರುತ್ತವೆಯೆಂದು ತಿಳಿಯಬೇಕು. 'ಕೃದತಿಙ್' (ಸೂತ್ರ ೩೦೪) ಈ ಸೂತ್ರವು ಶಬ್ದಾಧಿಕಾರದಲ್ಲಿ ಬಂದಿದೆ. 'ಧಾತೋಃ' ಎಂಬ ಅಧಿಕಾರದಲ್ಲಿ ಹೇಳಿದ 'ತಿಙ್' (೧೮) ಭಿನ್ನವಾದ ಪ್ರತ್ಯಯಗಳಿಗೆ 'ಕೃತ್' ಎಂದು ಹೆಸರು. ಆಖ್ಯಾತಭಿನ್ನವಾಗಿ ಧಾತುವಿಗೆ ಹೇಳಿದ ಪ್ರತ್ಯಯವೆಂದರ್ಥ. ಈ ಕೃತ್ ಪ್ರತ್ಯಯಾನ್ತ ಶಬ್ದಕ್ಕೆ ಕೃದನ್ತಶಬ್ದವೆಂದು ಹೆಸರು. ಈಗ ಕೃತ್ ಪ್ರತ್ಯಯಗಳಲ್ಲಿ ಅಸಮಾನವಾದ ಅಪವಾದ ಪ್ರತ್ಯಯಗಳಿಗೆ ವಿಕಲ್ಪಬಾಧ್ಯಬಾಧಕ ಭಾವ ಹೇಳುತ್ತಾನೆ.

ಅಸರೂಪ ಪ್ರತ್ಯಯಗಳಿಗೆ ವಿಕಲ್ಪಬಾಧಕತ್ವ ಹೇಳುವ ಸೂತ್ರ.

### ೭೭೦. ವಾಽಸರೂಪೋಽಸ್ತ್ರಿಯಾಮ್ || ೩-೧-೯೪ ||

ಅಸ್ಮಿನ್ ಧಾತ್ವಧಿಕಾರೇಽಸರೂಪೋಽಪವಾದಪ್ರತ್ಯಯ ಉತ್ಸರ್ಗಸ್ಯ ಬಾಧಕೋ ವಾ ಸ್ಯಾತ್, ಸ್ತ್ರ್ಯಧಿಕಾರೋಕ್ತಂ ವಿನಾ ||

ವಾ, ಅಸರೂಪಃ, ಅಸ್ತ್ರಿಯಾಮ್ ‖ ತ್ರಿಪದ ಸೂತ್ರ. **ಸೂತ್ರಾರ್ಥ**—ಈ ಧಾತ್ವಧಿಕಾರದಲ್ಲಿ ಹೇಳಿದ ಸಮಾನರೂಪವಿಲ್ಲದ ಅಪವಾದ ಪ್ರತ್ಯಯವು ಉತ್ಸರ್ಗ ಸೂತ್ರಕ್ಕೆ ವಿಕಲ್ಪವಾಗಿ ಬಾಧಕವಾಗುತ್ತದೆ. 'ಸ್ತ್ರಿಯಾಂ' ಎಂಬ ಅಧಿಕಾರದಲ್ಲಿ ಈ ನಿಯಮವಿಲ್ಲ. ಸಾಮಾನ್ಯ ಸೂತ್ರಕ್ಕೆ ವಿಶೇಷ ಸೂತ್ರ ನಿತ್ಯವಾಗಿ ಬಾಧಕವಾದರೆ ಇಲ್ಲಿ ವಿಕಲ್ಪವಾಗಿ ಬಾಧ್ಯಬಾಧಕಭಾವ ಹೇಳುತ್ತಾನೆ. ಇದು ಪರಿಭಾಷಾಸೂತ್ರ. ಧಾತ್ವಧಿಕಾರದಲ್ಲಿರುವ ಸೂತ್ರಗಳಲ್ಲಿ ಹೋಗಿ ನಿಯಮಮಾಡುತ್ತದೆ. ಅಸಮಾನರೂಪವುಳ್ಳ ಪ್ರತ್ಯಯಗಳಲ್ಲಿ ನಿತ್ಯವಾಗಿ ಬಾಧ್ಯಬಾಧಕಭಾವ ಬಂದರೆ ಇಲ್ಲಿ ವಿಕಲ್ಪಬಾಧ್ಯಬಾಧಕ ಭಾವ ಹೇಳುತ್ತಾನೆ. 'ಸ್ತ್ರಿಯಾಂಕ್ತಿನ್' ಎಂಬಲ್ಲಿಂದ ಸ್ತ್ರ್ಯಧಿಕಾರ. ಇಲ್ಲಿ ಈ ವಿಕಲ್ಪಬಾಧ್ಯಬಾಧಕಭಾವವಿಲ್ಲ. ಅಲ್ಲಿ ನಿತ್ಯವಾಗಿ ಬಾಧ್ಯಬಾಧಕಭಾವ ಬರುತ್ತದೆಂದು ತಿಳಿಯಬೇಕು. 'ಣ್ವುಲ್‌ತೃಚೌ' ಇದು ಸಾಮಾನ್ಯ ಸೂತ್ರ. ಧಾತುಸಾಮಾನ್ಯಕ್ಕೆ ಕರ್ತರಿಯಲ್ಲಿ ಣ್ವುಲ್, ತೃಚ್ ಪ್ರತ್ಯಯಗಳು ವಿಹಿತವಾಗಿವೆ. 'ಇಗುಪಧಜ್ಞಾ ಪ್ರೀಕಿರಃ ಕಃ' ಇಕ್ ಉಪಧೆಯಾಗಿರುವ ಧಾತುಗಳಿಗೂ ಜ್ಞಾ, ಪ್ರೀ, ಕೄ ಧಾತು ಗಳಿಗೂ ಕ ಪ್ರತ್ಯಯ ಬರುತ್ತದೆಂದು ಇದಕ್ಕೆ ಅರ್ಥ. ವಾಸ್ತವವಾಗಿ ಣ್ವುಲ್, ತೃಚ್ ಬಾಧಿಸಿ ಇವುಗಳಿಗೆ ಕ ಮಾತ್ರ ಬರಬೇಕಿತ್ತು. ಆದರೆ ಈ ಪರಿಭಾಷೆಯಿಂದ ವಿಕಲ್ಪ ಬಾಧಕವೆಂದುದರಿಂದ ಣ್ವುಲ್, ತೃಚ್‌ಗಳೂ, ಕ ಪ್ರತ್ಯಯವೂ ಬರುತ್ತದೆಂದು ನಿಯಮಿಸಿದ ಹಾಗಾಗುತ್ತದೆ. ಕ ಬಂದರೆ ವಿಕ್ಷಿಪಃ ಣ್ವುಲ್ ಬಂದರೆ ವಿಕ್ಷೇಪಕಃ, ತೃಚ್ ಬಂದರೆ ವಿಕ್ಷೇಪ್ತಾ ಎಂದಾಗುತ್ತದೆ. ಪ್ರತ್ಯಯಗಳು ಸಮಾನವಾಗಿದ್ದರೆ ಈ ವಿಕಲ್ಪವಿಲ್ಲ. ನಿತ್ಯವಾಗಿ ಬಾಧ್ಯಬಾಧಕಭಾವ ಬರುತ್ತದೆ. 'ಕರ್ಮಣ್ಯಣ್' ಇದು ಉತ್ಸರ್ಗಸೂತ್ರ. ಕರ್ಮವಾಚಕ ಉಪಪದವಾಗಿರುವಾಗ ಧಾತುಸಾಮಾನ್ಯಕ್ಕೆ ಅಣ್ ಪ್ರತ್ಯಯ ಬರುತ್ತದೆ ಎಂದರ್ಥ. 'ಕುಂಭಕಾರಃ' ಉದಾಹರಣೆ. ಕುಂಭ ಎಂಬ ಕರ್ಮ ಉಪಪದವಾಗಿರುವಾಗ ಕೃಞ್ ಧಾತುವಿಗೆ ಅಣ್ ಪ್ರತ್ಯಯ ಬಂದಿದೆ. ಇದಕ್ಕೆ 'ಆತೋಽನುಪಸರ್ಗೇ ಕಃ' ಎಂಬುದು ಅಪವಾದ ಸೂತ್ರ. ಕರ್ಮವಾಚಕಪದ ಉಪಪದವಾಗಿರುವಾಗ (ಉಪಸರ್ಗವಿಲ್ಲದಿರುವಾಗ) ಆದಂತಧಾತುವಿಗೆ ಕಪ್ರತ್ಯಯ ಬರುತ್ತದೆ ಎಂದರ್ಥ. ಇಲ್ಲಿ ಅಣ್‌ನಲ್ಲಿಯೂ ಅ ಉಳಿಯುತ್ತದೆ. ಕಪ್ರತ್ಯಯ ದಲ್ಲಿಯೂ ಅ ಉಳಿಯುತ್ತದೆ. ಆಗ ಸರೂಪಪ್ರತ್ಯಯಗಳಾದುದರಿಂದ ನಿತ್ಯಬಾಧ್ಯ ಬಾಧಕಭಾವ ಬಂದರೆ ಆದಂತಧಾತುವಿಗೆ ಕ ಪ್ರತ್ಯಯವೇ ಬರುತ್ತದೆ ಎಂದು ನಿಶ್ಚಯಿಸ ಬೇಕು. ಗೋದಃ, ಕಂಬಲದಃ ಉದಾಹರಣೆ. ಹೀಗೆ ಸ್ತ್ರ್ಯಧಿಕಾರದಲ್ಲಿಯೂ ನಿತ್ಯ ಬಾಧ್ಯಬಾಧಕಭಾವ ತಿಳಿಯಬೇಕು.

ಕೃತ್ಯಾಧಿಕಾರ ಹೇಳುವ ಸೂತ್ರ.

**೭೭೧. ಕೃತ್ಯಾಃ ‖ ೩–೧–೯೫ ‖**

**ಣ್ವುಲ್‌ತೃಚಾವಿತ್ಯತಃ ಪ್ರಾಕ್ ಕೃತ್ಯಸಂಜ್ಞಾಃ ಸ್ಯುಃ ‖**

ಏಕಪದ ಸೂತ್ರ. ಇದೂ ಅಧಿಕಾರ ಸೂತ್ರ. ಮೂರನೇ ಅಧ್ಯಾಯ ಮುಗಿಯುವ ವರೆಗೂ ಹೇಳುವ ಪ್ರತ್ಯಯಗಳಿಗೆ ಕೃತ್‌ಸಂಜ್ಞೆ ಬರುತ್ತದೆಂದು ಹಿಂದೆ ಹೇಳಿದೆ. 'ಣ್ವುಲ್‌ತೃಚೌ' ಸೂತ್ರದವರೆಗೆ ಈ ಸೂತ್ರಕ್ಕೆ ವ್ಯಾಪ್ತಿ. ಅಲ್ಲಿಯವರೆಗೆ ಹೇಳುವ ಪ್ರತ್ಯಯಗಳಿಗೆ ಕೃತ್ಯ ಎಂಬ ಸಂಜ್ಞೆ ಬರುತ್ತದೆ.

ಕೃತ್ ಪ್ರತ್ಯಯಗಳಿಗೆ ಅರ್ಥ ಹೇಳುವ ಸೂತ್ರ.

**೭೭೨. ಕರ್ತರಿ ಕೃತ್ || ೩-೪-೬೭ ||**

ಕೃತ್ಪ್ರತ್ಯಯಃ ಕರ್ತರಿ ಸ್ಯಾತ್ । ಇತಿ ಪ್ರಾಪ್ತೇ—

ದ್ವಿಪದ ಸೂತ್ರ. **ಸೂತ್ರಾರ್ಥ**—ಕೃತ್ ಪ್ರತ್ಯಯಗಳು ಕರ್ತ್ರರ್ಥದಲ್ಲಿ ಬರುತ್ತವೆ. ಧಾತಾ (ಧಾರಣಮಾಡುವವನು). ಧಾಞ್ ಧಾತುವಿಗೆ ತೃಚ್ ಪ್ರತ್ಯಯ ಬಂದಿದೆ. ಕುಂಭಕಾರಃ (ಮಡಿಕೆ ಮಾಡುವವನು). ಕೃಞ್ ಧಾತುವಿಗೆ ಅಣ್ ಪ್ರತ್ಯಯ ಬಂದಿದೆ. ಹೀಗೆ ಎಲ್ಲಾ ಕೃತ್ ಪ್ರತ್ಯಯಗಳಿಗೂ ಕರ್ತ್ರರ್ಥಪ್ರಾಪ್ತವಾದಾಗ ಕೃತ್ತಿನ ಮಧ್ಯೆ ಹೇಳಿದ ಕೃತ್ಯಪ್ರತ್ಯಯಗಳಿಗೂ ಆ ಅರ್ಥ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಕರ್ಮಭಾವಾರ್ಥ ಹೇಳುತ್ತಾನೆ.

ಕೃತ್ಯ ಪ್ರತ್ಯಯಗಳಿಗೆ ಅರ್ಥ ಹೇಳುವ ಸೂತ್ರ.

**೭೭೩. ತಯೋರೇವ ಕೃತ್ಯಕ್ತಖಲರ್ಥಾಃ || ೩-೪-೭೦ ||**

ಏತೇ ಭಾವಕರ್ಮಣೋರೇವ ಸ್ಯುಃ ||

ತಯೋಃ, ಏವ, ಕೃತ್ಯಕ್ತಖಲರ್ಥಾಃ || ತ್ರಿಪದ ಸೂತ್ರ. ಹಿಂದೆ 'ಲಃ ಕರ್ಮಣಿ ಚ ಭಾವೇ—' ಸೂತ್ರ ಹೇಳಿದೆ. 'ತಯೋಃ' ಎಂಬುದರಿಂದ ಭಾವಕರ್ಮಗಳು ಪರಾಮೃಷ್ಟವಾಗುತ್ತವೆ. **ಸೂತ್ರಾರ್ಥ**—ಕೃತ್ಯಪ್ರತ್ಯಯಗಳೂ ಕ್ತ ಪ್ರತ್ಯಯವೂ ಖಲರ್ಥ ಪ್ರತ್ಯಯಗಳೂ ಭಾವ, ಕರ್ಮಾರ್ಥದಲ್ಲಿ ಮಾತ್ರ ಬರುತ್ತವೆ. ಕರ್ತ್ರರ್ಥವಿಲ್ಲವೆಂದರ್ಥ. ಹೀಗೆ ಅಧಿಕಾರ, ಅರ್ಥವಿಶೇಷವನ್ನು ಹೇಳಿ ಇನ್ನುಮುಂದೆ ಪ್ರತ್ಯಯಗಳನ್ನು ಹೇಳುತ್ತಾನೆ.

ತವ್ಯತಾದಿ ಪ್ರತ್ಯಯಗಳನ್ನು ಹೇಳುವ ಸೂತ್ರ.

**೭೭೪. ತವ್ಯತ್ತವ್ಯಾನೀಯರಃ || ೩-೧-೯೬ ||**

**ಧಾತೋರೇತೇ ಪ್ರತ್ಯಯಾಃ ಸ್ಯುಃ । ಏಧಿತವ್ಯಮ್, ಏಧನೀಯಂ ತ್ವಯಾ । ಭಾವೇ ಔತ್ಸರ್ಗಿಕಮೇಕವಚನಂ ಕ್ಲೀಬತ್ವಂ ಚ || ಚೇತವ್ಯಶ್ಚಯನೀಯೋ ವಾ ಧರ್ಮಸ್ತ್ವಯಾ ||**

ವಾ || (ಕೇಲಿಮರ ಉಪಸಂಖ್ಯಾನಮ್) ಪಚೇಲಿಮಾ ಮಾಷಾಃ | ಪಕ್ತವ್ಯಾ ಇತ್ಯರ್ಥಃ | ಭಿದೇಲಿಮಾ ಸರಲಾಃ | ಭೇತ್ತವ್ಯಾ ಇತ್ಯರ್ಥಃ | ಕರ್ಮಣಿ ಪ್ರತ್ಯಯಃ ||

ಏಕಪದ ಸೂತ್ರ. 'ಧಾತೋಃ' ಅಧಿಕಾರ. ತವ್ಯತ್ ಚ, ತವ್ಯಶ್ಚ, ಅನೀಯರ್ ಚ ತವ್ಯತ್ತವ್ಯಾನೀಯರಃ | ಸೂತ್ರಾರ್ಥ—ಧಾತುವಿನಮೇಲೆ ತವ್ಯತ್, ತವ್ಯ, ಅನೀಯರ್ ಎಂಬ ಮೂರು ಪ್ರತ್ಯಯಗಳು ಭಾವಕರ್ಮಾರ್ಥದಲ್ಲಿ ಬರುತ್ತವೆ. ತವ್ಯತಿನಲ್ಲಿ 'ಹಲಂತ್ಯಮ್' ಸೂತ್ರದಿಂದ ತಕಾರ ಇತ್ತಾಗಿ ಲೋಪವಾದರೆ ತವ್ಯ ಎಂದೇ ಉಳಿಯುತ್ತವೆ. ಸ್ವರದಲ್ಲಿ ತವ್ಯತ್ ತವ್ಯಗಳಿಗೆ ವೈಲಕ್ಷಣ್ಯವಿದೆ. ರೂಪವ್ಯತ್ಯಾಸವಿಲ್ಲ. ಏಧ ಧಾತು ಅಕರ್ಮಕವಾದುದರಿಂದ ಭಾವಾರ್ಥದಲ್ಲಿ ಅದರಮೇಲೆ ತವ್ಯ ಅನೀಯರ್ ಹೇಳುತ್ತಾನೆ. ಏಧ್ + ತವ್ಯ ಎಂದಿರುವಾಗ ಆರ್ಧಧಾತುಕಸ್ಯೇಡ್ವಲಾದೇಃ' ಸೂತ್ರದಿಂದ ತವ್ಯಪ್ರತ್ಯಯಕ್ಕೆ ಇಡಾಗಮ. ಏಧ್ + ಇತವ್ಯ. ಏಧಿತವ್ಯಮ್. ಏಧ್ + ಅನೀಯ(ರ್) = ಏಧನೀಯಮ್. ಪ್ರತ್ಯಯಗಳು ಭಾವ(ಕ್ರಿಯೆ)ವನ್ನು ಹೇಳಿದುದರಿಂದ ಕರ್ತೃವಿಗೆ ತೃತೀಯಾವಿಭಕ್ತಿ ಬರುತ್ತದೆ. ನಿನ್ನಿಂದ ಬೆಳೆಯೋಣಾಗಬೇಕು. ಲಿಙ್, ಲೋಟ್, ಕೃತ್ಯ ಇವು ಮೂರೂ ಸಮಾನಾರ್ಥಕಗಳು. ಭಾವಕ್ಕೆ ಏಕವಚನ ಸಾಮಾನ್ಯವಾಗಿ ಬರುತ್ತದೆಂದು ಭಾವೇಪ್ರಯೋಗದಲ್ಲಿ ಹೇಳಿದೆ. ಅದನ್ನೇ 'ಭಾವೇ ಔತ್ಸರ್ಗಿಕ—' ಎಂಬ ವಾಕ್ಯದಿಂದ ವಿವರಿಸುತ್ತಾನೆ. ಭಾವದಲ್ಲಿ ಉತ್ಸರ್ಗದಿಂದ (ಸಾಮಾನ್ಯನಿಯಮ) ಬಂದ ಏಕವಚನವೂ, ನಪುಂಸಕತ್ವವೂ ಇರುತ್ತವೆ. ತ್ವಯಾ, ಮಯಾ, ತ್ವೈಃ, ಭವತಾ ಏಧನೀಯಮ್. ಹೀಗೆ ಭಾವಾರ್ಥದಲ್ಲಿ ಹೇಳಿ ಈಗ ಕರ್ಮಾರ್ಥದಲ್ಲಿ ತವ್ಯಾದಿಗಳನ್ನು ಹೇಳುತ್ತಾನೆ. ಚೇತವ್ಯಶ್ಚಯನೀಯೋ ವಾ ಧರ್ಮಸ್ತ್ವಯಾ || ನಿನ್ನಿಂದ ಧರ್ಮವು ಗಳಿಸಲ್ಪಡಬೇಕು. ಚಿಞ್ = ಚಯನೇ. ಧಾತು. ಕರ್ಮಣಿಯಲ್ಲಿ ತವ್ಯಪ್ರತ್ಯಯ ಬಂದರೆ ಚಿ + ತವ್ಯ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ. ಚೇತವ್ಯ. ಅನಿಟ್ ಧಾತುವಾದುದರಿಂದ ಇಡಾಗಮವಿಲ್ಲ. ಕರ್ಮವನ್ನನುಸರಿಸಿ ಲಿಂಗವಚನ ಬರುತ್ತದೆ. ಇಲ್ಲಿ ಧರ್ಮ, ಕರ್ಮವಾದುದರಿಂದ ಪುಲ್ಲಿಂಗ ಏಕವಚನ ಬಂದಿದೆ. ಚೇತವ್ಯಃ | ಅನೀಯರ್ ಬಂದರೆ ಚಿ + ಅನೀಯ ಎಂದಿರುವಾಗ ಹಿಂದಿನಂತೆ ಗುಣ. ಚೇ + ಅನೀಯ. ಅಯಾದೇಶ. ಚಯನೀಯಃ | ಕರ್ಮ ಅಭಿಹಿತವಾದುದರಿಂದ ಕರ್ಮವಾದ ಧರ್ಮಕ್ಕೆ ಪ್ರಥಮಾ ವಿಭಕ್ತಿ ಬಂದಿದೆ. ಕರ್ತೃ ಅಭಿಹಿತವಾಗದಿರುವುದರಿಂದ ತೃತೀಯಾ ಬಂದಿದೆ.

ವಾರ್ತಿಕಕಾರರು ಈ ಅರ್ಥದಲ್ಲಿ ಪ್ರತ್ಯಯಾಂತರ ಹೇಳುತ್ತಾರೆ. ಧಾತುವಿಗೆ ತವ್ಯದಾದಿಗಳಂತೇ ಕೇಲಿಮರ್ ಪ್ರತ್ಯಯವನ್ನೂ ಅಧಿಕವಾಗಿ ಹೇಳಬೇಕು. ಕೇಲಿಮರಿನಲ್ಲಿ 'ಲಶಕ್ವತದ್ಧಿತೇ' ಸೂತ್ರದಿಂದ ಕಕಾರವೂ 'ಹಲನ್ತ್ಯಮ್' ಸೂತ್ರದಿಂದ ರೇಫವೂ ಇತ್ತಾಗಿ ಲೋಪವಾದರೆ ಏಲಿಮ ಎಂದುಳಿಯುತ್ತದೆ. ಪಚೇಲಿಮಾ

ಮಾಷಾಃ || ಪಚ್ ಧಾತುವಿಗೆ ಏಲಿಮು ಪ್ರತ್ಯಯ ಬಂದಿದೆ. ಸಕರ್ಮಕವಾದುದರಿಂದ ಕರ್ಮಾರ್ಥ. ಉದ್ದು ಬೇಯಿಸಲ್ಪಡಬೇಕು ಎಂದರ್ಥ. ಕರ್ಮ ಅಭಿಹಿತವಾದುದರಿಂದ ಪ್ರಥಮಾ ಬಂದಿದೆ. ಭಿದೇಲಿಮಾ ಸರಲಾಃ || ಸರಳವೃಕ್ಷಗಳು ಸೀಳಲ್ಪಡಬೇಕು. ಭಿದ್ ಧಾತುವಿಗೆ ಏಲಿಮು ಪ್ರತ್ಯಯ ಬಂದರೆ ಭಿದೇಲಿಮ ಎಂದಾಗುತ್ತದೆ. ಪ್ರತ್ಯಯ ಕಿತ್ ಆದುದರಿಂದ ಗುಣ ಬರುವುದಿಲ್ಲ. ಹೀಗೆ ಕರ್ಮಾರ್ಥದಲ್ಲಿ ಪ್ರತ್ಯಯ ಬಂದಿದೆ.

ಕೃತ್ಯ ಪ್ರತ್ಯಯಗಳಿಗೆ ಭಾವಕರ್ಮವ್ಯತಿರಿಕ್ತಾರ್ಥ ಹೇಳುವ ಸೂತ್ರ.

೭೭೫. ಕೃತ್ಯಲ್ಯುಟೋ ಬಹುಲಮ್ || ೩-೩-೧೧೩ ||

ಕ್ವಚಿತ್ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ ||
ವಿಧೇರ್ವಿಧಾನಂ ಬಹುಧಾ ಸಮೀಕ್ಷ್ಯ ಚತುರ್ವಿಧಂ ಬಾಹುಲಕಂ ವದನ್ತಿ ||
ಸ್ನಾನ್ತಿ ಅನೇನ ಇತಿ ಸ್ನಾನೀಯಂ ಚೂರ್ಣಮ್ | ದೀಯತೇಽಸ್ಮೈ ದಾನೀಯೋ ವಿಪ್ರಃ ||

ದ್ವಿಪದ ಸೂತ್ರ. 'ಬಹುಲಮ್' ಎಂಬುದಕ್ಕೆ ಸಾಮಾನ್ಯ ವಿಕಲ್ಪವೆಂದರ್ಥ. ಆದರೆ ಅದಕ್ಕೆ ಅವಯವಾರ್ಥವಿದೆ. ಬಹೂನ್ ಅರ್ಥಾನ್ ಲಾತಿ ಇತಿ ಬಹುಲಮ್. ಬಹಳ ಅರ್ಥವನ್ನು ಕೊಡುವುದೆಂದರ್ಥ. ಬಹಳ ಅರ್ಥ ಯಾವುವೆಂಬುದನ್ನು ವಿವರಿಸುತ್ತಾನೆ. (೧) ಕ್ವಚಿತ್ ಪ್ರವೃತ್ತಿಃ = ಕೆಲವು ಕಡೆ ವಿಕಲ್ಪ ಹೇಳಿದರೂ ನಿತ್ಯವಾಗಿ ಬರುತ್ತದೆಂದೂ, (೨) ಕ್ವಚಿತ್ ಅಪ್ರವೃತ್ತಿಃ = ಕೆಲವು ಕಡೆ ಬರುವುದೇ ಇಲ್ಲವೆಂತಲೂ, (೩) ಕ್ವಚಿದ್ವಿಭಾಷಾ = ಕೆಲವು ಕಡೆ ವಿಕಲ್ಪವೆಂತಲೂ, (೪) ಕ್ವಚಿದನ್ಯದೇವ = ಕೆಲವು ಕಡೆ ಎಲ್ಲಾ ನಿಮಿತ್ತವನ್ನತಿಕ್ರಮಿಸಿ ಇನ್ನೊಂದು ಅರ್ಥವೂ ಬರುತ್ತದೆಂದು ವಿಧೇಃ ವಿಧಾನಂ = ಕಾರ್ಯಪ್ರವೃತ್ತಿಯನ್ನು, ಬಹುಧಾ = ನಾನಾರೀತಿಯಾಗಿ, ಸಮೀಕ್ಷ್ಯ = ನೋಡಿ, ಬಾಹುಲಕಂ = ಬಹುಲಂ ಎಂಬುದನ್ನು, ಚತುರ್ವಿಧಂ = ನಾಲ್ಕು ರೀತಿಯಾಗಿ, ವದನ್ತಿ — ಹೇಳುತ್ತಾರೆ. ಬಹುಲಗ್ರಹಣವಿದ್ದಲ್ಲಿ ಈ ನಾಲ್ಕು ಅರ್ಥಗಳು ಬರುತ್ತವೆ. ಸೂತ್ರಾರ್ಥ — ಕೃತ್ಯಪ್ರತ್ಯಯಗಳೂ, ಲ್ಯುಟ್ ಪ್ರತ್ಯಯವೂ ಯಾವ ಪ್ರಕೃತಿಗಳ ಮೇಲೆ ಯಾವ ಅರ್ಥದಲ್ಲಿ ವಿಹಿತವಾಗಿವೆಯೋ, ಅವು ಅವುಗಳಿಗಿಂತ ಭಿನ್ನಪ್ರಕೃತಿಗಳ ಮೇಲೂ ಭಿನ್ನಾರ್ಥದಲ್ಲಿಯೂ ಬರುತ್ತವೆಯೆಂದು ತಿಳಿಯಬೇಕು. ಸ್ನಾತಿ ಅನೇನ ಇತಿ ಸ್ನಾನೀಯಂ ಚೂರ್ಣಮ್ || ಇದರಿಂದ ಸ್ನಾನಮಾಡುತ್ತಾರೆ ಎಂಬ ಅರ್ಥದಲ್ಲಿ ಸ್ನಾ (ಷ್ಣಾ — ಶೌಚೇ) ಧಾತುವಿನ ಮೇಲೆ ಅನೀಯರ್ ಪ್ರತ್ಯಯ ಕರಣಾರ್ಥದಲ್ಲಿ ಬರುತ್ತದೆ. ಭಾವಕರ್ಮಾರ್ಥದಲ್ಲಿ ಹಿಂದೆ ಹೇಳಿದೆ. ಕರಣಾರ್ಥ ಅದಕ್ಕಿಂತಲೂ ಭಿನ್ನವಾಗಿದೆ. ಸೀಗೇಪುಡಿ ಮುಂತಾದ ಚೂರ್ಣಗಳು ಎಂದರ್ಥ. ದೀಯತೇ ಅಸ್ಮೈ ದಾನೀಯೋ ವಿಪ್ರಃ || ದಾಞ್ ಧಾತುವಿಗೆ ಸಂಪ್ರದಾನಾರ್ಥದಲ್ಲಿ

ಅನೀಯರ್ ಪ್ರತ್ಯಯ ಬಂಧಿದೆ. ಹೀಗೆ ಭಾವಕರ್ಮ ಭಿನ್ನವಾದ ಕರಣಾದ್ಯರ್ಥ ಗಳಲ್ಲಿಯೂ ಕೃತ್ಯಸಂಜ್ಞೆಯಿರುವ ಪ್ರತ್ಯಯಗಳು ಬರುತ್ತವೆ.

ಯತ್ ಪ್ರತ್ಯಯ ಹೇಳುವ ಸೂತ್ರ.

**೭೭೬. ಅಚೋ ಯತ್ || ೩-೧-೯೭ ||**

**ಅಜನ್ತಾದ್ಧಾತೋರ್ಯತ್ ಸ್ಯಾತ್ || ಚೇಯಮ್ ||**

**ಅಚಃ, ಯತ್** || ದ್ವಿಪದ ಸೂತ್ರ. 'ಧಾತೋಃ' ಅಧಿಕಾರ. 'ಅಚಃ' ಅದಕ್ಕೆ ವಿಶೇಷಣವಾದುದರಿಂದ ತದನ್ತಲಾಭ. **ಸೂತ್ರಾರ್ಥ**—ಅಜನ್ತವಾದ ಧಾತುವಿಗೆ ಯತ್ ಪ್ರತ್ಯಯ ಬರುತ್ತದೆ. **ಚೇಯಮ್**. ಚಿಞ್ ಧಾತು. ಯತ್ ಬಂದಾಗ ಆರ್ಧಧಾತುಕನಿಮಿತ್ತಕವಾಗಿ ಗುಣ. ಕರ್ಮಾರ್ಥ. ಆರ್ಜಿಸಲ್ಪಡಬೇಕು ಎಂದರ್ಥ. ತ್ವಯಾ ಧನಂ ಚೇಯಮ್ ||

ಆದಂತಧಾತುವಿಗೆ ಈತ್ವ ಹೇಳುವ ಸೂತ್ರ.

**೭೭೭. ಈದ್ಯತಿ || ೬-೪-೬೫ ||**

**ಯತಿ ಪರೇ ಆತ ಈತ್ ಸ್ಯಾತ್ । ದೇಯಮ್ । ಗ್ಲೇಯಮ್ ||**

**ಈತ್, ಯತಿ** || ದ್ವಿಪದ ಸೂತ್ರ. 'ಆತೋ ಲೋಪ ಇಟಿ ಚ' ಸೂತ್ರದಿಂದ 'ಆತಃ' ಅನುವೃತ್ತಿ. **ಸೂತ್ರಾರ್ಥ**—ಯತ್ ಪ್ರತ್ಯಯ ಪರದಲ್ಲಿರುವಾಗ ಆಕಾರಕ್ಕೆ ಈಕಾರಾದೇಶ ಬರುತ್ತದೆ. **ದಾಞ್** ಧಾತುವಿಗೆ ಕರ್ಮಾರ್ಥದಲ್ಲಿ ಯತ್ ಪ್ರತ್ಯಯ ಬಂದರೆ ದಾ+ಯ ಎಂದಿರುವಾಗ ಈತ್ವ ಬಂದರೆ ದೀ+ಯ ಎಂದಾಗುತ್ತದೆ. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ದೇಯಮ್. ಗ್ಲೈ—ಹರ್ಷಕ್ಷಯೇ. ಧಾತು. ಯತ್ ಬಂದರೆ 'ಆದೇಚ ಉಪದೇಶೇಽಶಿತಿ' ಸೂತ್ರದಿಂದ ಆತ್ವ. ಗ್ಲಾ +ಯ. ಈ ಸೂತ್ರದಿಂದ ಆಕಾರಕ್ಕೆ ಈತ್ವ ಬಂದು ಗುಣ ಬಂದರೆ ಗ್ಲೇಯಮ್ ಎಂದಾಗುತ್ತದೆ.

ಯತ್ ಪ್ರತ್ಯಯ ಹೇಳುವ ಸೂತ್ರ.

**೭೭೮. ಪೋರದುಪಧಾತ್ || ೩-೧-೯೮ ||**

**ಪವರ್ಗಾನ್ತಾದದುಪಧಾತ್ ಯತ್ ಸ್ಯಾತ್ । ಣ್ಯತೋಽಪವಾದಃ । ಶಪ್ಯಮ್ । ಲಭ್ಯಮ್ ||**

**ಪೋಃ, ಅದುಪಧಾತ್** || ದ್ವಿಪದ ಸೂತ್ರ. 'ಪೋಃ' ಧಾತುವಿಗೆ ವಿಶೇಷಣ ವಾದುದರಿಂದ ತದನ್ತಲಾಭ. **ಸೂತ್ರಾರ್ಥ**—ಪವರ್ಗಾನ್ತವಾದ, ಅಕಾರವೇ

ಉಪಧೆಯಾಗಿರುವ ಧಾತುವಿಗೆ ಯತ್ ಪ್ರತ್ಯಯ ಬರುತ್ತದೆ. ಪು ಎಂದರೆ ಉದಿತ್ತಾದುದರಿಂದ ವರ್ಗಗ್ರಹಣ. 'ಋಹಲೋರ್ಣ್ಯತ್' ಸೂತ್ರದಿಂದ ಮುಂದೆ ಹಲನ್ತ ಧಾತುವಿಗೆ ಣ್ಯತ್ ಪ್ರತ್ಯಯ ಹೇಳುತ್ತಾನೆ. ಆ ಣ್ಯತ್‌ಗೆ ಅಪವಾದವಾಗಿ ಇಲ್ಲಿ ಯತ್ ಪ್ರತ್ಯಯ ಹೇಳಿರುತ್ತಾನೆ. ಶಪ=ಆಕ್ರೋಶೇ. ಧಾತು. ಶಪ್. ಪವರ್ಗದಲ್ಲಿರುವ ಪಕಾರವೇ ಅನ್ತ್ಯವಾಗಿ ಅಕಾರ ಉಪಧೆಯಾಗಿದೆ. ಯತ್ ಬಂದರೆ 'ಶಪ್ಯಮ್' ಎಂದಾಗುತ್ತದೆ. ಡುಲಭ್‌ಷ್=ಪ್ರಾಪ್ತೌ. ಧಾತು. ಲಭ್ ಪವರ್ಗಾನ್ತ್ಯವಾಗಿ ಅತ್ ಉಪಧೆಯಾಗಿದೆ. ಯತ್ ಬಂದರೆ ಲಭ್ಯಮ್ ಎಂದಾಗುತ್ತದೆ.

ಕ್ಯಪ್ ಪ್ರತ್ಯಯ ವಿಧಿಸುವ ಸೂತ್ರ.

**೭೭೯. ಏತಿಸ್ತುಶಾಸ್ವೃದೃಜುಷಃ ಕ್ಯಪ್ ॥ ೩-೧-೧೦೯ ॥**

**ಏಭ್ಯಃ ಕ್ಯಪ್ ಸ್ಯಾತ್ ॥**

ದ್ವಿಪದ ಸೂತ್ರ. ಸೂತ್ರಾರ್ಥ—ಇಣ್, ಷ್ಟು ಞ್, ಶಾಸು, ವೃ ಞ್, ದೃಜ್, ಜುಷೀ—ಈ ಆರು ಧಾತುಗಳಿಗೆ ಕ್ಯಪ್ ಪ್ರತ್ಯಯ ಬರುತ್ತದೆ. ಕ್ಯಪಿನಲ್ಲಿ ಯ ಉಳಿಯುತ್ತದೆ. ಕಿತ್ ಆದುದರಿಂದ ಗುಣನಿಷೇಧವೂ, ಪಿತ್ತಾದುದರಿಂದ ತುಗಾಗಮವೂ ಬರುತ್ತವೆ. ಇಣ್=ಗತೌ. ಧಾತು. ಕ್ಯಪ್ ಬಂದರೆ ಇ+ಯ ಎಂದಿರುವಾಗ ಹಿಂದೆ ಹೇಳಿದಂತೆ ಗುಣವಿಲ್ಲ. ತುಗಾಗಮ ಹೇಳುತ್ತಾನೆ.

ಹ್ರಸ್ವಕ್ಕೆ ತುಗಾಗಮ ಹೇಳುವ ಸೂತ್ರ.

**೭೮೦. ಹ್ರಸ್ವಸ್ಯ ಪಿತಿ ಕೃತಿ ತುಕ್ ॥ ೬-೧-೭೧ ॥**

**ಇತ್ಯಃ । ಸ್ತುತ್ಯಃ ॥ ಶಾಸು ಅನುಶಿಷ್ಟೌ ॥**

ನಾಲ್ಕು ಪದಗಳುಳ್ಳ ಸೂತ್ರ. ಅರ್ಥ ಸುಲಭವಾದುದರಿಂದ ವೃತ್ತಿ ಬರೆಯಲಿಲ್ಲ. **ಸೂತ್ರಾರ್ಥ**—ಹ್ರಸ್ವಕ್ಕೆ ಪಿತ್ತಾದ ಕೃತ್‌ಪ್ರತ್ಯಯ ಪರದಲ್ಲಿರುವಾಗ ತುಗಾಗಮ ಬರುತ್ತದೆ. ತುಕ್ ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ಕ್ಯಪ್ ಪಿತ್ತಾದ ಕೃತ್ ಪ್ರತ್ಯಯವಾಗಿದೆ. ಇಣಿಗೆ ತುಕ್ ಬಂದರೆ ಇತ್+ಯ=ಇತ್ಯಃ ಎಂದಾಗುತ್ತದೆ. ಹೊಂದಲ್ಪಡಬೇಕಾದುದು ಎಂದರ್ಥ. ಷ್ಟು ಞ್=ಸ್ತುತೌ. ಧಾತು. 'ಧಾತ್ವಾದೇಃ ಷಃ ಸಃ' ಸ್ತು+ಯ ಎಂದಿರುವಾಗ ತುಕ್ ಬಂದರೆ ಸ್ತುತ್ಯಃ ಎಂದಾಗುತ್ತದೆ. ಸ್ತೋತ್ರಮಾಡಲ್ಪಡುವವನು. ಶಾಸು=ಅನುಶಿಷ್ಟೌ. ಧಾತು. ಇದಕ್ಕೆ ಕ್ಯಪ್ ಬಂದರೆ ಶಾಸ್+ಯ ಎಂದಿರುವಾಗ ಧಾತುವಿನ ಉಪಧೆಗೆ ಇತ್ವ ಹೇಳುತ್ತಾನೆ.

ಶಾಸ್ ಧಾತುವಿಗೆ ಇತ್ವ ಹೇಳುವ ಸೂತ್ರ.

**೭೮೧. ಶಾಸ ಇದಙ್ಹಲೋಃ ॥ ೬-೪-೩೪ ॥**

**ಶಾಸ ಉಪಧಾಯಾ ಇತ್ ಸ್ಯಾತ್ ಅಙಿ ಹಲಾದೌ ಕ್ಙಿತಿ । ಶಿಷ್ಯಃ । ವೃತ್ಯಃ । ಆದೃತ್ಯಃ । ಜುಷ್ಯಃ ॥**

ಶಾಸಃ, ಇತ್, ಅಙ್ಹಲೋಃ ॥ ತ್ರಿಪದ ಸೂತ್ರ. 'ಅನಿದಿತಾಂ ಹಲಃ—' ಸೂತ್ರದಿಂದ 'ಉಪಧಾಯಾಃ', 'ಕ್ಙಿತಿ' ಅನುವೃತ್ತವಾಗುತ್ತವೆ. ಹಲ್ ಕ್ಙಿತಿನಲ್ಲಿ ಅನ್ವಯಹೊಂದುತ್ತದೆ. **ಸೂತ್ರಾರ್ಥ**—ಶಾಸ್ ಧಾತುವಿನ ಉಪಧಾ ಆಕಾರಕ್ಕೆ ಅಙ್ ಪ್ರತ್ಯಯ, ಹಲಾದಿಯಾದ ಕಿತ್ಙಿತ್ ಪ್ರತ್ಯಯ ಪರವಾದಾಗ ಹ್ರಸ್ವ ಇಕಾರಾದೇಶ ಬರುತ್ತದೆ. ಪ್ರಸ್ತುತ ಶಾಸ್+ಯ ಎಂಬಲ್ಲಿ ಕಿತ್ ಆದ ಹಲಾದಿ ಪ್ರತ್ಯಯ ಪರವಾದುದರಿಂದ ಆಕಾರಕ್ಕೆ ಇತ್ವ ಬಂದರೆ ಶಿಸ್+ಯ ಎಂದಾಗುತ್ತದೆ. 'ಶಾಸಿವಸಿಘಸೀನಾಂ ಚ' ಸೂತ್ರದಿಂದ ಧಾತುವಿನ ಸಕಾರಕ್ಕೆ ಷತ್ವ. ಶಿಷ್ಯಃ । ಎಂದಾಗುತ್ತದೆ. ಅನುಶಾಸಿಸಲ್ಪಡುವವನು ಎಂದರ್ಥ. ವೃ ಞ್=ವರಣೇ. ಧಾತು. ಯ ಬಂದರೆ ಕಿತ್ ಆದುದರಿಂದ ಗುಣವಿಲ್ಲ. ಹ್ರಸ್ವ ಇರುವುದರಿಂದ ತುಗಾಗಮ. ವೃತ್ಯಃ=ಹೊಂದಲ್ಪಡುವವನು ಎಂದರ್ಥ. ಆಙ್ ಉಪಸರ್ಗ. ದೃ ಙ್=ಅನಾದರೇ. ಧಾತು. ತುಗಾಗಮ. ಆದೃತ್ಯಃ=ಆದರಿಸಲು ಯೋಗ್ಯನು. ಜುಷೀ=ಪ್ರೀತಿಸೇವನಯೋಃ । ಧಾತು. ಜುಷ್+ಯ=ಜುಷ್ಯಃ । ಸೇವಿಸಲ್ಪಡುವವನು, ಅಥವಾ ಪ್ರೀತಿಸಲ್ಪಡುವವನು ಎಂದರ್ಥ.

ಮೃಜ್ ಧಾತುವಿಗೆ ಕ್ಯಪ್ ಹೇಳುವ ಸೂತ್ರ.

**೭೮೨. ಮೃಜೇರ್ವಿಭಾಷಾ ॥ ೩-೧-೧೧೩ ॥**

**ಮೃಜೇಃ ಕ್ಯಬ್ವಾ । ಮೃಜ್ಯಃ ॥**

ಮೃಜೇಃ, ವಿಭಾಷಾ ॥ ದ್ವಿಪದ ಸೂತ್ರ. **ಸೂತ್ರಾರ್ಥ**—ಮೃಜ್ ಧಾತುವಿಗೆ ಕ್ಯಪ್ ವಿಕಲ್ಪವಾಗಿ ಬರುತ್ತದೆ. ಮೃಜೂ=ಶುದ್ಧೌ. ಧಾತು. ಮೃಜ್+ಯ=ಮೃಜ್ಯಃ । ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಕ್ಯಪ್ ಬಾರದಿದ್ದರೆ ಮುಂದಿನ ಸೂತ್ರದಿಂದ ಣ್ಯತ್ ಪ್ರತ್ಯಯ ಹೇಳುತ್ತಾನೆ.

ಣ್ಯತ್ ಪ್ರತ್ಯಯ ಹೇಳುವ ಸೂತ್ರ.

**೭೮೩. ಋಹಲೋರ್ಣ್ಯತ್ ॥ ೩-೧-೧೨೪ ॥**

**ಋವರ್ಣಾನ್ತಾದ್ಧಲನ್ತಾಚ್ಚ ಧಾತೋರ್ಣ್ಯತ್ । ಕಾರ್ಯಮ್ । ಹಾರ್ಯಮ್ । ಧಾರ್ಯಮ್ ॥**

ಋಹಲೋಃ, ಣ್ಯತ್ || ದ್ವಿಪದ ಸೂತ್ರ. ಋ, ಹಲ್ ಧಾತುವಿಗೆ ವಿಶೇಷಣ ವಾದುದರಿಂದ ತದನ್ತಲಾಭ. ಸೂತ್ರಾರ್ಥ—ಋಕಾರಾನ್ತವಾದ ಧಾತುಗಳಿಗೆ ಣ್ಯತ್ ಪ್ರತ್ಯಯ ಬರುತ್ತದೆ. ಣ್ಯತಿನಲ್ಲಿ 'ಚುಟೂ' ಸೂತ್ರದಿಂದ ಣಕಾರ ಇತ್ತಾಗುತ್ತದೆ. ಣಿತ್ತಾದುದರಿಂದ ಣ್ಯತ್ ಪರವಾದಾಗ ವೃದ್ಧಿ, ಕುತ್ವಾದಿಗಳು ಬರುತ್ತವೆ. ಡುಕೃಞ್ —ಕರಣೇ. ಧಾತು. ಕೃ ಋದನ್ತವಾದುದರಿಂದ ಣ್ಯತ್ ಬಂದರೆ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ (ಆರ್). ಕಾರ್ಯಮ್. ಮಾಡಲ್ಪಡಬೇಕು. ಹೃಞ್=ಹರಣೇ. ಹೃ+ಯ. ಹಿಂದಿನಂತೆ ವೃದ್ಧಿ. ಹಾರ್ಯಮ್. ಅಪಹರಿಸಲ್ಪಡುವುದು. ಧೃಞ್ =ಧಾರಣೇ. ಧಾತು. ಧಾರ್ಯಮ್. ಧರಿಸಲ್ಪಡುವುದು ಎಂದರ್ಥ.

ಚ, ಜ ಗಳಿಗೆ ಕುತ್ವ ಹೇಳುವ ಸೂತ್ರ.

**೭೮೪. ಚಜೋಃ ಕು ಘಿಣ್ಣ್ಯತೋಃ || ೭-೩-೫೨ ||**

**ಚಜೋಃ ಕುತ್ವಂ ಸ್ಯಾದ್ ಘಿತಿ ಣ್ಯತಿ ಚ ಪರೇ ||**

ತ್ರಿಪದ ಸೂತ್ರ. ಕು ಉದಿತ್ತಾದುದರಿಂದ ಕವರ್ಗ ಗೃಹೀತವಾಗುತ್ತದೆ. ವಿಭಕ್ತಿ ಸೇರಿಸದೆ ನಿರ್ದೇಶಿಸಿರುತ್ತಾನೆ. **ಸೂತ್ರಾರ್ಥ**—ಚಕಾರ, ಜಕಾರಗಳಿ ಘಕಾರ ಇತ್ತಾದ ಪ್ರತ್ಯಯವೂ, ಣ್ಯತ್ ಪ್ರತ್ಯಯವೂ ಪರದಲ್ಲಿರುವಾಗ ಕುತ್ವ ಬರುತ್ತದೆ. ಪ್ರಕೃತ, **ಮೃಜೂ**=ಶುದ್ಧೌ. ಧಾತು. ಹಲಂತವಾದುದರಿಂದ ಣ್ಯತ್ ಪ್ರತ್ಯಯ ಬಂದರೆ, ಮೃಜ್+ಯ ಎಂದಿರುವಾಗ ಣ್ಯತ್ ಪ್ರತ್ಯಯ ಪರವಾದುದರಿಂದ ಜಕಾರಕ್ಕೆ ಕುತ್ವ ಬಂದರೆ ಮೃಗ್+ಯ ಎಂದಾಗುತ್ತದೆ. ಗುಣ ಪ್ರಾಪ್ತವಾದರೆ ಇಲ್ಲಿ ವೃದ್ಧಿ ಹೇಳುತ್ತಾನೆ.

ಮೃಜ್ ಧಾತುವಿಗೆ ವೃದ್ಧಿ ಹೇಳುವ ಸೂತ್ರ.

**೭೮೫. ಮೃಜೇರ್ವೃದ್ಧಿಃ || ೭-೨-೧೧೪ ||**

**ಮೃಜೇರಿಕೋ ವೃದ್ಧಿಃ ಸಾರ್ವಧಾತುಕಾರ್ಧಧಾತುಕಯೋಃ | ಮಾರ್ಗ್ಯಃ ||**

ಮೃಜೇಃ, ವೃದ್ಧಿಃ || ದ್ವಿಪದ ಸೂತ್ರ. ವೃದ್ಧಿ ಶಬ್ದ ಹೇಳಿ ಎಲ್ಲಿ ವೃದ್ಧಿ ವಿಧಿಸುತ್ತಾನೋ ಅಲ್ಲಿ 'ಇಕಃ' ಎಂಬ ಷಷ್ಠ್ಯನ್ತಪದವು ಬರುತ್ತದೆ. 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರಾನುವೃತ್ತಿ. **ಸೂತ್ರಾರ್ಥ**—ಮೃಜ್ ಧಾತುವಿನ ಇಕಿಗೆ ಸಾರ್ವಧಾತುಕಾರ್ಧಧಾತುಕ ಪರವಾದಾಗ ವೃದ್ಧಿಬರುತ್ತದೆ. ಪ್ರಕೃತ ಆರ್ಧಧಾತುಕವಾದ ಣ್ಯತ್ ಪ್ರತ್ಯಯ ಪರವಾದುದರಿಂದ ವೃದ್ಧಿ ಬಂದರೆ ಮಾರ್ಗ್ಯಃ ಎಂದಾಗುತ್ತದೆ.

ಭುಜ್ ಧಾತುವಿಗೆ ಕುತ್ವಾಭಾವವನ್ನು ನಿಪಾತನಮಾಡುವ ಸೂತ್ರ.

**೭೮೩. ಭೋಜ್ಯಂ ಭಕ್ಷ್ಯೇ ॥ ೭-೩-೬೯ ॥ ಭೋಗ್ಯಮನ್ಯತ್ ॥**

ಇತಿ ಕೃತ್ಯಪ್ರಕ್ರಿಯಾ

ದ್ವಿಪದ ಸೂತ್ರ. ಭಕ್ಷ್ಯರೂಪಾರ್ಥ ತೋರುತ್ತಿರುವಾಗ 'ಭೋಜ್ಯಮ್' ಎಂದು ಆಗುತ್ತದೆ. **ಭುಜ**—ಪಾಲನಾಭ್ಯವಹಾರಯೋಃ ॥ ಧಾತು. ಹಲನ್ತವಾದುದರಿಂದ ಣ್ಯತ್ ಬಂದಾಗ ಕುತ್ವ ಪ್ರಾಪ್ತವಾದರೆ ಈ ಸೂತ್ರದಲ್ಲಿ ಕುತ್ವ ಬರುವುದಿಲ್ಲವೆಂದು ನಿಪಾತನಮಾಡಿರುತ್ತಾನೆ. ಸಿದ್ಧವಾದ ಪ್ರಕ್ರಿಯೆಯನ್ನು ತೋರಿಸುವುದೇ ನಿಪಾತ. ಭಕ್ಷ್ಯಭಿನ್ನಾರ್ಥದಲ್ಲಿ ಭೋಗ್ಯಮ್ ಎಂದಾಗುತ್ತದೆ. ಲಘೂಪಧಗುಣ ಬಂದು ಕುತ್ವ ಬರುತ್ತದೆ. ಉಪಭೋಗಿಸಲು ಯೋಗ್ಯವಾದುದು ಅಥವಾ ರಕ್ಷಿಸಲು ಯೋಗ್ಯವಾದುದು ಎಂದರ್ಥ. ಇಲ್ಲಿಗೆ ಕೃತ್ಯಪ್ರತ್ಯಯಗಳ ವಿವರಣೆ ಮುಗಿದಿದೆ. ಇನ್ನು ಮುಂದೆ ಕೃತ್ ಸಾಮಾನ್ಯವನ್ನು ಹೇಳುತ್ತಾನೆ.

# ೧೩. ಅಥ ಪೂರ್ವಕೃದನ್ತಮ್

ಣ್ವುಲ್ ತೃಚ್ ಪ್ರತ್ಯಯವಿಧಾಯಕ ಸೂತ್ರ.

**೭೮೪. ಣ್ವುಲ್ತೃಚೌ ॥ ೩-೧-೧೩೩ ॥**

**ಧಾತೋರೇತೌ ಸ್ತಃ । ಕರ್ತರಿ ಕೃದಿತಿ ಕರ್ತ್ರರ್ಥೇ ॥**

ಕೃತ್ತಿನಲ್ಲಿ ಪೂರ್ವಕೃತ್, ಉತ್ತರಕೃತ್ ಎಂದು ಎರಡು ವಿಭಾಗ ಮಾಡಿಕೊಂಡು ಇರುತ್ತಾರೆ. ಈ ಸೂತ್ರದವರೆಗೆ ಕೃತ್ಯಪ್ರತ್ಯಯಕ್ಕೆ ಅಧಿಕಾರವೆಂದು ಹಿಂದೆ ಹೇಳಿದೆ. ಇನ್ನು ಮುಂದೆ ಹೇಳುವ ಪ್ರತ್ಯಯಗಳಿಗೆ ಕೃತ್ ಎಂದು ಹೆಸರು. ಣ್ವುಲ್ತೃಚೌ ॥ ಏಕಪದ ಸೂತ್ರ. **ಸೂತ್ರಾರ್ಥ**—ಧಾತುವಿಗೆ ಣ್ವುಲ್ ತೃಚ್ ಪ್ರತ್ಯಯಗಳು ಬರುತ್ತವೆ. 'ಕರ್ತರಿ ಕೃತ್' ಸೂತ್ರದಿಂದ ಈ ಪ್ರತ್ಯಯಗಳಿಗೆ ಕರ್ತ್ರರ್ಥವೆಂದು ಹಿಂದೆ ಹೇಳಿರುತ್ತಾನೆ. ಕೃಞ್ ಧಾತುವಿಗೆ ಣ್ವುಲ್ ಪ್ರತ್ಯಯ. ಣ್ವುಲಿನಲ್ಲಿ 'ಚುಟೂ' ಸೂತ್ರದಿಂದ ಣಕಾರವೂ 'ಹಲನ್ತ್ಯಮ್' ಸೂತ್ರದಿಂದ ಲಕಾರವೂ ಇತ್ತಾದರೆ ವು ಉಳಿಯುತ್ತದೆ. ಅದಕ್ಕೆ ಅಕಾದೇಶ ಹೇಳುತ್ತಾನೆ.

ಯು, ವು ಗಳಿಗೆ ಆದೇಶ ಹೇಳುವ ಸೂತ್ರ.

**೭೮೫. ಯುವೋರನಾಕೌ ॥ ೭-೧-೧ ॥**

**ಯು, ವು ಏತಯೋರನಾಕೌ ಸ್ತಃ । ಕಾರಕಃ । ಕರ್ತಾ ॥**

ಯುವೋಃ, ಅನಾಕೌ ॥ ದ್ವಿಪದ ಸೂತ್ರ. ಯುಶ್ಚ ವುಶ್ಚ ಯುವೂ। ಏಕವಚನ ಆರ್ಷವನ್ನು ಬೇಕು. ಸೂತ್ರಾರ್ಥ—ಯು, ವು ಇವುಗಳಿಗೆ ಕ್ರಮವಾಗಿ ಅನ, ಅಕ ಆದೇಶಗಳು ಬರುತ್ತವೆ. ಪ್ರಕೃತ ವು ಎಂಬುದಕ್ಕೆ ಅಕಾದೇಶ ಬಂದರೆ ಕೃ+ಅಕ ಎಂದಿರುವಾಗ "ಅಚೋಞ್ಣಿತಿ" ಸೂತ್ರದಿಂದ ವೃದ್ಧಿ (ಆರ್) ಬಂದರೆ ಕಾರಕಃ ಎಂದಾಗುತ್ತದೆ. ಮಾಡುವವನು ಎಂದರ್ಥ. ಕೃಞಿಗೆ ತೃಚ್ ಬಂದರೆ ಕೃ+ತೃ ಎಂದಿರುವಾಗ ಆರ್ಧಧಾತುಕನಿಮಿತ್ತವಾಗಿ ಗುಣ. ಕರ್ತೃ ಶಬ್ದವಾಗುತ್ತದೆ. ಪ್ರಥಮಾ ವಿಭಕ್ತಿ ಸು ಪರವಾದಾಗ 'ಋದುಶನಸ್ಪುರುದಂಸಸಃ—' ಸೂತ್ರದಿಂದ ಅನಙಾದೇಶ ಬಂದು 'ಅಪ್ತೃನ್ತೃಚ್—' ಸೂತ್ರದಿಂದ ಉಪಧಾದೀರ್ಘ ಬಂದು, 'ಹಲ್ಙ್ಯಾಭ್ಯೋ—' ಸೂತ್ರದಿಂದ ಸುಲೋಪ, 'ನ ಲೋಪಃ ಪ್ರಾತಿಪದಿಕಾನ್ತಸ್ಯ' ಸೂತ್ರದಿಂದ ನಲೋಪ ಬಂದರೆ ಕರ್ತಾ ಎಂದಾಗುತ್ತದೆ.

ಲ್ಯು, ಣಿನಿ, ಅಚ್ ಪ್ರತ್ಯಯ ವಿಧಿಸುವ ಸೂತ್ರ.

೭೮೯. ನನ್ದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ ॥ ೩-೧-೧೩೪ ॥

**ನನ್ದ್ಯಾದೇರ್ಲ್ಯುಃ, ಗ್ರಹ್ಯಾದೇರ್ಣಿನಿಃ, ಪಚಾದೇರಚ್ ಸ್ಯಾತ್ ॥ ನನ್ದಯತೀತಿ ನನ್ದನಃ । ಜನಮರ್ದಯತೀತಿ ಜನಾರ್ದನಃ । ಲವಣಃ । ಗ್ರಾಹೀ । ಸ್ಥಾಯೀ । ಮನ್ತ್ರೀ । ಪಚಾದಿರಾಕೃತಿಗಣಃ ॥**

ದ್ವಿಪದ ಸೂತ್ರ. ನನ್ದಿಶ್ಚ, ಗ್ರಹಿಶ್ಚ, ಪಚ್ ಚ ನನ್ದಿಗ್ರಹಿಪಚಃ। ನನ್ದಿಗ್ರಹಿಪಚಃ ಆದಿಃ ಯೇಷಾಂ ತೇ ನನ್ದಿಗ್ರಹಿಪಚಾದಯಃ। ತೇಭ್ಯಃ। ದ್ವಂದ್ವಸಮಾಸದಲ್ಲಿ ಶ್ರುತವಾದ ಆದಿಶಬ್ದಕ್ಕೆ ಪ್ರತ್ಯೇಕಾನ್ವಯ. ನನ್ದ್ಯಾದಿ, ಗ್ರಹ್ಯಾದಿ, ಪಚಾದಿ. ಲ್ಯು, ಣಿನಿ, ಅಚ್‌ಗಳಿಗೆ ದ್ವಂದ್ವಸಮಾಸ. ಯಥಾಸಂಖ್ಯಾನ್ವಯ. **ಸೂತ್ರಾರ್ಥ**— ನನ್ದ್ಯಾದಿಗೆ ಲ್ಯುಪ್ರತ್ಯಯವೂ, ಗ್ರಹ್ಯಾದಿಗಳಿಗೆ ಣಿನಿಪ್ರತ್ಯಯವೂ, ಪಚಾದಿ ಧಾತುಗಳಿಗೆ ಅಚ್ ಪ್ರತ್ಯಯವೂ ಬರುತ್ತವೆ. ನನ್ದಿ ಎಂಬುದು ಣಿಜನ್ತ. **ಟುನದಿ**= ಸಮೃದ್ಧೌ. ಧಾತು. ನನ್ದಯತಿ ಇತಿ ನಂದನಃ ॥ ಸಂತೋಷಪಡಿಸುವವನು. ನನ್ದಿ+ಲ್ಯು. ಲ್ಯುವಿನಲ್ಲಿ 'ಲಶಕ್ವತದ್ಧಿತೇ' ಸೂತ್ರದಿಂದ ಲ ಇತ್ತಾದರೆ ಯು ಉಳಿಯುತ್ತದೆ. 'ಯುವೋರನಾಕೌ'. ಅನಾದೇಶ. ನನ್ದಿ+ಅನ. 'ಣೇರನಿಟಿ' ಣಿಲೋಪ. ನನ್ದನಃ। ಜನಮರ್ದಯತಿ ಇತಿ ಜನಾರ್ದನಃ ॥ ದುಷ್ಟರನ್ನು ಶಿಕ್ಷಿಸುವವ ಅಥವಾ ಮೋಕ್ಷ ಕೊಡುವವನು. ನನ್ದ್ಯಾದಿಯಲ್ಲಿ ಸೇರಿದ ಧಾತು. ಅರ್ದ ಧಾತುವಿಗೆ ಲ್ಯು ಬಂದರೆ ಹಿಂದಿನಂತೆ ಅನಾದೇಶ. ಅರ್ದನ ಎಂದಾಗುತ್ತದೆ. ಅರ್ದ=ಗತೌ, ಯಾಚನೇ ಚ. ಧಾತು. ಲವಣಃ। ಲೂಞ್=ಛೇದನೇ. ಧಾತು. ಲೂ=ಅನ ಎಂದಿರುವಾಗ ಆರ್ಧಧಾತುಕನಿಮಿತ್ತವಾಗಿ ಗುಣ. ಅವಾದೇಶ. ನನ್ದ್ಯಾದಿಗಳಲ್ಲಿ ನಿಪಾತಮಾಡಿರುವುದರಿಂದ ಣತ್ವಬಂದಿದೆ. ಲವಣಃ। ಗ್ರಾಹೀ. ಗ್ರಹ=ಉಪಾದಾನೇ.

ಧಾತು. ಣಿನಿ ಪ್ರತ್ಯಯ ಬಂದರೆ ಅದರಲ್ಲಿ 'ಚುಟೂ' ಸೂತ್ರದಿಂದ ಣಕಾರ ಇತ್ತಾಗಿ ಲೋಪವಾಗಿ, ಉಚ್ಚಾರಣಾರ್ಥವಾದ ಇಕಾರವೂ ಹೋದರೆ ಇನ್ ಉಳಿಯುತ್ತದೆ. ಣಿತ್ತಾದುದರಿಂದ 'ಅತ ಉಪಧಾಯಾಃ' ಸೂತ್ರದಿಂದ ಧಾತುವಿನ ಉಪಧೆಗೆ ವೃದ್ಧಿ. ಗ್ರಾಹ್+ಇನ್=ಗ್ರಾಹಿನ್ ಎಂದಾಗುತ್ತದೆ. ಸ್ವೀಕರಿಸುವವನು. ಪ್ರಥಮಾ ಸುಪರವಾದಾಗ 'ಇನ್ಹನ್ಪೂ—' ಸೂತ್ರದಿಂದ ದೀರ್ಘ. 'ಹಲ್ಙ್ಯಾಭ್ಯೋ—' ಸೂತ್ರದಿಂದ ಸುಲೋಪ. 'ನ ಲೋಪಃ ಪ್ರಾತಿಪ—' ಸೂತ್ರದಿಂದ ನಲೋಪ. ಗ್ರಾಹೀ। ಗ್ರಾಹಿಣೌ। ಗ್ರಾಹಿಣಃ॥ ಇತ್ಯಾದಿ. ಸ್ಥಾಯೀ. ಷ್ಠಾ=ಗತಿನಿವೃತ್ತೌ. ಧಾತು. ಗ್ರಹ್ಯಾದಿಯಲ್ಲಿ ಸೇರಿದೆ. ಣಿನಿ ಬಂದರೆ ಸ್ಥಾ+ಇನ್ ಎಂದಿರುವಾಗ 'ಆತೋ ಯುಕ್ ಚಿಣ್ಕೃತೋಃ' ಸೂತ್ರದಿಂದ ಧಾತುವಿಗೆ ಯುಕಾಗಮ. ಸ್ಥಾಯ್+ಇನ್. ಸುವಿನಲ್ಲಿ ಹಿಂದಿನಂತೆ ಪ್ರಕ್ರಿಯೆ. ಸ್ಥಾಯೀ। ಸ್ಥಾಯಿನೌ। ಇತ್ಯಾದಿ. ಇರುವವನು. ಮನ್ತ್ರೀ=ಮತ್ರಿ=ಗುಪ್ತಭಾಷಣೇ ಧಾತು. ಇದಿತ್ತಾದುದರಿಂದ 'ಇದಿತೋ ನುಮ್ ಧಾತೋಃ' ಸೂತ್ರದಿಂದ ನುಮಾಗಮ. ಣಿನಿಪ್ರತ್ಯಯ. ಮನ್ತ್ರ್+ಇನ್=ಮನ್ತ್ರೀ. ಗುಪ್ತಾಲೋಚನೆಮಾಡುವವನು. ಪಚಃ=ಡುಪಚಿಷ್=ಪಾಕೇ. ಧಾತು. ಅಚ್ ಪ್ರತ್ಯಯ. ಪಚ್+ಅ=ಪಚಃ। ಬೇಯಿಸುವವನು. ಈ ಸೂತ್ರದಲ್ಲಿ ನನ್ದ್ಯಾದಿ, ಗ್ರಹ್ಯಾದಿ, ಪಚಾದಿ ಮೂರು ಗಣಗಳನ್ನು ಹೇಳಿರುತ್ತಾನೆ. ಈ ಗಣಗಳನ್ನು ಗಣಪಾಠ ನೋಡಿ ತಿಳಿದುಕೊಳ್ಳಬೇಕು. ಇವುಗಳಲ್ಲಿ ಪಚಾದಿ ಎಂಬುದು ಆಕೃತಿಗಣ. ಅಂದರೆ ಪಚಾದಿಗಳು ಸಾಮಾನ್ಯವಾಗಿ ಪಠಿತವಾಗಿವೆ. ಇದರಂತೆ ಇರುವವುಗಳನ್ನು ನೋಡಿ ಅವುಗಳನ್ನು ಪಚಾದಿಯಲ್ಲಿ ಪಾಠಮಾಡದಿದ್ದರೂ ಅದರಲ್ಲಿ ಸೇರಿವೆಯೆಂದು ತಿಳಿಯಬೇಕು. ಆಕೃತಿಗಣವೆಂದರೆ ಆ ಗಣದಲ್ಲಿ ಪಾಠಮಾಡದೆ ಅದರಂತಿರುವವುಗಳೂ ಆ ಗಣದಲ್ಲಿ ಸೇರಿವೆಯೆಂದರ್ಥ;

### ಕಪ್ರತ್ಯಯ ವಿಧಾನಮಾಡುವ ಸೂತ್ರ.

**೭೮೦. ಇಗುಪಧಜ್ಞಾಪ್ರೀಕಿರಃ ಕಃ ॥ ೩-೧-೧೩೫ ॥**

**ಏಭ್ಯಃ ಕಃ ಸ್ಯಾತ್ ॥ ಬುಧಃ। ಕೃಶಃ। ಜ್ಞಃ। ಪ್ರಿಯಃ। ಕಿರಃ ॥**

ದ್ವಿಪದ ಸೂತ್ರ. ಇಗುಪಧ, ಜ್ಞಾ, ಪ್ರೀ, ಕಿರ್‌ಗಳಿಗೆ ದ್ವಂದ್ವಮಾಡಿ ಪಂಚಮೀ ಹೇಳಿದೆ. ಕೄ ಧಾತುವಿಗೆ ಇತ್ವಮಾಡಿ ಕಿರ್ ಎಂದು ನಿರ್ದೇಶಿಸಿರುತ್ತಾನೆ. **ಸೂತ್ರಾರ್ಥ**—ಇಕ್ ಉಪಧೆಯಾದ ಧಾತುಗಳಿಗೂ, ಜ್ಞಾ, ಪ್ರೀ, ಕೄ ಧಾತುಗಳಿಗೂ ಕಪ್ರತ್ಯಯ ಬರುತ್ತದೆ. 'ಲಶಕ್ವತದ್ಧಿತೇ' ಸೂತ್ರದಿಂದ ಕಕಾರ ಇತ್ತಾದರೆ ಅ ಉಳಿಯುತ್ತದೆ. ಬುಧಃ। ಬುಧ=ಅವಗಮನೇ. ಧಾತು. ಬುಧ್ ಇಗುಪಧವಾಗಿದೆ. ಕ ಬಂದರೆ ಬುಧಃ ಎಂದಾಗುತ್ತದೆ. ಪಂಡಿತ ಎಂದರ್ಥ. ಪ್ರತ್ಯಯ ಕಿತ್ ಆದುದರಿಂದ ಲಘೂಪಧಗುಣ ಬರುವುದಿಲ್ಲ. ಕೃಶಃ। ಕೃಶ=ತನೂಕರಣೇ. ಧಾತು.

ಇಗುಪಧವಾಗಿದೆ. ಜ್ಞಃ । ಜ್ಞಾ=ಅವಬೋಧನೇ. ಧಾತು. ಜ್ಞಾ+ಅ ಎಂದಿರುವಾಗ 'ಆತೋ ಲೋಪ ಇಟಿ ಚ' ಸೂತ್ರದಿಂದ ಆಲೋಪ. ಜ್ಞಃ ಪಂಡಿತ ಎಂದರ್ಥ. ಪ್ರಿಯಃ । ಪ್ರೀಞ್=ತರ್ಪಣೇ. ಧಾತು. ಪ್ರೀ+ಅ ಎಂದಿರುವಾಗ 'ಅಚಿಶ್ನುಧಾತುಭ್ರುವಾಂ—' ಸೂತ್ರದಿಂದ ಇಯಙ್. ಪ್ರಿಯಃ । ಕಿರಃ । ಕೄ=ವಿಕ್ಷೇಪೇ. ಧಾತು. ಕೄ+ಅ ಎಂದಿರುವಾಗ 'ಋತ ಇದ್ಧಾತೋಃ' ಸೂತ್ರದಿಂದ ಇತ್ವ. 'ಉರಣ್ರಪರಃ' ಸೂತ್ರದಿಂದ ರಪರವಾಗಿ ಬಂದರೆ ಕಿರಃ ಎಂದಾಗುತ್ತದೆ.

ಉಪಸರ್ಗ ಇರುವಾಗ ಕಪ್ರತ್ಯಯ ಹೇಳುವ ಸೂತ್ರ.

**೭೯೧. ಆತಶ್ಚೋಪಸರ್ಗೇ ॥ ೩-೧-೧೩೬ ॥ ಪಜ್ಞಃ । ಸುಗ್ಲಃ ॥**

ಆತಃ, ಚ, ಉಪಸರ್ಗೇ ॥ ತ್ರಿಪದ ಸೂತ್ರ. **ಸೂತ್ರಾರ್ಥ**—ಉಪಸರ್ಗ ಉಪಪದವಾಗಿರುವಾಗ ಆದನ್ತವಾದ ಧಾತುವಿಗೆ ಕಪ್ರತ್ಯಯ ಬರುತ್ತದೆ. ಪ್ರಜ್ಞಃ । ಪ್ರ ಉಪಸರ್ಗಪೂರ್ವಕವಾದ ಜ್ಞಾ ಧಾತುವಿಗೆ ಕ ಬಂದಿದೆ. ಹಿಂದಿನಂತೆ ಆಕಾರ ಲೋಪ. ಸುಗ್ಲಃ । ಗ್ಲೈ=ಹರ್ಷಕ್ಷಯೇ. ಧಾತು. ಸು ಉಪಸರ್ಗ ಉಪಪದವಾಗಿರುವಾಗ ಕ ಬಂದರೆ 'ಆದೇಚ ಉಪದೇಶೇಽಶಿತಿ' ಸೂತ್ರದಿಂದ ಧಾತುವಿಗೆ ಆತ್ವ. ಆಮೇಲೆ 'ಆತೋ ಲೋಪಃ—' ಸೂತ್ರದಿಂದ ಆಕಾರಲೋಪ. ಸುಗ್ಲಃ ಎಂದಾಗುತ್ತದೆ.

ಗ್ರಹ ಧಾತುವಿಗೆ ಕಪ್ರತ್ಯಯ ಹೇಳುವ ಸೂತ್ರ.

**೭೯೨. ಗೇಹೇ ಕಹಃ ॥ ೩-೧-೧೪೪ ॥**

**ಗೇಹೇ ಕರ್ತರಿ ಗ್ರಹೇಃ ಕಃ ಸ್ಯಾತ್ ॥ ಗೃಹಮ್**

ದ್ವಿಪದ ಸೂತ್ರ. 'ವಿಭಾಷಾ ಗ್ರಹಃ' ಸೂತ್ರದಿಂದ ಗ್ರಹಃ ಅನುವೃತ್ತಿ. **ಸೂತ್ರಾರ್ಥ**—ಮನೆ ಎಂಬುದು ಕರ್ತೃವಾಗಿರುವಾಗ ಗ್ರಹ್ ಧಾತುವಿಗೆ ಕಪ್ರತ್ಯಯ ಬರುತ್ತದೆ. ಗ್ರಹ್+ಅ ಎಂದಿರುವಾಗ ಪ್ರತ್ಯಯ ಕಿತ್ ಆದುದರಿಂದ 'ಗ್ರಹಿಜ್ಯಾವಯಿ—' ಸೂತ್ರದಿಂದ ಸಂಪ್ರಸಾರಣ. (ರೇಫಕ್ಕೆ ಋಕಾರ) ಗೃಹಮ್=ಮನೆ. ಧಾನ್ಯಾದಿಗಳನ್ನು ಇದು ಸ್ವೀಕರಿಸುತ್ತದೆ ಅಂದರೆ ಧರಿಸುತ್ತದೆ. ಧರಿಸುವುದರಲ್ಲಿ ಕರ್ತೃವಾದುದರಿಂದ ಕ ಬಂದಿದೆ.

ಅಣ್ ಪ್ರತ್ಯಯ ವಿಧಿಸುವ ಸೂತ್ರ.

**೭೯೩. ಕರ್ಮಣ್ಯಣ್ ॥ ೩-೨-೧ ॥**

**ಕರ್ಮಣ್ಯುಪಪದೇ ಧಾತೋರಣ್ ಪ್ರತ್ಯಯಃ ಸ್ಯಾತ್ । ಕುಂಭಂ ಕರೋತೀತಿ ಕುಂಭಕಾರಃ ॥**

ಕರ್ಮಣಿ, ಅಣ್ ॥ ದ್ವಿಪದ ಸೂತ್ರ. ಕರ್ಮವಾಚಕಪದವು ಉಪಪದವಾಗಿರುವಾಗ ಧಾತುವಿಗೆ ಅಣ್ ಪ್ರತ್ಯಯ ಬರುತ್ತದೆ. ಕುಂಭಂ ಕರೋತಿ ॥ ಕುಂಭವೆಂಬ ಕರ್ಮವಾಚಕಪದವು ಉಪಪದವಾಗಿರುವುದರಿಂದ ಕೃಞುಗೆ ಅಣ್‌ಪ್ರತ್ಯಯ ಬಂದಿದೆ. ಕೃ+ಅ ಎಂದಿರುವಾಗ ಪ್ರತ್ಯಯ ಣಿತ್ ಆದುದರಿಂದ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ (ಆರ್). ಕಾರ ಎಂದಾಗುತ್ತದೆ. ಕುಂಭ+ಅಸ್+ಕಾರ ಎಂಬ ವಿಗ್ರಹವಾಕ್ಯ ಇಲ್ಲಿ ಹೇಳಬೇಕೆಂದು ಸಮಾಸಪ್ರಕರಣದಲ್ಲಿ ವಿವರಿಸುತ್ತಾನೆ. ಇದಕ್ಕೆ ಉಪಪದ ಸಮಾಸವೆಂದು ಹೆಸರು. ಮೂಲದಲ್ಲಿ ತೋರಿಸಿರುವ ವಿಗ್ರಹಕ್ಕೆ ಅಸ್ವಪದವಿಗ್ರಹವೆಂದು ಹೆಸರು.

ಅಣಿಗೆ ಅಪವಾದವಾಗಿ ಕಪ್ರತ್ಯಯ ಹೇಳುವ ಸೂತ್ರ.

### ೭೯೪. ಆತೋಽನುಪಸರ್ಗೇ ಕಃ ॥ ೩-೨-೩ ॥

ಆದನ್ತಾದ್ಧಾತೋರನುಪಸರ್ಗಾತ್ಕರ್ಮಣ್ಯುಪಪದೇ ಕಃ ಸ್ಯಾತ್ । ಸ್ಯಾತ್ । ಅಣೋಽಪವಾದಃ । ಆತೋ ಲೋಪ ಇಟಿ ಚ । ಗೋದಃ । ಧನದಃ । ಕಮ್ಬಲದಃ । ಅನುಪಸರ್ಗೇ ಕಿಮ್ ? ಗೋಸನ್ದಾಯಃ ॥

ವಾ ॥ ಮೂಲವಿಭುಜಾದಿಭ್ಯಃ ಕಃ ॥ ಮೂಲಾನಿ ವಿಭುಜತಿ ಮೂಲವಿಭುಜೋ ರಥಃ । ಆಕೃತಿಗಣೋಽಯಮ್ । ಮಹೀಧ್ರಃ । ಕುಧ್ರಃ ॥

ಆತಃ, ಅನುಪಸರ್ಗೇ, ಕಃ ॥ ತ್ರಿಪದ ಸೂತ್ರ. ಹಿಂದಿನ ಸೂತ್ರದಿಂದ 'ಕರ್ಮಣಿ' ಪದವು ಅನುವೃತ್ತವಾಗುತ್ತದೆ. ಆತಃ ಧಾತುವಿಗೆ ವಿಶೇಷಣ. **ಸೂತ್ರಾರ್ಥ**—ಕರ್ಮ ಉಪಪದವಾಗಿರುವಾಗ ಆಕಾರಾಂತವಾದ ಧಾತುವಿಗೆ ಉಪಸರ್ಗವಿಲ್ಲದಿರುವಾಗ ಕಪ್ರತ್ಯಯ ಬರುತ್ತದೆ. ಹಿಂದಿನ ಸೂತ್ರದಿಂದ ಅಣ್ ಸಾಮಾನ್ಯವಾಗಿ ಬರುತ್ತಿರುವಾಗ ಕ ಹೇಳಿದುದರಿಂದ ಅಣಿಗೆ ಅಪವಾದವೆಂದು ತಿಳಿಯಬೇಕು. ಗಾಂ ದದಾತಿ ಇತಿ ಗೋದಃ ॥ ಗೋ ಕರ್ಮವಾಗಿದೆ. ದಾ ಧಾತುವಿಗೆ ಉಪಸರ್ಗಸಂಬಂಧವಿಲ್ಲ. ಕಪ್ರತ್ಯಯ ಬಂದರೆ ಇದು ಕಿತ್ತಾದುದರಿಂದ 'ಆತೋ ಲೋಪ ಇಟಿ ಚ' ಸೂತ್ರದಿಂದ ಆಕಾರಲೋಪ. ಗೋದಃ ಎಂದಾಗುತ್ತದೆ. ಕಂಬಲಂ ದದಾತಿ ಇತಿ ಕಂಬಲದಃ ॥ ಕಂಬಲವೆಂಬ ಕರ್ಮವಾಚಕಪದ ಉಪಪದವಾದುದರಿಂದ ಕ ಬಂದಿದೆ. ಉಪಸರ್ಗವಿರಬಾರದೆಂದು ಏಕೆ ? ಗೋಸನ್ದಾಯಃ ಇಲ್ಲಿ ಬರುವುದಿಲ್ಲ. ಗಾಂ ಸಮ್ ದದಾತಿ. ಇಲ್ಲಿ ಸಮ್ ಉಪಸರ್ಗಸಂಬಂಧವಿರುವುದರಿಂದ ದಾ ಧಾತುವಿಗೆ ಕ ಬಂದಿಲ್ಲ. ಹಿಂದಿನ ಸೂತ್ರದಿಂದ ಅಣ್. ಗೋಸಂದಾ+ಅ ಎಂದಿರುವಾಗ 'ಆತೋ ಯುಕ್ ಚಿಣ್ಕೃತೋಃ' ಸೂತ್ರದಿಂದ ಯುಕಾಗಮ ಬಂದರೆ ಗೋಸನ್ದಾಯಃ ಎಂದಾಗುತ್ತದೆ. 'ಮೂಲವಿಭುಜಾದಿಭ್ಯಃ ಕಃ' ಇದು ವಾರ್ತಿಕ. ತಾದರ್ಥ್ಯದಲ್ಲಿ ಚತುರ್ಥೀ ಬಂದಿದೆ. ಮೂಲವಿಭುಜ ಮುಂತಾದ ಶಬ್ದಗಳ ಸಿದ್ಧಿ

ಗೋಸ್ಕರ ಕಪ್ರತ್ಯಯ ಹೇಳಬೇಕೆಂದರ್ಥ. ಮೂಲಾನಿ ವಿಭುಜತಿ ॥ ಮೂಲವಿಭುಜೋ ರಥಃ ॥ ಮೂಲವನ್ನು ಮರ್ದಿಸುತ್ತದೆ. ರಥದ ಚಕ್ರದಿಂದ ಭೂಮಿ ಮರ್ದನವಾಗುತ್ತದೆ. ಮೂಲ ಉಪಪದವಾಗಿರುವಾಗ ವಿ ಉಪಸರ್ಗಪೂರ್ವಕ ಭುಜೋ (ಕೌಟಿಲ್ಯೇ) ಧಾತುವಿಗೆ ಕಪ್ರತ್ಯಯ ಬಂದಿದೆ. ಇದು ಆಕೃತಿಗಣ. ಯಾವ ಸೂತ್ರದಿಂದಲೂ ಕಪ್ರತ್ಯಯ ಹೊಂದದೆ ಕಪ್ರತ್ಯಯಾನ್ತರೂಪವಿರುವುದಾದರೆ ಅದು ಮೂಲವಿಭುಜಾದಿ ಗಣದಲ್ಲಿ ಸೇರಿವೆಯೆಂದು ತಿಳಿಯಬೇಕು. ಮಹೀಂ ಧರತಿ ಇತಿ ಮಹೀಧ್ರಃ ॥ ಭೂಮಿಯನ್ನು ಧರಿಸುವುದು, ಪರ್ವತ. ಕುಂ ಧರತಿ ಇತಿ ಕುಧ್ರಃ ॥ ಧೃ(ಞ್) ಧಾತುವಿಗೆ ಕ ಬಂದು ಯಣ್ ಬಂದಿದೆ. ಅಣ್ ಬಂದಿದ್ದರೆ ಧಾರ ಎಂದಾಗಬೇಕಾಗುತ್ತದೆ. ಕುಧ್ರವೆಂದರೂ ಪರ್ವತ.

### ಟಪ್ರತ್ಯಯ ವಿಧಿಸುವ ಸೂತ್ರ.

**೭೯೫. ಚರೇಷ್ಟಃ ॥ ೩-೨-೧೬ ॥**

**ಅಧಿಕರಣೇ ಉಪಪದೇ । ಕುರುಚರಃ ॥**

ಚರೇಃ, ಟಃ ॥ ದ್ವಿಪದ ಸೂತ್ರ. ಚರ್ ಧಾತುವನ್ನು ಇಕಿನಿಂದ ನಿರ್ದೇಶಿಸಿರುತ್ತಾನೆ. 'ಅಧಿಕರಣೇ ಶೇತೇಃ' ಸೂತ್ರದಿಂದ 'ಅಧಿಕರಣೇ' ಅನುವೃತ್ತಿ. ಅಧಿಕರಣ ವಾಚಕಪದವು ಉಪಪದವಾಗಿರುವಾಗ ಚರ್ ಧಾತುವಿಗೆ ಟಪ್ರತ್ಯಯ ಬರುತ್ತದೆ. ಟದಲ್ಲಿ 'ಚುಟೂ' ಸೂತ್ರದಿಂದ ಟಕಾರ ಇತ್. ಕುರುಷು ಚರತಿ ಇತಿ ಕುರುಚರಃ ॥ ಕುರು ಅಧಿಕರಣವಾಚಕಪದ. ಚರಿಗೆ ಟ ಬಂದಿದೆ. ಕುರುಚರ್+ಅ=ಕುರುಚರಃ ॥

### ಟಪ್ರತ್ಯಯ ಹೇಳುವ ಸೂತ್ರ.

**೭೯೬. ಭಿಕ್ಷಾಸೇನಾದಾಯೇಷು ಚ ॥ ೩-೨-೧೭ ॥**

**ಭಿಕ್ಷಾಚರಃ । ಸೇನಾಚರಃ । ಆದಾಯೇತಿ ಲ್ಯಬನ್ತಮ್ । ಆದಾಯಚರಃ ॥**

ದ್ವಿಪದ ಸೂತ್ರ. ಹಿಂದಿನ ಸೂತ್ರ ಅನುವೃತ್ತವಾಗುತ್ತದೆ. ಭಿಕ್ಷಾ, ಸೇನಾ, ಆದಾಯ ಪದಗಳು ಉಪಪದವಾಗಿರುವಾಗ ಚರ್ ಧಾತುವಿಗೆ ಟಪ್ರತ್ಯಯ ಬರುತ್ತದೆ. ಭಿಕ್ಷಾಂ ಚರತಿ ಇತಿ ಭಿಕ್ಷಾಚರಃ ॥ ಚರ=ಗತಿಭಕ್ಷಣಯೋಃ । ಧಾತು. ಇಲ್ಲಿ ತಿರುಗಿ ಸಂಪಾದಿಸುವುದೆಂದರ್ಥ. ಭಿಕ್ಷಾ ಎಂಬ ಕರ್ಮ ಉಪಪದವಿರುವಾಗ ಚರ್ ಧಾತುವಿಗೆ ಟ ಬಂದಿದೆ. ಸೇನಾಸು ಚರತೀತಿ ಸೇನಾಚರಃ ॥ ಸೇನಾರೂಪ ಅಧಿಕರಣವಾಚಕಪದ ಉಪಪದವಾಗಿರುವಾಗ ಚರ್ ಧಾತುವಿಗೆ ಟ ಬಂದಿದೆ. ಆದಾಯ ಎಂಬುದು ಲ್ಯಬನ್ತ ಪದ. ಆದಾಯ ಚರತಿ ಇತಿ ಆದಾಯಚರಃ ॥ (ಸಿಕ್ಕಿದುದನ್ನು) ತೆಗೆದುಕೊಂಡು ಹೋಗುತ್ತಾನೆ ಎಂದರ್ಥ.

ಕೃಞ್ ಧಾತುವಿಗೆ ಟಪ್ರತ್ಯಯ ಹೇಳುವ ಸೂತ್ರ.

೭೯೭. ಕೃಞೋ ಹೇತುತಾಚ್ಛೀಲ್ಯಾನುಲೋಮ್ಯೇಷು || ೩-೨-೨೦ ||

ಏಷು ದ್ಯೋತ್ಯೇಷು ಕರೋತೇಷ್ಟಃ ಸ್ಯಾತ್ ||

ದ್ವಿಪದ ಸೂತ್ರ. 'ಕರ್ಮಣ್ಯಣ್' ಸೂತ್ರದಿಂದ 'ಕರ್ಮಣಿ' ಅನುವೃತ್ತಿ. ಸೂತ್ರಾರ್ಥ—ಕರ್ಮವಾಚಕ ಪದವು ಉಪಪದವಾಗಿರುವಾಗ ಹೇತು, ತಾಚ್ಛೀಲ್ಯ, ಆನುಲೋಮ್ಯ ಅರ್ಥಗಳು ತೋರುತ್ತಿರುವಾಗ ಕೃಞ್ ಧಾತುವಿಗೆ ಟಪ್ರತ್ಯಯ ಬರುತ್ತದೆ. ಹೇತು = ಕಾರಣ. ತಾಚ್ಛೀಲ್ಯ = ತತ್ಸ್ವಭಾವ. ಆನುಲೋಮ್ಯ = ಅಧಿಕಾರಿಗಳ ಚಿತ್ತವನ್ನನುಸರಿಸುವುದು. ಯಶಃ ಕರೋತಿ || ಯಶಸ್ಸನ್ನುಂಟು ಮಾಡುತ್ತದೆ. ವಿದ್ಯೆಯೆಂದರ್ಥ. ಕಾರಣಾರ್ಥ ತೋರುವುದರಿಂದ ಕೃಞಿಗೆ ಟ ಬಂದರೆ ಯಶಸ್ + ಕೃ + ಅ ಎಂದಿರುವಾಗ ಸಕಾರಕ್ಕೆ ರುತ್ವವಿಸರ್ಗ ಬಂದಾಗ ಯಶಃ + ಕೃ + ಅ ಎಂದಾಗುತ್ತದೆ. ಟನಿಮಿತ್ತವಾಗಿ ಗುಣ. ಯಶಃ + ಕರ್ + ಅ. ವಿಸರ್ಗಕ್ಕೆ ಕವರ್ಗಪರವಾದುದರಿಂದ ಜಿಹ್ವಾಮೂಲೀಯ ಪ್ರಾಪ್ತವಾದರೆ ಸಾದೇಶ ಹೇಳುತ್ತಾನೆ.

ವಿಸರ್ಗಕ್ಕೆ ಸಮಾಸದಲ್ಲಿ ಸತ್ವ ಹೇಳುವ ಸೂತ್ರ.

೭೯೮. ಅತಃ ಕೃಕಮಿಕಂಸಕುಂಭಪಾತ್ರಕುಶಾಕರ್ಣೀಷ್ವನವ್ಯಯಸ್ಯ || ೮-೩-೪೬ ||

ಆದುತ್ತರಸ್ಯಾನವ್ಯಯಸ್ಯ ವಿಸರ್ಗಸ್ಯ ಸಮಾಸೇ ನಿತ್ಯಂ ಸಾದೇಶಃ ಕರೋತ್ಯಾದಿಷು ಪರೇಷು । ಯಶಸ್ಕರೀ ವಿದ್ಯಾ । ಶ್ರಾದ್ಧಕರಃ । ವಚನಕರಃ ||

ಅತಃ, ಕೃಕಮಿಕಂಸಕುಂಭಪಾತ್ರಕುಶಾಕರ್ಣೀಷು, ಅನವ್ಯಯಸ್ಯ || ತ್ರಿಪದ ಸೂತ್ರ. 'ವಿಸರ್ಜನೀಯಸ್ಯ ಸಃ' ಸೂತ್ರದಿಂದ 'ವಿಸರ್ಜನೀಯಸ್ಯ' ಪದವೂ, 'ನಿತ್ಯಂ ಸಮಾಸೇಽನುತ್ತರಪದಸ್ಥಸ್ಯ' ಸೂತ್ರವೂ ಅನುವೃತ್ತವಾಗುತ್ತವೆ. ಸೂತ್ರಾರ್ಥ—ಅಕಾರದ ಪರದಲ್ಲಿರುವ ಅವ್ಯಯಭಿನ್ನವಾದ ವಿಸರ್ಗಕ್ಕೆ ಕೃ, ಕಮಿ, ಕಂಸ, ಕುಂಭ, ಪಾತ್ರ, ಕುಶಾ, ಕರ್ಣೀ ಶಬ್ದಗಳು ಪರವಾದಾಗ ಸಮಾಸದಲ್ಲಿ ನಿತ್ಯವಾಗಿ ಸಕಾರಾದೇಶ ಬರುತ್ತದೆ. ಯಶಃ + ಕರ ಎಂದಿರುವಾಗ ಸಮಾಸವಾಗಿದೆ. ಅವ್ಯಯಭಿನ್ನವಾದ ವಿಸರ್ಗವಿದೆ. ಕೃಞ್ ಪರದಲ್ಲಿದೆ. ಆದುದರಿಂದ ಜಿಹ್ವಾಮೂಲೀಯವನ್ನು ಬಾಧಿಸಿ ಸಕಾರವೇ ಬಂದರೆ ಯಶಸ್ + ಕರ = ಯುಶಸ್ಕರ ಎಂದಾಗುತ್ತದೆ. ವಿದ್ಯೆ ವಿಶೇಷ್ಯ ಆದುದರಿಂದ ಸ್ತ್ರೀಲಿಂಗದಲ್ಲಿ ಟಿತ್ತಾದುದರಿಂದ ಙೀಪ್ ಬಂದು ಯಶಸ್ಕರೀ ಎಂದಾಗುತ್ತದೆ. ಶ್ರಾದ್ಧಂ ಕರೋತಿ ಇತಿ ಶ್ರಾದ್ಧಕರಃ || ಶ್ರಾದ್ಧ ಮಾಡುವುದು ಅವನ ಸ್ವಭಾವ. ಶ್ರಾದ್ಧಕ್ರಿಯಾಶೀಲನೆಂದರ್ಥ. ತಾಚ್ಛೀಲ್ಯದಲ್ಲಿ ಟ ಬಂದಿದೆ. ವಚನಂ ಕರೋತಿ ಇತಿ

ವಚನಕರಃ || ಆನುಲೋಮ್ಯದಲ್ಲಿ ಟ ಬಂದಿದೆ. ಗುರ್ವಾದಿ ಆಜ್ಞಾಪರಿಪಾಲಕ ಎಂದರ್ಥ.

ಖಶ್ ಪ್ರತ್ಯಯ ವಿಧಾಯಕ ಸೂತ್ರ.

೭೯೯. ಏಜೇಃ ಖಶ್ || ೩-೨-೨೮ ||

ಣ್ಯನ್ತಾದೇಜೇಃ ಖಶ್ ಸ್ಯಾತ್ ||

ದ್ವಿಪದ ಸೂತ್ರ. ಏಜೇಃ ಎಂದು ನಿರ್ದೇಶಿಸಿರುವುದರಿಂದ ಣ್ಯನ್ತವಾದ ಏಜೃ ಧಾತುವನ್ನು ತೆಗೆದುಕೊಳ್ಳಬೇಕು. ಏಜೃ = ಕಂಪನೇ. ಧಾತು. **ಸೂತ್ರಾರ್ಥ**— ಣಿಜನ್ತವಾದ ಏಜೃ ಧಾತುವಿಗೆ ಖಶ್ ಪ್ರತ್ಯಯ ಬರುತ್ತದೆ. ಖಶಿನಲ್ಲಿ ಅಕಾರ ಉಳಿಯುತ್ತದೆ. ಜನಂ ಏಜಯತಿ || (= ಜನರನ್ನು ನಡುಗಿಸುತ್ತಾನೆ) ಎಂದು ಅರ್ಥ ವಿವಕ್ಷೆಮಾಡಿದಾಗ ಣ್ಯನ್ತವಾದ ಏಜೃ ಧಾತುವಿಗೆ ಖಶ್ ಬಂದರೆ ಏಜಿ + ಅ ಎಂದಿರುವಾಗ ಖಶ್ ಶಿತ್ತಾದುದರಿಂದ ಸಾರ್ವಧಾತುಕಸಂಜ್ಞಾ ಬರುವುದರಿಂದ ಧಾತುವಿಗೆ 'ಕರ್ತರಿ ಶಪ್' ಸೂತ್ರದಿಂದ ಶಪ್ ಬಂದರೆ ಏಜಿ + ಅ + ಅ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ ಬಂದು ಅಯಾದೇಶ ಬಂದರೆ ಏಜಯ + ಅ ರೂಪವಾಗಿ 'ಅತೋ ಗುಣೇ' ಸೂತ್ರದಿಂದ ಪರರೂಪ ಹೊಂದಿದರೆ ಏಜಯ ಎಂದಾಗುತ್ತದೆ. ಜನ ಶಬ್ದದೊಡನೆ ಸಮಾಸವಾಗಿ ವಿಭಕ್ತಿಲುಕ್ ಬಂದರೆ ಜನ + ಏಜಯ ಎಂದಿರುವಾಗ ಮುಮಾಗಮ ಹೇಳುತ್ತಾನೆ.

ಖಿದಂತ ಪರವಾದಾಗ ಮುಮಾಗಮ ಹೇಳುವ ಸೂತ್ರ.

೮೦೦. ಅರುರ್ದ್ವಿಷದಜನ್ತಸ್ಯ ಮುಮ್ || ೬-೩-೬೭ ||

ಅರುಷೋ ದ್ವಿಷತೋಽಜನ್ತಸ್ಯ ಚ ಮುಮಾಗಮಃ ಸ್ಯಾತ್ ಖಿದನ್ತೇ ಪರೇ ನತ್ವವ್ಯಯಸ್ಯ || ಶಿತ್ತ್ವಾಚ್ಛಬಾದಿಃ | ಜನಮೇಜಯತೀತಿ ಜನಮೇಜಯಃ ||

ದ್ವಿಪದ ಸೂತ್ರ. ಅರುಸ್, ದ್ವಿಷತ್, ಅಜನ್ತ ಇವುಗಳಿಗೆ ಸಮಾಹಾರದ್ವಂದ್ವ ಮಾಡಿ ಷಷ್ಠೀ ಹೇಳಿರುತ್ತಾನೆ. 'ಅಲುಗುತ್ತರಪದೇ' ಅಧಿಕಾರದಿಂದ 'ಉತ್ತರಪದೇ' ಲಬ್ಧವಾಗುತ್ತದೆ. 'ಖಿತ್ಯನವ್ಯಯಸ್ಯ' ಸೂತ್ರದಿಂದ 'ಖಿತಿ' ಅನುವೃತ್ತವಾಗುತ್ತದೆ. ಪ್ರತ್ಯಯವಾದುದರಿಂದ ತದನ್ತಲಾಭ. **ಸೂತ್ರಾರ್ಥ**—ಅರುಷ್, ದ್ವಿಷತ್, ಅಜನ್ತ ಶಬ್ದಗಳಿಗೆ ಖಿದನ್ತವಾದ ಉತ್ತರಪದ ಪರವಾದಾಗ ಮುಮಾಗಮ ಬರುತ್ತದೆ; ಅವ್ಯಯವಾಗಿದ್ದರೆ ಬರುವುದಿಲ್ಲ. 'ಅನವ್ಯಯಸ್ಯ' ಹಿಂದಿನ ಸೂತ್ರದಿಂದ ಅನುವೃತ್ತವಾಗುತ್ತದೆ. ಪ್ರಕೃತ ಏಜಯ ಎಂಬುದು ಖಕಾರ ಇತ್ತಾದ ಪ್ರತ್ಯಯಾನ್ತವಾಗಿದೆ. ಇದು ಉತ್ತರಪದವಾಗಿರುವಾಗ ಪೂರ್ವದಲ್ಲಿ ಜನ ಎಂಬ ಅಜನ್ತವಿರುವುದ

ರಿಂದ ಅದಕ್ಕೆ ಮುಮಾಗವು. ಮುಮ್ ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬಂದರೆ ಜನಮ್+ಏಜಯ=ಜನಮೇಜಯ ಎಂದಾಗುತ್ತದೆ. ಈ ಶಬ್ದಗಳು ಕೃದಂತವಾಗುವುದರಿಂದ ಪ್ರಾತಿಪದಿಕ ಸಂಜ್ಞೆಯನ್ನು ಹೊಂದಿ ಸು ವಿಭಕ್ತಿ ಹೊಂದುತ್ತವೆ. ಸುವಿಗೆ ರುತ್ವಾದಿ ಬರುತ್ತವೆ.

ವದ ಧಾತುವಿಗೆ ಖಚ್ ಪ್ರತ್ಯಯ ಹೇಳುವ ಸೂತ್ರ.

**೮೦೧. ಪ್ರಿಯವಶೇ ವದಃ ಖಚ್ ॥ ೩-೨-೩೮ ॥**

**ಪ್ರಿಯಂವದಃ । ವಶಂವದಃ ॥**

ತ್ರಿಪದ ಸೂತ್ರ. **ಸೂತ್ರಾರ್ಥ**—ಪ್ರಿಯ, ವಶ ರೂಪವಾದ ಕರ್ಮವಾಚಕ ಪದಗಳು ಉಪಪದವಾಗಿರುವಾಗ ವದ ಧಾತುವಿಗೆ ಖಚ್ ಪ್ರತ್ಯಯ ಬರುತ್ತದೆ. ಪ್ರಿಯಂ ವದತಿ ಇತಿ ಪ್ರಿಯಂವದಃ ॥ ಖಚ್ ಖಿತ್ತಾದುದರಿಂದ 'ಅರುರ್ದ್ವಿಷದಜನ್ತಸ್ಯ ಮುಮ್' ಸೂತ್ರದಿಂದ ಮುಮಾಗವು ಬಂದಿದೆ. ವಶ ಉಪಪದವಾಗಿರುವಾಗಲೂ ಮುಮ್ ಬಂದರೆ ವಶಂವದಃ ಎಂದಾಗುತ್ತದೆ.

ಕ್ವನಿಬಾದಿ ಪ್ರತ್ಯಯಗಳನ್ನು ವಿಧಿಸುವ ಸೂತ್ರ.

**೮೦೨. ಅನ್ಯೇಭ್ಯೋಽಪಿ ದೃಶ್ಯನ್ತೇ ॥ ೩-೨-೭೫ ॥**

**ಮನಿನ್, ಕ್ವನಿಪ್, ವನಿಪ್, ವಿಚ್ ಏತೇ ಪ್ರತ್ಯಯಾ ಧಾತೋಃ ಸ್ಯುಃ ॥**

ಅನ್ಯೇಭ್ಯಃ, ಅಪಿ, ದೃಶ್ಯನ್ತೇ ॥ ತ್ರಿಪದ ಸೂತ್ರ. 'ವಿಜುಪೇ ಛಂದಸಿ', 'ಆತೋ ಮನಿನ್ಕ್ವನಿಬ್ವನಿಪಶ್ಚ' ಸೂತ್ರಗಳಿಂದ 'ಮನಿನ್ಕ್ವನಿಬ್ವನಿಪಃ', 'ವಿಚ್' ಅನುವೃತ್ತವಾಗುತ್ತವೆ. ಪೂರ್ವದಲ್ಲಿ ಆದನ್ತ ಧಾತುಗಳಿಗೆ ಛಂದಸ್ಸಿನಲ್ಲಿ ಮಾತ್ರ ಈ ಪ್ರತ್ಯಯಗಳು ವಿಹಿತವಾಗಿವೆ. ಇಲ್ಲಿ 'ಅನ್ಯೇಭ್ಯಃ' ಎಂದುದರಿಂದ ಮನಿನ್, ಕ್ವನಿಪ್, ವನಿಪ್, ವಿಚ್ ಪ್ರತ್ಯಯಗಳು ಲೋಕದಲ್ಲಿ ಇತರ ಧಾತುಗಳ ಮೇಲೂ ಬರುತ್ತವೆ ಎಂದರ್ಥವಾಗುತ್ತದೆ. ಶೄ=ಹಿಂಸಾಯಾಮ್. ಧಾತು. ಇದಕ್ಕೆ ಸು ಉಪಸರ್ಗವಿರುವಾಗ ಮನಿನ್ ಪ್ರತ್ಯಯ. ಮನಿನ್‌ನಲ್ಲಿ ಮನ್ ಉಳಿಯುತ್ತದೆ. ಸುಶೄ+ಮನ್. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ (ಅರ್). ಸುಶರ್+ಮನ್. ಮನ್ ವಲಾದಿ ಆರ್ಧಧಾತುಕವಾದುದರಿಂದ ಇಡಾಗವು ಪ್ರಾಪ್ತವಾದರೆ ಇಲ್ಲಿ ನಿಷೇದ ಹೇಳುತ್ತಾನೆ.

ವಶಾದಿ ಕೃತ್ತಿಗೆ ಇಣ್ನಿಷೇಧ ಹೇಳುವ ಸೂತ್ರ.

**೮೦೩. ನೇಡ್ವಶಿ ಕೃತಿ ॥ ೭-೨-೮ ॥**

**ವಶಾದೇಃ ಕೃತ ಇಟ್ ನ ಸ್ಯಾತ್ । ಶೄ=ಹಿಂಸಾಯಾಮ್ । ಸುಶರ್ಮಾ । ಪ್ರಾತರಿತ್ವಾ ॥**

ನ, ಇಟ್, ವಶಿ, ಕೃತಿ || ನಾಲ್ಕು ಪದಗಳುಳ್ಳ ಸೂತ್ರ. ವಶಿ ಸಪ್ತಮ್ಯಂತವು ಕೃತಿಗೆ ವಿಶೇಷಣವಾದುದರಿಂದ ತದಾದಿಲಾಭ. ಷಷ್ಠ್ಯರ್ಥದಲ್ಲಿ ಸಪ್ತಮೀ ಬಂದಿದೆ. **ಸೂತ್ರಾರ್ಥ**—ವಶ್ ಆದಿಯಾದ ಕೃತ್ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ. ಪ್ರಕೃತ ಮನ್ ವಶಾದಿ ಆದುದರಿಂದ ಇಡಾಗಮನಿಷೇಧ ಬಂದರೆ ಸುಶರ್ಮನ್ ಎಂದಾಗುತ್ತದೆ. ಪ್ರಥಮಾ ಸುವಿನಲ್ಲಿ 'ಸರ್ವನಾಮಸ್ಥಾನೇ ಚಾಸಂಬುದ್ಧೌ' ಸೂತ್ರದಿಂದ ಉಪಧಾದೀರ್ಘ. 'ಹಲ್‌ಙ್ಯಾಭ್ಯೋ—' ಸೂತ್ರದಿಂದ ಸುಲೋಪ. 'ನಲೋಪಃ ಪ್ರಾತಿಪದಿಕಾನ್ತಸ್ಯ' ಸೂತ್ರದಿಂದ ನಲೋಪ. ಸುಶರ್ಮಾ ಎಂದಾಗುತ್ತದೆ. ಪ್ರಾತರಿತ್ವಾ. ಪ್ರಾತರ್ ಉಪಪದವಾಗಿರುವಾಗ ಇಣ್ (ಗತೌ) ಧಾತುವಿಗೆ ಕ್ವನಿಪ್ ಪ್ರತ್ಯಯ. 'ಲಶಕ್ವತದ್ಧಿತೇ' ಕಕಾರ ಇತ್. ಇಕಾರ ಉಚ್ಚಾರಣಾರ್ಥ. ವನ್ ಉಳಿಯುತ್ತದೆ. ಪ್ರಾತರ್+ಇ+ವನ್. ಇದು ಪಿತ್ತಾದುದರಿಂದ 'ಹ್ರಸ್ವಸ್ಯ ಪಿತಿ ಕೃತಿ ತುಕ್' ಸೂತ್ರದಿಂದ ಇಗೆ ತುಗಾಗಮ. ಪ್ರಾತರಿತ್+ವನ್=ಪ್ರಾತರಿತ್ವನ್ ಶಬ್ದ. ಹಿಂದಿನಂತೆ ಸುವಿನಲ್ಲಿ ದೀರ್ಘ, ಸುಲೋಪ, ನಲೋಪಗಳು ಬಂದರೆ ಪ್ರಾತರಿತ್ವಾ ಎಂದಾಗುತ್ತದೆ. ವಶಾದಿಯಾದುದರಿಂದ ಇಡಾಗಮ ಬರುವುದಿಲ್ಲ. ಬೆಳಗ್ಗೆ ಹೋಗುವವನು ಎಂದರ್ಥ.

ಅನುನಾಸಿಕಕ್ಕೆ ಆತ್ವ ಹೇಳುವ ಸೂತ್ರ.

**೮೦೪. ವಿಡ್ವನೋರನುನಾಸಿಕಸ್ಯಾತ್ || ೬-೪-೪೧ ||**

**ಅನುನಾಸಿಕಸ್ಯ ಆತ್ ಸ್ಯಾತ್ | ವಿಜಾಯತ ಇತಿ ವಿಜಾವಾ | ಓಣೃ =ಅಪನಯನೇ | ಅವಾವಾ | ವಿಚ್ || ರುಷ ರಿಷ=ಹಿಂಸಾಯಾಮ್ | ರೋಟ್ | ರೇಟ್ | ಸುಗಣ್ ||**

ವಿಡ್ವನೋಃ, ಅನುನಾಸಿಕಸ್ಯ, ಆತ್ || ತ್ರಿಪದ ಸೂತ್ರ. 'ವಿಡ್ವನೋಃ' ಸಪ್ತಮೀ. **ಸೂತ್ರಾರ್ಥ**—ವಿಟ್, ವನ್ ಪ್ರತ್ಯಯಪರದಲ್ಲಿರುವಾಗ ಅನುನಾಸಿಕಕ್ಕೆ ಆಕಾರಾದೇಶ ಬರುತ್ತದೆ. ವಿಜಾಯತೇ ಇತಿ ವಿಜಾವಾ || ವಿ ಉಪಸರ್ಗ. ಜನೀ= ಪ್ರಾದುರ್ಭಾವೇ. ಧಾತು. ವನಿಪ್ ಪ್ರತ್ಯಯ. ಇದರಲ್ಲಿ ವನ್ ಉಳಿಯುತ್ತದೆ. ಕ್ವನಿಪ್ ಪ್ರತ್ಯಯದಲ್ಲಿಯೂ ವನ್ ಉಳಿದರೂ ಕಿತ್ತಾದುದರಿಂದ ಕಾರ್ಯವಿಶೇಷ ಹೊಂದುತ್ತದೆ. ವಿಜನ್+ವನ್ ಎಂದಿರುವಾಗ ವನ್ ಪರವಾದುದರಿಂದ ಜನಿನ ಅನುನಾಸಿಕವಾದ ನಕಾರಕ್ಕೆ ಆತ್ವ ಬಂದರೆ ವಿಜ+ಆ+ವನ್. ಸವರ್ಣದೀರ್ಘ. ವಿಜಾವನ್ ಶಬ್ದ. ಹಿಂದಿನಂತೆ ಸುವಿನಲ್ಲಿ ವಿಜಾವಾ ಎಂದಾಗುತ್ತದೆ. ವಿಶೇಷವಾಗಿ ಹುಟ್ಟುವುದು. ಓಣೃ ಧಾತು. ಅಪನಯನ ಅರ್ಥ. ಇದಕ್ಕೆ ವನಿಪ್ ಬಂದರೆ ಓಣ್+ವನ್ ಎಂದಿರುವಾಗ ಣಕಾರಕ್ಕೆ ಆತ್ವ. ಓ+ಆ+ವನ್. ಅವಾದೇಶ. ಅವ್+ಆ+ವನ್=ಅವಾವನ್ ಶಬ್ದ. ಸುವಿನಲ್ಲಿ ದೀರ್ಘಾದಿಗಳು ಬಂದು ಅವಾವಾ

ಎಂದಾಗುತ್ತದೆ. ತೆಗೆದುಕೊಂಡು ಹೋಗುವವನು. ರುಷ್ ಧಾತು. ಹಿಂಸಾರ್ಥ. ಇದಕ್ಕೆ ವಿಚ್ ಪ್ರತ್ಯಯ. ಇದರಲ್ಲಿ ಚಕಾರ 'ಹಲನ್ತ್ಯಮ್' ಸೂತ್ರದಿಂದಲೂ, ಇಕಾರ ಉಚ್ಚಾರಣಾರ್ಥವಾದುದರಿಂದಲೂ, ವಕಾರ 'ವೇರಪೃಕ್ತಸ್ಯ' ಸೂತ್ರದಿಂದ ಇತ್ತಾಗಿ ಲೋಪವಾದುದರಿಂದಲೂ ಏನೂ ಉಳಿಯುವುದಿಲ್ಲ. ರುಷಿನ ಲಘೂಪಧೆಗೆ ಆರ್ಧಧಾತುಕವಿಚ್‌ನಿಮಿತ್ತವಾಗಿ ಗುಣ. ರೋಷ್. 'ಝಲಾಂ ಜಶೋಽನ್ತೇ' ಸೂತ್ರದಿಂದ ಷಕಾರಕ್ಕೆ ಡಕಾರಾದೇಶ. ರೋಡ್. ವಾವಸಾನೇ ರೋಟ್. ಹಾಗೆಯೇ ರಿಷ್ ಧಾತುವಿಗೆ ವಿಚ್ ಬಂದರೆ ರೇಡ್, ರೇಟ್ ರೂಪವಾಗುತ್ತದೆ. ಹಿಂಸಿಸುವವನು ಎಂದರ್ಥ. ಸುಗಣ್. ಗಣ=ಸಂಖ್ಯಾನೇ. ಧಾತು. ಸು ಉಪಸರ್ಗ ವಿರುವಾಗ ವಿಚ್ ಬಂದಿದೆ. ವಿಚ್ ಲೋಪಹೊಂದಿದಾಗ ಸುಗಣ್ ಎಂದಾಗುತ್ತದೆ. ಪ್ರಥಮಾ ಸುವಿನಲ್ಲಿಯೂ 'ಹಲ್‌ಙ್ಯಾಭ್ಯೋ—' ಸೂತ್ರದಿಂದ ಸುಲೋಪವಾದರೆ ಸುಗುಣ್ ಎಂದಾಗುತ್ತದೆ. ಚನ್ನಾಗಿ ಎಣಿಸುವವನು.

ಕ್ವಿಪ್ ಪ್ರತ್ಯಯ ವಿಧಿಸುವ ಸೂತ್ರ.

೮೦೫. ಕ್ವಿಪ್ ಚ ॥ ೩-೨-೭೬ ॥

ಅಯೆಮಪಿ ದೃಶ್ಯತೇ । ಉಖಾಸ್ರತ್ । ಪರ್ಣಧ್ವತ್ । ವಾಹಭ್ರಟ್ ॥

ದ್ವಿಪದ ಸೂತ್ರ. ಎಲ್ಲಾ ಧಾತುಗಳ ಮೇಲೂ ಕ್ವಿಪ್ ಪ್ರತ್ಯಯ ಬರುತ್ತದೆ. ಕ್ವಿಪಿನಲ್ಲಿ ವಿಚಿನಲ್ಲಿ ಹೇಳಿದಂತೆಯೇ ಎಲ್ಲವೂ ಇತ್ತಾಗಿ ಲೋಪಹೊಂದುತ್ತವೆ. ಉಖಾಯಾಃ ಸ್ರಂಸತೇ ಇತಿ ಉಖಾಸ್ರತ್ ॥ ಪಾತ್ರದಿಂದ ಸುರಿಯುವುದು. ಸ್ರಂಸು, ಧ್ವಂಸು, ಭ್ರಂಶು=ಅವಸ್ರಂಸನೇ. ಧಾತು. ಉಖಾಸ್ರಂಸ್+ಕ್ವಿಪ್. 'ಅನಿದಿತಾಂ ಹಲ ಉಪಧಾಯಾಃ—' ಸೂತ್ರದಿಂದ ಉಪಧಾನಕಾರಲೋಪ (ಸ್ರನ್ ಸ್ ಎಂದಿರು ವಾಗ ನಕಾರಕ್ಕೆ ಅನುಸ್ವಾರ ಬಂದಿದೆ) ಉಖಾಸ್ರಸ್. ಕ್ವಿಪ್ ಲೋಪ. ಉಖಾ ಸ್ರಸ್ ಎಂದಿರುವಾಗ 'ವಸುಸ್ರಂಸುಧ್ವಂಸ್ವನಡುಹಾಂ ದಃ' ಸೂತ್ರದಿಂದ ಸ್ರಸಿನ ಸಕಾರಕ್ಕೆ ದಕಾರಾದೇಶ. ಹಲ್‌ಙ್ಯಾದಿನಾ ಸುಲೋಪ. ಉಖಾಸ್ರದ್. 'ವಾವ ಸಾನೇ' ಉಖಾಸ್ರತ್. ಪರ್ಣಾತ್ ಧ್ವಂಸತೇ ಇತಿ ಪರ್ಣಧ್ವತ್ ॥ ಎಲೆಯಿಂದ ನಶಿಸುವುದು (ಜಾರುವುದು). ಪರ್ಣ ಉಪಪದವಾಗಿರುವಾಗ ಧ್ವಂಸು ಧಾತುವಿಗೆ ಕ್ವಿಪ್. ಹಿಂದಿನಂತೆ ನಲೋಪ, ದತ್ವಾದಿ. ಪರ್ಣಧ್ವತ್. ವಾಹಾತ್ ಭ್ರಶ್ಯತಿ ಇತಿ ವಾಹಭ್ರಟ್ ॥ ವಾಹನದಿಂದ ಬೀಳುವುದು. ವಾಹ ಉಪಪದವಾಗಿರುವಾಗ ಭ್ರಂಶು ಧಾತುವಿಗೆ ಕ್ವಿಪ್. ನಲೋಪ. ವಾಹಭ್ರಶ್ ಎಂದಿರುವಾಗ 'ವ್ರಶ್ಚಭ್ರಸ್ಜ ಸೃಜ—' ಸೂತ್ರದಿಂದ ಶಕಾರಕ್ಕೆ ಷಕಾರಾದೇಶ. ವಾಹಭ್ರಷ್. 'ಝಲಾಂ ಜಶೋಽನ್ತೇ' ವಾಹಭ್ರಡ್. ವಾವಸಾನೇ ವಾಹಭ್ರಟ್.

ತಾಚ್ಛೀಲ್ಯಾರ್ಥದಲ್ಲಿ ಣಿನಿಪ್ರತ್ಯಯ ಹೇಳುವ ಸೂತ್ರ.

೮೦೬. ಸುಪ್ಯಜಾತೌ ಣಿನಿಸ್ತಾಚ್ಛೀಲ್ಯೇ ॥ ೩-೨-೭೮ ॥

ಅಜಾತ್ಯರ್ಥೇ ಸುಪಿ ಧಾತೋರ್ಣಿನಿಸ್ತಾಚ್ಛೀಲ್ಯೇ ದ್ಯೋತ್ಯೇ । ಉಷ್ಣಭೋಜೀ ।

ಸುಪಿ, ಅಜಾತೌ, ಣಿನಿಃ, ತಾಚ್ಛೀಲ್ಯೇ ॥ ನಾಲ್ಕು ಪದಗಳುಳ್ಳ ಸೂತ್ರ. ಜಾತಿ ಭಿನ್ನವಾದ ಸುಬನ್ತವು ಉಪಪದವಾಗಿರುವಾಗ ತಾಚ್ಛೀಲ್ಯಾರ್ಥತೋರುವಾಗ ಧಾತುವಿಗೆ ಣಿನಿಪ್ರತ್ಯಯ ಬರುತ್ತದೆ. ಣಿನಿಯಲ್ಲಿ ಇನ್ ಉಳಿಯುತ್ತದೆ. ಉಷ್ಣಂ ಭುಙ್ಕ್ತೇ ತಚ್ಛೀಲಃ ॥ ಬಿಸಿಯಾಗಿ ತಿನ್ನುವುದು ಅವನ ಸ್ವಭಾವ. ಉಷ್ಣಪದ ಜಾತಿ ವಾಚಕವಲ್ಲ. ಇದು ಉಪಪದವಾಗಿರುವಾಗ ಭುಜ ಧಾತುವಿಗೆ ಣಿನಿಪ್ರತ್ಯಯ ಬಂದರೆ ಭುಜ್ + ಇನ್ ಎಂದಿರುವಾಗ ಲಘೂಪಧಗುಣ ಉಷ್ಣಭೋಜಿನ್ ಎಂದಾಗುತ್ತದೆ. ಪ್ರಥಮಾಸುವಿನಲ್ಲಿ ಹಿಂದಿನಂತೆ ದೀರ್ಘಾದಿಗಳು ಬಂದರೆ ಉಷ್ಣಭೋಜೀ ಎಂದಾಗುತ್ತದೆ. ಬ್ರಾಹ್ಮಣಾದಿ ಜಾತಿವಾಚಕಪದಗಳಿದ್ದರೂ, ತಾಚ್ಛೀಲ್ಯ ತೋರದಿರುವಾಗಲೂ ಣಿನಿ ಪ್ರತ್ಯಯ ಬರುವುದಿಲ್ಲ.

ಮನ್ ಧಾತುವಿಗೆ ಣಿನಿಪ್ರತ್ಯಯ ಹೇಳುವ ಸೂತ್ರ.

೮೦೭. ಮನಃ ॥ ೩-೨-೮೨ ॥

ಸುಪಿ ಮನ್ಯತೇಃ ಣಿನಿಃ ಸ್ಯಾತ್ । ದರ್ಶನೀಯಮಾನೀ ॥

ಏಕಪದ ಸೂತ್ರ. ಹಿಂದಿನ ಸೂತ್ರದಿಂದ 'ಸುಪಿ' ಅನುವೃತ್ತವಾಗುತ್ತದೆ. ಸುಬನ್ತಪದ ಉಪಪದವಾಗಿರುವಾಗ ಮನ್ ಧಾತುವಿಗೆ ಣಿನಿ ಪ್ರತ್ಯಯ ಬರುತ್ತದೆ. ಮನ ಧಾತುಗಳು ಅನೇಕವಿದ್ದರೂ ಇಲ್ಲಿ ದಿವಾದಿಪಠಿತವಾದ **ಮನ = ಜ್ಞಾನೇ** ಧಾತುವನ್ನೇ ತೆಗೆದುಕೊಳ್ಳಬೇಕು. ದರ್ಶನೀಯಂ ಮನ್ಯತೇ ॥ ಸುಂದರನನ್ನಾಗಿ ತಿಳಿಯುತ್ತಾನೆ. ದರ್ಶನೀಯವೆಂಬ ಸುಬನ್ತ ಉಪಪದವಾಗಿರುವುದರಿಂದ ಮನಿಗೆ ಣಿನಿ ಬಂದರೆ ಮನ್ + ಇನ್ ಎಂದಿರುವಾಗ **'ಅತ ಉಪಧಾಯಾಃ'** ಸೂತ್ರದಿಂದ ಉಪಧಾ ವೃದ್ಧಿ ಬಂದರೆ ಮಾನಿನ್ ಆಗುತ್ತದೆ. ಸಮಾಸವಾದಮೇಲೆ ಸು ಬಂದಾಗ ಹಿಂದಿನಂತೆ ಕಾರ್ಯಗಳು ಬಂದರೆ ದರ್ಶನೀಯಮಾನೀ ಎಂದಾಗುತ್ತದೆ.

ಮನ್ ಧಾತುವಿಗೆ ಖಶ್ ಹೇಳುವ ಸೂತ್ರ.

೮೦೮. ಆತ್ಮಮಾನೇ ಖಶ್ಚ ॥ ೩-೨-೮೩ ॥

ಸ್ವಕರ್ಮಕೇ ಮನನೇ ವರ್ತಮಾನಾನ್ಮನ್ಯತೇಃ ಸುಪಿ ಖಶ್ ಸ್ಯಾತ್, ಚಾಣ್ಣಿನಿಃ । ಪಣ್ಡಿತಮಾತ್ಮಾನಂ ಮನ್ಯತೇ ಪಂಡಿತಂಮನ್ಯಃ । ಪಂಡಿತಮಾನೀ ॥

ಆತ್ಮಮಾನೇ, ಖಶ್, ಚ || ತ್ರಿಪದ ಸೂತ್ರ. ಆತ್ಮನಃ ಮಾನಃ ಆತ್ಮಮಾನಃ | ತಸ್ಮಿನ್ || ತನ್ನನ್ನು ತಿಳಿಯುವುದು **ಸೂತ್ರಾರ್ಥ**—ತನ್ನನ್ನೇ ತಿಳಿಯುವುದು ಎಂದರ್ಥ ಕೊಡುವ ಮನ್ ಧಾತುವಿಗೆ ಸುಬನ್ತಪದ ಉಪಪದವಾಗಿರುವಾಗ ಖಶ್ ಪ್ರತ್ಯಯ ಬರುತ್ತದೆ. ಚಕಾರದಿಂದ ಣಿನಿಪ್ರತ್ಯಯವೂ ಬರುತ್ತದೆ. ತಿಳಿಯುವುದು ಎಂಬುದರಲ್ಲಿ ತಾನೇ ಕರ್ಮವಾಗಿರಬೇಕು. ಪಂಡಿತಂ ಆತ್ಮಾನಂ ಮನ್ಯತೇ ಪಂಡಿತಂ ಮನ್ಯಃ || ಇಲ್ಲಿ ತನ್ನನ್ನೇ ಪಂಡಿತನನ್ನಾಗಿ ತಿಳಿಯುವವನು ಎಂಬರ್ಥ ತೋರುವುದ ರಿಂದ ಸ್ವಕರ್ಮಕಮನನವಿದೆ. ಮನ್ ಧಾತುವಿಗೆ ಖಶ್ ಪ್ರತ್ಯಯ ಬಂದರೆ ಖಶಿನಲ್ಲಿ ಅ ಉಳಿಯುತ್ತದೆ. ಶಿತ್ತಾದುದರಿಂದ ಮನಿಗೆ ಶ್ಯನ್ ವಿಕರಣ ಬರುತ್ತದೆ. ಖಿದಂತ ಉತ್ತರಪದಪರದಲ್ಲಿರುವುದರಿಂದ ಪಂಡಿತವೆಂಬ ಅಜನ್ತಕ್ಕೆ ಮುಮಾಗಮ ಬರುತ್ತದೆ. ಪಂಡಿತಮ್+ಮನ್‌ಯ+ಅ. 'ಅತೋ ಗುಣೇ' ಪರರೂಪ. ಮಕಾರಕ್ಕೆ ಅನು ಸ್ವಾರ. ಪಂಡಿತಂಮನ್ಯಃ ಎಂದಾಗುತ್ತದೆ. ಖಶ್ ಬಾರದಿರುವಾಗ ಣಿನಿ ಬಂದರೆ ಪಂಡಿತಮಾನೀ ಎಂದು ಹಿಂದಿನಂತೇ ಆಗುತ್ತದೆ.

ಖಿದಂತ ಪರವಾದಾಗ ಹ್ರಸ್ವ ಹೇಳುವ ಸೂತ್ರ.

**೮೯೯. ಖಿತ್ಯನವ್ಯಯಸ್ಯ ||೬–೩–೬೬ ||**

**ಖಿದನ್ತೇ ಪರೇ ಪೂರ್ವಪದಸ್ಯ ಹ್ರಸ್ವಃ | ತತೋ ಮುಮ್ | ಕಾಲಿಂ ಮನ್ಯಾ ||**

ಖಿತಿ, ಅನವ್ಯಯಸ್ಯ || ದ್ವಿಪದ ಸೂತ್ರ. 'ಇಕೋ ಹ್ರಸ್ವಃ—' ಸೂತ್ರದಿಂದ 'ಹ್ರಸ್ವಃ' ಅನುವೃತ್ತಿ. **ಸೂತ್ರಾರ್ಥ**—ಖಿದನ್ತವಾದ ಉತ್ತರಪದ ಪರದಲ್ಲಿರುವಾಗ ಪೂರ್ವಪದದ ಅಚಿಗೆ ಹ್ರಸ್ವ ಬರುತ್ತದೆ. ಕಾಲೀಂ ಆತ್ಮಾನಂ ಮನ್ಯತೇ || ತನ್ನನ್ನು ಕಪ್ಪನ್ನಾಗಿ ತಿಳಿಯುತ್ತಾಳೆ. ಕಾಳೀ+ಅಮ್+ಮನ್+ಯ+ಅ. ಹಿಂದಿನಂತೆ ಸ್ವಕರ್ಮಕ ಮನನವಿರುವುದರಿಂದ ಖಶ್ ಬಂದಿದೆ. ಸಮಾಸವಾದಮೇಲೆ ಸುಪ್ ಲುಕ್ ಆದರೆ ಕಾಳೀ+ಮನ್ಯಾ ಎಂದಾಗುತ್ತದೆ. ಇಲ್ಲಿ ಖಿದನ್ತ ಉತ್ತರಪದಪರದ ಲ್ಲಿರುವುದರಿಂದ ಕಾಳೀ ಎಂಬುದಕ್ಕೆ ಹ್ರಸ್ವ. ಕಾಳಿ+ಮನ್ಯಾ. 'ಅರುರ್ದ್ವಿಷದನ್ತ ಜನ್ತಸ್ಯ ಮುಮ್' ಸೂತ್ರದಿಂದ ಮುಮಾಗಮ. ಕಾಳಿಂಮನ್ಯಾ.

ಯಜ್ ಧಾತುವಿಗೆ ಣಿನಿಪ್ರತ್ಯಯ ಹೇಳುವ ಸೂತ್ರ.

**೮೧೦. ಕರಣೇ ಯಜಃ || ೩–೨–೮೫ ||**

**ಕರಣ ಉಪಪದೇ ಭೂತಾರ್ಥೇ ಯಜೇರ್ಣಿನಿಃ ಕರ್ತರಿ | ಸೋಮೇ ನೇಷ್ಟವಾನ್ ಸೋಮಯಾಜೀ | ಅಗ್ನಿಷ್ಟೋಮಯಾಜೀ ||**

ದ್ವಿಪದ ಸೂತ್ರ. 'ಭೂತೇ' ಅಧಿಕಾರ. 'ಸುಪ್ಯಜಾತೌ—' ಸೂತ್ರದಿಂದ 'ಣಿನಿಃ' ಅನುವೃತ್ತಿ. ಸೂತ್ರಾರ್ಥ—ಕರಣವಾಚಕ ಸುಬನ್ತಉಪ ಪದವಾಗಿರುವಾಗ ಭೂತಕಾಲಾರ್ಥವಾಚಕ ಯಜ್ ಧಾತುವಿಗೆ ಕರ್ತ್ರರ್ಥದಲ್ಲಿ ಣಿನಿ ಪ್ರತ್ಯಯ ಬರುತ್ತದೆ. ಸೋಮಯಾಜೀ. ಸೋಮರಸದಿಂದ ಯಾಗ ಮಾಡಿದವನು. ಸೋಮ ಕರಣವಾಗಿದೆ. ಭೂತಾರ್ಥ ತೋರುತ್ತದೆ. ಯಜಿಗೆ ಣಿನಿ ಬಂದರೆ 'ಅತ ಉಪಧಾಯಾಃ' ಸೂತ್ರದಿಂದ ಉಪಧಾವೃದ್ಧಿ. ಸೋಮಯಾಜಿನ್ ಶಬ್ದ. ಪ್ರಥಮಾಸುವಿನಲ್ಲಿ ದೀರ್ಘಾದಿಗಳು ಬಂದರೆ ಸೋಮಯಾಜೀ ಎಂದಾಗುತ್ತದೆ. ಅಗ್ನಿಷ್ಟೋಮೇನ ಇಷ್ಟವಾನ್ ‖ ಅಗ್ನಿಷ್ಟೋಮಯಾಗದಿಂದ ಹೋಮಿಸಿದವನು. (ಅಪೂರ್ವ ಗಳಿಸಿದವನು.) ಅಗ್ನಿಷ್ಟೋಮ ಕರಣವಾಗಿದೆ. ಣಿನಿ ಬಂದರೆ ಅಗ್ನಿಷ್ಟೋಮಯಾಜೀ ಎಂದಾಗುತ್ತದೆ.

ದೃಶ್ ಧಾತುವಿಗೆ ಕ್ವನಿಪ್ ಹೇಳುವ ಸೂತ್ರ.

**೮೧೧. ದೃಶೇಃ ಕ್ವನಿಪ್ ‖ ೩-೨-೯೪ ‖**

**ಕರ್ಮಣಿ ಭೂತೇ । ಪಾರಂ ದೃಷ್ಟವಾನ್ ಪಾರದೃಶ್ವಾ ‖**

ದ್ವಿಪದ ಸೂತ್ರ. 'ಭೂತೇ' ಅಧಿಕಾರ. 'ಕರ್ಮಣಿ ಹನಃ' ಸೂತ್ರದಿಂದ 'ಕರ್ಮಣಿ' ಅನುವೃತ್ತಿ. ಕರ್ಮವಾಚಕಪದವು ಉಪಪದವಾಗಿರುವಾಗ ಭೂತಾರ್ಥ ತೋರುವಾಗ ದೃಶ್ ಧಾತುವಿಗೆ ಕ್ವನಿಪ್ ಪ್ರತ್ಯಯ ಬರುತ್ತದೆ. ಕ್ವನಿಪಿನಲ್ಲಿ ವನ್ ಉಳಿಯುತ್ತದೆಂದು ಹಿಂದೆ ಹೇಳಿದೆ. ಪಾರಂ ದೃಷ್ಟವಾನ್ ‖ ಪಾರವೆಂಬ ಕರ್ಮವಾಚಕಪದ ಉಪಪದವಾಗಿದೆ. ದೃಶಿಗೆ ಕ್ವನಿಪ್ ಬಂದರೆ ದೃಶ್+ವನ್ ಎಂದಿರುವಾಗ ವಶಾದಿಯಾದುದರಿಂದ ಇಡಾಗಮ ಇಲ್ಲ. ಕಿತ್ತಾದುದರಿಂದ ಗುಣ ಇಲ್ಲ. ಸೇರಿಸಿದರೆ ಪಾರದೃಶ್ವನ್ ಶಬ್ದವಾಗುತ್ತದೆ. ಸುವಿನಲ್ಲಿ ದೀರ್ಘಾದಿ. ಪಾರದೃಶ್ವಾ.

ಯುಧ್, ಕೃಞಗಳಿಗೆ ಕ್ವನಿಪ್ ಹೇಳುವ ಸೂತ್ರ.

**೮೧೨. ರಾಜನಿ ಯುಧಿ ಕೃಞಃ ‖ ೩-೨-೯೫ ‖**

**ಕ್ವನಿಪ್ ಸ್ಯಾತ್ । ಯುಧಿರನ್ತರ್ಭಾವಿತಣ್ಯರ್ಥಃ । ರಾಜಾನಂ ಯೋಧಿತವಾನ್ ರಾಜಯುಧ್ವಾ । ರಾಜಕೃತ್ವಾ ‖**

ದ್ವಿಪದ ಸೂತ್ರ. ಯುಧಿಶ್ಚ ಕೃಞ್ ಚ ತಯೋಃ ಸಮಾಹಾರಃ ಯುಧಿಕೃಞ್. ತಸ್ಯ. ಸೂತ್ರಾರ್ಥ—ರಾಜನ್ ಶಬ್ದವೇ ಕರ್ಮವಾಗಿ ಉಪಪದವಾಗಿರುವಾಗ ಯುಧ್, ಕೃಞ ಧಾತುಗಳಿಗೆ ಕ್ವನಿಪ್ ಪ್ರತ್ಯಯ ಬರುತ್ತದೆ. ಇಲ್ಲಿಯೂ ಭೂತೇ ಅಧಿಕಾರವಿದೆ. ಇಲ್ಲಿ **ಯುಧ**=ಸಂಪ್ರಹಾರೇ ಧಾತು ಅಂತರ್ಭಾವಿತಣ್ಯರ್ಥಕವಾಗಿದೆ. ಅಂದರೆ ಣಿಚ್ ಪ್ರತ್ಯಯವಿಲ್ಲದಿದ್ದರೂ ಣಿಜರ್ಥವನ್ನು ಕೊಡುತ್ತಿದೆ.

ರಾಜಾನಂ ಯೋಧಿತವಾನ್ ರಾಜಯುಧ್ವಾ || ಯುಧಿಗೆ ಕ್ವನಿಪ್ ಬಂದರೆ ಯುಧ್ವನ್ ಆಗುತ್ತದೆ. ಸುವಿನಲ್ಲಿ ಹಿಂದಿನಂತೆ ದೀರ್ಘಾದಿ. ರಾಜಾನಂ ಕೃತವಾನ್ ರಾಜಕೃತ್ವಾ|| ಕೃ ಧಾತುವಿಗೆ ಕ್ವನಿಪ್ ಬಂದಾಗ ಅದು ಪಿತ್ತಾದುದರಿಂದ 'ಹ್ರಸ್ವಸ್ಯ ಪಿತಿ ಕೃತಿ ತುಕ್' ಸೂತ್ರದಿಂದ ಕೃವಿಗೆ ತುಗಾಗಮ. ಕೃತ್+ವನ್. ರಾಜಕೃತ್ವನ್. ಸುವಿನಲ್ಲಿ ದೀರ್ಘಸುಲೋಪಾದಿ. ರಾಜಕೃತ್ವಾ.

ಸಹ ಪದವಿರುವಾಗ ಕ್ವನಿಪ್ ಹೇಳುವ ಸೂತ್ರ

**೮೧೩. ಸಹೇ ಚ || ೩-೨-೯೬ ||**

**ಕರ್ಮಣೀತಿ ನಿವೃತ್ತಮ್ । ಸಹ ಯೋಧಿತವಾನ್ ಸಹಯುಧ್ವಾ । ಸಹಕೃತ್ವಾ ||**

ದ್ವಿಪದ ಸೂತ್ರ. ಇದುವರೆಗೂ 'ಕರ್ಮಣಿ' ಎಂಬ ಪದವು ಅನುವೃತ್ತವಾಗುತ್ತಿತ್ತು. ಈ ಸೂತ್ರದವರೆಗೆ ಅದಕ್ಕೆ ವ್ಯಾಪ್ತಿ. ಇಲ್ಲಿ ಅನುವೃತ್ತಿಯಿಲ್ಲ. ಸೂತ್ರಾರ್ಥ—ಸಹ ಶಬ್ದ ಉಪಪದವಾಗಿರುವಾಗ ಯುಧ್, ಕೃಞ ಧಾತುಗಳಿಗೆ ಕ್ವನಿಪ್ ಪ್ರತ್ಯಯ ಬರುತ್ತದೆ. ಸಹ ಎಂಬುದು ಅವ್ಯಯ. ಸಹ ಯೋಧಿತವಾನ್ ಸಹ ಯುಧ್ವಾ|| ಸಹ ಕೃತವಾನ್ ಸಹಕೃತ್ವಾ || ಹಿಂದಿನಂತೇ ಕಾರ್ಯವನ್ನು ತಿಳಿಯಬೇಕು.

ಜನ್ ಧಾತುವಿಗೆ ಡ ಪ್ರತ್ಯಯ ಹೇಳುವ ಸೂತ್ರ.

**೮೧೪. ಸಪ್ತಮ್ಯಾಂ ಜನೇರ್ಡಃ || || ೩-೨-೯೭ ||**

ಙಿಗೆ ಅಲುಕ್ ಹೇಳುವ ಸೂತ್ರ.

**೮೧೫. ತತ್ಪುರುಷೇ ಕೃತಿ ಬಹುಲಮ್ ೬-೩-೧೪ ||**

**ಙೇರಲುಕ್ । ಸರಸಿಜಮ್, ಸರೋಜಮ್ ||**

ಸಪ್ತಮ್ಯಾಂ, ಜನೇಃ, ಡಃ || ತ್ರಿಪದ ಸೂತ್ರ. ಸಪ್ತಮ್ಯಂತಪದವು ಉಪಪದವಾಗಿರುವಾಗ ಜನ್ ಧಾತುವಿಗೆ ಡ ಪ್ರತ್ಯಯ ಬರುತ್ತದೆ. ಸರಸಿ ಜಾತಮ್ || ನೀರಿನಲ್ಲಿ ಹುಟ್ಟಿದ್ದು. ಸರಸಿ ಸಪ್ತಮ್ಯನ್ತಪದವಿರುವುದರಿಂದ ಜನೀ – ಪ್ರಾದುರ್ಭಾವೇ ಧಾತುವಿಗೆ ಡ ಪ್ರತ್ಯಯ. 'ಚುಟೂ' ಸೂತ್ರದಿಂದ ಡಕಾರ ಇತ್ತಾಗುತ್ತದೆ. ಸರಸ್+ಙಿ+ಜನ್+ಅ. 'ಸುಪೋ ಧಾತು ಪ್ರಾತಿಪದಿಕಯೋಃ' ಸೂತ್ರದಿಂದ ಸುಪ್‌ಲುಕ್ ಪ್ರಾಪ್ತವಾದರೆ ಸಪ್ತಮಿಗೆ ಅಲುಕ್ ಹೇಳುತ್ತಾನೆ

ತತ್ಪುರುಷೇ, ಕೃತಿ, ಬಹುಲಮ್ || ತ್ರಿಪದ ಸೂತ್ರ. ಕೃತ್ ಪ್ರತ್ಯಯವಾದುದರಿಂದ ತದಂತಗ್ರಹಣ. 'ಅಲುಕ್ ಉತ್ತರಪದೇ' ಅಧಿಕಾರ. ತತ್ಪುರುಷಸಮಾಸದಲ್ಲಿ

ಕದನ್ತ ಉತ್ತರಪದವಾಗಿರುವಾಗ ಸಪ್ತಮಿಗೆ ಬಹಳವಾಗಿ ಅಲುಕ್ ಬರುತ್ತದೆ. ಪ್ರಕೃತ ಜ ಎಂಬುದು ಕೃದನ್ತ ತತ್ಪುರುಷಸಮಾಸ. ಸಪ್ತಮಿಗೆ ಲುಕ್ ಬಾರದಿದ್ದರೆ ಸರಸಿ ಎಂದೇ ಇರುತ್ತದೆ. ಸರಸಿಜಮ್ (ಕಮಲ). ಬಹುಲಗ್ರಹಣವಿರುವುದರಿಂದ ಕೆಲವು ಕಡೆ ಲೋಪಬರುತ್ತದೆ. ಆಗ ಲುಕ್ ಬಂದರೆ ಸರಸ್+ಜಮ್ ಎಂದಿರುವಾಗ ಸಕಾರಕ್ಕೆ ರುತ್ವ ಬಂದಾಗ 'ಹಶಿಚ' ಸೂತ್ರದಿಂದ ಅದಕ್ಕೆ ಉತ್ವ, ಗುಣ. ಸರ+ಉ+ಜ—ಸರೋಜಮ್ ಎಂದಾಗುತ್ತದೆ.

ಸಂಜ್ಞಾ ತೋರುವಾಗ ಡಪ್ರತ್ಯಯ ಹೇಳುವ ಸೂತ್ರ.

**೮೧೬. ಉಪಸರ್ಗೇ ಚ ಸಂಜ್ಞಾಯಾಮ್ ॥ ೩-೨-೯೯ ॥**

**ಪ್ರಜಾ ಸ್ಯಾತ್ಸಂತತೌ ಜನೇ॥**

ದ್ವಿಪದ ಸೂತ್ರ. 'ಜನೇರ್ಡಃ' ಅನುವೃತ್ತಿ. **ಸೂತ್ರಾರ್ಥ**—ಉಪಸರ್ಗ ಉಪಪದವಾಗಿರುವಾಗ, ಸಂಜ್ಞಾ ತೋರುತ್ತಿರುವಾಗ ಜನ್ ಧಾತುವಿಗೆ ಡಪ್ರತ್ಯಯ ಬರುತ್ತದೆ. ಪ್ರಜಾಯನ್ತೇ ಇತಿ ಪ್ರಜಾಃ॥ ಪ್ರ ಉಪಸರ್ಗವಿದೆ. ಸಮುದಾಯದಿಂದ ಸಂಜ್ಞಾ, ತೋರುತ್ತಿದೆ. ಪ್ರ+ಜನ್+ಅ. ಟಿಲೋಪ. ಪ್ರಜಾಃ। ಸಂತತಿ, ಜನ ಎರಡರ್ಥ ತೋರುತ್ತದೆ.

ನಿಷ್ಠಾಸಂಜ್ಞೆ ಹೇಳುವ ಸೂತ್ರ.

**೮೧೭. ಕ್ತಕ್ತವತೂ ನಿಷ್ಠಾ ॥೧-೧-೨೬॥ ಏತೌ ನಿಷ್ಠಾಸಂಜ್ಞೌ ಸ್ತಃ॥**

ದ್ವಿಪದ ಸೂತ್ರ. ಕ್ತಶ್ಚ ಕ್ತವತುಶ್ಚ ಕ್ತಕ್ತವತೂ। **ಸೂತ್ರಾರ್ಥ**—ಕ್ತ, ಕ್ತವತು ಎರಡು ಪ್ರತ್ಯಯಗಳಿಗೂ ನಿಷ್ಠಾ ಎಂಬ ಸಂಜ್ಞೆ ಬರುತ್ತದೆ. ಪ್ರತ್ಯೇಕಾಭಿಪ್ರಾಯದಿಂದ ಸೂತ್ರದಲ್ಲಿ ನಿಷ್ಠಾ ಎಂದು ಏಕವಚನ ಹೇಳಿರುತ್ತಾನೆ. ಇನ್ನು ಮುಂದೆ ನಿಷ್ಠಾ ಬರುತ್ತದೆಯೆಂದರೆ ಕ್ತ ಅಥವಾ ಕ್ತವತು ಬರುತ್ತದೆಂದು ತಿಳಿಯಬೇಕು.

ಕ್ತ, ಕ್ತವತು ಪ್ರತ್ಯಯವಿಧಾಯಕ ಸೂತ್ರ.

**೮೧೮. ನಿಷ್ಠಾ ॥ ೩-೨-೧೦೨ ॥**

**ಭೂತಾರ್ಥವೃತ್ತೇರ್ಧಾತೋರ್ನಿಷ್ಠಾ ಸ್ಯಾತ್। ತತ್ರ ತಯೋರೇವೇತಿ ಭಾವಕರ್ಮಣೋಃ ಕ್ತಃ। ಕರ್ತರಿ ಕೃದಿತಿ ಕರ್ತರಿ ಕ್ತವತುಃ। ಉಕಾವಿತೌ। ಸ್ನಾತಂ ಮಯಾ। ಸ್ತುತಸ್ತ್ವಯಾ ವಿಷ್ಣುಃ। ವಿಶ್ವಂ ಕೃತವಾನ್ ವಿಷ್ಣುಃ॥**

ಏಕಪದ ಸೂತ್ರ. 'ಭೂತೇ' ಅಧಿಕಾರ. 'ಧಾತೋಃ' ಹಿಂದಿನಿಂದ ಬಂದಿದೆ. **ಸೂತ್ರಾರ್ಥ**—ಭೂತಕಾಲಾರ್ಥ ಕೊಡುವ ಧಾತುವಿಗೆ ನಿಷ್ಠಾಪ್ರತ್ಯಯ

ಬರುತ್ತದೆ. ನಿಷ್ಠಾ ಅಂದರೆ ಎರಡು ಪ್ರತ್ಯಯ. ಅವುಗಳಲ್ಲಿ ' ತಯೋರೇವ—' ( ಸೂ. ೭೭೫ ) ಸೂತ್ರದಿಂದ ಕ್ತಪ್ರತ್ಯಯ ಭಾವ, ಕರ್ಮಾರ್ಥದಲ್ಲಿ ಮಾತ್ರ ಬರುತ್ತದೆ. ಅಕರ್ಮಕ ಧಾತುವಿನ ಮೇಲೆ ಕ್ತ ಪ್ರತ್ಯಯವು ಭಾವಾರ್ಥದಲ್ಲಿಯೂ, ಸಕರ್ಮಕ ಧಾತುವಿನಮೇಲೆ ಕರ್ಮಾರ್ಥದಲ್ಲಿಯೂ ಬರುತ್ತದೆಂದು ತಿಳಿಯಬೇಕು. ಕ್ತವತು ಕೃತ್ ಸಾಮಾನ್ಯವಾದುದರಿಂದ ' ಕರ್ತರಿ ಕೃತ್ ' ಸೂತ್ರದಿಂದ ಕರ್ತ್ರರ್ಥದಲ್ಲಿ ಬರುತ್ತದೆ. ಎರಡು ಪ್ರತ್ಯಯಗಳಲ್ಲಿಯೂ ' ಲಶಕ್ವತದ್ಧಿತೇ ' ಸೂತ್ರದಿಂದ ಕಕಾರ ಇತ್ತಾಗುತ್ತದೆ. ಕ್ತವತುವಿನಲ್ಲಿ ಉಕಾರ ಇತ್. ' ಸ್ನಾತಂಮಯಾ. ' ಭಾವಾರ್ಥದಲ್ಲಿ ಸ್ನಾ (ಷ್ಣಾ=ಶೌಚೇ) ಧಾತುವಿಗೆ ಕ್ತ ಪ್ರತ್ಯಯ ಬಂದಿದೆ. ಅನಿಟ್‌ಧಾತುವಾದುದರಿಂದ ಇಡಾಗಮ ಬರಲಿಲ್ಲ. ನನ್ನಿಂದ ಸ್ನಾನಮಾಡೋಣಾಯಿತು. ಸ್ತುತಃ ತ್ವಯಾ ವಿಷ್ಣುಃ ‖ ಕರ್ಮಾರ್ಥದಲ್ಲಿ ಷ್ಟುಞ್=ಸ್ತುತೌ ಧಾತುವಿಗೆ ಭೂತಾರ್ಥ ತೋರುವಾಗ ಕ್ತಪ್ರತ್ಯಯ ಬಂದಿದೆ. ಕಿತ್ತಾದುದರಿಂದ ಗುಣವಿಲ್ಲ. ಕರ್ಮ ಅಭಿಹಿತವಾದುದರಿಂದ ವಿಷ್ಣುವಿಗೆ ಪ್ರಥಮಾವಿಭಕ್ತಿಯೂ, ಕರ್ತೃ ಅಭಿಹಿತವಾಗದಿರುವುದರಿಂದ ಯುಷ್ಮದಿಗೆ ತೃತೀಯಾವಿಭಕ್ತಿಯೂ ಬಂದಿದೆ. ನಿನ್ನಿಂದ ವಿಷ್ಣುವು ಸ್ತುತಿಸಲ್ಪಟ್ಟಿರುತ್ತಾನೆ. ವಿಶ್ವಂ ಕೃತವಾನ್ ವಿಷ್ಣುಃ ‖ ವಿಷ್ಣುವು ಲೋಕವನ್ನು ಮಾಡಿರುತ್ತಾನೆ. ಕೃಞ್ ಧಾತುವಿಗೆ ಕರ್ತರಿಯಲ್ಲಿ ಕ್ತವತು ಪ್ರತ್ಯಯ ಬಂದಿದೆ. ಕ್ತವತುವಿನಲ್ಲಿ ಅವತ್ ಉಳಿಯುತ್ತದೆ, ಕೃತವತ್ ಶಬ್ದ. ಸುಪರವಾದಾಗ ಉಕ್ ( ಉ ) ಇತ್ತಾದುದರಿಂದ ನುಮಾಗಮ. ' ಅತ್ವಸಂತಸ್ಯ ಚಾಧಾತೋಃ ' ಸೂತ್ರದಿಂದ ಅತಿನ ಅಕಾರಕ್ಕೆ ದೀರ್ಘ. ಕೃತವಾನ್+ಸ್. ಹಲ್‌ಙ್ಯಾದಿನಾ ಸುಲೋಪ. ಸಂಯೋಗಾಂತಲೋಪ. ಅದು ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ. ಕೃತವಾನ್.

ನಿಷ್ಠಾಂತಕಾರಕ್ಕೆ ನಕಾರ ಹೇಳುವ ಸೂತ್ರ.

**೮೧೯. ರದಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ ‖ ೮-೨-೪೨ ‖**

**ರದಾಭ್ಯಾಂ ಪರಸ್ಯ ನಿಷ್ಠಾತಸ್ಯ ನಃ ಸ್ಯಾತ್, ನಿಷ್ಠಾಪೇಕ್ಷಯಾ ಪೂರ್ವಸ್ಯ ಧಾತೋರ್ದಸ್ಯ ಚ । ಶೄ=ಹಿಂಸಾಯಾಮ್ । ಋಋತ ಇತ್ । ರಪರಃ । ಣತ್ವಮ್ । ಶೀರ್ಣಃ । ಭಿನ್ನಃ । ಛಿನ್ನಃ ‖**

ರದಾಭ್ಯಾಂ, ನಿಷ್ಠಾತಃ, ನಃ, ಪೂರ್ವಸ್ಯ, ಚ, ದಃ ‖ ಆರು ಪದಗಳುಳ್ಳ ಸೂತ್ರ. ನಿಷ್ಠಾಯಾಃ ತ್, ನಿಷ್ಠಾತ್, ತಸ್ಯ, ನಿಷ್ಠಾತಃ ‖ ಕ್ತ, ಕ್ತವತುವಿನ ಅಕಾರಕ್ಕೆ ಎಂದರ್ಥ. **ಸೂತ್ರಾರ್ಥ**—ರೇಫದಕಾರಗಳ ಪರದಲ್ಲಿರುವ ನಿಷ್ಠಾಸಂಬಂಧಿತಕಾರಕ್ಕೆ ನಕಾರಾದೇಶವೂ,, ನಿಷ್ಠಾಪ್ರತ್ಯಯದ ಪೂರ್ವದಲ್ಲಿರುವ ಧಾತುವಿನ ದಕಾರಕ್ಕೆ ನಕಾರವೂ ಬರುತ್ತವೆ. ರೇಫದ ಪರದಲ್ಲಿರುವ ನಿಷ್ಠಾತಕಾರಕ್ಕೆ ನತ್ವ ಬಂದುದಕ್ಕೆ

ಉದಾಹರಣೆ. ಶೄ ಧಾತು. ಹಿಂಸಾರ್ಥ. ಇದಕ್ಕೆ ಕ್ತ ಬಂದಾಗ ಶೄ + ತ ಎಂದಿರುವಾಗ ' ಋೂತ ಇದ್ಧಾತೋಃ ' ಸೂತ್ರದಿಂದ ಋೂಕಾರಕ್ಕೆ ಇತ್ವ. ರಪರವಾಗಿ ಬಂದರೆ ಶಿರ್ + ತ, ಎಂದಿರುವಾಗ ' ಹಲಿ ಚ ' ಸೂತ್ರದಿಂದ ಉಪಧಾದೀರ್ಘ. ಈಗ ರೇಫದ ಪರದಲ್ಲಿ ನಿಷ್ಠಾತಕಾರ ಬಂದುದರಿಂದ ಅದಕ್ಕೆ ನಕಾರಾದೇಶ ಬಂದರೆ ಶೀರ್ + ನ ಎಂದಿರುವಾಗ 'ರಷಾಭ್ಯಾಂ ಣೋನಃ ಸಮಾನಪದೇ ' ಸೂತ್ರದಿಂದ ನಕಾರಕ್ಕೆ ಣತ್ವ. ಶೀರ್ಣಃ ಎಂದಾಗುತ್ತದೆ. ಭಿನ್ನಃ ಭಿದಿರ್ = ವಿದಾರಣೇ. ಧಾತು. ಭಿದ್ + ತ ಎಂದಿರುವಾಗ ದಕಾರದ ಪರದಲ್ಲಿ ನಿಷ್ಠಾತಕಾರ ಬಂದುದರಿಂದ ಅದಕ್ಕೆ ನತ್ವ. ಅದರ ಹಿಂದೆ ದಕಾರವಿರುವುದರಿಂದ ಅದಕ್ಕೂ ನತ್ವ ಬಂದರೆ ಭಿನ್ + ನ = ಭಿನ್ನಃ ಎಂದಾಗುತ್ತದೆ. ಹಾಗೆಯೇ, ಛಿದಿರ್ = ದ್ವೈಧೀಕರಣೇ ಧಾತುವಿಗೆ ಕ್ತ ಬಂದರೆ ಹಿಂದಿನಂತೆ ಕಾರ್ಯ ಬಂದು ಛಿನ್ನಃ ಎಂದಾಗುತ್ತದೆ.

ಆದಂತಧಾತುವಿನ ಕ್ತ ಪ್ರತ್ಯಯಕ್ಕೆ ಣತ್ವ ಹೇಳುವ ಸೂತ್ರ.

೮೨೦. ಸಂಯೋಗಾದೇರಾತೋ ಧಾತೋರ್ಯಣ್ವತಃ ॥ ೮-೨-೪೩ ॥

ನಿಷ್ಠಾತಸ್ಯ ನಃ ಸ್ಯಾತ್ । ದ್ರಾಣಃ । ಗ್ಲಾನಃ ॥

ಸಂಯೋಗಾದೇಃ, ಆತಃ, ಧಾತೋಃ ಯಣ್ವತಃ ॥ ನಾಲ್ಕು ಪದಗಳುಳ್ಳ ಸೂತ್ರ. ಸೂತ್ರಾರ್ಥ—ಸಂಯೋಗಾದಿಯಾಗಿಯೂ, ಯಣ್ ಇರುವ ಆಕಾರಾಂತವಾದ ಧಾತುವಿನ ಪರದಲ್ಲಿರುವ ನಿಷ್ಠಾತ ಕಾರಕ್ಕೆ ನತ್ವ ಬರುತ್ತದೆ. ದ್ರಾಣಃ । ದ್ರಾ = ಕುತ್ಸಾಯಾಮ್. ಧಾತು. ಇದಕ್ಕೆ ಭೂತಾರ್ಥದಲ್ಲಿ ಕ್ತ ಪ್ರತ್ಯಯ. ದ್ರಾ + ತ ಎಂದಿರುವಾಗ ತಕಾರಕ್ಕೆ ನತ್ವ. ಆದನ್ತ ಧಾತುವಾಗಿ ಸಂಯೋಗಾದಿಯಾಗಿದೆ. ರೇಫರೂಪ ಯಣ್ ಇದೆ. ದ್ರಾ + ನ ಎಂದಿರುವಾಗ ' ಅಟ್‌ಕುಪ್ವಾಙ್—' ಸೂತ್ರದಿಂದ ನಕಾರಕ್ಕೆ ಣತ್ವ. ದ್ರಾಣಃ ॥ ಗ್ಲೈ = ಹರ್ಷಕ್ಷಯೇ. ಧಾತು. ಕ್ತ ಬಂದಾಗ ' ಆದೇಚ ಉಪದೇಶೇಽಶಿತಿ ' ಸೂತ್ರದಿಂದ ಧಾತುವಿಗೆ ಆತ್ವ. ಗ್ಲಾ + ತ ಎಂದಿರುವಾಗ ಸಂಯೋಗಾದಿಯಾಗಿ ಲಕಾರರೂಪ ಯಣ್ ಸಹಿತವಾಗಿ ಆದನ್ತವಾದುದರಿಂದ ತಕಾರಕ್ಕೆ ನಕಾರಾದೇಶ ಬಂದರೆ ಗ್ಲಾನಃ ಎಂದಾಗುತ್ತದೆ.

ಲೂಇತ್ಯಾದಿ ಧಾತುಗಳ ಕ್ತಕ್ಕೆ ನಕಾರಾದೇಶ ಹೇಳುವ ಸೂತ್ರ.

೮೨೧. ಲ್ವಾದಿಭ್ಯಃ ॥ ೮-೨-೪೪ ॥

ಏಕವಿಂಶತೇರ್ಲೂಞಾದಿಭ್ಯಃ ಪ್ರಾಗ್ವತ್ ॥ ಲೂನಃ । ಜ್ಯಾ ಧಾತುಃ । ಗ್ರಹಿಜ್ಯೇತಿ ಸಂಪ್ರಸಾರಣಮ್ ॥

ಏಕಪದ ಸೂತ್ರ. ' ರಾದಾಭ್ಯಾಂ—' ಸೂತ್ರದಿಂದ 'ನಿಷ್ಠಾತೋನಃ' ಅನುವೃತ್ತಿ । ಲೂ ಆದಿಃ ಯೇಷಾಂ ತೇ ಲ್ವಾದಯಃ । ತೇಭ್ಯಃ ಲ್ವಾದಿಭ್ಯಃ ॥ ಲೂಇತ್ಯಾದಿ ಧಾತುಗಳ

ಪರದಲ್ಲಿರುವ ಕ್ತಪ್ರತ್ಯಯದ ತಕಾರಕ್ಕೆ ನಕಾರಾದೇಶ/ ಬರುತ್ತದೆ. ಲೂಞಾದಿ ಇಪ್ಪತ್ತೊಂದು ಧಾತುಗಳನ್ನು ಧಾತುಪಾಠಕ್ರಮದಿಂದ ತಿಳಿಯಬೇಕು. ಲೂಞ್= ಛೇದನೇ. ಧಾತು. ಲೂ+ತ ಎಂದಿರುವಾಗ ನತ್ವ ಬಂದರೆ ಲೂನಃ ಎಂದಾಗುತ್ತದೆ. ಕತ್ತರಿಸಲ್ಪಟ್ಟದ್ದು ಎಂದರ್ಥ. ಜ್ಯಾ=ವಯೋಹಾನೌ. ಧಾತು. ಇದೂ ಲೂಞಾದಿಯಲ್ಲಿ ಸೇರಿದೆ. ಇದಕ್ಕೆ ಕ್ತ ಬಂದಾಗ ಜ್ಯಾ+ತ ಎಂದಿರುವಾಗ ಕಿತ್ತಾದ ಪ್ರತ್ಯಯ ಪರವಾದುದರಿಂದ 'ಗ್ರಹಿಜ್ಯಾವಯಿ—'ಸೂತ್ರದಿಂದ ಸಂಪ್ರಸಾರಣ. (ಯಕಾರಕ್ಕೆ ಇಕಾರ) ಬಂದರೆ ಜಿ+ಆ+ತ ಎಂದು ರೂಪವಾದಾಗ ಪೂರ್ವರೂಪ ಬಂದರೆ ಜಿ+ತ ಎಂದಾಗುತ್ತದೆ. ನತ್ವ. ಜಿ+ನ. ಈಗ ಇಕಾರಕ್ಕೆ ದೀರ್ಘ ಹೇಳುತ್ತಾನೆ.

ಸಂಪ್ರಸಾರಣಕ್ಕೆ ದೀರ್ಘ ಹೇಳುವ ಸೂತ್ರ.

೮೨೨. ಹಲಃ || ೬-೪-೨ ||

ಅಂಗಾವಯವಾದ್ಧಲಃ ಪರಂ ಯತ್ಸಂಪ್ರಸಾರಣಂ ತದನ್ತಸ್ಯ ದೀರ್ಘಃ ಜೀನಃ ||

ಹಲಃ ಪಂಚಮೀ. ಹಲಿನ ಪರದಲ್ಲಿರುವ ಎಂದರ್ಥ. 'ಅಂಗಸ್ಯ' ಅಧಿಕಾರ. ಇದು ದ್ವಿರಾವೃತ್ತವಾಗಿ ಒಂದು ಅವಯವಷಷ್ಠ್ಯಂತವಾಗ ಹಲಿನಲ್ಲಿಯೂ, ಇನ್ನೊಂದು ಸ್ಥಾನಷಷ್ಠ್ಯಂತವಾಗಿ ಸಂಪ್ರಸಾರಣದಲ್ಲಿಯೂ ಅನ್ವಯಹೊಂದುತ್ತದೆ. 'ಸಂಪ್ರಸಾರಣಸ್ಯ' ಅನುವೃತ್ತಿ. 'ಢ್ರಲೋಪೇ "—ಸೂತ್ರದಿಂದ 'ದೀರ್ಘಃ' ಅನುವೃತ್ತಿ ಸೂತ್ರಾರ್ಥ—ಅಂಗದ ಅವಯವವಾದ ಹಲಿನ ಪರದಲ್ಲಿರುವ ಸಂಪ್ರಸಾರಣ ಯಾವುದಿದೆಯೋ ಅದೇ ಅಂತವಾದ ಅಂಗಕ್ಕೆ (ಅಲೋಂತ್ಯಸ್ಯ ಪರಿಭಾಷೆಯಿಂದ ಅದಕ್ಕೇ) ದೀರ್ಘ ಬರುತ್ತದೆ. ಪ್ರಕೃತ ಅಂಗ ಜಿ. ಅದರ ಅವಯವವಾದ ಹಲ್ ಜಕಾರ. ಅದರ ಪರದಲ್ಲಿರುವ ಸಂಪ್ರಸಾರಾಣ ಇಕಾರ. ಅದಕ್ಕೆ ದೀರ್ಘ ಬಂದರೆ ಜೀನಃ (ಗಳಿತವಾದದ್ದು) ಎಂದಾಗುತ್ತದೆ. ವಯೋಹಾನಿಗೊಳಿಸಲ್ಪಟ್ಟದ್ದು.

ಓದಿತ್ತಾದ ಧಾತುವಿನ ಕ್ತಕ್ಕೆ ನತ್ವ ಹೇಳುವ ಸೂತ್ರ.

೮೨೩. ಓದಿತಶ್ಚ || ೮-೨-೪೫ ||

ಭುಜೋ ಭುಗ್ನಃ | ಟುಓಶ್ವಿ, ಉಚ್ಛೂನಃ ||

ಓದಿತಃ, ಚ|| ದ್ವಿಪದ ಸೂತ್ರ. ಸೂತ್ರಾರ್ಥ—ಓಕಾರ ಇತ್ತಾದ ಧಾತುವಿನ ಪರದಲ್ಲಿರುವ ಕ ಪ್ರತ್ಯಯದ ತಕಾರಕ್ಕೆ ನಕಾರದೇಶ ಬರುತ್ತದೆ. ಭುಜೋ= ಕೌಟಿಲ್ಯೇ' ಧಾತು. ಓಕಾರ ಇತ್. ಭುಜ್+ತ ಎಂದಿರುವಾಗ 'ಚೋಃ ಕುಃ, ಸೂತ್ರದಿಂದ ಜಕಾರಕ್ಕೆ ಕುತ್ವ. ಭುಗ್×ತ. ಓದಿತ್ತಾದುದರಿಂದ ತಕ್ಕೆ ನತ್ವ. ಭುಗ್+ನ=ಭುಗ್ನಃ=ಡೊಂಕಾಗಿ ಮಾಡಲ್ಪಟ್ಟದ್ದು. ಟುಓಶ್ವಿ=ಗತಿವೃದ್ಧ್ಯೋಃ|

ಧಾತು. ಟು, ಓಕಾರ ಇತ್. ಶ್ವಿ + ತ ಎಂದಿರುವಾಗ ' ಗ್ರಹಿಜ್ಯಾವಯಿ ... ' ಸೂತ್ರದಿಂದ ಸಂಪ್ರಸಾರಣ. ( ವಕಾರಕ್ಕೆ ಉಕಾರ ) ಉತ್ ಉಪಸರ್ಗ ಸೇರಿಸಿ ಉದಾಹರಣೆ ತೋರಿಸುತ್ತಾನೆ. ' ಸಂಪ್ರಸಾರಣಾಚ್ಚ ' ಪೂರ್ವರೂಪ. ಉತ್ + ಶು + ತ. ' ಹಲಃ , ಸೂತ್ರದಿಂದ ದೀರ್ಘ. ಉತ್‌ಶೂ + ತ. ಓದಿತ್ತಾದುದರಿಂದ ತಕ್ಕೆ ನತ್ವ. ಉತ್‌ಶೂನ ಎಂದಿರುವಾಗ ' ಶಶ್ಛೋಟಿ , ( ಸೂ. ೭೬ ) ಸೂತ್ರದಿಂದ ಶಕಾರಕ್ಕೆ ಛಕಾರಾದೇಶ. ಉತ್ + ಛೂನ ' ಸ್ತೋಃ ಶ್ಚುನಾಶ್ಚುಃ ' ಉಚ್ + ಛೂನಃ = ಉಚ್ಛೂನಃ ಎಂದಾಗುತ್ತದೆ. ದಪ್ಪವಾದದ್ದು ಎಂದರ್ಥ. (ವೃದ್ಧಿಹೊಂದಿ) ಸಲ್ಪಟ್ಟದ್ದು.)

ತಕಾರಕ್ಕೆ ಕಕಾರಾದೇಶ ಹೇಳುವ ಸೂತ್ರ.

೮೨೪. **ಶುಷಃ ಕಃ || ೮-೨-೫೧ || ನಿಷ್ಠಾತಸ್ಯ ಕಃ | ಶುಷ್ಕಃ ||**

ದ್ವಿಪದ ಸೂತ್ರ. ಸೂತ್ರಾರ್ಥ—ಶುಷ್ ಧಾತುವಿನ ಪರದಲ್ಲಿರುವ ನಿಷ್ಠಾ ತಕಾರಕ್ಕೆ ಕಕಾರದೇಶ ಬರುತ್ತದೆ. ಶುಷ್ + ತ ಎಂದಿರುವಾಗ ತಕ್ಕೆ ಕ ಬಂದರೆ ಶುಷ್ಕಃ ಎಂದಾಗುತ್ತದೆ. ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣವಿಲ್ಲ.

ಪಚ್ ಧಾತುವಿನ ತಕಾರಕ್ಕೆ ವತ್ವ ಹೇಳುವ ಸೂತ್ರ.

೮೨೫. **ಪಚೋ ವಃ || ೮-೨-೫೨ || ಪಕ್ವಃ || ಕ್ಷೈ = ಕ್ಷಯೇ ||**

ದ್ವಿಪದ ಸೂತ್ರ. ಪಚ್ ಧಾತುವಿನ ಪರದಲ್ಲಿರುವ ನಿಷ್ಠಾತಕಾರಕ್ಕೆ ವಕಾರಾದೇಶ ಬರುತ್ತದೆ. ಪಚ್ + ತ ಎಂದಿರುವಾಗ ' ಚೋಃ ಕುಃ ' ಸೂತ್ರದಿಂದ ಚಕಾರಕ್ಕೆ ಕುತ್ವ. ಪಕ್ + ತ ಎಂದಿರುವಾಗ ತಕಾರಕ್ಕೆ ವತ್ವ. ಪಕ್ವಃ ಎಂದಾಗುತ್ತದೆ.

ಕ್ಷೈ ಧಾತು. ನಾಶಾರ್ಥ. ಇದಕ್ಕೆ ಕ್ತ ಬಂದಾಗ ' ಆದೇಚ ಉಪದೇಶೇಽಶಿತಿ ' ಸೂತ್ರದಿಂದ ಧಾತುವಿಗೆ ಆತ್ವ. ಕ್ಷಾ + ತ ಎಂದಿರುವಾಗ ತಕ್ಕೆ ಮಕಾರಾದೇಶ ಹೇಳುತ್ತಾನೆ.

ಕ್ಷೈ ಧಾತುವಿನ ನಿಷ್ಠಾತಕಾರಕ್ಕೆ ಮತ್ವ ಹೇಳುವ ಸೂತ್ರ.

೮೨೬. **ಕ್ಷಾಯೋ ಮಃ || ೮-೧-೫೩ || ಕ್ಷಾಮಃ ||**

ದ್ವಿಪದ ಸೂತ್ರ. ಕ್ಷೈ ಧಾತುವಿನ ಪರದಲ್ಲಿರುವ ನಿಷ್ಠಾತಕಾರಕ್ಕೆ ಮಕಾರಾದೇಶ ಬರುತ್ತದೆ. ಕ್ಷಾ + ತ ಎಂದಿರುವಾಗ ಮತ್ವ ಬಂದರೆ ಕ್ಷಾಮಃ ಎಂದಾಗುತ್ತದೆ.

ನಿಷ್ಠಾದಲ್ಲಿ ಣಿಲೋಪ ಹೇಳುವ ಸೂತ್ರ.

೮೨೭. **ನಿಷ್ಠಾಯಾಂ ಸೇಟಿ || ೬-೪-೫೨ ||**

**ಣೇರ್ಲೋಪಃ | ಭಾವಿತಃ | ಭಾವಿತವಾನ್ | ದೃಹ = ಹಿಂಸಾಯಾಮ್ ||**

ದ್ವಿಪದ ಸೂತ್ರ. 'ಣೇರನಿಟಿ' ಸೂತ್ರದಿಂದ 'ಣೇಃ;' 'ಅತೋಲೋಪಃ—ಸೂತ್ರದಿಂದ 'ಲೋಪಃ' ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ—ಇಟ್ ಸಹಿತನಾದ ನಿಷ್ಠಾಪ್ರತ್ಯಯ ಪರದಲ್ಲಿರುವಾಗ ಣಿಗೆ ಲೋಪ ಬರುತ್ತದೆ. 'ಣೇರನಿಟಿ' ಸೂತ್ರದಲ್ಲಿ 'ಅನಿಟಿ' ಎಂದು ನಿಷೇಧ ಮಾಡಿರುವುದರಿಂದ ಇಲ್ಲಿ ಪುನಃ ಣಿಲೋಪ ಹೇಳಿದೆ. ಭೂಧಾತುವಿಗೆ ಣಿಚ್ ಬಂದು ಭಾವಿ ಎಂದಾದಾಗ ಅದರಮೇಲೆ ಕ್ತಪ್ರತ್ಯಯ. ಭಾವಿ+ತ ಎಂದಿರುವಾಗ ಕ್ತಕ್ಕೆ ಇಡಾಗಮ. ಭಾವಿ+ಇತ ಎಂದಿರುವಾಗ ಇಡಾದಿನಿಷ್ಠಾ ಇರುವುದರಿಂದ ಣಿಲೋಪ. ಭಾವ್+ಇತ=ಭಾವಿತಃ ಎಂದಾಗುತ್ತದೆ. ಚೈತ್ರನು ಮೈತ್ರನನ್ನು ಆಗುವಂತೆ ಮಾಡಿದನು (ಚೈತ್ರಃಮೈತ್ರಮ್ ಅಬೀಭವತ್). ಚೈತ್ರನಿಂದ ಮೈತ್ರನು ಆಗುವಂತೆ ಮಾಡಲ್ಪಟ್ಟನು. (ಚೈತ್ರೇಣ ಮೈತ್ರೋಽಭಾವಿ, ಅಥವಾ ಭಾವಿತಃ). ಹಾಗೇ ಭಾವಿ ಣಿಜನ್ತದ ಮೇಲೆ ಕ್ತವತು ಬಂದಾಗ ಣಿಚ್ ಲೋಪ ಬಂದರೆ ಭಾವಿತವಾನ್ ಎಂದಾಗುತ್ತದೆ. ಭಾವಿತವತ್ ಶಬ್ದ. ಪ್ರಥಮಾ ಸುಪರವಾದಾಗ ದೀರ್ಘಾದಿಗಳು ಬಂದಿವೆ.

ದೃಹ ಧಾತು. ಹಿಂಸಾರ್ಥ ಇದಕ್ಕೆ ಕ್ತ ಪ್ರತ್ಯಯ ಬಂದಾಗ ದೃಢಃ ಎಂದು ರೂಪವನ್ನು ನಿಪಾತಮಾಡುತ್ತಾನೆ.

ಢತ್ವ ನಿಪಾತಮಾಡುವ ಸೂತ್ರ.

**೮೨೮. ದೃಢಃ ಸ್ಥೂಲಬಲಯೋಃ || ೭-೨-೨೦ ||**

**ಸ್ಥೂಲೇ ಬಲವತಿ ಚ ನಿಪಾತ್ಯತೇ ||**

ದ್ವಿಪದ ಸೂತ್ರ. ಸ್ಥೂಲ ಮತ್ತು ಬಲವುಳ್ಳವ ಎಂಬರ್ಥದಲ್ಲಿ ದೃಢಃ ಎಂಬ ರೂಪವು ನಿಪಾತಿತವಾಗಿದೆ. ದೃಹ್+ತ ಎಂದಿರುವಾಗ ಹಕಾರಕ್ಕೆ ಲೋಪವೂ ತಕಾರಕ್ಕೆ ಢಕಾರವೂ ನಿಪಾತದಿಂದ ಬಂದಿದೆಯೆಂದು ತಿಳಿಯಬೇಕು. ಸೂತ್ರವನ್ನು ಅನುಸರಿಸಿ ಕಾರ್ಯ ಹೇಳುವುದಾದರೆ ಇಡಾಗಮ ಬಂದು ದೃಹಿತ ಇತ್ಯಾದಿ ರೂಪವಾಗಬೇಕಾಗುತ್ತದೆ. ನಿಪಾತದಿಂದ ಇಡಾಗಮನಿಷೇಧವೂ ಬಂದಿದೆಯೆಂದು ತಿಳಿಯಬೇಕು. ದೃಹಿ ಎಂಬ ಇದಿತ್ತಾದ ಧಾತುವಿಗೂ ಕ್ತ ಬಂದಾಗ ನಲೋಪವು ನಿಪಾತಿತವಾಗಿದೆ. ಸ್ಥೂಲ, ಬಲವನ್ತ ಎಂಬ ಅರ್ಥ ತೋರದಿರುವಾಗ ಕ್ತಕ್ಕೆ ಇಡಾಗಮ ಬಂದು ದೃಹಿತಃ ಎಂದಾಗುತ್ತದೆ.

ಧಾ ಧಾತುವಿಗೆ ಹಿ ಆದೇಶ ಹೇಳುವ ಸೂತ್ರ.

**೮೨೯. ದಧಾತೇರ್ಹಿಃ || ೭-೪-೪೨ || ತಾದೌ ಕಿತಿ | ಹಿತಮ್ ||**

ದಧಾತೇಃ, ಹಿಃ || ದ್ವಿಪದ ಸೂತ್ರ. 'ದ್ಯತಿಸ್ಯತಿಮಾ—'ಸೂತ್ರದಿಂದ 'ತಿ, ಕಿತಿ' ಪದಗಳು ಅನುವೃತ್ತವಾಗುತ್ತವೆ. ತಿ ಸಪ್ತಮ್ಯನ್ತವು ಕಿತಿಗೆ ವಿಶೇಷಣವಾದುದ

ರಿಂದ ತದಾದಿಲಾಭ. ಧಾ ಧಾತುವಿಗೆ ಶ್ತಿಪ್ ಬಂದರೆ ದಧಾತಿಃ ಎಂದಾಗುತ್ತದೆ. ಧಾಞ್ ಧಾತುವಿಗೆ ತಕಾರಾದಿಯಾದ ಕಿತ್ತಾದ ಪ್ರತ್ಯಯಪರವಾದಾಗ ಹಿ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. ಧಾ+ತ ಎಂದಿರುವಾಗ ಹಿ ಆದೇಶ ಬಂದರೆ ಹಿತ ಎಂದಾಗುತ್ತದೆ. ಇಡಲ್ಪಟ್ಟದ್ದು ಎಂದರ್ಥ.

ದಾ ಧಾತುವಿಗೆ ದಥಾದೇಶ ಹೇಳುವ ಸೂತ್ರ.

೮೩೦. ದೋ ದದ್ ಘೋಃ || ೭-೪-೪೬ ||

ಘುಸಂಜ್ಞಕಸ್ಯ ದಾ ಇತ್ಯಸ್ಯ ದಥ್ ಸ್ಯಾತ್ ತಾದೌ ಕಿತಿ | ಚರ್ತ್ವಮ್ | ದತ್ತಃ ||

ದಃ, ದದ್, ಘೋಃ || ತ್ರಿಪದ ಸೂತ್ರ. ಹಿಂದಿನಂತೆ 'ತಿ ; 'ಕಿತಿ' ಅನುವೃತ್ತಿ. ದಃ | ದಾ ಧಾತುವಿನ ಷಷ್ಠ್ಯನ್ತರೂಪ. ಘುಸಂಜ್ಞೆಯುಳ್ಳ ದಾ ಧಾತುವಿಗೆ ತಕಾರಾದಿಯಾದ ಕಿತ್ತಾದ ಪ್ರತ್ಯಯ ಪರದಲ್ಲಿರುವಾಗ ದಥ್ ಆದೇಶ ಬರುತ್ತದೆ. ಭಾಷ್ಯದಲ್ಲಿ ಥಾನ್ತವಾದ ಆದೇಶವೇ ಹೇಳಿದೆ. ಕೆಲವರು ದಾನ್ತವಾಗಿ ಹೇಳುತ್ತಾರೆ. ದಾ+ತ ಎಂದಿರುವಾಗ ದಥ್ ಆದೇಶ ಬಂದರೆ ದಥ್+ತ ಎಂದಿರುವಾಗ 'ಖರಿಚ' ಸೂತ್ರದಿಂದ ಥಕಾರಕ್ಕೆ ತಕಾರಾದೇಶ. ದತ್ತಃ ಎಂದಾಗುತ್ತದೆ.

ಕಾನಚ್, ಕ್ವಸು ಪ್ರತ್ಯಯ ಹೇಳುವ ಸೂತ್ರಗಳು.

೮೩೧. ಲಿಟಃ ಕಾನಜ್ವಾ || ೩-೨-೧೦೬ ||

೮೩೨. ಕ್ವಸುಶ್ಚ || ೩-೨-೧೦೭ ||

ಲಿಟಃ ಕಾನಚ್ ಕ್ವಸುಶ್ಚ ವಾಸ್ತಃ | ತಙಾನಾವಾತ್ಮನೇಪದಮ್ | ಚಕ್ರಾಣಃ ||

ಕ್ರಮವಾಗಿ ಮೂರು, ಎರಡು ಪದಗಳುಳ್ಳ ಸೂತ್ರಗಳು. ಲಾಘವದಿಂದ ಎರಡು ಸೂತ್ರಗಳಿಗೂ ಒಟ್ಟಿಗೆ ಅರ್ಥ ಬರೆದಿರುತ್ತಾನೆ. ಸೂತ್ರಾರ್ಥ—ಲಿಟಿಗೆ ಕಾನಚ್, ಕ್ವಸು ಪ್ರತ್ಯಯಗಳು ವಿಕಲ್ಪವಾಗಿ ಬರುತ್ತವೆ. ಕಾನಚಿನಲ್ಲಿ ಆನ ಉಳಿಯುತ್ತದೆ. ಕೃಞ್ ಧಾತುವಿಗೆ ಲಿಟ್ ಬಂದಾಗ ಅದಕ್ಕೆ ವಿಕಲ್ಪವಾಗಿ ಕಾನಚ್ ಬಂದರೆ ಕೃ+ಆನ ಎಂದಿರುವಾಗ 'ಲಿಟಿ ಧಾತೋರನಭ್ಯಾಸಸ್ಯ' ಸೂತ್ರದಿಂದ ದ್ವಿತ್ವ. 'ಉರತ್', 'ಅಭ್ಯಾಸೇ ಚರ್ಚ' ಇತ್ಯಾದಿ. ಚಕೃ+ಆನ. ಯಣ್. ಚಕ್ರಾನ. 'ಅಟ್ ಕುಪ್ವಾಙ್—' ಣತ್ವ. ಚಕ್ರಾಣಃ ಎಂದಾಗುತ್ತದೆ. 'ತಙಾನಾವಾತ್ಮನೇಪದಮ್' ಸೂತ್ರದಿಂದ ಕಾನಚಿಗೆ ಆತ್ಮನೇಪದಸಂಜ್ಞಾ ಬರುವುದರಿಂದ ಆತ್ಮನೇಪದಿ ಧಾತುವಿಗೇ ಕಾನಚ್ ಹೇಳಬೇಕು. 'ಛಂದಸಿ ಲಿಟ್' ಸೂತ್ರವಾದ ಮೇಲೆ ಈ ಎರಡು ಸೂತ್ರಗಳನ್ನು ಹೇಳಿದುದರಿಂದ ಛಂದಸ್ಸಿನಲ್ಲಿ ಮಾತ್ರ ಈ ಕಾರ್ಯವೆಂದು ಮುನಿತ್ರಯರ

ಮತವಾದರೂ ಕವಿಗಳ ಕಾವ್ಯದಲ್ಲಿ ಈ ಪ್ರತ್ಯಯಾನ್ತರೂಪಗಳನ್ನು ಹೇರಳವಾಗಿ ನೋಡಬಹುದು. ಗಮ್ ಧಾತುವಿಗೆ ಕ್ವಸು ಪ್ರತ್ಯಯ ಕ್ವಸುವಿನಲ್ಲಿ ವಸ್ ಉಳಿಯು ತ್ತದೆ. ಗಮ್ + ವಸ್ ಎಂದಿರುವಾಗ ಲಿಟಿನ ಸ್ಥಾನದಲ್ಲಿ ಬಂದುದರಿಂದ ದ್ವಿತ್ವಾದಿ. ಜಗಮ್ + ವಸ್ ಎಂದಿರುವಾಗ ಧಾತುವಿನ ಮಕಾರಕ್ಕೆ ನತ್ವ ಹೇಳುತ್ತಾನೆ.

ಮಕಾರಾಂತ ಧಾತುವಿಗೆ ನತ್ವ ಹೇಳುವ ಸೂತ್ರ.

೮೩೩. ಮ್ವೋಶ್ಚ || ೮-೨-೬೫ ||

**ಮಾನ್ತಸ್ಯ ಧಾತೋರ್ನತ್ವಂ ಮ್ವೋಃ ಪರತಃ || ಜಗನ್ವಾನ್ ||**

ಮ್ವೋಃ, ಚ || ದ್ವಿಪದ ಸೂತ್ರ. ‘ ಮೋ ನೋ ಧಾತೋಃ ’ ಸೂತ್ರವು ಅನುವೃತ್ತ ವಾಗುತ್ತದೆ. ಮ್ ಚ ವ್ ಚ ಮ್ವೌ । ತಯೋಃ। **ಸೂತ್ರಾರ್ಥ**—ಮಕಾರಾನ್ತವಾದ ಧಾತುವಿಗೆ ಮಕಾರವಕಾರಪರದಲ್ಲಿರುವಾಗ ನಕಾರಾದೇಶ ಬರುತ್ತದೆ. ‘ ಅಲೋಂತ್ಯಸ್ಯ ’ ಪರಿಭಾಷೆಯಿಂದ ಅಂತ್ಯಮಕಾರಕ್ಕೆ ನಕಾರ. ಜಗಮ್ + ವಸ್ ಎಂದಿರುವಾಗ ವಕಾರ ಪರದಲ್ಲಿರುವುದರಿಂದ ಗಮಿನ ಮಕಾರಕ್ಕೆ ನತ್ವ ಬಂದರೆ ಜಗನ್ವಸ್ ಎಂದಾಗುತ್ತದೆ. ಸು ಪರವಾದಾಗ ಜಗನ್ವಸ್ + ಸ್ ಎಂದಿರುವಾಗ ಕ್ವಸುವಿನಲ್ಲಿ ಉಕ್ (ಉ) ಇತ್ತಾ ದುದರಿಂದ ‘ ಉಗಿದಚಾಂ—’ ಸೂತ್ರದಿಂದ ನುಮಾಗಮ. ಜಗನ್ವನ್ಸ್ + ಸ್ ‘ ಅತ್ವಸನ್ತಸ್ಯ ಚಾಧಾತೋಃ ’ ಉಪಧಾದೀರ್ಘ. ಜಗನ್ವಾನ್ಸ್ + ಸ್ ‘ ಹಲ್ ಙ್ಯಾದಿನಾ ’ ಸುಲೋಪ. ಸಂಯೋಗಾನ್ತಲೋಪ. ಅದು ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ. ಜಗನ್ವಾನ್.

ಶತೃ, ಶಾನಚ್ ಪ್ರತ್ಯಯಗಳನ್ನು ವಿಧಿಸುವ ಸೂತ್ರ.

೮೩೪. ಲಟಃ ಶತೃಶಾನಚಾವಪ್ರಥಮಾಸಮಾನಾಧಿಕರಣೇ || ೩-೨-೧೨೪ |

ಅಪ್ರಥಮಾನ್ತೇನ ಸಮಾನಾಧಿಕರಣೇ ಲಟ ಏತೌ ವಾಸ್ತಃ । ಶಬಾದಿ! **ಪಚನ್ತಂ ಚೈತ್ರಂ ಪಶ್ಯ ||**

ಲಟಃ, ಶತೃಶಾನಚೌ, ಅಪ್ರಥಮಾಸಮಾನಾಧಿಕರಣೇ ॥ ತ್ರಿಪದ ಸೂತ್ರ. **ಸೂತ್ರಾರ್ಥ** ಪ್ರಥಮಾನ್ತ ಸಾಮಾನಾಧಿಕರಣ್ಯವಿಲ್ಲದಿರುವಾಗ ಲಟಿನ ಸ್ಥಾನದಲ್ಲಿ ಶತೃ, ಶಾನಚ್ ಎರಡು ಪ್ರತ್ಯಯಗಳು ವಿಕಲ್ಪವಾಗಿ ಬರುತ್ತವೆ. ಒಂದೇ ಅರ್ಥವನ್ನು ಎರಡು ಶಬ್ದಗಳು ಹೇಳುವುದಾದರೆ ಆಗ ಅವುಗಳಿಗೆ ಸಾಮಾನಾಧಿಕರಣ್ಯ ಇದೆಯೆಂದು ತಿಳಿಯಬೇಕು. ರಾಮಃ ಗಚ್ಛತಿ || ಇಲ್ಲಿ ಎರಡು ಶಬ್ದಗಳಿಗೆ ಸಾಮಾನಾಧಿಕರಣ್ಯ ಇದೆ. ಈ ಸೂತ್ರದಿಂದ ಶತೃ ಶಾನಚ್ ಬರಬೇಕಾದರೆ ಇನ್ನೊಂದು ಪ್ರಥಮಾನ್ತಕ್ಕೂ ಶತ್ರಂತಕ್ಕೂ ಸಾಮಾನಾಧಿಕರಣ್ಯ ಇರಬಾರದು, ದ್ವಿತೀಯಾನ್ತಾದಿಗಳೊಡನೆ ಸಾಮಾ ನಾಧಿಕರಣ್ಯ ಇರಬೇಕು. ಮೂಲದಲ್ಲಿ ದ್ವಿತೀಯಾನ್ತಸಾಮಾನಾಧಿಕರಣ್ಯ ತೋರಿ

ಸಿರುತ್ತಾನೆ. ಶತೃವಿನಲ್ಲಿ ಶಕಾರವೂ ಋಕಾರವೂ ಇತ್ತಾಗುತ್ತದೆ. ಅತ್ ಉಳಿಯು ತ್ತದೆ. ಪಚ್ ಧಾತುವಿಗೆ ಶತೃ ಬಂದರೆ ಪಚ್+ಅತ್ ಎಂದಿರುವಾಗ ಪ್ರತ್ಯಯ ಶಿತ್ತಾದುದರಿಂದ ಶಪ್‌ವಿಕರಣ ಬರುತ್ತದೆ. ಪಚ್+ಅ+ಅತ್. 'ಅತೋ ಗುಣೇ' ಪರರೂಪ. ಪಚತ್. ದ್ವಿತೀಯೆಯಲ್ಲಿ ಪಚತ್+ಅಮ್ ಎಂದಿರುವಾಗ ಉಗಿತ್ತಾದುದರಿಂದ ನುಮ್. ಪಚನ್‌ತ್+ಅಮ್. ನಕಾರಕ್ಕೆ ಅನುಸ್ವಾರಪರಸವರ್ಣ. ಪಚನ್ತಮ್ ಎಂದಾಗುತ್ತದೆ. ಪಚನ್ತಂ ಚೈತ್ರಂ ಪಶ್ಯ=ಪಾಕಮಾಡುವ ಚೈತ್ರನನ್ನು ನೋಡು. ಇಲ್ಲಿ ಪಾಕಮಾಡುವವನೂ ಚೈತ್ರನೂ ಒಬ್ಬನೇ. ಒಂದೇ ಅರ್ಥ ಹೇಳುವುದರಿಂದ ದ್ವಿತೀಯಾನ್ತದೊಡನೆ ಸಾಮಾನಾಧಿಕರಣ್ಯವಿದೆ. ಈ ಸೂತ್ರದಂತೆ, ಪಚನ್ ಚೈತ್ರಃ ಗಚ್ಛತಿ ಎಂದಾಗುವುದಿಲ್ಲ. ಇಲ್ಲಿ ಪ್ರಥಮಾನ್ತಸಾಮಾನಾಧಿಕರಣ್ಯವಿದೆ. ಆದರೂ ಮುಂದೆ ಈ ರೂಪವೂ ಇದೆಯೆಂದು ಪ್ರಮಾಣಪೂರ್ವಕವಾಗಿ ತೋರಿಸಿಕೊಡುತ್ತಾನೆ. ಶಾನಚಿನಲ್ಲಿ ಆನ ಉಳಿಯುತ್ತದೆ. 'ತಙಾನಾವಾತ್ಮನೇಪದಮ್' ಸೂತ್ರದಿಂದ ಅದಕ್ಕೆ ಆತ್ಮನೇಪದಸಂಜ್ಞೆ ಬರುವುದರಿಂದ ಆತ್ಮನೇಪದಿ ಧಾತುಗಳ ಮೇಲೆ ಪ್ರಥಮಾನ್ತಸಾಮಾನಾಧಿಕರಣ್ಯ ಇಲ್ಲದಿರುವಾಗ ಇದು ಬರುತ್ತದೆ. ಪಚ್ ಧಾತು ಉಭಯಪದೀ. ಶತೃ ಬಂದಾಗ ರೂಪ ತೋರಿಸಿ ಶಾನಚಿನ ರೂಪವನ್ನು ತೋರಿಸುತ್ತಾನೆ. ಪಚ್+ಆನ ಎಂದಿರುವಾಗ ಹಿಂದಿನಂತೆ ಶಪ್. ಪಚ್+ಅ+ಆನ=ಪಚ+ಆನ ಎಂದಿರುವಾಗ ಮುಕಾಗಮ ಹೇಳುತ್ತಾನೆ.

ಮುಕಾಗಮ ಹೇಳುವ ಸೂತ್ರ.

೮೩೫. ಆನೇ ಮುಕ್ || ೭-೨-೮೨ ||

ಅದನ್ತಾಙ್ಗಸ್ಯ ಮುಗಾಗಮಃ ಸ್ಯಾದಾನೇ ಪರೇ । ಪಚಮಾನಂ ಚೈತ್ರಂ ಪಶ್ಯ । ಲಟಿತ್ಯನುವರ್ತಮಾನೇ ಪುನರ್ಲಡ್‌ಗ್ರಹಣಾತ್ ಪ್ರಥಮಾಸಾಮಾನಾಧಿಕರಣ್ಯೇಽಪಿ ಕ್ವಚಿತ್ । ಸನ್ ದ್ವಿಜಃ ||

ದ್ವಿಪದ ಸೂತ್ರ. 'ಅಂಗಸ್ಯ' ಅಧಿಕಾರ. 'ಅತೋ ಯೇಯಃ' ಸೂತ್ರದಿಂದ 'ಅತಃ' ಅನುವೃತ್ತವಾಗಿ ಅದು ಅಂಗಕ್ಕೆ ವಿಶೇಷಣವಾದುದರಿಂದ ತದಂತಲಾಭ. ಸೂತ್ರಾರ್ಥ ಪ್ರಸ್ವಾಕಾರಾಂತವಾದ ಅಂಗಕ್ಕೆ ಆನ ಪರದಲ್ಲಿರುವಾಗ ಮುಗಾಗಮ ಬರುತ್ತದೆ. ಪಚ+ಆನ ಎಂದಿರುವಾಗ ಮುಕ್ ಬಂದರೆ ಪಚಮ್+ಆನ=ಪಚಮಾನ ಎಂದಾಗುತ್ತದೆ. ಪ್ರಥಮಾಸಾಮಾನಾಧಿಕರಣ್ಯ ಇಲ್ಲವೆಂದು ತೋರಿಸಲು ದ್ವಿತೀಯಾಂತದೊಡನೆ ಉದಾಹರಿಸಿರುತ್ತಾನೆ. ಪಾಕಮಾಡುವ ಚೈತ್ರನನ್ನು ನೋಡು ಎಂದರ್ಥ. ದ್ವಿತೀಯಾಂತಸಾಮಾನಾಧಿಕರಣ್ಯವಿದೆ. ಪ್ರಥಮಾಂತಸಾಮಾನಾಧಿಕರಣ್ಯ ಇರುವಾಗ ಬರುವುದಿಲ್ಲವೆಂದು ಸೂತ್ರದಲ್ಲಿ ಹೇಳಿದೆ; ಆದರೆ ಲೋಕದಲ್ಲಿ ಆ ರೀತಿ ಪ್ರಯೋಗವಿದೆ. ಅದು ಹೇಗೆ ಸಾಧುವಾಗುತ್ತದೆಂದು ತೋರಿಸಲು ಜ್ಞಾಪಕ

ತೋರಿಸುತ್ತಾನೆ. 'ವರ್ತಮಾನೇ ಲಟ್' ಸೂತ್ರದಿಂದ ಲಟ್ ಅನುವೃತ್ತಿ ಬರುತ್ತಿರುವಾಗ ಈ ಸೂತ್ರದಲ್ಲಿ ಪುನಃ ಲಟಃ ಎಂದುದು ವ್ಯರ್ಥವಾಗಿ ಏನಾದರೂ ಅರ್ಥವಿಶೇಷ ಇದೆಯೆಂದು ವ್ಯಕ್ತಪಡಿಸುತ್ತದೆ. ಇದರಿಂದ ಪ್ರಥಮಾಸಾಮಾನಾಧಿಕರಣ್ಯ ಇರುವಾಗಲೂ ಕೆಲವು ಕಡೆ ಶತೃ, ಶಾನಚ್ ಪ್ರತ್ಯಯಗಳು ಬರುತ್ತವೆ ಎಂದು ಜ್ಞಾಪಿತವಾಗುತ್ತದೆ. ಸನ್ ದ್ವಿಜಃ ॥ ಇಲ್ಲಿ ದ್ವಿಜಃ ಎಂಬ ಪ್ರಥಮಾಂತಪದದೊಡನೆ ಸಾಮಾನಾಧಿಕರಣ್ಯವಿದೆ. ಅಸ=ಭುವಿ. ಧಾತು. ಶತೃ ಪ್ರತ್ಯಯ. ಅಸ್+ಅತ್ ಎಂದಿರುವಾಗ 'ಶ್ನಸೋರಲ್ಲೋಪಃ' ಸೂತ್ರದಿಂದ ಅಸಿನ ಅಕಾರಕ್ಕೆ ಲೋಪ. ಸ್+ಅತ್ ಸತ್ ಶಬ್ದ. ಪ್ರಥಮಾಸುವಿನಲ್ಲಿ ಉಗಿತ್ತಾದುದರಿಂದ ನುಮ್. ಸನ್ ತ್+ಸ್. ಹಲ್ಙ್ಯಾದಿನಾ ಸುಲೋಪ. ಸಂಯೋಗಾಂತಲೋಪ. ಸನ್ ಎಂದಾಗುತ್ತದೆ.

ಶತೃವಿಗೆ ವಸ್ವಾದೇಶ ಹೇಳುವ ಸೂತ್ರ.

**೮೩೬. ವಿದೇಃ ಶತುರ್ವಸುಃ ॥ ೭-೧-೩೬ ॥**

**ವೇತ್ತೇಃ ಪರಸ್ಯ ಶತುರ್ವಸುರಾದೇಶೋ ವಾ** ॥ ವಿದನ್ । ವಿದ್ವಾನ್ ॥

ತ್ರಿಪದ ಸೂತ್ರ. **ಸೂತ್ರಾರ್ಥ**—ವಿದ ಧಾತುವಿನ ಪರದಲ್ಲಿರುವ ಶತೃ ಪ್ರತ್ಯಯಕ್ಕೆ ವಸು ಆದೇಶವಿಕಲ್ಪವಾಗಿ ಬರುತ್ತದೆ. ವಿದ ಧಾತುವು ಅನೇಕ ವಿಕರಣಗಳಲ್ಲಿ ಹೇಳಿದೆ. ಆದರೆ ಇಲ್ಲಿ, ವಿದ=ಜ್ಞಾನೇ ಎಂಬ ಅದಾದಿ ಗಣದಲ್ಲಿ ಹೇಳಿದ ವಿದ ಧಾತುವನ್ನೇ ತೆಗೆದುಕೊಳ್ಳಬೇಕು. ವಿದ್ ಧಾತುವಿಗೆ ಶತೃ ಬಂದರೆ ವಿದ್+ಅತ್=ವಿದತ್ ಶಬ್ದವಾಗಿ ಸುವಿನಲ್ಲಿ ನುಮಾದಿಗಳು ಬಂದು ವಿದನ್ ಎಂದಾಗುತ್ತದೆ. ಶತೃ ಪ್ರತ್ಯಯಕ್ಕೆ ವಸು ಬಂದರೆ (ವಸುವಿನಲ್ಲಿ ಉಕಾರ ಇತ್) ವಿದ್+ವಸ್=ವಿದ್ವಸ್ ಶಬ್ದವಾಗುತ್ತದೆ. ಸಾಂತಕ್ಕೆ ಸು ಪರವಾದಾಗ ಉಗಿತ್ತಾದುದರಿಂದ ನುಮ್. 'ಸಾಂತಮಹತಃ ಸಂಯೋಗಸ್ಯ' ಸೂತ್ರದಿಂದ ಉಪಧಾದೀರ್ಘ. ಸುಲೋಪಾದಿ. ಸಂಯೋಗಾಂತಲೋಪ ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ. ವಿದ್ವಾನ್.

ಸತ್ ಸಂಜ್ಞೆಯನ್ನು ಹೇಳುವ ಸೂತ್ರ.

**೮೩೭. ತೌ ಸತ್ ॥ ೩-೨-೧೨೭ ॥**

**ತೌ ಶತೃಶಾನಚೌ ಸತ್ಸಂಜ್ಞೌ ಸ್ತಃ** ॥

ದ್ವಿಪದ ಸೂತ್ರ. ತಚ್ಛಬ್ದವು ಪೂರ್ವಪರಾಮರ್ಶಿಯಾದುದರಿಂದ ಹಿಂದಿನ ಸೂತ್ರದಲ್ಲಿ ವಿಹಿತವಾದ ಶತೃ, ಶಾನಚ್ ಪ್ರತ್ಯಯಗಳು ಇಲ್ಲಿ ಪರಾಮೃಷ್ಟವಾಗುತ್ತವೆ. **ಸೂತ್ರಾರ್ಥ**—ಶತೃ ಶಾನಚ್ ಪ್ರತ್ಯಯಗಳು ಸತ್ ಎಂಬ ಸಂಜ್ಞೆಯನ್ನು ಹೊಂದುತ್ತವೆ. ಸತ್ ಬರುತ್ತದೆಯೆಂದರೆ ಶತೃ, ಶಾನಚ್ ಪ್ರತ್ಯಯಗಳು ಬರುತ್ತವೆಯೆಂದು ತಿಳಿಯಬೇಕು.

ಲೃಟಿಗೆ ಸತ್ ಪ್ರತ್ಯಯ ಹೇಳುವ ಸೂತ್ರ

೮೩೮. ಲೃಟಃ ಸದ್ವಾ ॥ ३-३-१४ ॥

ವ್ಯವಸ್ಥಿತವಿಭಾಷೇಯಮ್ । ತೇನಾಪ್ರಥಮಾಸಾಮಾನಾಧಿಕರಣ್ಯೇ ಪ್ರತ್ಯಯೋತ್ತರಪದಯೋಃ ಸಂಬೋಧನೇ ಲಕ್ಷಣಹೇತ್ವೋಶ್ಚ ನಿತ್ಯಮ್ । ಕರಿಷ್ಯನ್ತಂ ಕರಿಷ್ಯಮಾಣಂ ಪಶ್ಯ ॥

ಲೃಟಃ, ಸತ್, ವಾ ॥ ತ್ರಿಪದ ಸೂತ್ರ. ಸೂತ್ರಾರ್ಥ—ಧಾತುವಿಗೆ ವಿಹಿತವಾದ ಲೃಟಿಗೆ ಸತ್ ವಿಕಲ್ಪವಾಗಿ ಬರುತ್ತದೆ. ವಾ ಪದವು ವಿಕಲ್ಪವನ್ನು ತಿಳಿಸಿದರೂ ಇಲ್ಲಿ ವ್ಯವಸ್ಥಿತ ವಿಭಾಷಾ ಎಂದು ತಿಳಿಯಬೇಕು. ಆದುದರಿಂದ ಕೆಲವು ಕಡೆ ನಿತ್ಯವಾಗಿ ಬರುತ್ತದೆಂದು ತಿಳಿಯಬೇಕು. 'ತೇನ—' ಎಂಬ ವಾಕ್ಯದಿಂದ ನಿತ್ಯವಾಗಿ ಬರುವ ಸ್ಥಳವನ್ನು ತೋರಿಸುತ್ತಾನೆ. ಪ್ರಥಮಾಸಾಮಾನಾಧಿಕರಣ್ಯ ಇಲ್ಲದಿರುವಾಗಲೂ, ಪ್ರತ್ಯಯ ಉತ್ತರಪದ ಪರದಲ್ಲಿರುವಾಗಲೂ, ಸಂಬೋಧನೆಯಲ್ಲಿಯೂ, ಲಕ್ಷಣ, ಹೇತುಭಾವ ತೋರುವಾಗಲೂ ನಿತ್ಯವಾಗಿ ಬರುತ್ತದೆಂದು ತಿಳಿಯಬೇಕು ಕೃಞ್ ಧಾತು ಉಭಯಪದಿಯಾದುದರಿಂದ ಶತೃ, ಶಾನಚ್ ಲೃಟಿಗೆ ಬಂದಾಗ ಉದಾಹರಣೆ ತೋರಿಸುತ್ತಾನೆ. ಕೃ + ಲೃಟ್ ಎಂದಿರುವಾಗ ಲೃಟಿಗೆ ಶತೃ. ಕೃ + ಅತ್. ಸ್ಯವಿಕರಣ. 'ಋದ್ಧನೋಃ ಸ್ಯೇ' ಸೂತ್ರದಿಂದ ಇಡಾಗಮ. ಷತ್ವ. ಕರಿಷ್ಯ + ಅತ್. 'ಅತೋ ಗುಣೇ' ಪರರೂಪ. ಕರಿಷ್ಯತ್. ಅಪ್ರಥಮಾಸಾಮಾನಾಧಿಕರಣ್ಯದಲ್ಲಿ ನಿತ್ಯವೆಂದುದರಿಂದ ದ್ವಿತೀಯಾಂತವಾಗಿ ಉದಾಹರಿಸಿರುತ್ತಾನೆ. ಅಮ್ ಪರವಾದಾಗ ಉಗಿತ್ತಾದುದರಿಂದ ನುಮಾಗಮ. ನಕಾರಕ್ಕೆ ಅನುಸ್ವಾರ, ಪರಸವರ್ಣ. 'ಕರಿಷ್ಯನ್ತಮ್ ಪಶ್ಯ' = ಮಾಡುವವನನ್ನು ನೋಡು. ಶಾನಚ್ ಬಂದಾಗ ಕರಿಷ್ಯ + ಆನ ಎಂದಿರುವಾಗ 'ಆನೇ ಮುಕ್' ಸೂತ್ರದಿಂದ ಮುಕಾಗಮ. ಕರಿಷ್ಯಮಾಣಂ ಪಶ್ಯ. ಹೀಗೆಯೇ ಪ್ರತ್ಯಯ ಪರವಾದಾಗ ಲೃಟಿಗೆ ಶತೃ, ಶಾನಚ್. ಕರಿಷ್ಯತಃ ಅಪತ್ಯಂ ಕಾರಿಷ್ಯತಃ ॥ ಅಣ್ ಪರವಾದಾಗ ಶತೃ ಬಂದಿದೆ. ಉತ್ತರಪದ ಪರವಾದಾಗ, ಕರಿಷ್ಯತ್ ಭಕ್ತಿಃ. ಸಂಬೋಧನೆಯಲ್ಲಿ, ಹೇ ಕರಿಷ್ಯನ್. ಲಕ್ಷಣದಲ್ಲಿ 'ಶಯಿಷ್ಯಮಾಣಾ ಯವನಾ ಭುಂಕ್ತೇ', ಹೇತುವಿನಲ್ಲಿ 'ಅರ್ಜಯಿಷ್ಯನ್ ವಸತಿ' ಇತ್ಯಾದಿ ಉದಾಹರಣೆಗಳನ್ನು ತಿಳಿಯಬೇಕು. ಪ್ರಥಮಾಸಾಮಾನಾಧಿಕರಣ್ಯದಲ್ಲಿ ವಿಕಲ್ಪ. ಕರಿಷ್ಯತಿ ಇತಿ ಕರಿಷ್ಯನ್.

ಮುಂದಿನ ಪ್ರತ್ಯಯಗಳಿಗೆ ಅರ್ಥ ನಿಯಮಿಸುವ ಸೂತ್ರ.

೮೩೯. ಆ ಕ್ವೇಸ್ತಚ್ಛೀಲತದ್ಧರ್ಮತತ್ಸಾಧುಕಾರಿಷು ॥ ३-२-१३४ ॥

ಕ್ವಿಪಮಭಿವ್ಯಾಪ್ಯ ವಕ್ಷ್ಯಮಾಣಾಃ ಪ್ರತ್ಯಯಾಸ್ತಚ್ಛೀಲಾದಿಷು ಕರ್ತೃಷು ಬೋಧ್ಯಾಃ ॥

ಆ, ಕ್ವೇಃ, ತಚ್ಛೀಲತದ್ಧರ್ಮತತ್ಸಾಧುಕಾರಿಷು ।। ತ್ರಿಪದ ಸೂತ್ರ. ಆಙ್ ಇಲ್ಲಿ ಅಭಿವಿಧ್ಯರ್ಥವನ್ನು ಹೇಳುತ್ತದೆ. ಆದರಿಂದ ಕೂಡಿದ್ದರೆ ಅಭಿವಿಧಿ. ಅದನ್ನು ಕೂಡದೆ ಅಲ್ಲಿಯವರೆಗಾದರೆ ಆಗ ಮರ್ಯಾದಾ. **ಸೂತ್ರಾರ್ಥ**—ಕ್ವಿಪ್ ಪ್ರತ್ಯಯದ ವರೆಗೆ ಮುಂದೆ ಹೇಳಲ್ಪಡುವ ಪ್ರತ್ಯಯಗಳು ತಚ್ಛೀಲ, ತದ್ಧರ್ಮ, ತತ್ಸಾಧುಕಾರಿ ಈ ಮೂರು ಅರ್ಥಗಳು ತೋರುವಾಗ ಕರ್ತ್ರರ್ಥದಲ್ಲಿ ಬರುತ್ತವೆ. ಅದೇ ಸ್ವಭಾವ ವಾಗಿರುವವನು, ಅದೇ ಧರ್ಮವಾಗಿರುವವನು, ಅದನ್ನು (ಧಾತ್ವರ್ಥವ್ಯಾಪಾರ) ಚನ್ನಾಗಿ ಮಾಡುವವನು ಈ ಮೂರು ಅರ್ಥಗಳಲ್ಲಿ ಬರುತ್ತವೆಂದು ತಾತ್ಪರ್ಯ. ಉದಾಹರಣೆಗಳಿಂದ ಇವುಗಳ ಭೇದವನ್ನು ತಿಳಿಯಬೇಕು.

ತೃನ್ ಪ್ರತ್ಯಯವಿಧಾಯಕ ಸೂತ್ರ.

**೮೪೦. ತೃನ್ ।। ೩-೨-೧೩೫ ।। ಕರ್ತಾ ಕಟಾನ್ ।।**

ಏಕಪದ ಸೂತ್ರ. **ಸೂತ್ರಾರ್ಥ**—ಧಾತುಗಳಿಗೆ ತಚ್ಛೀಲಾದ್ಯರ್ಥ ತೋರುವಾಗ ಕರ್ತ್ರರ್ಥದಲ್ಲಿ ತೃನ್ ಪ್ರತ್ಯಯ ಬರುತ್ತದೆ. ಕರ್ತಾ. ಕೃಞ್ ಧಾತುವಿಗೆ ತಚ್ಛೀಲಾರ್ಥದಲ್ಲಿ ತೃನ್ ಬಂದರೆ ಕೃ+ತೃ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ' ಸೂತ್ರದಿಂದ ಗುಣ ಬಂದರೆ ಕರ್ತೃ ಶಬ್ದವಾಗುತ್ತದೆ. ಪ್ರಥಮಾ ಸುವಿನಲ್ಲಿ ಅನಙ್ ದೀರ್ಘ ಸುಲೋಪ, ನಲೋಪಗಳು ಬಂದಿವೆ. ಚಾಪೆ ಮಾಡುವುದು ಅವನ ಸ್ವಭಾವ ಎಂದರ್ಥ. ಇಲ್ಲಿ ಮೂರು ಅರ್ಥಗಳನ್ನೂ ಹೇಳಬಹುದು.

ಷಾಕನ್ ಪ್ರತ್ಯಯ ವಿಧಿಸುವ ಸೂತ್ರ.

**೮೪೧. ಜಲ್ಪಭಿಕ್ಷಕುಟ್ಟಲುಣ್ಟವೃಙಃ ಷಾಕನ್ ।। ೩-೨-೧೫೫ ।।**

ಪ್ರತ್ಯಯದ ಆದಿಯ ಷಕಾರಕ್ಕೆ ಇತ್ವ ಹೇಳುವ ಸೂತ್ರ.

**೮೪೨. ಷಃ ಪ್ರತ್ಯಯಸ್ಯ ।। ೧-೩-೬ ।।**

**ಪ್ರತ್ಯಯಸ್ಯಾದಿಃ ಷ ಇತ್ಸಂಜ್ಞಃ ಸ್ಯಾತ್ । ಜಲ್ಪಾಕಃ ಭಿಕ್ಷಾಕಃ ಕುಟ್ಟಾಕಃ । ಲುಣ್ಟಾಕಃ । ವರಾಕಃ । । ವರಾಕೀ ।।**

**ಸೂತ್ರಾರ್ಥ**—ಜಲ್ಪ, ಭಿಕ್ಷ, ಕುಟ್ಟ, ಲುಣ್ಟ, ವೃಙ್ ಧಾತುಗಳಿಗೆ ತಚ್ಛೀಲಾ ಅರ್ಥ ತೋರುವಾಗ ಷಾಕನ್ ಪ್ರತ್ಯಯ ಬರುತ್ತದೆ. ಜಲ್ಪ=ವ್ಯಕ್ತಾಯಾಂ ವಾಚಿ ಧಾತು. ಇದಕ್ಕೆ ಷಾಕನ್ ಬಂದರೆ ಜಲ್ಪ್+ಷಾಕನ್ ಎಂದಿರುವಾಗ ಪ್ರತ್ಯಯ ಷಕಾರಕ್ಕೆ ಲೋಪ ಹೇಳುತ್ತಾನೆ. 'ಷಃ ಪ್ರತ್ಯಯಸ್ಯ.' ದ್ವಿಪದ ಸೂತ್ರ. 'ಆದಿರ್ಞಿಟುಡವಃ' ಸೂತ್ರದಿಂದ 'ಆದಿಃ', 'ಉಪದೇಶೇ'—ಸೂತ್ರದಿಂದ 'ಇತ್' ಪದಗಳು ಅನುವೃತ್ತವಾಗುತ್ತವೆ.

**ಸೂತ್ರಾರ್ಥ**—ಪ್ರತ್ಯಯದ ಆದಿಭೂತವಾದ ಷಕಾರವು ಇತ್ ಸಂಜ್ಞೆಯನ್ನು ಹೊಂದುತ್ತದೆ. ಷಾಕನ್‌ನಲ್ಲಿ ಆದಿಯಲ್ಲಿ ಷಕಾರ ಇರುವುದರಿಂದ ಅದು ಇತ್ತಾದರೆ ಲೋಪ ಬಂದು ಆಕನ್ ಉಳಿಯುತ್ತದೆ. 'ಹಲಂತ್ಯಮ್' ಸೂತ್ರದಿಂದ ನಕಾರ ಇತ್. ಜಲ್ಪ್+ಆಕ=ಜಲ್ಪಾಕಃ ಎಂದಾಗುತ್ತದೆ. ವಾಚಾಳಿಯೆಂದರ್ಥ. **ಭಿಕ್ಷ**= ಭಿಕ್ಷಾಯಾಂ. ಧಾತು ಭಿಕ್ಷಾಕಃ=ಭಿಕ್ಷೆ ಬೇಡುವ ಸ್ವಭಾವದವನು. **ಕುಟ್ಟ**= ಛೇದನೇ. ಧಾತು. ಕುಟ್ಟಾಕಃ=ತುಂಡರಿಸುವವನು. **ಲುಟಿ**=ಸ್ತೇಯೇ ಧಾತು ಇದಿತ್ತಾದುದರಿಂದ ನುಮಾಗಮ. ಅದಕ್ಕೆ ಷ್ಟುತ್ವದಿಂದ ಣಕಾರಾದೇಶ. ಲುಣ್ಟಾಕಃ =ಕದಿಯುವವನು. ವೃಙ್—ಸಂಭಕ್ತೌ. ಧಾತು. ವರಾಕಃ । ಆರ್ಧಧಾತುಕನಿಮಿತ್ತ ಗುಣ ಬಂದಿದೆ. ಷಿತ್ ಪ್ರತ್ಯಯವಾದುದರಿಂದ ಸ್ತ್ರೀಲಿಂಗದಲ್ಲಿ 'ಷಿತ್‌ಗೌರಾದಿಭ್ಯಶ್ಚ' ಸೂತ್ರದಿಂದ ಙೀಷ್ ಬಂದರೆ ವರಾಕೀ ಎಂದಾಗುತ್ತದೆ.

ಉಪ್ರತ್ಯವಿಧಾಯಕ ಸೂತ್ರ.

೮೪೩. ಸನಾಶಂಸಭಿಕ್ಷ ಉಃ ॥ ೩-೨-೧೬೮ ॥

ಚಿಕೀರ್ಷುಃ । ಆಶಂಸುಃ । ಭಿಕ್ಷುಃ ॥

ದ್ವಿಪದ ಸೂತ್ರ. **ಸೂತ್ರಾರ್ಥ**—ಸನಂತ, ಆಙ್‌ಪೂರ್ವಕ ಶಂಸ್ ಧಾತು, ಭಿಕ್ಷ ಧಾತು ಇವುಗಳಿಗೆ ತಚ್ಛೀಲಾದ್ಯರ್ಥಗಳಲ್ಲಿ ಉ ಪ್ರತ್ಯಯ ಬರುತ್ತದೆ. ಸನ್ ಪ್ರತ್ಯಯವಾದುದರಿಂದ ತದಂತಗ್ರಹಣ. ಕೃಞ್ ಧಾತುವಿಗೆ ಸನ್ ಬಂದಾಗ ಚಿಕೀರ್ಷ ಎಂದಾಗುತ್ತದೆ. ಇದಕ್ಕೆ ಉ ಬಂದರೆ ಚಿಕೀರ್ಷ+ಉ ಎಂದಿರುವಾಗ 'ಅತೋ ಲೋಪಃ' ಸೂತ್ರದಿಂದ ಸನಿನ ಅಕಾರಕ್ಕೆ ಲೋಪ. ಚಿಕೀರ್ಷ+ಉ—ಚಿಕೀರ್ಷುಃ —ಮಾಡಲು ಬಯಸುವವನು. ಆಙ್+ಶಸಿ, ಇಚ್ಛಾಯಾಂ. ಧಾತು. ಇದು ಯಾವಾಗಲೂ ಆಙ್‌ಪೂರ್ವವಾಗಿರುತ್ತದೆ. ಇದಿತ್ತಾದುದರಿಂದ ನುಮಾಗಮ. ಆಶಂಸ್+ಉ—ಆಶಂಸುಃ ಎಂದಾಗುತ್ತದೆ. ಭಿಕ್ಷ ಧಾತುವಿಗೆ ಉ ಬಂದರೆ ಭಿಕ್ಷುಃ ಎಂದಾಗುತ್ತದೆ.

ಕ್ವಿಪ್ ಪ್ರತ್ಯಯ ವಿಧಿಸುವ ಸೂತ್ರ.

೮೪೪. ಭ್ರಾಜಭಾಸಧುರ್ವಿದ್ಯುತೋರ್ಜಿಪೄಜುಗ್ರಾವಸ್ತುವಃ ಕ್ವಿಪ ॥ ೩-೨-೧೭೭ ॥

ವಿಭ್ರಾಟ್ । ಭಾಃ ॥

ದ್ವಿಪದ ಸೂತ್ರ. **ಸೂತ್ರಾರ್ಥ**—ಭ್ರಾಜ, ಭಾಸ, ಧುರ್ವೀ, ದ್ಯುತ್, ಊರ್ಜ, ಪೄ, ಜು, ಗ್ರಾವಸ್ತು ಇವುಗಳಿಗೆ ತಚ್ಛೀಲಾದ್ಯರ್ಥದಲ್ಲಿ ಕ್ವಿಪ್ ಪ್ರತ್ಯಯ ಬರುತ್ತದೆ. ಟುಭ್ರಾಜೃ—ದೀಪ್ತೌ. ಧಾತು. ಕ್ವಿಪ್ ಬಂದರೆ ಅದರಲ್ಲಿ ಸರ್ವವೂ ಲೋಪವಾಗುವುದೆಂದು ಹಿಂದೆ ಹೇಳಿದೆ. ವಿ ಉಪಸರ್ಗ. ವಿಭ್ರಾಜ್ ಎಂದಿರುವಾಗ 'ವ್ರಶ್ಚಭ್ರಸ್ಜ—'

ಸೂತ್ರದಿಂದ ಜಕಾರಕ್ಕೆ ಷಕಾರ. ವಿಭ್ರಾಷ್. 'ಝಲಾಂ ಜಶೋಽನ್ತೇ' ವಿಭ್ರಾಡ್, 'ವಾವಸಾನೇ' ವಿಭ್ರಾಟ್. ಭಾಸೃ—ದೀಪ್ತೌ. ಧಾತು. ಇದಕ್ಕೆ ಕ್ವಿಪ್ ಬಂದರೆ ಭಾಸ್ ಎಂದಾಗುತ್ತದೆ. ಸಕಾರಕ್ಕೆ ರುತ್ವವಿಸರ್ಗ. ಭಾಃ । ಧುರ್ವೀ—ಹಿಂಸಾಯಾಮ್. ಧಾತು. ಈಕಾರ ಇತ್. ಕ್ವಿಪ್ ಬಂದರೆ ಧುರ್ವ್ ಎಂದಿರುವಾಗ ವಕಾರಕ್ಕೆ ಲೋಪ ಹೇಳುತ್ತಾನೆ.

ಛ, ವ ಗಳಿಗೆ ಲೋಪ ಹೇಳುವ ಸೂತ್ರ.

೮೪೫. ರಾಲ್ಲೋಪಃ ॥ ೬-೪-೨೧ ॥

ರೇಫಾಚ್ಛ್ವೋರ್ಲೋಪಃ ಕ್ವೌ ಝಲಾದೌ ಕ್ಙಿತಿ । ಧೂಃ । ವಿದ್ಯುತ್ । ಊರ್ಕ್ । ಪೂಃ । ದೃಶಿಗ್ರಹಣಸ್ಯಾಪಕರ್ಷಾಜ್ಜವತೇರ್ದೀರ್ಘಃ । ಜೂಃ । ಗ್ರಾವಸ್ತುತ್ ॥

ವಾ ॥ (ಕ್ವಿಬ್ವಚಿಪ್ರಚ್ಛ್ಯಾಯತಸ್ತುಕಟಪ್ರುಜುಶ್ರೀಣಾಂ ದೀರ್ಘೋಽಸಂಪ್ರಸಾರಣಂ ಚ) ವಕ್ತೀತಿ ವಾಕ್ ॥

ರಾತ್, ಲೋಪಃ ॥ ದ್ವಿಪದ ಸೂತ್ರ, 'ಚ್ಛ್ವೋಃ ಶೂಡ—' ಸೂತ್ರದಿಂದ 'ಚ್ಛ್ವೋಃ', 'ಅನುನಾಸಿಕಸ್ಯ ಕ್ವಿಝಲೋಃ—' ಸೂತ್ರದಿಂದ 'ಕ್ವಿಝಲೋಃಕ್ಙಿತಿ' ಪದಗಳು ಅನುವೃತ್ತವಾಗುತ್ತವೆ. ಸೂತ್ರಾರ್ಥ—ಕ್ವಿಪ್, ಝಲಾದಿಯಾದ ಕಿತ್, ಙಿತ್ ಪ್ರತ್ಯಯಪರದಲ್ಲಿರುವಾಗ ರೇಫದ ಪರದಲ್ಲಿರುವ ಛಕಾರ, ವಕಾರಗಳಿಗೆ ಲೋಪ ಬರುತ್ತದೆ. ಧುರ್ವ್ ಎಂಬಲ್ಲಿ ರೇಫದ ಪರದಲ್ಲಿ ವಕಾರವಿದೆ. ಅದಕ್ಕೆ ಕ್ವಿಪ್ ಪರದಲ್ಲಿದೆ. ಲೋಪವಾದರೆ ಧುರ್ ಎಂದಿರುತ್ತದೆ. ಪ್ರಥಮಾ ಸುಪರವಾದಾಗ ಉಪಧಾದೀರ್ಘ ಬಂದು ರೇಫಕ್ಕೆ ವಿಸರ್ಗ ಬಂದರೆ ಧೂಃ ರೂಪ ಆಗುತ್ತದೆ. ದ್ಯುತ—ದೀಪ್ತೌ. ಧಾತು. ವಿ ಉಪಸರ್ಗ ಇರುವಾಗ ಕ್ವಿಪ್. ವಿದ್ಯುತ್. ಊರ್ಜ—ಬಲಪ್ರಾಣನಯೋಃ । ಧಾತು. ಕ್ವಿಪ್ ಬಂದಾಗ ಊರ್ಜ್ ಎಂದಿರುವಾಗ ಸು ಬಂದರೆ 'ಚೋಃ ಕುಃ' ಸೂತ್ರದಿಂದ. ಕುತ್ವ. ಊರ್ಗ್. 'ವಾವಸಾನೇ' ಊರ್ಕ್. ಪೄ—ಪಾಲನಪೂರಣಯೋಃ । ಧಾತು. ಕ್ವಿಪ್ ಬಂದಾಗ 'ಉದೋಷ್ಠ್ಯಪೂರ್ವಸ್ಯ' ಸೂತ್ರದಿಂದ ಉತ್ವ. ರಪರವಾಗಿಬಂದರೆ ಪುರ್ ಆಗುತ್ತದೆ. ಪ್ರಥಮಾಸುವಿನಲ್ಲಿ ದೀರ್ಘಾದಿ. ಪೂಃ । ಜು—ಗತೌ. ಇದು ಸೌತ್ರಧಾತು. ಇದಕ್ಕೆ ಕ್ವಿಪ್ ಬಂದಾಗ ದೀರ್ಘ ಹೇಳುತ್ತಾನೆ. 'ಅನ್ಯೇಭ್ಯೋಽಪಿ ದೃಶ್ಯತೇ' ಮುಂದಿನ ಸೂತ್ರ. ಅಲ್ಲಿನ 'ದೃಶ್ಯತೇ' ಎಂಬ ಪದವನ್ನು ಇಲ್ಲಿ ಅಪಕರ್ಷಮಾಡಿಕೊಳ್ಳಬೇಕು. ಕಾರ್ಯಾಂತರಸಂಗ್ರಹ ಕ್ಕೋಸ್ಕರ ಅಲ್ಲಿ ದೃಶಿ ಧಾತು ಹೇಳಿರುವುದರಿಂದ ದೀರ್ಘರೂಪಕಾರ್ಯ ಬರುತ್ತದೆಂದು ತಿಳಿಯಬೇಕು. ಜೂಃ ಎಂದಾಗುತ್ತದೆ. ಷ್ಟುಞ್—ಸ್ತುತೌ. ಧಾತು. ಇದಕ್ಕೆ ಗ್ರಾವನ್ ಶಬ್ದ ಉಪಪದವಾಗಿರುವಾಗ ಕ್ವಿಪ್. ಗ್ರಾವಾಣಂ ಸ್ತೌತಿ, ಗ್ರಾವಸ್ತುತ್.

ಕ್ವಿಪ್ ಪಿತ್ತಾದುದರಿಂದ ' ಹ್ರಸ್ವಸ್ಯ ಪಿತಿ ಕೃತಿ ತುಕ್ ' ಸೂತ್ರದಿಂದ ಸ್ತುವಿಗೆ ತುಗಾಗಮ ಬಂದಿದೆ.

ದೃಶಿಗ್ರಹಣವು ಕಾರ್ಯಾಂತರವನ್ನು ಬೋಧಿಸುತ್ತದೆಂದು ಹೇಳಿದುದನ್ನೇ ' ಕ್ವಿಪ್ವಚಿ—'ವಾರ್ತಿಕವು ತಿಳಿಸುತ್ತದೆ. ವಾರ್ತಿಕಾರ್ಥ—ವಚಿ, ಪ್ರಚ್ಛ, ಆಯತಸ್ತು, ಕಟಪ್ರು, ಜು, ಶ್ರಿ ಇವುಗಳಿಗ ಕ್ವಿಪ್ ಪ್ರತ್ಯಯ ಬರುತ್ತದೆ; ಆಗ ದೀರ್ಘವೂ, ಸಂಪ್ರಸಾರಣಾಭಾವವೂ ಬರುತ್ತವೆ. ವಕ್ತೀತಿ ವಾಕ್. ವಚ—ಪರಿಭಾಷಣೇ. ಧಾತು. ಕ್ವಿಪ್. ದೀರ್ಘ. ವಾಚ್ ಶಬ್ದ. ' ಚೋಃ ಕುಃ ' ಸೂತ್ರದಿಂದ ಸುವಿನಲ್ಲಿ ಕುತ್ವ. ವಾಕ್. ಪ್ರಚ್ಛ—ಜ್ಞೀಪ್ಸಾಯಾಂ, ವಾಚಿ. ಧಾತು. ಇದಕ್ಕೆ ಕ್ವಿಪ್ ಬಂದಾಗ ಪ್ರಚ್ಛ್ + ಕ್ವಿಪ್ ಎಂದಿರುವಾಗ ' ಗ್ರಹಿಜ್ಯಾ—'ಸೂತ್ರದಿಂದ ಸಂಪ್ರಸಾರಣ ಬಂದರೆ ನಿಷೇಧ. ಪ್ರಚ್ಛ್. ದೀರ್ಘ. ಪ್ರಾಚ್ಛ್ ಎಂದಿರುವಾಗ ಶಾದೇಶ ಹೇಳುತ್ತಾನೆ.

ಶಕಾರ ಊಠಾದೇಶ ಹೇಳುವ ಸೂತ್ರ.

೮೪೬. ಚ್ಛ್ವೋಃ ಶೂಡನುನಾಸಿಕೇ ಚ || ೬.೪-೧೯ ||

ಸತುಕ್ಕಸ್ಯ ಛಸ್ಯ ವಸ್ಯ ಚ ಕ್ರಮಾತ್ ಶ್ ಊಠ್ ಇತ್ಯಾದೇಶೌ ಸ್ತೋಽನುನಾಸಿಕೇ ಕ್ವೌ ಝಲಾದೌ ಚ ಕ್ಙಿತಿ । ಪೃಚ್ಛತೀತಿ ಪ್ರಾಟ್ । ಆಯತಂ ಸ್ತೌತೀತಿ ಆಯತಸ್ತೂಃ । ಕಟಂ ಪ್ರವತೇ ಕಟಪ್ರೂಃ । ಜೂರುಕ್ತಃ। ಶ್ರಯತಿ ಹರಿಂ ಶ್ರೀಃ ||

ಚ್ಛ್ವೋಃ, ಶೂಠ್, ಅನುನಾಸಿಕೇ, ಚ || ನಾಲ್ಕು ಪದಗಳುಳ್ಳ ಸೂತ್ರ. ಶ್ ಚ ಊಠ್ ಚ ತಯೋಃ ಸಮಾಹಾರಃ ಶೂಠ್ || ' ಕ್ವಿಝಲೋಃ ಕ್ಙಿತಿ ' ಅನುವೃತ್ತಿ. ಸೂತ್ರಾರ್ಥ—ತುಕ್ ಸಹಿತವಾದ ಛಕಾರಕ್ಕೂ ವಕಾರಕ್ಕೂ ಕ್ರಮವಾಗಿ ಶ್, ಊಠ್ ಆದೇಶಗಳು ಅನುನಾಸಿಕಪರದಲ್ಲಿರುವಾಗಲೂ, ಕ್ವಿಪ್ ಪರದಲ್ಲಿರುವಾಗಲೂ, ಝಲಾದಿಯಾದ ಕಿತ್, ಙಿತ್ ಪ್ರತ್ಯಯ ಪರದಲ್ಲಿರುವಾಗಲೂ ಬರುತ್ತವೆ. ತ್‌ಛ್ ಎಂದಿರುವಾಗ ಶ್ಚುತ್ವದಿಂದ ತಕಾರಕ್ಕೆ ಚಕಾರ ಬಂದಿದೆ. ಪ್ರಾಚ್ಛ್ ಎಂಬಲ್ಲಿ ಕ್ವಿಪ್ ಪರವಾದುದರಿಂದ ತುಕ್ ಸಹಿತ ಛಕಾರಕ್ಕೆ ಶ್ ಆದೇಶ ಬಂದರೆ ಪ್ರಾಶ್ ಎಂದಾಗುತ್ತದೆ. ಸು ಪರವಾದಾಗ ' ವ್ರಶ್ಚಭ್ರಸ್ಜ—'ಸೂತ್ರದಿಂದ 'ಶಕಾರಕ್ಕೆ ಷಕಾರ. ಪ್ರಾಷ್. ' ಝಲಾಂ ಜಶೋನ್ತೇ ' ಪ್ರಾಡ್. ' ವಾವಸಾನೇ ' ಪ್ರಾಟ್. ಆಯತಂ ಸ್ತೌತಿ. ಆಯತಸ್ತೂಃ | ಆಯತಪದ ಉಪಪದವಾಗಿರುವಾಗ ಷ್ಟುಞ್ ಧಾತುವಿಗೆ ಕ್ವಿಪ್. ದೀರ್ಘ. ಕಟಂ ಪ್ರವತೇ, ಕಟಪ್ರೂಃ || ಪ್ರುಙ್—ಗತೌ. ಧಾತು. ಕ್ವಿಪ್ ದೀರ್ಘ ಬಂದಿದೆ. ಚಾಪೆ ಮಾಡುವವನು. ಜು ಧಾತುವಿಗೆ ಕ್ವಿಪ್ ದೀರ್ಘ ಹಿಂದೆ ಹೇಳಿದೆ. ಶ್ರಿಞ್—ಸೇವಾಯಾಂ. ಧಾತು. ಕ್ವಿಪ್, ದೀರ್ಘ. ಶ್ರೀಃ—ಹರಿಯನ್ನು ಹೊಂದುವವಳು.

ಹೀಗೆ ದೃಶ್ಯತೆ ಎಂದುದರಿಂದ ಧಾತುಗಳಿಗೆ ಕ್ವಿಪ್ ಬಂದಾಗ ವಿಶೇಷಕಾರ್ಯಗಳು ಬರುತ್ತವೆ.

ದಾಪಾದಿಧಾತುಗಳಿಗೆ ಷ್ಟ್ರನ್ ಪ್ರತ್ಯಯ ಹೇಳುವ ಸೂತ್ರ.

೮೪೭. ದಾಮ್ನೀಶಸಯುಯುಜಸ್ತುತುದಸಿಸಿಚಮಿಹಪತದಶನಹಃ ಕರಣೇ ||೩-೨-೧೮೨ ||

ದಾಬಾದೇಃ ಷ್ಟ್ರನ್ ಸ್ಯಾತ್ ಕರಣೇಽರ್ಥೇ । ದಾತ್ಯನೇನ ದಾತ್ರಮ್ । ನೇತ್ರಮ್ ||

ದ್ವಿಪದ ಸೂತ್ರ. ಹಿಂದಿನ ಸೂತ್ರದಿಂದ ಷ್ಟ್ರನ್ ಅನುವೃತ್ತಿ. ದಾಪ್, ನೀ, ಶಸ, ಯು, ಯುಜ, ಸ್ತು, ತುದ, ಸಿ, ಸಿಚ, ಮಿಹ, ಪತ, ದಶ, ನಹ—ಈ ಹದಿಮೂರು ಧಾತುಗಳಿಗೆ ಕರಣಾರ್ಥದಲ್ಲಿ ಷ್ಟ್ರನ್ ಪ್ರತ್ಯಯ ಬರುತ್ತದೆ. ಷ್ಟ್ರನಿನಲ್ಲಿ 'ಷಃ ಪ್ರತ್ಯಯಸ್ಯ' ಸೂತ್ರದಿಂದ ಷಕಾರ ಇತ್. ಅದು ಲೋಪವಾದರೆ ಅದನ್ನು ನಿಮಿತ್ತೀ ಕರಿಸಿ ಬಂದ ಟಕಾರವೂ ಹೋಗಿ ತ್ರ ಉಳಿಯುತ್ತದೆ. 'ಹಲಂತ್ಯಮ್' ಸೂತ್ರದಿಂದ ನಕಾರ ಇತ್. ದಾಪ್—ಲವನೇ. ಧಾತು. ದಾತ್ಯನೇನ ಇತಿ ದಾತ್ರಮ್ (ಕುಡುಗೋಲು). ತ್ರ ಬಂದಾಗ ಕಾರ್ಯವಿಶೇಷವೇನೂ ಇಲ್ಲ. ಅನಿಟ್ ಧಾತುವಾದುದರಿಂದ ಇಡಾಗಮ ಬರುವುದಿಲ್ಲ. ಣೀಞ್—ಪ್ರಾಪಣೇ. ನೀ+ತ್ರ ಎಂದಿರುವಾಗ 'ಸಾರ್ವಧಾತುಕಾರ್ಧಧಾತುಕಯೋಃ', ಗುಣ. ನೇತ್ರಮ್. ಶಸು—ಹಿಂಸಾಯಾಮ್. ಇದಕ್ಕೆ ಷ್ಟ್ರನ್ ಬಂದಾಗ ಇಡಾಗಮ ಪ್ರಾಪ್ತವಾದರೆ ನಿಷೇಧ ಹೇಳುತ್ತಾನೆ.

ತಿ, ತು ಮುಂತಾದ ಕೃತ್ತಿಗೆ ಇಡಾಗಮನಿಷೇಧ ಹೇಳುವ ಸೂತ್ರ.

೮೪೮. ತಿತುತ್ರತಥಸಿಸುಸರಕಸೇಷು ಚ || ೭-೨-೯ ||

ಏಷಾಂ ದಶಾನಾಂ ಕೃತ್‌ಪ್ರತ್ಯಯಾನಾಮಿಣ್ ನ । ಶಸ್ತ್ರಮ್ । ಯೋತ್ರಮ್ । ಯೋಕ್ತ್ರಮ್ । ಸ್ತೋತ್ರಮ್ । ತೋತ್ರಮ್ । ಸೇತ್ರಮ್ । ಸೇಕ್ತ್ರಮ್ । ಮೇಢ್ರಮ್ । ಪತ್ರಮ್ । ದಂಷ್ಟ್ರಾ । ನದ್ಧ್ರೀ ।

ದ್ವಿಪದ ಸೂತ್ರ. 'ನೇಡ್ವಶಿ ಕೃತಿ' ಹಿಂದಿನ ಸೂತ್ರ ಅನುವೃತ್ತವಾಗುತ್ತದೆ. ತಿ, ತು, ತ್ರ, ತ, ಥ, ಸಿ, ಸು, ಸರ, ಕ, ಸ ಎಂಬ ಹತ್ತು ಕೃತ್ ಪ್ರತ್ಯಯಗಳಿಗೆ ಇಡಾಗಮ ಬರುವುದಿಲ್ಲ. 'ಸ್ತ್ರಿಯಾಂ ಕ್ತಿನ್' ಎಂದು ಮುಂದೆ ಕ್ತಿನ್ ಹೇಳುತ್ತಾನೆ. ಅಲ್ಲಿ ಉಳಿಯುವ ತಿಯೂ, ಕ್ತಿಚ್ ಪ್ರತ್ಯಯದ ತಿಯೂ ಇಲ್ಲಿ ತಿ ಎಂಬುದರಿಂದ ಗೃಹೀತವಾಗುತ್ತದೆ. ದೀಪ್+ತಿ—ದೀಪ್ತಿಃ । ಇಡಾಗಮ ಬರುವುದಿಲ್ಲ. ತು ಎಂಬುದು 'ಸಿತನಿಗಮಿ—'ಎಂಬ ಉಣಾದಿಸೂತ್ರದಿಂದ ವಿಹಿತವಾದ ತುನ್‌ಪ್ರತ್ಯಯ. ಸೇತುಃ, ಸಕ್ತುಃ ಇತ್ಯಾದಿ. ತ್ರ ಎಂಬುದು ಹಿಂದೆ ಹೇಳಿದ 'ದಾಮ್ನೀಶಸ'—

ಸೂತ್ರದಿಂದ ವಿಹಿತವಾದ ಷ್ಟ್ರನ್ ಪ್ರತ್ಯಯ. ದಾತ್ರಂ, ಪಾತ್ರಮ್ ಇತ್ಯಾದಿ. ತ— 'ಹಸಿಮೃಗ್ರಿಣ್ ವಾ—'ಎಂಬ ಉಣಾದಿಸೂತ್ರದಿಂದ ವಿಹಿತವಾದ ತನ್ ಪ್ರತ್ಯಯ. ಹಸ್ತಃ ಇತ್ಯಾದಿ ಉದಾಹರಣೆ. ಥ—'ಹನಿಕುಷಿನೀರಮಿ—' ಇತ್ಯಾದಿ ಉಣಾದಿ ಸೂತ್ರದಿಂದ ವಿಹಿತವಾದ ಕ್ಥನ್ ಪ್ರತ್ಯಯ. ಹಥಃ, ಕುಷ್ಠಮ್, ಕಾಷ್ಠಮ್ ಇತ್ಯಾದಿ. ಸಿ—'ಪ್ಲುಷಿಕುಷಿಶುಷಿಭ್ಯಃ ಕ್ಸಿಃ' ಸೂತ್ರದಿಂದ ವಿಹಿತವಾದ ಕ್ಸಿ ಪ್ರತ್ಯಯ. ಕುಕ್ಷಿಃ ಉದಾಹರಣೆ. ಸು—'ಇಷೇಃ ಕ್ಸುಃ' ಸೂತ್ರದಿಂದ ವಿಹಿತವಾದ ಕ್ಸು ಪ್ರತ್ಯಯ. ಇಕ್ಷುಃ ಉದಾಹರಣೆ. ಸರ—'ಅಶೇಃ ಸರಃ' ಸೂತ್ರವಿಹಿತವಾದ ಸರ ಪ್ರತ್ಯಯ. ಅಕ್ಷರಮ್ ಉದಾಹರಣೆ. ಕ—'ಇಣ್ ಭೀಕಾ—'ಇತ್ಯಾದಿ 'ಉಣಾದಿಸೂತ್ರದಿಂದ ವಿಹಿತವಾದ ಕನ್ ಪ್ರತ್ಯಯ. ಶುಲ್ಕಃ ಉದಾಹರಣೆ. ಸ—'ವೃತೃವದಿಹನಿ—' ಸೂತ್ರವಿಹಿತವಾದ ಔಣಾದಿಕ ಸ ಪ್ರತ್ಯಯ. ವತ್ಸಃ ಉದಾಹರಣೆ. ಹೀಗೆ ಕೃತ್ ಸಂಜ್ಞೆಯಿರುವ ತಿ ಮುಂತಾದವುಗಳಿಗೆ ಇಡಾಗಮನಿಷೇಧ. ಪ್ರಕೃತ ಶಸ ಧಾತುವಿಗೆ ಷ್ಟ್ರನ್ ಬಂದಾಗ ಇವರಿಂದ ಇಡಾಗಮನಿಷೇಧ ಬಂದರೆ 'ಶಸ್ತ್ರಮ್' ಎಂದಾಗುತ್ತದೆ. 'ಯು ಮಿಶ್ರಣಾಮಿಶ್ರಣಯೋಃ' ಧಾತು. ಯು+ತ್ರ ಎಂದಿರುವಾಗ ಆರ್ಧಧಾತುಕ ನಿಮಿತ್ತವಾಗಿ ಗುಣ. ಯೋತ್ರಮ್. ಯುಜಿರ್—ಯೋಗೇ. ಧಾತು ಷ್ಟ್ರನ್ ಬಂದಾಗ ಯುಜ್+ತ್ರ ಎಂದಿರುವಾಗ ಲಘೂಪಧಗುಣ. 'ಚೋಃ ಕುಃ' ಕುತ್ವ. 'ಖರಿಚ' ಚರ್ತ್ವ. ಯೋಕ್ತ್ರಮ್—ನೊಗ. ಷ್ಟುಞ್—ಸ್ತುತೌ. ಧಾತು. ಗುಣ. ಸ್ತೋತ್ರಮ್. ತುದ—ವ್ಯಥನೇ. ಧಾತು ಲಘೂಪಧಗುಣ. ತೋದ್+ತ್ರ ಎಂದಿರುವಾಗ 'ಖರಿಚ' ಸೂತ್ರದಿಂದ ಚರ್ತ್ವ. ತೋತ್ರಮ್—ಚಾವಟಿ. ಷಿಞ್— ಬಂಧನೇ. ಧಾತು. ಗುಣ. ಸೇತ್ರಮ್. ಬಂಧನವೆಂದರ್ಥ. ಷಿಚಿರ್—ಕ್ಷರಣೇ. ಧಾತು. ಸಿಚ್+ತ್ರ ಎಂದಿರುವಾಗ ಲಘೂಪಧಗುಣ. 'ಚೋಃ ಕುಃ' ಕುತ್ವ. ಸೇಕ್ತ್ರಮ್—ನೀರುಹಾಕುವ ಪಾತ್ರ. ಮಿಹ—ಸೇಚನೇ (ಮೂತ್ರತ್ಯಾಗೇ). ಮಿಹ್ +ತ್ರ ಎಂದಿರುವಾಗ ಲಘೂಪಧಗುಣ. ಮೇಹ್+ತ್ರ. 'ಹೋಢಃ' ಮೇಢ್+ತ್ರ 'ಝಷಸ್ತಥೋರ್ಧೋಽಧಃ' ತಕಾರಕ್ಕೆ ಧತ್ವ. ಮೇಢ್+ಧ್ರ 'ಷ್ಟುನಾಷ್ಟುಃ' ಮೇಢ್+ಢ್ರ. 'ಢೋಢೇಲೋಪಃ' ಮೇಢ್ರಮ್—ಜನನೇಂದ್ರಿಯ. ಪತ್ಲೃ— ಪತನೇ. ಧಾತು. ಪತ್ತ್ರಮ್. ಇದಕ್ಕೆ ವಾಹನ, ಎಲೆ, ರೆಕ್ಕೆ, ಬಾಣ, ಪಕ್ಷಿ ಎಂಬ ಅರ್ಥಗಳಿವೆ. ದಂಶ—ದಂಶನೇ. ಧಾತು. ದಂಶ್+ತ್ರ. 'ವ್ರಶ್ಚಭ್ರಸ್ಜ—'ಸೂತ್ರ ದಿಂದ ಶಕಾರಕ್ಕೆ ಷತ್ವ. ದಂಷ್+ತ್ರ. 'ಷ್ಟುನಾಷ್ಟುಃ, ದಂಷ್ಟ್ರಾ. ಹಲ್ಲು. ಸ್ತ್ರೀಲಿಂಗ. ಣಹ—ಬಂಧನೇ. ಧಾತು. 'ಣೋನಃ, ಆದಿಗೆ ನತ್ವ. ನಹ್+ತ್ರ. 'ನಹೋಧಃ, ನಧ್ +ತ್ರ. 'ಝಷಸ್ತಥೋರ್ಧೋಽಧಃ, ತಕಾರಕ್ಕೆ ಧತ್ವ. ನಧ್+ಧ್ರ. 'ಝಲಾಂ ಜಶ್ ಝಶಿ 'ಆದಿ ಧಕಾರಕ್ಕೆ ದತ್ವ' ನದ್ಧ್ರೀ. ಸ್ತ್ರೀಲಿಂಗ. ಙೀಷ್ ಬಂದಿದೆ. ಚರ್ಮರೂಪ ಹಗ್ಗ.

ಇತ್ರ ಪ್ರತ್ಯಯ ವಿಧಾನಮಾಡುವ ಸೂತ್ರ.

**೮೪೯. ಅರ್ತಿಲೂಧೂಸೂಖನಸಹಚರ ಇತ್ರಃ ॥ ೩-೨-೧೮೪ ॥**

**ಅರಿತ್ರಮ್ । ಲವಿತ್ರಮ್ । ಧುವಿತ್ರಮ್ । ಸವಿತ್ರಮ್ । ಖನಿತ್ರಮ್ । ಸಹಿತ್ರಮ್ । ಚರಿತ್ರಮ್ ।**

ದ್ವಿಪದ ಸೂತ್ರ. ಅರ್ತಿ, ಲೂ, ಧೂ, ಸೂ, ಖನ, ಸಹ, ಚರ ಧಾತುಗಳಿಗೆ ಇತ್ರ ಪ್ರತ್ಯಯ ಬರುತ್ತದೆ. **ಋ**—ಗತೌ. ಧಾತು. ಋ + ಇತ್ರ ಎಂದಿರುವಾಗ ಗುಣ ( ಅರ್ ). ಅರಿತ್ರಮ್. **ಲೂಞ್** = ಛೇದನೇ. ಧಾತು. ಲೂ + ಇತ್ರ ಗುಣ, ಅವಾದೇಶ. ಲವಿತ್ರಮ್. **ಧೂಞ್** = ವಿಧೂನನೇ. ಧಾತು. ಧೂ + ಇತ್ರ ಕುಟಾದಿಯಲ್ಲಿ ಸೇರಿರುವುದರಿಂದ ಪ್ರತ್ಯಯ ಙಿತ್ತಾದುದರಿಂದ ಗುಣವಿಲ್ಲ. 'ಅಚಿಶ್ನು' 'ಧಾತುಭ್ರುವಾಂ—' ಸೂತ್ರದಿಂದ ಉವಙಾದೇಶ. ಧುವಿತ್ರಮ್. **ಷೂ**—ಪ್ರೇರಣೇ. ಧಾತು. 'ಧಾತ್ವಾದೇಃ ಷಃ ಸಃ' ಸೂ + ಇತ್ರ. ಗುಣ, ಅವಾದೇಶ. ಸವಿತ್ರಮ್ **ಖನು**—ಅವಧಾರಣೇ. ಧಾತು. ಖನಿತ್ರಮ್. ಷಹ—ಮರ್ಷಣೇ. ಧಾತು ಹಿಂದಿನಂತೆ ಸತ್ವ. ಸಹಿತ್ರಮ್. ಚರ ಗತಿಭಕ್ಷಣಯೋಃ । ಧಾತು. ಚರಿತ್ರಮ್

ಪೂಞ್ ಧಾತುವಿಗೆ ಇತ್ರ ಪ್ರತ್ಯಯ ವಿಧಿಸುವ ಸೂತ್ರ.

**೮೫೦. ಪುವಃ ಸಂಜ್ಞಾಯಾಮ್ ॥ ೩-೨-೧೮೫ ॥ ಪವಿತ್ರಮ್ ।**

ಇತಿ ಪೂರ್ವಕೃದನ್ತಮ್

ದ್ವಿಪದ ಸೂತ್ರ. ಪೂಞ್ ಧಾತುವಿಗೆ ಸಂಜ್ಞಾ ತೋರುವಾಗ ಇತ್ರ ಪ್ರತ್ಯಯ ಬರುತ್ತದೆ. ಪೂಯತೇ ಅನೇನ ಪವಿತ್ರಮ್. **ಪೂಞ್**—ಪವನೇ. ಧಾತು. ಗುಣ, ಅವಾದೇಶ. ಈ ಎಲ್ಲಾ ಪ್ರತ್ಯಯಗಳೂ ಕರಣಾರ್ಥದಲ್ಲಿಯೇ ಬಂದಿವೆ. ಈ ರೀತಿಯಾಗಿ ಪೂರ್ವಕೃದಂತಪ್ರಕ್ರಿಯೆ ಮುಗಿದಿದೆ.

## ೧೪. ಅಥೋಣಾದಯಃ

**ಕೃವಾಪಾಜಿಮಿಸ್ವದಿಸಾಧ್ಯಶೂಭ್ಯ ಉಣ್ ॥ ೧.॥**

**ಕರೋತೀತಿ ಕಾರುಃ । ವಾತೀತಿ ವಾಯುಃ । ಪಾಯುರ್ಗುದಮ್ । ಜಾಯುರೌಷಧಮ್ । ಮಾಯುಃ ಪಿತ್ತಮ್ । ಸ್ವಾದುಃ । ಸಾಧ್ನೋತಿ ಪರಕಾರ್ಯಮಿತಿ ಸಾಧುಃ । ಆಶು ಶೀಘ್ರಮ್ ॥**

ಶಾಕಟಾಯನರೆಂಬ ಮಹರ್ಷಿಗಳು ಉಣಾದಿಸೂತ್ರಗಳನ್ನು ರಚಿಸಿರುತ್ತಾರೆ. ಎಲ್ಲಾ ನಾಮಪದಗಳೂ ಧಾತುವಿನಿಂದಲೇ ನಿಷ್ಪನ್ನವಾಗಿವೆಯೆಂದು ಅವರ ಮತ.

ಉಣಾದಿಯಲ್ಲಿ ರೂಢಿಶಬ್ದಗಳೇ ಹೆಚ್ಚಾಗಿವೆ. ಅವಯವಾರ್ಥಗಳನ್ನು ಹೇಳಲಾಗುವುದಿಲ್ಲ. 'ಕೃವಾಪಾ—' ಎಂಬುದು ಮೊದಲನೆಯ ಸೂತ್ರ. **ಸೂತ್ರಾರ್ಥ**—ಕೃ, ವಾ, ಪಾ, ಜಿ, ಮಿ, ಸ್ವದಿ, ಸಾಧಿ, ಅಶೂ ಧಾತುಗಳಿಗೆ ಉಣ್ ಪ್ರತ್ಯಯ ಬರುತ್ತದೆ. ಸಾಮಾನ್ಯವಾಗಿ ಉಣಾದಿಪ್ರತ್ಯಯಗಳು ಕರ್ತ್ರರ್ಥದಲ್ಲಿಯೇ ಬರುವುವೆಂದೂ, ವರ್ತಮಾನಕಾಲದಲ್ಲಿ ಎಂದೂ ತಿಳಿಯಬೇಕು. ಕರೋತೀತಿ ಕಾರುಃ || ಡುಕೃಞ್—ಕರಣೇ. ಧಾತು. ಕೃ+ಉ ಎಂದಿರುವಾಗ ಣಿತ್ತಾದುದರಿಂದ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ. ಕಾರುಃ || ವಾತೀತಿ ವಾಯುಃ || ವಾ—ಗತಿಗಂಧನಯೋಃ| ಧಾತು. ವಾ+ಉ ಎಂದಿರುವಾಗ 'ಆತೋ ಯುಕ್ ಚಿಣ್ಕೃತೋಃ' ಸೂತ್ರದಿಂದ ಯುಕಾಗಮ. ವಾಯುಃ || ಪಿಬತಿ ಅನೇನ ತೈಲಾದಿಕಮ್ ಇತಿ ಪಾಯುಃ || ಗುದಮ್. ಪಾ=ಪಾನೇ (ಅಥವಾ ರಕ್ಷಣೇ) ಹಿಂದಿನಂತೆ ಯುಕ್. ಪಾಯುಃ | ಜಯತಿ=ಅಭಿಭವತಿ ರೋಗಾನ್ ಜಾಯುಃ | ಔಷಧ. ಜಿ=ಜಯೇ. ಧಾತು. ಜಿ+ಉ ಎಂದಿರುವಾಗ ಹಿಂದಿನಂತೆ ವೃದ್ಧಿ. ಆಯಾದೇಶ. ಜಾಯುಃ | ಮಿನೋತಿ =ಪ್ರಕ್ಷಿಪತಿ ದೇಹೇ ಊಷ್ಮಾಣಂ ಇತಿ ಮಾಯುಃ | ಪಿತ್ತಮ್. ಡುಮಿಞ್=ಪ್ರಕ್ಷೇಪಣೇ. ಧಾತು. ವೃದ್ಧಿ, ಆಯಾದೇಶ ಬಂದಿವೆ. ಷ್ವದ=ಆಸ್ವಾದನೇ. ಧಾತು ಉಣ್ ಬಂದಾಗ 'ಅತ ಉಪಧಾಯಾಃ' ಸೂತ್ರದಿಂದ ವೃದ್ಧಿ. ಸ್ವಾದುಃ | ಸಾಧ್ನೋತಿ ಪರಕಾರ್ಯಮಿತಿ ಸಾಧುಃ | **ಸಾಧ**=ಸಂಸಿದ್ಧೌ. ಧಾತು. ಆಶು ಶೀಘ್ರಮ್, **ಅಶೂ**=ವ್ಯಾಪ್ತೌ. ಧಾತು. ಉಪಧಾವೃದ್ಧಿ. ಹೀಗೆ ಒಂದು ಸೂತ್ರವನ್ನು ವ್ಯಾಖ್ಯಾನ ಮಾಡಿ ಉಣಾದಿವಿಷಯದಲ್ಲಿ ಪಾಣಿನಿಯ ಮತವನ್ನು ತೋರಿಸುತ್ತಾನೆ.

ಉಣಾದಿಗಳನ್ನು ವಿಧಿಸುವ ಸೂತ್ರ.

೮೫೧. ಉಣಾದಯೋ ಬಹುಲಮ್ || ೩-೩-೧ ||

ಏತೇ ವರ್ತಮಾನೇ ಸಂಜ್ಞಾಯಾಂ ಚ ಬಹುಲಂ ಸ್ಯುಃ | ಕೇಚಿದವಿಹಿತಾ ಅಪ್ಯೂಹ್ಯಾಃ ||

ಸಂಜ್ಞಾಸು ಧಾತುರೂಪಾಣಿ ಪ್ರತ್ಯಯಾಶ್ಚ ತತಃ ಪರೇ |
ಕಾರ್ಯಾದ್ವಿದ್ಯಾದನೂಬಂಧಮೇತಚ್ಛಾಸ್ತ್ರಮುಣಾದಿಷು ||

ಇತ್ಯುಣಾದಯಃ

ದ್ವಿಪದ ಸೂತ್ರ. 'ವರ್ತಮಾನೇ ಲಟ್' ಸೂತ್ರದಿಂದ 'ವರ್ತಮಾನೇ', 'ಪುವಃ ಸಂಜ್ಞಾಯಾಮ್' ಸೂತ್ರದಿಂದ 'ಸಂಜ್ಞಾಯಾಮ್' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಉಣಾದಿಪ್ರತ್ಯಯಗಳು ವರ್ತಮಾನಕಾಲದಲ್ಲಿ ಸಂಜ್ಞಾ ತೋರುವಾಗ ಬಹುಳವಾಗಿ (ವಿಕಲ್ಪ) ಬರುತ್ತವೆ. ಉಣಾದಿಗಳು ಪರಿಪೂರ್ಣವಾಗಿರದಿರುವುದರಿಂದ ಬಹುಲಪದವನ್ನು ಹೇಳಿರುತ್ತಾನೆ. ಬಹುಳಂ ಎಂದರೆ ನಾನಾರ್ಥ

ಕೊಡುತ್ತದೆಂದು ಹಿಂದೆ ಹೇಳಿದೆ. ಆದುದರಿಂದ ವಿಹಿತವಾಗದಿರುವ ಕೆಲವು ಪ್ರತ್ಯಯಗಳನ್ನು ನಾವು ಊಹಿಸಿ ತಿಳಿದುಕೊಳ್ಳಬೇಕು. ಊಹಿಸಿಕೊಳ್ಳುವುದು ಹೇಗೆಂಬುದನ್ನು ಶ್ಲೋಕಕಾರಿಕೆಯಿಂದ ವಿಶದಪಡಿಸುತ್ತಾನೆ. ಸಂಜ್ಞಾಸು—ಸಂಜ್ಞಾಶಬ್ದಗಳಲ್ಲಿ, ಧಾತುರೂಪಾಣಿ—ಆಯಾಯ ಧಾತುರೂಪಗಳನ್ನು ನಿಶ್ಚಯಿಸಿ ( ಅಧ್ಯಾಹಾರ ), ತತಃ ಪರೇ—ಆ ಧಾತುಗಳಮೇಲೆ, ಪ್ರತ್ಯಯಾಶ್ಚ—ಪ್ರತ್ಯಯಗಳನ್ನೂ ಊಹಿಸಿ ತಿಳಿದುಕೊಳ್ಳಬೇಕು. ಆ ಪ್ರತ್ಯಯಗಳಲ್ಲಿಯೂ, ಕಾರ್ಯಾತ್—ಗುಣ, ವೃದ್ಧಿ, ತದಭಾವ, ಸಂಪ್ರಸಾರಣಾದಿಕಾರ್ಯಗಳಿಂದ, ಅನುಬಂಧಂ—ಞಿತ್ತ್ವ, ಣಿತ್ತ್ವ, ಕಿತ್ತ್ವ, ಙಿತ್ತ್ವ ಮುಂತಾದ ಇತ್ ಸಂಜ್ಞೆಗಳನ್ನು, ವಿದ್ಯಾತ್—ತಿಳಿಯಬೇಕು. ಉಣಾದಿಷು—ಉಣಾದಿಪ್ರತ್ಯಯಗಳಲ್ಲಿ, ಏತತ್ ಶಾಸ್ತ್ರಮ್—ಇವುಗಳನ್ನೇ ತಿಳಿಯತಕ್ಕದ್ದು. ಉಣಾದಿಗಳು ಸಂಜ್ಞೆ ತೋರುವಾಗ ಬರುತ್ತವೆ. ಇಲ್ಲಿ ಹೇಳಿದ ಉಣಾದಿಪ್ರತ್ಯಯಗಳಿಂದ ಎಲ್ಲಾ ಸಂಜ್ಞಾಶಬ್ದಗಳು ನಿಷ್ಪನ್ನವಾಗಲಾರವು. ಆದುದರಿಂದ ಸಂಜ್ಞಾಶಬ್ದವನ್ನು ನೋಡಿ ನಾವು ಧಾತುಪ್ರತ್ಯಯಗಳನ್ನು ಊಹಿಸಿ ತಿಳಿದುಕೊಳ್ಳಬೇಕು. ಅಲ್ಲಿ ಬಂದ ಕಾರ್ಯದಿಂದ ಅದಕ್ಕನುಗುಣವಾದ ಇತ್‌ಸಂಜ್ಞೆಯುಳ್ಳ ಪ್ರತ್ಯಯಗಳನ್ನೂ ತಿಳಿಯಬೇಕು. ಋಫಿಡ್ಢಃ । ಇದೊಂದು ಸಂಜ್ಞಾಶಬ್ದ. ಇದು ಉಣಾದಿಯಲ್ಲಿ ಹೇಳಿಲ್ಲ. ನಾವು ಊಹಿಸಿ ತಿಳಿದುಕೊಳ್ಳಬೇಕು. ಋ ಧಾತುಪ್ರಕೃತಿ. ಫಿಡ್ಡ ಎಂಬುದು ಪ್ರತ್ಯಯ. ಋವಿಗೆ ಗುಣಾದಿಗಳು ಬಾರದಿರುವುದರಿಂದ ಪ್ರತ್ಯಯ ಕಿತ್ ಆಗಿದೆಯೆಂದು ತಿಳಿಯಬೇಕು. ಹೀಗೆ ಪ್ರತಿಯೊಂದು ಸಂಜ್ಞಾಶಬ್ದಗಳಲ್ಲಿಯೂ ಪ್ರಕೃತಿಪ್ರತ್ಯಯವಿವೇಕವನ್ನು ತಿಳಿದುಕೊಳ್ಳಬೇಕು.

## ೧೫. ಅಥೋತ್ತರಕೃದನ್ತಮ್

ತುಮುನ್, ಣ್ವುಲ್ ಪ್ರತ್ಯಯವಿಧಾಯಕ ಸೂತ್ರ.

೮೫೭. ತುಮುನ್ಣ್ವುಲೌ ಕ್ರಿಯಾಯಾಂ ಕ್ರಿಯಾರ್ಥಾಯಾಮ್ ||೩-೩-೧೦||

ಕ್ರಿಯಾರ್ಥಾಯಾಂ ಕ್ರಿಯಾಯಾಮುಪಪದೇ ಭವಿಷ್ಯತ್ಯರ್ಥೇ ಧಾತೋರೇತೌ ಸ್ತಃ । ಮಾನ್ತತ್ವಾದವ್ಯಯತ್ವಮ್ । ಕೃಷ್ಣಂ ದ್ರಷ್ಟುಂ ಯಾತಿ । ಕೃಷ್ಣಂ ದರ್ಶಕೋ ಯಾತಿ ॥

ತ್ರಿಪದ ಸೂತ್ರ. ಕ್ರಿಯಾ ಅರ್ಥಃ ಪ್ರಯೋಜನಂ ಯಸ್ಯಾ ಸಾ ಕ್ರಿಯಾರ್ಥಾ. ತಸ್ಯಾಮ್. 'ಭವಿಷ್ಯತಿ ಗಮ್ಯಾದಯಃ' ಸೂತ್ರದಿಂದ 'ಭವಿಷ್ಯತಿ' ಅನುವೃತ್ತಿ. ಸೂತ್ರಾರ್ಥ—ಕ್ರಿಯೆಯೇ ಪ್ರಯೋಜನವಾಗಿರುವ ಕ್ರಿಯೆಯು ಉಪಪದವಾಗಿರು

ವಾಗ ಭವಿಷ್ಯದರ್ಥದಲ್ಲಿ ಧಾತುವಿಗೆ ತುಮುನ್, ಣ್ವುಲ್ ಪ್ರತ್ಯಯಗಳು ಬರುತ್ತವೆ.. ತುಮುನ್ ಪ್ರತ್ಯಯ ಕೃತ್ತಾದರೂ 'ಅವ್ಯಯಕೃತೋ ಭಾವೇ' ಎಂಬ ವಾರ್ತಿಕದಿಂದ ಇದು ಭಾವಾರ್ಥದಲ್ಲಿ ಬರುತ್ತದೆಂದು ತಿಳಿಯಬೇಕು. ಣ್ವುಲ್ ಪ್ರತ್ಯಯ ಹಿಂದಿನಂತೆ ಕರ್ತ್ರರ್ಥದಲ್ಲಿ ಬರುತ್ತದೆ. ತುಮುನಿನಲ್ಲಿ ತುಮ್ ಉಳಿಯುತ್ತದೆ. ಆಗ ಮಾಂತ ವಾಗುವುದರಿಂದ 'ಕೃನ್ಮೇಜಂತಃ' ಸೂತ್ರದಿಂದ ಅವ್ಯಯಸಂಜ್ಞೆ ಬರುತ್ತದೆ. ಕೃಷ್ಣಂ ದ್ರಷ್ಟುಂ ಯಾತಿ ॥ ಕೃಷ್ಣನನ್ನು ನೋಡಲು ಹೋಗುತ್ತಾನೆ. ಇಲ್ಲಿ ಹೋಗುವುದಕ್ಕೆ ಫಲ ನೋಡುವುದು. ದರ್ಶನಕ್ರಿಯೆಯೇ ಪ್ರಯೋಜನವಾಗಿರುವ ಕ್ರಿಯಾ ಗಮನ ಕ್ರಿಯಾ. ಇದನ್ನು ಹೇಳುವ 'ಯಾತಿ' ಕ್ರಿಯಾಪದವು ಉಪಪದವಾಗಿರುವುದರಿಂದ ದೃಶ್ ಧಾತುವಿಗೆ ತುಮುನ್. ದೃಶ್ + ತುಮ್ ಎಂದಿರುವಾಗ 'ಸೃಜಿದೃಶೋರ್ಝಲ್ಯಮಕಿತಿ' ಸೂತ್ರದಿಂದ ಧಾತುವಿಗೆ ಅಮಾಗಮ. ಯಣ್. ದ್ರಶ್ + ತುಮ್. 'ವ್ರಶ್ಚಭ್ರಸ್ಜ—' ಸೂತ್ರದಿಂದ ಶಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ತಕಾರಕ್ಕೆ ಷ್ಟುತ್ವ. ದ್ರಷ್ಟುಮ್ ಎಂದಾಗುತ್ತದೆ. ಕೃಷ್ಣಂ ದರ್ಶಕೋ ಯಾತಿ ॥ ದೃಶಿಗೆ ಣ್ವುಲ್ ಪ್ರತ್ಯಯ. 'ಚುಟೂ' ಸೂತ್ರದಿಂದ ಣಕಾರವೂ 'ಹಲಂತ್ಯಮ್' ಸೂತ್ರದಿಂದ ಲಕಾರವೂ ಇತ್ತಾಗುತ್ತವೆ. 'ಯುವೋರನಾಕೌ' ಸೂತ್ರದಿಂದ ಅಕಾದೇಶ. ದೃಶ್ + ಅಕ ಎಂದಿರುವಾಗ 'ಪುಗನ್ತಲಘೂಪಧಸ್ಯ ಚ' ಸೂತ್ರದಿಂದ ಲಘೂಪಧಗುಣ. ದರ್ಶಕಃ । ಭವಿಷ್ಯದರ್ಥದಲ್ಲಿ ಅಕ ಬಂದುದರಿಂದ 'ಅಕೇನೋರ್ಭವಿಷ್ಯದಾಧಮರ್ಣ್ಯಯೋಃ' ಸೂತ್ರದಿಂದ ಷಷ್ಠೀನಿಷೇಧ ಬಂದಿದೆ.

ಕಾಲಾದಿಗಳಿರುವಾಗ ತುಮುನ್ ಹೇಳುವ ಸೂತ್ರ.

೮೫೩. ಕಾಲಸಮಯವೇಲಾಸು ತುಮುನ್ ॥೩-೩-೧೬೭॥

**ಕಾಲಾರ್ಥೇಷೂಪಪದೇಷು ತುಮುನ್ । ಕಾಲಃ ಸಮಯೋ ವೇಲಾ ವಾ ಭೋಕ್ತುಮ್ ॥**

ದ್ವಿಪದ ಸೂತ್ರ. ಸೂತ್ರಾರ್ಥ—ಕಾಲವೆಂಬರ್ಥವನ್ನು ಕೊಡುವ ಪದಗಳು ಉಪಪದವಾಗಿರುವಾಗ ಧಾತುವಿಗೆ ತುಮುನ್ ಪ್ರತ್ಯಯ ಬರುತ್ತದೆ ಕ್ರಿಯಾರ್ಥಕ ಪದ ಇಲ್ಲದಿರುವಾಗ ತುಮುನ್ ಹೇಳಲು ಈ ಸೂತ್ರ ಆರಬ್ಧವಾಗಿದೆ. ಕಾಲಾರ್ಥಕ ವೆಂದಮೇಲೆ ಸಮಯವೇಲಾಪದಗಳು ವ್ಯರ್ಥವಲ್ಲವೇ ? ಎಂದರೆ ಅವು ಕಾಲಾರ್ಥಕ ವೆನ್ನುವುದಕ್ಕೆ ಉಪಲಕ್ಷಕಗಳು. ಅವುಗಳಿಂದಲೇ ಅರ್ಥಗ್ರಹಣವೆಂದು ತಿಳಿಯಬೇಕು. ಕಾಲಃ, ಸಮಯಃ, ವೇಲಾ, ಅನೇಹಾ, ವಾ ಭೋಕ್ತುಮ್. ಭುಜ ಧಾತುವಿಗೆ ತುಮುನ್ ಬಂದಾಗ ಲಘೂಪದಗುಣ. ಭೋಜ್ + ತುಮ್. 'ಚೋಃ ಕುಃ' ಕುತ್ವ. ಭೋಗ್ + ತುಮ್. 'ಖರಿ ಚ' ಭೋಕ್ತುಮ್.

ಘಞ್ ವಿಧಾಯಕ ಸೂತ್ರ.

೭೫೪. ಭಾವೇ || ೩-೩-೧೮ ||

ಸಿದ್ಧಾವಸ್ಥಾಪನ್ನೇ ಧಾತ್ವರ್ಥೇ ವಾಚ್ಯೇ ಧಾತೋರ್ಘಞ್ || ಪಾಕಃ ||

ಏಕಪದ ಸೂತ್ರ. 'ಪದರುಜ—' ಸೂತ್ರದಿಂದ 'ಘಞ್' ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಸಿದ್ಧಾವಸ್ಥೆಯನ್ನು ತಿಳಿಸುವ ಧಾತ್ವರ್ಥ ತೋರುವಾಗ ಧಾತುವಿಗೆ ಘಞ್ ಪ್ರತ್ಯಯ ಬರುತ್ತದೆ. ಭಾವ, ಭಾವನಾ, ಕ್ರಿಯಾ—ಇವೆಲ್ಲಾ ಪರ್ಯಾಯಪದಗಳೆಂದು ಹಿಂದೆ ಹೇಳಿದೆ. ಎಲ್ಲಾ ಧಾತುಗಳಿಂದ ವಾಚ್ಯವಾದ ಕ್ರಿಯಾಸಾಮಾನ್ಯವೇ ಭಾವ. ಇದು ತಿಙನ್ತವಾಚ್ಯವಾಗಿಯೂ, ಲಿಂಗಸಂಖ್ಯಾನ್ವಯಕ್ಕೆ ಅಯೋಗ್ಯವಾಗಿಯೂ, ಸಾಧ್ಯವಸ್ಥಾಪನ್ನವಾಗಿಯೂ ಇರುತ್ತದೆ. ಸಾಧ್ಯಾವಸ್ಥಾಪನ್ನವೆಂದರೆ ಒಂದು ಕ್ರಿಯೆಗೆ ಕ್ರಿಯಾನ್ತರಾಕಾಂಕ್ಷಾ ಇಲ್ಲದಿರುವುದು. ಕೃತ್ತಿನಲ್ಲಿ ಮಾತ್ರ ಲಿಂಗಸಂಖ್ಯಾನ್ವಯಯೋಗ್ಯವಾಗಿಯೂ ಸಿದ್ಧಾವಸ್ಥಾಪನ್ನವಾಗಿಯೂ ಇರುತ್ತದೆ. ಕ್ರಿಯೆಗೆ ಕ್ರಿಯಾಂತರಾಕಾಂಕ್ಷೆ ಇರುವುದೇ ಸಿದ್ಧಾವಸ್ಥಾಪನ್ನತ್ವ. ಪಾಕಃ । ಪಚ್+ಘಞ್. ಘಞಿನಲ್ಲಿ ಅಕಾರ ಉಳಿಯುತ್ತದೆ. 'ಅತ ಉಪಧಾಯಾಃ' ಉಪಧಾವೃದ್ಧಿ. 'ಚಜೋಃ ಕು ಘಿಣ್ಯತೋಃ' ಸೂತ್ರದಿಂದ ಚಕಾರಕ್ಕೆ ಕುತ್ವ. ಪಾಕಃ ।

ಕಾರಕಾರ್ಥದಲ್ಲಿ ಘಞ್ ವಿಧಾಯಕ ಸೂತ್ರ.

೭೫೫. ಅಕರ್ತರಿ ಚ ಕಾರಕೇ ಸಂಜ್ಞಾಯಾಮ್ ||೩-೩-೧೯ ||

ಕರ್ತೃಭಿನ್ನೇ ಕಾರಕೇ ಘಞ್ ಸ್ಯಾತ್ ||

ನಾಲ್ಕು ಪದಗಳುಳ್ಳ ಸೂತ್ರ. **ಸೂತ್ರಾರ್ಥ**—ಕರ್ತೃಭಿನ್ನವಾದ ಕಾರಕಾರ್ಥದಲ್ಲಿ ರೂಢ್ಯರ್ಥ ತೋರುವಾಗ ಧಾತುವಿಗೆ ಘಞ್ ಬರುತ್ತದೆ. ರಞ್ಜ್—ರಾಗೇ. ಧಾತು. ರಜ್ಯತೇ ಅನೇನ ಎಂದು ಕರಣಾರ್ಥವಿವಕ್ಷಾ ಮಾಡಿದಾಗ ಅದಕ್ಕೆ ಘಞ್ ಬಂದರೆ ರಞ್ಜ್+ಅ ಎಂದಿರುವಾಗ ನಲೋಪ ಹೇಳುತ್ತಾನೆ.

ರಞ್ಜಿನ ನಲೋಪ ಹೇಳುವ ಸೂತ್ರ.

೭೫೬. ಘಞಿ ಚ ಭಾವಕರಣಯೋಃ || ೬-೪-೨೭ ||

ರಞ್ಜೇರ್ನಲೋಪಃ ಸ್ಯಾತ್ । ರಾಗಃ । ಅನಯೋಃ ಕಿಮ್ ರಜ್ಯತ್ಯಸ್ಮಿನ್ನಿತಿ ರಙ್ಗಃ ||

ತ್ರಿಪದ ಸೂತ್ರ. ಭಾವಾರ್ಥದಲ್ಲಿಯೂ, ಕರಣಾರ್ಥದಲ್ಲಿಯೂ ಬಂದ ಘಞ್ ಪ್ರತ್ಯಯ ಪರದಲ್ಲಿರುವಾಗ ರಞ್ಜ್ ಧಾತುವಿನ ನಕಾರಕ್ಕೆ ಲೋಪಬರುತ್ತದೆ. ಜಕಾರ ಸಂಬಂಧದಿಂದ ನಕಾರಕ್ಕೆ ಞಕಾರ ಬಂದಿದೆ. ವಾಸ್ತವವಾಗಿರುವುದು ನಕಾರ ಈಗ

ಕರಣಾರ್ಥದಲ್ಲಿ ಘಞ್ ಬಂದುದರಿಂದ ನಲೋಪ ಬಂದರೆ ರಜ್+ಅ ಎಂದಾಗುತ್ತದೆ. 'ಅತ ಉಪಧಾಯಾಃ' ಉಪಧಾವೃದ್ಧಿ. 'ಚಜೋಃ ಕು ಘಿಣ್ಯತೋಃ' ಕುತ್ವ. ರಾಗಃ। ರಂಜನಮ್ ಎಂದು ಭಾವಾರ್ಥದಲ್ಲಿಯೂ ರಾಗಃ ಎಂದಾಗುತ್ತದೆ. ಭಾವ ಕರಣಾರ್ಥದಲ್ಲಿ ಘಞ್ ಬಂದಾಗ ಮಾತ್ರವೆಂದುಗೇಕೆ? ಅಧಿಕರಣಾದ್ಯರ್ಥದಲ್ಲಿ ಘಞ್ ಬಂದರೆ ಆಗ ಬರುವುದಿಲ್ಲ. ರಜ್ಯತ್ಯಸ್ಮಿನ್ನಿತಿ ರಂಗಃ। ಅಧಿಕರಣಾರ್ಥದಲ್ಲಿ ಘಞ್ ಬಂದುದರಿಂದ ಇಲ್ಲಿ ಲೋಪ ಬರಲಿಲ್ಲ. ರಂಗವೆಂದರೆ ನಾಟ್ಯಶಾಲೆ.

ಚಿಞ್ ಧಾತುವಿಗೆ ಘಞ್, ಕಕಾರಾದೇಶ ಹೇಳುವ ಸೂತ್ರ.

೭೫೭. ನಿವಾಸಚಿತಿಶರೀರೋಪಸಮಾಧಾನೇಷ್ವಾದೇಶ್ಚ ಕಃ ॥೩-೩-೪೧॥

**ಏಷು ಚಿನೋತೇರ್ಘಞ್ ಆದೇಶ್ಚ ಕಕಾರಃ। ಉಪಸಮಾಧಾನಂ ರಾಶೀಕರಣಮ್। ನಿಕಾಯಃ। ಕಾಯಃ। ಗೋಮಯನಿಕಾಯಃ॥**

ನಿವಾಸಚಿತಿಶರೀರೋಪಸಮಾಧಾನೇಷು, ಆದೇಃ, ಚ, ಕಃ ॥ನಾಲ್ಕು ಪದಗಳುಳ್ಳ ಸೂತ್ರ. ಸೂತ್ರಾರ್ಥ—ನಿವಾಸ, ಚಿತಿ. ಶರೀರ, ಉಪಸಮಾಧಾನಾರ್ಥ ತೋರುವಾಗ ಚಿಞ್ ಧಾತುವಿಗೆ ಘಞ್ ಪ್ರತ್ಯಯವೂ ಆದಿಯ ಚಕಾರಕ್ಕೆ ಕಕಾರಾದೇಶವೂ ಬರುತ್ತವೆ. ಉಪಸಮಾಧಾನವೆಂದರೆ ರಾಶಿಮಾಡುವುದು. ಇದು ಧಾತ್ವರ್ಥವಾಗುತ್ತದೆ. ನಿವಾಸಾದಿಗಳು ಪ್ರತ್ಯಯಾರ್ಥವಾದ ಕಾರಕಕ್ಕೆ ವಿಶೇಷಣಗಳು. ನಿವಾಸಾರ್ಥದಲ್ಲಿ, ನಿಕಾಯಃ। ನಿ ಉಪಸರ್ಗ. ಚಿ+ಅ ಎಂದಿರುವಾಗ ವೃದ್ಧಿ. ಆಯಾದೇಶ. ಚಕಾರಕ್ಕೆ ಕುತ್ವ. ಕಾಶೀ ನಿಕಾಯಃ। ಚಿತಿಯಲ್ಲಿ, ಆಕಾಯಮಗ್ನಿಂ ಚಿನ್ವೀತ. ಆಚೀಯತೇ ಇತಿ ಆಕಾಯಮ್. ಕರ್ಮಣಿಯಲ್ಲಿ ಘಞ್. ಶರೀರದಲ್ಲಿ, ಕಾಯಃ। ಚೀಯತೆ ಅಸ್ಮಿನ್ ಅಸ್ಥ್ಯಾದಿಕಮ್ ಇತ್ಯರ್ಥಃ॥ (ಮೂಳೆ ಮುಂತಾದವು ಇಲ್ಲಿ ಸೇರಿವೆ.) ರಾಶೀಕರಣದಲ್ಲಿ, ಗೋಮಯನಿಕಾಯಃ। ಸಗಣಿರಾಶಿ.

ಅಚ್ ಪ್ರತ್ಯಯವಿಧಾಯಕ ಸೂತ್ರ.

೭೫೮. ಏರಚ್ ॥೩-೩-೫೬॥

**ಇವರ್ಣಾನ್ತಾದಚ್। ಚಯಃ। ಜಯಃ॥**

ಏಃ, ಅಚ್ ॥ದ್ವಿಪದ ಸೂತ್ರ. ಸೂತ್ರಾರ್ಥ—ಭಾವಾರ್ಥದಲ್ಲಿ ಕರ್ತೃಭಿನ್ನ ಕಾರಕಾರ್ಥದಲ್ಲಿಯೂ ಇವರ್ಣಾನ್ತವಾದ ಧಾತುವಿಗೆ ಅಚ್ ಪ್ರತ್ಯಯ ಬರುತ್ತದೆ. ಚಿಞ್ ಧಾತು. ಚಿ+ಅ ಎಂದಿರುವಾಗ ಗುಣ, ಅಯಾದೇಶ. ಚಯಃ। ಸಮೂಹ, ಪ್ರಕಾರ ಇತ್ಯಾದ್ಯರ್ಥಗಳಿವೆ. ಇದು ಘಞಿಗೆ ಅಪವಾದ ಸೂತ್ರ.

ಅಪ್ ಪ್ರತ್ಯಯವಿಧಾಯಕ ಸೂತ್ರ.

೮೫೯. ಋದೋರಪ್ ||೩-೩-೫೭ ||

ಋವರ್ಣಾಂತಾದುವರ್ಣಾನ್ತಾಚ್ಚ ಅಪ್ ।ಕರಃ। ।ಗರಃ। ಯವಃ। ಲವಃ। ಸ್ತವಃ। ಪವಃ।

ವಾ || (ಘಞರ್ಥೇ ಕವಿಧಾನಮ್ ) ಪ್ರಸ್ಥಃ ।ವಿಘ್ನಃ ||

ಋದೋಃ, ಅಪ್ || ದ್ವಿಪದ ಸೂತ್ರ. ಋತ್ ಚ ಉಶ್ಚ ತಯೋಃ ಸಮಾಹಾರಃ ಋದುಃ। (ಸೌತ್ರ ಪುಲ್ಲಿಂಗ) ಪಂಚಮ್ಯರ್ಥದಲ್ಲಿ ಷಷ್ಠೀ ಬಂದಿದೆ. ಸೂತ್ರಾರ್ಥ—ಋಕಾರಾಂತವಾದ ಮತ್ತು ಉಕಾರಾಂತವಾದ ಧಾತುವಿಗೆ ಅಪ್ ಪ್ರತ್ಯಯ ಬರುತ್ತದೆ. ಭಾವೇ, 'ಅಕರ್ತರಿ ಕಾರಕೇ' ಪದಗಳು ಅನುವೃತ್ತವಾಗುತ್ತವೆ. ಕೄ=ವಿಕ್ಷೇಪೇ. ಧಾತು. ಕೄ+ಅ ಎಂದಿರುವಾಗ ಗುಣ. ಕರಃ। (ಬಲಿ, ಕೈ, ಕಿರಣ ಹೀಗೆ ನಾನಾರ್ಥಗಳಿವೆ.) ಗೄ=ನಿಗರಣೇ. ಇದಕ್ಕೂ ಗುಣ ಬಂದು ಗರಃ ಎಂದಾಗುತ್ತದೆ (ನುಂಗುವುದು). ಯು=ಮಿಶ್ರಣಾಮಿಶ್ರಣಯೋಃ। ಧಾತು. ಉಕಾರಾಂತವಾದುದರಿಂದ ಅಪ್. ಗುಣ, ಅವಾದೇಶ. ಯವಃ। (ಧಾನ್ಯ, ಸೇರಿರುವುದು). ಪೂಞ್=ಪವನೇ. ಧಾತು. ಪವಃ। (ಜರಡಿ, ಗಾಳಿ). ಲೂಞ್=ಛೇದನೇ. ಲವಃ। (ಕತ್ತರಿಸುವಿಕೆ). ಷ್ಟುಞ್=ಸ್ತುತೌ. ಸ್ತವಃ। (ಸ್ತೋತ್ರ). ವಾರ್ತಿಕಾರ್ಥ—ಘಞ್ ಪ್ರತ್ಯಯಾರ್ಥ ತೋರುವಾಗ ಕಪ್ರತ್ಯಯವೂ ಬರುತ್ತದೆ. ಕದಲ್ಲಿ 'ಲಶಕ್ವತದ್ಧಿತೇ' ಸೂತ್ರದಿಂದ ಕಕಾರ ಇತ್ತಾದರೆ ಅ ಉಳಿಯುತ್ತದೆ. ಪ್ರ ಉಪಸರ್ಗಪೂರ್ವಕ ಷ್ಠಾ—ಗತಿನಿವೃತ್ತೌ ಧಾತುವಿಗೆ ಕಪ್ರತ್ಯಯ. ಪ್ರಸ್ಥಾ+ಅ ಎಂದಿರುವಾಗ ಪ್ರತ್ಯಯ ಕಿತ್ತಾದುದರಿಂದ 'ಆತೋ ಲೋಪ ಇಟಿ ಚ' ಸೂತ್ರದಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರಸ್ಥಃ (೧ ಸೇರು). ವಿ ಉಪಸರ್ಗಪೂರ್ವಕ ಹನ್ ಧಾತುವಿಗೆ ಕ ಬಂದರೆ ಹನ್+ಅ ಎಂದಿರುವಾಗ 'ಗಮಹನಜನ—' (ಸೂ. ೫೦೪) ಸೂತ್ರದಿಂದ ಉಪಧಾಲೋಪ. ಹ್ನ್+ಅ. 'ಹೋಹನ್ತೇರ್ಞ್ಣಿನ್ನೇಷು' ಸೂತ್ರದಿಂದ ಹಕಾರಕ್ಕೆ ಕುತ್ವ. ಘ್ನ—ವಿಘ್ನಃ (ತೊಂದರೆ).

ಕ್ತ್ರಿ ಪ್ರತ್ಯಯವಿಧಾಯಕ ಸೂತ್ರ.

೮೬೦. ಡ್ವಿತಃ ಕ್ತ್ರಿಃ ||೩-೩-೮೮||

ಮಪ್ ವಿಧಿಸುವ ಸೂತ್ರ

೮೬೧. ಕ್ತ್ರೇರ್ಮಮ್ನಿತ್ಯಮ್ ||೪-೪-೨೦||

ಕ್ತ್ರಿಪ್ರತ್ಯಯಾನ್ತಾನ್ಮಪ್ ನಿರ್ವೃತ್ತೇಽರ್ಥೇ। ಪಾಕೇನ ನಿರ್ವೃತ್ತಂ ಪಕ್ತ್ರಿಮಮ್ ।ಡುವಪ್ ಉಪ್ತ್ರಿಮಮ್||

ದ್ವಿಪದ ಸೂತ್ರ. ಡು ಇತ್ ಯಸ್ಯ ಸಃ ಡ್ವಿತ್. ತಸ್ಮಾತ್. **ಸೂತ್ರಾರ್ಥ—** ಡು ಇತ್ತಾದ ಧಾತುವಿಗೆ ಕ್ತ್ರಿಪ್ರತ್ಯಯ ಬರುತ್ತದೆ. ಕ್ತ್ರಿಯಲ್ಲಿ 'ಲಶಕ್ವತದ್ಧಿತೇ' ಸೂತ್ರದಿಂದ ಕಕಾರ ಇತ್ತಾಗಿ ಲೋಪವಾದರೆ ತ್ರಿ ಉಳಿಯುತ್ತದೆ. **ಡುಪಚಿಷ್**= ಪಾಕೇ. ಧಾತು. ಇಲ್ಲಿ ಡು ಇತ್ತಾಗಿದೆ. ಪಚ್+ತ್ರಿ ಎಂದಿರುವಾಗ 'ಚೋಃ ಕುಃ' ಸೂತ್ರದಿಂದ ಚಕಾರಕ್ಕೆ ಕುತ್ವ. ಪಕ್+ತ್ರಿ ಎಂದಿರುವಾಗ ಅದರಮೇಲೆ ಮಪ್ ಹೇಳುತ್ತಾನೆ.

ಕ್ತ್ರೇಃ, ಮಪ್, ನಿತ್ಯಮ್|| ತ್ರಿಪದಸೂತ್ರ. ಕ್ತ್ರಿಪ್ರತ್ಯಯವಾದುದರಿಂದ ತದಂತ ತೆಗೆದುಕೊಳ್ಳಬೇಕು. 'ನಿರ್ವೃತ್ತೇಽಕ್ಷದ್ಯೂತಾದಿಭ್ಯಃ' ಸೂತ್ರದಿಂದ 'ನಿರ್ವೃತ್ತೇ' ಅನುವೃತ್ತಿ. **ಸೂತ್ರಾರ್ಥ**—ಕ್ತ್ರಿಪ್ರತ್ಯಯಾಂತವಾದ ಶಬ್ದದ ಮೇಲೆ ನಿರ್ವೃತ್ತ ಎಂಬರ್ಥ ತೋರುವಾಗ ಮಪ್ ಪ್ರತ್ಯಯ ಬರುತ್ತದೆ. ಪ್ರಕೃತ ಕ್ತ್ರಿಪ್ರತ್ಯಯಾಂತ ವಾದ ಶಬ್ದ ಪಕ್ತ್ರಿ. ಪಾಕೇನ ನಿರ್ವೃತ್ತಂ ಎಂಬರ್ಥ ತೋರುತ್ತಿದೆ. ಮಪ್ ಬಂದರೆ ಪಕ್ತ್ರಿಮ ಎಂದಾಗುತ್ತದೆ. ಪ್ರಥಮಾದಲ್ಲಿ ಪಕ್ತ್ರಿಮಮ್ ರೂಪ. **ಡುವಪ್**=ಬೀಜ ಸಂತಾನೇ. ಧಾತು. ವಾಪೇನ ನಿರ್ವೃತ್ತಮ್ ಎಂಬರ್ಥ ತೋರುವಾಗ ಕ್ತ್ರಿ ಬಂದು ಮಪ್ ಬಂದರೆ ಉಪ್ತ್ರಿಮಮ್ ಎಂದಾಗುತ್ತದೆ.

ಅಥುಚ್ ಪ್ರತ್ಯಯವಿಧಾಯಕ ಸೂತ್ರ.

**೮೬೨. ಟ್ವಿತೋಽಥುಚ್ || ೩-೩-೮೯ ||**

**ಟುವೇಪೃ=ಕಂಪನೇ । ವೇಪಥುಃ ||**

ಟ್ವಿತಃ, ಅಥುಚ್ || ದ್ವಿಪದ ಸೂತ್ರ. ಟು ಇತ್ ಯಸ್ಯ ಸಃ ಟ್ವಿತ್. ತಸ್ಮಾತ್. **ಸೂತ್ರಾರ್ಥ**—ಟು ಇತ್ತಾದ ಧಾತುವಿಗೆ ಅಥುಚ್ ಪ್ರತ್ಯಯ ಬರುತ್ತದೆ. **ಟುವೇಪೃ** ಧಾತು. ಟು ಇತ್. ವೇಪ್+ಅಥು=ವೇಪಥುಃ ( ನಡುಕ ).

ನಙ್ ಪ್ರತ್ಯಯವಿಧಾಯಕ ಸೂತ್ರ.

**೮೬೩. ಯಜಯಾಚಯತವಿಚ್ಛಪ್ರಚ್ಛರಕ್ಷೋ ನಙ್ || ೩-೩-೯೦ ||**

**ಯಜ್ಞಃ । ಯಾಚ್ಞಾ । ಯತ್ನಃ । ವಿಶ್ನಃ । ಪ್ರಶ್ನಃ । ರಕ್ಷ್ಣಃ ||**

ದ್ವಿಪದ ಸೂತ್ರ. ಯಜ, ಯಾಚ, ಯತ, ವಿಚ್ಛ, ಪ್ರಚ್ಛ, ರಕ್ಷ ಧಾತುಗಳಿಗೆ ನಙ್ ಪ್ರತ್ಯಯ ಬರುತ್ತದೆ. ಯಜ ಧಾತು. ( ದೇವಪೂಜಾದ್ಯರ್ಥ ) ಯಜ್+ನ ಎಂದಿರುವಾಗ ನಕಾರಕ್ಕೆ ಶ್ಚುತ್ವದಿಂದ ಞಕಾರ. ಜಞಗಳಿಗೆ ಜ್ಞಕಾರ. ಯಜ್ಞಃ | **ಟುಯಾಚೃ**—ಯಾಚ್ಞಾಯಾಮ್. ಯಾಚ್+ನ. ಶ್ಚುತ್ವ. ನಿತ್ಯಸ್ತ್ರೀಲಿಂಗ. ಯಾಚ್ಞಾ. **ಯತೀ**—ಪ್ರಯತ್ನೇ. ಧಾತು. ಯತ್ನಃ | **ವಿಚ್ಛ**—ಗತೌ. ಧಾತು. ವಿಚ್ಛ್+ನ ಎಂದಿರುವಾಗ 'ಚ್ಛ್ವೋಃಶೂಡ್—' ಸೂತ್ರದಿಂದ ಚ್ಛಕ್ಕೆ

ಶಕಾರಾದೇಶ. ವಿಶ್ನಃ। 'ಶಾತ್' ಸೂತ್ರದಿಂದ ಶ್ಚುತ್ವನಿಷೇಧ ಇರುವುದರಿಂದ ನಕಾರಕ್ಕೆ ಞಕಾರ ಬರಲಿಲ್ಲ. ಪ್ರಚ್ಛ—ಜ್ಞೀಪ್ಸಾಯಾಂ, ಪಾಚಿ. ಧಾತು. ಹಿಂದಿನಂತೆ ಚ್ಛಕಾರಕ್ಕೆ ಶಕಾರಾದೇಶ ಪ್ರಶ್ನಃ। ರಕ್ಷ— ರಕ್ಷಣೇ. ಧಾತು. ರಕ್ಷ್+ನ—ರಕ್ಷ್ಣಃ। 'ರಷಾಭ್ಯಾಂ ಣೋ ನಃ—'ಸೂತ್ರದಿಂದ ನಕಾರಕ್ಕೆ ಣತ್ವ ಬಂದಿದೆ.

ನನ್ ಪ್ರತ್ಯಯವಿಧಾಯಕ ಸೂತ್ರ.

**೮೬೪. ಸ್ವಪೋ ನನ್ ॥ ೩-೩-೯೧ ॥ ಸ್ವಪ್ನಃ ॥**

ದ್ವಿಪದ ಸೂತ್ರ. ಸ್ವಪ್ ಧಾತುವಿಗೆ ನನ್ ಪ್ರತ್ಯಯ ಬರುತ್ತದೆ. ನನ್‌ನಲ್ಲಿ ಕೊನೆಯ ನಕಾರ ಇತ್. ಞಿಷ್ವಪ್—ಶಯೇ. ಧಾತು. ಆದಿಗೆ ಸತ್ವ. ಸ್ವಪ್+ನ—ಸ್ವಪ್ನಃ। ನಕಾರ ಸ್ವರಕ್ಕೋಸ್ಕರ ಇತ್ ಮಾಡಿರುತ್ತಾನೆ.

ಕಿ ಪ್ರತ್ಯಯವಿಧಾಯಕ ಸೂತ್ರ.

**೮೬೫. ಉಪಸರ್ಗೇ ಘೋಃ ಕಿಃ ॥ ೩-೩-೯೨ ॥ ಪ್ರಧಿಃ । ಉಪಧಿಃ ॥**

ತ್ರಿಪದ ಸೂತ್ರ. ಸೂತ್ರಾರ್ಥ—ಉಪಸರ್ಗ ಉಪಪದವಾಗಿರುವಾಗ ಘುಸಂಜ್ಞೆಯುಳ್ಳ ಧಾತುಗಳಿಗೆ ಕಿ ಪ್ರತ್ಯಯ ಬರುತ್ತದೆ. ದಾರೂಪಧಾರೂಪಧಾತುಗಳಿಗೆ ಘುಸಂಜ್ಞೆ ಹೇಳಿದೆ. 'ಭಾವೇ', 'ಅಕರ್ತರಿ ಕಾರಕೇ' ಅನುವೃತ್ತವಾಗುತ್ತವೆ. ಪ್ರ ಉಪಸರ್ಗ ಇರುವಾಗ ಧಾಞ್ ಧಾತುವಿಗೆ ಕಿಪ್ರತ್ಯಯ ಬಂದರೆ ಪ್ರಧಾ+ಕಿ ಎಂದಿರುವಾಗ ಪ್ರತ್ಯಯ ಕಿತ್ತಾದುದರಿಂದ 'ಆತೋ ಲೋಪ ಇಟಿ ಚ' ಸೂತ್ರದಿಂದ ಆಕಾರಲೋಪ. ಪ್ರಧ್+ಇ—ಪ್ರಧಿಃ ( ಚಕ್ರದ ಸುತ್ತು ). ಉಪ ಉಪಸರ್ಗವಿರುವಾಗ ಕಿ ಬಂದರೆ ಉಪಧಿಃ ಎಂದಾಗುತ್ತದೆ. ರಥಚಕ್ರ.

ಕ್ತಿನ್‌ವಿಧಾಯಕ ಸೂತ್ರ.

**೮೬೬. ಸ್ತ್ರಿಯಾಂ ಕ್ತಿನ್ ॥ ೩-೩-೯೪ ॥**

**ಸ್ತ್ರೀಲಿಂಗೇ ಭಾವೇ ಕ್ತಿನ್ ಸ್ಯಾತ್ । ಘಞೋಽಪವಾದಃ ॥ ಕೃತಿಃ ಸ್ತುತಿಃ।**

**ವಾ ॥ ( ಋಲ್ವಾದಿಭ್ಯಃ ಕ್ತಿನ್ನಿಷ್ಠಾವದ್ವಾಚ್ಯಃ ) ತೇನ ನತ್ವಮ್।**

**ಕೀರ್ಣಿಃ । ಲೂನಿಃ । ಧೂನಿಃ । ಪೂನಿಃ ।**

**ವಾ ॥ ಸಂಪದಾದಿಭ್ಯಃ ಕ್ವಿಪ್ । ) ಸಂಪತ್ । ವಿಪತ್ । ಆಪತ್ ।**

**ವಾ॥ ( ಕ್ತಿನ್ನಪೀಷ್ಯತೇ । ) ಸಂಪತ್ತಿಃ । ವಿಪತ್ತಿಃ । ಆಪತ್ತಿಃ**

ಸ್ತ್ರಿಯಾಂ, ಕ್ತಿನ್ ॥ ದ್ವಿಪದ ಸೂತ್ರ. ಸೂತ್ರಾರ್ಥ—ಸ್ತ್ರೀತ್ವವಿಶಿಷ್ಟ ಭಾವಾರ್ಥದಲ್ಲಿಯೂ, ಕರ್ತೃಭಿನ್ನ ಕಾರಕಾರ್ಥದಲ್ಲಿಯೂ ಕ್ತಿನ್ ಪ್ರತ್ಯಯ ಬರುತ್ತದೆ ಕ್ತಿನ್‌ನಲ್ಲಿ ತಿ ಉಳಿಯುತ್ತದೆ. ಭಾವಾರ್ಥದಲ್ಲಿ ಘಞ್ ಬರುತ್ತಿರುವಾಗ ಆರಂಭಿಸಿರು

ವುದರಿಂದ ಘಞಿಗೆ ಇದು ಅಪವಾದ. ಕೃಞ್ ಧಾತುವಿಗೆ ಕ್ತಿನ್ ಬಂದರೆ ಕೃತಿಃ ಎಂದಾಗುತ್ತದೆ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಷ್ಟುಞ್ ಧಾತುವಿಗೆ ಕ್ತಿನ್ ಬಂದರೆ ಸ್ತುತಿಃ ಎಂದಾಗುತ್ತದೆ. ವಾರ್ತಿಕಾರ್ಥ—ಋಕಾರಾಂತಧಾತುವಿನ ಪರದಲ್ಲಿರುವ, ಲೂಞ್ ಮುಂತಾದ ಧಾತುಗಳ ಪರದಲ್ಲಿರುವ ಕ್ತಿನ್ ಪ್ರತ್ಯಯವು ನಿಷ್ಠಾವಂತೆ (ಕ್ತ, ಕ್ತವತು) ಆಗುತ್ತದೆ. ಇದರಿಂದ 'ರದಾಭ್ಯಾಂ ನಿಷ್ಠಾತಃ—'ಸೂತ್ರದಲ್ಲಿ ಹೇಳಿದ ನತ್ವಾದಿಗಳು ಬರುತ್ತವೆ.

ಕೄ—ವಿಕ್ಷೇಪೇ. ಧಾತು. ಕೄ+ತಿ ಎಂದಿರುವಾಗ 'ಋತ ಇದ್ಧಾತೋಃ' ಇತ್ವ. ಕಿರ್+ತಿ. 'ಹಲಿ ಚ' ದೀರ್ಘ. ಕೀರ್+ತಿ. ನಿಷ್ಠಾದಂತೆ ಎಂದುದರಿಂದ ನತ್ವ. ಕೀರ್+ನಿ. 'ರಷಾಭ್ಯಾಂ ಣೋ ನಃ' ಣತ್ವ. ಕೀರ್ಣಿಃ। ಚೆಲ್ಲುವುದು. ಇದು ಋದಂತಕ್ಕೆ ಉದಾಹರಣೆ. ಲೂಞಾದಿಗಳಿಗೆ ಕ್ತಿನ್ ಬಂದಾಗ ನತ್ವ. ಲೂನಿಃ, ಧೂನಿಃ, ಪೂನಿಃ ಕ್ರಮವಾಗಿ ಕತ್ತರಿಸುವುದು, ನಡಗುವುದು, ಪವಿತ್ರತೆ ಅರ್ಥ.

(೨) ವಾರ್ತಿಕಾರ್ಥ—ಸಮ್ ಮುಂತಾದ ಉಪಸರ್ಗಪೂರ್ವಕಗಳಾದ ಪದಾದಿಧಾತುಗಳಿಗೆ ಕ್ವಿಪ್ ಪ್ರತ್ಯಯ ಬರುತ್ತದೆ. ಕ್ವಿಪಿನಲ್ಲಿ ಸರ್ವಲೋಪವೆಂದು ಹಿಂದೆ ಹೇಳಿದೆ. ಭಾವಾದ್ಯರ್ಥದಲ್ಲಿಯೇ ಎಂದು ತಿಳಿಯಬೇಕು. ಸಂಪತ್, ವಿಪತ್, ಆಪತ್. ಕ್ತಿನ್ನಿಗೆ ಅಪವಾದವಾಗಿ ಹೇಳಿದುದರಿಂದ ಕ್ತಿನ್ ಬಾರದಿರಲು ಪುನಃ ವಾರ್ತಿಕದಿಂದ ಕ್ತಿನ್ ಪ್ರತ್ಯಯವನ್ನೂ ಹೇಳುತ್ತಾನೆ. ಸಂಪದಾದಿಗಳಲ್ಲಿ ಕ್ತಿನ್ ಪ್ರತ್ಯಯವೂ ಬರುತ್ತದೆ. ಸಂಪದ್+ತಿ. 'ಖರಿ ಚ' ಸಂಪತಿಃ, ಹೀಗೇ ವಿಪತ್ತಿಃ, ಆಪತ್ತಿಃ ಎಂದಾಗುತ್ತದೆ.

ಊತ್ಯಾದಿಗಳನ್ನು ನಿಪಾತಮಾಡುವ ಸೂತ್ರ.

**೮೬೭. ಊತಿಯೂತಿಜೂತಿಸಾತಿಹೇತಿಕೀರ್ತಯಶ್ಚ ॥ ೩-೩-೯೭ ॥**
**ಏತೇ ನಿಪಾತ್ಯಂತೇ ॥**

ದ್ವಿಪದ ಸೂತ್ರ. ಊತಿ, ಯೂತಿ, ಜೂತಿ, ಸಾತಿ, ಹೇತಿ, ಕೀರ್ತಿ ಶಬ್ದಗಳು ಕಿನ್ನಂತವಾಗಿ ನಿಪಾತಿತವಾಗಿವೆ. ಪಾಣಿನಿಯೇ ಪ್ರಕ್ರಿಯೆಯನ್ನು ಸಿದ್ಧಪಡಿಸಿ ಹೇಳಿರುತ್ತಾನೆ. ಅವ ಧಾತುವಿಗೆ 'ಸ್ತ್ರಿಯಾಂ ಕ್ತಿನ್' ಸೂತ್ರದಿಂದ ಕ್ತಿನ್ ಬಂದು 'ಜ್ವರತ್ವರ—'ಸೂತ್ರದಿಂದ ಉಪಧಾವಕಾರಗಳಿಗೆ ಊಠಾದೇಶ ಬಂದ ಊತಿರೂಪವಾದರೂ ಉದಾತ್ತಸ್ವರಕ್ಕೋಸ್ಕರ ಇಲ್ಲಿ ನಿಪಾತ ಮಾಡಿರುತ್ತಾನೆ. ಹಿಂದಿನ ಸೂತ್ರದಿಂದ 'ಉದಾತ್ತಃ' ಅನುವೃತ್ತವಾಗಿ ಕ್ತಿನ್ ಉದಾತ್ತವಾಗಿ ಅಂತೋದಾತ್ತಪದವಾಗುತ್ತದೆ. ಇಲ್ಲವಾದರೆ ನಿತ್ತಾದುದರಿಂದ ಅದ್ಯುದಾತ್ತಸ್ವರ ಬರಬೇಕಾಗುತ್ತದೆ. ಯೂತಿ, ಜೂತಿಗಳಲ್ಲಿ ದೀರ್ಘ ನಿಪಾತದಿಂದ ಲಬ್ಧವಾಗುತ್ತದೆ. ಷೋನ್ತಃ ಕರ್ಮಣಿ. ಧಾತು. ಕಿನ್ನಂತವಾಗಿ ಸಾತಿ ಎಂದು ನಿಪಾತಿತವಾಗಿದೆ. ಇಲ್ಲಿ ಇತ್ವಾಭಾವ ನಿಪಾತದಿಂದ ಲಬ್ಧವಾಗುತ್ತದೆ. ಹನ್ ಅಥವಾ ಅಥವಾ ಹಿನು ಧಾತುವಿಗೆ ಕ್ತಿನ್ ಬಂದು

ಹೇತಿ ಎಂದು ನಿಪಾತಿತವಾಗಿದೆ. ಕ್ಯಾತ ಧಾತುವಿಗೆ ಕ್ತಿನ್ ಬಂದು ಕೀರ್ತಿ ಎಂದು ನಿಪಾತಿತವಾಗಿದೆ.

ಊಠ್ ವಿಧಾಯಕ ಸೂತ್ರ.

೮೬೮ ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ ॥೬-೪-೨೦॥

**ಏಷಾಮುಪಧಾವಕಾರಯೋರೂಠ್ ಅನುನಾಸಿಕೇ ಕ್ವೌ ಝಲಾದೌ ಕ್ಙಿತಿ ॥ ಅತಃ ಕ್ವಿಪ್ । ಜೂಃ, ತೂಃ, ಸ್ರೂಃ, ಊಃ, ಮೂಃ ॥**

ಜ್ವರತ್ವರಸ್ರಿವ್ಯವಿಮವಾಮ್, ಉಪಧಾಯಾಃ, ಚ ॥ ತ್ರಿಪದ ಸೂತ್ರ. ಜ್ವರಶ್ಚ, ತ್ವರಶ್ಚ, ಸ್ರಿವಿಶ್ಚ, ಅವಿಶ್ಚ, ಮವ್ ಚ, ಜ್ವರ....ಮವಃ । ತೇಷಾಮ್. 'ಚ್ಛ್ವೋಃ ಶೂಠ್—'ಸೂತ್ರದಿಂದ 'ವ್, ಊಠ್, ಅನುನಾಸಿಕೇ, ಚ' ಪದಗಳೂ, 'ಅನುನಾಸಿಕಸ್ಯ—'ಸೂತ್ರದಿಂದ 'ಕ್ವಿಝಲೋಃ ಕ್ಙಿತಿ' ಪದಗಳೂ ಅನುವೃತ್ತವಾಗುತ್ತವೆ. ಚಕಾರದಿಂದ ವಕಾರ ಸಮುಚ್ಚಿತವಾಗುತ್ತದೆ. **ಸೂತ್ರಾರ್ಥ**—ಜ್ವರ, ತ್ವರ, ಸ್ರಿವಿ, ಅವಿ, ಮವ್ ಧಾತುಗಳ ಉಪಧಾ ಮತ್ತು ವಕಾರಗಳಿಗೆ ಅನುನಾಸಿಕವಾಗಲೀ ಕ್ವಿಪ್ ಪ್ರತ್ಯಯವಾಗಲೀ ಝಲಾದಿಯಾದ ಕಿತ್‌ಙಿತ್ ಪ್ರತ್ಯಯವಾಗಲೀ ಪರದಲ್ಲಿರುವಾಗ ಊಠಾದೇಶ ಬರುತ್ತದೆ. ಜ್ವರ— ರೋಗೇ. ಧಾತು. ಕ್ವಿಪ್ ಬಂದಾಗ ಉಪಧಾ ವಕಾರಗಳಿಗೆ ಊಠ್ ಬಂದರೆ ಜೂಃ ಆಗುತ್ತದೆ. ( ರೋಗಿಷ್ಠ ). ಞಿತ್ವರಾ— ಸಂಭ್ರಮೇ. ಧಾತು. ಞಿ ಇತ್. ತೂಃ ( —ವೇಗಪಡಿಸುವವ ) । ಸ್ರಿವು—ಗತಿ ಶೋಷಣಯೋಃ । ಧಾತು. ಸ್ರೂಃ (—ಒಣಗಿಸುವವನು ಅಥವಾ ಹೋಗುವವನು) । **ಅವ**—ರಕ್ಷಣೇ. ಧಾತು. ಊಃ ( —ರಕ್ಷಿಸುವವನು ) । **ಮವ**—ಬಂಧನೇ ಧಾತು. ಮೂಃ ( —ಬಂಧಿಸುವವನು ) ।

ನಿಪಾತಿತವಾದ ಸೂತ್ರ.

**೮೬೯. ಇಚ್ಛಾ ॥ ೩-೩-೧೦೧ ॥ ಇಷೇರ್ನಿಪಾತೋಽಯಮ್ ॥**

ಏಕಪದ ಸೂತ್ರ. ಇಷು—ಇಚ್ಛಾಯಾಮ್. ಧಾತು. ಇದಕ್ಕೆ ಭಾವಾರ್ಥದಲ್ಲಿ ಶಪ್ರತ್ಯಯ, ಯಗಭಾವಗಳು ನಿಪಾತಿತವಾಗಿವೆ. ಇಷ್ + ( ಶ್ ) ಅ ಎಂದಿರುವಾಗ 'ಇಷುಗಮಿಯಮಾಂ ಛಃ' ಸೂತ್ರದಿಂದ ಛಾದೇಶ. 'ಸಾರ್ವಧಾತುಕೇ ಯಕ್' ಸೂತ್ರದಿಂದ ಯಕ್ ಬರಬೇಕಾದುದು ನಿಪಾತದಿಂದ ವಾರಿತವಾಗಿದೆ.

ಅ ಪ್ರತ್ಯಯವಿಧಾಯಕ ಸೂತ್ರ.

**೮೭೦. ಅ ಪ್ರತ್ಯಯಾತ್ ॥ ೩-೩-೧೦೨ ॥**

**ಪ್ರತ್ಯಯಾನ್ತೇಭ್ಯೋ ಧಾತುಭ್ಯಃ ಸ್ತ್ರಿಯಾಮಕಾರಃ ಪ್ರತ್ಯಯಃ ಸ್ಯಾತ್ । ಚಿಕೀರ್ಷಾ । ಪುತ್ರಕಾಮ್ಯಾ ॥**

ದ್ವಿಪದ ಸೂತ್ರ. ಅ ಎಂಬಲ್ಲಿ ಪ್ರಥಮಾ ಲುಪ್ತವಾಗಿದೆ 'ಭಾವೇ', 'ಅಕರ್ತರಿ ಕಾರಕೇ' ಅರ್ಥವಿಷ್ಟೇ ಇದೆ. 'ಸ್ತ್ರಿಯಾಂ ಕ್ತಿನ್' ಸೂತ್ರದಿಂದ 'ಸ್ತ್ರಿಯಾಂ' ಅನುವೃತ್ತವಾಗುತ್ತದೆ. ಸೂತ್ರಾರ್ಥ—ಪ್ರತ್ಯಯಾನ್ತವಾದ ಧಾತುವಿಗೆ ಸ್ತ್ರೀತ್ವ ತೋರುತ್ತಿರುವಾಗ ಅ ಎಂಬ ಪ್ರತ್ಯಯ ಬರುತ್ತದೆ. ಕೃಞ್ ಧಾತುವಿಗೆ ಸನ್ ಪ್ರತ್ಯಯ ಬಂದಾಗ ಚಿಕೀರ್ಷ ಎಂದಾಗುತ್ತದೆಂದು ಹಿಂದೆ ಹೇಳಿದೆ. ಚಿಕೀರ್ಷ ಎಂಬುದು ಪ್ರತ್ಯಯಾನ್ತಧಾತುವಾದುದರಿಂದ ಅದರ ಮೇಲೆ ಅ ಪ್ರತ್ಯಯ ಬಂದರೆ ಚಿಕೀರ್ಷ+ಅ ಎಂದಿರುವಾಗ 'ಅತೋ ಲೋಪಃ' ಸೂತ್ರದಿಂದ ಸನಿನ ಅಕಾರಕ್ಕೆ ಲೋಪ. ಚಿಕೀರ್ಷ. ಅದಂತವಾದುದರಿಂದ ಟಾಪ್. ಚಿಕೀರ್ಷಾ (=ಮಾಡಲು ಇಚ್ಛೆ.) ಪುತ್ರಕಾಮ್ಯ. ಕಾಮ್ಯಚ್ ಪ್ರತ್ಯಯಾನ್ತವಾದ ಧಾತು. ಅ ಬಂದರೆ ಪುತ್ರಕಾಮ್ಯಾ ಎಂದು ಹಿಂದಿನಂತೆ ಆಗುತ್ತದೆ. ಮಗನ ಬಯಕೆ ಎಂದರ್ಥ.

ಹಲಂತ ಧಾತುವಿಗೆ ಅ ವಿಧಾಯಕ ಸೂತ್ರ.

೮೭೧ ಗುರೋಶ್ಚ ಹಲಃ ||೩-೩-೧೦೩||

ಗುರುಮತೋ ಹಲನ್ತಾತ್ ಸ್ತ್ರಿಯಾಮಕಾರಃ ಪ್ರತ್ಯಯಃ ಸ್ಯಾತ್ । ಈಹಾ ||

ಗುರೋಃ ಚ, ಹಲಃ || ತ್ರಿಪದ ಸೂತ್ರ. 'ಧಾತೋಃ' ಅಧಿಕಾರ. ಹಲಃ ಅದಕ್ಕೆ ವಿಶೇಷಣವಾದುದರಿಂದ ತದನ್ತಲಾಭ. ಗುರುಪದದಿಂದ ಗುರುವುಳ್ಳದ್ದೆಂದು ತಿಳಿಯಬೇಕು. ಸೂತ್ರಾರ್ಥ—ಗುರುವುಳ್ಳ ಹಲನ್ತವಾದ ಧಾತುವಿಗೆ ಸ್ತ್ರೀತ್ವ ತೋರುವಾಗ ಅಕಾರರೂಪ ಪ್ರತ್ಯಯ ಬರುತ್ತದೆ. ಈಹ=ಚೇಷ್ಟಾಯಾಂ. ಧಾತು. ಈಕಾರರೂಪ ಗುರುವುಳ್ಳದ್ದಾಗಿ ಹಲಂತವಾಗಿದೆ. ಅ ಪ್ರತ್ಯಯ ಬಂದರೆ ಈಹಾ ಎಂದಾಗುತ್ತದೆ.

ಯುಚ್ ಪ್ರತ್ಯಯವಿಧಾಯಕ ಸೂತ್ರ.

೮೭೨. ಣ್ಯಾಸಶ್ರನ್ಥೋ ಯುಚ್ ||೩-೩-೧೦೭||

ಅಕಾರಸ್ಯಾಪವಾದಃ ।ಕಾರಣಾ। ಹಾರಣಾ ||

ದ್ವಿಪದ ಸೂತ್ರ. ಣ್ಯನ್ತವಾದ ಧಾತುಗಳಿಗೂ, ಆಸ, ಶ್ರನ್ಥ ಧಾತುಗಳಿಗೂ ಭಾವಾದ್ಯರ್ಥದಲ್ಲಿ ಯುಚ್ ಪ್ರತ್ಯಯ ಬರುತ್ತದೆ. 'ಗುರೋಶ್ಚ ಹಲಃ' ಸೂತ್ರದಿಂದ ಅ ಪ್ರಾಪ್ತವಾಗುವಾಗ ಹೇಳಿದುದರಿಂದ ಅದಕ್ಕೆ ಅಪವಾದ. ಕೃಞ್ ಧಾತುವಿಗೆ ಣಿಚ್ ಬಂದರೆ ಕಾರಿ ಎಂದಾಗುತ್ತದೆ. ಯುಚ್ ಬಂದರೆ 'ಯುವೋರನಾಕೌ' ಸೂತ್ರದಿಂದ ಅದಕ್ಕೆ ಅನಾದೇಶ. ಕಾರಿ+ಅನ. 'ಣೇರನಿಟಿ' ಣಿಲೋಪ. ಕಾರ್+ಅನ. 'ಅಟ್ ಕುಪ್ವಾಙ್—' ಸೂತ್ರದಿಂದ ಣತ್ವ. ಕಾರಣ. 'ಸ್ತ್ರಿಯಾಂ' ಅಧಿಕಾರವಿರುವುದರಿಂದ ಟಾಪ್. ಕಾರಣಾ. ಹೃಞ್=ಹರಣೇ, ಧಾತು. ಣಿಜನ್ತದ ಮೇಲೆ ಯುಚ್ ಬಂದರೆ ಹಿಂದಿನಂತೆ ಕಾರ್ಯ ಬಂದು ಹಾರಣಾ ಎಂದಾಗುತ್ತದೆ.

ಭಾವಾರ್ಥದಲ್ಲಿ ಕ್ತವಿಧಾಯಕ ಸೂತ್ರ.

**೮೭೩. ನಪುಂಸಕೇ ಭಾವೇ ಕ್ತಃ ||೩-೩-೧೧೪ ||**

ಭಾವಾರ್ಥದಲ್ಲಿ ಲ್ಯುಟ್ ವಿಧಾಯಕ ಸೂತ್ರ.

**೮೭೪. ಲ್ಯುಟ್ ಚ || ೩-೩-೧೧೫ || ಹಸಿತಮ್ | ಹಸನಮ್ ||**

ತ್ರಿಪದ ಸೂತ್ರ. **ಸೂತ್ರಾರ್ಥ**—(೧) ನಪುಂಸಕತ್ವವಿಶಿಷ್ಟವಾದ ಭಾವಾರ್ಥ ತೋರುವಾಗ ಕಾಲಸಾಮಾನ್ಯದಲ್ಲಿ ಧಾತುವಿಗೆ ಕ್ತ ಪ್ರತ್ಯಯ ಬರುತ್ತದೆ. (೨) ಹಾಗೆಯೇ ಲ್ಯುಟ್ ಪ್ರತ್ಯಯವೂ ಬರುತ್ತದೆ. ಅರ್ಥ ಒಂದೇ ಆದುದರಿಂದ ಎರಡು ಸೂತ್ರಗಳನ್ನೂ ಒಟ್ಟಿಗೆ ಹೇಳಿರುತ್ತಾನೆ. ಉತ್ತರಸೂತ್ರದಲ್ಲಿ ಲ್ಯುಟಿಗೆಮಾತ್ರ ಅನುವೃತ್ತಿ ತಿಳಿಸಲು ಬೇರೆ ಬೇರೆ ಸೂತ್ರ ಮಾಡಿರುತ್ತಾನೆ. ಹಸೇ=ಹಸನೇ. ಧಾತು. ಭಾವಾರ್ಥದಲ್ಲಿ ಕ್ತ ಬಂದರೆ ಅದಕ್ಕೆ ಇಡಾಗಮ. ಹಸಿತಮ್ (ನಗು). ಲ್ಯುಟ್ ಬಂದರೆ 'ಯುವೋರನಾಕೌ' ಸೂತ್ರದಿಂದ ಅನಾದೇಶ. ಹಸನಮ್.

ಘ ಪ್ರತ್ಯಯವಿಧಾಯಕ ಸೂತ್ರ.

**೮೭೫. ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ ||೩-೩-೧೧೮||**

ಘ ಪರವಾದಾಗ ಹ್ರಸ್ವವಿಧಾಯಕ ಸೂತ್ರ.

**೮೭೬. ಛಾದೇರ್ಘೇಽದ್ವ್ಯುಪಸರ್ಗಸ್ಯ ||೬-೪-೯೬||**

**ದ್ವಿಪ್ರಭೃತ್ಯುಪಸರ್ಗಹೀನಸ್ಯ ಛಾದೇರ್ಹ್ರಸ್ವೋ ಘೇ ಪರೇ | ದಂತಾಃ ಛಾದ್ಯನ್ತೇಽನೇನೇತಿ ದನ್ತಚ್ಛದಃ | ಆಕುರ್ವನ್ತ್ಯಸ್ಮಿನ್ನಿತ್ಯಾಕರಃ ||**

ನಾಲ್ಕು ಪದಗಳುಳ್ಳ ಸೂತ್ರ. 'ಕರಣಾಧಿಕರಣಯೋಶ್ಚ' ಅನುವೃತ್ತಿ. **ಸೂತ್ರಾರ್ಥ** — ಪುಂಸ್ತ್ವವಿಶಿಷ್ಟಸಂಜ್ಞಾ ತೋರುತ್ತಿರುವಾಗ ಕರಣ, ಅಧಿಕರಣ ಅರ್ಥದಲ್ಲಿ ಘಪ್ರತ್ಯಯ ಬರುತ್ತದೆ. ಘದಲ್ಲಿ ಅ ಉಳಿಯುತ್ತದೆ. ದನ್ತಾಃ ಛಾದ್ಯನ್ತೇ ಅನೇನ ಇತಿ ದಂತಚ್ಛದಃ ||ಇದರಿಂದ ಹಲ್ಲುಗಳು ಮುಚ್ಚಲ್ಪಡುತ್ತವೆ. ಕರಣಾರ್ಥದಲ್ಲಿ ಛಾದ ಧಾತುವಿಗೆ ಘಪ್ರತ್ಯಯ. ಛದ=ಅಪವಾರಣೇ. ಧಾತು. ಣಿಚ್. 'ಅತ ಉಪಧಾಯಾಃ' ವೃದ್ಧಿ. ಛಾದಿ. ಛಾದಿ+ಅ ಎಂದಿರುವಾಗ 'ಣೇರನಿಟಿ' ಣಿಲೋಪ. ಛಾದ್+ಅ ಎಂದಿರುವಾಗ 'ಛಾದೇಃ—' ಸೂತ್ರದಿಂದ ಹ್ರಸ್ವ ಹೇಳುತ್ತಾನೆ.

ಛಾದೇಃ, ಘೇ, ಅದ್ವ್ಯುಪಸರ್ಗಸ್ಯ ||ತ್ರಿಪದ ಸೂತ್ರ. ನ ವಿದ್ಯೇತೇ ದ್ವೌ ಉಪಸರ್ಗೌ ಯಸ್ಯ ಅದ್ವ್ಯುಪಸರ್ಗಃ | ತಸ್ಯ. 'ಖಚಿ ಹ್ರಸ್ವಃ' ಸೂತ್ರದಿಂದ 'ಹ್ರಸ್ವಃ', 'ಊದುಪಧಾಯಾಃ' ಸೂತ್ರದಿಂದ 'ಉಪಧಾಯಾಃ' ಅನುವೃತ್ತಿ. **ಸೂತ್ರಾರ್ಥ**—ಎರಡರಿಂದ ಹೆಚ್ಚಾದ ಉಪಸರ್ಗ ಇಲ್ಲದಿರುವ ಛಾದಿಯ ಉಪಧೆಗೆ

ಘಪರದಲ್ಲಿರುವಾಗ ಹ್ರಸ್ವ ಬರುತ್ತದೆ. ಛಾದ್ + ಅ ಎಂದಿರುವಾಗ ಉಪಸರ್ಗವೇ ಇಲ್ಲ. ಆದುದರಿಂದ ಹ್ರಸ್ವ ಬಂದರೆ ಛದಃ ಎಂದಾಗುತ್ತದೆ. ಸಮಾಸದಲ್ಲಿ ದನ್ತಚ್ಛದಃ । ಆಕುರ್ವನ್ತ್ಯಸ್ಮಿನ್ ಇತಿ ಆಕರಃ । ಆಙ್ ಒಂದು ಉಪಸರ್ಗವಿದೆ. ಇದರಿಂದ ಕೂಡಿದ ಕೃಞ್ ಧಾತುವಿಗೆ ಘ ಪ್ರತ್ಯಯ ಬಂದಾಗ ಗುಣ. ಆಕರಃ । ( ಗಣಿ ).

ಘಞ್ ವಿಧಾಯಕ ಸೂತ್ರ.

೮೭೭. ಅವೇ ತೃಸ್ತ್ರೋರ್ಘಞ್ ॥ ೩-೩-೧೨೦ ॥

ಅವತಾರಃ ಕೂಪಾದೇಃ । ಅವಸ್ತಾರೋ ಜವನಿಕಾ ॥

ಅವೇ, ತೃಸ್ತ್ರೋಃ, ಘಞ್ ತ್ರಿಪದ ಸೂತ್ರ. 'ಪುಂಸಿ ಸಂಜ್ಞಾಯಾಂ ॥ ಪ್ರಾಯೇಣ' ಅನುವೃತ್ತಿ. ಸೂತ್ರಾರ್ಥ—ಅವ ಎಂಬ ಉಪಸರ್ಗ ಉಪಪದವಾಗಿ ಇರುವಾಗ ತೄ, ಸ್ತೄ ಧಾತುಗಳಿಗೆ ಘಞ್ ಬರುತ್ತದೆ. ತೄ—ಪ್ಲವನತರಣಯೋಃ । ಧಾತು. ಅವತೄ + ಅ ಎಂದಿರುವಾಗ ಞಿತ್ತಾದುದರಿಂದ 'ಅಚೋಞ್ಣಿತಿ' ವೃದ್ಧಿ ( ಆರ್ ). ಅವತಾರಃ (ಸ್ನಾನಘಟ್ಟ) । ಸ್ತೄಞ್—ಆಚ್ಛಾದನೇ. ಅವಸ್ತೄ + ಅ. ಹಿಂದಿನಂತೆ ವೃದ್ಧಿ. ಅವಸ್ತಾರಃ ( ಪರದೆ ).

ಹಲಂತ ಧಾತುಗೆ ಘಞ್ ವಿಧಾಯಕ ಸೂತ್ರ.

೮೭೮. ಹಲಶ್ಚ ॥ ೩-೩-೧೨೧ ॥

ಹಲಂತಾತ್ ಘಞ್ । ಘಾಪವಾದಃ । ರಮನ್ತೇ ಯೋಗಿನೋಽಸ್ಮಿನ್ನಿತಿ ರಾಮಃ । ಅಪಮೃಜ್ಯತೇಽನೇನ ವ್ಯಾಧ್ಯಾದಿರಿತ್ಯಪಾಮಾರ್ಗಃ ॥

ಹಲಃ, ಚ ॥ ದ್ವಿಪದ ಸೂತ್ರ. ಹಲ್ ಧಾತುವಿಗೆ ವಿಶೇಷಣವಾದುದರಿಂದ ತದಂತಲಾಭ. ಸೂತ್ರಾರ್ಥ—ಹಲಂತವಾದ ಧಾತುವಿನಮೇಲೆ ಘಞ್ ಪ್ರತ್ಯಯ ಬರುತ್ತದೆ. 'ಪುಂಸಿ ಸಂಜ್ಞಾಯಾಂ—' ಸೂತ್ರದಿಂದ ಬರುವ ಘ ಪ್ರತ್ಯಯಕ್ಕೆ ಅಪವಾದ. ಕರಣ ಅಥವಾ ಅಧಿಕರಣಾರ್ಥದಲ್ಲಿಯೇ ಬರುತ್ತದೆ. ಇವನಲ್ಲಿ ಯೋಗಿಗಳು ಆನಂದಪಡುತ್ತಾರೆ ಎಂಬರ್ಥ ತೋರುವಾಗ ರಮು ಧಾತುವಿಗೆ ಘಞ್ ಪ್ರತ್ಯಯ. ರಮ್ + ಅ ಎಂದಿರುವಾಗ 'ಅತ ಉಪಧಾಯಾಃ' ಸೂತ್ರದಿಂದ ಉಪಧಾ ವೃದ್ಧಿ. ರಾಮಃ । ಅಪಮೃಜ್ಯತೇ—ಇತಿ. ರೋಗಾದಿಗಳು ಇದರಿಂದ ಹೋಗಲಾಡಿಸಲ್ಪಡುತ್ತವೆ. ಕರಣಾರ್ಥದಲ್ಲಿ, ಮೃಜೂ—ಶುದ್ಧೌ ಧಾತುವಿಗೆ ಘಞ್. ಅಪಮೃಜ್ + ಅ 'ಮೃಜೇರ್ವೃದ್ಧಿಃ' ಅಪಮಾರ್ಜ್ + ಅ. 'ಚಜೋಃ ಕು ಘಿಣ್ಯತೋಃ' ಕುತ್ವ. ಅಪಮಾರ್ಗ್ + ಅ. 'ಉಪಸರ್ಗಸ್ಯ ಘಞ್ಯಮನುಷ್ಯೇ ಬಹುಲಮ್' ಸೂತ್ರದಿಂದ ಅಪ ಉಪಸರ್ಗಕ್ಕೆ ಘಞನ್ತಪರವಾದುದರಿಂದ ದೀರ್ಘ. ಅಪಾಮಾರ್ಗಃ—ಓಷಧಿವಿಶೇಷ.

ಖಲ್ ಪ್ರತ್ಯಯವಿಧಾಯಕ ಸೂತ್ರ.

೮೭೯. **ಈಷದ್ದುಸ್ಸುಷು ಕೃಚ್ಛ್ರಾಕೃಚ್ಛ್ರಾರ್ಥೇಷು ಖಲ್** || ೩-೩-೧೨೬ ||

**ಕರಣಾಧಿಕರಣಯೋರಿತಿ ನಿವೃತ್ತಮ್ । ಏಷು ದುಃಖಸುಖಾರ್ಥೇಷೂಪದೇಷು ಖಲ್ ತಯೋರೇವೇತಿ ಭಾವೇ ಕರ್ಮಣಿ ಚ || ಕೃಚ್ಛ್ರೇ— ದುಷ್ಕರಃ ಕಟೋ ಭವತಾ । ಅಕೃಚ್ಛ್ರೇ— ಈಷತ್ಕರಃ |ಸುಕರಃ ||**

ತ್ರಿಪದ ಸೂತ್ರ. 'ಕರಣಾಧಿಕರಣಯೋಃ' ಎಂಬುದಕ್ಕೆ ನಿವೃತ್ತಿ. 'ತಯೋರೇವ—'ಸೂತ್ರದಿಂದ ಭಾವ, ಕರ್ಮಾರ್ಥದಲ್ಲಿ ಖಲ್ ಬರುತ್ತದೆ. ಕೃಚ್ಛ್ರ (ದುಃಖ), ಅಕೃಚ್ಛ್ರ ( ಸುಖ ) ಅರ್ಥಕೊಡುವ ಈಷತ್, ದುಸ್, ಸು ಇವು ಉಪಪದವಾಗಿರುವಾಗ ಧಾತುವಿಗೆ ಖಲ್ ಪ್ರತ್ಯಯ ಬರುತ್ತದೆ. ದುಸ್ ಕೃಚ್ಛ್ರಾರ್ಥವನ್ನೂ, ಈಷತ್, ಸು, ಕೃಚ್ಛ್ರ ಅಕೃಚ್ಛ್ರ ಎರಡು ಅರ್ಥಗಳನ್ನೂ ಕೊಡುತ್ತವೆ. ದುಃಖಾರ್ಥದಲ್ಲಿ, ದುಷ್ಕರಃ ಕಟೋ ಭವತಾ || ನಿನ್ನಿಂದ ಚಾಪೆಯ ಕಷ್ಟಸಾಧ್ಯ. ಕೃಞ್ ಧಾತುವಿಗೆ ಕರ್ಮಾರ್ಥದಲ್ಲಿ ಖಲ್ ಬಂದಿದೆ. ಖಲಿನಲ್ಲಿ ಅ ಉಳಿಯುತ್ತದೆ. ಗುಣ. ದುಷ್ಕರಃ|. ಸುಖಾರ್ಥದಲ್ಲಿ, ಈಷತ್‌ಕರಃ । ಸುಕರಃ । ಸುಖಾರ್ಥವನ್ನು ಈಷತ್ ಸು ತಿಳಿಸುತ್ತವೆ

ಯುಚ್ ಪ್ರತ್ಯಯವಿಧಾಯಕ ಸೂತ್ರ.

೮೮೦. **ಆತೋ ಯುಚ್** || ೩-೩-೧೨೮ ||

**ಖಲೋಽಪವಾದಃ । ಈಷತ್ಪಾನಃ ಸೋಮೋ ಭವತಾ । ದುಷ್ಪಾನಃ । ಸುಪಾನಃ ||**

ದ್ವಿಪದ ಸೂತ್ರ. ಹಿಂದಿನ ಸೂತ್ರದಿಂದ ಧಾತುಸಾಮಾನ್ಯಕ್ಕೆ ಖಲ್ ಬರುತ್ತಿರುವಾಗ ಆದಂತಧಾತುಗಳಿಗೆ ಅದಕ್ಕೆ ಅಪವಾದವಾಗಿ ಯುಚ್‌ಪ್ರತ್ಯಯ ಹೇಳುತ್ತಾನೆ. ಪಾ—ಪಾನೇ. ಧಾತು. ಸುಖಾರ್ಥದಲ್ಲಿ, ಈಷತ್ಪಾನಃ ಸೋಮೋ ಭವತಾ || ಈಷತ್ ಉಪಪದವಾಗಿರುವಾಗ ಪಾ ಧಾತುವಿಗೆ ಕರ್ಮಣಿಯಲ್ಲಿ ಯುಚ್. 'ಯುವೋರನಾಕೌ' ಸೂತ್ರದಿಂದ ಯುವಿಗೆ ಅನಾದೇಶ. ದುಃಖಾರ್ಥದಲ್ಲಿ, ದುಷ್ಪಾನಃ || 'ಇದುದುಪಧಸ್ಯ ಚಾಪ್ರತ್ಯಯಸ್ಯ' ಸೂತ್ರದಿಂದ ದುಸಿನ ವಿಸರ್ಗಕ್ಕೆ ಷತ್ವ ಬಂದಿದೆ.

ಕ್ತ್ವಾ ಪ್ರತ್ಯಯವಿಧಾಯಕ ಸೂತ್ರ.

೮೮೧. **ಅಲಂಖಲ್ವೋಃ ಪ್ರತಿಷೇಧಯೋಃ ಪ್ರಾಚಾಂ ಕ್ತ್ವಾ** || ೩-೪-೧೮

**ಪ್ರತಿಷೇಧಾರ್ಥಯೋರಲಂಖಲ್ವೋರುಪಪದಯೋಃ ಕ್ತ್ವಾ ಸ್ಯಾತ್ । ಪ್ರಾಚಾಂ ಗ್ರಹಣಂ ಪೂಜಾರ್ಥಮ್ । ಅಮೈವಾವ್ಯಯೇನೇತಿ ನಿಯಮಾನ್ನೋಪಪದ ಸಮಾಸಃ । ದೋ ದದ್ ಘೋಃ । ಅಲಂ ದತ್ವಾ ||**

**ಘುಮಾಸ್ಥೇತೀತ್ತ್ವಮ್ । ಪೀತ್ವಾಖಲು । ಅಲಂಖಲ್ವೋಃ ಕಿಮ್ ? ಮಾ ಕಾರ್ಷೀತ್ । ಪ್ರತಿಷೇಧಯೋಃ ಕಿಮ್ ? ಅಲಂಕಾರಃ ॥**

ನಾಲ್ಕು ಪದಗಳುಳ್ಳ ಸೂತ್ರ. ಸೂತ್ರಾರ್ಥ—ಪ್ರತಿಷೇಧಾ(ನಿಷೇಧ)ರ್ಥವನ್ನು ಕೊಡುವ ಅಲಂ, ಖಲು ಎಂಬ ಪದಗಳು ಉಪಪದವಾಗಿರುವಾಗ ಧಾತುವಿಗೆ ಕ್ತ್ವಾ ಪ್ರತ್ಯಯ ಬರುತ್ತದೆ. 'ಲಶಕ್ವತದ್ಧಿತೇ' ಸೂತ್ರದಿಂದ ಕಕಾರ ಇತ್ತಾಗುವುದರಿಂದ ತ್ವಾ ಉಳಿಯುತ್ತದೆ. 'ಅವ್ಯಯಕೃತೋ ಭಾವೇ' ಎಂದುದರಿಂದ ಕ್ತ್ವಾಪ್ರತ್ಯಯಕ್ಕೆ ಭಾವಾರ್ಥ. ಇದು ಲ್ಯುಟಿಗೆ ಬಾಧಕವಾಗಿ ಹೇಳಿದರೂ ಅಸಮಾನಪ್ರತ್ಯಯಗಳಿಗೆ ವಿಕಲ್ಪವಾಗಿ ಬಾಧ್ಯಬಾಧಕಭಾವವೆಂದು ವಾಸರೂಪನ್ಯಾಯದಿಂದ ಸಿದ್ಧವಾಗುವುದರಿಂದ ವಿಕಲ್ಪಾರ್ಥ ತೋರುವಾಗ ಪುನಃ ಪ್ರಾಚಾಂ ಎಂದುದು ವ್ಯರ್ಥವಾಗುತ್ತದೆ. ಅದಕ್ಕೋಸ್ಕರ ಪೂಜಾರ್ಥವೆಂದಿರುತ್ತಾರೆ. ಪ್ರಾಚೀನರೂ ಇದನ್ನು ಒಪ್ಪಿರುತ್ತಾರೆ ಎಂದು ಗೌರವಿಸಲು ಪ್ರಾಚಾಂ ಎಂದು ಹೇಳಿರುತ್ತಾನೆ. ಸಮಾಸವಾದರೆ ಕ್ತ್ವಾ ಪ್ರತ್ಯಯಕ್ಕೆ ಲ್ಯಪ್ ಬರಬೇಕಾದುದರಿಂದ ಇಲ್ಲಿ ಸಮಾಸವಾಗಲಿಲ್ಲವೆಂದು ತಿಳಿಸುತ್ತಾನೆ. ಅಮಿನಿಂದ ಸಮಾನವಾಗಿ ಎಲ್ಲಿ ಉಪಪದ ಹೇಳಿರುತ್ತಾನೋ ಯಾವ ಉಪಪದದೊಡನೆ ಅಮ್ ವಿಧಾನ ಮಾಡಿರುತ್ತಾನೋ ಅಲ್ಲಿ ಆ ಉಪಪದವು ಅವ್ಯಯದೊಡನೆ ಸಮಾಸಹೊಂದುತ್ತದೆಂದು ನಿಯಮಮಾಡಿರುತ್ತಾನೆ. ಇಲ್ಲಿ ಅಲಂ, ಖಲು ಶಬ್ದಗಳಿಗೆ ಅಮಿನೊಡನೆ ವಿಧಾನವಿಲ್ಲ. ಆದುದರಿಂದ ಉಪಪದಸಮಾಸವಿಲ್ಲ. ಕೊಟ್ಟದ್ದು ಸಾಕು ಎಂದು ನಿಷೇಧ ತೋರುವಾಗ ಅಲಂ ಉಪಪದವಾಗಿರುವಾಗ ದಾ ಧಾತುವಿಗೆ ಕ್ತ್ವಾ. ದಾ + ತ್ವಾ ಎಂದಿರುವಾಗ 'ದೋ ದದ್ ಘೋಃ' ಸೂತ್ರದಿಂದ ದಾ ಧಾತುವಿಗೆ ದಥ್ ಆದೇಶ. ದಥ್ + ತ್ವಾ. 'ಖರಿ ಚ' ದತ್ತ್ವಾ. ಕುಡಿದದ್ದು ಸಾಕು ಎಂದು ನಿಷೇಧ ತೋರುವಾಗ ಪಾ ಧಾತುವಿಗೆ ಕ್ತ್ವಾ. ಪಾ + ತ್ವಾ ಎಂದಿರುವಾಗ 'ಘುಮಾಸ್ಥಾ—'(ಸೂ. ೫೭೦) ಸೂತ್ರದಿಂದ ಈತ್ವ. ಪೀತ್ವಾ. ಅಲಂ, ಖಲು ಉಪಪದವಾಗಿರುವಾಗ ಮಾತ್ರ ಈ ಕ್ತ್ವಾಪ್ರತ್ಯಯ. ಇತರ ನಿಷೇಧಾರ್ಥಕ ಪದಗಳು ಉಪಪದವಾಗಿರುವಾಗ ಬರುವುದಿಲ್ಲ. ಮಾಡಬೇಡ ಎಂದು ನಿಷೇಧ ತಿಳಿಸಲು ಮಾ ಕಾರ್ಷೀತ್ ಎಂದಾಗುತ್ತದೆ. ಅಲ್ಲಿ ಮಾ ಎಂಬುದು ನಿಷೇಧ ತಿಳಿಸಿದರೂ ಕ್ತ್ವಾ ಪ್ರತ್ಯಯ ಬರುವುದಿಲ್ಲ. 'ಮಾಙಿ ಲುಙ್' ಸೂತ್ರದಿಂದ ಲುಙ್ ಬಂದಿದೆ. 'ನ ಮಾಙ್ಯೋಗೇ' ಸೂತ್ರದಿಂದ ಅಡಾಗಮ ಬಂದಿಲ್ಲ. ಅಲಂ, ಖಲು ಶಬ್ದಗಳಿಗೆ ನಾನಾರ್ಥಗಳಿರುವುದರಿಂದ ಪ್ರತಿಷೇಧಾರ್ಥವಿರುವಾಗ ಮಾತ್ರ ಕ್ತ್ವಾಪ್ರತ್ಯಯ. ಇತರಾರ್ಥ ತೋರುವಾಗ ಬರುವುದಿಲ್ಲ. ಅಲಂಕಾರಃ—ಇಲ್ಲಿ ಭೂಷಣಾರ್ಥ ತೋರುವುದರಿಂದ ಅಲಂ ಉಪಪದವಾಗಿದ್ದರೂ ಕ್ತ್ವಾ ಬಾರದೆ ಕರಣಾರ್ಥದಲ್ಲಿ ಘಙ್ ಪ್ರತ್ಯಯ ಬಂದಿದೆ.

ಸಾಮಾನ್ಯವಾಗಿ ಕ್ತ್ವಾ ಪ್ರತ್ಯಯವಿಧಾಯಕ ಸೂತ್ರ.

**೮೮೨. ಸಮಾನಕರ್ತೃಕಯೋಃ ಪೂರ್ವಕಾಲೇ ॥೩-೪-೨೧॥**

**ಸಮಾನಕರ್ತೃಕಯೋರ್ಧಾತ್ವರ್ಥಯೋಃ ಪೂರ್ವಕಾಲೇ ವಿದ್ಯಮಾನಾದ್ಧಾತೋಃ ಕ್ತ್ವಾ ಸ್ಯಾತ್ ।ಭುಕ್ತ್ವಾ ವ್ರಜತಿ ।ದ್ವಿತ್ವಮತನ್ತ್ರಮ್। ಭುಕ್ತ್ವಾ ಪೀತ್ವಾ ವ್ರಜತಿ॥**

ದ್ವಿಪದ ಸೂತ್ರ. ಸಮಾನಃ ಕರ್ತಾ ಯಯೋಸ್ತೌ ಸಮಾನಕರ್ತೃಕೌ. ತಯೋಃ ।ನಿರ್ಧಾರಣಾರ್ಥದಲ್ಲಿ ಷಷ್ಠೀ ಬಂದಿದೆ. ಸಮಾನಕರ್ತೃಕಗಳಾದ ಧಾತುಗಳ ಮಧ್ಯದಲ್ಲಿ ಎಂದರ್ಥ. ಸೂತ್ರಾರ್ಥ—ಸಮಾನವಾದ ಕರ್ತೃವುಳ್ಳ ಎರಡು ಧಾತುಗಳ ಮಧ್ಯದಲ್ಲಿ ಪೂರ್ವಕಾಲವಾಚಕವಾದ ಧಾತುವಿನ ಮೇಲೆ ಕ್ತ್ವಾಪ್ರತ್ಯಯ ಬರುತ್ತದೆ ಭುಕ್ತ್ವಾ ವ್ರಜತಿ ॥ ಊಟಮಾಡಿ ಹೋಗುತ್ತಾನೆ. ಭೋಜನ, ಗಮನಕ್ರಿಯೆಗಳಲ್ಲಿ ಕರ್ತೃ ಒಬ್ಬನೇ. ಇಲ್ಲಿ ಪೂರ್ವಕಾಲದಲ್ಲಿರುವ ಧಾತು ಭುಜ್. ಅದಕ್ಕೆ ಕ್ತ್ವಾ ಬಂದರೆ ಭುಜ್ + ತ್ವಾ ಎಂದಿರುವಾಗ 'ಚೋಃ ಕುಃ' ಸೂತ್ರದಿಂದ ಜಕಾರಕ್ಕೆ ಕುತ್ವ. ಭುಗ್ + ತ್ವಾ 'ಖರಿ ಚ' ಭುಕ್ತ್ವಾ. ಸೂತ್ರದಲ್ಲಿ ದ್ವಿವಚನ ಅಪ್ರಧಾನ. ಎರಡು ಧಾತುಗಳೇ ಇರಬೇಕೆಂಬ ನಿಯಮವಿಲ್ಲ. ಹಲವು ಧಾತ್ವರ್ಥ ತೋರುವಾಗಲೂ ಪೂರ್ವಕಾಲದಲ್ಲಿರುವವುಗಳಿಗೆ ಕ್ತ್ವಾ ಬರುತ್ತದೆ. ಭುಕ್ತ್ವಾ ಪೀತ್ವಾ ವ್ರಜತಿ ॥ ಮೂರು ಕ್ರಿಯೆಗಳಲ್ಲಿಯೂ ಒಂದೇ ಕರ್ತೃ. ಗಮನಕ್ಕಿಂತ ಪೂರ್ವದಲ್ಲಿರುವವುಗಳು ಭುಜ್, ಪಾ ಧಾತುಗಳಿಂದ ತೋರುವ ಕ್ರಿಯೆ. ಆದುದರಿಂದ ಕ್ತ್ವಾ ಬಂದಿದೆ. ಪಾ ಧಾತುವಿಗೆ ಕ್ತ್ವಾ ಬಂದರೆ 'ಘುಮಾಸ್ಥಾ—' ಸೂತ್ರದಿಂದ ಈತ್ವ. ಪೀತ್ವಾ.

ಕ್ತ್ವಾಪ್ರತ್ಯಯಕ್ಕೆ ಕಿತ್ವ ನಿಷೇಧ ಹೇಳುವ ಸೂತ್ರ.

**೮೮೩. ನ ಕ್ತ್ವಾ ಸೇಟ್ ॥೧-೨-೧೮॥**

**ಸೇಟ್ ಕ್ತ್ವಾ ಕಿನ್ನ ಸ್ಯಾತ್ ॥ ಶಯಿತ್ವಾ । ಸೇಟ್ ಕಿಮ್ ? ಕೃತ್ವಾ ॥**

ತ್ರಿಪದ ಸೂತ್ರ. 'ಅಸಂಯೋಗಾಲ್ಲಿಟ್ ಕಿತ್' ಸೂತ್ರದಿಂದ 'ಕಿತ್' ಅನುವೃತ್ತಿ. ಇಟ್ ಸಹಿತವಾದ ಕ್ತ್ವಾ ಪ್ರತ್ಯಯವು ಕಿತ್ತಾಗುವುದಿಲ್ಲ. ಕ್ತ್ವಾ ಸ್ವಾಭಾವಿಕವಾಗಿ ಕಿತ್. ಕೆಲವು ರೂಪಸಿದ್ಧಿಗೋಸ್ಕರ ಇಡಾಗಮ ಬಂದಾಗ ಕಿತ್ವ ನಿಷೇಧ ಹೇಳುತ್ತಾನೆ. ಶಯಿತ್ವಾ. ಶೀಙ್—ಸ್ವಪ್ನೇ. ಧಾತು. ಪೂರ್ವಕಾಲ ವಾಚಕವಾಗಿದೆಯೆಂದು ಇದಕ್ಕೆ ಕ್ತ್ವಾ ಬರುತ್ತದೆ. ಶೀ + ತ್ವಾ ಎಂದಿರುವಾಗ ಕಿತ್ತಾದುದರಿಂದ ಗುಣನಿಷೇಧ ಬರಬೇಕಾಗಿತ್ತು. ಇಲ್ಲಿ ಕ್ತ್ವಾ ಪ್ರತ್ಯಯಕ್ಕೆ ಇಡಾಗಮ ಬರುವುದರಿಂದ ಅದು ಕಿತ್ತಾಗುವುದಿಲ್ಲ. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ. ಶೀ + ಇತ್ವಾ. ಶೇ + ಇತ್ವಾ. ಅಯಾದೇಶ. ಶಯಿತ್ವಾ. ಇಡಾಗಮ

ಬಾರದಿರುವಾಗ ಕಿತ್ವ ಇದ್ದೇ ಇವೆ. ಕೃ+ತ್ವಾ. ಅನಿಟ್ ಧಾತುವಾದುದರಿಂದ ಇಡಾಗಮವಿಲ್ಲ. ಕಿತ್ವ ಇರುವುದರಿಂದ ಗುಣವಿಲ್ಲ. ಕೃತ್ವಾ.

ಕ್ತ್ವಾ, ಸನ್ ಪ್ರತ್ಯಯಗಳಿಗೆ ವಿಕಲ್ಪಕಿತ್ವ ಹೇಳುವ ಸೂತ್ರ.

೮೮೪. ರಲೋ ವ್ಯುಪಧಾದ್ಧಲಾದೇಃ ಸಂಶ್ಚ ॥ ೧-೨-೨೬ ॥

ಇವರ್ಣೋವರ್ಣೋಪಧಾದ್ಧಲಾದೇಃ ರಲಂತಾತ್ಪರೌ ಕ್ತ್ವಾಸನೌ ಸೇಟೌ ವಾ ಕಿತೌ ಸ್ತಃ । ದ್ಯುತಿತ್ವಾ, ದ್ಯೋತಿತ್ವಾ । ಲಿಖಿತ್ವಾ, ಲೇಖಿತ್ವಾ । ವ್ಯುಪಧಾತ್ ಕಿಮ್ ? ವರ್ತಿತ್ವಾ । ರಲಃ ಕಿಮ್ ? ಸೇವಿತ್ವಾ । ಹಲಾದೇಃ ಕಿಮ್ ? ಏಷಿತ್ವಾ । ಸೇಟ್ ಕಿಮ್ ? ಭುಕ್ತ್ವಾ ॥

ರಲಃ, ವ್ಯುಪಧಾತ್, ಹಲಾದೇಃ, ಸನ್, ಚ ॥ ಐದು ಪದಗಳುಳ್ಳ ಸೂತ್ರ. 'ನ ಕ್ತ್ವಾ ಸೇಟ್' ಸೂತ್ರದಿಂದ ಸೇಟ್ ಅನುವೃತ್ತಿ. ಚಕಾರದಿಂದ 'ಪೂಙಃ ಕ್ತ್ವಾ ಚ' ಸೂತ್ರದಿಂದ ಕ್ತ್ವಾ ಎಂಬುದಕ್ಕೆ ಅನುಕರ್ಷ. ಉಶ್ಚ ಇಶ್ಚ ವೀ. ತೇ ಉಪಧೇ ಯಸ್ಯ ವ್ಯುಪಧಃ । ತಸ್ಮಾತ್. **ಸೂತ್ರಾರ್ಥ**—ಇಕಾರ ಉಕಾರ ಉಪಧೇಯಾಗಿರುವ ಹಲಾದಿಯಾದ ರಲಂತವಾದ ಧಾತುವಿನ ಪರದಲ್ಲಿರುವ ಇಟ್ ಸಹಿತವಾದ ಕ್ತ್ವಾ ಸನ್ ಪ್ರತ್ಯಯಗಳು ವಿಕಲ್ಪವಾಗಿ ಕಿತ್ತಾಗುತ್ತವೆ. ದ್ಯುತಿತ್ವಾ, ದ್ಯೋತಿತ್ವಾ. ದ್ಯುತ =ದೀಪ್ತೌ. ಧಾತು. ಇಲ್ಲಿ ಉಕಾರ ಉಪಧೆಯಾಗಿಯೂ ರಲ್ ( ತ ) ಅಂತವಾಗಿಯೂ ಹಲ್ ( ದ ) ಆದಿಯಾಗಿಯೂ ಇವೆ. ಇದಕ್ಕೆ ಕ್ತ್ವಾ ಬಂದು ಅದಕ್ಕೆ ಇಡಾಗಮ ಬಂದಾಗ ದ್ಯುತ್+ಇತ್ವಾ ಎಂದಿರುವಾಗ ವಿಕಲ್ಪಕಿತ್ವ ಬಂದರೆ ಕಿತ್ವ ಇಲ್ಲದಿರುವಾಗ ಲಘೂಪಧಗುಣ. ದ್ಯೋತಿತ್ವಾ. ಕಿತ್ವ ಇದ್ದಾಗ ಗುಣವಿಲ್ಲ. ದ್ಯುತಿತ್ವಾ. **ಲಿಖ**—ಅಕ್ಷರವಿನ್ಯಾಸೇ. ಧಾತು. ಇಕಾರ ಉಪಧೆಯಾಗಿಯೂ ರಲಂತವಾಗಿಯೂ ( ಖ್ ), ಹಲಾದಿಯಾಗಿಯೂ ( ಲ್ ) ಇವೆ. ಕಿತ್ವವಿಕಲ್ಪದಿಂದ ಎರಡು ರೂಪ. ಲಿಖಿತ್ವಾ. ಲೇಖಿತ್ವಾ, ಇಕಾರ, ಉಕಾರ ಉಪಧೆಯಾಗಿರಬೇಕು ಎಂದುದಕ್ಕೆ ಪ್ರಯೋಜನವೇನು ? ವರ್ತಿತ್ವಾ. ಇಲ್ಲಿ ವಿಕಲ್ಪವಿಲ್ಲ. **ವೃತು**— ವರ್ತನೇ. ಧಾತು. ಋಕಾರ ಉಪಧೆಯಾಗಿರುವುದರಿಂದ ವೃತ್+ಇತ್ವಾ ಎಂದಿರುವಾಗ 'ನ ಕ್ತ್ವಾ ಸೇಟ್' ಸೂತ್ರದಿಂದ ನಿತ್ಯನಿಷೇಧವಿರುವುದರಿಂದ ಲಘೂಪಧಗುಣ ಬಂದು ವರ್ತಿತ್ವಾ ಎಂದಾಗುತ್ತದೆ. ರಲಂತವೆಂದುದೇಕೆ ? ಸೇವಿತ್ವಾ. ಇಲ್ಲಿ ವಿಕಲ್ಪವಿಲ್ಲ. **ಷಿವು**— ತಂತುಸಂತಾನೇ. ಧಾತು. ವಕಾರ ರಲಿನಲ್ಲಿ ಸೇರಿಲ್ಲ. ಲಘೂಪಧಗುಣ. ಹಲಾದಿಯೆಂದುದೇಕೆ ? ಏಷಿತ್ವಾ. ಇಷ ಧಾತು ಅಜಾದಿಯಾಗಿದೆ. ಲಘೂಪಧಗುಣ. ಏಷಿತ್ವಾ. ಇಟ್ ಸಹಿತವಾದ ಕ್ತ್ವಾ ಎಂದುದೇಕೆ ? ಭುಕ್ತ್ವಾ. ಭುಜ್+ತ್ವಾ ಎಂದಿರುವಾಗ ಅನಿಟ್ ಧಾತುವಾದುದರಿಂದ ಇಡಾಗಮ ಬಂದಿಲ್ಲ. ವಿಕಲ್ಪಕಿತ್ತ್ವವೂ

ಇಲ್ಲ. ಹಿಂದಿನ ಸೂತ್ರದಿಂದ ನಿತ್ಯಕಿತ್ತ್ವನಿಷೇಧವೂ ಇಲ್ಲ. ಭುಕ್ತ್ವಾ. ಹಿಂದೆ ಪ್ರಕ್ರಿಯೆ ಹೇಳಿದೆ.

ಕ್ತ್ವಾ ಪ್ರತ್ಯಯಕ್ಕೆ ಇಡ್ವಿಕಲ್ಪ ಹೇಳುವ ಸೂತ್ರ.

**೮೮೫. ಉದಿತೋ ವಾ || ೭-೨-೫೬ ||**

**ಉದಿತಃ ಪರಸ್ಯ ಕ್ತ್ವಃ ಇಡ್ವಾ । ಶಮಿತ್ವಾ, ಶಾನ್ತ್ವಾ । ದೇವಿತ್ವಾ, ದ್ಯೂತ್ವಾ । ದಧಾತೇರ್ಹಿಃ । ಹಿತ್ವಾ ||**

ದ್ವಿಪದ ಸೂತ್ರ. 'ಜ್ರಾವ್ರಶ್ಚ್ಯೋಃ—' ಸೂತ್ರದಿಂದ ಕ್ತ್ವಿ ಅನುವೃತ್ತವಾಗಿ ಷಷ್ಠ್ಯನ್ತವಾಗಿ ಪರಿಣತವಾಗುತ್ತದೆ. **ಸೂತ್ರಾರ್ಥ**—ಉಕಾರ ಇತ್ತಾದ ಧಾತುವಿನ ಪರದಲ್ಲಿರುವ ಕ್ತ್ವಾ ಪ್ರತ್ಯಯಕ್ಕೆ ಇಡಾಗಮ ವಿಕಲ್ಪವಾಗಿ ಬರುತ್ತದೆ. **ಶಮು**—ಉಪಶಮೇ. ಧಾತು. ಉಕಾರ ಇತ್. ಕ್ತ್ವಾ ಪ್ರತ್ಯಯಕ್ಕೆ ಇಡಾಗಮ ಬಂದರೆ ಶಮಿತ್ವಾ. ಬಾರದಿದ್ದರೆ ಶಮ್ + ತ್ವಾ ಎಂದಿರುವಾಗ '**ಅನುನಾಸಿಕಸ್ಯ ಕ್ವಿಝಲೋಃ ಕ್ಙಿತಿ**' ಸೂತ್ರದಿಂದ ದೀರ್ಘ. ಶಾಮ್ + ತ್ವಾ. ಮಕಾರಕ್ಕೆ ಅನುಸ್ವಾರಪರಸವರ್ಣ. **ಶಾನ್ತ್ವಾ**. ದಿವು ಧಾತು. ಕ್ರೀಡಾದಿ ಹತ್ತು ಅರ್ಥಗಳಿವೆ. ದಿವ್ + ಇತ್ವಾ. ಸೇಟ್ ಕ್ತ್ವಾ ಆದುದರಿಂದ ಕಿತ್ತ್ವಾಗದಿರುವುದರಿಂದ ಲಘೂಪಧಗುಣ. ದೇವಿತ್ವಾ. ಇಡಾಗಮ ಬಾರದಿದ್ದರೆ ದಿವ್ + ತ್ವಾ ಎಂದಿರುವಾಗ 'ಚ್ಛ್ವೋಃ ಶೂಠ್—' ಸೂತ್ರದಿಂದ ವಕಾರಕ್ಕೆ ಊಠ್. ದಿ + ಊ + ತ್ವಾ. ಯಣ್. ದ್ಯೂತ್ವಾ.

**ದಧಾತೇರ್ಹಿಃ** || ಈ ಸೂತ್ರ ಹಿಂದೆ ವ್ಯಾಖ್ಯಾತವಾಗಿದೆ ( ಸೂ ೮೪೯ ). ಕ್ತ್ವಿ ತಾದಿ ಕಿತ್ತಾದುದರಿಂದ ಅದು ಪರವಾದಾಗ ಧಾ ಧಾತುವಿಗೆ ಹಿ ಆದೇಶ. ಹಿತ್ವಾ = ಧರಿಸಿ.

ಹಾಕ್ ಧಾತುವಿಗೆ ಹಿ ಆದೇಶ ಹೇಳುವ ಸೂತ್ರ.

**೮೮೬. ಜಹಾತೇಶ್ಚ ಕ್ತ್ವಿ || ೭-೪-೪೩ ||**

**ಹಿತ್ವಾ । ಹಾಙಸ್ತು-ಹಾತ್ವಾ ||**

ಜಹಾತೇಃ, ಚ, ಕ್ತ್ವಿ || ತ್ರಿಪದ ಸೂತ್ರ. **ಸೂತ್ರಾರ್ಥ**—ಓಹಾಕ್ ಧಾತುವಿಗೆ ಕ್ತ್ವಾ ಪ್ರತ್ಯಯ ಪರವಾದಾಗ ಹಿ ಆದೇಶ ಬರುತ್ತದೆ. ಹಾ + ತ್ವಾ = ಹಿತ್ವಾ. ಜಹಾತೇಃ ಎಂದು ನಿರ್ದೇಶಿಸಿರುವುದರಿಂದ ಜುಹೋತ್ಯಾದಿಪಠಿತವಾದ ಹಾಕಿಗೆ ಮಾತ್ರ ಗ್ರಹಣ. ಹಾಙ್ = ಗತೌ ಧಾತುವಿಗೆ ಗ್ರಹಣವಿಲ್ಲ. ಅದಕ್ಕೆ ಕ್ತ್ವಾ ಬಂದರೆ ಹಾತ್ವಾ ಎಂದೇ ಆಗುತ್ತದೆ.

ಕ್ತ್ವಾಪ್ರತ್ಯಯಕ್ಕೆ ಲ್ಯಬಾದೇಶ ಹೇಳುವ ಸೂತ್ರ.

**೮೮೭. ಸಮಾಸೇಽನಞ್ಪೂರ್ವೇ ಕ್ತ್ವೋ ಲ್ಯಪ್ ||೭-೧-೩೭||**
**ಅವ್ಯಯಪೂರ್ವಪದೇಽನಞ್ಸಮಾಸೇ ಕ್ತ್ವೋ ಲ್ಯಬಾದೇಶಃ ಸ್ಯಾತ್ |ತುಕ್ |ಪ್ರಕೃತ್ಯ| ಅನಞ್ ಕಿಮ್ ? ಅಕೃತ್ವಾ||**

ಸಮಾಸೇ, ಅನಞ್ಪೂರ್ವೇ, ಕ್ತ್ವಃ, ಲ್ಯಪ್ || ನಾಲ್ಕು ಪದಗಳುಳ್ಳ ಸೂತ್ರ. 'ಅನಞ್ಪೂರ್ವೇ' ಎಂಬಲ್ಲಿ ಪರ್ಯುದಾಸ. ನಞಭಿನ್ನ ನಞ್ಸದೃಶವಾದುದು ಅಂದರೆ ಅವ್ಯಯಪೂರ್ವಪದವಾಗಿರುವುದು ಎಂದರ್ಥವಾಗುತ್ತದೆ. **ಸೂತ್ರಾರ್ಥ**— ಅವ್ಯಯಪೂರ್ವಪದವಾಗಿರುವ ಸಮಾಸದಲ್ಲಿ ಕ್ತ್ವಾಪ್ರತ್ಯಯಕ್ಕೆ ಲ್ಯಪ್ ಆದೇಶ ಬರುತ್ತದೆ ; ನಞ್ ಪೂರ್ವಪದವಾಗಿದ್ದರೆ ಬರುವುದಿಲ್ಲ. ಪ್ರ ಎಂಬ ಗತಿಯೊಡನೆ ಕೃತ್ವಾ ಎಂಬ ಕ್ತ್ವಾಂತಕ್ಕೆ ಗತಿಸಮಾಸ. ಪ್ರ+ಕೃತ್ವಾ ಎಂದಿರುವಾಗ ಕ್ತ್ವಾಕ್ಕೆ ಲ್ಯಪ್ ಬಂದರೆ ಪ್ರ+ಕೃ+ಯ. ಲ್ಯಪಿನಲ್ಲಿ 'ಹಲಂತ್ಯಮ್' ಸೂತ್ರದಿಂದ ಪಕಾರವೂ 'ಲಶಕ್ವತದ್ಧಿತೇ' ಸೂತ್ರದಿಂದ ಲಕಾರವೂ ಇತ್ತಾದರೆ ಯ ಉಳಿಯುತ್ತದೆ. ಇದು ಪಿತ್ತಾದುದರಿಂದ 'ಹ್ರಸ್ವಸ್ಯ ಪಿತಿ ಕೃತಿ ತುಕ್' ಸೂತ್ರದಿಂದ ಕೃಗೆ ತುಗಾಗಮ. ಪ್ರಕೃತ್ಯ. ನಞ್ ಪೂರ್ವಪದವಾಗಿ ಸಮಾಸವಾದಾಗ ಬರುವುದಿಲ್ಲ. ಅಕೃತ್ವಾ.

ಣಮುಲ್ ವಿಧಾಯಕ ಸೂತ್ರ.

**೮೮೮. ಆಭೀಕ್ಷ್ಣ್ಯೇ ಣಮುಲ್ ಚ ||೩-೪-೨೨||**
**ಆಭೀಕ್ಷ್ಣ್ಯೇ ದ್ಯೋತ್ಯೇ ಪೂರ್ವವಿಷಯೇ ಣಮುಲ್ ಸ್ಯಾತ್ ಕ್ತ್ವಾ ಚ ||**

ತ್ರಿಪದ ಸೂತ್ರ. 'ಸಮಾನಕರ್ತೃಕಯೋಃ ಪೂರ್ವಕಾಲೇ' ಹಿಂದಿನ ಸೂತ್ರ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಆಭೀಕ್ಷ್ಣ್ಯ ಅರ್ಥ ತೋರುವಾಗ ಏಕ ಕರ್ತೃಕಗಳಾದ ಧಾತುಗಳಲ್ಲಿ ಪೂರ್ವಕಾಲ ವಾಚಿ ಧಾತುವಿನ ಮೇಲೆ ಣಮುಲ್ ಪ್ರತ್ಯಯವೂ ಚಕಾರದಿಂದ ಕ್ತ್ವಾಪ್ರತ್ಯಯವೂ ಬರುತ್ತವೆ. ಆಭೀಕ್ಷ್ಣ್ಯವೆಂದರೆ ನಿತ್ಯವೆಂದರ್ಥ, ಸ್ಮೃ ಧಾತುವಿಗೆ ಆಭೀಕ್ಷ್ಣ್ಯ ತೋರುವಾಗ ಣಮುಲ್ ಬಂದರೆ ಸ್ಮೃ+ಣಮುಲ್ ಎಂದಿರುವಾಗ ಣಮುಲಿನಲ್ಲಿ ಅಮ್ ಉಳಿಯುತ್ತದೆ. ಣಿತ್ತಾದುದ ರಿಂದ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ. ಸ್ಮಾರಮ್. ಇದಕ್ಕೆ ದ್ವಿತ್ವ ಹೇಳು ತ್ತಾನೆ.

ನಿತ್ಯವೀಪ್ಸೆಯಲ್ಲಿ ಪದಕ್ಕೆ ದ್ವಿತ್ವ ಹೇಳುವ ಸೂತ್ರ.

**೮೮೯. ನಿತ್ಯವೀಪ್ಸಯೋಃ ||೮-೧-೪||**

**ಆಭೀಕ್ಷ್ಣ್ಯೇ ವೀಪ್ಸಾಯಾಂ ಚ ದ್ಯೋತ್ಯೇ ಪದಸ್ಯ ದ್ವಿತ್ವಂ ಸ್ಯಾತ್ | ಆಭೀಕ್ಷ್ಣ್ಯಂ ತಿಙನ್ತೇಷ್ವವ್ಯಯಸಂಜ್ಞಕೇಷು ಚ ಕೃದನ್ತೇಷು ಚ |**

ಸ್ಮಾರಂ ಸ್ಮಾರಂ ನಮತಿ ಶಿವಮ್। ಸ್ಮೃತ್ವಾ ಸ್ಮೃತ್ವಾ। ಪಾಯಂಪಾಯಮ್। ಭೋಜಂಭೋಜಮ್। ಶ್ರಾವಂ ಶ್ರಾವಮ್॥

ಏಕಪದ ಸೂತ್ರ. ನಿತ್ಯಪದದಿಂದ ನಿತ್ಯತ್ವವೂ ವೀಪ್ಸಾಪದದಿಂದ ವ್ಯಾಪ್ತಿಯೂ ವಿವಕ್ಷಿತ. ವ್ಯಾಪ್ತಿಯೆಂದರೆ ಸಂಪೂರ್ಣ ಸಂಬಂಧ. 'ಪದಸ್ಯ' ಅಧಿಕಾರ ಮುಂದೆ ಇದ್ದರೂ ಇಲ್ಲಿ ಅಪಕೃಷ್ಟವಾಗುತ್ತದೆ. 'ಸರ್ವಸ್ಯ ದ್ವೇ' ಅಧಿಕಾರ. ಸೂತ್ರಾರ್ಥ— ಆಭೀಕ್ಷ್ಣ್ಯ(ನಿತ್ಯತ್ವ)ವೂ ವೀಪ್ಸೆಯೂ ತೋರುವಾಗ ಸಂಪೂರ್ಣಪದಕ್ಕೆ ದ್ವಿತ್ವ ಬರುತ್ತದೆ. ನಿತ್ಯತ್ವವು ತಿಙನ್ತಗಳಲ್ಲಿಯೂ ಅವ್ಯಯಸಂಜ್ಞೆಯುಳ್ಳ ಕೃತ್‌ಸ್ಥಲದಲ್ಲಿಯೂ ತೋರುತ್ತದೆ. ಈ ಎರಡು ಸ್ಥಲಗಳಲ್ಲಿಯೂ ಕ್ರಿಯಾಪ್ರಧಾನವಾಗಿರುವುದರಿಂದ ಪೌನಃ ಪುನ್ಯವನ್ನು ಹೇಳಲು ಸಾಧ್ಯವಾಗುವುದರಿಂದ ಪೌನಃ ಪುನ್ಯ ನಿಮಿತ್ತಕ ದ್ವಿರ್ವಚನ. ಇತರ ಸ್ಥಳದಲ್ಲಿ ಬರುವುದಿಲ್ಲ. ಸ್ಮಾರಮ್ ಣಮುಲಂತ. ಇದಕ್ಕೆ ದ್ವಿತ್ವ ಬಂದರೆ ಸ್ಮಾರಂ ಸ್ಮಾರಮ್ ಎಂದಾಗುತ್ತದೆ. ಮಾನ್ತಕೃದಂತವಾದುದರಿಂದ 'ಕೃನ್ಮೇಜನ್ತಃ' ಸೂತ್ರದಿಂದ ಅವ್ಯಯಸಂಜ್ಞಾ. ಸ್ಮರಿಸಿ ಸ್ಮರಿಸಿ (ಯಾವಾಗಲೂ ಸ್ಮರಿಸಿ) ಶಿವನನ್ನು ನಮಸ್ಕರಿಸುತ್ತಾನೆ. ಣಮುಲ್ ವಿಕಲ್ಪವಾದುದರಿಂದ ಆಭೀಕ್ಷ್ಣ್ಯಾರ್ಥದಲ್ಲಿಯೇ ಕ್ತ್ವಾಪ್ರತ್ಯಯ. ಸ್ಮೃತ್ವಾ ಸ್ಮೃತ್ವಾ. ಪಾ=ಪಾನೇ. ಧಾತು. ಣಮುಲ್ ಬಂದರೆ ಪಾಯಂ ಪಾಯಮ್. ಣಮುಲ್ ಪರವಾದಾಗ 'ಆತೋ ಯುಕ್ ಚಿಣ್‌ಕೃತೋಃ' ಸೂತ್ರದಿಂದ ಆದಂತಧಾತುವಾದುದರಿಂದ ಯುಗಾಗಮ. ಭುಜ=ಪಾಲನಾಭ್ಯವಹಾರಯೋಃ ಧಾತು. ಣಮುಲ್ ಪರವಾದಾಗ ಲಘೂಪಧ ಗುಣ. ದ್ವಿತ್ವ. ಭೋಜಂಭೋಜಮ್. ಶ್ರು=ಶ್ರವಣೇ. ಧಾತು. ಣಮುಲ್ ಬಂದಾಗ 'ಅಚೋಞ್ಣಿತಿ' ಸೂತ್ರದಿಂದ ವೃದ್ಧಿ. ಆವಾದೇಶ. ಶ್ರಾವಂ ಶ್ರಾವಮ್.

ಕೃಞಿಗೆ ಣಮುಲ್ ವಿಧಾಯಕ ಸೂತ್ರ.

೮೯೦. ಅನ್ಯಥೈವಂಕಥಮಿತ್ಥಂಸು ಸಿದ್ಧಾಪ್ರಯೋಗಶ್ಚೇತ್ ॥೩-೪-೨೭॥

ಏಷು ಕೃಞೋಣಮುಲ್ ಸ್ಯಾತ್। ಸಿದ್ಧೋಽಪ್ರಯೋಗೋಽಸ್ಯ ಏವಂ ಭೂತಶ್ಚೇತ್ ಕೃಞ್। ವ್ಯರ್ಥತ್ವಾತ್ಪ್ರಯೋಗಾನರ್ಹ ಇತ್ಯರ್ಥಃ॥ ಅನ್ಯಥಾಕಾರಮ್ । ಏವಙ್ಕಾರಮ್ । ಕಥಙ್ಕಾರಮ್ । ಇತ್ಥಙ್ಕಾರಂ ಭುಙ್ಕ್ತೇ । ಸಿದ್ಧೇತಿ ಕಿಮ್ ? ಶಿರೋಽನ್ಯಥಾ ಕೃತ್ವಾ ಭುಙ್ಕ್ತೇ॥ ಇತ್ಯುತ್ತರಕೃದನ್ತಮ್।

ಇತಿ ಕೃದನ್ತಮ್ ॥

ತ್ರಿಪದ ಸೂತ್ರ. 'ಕರ್ಮಣ್ಯಾಕ್ರೋಶೇ ಕೃಞಃ—' ಸೂತ್ರದಿಂದ 'ಕೃಞಃ' ಅನುವೃತ್ತಿ. ಸಿದ್ಧಃ ಅಪ್ರಯೋಗಃ ಪ್ರಯೋಗಾಭಾವಃ ಯಸ್ಯ ಕೃಞಃ ಸಃ ಸಿದ್ಧಾ

ಪ್ರಯೋಗಃ ।ಕೃಞಿನ ಪ್ರಯೋಗವಿರಬಾರದೆಂದರ್ಥ. ಅರ್ಥವು ತೋರುತ್ತಿರುವಾಗ ಅದರ ಪ್ರಯೋಗ ವ್ಯರ್ಥವೆಂದು ಭಾವ. ಸೂತ್ರಾರ್ಥ—ಅನ್ಯಥಾ, ಏವಂ, ಕಥಮ್, ಇತ್ಥಂ ಇವು ಉಪಪದವಾಗಿರುವಾಗ ಕೃಞ್ ಧಾತುವಿಗೆ ಣಮುಲ್ ಬರುತ್ತದೆ. ಕೃಞಿನ ಪ್ರಯೋಗವು ಸಿದ್ಧವಾಗಿರಬಾರದು. ಣಮುಲ್ ಪ್ರಕೃತಿಗೋಸ್ಕರ ಹೇಳಿದರೂ ಕೃಞಿನ ಅರ್ಥವಿವಕ್ಷಿತವಲ್ಲವೆಂದರ್ಥ. ಅನ್ಯಥಾ + ಕೃ + ಅಮ್. ವೃದ್ಧಿ. ಅನ್ಯಥಾಕಾರಮ್. ಹೀಗೆಯೇ ಏವಂಕಾರಮ್, ಕಥಂಕಾರಂ ।ಇತ್ಥಂಕಾರಂ ಭುಙ್ಕ್ತೇ ಎಂದು ಣಮುಲಂತಗಳನ್ನು ತಿಳಿಯಬೇಕು. ಕೃಞಿನ ವ್ಯರ್ಥಪ್ರಯೋಗವಿರುವಾಗ ಮಾತ್ರ ಈ ಣಮುಲ್. ಕೃಞಿನ ಪ್ರಯೋಗಕ್ಕೆ ಸಾರ್ಥಕ್ಯವಿರುವುದಾದರೆ ಆಗ ಣಮುಲ್ ಬರುವುದಿಲ್ಲ ಶಿರಃ ಅನ್ಯಥಾ ಕೃತ್ವಾ ಭುಙ್ಕ್ತೇ॥ (ತಲೆಯನ್ನು ಬೇರೆ ರೀತಿ ಮಾಡಿ (ತಿರುಗಿಸಿ) ಮಲಗುತ್ತಾನೆ.) ಇಲ್ಲಿ ಕೃಞಿನ ಪ್ರಯೋಗ ಅವಶ್ಯಕವಾಗಿರುವುದರಿಂದ ಸಿದ್ಧಾಪ್ರಯೋಗ ಕೃಞ್ ಆಗಲಿಲ್ಲ. ಆದುದರಿಂದ ಣಮುಲ್ ಬರಲಿಲ್ಲ. ಕ್ತ್ವಾ ಬಂದಿದೆ. ಹೀಗೆ ಉತ್ತರಕೃತ್ ಪ್ರತ್ಯಯಗಳು ವಿಸ್ತೃತವಾಗಿವೆ.

ಪಾಣಿನೀಯ ಪ್ರವೇಶಿಕಾ ವ್ಯಾಖ್ಯಾನದಲ್ಲಿ ಕೃದಂತಪ್ರಕರಣ ಮುಗಿದಿದೆ.

# ೧೬. ಅಥ ವಿಭಕ್ತ್ಯರ್ಥಾಃ

ಪ್ರಥಮಾ (ಕಾರಕ) ವಿಧಾಯಕ ಸೂತ್ರ.

೮೯೧. ಪ್ರಾತಿಪದಿಕಾರ್ಥಲಿಂಗಪರಿಮಾಣವಚನಮಾತ್ರೇ ಪ್ರಥಮಾ ||೨-೩-೪೬||

ನಿಯತೋಪಸ್ಥಿತಿಕಃ ಪ್ರಾತಿಪದಿಕಾರ್ಥಃ ।ಮಾತ್ರಶಬ್ದಸ್ಯ ಪ್ರತ್ಯೇಕಂ ಯೋಗಃ। ಪ್ರಾತಿಪದಿಕಾರ್ಥಮಾತ್ರೇ ಲಿಂಗಮಾತ್ರಾದ್ಯಾಧಿಕ್ಯೇ ಪರಿಮಾಣಮಾತ್ರೇ ಸಂಖ್ಯಾಮಾತ್ರೇ ಚ ಪ್ರಥಮಾ ಸ್ಯಾತ್ ।ಪ್ರಾತಿಪದಿಕಮಾತ್ರೇ—ಉಚ್ಚೈಃ । ನೀಚೈಃ । ಕೃಷ್ಣಃ । ಶ್ರೀಃ । ಜ್ಞಾನಮ್ । ಲಿಂಗಮಾತ್ರೇ—ತಟಃ, ತಟೀ, ತಟಮ್ ।ಪರಿಮಾಣಮಾತ್ರೇ—ದ್ರೋಣೋ ವ್ರೀಹಿಃ । ವಚನಂ ಸಂಖ್ಯಾ । ಏಕಃ, ದ್ವೌ, ಬಹವಃ॥

'ಙ್ಯಾಪ್ ಪ್ರಾತಿಪದಿಕಾತ್' ಎಂದು ಙೀಬಂತ ಆಬಂತ ಪ್ರಾತಿಪದಿಕಗಳಮೇಲೆ ಸು ಮುಂತಾದ ಇಪ್ಪತ್ತೊಂದು ವಿಭಕ್ತಿಗಳು ವಿಹಿತವಾಗಿವೆ. ಈಗ ಪ್ರಥಮಾದಿ ಸಪ್ತಮ್ಯಂತವರೆಗೆ ಏಳು ವಿಭಕ್ತಿಗಳ ಅರ್ಥವ್ಯವಸ್ಥೆಯನ್ನು ತೋರಿಸಲು ವಿಭಕ್ತ್ಯರ್ಥ ಪ್ರಕರಣವು ಆರಬ್ಧವಾಗಿದೆ. ಸು, ಔ, ಜಸ್ ಈ ಮೂರಕ್ಕೆ ಪ್ರಥಮಾ ಎಂದು ಪ್ರಾಚೀನರ

ಸಂಜ್ಞೆ. ಈಗ ಪ್ರಥಮಾರ್ಥವನ್ನು ಹೇಳುತ್ತಾನೆ. ಪ್ರಾತಿಪದಿಕಾರ್ಥಶ್ಚ, ಲಿಂಗಂ ಚ, ಪರಿಮಾಣಂ ಚ ವಚನಂ ಚ ಪ್ರಾತಿಪದಿಕಾರ್ಥಲಿಂಗಪರಿಮಾಣವಚನಾನಿ || ಪ್ರಾತಿಪ ........ವಚನಾನ್ಯೇವ ಪ್ರಾತಿಪ....ವಚನಮಾತ್ರಂ, ತಸ್ಮಿನ್. ಮಯೂರವ್ಯಂಸಕಾದಿ ಸಮಾಸ. ನಿಯತೋಪಸ್ಥಿತಿಕವಾದುದು ಪ್ರಾತಿಪದಿಕಾರ್ಥ. ನಿಯತಾ ಉಪಸ್ಥಿತಿಃ ಯಸ್ಯ ಸಃ ನಿಯತೋಪಸ್ಥಿತಿಕಃ ||ಯಾವ ಪ್ರಾತಿಪದಿಕವನ್ನು ಉಚ್ಚರಿಸಿದೊಡನೆಯೇ ಯಾವ ಅರ್ಥದ ಜ್ಞಾನವು ನಿಯತವಾಗಿ ಬರುವುದೋ ಅದೇ ಪ್ರಾತಿಪದಿಕಾರ್ಥ. ಮಾತ್ರ ಶಬ್ದಕ್ಕೆ ಪ್ರತ್ಯೇಕ ಸಂಬಂಧ 'ದ್ವಂದ್ವಾಂತೇ ಶ್ರೂಯಮಾಣಂ ಪದಂ ಪ್ರತ್ಯೇಕಮಭಿಸಂಬಂಧ್ಯತೇ' ದ್ವಂದ್ವದ ಕೊನೆಯಲ್ಲಿ ಇರುವ ಪದವು ದ್ವಂದ್ವದಲ್ಲಿ ಸೇರಿದ ಪ್ರತಿಯೊಂದು ಪದದಲ್ಲಿಯೂ ಅನ್ವಯಹೊಂದುತ್ತದೆ. ಈ ನ್ಯಾಯದಿಂದ ಮಾತ್ರ ಶಬ್ದಕ್ಕೆ ಪ್ರತ್ಯೇಕ ಸಂಬಂಧ ಹೇಳಿದರೆ ಪ್ರಾತಿಪದಿಕಾರ್ಥಮಾತ್ರೇ, ಲಿಂಗಮಾತ್ರೇ ಇತ್ಯಾದ್ಯರ್ಥವಾಗುತ್ತದೆ. ಲಿಂಗಾದಿಸ್ಥಳದಲ್ಲಿ ಪ್ರಾತಿಪದಿಕಾರ್ಥತೋರಿ ಲಿಂಗಾದಿಗಳೂ ಅಧಿಕವಾಗಿ ತೋರುವುದರಿಂದ ಲಿಂಗಮಾತ್ರಾದ್ಯಾಧಿಕ್ಯೇ ಎಂದು ಹೇಳಬೇಕು. **ಸೂತ್ರಾರ್ಥ**— ಪ್ರಾತಿಪದಿಕಾರ್ಥಮಾತ್ರ ತೋರುವಾಗಲೂ ಲಿಂಗಮಾತ್ರ ಅಧಿಕವಾಗಿ ತೋರುವಾಗಲೂ, ಪರಿಮಾಣಮಾತ್ರದಲ್ಲಿಯೂ, ವಚನಮಾತ್ರ ತೋರುವಾಗಲೂ ಪ್ರಥಮಾವಿಭಕ್ತಿ ಬರುತ್ತದೆ. ಪ್ರಾತಿಪದಿಕಮಾತ್ರದಲ್ಲಿ ಉಚ್ಚೈಃ ಇತ್ಯಾದಿ ಉದಾಹರಣೆ. ಉಚ್ಚೈಃ ಎಂದೊಡನೆಯೇ ಎತ್ತರವಾದ ಅಧಿಕರಣಜ್ಞಾನವಲ್ಲದೆ ಇನ್ನಾವ ಅರ್ಥವೂ ತೋರುವುದಿಲ್ಲ. ನೀಚೈಃ ಎಂದರೆ ಕೆಳಗಿನ ಅಧಿಕರಣಮಾತ್ರ ಪ್ರತೀತಿ. ಕೃಷ್ಣಃ ಎಂದೊಡನೆ ಪುಂಸ್ತ್ವವಿಶಿಷ್ಟವಾದ ವಾಸುದೇವರೂಪಾರ್ಥಜ್ಞಾನವೂ ಶ್ರೀಃ ಎಂದೊಡನೆ ಸ್ತ್ರೀತ್ವವಿಶಿಷ್ಟವಾದ ಲಕ್ಷ್ಮೀರೂಪಾರ್ಥಜ್ಞಾನವೂ, ಜ್ಞಾನಂ ಎಂದೊಡನೆ ನಪುಂಸಕತ್ವವಿಶಿಷ್ಟವಾದ ಜ್ಞಾನಬೋಧವೂ ಆಗುವುದರಿಂದ ಈ ಅರ್ಥಗಳೆಲ್ಲವೂ ನಿಯತೋಪಸ್ಥಿತಿಕವಾದುದರಿಂದ, (ಶಬ್ದ ಉಚ್ಚರಿಸಿದೊಡನೆಯೇ ನಿಯತವಾಗಿ ತೋರುವುದರಿಂದ) ಪ್ರಾತಿಪದಿಕಾರ್ಥಗಳಾಗುತ್ತವೆ. ಇವುಗಳ ಮೇಲೆ ಪ್ರಥಮಾ ಬರುತ್ತದೆ. ಉಚ್ಚೈಃ, ನೀಚೈಃ ಅವ್ಯಯವಾದುದರಿಂದ 'ಅವ್ಯಯಾದಾಪ್ ಸುಪಃ' ಸೂತ್ರದಿಂದ ಬಂದಿರುವ ಪ್ರಥಮಾಕ್ಕೆ ಲೋಪ ಬಂದಿದೆ. ಪ್ರಾತಿಪದಿಕಾರ್ಥ ತೋರಿ ಲಿಂಗಮಾತ್ರ ಅಧಿಕವಾಗಿ ತೋರಿರುವುದಕ್ಕೆ ತಟಃ, ತಟೀ, ತಟಮ್ ಉದಾಹರಣೆ. ಇಲ್ಲಿ ಪ್ರಾತಿಪದಿಕಾರ್ಥಕ್ಕಿಂತಲೂ ಲಿಂಗ ಅಧಿಕವಾಗಿ ತೋರುತ್ತದೆ. ನಾವು ಪದವನ್ನು ಮೂರು ವಿಧವಾಗಿ ವಿಭಾಗಿಸಬಹುದು. ಲಿಂಗವಿಲ್ಲದಿರುವವುಗಳು, ನಿಯತವಾದ ಲಿಂಗವುಳ್ಳವುಗಳು, ಅನಿಯತ ಲಿಂಗವುಳ್ಳವುಗಳು. ಲಿಂಗವಿಲ್ಲದ ಅವ್ಯಯಾದಿಗಳೂ, ನಿಯತಲಿಂಗವುಳ್ಳ ಕೃಷ್ಣಾದಿಪದಗಳೂ ಪ್ರಾತಿಪದಿಕಾರ್ಥಮಾತ್ರಕ್ಕೆ ಉದಾಹರಣೆ. ಅನಿಯತ ಲಿಂಗವುಳ್ಳ ಶಬ್ದಗಳಲ್ಲಿ ಪ್ರಾತಿಪದಿಕದಿಂದ ಯಾವ ಲಿಂಗವೂ ನಿಯತವಾಗಿ ತೋರದೆ ಇರುವುದರಿಂದ ಲಿಂಗಮಾತ್ರಾಧಿಕ್ಯಕ್ಕೆ ಅವು ಉದಾಹರಣೆ ಆಗುತ್ತವೆ. ಪರಿಮಾಣಮಾತ್ರದಲ್ಲಿ—ದ್ರೋಣೋ ವ್ರೀಹಿಃ || ದ್ರೋಣಪದವು ಪರಿಣಾಮವಿಶೇಷ

ವನ್ನು ತಿಳಿಸುತ್ತದೆ. ಪರಿಮಾಣವಿಶೇಷವು ಯದ್ಯಪಿ ಪ್ರಾತಿಪದಿಕದಿಂದಲೇ ನಿಯತ ವಾಗಿ ತೋರುತ್ತದೆ. ಆದುದರಿಂದ ಪ್ರಾತಿಪದಿಕಾರ್ಥ ಮಾತ್ರಕ್ಕೇ ಇದು ಉದಾಹರಣೆ ಯಾಗಬಹುದಿತ್ತು. ಆದರೆ ಪ್ರಥಮಾರ್ಥದೊಡನೆ ಅಭೇದಾನ್ವಯ ಹೇಳಲು ಪರಿಮಾಣವನ್ನು ಪ್ರತ್ಯೇಕವಾಗಿ ಹೇಳಿರುತ್ತಾನೆ. ನಾಮಾರ್ಥಗಳಿಗೆ ಯಾವಾಗಲೂ ಅಭೇದಾನ್ವಯವೆಂದು ಸಿದ್ಧವಾಗಿದೆ. ದ್ರೋಣ, ವ್ರೀಹಿ ನಾಮಾರ್ಥಗಳು ಇವುಗಳಿಗೆ ಭೇದದಿಂದ ಅನ್ವಯ ಕೂಡುವುದಿಲ್ಲ. ಆದುದರಿಂದ ದ್ರೋಣ ಪದದ ಮೇಲಿನ ಪ್ರಥಮಾವಿಭಕ್ತಿಗೆ ಪರಿಮಾಣ ಅರ್ಥ. ಪ್ರಕೃತ್ಯರ್ಥವಾದ ದ್ರೋಣ ಪದಕ್ಕೆ ಪ್ರತ್ಯಯಾರ್ಥಪರಿಮಾಣದಲ್ಲಿ ಅಭೇದಸಂಬಂಧದಿಂದ ಅನ್ವಯ. ದ್ರೋಣರೂಪ ಪರಮಾಣವೆಂದರ್ಥ. ಪ್ರತ್ಯಯಾರ್ಥಪರಿಮಾಣಕ್ಕೆ ವ್ರೀಹಿ ಪದಾರ್ಥದಲ್ಲಿ ಪರಿಚ್ಛೇದ್ಯ ಪರಚ್ಛೇದಕಭಾವಸಂಬಂಧದಿಂದ ಅನ್ವಯ. ದ್ರೋಣರೂಪ ಪರಿಮಾಣದಿಂದ ಪರಿಚ್ಛಿನ್ನವಾದ ವ್ರೀಹಿ. ಒಂದು ದ್ರೋಣಪರಿಮಾಣದಿಂದ ಕೂಡಿದ ಭತ್ತವೆಂದರ್ಥ. ಪ್ರತ್ಯಯಾರ್ಥನಾಮಾರ್ಥಗಳಿಗೆ ಭೇದಸಂಬಂಧ ಹೇಳಬಹುದು. ವಚನಮಾತ್ರಕ್ಕೆ— ಏಕಃ, ದ್ವೌ, ಬಹವಃ ಉದಾಹರಣೆ. ಇಲ್ಲಿ ಏಕಪದದಿಂದ ಏಕತ್ವಸಂಖ್ಯಾ ಅಭಿಹಿತ ವಾದುದರಿಂದ ಪುನಃ ಏಕತ್ವಸೂಚಕ ಸು ವಿಭಕ್ತಿ ಬರುವುದಿಲ್ಲ. 'ಉಕ್ತಾರ್ಥಾನಾಂ ಅಪ್ರಯೋಗಃ ||' ಒಂದರಿಂದ ಆ ಅರ್ಥವು ಹೇಳಿದಮೇಲೆ ಪುನಃ ಆ ಅರ್ಥಕ್ಕೆ ಇನ್ನಾವುದೂ ಬರುವುದಿಲ್ಲವೆಂದರ್ಥ. ಹಾಗೆ ದ್ವಿಶಬ್ದದಿಂದ ದ್ವಿತ್ವ ಅಭಿಹಿತವಾದ ಮೇಲೆ ಅದರಮೇಲೆ ದ್ವಿವಚನ ಔ ಬರಲಾರದು. ಹಾಗೇ ಬಹು ಶಬ್ದದ ಮೇಲೆ ಬಹುವಚನ ಜಸ್ ಬರಲಾರದು. ಆಗ ಕೇವಲ ಏಕ, ದ್ವಿ, ಬಹು ಎಂದು ಪ್ರಕೃತಿ ಗಳನ್ನು ಮಾತ್ರ ಪ್ರಯೋಗಿಸಬೇಕಾಗುತ್ತದೆ. ಆದರೆ 'ನ ಕೇವಲಾ ಪ್ರಕೃತಿಃ ಪ್ರಯೋಕ್ತವ್ಯಾ, ನಾಪಿ ಪ್ರತ್ಯಯಃ ||ಕೇವಲ ಪ್ರಕೃತಿಯನ್ನಾಗಲೀ ಕೇವಲ ಪ್ರತ್ಯಯವನ್ನಾಗಲೀ ಪ್ರಯೋಗಿಸಬಾರದು' ಎಂಬ ( ಭಾಷ್ಯ ) ವಚನದಿಂದ ಇದರ ಮೇಲೆ ಪ್ರಥಮಾ ಹೇಳಲು ಸೂತ್ರದಿಂದ ವಚನಮಾತ್ರೇ ಪ್ರಥಮಾ ಎಂದಿರುತ್ತಾನೆ. ಆಗ ಉಕ್ತಾರ್ಥಕವಾದರೂ ಸಾಧುತ್ವಸಂಪಾದನೆಗೋಸ್ಕರ ಪ್ರಥಮಾ ಬರುತ್ತದೆಂದು ತಿಳಿಯಬೇಕು. ಏಕಃ, ದ್ವೌ, ಬಹವಃ ||

ಸಂಬೋಧನೆಯಲ್ಲಿ ಪ್ರಥಮಾ ಹೇಳುವ ಸೂತ್ರ.

**೮೯೨. ಸಂಬೋಧನೇ ಚ ||೨-೩-೪೭ ||**

**ಪ್ರಥಮಾ ಸ್ಯಾತ್ | ಹೇ ರಾಮ ||**

ದ್ವಿಪದ ಸೂತ್ರ. **ಸೂತ್ರಾರ್ಥ**—ಸಂಬೋಧನರೂಪ ಅರ್ಥ ತೋರುವಾಗಲೂ ಪ್ರಥಮಾವಿಭಕ್ತಿ ಬರುತ್ತದೆ. ಪ್ರಾತಿಪದಿಕಾರ್ಥಕ್ಕಿಂತಲೂ ಸಂಬೋಧನರೂಪ ಅರ್ಥ ಅಧಿಕ ತೋರುವುದರಿಂದ ಹಿಂದಿನ ಸೂತ್ರದಿಂದ ಪ್ರಾಪ್ತಿ ಇಲ್ಲ. ಹೇ ರಾಮ || ಹೇ

ಎಂಬುದು ಸಂಬೋಧನದ್ಯೋತಕ. ದೂರ ಕಡೆ ಇರುವವನನ್ನು ತನ್ನ ಕಡೆಗೆ ಕರೆದು ತಿಳಿಸುವ ವ್ಯಾಪಾರವೇ ಸಂಬೋಧನ.

ಕರ್ಮಸಂಜ್ಞಾವಿಧಾಯಕ ಸೂತ್ರ.

೮೯೩. ಕರ್ತುರೀಪ್ಸಿತತಮಂ ಕರ್ಮ ॥ ೧-೪-೪೯ ॥

ಕರ್ತುಃ ಕ್ರಿಯಯಾ ಆಪ್ತುಮಿಷ್ಟತಮಂ ಕಾರಕಂ ಕರ್ಮಸಂಜ್ಞಂ ಸ್ಯಾತ್ ॥

ಕರ್ತುಃ, ಈಪ್ಸಿತತಮಂ, ಕರ್ಮ ॥ ತ್ರಿಪದ ಸೂತ್ರ. ಆಪ್ತುಂ ಇಷ್ಟತಮಂ ಈಪ್ಸಿತತಮಂ । ಇಚ್ಛಾ ಉದ್ದೇಶ್ಯ. ಸಂಬಂಧವನ್ನು ಹೊಂದಿಸಲು ಇಷ್ಟವಾದುದು. ಯಾವುದರ ಸಂಬಂಧವೆಂದರೆ ಕರ್ತುಃ ಎಂದುದರಿಂದ ಕರ್ತೃವಿನ ಕ್ರಿಯೆಯ ಸಂಬಂಧವೆಂದು ಲಬ್ಧವಾಗುತ್ತದೆ. ಕ್ರಿಯಾ ಎಂದರೆ ಧಾತ್ವರ್ಥ. ಫಲ, ವ್ಯಾಪಾರ ಎರಡು ಧಾತ್ವರ್ಥ. ವ್ಯಾಪಾರದಿಂದ ಹುಟ್ಟುವುದು ಫಲ. ಪ್ರಕೃತ ಕ್ರಿಯಾಸಂಬಂಧವೆಂದರೆ ವ್ಯಾಪಾರಜನ್ಯವಾದ ಫಲದ ಸಂಬಂಧವೆಂದು ತಿಳಿಯಬೇಕು. 'ಕಾರಕೇ' ಅಧಿಕಾರ. ಇಲ್ಲಿ ಪ್ರಥಮಾಂತವಾಗಿ ವಿಪರಿಣತವಾಗುತ್ತದೆ. ಕ್ರಿಯೆಯನ್ನು ಹುಟ್ಟಿಸುವುದು ಕಾರಕ. 'ಕ್ರಿಯಾಂ ಕರೋತಿ ನಿಷ್ಪಾದಯತಿ' ಎಂದು ಭಾಷ್ಯದಲ್ಲಿ ಹೇಳಿರುತ್ತಾರೆ. ಪ್ರತಿಯೊಂದು ಕಾರಕವೂ ತನ್ನ ತನ್ನ ಕ್ರಿಯೆಯಿಂದ ಪ್ರಧಾನಕ್ರಿಯೆಯನ್ನು ಹುಟ್ಟಿಸಿ ಕೊಡುತ್ತದೆ. ಸೂತ್ರಾರ್ಥ—ಕರ್ತೃವು ತನ್ನ ವ್ಯಾಪಾರದಿಂದ ಉಂಟಾದ ಫಲದ ಸಂಬಂಧವನ್ನು ಯಾವುದಕ್ಕೆ ಅತಿಶಯವಾಗಿ ಹೊಂದಿಸಲು ಬಯಸುವನೋ ಆ ಕಾರಕಕ್ಕೆ ಕರ್ಮ ಎಂಬ ಸಂಜ್ಞೆ ಬರುತ್ತದೆ. ಹರಿಂ ಭಜತಿ ಎಂದು ಮುಂದೆ ಉದಾಹರಣೆ ಕೊಡುತ್ತಾನೆ. ಚೈತ್ರನು ಕರ್ತೃವಾದರೆ ಅವನಲ್ಲಿರುವ ಕ್ರಿಯಾಪ್ರೀತ್ಯನುಕೂಲ ವ್ಯಾಪಾರ. ಪ್ರೀತಿ ಫಲ. ಅದನ್ನು ಹುಟ್ಟಿಸುವುದು ವ್ಯಾಪಾರ. ವ್ಯಾಪಾರಜನ್ಯ ( ಹುಟ್ಟಿದ ) ಫಲಸಂಬಂಧವು ಹರಿಗೆ ಆಗಬೇಕೆಂದು ಅತಿಶಯ ಇಚ್ಛೆ ಇರುವುದರಿಂದ ಹರಿಯು ಕರ್ಮಸಂಜ್ಞೆಯನ್ನು ಹೊಂದುತ್ತಾನೆ. ನನ್ನ ವ್ಯಾಪಾರದಿಂದ ಹುಟ್ಟಿದ ಪ್ರೀತಿರೂಪಫಲಾಶ್ರಯನು ಹರಿಯಾಗಲಿ ಎಂಬ ಇಚ್ಛೆಯಲ್ಲಿ ಉದ್ದೇಶ್ಯನಾದವನು ಹರಿ. ಹೀಗೆಯೇ ಗ್ರಾಮಂ ಗಚ್ಛತಿ ಎಂಬಲ್ಲಿಯೂ ಸಂಯೋಗಾನುಕೂಲ (ಹುಟ್ಟಿಸುವ) ವ್ಯಾಪಾರ ಧಾತ್ವರ್ಥ. ನನ್ನ ವ್ಯಾಪಾರದಿಂದ ಉಂಟಾದ ಸಂಯೋಗರೂಪಫಲವು ಗ್ರಾಮದಲ್ಲಾಗಲಿ ಎಂಬ ಚೈತ್ರನ ಇಚ್ಛೆಯಿರುವುದರಿಂದ ಇಚ್ಛೆಯಲ್ಲಿ ಉದ್ದೇಶ್ಯವಾದುದು ಗ್ರಾಮ. ಆದುದರಿಂದ ಗ್ರಾಮವು ಕರ್ಮ. ಚೈತ್ರಃ ತಂಡುಲಂ ಪಚತಿ ॥ ಇಲ್ಲಿ ವಿಕ್ಲಿತ್ಯನುಕೂಲವ್ಯಾಪಾರ ಧಾತ್ವರ್ಥ. ವಿಕ್ಲಿತ್ತಿಯೆಂದರೆ ಮೆತ್ತಗಾಗುವಿಕೆ. ಅನುಕೂಲವೆಂದರೆ ಜನಕವೆಂದರ್ಥ. ಪಾಕ ವ್ಯಾಪಾರದಿಂದುಂಟಾದ ವಿಕ್ಲಿತ್ತಿಯು

ತಂಡುಲ (ಅಕ್ಕಿ)ವಲ್ಲಾಗಲಿಯೆಂದು ಇಚ್ಛೆ ಈರುವುದರಿಂದ ಇಚ್ಛೆಯಲ್ಲಿ ಉದ್ದೇಶ್ಯವಾದುದು ತಂಡುಲವಾದುದರಿಂದ ತಂಡುಲ ಕರ್ಮವಾಗುತ್ತದೆ.

ಕರ್ಮಕ್ಕೆ ದ್ವಿತೀಯಾ ಹೇಳುವ ಸೂತ್ರ.

೮೯೪. ಕರ್ಮಣಿ ದ್ವಿತೀಯಾ ||೨-೩-೨||

ಅನುಕ್ತೇ ಕರ್ಮಣಿ ದ್ವಿತೀಯಾ ಸ್ಯಾತ್ । ಹರಿಂ ಭಜತಿ । ಅಭಿಹಿತೇ ತು ಕರ್ಮಾದೌ ಪ್ರಥಮಾ—ಹರಿಃ ಸೇವ್ಯತೇ । ಲಕ್ಷ್ಮ್ಯಾ ಸೇವಿತಃ ||

ದ್ವಿಪದ ಸೂತ್ರ. 'ಅನಭಿಹಿತೇ' ಅಧಿಕಾರ. ಸೂತ್ರಾರ್ಥ— ಕರ್ಮವು ಅಭಿಹಿತವಾಗದಿರುವಾಗ ಕರ್ಮಕ್ಕೆ ದ್ವಿತೀಯಾವಿಭಕ್ತಿ ಬರುತ್ತದೆ. ಹರಿಂ ಭಜತಿ|| ಭಜನದಲ್ಲಿ ಹರಿಯು ಕರ್ಮವಾಗುತ್ತದೆಂದು ಹಿಂದೆ ವಿವರಿಸಿದೆ. ಇಲ್ಲಿ ಕರ್ಮವು ಯಾವುದರಿಂದಲೂ ಅಭಿಹಿತವಾಗದಿರುವುದರಿಂದ ಹರಿ ಶಬ್ದದ ಮೇಲೆ ದ್ವಿತೀಯಾ ವಿಭಕ್ತಿ ಬಂದಿದೆ. ಕರ್ಮವು ಯಾವುದರಿಂದಲಾದರೂ ಅಭಿಹಿತವಾದರೆ ಆಗ ಕರ್ಮದ ಮೇಲೆ ಪ್ರಥಮಾವಿಭಕ್ತಿ ಬರುತ್ತದೆ. ಸಾಮಾನ್ಯವಾಗಿ ತಿಙ್, ಕೃತ್, ತದ್ಧಿತ, ಸಮಾಸಾದಿಗಳಿಂದ ಕರ್ಮಾದಿಕಾರಕಗಳು ಅಭಿಹಿತವಾಗುತ್ತವೆ. ಹರಿಂ ಭಜತಿ ಎಂಬಲ್ಲಿ ತಿ ಎಂಬ ತಿಙ್ ಕರ್ತೃವನ್ನು ಹೇಳುತ್ತದೆ. ಆಗ ಕರ್ತೃ ತಿಙ್‌ನಿಂದ ಅಭಿಹಿತವಾದುದರಿಂದ ಕರ್ತೃವಿಗೆ ಪ್ರಥಮಾವಿಭಕ್ತಿ. ಹರಿಃ ಸೇವ್ಯತೇ ಚೈತ್ರೇಣ || ಹರಿಯು ಚೈತ್ರನಿಂದ ಸೇವಿಸಲ್ಪಡುತ್ತಾನೆ. ಇದು ಕರ್ಮಣಿಪ್ರಯೋಗ. ಇಲ್ಲಿ ತೇ ಎಂಬ ತಿಙ್ ಕರ್ಮವನ್ನು ಹೇಳುವುದರಿಂದ ಕರ್ಮಕ್ಕೆ (ಹರಿ) ಪ್ರಥಮಾವಿಭಕ್ತಿ. ಕರ್ತೃ (ಚೈತ್ರ) ಹೇಳಲ್ಪಡದಿರುವುದರಿಂದ (ಕರ್ತೃವಿನ) ತೃತೀಯಾವಿಭಕ್ತಿ ಬಂದಿದೆ. ಲಕ್ಷ್ಮ್ಯಾ ಸೇವಿತಃ || ಇಲ್ಲಿ ಸೇವಿತಃ ಎಂಬಲ್ಲಿರುವ ಕ್ತಪ್ರತ್ಯಯ (ಕೃತ್) ದಿಂದ ಕರ್ಮವು ಅಭಿಹಿತವಾದುದರಿಂದ ಹರಿರೂಪ ಕರ್ಮಕ್ಕೆ ದ್ವಿತೀಯಾ ಬರುವುದಿಲ್ಲ. ಲಕ್ಷ್ಮಿ ಕರ್ತೃ ಆದುದರಿಂದ ಅದು ಅಭಿಹಿತವಾಗದಿರುವುದರಿಂದ ತೃತೀಯಾ ಬಂದಿದೆ. ತದ್ಧಿತದಿಂದ ಅಭಿಹಿತವಾದಾಗಲೂ ಪ್ರಥಮಾ. ಶತೇನ ಕ್ರೀತಃ ಶತ್ಯಃ || ನೂರರಿಂದ ಕೊಳ್ಳಲ್ಪಟ್ಟದ್ದು. ಸಮಾಸಕ್ಕೆ—ಪ್ರಾಪ್ತಃ ಆನಂದಃ ಯಂ ಸಃ ಪ್ರಾಪ್ತಾನಂದಃ|| ಆನಂದ ಹೊಂದಿದವ. ಕೆಲವು ಕಡೆ ನಿಪಾತದಿಂದಲೂ ಅಭಿಹಿತವಾಗುತ್ತದೆ. ಹೀಗೆ ಅಭಿಧಾನವನ್ನು ತಿಳಿದು ಎಲ್ಲಿ ಅಭಿಹಿತವಾಗಿಲ್ಲವೋ ಅಲ್ಲಿ ಮಾತ್ರ ಆಯಾಯ ಕಾರಕಗಳ ವಿಭಕ್ತಿ ಬರುತ್ತದೆಂದು ತಿಳಿಯಬೇಕು.

ಅಪಾದಾನಾದಿಗಳಿಗೆ ಅವಿವಕ್ಷೆಯಿರುವಾಗ ಕರ್ಮಸಂಜ್ಞೆ ಹೇಳುವ ಸೂತ್ರ.

೮೬೫. ಅಕಥಿತಂ ಚ ||೧-೪-೫೧||

ಅಪಾದಾನಾದಿ ವಿಶೇಷೈರವಿವಕ್ಷಿತೇ ಕಾರಕಂ ಕರ್ಮಸಂಜ್ಞಂ ಸ್ಯಾತ್||

ದುಹ್ಯಾಚ್‌ಪಚ್‌ದಂಡ್‌ರುಧಿಪ್ರಚ್ಛಿಚಿಬ್ರೂಶಾಸುಜಿಮಥ್‌ಮುಷಾಮ್ |
ಕರ್ಮಯುಕ್ ಸ್ಯಾದಕಥಿತಂ ತಥಾ ಸ್ಯಾನ್ನೀಹೃಕೃಷ್ವಹಾಮ್||

ಗಾಂ ದೋಗ್ಧಿ ಪಯಃ| ಬಲಿಂ ಯಾಚತೇ ವಸುಧಾಮ್ | ತಂಡುಲಾನೋದನಂ ಪಚತಿ |ಗರ್ಗಾನ್ ಶತಂ ದಂಡಯತಿ |ವ್ರಜಮವರುಣದ್ಧಿ ಗಾಮ್ | ಮಾಣವಕಂ ಪಂಥಾನಂ ಪೃಚ್ಛತಿ |ವೃಕ್ಷಮವಚಿನೋತಿ ಫಲಾನಿ| ಮಾಣವಕಂ ಧರ್ಮಂ ಬ್ರೂತೇ ಶಾಸ್ತಿ ವಾ ಶತಂ ಜಯತಿ ದೇವದತ್ತಮ್| ಸುಧಾಂ ಕ್ಷೀರನಿಧಿಂ ಮಥ್ನಾತಿ| ದೇವದತ್ತಂ ಶತಂ ಮುಷ್ಣಾತಿ| ಗ್ರಾಮಮಜಾಂ ಹರತಿ, ಕರ್ಷತಿ, ವಹತಿ ವಾ| ಅರ್ಥನಿಬಂಧನೇಯಂ ಸಂಜ್ಞಾ| ಬಲಿಂ ಭಿಕ್ಷತೇ ವಸುಧಾಮ್| ಮಾಣವಕಂ ಧರ್ಮಂ ಭಾಷತೇ ಅಭಿಧತ್ತೇ ವಕ್ತೀತ್ಯಾದಿ||

ದ್ವಿಪದ ಸೂತ್ರ. ಅಕಥಿತವೆಂದರೆ ಹೇಳಲ್ಪಡದಿರುವುದು ಎಂದರ್ಥವಾಗುತ್ತದೆ. ಹೇಳದಿರುವುದಕ್ಕೆ ಕರ್ಮಸಂಜ್ಞೆ ಹೇಳುವುದು ಅಸಂಭವ. ಆದುದರಿಂದ ಅವಿವಕ್ಷಿತ ಎಂದರ್ಥಮಾಡಬೇಕು. ಪೂರ್ವದಲ್ಲಿ ಅಪಾದಾನಾದಿಗಳು ಪ್ರಸಕ್ತವಾದುದರಿಂದ ಅವುಗಳಿಗೆ ಅವಿವಕ್ಷಾ. **ಸೂತ್ರಾರ್ಥ**—ಅಪಾದಾನ, ಸಂಪ್ರದಾನ, ಅಧಿಕರಣತ್ವ ರೂಪ ಕಾರಕಗಳನ್ನು ಅವಿವಕ್ಷಾಮಾಡಿ ಕರ್ಮಕಾರಕ ಎಂದು ವಿವಕ್ಷಾಮಾಡಿರುವ ಕಾರಕಕ್ಕೆ ಕರ್ಮಸಂಜ್ಞೆ ಬರುತ್ತದೆ. ಒಂದು ಕಡೆ ಅಪಾದಾನಕಾರಕವಾಗಿರುತ್ತದೆ. ಆಗ ಅದು ಅಪಾದಾನಕಾರಕವಲ್ಲವೆಂದು ನಾವು ವಿವಕ್ಷಾ ಮಾಡಿ ಅದು ಕರ್ಮಕಾರಕವೆಂದು ತಿಳಿಯುವುದು. ಗಾಂ ದೋಗ್ಧಿ ಪಯಃ ||ಇದು ಉದಾಹರಣೆ. ಹಾಲು ಕರೆಯಲು ಅವಧಿಯಾದುದರಿಂದ ಹಸುವಿನ ದೆಸೆಯಿಂದ ಹಾಲನ್ನು ಕರೆಯುತ್ತಾನೆ ಎಂದು ವಾಸ್ತವಪ್ರಯೋಗ. ಇಲ್ಲಿ ಹಸುವು ಅಪಾದಾನ. ಹಸುವಿಗೆ ಅಪಾದಾನತ್ವ ವಿವಕ್ಷಾಮಾಡದೆ ಕರ್ಮತ್ವವಿವಕ್ಷಾ ಮಾಡಿದಾಗ ಗೋವು ಕರ್ಮವಾಗುತ್ತದೆ. ಆಗ ಪಂಚಮಿಗೆ ಬದಲಾಗಿ ದ್ವಿತೀಯಾವಿಭಕ್ತಿ ಬರುತ್ತದೆ. ಹೀಗೆ ಎಲ್ಲಾ ಕಡೆಯಲ್ಲಿಯೂ ಆಯಾಯ ಕಾರಕಗಳಿಗೆ ಕರ್ಮತ್ವವಿವಕ್ಷಾ ಮಾಡಿದಾಗ ದ್ವಿತೀಯಾ ಬರಬೇಕಾಗುತ್ತದೆ. ಆದರೆ ಕೆಲವು ನಿಯಮಿತ ಧಾತುಯೋಗವಿರುವಾಗ ಮಾತ್ರ ಹೀಗೆ ಕರ್ಮತ್ವ ವಿವಕ್ಷಾ ಮಾಡಬೇಕೆಂದು ಭಾಷ್ಯದಲ್ಲಿ ನಿಯಮಮಾಡಿರುತ್ತಾರೆ. ಅದನ್ನೇ ದುಹ್ ಯಾಚೆಂಬ ಕಾರಿಕೆಯಲ್ಲಿ ವಿವರಿಸಿದೆ. ದುಹ್, ಯಾಚ್, ಪಚ್, ದಂಡ್, ರುಧಿ, ಪ್ರಚ್ಛಿ, ಚಿ, ಬ್ರೂ, ಶಾಸು, ಜಿ, ಮಥ್, ಮುಷ್—ಈ ಹನ್ನೆರಡು ಧಾತುಗಳಲ್ಲಿಯೂ,

ಹಾಗೆಯೇ ನೀ, ಹೃ, ಕೃಷ್, ವಹ್—ಈ ನಾಲ್ಕು ಧಾತುಗಳ ಯೋಗವಿರುವಾಗಲೂ ಕರ್ಮಸಂಬಂಧಿಯಾದ ಅಪಾದಾನಾದಿಗಳಿಗೆ ಕರ್ಮವಿವಕ್ಷೆ. ಇತರ ಧಾತುಗಳ ಯೋಗವಿರುವಾಗ ಇಲ್ಲ. ಅದರಲ್ಲಿಯೂ ದುಹ್, ದಂಡ್, ಚಿಞ್, ಜಿ, ಮಥ್, ಮುಷ್—ಈ ಧಾತುಗಳಲ್ಲಿ ಅಪಾದಾನಕ್ಕೆ ಅವಿವಕ್ಷೆಯೂ, ಕರ್ಮತ್ವಕ್ಕೆ ವಿವಕ್ಷೆಯೂ ಮಾಡಿದಾಗ ದ್ವಿತೀಯಾ, ಅಪಾದಾನತ್ವವಿವಕ್ಷಾ ಇರುವಾಗ ಪಂಚಮಿಯೂ ಬರುತ್ತದೆ. ರುಧ್ ಧಾತುವಿನಲ್ಲಿ ಅಧಿಕರಣತ್ವಕ್ಕೆ ಅವಿವಕ್ಷೆಯೂ, ಕರ್ಮತ್ವಕ್ಕೆ ವಿವಕ್ಷೆಯೂ ಇರುವಾಗ ದ್ವಿತೀಯಾ. ಅಧಿಕರಣತ್ವವಿವಕ್ಷಾ ಇರುವಾಗ ಸಪ್ತಮೀ. ಬ್ರೂ, ಶಾಸ್ ಧಾತುಗಳಲ್ಲಿ ಸಂಪ್ರದಾನತ್ವಕ್ಕೆ ಅವಿವಕ್ಷೆಯೂ ಕರ್ಮತ್ವಕ್ಕೆ ವಿವಕ್ಷೆಯೂ ಇರುವಾಗ ದ್ವಿತೀಯಾ. ಸಂಪ್ರದಾನತ್ವವಿವಕ್ಷಾ ಇರುವಾಗ ಚತುರ್ಥೀ. ಇತರ ಧಾತುಗಳಲ್ಲಿ ಕರ್ಮತ್ವವಿವಕ್ಷಾ ಇರುವಾಗ ದ್ವಿತೀಯಾ. ಹೀಗೆ ಅಪಾದಾನತ್ವಾದಿಗಳಿಗೆ ಅವಿವಕ್ಷಾ ಮಾಡಿ ಕರ್ಮತ್ವಕ್ಕೆ ವಿವಕ್ಷಾ ಮಾಡಿ ಕರ್ಮಸಂಜ್ಞೆ ಬಂದರೆ ಅದಕ್ಕೆ ಗೌಣಕರ್ಮ ವೆನ್ನುತ್ತಾರೆ. ವಾಸ್ತವಕರ್ಮಕ್ಕೆ ಮುಖ್ಯ ಕರ್ಮವೆಂದು ಹೆಸರು. ಕ್ರಮವಾಗಿ ಉದಾಹರಣೆ: 'ಗಾಂ ದೋಗ್ಧಿ ಪಯಃ ||' ಗೋವಿಗೆ ವಾಸ್ತವವಾಗಿರುವ ಅಪಾದಾನತ್ವವನ್ನು ಅವಿವಕ್ಷಾಮಾಡಿ ಕರ್ಮಕಾರಕ ಎಂದು ವಿವಕ್ಷಾಮಾಡಿದುದರಿಂದ ದ್ವಿತೀಯಾ ಬಂದಿದೆ. ಬಲಿಂ ಯಾಚತೇ ವಸುಧಾಮ್ | ಬಲಿಯನ್ನು ಭೂಮಿಯನ್ನು ಬೇಡುತ್ತಾನೆ. ಬಲಿಯು ಗೌಣಕರ್ಮ. ತಂಡುಲಾನೋದನಂ ಪಚತಿ || ಅಕ್ಕಿಯನ್ನು ಅನ್ನವನ್ನು ಬೇಯಿಸುತ್ತಾನೆ. ತಂಡುಲ ಗೌಣಕರ್ಮ. ಗರ್ಗಾನ್ ಶತಂ ದಂಡಯತಿ || ಗರ್ಗದೇಶದವರನ್ನು ನೂರನ್ನು ಶಿಕ್ಷಿಸುತ್ತಾನೆ. ಗರ್ಗರು ಗೌಣಕರ್ಮ. ವ್ರಜಮವರುಣದ್ಧಿ ಗಾಮ್ || ಕೊಟ್ಟಿಗೆಯನ್ನು ಹಸುವನ್ನು ತಡೆಯುತ್ತಾನೆ. ವ್ರಜಗೌಣಕರ್ಮ. ಅಧಿಕರಣಕ್ಕೆ ಕರ್ಮತ್ವವಿವಕ್ಷಾ. ಮಾಣವಕಂ ಪಂಥಾನಂ ಪೃಚ್ಛತಿ || ಹುಡುಗನನ್ನು ದಾರಿಯನ್ನು ಕೇಳುತ್ತಾನೆ. ಮಾಣವಕ ಗೌಣಕರ್ಮ. ವೃಕ್ಷಮವಚಿನೋತಿ ಫಲಾನಿ || ಮರವನ್ನು ಹಣ್ಣುಗಳನ್ನು ಆರಿಸುತ್ತಾನೆ. ವೃಕ್ಷಗೌಣಕರ್ಮ. ಮಾಣವಕಂ ಧರ್ಮಂ ಬ್ರೂತೇ ಶಾಸ್ತಿ ವಾ || ಹುಡುಗನನ್ನು ಧರ್ಮವನ್ನು ಬೋಧಿಸುತ್ತಾನೆ. ಮಾಣವಕ ಗೌಣಕರ್ಮ. ಸಂಪ್ರದಾನಕ್ಕೆ ಕರ್ಮತ್ವವಿವಕ್ಷಾ ಬಂದಿದೆ. ಶತಂ ಜಯತಿ ದೇವದತ್ತಮ್ || ದೇವದತ್ತನನ್ನು ನೂರನ್ನು ಜಯಿಸುತ್ತಾನೆ. ದೇವದತ್ತ ಗೌಣಕರ್ಮ. ಸುಧಾಂ ಕ್ಷೀರನಿಧಿಂ ಮಥ್ನಾತಿ || ಸಮುದ್ರವನ್ನು ಅಮೃತವನ್ನು ಕಡೆಯುತ್ತಾನೆ. ಕ್ಷೀರನಿಧಿ ಗೌಣಕರ್ಮ. ಅದು ಅಪಾದಾನವಾಗಿದೆ. ದೇವದತ್ತಂ ಶತಂ ಮುಷ್ಣಾತಿ|| ದೇವದತ್ತನನ್ನು ನೂರನ್ನು ಅಪಹರಿಸುತ್ತಾನೆ. ದೇವದತ್ತ ಗೌಣಕರ್ಮ. ಗ್ರಾಮಂ ಅಜಾಂ ನಯತಿ, ಹರತಿ, ಕರ್ಷತಿ, ವಹತಿ ವಾ || ಗ್ರಾಮವನ್ನು ಆಡನ್ನು ಒಯ್ಯುತ್ತಾನೆ, ಅಪಹರಿಸುತ್ತಾನೆ, ಎಳೆದುಕೊಂಡು ಹೋಗುತ್ತಾನೆ, ಹೊತ್ತುಕೊಂಡು ಹೋಗುತ್ತಾನೆ. ಗ್ರಾಮ ಗೌಣಕರ್ಮ. ಗ್ರಾಮದಲ್ಲಿ ಎಂದು ಅಧಿಕರಣವಾದುದರಿಂದ ಸಪ್ತಮೀ ಬರಬೇಕಿತ್ತು. ಕರ್ಮತ್ವವಿವಕ್ಷಾ ಮಾಡಿದೆ. ಅರ್ಥನಿಬಂಧನೇಯಂ

ಸಂಜ್ಞಾ ॥ ದುಹ್ ಮುಂತಾದವುಗಳ ಯೋಗವಿರುವಾಗ ಮಾತ್ರ ಈ ಅಕಥಿತ ಕರ್ಮ ಸಂಜ್ಞೆ ಬರುವುದೆಂದು ಹೇಳಿದರೂ ದುಹ್ ಮುಂತಾದ ಧಾತ್ವರ್ಥಗಳಿರುವ ಧಾತುಗಳ ಯೋಗವಿರುವಾಗಲೂ ಬರುತ್ತದೆಂದು ತಿಳಿಯಬೇಕು. ಬಲಿಂ ಭಿಕ್ಷತೇ ವಸು ಧಾಮ್ ॥ ಬಲಿಯನ್ನು ಭೂಮಿಯನ್ನು ಬೇಡುತ್ತಾನೆ. ಯಾಚ್ ಧಾತು ಪರಿಗಣಿತ ವಾಗಿದೆ. ಯಾಚಿನ ಅರ್ಥ ಭಿಕ್ಷ ಧಾತುವಿಗೆ ಇರುವುದರಿಂದ ಅದರ ಯೋಗವಿರು ವಾಗಲೂ ಬಲಿಗೆ ಕರ್ಮತ್ವವಿವಕ್ಷಾ ಬಂದಿದೆ. ಹಾಗೆಯೇ, ಮಾಣವಕಂ ಧರ್ಮಂ ಭಾಷತೇ, ಅಭಿಧತ್ತೇ, ವಕ್ತೀತ್ಯಾದಿ ॥ ಹುಡುಗನನ್ನು ಧರ್ಮವನ್ನು ಹೇಳುತ್ತಾನೆ. ಬ್ರೂಞ್ ಧಾತುವು ಹೇಳಿರುವುದರಿಂದ ಅದರ ಅರ್ಥವುಳ್ಳ ಭಾಷ, ಅಭಿಧಾಞ್, ವಚ ಮುಂತಾದ ಧಾತುಗಳ ಯೋಗವಿರುವಾಗಲೂ ಕರ್ಮತ್ವವಿವಕ್ಷಾ ಬರುತ್ತದೆ. ಇಲ್ಲಿ ಸಂಪ್ರದಾನಕ್ಕೆ ಕರ್ಮಸಂಜ್ಞೆ ಬಂದಿದೆ. ಹೀಗೆ ಗೌಣಕರ್ಮವನ್ನು ತಿಳಿಯ ಬೇಕು.

ಇತಿ ದ್ವಿತೀಯಾ ॥

ಕರ್ತೃಸಂಜ್ಞೆ ಹೇಳುವ ಸೂತ್ರ.

೮೯೬. ಸ್ವತನ್ತ್ರಃ ಕರ್ತಾ ॥ ೧-೪-೫೪ ॥

**ಕ್ರಿಯಾಯಾಂ ಸ್ವಾತನ್ತ್ರ್ಯೇಣ ವಿವಕ್ಷಿತೋಽರ್ಥಃ ಕರ್ತಾ ಸ್ಯಾತ್ ॥**

ದ್ವಿಪದ ಸೂತ್ರ. ಕಾರಕಪ್ರಕರಣವಾದುದರಿಂದ ಕ್ರಿಯೆಯಲ್ಲಿ ಸ್ವಾತಂತ್ರ್ಯ ವೆಂದು ತಿಳಿಯಬೇಕು. ಕಟ್ಟಿಗೆ ಮುಂತಾದವುಗಳಿಗೂ ಕರ್ತೃಸಂಜ್ಞೆ ಇಷ್ಟವಾದುದ ರಿಂದ ವಿವಕ್ಷಾ ಎಂದಿದೆ. **ಸೂತ್ರಾರ್ಥ**—ಧಾತ್ವರ್ಥದಿಂದ ತೋರುವ ಪಾಕಾದಿ ಕ್ರಿಯೆಯಲ್ಲಿ ಯಾವ ಪದಾರ್ಥವು ಪ್ರಧಾನವೆಂದು ವಿವಕ್ಷಿತವಾಗಿದೆಯೋ ಅದು ಕರ್ತೃಸಂಜ್ಞೆಯನ್ನು ಹೊಂದುತ್ತದೆ. 'ಈ ಕ್ರಿಯೆಯು ಇದರಿಂದಲೇ ಸಾಧಿಸಲ್ಪಡು ತ್ತದೆ' ಎಂಬುದೇ ವಿವಕ್ಷಾಸ್ವರೂಪ. ಒಂದು ತಪ್ಪಲೆಯಲ್ಲಿ ಅಕ್ಕಿ ಹಾಕಿದೊಡನೇ ಬೆಂದರೆ ಆಗ ಪಾಕಸೌಲಭ್ಯ ತಿಳಿಸಲು ತಪ್ಪಲೆಯೇ ಕರ್ತೃವಾಗುತ್ತದೆ. ಸ್ಥಾಲೀ ಪಚತಿ ಬೆಂಕಿ ಚೆನ್ನಾಗಿ ಉರಿಯುವುದಾದರೆ, ಅಗ್ನಿಃ ಪಚತಿ ॥ ಎಂದು ಅಗ್ನಿಯೂ ಕರ್ತೃವಾಗುತ್ತದೆ. ಹೀಗೆ ಆಯಾಯ ಕಾರಕಗಳಿಗೆ ಅವುಗಳಲ್ಲಿರುವ ವ್ಯಾಪಾರವೇ ಪ್ರಧಾನವೆಂದು ವಿವಕ್ಷಾಮಾಡಿದಾಗ ಕರ್ತೃಸಂಜ್ಞೆ ಬರುತ್ತದೆ.

ಕರಣಸಂಜ್ಞಾವಿಧಾಯಕ ಸೂತ್ರ.

೮೯೭. ಸಾಧಕತಮಂ ಕರಣಮ್ ॥ ೧-೪-೪೨ ॥

ಕ್ರಿಯಾಸಿದ್ಧೌ ಪ್ರಕೃಷ್ಟೋಪಕಾರಕಂ ಕರಣಸಂಜ್ಞಂ ಸ್ಯಾತ್ ॥

ದ್ವಿಪದ ಸೂತ್ರ.—ಸೂತ್ರಾರ್ಥ ಕ್ರಿಯೆಯುಂಟಾಗಬೇಕಾದರೆ ಯಾವುದು ಅತಿಶಯ ಉಪಕಾರಕವೋ ಅದು ಕರಣಸಂಜ್ಞೆಯನ್ನು ಹೊಂದುತ್ತದೆ. ಯಾವ ಕಾರಕನ ವ್ಯಾಪಾರವಾದೊಡನೆಯೇ ಪ್ರಧಾನಫಲವುಂಟಾಗುವುದೋ ಅದೇ ಪ್ರಕೃಷ್ಟೋಪಕಾರಕ. ಎಲ್ಲವೂ ಕ್ರಿಯಾ ಉಪಕಾರಕಗಳೇ. ಆದರೂ ಅತಿಶಯ ಉಪಕಾರಕ ಒಂದೇ ಎಂದು ಪರಿಗಣಿತವಾಗುತ್ತದೆ. ಅದೇ ಕರಣ.

ಕರ್ತೃ, ಕರಣಗಳಿಗೆ ತೃತೀಯಾ ಹೇಳುವ ಸೂತ್ರ.

೬೯೮. ಕರ್ತೃಕರಣಯೋಸ್ತೃತೀಯಾ ॥ ೨-೩-೧೮ ॥

**ಅನಭಿಹಿತೇ ಕರ್ತರಿ ಕರಣೇ ಚ ತೃತೀಯಾ ಸ್ಯಾತ್ । ರಾಮೇಣ ಬಾಣೇನ ಹತೋ ವಾಲೀ ॥**

ಕರ್ತೃಕರಣಯೋಃ, ತೃತೀಯಾ ॥ ದ್ವಿಪದ ಸೂತ್ರ. 'ಅನಭಿಹಿತೇ' ಅಧಿಕಾರ. ಸೂತ್ರಾರ್ಥ—ಯಾವುದರಿಂದಲೂ ಅಭಿಹಿತವಾಗದೆ ಇರುವಾಗ ಕರ್ತೃವಿನ ಮೇಲೂ ಕರಣದ ಮೇಲೂ ತೃತೀಯಾವಿಭಕ್ತಿ ಬರುತ್ತದೆ. ಎರಡಕ್ಕೂ ಒಂದೇ ಉದಾಹರಣೆ ತೋರಿಸುತ್ತಾನೆ. 'ರಾಮೇಣ ಬಾಣೇನ ಹತೋ ವಾಲೀ ॥' ರಾಮನಿಂದ ಬಾಣದಿಂದ ವಾಲಿಯು ಕೊಲ್ಲಲ್ಪಟ್ಟನು. ಇಲ್ಲಿ ಕೊಲ್ಲುವುದು ಕ್ರಿಯಾ. ಇದರಲ್ಲಿ ಪ್ರಧಾನನು ರಾಮ. ಆದುದರಿಂದ ಅವನಿಗೆ ಕರ್ತೃಸಂಜ್ಞೆ ಬರುತ್ತದೆ. ವಾಲಿಯು ಕರ್ಮ, ಬಾಣ ಕರಣ. ರಾಮನು ಬಾಣಪ್ರಯೋಗಿಸುತ್ತಾನೆ. ಬಾಣದ ವ್ಯಾಪಾರವಾದೊಡನೆಯೇ ಪ್ರಾಣವಿಯೋಗರೂಪ ಹನನವಾಗುತ್ತದೆ. ಆದುದರಿಂದ ಅದು ಪ್ರಕೃಷ್ಟೋಪಕಾರಕ. ಹತಃ ಎಂಬಲ್ಲಿರುವ ಕ್ತಪ್ರತ್ಯಯದಿಂದ ಕರ್ಮವು ಹೇಳಲ್ಪಟ್ಟುದರಿಂದ ಅದಕ್ಕೆ ಪ್ರಥಮಾ ಬಂದಿದೆ. ಕರ್ತೃ, ಕರಣ ಅಭಿಹಿತವಾಗಿರುವುದರಿಂದ ತೃತೀಯಾ ಬಂದಿದೆ.

ಇತಿ ತೃತೀಯಾ ॥

ಸಂಪ್ರದಾನಸಂಜ್ಞೆ ಹೇಳುವ ಸೂತ್ರ.

೬೯೯. **ಕರ್ಮಣಾ ಯಮಭಿಪ್ರೈತಿ ಸ** ಸಮ್ಪ್ರದಾನಮ್ ॥ ೧-೪-೩೨ ॥ **ದಾನಸ್ಯ ಕರ್ಮಣಾ ಯಮಭಿಪ್ರೈತಿ** ಸ ಸಂಪ್ರದಾನಸಂಜ್ಞಃ ಸ್ಯಾತ್ ॥

ಕರ್ಮಣಾ, ಯಂ, ಅಭಿಪ್ರೈತಿ, ಸಃ, ಸಂಪ್ರದಾನಮ್ ॥ ಐದು ಪದಗಳುಳ್ಳ ಸೂತ್ರ. ಸೂತ್ರಾರ್ಥ—ದಾನದ ಕರ್ಮದ ಸಂಬಂಧವನ್ನು ಯಾರಿಗೆ ಹೊಂದಿಸಲು ಬಯಸುತ್ತಾನೋ ಅದು ಸಂಪ್ರದಾನ ಸಂಜ್ಞೆಯನ್ನು ಹೊಂದುತ್ತದೆ. ದಾನದ ಕರ್ಮದ ಸಂಬಂಧ ಯಾರಿಗೆ ಆಗಲಿ ಎಂದು ಬಯಸುವನೋ ಅದು ಸಂಪ್ರದಾನ. ಇಲ್ಲಿ ದಾನ ಉಪಲಕ್ಷಣ. ಕ್ರಿಯಾ ಕರ್ಮದ ಸಂಬಂಧವನ್ನು ಯಾವುದಕ್ಕೆ ಹೊಂದಿ

ಸಲು ಬಯ ಸ,ನಸೋ ಅದು ಸಂಪ್ರದಾನವೆಂದು ತಿಳಿಯಬೇಕು. ಕರ್ಮಸಂಬಂಧೋದ್ದೇಶ್ಯನಿಗೆ ಸಂಪ್ರದಾನಸಂಜ್ಞೆಯೆಂದು ಫಲಿತಾರ್ಥ.

ಸಂಪ್ರದಾನಕ್ಕೆ ಚತುರ್ಥೀ ಹೇಳುವ ಸೂತ್ರ.

೯೦೦. ಚತುರ್ಥೀ ಸಂಪ್ರದಾನೇ ॥ ೨-೩-೧೩ ॥

ವಿಪ್ರಾಯ ಗಾಂ ದದಾತಿ ॥

ದ್ವಿಪದ ಸೂತ್ರ. 'ಅನಭಿಹಿತೇ, ಅಧಿಕಾರ. ಯಾವುದರಿಂದಲೂ ಸಂಪ್ರದಾನ ಅಭಿಹಿತವಾಗದಿರುವಾಗ ಅದಕ್ಕೆ ಚತುರ್ಥೀವಿಭಕ್ತಿ ಬರುತ್ತದೆ. ಉದಾ—ವಿಪ್ರಾಯ ಗಾಂ ದದಾತಿ ॥ ಇಲ್ಲಿ ದಾನದಲ್ಲಿ ಗೋವು ಕರ್ಮ. ಗೋವಿನ ಸಂಬಂಧವು ಬ್ರಾಹ್ಮಣನಿಗೆ ಆಗಲಿ ಎಂಬ ಇಚ್ಛೆಯಿರುವುದರಿಂದ ಕರ್ಮ ಸಂಬಂಧದಲ್ಲಿ ಉದ್ದೇಶ್ಯನು ಬ್ರಾಹ್ಮಣನಾದುದರಿಂದ ಅವನಿಗೆ ಸಂಪ್ರದಾನಸಂಜ್ಞೆ ಬಂದು ಚತುರ್ಥೀ ಬಂದಿದೆ. ಕ್ರಿಯೆಯಲ್ಲಿ ಯಾವುದು ಕರ್ಮವೋ ಅದರ ಸಂಬಂಧದಲ್ಲಿ ಉದ್ದೇಶ್ಯನು ಸಂಪ್ರದಾನನಾಗುತ್ತಾನೆ ಎಂದುದರಿಂದ, ಚೈತ್ರೋ ಮೈತ್ರಾಯ ವಾರ್ತಾಂ ಕಥಯತಿ ॥ ಇತ್ಯಾದಿ ಸ್ಥಲದಲ್ಲಿ ಮೈತ್ರನಿಗೆ ಸಂಪ್ರದಾನಸಂಜ್ಞೆ ಬಂದು ಚತುರ್ಥೀ ಬರುತ್ತದೆ. ಕಥನಕ್ರಿಯೆಯಲ್ಲಿ ವಾರ್ತೆ ಕರ್ಮ. ಅದರ ಸಂಬಂಧ ಮೈತ್ರನಲ್ಲಿ ಆಗುತ್ತದೆ. ಆದುದರಿಂದ ಆತನಿಗೆ ಸಂಪ್ರದಾನಸಂಜ್ಞೆ.

ನಮಃ ಶಬ್ದಾದಿಯೋಗವಿರುವಾಗ ಚತುರ್ಥೀ ಹೇಳುವ ಸೂತ್ರ.

೯೦೧. ನಮಸ್ಸ್ವಸ್ತಿಸ್ವಾಹಾಸ್ವಧಾಲಂವಷಡ್ಯೋಗಾಚ್ಚ ॥ ೨-೩-೧೬ ॥

ವಿಭಿಯೋರ್ಗಗೇ ಚತುರ್ಥೀ ॥ ಹರಯೇ ನಮಃ । ಪ್ರಜಾಭ್ಯಃ ಸ್ವಸ್ತಿ । ಅಗ್ನಯೇ ಸ್ವಾಹಾ । ಪಿತೃಭ್ಯಃ ಸ್ವಧಾ । ಅಲಮಿತಿ ಪರ್ಯಾಪ್ತ್ಯರ್ಥಗ್ರಹಣಮ್ । ತೇನ ದೈತ್ಯೇಭ್ಯೋ ಹರಿರಲಂ ಪ್ರಭುಃ ಸಮರ್ಥಃ ಶಕ್ತ ಇತ್ಯಾದಿ ॥

ನಮಃ........ಯೋಗಾತ್, ಚ ॥ ದ್ವಿಪದ ಸೂತ್ರ. 'ಚತುರ್ಥೀ' ಪದವು, ಅನುವೃತ್ತವಾಗುತ್ತದೆ. ಸೂತ್ರಾರ್ಥ—ನಮಃ, ಸ್ವಸ್ತಿ, ಸ್ವಾಹಾ, ಸ್ವಧಾ, ಅಲಂ, ವಷಟ್—ಈ ಶಬ್ದಗಳ ಯೋಗ ಇರುವಾಗ ಚತುರ್ಥೀವಿಭಕ್ತಿ ಬರುತ್ತದೆ. ಇದು ಪದವನ್ನು ನಿಮಿತ್ತೀಕರಿಸಿ ಬರುವುದರಿಂದ ಉಪಪದವಿಭಕ್ತಿ. ಇದಕ್ಕೆ ಕ್ರಿಯಾಸಂಬಂಧ ಬೇಕಾಗಿಲ್ಲ. ಉದಾ—ಹರಯೇ ನಮಃ ॥ ಹರಿಗೋಸ್ಕರ ನಮಸ್ಕಾರ. ಪ್ರಜಾಭ್ಯಃ ಸ್ವಸ್ತಿ ॥ ಪ್ರಜೆಗಳಿಗೆ ಮಂಗಳ. ಅಗ್ನಯೇ ಸ್ವಾಹಾ ॥ ಅಗ್ನಿಗೆ ಸಮರ್ಪಣೆ. ಪಿತೃಭ್ಯಃ ಸ್ವಧಾ ॥ ಪಿತೃಗಳಿಗೆ ಸಮರ್ಪಣೆ. ದೇವತೆಗಳಿಗೆ ಅರ್ಪಿಸುವಾಗ ಸ್ವಾಹಾ ಪದವೂ, ಪಿತೃಗಳಿಗೆ ಅರ್ಪಿಸುವಾಗ ಸ್ವಧಾ ಪದವೂ ನಿಯತವಾಗಿದೆ. ಅಲಂ ಎಂದರೆ ಸಮರ್ಥ ಎಂದರ್ಥ. ಅಲಂ ಶಬ್ದ ವಿಷಯದಲ್ಲಿ ಮಾತ್ರ ಅನುಪೂರ್ವಿ ಮಾತ್ರವಲ್ಲ, ಅರ್ಥ

ತೆಗೆದುಕೊಳ್ಳಬೇಕು. ಪರ್ಯಾಪ್ತ್ಯರ್ಥವುಳ್ಳ ಪದಗಳ ಯೋಗವಿರುವಾಗ ಚತುರ್ಥಿ ಯೆಂದು ತಿಳಿಯಬೇಕು. ದೈತ್ಯೇಭ್ಯೋ ಹರಿರಲಂ, ಪ್ರಭು, ಸಮರ್ಥಃ, ಶಕ್ತಃ|| ಅಲಮಾದಿ ಶಬ್ದಗಳು ಪರ್ಯಾಪ್ತ್ಯರ್ಥವನ್ನು ಕೊಡುವುದರಿಂದ ಅವುಗಳ ಯೋಗ ವಿರುವಾಗ ಚತುರ್ಥೀವಿಭಕ್ತಿ ಬಂದಿದೆ.

ಇತಿ ಚತುರ್ಥೀ||

ಅಪಾದಾನಸಂಜ್ಞೆಯನ್ನು ಹೇಳುವ ಸೂತ್ರ.

೯೦೨. **ಧ್ರುವಮಪಾಯೇಽಪಾದಾನಮ್** ||೧-೪-೨೪||

**ಅಪಾಯೋ ವಿಶ್ಲೇಷಸ್ತಸ್ಮಿನ್ ಸಾಧ್ಯೇ ಯದ್ ಧ್ರುವಮವಧಿಭೂತಂ ಕಾರಕಂ ತದಪಾದಾನಂ ಸ್ಯಾತ್||**

ಧ್ರುವಂ, ಅಪಾಯೇ, ಅಪಾದಾನಮ್|| ತ್ರಿಪದ ಸೂತ್ರ. ಅಪಾಯವೆಂದರೆ ವಿಶ್ಲೇಷ, ಬೇರೆಯಾಗುವುದು. ವಿಭಾಗವಾಗುವುದಕ್ಕೆ ಅನುಕೂಲವಾದ ವ್ಯಾಪಾರ. ಸೂತ್ರಾರ್ಥ—ವಿಭಾಗಾನುಕೂಲವ್ಯಾಪಾರವುಂಟಾಗುವಾಗ ಯಾವುದು ಆ ವ್ಯಾಪಾರಕ್ಕೆ ಆಶ್ರಯವಾಗದೆ ಉದಾಸೀನವಾಗಿ ನಿಶ್ಚಲವಾಗಿರುವುದೋ ಅದು ಅಪಾದಾನ ಸಂಜ್ಞೆಯನ್ನು ಹೊಂದುತ್ತದೆ. ಪ್ರಕೃತ ಧಾತ್ವರ್ಥವಾದ ವ್ಯಾಪಾರಕ್ಕೆ ಆಶ್ರಯವಾಗದೆ ವ್ಯಾಪಾರದಿಂದ ಉಂಟಾದ ವಿಭಾಗಕ್ಕೆ ಆಶ್ರಯವಾದುದು ಅಪಾದಾನವೆಂದರ್ಥ.

ಅಪಾದಾನಕ್ಕೆ ಪಂಚಮೀ ಹೇಳುವ ಸೂತ್ರ.

೯೦೩. **ಅಪಾದಾನೇ ಪಂಚಮೀ** ||೨-೩-೨೮||

**ಗ್ರಾಮಾದಾಯಾತಿ| ಧಾವತೋಽಶ್ವಾತ್ಪತತೀತ್ಯಾದಿ||**

ದ್ವಿಪದ ಸೂತ್ರ. ಸೂತ್ರಾರ್ಥ—ಯಾವುದರಿಂದಲೂ ಅಭಿಹಿತವಾಗದಿರುವ ಅಪಾದಾನಕ್ಕೆ ಪಂಚಮೀವಿಭಕ್ತಿ ಬರುತ್ತದೆ. ಉದಾ.—ಗ್ರಾಮಾದಾಯಾತಿ|| ಗ್ರಾಮದ ದೆಸೆಯಿಂದ ಬರುತ್ತಾನೆ. ಆಯಾತಿ ಧಾತುವಿಗೆ ವಿಭಾಗಾನುಕೂಲವ್ಯಾಪಾರ ಅರ್ಥ. ಗ್ರಾಮದಿಂದ ದೇವದತ್ತನಿಗೆ ವಿಶ್ಲೇಷವುಂಟಾಗುತ್ತದೆ. ವಿಭಾಗಜನಕವಾದ ವ್ಯಾಪಾರ ದೇವದತ್ತನಲ್ಲಿದೆ. ವ್ಯಾಪಾರದಿಂದ ಉಂಟಾದ ವಿಭಾಗಕ್ಕೆ ಗ್ರಾಮವು ಆಶ್ರಯವಾದುದರಿಂದ ಅದು ಅಪಾದಾನಸಂಜ್ಞೆಯನ್ನು ಹೊಂದುತ್ತದೆ. ನಿಶ್ಚಲ ವಾಗಿದೆ. ಆದುದರಿಂದ ಅದರ ಮೇಲೆ ಪಂಚಮೀ ಬಂದಿದೆ. 'ಧಾವತಃ ಅಶ್ವಾತ್ ಪತತಿ||' ಓಡುವ ಕುದುರೆಯಿಂದ ಬೀಳುತ್ತಾನೆ. ಅಪಾದಾನವೆಲ್ಲವೂ ನಿಶ್ಚಲವಾಗಿರ ಬೇಕೆಂದು ನಿಯಮವಿಲ್ಲ. ಪ್ರಕೃತ ಧಾತ್ವರ್ಥವ್ಯಾಪಾರಕ್ಕೆ ಆಶ್ರಯವಾಗದಿದ್ದರೆ ಸಂಜ್ಞೆ ಬರುತ್ತದೆ. ಇದನ್ನು ಸೂಚಿಸಲು ಎರಡನೇ ಉದಾಹರಣೆ ತೋರಿಸಿರುತ್ತಾನೆ. ಅಲ್ಲಿ ಪ್ರಕೃತ ಧಾತ್ವರ್ಥ ಪತನಕ್ರಿಯಾ. ಇದು ಚೈತ್ರನಲ್ಲಿ ಇದೆ. ಪತನಕ್ರಿಯೆಯಿಂದ

ಉಂಟಾದ ವಿಭಾಗವು ಕುದುರೆಯಲ್ಲಿದೆ. ಕುದುರೆಯಲ್ಲಿ ಭಾವನಕ್ರಿಯೆಯಿದ್ದರೂ ಅಪಾದಾನಸಂಜ್ಞೆ ಬಂದು ಪಂಚಮೀ ಬಂದಿದೆ.

ಇತಿ ಪಂಚಮೀ ||

ಶೇಷಾರ್ಥದಲ್ಲಿ ಷಷ್ಠೀ ಹೇಳುವ ಸೂತ್ರ.

## ೬೦೪. ಷಷ್ಠೀ ಶೇಷೇ ||೨-೩-೫೦||

ಕಾರಕಪ್ರಾತಿಪದಿಕಾರ್ಥವ್ಯತಿರಿಕ್ತಃ ಸ್ವಸ್ವಾಮಿಭಾವಾದಿಃ ಸಂಬಂಧಃ ಶೇಷಸ್ತತ್ರ ಷಷ್ಠೀ ।ರಾಜ್ಞಃ ಪುರುಷಃ ।ಕರ್ಮಾದೀನಾಮಪಿ ಸಂಬಂಧಮಾತ್ರವಿವಕ್ಷಾಯಾಂ ಷಷ್ಠ್ಯೇವ ।ಸತಾಂ ಗತಮ್ ।ಸರ್ಪಿಷೋ ಜಾನೀತೇ। ಮಾತುಃ ಸ್ಮರತಿ ।ಏಧೋ ದಕಸ್ಯೋಪಸ್ಕುರುತೇ । ಭಜೇ ಶಂಭೋಶ್ಚರಣಯೋಃ ||

ದ್ವಿಪದ ಸೂತ್ರ. ಹಿಂದೆ ಹೇಳಿ ಉಳಿದಿರುವುದು ಶೇಷ. ಈ ಹಿಂದೆ ಕರ್ಮ, ಕರ್ತೃ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ ಸಂಜ್ಞೆಯುಳ್ಳ ಕಾರಕಗಳು ಉಕ್ತವಾಗಿವೆ. ಪ್ರಾತಿಪದಿಕಾರ್ಥದಲ್ಲಿ ಪ್ರಥಮಾವಿಭಕ್ತಿಯೂ ಹೇಳಿದೆ. ಸೂತ್ರಾರ್ಥ —ಕಾರಕಪ್ರಾತಿಪದಿಕಾರ್ಥಭಿನ್ನವಾದ ಸ್ವಸ್ವಾಮಿಭಾವಾದಿ ಸಂಬಂಧ ತೋರುವಾಗ ಷಷ್ಠೀವಿಭಕ್ತಿ ಬರುತ್ತದೆ. ಸಂಬಂಧಸಾಮಾನ್ಯವೇ ಶೇಷ. ರಾಜ್ಞಃ ಪುರುಷಃ|| ರಾಜಸಂಬಂಧಿ ಪುರುಷನೆಂದರ್ಥ. ಸ್ವತ್ವ, ಸ್ವಾಮಿತ್ವಸಂಬಂಧ ಷಷ್ಠಿಯಿಂದ ತೋರುತ್ತದೆ. ಕರ್ಮಾದಿಕಾರಕಗಳಿಗೂ ಸಂಬಂಧ ಮಾತ್ರ ವಿವಕ್ಷಾಮಾಡಿದಾಗ ಷಷ್ಠೀ ಬರುತ್ತದೆ. ಉದಾ—ಸತಾಂ ಗತಮ್ ||ಸಜ್ಜನರ ಗಮನ. ಇಲ್ಲಿ ಗಮನದಲ್ಲಿ ಕರ್ತೃ ಸಜ್ಜನ. ಕರ್ತೃವಿಗೆ ತೃತೀಯಾ ಬರಬೇಕಿತ್ತು. ಆದರೆ ಕರ್ತೃವಿವಕ್ಷಾಮಾಡದೆ ಸಂಬಂಧ ಮಾತ್ರ ವಿವಕ್ಷಾಮಾಡಿದೆ. ಆದುದರಿಂದ ಷಷ್ಠೀ. ಸರ್ಪಿಷೋ ಜಾನೀತೇ || ಜ್ಞಾನದಲ್ಲಿ ತುಪ್ಪವು ಕರ್ಮ. ಕರ್ಮವಿವಕ್ಷಾ ಮಾಡದೆ ಸಂಬಂಧ ಮಾತ್ರ ವಿವಕ್ಷೆ ಮಾಡಿರುವುದರಿಂದ ಷಷ್ಠೀ. ಮಾತುಃ ಸ್ಮರತಿ ||ತಾಯಿಯನ್ನು ಸ್ಮರಿಸುತ್ತಾನೆ. ಸ್ಮರಣೆಯಲ್ಲಿ ತಾಯಿ ಕರ್ಮ. ಕರ್ಮಕ್ಕೆ ಸಂಬಂಧಸಾಮಾನ್ಯ ವಿವಕ್ಷೆ ಮಾಡಿದುದರಿಂದ ಮಾತುಃ ಎಂದು ಷಷ್ಠೀ ಬಂದಿದೆ. ಏಧಃ ದಕಸ್ಯ ಉಪಸ್ಕುರುತೇ|| ಕಟ್ಟಿಗೆಯು ನೀರಿಗೆ ಗುಣ (ಬಿಸಿ)ವನ್ನುಂಟುಮಾಡುತ್ತದೆ. ನೀರು ಅಧಿಕರಣ. ಇದಕ್ಕೆ ಸಂಬಂಧ ಸಾಮಾನ್ಯ ವಿವಕ್ಷೆಮಾಡಿದುದರಿಂದ ಷಷ್ಠೀ ಬಂದಿದೆ. 'ಭಜೇ ಶಂಭೋಶ್ಚರಣಯೋಃ' ಈಶ್ವರನ ಕಾಲುಗಳನ್ನು ಭಜಿಸುತ್ತೇನೆ. ಭಜನದಲ್ಲಿ ಚರಣ ಕರ್ಮ. ಅದಕ್ಕೆ ಸಂಬಂಧ ಸಾಮಾನ್ಯದಲ್ಲಿ ಷಷ್ಠೀ ಬಂದಿದೆ.

ಇತಿ ಷಷ್ಠೀ||

ಅಧಿಕರಣಸಂಜ್ಞಾವಿಧಾಯಕ ಸೂತ್ರ.

**೯೦೫. ಆಧಾರೋಽಧಿಕರಣಮ್ || ೧-೪-೪೫ ||**

**ಕರ್ತೃಕರ್ಮದ್ವಾರಾ ತನ್ನಿಷ್ಠಕ್ರಿಯಾಯಾ ಆಧಾರಃ ಕಾರಕಮಧಿಕರಣಂ ಸ್ಯಾತ್ ||**

ದ್ವಿಪದ ಸೂತ್ರ. ಸೂತ್ರಾರ್ಥ—ಕರ್ತೃ, ಕರ್ಮಗಳ ಮೂಲಕ ಅವುಗಳಲ್ಲಿರುವ ವ್ಯಾಪಾರಕ್ಕೆ ಆಧಾರವಾದ ( ಆಶ್ರಯವಾದ ) ಕಾರಕಕ್ಕೆ ಅಧಿಕರಣಸಂಜ್ಞೆ ಬರುತ್ತದೆ. ಕರ್ತೃವಿನಲ್ಲಿರುವ ವ್ಯಾಪಾರಕ್ಕೆ ಸಾಕ್ಷಾತ್ತಾದ ಆಶ್ರಯ ಕರ್ತೃವೇ ಆಗುತ್ತಾನೆ. ಹಾಗೇ ಕರ್ಮದಲ್ಲಿರುವ ಕ್ರಿಯೆಗೆ ಆಶ್ರಯ ಕರ್ಮವೇ. ಆದುದರಿಂದ ಪರಂಪರಯಾ ಆಶ್ರಯನಾದವನು ಎಂದರ್ಥಮಾಡಬೇಕು. ಕರ್ತೃ, ಕರ್ಮಗಳ ಮೂಲಕ ಕ್ರಿಯೆಗೆ ಆಶ್ರಯನಾದವನು ಅಧಿಕರಣ ಎಂದರ್ಥ.

ಅಧಿಕರಣಕ್ಕೆ ಸಪ್ತಮೀ ಹೇಳುವ ಸೂತ್ರ.

**೯೦೬. ಸಪ್ತಮ್ಯಧಿಕರಣೇ ಚ || ೨-೩-೩೬ ||**

**ಅಧಿಕರಣೇ ಸಪ್ತಮೀ ಸ್ಯಾತ್, ಚಕಾರಾದ್ದೂರಾಂತಿಕಾರ್ಥೇಭ್ಯಃ | ಔಪಶ್ಲೇಷಿಕೋ ವೈಷಯಿಕೋಽಭಿವ್ಯಾಪಕಶ್ಚೇತ್ಯಾಧಾರಸ್ತ್ರಿಧಾ | ಕಟೇ ಆಸ್ತೇ | ಸ್ಥಾಲ್ಯಾಂ ಪಚತಿ | ಮೋಕ್ಷೇ ಇಚ್ಛಾಸ್ತಿ | ಸರ್ವಸ್ಮಿನ್ನಾತ್ಮಾಸ್ತಿ | ವನಸ್ಯ ದೂರೇ ಅಂತಿಕೇ ವಾ || ಇತಿ ಸಪ್ತಮೀ ||**

ಸಪ್ತಮೀ, ಅಧಿಕರಣೇ, ಚ || ತ್ರಿಪದ ಸೂತ್ರ. 'ದೂರಾಂತಿಕಾರ್ಥೇಭ್ಯೋ ದ್ವಿತೀಯಾ ಚ' ಹಿಂದಿನ ಸೂತ್ರ.. ಚಕಾರದಿಂದ 'ದೂರಾಂತಿಕಾರ್ಥೇಭ್ಯಃ' ಪದವು ಅನುವೃತ್ತವಾಗುತ್ತದೆ. ಸೂತ್ರಾರ್ಥ—ಅಧಿಕರಣವಾಚಕ ಪದದ ಮೇಲೂ, ದೂರ ಅಂತಿಕ ಅರ್ಥಕೊಡುವ ಶಬ್ದದ ಮೇಲೂ ಸಪ್ತಮೀ ಬರುತ್ತದೆ. ಅಧಿಕರಣ ಮೂರು ವಿಧವಾಗಿದೆ: ಔಪಶ್ಲೇಷಿಕ ಆಧಾರ, ವೈಷಯಿಕಾಧಾರ, ಅಭಿವ್ಯಾಪಕಾಧಾರ—ಹೀಗೆ ಮೂರು ರೀತಿಯಾದವುಗಳಿಗೆ ಉದಾಹರಣೆ ತೋರಿಸುತ್ತಾನೆ. ಉಪಶ್ಲೇಷ ಎಂದರೆ ಸಂಯೋಗಾದಿಸಂಬಂಧ. ಈ ಸಂಬಂಧದ ಮೂಲಕ ಬಂದಿರುವ ಆಧಾರವೇ ಔಪಶ್ಲೇಷಿಕ. 'ಕಟೇ ಆಸ್ತೇ ||' ಇಲ್ಲಿ ಕಟ ಔಪಶ್ಲೇಷಿಕಾಧಾರ. ಚಾಪೆಯ ಒಂದು ಕಡೆಯಲ್ಲಿ ಕುಳಿತಿರುತ್ತಾನೆ. ಕರ್ತೃ ಚೈತ್ರ. ಅವನಲ್ಲಿರುವ ಕ್ರಿಯೇ ಆಸನ ( ಇರುವಿಕೆ ). ಚೈತ್ರನ ಮೂಲಕ ಈ ಇರುವಿಕೆರೂಪವ್ಯಾಪಾರಕ್ಕೆ ಚಾಪೆಯು ಆಶ್ರಯವಾದುದರಿಂದ ಅಧಿಕರಣಸಂಜ್ಞೆ ಬಂದು ಸಪ್ತಮೀವಿಭಕ್ತಿ ಹೊಂದುತ್ತದೆ. ವಿಷಯತಾ ಸಂಬಂಧ ಮೂಲಕವಾಗಿ ಆಧಾರವಾದುದಕ್ಕೆ ವೈಷಯಿಕಾಧಾರನೆಂದು ಹೆಸರು. ಮೋಕ್ಷೇ ಇಚ್ಛಾ ಅಸ್ತಿ || ಅಸ್ತಿ ಕ್ರಿಯಾದಲ್ಲಿ ( ಇರುವುದು ) ಕರ್ತೃ ಇಚ್ಛಾ. ಇಚ್ಛಾ ಮೂಲಕವಾಗಿ ಅಸ್ತಿ ಕ್ರಿಯೆಗೆ ಆಧಾರವಾದುದು ಮೋಕ್ಷ. ಮೋಕ್ಷವಿಷಯಕ ಇಚ್ಛೆ

ಇದೆಯೆಂದರ್ಥ. ಸರ್ವಾವಯುವಸಂಬಂಧನಿಮಿತ್ತವಾಗಿ ಬಂದಿರುವ ಆಧಾರಕ್ಕೆ ಅಭಿವ್ಯಾಪಕವೆಂದು ಹೆಸರು. ಸರ್ವಸ್ಮಿನ್ ಆತ್ಮಾ ಅಸ್ತಿ ॥ ಎಲ್ಲೆಡೆಯಲ್ಲಿಯೂ ಆತ್ಮನಿದ್ದಾನೆ. ಇಲ್ಲಿಯೂ ಅಸ್ತಿಕ್ರಿಯೆಗೆ ( ಇರುವಿಕೆ ) ಕರ್ತೃ ಆತ್ಮಾ; ಆತ್ಮನ ಮೂಲಕ ಅಸ್ತಿಕ್ರಿಯೆಗೆ ಸರ್ವವು ಆಶ್ರಯವಾಗಿ ಅಧಿಕರಣಸಂಜ್ಞೆ ಹೊಂದಿದೆ. ಆದುದರಿಂದ ಸಪ್ತಮೀ ಬಂದಿದೆ. ಔಪಶ್ಲೇಷಿಕಾಧಿಕರಣವೇ ಹೆಚ್ಚಾಗಿ ಪ್ರಯೋಗದಲ್ಲಿರುತ್ತದೆ. ಸ್ಥಾಲ್ಯಾಂ ಪಚತಿ ॥ ತಪ್ಪಲೆಯಲ್ಲಿ ಬೇಯಿಸುತ್ತಾನೆ. ಇಲ್ಲಿ ಸ್ಥಾಲೀ ಔಪಶ್ಲೇಷಿಕಾಧಿಕರಣ. ಕರ್ಮ ತಂಡುಲ (ಅಕ್ಕಿ). ಅಕ್ಕಿಯು ಇಡೀ ತಪ್ಪಲೆಯಲ್ಲಿರುವುದಿಲ್ಲ. ಪಾಕಕ್ರಿಯೆಯಲ್ಲಿ ಕರ್ಮ ತಂಡುಲ. ತಂಡುಲ ಮೂಲಕ ಪಾಕಕ್ರಿಯೆಗೆ ಆಧಾರವಾದುದು ಸ್ಥಾಲೀ ( ತಪ್ಪಲೆ ). ಇದಕ್ಕೆ ಅಧಿಕರಣಸಂಜ್ಞೆ ಬಂದು ಸಪ್ತಮೀ ಬಂದಿದೆ. ಹೀ ಕರ್ತೃ, ಕರ್ಮಗಳಲ್ಲಿರುವ ಕ್ರಿಯೆಗೆ ಅವುಗಳ ಮೂಲಕ ಆಶ್ರಯವಾದುದು ಅಧಿಕರಣ ಎಂದು ತಿಳಿಯಬೇಕು. ದೂರ, ಹತ್ತಿರ ಅರ್ಥ ಕೊಡುವ ಶಬ್ದಗಳ ಮೇಲೆ ಸಪ್ತಮೀ ಬಂದುದಕ್ಕೆ ಉದಾಹರಣೆ. ವನಸ್ಯ ದೂರೇ, ಅಂತಿಕೇ ವಾ ॥ ಕಾಡಿನ ದೂರದಲ್ಲಿ ಅಥವಾ ಹತ್ತಿರದಲ್ಲಿ. ದೂರ, ಅಂತಿಕ ಶಬ್ದಗಳ ಮೇಲೆ ಸಪ್ತಮೀ ಬಂದಿದೆ. ಸಪ್ತಮಿಯೊಡನೆ ತೃತೀಯಾ ಪಂಚಮೀ ದ್ವಿತೀಯಾವಿಭಕ್ತಿಗಳೂ ಬರುತ್ತವೆ. ವನಸ್ಯ ದೂರೇಣ, ದೂರಾತ್, ದೂರಂ, ದೂರೇ ವಾ ಎಂದಾಗುತ್ತದೆ. ಹೀಗೆ ಸಪ್ತಮೀ ವಿಭಕ್ತ್ಯರ್ಥ ವಿವೃತವಾಗಿದೆ. ಎಲ್ಲಾ ವಿಭಕ್ತಿಗಳೂ ಒಂದೇ ಕಡೆ ಬಂದುದಕ್ಕೆ ಈ ಶ್ಲೋಕವನ್ನು ಉದಾಹರಿಸುತ್ತಾರೆ:

ರಾಮೋ ರಾಜಮಣಿಃ ಸದಾ ವಿಜಯತೇ **ರಾಮಂ** ರಮೇಶಂ ಭಜೇ ।
ರಾಮೇಣಾಭಿಹತಾ ನಿಶಾಚರಚಮೂ **ರಾಮಾಯ** ತಸ್ಮೈ ನಮಃ ॥
ರಾಮಾನ್ನಾಸ್ತಿ ಪರಾಯಣಂ ಪರತರಂ **ರಾಮಸ್ಯ** ದಾಸೋಽಸ್ಮ್ಯಹಂ ।
ರಾಮೇ ಚಿತ್ತಲಯಃ ಸದಾ ಭವತು ಮೇ **ಭೋ ರಾಮ** ಮಾಮುದ್ಧರ ॥

ಪ್ರಾತಿಪದಿಕಾರ್ಥದಲ್ಲಿ ಪ್ರಥಮಾ. ರಾಮಃ ವಿಜಯತೇ ॥ ರಾಮಂ ಭಜೇ ॥ ಭಜನಕ್ರಿಯೆಯಲ್ಲಿ ರಾಮ ಕರ್ಮ. ರಾಮೇಣ ನಿಶಾಚರಚಮೂ ಅಭಿಹತಾ ॥ ಹನನದಲ್ಲಿ ರಾಮ ಕರ್ತೃ. ರಾಮಾಯ ತಸ್ಮೈ ನಮಃ ॥ ನಮಃ ಶಬ್ದಯೋಗವಿರುವಾಗ ಚತುರ್ಥೀ. ರಾಮಾತ್ ಪರಾಯಣಂ ಪರತರಂ ನಾಸ್ತಿ ॥ ಇಲ್ಲಿ ರಾಮ ಅಪಾದಾನ. ರಾಮಸ್ಯ ದಾಸಃ ಅಸ್ಮಿ ॥ ಸಂಬಂಧದಲ್ಲಿ ಷಷ್ಠೀ. ರಾಮೇ ಚಿತ್ತಲಯಃ ಭವತು ॥ ರಾಮ ಅಧಿಕರಣ. ಭೋ ರಾಮ ಮಾಂ ಉದ್ಧರ. ಸಂಬೋಧನಾಧಿಕ್ಯದಲ್ಲಿ ಪ್ರಥಮಾ ಬಂದಿದೆ. ಹೀಗೆ ಏಳು ವಿಭಕ್ತ್ಯರ್ಥಗಳು ವಿವೃತವಾಗಿವೆ.

ಇತಿ ವಿಭಕ್ತ್ಯರ್ಥಾಃ ॥